ಶ್ರೀರಾಮಭಗವಾನ್ ಪ್ರಸೀದ.

ಶ್ರೀಮನ್ನಿಖಿಲ ನಿಗಮಾಂತೈಕವೇದ್ಯ ಶ್ರೀಮನ್ನಾರಾಯಣಾವತಾರಭೂತ ಶ್ರೀರಾಮಮೂರ್ತಿ ಕಥಾಸಂದರ್ಭಗರ್ಭಿತೆ.
ಶ್ರವಣಪಠನಲೇಖನಪೂಜನಪಾರಾಯಣಪರಾಯಣ ಸ್ವಭಕ್ತಜನಮನೋರಥಪರಿಪೂರಣ ಪಾರಿಜಾತೆ
ಶ್ರೀಮದ್ವಾಲ್ಮೀಕಿ ಮಹರ್ಷಿಪ್ರಣೀತೆ.

# ಶ್ರೀಮದ್ರಾಮಾಯಣೆ.

ಆರಣ್ಯಕಾಂಡೋಯಂಗ್ರಂಥಃ ಕಲ್ಯಾಣಪುರವಾಸ್ತವ್ಯ ಬ್ರ-ಶ್ರೀ-ಪಟ್ಟಾಭಿರಾಮಸೂರಿ ವಿರಚಿತ
ಸತಾತ್ಪರ್ಯಕರ್ಣಾಟಭಾಷಾವ್ಯಾಖ್ಯಯಾಸಾಕಂ ಮುದ್ರಾಪಿತಸ್ಸನ್ ವಿಜಯತೆತರಾಂ.

ಶ್ರೀಮದ್ವಾಲ್ಮೀಕಿಮಹರ್ಷಿಪ್ರೋಕ್ತಮಾದ

# ಶ್ರೀಮದ್ರಾಮಾಯಣದೋಳ್ ಆರಣ್ಯಕಾಂಡವು.

(ನವೀನಕೃತಮಾದ)

## ಟೀಕಾತಾತ್ಪರ್ಯಸಹಿತವಾಗಿ.

ಜೆ॥ಸುಬ್ಬರಾಯಶಾಸ್ತ್ರಿ. ಸತ್ರಂ, ಚಂದ್ರಶೇಖರಯ್ಯ. ಪಾಳ್ಯಂ, ಪದ್ಮನಾಭಯ್ಯ. ವಾಜಪೇಯಂ, ಕೃಷ್ಣಯ್ಯ.
ಇವರುಗಳ ಸ್ವಕೀಯ ಬೆಂಗಳೂರು ಬುಕ್‌ಡಿಪೋ ಮುದ್ರಾಕ್ಷರಶಾಲೆಯೋಳ್ ಮುದ್ರಿಸಲ್ಪಟ್ಟಿತು.

ಸನ್ ೧೮೮೨.

ರಿಜಿಸ್ಟರ್ ಕಾಪೀರೈಟ್.





ಈ ಪುಸ್ತಕದ ಭಾಗಸ್ಥರು,

ಟಿ॥ ಸುಬ್ಬರಾಯಶಾಸ್ತ್ರಿ.
ಸತ್ರಂ, ಚಂದ್ರಶೇಖರಯ್ಯ.
ಪಾಳ್ಯಂ ಪದ್ಮನಾಭಯ್ಯ.

ವಾಜಪೇಯ ಕೃಷ್ಣಯ್ಯ.
ಕೊ॥ ಭಾಸ್ಕರಯ್ಯ.
ಪೋಲೇಪಲ್ಲಿ ಚಂದ್ರಶೇಖರಶೆಟ್ಟರ
ಕುಮಾರ ನಾರಣಸಾಮಿಶೆಟ್ಟಿ

ಶ್ರೀರಾಮಭಗವಾನ್ ಪ್ರಸೀದ.

# ಶ್ರೀಮದ್ರಾಮಾಯಣೇ ಅರಣ್ಯಕಾಂಡಃ ಪ್ರಾರಂಭಃ.

ಶ್ರೀಸೀತಾಲಕ್ಷ್ಮಣಭರತಶತ್ರುಘ್ನಹನೂಮತ್ಸಮೇತ-ಶ್ರೀರಾಮಚಂದ್ರಪರಬ್ರಹ್ಮಣೇನಮಃ

ಪ್ರವಿಶ್ಯತುಮಹಾರಣ್ಯಂದಂಡಕಾರಣ್ಯಮಾತ್ಮವಾನ್। ದದರ್ಶರಾಮೋದುರ್ಧರ್ಷಸ್ತಾಪಸಾಶ್ರಮಮಂಡಲಂ।೧।
ಕುಶಚೀರಪರಿಕ್ಷಿಪ್ತಂಬ್ರಾಹ್ಮ್ಯಾಲಕ್ಷ್ಮ್ಯಾಸಮಾವೃತಂ।ಯಥಾಪ್ರದೀಪ್ತಂದುರ್ದರ್ಶಂಗಗನೇಸೂರ್ಯಮಂಡಲಂ ।೨।
ಶರಣ್ಯಂಸರ್ವಭೂತಾನಾಂಸುಸಮ್ಮೃಷ್ಟಾಜಿರಂತಥಾ । ಮೃಗೈರ್ಬಹುಭಿರಾಕೀರ್ಣಂಪಕ್ಷಿಸಂಘೈಸ್ಸಮಾವೃತಂ ।೩।
ಪೂಜಿತಂಚಪ್ರನೃತ್ತಂಚನಿತ್ಯಮಪ್ಸರಸಾಂಗಣೈಃ । ವಿಶಾಲೈರಗ್ನಿಶರಣೈಸ್ಸ್ರುಗ್ಭಾಂಡೈರಜಿನೈಃಕುಶೈಃ ।೪। ಸಮಿದ್ಭಿ
ಸ್ತೋಯಕಲಶೈಃಫಲಮೂಲೈಶ್ಚಶೋಭಿತಂ । ಆರಣ್ಯೈಶ್ಚಮಹಾವೃಕ್ಷೈಃಪುಣ್ಯೈಸ್ಸ್ವಾದುಫಲೈರ್ವೃತಂ ।೫। ಬಲಿ

ಶ್ರೀ ರಾ ಮ ಚಂ ದ್ರ ಪ ರ ಬ್ರ ಹ್ಮ ಣೇ ನ ಮಃ .

ಶ್ರೀಗುರುಭ್ಯೋನಮಃ॥ ಹರಿಃ-ಓಂ-ಆತ್ಮವಾನ್-ಧೈರ್ಯಶಾಲಿಯಾದ, ದುರ್ಧರ್ಷಃ-ಧೈರ್ಯಶಾಲಿಯಾದ, ರಾಮಃ-ಶ್ರೀರಾಮನು, ದಂಡಕಾರ
ಣ್ಯಂ-ದಂಡಕಾರಣ್ಯವೆಂಬ, ಮಹಾರಣ್ಯಂ-ದೊಡ್ಡ ಅರಣ್ಯವನ್ನು, ಪ್ರವಿಶ್ಯ-ಪ್ರವೇಶಿಸಿ, ಕುಶಚೀರಪರಿಕ್ಷಿಪ್ತಂ-ದರ್ಭೆಗಳಿಂದಲೂ ನಾರುಮಡಿಗಳಿಂದಲೂ
ಹಾಸಲ್ಪಟ್ಟ. ಬ್ರಾಹ್ಮ್ಯಾಲಕ್ಷ್ಮ್ಯಾ-ಬ್ರಾಹ್ಮಣಸಂಪತ್ತಿನಿಂದ. ಸಮಾವೃತಂ-ಕೂಡಿಕೊಂಡಿರುವ, ಗಗನೇ-ಅಂತರಿಕ್ಷದಲ್ಲಿ, ದುರ್ದರ್ಶಂ-ಶಿರಸ್ಸಿನಿಂದ ನೋಡಲಸ
ಸಾಧ್ಯವಾದ, ಸೂರ್ಯಮಂಡಲಂಯಥಾ-ಸೂರ್ಯಮಂಡಲದಂತೆ, ಪ್ರದೀಪ್ತಂ-ಹೊಳೆಯುತ್ತಿರುವ,ತಾಪಸಾಶ್ರಮಮಂಡಲಂ-ಋಷಿಗಳ ಆಶ್ರಮಸಮೂಹವನ್ನು,
ದದರ್ಶ-ಕಂಡನು ॥೧॥೨॥ ಸರ್ವಭೂತಾನಾಂ-ಸಮಸ್ತಪ್ರಾಣಿಗಳಿಗೂ, ಶರಣ್ಯಂ-ಸಂರಕ್ಷಕವಾದ, ಸುಸಂಮೃಷ್ಟಾಜಿರಂ-ಚನ್ನಾಗಿ ಸಂಮಾರ್ಜನೆ
ಮಾಡಲ್ಪಟ್ಟ ಅಂಗಳಗಳುಳ್ಳ, ತಥಾ-ಹಾಗೆಯೇ. ಬಹುಭಿಃ-ಅನೇಕಗಳಾದ, ಮೃಗೈಃ-ಮೃಗಗಳಿಂದಲೂ. ಆಕೀರ್ಣಂ-ತುಂಬಿರುವ, ಪಕ್ಷಿಸಂಘೈಃ-
ಹಕ್ಕಿಗಳ ತಂಡಗಳಿಂದ. ಸಮಾಕುಲಂ-ವ್ಯಾಪ್ತವಾದ ॥೩॥ ನಿತ್ಯಂ-ನಿರಂತರವೂ, ಅಪ್ಸರಸಾಂ-ಅಪ್ಸರಸ್ತ್ರೀಯರುಗಳ, ಗಣೈಃ-ಸಮೂಹಗಳಿಂದ.
ಪೂಜಿತಂ-ಪೂಜಿಸಲ್ಪಟ್ಟ, ಉಪನೃತ್ತಂಚ-ನರ್ತನೆಮಾಡಲ್ಪಟ್ಟ, ವಿಶಾಲೈಃ-ವಿಸ್ತಾರಗಳಾದ, ಅಗ್ನಿಶರಣೈಃ-ಅಗ್ನಿಹೋತ್ರದಮನೆಗಳಿಂದ, ಸ್ರುಗ್ಭಾಂ
ಡೈಃ-ಸ್ರುಕ್ಸ್ರುವಾದಿ ಪಾತ್ರೆಗಳಿಂದಲೂ. ಅಜಿನೈಃ-ಕೃಷ್ಣಾಜಿನಗಳಿಂದಲೂ. ಕುಶೈಃ-ದರ್ಭೆಗಳಿಂದಲೂ, ಸಮಿದ್ಭಿಃ-ಪಾಲಾಶಾದಿಸಮಿತ್ತುಗಳಿಂದಲೂ,
ತೋಯಕಲಶೈಃ-ಉದಕಕುಂಭಗಳಿಂದಲೂ. ಫಲಮೂಲೈಃ-ಫಲಮೂಲಗಳಿಂದಲೂ, ಕಂದಮೂಲೈಃ-ಕಂದಮೂಲಗಳಿಂದಲೂ, ಸುಶೋಭಿತಂ-ಶೋಭಾ
ಯಮಾನವಾದ, ಆರಣ್ಯೈಃ-ಅರಣ್ಯದಲ್ಲಿ ಹುಟ್ಟಿದ, ಪುಣ್ಯೈಃ-ಪುಣ್ಯಕರಂಗಳಾದ, ಸ್ವಾದುಫಲೈಃ-ರುಚಿಯಾಗಿರುವ ಹಣ್ಣುಗಳುಳ್ಳ, ಮಹಾ
ವೃಕ್ಷೈಃ-ದೊಡ್ಡಗಿಡಗಳಿಂದ, ವೃತಂ-ಕೂಡಿಕೊಂಡಿರುವ ॥೫॥ ಬಲಿಹೋಮಾರ್ಚಿತಂ-ಬಲಿಕರ್ಮದಿಂದಲೂ ಅಗ್ನಿಹೋತ್ರಾದಿಗಳಿಂದಲೂ ಪೂಜಿಸ

ಶ್ರೀಮದರಣ್ಯಕಾಂಡಾರ್ಥನಿರೂಪಣಪ್ರಾರಂಭವು.

ಧೈರ್ಯಶಾಲಿಯಾಗಿಯೂ ವೈರಿಗಳಿಂದ ತಿರಸ್ಕರಿಸಲಸಾಧ್ಯನಾಗಿಯೂ ಇರುವ ಶ್ರೀರಾಮನಾದರೆ, ದಂಡಕಾರಣ್ಯವೆಂಬ ಮಹದರಣ್ಯವನ್ನು ಪ್ರವೇಶಿಸಿ ಮುನಿಗಳ ಆಶ್ರಮಂಗಳ ಸಮೂಹವಂ ಕಂಡನದೆಂತೆನೆ; ದರ್ಭೆಗಳಿಂದಲೂ ನಾರುಮಡಿಗಳಿಂದಲೂ ವ್ಯಾಪ್ತವಾಗಿಯೂ, ತಪೋಜನ್ಯವಾದ ತೇಜೋವಿಶೇಷದಿಂದ ಯುಕ್ತವಾಗಿಯೂ, ಗಗನಮಧ್ಯದಲ್ಲಿರುವ ನೋಡಲಸಾಧ್ಯನಾದ ಸೂರ್ಯನಂತೆ ಬೆಳಗುವದಾಗಿಯೂ, ಜೀವರಾಶಿಗಳೆಲ್ಲ ವಾಸಿಸಲರ್ಹವಾಗಿಯೂ, ಅಲಂಕರಿಸಲ್ಪಟ್ಟ (ಪರ್ಣಶಾಲೆಗಳ) ಅಂಗಳಗಳುಳ್ಳದ್ದಾಗಿಯೂ, ಅನೇಕಮೃಗಪಕ್ಷಿಗಳ ತಂಡಗಳಿಂದ ವ್ಯಾಪ್ತವಾಗಿಯೂ, ಅಪ್ಸರಸ್ತ್ರೀಯರ ಸಮುದಾಯದಿಂದ ಪೂಜಿಸಲ್ಪಡುವುದಾಗಿಯೂ, ತ್ರೇತಾಗ್ನಿಗಳ ವಿಸ್ತಾರವಾದ ಶಾಲೆಗಳಿಂದಲೂ, ಸ್ರುಕ್ಸ್ರುವಾದಿ ಉಪಕರಣ ಸಾಮಗ್ರಿಗಳಿಂದಲೂ, ಕೃಷ್ಣಾಜಿನಗಳಿಂದಲೂ, ದ
ರ್ಭೆಗಳಿಂದಲೂ।೪।ಸಮಿತ್ತುಗಳಿಂದಲೂ,ಉದಕಪಾತ್ರೆಗಳಿಂದಲೂ, ಫಲಗಳಿಂದಲೂ,ಕಂದಮೂಲಗಳಿಂದಲೂಸಹ
ಹೊಳೆವುದಾಗಿಯೂ,ಪುಣ್ಯಕರವಾದ ಮತ್ತು ಅರಣ್ಯದಲ್ಲಿ ಪುಟ್ಟಿದ ದೊಡ್ಡದೊಡ್ಡ ವೃಕ್ಷಗಳಿಂದ ವ್ಯಾಪವಾಗಿಯೂ,

ಹೋಮಾರ್ಚಿತಂಪುಣ್ಯಂಬ್ರಹ್ಮಘೋಷನಿನಾದಿತಂ । ಪುಷ್ಪೈರ್ವನ್ಯೈಃಪರಿಕ್ಷಿಪ್ತಂಪದ್ಮಿನ್ಯಾಚಸಪದ್ಮಯಾ ।೬॥ ಫಲ
ಮೂಲಾಶನೈರ್ದಾಂತೈಶ್ಚೀರಕೃಷ್ಣಾಜಿನಾಂಬರೈಃ । ಸೂರ್ಯವೈಶ್ವಾನರಾಭೈಶ್ಚಪುರಾಣೈರ್ಮುನಿಭಿರ್ವೃತಂ ।೭॥ ಪು
ಣ್ಯೈಶ್ಚನಿಯತಾಹಾರೈಃಶೋಭಿತಂಪರಮರ್ಷಿಭಿಃ । ತದ್ಬ್ರಹ್ಮಭವನಪ್ರಖ್ಯಂಬ್ರಹ್ಮಘೋಷನಿನಾದಿತಂ । ಬ್ರಹ್ಮ
ವಿದ್ಭಿರ್ಮಹಾಭಾಗೈರ್ಬ್ರಾಹ್ಮಣೈರುಪಶೋಭಿತಂ ॥೮॥ ಸದೃಷ್ಟ್ವಾರಾಮವಶ್ರೀಮಾಂಸ್ತಾಪಸಾಶ್ರಮಮಂಡಲಂ।
ಅಭ್ಯಗಚ್ಛನ್ಮಹಾತೇಜಾವಿಜ್ಯಂಕೃತ್ವಾಮಹದ್ಧನುಃ ॥೯॥ ದಿವ್ಯಜ್ಞಾನೋಪಪನ್ನಾಸ್ತೇರಾಮಂದೃಷ್ಟ್ವಾಮಹರ್ಷ
ಯಃ । ಅಭ್ಯಗಚ್ಛಂಸ್ತದಾಪ್ರೀತಾವೈದೇಹೀಂಚಯಶಸ್ವಿನೀಂ ।೧೦॥ ತೇತಂಸೋಮಮಿವೋದ್ಯಂತಂದೃಷ್ಟ್ವಾವೈಧ
ರ್ಮಚಾರಿಣಃ । ಲಕ್ಷ್ಮಣಂಚೈವದೃಷ್ಟ್ವಾತುವೈದೇಹೀಂಚಯಶಸ್ವಿನೀಂ । ಮಂಗಳಾನಿಪ್ರಯುಂಜಾನಾಃಪ್ರತ್ಯಗೃ
ಹ್ಣನ್ದೃಢವ್ರತಾಃ ॥೧೧॥ ರೂಪಸಂಹನನಂಲಕ್ಷ್ಮೀಂಸೌಕುಮಾರ್ಯಂಸುವೇಷತಾಂ । ದದೃಶುರ್ವಿಸ್ಮಿತಾಕಾರಾರಾಮ
ಸ್ಯವನವಾಸಿನಃ ।೧೨॥ ವೈದೇಹೀಂಲಕ್ಷ್ಮಣಂರಾಮಂನೇತ್ರೈರನಿಮಿಷೈರಿವ । ಆಶ್ಚರ್ಯಭೂತಾನ್ದದೃಶುಸ್ಸರ್ವೇತೇವನ

---

ಲ್ಪಟ್ಟ. ಪುಣ್ಯಂ-ಪುಣ್ಯಕರವಾದ. ಬ್ರಹ್ಮಘೋಷನಿನಾದಿತಂ-ವೇದಘೋಷೆಯಿಂದ ಧ್ವನಿಗೊಳಿಸುತ್ತಿರುವ. ಬ್ರಹ್ಮವಿದ್ಭಿಃ-ವೇದಜ್ಞರಾದ ಯದ್ವಾ-ಬ್ರಹ್ಮವೇತ್ತೃಗಳಾದ, ಮಹಾಭಾಗೈಃ-ಮಹಾಪುಣ್ಯಶಾಲಿಗಳಾದ, ಬ್ರಾಹ್ಮಣೈಃ-ಬ್ರಾಹ್ಮಣರಿಂದ, ಉಪಶೋಭಿತಂ-ಹೊಳೆಯುತ್ತಿರುವ ॥೬॥ ವನ್ಯೈಃ-ವನದಲ್ಲಿ ಹುಟ್ಟಿದ. ಪುಷ್ಪೈಃ-ಹುವ್ವುಗಳಿಂದಲೂ, ಸಪದ್ಮಯಾ-ಕಮಲಗಳಿಂದೊಡಗೂಡಿದ, ಪದ್ಮಿನ್ಯಾಚ-ತಾವರೇಲತೆಗಳಿಂದ, ಅಥವಾ-ಪದ್ಮಸರೋವರದಿಂದಲೂ, ಪರಿಕ್ಷಿಪ್ತಂ-ಕೂಡಿಕೊಂಡಿರುವ, ಫಲಮೂಲಾಶನೈಃ-ಫಲಗಳೂ ಕಂದಮೂಲಗಳೇ ಅಶನವಾಗುಳ್ಳ, ದಾಂತೈಃ-ಜಿತೇಂದ್ರಿಯರಾದ, ಚೀರಕೃಷ್ಣಾಜಿನಾಂಬರೈಃ-ನಾರುವಸ್ತ್ರಗಳೂ ಕೃಷ್ಣಾಜಿನಗಳೇ ವಸ್ತ್ರಗಳಾಗುಳ್ಳ, ಸೂರ್ಯವೈಶ್ವಾನರಾಭೈಶ್ಚ-ಸೂರ್ಯಾಗ್ನಿಗಳ ಕಾಂತಿಯಂತೆ ಕಾಂತಿಯುಳ್ಳ, ಪುರಾಣೈಃ-ವೃದ್ಧರಾದ, ಮುನಿಭಿಃ-ಮನನಶೀಲರಾದ ಋಷಿಗಳಿಂದ, ವೃತಂ-ಸುತ್ತಿಕೊಳ್ಳಲ್ಪಟ್ಟ, ಪುಣ್ಯೈಶ್ಚ-ಪುಣ್ಯವಂತರಾದ, ನಿಯತಾಹಾರೈಃ-ಮಿತವಾದ ಆಹಾರವುಳ್ಳ, ಪರಮರ್ಷಿಭಿಃ-ಋಷಿಶ್ರೇಷ್ಠರಿಂದ, ಶೋಭಿತಂ-ಕಂಗೊಳಿಸುತ್ತಿರುವ, ತತ್-ಆ ಪ್ರಸಿದ್ಧವಾದ, ಬ್ರಹ್ಮಭವನಪ್ರಖ್ಯಂ-ಬ್ರಹ್ಮಲೋಕದಂತೆ ಪ್ರಕಾಶಮಾನವಾದ, ಬ್ರಹ್ಮಘೋಷನಿನಾದಿತಂ-ವೇದಘೋಷೆಗಳಿಂದ ಧ್ವನಿಗೊಳಿಸುತ್ತಿರುವ, ತಂ-ಆ, ತಾಪಸಾಶ್ರಮಮಂಡಲಂ-ಋಷಿಗಳ ಆಶ್ರಮಪ್ರದೇಶವನ್ನು. ದೃಷ್ಟ್ವಾ-ಕಂಡು, ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ಶ್ರೀಮಾನ್-ವೀರ್ಯಸಂಪನ್ನನಾದ, ರಾಘವಃ-ಶ್ರೀರಾಮನು, ಮಹತ್-ದೊಡ್ಡದಾದ, ಧನುಃ-ಧನುಸ್ಸಿನನ್ನು, ವಿಜ್ಯಂ-ಹೆದೆಯಿಂದರಹಿತವನ್ನಾಗಿ, ಕೃತ್ವಾ-ಮಾಡಿ, ಅಭ್ಯಗಚ್ಛತ್-ಬಂದನು ॥೯॥ ದಿವ್ಯಜ್ಞಾನೋಪಪನ್ನಾಃ-ದಿವ್ಯದೃಷ್ಟಿಯಿಂದ ಕೂಡಿಕೊಂಡಿರುವ, ತೇಮಹರ್ಷಯಃ-ಆ ಮಹರ್ಷಿಗಳು, ರಾಮಂ-ಶ್ರೀರಾಮನನ್ನು. ಯಶಸ್ವಿನೀಂ-ಕೀರ್ತಿವಂತಳಾದ, ವೈದೇಹೀಂಚ-ಸೀತಾದೇವಿಯನ್ನು. ದೃಷ್ಟ್ವಾ-ಕಂಡು, ತದಾ-ಆಕಾಲದಲ್ಲಿ, ಪ್ರೀತಾಃ-ಸಂತೋಷಗೊಂಡವರಾಗಿ, ಅಭ್ಯಗಚ್ಛನ್-ಎದುರಾಗಿಬಂದರು ॥೧೦॥ ಧರ್ಮಚಾರಿಣಃ-ಧರ್ಮವನ್ನೇ ಆಚರಿಸುತ್ತಿರುವ, ದೃಢವ್ರತಾಃ-ದೃಢವಾದ ನಿಯಮಗಳುಳ್ಳ, ತೇ-ಆ ಋಷಿಗಳು, ಉದ್ಯಂತಂ-ಉದಯಿಸುತ್ತಿರುವ, ಸೋಮಮಿವ-ಚಂದ್ರನಂತಿರುವ. ತಂ-ಆ ಶ್ರೀರಾಮನನ್ನು, ಲಕ್ಷ್ಮಣಂಚೈವ-ಲಕ್ಷ್ಮಣನನ್ನು, ಯಶಸ್ವಿನೀಂ-ಕೀರ್ತಿವಂತಳಾದ, ವೈದೇಹೀಂಚ-ಸೀತಾದೇವಿಯನ್ನು. ದೃಷ್ಟ್ವಾ-ಕಂಡು, ಮಂಗಳಾನಿ-ಆಶೀರ್ವಾದಗಳನ್ನು, ಪ್ರಯುಂಜಾನಾಃ-ಮಾಡುತ್ತಿರುವರಾಗಿ, ಪ್ರತ್ಯಗೃಹ್ಣನ್-ಎದುರುಗೊಂಡರು ॥೧೧॥ ವನವಾಸಿನಃ-ವನದಲ್ಲಿ ವಾಸಮಾಡುತ್ತಿರುವ ಋಷಿಗಳೇ ಮುಂತಾದವರು, ರಾಮಸ್ಯ-ಶ್ರೀರಾಮನ, ರೂಪಸಂಹನನಂ-ಶರೀರಸೌಂದರ್ಯವನ್ನು, ಲಕ್ಷ್ಮೀಂ-ಕಾಂತ್ಯತಿಶಯವನ್ನು. ಸೌಕುಮಾರ್ಯಂ-ಮಾರ್ದವವನ್ನು. ಸುವೇಷತಾಂ-ಉಚಿತಶೃಂಗಾರರಸಸಂಪನ್ನತ್ವವನ್ನು. ವಿಸ್ಮಿ

---

ವೈಶ್ವದೇವಾದಿ ಬಲಿಗಳಿಂದ ಅಗ್ನಿಹೋತ್ರಗಳಿಂದಲೂ ಸಹ ಕಂಗೊಳಿಸುವದಾಗಿಯೂ, ಪುಣ್ಯಕರವಾಗಿಯೂ, ಬ್ರಹ್ಮಘೋಷೆಯಿಂದ ಶಬ್ದಾಯಮಾನವಾಗಿಯೂ, ವನದಲ್ಲಿ ಹುಟ್ಟಿದ ಹುವ್ವುಗಳಿಂದಲೂ ತಾವರೇ ಹುವ್ವುಗಳುಳ್ಳ ಬಳ್ಳಿಗಳಿಂದಲೂ ಸಹ ವ್ಯಾಪ್ತವಾಗಿಯೂ ।೬॥ ಫಲಮೂಲಗಳಂ ಭುಜಿಸುವ, ಅಂತರಿಂದ್ರಿಯನಿಗ್ರಹವುಳ್ಳ, ಚೀರವನ್ನು ಕೃಷ್ಣಾಜಿನಗಳನ್ನು ಧರಿಸಿರುವ, ಮತ್ತು ಸೂರ್ಯನಂತೆಯೂ ಅಗ್ನಿಯಂತೆಯೂ ಕಂಗೊಳಿಸುವ ಪೂರ್ವಋಷಿಗಳಿಂದ ವ್ಯಾಪ್ತವಾಗಿಯೂ, ॥೭॥ ಕ್ಲುಪ್ತವಾದ ಆಹಾರವುಳ್ಳ ಪುಣ್ಯಕರರಾದ ಮಹಾಮುನಿಗಳಿಂದ ಎಸೆವುದಾಗಿಯೂ, ಬ್ರಹ್ಮಘೋಷೆಯಿಂದ ಶಬ್ದಾಯಮಾನವಾಗಿರುವದಾವಕಾರಣ ಬ್ರಹ್ಮನ ಮಂದಿರದಂತೆಬೆಳಗುವದಾಗಿಯೂ, ಬ್ರಹ್ಮಜ್ಞರಾದ ಮಹಾಪುಣ್ಯಶಾಲಿಗಳಾದಬ್ರಾಹ್ಮಣರಿಂದ ಹೊಳೆವುವದಾಗಿಯೂ ಇರುವ(ಮುನಿಗಳ ಪರ್ಣಶಾಲೆಗಳಂ ಕಂಡನು) ॥೮॥ ಮಹಾತೇಜೋವಂತನಾದ ಆ ಶ್ರೀರಾಮನು ಕೋದಂಡಕ್ಕೆ ಬಿಗಿದಿರುವ ಹೆದೆಯಂಬಿಚ್ಚಿ ಋಷ್ಯಾಶ್ರಮಗಳ ಸಮೂಹವನ್ನುದ್ದೇಶಿಸಿಬರಲು, ದಿವ್ಯಜ್ಞಾನ ದೃಷ್ಟಿಯುಳ್ಳ ಆ ಮಹರ್ಷಿಗಳು ಆ ವೇಳೆಯಲ್ಲಿ ಸಂತೋಷಚಿತ್ತರಾಗಿ ಯಶೋವಂತಳಾದ ಸೀತಾದೇವಿಯನ್ನೂ ಚಂದಿರನ ತೆರದಿಂ ಪೊಳೆವ ಶ್ರೀರಾಮನನ್ನೂ ಲಕ್ಷ್ಮಣನನ್ನೂ ಸಹಾ ಕಾಣುತ್ತಲೇ ಆಶೀರ್ವಾದಗಳಂ ಗೈಯ್ಯುತ್ತಾ ಎದುರ್ಗೊಂಡು ಶ್ರೀರಾಮನ ರೂಪ

ಚಾರಿಣಃ ॥೧೪॥ ಅತ್ರೈನಂ ಹಿ ಮಹಾಭಾಗಾಸ್ಸರ್ವಭೂತಹಿತೇರತಂ । ಅತಿಥಿಂ ಪರ್ಣಶಾಲಾಯಾಂ ರಾಘವಂ ಸನ್ನ್ಯವೇಶಯನ್ ॥೧೫॥ ತತೋ ರಾಮಸ್ಯ ಸತ್ಕೃತ್ಯ ವಿಧಿನಾ ಪಾವಕೋಪಮಾಃ । ಆಜಹ್ರುಸ್ತೇ ಮಹಾಭಾಗಾಸ್ಸಲಿಲಂ ಧರ್ಮಚಾರಿಣಃ ॥೧೬॥ ಮೂಲಂ ಪುಷ್ಪಂ ಫಲಂ ವನ್ಯಮಾಶ್ರಮಂ ಚ ಮಹಾತ್ಮನಃ । ನಿವೇದಯಿತ್ವಾ ಧರ್ಮಜ್ಞಾಸ್ತತಃ ಪ್ರಾಂಜಲಯೋಬ್ರುವನ್ ॥೧೭॥ ಧರ್ಮಪಾಲೋ ಜನಸ್ಯಾಸ್ಯ ಶರಣ್ಯಸ್ತ್ವಂ ಮಹಾಯಶಃ । ಪೂಜನೀಯಶ್ಚ ಮಾನ್ಯಶ್ಚ ರಾಜಾ ದಂಡಧರೋ ಗುರುಃ ॥೧೮॥ ಇಂದ್ರಸ್ಯೇಹ ಚತುರ್ಭಾಗಃ ಪ್ರಜಾ ರಕ್ಷತಿ ರಾಘವ । ರಾಜಾ ತಸ್ಮಾದ್ವರಾನ್ ಭೋಗಾನ್ ಭುಙ್ಕ್ತೇ ಲೋಕನಮಸ್ಕೃತಃ ॥೧೯॥ ತೇ ವಯಂ ಭವತಾ ರಕ್ಷ್ಯಾ ಭವದ್ವಿಷಯವಾಸಿನಃ । ನಗರಸ್ಥೋ ವನಸ್ಥೋ ವಾ ತ್ವಂ ನೋ ರಾಜಾ ಜನೇಶ್ವರಃ ॥೨೦॥ ನ್ಯಸ್ತದಂಡಾ ವಯಂ ರಾಜನ್ ಜಿತಕ್ರೋಧಾ ಜಿತೇಂದ್ರಿಯಾಃ । ರಕ್ಷಿತವ್ಯಾಸ್ತ್ವಯಾ ಶಶ್ವದ್ಗರ್ಭ

---

ತಾಕಾರಾಃ-ಆಶ್ಚರ್ಯಯುಕ್ತವಾದ ಮುಖಪ್ರಸಾದಾದಿ ಗುಣಗಳುಳ್ಳವರಾಗಿ. ದದೃಶುಃ-ಕಂಡರು ॥೧೩॥ ವನಚಾರಿಣಃ-ವನದಲ್ಲಿ ಸಂಚರಿಸುತ್ತಿರುವ, ಸರ್ವೇ-ಸಮಸ್ತರಾದ. ತೇ-ಅವರೆಲ್ಲರೂ. ಆಶ್ಚರ್ಯಭೂತಾನ್-ಆಶ್ಚರ್ಯವನ್ನುಂಟುಮಾಡುತ್ತಿರುವ, ವೈದೇಹೀಂ-ಸೀತಾದೇವಿಯನ್ನು, ಲಕ್ಷ್ಮಣಂ-ಲಕ್ಷ್ಮಣನನ್ನು, ರಾಮಂ-ಶ್ರೀರಾಮನನ್ನು (ಈ ಮೂವರನ್ನು). ಅನಿಮಿಷೈಃ-ರೆಪ್ಪೆಗಳಿಂದರಹಿತವಾದ, ನೇತ್ರೈಃ-ಕಣ್ಣುಗಳಿಂದ, ದದೃಶುಃ-ಕಂಡರು ॥೧೪॥ ಅತ್ರ-ಆ ದಿವಸದಲ್ಲಿ, ಮಹಾಭಾಗಾಃ-ಮಹಾಪುಣ್ಯವಂತರಾದ ಋಷಿಗಳು, ಪರ್ಣಶಾಲಾಯಾಂ-ಪರ್ಣಶಾಲೆಯಲ್ಲಿ. ಅತಿಥಿಂ-ಅಭ್ಯಾಗತನಾಗಿ ಬಂದಿರುವ, ಸರ್ವಭೂತಹಿತೇರತಂ-ಸಮಸ್ತಪ್ರಾಣಿಗಳಿಗೂ ಇಷ್ಟವುಮಾಡುವಿಕೆಯಲ್ಲಿ ಆಸಕ್ತನಾದ ಏನಂ ರಾಘವಂ-ಈ ಶ್ರೀರಾಮನನ್ನು, ಸನ್ನಿವೇಶಯನ್-ಪರ್ಣಶಾಲೆಯಲ್ಲಿ ಕೂಡಿಸಿಕೊಂಡರು ॥೧೫॥ ತತಃ-ಬಳಿಕ, ಪಾವಕೋಪಮಾಃ-ಅಗ್ನಿಗೆ ಸದೃಶರಾದ. ಮಹಾಭಾಗಾಃ-ಪುಣ್ಯವಂತರಾದ, ಧರ್ಮಚಾರಿಣಃ-ಧರ್ಮಕಾರ್ಯಗಳನ್ನೇ ನಡಿಸುತ್ತಿರುವ. ತೇ-ಆ ಋಷಿಗಳು, ರಾಮಸ್ಯ-ಶ್ರೀರಾಮನಿಗೆ. ವಿಧಿನಾ-ಯಥಾಶಾಸ್ತ್ರದಿಂದ, ಸತ್ಕೃತ್ಯ-ಪೂಜೆಯೆಂಬುದಾದಿ, ಸಲಿಲಂ-ಪಾದ್ಯಾರ್ಘ್ಯಾಚಮನಾದ್ಯರ್ಥವಾಗಿ ಉದಕವನ್ನು. ಆಜಹ್ರುಃ-ತೆಗೆದುಕೊಂಡುಬಂದರು ॥೧೬॥ ತತಃ-ಬಳಿಕ. ಧರ್ಮಜ್ಞಾಃ-ಸಮಸ್ತಧರ್ಮಗಳನ್ನೂ ತಿಳಿದಿರುವ ಋಷಿಗಳು, ಮಹಾತ್ಮನಃ-ಮಹಾತ್ಮನಾದ ಶ್ರೀರಾಮನಿಗೆ. ಮೂಲಂ-ಕಂದಮೂಲಗಳನ್ನು, ಪುಷ್ಪಂ-ಪುಷ್ಪಗಳನ್ನೂ, ವನ್ಯಂ-ವನದಲ್ಲಿ ಹುಟ್ಟಿದ, ಫಲಂ-ಫಲಗಳನ್ನು, ಆಶ್ರಮಂ ಚ-ಕುಟೀರವನ್ನು, ನಿವೇದಯಿತ್ವಾ-ಸಮರ್ಪಿಸಿ, ಪ್ರಾಂಜಲಯಃ-ಕೈಮುಗಿದವರಾಗಿ. ಅಬ್ರುವನ್-ನುಡಿದರು ॥೧೭॥ ಹೇ ಮಹಾಯಶಃ-ಎಲೈ ಮಹಾಕೀರ್ತಿವಂತನೇ. ಅಸ್ಯ ಜನಸ್ಯ-ಈ ಜನಕ್ಕೆ, ತ್ವಂ-ನೀನು. ಧರ್ಮಪಾಲಃ-ವರ್ಣಾಶ್ರಮಧರ್ಮಪರಿಪಾಲಕನು, ಪೂಜನೀಯಶ್ಚ-ಬಹುಮಾನಾರ್ಹನು. ಶರಣ್ಯಃ-ಸಂರಕ್ಷಕನು. ಮಾನ್ಯಶ್ಚ-ಪೂಜಾಯೋಗ್ಯನು, ರಾಜಾ-ಅರಸನಾದವನು, ದಂಡಧರಃ-ದುಷ್ಟವ್ಯವಹಾರದಪಕ್ಷದಲ್ಲಿ ಶಿಕ್ಷೆಮಾಡುವದಕ್ಕೆ ಅರ್ಹನು, ಗುರುಃ-ಅವಿವೇಕವನ್ನು ತಪ್ಪಿಸಿ ವಿವೇಕಮಾರ್ಗವನ್ನು ಉಪದೇಶಿಸುವವನು. ಅಸಿ-ಆಗಿದ್ದೀಯೆ ॥೧೮॥ ಹೇ ರಾಘವ-ಎಲೈ ಶ್ರೀರಾಮನೇ. ಇಹ-ಈ ಲೋಕದಲ್ಲಿ, ರಾಜಾ-ಸರ್ವಪ್ರಜಾರಂಜಕನಾದ ಅರಸು. ಇಂದ್ರಸ್ಯ-ದೇವೇಂದ್ರನ, ಅಥವಾ-ಇಂದ್ರಸ್ಯ-ಪರಮೈಶ್ವರ್ಯವಂತನಾದ ಪರಮಾತ್ಮನ, ಚತುರ್ಭಾಗಃ-ನಾಲ್ಕನೇ ಅಂಶರೂಪನಾದವನಾಗಿ. ಪ್ರಜಾಃ-ಪ್ರಜೆಗಳನ್ನು. ರಕ್ಷತಿ-ಸಂರಕ್ಷಿಸುತ್ತಾನೆ, ತಸ್ಮಾತ್-ಆ ಕಾರಣದಿಂದ, ಲೋಕನಮಸ್ಕೃತಃ-ಸಮಸ್ತಜನರಿಂದ ನಮಸ್ಕರಿಸಲ್ಪಟ್ಟವನಾದ, ವರಾನ್-ಶ್ರೇಷ್ಠವಾದ. ಭೋಗಾನ್-ಭೋಗಗಳನ್ನು. ಭುಙ್ಕ್ತೇ-ಅನುಭವಿಸುತ್ತಾನೆ ॥೧೯॥ ಭವದ್ವಿಷಯವಾಸಿನಃ-ನಿನ್ನ ದೇಶದಲ್ಲೇ ಇರುವರಾದಕಾರಣ, ತೇ-ಆ ಪೂರ್ವೋಕ್ತಪ್ರಕಾರವಾದ ನಮ್ಮ ಆತ್ಮನನ್ನು ನಮ್ಮ ಸಂಬಂಧಿಗಳನ್ನು ನಿನ್ನಲ್ಲೇ ಸಮರ್ಪಿಸಿರುವ. ವಯಂ-ನಿನ್ನ ಉಪಾಸನಹೊರತು ಉಪಾಯಶೂನ್ಯರಾದ ಬಹಳ ಅಪಾಯವುಳ್ಳ ನಾವುಗಳು, ಭವತಾ-ನಿನ್ನಿಂದ, (ಅಥವಾ-ನಿರುಪಾಧಿಕ ಸರ್ವಲೋಕನಾದ ನಿನ್ನಿಂದ.) ರಕ್ಷ್ಯಾಃ-ರಕ್ಷಣೀಯರು, ಜನೇಶ್ವರಃ-ಜನಗಳಿಗೆಲ್ಲಾ ಅಧಿಪತಿಯಾ

---

ವನ್ನೂ ಅವಯವ ಸೌಂದರ್ಯವನ್ನೂ, ಕಾಂತಿಯನ್ನೂ, ಮೃದುತ್ವವನ್ನೂ, ಅಲಂಕಾರವನ್ನೂ, ಸೀತಾದೇವಿಯನ್ನೂ, ಲಕ್ಷ್ಮಣನನ್ನೂ ಸಹಾ ಕಂಡು ಆಶ್ಚರ್ಯಗೊಂಡರು ॥೧೪॥ ಆ ದಿನದಲ್ಲಿ ಮಹಾ ಪುಣ್ಯವಂತರಾದ ಆ ಋಷಿಗಳು ಎಲ್ಲಾ ಪ್ರಾಣಿಗಳಿಗೂ ಹಿತಕರನಾದ, ಅಭ್ಯಾಗತನಾದ ಆ ಶ್ರೀರಾಮನನ್ನು ಪರ್ಣಶಾಲೆಗಳಲ್ಲಿ ಕುಳ್ಳಿರಿಸಿಕೊಂಡರು ॥೧೫॥ ಬಳಿಕ ಅಗ್ನಿಗೆ ಸಮಾನರಾದ ಮತ್ತು ಧರ್ಮಗಳನ್ನಾಚರಿಸುವ ಮಹಾಮುನಿಗಳು ಆ ಶ್ರೀರಾಮನಿಗಾಗಿ ಅರ್ಘ್ಯಪಾದ್ಯಗಳನ್ನಿತ್ತು, ಕಂದಮೂಲ ಪುಷ್ಪಫಲಾದಿಗಳನ್ನೂ, ಆಶ್ರಮವನ್ನೂ ಸಹಾ ತೋರಿಸಿ ಅಂಜಲಿಬದ್ಧರಾಗಿ ಇಂತೆಂದರು,—ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೇ! ಧರ್ಮವಾಗಿ ಪರಿಪಾಲಿಸುವ ನೀನು ಈ ನಮಗೆಲ್ಲಾ ಪೂಜ್ಯನಾಗಿಯೂ, ಮಾನ್ಯನಾಗಿಯೂ, ಶರಣ್ಯನಾಗಿಯೂ, ಒಡೆಯನಾಗಿಯೂ, ಶಿಕ್ಷಾಕರ್ತನಾಗಿಯೂ, ಗುರುವಾಗಿಯೂ, ಇರುವನು ॥೧೮॥ ಕೇಳೆಲೈ ಶ್ರೀರಾಮನೇ! ಈ ಲೋಕದಲ್ಲಿ ಅರಸಾದವನು ಇಂದ್ರನ (ಅಥವಾ ಪರಮೈಶ್ವರ್ಯವಂತನಾದ ಪರಮಾತ್ಮನ) ಅಂಶಭೂತರಾದ ವ್ಯಕ್ತಿಗಳ ಚತುಷ್ಟಯದಲ್ಲಿ ಏಕಮೂರ್ತಿಯಾದವನಾಗಿ, ಪ್ರಜೆಗಳನ್ನು ಪರಿಪಾಲಿಸುವನಾದಕಾರಣ ಸಮಸ್ತ ಜನರಿಂದಲೂ ನಮಸ್ಕರಿಸಲ್ಪಡುವನಾಗಿ, ಉತ್ತಮವಾದ ಭೋಗಗಳನ್ನನುಭವಿಸುತ್ತಾನೆ ॥೧೯॥ ನಿನ್ನ ದೇಶವಾಸಿಗಳಾದ ನಾವುಗಳು ನಿನ್ನಿಂದಲೇ ರಕ್ಷಿಸುತಕ್ಕವರು,

ಭೂತಾಸ್ತಪೋಧನಾಃ ॥೨೧॥ ಏಷಮುಕ್ತ್ವಾ ಫಲೈರ್ಮೂಲೈಃ ಪುಷ್ಪೈರನ್ಯೈಶ್ಚ ರಾಘವಂ । ಅನ್ಯೈಶ್ಚ ವಿವಿಧಾಹಾರೈಸ್ಸಲಕ್ಷ್ಮಣಮಪೂಜಯನ್ ॥೨೨॥ ತಥಾನ್ಯೇ ತಾಪಸಾಸ್ಸಿದ್ಧಾ ರಾಮಂ ವೈಶ್ವಾನರೋಪಮಾಃ । ನ್ಯಾಯವೃತ್ತಾ ಯಥಾನ್ಯಾಯಂ ತರ್ಪಯಾಮಾಸುರೀಶ್ವರಂ ॥೨೩॥ —*** ಇತಿಶ್ರೀಮದಾರಣ್ಯಕಾಂಡೇ-ಪ್ರಥಮಸ್ಸರ್ಗಃ ***—

ಕೃತಾತಿಥ್ಯೋಽಥ ರಾಮಸ್ತು ಸೂರ್ಯಸ್ಯೋದಯನಂ ಪ್ರತಿ । ಆಮಂತ್ರ್ಯ ಸ ಮುನೀನ್ಸರ್ವಾನ್ವನಮೇವಾನ್ವಗಾಹತ ॥೧॥ ನಾನಾಮೃಗಗಣಾಕೀರ್ಣಂ ಶಾರ್ದೂಲವೃಕಸೇವಿತಂ । ಧ್ವಸ್ತವೃಕ್ಷಲತಾಗುಲ್ಮಂ ದುರ್ದರ್ಶಸಲಿಲಾಶಯಂ । ನಿಷ್ಕೂಜನಾನಾಶಕುನಿ ಝಿಲ್ಲಿಕಾಗಣನಾದಿತಂ । ಲಕ್ಷ್ಮಣಾನುಗತೋ ರಾಮೋ ವನಮಧ್ಯಂ ದದರ್ಶ ಹ ॥೩॥

---

ದ, ತ್ವಂ-ನೀನು, ನಗರಸ್ಥೋ ವಾ-ಊರಲ್ಲಿರುವನಾದರೂ, ವನಸ್ಥೋ ವಾ-ಅರಣ್ಯವಾಸಮಾಡುವನಾದರೂ, ನಃ-ನಮ್ಮಿಗೆ. ರಾಜಾ-ಅರಸು, ಅಸಿ-ಆಗಿದ್ದೀ॥೨೦॥ ಹೇರಾಜನ್-ಎಲೈ ಅರಸೇ, ನ್ಯಸ್ತದಂಡಾಃ-ನ್ಯಸ್ತ-ಬಿಡಲ್ಪಟ್ಟ, ದಂಡಾಃ-ಪರಕೀಯಶಿಕ್ಷೆಯುಳ್ಳವರಾದಕಾರಣ, ಜಿತೇಂದ್ರಿಯಾಃ-ಜಯಿಸಲ್ಪಟ್ಟ ಇಂದ್ರಿಯವ್ಯಾಪಾರವುಳ್ಳ, ಜಿತಕ್ರೋಧಾಃ-ಜಯಿಸಲ್ಪಟ್ಟ ಕೋಪವುಳ್ಳ, ಗರ್ಭಭೂತಾಃ-ಮಕ್ಕಳಿಗೆ ಸಮಾನರಾದ, ತಪೋಧನಾಃ-ತಪವೇ ಧನರಾಗುಳ್ಳ. ವಯಂ-ನಾವುಗಳು. ತ್ವಯಾ-ನಿನ್ನಿಂದ. ಶಶ್ವತ್-ಬಾರಿಬಾರಿಗೂ, ರಕ್ಷಿತವ್ಯಾಃ-ಸಂರಕ್ಷಿಸಲ್ಪಡುವರು, ॥೨೧॥ ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಫಲೈಃ-ಫಲಗಳಿಂದಲೂ, ವನ್ಯೈಃ-ವನದಲ್ಲಿ ಹುಟ್ಟಿದ. ಮೂಲೈಃ-ಕಂದಮೂಲಗಳಿಂದಲೂ, ಪುಷ್ಪೈಃ-ಹೂವುಗಳಿಂದಲೂ, ಅನ್ಯೈಃ-ಮತ್ತು ಕೆಲಬಾದ. ವಿವಿಧಾಹಾರೈಃ-ನಾನಾಬಗೆಗಳಾದ ನೀವಾರಧಾನ್ಯವೇ ಮೊದಲಾಗುಳ್ಳ ಆಹಾರಗಳಿಂದ, ಸಲಕ್ಷ್ಮಣಂ-ಲಕ್ಷ್ಮಣನಿಂದೊಡಗೂಡಿದ. ರಾಘವಂ-ಶ್ರೀರಾಮನನ್ನು, ಅಪೂಜಯನ್-ಪೂಜೆಮಾಡಿದರು ॥೨೨॥ ತಥಾ-ಹಾಗೆಯೇ, ವೈಶ್ವಾನರೋಪಮಾಃ-ತಪಸ್ತೇಜಸ್ಸಿನಿಂದ ಅಗ್ನಿಗೆ ಸಮಾನರಾದ, ಸಿದ್ಧಾಃ-ಸಿದ್ಧಸಂಕಲ್ಪರಾದ, ನ್ಯಾಯವೃತ್ತಾಃ-ಭಗವದುಪಾಸನರೂಪಧರ್ಮದಲ್ಲೇ ಸ್ವಭಾವವುಳ್ಳ, ತಾಪಸಾಃ-ಋಷಿಗಳು, ಯಥಾನ್ಯಾಯಂ-ಯಥಾಶಾಸ್ತ್ರವಾಗಿ, ಈಶ್ವರಂ-ಜಗತ್ತಿಗಧಿಪತಿಯಾದ. ರಾಮಂ-ಶ್ರೀರಾಮನನ್ನು, ತರ್ಪಯಾಮಾಸುಃ-ಪ್ರಣಾಮಾದಿಗಳಿಂದ ತೃಪ್ತಿಗೊಳಿಸಿದರು ॥೨೩॥

—**ಇತಿಶ್ರೀಮದಾರಣ್ಯಕಾಂಡೇ-ಪ್ರಥಮಸ್ಸರ್ಗಃ**—

ಅಥ-ಬಳಿಕ. ಕೃತಾತಿಥ್ಯಃ-ಮಾಡಲ್ಪಟ್ಟ ಅತಿಥಿಸತ್ಕಾರವುಳ್ಳ, ಸರಾಮಸ್ತು-ಆ ಶ್ರೀರಾಮನಾದರೆ, ಸೂರ್ಯಸ್ಯ-ಸೂರ್ಯನ, ಉದಯನಂ ಪ್ರತಿ-ಉದಯಕಾಲದಲ್ಲಿ, ಸರ್ವಾನ್-ಸಮಸ್ತರಾದ, ಮುನೀನ್-ಋಷಿಗಳನ್ನು ಕುರಿತು, ಆಮಂತ್ರ್ಯ-ಅಪ್ಪಣೆಕೇಳಿ. ವನಮೇವ-ವನವನ್ನೇ, ಅನ್ವಗಾಹತ-ಹೊಕ್ಕನು ॥೧॥ ಲಕ್ಷ್ಮಣಾನುಗತಃ-ಲಕ್ಷ್ಮಣನಿಂದ ಅನುಸರಿಸಲ್ಪಟ್ಟ, ರಾಮಃ-ಶ್ರೀರಾಮನು, ನಾನಾಮೃಗಗಣಾಕೀರ್ಣಂ-ಅನೇಕಬಗೆಗಳಾದ ಮೃಗಗಳ ತಂಡಗಳಿಂದ ಕೂಡಿಕೊಂಡಿರುವ, ಶಾರ್ದೂಲವೃಕಸೇವಿತಂ-ವ್ಯಾಘ್ರಗಳಿಂದಲೂ ಚಿರತೆಗಳಿಂದಲೂ ಸೇವಿಸಲ್ಪಟ್ಟ, ಧ್ವಸ್ತವೃಕ್ಷಲತಾಗುಲ್ಮಂ-ಧ್ವಂಸಮಾಡಲ್ಪಟ್ಟ ಗಿಡಗಳೂ ಬಳ್ಳಿಗಳೂ ಬೇಲಿಗಳೂ ಉಳ್ಳ, ದುರ್ದರ್ಶಸಲಿಲಾಶಯಂ-ನೋಡಲಸಾಧ್ಯವಾದ ಸರೋವರಗಳುಳ್ಳ. ನಿಷ್ಕೂಜನಾನಾಶಕುನಿ-ನಿಶ್ಶಬ್ದವಾದ ಅನೇಕಬಗೆಗಳಾದ ಪಕ್ಷಿಗಳುಳ್ಳ. ಝಿಲ್ಲಿಕಾಗಣನಾದಿತಂ-ಝಿಲ್ಲಿಕಾ-ರೆಕ್ಕೆಗಳುಳ್ಳ ಝೇಂಕಾರಮಾಡುತ್ತಿರುವ ಇರುವುಗಳ, ಗಣ-ತಂಡಗಳಿಂದ, ನಾದಿತಂ-ಧ್ವನಿಗೊಳಿಸುತ್ತಿರುವ, (ಅಥವಾ-ಚೀಬಟೆಹಕ್ಕಿಗಳಿಂದ ಧ್ವನಿಗೊಳಿಸುತ್ತಿರುವ,) ವನಮಧ್ಯಂ-ವನದಮಧ್ಯಪ್ರದೇಶವನ್ನು, ದದರ್ಶ-ಹಕಂಡನಷ್ಟೆ ॥೩॥ ಘೋರಮೃಗಾಯುತೇ-ಭಯಂಕರವಾದ ಮೃಗಗಳಿಂದ ಕೂಡಿಕೊಂಡಿರುವ, ತಸ್ಮಿನ್-ಆ ಅರಣ್ಯದಲ್ಲಿ, ಕಾಕುತ್ಸ್ಥಃ-

---

ನೀನು ಪಟ್ಟಣದಲ್ಲಿದ್ದರೂ ನಮಿಗೆ ಅರಸು ।೨೦। ಎಲೈ ರಾಜನೇ! ದಂಡನೆ ಯಿಲ್ಲದವರಾಗಿಯೂ, ಕೋಪವಿಲ್ಲದವರಾಗಿಯೂ, ಜಿತೇಂದ್ರಿಯರಾಗಿಯೂ, ತಪವೇಧನವಾಗಿ ಉಳ್ಳವರಾಗಿಯೂ ಇರುವ ನಾವು ಬಸುರಲ್ಲಿರುವ ಪಿಂಡಗಳಂತೆ ನಿನ್ನಿಂದ ರಕ್ಷಿಸತಕ್ಕವರೆಂದು ಹೇಳಿ. ಫಲಮೂಲಗಳಿಂದಲೂ, ವನದಲ್ಲಿ ಪುಟ್ಟಿದ ಪುಷ್ಪಗಳಿಂದಲೂ, ವಿಧವಿಧವಾದ ಅನೇಕ ಹಾರಗಳಿಂದಲೂ, ರಾಮಲಕ್ಷ್ಮಣರಂ ಪೂಜಿಸಿದರು ।೨೨। ಅದೇರೀತಿಯಾಗಿ ಅಗ್ನಿ ಸದೃಶರಾದ ಇತರ ಋಷಿಗಳು ನ್ಯಾಯವನ್ನರಿತು ಈಶ್ವರನಾದ ಶ್ರೀರಾಮನನ್ನು ತೃಪ್ತಿಗೊಳಿಸಿದರು ।೨೩।

—* ಅರಣ್ಯಕಾಂಡದಲ್ಲಿನ ೧ನೆಯಸರ್ಗಂಮುಗಿದುದು. *—

ಬಳಿಕ ಶ್ರೀರಾಮನು ಅತಿಥಿಸತ್ಕಾರವನ್ನು ಪಡದವನಾಗಿ ಆ ರಾತ್ರಿ ಅಲ್ಲಿಯೇ ಯಿದ್ದು ಸೂರ್ಯೋದಯವಾಗಲು ಆ ಮುನಿಗಳಂ ಕೇಳಿವನವಂಹೊಕ್ಕನದೆಂತೆನೆ,—।೧। ಅನೇಕವಿಧವಾದ ಮೃಗಗಳಿಂದ ವ್ಯಾಪ್ತವಾಗಿಯೂ, ಶಾರ್ದೂಲಗಳಿಂದಲೂ, ತೋಳಗಳಿಂದಲೂ, ಯುಕ್ತವಾಗಿಯೂ, ಕೊಡಹಲ್ಪಟ್ಟ ವೃಕ್ಷಗಳೂ, ಲತೆಗಳೂ ಪೊದೆಗಳೂ ಉಳ್ಳದ್ದಾಗಿಯೂ, ನೋಡಲಸಾಧ್ಯವಾದ ಮಡುವುಗಳುಳ್ಳದ್ದಾಗಿಯೂ, ವಿಧವಿಧವಾಗಿ ಕೂಗುವ ಅನೇಕ ಬಗೆಗಳಾದ ಪಕ್ಷಿಗಳ ಮತ್ತು ಇರುವೆಗಳ ತಂಡಗಳಿಂದ ಶಬ್ದಾಯಮಾನವಾಗಿಯೂ, ಇರುವ ವನಮಧ್ಯ ಪ್ರದೇಶವನ್ನು ಲಕ್ಷ್ಮಣನಿಂ ದೊಡಗೂಡಿ ನೋಡಿದನಷ್ಟೇ ।೩। ಭಯಂಕರವಾದ ಮೃಗಗಳುಳ್ಳ, ಆ ಅರಣ್ಯದ ಮಧ್ಯದಲ್ಲಿ ಸೀತಾಸಮೇತನಾದ ಶ್ರೀರಾಮನು ಪರ್ವತದ ಶೃಂಗದಂತೆ ಮಹದಾಕಾರವುಳ್ಳ, ಮತ್ತು ಮಹಾಧ್ವನಿಯುಳ್ಳ,

ಸೀತಯಾಸಹಕಾಕುತ್ಸ್ಥಸ್ತಸ್ಮಿನ್ಘೋರಮೃಗಾಯುತೇ । ದದರ್ಶಗಿರಿಶೃಂಗಾಭಂಪುರುಷಾದಂಮಹಾಸ್ವನಂ ॥೪॥
ಗಂಭೀರಾಕ್ಷಂಮಹಾವಕ್ತ್ರಂವಿಕಟಂವಿಷಮೋದರಂ । ಭೀಭತ್ಸಂವಿಷಮಂದೀರ್ಘಂವಿಕೃತಂಘೋರದರ್ಶನಂ ॥೫॥ ವ
ಸಾನಂಚರ್ಮವೈಯಾಘ್ರಂವಸಾರ್ದ್ರಂರುಧಿರೋಕ್ಷಿತಂ। ತ್ರಾಸನಂಸರ್ವಭೂತಾನಾಂವ್ಯಾದಿತಾಸ್ಯಮಿವಾಂತಕಂ ॥೬॥
ತ್ರೀನ್ಸಿಹ್ಮಾಂಶ್ಚತುರೋವ್ಯಾಘ್ರಾನ್ದ್ವೌವೃಕೌಪೃಷತಾನ್ದಶ। ಸವಿಷಾಣಂವಸಾದಿಗ್ಧಂಗಜಸ್ಯಚಶಿರೋಮಹತ್ ॥
ಅವಸಜ್ಯಾಯಸೇಶೂಲೇವಿನದಂತಂಮಹಾಸ್ವನಂ ॥೭॥ ಸರಾಮಂಲಕ್ಷ್ಮಣಂಚೈವಸೀತಾಂದೃಷ್ಟ್ವಾಚಮೈಥಿಲೀಂ।
ಅಭ್ಯಧಾವತಸಂಕ್ರುದ್ಧಃಪ್ರಜಾಃಕಾಲಇವಾಂತಕಃ ॥೮॥ ಸಕೃತ್ವಾಭೈರವಂನಾದಂಚಾಲಯನ್ನಿವಮೇದಿನೀಂ । ಅಂ
ಕೇನಾದಾಯವೈದೇಹೀಮಪಕ್ರಮ್ಯತತೋಬ್ರವೀತ್ ॥೯॥ ಯುವಾಂಜಟಾಚೀರಧರೌಸಭಾರ್ಯೌಕ್ಷೀಣಜೀವಿತೌ ॥

---

ಶ್ರೀರಾಮನು. ಸೀತಯಾಸಹ-ಸೀತಾದೇವಿಯೊಡಗೂಡಿ. ಗಿರಿಶೃಂಗಾಭಂ-ಬೆಟ್ಟದಶಿಖರದಂತೆ ಹೊಳೆಯುತ್ತಿರುವ, ಪುರುಷಾದಂ-ಮನುಷ್ಯರನ್ನು ತಿನ್ನುತ್ತಿರುವ. ಮಹಾಸ್ವನಂ-ದೊಡ್ಡದಾದ ಕಂಠಧ್ವನಿಯುಳ್ಳ, ಗಂಭೀರಾಕ್ಷಂ-ಗುಣಿಯಾಗಿರುವ ಕಣ್ಣುಗಳುಳ್ಳ, ಮಹಾವಕ್ತ್ರಂ-ದೊಡ್ಡಬಾಯಿಯುಳ್ಳ. ವಿಕಟಂ-ವಕ್ರವಾಗಿರುವ, ವಿಷಮೋದರಂ-ನಿಮ್ನೋನ್ನತವಾಗಿರುವ ಹೊಟ್ಟೆಯುಳ್ಳ, ಭೀಭತ್ಸಂ-ನೋಡುವದಕ್ಕೆ ಅಸಹ್ಯವಾಗಿರುವ, ವಿಷಮಂ-ವಕ್ರವಾದ ಅವಯವಗಳುಳ್ಳ. ದೀರ್ಘಂ-ಉದ್ದವಾಗಿರುವ, ವಿಕೃತಂ-ವಿಕಾರವುಳ್ಳ, ಘೋರದರ್ಶನಂ-ಭಯಂಕರವಾದ ನೋಡುವಿಕೆಯುಳ್ಳ, ವೈಯ್ಯಾಘ್ರಂ-ಹುಲಿಯಸಂಬಂಧವಾದ, ಚರ್ಮ-ಚರ್ಮವನ್ನು. ವಸಾನಂ-ಉಟ್ಟಿರುವ, ವಸಾರ್ದ್ರಂ-ದೇಹದಲ್ಲಿ ಹುಟ್ಟಿದ ರಕ್ತಮಿಶ್ರವಾದ ನೀರಿನಿಂದ ತೊಯಿಸಲ್ಪಟ್ಟ, ರುಧಿರೋಕ್ಷಿತಂ-ರಕ್ತದಿಂದ ನೆನಿಸಲ್ಪಟ್ಟ, ಸರ್ವಭೂತಾನಾಂ-ಸಮಸ್ತ ಪ್ರಾಣಿಗಳಿಗೂ, ತ್ರಾಸನಂ-ಹೆದರಿಕೆಯನ್ನು ಮಾಡುತ್ತಿರುವ, ವ್ಯಾದಿತಾಸ್ಯಂ-ತೆರಿಯಲ್ಪಟ್ಟ ಬಾಯಿಯುಳ್ಳ, ಅಂತಕಮಿವಸ್ಥಿತಂ-ಯಮನಂತಿರುವ ॥೬॥ ಆಯಸೇ-ಕಬ್ಬಿಣದವಿಕಾರವಾದ, ಶೂಲೇ-ತ್ರಿಶೂಲದಲ್ಲಿ, ತ್ರೀನ್ಸಿಹ್ಮಾನ್-ಮೂರು ಸಿಹ್ಮಗಳನ್ನು, ಚತುರೋವ್ಯಾಘ್ರಾನ್-ನಾಲ್ಕು ಹುಲಿಗಳನ್ನು, ದ್ವೌವೃಕೌ-ಎರಡು ತೋಳಗಳನ್ನು, ದಶಪೃಷತಾನ್-ಹತ್ತು ಚಿಗರಿಗಳನ್ನು. ಸವಿಷಾಣಂ-ದಂತಗಳಿಂದೊಡಗೂಡಿದ. ವಸಾದಿಗ್ಧಂ-ಮಾಂಸದಿಂ ವ್ಯಾಪ್ತವಾದ. ಗಜಸ್ಯ-ಆನೆಯ, ಮಹತ್-ದೊಡ್ಡದಾದ. ಶಿರಃ-ತಲೆಯನ್ನು, ಅವಸಜ್ಯ-ಚುಚ್ಚಿಕೊಂಡು, ಮಹಾಸ್ವನಂ-ಮಹಾಧ್ವನಿಯುಳ್ಳದ್ದಂತೆ, ವಿನದಂತಂ-ಧ್ವನಿಗೊಂಡಿರುವ ರಾಕ್ಷಸನನ್ನು, ದದರ್ಶ-ಕಂಡನು, ಸಃ-ಆ ರಾಕ್ಷಸನು, ರಾಮಂ-ಶ್ರೀರಾಮನನ್ನು, ಲಕ್ಷ್ಮಣಂಚೈವ-ಲಕ್ಷ್ಮಣನನ್ನು, ಮೈಥಿಲೀಂ-ಜನಕರಾಯನ ಮಗಳಾದ, ಸೀತಾಂಚ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು. ಕಾಲೇ-ಸಂಹಾರಕಾಲದಲ್ಲಿ, ಪ್ರಜಾಃ-ಪ್ರಜೆಗಳನ್ನುಕುರಿತು, ಅಂತಕಇವ-ಯಮನಂತೆ, ಸಂಕ್ರುದ್ಧಃ-ಕೋಪಿಷ್ಠನಾಗಿ, ಅಭ್ಯಧಾವತ-ಓಡಿಬಂದನು ॥೮॥ ಸಃ-ಆ ವಿರಾಧನು, ಮೇದಿನೀಂ-ನೆಲವನ್ನು, ಚಾಲಯನ್ನಿವ-ಕಂಪಿಸುವನಂತೆ, ಭೈರವಂ-ಭಯಂಕರವಾದ, ನಾದಂ-ಧ್ವನಿಯನ್ನು. ಕೃತ್ವಾ-ಮಾಡಿ, ಅಂಕೇನ-ಕಟಿಪ್ರದೇಶದಿಂದ, ವೈದೇಹೀಂ-ಸೀತಾದೇವಿಯನ್ನು, ಆದಾಯ-ಹಿಡಿದುಕೊಂಡು. ಅಪಕ್ರಮ್ಯ-ಹಿಂದಕ್ಕೆ ತಿರಿಗಿ, ತತಃ-ಬಳಿಕ, ಅಬ್ರವೀತ್-ನುಡಿದನು, (ವಿಶೇಷಾರ್ಥವಾದರೆ-ಅಂಕೇನ-ಕಟಪ್ರದೇಶದಿಂದ. ವೈದೇಹೀಂ-ಸೀತಾದೇವಿಯನ್ನು, ಆದಾಯ-ಮಾತೃಬುದ್ಧಿಯಿಂದ ತನ್ನ ಪಾಪಪರಿಹಾರಾರ್ಥವಾಗಿ ಹಿಡಿದುಕೊಂಡು ಅಂದರೆಸ್ಕಾಂದಪುರಾಣೋಕ್ತಪ್ರಕಾರ ಈಕೆಪರಾಶಕ್ತಿಯು ಈಕೆಯನ್ನು ಸ್ಪರ್ಶಮಾಡಿದರೆ ನನಗೆ ಮುಕ್ತಿಯುಂಟೆಂಬ ಭಾವದಿಂದ ಪರಿಗ್ರಹಿಸಿ ಬಳಿಕ ಮಾತನಾಡಿದನು) ॥೯॥ ಯುವಾಂ-ನೀವುಗಳು, ಜಟಾಚೀರಧರೌ-ಜಡೆಗಳನ್ನು ನಾರುಮಡಿಗಳ

---

ಮನುಷ್ಯರಂತಿನ್ನುವ ರಕ್ಕಸನಂ ಕಂಡನದೆಂತೆನೆ,—ಗಂಭೀರವಾದ ನೇತ್ರಗಳು ದೊಡ್ಡ ಬಾಯಿಯೂ ಡೊಂಕಾದ ಹೊಟ್ಟೆಯೂ, ಉಳ್ಳವನಾಗಿಯೂ, ಭಯಂಕರವಾಗಿಯೂ ಉದ್ದವಾಗಿಯೂ ವಿಕಾರವಾಗಿಯೂ, ಘೋರವಾದ ದರ್ಶನ ಮುಳ್ಳವನಾಗಿಯೂ, ರಕ್ತದಿಂದ ತೊಯಿಸಲ್ಪಟ್ಟ ಹುಲಿಚರ್ಮವನ್ನು ಹೊದ್ದುಕೊಂಡವನಾಗಿಯೂ, ಬಾಯಿಯನ್ನು ತೆರದಿರುವ ಯಮನಂತೆ ಪ್ರಾಣಿಗಳಿಗೆಲ್ಲಾ ಮಹಾ ಭಯಂಕರನಾಗಿಯೂ ॥೬॥ ಮೂರು ಸಿಹ್ಮಗಳನ್ನೂ ನಾಲ್ಕು ಹುಲಿಗಳನ್ನೂ, ಯರಡು ತೋಳಗಳನ್ನೂ, ಹತ್ತುಚಿಗರಿಗಳನ್ನೂ, ದಂತಯುಕ್ತವಾದ ಮತ್ತು ಮಾಂಸದಿಂದೊಡಗೂಡಿದ ಆನೆಯ ಕುಂಭಸ್ಥಳವನ್ನೂ, ಸಹಾ (ಶೂಲದಿಂದ) ಚುಚ್ಚಿ ಘಟ್ಟಿಯಾಗಿ ಕೂಗುತ್ತಿರುವ ರಕ್ಕಸನಂ ನೋಡಿದವನಾಗಲು, ಆ ಅಸುರನು ರಾಮಲಕ್ಷ್ಮಣರನ್ನೂ ಸೀತಾದೇವಿಯನ್ನೂ ನೋಡಿ, ಪ್ರಳಯಕಾಲದಲ್ಲಿ ಪ್ರಜೆಗಳನ್ನಟ್ಟಿಕೊಂಡು ಬರುವ ಕುಪಿತನಾದ ಯಮನಂತೆ ಓಡಿಬಂದನು ॥೮॥ ಎಂತೆನೆ,—ಆ ವಿರಾಧನು ಭೂಮಿಯನ್ನು ಕಂಪಿಸುವಂತೆ ಘಟ್ಟಿಯಾಗಿ ಕಿರಚಿಕೊಳ್ಳುತ್ತಾ ಸೀತಾದೇವಿಯಂ ಹಿಡಿದು ತೊಡೆಯಮೇಲೆ ಕುಳ್ಳಿರಿಸಿಕೊಂಡು ಇಂತೆಂದನು,—(ವಿಶೇಷಾರ್ಥವೇನಂದರೆ,-ಆ ವಿರಾಧನು ಕಟಪ್ರದೇಶದಿಂದ ಸೀತಾದೇವಿಯನ್ನು ಮಾತೃಬುದ್ಧಿಯಿಂದ ತನ್ನಪಾಪ ಪರಿಹಾರಕ್ಕಾಗಿ ಪರಿಗ್ರಹಿಸಿ ‹‹ಸ್ಕಾಂದಪುರಾಣದಲ್ಲಿ ಹೇಳಿರುವಂತೆ ಈಕೆಯೇ ಪರಾಶಕ್ತಿಯು,, ಈಕೆಯನ್ನು ಸ್ಪರ್ಶಿಸಿದರೆ ತನಗೆಮುಕ್ತಿಯುಂಟಾಗುವದೆಂದು ಪರಿಗ್ರಹಿಸಿದಬಳಿಕ ಮಾತಾಡುವನೆಂದುಭಾವವು) ॥೯॥ ನೀವುಗಳು ಜಡೆಗಳನ್ನೂ ನಾರುಮಡಿಗಳನ್ನೂ ಧರಿಸಿದವರಾಗಿ

ಪ್ರವಿಷ್ಟೌ ದಂಡಕಾರಣ್ಯಂ ಶರಚಾಪಾಸಿಧಾರಿಣೌ ॥೧೦॥ ಕಥಂ ತಾಪಸಯೋರ್ವಾಂ ಚ ವಾಸಃ ಪ್ರಮದಯಾ ಸಹ । ಅಧರ್ಮಚಾರಿಣೌ ಪಾಪೌ ಕೌ ಯುವಾಂ ಮುನಿದೂಷಕೌ ॥೧೧॥ ಅಹಂ ವನಮಿದಂ ದುರ್ಗಂ ವಿರಾಧೋ ನಾಮ ರಾಕ್ಷಸಃ । ಚರಾಮಿ ಸಾಯುಧೋ ನಿತ್ಯಮೃಷಿಮಾಂಸಾನಿ ಭಕ್ಷಯನ್ । ಇಯಂ ನಾರೀ ವರಾರೋಹಾ ಮಮ ಭಾರ್ಯಾ ಭವಿಷ್ಯತಿ । ಯುವಯೋಃ ಪಾಪಯೋಶ್ಚಾಹಂ ಪಾಸ್ಯಾಮಿ ರುಧಿರಂ ಮೃಥೇ ॥೧೨॥ ತಸ್ಯೈವಂ ಬ್ರುವತೋ ದೃಷ್ಟಂ ವಿರಾಧಸ್ಯ ದುರಾತ್ಮನಃ । ಶ್ರುತ್ವಾ ಸಗರ್ವಿತಂ ವಾಕ್ಯಂ ಸಂಭ್ರಾಂತಾ ಜನಕಾತ್ಮಜಾ । ಸೀತಾ ಪ್ರಾವೇಪತೋದ್ವೇಗಾತ್ಪ್ರವಾತೇ ಕದಲೀ ಯಥಾ ॥೧೩॥ ತಾಂ ದೃಷ್ಟ್ವಾ ರಾಘವಃ ಸೀತಾಂ ವಿರಾಧಾಂಕಗತಾಂ ಶುಭಾಂ । ಅಬ್ರವೀಲ್ಲಕ್ಷ್ಮಣಂ ವಾಕ್ಯಂ ಮುಖೇನ ಪರಿಶುಷ್ಯತಾ ॥೧೪॥ ಪಶ್ಯ ಸೌಮ್ಯ ನರೇಂದ್ರಸ್ಯ ಜನಕಸ್ಯಾತ್ಮಸಂಭವಾಂ । ಮಮ ಭಾರ್ಯಾಂ ಶುಭಾಚಾರಾಂ ವಿರಾ

---

ನ್ನು ಧರಿಸಿದ್ದೀರಿ, ಸಭಾರ್ಯೌ-ಒಬ್ಬ ಸ್ತ್ರೀಯಿಂದ ಸಮೇತರಾಗಿ, ಅಥವಾ-ಸಭಾರ್ಯೌ-ಸಭೆಯಲ್ಲಿ ಪೂಜ್ಯರಾದವರಾಗಿ, ಅಥವಾ-ಸಭಾರ್ಯೌ-ಪ್ರಕಾಶದಿಂಕೂಡಿದವರಾಗಿಯೂ ಪೂಜ್ಯರಾಗಿಯೂ ಇದ್ದೀರಿ. ಕ್ಷೀಣಜೀವಿತೌ-ನಾಶಗೊಂಡಪ್ರಾಣಗಳುಳ್ಳವರಾಗಿ, ಶರಚಾಪಾಸಿಧಾರಿಣೌ-ಧನುರ್ಬಾಣಕತ್ತಿಗಳನ್ನು ಧರಿಸಿದವರಾಗಿ, ದಂಡಕಾರಣ್ಯಂ-ದಂಡಕಾರಣ್ಯವನ್ನು, ಪ್ರವಿಷ್ಟೌ-ಹೊಕ್ಕಿದವರಾಗಿದ್ದೀರಿ ॥೧೦॥ ತಾಪಸಯೋಃ-ಋಷಿವೃತ್ತಿಯುಳ್ಳ, ವಾಂ-ನಿಮ್ಮಗಳಿಗೆ, ಪ್ರಮದಯಾಸಹ-ಒಬ್ಬ ಹೆಂಗಸಿನೊಡನೆ, ವಾಸಃ-ಇರುವಿಕೆಯು, ಕಥಂ-ಹ್ಯಾಗೆ, ಅಧರ್ಮಚಾರಿಣೌ-ಅಧರ್ಮವಂ ನಡಿಸುತ್ತಿರುವ, ಮುನಿದೂಷಕೌ-ಋಷಿಗಳನ್ನು ದೂಷಿಸುತ್ತಿರುವ, ಪಾಪೌ-ಪಾಪಿಷ್ಠರಾದ, ಯುವಾಂ-ನೀವು, ಕೌ-ಯಾರು ॥೧೧॥ ಅಹಂ-ನಾನು, ವಿರಾಧೋನಾಮ-ವಿರಾಧನೆಂದು ಪ್ರಸಿದ್ಧನಾದ, ರಾಕ್ಷಸಃ-ರಕ್ಕಸನು, ಸಾಯುಧಃ-ಆಯುಧದಿಂದೊಡಗೂಡಿದವನಾಗಿ, ನಿತ್ಯಂ-ನಿರಂತರವೂ, ಋಷಿಮಾಂಸಾನಿ-ಋಷಿಗಳ ಮಾಂಸಗಳನ್ನು, ಭಕ್ಷಯನ್-ತಿನ್ನುತ್ತಿರುವನಾಗಿ, ದುರ್ಗಂ-ಸಂಚರಿಸಲಸಾಧ್ಯವಾದ, ಇಮಂವನಂ-ಈ ವನದಲ್ಲಿ, ಚರಾಮಿ-ಸಂಚರಿಸುತ್ತೇನೆ. ವರಾರೋಹಾ-ಶ್ರೇಷ್ಠಳಾದ, ಇಯಂನಾರೀ-ಈ ಹೆಂಗಸು, ಮಮ-ನನಗೆ, ಭಾರ್ಯಾ-ಹೆಂಡತಿಯು, ಅಥವಾ-ಭಾರ್ಯಾ-ಭರಣೀಯಳಾದ ಹೆಂಗಸು, ಭವಿಷ್ಯತಿ-ಆಗುವಳು, ಯದ್ವಾ-ಇಯಂನಾರೀ-ಈ ಹೆಂಗಸು, ಭಾರ್ಯಾಭಾ-ಕಾಂತಿಯಿಂದ, ಆರ್ಯಾ-ಶ್ರೇಷ್ಠಳಾಗಿಹಾಳೆ. ಕಾಭವಿಷ್ಯತಿ-ಯಾರಾಗಿರುವಳೋ, ಅಹಂ-ನಾನು, ಮೃಥೇ-ಯುದ್ಧದಲ್ಲಿ, ಪಾಪಯೋಃ-ಪಾಪಮಾಡಿದ, ಯುವಯೋಃ-ನಿಮ್ಮಗಳ. ರುಧಿರಂ-ರಕುತವನ್ನು, ಪಾಸ್ಯಾಮಿಚ-ಪಾನವನ್ನುಮಾಡುವೆನು ॥೧೨॥ ಏವಂ-ಈಪರಿಯಾಗಿ, ಬ್ರುವತಃ-ಮಾತನಾಡುತ್ತಿರುವ, ದುರಾತ್ಮನಃ-ದುಷ್ಟಬುದ್ಧಿಯುಳ್ಳ, ತಸ್ಯವಿರಾಧಸ್ಯ-ಆ ವಿರಾಧನ, ದುಷ್ಟಂ-ದೋಷಯುಕ್ತವಾದ, ಸಗರ್ವಿತಂ-ಗರ್ವದಿಂದೊಡಗೂಡಿದ, ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಜನಕಾತ್ಮಜಾ-ಜನಕರಾಯನ ಮಗಳಾದ, ಸೀತಾ-ಸೀತಾದೇವಿಯು, ಸಂಭ್ರಾಂತಾ-ಗಾಬರಿಗೊಂಡವಳಾಗಿ, ಉದ್ವೇಗಾತ್-ಭಯದವೆಶದಿಂದ, ಪ್ರವಾತೆ-ದೊಡ್ಡಗಾಳಿಯಲ್ಲಿ. ಕದಲೀಯಥಾ-ಬಾಳೇಗಿಡದಂತೆ, ಪ್ರಾವೇಪತ-ನಡುಗಿದಳು ॥೧೩॥ ರಾಘವಃ-ಶ್ರೀರಾಮನು, ಶುಭಾಂ-ಶುಭಕರಳಾದ, ತಾಂಸೀತಾಂ-ಆ ಸೀತಾದೇವಿಯನ್ನು, ವಿರಾಧಾಂಕಗತಾಂ-ವಿರಾಧನ ತೊಡೆಯನ್ನು ಹೊಂದಿದವಳನ್ನಾಗಿ, ದೃಷ್ಟ್ವಾ-ಕಂಡು. ಪರಿಶುಷ್ಯತಾ-ಬತ್ತಿಹೋಗಿ, ಮುಖೇನ-ಆನನದಿಂದಯುಕ್ತನಾಗಿ, ಲಕ್ಷ್ಮಣಂಚ-ಲಕ್ಷ್ಮಣನನ್ನು ಕುರಿತು, ವಾಕ್ಯಂ-ಮಾತನ್ನು. ಅಬ್ರವೀತ್-ನುಡಿದನು ॥೧೪॥ ಹೆಸೌಮ್ಯ-ಎಲೈ ಸೌಮ್ಯನೇ, ನರೇಂದ್ರಸ್ಯ-ಮನುಜರಿಗೆ ಇಂದ್ರನಾದ, ಜನಕಸ್ಯ-ಜನಕರಾಯನಿಗೆ, ಆತ್ಮಸಂಭವಾಂ-ಕುವರಿಯಾದ, ಮಮ-ನನ್ನ, ಭಾರ್ಯಾಂ-ಹೆಂಡತಿಯಾದ, ಶುಭಾಚಾರಾಂ-ಸದಾಚಾರವಂತಳಾದ. ಅತ್ಯಂತಸುಖಸಂವೃದ್ಧಾಂ-ಬಹಳ ಸುಖದಿಂವೃದ್ಧಿಗೊಂಡ, ಯಶಸ್ವಿನೀಂ-ಕೀರ್ತಿವಂತಳಾದ. ರಾಜಪುತ್ರೀಂ-ಸೀತಾದೇವಿಯನ್ನು, ವಿರಾಧಾಂಕೆ-ವಿರಾಧನತೊಡೆಯಲ್ಲಿ, ಪ್ರವೆ

---

ಯೂ, ಒಬ್ಬ ಸ್ತ್ರೀಯಿಂದೊಡಗೂಡಿದವರಾಗಿಯೂ, (ಅಥವಾ ಸಭೆಯಲ್ಲಿ ಪೂಜ್ಯರಾಗಿಯೂ, ಪ್ರಕಾಶದಿಂದಲೂ ಪೂಜ್ಯತೆಯಿಂದಲೂ ಯುಕ್ತರಾಗಿಯೂ,) ಕ್ಷೀಣವಾದ ಪ್ರಾಣಗಳುಳ್ಳವರಾಗಿಯೂ, ಧನುರ್ಬಾಣಗಳನ್ನೂ ಖಡ್ಗವನ್ನೂ ಧರಿಸಿದವರಾಗಿಯೂ, ಇರುತ್ತಾ ದಂಡಕಾರಣ್ಯವಂ ಪ್ರವೇಶಿಸಿದಿರಿ ॥೧೦॥ ಮುನಿವೃತ್ತಿಯುಳ್ಳ ನೀವೀರ್ವರೂ ಹೆಂಗಸಿನಸಂಗಡ ಹ್ಯಾಗೆ ಇದ್ದೀರಿ? ಅಧರ್ಮಿಷ್ಠರಾದ ಮತ್ತು ಋಷಿಗಳನ್ನೂ ದೂಷಿಸುವ ಪಾಪಿಷ್ಠರಾದ ನೀವು ಯಾರು? ॥೧೧॥ ನಾನು ವಿರಾಧನೆಂಬ ರಾಕ್ಷಸನು, ಆಯುಧಪಾಣಿಯಾಗಿ ಪ್ರತಿದಿನವೂ, ಋಷಿಮಾಂಸಗಳಂ ಭುಜಿಸುತ್ತಾ ಈ ಕಾಡಿನಲ್ಲಿ ತಿರುಗುತ್ತಿದ್ದೇನೆ, ಈ ಉತ್ತಮಾಂಗನೆಯು ನನಗೆ ಹೆಂಡತಿಯಾಗುವಳು; (ವಿಶೇಷಾರ್ಥವೇನೆಂದರೆ;— ಈಕೆಯು ನನಗೆ ಭರಣೀಯಳು; ಅಥವಾ ಯಾವಾಕೆಯು ಕಾಂತಿಯಿಂದ ಶೋಭಿಸುವಳಾಗಿರುವಳೋ ಆಕೆಯೇ ಇವಳು) ಯುದ್ಧದಲ್ಲಿ ಪಾಪಿಷ್ಠರಾದ ನಿಮ್ಮಗಳ ರಕುತವಂ ಕುಡಿಯುವೆನೆಂದು ಹೇಳುವ ದುರಾತ್ಮನಾದ ಆ ವಿರಾಧನ ವಾಕ್ಯವಂ ಕೇಳಿ ಸೀತಾದೇವಿಯು, ಭಯಗೊಂಡವಳಾಗಿ ಬಿರುಗಾಳಿಯಿಂದ ಬಾಳೇಗಿಡವು ಚಲಿಸುವಂತೆ ನಡುಗಿದಳು ॥೧೩॥ (ಆಗ) ಶ್ರೀರಾಮನು ವಿರಾಧನ ತೊಡೆಯಮ್ಯಾಲೆ ಕುಳಿತಿರುವ ಸೀತಾದೇವಿಯಂ ಕಂಡು ಕಂಗೆಟ್ಟ ಮುಖವುಳ್ಳವನಾಗಿ, ಲಕ್ಷ್ಮಣನಿಗೆ ಹೇಳುವನದೆಂತೆನೆ;— ಎಲೈ ಸೌಮ್ಯನೇ! ಮನುಜೇಂದ್ರನಾದ ಜನಕರಾಯನಿಗೆ ಮಗಳಾದ ಸದಾಚಾರ ಸಂಪನ್ನಳಾದ ಮಹಾ ಸುಖವಂತಳಾದ 'ಯನ್ನ ಸತಿಯು

ಥಾಂಕೆಪ್ರವೇಶಿತಾಂ । ಅತ್ಯಂತಸುಖಸಂವೃದ್ಧಾಂರಾಜಪುತ್ರೀಂಯಶಸ್ವಿನೀಂ।೧೭। ಯದಭಿಪ್ರೇತಮಸ್ಮಾಸುಪ್ರಿಯಂ ವರವೃತಂಚಯತ್ । ಕೈಕೆಯ್ಯಾಸ್ತುಸುಸಂವೃತ್ತಂಕ್ಷಿಪ್ರಮೆದ್ಯೈವಲಕ್ಷ್ಮಣ ॥೧೮॥ ಯಾನತುಷ್ಯತಿರಾಜ್ಯೇನ ಪುತ್ರಾರ್ಥೇದೀರ್ಘದರ್ಶಿನೀ ; ಯಯಾಹಂಸರ್ವಭೂತಾನಾಂಹಿತಃಪ್ರಸ್ಥಾಪಿತೋವನಂ। ಅದ್ಯೆದಾನೀಂಸಕಾಮಾಸಾ ಯಾಮಾತಾಮಮಮಧ್ಯಮಾ ॥೨೦। ಪರಸ್ಪರ್ಶಾತ್ತುವೈದೆಹ್ಯಾನದುಃಖತರಮಸ್ತಿಮೆ । ಪಿತುರ್ವಿಯೋಗಾತ್ಸೌಮಿ ತ್ರೆಸರಾಜ್ಯಹರಣಾತ್ತಥಾ ॥೨೧। ಇತಿಬ್ರುವತಿಕಾಕುತ್ಸ್ಥೆಬಾಷ್ಪಶೋಕಪರಿಪ್ಲುತೆ । ಅಬ್ರವೀಲ್ಲಕ್ಷ್ಮಣಃಕೃದ್ಧೊರು ದ್ಧೊನಾಗಇವಶ್ವಸನ್ ॥೨೨ ಅನಾಥಇವಭೂತಾನಾಂನಾಥಸ್ತ್ವಂವಾಸವೊಪಮಃ । ಮಯಾಪ್ರೆಷ್ಯೇಣಕಾಕುತ್ಸ್ಥ ಕಿಮರ್ಥಂಪರಿತಪ್ಯಸೆ ॥೨೩। ಶರೆಣನಿಹತಸ್ಯಾದ್ಯಮಯಾಕ್ರುದ್ಧೆನರಕ್ಷಸಃ । ವಿರಾಧಸ್ಯಗತಾಸೋರ್ಹಿಮಹೀ

---

ಶಿತಾಂ-ಇರಿಸಿಕೊಳ್ಳಲ್ಪಟ್ಟವಳನ್ನಾಗಿ. ಪಶ್ಯ-ನೋಡು ॥೧೭॥ ॥ ಅಸ್ಮಾಸು-ನಮ್ಮಗಳವಿಷಯದಲ್ಲಿ, ಕೈಕೆಯ್ಯಾಃ-ಕೈಕೇಯೀದೇವಿಗೆ. ಅಭಿಪ್ರೇತಂ- ಅಪೇಕ್ಷಿಸಲ್ಪಟ್ಟ, ಪ್ರಿಯಂ-ಇಷ್ಟವಾದ್ದು, ಯತ್-ಯಾವದೋ, ವರವೃತಂ-ವರದಿಂದ ಬೇಡಿಕೊಳ್ಳಲ್ಪಟ್ಟಿದ್ದು, ಯಚ್ಚ-ಯಾವದೋ, ಹೆಲ ಕ್ಷ್ಮಣ-ಎಲೈ ಲಕ್ಷ್ಮಣನೇ, ತತ್-ಅದು, ಅದ್ಯ-ಈಗ, ಕ್ಷಿಪ್ರಮೇವ-ಜಾಗ್ರತೆಯಾಗಿಯೇ, ಸುಸಂವೃತ್ತಂ-ಫಲಿಸಿತು ॥೧೮॥ ॥ ದೀರ್ಘದರ್ಶಿನೀ-ಬ ಹುದೂರ ಆಲೋಚನೆಯುಳ್ಳ. ಯಾ-ಯಾವ ಕೈಕೇಯಿಯು, ಪುತ್ರಾರ್ಥೇ-ಮಗನನಿಮಿತ್ತವಾಗಿ, ರಾಜ್ಯೇನ-ರಾಜ್ಯದಿಂದ, ನತುಷ್ಯತಿ-ಸಂತೋಷಿ ಸಲಿಲ್ಲವೋ, ಸರ್ವಭೂತಾನಾಂ-ಸಮಸ್ತಪ್ರಾಣಿಗಳಿಗೂ. ಹಿತಃ-ಹಿತಕರನಾದ, ಅಹಂ-ನಾನು, ಯಯಾ-ಯಾವ ಕೈಕೇಯಿಯಿಂದ. ವನಂ-ಅರಣ್ಯ ವನ್ನುಕುರಿತು, ಪ್ರಸ್ಥಾಪಿತಃ-ಕಳುಹಿಸಲ್ಪಟ್ಟೆನೋ ॥೧೯॥ ಮಮ-ನನ್ನ. ಮಧ್ಯಮಾಮಾತಾ-ಮಧ್ಯಮ ತಾಯಿಯಾದ. ಸಾ-ಆ ಕೈಕೇಯೀದೇವಿ ಯು, ಅದ್ಯ-ಈ ದಿವಸದಲ್ಲಿ. ಇದಾನೀಂ-ಈ ಕ್ಷಣದಲ್ಲಿ, ಸಕಾಮಾ-ಕೋರಿಕೆಯಿಂದೊಡಗೂಡಿದವಳಾದಳು ॥೨೦॥ ವೈದೆಹ್ಯಾಃ-ಸೀತಾದೇವಿಗೆ, ಪರಸ ರ್ಶಾತ್-ಪರಪುರುಷನಸ್ಪರ್ಶಕ್ಕಿಂತಲೂ, ಮೇ-ನನಗೆ, ದುಃಖತರಂ-ಅತಿಶಯವಾದ ದುಃಖವು, ನಾಸ್ತಿ-ಇಲ್ಲ. ಹೆಸೌಮಿತ್ರೆ-ಎಲೈ ಲಕ್ಷ್ಮಣನೇ, ಪಿತುಃ- ತಂದೆಯ, ವಿಯೊಗಾತ್-ವಿಯೋಗದಬೆಳೆಯಿಂದ, ಸ್ವರಾಜ್ಯಹರಣಾತ್-ಸ್ವ-ತನ್ನ. ರಾಜ್ಯಹರಣಾತ್-ರಾಜ್ಯವನ್ನು ಹೋಗಿಸಿಕೊಂಡದ್ದರಬೆಳೆಯಿಂದ,ತಥಾ- ಹಾಗೆ ದುಃಖವಿಲ್ಲ ॥೨೧॥ ಬಾಷ್ಪಶೋಕಪರಿಪ್ಲುತೆ-ಶೋಕದಿಂ ಪುಟ್ಟಿದ ಕಂಬನಿಯಿಂದ ತೊಯಿಸಲ್ಪಟ್ಟ, ಕಾಕುತ್ಸ್ಥೆ-ಶ್ರೀರಾಮನು, ಇತಿ-ಈಪರಿಯಾ ಗಿ. ಬ್ರುವತಿಸತಿ-ಹೇಳಿದವನಾಗಲಾಗಿ, ರುದ್ಧಃ-ಮಂತ್ರಾದಿಗಳಿಂದ ತಡೆಯಲ್ಪಟ್ಟ, ನಾಗಇವ-ಸರ್ಪದಂತೆ, ಶ್ವಸನ್-ಉಸುರುಬಿಡುತ್ತಿರುವನಾಗಿ, ಲ ಕ್ಷ್ಮಣಃ-ಲಕ್ಷ್ಮಣನು. ಕೃದ್ಧಃ-ಕೋಪಿಷ್ಠನಾಗಿ, ಅಬ್ರವೀತ್-ನುಡಿದನು ॥೨೨॥ ಹೆಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೇ, ವಾಸವೊಪಮಃ- ಇಂದ್ರನಿಗೆ ಸಮಾನನಾದ, ತ್ವಂ-ನೀನು, ಭೂತಾನಾಂ-ಪ್ರಾಣಿಗಳಿಗೆ, ನಾಥಃ-ಸ್ವಾಮಿಯಾದರೂ. ಅನಾಥಇವ-ದಿಕ್ಕಿಲ್ಲದಪುರುಷನಂತೆ. ಪ್ರೆಷ್ಯೇಣ- ಭೃತ್ಯನಾದ. ಮಯಾ-ನನ್ನೊಡನೆ, ಕಿಮರ್ಥಂ-ಯಾವನಿಮಿತ್ತವಾಗಿ. ಪರಿತಪ್ಯಸೆ-ಅಳುತ್ತೀಯಾ, ವಾಸ್ತವಾರ್ಥಸ್ತು-ಭೂತಾನಾಂ-ಬ್ರಹ್ಮಾದಿ ಸಕಲ ಪ್ರಾಣಿಗಳಿಗೂ, ನಾಥಃ-ಸ್ವಾಮಿಯಾದ, ತ್ವಂ-ನೀನು, ಅನಾಥಇವ-ಪ್ರಾಕೃತಮನುಷ್ಯನಂತೆ, ಕಿಮರ್ಥಂ-ಯಾತಕ್ಕೆ, ಪರಿತಪ್ಯಸೆ-ಪರಿತಪಿಸುತ್ತಿ ಸರಾಮಂಲಕ್ಷ್ಮಣಂದೃಷ್ಟ್ವಾ ಪ್ರಾಹಭ್ಯಕಿಮರ್ಥಂಪರಿತಪ್ಯಸೆತ್ಯಂತ.ಗ್ರಂಥಸಂದರ್ಭಕ್ಕೆ ವಾಸ್ತವಾರ್ಥವಾದರೆ ಆ ವಿರಾಧನು ಶ್ರೀರಾಮ ಲಕ್ಷ್ಮಣ ಸೀತಾದೇವಿಗಳನ್ನು, ನೋಡಿ ಅವರ ತೇಜಸ್ಸಿನಿಂದ ಅಭಿಭೂತನಾಗಿ ತನ್ನ ವೃತ್ತಾಂತವನ್ನು ಹೇಳಿಕೊಂಡು ನೀವುಗಳು, ಸಭಾರ್ಯ-ಸಭೆಯಲ್ಲಿ ಪೂಜ್ಯ ರು. ಕ್ಷೀಣಜೀವಿತೌ-ನಾಶವನ್ನು ಹೊಂದಿದ ಶತ್ರುಪ್ರಾಣಿಗಳುಳ್ಳವರು, ಅಧರ್ಮಚಾರಿಣೌ-ಅಧರ್ಮವನ್ನು ಭಕ್ಷಣೆಮಾಡತಕ್ಕವರು ಇಂಥಾ ನಿಮ್ಮ ಗಳಿಗೆ ಸ್ತ್ರೀಯೊಡಗೂಡ ಯುದ್ಧಮಾತ್ರಕ್ಕೇನೆ, ಅಧರ್ಮಚಾರಿಣೌ ಕಥಂ-ಅಧರ್ಮವನ್ನು ಮಾಡುವರು ಹ್ಯಾಗಾದೀರಿ. ಪಾಪೌ-ಪಾಪಿಷ್ಠರು ಹ್ಯಾಗಾ ದೀರಿ ಎಂಬದಾಗಿ ಕೇಳಿದನೆಂದು ತಾತ್ಪರ್ಯವು ॥೨೩॥ ಅದ್ಯ-ಈಗ, ಕೃದ್ಧೆನ-ಕೋಪಿಷ್ಠನಾದ. ಮಯಾ-ನನ್ನಿಂದ, ಶರೆಣ-ಒಂದೇಬಾಣದಿಂದ, ನಿಹ

---

ವಿರಾಧನ ತೊಡೆಯಮೇಲೆ ಕುಳಿತಿಹಳು ನೋಡು? ।೧೭। ನಮ್ಮವಿಷಯವಾಗಿ ಕೈಕೇಯಿಯ ಇಷ್ಟವು ಇಂ ದಿಗೀಡೇರಿತು. ದೂರದ ಯೋಚನೆಯುಳ್ಳ ಆ ದೇವಿಯು ಮಗನಿಗಾಗಿ ರಾಜ್ಯದಿಂದ ಸಂತೋಷಿಸದೆ ನನ್ನನ್ನು ಕಾ ಡಿಗೆ ಕಳುಹಿಸಿದಳು. ಈಗ ಸಫಲವಾದ ಮನೋರಥವುಳ್ಳವಳಾದಳು; ಪರಪುರುಷನು ಸೀತೆಯಂ ಸ್ಪರ್ಶಿಸುವದ ಕ್ಕಿಂತಲೂ ನನಗೆ ದುಃಖಕರವಾದದ್ದ್ಯಾವದೂ ಇಲ್ಲ. ಪಿತೃವಿಯೋಗವೂ ರಾಜ್ಯಾಪಹಾರವೂಕೂಡ ಇಷ್ಟು ದುಃ ಖಕರವಾದದ್ದಲ್ಲವೆಂದು ಪರಿಪರಿಯಾಗಿ ಶ್ರೀರಾಮನುಪೇಳಲು ಲಕ್ಷ್ಮಣನು ಮಂತ್ರಾದಿಗಳಿಂದ ತಡೆಯಲ್ಪಟ್ಟ ಸ ರ್ಪದಂತೆ ನಿಟ್ಟುಸುರುಬಿಡುತ್ತಾ ಕಡುಕೋಪಗೊಂಡು ಇಂತೆಂದನು; ।೨೨॥ ಎಲೈ ಕಕುತ್ಸ್ಥವಂಶೋತ್ಪನ್ನನೇ! ಇಂದ್ರಸದೃಶನಾದ ನೀನು ಪ್ರಾಣಿಗಳಿಗೆಲ್ಲಾ ನಾಥನಾದರೂ ನಾನಿರುವಾಗ ದಿಕ್ಕಿಲ್ಲದವನಂತೆ ಯಾಕೆ ಪರಿತಪಿಸು ತ್ತೀ? ವಿಶೇಷಾಭಿಪ್ರಾಯವೇನಂದರೆ;—ಬ್ರಹ್ಮಾದಿ ಸಮಸ್ತಪ್ರಾಣಿಗಳಿಗೂ ಸ್ವಾಮಿಯಾದ ನೀನು. ಪ್ರಾಕೃತ ಮನುಜನೋಪಾದಿಯಲ್ಲಿ ಯಾಕೆ ಪರಿತಪಿಸುತ್ತೀ? ಎಂಬಭಾವವು) ।೨೩। ಈಗ ಕುಪಿತನಾದ ನಾನು ಒಂದೇಬಾ ಣದಿಂದಲೇ ಈ ವಿರಾಧನಂ ಕೊಲ್ಲುವೆನು, ಇವನರಕ್ತವನ್ನು ಭೂಮಿಯು ಹೀರುವದು ॥೨೪॥ ರಾಜ್ಯಕಾಮಿಯಾ

ಪಾಸ್ಯತಿಶೋಣಿತಂ ॥೨೪॥ ರಾಜ್ಯಕಾಮೇಮಮಕ್ರೋಧೋಭರತೇಯೋಬಭೂವಹ । ತಂವಿರಾಧೇಪ್ರಮೋಕ್ಷ್ಯಾಮಿವ ಜ್ರೀವಜ್ರಮಿವಾಚಲೇ ॥೨೫॥ ಮಮಭುಜಬಲವೇಗವೇಗಿತಃಪತತುಶರೋಸ್ಯಮಹಾನ್ಮಹೋರಸಿ । ವ್ಯಪನಯತುತನೋ ಶ್ಚಜೀವಿತಂಪತತುತತಸ್ಸಮಹೀಂವಿಘೂರ್ಣಿತಃ ॥೨೬॥ * ಇತಿಶ್ರೀಮದಾರಣ್ಯಕಾಂಡೇ-ದ್ವಿತೀಯಸ್ಸರ್ಗಃ *

(ಇತ್ಯುಕ್ತ್ವಾಲಕ್ಷ್ಮಣಶ್ಶ್ರೀಮಾನ್ರಾಕ್ಷಸಂಪ್ರಹಸನ್ನಿವ। ಕೋಭವಾನ್ವನಮಭ್ಯೇತ್ಯಚರಿಷ್ಯಸಿಯಥಾಸುಖಂ)

ಅಥೋವಾಚಪುನರ್ವಾಕ್ಯಂವಿರಾಧಃಪೂರಯನ್ವನಂ। ಆತ್ಮಾನಂಪೃಚ್ಛತೇಬ್ರೂತಂಕೌಯುವಾಂಕ್ವಗಮಿಷ್ಯಥಃ॥೧ ತಮುವಾಚತತೋರಾಮೋರಾಕ್ಷಸಂಜ್ವಲಿತಾನನಂ । ಪೃಚ್ಛಂತಂಸುಮಹಾತೇಜಾಇಕ್ಷ್ವಾಕುಕುಲಮಾತ್ಮನಃ॥೨॥ ಕ್ಷತ್ರಿಯೌವೃತ್ತಸಂಪನ್ನೌವಿದ್ಧಿನೌವನಗೋಚರೌ॥ತ್ವಾಂತುವೇದಿತುಮಿಚ್ಛಾವಃಕಸ್ತ್ವಂಚರಸಿದಂಡಕಾನ್॥೩॥ ತಮುವಾಚವಿರಾಧಸ್ತುರಾಮಂಸತ್ಯಪರಾಕ್ರಮಂ । ಹಂತವಕ್ಷ್ಯಾಮಿತೇರಾಜನ್ನಿಬೋಧಮಮರಾಘವ ॥೪॥ ಪುತ್ರಃಕಿಲ

---

ಕ್ತ್ಯ-ಹೊಡೆಯಲ್ಪಟ್ಟ, ಗತಾಸೋಃ-ಮೃತನಾದ, ವಿರಾಧಸ್ಯ-ವಿರಾಧನ, ಶೋಣಿತಂ-ರಕುತವನ್ನು, ಮಹೀ-ಭೂಮಿಯು, ಪಾಸ್ಯತಿಹಿ-ಪಾನಮಾಡು ತದಷ್ಟೆ ॥೨೪॥ ರಾಜ್ಯಕಾಮೇ-ರಾಜ್ಯದಲ್ಲಿ ದೃಷ್ಟಿಯುಳ್ಳ, ಭರತೇ-ಭರತನಲ್ಲಿ, ಮಮ-ನನಗೆ, ಯಃಕ್ರೋಧಃ-ಯಾವ ಕ್ರೋಧವು. ಬಭೂವಹ-ಇತ್ತಷ್ಟೆ, ವಜ್ರೀ-ದೇವೇಂದ್ರನು, ಅಚಲೇ-ಬೆಟ್ಟದಲ್ಲಿ, ವಜ್ರಮಿವ-ವಜ್ರಾಯುಧದಂತೆ. ವಿರಾಧೇ-ವಿರಾಧನಲ್ಲಿ, ತಂ-ಆ ಕ್ರೋಧವನ್ನು, ಪ್ರಮೋಕ್ಷ್ಯಾಮಿ-ಬಿಡುವೆನು ॥೨೫॥ ಮಮ-ನನ್ನ, ಭುಜಬಲವೇಗವೇಗಿತಃ-ಭುಜಬಲದವೇಗದಿಂದ ಬಿಡಲ್ಪಟ್ಟ, ಮಹಾನ್-ದೊಡ್ಡದಾದ. ಶರಃ-ಬಾಣವು, ಅಸ್ಯ-ಈ ವಿರಾಧನ, ಮಹೋರಸಿ-ದೊಡ್ಡವಕ್ಷಸ್ಥಳದಲ್ಲಿ, ಪತತು-ಬೀಳಲೀ, ತನೋಃ-ಶರೀರದದೆಶೆಯಿಂದ, ಜೀವಿತಂ-ಪ್ರಾಣವನ್ನು, ವ್ಯಪನಯತು-ತೆಗದುಹಾಕಲೀ, ತತಃ-ಬಳಿಕ, ಸಃ-ಆ ವಿರಾಧನು, ವಿಘೂರ್ಣಿತಃ-ಉರುಳಿಸಲ್ಪಟ್ಟವನಾಗಿ, ಮಹೀಂ-ನೆಲದಲ್ಲಿ. ಪತತು-ಬೀಳಲೀ॥ —*ದ್ವಿತೀಯಸ್ಸರ್ಗಃ*—

ಶ್ರೀಮಾನ್-ವೀರ್ಯಸಂಪದ್ಯುಕ್ತನಾದ, ಲಕ್ಷ್ಮಣಃ-ಲಕ್ಷ್ಮಣನು, ಇತಿ-ಈಪರಿಯಾಗಿ. ಉಕ್ತ್ವಾ-ರಾಮನಂಕುರಿತು ಹೇಳಿ. ಪ್ರಹಸನ್ನಿವ-ನಗುವನಂತೆ, ರಾಕ್ಷಸಂ-ವಿರಾಧನೆಂಬ ರಾಕ್ಷಸನಂಕುರಿತು, ಭವಾನ್-ನೀನು, ಕಃ-ಯಾರು, ವನಂ-ಅರಣ್ಯವನ್ನು, ಅಭ್ಯೇತ್ಯ-ಹೊಂದಿ, ಯಥಾಸುಖಂ-ಸ್ವೇಚ್ಛೆಯಾಗಿ, ಚರಿಷ್ಯತಿ-ಸಂಚಾರಮಾಡುವೀ * ಅಥ-ಬಳಿಕ, ವಿರಾಧಃ-ವಿರಾಧನು, ವನಂ-ಅರಣ್ಯವನ್ನು. ಪೂರಯನ್ನಿವ-ಧ್ವನಿಯಿಂದ ತುಂಬಿಸುವನಂತೆ, ಆತ್ಮಾನಂ-ನಿಮ್ಮನ್ನು, ಪೃಚ್ಛತೇ-ಕೇಳುತ್ತಿರುವ, ಅಥವಾ-ನಿಮ್ಮಸ್ವರೂಪವನ್ನು, ಪೃಚ್ಛತೇ-ಕೇಳುತ್ತಿರುವ ನನಿಗೋಸುಗ, ಬ್ರೂತಂ-ಹೇಳಿರೀ, ಯುವಾಂ-ನೀವುಗಳು, ಕೌ-ಯಾರು, ಕ್ವ-ಎಲ್ಲಿಗೆ, ಗಮಿಷ್ಯಥಃ-ಹೋಗುವಿರೀ, ಇತಿ-ಇಂತೆಂದು, ಪುನಃ-ಮತ್ತು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧॥ ತತಃ-ಬಳಿಕ, ಸುಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ಜ್ವಲಿತಾನನಂ-ಪ್ರಜ್ವಲಿಸುತ್ತಿರುವ ಮುಖವುಳ್ಳವನಾಗಿ, ಪೃಚ್ಛಂತಂ-ಕೇಳುತ್ತಿರುವ, ರಾಕ್ಷಸಂ-ರಾಕ್ಷಸನಾದ, ತಂ-ಆ ವಿರಾಧನಂಕುರಿತು. ಆತ್ಮನಃ-ತನ್ನ, ಕುಲಂ-ವಂಶವನ್ನು. ಉವಾಚ-ಹೇಳಿದನು ॥೨॥ ನೌ-ನಮ್ಮಗಳನ್ನು, ಕ್ಷತ್ರಿಯೌ-ಕ್ಷತ್ರಿಯರನ್ನಾಗಿಯೂ, ವೃತ್ತಸಂಪನ್ನೌ-ಸದ್ವ್ಯಾಪಾರದಿಂದ ಕೂಡಿಕೊಂಡಿರುವರನ್ನಾಗಿಯೂ, ವನಗೋಚರೌ-ಕಾರಣಾಂತರರಿಂದ ವನವಾಸಿಗಳನ್ನಾಗಿ. ವಿದ್ಧಿ-ತಿಳಿದುಕೋ, ತ್ವಂ-ನೀನು, ಕಃ-ಯಾರು, ದಂಡಕಾನ್-ದಂಡಕಾರಣ್ಯದಲ್ಲಿ. ಚರಸಿ-ಸಂಚರಿಸುತ್ತೀಯಿ, ತ್ವಾಂತು-ನಿನ್ನನ್ನಾದರೆ, ವೇದಿತುಂ-ತಿಳಿದುಕೊಳ್ಳುವದಕ್ಕೆ, ಇಚ್ಛಾವಃ-ಅಭಿಲಷಿಸುತ್ತೇವೆ ॥೩॥ ವಿರಾಧಸ್ತು-ವಿರಾಧನಾದರೆ, ಸತ್ಯಪರಾಕ್ರಮಂ-ಸತ್ಯದಿಂದಲೇ ಶತ್ರುಸಂಹಾರಕನಾದ, ತಂರಾಮಂ-ಆ ಶ್ರೀರಾಮನನ್ನುಕುರಿತು, ಹೇರಾಘವ-ಎಲೈ ರಘುವಂಶೋತ್ಪನ್ನನೇ, ಹೇರಾಜನ್-ಎಲೈ ಅರಸೇ, ತೇ-ನಿನಗೆ, ವಕ್ಷ್ಯಾಮಿ-ಹೇಳುವೆನು, ಮಮ-ನನ್ನ, ಸ್ವರೂಪಂ-ಸ್ವರೂಪವನ್ನು, ನಿಬೋಧ-ತಿಳಿದುಕೋ, ಹಂತ-ಆಶ್ಚರ್ಯವು ॥೪॥ ಅಹಂ-ನಾನು

---

ದ ಭರತನವಿಷಯವಾಗಿ ನನಿಗೆ ಯಾವಕ್ರೋಧವು ಉಂಟಾಗಿತ್ತೋ ಆ ಕ್ರೋಧವನ್ನು ಇಂದ್ರನು ಪರ್ವತಗಳಲ್ಲಿ ವಜ್ರಾಯುಧವಂ ಬಿಟ್ಟಂತೆ ಈ ರಕ್ಕಸನಲ್ಲಿ ನಾನು ಬಿಡುವೆನು ॥೨೫॥ ನನ್ನ ಭುಜಬಲದಿಂದ ಬಿಡಲ್ಪಟ್ಟ ಮಹಾಬಾಣವು ಈ ವಿರಾಧನ ವಕ್ಷಸ್ಥಳದಲ್ಲಿಬಿದ್ದು ಇವನ ಪ್ರಾಣವನ್ನು ತೆಗದುಹಾಕಲಿ, ಬಳಿಕ ಇವನು ಘೋರನೆ ನೆಲದಲ್ಲಿ ಬೀಳಲಿ ॥೨೬॥

—** ಅರಣ್ಯಕಾಂಡದಲ್ಲಿನ ೨ನೆಯ ಸರ್ಗಂಮುಗಿದುದು **—

ವೀರ್ಯವಂತನಾದ ಲಕ್ಷ್ಮಣನು ಈರೀತಿಯಾಗಿ ಶ್ರೀರಾಮನಿಗೆಹೇಳಿ ನಸುನಗೆಯುಳ್ಳವನಾಗಿ ರಾಕ್ಷಸನಿಗೆಹೇಳುವನದೆಂತೆನೆ;—ಎಲೈ ರಕ್ಕಸನೇ! ನೀನ್ಯಾರು? ಈ ಕಾಡಿನಲ್ಲಿ ಯಾಕೆ ಸಂಚರಿಸುವಿ? ಎನ್ನಲು ಆ ರಾಕ್ಷಸನು ಘಟ್ಟಿಯಾಗಿ ತನ್ನನ್ನುಕೇಳಿದ ಲಕ್ಷ್ಮಣನಿಗೆ ಇಂತೆಂದನು, ನನ್ನನ್ನು ಕೇಳುವ ನೀವ್ಯಾರು? ಎಲ್ಲಿಗೆಹೋಗುವಿರಿ? ಎಂದನು ॥೧॥ ಬಳಿಕ ಮಹಾತೇಜೋವಂತನಾದ ಶ್ರೀರಾಮನು ಪ್ರಜ್ವಲಿಸುವ ಮುಖವುಳ್ಳ ಆ ರಾಕ್ಷಸನಂಕುರಿತು ಇಂತೆಂದನು,—ಎಲೈ ರಾಕ್ಷಸನೇ! ಸದ್ವೃತ್ತಿಯುಳ್ಳವರಾಗಿಯೂ. ವನಗೋಚರರಾಗಿಯೂ, ಇರುವ ನಮ್ಮನ್ನು ಕ್ಷತ್ರಿಯರನ್ನಾಗಿ ತಿಳಿದುಕೋ; ನೀನ್ಯಾರು? ದಂಡಕಾರಣ್ಯದಲ್ಲಿ ತಿರುಗುತ್ತೀಯಲ್ಲವೆ! ನಿನ್ನನ್ನು ತಿಳಿಯಲಿಚ್ಛಿಸುತ್ತೇನೆನ್ನಲು, ಆ ವಿರಾಧನಾದರೆ ಸತ್ಯಪರಾಕ್ರಮಿಯಾದ ಶ್ರೀರಾಮನಂಕುರಿತು ಎಲೈ ಅರಸೇ! ಎಂದು ಸಂಬೋಧಿಸಿ ಹೇಳುವನದೆಂತೆನೆ;—ಎಲೈ ರಘುವಂಶೋತ್ಪನ್ನನೇ! ನಾನು ಜಯನೆಂಬುವನ ಮಗನು, ನನ್ನತಾಯಿ

ಜಯಸ್ಯಪುತ್ರಃಕಿಲಮಮಮಾತಾಶತಹ್ರದಾ । ವಿರಾಧಇತಿಮಾಮಾಹುಃಪೃಥಿವ್ಯಾಂಸರ್ವರಾಕ್ಷಸಾಃ ॥೫॥ ತಪಸಾಚಾಪಿ ಮೇಪ್ರಾಪ್ತಾಬ್ರಹ್ಮಣೋಹಿಪ್ರಸಾದಜಾ। ಶಸ್ತ್ರೇಣಾವಧ್ಯತಾಲೋಕೇಛೇದ್ಯಾಭೇದ್ಯತ್ವಮೇವಚ ॥೬॥ ಉತ್ಸೃಜ್ಯಪ್ರಮದಾಮೇನಾಮನಪೇಕ್ಷೌಯಥಾಗತಂ । ತ್ವರಮಾಣೌಪಲಾಯೇಥಾಂನವಾಂಜೀವಿತಮಾದದೇ ॥೭॥ ತಂರಾಮಃಪ್ರತ್ಯುವಾಚೇದಂಕೋಪಸಂರಕ್ತಲೋಚನಃ । ರಾಕ್ಷಸಂವಿಕೃತಾಕಾರಂವಿರಾಧಂಪಾಪಚೇತಸಂ ॥೮॥ ಕ್ಷುದ್ರಧಿಕ್ತ್ವಾಂತುಹೀನಾರ್ಥಂಮೃತ್ಯುಮನ್ವೇಷಸೇಧ್ರುವಂ । ರಣೇಸಂಪ್ರಾಪ್ಸ್ಯಸೇತಿಷ್ಠನಮೇಜೀವನ್ಗಮಿಷ್ಯಸಿ ॥೯॥ ತತಸ್ಸಜ್ಯಂಧನುಃಕೃತ್ವಾರಾಮಸ್ಸುನಿಶಿತಾನ್ಶರಾನ್ । ಸುಶೀಘ್ರಮಭಿಸಂಧಾಯರಾಕ್ಷಸಂನಿಜಘಾನಹ ॥೧೦॥ ಧನುಷಾಜ್ಯಾಗುಣವತಾ ಸಪ್ತಬಾಣಾನ್ಮುಮೋಚಹ । ರುಕ್ಮಪುಂಖಾನ್ಮಹಾವೇಗಾನ್ಸುಪರ್ಣಾನಿಲತುಲ್ಯಗಾನ್ ॥೧೧॥ ತೇಶರೀರಂವಿರಾಧಸ್ಯಭಿತ್ವಾಬರ್ಹಿಣವಾಸಸಃ । ನಿಪೇತುಶ್ಶೋಣಿತಾದಿಗ್ಧಾಧರಣ್ಯಾಂಪಾವಕೋಪಮಾಃ ॥೧೨॥ ಸವಿದ್ಧೋನ್ಯಸ್ಯವೈದೇಹೀಂಶೂ

---

ಜಯಸ್ಯ-ಜಯನೆಂಬವನ, ಪುತ್ರಃಕಿಲ-ಮಗನಷ್ಟೆ, ಮಮ-ನನ್ನ, ಮಾತಾ-ತಾಯಿಯು, ಶತಹ್ರದಾ-ಶತಹ್ರದೆಯೆಂಬವಳು, ಪೃಥಿವ್ಯಾಂ-ಭೂಮಿಯಲ್ಲಿ. ಸರ್ವರಾಕ್ಷಸಾಃ-ಸಮಸ್ತರಾಕ್ಷಸರು, ಮಾಂ-ನನ್ನನ್ನು, ವಿರಾಧಇತಿ-ವಿರಾಧನೆಂದು, (ಯದ್ವಾ-ವಿರಾಧಇತಿ-ವಿಗತವಾದ ಆರಾಧನೆಯುಳ್ಳವನೂ ಎಂದು, ಅಂದರೆ ದುರಾರಾಧನೆಂದು) ಆಹುಃ-ಹೇಳುತ್ತಾರೆ ॥೫॥ ತಪಸಾಚ-ತಪದಿಂದ, ಮೇ-ನನಗೆ, ಬ್ರಹ್ಮಣಾ-ಬ್ರಹ್ಮದೇವರ, ಪ್ರಸಾದಾತ್-ಅನುಗ್ರಹದಿಂ ಪುಟ್ಟಿದ. ಲೋಕೇ-ಲೋಕದಲ್ಲಿ. ಶಸ್ತ್ರೇಣ-ಶಸ್ತ್ರದಿಂದ, ಅವಧ್ಯತಾ-ವಧ್ಯನಾಗಲಸಾಧ್ಯತೆಯು, ಪ್ರಾಪ್ತಾ-ಹೊಂದಲ್ಪಟ್ಟಿಥೆ. ಅಚ್ಛೇದ್ಯಾಭೇದ್ಯತ್ವಮೇವಚ-ಅಸ್ತ್ರಶಸ್ತ್ರಾದಿಗಳಿಂದ ಛೇದಿಸಲಸಾಧ್ಯತ್ವವು ಹೊಡೆಯಲಸಾಧ್ಯತೆಯೂ, ಪ್ರಾಪ್ತಂ-ಹೊಂದಲ್ಪಟ್ಟಿಥೆ ॥೬॥ ಏನಾಂಪ್ರಮದಾಂ-ಈ ಹೆಂಗಸನ್ನು, ಉತ್ಸೃಜ್ಯ-ಬಿಟ್ಟು, ಅನಪೇಕ್ಷೌ-ಸ್ತ್ರೀ ಆಶೆಯನ್ನು ಬಿಟ್ಟವರಾಗಿ, ಯಥಾಗತಂ-ಬಂದಂತೆ. ತ್ವರಮಾಣೌ-ಜಾಗ್ರತೆಯುಳ್ಳವರಾಗಿ, ಪಲಾಯೇಥಾಂ-ಓಡಿಹೋಗಿರಿ, ವಾಂ-ನಿಮ್ಮಗಳ, ಜೀವಿತಂ-ಪ್ರಾಣವನ್ನು. ನಾದದೇ-ತೆಗಿಯಲಾರೆನು, ವಸ್ತುತಸ್ತು-ವಾಂ-ನಿಮಗೆ, ಜೀವಿತಂಪ್ರಾಣಭೂತಳಾದ ಈ ಸೀತಾದೇವಿಯನ್ನು, ನಾದದೇ-ಗ್ರಹಿಸಲಾರೆನು, ಇತಿ-ಇಂತೆಂದು. ಉವಾಚ-ಹೇಳಿದನು ॥೭॥ ರಾಮಃ-ಶ್ರೀರಾಮನು, ಕೋಪಸಂರಕ್ತಲೋಚನಃ-ಕ್ರೋಧದಿಂ ಕೆಂಗಣ್ಣುಗಳುಳ್ಳವನಾಗಿ. ವಿಕೃತಾಕಾರಂ-ವಿಕಾರವಾದ ಆಕಾರವುಳ್ಳ, ಪಾಪಚೇತಸಂ-ಸೀತಾಪಹಾರವೆಂಬ ಪಾಪಕೃತ್ಯದಲ್ಲಿ ಮನವುಳ್ಳ, ರಾಕ್ಷಸಂ-ರಕ್ಕಸನಾದ, ತಂವಿರಾಧಂ-ಆ ವಿರಾಧನಂಕುರಿತು, ಇದಂ- ಈ ಮಾತನ್ನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೮॥ ಹೇಕ್ಷುದ್ರ-ಎಲೈ ನೀಚನೇ, ಹೀನಾರ್ಥಂ-ಪರಸ್ತ್ರೀಗಮನರೂಪವಾದ ಪ್ರಯೋಜನವುಳ್ಳ, ತ್ವಾಂ-ನಿನ್ನನ್ನು. ಧಿಕ್-ಬಿಡು, ರಣೇ-ಕಾಳಗದಲ್ಲಿ, ತಿಷ್ಠ-ನಿಲ್ಲು, ಮೃತ್ಯುಂ-ಮರಣವನ್ನು, ಅನ್ವೇಷಸೇ-ಹುಡುಕುತ್ತಿದ್ದೀ, ಧ್ರುವಂ-ನಿಶ್ಚಯವು, ಮೇ-ನನ್ನೆದೆಶೆಯಿಂದ, ಜೀವನ್-ಬದುಕಿರುವನಾಗಿ, ನಗಮಿಷ್ಯಸಿ-ಹೋಗಲಾರೆ, ಮೃತ್ಯುಂ-ಮರಣವನ್ನು, ಸಂಪ್ರಾಪ್ಸ್ಯಸೇ-ಹೊಂದುವಿ ॥೯॥ ತತಃ-ಬಳಿಕ. ರಾಮಃ-ಶ್ರೀರಾಮನು, ಧನುಃ-ಬಿಲ್ಲಿನನ್ನು, ಸಜ್ಯಂ-ಹೆದೆಯಿಂದೊಡಗೂಡಿದ್ದನ್ನಾಗಿ, ಕೃತ್ವಾ-ಮಾಡಿ. ಸುನಿಶಿತಾನ್-ಬಹಳ ತೀಕ್ಷ್ಣಗಳಾದ. ಶರಾನ್-ಬಾಣಗಳನ್ನು, ಸುಶೀಘ್ರಂ-ಬಹಳಜಾಗ್ರತೆಯಾಗಿ. ಅಭಿಸಂಧಾಯ-ಸಂಧಾನಮಾಡಿ, ರಾಕ್ಷಸಂ-ವಿರಾಧನಂಕುರಿತು, ನಿಜಘಾನಹ-ಹೊಡೆದನಷ್ಟೆ ॥೧೦॥ ಜ್ಯಾಗುಣವತಾ-ಹೆದೆಯ ಶಬ್ದದಿಂ ಕೂಡಿರುವ, ಧನುಷಾ-ಬಿಲ್ಲಿನಿಂದ, ಸುಪರ್ಣಾನಿಲತುಲ್ಯಗಾನ್-ಗರುಡನಿಗೂ ವಾಯುವಿಗೂ ಸಮಾನವಾಗಿ ಪೋಗುತ್ತಿರುವ, ಮಹಾವೇಗಾನ್-ಬಹು ವೇಗಶಾಲಿಗಳಾದ, ರುಕ್ಮಪುಂಖಾನ್-ಚಿನ್ನದ ಮಯವಾದ ಕೊಕ್ಕಿಗಳುಳ್ಳ. ಸಪ್ತಬಾಣಾನ್-ಏಳು ಬಾಣಗಳನ್ನು, ಮುಮೋಚಹ-ಬಿಟ್ಟನಷ್ಟೆ ॥೧೧॥ ಬರ್ಹಿಣವಾಸಸಃ-ನವಿಲುಗರಿಕ್ಕೆಗಳು ಕಟ್ಟಿರುವ, ಪಾವಕೋಪಮಾಃ-ಯಜ್ಞೇಶ್ವರನಿಗೆ ಸಮಾನವಾದ, ತೇ-ಆ ಬಾಣಗಳು. ವಿರಾಧಸ್ಯ-ವಿರಾಧನ, ಶರೀರಂ-ವಿಗ್ರಹವನ್ನು, ಭಿತ್ವಾ-ಛೇದಿಸಿ. ಶೋಣಿತಾದಿಗ್ಧಾಃ-ರಕ್ತದಿಂ ಕೂಡಿದವಾಗಿ ಲೇಪನಮಾಡಲ್ಪಟ್ಟವುಗಳಾಗಿ, ಧರಣ್ಯಾಂ-ನೆಲದಲ್ಲಿ. ನಿಪೇತುಃ-ಬಿದ್ದವು ॥೧೨॥ ತದಾ-ಆ ಕಾಲದಲ್ಲಿ, ಸ

---

ಶತಹ್ರದೆ ಎಂಬುವಳು, ಈ ಭೂಲೋಕದಲ್ಲಿ ರಾಕ್ಷಸರೆಲ್ಲರೂ ವಿರಾಧನೆಂದು ನನ್ನನ್ನು ಕರೆಯುವರು, ತಪವಂಗೈದು ಬ್ರಹ್ಮಪ್ರಸಾದದಿಂದ ಶಸ್ತ್ರಾಸ್ತ್ರಗಳಿಂದ ಅವಧ್ಯತೆಯಂ ಪಡದಿಥೇನೆ, ಈ ಹೆಂಗಸನ್ನು ಬಿಟ್ಟು ನಿರಾಶೆಯಾಗಿ ಬಂದಂತೆ ಜಾಗ್ರತೆಯಾಗಿ ತೆರಳಿರಿ; ನಿಮ್ಮ ಪ್ರಾಣಗಳನ್ನು ತೆಗಿಯಲಾರೆನೆಂದು ನುಡಿದನು, (ವಿಶೇಷಾರ್ಥವೇನಂದರೆ;—ನಿಮ್ಮ ಪ್ರಾಣಪ್ರಾಯಳಾದ, ಈಕೆಯನ್ನು ಗ್ರಹಿಸಲಾರೆನೆಂದು ಭಾವವು) ॥೭॥ ಬಳಿಕ ಶ್ರೀರಾಮನು ಕೋಪದಿಂದ ಕೆಂಗಣ್ಣುಳ್ಳವನಾಗಿ, ವಿಕಾರವಾದ ಆಕಾರವುಳ್ಳ ಮತ್ತು ಪಾಪಬುದ್ಧಿಯುಳ್ಳ ಆ ರಕ್ಕಸನಿಗಿಂತೆಂದನು ॥೮॥ ಎಲೈ ನೀಚನೇ! ಪರಸ್ತ್ರೀಗಮನರೂಪವಾದ ಪಾಪಪ್ರಯೋಜನವುಳ್ಳ, ಛೀ!! ನೀಚನೇ! ಸಂಗರದಲ್ಲಿ ನಿಲ್ಲು; ಮೃತ್ಯುವಿನನ್ನು ಹುಡುಕುತ್ತಿ; ನಾನಿರುವಾಗ ಜೀವದಿಂದ ಹೋಗಲಾರೆ; ಮೃತಿಹೊಂದುವಿ; (ಎಂದು ನಿರೂಪಿಸಿದ ಬಳಿಕ) ಕೋದಂಡಕ್ಕೆ ಮೌರ್ವಿಯಂ ಬಿಗಿಸಿ ನಿಶಿತವಾದ ಶರಗಳನ್ನು ತ್ವರೆಯಾಗಿ ಸಂಧಿಸಿ ವಿರಾಧನಂ ಹೊಡೆದನದಂತೆನೆ,— ಹೆದೆಯ ಶಬ್ದದಿಂ ಕೂಡಿದ ಬಿಲ್ಲಿನಿಂದ ಗರುಡನಿಗೂ, ವಾಯುವಿಗೂ ಸಮಾನವಾದ ಮಹಾವೇಗವುಳ್ಳ ಏಳು ಬಾಣಗಳಂ ಬಿಟ್ಟನು ॥೧೧॥ ನವಿಲುಗರಿಗಳು ಕಟ್ಟಿರುವ ಅಸದೃಶವಾದ ಆ ನಿಡುಸರಳ್ಗಳು

೩

ಲಮುದ್ಯಮ್ಯರಾಕ್ಷಸಃ । ಅಭ್ಯದ್ರವತ್ಸುಸಂಕ್ರುದ್ಧಸ್ತದಾರಾಮಂಸಲಕ್ಷ್ಮಣಂ ॥೧೩॥ ಸವಿನದ್ಯಮಹಾನಾದಂಶೂ
ಲಂಶಕ್ರಧ್ವಜೋಪಮಂ । ಪ್ರಗೃಹ್ಯಾಶೋಭತತದಾವ್ಯಾತ್ತಾನನಇವಾಂತಕಃ ॥೧೪॥ ಅಥತೌಭ್ರಾತರೌದೀಪ್ತಂಶರ
ವರ್ಷಂವವರ್ಷತುಃ । ವಿರಾಧೇರಾಕ್ಷಸೇತಸ್ಮಿನ್ಕಾಲಾಂತಕಯಮೋಪಮೇ ॥೧೫॥ ಸಪ್ರಹಸ್ಯಮಹಾರೌದ್ರಃಸ್ಥಿತ್ವಾ
ಜೃಂಭತರಾಕ್ಷಸಃ । ಜೃಂಭಮಾಣಸ್ಯತೇಬಾಣಾಃಕಾಯಾನ್ನಿಷ್ಪೇತುರಾಶುಗಾಃ ॥೧೬॥ ಸ್ಪರ್ಶಾತ್ತುವರದಾನೇನಪ್ರಾ
ಣಾನ್ಸಂರೋಧ್ಯರಾಕ್ಷಸಃ । ವಿರಾಧಶ್ಶೂಲಮುದ್ಯಮ್ಯರಾಘವಾವಭ್ಯಧಾವತ ॥೧೭॥ ತಚ್ಛೂಲಂವಜ್ರಸಂಕಾಶಂಗ
ಗನೇಜ್ವಲನೋಪಮಂ । ದ್ವಾಭ್ಯಾಂಶರಾಭ್ಯಾಂಚಿಚ್ಛೇದರಾಮಶ್ಶಸ್ತ್ರಭೃತಾಂವರಃ ॥೧೮॥ ತದ್ರಾಮವಿಶಿಖಚ್ಛಿನ್ನಂ
ಶೂಲಂತಸ್ಯಕರಾದ್ಭುವಿ । ಪಪಾತಾಶನಿನಾಚ್ಛಿನ್ನಂಮೇರೋರಿವಶಿಲಾತಲಂ ॥೧೯॥ ತೌಖಡ್ಗೌಕ್ಷಿಪ್ರಮುದ್ಯಮ್ಯಕೃಷ್ಣ
ಸರ್ಪೋಪಮೌಶುಭೌ । ತೂರ್ಣಮಾಪತತಸ್ತಸ್ಯತದಾಪ್ರಹರತಾಂಬಲಾತ್ ॥೨೦॥ ಸವಧ್ಯಮಾನಸ್ಸುಭೃಶಂಬಾಹು

---

ರಾಕ್ಷಸಃ-ಆ ವಿರಾಧನು, ವಿದ್ಧಃ-ಹೊಡೆಯಲ್ಪಟ್ಟವನಾಗಿ. ವೈದೇಹೀಂ-ಸೀತಾದೇವಿಯನ್ನು, ನ್ಯಸ್ಯ-ನೆಲದಮ್ಯಾಲೆಬಿಟ್ಟು, ಶೂಲಂ-ತ್ರಿಶೂಲವನ್ನು, ಉದ್ಯಮ್ಯ-ಯೆತ್ತಿಕೊಂಡು, ಸುಸಂಕ್ರುದ್ಧಃ-ಬಹಳ ಕೋಪಿಷ್ಠನಾಗಿ. ಸಲಕ್ಷ್ಮಣಂ-ಲಕ್ಷ್ಮಣನಿಂದೊಡಗೂಡಿದ, ರಾಮಂ-ಶ್ರೀರಾಮ ಸಂಕುರಿತು. ಅಭ್ಯದ್ರವತ್-ಅಟ್ಟಿಕೊಂಡುಬಂದನು ॥೧೩॥ ಸಃ-ಆ ವಿರಾಧನು, ಮಹಾನಾದಂ-ಬಹಳ ಧ್ವನಿಗೊಂಡಂತೆ, ವಿನದ್ಯ-ಕೋಲಾಹಲ ಧ್ವನಿಯನ್ನುಮಾಡಿ. ಶಕ್ರಧ್ವಜೋಪಮಂ-ಇಂದ್ರನ ಧ್ವಜಕ್ಕೆ ಸಮಾನಮಾದ. ಶೂಲಂ-ತ್ರಿಶೂಲವನ್ನು, ಪ್ರಗೃಹ್ಯ-ತೆಗೆದುಕೊಂಡು, ತದಾ-ಆ ಕಾಲದಲ್ಲಿ, ಅಂತಕಃಇವ-ಯಮನಂತೆ. ವ್ಯಾತ್ತಾನನಃ-ತೆರೆಯಲ್ಪಟ್ಟ ಬಾಯಿಯುಳ್ಳವನಾಗಿ, ಅಶೋಭತ-ಹೊಳೆಯುತ್ತಿದ್ದನು ॥೧೪॥ ಅಥ-ಬಳಿಕ, ತೌಭ್ರಾತರೌ-ಆ ಅಣ್ಣತಮ್ಮಂದಿರು. ಕಾಲಾಂತಕಯಮೋಪಮೇ-ಸಂಹಾರಕಾಲದಲ್ಲಿ ನಾಶಕರನಾದ ಯಮನಿಗೆ ಸಮಾನನಾದ. ರಾಕ್ಷಸೇ-ರಕ್ಕಸನಾದ. ತಸ್ಮಿನ್ವಿರಾಧೇ-ಆ ವಿರಾಧನಲ್ಲಿ ದೀಪ್ತಂ-ಸುಡುತ್ತಿರುವ, ಶರವರ್ಷಂ-ಬಾಣ ವೃಷ್ಟಿಯನ್ನು, ವವರ್ಷತುಃ-ಮಾಡಿದರು ॥೧೫॥ ಮಹಾರೌದ್ರಃ-ಬಹಳಕೋಪಿಷ್ಠನಾದ. ಸರಾಕ್ಷಸಃ-ಆ ರಾಕ್ಷಸನು, ಪ್ರಹಸ್ಯ-ನಕ್ಕು. ಸ್ಥಿತ್ವಾ-ನಿಂತು, ಅಜೃಂಭತ-ಆಕಳಿಸಿದನು, ಜೃಂಭಮಾಣಸ್ಯ-ಆಕಳಿಸಿದ ಆ ವಿರಾಧನ. ಕಾಯಾತ್-ಶರೀರದವೆಶೆಯಿಂದ, ತೇಬಾಣಾಃ-ಆ ಬಾಣಗಳು. ಆಶುಗಾಃ-ಬ್ಯಾಗಹೊರಟುಬಂದವುಗಳಾಗಿ, ನಿಷ್ಪೇತುಃ-ಬಿದ್ದವು ॥೧೬॥ ರಾಕ್ಷಸಃ-ರಕ್ಕಸನಾದ, ವಿರಾಧಃ-ವಿರಾಧನು. ವರದಾನೇನ-ಬ್ರಹ್ಮನವರಪ್ರದಾನದಿಂದ. ಸ್ಪರ್ಶಾತ್-ಸ್ಪರ್ಶಮಾತ್ರದಿಂದ, ಪ್ರಾಣಾನ್-ಪ್ರಾಣಗಳನ್ನು, ಸಂರೋಧ್ಯ-ತಡೆಮಾಡಿಕೊಂಡು, ಶೂಲಂ-ತ್ರಿಶೂಲಾಯುಧವನ್ನು, ಉದ್ಯಮ್ಯ-ಧರಿಸಿಕೊಂಡು, ರಾಘವೌ-ರಾಮಲಕ್ಷ್ಮಣರಂಕುರಿತು, ಅಭ್ಯಧಾವತ-ಓಡಿಬಂದನು ॥೧೭॥ ಶಸ್ತ್ರಭೃತಾಂ-ಶಸ್ತ್ರಧಾರಿಗಳೊಳಗೆ, ವರಃ-ಶ್ರೇಷ್ಠನಾದ ರಾಮಃ-ಶ್ರೀರಾಮನು. ಗಗನೇ-ಅಂತರಿಕ್ಷಮಾರ್ಗದಲ್ಲಿ. ಜ್ವಲನೋಪಮಂ-ಅಗ್ನಿಗೆ ಸಮಾನಮಾದ, ವಜ್ರಸಂಕಾಶಂ-ದೇವೇಂದ್ರನಾಯುಧಕ್ಕೆ ಸಮಾನಮಾದ, ತಚ್ಛೂಲಂ-ಆ ತ್ರಿಶೂಲವನ್ನು. ದ್ವಾಭ್ಯಾಂಶರಾಭ್ಯಾಂ-ಆ ಎರಡುಬಾಣಗಳಿಂದ, ಚಿಚ್ಛೇದ-ಕತ್ತರಿಸಿದನು ॥೧೮॥ ರಾಮವಿಶಿಖಚ್ಛಿನ್ನಂ-ಹೊಡೆಯಲ್ಪಟ್ಟ, ಮೇರೋಃ-ಮೇರುಪರ್ವತದ, ಶಿಲಾತಲಮಿವ-ಪಾಷಾಣಪ್ರದೇಶದಂತೆ. ತಸ್ಯ-ಆ ವಿರಾಧನ ಕರಾತ್-ಕೈಯಿಯದೆಶೆಯಿಂದ, ಭುವಿ-ಭೂಮಿಯಲ್ಲಿ. ಪಪಾತ-ಬಿದ್ದುಹೋಯಿತು ॥೧೯॥ ತೌ-ಆ ರಾಮಲಕ್ಷ್ಮಣರು, ಕೃಷ್ಣಸರ್ಪೋಪಮೌ-ಕಪ್ಪಾದ ಸರ್ಪಗಳಿಗೆ ಸಮಾನಗಳಾದ. ಶುಭೌ-ಶುಭಕರಗಳಾದ, ಖಡ್ಗೌ-ಪಟ್ಟಾಕತ್ತಿಗಳನ್ನು, ಉದ್ಯಮ್ಯ-ಮ್ಯಾಲಕೆತ್ತಿಕೊಂಡು. ತೂರ್ಣಂ-ಜಾಗ್ರತೆಯಾಗಿ, ಆಪತತಃ-ಬರುತ್ತಿರುವ, ತಸ್ಯ-ಆ ವಿರಾಧನನ್ನು, ಬಲಾತ್-ಸಾಮರ್ಥ್ಯದಿಂದ, ಪ್ರಹರತಾಂ-ಹೊಡದರು ॥೨೦॥ ಸ ಭೃಶಂ-ಬಹಳವಾಗಿ. ವ

---

ವಿರಾಧನ ಶರೀರವಂ ಭೇದಿಸಿ ರಕುತದಿಂದ ನೆನೆದು ನೆಲದಲ್ಲಿ ಬಿದ್ದವು ॥೧೩॥ ಆ ವೇಳೆಯಲ್ಲಿ ವಿರಾಧನು ಹೊಡೆಯಲ್ಪಟ್ಟವನಾಗಿ ಸೀತೆಯನ್ನು ಕೆಳಗಿಳಿಸಿ ತ್ರಿಶೂಲವ ನೆತ್ತಿಕೊಂಡು ಬಹು ಕೋಪಮುಳ್ಳವನಾಗಿ, ಲಕ್ಷ್ಮಣಸಮೇತನಾದ ಶ್ರೀರಾಮನನ್ನಟ್ಟಬಂದು ಘಟ್ಟಿಯಾಗಿಕೂಗಿ ಇಂದ್ರಧ್ವಜಕ್ಕೆ ಸಮಾನವಾದ ಆ ತ್ರಿಶೂಲವನ್ನು ಪಿಡಿದುಕೊಂಡು, ಆಗ ಯಮನಂತೆ ಬಾಯ್ದೆರದುಕೊಂಡು ಬೆಳಗುತ್ತಿದ್ದನು ॥೧೪॥ ಅನಂತರ ಆ ರಾಮಲಕ್ಷ್ಮಣರೀರ್ವರೂ ಪ್ರಳಯಕಾಲದೊಳು ನಾಶವಂ ಗೈಯ್ಯುವ ಯಮಸದೃಶನಾದ ಆ ರಕ್ಕಸನಲ್ಲಿ ಬಾಣವೃಷ್ಟಿಯಂ ಸುರಿಸಿದವರಾಗಲು, ಮಹಾರೌದ್ರನಾದ ಆ ರಾಕ್ಷಸನು ನಗುತ್ತಾ ನಿಂತು ಆಕಳಿಸಿದನು. ಈ ರೀತಿಯಾಗಿ ಆಕಳಿಸುವ ಆ ರಕ್ಕಸನ ಶರೀರದಿಂದ ಬಾಣಗಳು ಹಿಂತಿರುಗಿಬಂದು ನೆಲದಲ್ಲಿ ಬಿದ್ದವು. ಆ ಅಸುರನು ಬ್ರಹ್ಮವರದಿಂದ ಬದುಕಿದವನಾಗಿ ಶೂಲವನ್ನೆತ್ತಿಕೊಂಡು ರಾಮಲಕ್ಷ್ಮಣರನ್ನಟ್ಟಿಕೊಂಡು ಬಂದನು ॥೧೭॥ ಶಸ್ತ್ರಪಾಣಿಗಳೊಳಗೆ ಉತ್ತಮನಾದ ಶ್ರೀರಾಮನು ಗಗನದಲ್ಲಿ ಅಗ್ನಿಯಂತೆ ಪೊಳೆವ ಮತ್ತು ವಜ್ರಸದೃಶವಾದ ಆ ತ್ರಿಶೂಲವನ್ನು ಯರಡುಬಾಣಗಳಿಂದ ಕತ್ತರಿಸಿದನು ॥೧೮॥ ಶ್ರೀರಾಮನಿಂದ ಛೇದಿಸಲ್ಪಟ್ಟ ಆ ಶೂಲವು; ಶಿಡಿಲಿನಿಂದ ಹೊಡೆಯಲ್ಪಟ್ಟ ಮೇರುಪರ್ವತದ ಶಿಖರದಂತೆ ನೆಲದಲ್ಲಿ ಬಿತ್ತು ॥೧೯॥ (ಆಗ) ಆ ರಾಮಲಕ್ಷ್ಮಣರೀರ್ವರೂ ಕೃಷ್ಣಸರ್ಪಗಳಂತಿರುವ ಖಡ್ಗಗಗಳಂ ತೆಗೆದುಕೊಂಡು; ತ್ವರೆಯಾಗಿ ಬರುವ ಆ ವಿರಾಧನನ್ನು ಹೊಡದರು. ಪರಿಘರಿಯಾಗಿ

ಭ್ಯಾಂ ಪರಿರಭ್ಯ ತೌ । ಅಪ್ರಕಂಪ್ಯೌ ನರವ್ಯಾಘ್ರೌ ರೌದ್ರಃ ಪ್ರಸ್ಥಾತುಮೈಚ್ಛತ ॥೧೧॥ ತಸ್ಯಾಭಿಪ್ರಾಯಮಾಜ್ಞಾಯ ರಾಮೋ ಲಕ್ಷ್ಮಣಮಬ್ರವೀತ್ । ವಹತ್ವಯಮಲಂ ತಾವತ್ಪಥಾನೇನ ತು ರಾಕ್ಷಸಃ ॥ ಯಥಾ ಚೇಚ್ಛತಿ ಸೌಮಿತ್ರೇ ತಥಾ ವಹತು ರಾಕ್ಷಸಃ । ಅಯಮೇವ ಹಿ ನಃ ಪಂಥಾ ಯೇನ ಯಾತಿ ನಿಶಾಚರಃ ॥೧೩॥ ಸ ತು ಸ್ವಬಲವೀರ್ಯೇಣ ಸಮುತ್ಕ್ಷಿಪ್ಯ ನಿಶಾಚರಃ । ಬಾಲಾವಿವ ಸ್ಕಂಧಗತೌ ಚಕಾರಾತಿಬಲೌ ತತಃ ॥೧೪॥ ತಾವಾರೋಪ್ಯ ತತಃ ಸ್ಕಂಧಂ ರಾಘವೌ ರಜನೀಚರಃ । ವಿರಾಧೋ ನಿನದನ್ಘೋರಂ ಜಗಾಮಾಭಿಮುಖೋ ವನಂ ॥೧೫॥ ವನಂ ಮಹಾಮೇಘನಿಭಂ ಪ್ರವಿಷ್ಟೋ ದ್ರುಮೈರ್ಮಹದ್ಭಿರ್ವಿವಿಧೈರುಪೇತಂ । ನಾನಾವಿಧೈಃ ಪಕ್ಷಿಶತೈರ್ವಿಚಿತ್ರಂ ಶಿವಾಯುತಂ ವ್ಯಾಳಮೃಗೈರ್ವಿಕೀರ್ಣಂ ॥—**ತೃತೀಯಸ್ಸರ್ಗಃ**—

ಹ್ರಿಯಮಾಣೌ ತು ತೌ ದೃಷ್ಟ್ವಾ ವೈದೇಹೀ ರಾಮಲಕ್ಷ್ಮಣೌ । ಉಚ್ಚೈಃ ಸ್ವರೇಣ ಚುಕ್ರೋಶ ಪ್ರಗೃಹ್ಯ ಸುಭುಜಾ ಭುಜೌ ॥ ಏಷ ದಾಶರಥೀ ರಾಮಸ್ಸತ್ಯವಾಂಛೀಲವಾಂಛುಚಿಃ । ರಾಕ್ಷಸಾ ರೌದ್ರರೂಪೇಣ ಹ್ರಿಯತೇ ಸಹಲಕ್ಷ್ಮಣಃ ॥

---

ಧ್ಯಮಾನಾಃ-ಹೊಡೆಯಲ್ಪಟ್ಟ, ರೌದ್ರಃ-ಭಯಂಕರನಾದ, ಸಃ-ಆ ವಿರಾಧನು, ಅಪ್ರಕಂಪ್ಯೌ-ಚಲಿಸಲಸಾಧ್ಯರಾದ. ನರವ್ಯಾಘ್ರೌ-ಪುರುಷಶ್ರೇಷ್ಠರಾದ, ತೌ-ಆ ರಾಮಲಕ್ಷ್ಮಣರನ್ನು. ಬಾಹುಭ್ಯಾಂ-ಭುಜಗಳಿಂದ, ಪರಿರಭ್ಯ-ಅಪ್ಪಿಕೊಂಡು, ಪ್ರಸ್ಥಾತುಂ-ಹೊರಡುವದಕ್ಕೋಸ್ಕರ, ಐಚ್ಛತ-ಇಚ್ಛಿಸಿದನು ॥೧೧॥ ರಾಮಃ-ಶ್ರೀರಾಮನು, ತಸ್ಯ-ಆ ವಿರಾಧನ-ಅಭಿಪ್ರಾಯಂ-ಭಾವವನ್ನು, ಆಜ್ಞಾಯ-ತಿಳಿದು, ಲಕ್ಷ್ಮಣಂ-ಲಕ್ಷ್ಮಣನಕುರಿತು, ಅಯಂ ರಾಕ್ಷಸಃ-ಈ ರಾಕ್ಷಸನು. ಅನೇನಪಥಾತಾವತ್-ಈ ಮಾರ್ಗದಿಂದಲಾದರೆ, ಅಲಂ-ಅತ್ಯಂತವಾಗಿ, ವಹತು-ಹೊರಲಿ, ಇತಿ-ಇಂತೆಂದು, ಅಬ್ರವೀತ್-ನುಡಿದನು ॥೧೨॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಅಯಂರಾಕ್ಷಸಃ-ಈ ರಕ್ಕಸನು. ಯಥಾ-ಹ್ಯಾಗೆ, ಇಚ್ಛತಿ-ಇಚ್ಛಿಸುತ್ತಾನೋ, ತಥಾ-ಹಾಗೆಯೇ, ವಹತು-ಹೊರಲಿ, ನಿಶಾಚರಃ-ರಾಕ್ಷಸನು, ಯೇನ-ಯಾವಮಾರ್ಗದಿಂದ, ಯಾತಿ-ಹೋಗುತ್ತಾನೋ, ನಃ-ನಮಿಗೆ, ಅಯಮೇವಪಂಥಾಹಿ-ಇದೇಮಾರ್ಗವಷ್ಟೆ ॥೧೩॥ ತತಃ-ಬಳಿಕ, ಸನಿಶಾಚರಸ್ತು-ಆ ರಾಕ್ಷಸನಾದರೆ, ಸ್ವಬಲವೀರ್ಯೇಣ-ತನ್ನ ದೇಹಪರಾಕ್ರಮದಿಂದ, ಅತಿಬಲೌ-ಬಹಳ ಬಲವುಳ್ಳ ರಾಮಲಕ್ಷ್ಮಣರನ್ನು, ಬಾಲಾವಿವ-ಎಳೇಕೂಸುಗಳಂತೆ, ಸಮುತ್ಕ್ಷಿಪ್ಯ-ಎತ್ತಿಕೊಂಡು, ಸ್ಕಂಧಗತೌ-ಹೆಗಲನ್ನುಹೊಂದಿದವರನ್ನಾಗಿ, ಚಕಾರ-ಮಾಡಿದನು ॥೧೪॥ ತತಃ-ಬಳಿಕ, ರಜನೀಚರಃ-ರಾಕ್ಷಸನಾದ, ವಿರಾಧಃ-ವಿರಾಧನು, ತೌರಾಘವೌ-ಆ ರಾಮಲಕ್ಷ್ಮಣರನ್ನು, ಸ್ಕಂಧಂ-ಹೆಗಲನ್ನು ಆರೋಪ್ಯ-ಹತ್ತಿಸಿಕೊಂಡು, ಘೋರಂ-ಭಯಂಕರವಾಗಿ, ನಿನದನ್-ಧ್ವನಿಗೊಂಡವನಾಗಿ, ವನಂ-ಅರಣ್ಯವನ್ನು ಕುರಿತು, ಅಭಿಮುಖಃ-ಅಭಿಮುಖನಾಗಿ, ಜಗಾಮ-ತೆರಳಿದನು ॥೧೫॥ ಮಹದ್ಭಿಃ-ದೊಡ್ಡವುಗಳಾದ. ವಿವಿಧೈಃ-ನಾನಾಬಗೆಗಳಾದ, ದ್ರುಮೈಃ-ಗಿಡಗಳಿಂದ, ಉಪೇತಂ-ಕೂಡಿಕೊಂಡಿರುವದಾದಕಾರಣವೆ, ಮಹಾಮೇಘನಿಭಂ-ನೀಲಮೇಘಕ್ಕೆ ಸಮಾನವಾದ, ನಾನಾವಿಧೈಃ-ಬಹಳಬಗೆಗಳಾದ. ಪಕ್ಷಿಶತೈಃ-ನೂರಾರು ಹಕ್ಕಿಗಳಿಂದ. ವಿಚಿತ್ರಂ-ಆಶ್ಚರ್ಯಕರವಾದ, ಶಿವಾಯುತಂ-ನರಿಗಳಿಂದ ಕೂಡಿಕೊಂಡಿರುವ, ವ್ಯಾಳಮೃಗೈಃ-ಘಾತುಕಗಳಾದ ಮೃಗಗಳಿಂದ, ವಿಕೀರ್ಣಂ-ತುಂಬಿರುವ, ವನಂ-ಅರಣ್ಯವನ್ನು, ಪ್ರವಿಷ್ಟಃ-ಪ್ರವೇಶಮಾಡಿದನು ॥೧೬॥ —*** ಇತಿಶ್ರೀಮದಾರಣ್ಯಕಾಂಡೇ-ತೃತೀಯಸ್ಸರ್ಗಃ- ***—

ಸುಭುಜಾ-ಒಳ್ಳೇಭುಜಗಳುಳ್ಳ, ವೈದೇಹೀ-ಸೀತಾದೇವಿಯು, ಹ್ರಿಯಮಾಣೌ-ಸೆಳೆದುಕೊಂಡು ಹೋಗಲ್ಪಡುತ್ತಿರುವ. ತೌರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರನ್ನು. ದೃಷ್ಟ್ವಾ-ಕಂಡು, ಭುಜೌ-ಭುಜಗಳನ್ನು ಪ್ರಗೃಹ್ಯ-ಎತ್ತಿಕೊಂಡು, ಉಚ್ಚೈಸ್ಸ್ವರೇಣ-ಘಟ್ಟಿಯಾದ ಧ್ವನಿಯಿಂದ. ಚುಕ್ರೋಶ-ಕೂಗಿದಳು. ದಾಶರಥಿಃ-ದಶರಥರಾಯನ ಮಗನಾದ, ಸತ್ಯವಾನ್-ಸತ್ಯವಂತನಾದ. ಶೀಲವಾನ್-ಸತ್ಸ್ವಭಾವವುಳ್ಳ, ಶುಚಿಃ-ಪರಿಶುದ್ಧ

---

ಹೊಡೆಯಲ್ಪಟ್ಟರೂ ಆ ಭಯಂಕರನಾದ ವಿರಾಧನು ಪುರುಷಶ್ರೇಷ್ಠರಾದ ರಾಮಲಕ್ಷ್ಮಣರೀರ್ವರನ್ನು ಕಂಕುಳಲ್ಲಿಟ್ಟುಕೊಂಡು ತೆರಳಲಿಚ್ಛಿಸಿದನು ॥೧೧॥ (ಆಗ) ಶ್ರೀರಾಮನು ಅವನ ಅಭಿಪ್ರಾಯವನ್ನರಿತು ಲಕ್ಷ್ಮಣನನ್ನುದ್ದೇಶಿಸಿ ನಿರೂಪಿಸುವನದೆಂತೆನೆ,—ಎಲೈ ತಮ್ಮನೇ! ಈ ರಕ್ಕಸನು ಇದೇದಾರಿಯಲ್ಲಿಯೇ ಪೋಗುವನಲ್ಲವೇ, ಇವನಿಷ್ಟದಂತೆ ಹೊತ್ತುಕೊಂಡು ಹೋಗಲಿ, ನಾವು ಪೋಗತಕ್ಕದಾರಿಯು ಇದೇ, ಎಂದನು ॥೧೩॥ ಬಳಿಕ ಆ ರಾಕ್ಷಸನಾದರೆ ತನ್ನ ಭುಜಬಲದಿಂದ, ಬಹುಬಲಶಾಲಿಗಳಾದ ಆ ರಾಮಲಕ್ಷ್ಮಣರನ್ನು ಎಳೇಕೂಸುಗಳಂ ಹೆಗಲಮ್ಯಾಲೆ ಕುಳ್ಳಿರಿಸಿಕೊಂಡು ಪೋಗುವಂತೆ ಘೋರವಾಗಿ ಆರ್ಭಟಿಸುತ್ತಾ ಅರಣ್ಯಾಭಿಮುಖವಾಗಿ ಸಾರಿದನು ॥೧೫॥ ನಾನಾವಿಧವಾದ ದೊಡ್ಡದೊಡ್ಡ ಮರಗಳಿಂದ ಕೂಡಿಕೊಂಡಿರುವದಾಗಿಯೂ, ಕಾಲಮೇಘಸದೃಶವಾಗಿಯೂ, ಅನೇಕ ಬಗೆಗಳಾದ ಹಕ್ಕಿಗಳಿಂದ ಆಶ್ಚರ್ಯಕರವಾಗಿಯೂ, ನರಿಗಳಿಂದ ಯುಕ್ತವಾಗಿಯೂ, ಘಾತುಕಮೃಗಗಳಿಂದ ತುಂಬಿರುವದಾಗಿಯೂ ಇರುವ ಮಹದರಣ್ಯವಂ ಹೊಕ್ಕನು ॥೧೬॥ —* ೩ನೆಯ ಸರ್ಗಂ ಮುಗಿದುದು *—

ಒಳ್ಳೇ ಭುಜಗಳುಳ್ಳ ಸೀತಾದೇವಿಯು ತಗದುಕೊಂಡು ಹೋಗಲ್ಪಡುವ ಆ ರಾಮಲಕ್ಷ್ಮಣರಂ ಕಂಡು ಭುಜಗಳಂ ಸಾಚಿ, ಘಟ್ಟಿಯಾಗಿ ರೋದಿಸುವಳದೆಂತೆನೆ,—ದಶರಥಪುತ್ರನಾದ ಮತ್ತು ಸತ್ಯವಂತನಾದ ಸುಸ್ವಭಾವಮುಳ್ಳ ಲಕ್ಷ್ಮಣಸಹಿತನಾದ, ಶ್ರೀರಾಮನನ್ನು ಭಯಂಕರನಾದ ರಕ್ಕಸನು ಹಿಡಿದುಕೊಂಡು ಹೋಗುತ್ತಾನೆ,

ಮಾಂವೃಕಾಭಕ್ಷಯಿಷ್ಯಂತಿಶಾರ್ದೂಲಾದ್ವೀಪಿನಸ್ತಥಾ । ಮಾಂಹರೋತ್ಸೃಜ್ಯಕಾಕುತ್ಸ್ಥೌನಮಸ್ತೇರಾಕ್ಷಸೋತ್ತಮ ॥೩॥ ತಸ್ಯಾಸ್ತದ್ವಚನಂಶ್ರುತ್ವಾವೈದೇಹ್ಯಾರಾಮಲಕ್ಷ್ಮಣೌ । ವೇಗಂಪ್ರಚಕ್ರತುರ್ವೀರೌವಧೇತಸ್ಯದುರಾತ್ಮನಃ ।೪। ತಸ್ಯರೌದ್ರಸ್ಯಸೌಮಿತ್ರಿರ್ಬಾಹುಂಸವ್ಯಂಬಭಂಜಹ । ರಾಮಸ್ತುದಕ್ಷಿಣಂಬಾಹುಂತರಸಾತಸ್ಯರಕ್ಷಸಃ । ಸಭಗ್ನಬಾಹುಸ್ಸಂವಿಗ್ನೋನಿಪಪಾತಾಶುರಾಕ್ಷಸಃ । ಧರಣ್ಯಾಂಮೇಘಸಂಕಾಶೋವಜ್ರಭಿನ್ನಇವಾಚಲಃ । ಮುಷ್ಟಿಭಿರ್ಜಾನುಭಿಃಪದ್ಭಿಃಸೂದಯಂತೌತುರಾಕ್ಷಸಂ । ಉದ್ಯಮ್ಯೋದ್ಯಮ್ಯಚಾಪ್ಯೇನಂಸ್ಥಂಡಿಲೇನಿಷ್ಪಿಪೇಷತುಃ ॥ ಸವಿದ್ಧೋಬಹುಭಿರ್ಬಾಣೈಃಖಡ್ಗಾಭ್ಯಾಂಚಪರಿಕ್ಷತಃ । ನಿಷ್ಪಿಷ್ಟೋಬಹುಧಾಭೂಮೌನಮಮಾರಸರಾಕ್ಷಸಃ ॥ ತಂಪ್ರೇಕ್ಷ್ಯರಾಮಸ್ಸುಭೃಶಮವಧ್ಯಮಚಲೋಪಮಂ । ಭಯೇಷ್ವಭಯದಶ್ಶ್ರೀಮಾನಿದಂವಚನಮಬ್ರವೀತ್ ॥೯॥ ತಪಸಾಪುರುಷವ್ಯಾಘ್ರರಾಕ್ಷಸೋಯಂನಶಕ್ಯತೇ । ಶಸ್ತ್ರೇಣಯುಧಿನಿರ್ಜೇತುಂರಾಕ್ಷಸಂನಿಖನಾವಹೇ ।೧೦॥ ತಚ್ಛ್ರುತ್ವಾ

---

ನಾದ, ಏವರಾಮಃ-ಈ ಶ್ರೀರಾಮನು, ಸಹಲಕ್ಷ್ಮಣಃ-ಲಕ್ಷ್ಮಣನೊಡಗೂಡಿದವನಾಗಿ, ರೌದ್ರರೂಪೇಣ-ಉಗ್ರವಾದಾಕಾರವುಳ್ಳ, ರಕ್ಷಸಾ-ರಕ್ಕಸನಿಂದ, ಹ್ರಿಯತೇ-ತೆಗೆದುಕೊಂಡುಹೋಗಲ್ಪಡುತ್ತಾನೆ, ಮಾಂ-ನನ್ನನ್ನು. ವೃಕಾಃ-ತೋಳಗಳು, ಶಾರ್ದೂಲಾಃ-ದೊಡ್ಡಹುಲಿಗಳು, ತಥಾ-ಹಾಗೆಯೆ ದ್ವೀಪಿನಶ್ಚ-ವ್ಯಾಘ್ರಗಳು, ಭಕ್ಷಯಿಷ್ಯಂತಿ-ತಿನ್ನುತ್ತವೆ ॥೩॥ ಹೇರಾಕ್ಷಸೋತ್ತಮ-ಎಲೈ ರಾಕ್ಷಸಶ್ರೇಷ್ಠನೇ, ತೇ-ನಿನಗೆ, ನಮಃ-ನಮಸ್ಕಾರವು. ಕಾಕುತ್ಸ್ಥೌ-ರಾಮಲಕ್ಷ್ಮಣರನ್ನು, ಉತ್ಸೃಜ್ಯ-ಬಿಟ್ಟು, ಮಾಂ-ನನ್ನನ್ನು, ಹರ-ತೆಗೆದುಕೊಂಡುಹೋಗು ॥೪॥ ತಸ್ಯಾಃವೈದೇಹ್ಯಾಃ-ಆ ಸೀತಾದೇವಿಯ ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ವೀರೌ-ಶೂರರಾದ, ರಾಮಲಕ್ಷ್ಮಣೌ-ರಾಮಲಕ್ಷ್ಮಣರಿಬ್ಬರೂ, ದುರಾತ್ಮನಃ-ದುಷ್ಟನಾದ, ತಸ್ಯ-ಆ ವಿರಾಧನ. ವಧೇ-ಸಂಹಾರದಲ್ಲಿ, ವೇಗಂ-ಜವವನ್ನು, ಪ್ರಚಕ್ರತುಃ-ಮಾಡಿದರು, ಸೌಮಿತ್ರಿಃ-ಲಕ್ಷ್ಮಣಸ್ವಾಮಿಯು. ರೌದ್ರಸ್ಯ-ಭಯಂಕರವಾದ, ತಸ್ಯ-ಆ ವಿರಾಧನ, ಸವ್ಯಂಬಾಹುಂ-ಯಡಭುಜವನ್ನು, ಬಭಂಜಹ-ಕತ್ತರಿಸಿದನು, ರಾಮಸ್ತು-ಶ್ರೀರಾಮನಾದರೆ, ತರಸಾ-ಬಲದಿಂದ, ತಸ್ಯರಕ್ಷಸಃ-ಆ ರಾಕ್ಷಸನ, ದಕ್ಷಿಣಂಬಾಹುಂ-ಬಲಭುಜವನ್ನು, ಬಭಂಜಹ-ಮುರಿದುಹಾಕಿದನು, (ಅಂದರೆ-ಕತ್ತರಿಸಿದನು.) ಭಗ್ನಬಾಹುಃ-ಕತ್ತರಿಸಲ್ಪಟ್ಟಭುಜಗಳುಳ್ಳ, ಮೇಘಸಂಕಾಶಃ-ಗರ್ಜನೆಯಲ್ಲಿ ಮೇಘಕ್ಕೆ ಸಮಾನನಾದ, ಸರಾಕ್ಷಸಃ-ಆ ವಿರಾಧನು. ಸಂವಿಗ್ನಃ-ಹೆದರಿದವನಾಗಿ, ವಜ್ರಭಿನ್ನಃ-ವಜ್ರಾಯುಧದಿಂ ಹೊಡೆಯಲ್ಪಟ್ಟ, ಅಚಲಃಇವ-ಬೆಟ್ಟದಂತೆ. ಧರಣ್ಯಾಂ-ನೆಲದಲ್ಲಿ ಆಶು-ಜಾಗ್ರತೆಯಾಗಿ, ನಿಪಪಾತ-ಬಿದ್ದನು ॥೬॥ ಮುಷ್ಟಿಭಿಃ-ಕೈಹಿಡಿಯಿಂದಲೂ. ಜಾನುಭಿಃ-ಮೊಳಕಾಲುಗಳಿಂದಲೂ, ರಾಕ್ಷಸಂ-ರಾಕ್ಷಸನನ್ನು, ಉದ್ಯಮ್ಯೋದ್ಯಮ್ಯ-ಎತ್ತಿಯೆತ್ತಿ. ಸೂದಯಂತೌ-ಹೊಡೆಯುತ್ತಿರುವರಾಗಿ. ಏನಂ-ಈ ರಕ್ಕಸರನ್ನು, ಸ್ಥಂಡಿಲೇ-ಭೂಪ್ರದೇಶದಲ್ಲಿ, ನಿಷ್ಪಿಪೇಷತುಃ-ಅರೆದುಹಾಕಿದರು ॥೭॥ ಸರಾಕ್ಷಸಃ-ಆ ರಾಕ್ಷಸನು, ಬಹುಭಿಃ-ನಾನಾಬಗೆಗಳಾದ. ಬಾಣೈಃ-ಬಾಣಗಳಿಂದ, ಖಡ್ಗಾಭ್ಯಾಂಚ-ಕತ್ತಿಗಳಿಂದಲೂ, ಪರಿಕ್ಷತಃ-ಛೇದಿಸಲ್ಪಟ್ಟವನಾದರೂ, ಬಹುಧಾ-ಬಹಳವಾಗಿ. ಭೂಮೌ-ನೆಲದಲ್ಲಿ, ನಿಷ್ಪಿಷ್ಟಃ-ಅರೆಯಲ್ಪಟ್ಟನು ತಥಾಪಿ-ಹಾಗಾದರೂ, ಸಃ-ಆ ರಾಕ್ಷಸನು, ನಮಮಾರ-ಸಾಯಲಿಲ್ಲ ॥೮॥ ಭಯೇಷು-ಭಯಕಾಲಗಳಲ್ಲಿ, ಅಭಯದಃ-ಅಭಯಪ್ರದಾತನಾದ, ಶ್ರೀಮಾನ್-ಶೌರ್ಯಸಂಪನ್ನನಾದ, ರಾಮಃ-ಶ್ರೀರಾಮನು, ಅವಧ್ಯಂ-ಸಂಹರಿಸಲನರ್ಹನಾದ, ತಂ-ಆ ವಿರಾಧನನ್ನು, ಪ್ರೇಕ್ಷ್ಯ-ಕಂಡು. ಸುಭೃಶಂ-ಬಹಳವಾಗಿ, ಇದಂ ವಚನಂ-ಈ ಮಾತನ್ನು. ಅಬ್ರವೀತ್-ನುಡಿದನು ... ... ... ... ... ... ... ... ॥೯॥ ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಅಯಂರಾಕ್ಷಸಃ-ಈ ರಕ್ಕಸನು. ತಪಸಾ-ತಪೋಬಲದಿಂದ, ಯುಧಿ-ಕಾಳಗದಲ್ಲಿ, ಶಸ್ತ್ರೇಣ-ಶಸ್ತ್ರಗಳಿಂದ, ನಿರ್ಜೇತುಂ-ಜೈಸುವದಕ್ಕೋಸುಗ, ನಶಕ್ಯತೇ-ಸಾಧ್ಯವಲ್ಲ, ರಾಕ್ಷಸಂ-ರಕ್ಕಸನನ್ನು, ನಿಖನಾವಹೇ-ಹೂಳೋಣ ॥೧೦॥ ರಾಕ್ಷಸಃ-ರಕ್ಕಸನಾದ, ವಿ

---

ತೋಳಗಳೂ, ಹುಲಿಗಳೂ, ನನ್ನನ್ನು ತಿನ್ನುತ್ತವೆ, ಎಲೈ ರಾಕ್ಷಸೋತ್ತಮನೇ! ನಿನಗೆ ಕೈಮುಗಿಯುವೆನು, ರಾಮಲಕ್ಷ್ಮಣರಂ ಬಿಟ್ಟು ನನ್ನನ್ನು ತೆಗೆದುಕೊಂಡು ಹೋಗೆಂದು ಕೂಗಲು ಆ ಧ್ವನಿಯಂಕೇಳಿ ಅವರೀರ್ವರು ಆ ವಿರಾಧನ ಸಂಹಾರದಲ್ಲಿ ಯತ್ನಿಸಿ, ಲಕ್ಷ್ಮಣನು ಯಡಭುಜವನ್ನೂ ರಾಮನು ಬಲಭುಜವನ್ನೂ ಛೇದಿಸಿದರು, ಕತ್ತರಿಸಲ್ಪಟ್ಟ ಭುಜಗಳುಳ್ಳ ಆ ರಾಕ್ಷಸನು ಹೆದರಿದವನಾಗಿ ವಜ್ರಾಯುಧದಿಂದ ಹೊಡೆಯಲ್ಪಟ್ಟ ಗಿರಿಯಂತೆ ನೆಲಕ್ಕೆ ಬಿದ್ದನು ।೬। (ಆಗ) ರಾಮಲಕ್ಷ್ಮಣರೀರ್ವರೂ ಮುಷ್ಟಿಗಳಿಂದಲೂ ಮೊಣಕಾಲುಗಳಿಂದಲೂ ಹೊಡಿಯುತ್ತಲೂ, ಕಾಲ್ಗಳಿಂದ ಒದೆಯುತ್ತಲೂ, ಅವನನ್ನು ಎತ್ತೆತ್ತಿ ಹಾಕುತ್ತಲೂ, ಪೇಷಣಮಾಡುತ್ತಲೂ ಇದ್ದರು॥ ಆ ರಕ್ಕಸನುಅನೇಕ ಬಾಣಗಳಿಂದಲೂ ಖಡ್ಗಗಳಿಂದಲೂಹೊಡಿಯಲ್ಪಟ್ಟವನಾದರೂ ಮೃತನಾಗಲಿಲ್ಲ।೮। ಭಯವು ಸಂಭವಿಸಿದಾಗ ಅಭಯವನ್ನೀಯುವ ಮತ್ತು ಶೌರ್ಯವಂತನಾದ ಶ್ರೀರಾಮನು ವಧಿಸಲನರ್ಹನಾಗಿಯೂ, ಪರ್ವತದೋಪಾದಿಯಲ್ಲಿರುವನಾಗಿಯೂ, ಇರುವ ಆ ವಿರಾಧನಂ ಕಂಡು ಲಕ್ಷ್ಮಣನನ್ನುದ್ದೇಶಿಸಿನುಡಿಯುವನದೆಂತೆನೆ,—ಎಲೈ ಪುರುಷಶ್ರೇಷ್ಠನೇ! ಈ ರಾಕ್ಷಸನನ್ನು ಸಂಗರದಲ್ಲಿ ಶಸ್ತ್ರಾಸ್ತ್ರಗಳಿಂದ ಜಯಿಸಲಸಾಧ್ಯವು, ಇವನನ್ನು ಹೂತು ಬಿಡೋಣವೆಂದು ನುಡಿಯಲು, ಆ ವಿರಾಧನು ಆ ಮಾತಂಕೇಳಿ ವಿನಯವಾಗಿ ಶ್ರೀರಾಮನಿಗೆ

ರಾಘವೇಣೋಕ್ತಂ ರಾಕ್ಷಸಃ ಪ್ರಶ್ರಿತಂ ವಚಃ । ಇದಂ ಪ್ರೋವಾಚ ಕಾಕುತ್ಸ್ಥಂ ವಿರಾಧಃ ಪುರುಷರ್ಷಭಂ ॥೧೧॥ ಹತೋ
ಸ್ಮಿ ಪುರುಷವ್ಯಾಘ್ರ ಶಕ್ರತುಲ್ಯಬಲೇನ ವೈ । ಮಯಾ ತು ಪೂರ್ವಂ ತ್ವಂ ಮೋಹಾನ್ನ ಜ್ಞಾತಃ ಪುರುಷರ್ಷಭ ॥೧೨॥ ಕೌಸಲ್ಯಾ
ಸುಪ್ರಜಾ ರಾಮ ತಾತ ತ್ವಂ ವಿದಿತೋ ಮಯಾ । ವೈದೇಹೀ ಚ ಮಹಾಭಾಗಾ ಲಕ್ಷ್ಮಣಶ್ಚ ಮಹಾಯಶಾಃ ॥೧೩॥ ಅಭಿಶಾ
ಪಾದಹಂ ಘೋರಾಂ ಪ್ರವಿಷ್ಟೋ ರಾಕ್ಷಸೀಂ ತನುಂ । ತುಂಬುರುರ್ನಾಮ ಗಂಧರ್ವಶ್ಶಪ್ತೋ ವೈಶ್ರವಣೇನ ಹ ॥೧೪॥ ಪ್ರಸಾ
ದ್ಯಮಾನಶ್ಚ ಮಯಾ ಸೋಽಬ್ರವೀನ್ಮಾಂ ಮಹಾಯಶಾಃ । ಯದಾ ದಾಶರಥೀ ರಾಮಸ್ತ್ವಾಂ ವಧಿಷ್ಯತಿ ಸಂಯುಗೇ । ತ
ದಾ ಪ್ರಕೃತಿಮಾಪನ್ನೋ ಭವಾನ್ ಸ್ವರ್ಗಂ ಗಮಿಷ್ಯತಿ । ಇತಿ ವೈಶ್ರವಣೋ ರಾಜಾ ರಂಭಾಸಕ್ತಂ ಪುರಾಽನಘ । ಅನುಪಸ್ಥೀ
ಯಮಾನೋ ಮಾಂ ಸಂಕ್ರುದ್ಧೋ ವ್ಯಾಜಹಾರ ಹ ॥೧೫॥ ತವ ಪ್ರಸಾದಾನ್ಮುಕ್ತೋಽಹಮಭಿಶಾಪಾತ್ಸುದಾರುಣಾತ್ ।
ಭುವನಂ ಸ್ವಂ ಗಮಿಷ್ಯಾಮಿ ಸ್ವಸ್ತಿ ವೋಽಸ್ತು ಪರಂತಪ ॥೧೬॥ ಇತೋ ವಸತಿ ಧರ್ಮಾತ್ಮಾ ಶರಭಂಗಃ ಪ್ರತಾಪವಾನ್ ।
ಅಧ್ಯರ್ಧಯೋಜನೇ ತಾತ ಮಹರ್ಷಿಃ ಸೂರ್ಯಸನ್ನಿಭಃ । ತಂ ಕ್ಷಿಪ್ರಮಭಿಗಚ್ಛ ತ್ವಂ ಸ ತೇ ಶ್ರೇಯೋ ವಿಧಾಸ್ಯತಿ ॥೧೭॥ ಅವಟೇ

---

ರಾಧಃ-ವಿರಾಧನು, ರಾಘವೇಣ-ಶ್ರೀರಾಮನಿಂದ, ಉಕ್ತಂ-ಹೇಳಲ್ಪಟ್ಟ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಪುರುಷರ್ಷಭಂ-ಪುರುಷಶ್ರೇಷ್ಠನಾದ
ಕಾಕುತ್ಸ್ಥಂ-ಶ್ರೀರಾಮನನ್ನು ಕುರಿತು, ಪ್ರಶ್ರಿತಂ-ವಿನಯಸಂಪನ್ನವಾದ, ಇದಂ ವಚಃ-ಈ ವಚನವನ್ನು, ಪ್ರೋವಾಚ-ಹೇಳಿದನು ॥೧೧॥ ಹೇ ಪುರುಷವ್ಯಾ
ಘ್ರ-ಎಲೈ ಪುರುಷಶ್ರೇಷ್ಠನೇ, ಶಕ್ರತುಲ್ಯಬಲೇನ-ದೇವೇಂದ್ರನಿಗೆ ಸಮಾನವಾದ ಸಾಮರ್ಥ್ಯವುಳ್ಳ ನಿನ್ನಿಂದ, ಹತಃ-ಹೊಡೆಯಲ್ಪಟ್ಟವನು, ಅಸ್ಮಿ-
ಆಗಿದ್ದೇನೆ. ಮಯಾ ತು-ನನ್ನಿಂದಲಾದರೆ, ಪೂರ್ವಂ-ಮೊದಲು, ಪುರುಷರ್ಷಭಃ-ಪುರುಷಶ್ರೇಷ್ಠನಾದ, ತ್ವಂ-ನೀನು, ಮೋಹಾತ್-ಅಜ್ಞಾನದಿಂದಲೇ
ನ ಜ್ಞಾತಃ-ತಿಳಿಯಲ್ಪಡದೇಹೋದೆ ॥೧೨॥ ಹೇ ರಾಮ-ಎಲೈ ಶ್ರೀರಾಮನೇ, ಕೌಸಲ್ಯಾ-ಕೌಸಲ್ಯಾದೇವಿಯು, ಸುಪ್ರಜಾಃ-ಒಳ್ಳೇ ಮಗನುಳ್ಳವಳು, ಹೇ
ತಾತ-ಎಲೈ ಅಪ್ಪನೇ, ತ್ವಂ-ನೀನು, ಮಯಾ-ನನ್ನಿಂದ. ವಿದಿತಃ-ತಿಳಿಯಲ್ಪಟ್ಟೆ, ಮಹಾಭಾಗಾ-ಮಹಾಪುಣ್ಯವತಿಯಾದ. ವೈದೇಹೀ ಚ-ಸೀತಾದೇವಿ
ಯು, ವಿದಿತಾ-ತಿಳಿಯಲ್ಪಟ್ಟಳು ಮಹಾಯಶಾಃ-ಮಹಾಕೀರ್ತಿವಂತನಾದ, ಲಕ್ಷ್ಮಣಶ್ಚ-ಲಕ್ಷ್ಮಣನೂ. ವಿದಿತಃ-ತಿಳಿಯಲ್ಪಟ್ಟನು ॥೧೩॥ ಅಹಂ-ನಾ
ನು, ತುಂಬುರುರ್ನಾಮ-ತುಂಬುರುವೆಂದು ಪ್ರಸಿದ್ಧನಾದ, ಗಂಧರ್ವಃ-ಗಂಧರ್ವನು, ವೈಶ್ರವಣೇನ-ಕುಬೇರನಿಂದ, ಶಪ್ತಃ-ಶಪಿಸಲ್ಪಟ್ಟವನು, ಅಭಿಶಾಪಾ
ತ್-ಆ ನೀಚವಾದ ಶಾಪದ ದೆಸೆಯಿಂದ ಘೋರಾಂ-ಭಯಂಕರವಾದ, ರಾಕ್ಷಸೀಂ-ರಾಕ್ಷಸಸಂಬಂಧವಾದ, ತನುಂ-ಶರೀರವನ್ನು. ಪ್ರವಿಷ್ಟಃ-ಹೊಂದಿದೆ
ನು ॥೧೪॥ ಮಹಾಯಶಾಃ-ಮಹಾಕೀರ್ತಿವಂತನಾದ, ಸಃ-ಆ ಕುಬೇರನು. ಮಯಾ-ನನ್ನಿಂದ. ಪ್ರಸಾದ್ಯಮಾನಃ-ಬೇಡಿಕೊಳ್ಳಲ್ಪಟ್ಟವನಾಗಿ, ಮಾಂ-
ನನ್ನನ್ನು ಕುರಿತು, ಅಬ್ರವೀತ್-ನುಡಿದನು, ಯದಾ-ಯಾವಕಾಲದಲ್ಲಿ. ದಾಶರಥಿಃ-ಶ್ರೀದಶರಥಪುತ್ರನಾದ, ರಾಮಃ-ಶ್ರೀರಾಮನಾದ, ತ್ವಾಂ-ನಿನ್ನನ್ನು, ಸಂಯು
ಗೇ-ಕಾಳಗದಲ್ಲಿ, ವಧಿಷ್ಯತಿ-ಹೊಡೆಯುವನೋ. ತದಾ-ಆಕಾಲದಲ್ಲಿ, ಭವಾನ್-ನೀನು, ಪ್ರಕೃತಿಂ-ಗಂಧರ್ವಸ್ವಭಾವವನ್ನು, ಆಪನ್ನಃ-ಹೊಂದಿದವನಾಗಿ
ಸ್ವರ್ಗಂ-ಸ್ವರ್ಗಲೋಕವನ್ನು. ಗಮಿಷ್ಯತಿ-ಹೋಗುವಿ, ಇತಿ-ಇಂತೆಂದು, ಹೇ ಅನಘ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ. ರಂಭಾಸಕ್ತಂ-ರಂಭಾ
ಎಂಬ ಅಪ್ಸರಸ್ಸಿನಲ್ಲಿ ಆಸಕ್ತನಾದ, ಮಾಂ-ನನ್ನನ್ನು ಕುರಿತು, ರಾಜಾ-ಅರಸಾದ, ವೈಶ್ರವಣಃ-ಕುಬೇರನು, ಅನುಪಸ್ಥೀಯಮಾನಃ-ನನ್ನಿಂ
ದ ಸೇವಿಸಲ್ಪಡದಿರುವನಾದಕಾರಣ, ಸಂಕ್ರುದ್ಧಃ-ಕೋಪಗೊಂಡವನಾಗಿ, ವ್ಯಾಜಹಾರ ಹ-ಹೇಳಿದನಷ್ಟೆ ॥೧೫॥ ಹೇ ಪರಂತಪ-ಎಲೈ ಶತ್ರುಸಂಹಾರಕ
ನೇ ತವ-ನಿನ್ನ, ಪ್ರಸಾದಾತ್-ಅನುಗ್ರಹದ ದೆಸೆಯಿಂದ. ಅಹಂ-ನಾನು, ಸುದಾರುಣಾತ್-ಬಹಳ ಕ್ರೂರವಾದ, ಅಭಿಶಾಪಾತ್-ಶಾಪದ ದೆಸೆಯಿಂದ, ಮು
ಕ್ತಃ-ಬಿಡಲ್ಪಟ್ಟೆನು, ವಃ-ನಿಮ್ಮುಗಳಿಗೆ, ಸ್ವಸ್ತಿ-ಶುಭವು, ಅಸ್ತು-ಆಗಲೀ, ಸ್ವಂ-ನನ್ನ ಸಂಬಂಧಿಯಾದ, ಭವನಂ-ಲೋಕವನ್ನು ಕುರಿತು, ಗಮಿಷ್ಯಾಮಿ-
ಹೋಗುವೆನು ॥೧೬॥ ಹೇ ತಾತಃ-ಎಲೈ ಅಪ್ಪನೆ, ಇತಃ-ಇಲ್ಲಿಗೆ, ಅಧ್ಯರ್ಧಯೋಜನೇ-ಅರ್ಧಯೋಜನದಲ್ಲಿ, ಸೂರ್ಯಸನ್ನಿಭಃ-ಸೂರ್ಯನಿಗೆ ಸಮಾನ
ನಾದ ಪ್ರತಾಪವಾನ್-ಮಹಾತಪಸ್ವಿಯಾದ, ಧರ್ಮಾತ್ಮಾ-ಧರ್ಮಿಷ್ಠನಾದ. ಶರಭಂಗಃ-ಶರಭಂಗನೆಂಬ, ಮಹರ್ಷಿಃ-ದೊಡ್ಡ ಋಷಿಯು, ವಸತಿ-ಇರುತ್ತಾ
ನೆ. ತ್ವಂ-ನೀನು, ತಂ-ಆ ಶರಭಂಗಋಷಿಯನ್ನು ಕುರಿತು, ಕ್ಷಿಪ್ರಂ-ಶೀಘ್ರವಾಗಿ, ಅಭಿಗಚ್ಛ-ಹೋಗು ॥೧೭॥ ಸಃ-ಆ ಶರಭಂಗಋಷಿಯು, ತೇ-ನಿ

---

ಳುವನು, ಎಲೈ ಪುರುಷಶ್ರೇಷ್ಠನೇ! ಇಂದ್ರಸದೃಶನಾದ ನಿನ್ನಿಂದ ಹತನಾದೆನು ನನಗೆ ಮೊದಲು ತಿಳಿಯದೇ ಇ
ತ್ತು, ಕೌಸಲ್ಯಾದೇವಿಯು ಒಳ್ಳೇ ಮಗನುಳ್ಳವಳು; ಮಹಾ ಪುಣ್ಯವತಿಯಾದ ಸೀತಾದೇವಿಯನ್ನು ಈಗ ತಿಳಿದ
ುಕೊಂಡೆನು, ಲಕ್ಷ್ಮಣನು ಮಹಾ ಯಶೋವಂತನು ॥೧೩॥ ನಾನು ಪೂರ್ವದಲ್ಲಿ ಆದರೆ ತುಂಬುರುನೆಂಬ ಗಂಧರ್ವ
ನಾಗಿದ್ದು ಕುಬೇರನಿಂದ ಶಪಿಸಲ್ಪಟ್ಟು ಭಯಂಕರವಾದ ರಾಕ್ಷಸರೂಪವಂ ತಾಳಿದೆನು. (ಆಗ) ನಾನು ಆ ಕು
ಬೇರನಂ ಪ್ರಾರ್ಥಿಸಲು ನಿರೂಪಿಸಿದ್ದೇನೆಂದರೆ,—ದಶರಥಪುತ್ರನಾದ ಶ್ರೀರಾಮನು ನಿನ್ನನ್ನು ಸಂಗರದಲ್ಲಿ ಯಾ
ವಾಗ ಹೊಡೆಯುವನೋ ಆಗ ನೀನು ಗಂಧರ್ವನಾಗಿ ಸ್ವರ್ಗಲೋಕಕ್ಕೆ ಶೇರುವಿ; ಎಂದು ರಂಭೆಯಲ್ಲಿ ಆಸಕ್ತನಾ
ದ ನನಗೆ ಹೇಳಿದ್ದನು ॥೧೫॥ ಎಲೈ ಶತೃಸಂಹಾರಕನೇ! ನಿನ್ನನುಗ್ರಹದಿಂದ ಶಾಪವಿಮುಕ್ತನಾದೆನು; ನನ್ನಲೋ
ಕಕ್ಕೆ ಸ್ಸಾರುವೆನು ನಿಮಗೆ ಶುಭವಾಗಲಿ ॥೧೬॥ ಇಲ್ಲಿಗೆ ಒಂದುವರೆ ಗಾವುದ ದೂರದಲ್ಲಿ ಧರ್ಮಾತ್ಮನಾದ ಮತ್ತು

ಚಾಪಿಮಾಂರಾಮಪ್ರಕ್ಷಿಪ್ಯಕುಶಲೀವ್ರಜ | ರಕ್ಷಸಾಂಗತಸತ್ತ್ವಾನಾಮೇಷಧರ್ಮಸ್ಸನಾತನಃ | ಅವಟೇಯೇನಿಧೀಯಂತೇಷಾಂಲೋಕಾಸ್ಸನಾತನಾಃ ||೨೦|| ಏವಮುಕ್ತ್ವಾತುಕಾಕುತ್ಸ್ಥಂವಿರಾಧಶ್ಶರಪೀಡಿತಃ | ಬಭೂವಸ್ವರ್ಗಸಂಪ್ರಾಪ್ತೋನ್ಯಸ್ತದೇಹೋಮಹಾಬಲಃ ||೨೧|| ತಚ್ಛ್ರುತ್ವಾರಾಘವೋವಾಕ್ಯಂಲಕ್ಷ್ಮಣಂವ್ಯಾದಿದೇಶಹ ||೨೨|| ಕುಂಜರಸ್ಯೇವರೌದ್ರಸ್ಯರಾಕ್ಷಸಸ್ಯಾಸ್ಯಲಕ್ಷ್ಮಣ | ವನೇಽಸ್ಮಿನ್ಸುಮಹಚ್ಛ್ವಭ್ರಂಖನ್ಯತಾಂರೌದ್ರಕರ್ಮಣಃ ||ಇತ್ಯುಕ್ತ್ವಾ ಲಕ್ಷ್ಮಣಂರಾಮಃಪ್ರದರಃಖನ್ಯತಾಮಿತಿ | ತಸ್ಥೌವಿರಾಧಮಾಕ್ರಮ್ಯಕಂಠೇಪಾದೇನವೀರ್ಯವಾನ್ ||೨೪|| ತತಃಖನಿತ್ರಮಾದಾಯಲಕ್ಷ್ಮಣಶ್ಶ್ವಭ್ರಮುತ್ತಮಂ | ಅಖನತ್ಪಾರ್ಶ್ವತಸ್ತಸ್ಯವಿರಾಧಸ್ಯಮಹಾತ್ಮನಃ ||೨೫|| ತಂಮುಕ್ತಕಂಠಂನಿಷ್ಪಿಷ್ಯಶಂಕುಕರ್ಣಂಮಹಾಸ್ವನಂ | ವಿರಾಧಂಪ್ರಾಕ್ಷಿಪಚ್ಛ್ವಭ್ರೇನದಂತಂಭೈರವಸ್ವನಂ ||೨೬|| ತಮಾಹವೇನಿರ್ಜಿತಮಾಶುವಿಕ್ರಮೌಸ್ಥಿರಾವುಭೌಸಂಯತಿರಾಮಲಕ್ಷ್ಮಣೌ | ಮುದಾನ್ವಿತೌಚಿಕ್ಷಿಪತುರ್ಭಯಾವಹಂನದಂತಮುತ್ಕ್ಷಿಪ್ಯಬಲೇನರಾಕ್ಷಸಂ ||೨೭|| ಅವಧ್ಯತಾಂಪ್ರೇಕ್ಷ್ಯಮಹಾಸುರಸ್ಯತೌಶಿತೇನಶಸ್ತ್ರೇಣತದಾನರರ್ಷಭೌ | ಸಮು

---

ನಸೇ, ಶ್ರೇಯಃ–ಅಭಿವೃದ್ಧಿಯನ್ನು. ವಿಧಾಸ್ಯತಿ–ಮಾಡುತ್ತಾನೆ ||೧೯|| ಅಪಿಚ–ಇಷ್ಟುಮಾತ್ರವಲ್ಲ, ಹೇರಾಮ–ಎಲೆ ಶ್ರೀರಾಮನೇ, ಮಾಂ–ನನ್ನನ್ನು, ಅವಟೇ–ಗುಣಿಯಲ್ಲಿ. ಪ್ರಕ್ಷಿಪ್ಯ–ಇರಿಸಿ, ಕುಶಲೀ–ಕ್ಷೇಮವಂತನಾಗಿ, ವ್ರಜ–ಹೊರಟುಹೋಗು, ಗತಸತ್ತ್ವಾನಾಂ–ಗತವಾದ ಪ್ರಾಣಗಳುಳ್ಳ, ರಾಕ್ಷಸಾಂ–ರಾಕ್ಷಸರಿಗೆ, ಏಷಃ–ಈ ಗುಣಿಯು, ಸನಾತನೋಧರ್ಮಃ–ಅನಾದಿಸಿದ್ಧವಾದ ಧರ್ಮವು, ಯೇ–ಯಾರು, ಅವಟೇ–ಗುಣಿಯಲ್ಲಿ. ನಿಧೀಯಂತೇ–ಇರಿಸಲ್ಪಡುತ್ತಾರೆಯೋ, ತೇಷಾಂ–ಅವರಿಗೆ, ಲೋಕಾಃ–ಲೋಕಗಳು, ಸನಾತನಾಃ–ಅನಾದಿಸಿದ್ಧಗಳು, ಸ್ಯುಃ–ಆಗುವವು ||೨೦|| ಏವಂ–ಈಪರಿಯಾಗಿ, ಮಹಾಬಲಃ–ಬಹಳ ಸಾಮರ್ಥ್ಯವಂತನಾದ, ವಿರಾಧಃ–ವಿರಾಧನು, ಕಾಕುತ್ಸ್ಥಂ–ಶ್ರೀರಾಮನಂಕುರಿತು, ಉಕ್ತ್ವಾ–ಹೇಳಿ, ಶರಪೀಡಿತಃ–ಬಾಣದಿಂ ಪೀಡಿತನಾಗಿ. ನ್ಯಸ್ತದೇಹಃ–ಬಿಡಲ್ಪಟ್ಟ ಶರೀರವುಳ್ಳವನಾಗಿ, ಸ್ವರ್ಗಸಂಪ್ರಾಪ್ತಃ–ಸ್ವರ್ಗವನ್ನು ಹೊಂದುವದಕ್ಕೆ ಉಪಕ್ರಮಿಸಿದವನು. ಬಭೂವ–ಆದನು ||೨೧|| ರಾಘವಃ–ಶ್ರೀರಾಮನು, ತದ್ವಾಕ್ಯಂ–ಆ ಮಾತನ್ನು, ಶ್ರುತ್ವಾ–ಕೇಳಿ, ಲಕ್ಷ್ಮಣಂ–ಲಕ್ಷ್ಮಣನಂಕುರಿತು. ವ್ಯಾದಿದೇಶಹ–ಆಜ್ಞಾಪಿಸಿದನು ||೨೨|| ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಅಸ್ಮಿನ್ವನೇ–ಈ ವನದಲ್ಲಿ. ರೌದ್ರಕರ್ಮಣಃ–ಕ್ರೂರವ್ಯಾಪಾರಿಯಾದ, ಕುಂಜರಸ್ಯೇವ–ಆನೆಯಂತೆಲೇ, ರೌದ್ರಸ್ಯ–ಭಯಂಕರನಾದ, ಅಸ್ಯರಾಕ್ಷಸಸ್ಯ–ಈ ರಾಕ್ಷಸನಿಗೆ, ಸುಮಹತ್–ದೊಡ್ಡದಾದ, ಶ್ವಭ್ರಂ–ಗುಣಿಯು, ಖನ್ಯತಾಂ–ಅಗಿಯಲ್ಪಡಲೀ, ರಾಮಃ–ಶ್ರೀರಾಮನು. ಲಕ್ಷ್ಮಣಂ–ಲಕ್ಷ್ಮಣನಂಕುರಿತು. ಪ್ರದರಃ–ಗುಣಿಯು, ಖನ್ಯತಾಮಿತಿ–ಅಗಿಯಲ್ಪಡಲೀ ಎಂದು, ಉಕ್ತ್ವಾ–ಹೇಳಿ, ಪಾದೇನ–ಕಾಲಿನಿಂದ, ವಿರಾಧಂ–ವಿರಾಧನನ್ನು, ಕಂಠೇ–ಕೊರಳಲ್ಲಿ. ಆಕ್ರಮ್ಯ–ಅಮಿಕಿಕೊಂಡು. ತಸ್ಥೌ–ನಿಂತನು ||೨೪|| ತತಃ–ಬಳಿಕ. ಲಕ್ಷ್ಮಣಃ–ಲಕ್ಷ್ಮಣನು, ಖನಿತ್ರಂ–ಗುದ್ದಲಿಯನ್ನು, ಆದಾಯ–ತೆಗೆದುಕೊಂಡು, ಮಹಾತ್ಮನಃ–ಮಹಾಶರೀರವುಳ್ಳ, ತಸ್ಯವಿರಾಧಸ್ಯ–ಆ ವಿರಾಧನ, ಪಾರ್ಶ್ವತಃ–ಮಗ್ಗುಲಲ್ಲಿ, ಉತ್ತಮಂ–ಉತ್ತಮವಾದ. ಶ್ವಭ್ರಂ–ಗುಣಿಯನ್ನು, ಅಖನತ್–ಅಗಿದನು ||೨೫|| ಮುಕ್ತಕಂಠಂ–ಮುಕ್ತ–ಬಿಡಲ್ಪಟ್ಟ, ಕಂಠಂ–ಕೊರಳುಳ್ಳ, ಶಂಕುಕರ್ಣಂ–ಗಾರ್ದಭದ ಕಿವಿಯಂತೆ ಕಿವಿಯುಳ್ಳ, ಮಹಾಸ್ವನಂ–ದೊಡ್ಡ ಧ್ವನಿಯುಳ್ಳದ್ದಂತೆ, ನದಂತಂ–ಕೂಗುತ್ತಿರುವ, ಭೈರವಸ್ವನಂ–ಭಯಂಕರವಾದ ಧ್ವನಿಯುಳ್ಳ ವಿರಾಧಂ–ವಿರಾಧನನ್ನು, ನಿಷ್ಪಿಷ್ಯ–ಅರದು, ಶ್ವಭ್ರೇ–ಗುಣಿಯಲ್ಲಿ. ಪ್ರಾಕ್ಷಿಪತ್–ಎತ್ತಿ ಹಾಕಿದನು. (ನಿಕ್ಷಿಪ್ಯೇತಿಪಾಠೇ–ನಿಕ್ಷಿಪ್ಯ–ಕದಲಿಸಿ ಪ್ರಾಕ್ಷಿಪತ್–ಕೆಡಹಿದನು) ||೨೬|| ಆಶುವಿಕ್ರಮೌ–ಜಾಗ್ರತೆಯಾದ ಪರಾಕ್ರಮಗಳುಳ್ಳ, ಸಂಯತಿ–ಕಾಳಗದಲ್ಲಿ, ಸ್ಥಿರೌ–ಸ್ಥಿರಚಿತ್ತರಾದ, ಉಭೌ–ಇಬ್ಬರಾದ. ರಾಮಲಕ್ಷ್ಮಣೌ–ರಾಮಲಕ್ಷ್ಮಣರು. ಆಹವೇ–ಕಾಳಗದಲ್ಲಿ. ನಿರ್ಜಿತಂ–ಜಯಿಸಲ್ಪಟ್ಟ, ನದಂತಂ–ಘರ್ಜಿಸುತ್ತಿರುವ, ಭಯಾವಹಂ–ಭಯಂಕರನಾದ, ತಂರಾಕ್ಷಸಂ–ಆ ವಿರಾಧನನ್ನು. ಬಲೇನ–ಸಾಮರ್ಥ್ಯದಿಂದ, ಉತ್ಕ್ಷಿಪ್ಯ–ಎತ್ತಿ, ಮುದಾ–ಸಂತೋಷದಿಂದ, ಅನ್ವಿತೌ–ಕೂಡಿದ್ದವರಾಗಿ. ಚಿಕ್ಷಿಪತುಃ–ಗುಣಿಯಲ್ಲಿ ಹಾಕಿದರು ||೨೭|| ಅತ್ಯರ್ಥವಿಶಾರದೌ–ಬಹಳ ಸಮರ್ಥರಾದ, ನರರ್ಷಭೌ–ಮನುಷ್ಯಶ್ರೇಷ್ಠರಾದ, ಉಭೌ–ಇಬ್ಬರೂ, ಶಿತೇನ–ತೀಕ್ಷ್ಣವಾದ, ಶಸ್ತ್ರೇಣ–ಶಸ್ತ್ರದಿಂದ. ಮಹಾಸುರಸ್ಯ–ದೊಡ್ಡ ರಾಕ್ಷಸನಾದ, ವಿರಾಧಸ್ಯ–ವಿರಾಧನಿಗೆ, ಅವಧ್ಯತಾಂ–ವಧಿಸಲಸಾಧ್ಯತೆಯನ್ನು, ಪ್ರೇಕ್ಷ್ಯ–ಕಂಡು, ಸಮರ್ಥ್ಯ–ನಿಶ್ಚಯಿಸಿ

---

ಸೂರ್ಯಸದೃಶನಾದ ಶರಭಂಗನೆಂಬ ಮಹರ್ಷಿಯಿರುವನು; ಆತನ ಸಮೀಪಕ್ಕೆ ಗಮಿಸಿದರೆ ನಿನಗೆ ಆಶೀರ್ವಾದವಂ ಗೈಯ್ಯುವನು, ನನ್ನನ್ನು ಗುಣಿಯಲ್ಲಿ ಹೂತುಬಿಟ್ಟು ಕುಶಲವಾಗಿ ತೆರಳು, ಮೃತಪಟ್ಟ ರಾಕ್ಷಸರನ್ನ ಗುಣಿಯಲ್ಲಿ ಹೂಳಿದರೆ ಆ ರಕ್ಕಸರಿಗೆ ಸದ್ಗತಿಯುಂಟಾಗುವದೆಂದು ಶ್ರೀರಾಮನಿಗೆ ನಿರೂಪಿಸಿ; ಬಾಣಪೀಡಿತನಾಗಿ ಸ್ವರ್ಗವನ್ನೈದಿದನು ||೨೧|| ಶ್ರೀರಾಮನು ಆ ಮಾತಂ ಕೇಳಿ ಲಕ್ಷ್ಮಣನಿಗೆ ಹೇಳುವನೆಂತೆನೆ,—ಆನೆಯಂತೆ ಮಹಾ ಭಯಂಕರನಾದ ಇವನಿಗಾಗಿ ಈ ಅರಣ್ಯದಲ್ಲಿ ಗುಣಿಯನ್ನು ಅಗಿಯುವವನಾಗು, ಎಂದು ನುಡಿದು ಆ ರಕ್ಕಸನ ಕೊರಳಲ್ಲಿ ಘಟ್ಟಿಯಾಗಿ ಕಾಲನ್ನೂರಿ ನಿಂತುಕೊಂಡನು ||೨೪|| ಬಳಿಕ ಲಕ್ಷ್ಮಣನು ಗುದ್ದಲಿಯಂ ತೆಗೆದುಕೊಂಡು ದೊಡ್ಡ ಶರೀರವುಳ್ಳ ಆ ವಿರಾಧನ ಪಕ್ಕದಲ್ಲಿ ಗುಣಿಯನ್ನು ಮಾಡಿದವನಾಗಲು ಶ್ರೀರಾಮನು ಆ ಕೊರಳನ್ನು ಬಿಟ್ಟನು, ಕತ್ತೆಯ ಕಿವಿಯಂತೆ ಕಿವಿಗಳುಳ್ಳ ಮತ್ತು ಮಹಾ ಧ್ವನಿಯುಳ್ಳಂತೆ ಕೂಗುವ ಆ ವಿರಾಧನನ್ನು ಜಯಿಸಿ

ರ್ಥ್ಯಶಾಸ್ತ್ರಾರ್ಥವಿಶಾರದಾವುಭೌಬಿಲೇವಿರಾಧಸ್ಯವಧಂಪ್ರಚಕ್ರತುಃ ।೨೮॥ ಸ್ವಯಂವಿರಾಧೇನಹಿಮೃತ್ಯುರಾತ್ಮನಃ
ಪ್ರಸಹ್ಯರಾಮೇಣವಧಾರ್ಥಮೀಪ್ಸಿತಃ । ನಿವೇದಿತಃಕಾನನಚಾರಿಣಾಸ್ವಯಂನಮೇವಧಃಶಸ್ತ್ರಕೃತೋಭವೇದಿತಿ ॥೨೯॥
ತದೇವರಾಮೇಣನಿಶಮ್ಯಭಾಷಿತಂಕೃತಾಮತಿಸ್ತಸ್ಯಬಿಲಪ್ರವೇಶನೇ । ಬಿಲಂಚರಾಮೇಣಬಲೇನರಕ್ಷಸಾಪ್ರವೇಶ್ಯಮಾನೇನವ
ನಂವಿನಾದಿತಂ ॥೩೦॥ ಪ್ರಹೃಷ್ಟರೂಪಾವಿವರಾಮಲಕ್ಷ್ಮಣೌವಿರಾಧಮುರ್ವ್ಯಾಂಪ್ರದರೇನಿಹತ್ಯತೌ । ನನಂದತುರ್ವೀ
ತಭಯೌಮಹಾವನೇಶಿಲಾಭಿರಂತರ್ದಧತುಶ್ಚರಾಕ್ಷಸಂ ॥೩೧॥ ತತಸ್ತುತೌಕಾಂಚನಚಿತ್ರಕಾರ್ಮುಕೌನಿಹತ್ಯರ
ಕ್ಷಃಪರಿಗೃಹ್ಯಮೈಥಿಲೀಂ । ವಿಜಹ್ರತುಸ್ತೌಮುದಿತೌಮಹಾವನೇದಿವಿಸ್ಥಿತೌಚಂದ್ರದಿವಾಕರಾವಿವ ॥೩೨॥**—

—**ಇತಿಶ್ರೀಮದರಣ್ಯಕಾಂಡೇ ಚತುರ್ಥಸ್ಸರ್ಗಃ॥**—

ಹತ್ವಾತುತಂಭೀಮಬಲಂವಿರಾಧಂರಾಕ್ಷಸಂವನೇ । ತತಸ್ಸೀತಾಂಪರಿಷ್ವಜ್ಯಸಮಾಶ್ವಾಸ್ಯಚವೀರ್ಯವಾನ್ ॥ ಅಬ್ರ
ವೀಲ್ಲಕ್ಷ್ಮಣಂರಾಮೋಭ್ರಾತರಂದೀಪ್ತತೇಜಸಂ ।೧॥ ಕಷ್ಟಂವನಮಿದಂದುರ್ಗಂನಚಸ್ಮವನಗೋಚರಾಃ ॥ಅಭಿಗಚ್ಛಾ

---

ಬಿಲೇ-ಗರ್ತದಲ್ಲಿ, ವಧಂ-ಸಂಹಾರವನ್ನು, ಪ್ರಚಕ್ರತುಃ-ಮಾಡಿದರು ॥೨೮॥ ಕಾನನಚಾರಿಣಾ-ಅರಣ್ಯದಲ್ಲಿ ಸಂಚಾರಶೀಲನಾದ. ರಾಮೇಣ-ಶ್ರೀರಾಮನಿಂದ. ಆತ್ಮನಃ-ತನ್ನ, ವಧಾರ್ಥಂ-ಸಂಹಾರಾರ್ಥವಾಗಿ. ಮೇ-ತನಗೆ, ಸ್ವಯಂ-ತಾನು, ಶಸ್ತ್ರಕೃತಃ-ಶಸ್ತ್ರದಿಂ ಮಾಡಲ್ಪಟ್ಟ. ವಧಃ-ಸಂಹಾರವು, ನಭವೇತ್-ಆಗಲಾರದು, ಇತಿ-ಎಂದೇದು, ವಿರಾಧೇನ-ವಿರಾಧನಿಂದ, ನಿವೇದಿತಃ-ತಿಳಿಸಲ್ಪಟ್ಟ, ಈಪ್ಸಿತಃ-ಇಷ್ಟವಾದ. ಮೃತ್ಯುಃ-ಮೃತ್ಯುವು. ಸ್ವಯಂ-ತನ್ನಿಂದಲೇ. ಪ್ರಸಹ್ಯ-ಬಲಾತ್ಕರಿಸಿ, ನಿವೇದಿತಃ-ತಿಳಿಸಲ್ಪಟ್ಟಿತು ॥೨೯॥ ರಾಮೇಣ-ಶ್ರೀರಾಮನಿಂದ, ತದೇವಭಾಷಿತಂ-ಆ ಮಾತನ್ನು, ನಿಶಮ್ಯ-ಕೇಳಿ, ತಸ್ಯ-ಆ ವಿರಾಧನಿಗೆ, ಬಿಲಪ್ರವೇಶನೇ-ಗುಣಿಯನ್ನು ಪ್ರವೇಶಮಾಡಿಸುವಿಕೆಯಲ್ಲಿ, ಮತಿಃ-ಬುದ್ಧಿಯು. ಕೃತಾ-ಮಾಡಲ್ಪಟ್ಟಿತು. ರಾಮೇಣ-ಶ್ರೀರಾಮನಿಂದ, ಬಲೇನ-ಸಾಮರ್ಥ್ಯದಿಂದ, ಬಿಲಂ-ಗರ್ತವನ್ನು. ಪ್ರವೇಶ್ಯಮಾನೇನ-ಪ್ರವೇಶಿಸಲ್ಪಡುತ್ತಿರುವ, ರಕ್ಷಸಾ-ವಿರಾಧನಿಂದ. ವನಂ-ಅರಣ್ಯವು, ವಿನಾದಿತಂ-ಧ್ವನಿಗೊಳಿಸಲ್ಪಟ್ಟಿತು ॥೩೦॥ ತೌ-ರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರಿಬ್ಬರು, ಉರ್ವ್ಯಾಃ-ಭೂಮಿಯ, ಪ್ರದರೇ-ಗರ್ತದಲ್ಲಿ, ವಿರಾಧಂ-ವಿರಾಧನನ್ನು ನಿಹತ್ಯ-ಹೊಡೆದು. ಪ್ರಹೃಷ್ಟರೂಪಾವಿವ-ಸಂತೋಷಗೊಂಡಾಕಾರವುಳ್ಳವರಂತೆ. ಮಹಾವನೇ-ಮಹದರಣ್ಯದಲ್ಲಿ, ವೀತಭಯೌ-ಹೋದಂಥಾ ಭಯವುಳ್ಳವರಾಗಿ, ಶಿಲಾಭಿಃ-ಪಾಷಾಣಗಳಿಂದ, ರಾಕ್ಷಸಂ-ರಾಕ್ಷಸನನ್ನು, ಅಂತರ್ದಧತುಃ-ಆಚ್ಛಾದನೆಮಾಡಿದರು, ನನಂದತುಶ್ಚ-ಸಂತೋಷಪಟ್ಟರು ॥೩೧॥ ತತಃ-ಬಳಿಕ, ಕಾಂಚನಚಿತ್ರಕಾರ್ಮುಕೌ-ಚಿನ್ನದವಿಚಿತ್ರವಾದ ಆಶ್ಚರ್ಯಕರವಾದ ಬಿಲ್ಲುಗಳುಳ್ಳ, ತೌ-ಪ್ರಸಿದ್ಧರಾದ, ತೌ-ಆ ರಾಮಲಕ್ಷ್ಮಣರು. ರಕ್ಷಃ-ವಿರಾಧನೆಂಬ ರಾಕ್ಷಸನನ್ನು, ನಿಹತ್ಯ-ಸಂಹಾರಮಾಡಿ, ಮೈಥಿಲೀಂ-ಸೀತಾದೇವಿಯನ್ನು, ಪರಿಗೃಹ್ಯ-ಕರೆದುಕೊಂಡು, ದಿವಿ-ಅಂತರಿಕ್ಷದಲ್ಲಿ, ಸ್ಥಿತೌ-ಇರುತ್ತಿರುವ, ಚಂದ್ರದಿವಾಕರಾವಿವ-ಚಂದ್ರಸೂರ್ಯರಂತೆ, ಮಹಾವನೇ-ದೊಡ್ಡದಾದ ಅರಣ್ಯದಲ್ಲಿ, ಮುದಿತೌ-ಸಂತೋಷಗೊಂಡವರಾಗಿ, ವಿಜಹ್ರತುಃ-ವಿಹಾರಮಾಡಿದರು ॥೩೨॥ —*ಇತ್ಯರಣ್ಯಕಾಂಡೇ-ಚತುರ್ಥಸ್ಸರ್ಗಃ*—

ತತಃ-ಬಳಿಕ, ವೀರ್ಯವಾನ್-ಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ವನೇ-ಅರಣ್ಯದಲ್ಲಿ, ಭೀಮಬಲಂ-ಭಯಂಕರವಾದ ಸಾಮರ್ಥ್ಯವುಳ್ಳ, ರಾಕ್ಷಸಂ-ರಕ್ಕಸನಾದ, ತಂವಿರಾಧಂ-ಆ ವಿರಾಧನನ್ನು. ಹತ್ವಾ-ಕೊಂದು, ಸೀತಾಂ-ಸೀತಾದೇವಿಯನ್ನು. ಪರಿಷ್ವಜ್ಯ-ಅಪ್ಪಿಕೊಂಡು, ಸಮಾಶ್ವಾಸ್ಯಚ-ಸಮಾಧಾನಗೊಳಿಸಿ, ದೀಪ್ತತೇಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, ಭ್ರಾತರಂ-ತಮ್ಮನಾದ, ಲಕ್ಷ್ಮಣಂ-ಲಕ್ಷ್ಮಣನಂಕುರಿತು ಅಬ್ರವೀತ್-ನುಡಿದನು ॥೧॥ ಇದಂವನಂ-ಈ ವನವು, ದುರ್ಗಂ-ಪ್ರವೇಶಿಸಲಸಾಧ್ಯವಾದ್ದು, ಕಷ್ಟಂ-ಕಷ್ಟಕರವಾದ್ದು, ವಯಂ-ನಾವುಗಳು, ವನಗೋಚರಾಃ-ವನದಲ್ಲೇ ವಾಸಮಾಡುವರು, ನಸ್ಮ-ಅಲ್ಲವಷ್ಟೆ, ಶೀಘ್ರಂ-ಜಾಗ್ರತೆಯಾಗಿ, ಶರಭಂಗಂ-ಶರಭಂಗನೆಂಬ, ತಪೋಧನಂ-ಮುಷಿಯನ್ನುಕುರಿತು, ಅಭಿ

---

ಸಂತೋಷದಿಂದ ಗುಣಿಯಲ್ಲಿ ಹೂಣಿ ಮೃತನಾಗುವಂತೆ ಮಾಡಿದರು ।೨೮॥ ವನಸಂಚಾರಶೀಲನಾದ ಶ್ರೀರಾಮನಿಂದ ತನಗೆ ಸಂಹಾರವುಂಟಾಗುವದಕ್ಕಾಗಿ ಶಸ್ತ್ರದಿಂದ ವಧೆಯುಂಟಾಗದೆಂದು ಶ್ರೀರಾಮನಿಗೆಪೇಳಿ ಮೃತ್ಯುವನ್ನು ತನಗೆ ತಾನೇ (ಆ ರಕ್ಕಸನು) ತಂದುಕೊಂಡನು ।೨೯। ಆ ವಾಕ್ಯವನ್ನು ಶ್ರೀರಾಮನುಕೇಳಿಅದರಂತೆಯೇ ಮಾಡಿದನು, ಆಗರ್ತದಲ್ಲಿ ಹೂಣುವಾಗ ಆ ರಕ್ಕಸನ ಧ್ವನಿಯಿಂದ ಅರಣ್ಯವೆಲ್ಲಾ ಪ್ರತಿಧ್ವನಿಕೊಡುವಂತೆ ಯಿತ್ತು ।೩೦॥ ಆ ಅಣ್ಣತಮ್ಮಂದಿರೀರ್ವರೂ ಭೂಗರ್ತದಲ್ಲಿ ಆ ವಿರಾಧನಂ ಹಾಕಿ ಸಂತೋಷದಿಂದ ನಿರ್ಭೀತರಾಗಿ ಕಲ್ಲುಗಳಿಂದ ಅವನನ್ನು ಮುಚ್ಚಿ ನಂತರ ಸೂರ್ಯಚಂದ್ರರಂತೆ ಬೆಳಗುತ್ತಿದ್ದರು। -*೪ನೆಯಸರ್ಗಂಮುಗಿದುದು*-

ಪರಾಕ್ರಮಶಾಲಿಯಾದ ಶ್ರೀರಾಮನು ಆ ವನದಲ್ಲಿ ಭಯಂಕರವಾದ ಬಲವುಳ್ಳ ಆ ವಿರಾಧನಂ ಕೊಂದ ಬಳಿಕ, ಸೀತಾದೇವಿಯನ್ನಪ್ಪಿಕೊಂಡು, ಆಕೆಯಂ ಸಮಾಧಾನಗೊಳಿಸಿ, ಹೊಳೆವಬೆಳಕುಳ್ಳ ಲಕ್ಷ್ಮಣನಂ ಕುರಿತಿಂತೆಂದನು, ಎಲೈ ತಮ್ಮನೇ! ಗಮಿಸಲಸಾಧ್ಯವಾದ ಈ ವನವಂ ಪ್ರವೇಶಿಸುವದು ಬಹು ಕಷ್ಟವು; ನಾವು ವನದಲ್ಲಿ (ಎಂದಿಗ್ನೂ) ತಿರುಗಿದವರಲ್ಲ, ತಪೋಧನನಾಗುಳ್ಳ ಶರಭಂಗಮುನಿಯ ಆಶ್ರಮಕ್ಕೆ ತ್ವರೆಯಾಗಿ ಪೋಗುವಾಣೆಂದು

ಮಹರ್ಷೇಶ್ಶರಭಂಗಂ ತಪೋಧನಂ ॥೨॥ ಆಶ್ರಮಂ ಶರಭಂಗಸ್ಯ ರಾಘವೋಭಿಜಗಾಮಹ । ತಸ್ಯದೇವಪ್ರಭಾವಸ್ಯ ತಪಸಾಭಾವಿತಾತ್ಮನಃ ॥೩॥ ಸಮೀಪೇಶರಭಂಗಸ್ಯದದರ್ಶಮಹದದ್ಭುತಂ । ವಿಭ್ರಾಜಮಾನಂವಪುಷಾಸೂರ್ಯವೈಶ್ವಾನರೋಪಮಂ ॥೪॥ ಅವರುಹ್ಯರಥೋತ್ಸಂಗಾದಾಕಾಶೇವಿಬುಧಾನುಗಂ । ಅಸಂಸ್ಪೃಶಂತಂವಸುಧಾಂದದರ್ಶವಿಬುಧೇಶ್ವರಂ ॥೫॥ ಸುಪ್ರಭಾಭರಣಂದೇವಂವಿರಜೋಂಬರಧಾರಿಣಂ । ತದ್ವಿಧೈರೇವಬಹುಭಿಃಪೂಜ್ಯಮಾನಂಮಹಾತ್ಮಭಿಃ ॥೬॥ ಹರಿಭಿರ್ವಾಜಿಭಿರ್ಯುಕ್ತಮಂತರಿಕ್ಷಗತಂರಥಂ । ದದರ್ಶಾದೂರತಸ್ತಸ್ಯತರುಣಾದಿತ್ಯಸನ್ನಿಭಂ ॥೭॥ ಪಾಂಡುರಾಭ್ರಘನಪ್ರಖ್ಯಂಚಂದ್ರಮಂಡಲಸನ್ನಿಭಂ । ಅಪಶ್ಯದ್ವಿಮಲಂಛತ್ರಂಚಿತ್ರಮಾಲ್ಯೋಪಶೋಭಿತಂ ॥೮॥ ಚಾಮರವ್ಯಜನೇಚಾಗ್ರ್ಯೇರುಕ್ಮದಂಡೇಮಹಾಧನೇ । ಗೃಹೀತೇವರನಾರೀಭ್ಯಾಂಧೂಯಮಾನೇಚಮೂರ್ಧನಿ ॥೯॥ ಗಂಧರ್ವಾಮರಸಿದ್ಧಾಶ್ಚಬಹವಃಪರಮರ್ಷಯಃ । ಅಂತರಿಕ್ಷಗತಂದೇವಂವಾಗ್ಭಿರಗ್ರ್ಯಾಭಿರೀಡಿರೇ ॥೧೦॥ ಸಹಸಂಭಾಷಮಾಣೇತು

---

ಗತ್ವಾ ವ. ಹೆ—ಹೋಗೋಣ ॥೨॥ ॥ ರಾಘವಃ—ಶ್ರೀರಾಮನು, ದೇವಪ್ರಭಾವಸ್ಯ—ದೇವತೆಗಳಿಗೆ ಸಮಾನವಾದ ಪ್ರಭಾವವುಳ್ಳ, ತಪಸಾ—ತಪಸ್ಸಿನಿಂದ, ಭಾವಿತಾತ್ಮನಃ—ಸಾಕ್ಷಾತ್ಕಾರಮಾಡಿಕೊಳ್ಳಲ್ಪಟ್ಟ ಪರಬ್ರಹ್ಮಸ್ವರೂಪವುಳ್ಳ, ತಸ್ಯ—ಆ ಪ್ರಸಿದ್ಧನಾದ, ಶರಭಂಗಸ್ಯ—ಶರಭಂಗ ಋಷಿಯ, ಆಶ್ರಮಂ—ಪರ್ಣಶಾಲೆಯನ್ನು ಕುರಿತು, ಅಭಿಜಗಾಮಹ—ತೆರಳಿದರು ॥೩॥ ॥ ಶರಭಂಗಸ್ಯ—ಶರಭಂಗಋಷಿಯ. ಸಮೀಪೇ—ಸಮೀಪದಲ್ಲಿ, ಮಹದದ್ಭುತಂ—ಮಹದಾಶ್ಚರ್ಯವನ್ನು ದದರ್ಶ—ಕಂಡನು, ಆಕಾಶೇ—ಅಂತರಿಕ್ಷದಲ್ಲಿ, ರಥೋತ್ಸಂಗಾತ್—ರಥದಸಮೀಪದಿಶೆಯಿಂದ, ಅವರುಹ್ಯ—ಇಳಿದು, ವಿಬುಧಾನುಗಂ—ದೇವತೆಗಳೇ ಸೇವಕರಾಗುಳ್ಳ, ವಸುಧಾಂ—ನೆಲವನ್ನು. ಅಸಂಸ್ಪೃಶಂತಂ—ಸ್ಪರ್ಶಮಾಡದಿರುವ, ವಪುಷಾ—ಶರೀರದಿಂದ. ವಿಭ್ರಾಜಮಾನಂ—ಹೊಳೆಯುತ್ತಿರುವ, ಸೂರ್ಯವೈಶ್ವಾನರೋಪಮಂ—ಸೂರ್ಯನಿಗೂ ಅಗ್ನಿಗೂ ಸಮಾನನಾದ, ಸುಪ್ರಭಾಭರಣಂ—ಮಹಾಪ್ರಕಾಶವಾದ ಒಡವೆಗಳುಳ್ಳ, ದೇವಂ—ದೇವತಾಸ್ವರೂಪನಾದ, ವಿರಜೋಂಬರಧಾರಿಣಂ—ಶುಭ್ರವಾದ ದುಕೂಲಗಳನ್ನು ಧರಿಸಿರುವ, ತದ್ವಿಧೈರೇವ—ಅಂಥಾವರೇ ಆದ, ಬಹುಭಿಃ—ಅನೇಕರಾದ. ಮಹಾತ್ಮಭಿಃ—ಮಹಾತ್ಮರಾದ ದೇವತೆಗಳಿಂದ, ಪೂಜ್ಯಮಾನಂ—ಬಹುಮಾನಿಸಲ್ಪಟ್ಟ, ವಿಬುಧೇಶ್ವರಂ—ದೇವೇಂದ್ರನನ್ನು, ದದರ್ಶ—ಕಂಡನು ॥೬॥ ಹರಿಭಿಃ—ಕೊಂಚಕಪ್ಪುಬಣ್ಣವುಳ್ಳ, ವಾಜಿಭಿಃ—ಕುದುರೆಗಳಿಂದ, ಯುಕ್ತಂ—ಕೂಡಿಕೊಂಡಿರುವ, ಅಂತರಿಕ್ಷಗತಂ—ಅಂತರಿಕ್ಷದಲ್ಲಿ ಇರುತ್ತಿರುವ, ತರುಣಾದಿತ್ಯಸನ್ನಿಭಂ—ನೂತನವಾದ ಸೂರ್ಯನಿಗೆ ಸಮಾನನಾದ, ತಸ್ಯ—ಆ ದೇವೇಂದ್ರನ, ರಥಂ—ತೇರನ್ನು. ಅದೂರತಃ—ಸಮೀಪದಲ್ಲಿ. ದದರ್ಶಹ—ಕಂಡನು ॥೭॥ ॥ ಪಾಂಡುರಾಭ್ರಘನಪ್ರಖ್ಯಂ—ಬೆಳ್ಳಗಿರುವ ಮೇಘದಂತೆ ನಿಬಿಡವಾದ ಕಾಂತಿಯುಳ್ಳ, ಚಂದ್ರಮಂಡಲಸನ್ನಿಭಂ—ಚಂದ್ರಮಂಡಲಕ್ಕೆ ಸಮಾನವಾದ, ವಿಮಲಂ—ನಿರ್ಮಲವಾದ, ಚಿತ್ರಮಾಲ್ಯೋಪಶೋಭಿತಂ—ನಾನಾಬಣ್ಣಗಳಾದ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟ ಛತ್ರಂ—ಛತ್ರವನ್ನು, ಅಪಶ್ಯತ್—ಕಂಡನು ॥೮॥ ॥ ರುಕ್ಮದಂಡೇ—ಭಂಗಾರ ವಿಕಾರವಾದ ಹಿಡಿಗಳುಳ್ಳ, ಮಹಾಧನೇ—ಬಹುದ್ರವ್ಯಸಾಧ್ಯವಾದ, ವರನಾರೀಭ್ಯಾಂ—ಶ್ರೇಷ್ಠರಾದ ಹೆಂಗಸರಿಬ್ಬರಿಂದ, ಗೃಹೀತೇ—ಗ್ರಹಿಸಲ್ಪಟ್ಟ, ಮೂರ್ಧನಿ—ದೇವೇಂದ್ರನ ಮಂಡೆಯಲ್ಲಿ, ಧೂಯಮಾನೇ—ಬೀಸಲ್ಪಟ್ಟ, ಅಗ್ರ್ಯೇ—ಶ್ರೇಷ್ಠಗಳಾದ. ಚಾಮರವ್ಯಜನೇ—ಬೀಸಣಿಗೆಗಳಾಗಿರುವ ಚಾಮರಗಳನ್ನು, ದದರ್ಶ—ಕಂಡನು ॥೯॥ ॥ ಗಂಧರ್ವಾಮರಸಿದ್ಧಾಶ್ಚ—ಗಂಧರ್ವರೂ ದೇವತೆಗಳೂ ಸಿದ್ಧರೂ, ಬಹವಃ—ಅನೇಕರಾದ. ಪರಮರ್ಷಯಶ್ಚ—ಋಷಿಗಳೂ, ಅಂತರಿಕ್ಷಗತಂ—ಭೂಸ್ಪರ್ಶಮಾಡದೆ ಅಂತರಾಳದಲ್ಲಿ ನಿಂತಿರುವ, ದೇವಂ—ದೇವೇಂದ್ರನನ್ನು, ಅಗ್ರ್ಯಾಭಿಃ—ಶ್ರೇಷ್ಠಗಳಾದ, ವಾಗ್ಭಿಃ—ಮಾತುಗಳಿಂದ, ಈಡಿರೇ—ಸ್ತುತಿಸಿದರು ॥೧೦॥ ವಾಸವೇ—ದೇವೇಂದ್ರನು. ಶರಭಂಗೇಣಸಹ—ಶರಭಂಗನೊಡನೆ, ಸಂಭಾಷಮಾಣೇತು—ಮಾತನಾಡುತ್ತಿ

---

ನಿರೂಪಿಸಿ, ಮಹಾತ್ಮನಾದ ದೇವಸದೃಶನಾದ ಮತ್ತು ತಪೋಧನದಿಂದ ಬ್ರಹ್ಮಸಾಕ್ಷಾತ್ಕಾರವಂ ಹೊಂದಿದ ಆ ಮಹರ್ಷಿಯ ಆಶ್ರಮಕ್ಕೆ ಸಾರೆ, ಆ ಮಹಾತ್ಮನ ಸಮೀಪದಲ್ಲಿ ಮಹದಾಶ್ಚರ್ಯಕರವಾಗಿ ಹೊಳೆವ ಮತ್ತು ಸೂರ್ಯನಂತೆಯೂ ಅಗ್ನಿಯಂತೆಯೂ ಬೆಳಗುವ ವಸ್ತುವಂ ಕಂಡನು ॥೪॥ ಸ್ವಲ್ಪ ಸಮೀಪಕ್ಕೆ ಗಮಿಸಿದ ಬಳಿಕ, ರಥದಿಂದಿಳಿದು ಭೂಸ್ಪರ್ಶಯಿಲ್ಲದೆ ಗಗನದಲ್ಲಿ ದೇವತೆಗಳಿಂದ ಪರಿತನಾಗಿಯೂ, ಬಹು ಬೆಳಗುವ ಒಡವೆಗಳುಳ್ಳವನಾಗಿಯೂ, ದೇದೀಪ್ಯಮಾನವಾಗಿಯೂ, ಶುಭ್ರವಾದ ವಸ್ತ್ರಗಳನ್ನುಟ್ಟವನಾಗಿಯೂ, ಅದೇ ರೀತಿಯಾಗಿರುವ ಅನೇಕಮಹಾತ್ಮರಿಂದ ಪೂಜಿಸಲ್ಪಡುವನಾಗಿಯೂ ಇರುವ ಆ ಇಂದ್ರನಂ ಕಂಡಬಳಿಕ, ಆತನ ಸಮೀಪದಲ್ಲಿ ಸೂರ್ಯನಂತೆ ಬೆಳಗುವುದಾಗಿಯೂ, ಶ್ಯಾಮಲವರ್ಣವಾದ ಕುದುರೆಗಳುಳ್ಳದ್ದಾಗಿಯೂ, ಇರುವ ಅಂತರಿಕ್ಷಗತವಾದ ತೇರನ್ನೂ, ಬಿಳೀ ಮೇಘಗಳಿಗೂ, ಚಂದಿರಮಂಡಲಕ್ಕೂ ಸಮಾನವಾಗಿಯೂ, ವಿಚಿತ್ರವಾದ ಪೂದಂಡೆಗಳಿಂದ ಹೊಳೆಯುವದಾಗಿಯೂ, ಶುಭ್ರವಾಗಿಯೂ ಇರುವ ಶ್ವೇತಚ್ಛತ್ರವನ್ನೂ, ಸುವರ್ಣವಿಕಾರವಾದ ದಂಡವುಳ್ಳದ್ದಾಗಿಯೂ, ಬಹು ಬೆಲೆಯುಳ್ಳದ್ದಾಗಿಯೂ, ಉತ್ತಮಾಂಗನೆಯರಿಂದ ಗ್ರಹಿಸಲ್ಪಟ್ಟು ಮಂಡೆಯೊಳು ಬೀಸಲ್ಪಡುವುದಾಗಿಯೂ ಇರುವ ಚಾರಿಗಳನ್ನೂ, ಸಹ ಕಂಡನು ॥೯॥ [ಆ ವೇಳೆಯಲ್ಲಿ] ಗಂಧರ್ವರು ಸಿದ್ಧಪುರುಷರು, ದೇವತೆಗಳು, ಪರಮರ್ಷಿಗಳು ಇವರೆಲ್ಲರು, ಗಗನಂಗತನಾದ ಆ ಇಂದ್ರನಂ ಪೊಗಳುತ್ತಿದ್ದರು ॥೧೦॥ ಆ ಶರಭಂಗ

ಶರಭಂಗೇಣವಾಸವೆ । ದೃಷ್ಟ್ವಾಶತಕ್ರತುಂತತ್ರರಾಮೋಲಕ್ಷ್ಮಣಮಬ್ರವೀತ್ । ರಾಮೋಥರಥಮುದ್ದಿಶ್ಯಲಕ್ಷ್ಮ ಣಾಯುಪ್ರದರ್ಶಯನ್ ॥೧೨॥ ಅರ್ಚಿಷ್ಮಂತಂಶ್ರಿಯಾಜುಷ್ಟಮದ್ಭುತಂಪಶ್ಯಲಕ್ಷ್ಮಣ। ಪ್ರತಪಂತಮಿವಾದಿತ್ಯಮಂ ತರಿಕ್ಷಗತಂರಥಂ ।೧೩। ಯೆಹಯಾಃಪುರುಹೂತಸ್ಯಪುರಾಶಕ್ರಸ್ಯನಶ್ಶ್ರುತಾಃ। ಅಂತರಿಕ್ಷಗತಾದಿವ್ಯಾಸ್ತಇಮೆಹರ ಯೊಧ್ರುವಂ ॥೧೪॥ ಇಮೆಚಪುರುಷವ್ಯಾಘ್ರಾಯೆತಿಷ್ಠಂತ್ಯಭಿತೋರಥಂ । ಶತಂಶತಂಕುಂಡಲಿನೊಯುವಾನಃಖಡ್ಗ ಪಾಣಯಃ ॥ ವಿಸ್ತೀರ್ಣವಿಪುಲೋರಸ್ಕಾಃಪರಿಘಾಯತಬಾಹವಃ । ಶೋಣಾಂಶ್ಕವಸನಾಸ್ಸರ್ವೆವ್ಯಾಘ್ರಾಇವದುರಾಸ ದಾಃ ॥ ಉರೋದೆಶೆಷುಸರ್ವೆಷಾಂಹಾರಾಜ್ವಲನಸನ್ನಿಭಾಃ ।ರೂಪಂಬಿಭ್ರತಿಸೌಮಿತ್ರೆಪಂಚವಿಂಶತಿವಾರ್ಷಿಕಂ ॥೧೫॥ ಏತದ್ಧಿಕಿಲದೆವಾನಾಂವಯೊಭವತಿನಿತ್ಯದಾ । ಯಥೆಮೆಪುರುಷವ್ಯಾಘ್ರಾದೃಶ್ಯಂತೆಪ್ರಿಯದರ್ಶನಾಃ ॥೧೬। ಇಹೈವಸ ಹವೈದೆಹ್ಯಾಮುಹೂರ್ತಂತಿಷ್ಠಲಕ್ಷ್ಮಣ। ಯಾವಜ್ಜ್ಞಾನಾಮ್ಯಹಂವ್ಯಕ್ತಂಕಏಷಃದ್ಯುತಿಮಾನ್ರಥೆ।ತಮೆವಮುಕ್ತ್ವಾ

---

ರಶೀಕಾಗಿ, ರಾಮಃ-ಶ್ರೀರಾಮನು. ತತ್ರ-ಆ ಆಶ್ರಮದಲ್ಲಿ. ಶತಕ್ರತುಂ-ದೇವೇಂದ್ರನನ್ನು. ದೃಷ್ಟ್ವಾ-ಕಂಡು, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀತ್-ನುಡಿದನು ॥೧೧॥ ॥ ಅಥ-ಬಳಿಕ, ರಾಮಃ-ಶ್ರೀರಾಮನು, ರಥಂ-ತೇರನ್ನು, ಉದ್ದಿಶ್ಯ-ಬೆರಳಿನಿಂದ ನಿರ್ದೇಶಮಾಡಿ. ಲಕ್ಷ್ಮಣಾ ಯ-ಲಕ್ಷ್ಮಣಸ್ವಾಮಿಗೆ, ಪ್ರದರ್ಶಯನ್-ತೋರಿಸುತ್ತಿರುವನಾಗಿ ॥೧೨॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ. ಅರ್ಚಿಷ್ಮಂತಂ-ಮಹಾತೇಜಸ್ಸುಳ್ಳ, ಶ್ರಿಯಾ-ಪ್ರಭಾವಿಶೇಷದಿಂದ. ಜುಷ್ಟಂ-ವ್ಯಾಪ್ತವಾದ, ಅದ್ಭುತಂ-ಆಶ್ಚರ್ಯಕರವಾದ, ಆದಿತ್ಯಮಿವ-ಸೂರ್ಯನಂತೆ, ಪ್ರತಪಂತಂ-ಹೊಳೆಯುತ್ತಿರುವ. ಅಂತರಿಕ್ಷಗತಂ-ಅಂತರಿಕ್ಷದಲ್ಲಿರುವ, ರಥಂ-ತೇರನ್ನು, ಪಶ್ಯ-ನೋಡು ॥೧೩॥ ಪುರಾ-ಪೂರ್ವದಲ್ಲಿ, ಪುರುಹೂತಸ್ಯ-ಅನೇಕಕ್ರತುಗಳಿಂದ ಕರೆಯಲ್ಪ ಟ್ಟ. ಶಕ್ರಸ್ಯ-ದೇವೇಂದ್ರನ, ಯೆಹಯಾಃ-ಯಾವ ಕುದುರೆಗಳು, ನಃ-ನಮ್ಮುಗಳಿಂದ, ಶ್ರುತಾಃ-ಕೇಳಲ್ಪಟ್ಟಿತೆಯೋ, ಅಂತರಿಕ್ಷಗತಾಃ-ಅಂತರಿಕ್ಷವ ನ್ನು ಹೊಂದಿರುವ, ದಿವ್ಯಾಃ-ದೇವತಾಸಂಬಂಧಿಗಳಾದ, ತೆಹರಯಃ-ಆ ಕುದುರೆಗಳು, ಇಮೆ-ಇವುಗಳೇ, ಧ್ರುವಂ-ನಿಶ್ಚಯವು ॥೧೪॥ ಇಮೆ-ಈ ಕಾಣಿ ಸುತ್ತಿರುವ, ಪುರುಷವ್ಯಾಘ್ರಾಃ-ಪುರುಷಶ್ರೇಷ್ಠರಾದ. ಶತಂಶತಂ-ನೂರಾರು ಸಂಖ್ಯೆಯುಳ್ಳ. ಕುಂಡಲಿನಃ-ಕರ್ಣಕುಂಡಲಗಳನ್ನು ಧರಿಸಿರುವ, ಯು ವಾನಃ-ಯೌವನಪುರುಷರಾದ, ಖಡ್ಗಪಾಣಯಃ-ಕತ್ತಿಗಳನ್ನು ಧರಿಸಿರುವರು. ಯೆ-ಯಾರು. ರಥಂ-ಇಂದ್ರರಥದ, ಅಭಿತಃ-ಸುತ್ತುಮುತ್ತಲೂ. ತಿ ಷ್ಠಂತಿ-ಇರುತ್ತಾರೋ. ತೆ-ಅಂಥಾ. ವಿಸ್ತೀರ್ಣವಿಪುಲೋರಸ್ಕಾಃ-ವಿಸ್ತೀರ್ಣ-ವಿಶಾಲವಾದ. ವಿಪುಲ-ದೀರ್ಘವಾದ, ಉರಸ್ಕಾಃ-ವಕ್ಷಸ್ಥಳಗಳುಳ್ಳ, ಪರಿಘಾಯತಬಾಹವಃ-ಪರಿಘ-ಉಲವುಂಡಿಗೆಯಂತೆ. ಆಯತ-ದೀರ್ಘವಾದ, ಬಾಹವಃ-ಭುಜಗಳುಳ್ಳ, ಶೋಣಾಂಶ್ಕವಸನಾಃ-ಕೆಂಪಾಗಿರುವ ವಸ್ತ್ರಗ ಳುಳ್ಳ. ಸರ್ವೆ-ಸಮಸ್ತರೂ, ವ್ಯಾಘ್ರಾಇವ-ಹುಲಿಗಳಂತೆ, ದುರಾಸದಾಃ-ಹೊಂದಲಸಾಧ್ಯರು ॥ ಹೆಸೌಮಿತ್ರೆ-ಎಲೈ ಲಕ್ಷ್ಮಣನೇ, ಸರ್ವೆಷಾಂ-ಎಲ್ಲರ, ಉರೋದೆಶೆಷು-ವಕ್ಷಸ್ಥಳಗಳಲ್ಲಿ, ಜ್ವಲನಸನ್ನಿಭಾಃ-ಅಗ್ನಿಗೆ ಸಮಾನಗಳಾದ. ಹಾರಾಃ-ಕಂಠೀಸರಗಳು, ಭಾಂತಿ-ಹೊಳೆಯುತ್ತವೆ, ಪಂಚವಿಂಶತಿವಾರ್ಷಿ ಕಂ-ಇಪ್ಪತ್ತೈದುವರ್ಷವುಳ್ಳ, ರೂಪಂ-ಆಕಾರವನ್ನು. ಸರ್ವೆ-ಸಮಸ್ತರೂ, ಬಿಭ್ರತಿ-ಧರಿಸುತ್ತಾರೆ ॥೧೫॥ ಹೆಪುರುಷವ್ಯಾಘ್ರ-ಎಲೈ ಪುರುಷಶ್ರೇ ಷ್ಠನೇ, ಪ್ರಿಯದರ್ಶನಾಃ-ಕಣ್ಣಿಗಿಂಪಾದ ನೋಡುವಿಕೆಯುಳ್ಳ. ಇಮೆ-ಈ ಪುರುಷರು. ಯಥಾ-ಹ್ಯಾಗೆ, ದೃಶ್ಯಂತೆ-ಕಾಣಲ್ಪಡುತ್ತಾರೋ. ದೇವಾ ನಾಂ-ದೇವತೆಗಳಿಗೆ, ಏತದ್ವಯಃ-ಇದೇವಯಸ್ಸು, ನಿತ್ಯದಾ-ನಿರಂತರದಲ್ಲಿಯೂ, ಭವತಿಕಿಲ-ಇರುವದಷ್ಟೆ ॥೧೬॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಅಹಂ-ನಾನು, ರಥೆ-ತೇರಿನಲ್ಲಿ, ದ್ಯುತಿಮಾನ್-ಹೊಳೆಯುತ್ತಿರುವ. ಏಷಃ-ಈ ಪುರುಷನು, ಕಃ-ಯಾರೋ, ವ್ಯಕ್ತಂ-ಸ್ಪಷ್ಟವಾಗಿ. ಯಾವಜ್ಜ್ಞಾನಾ ಮಿ-ತಿಳಿದುಕೊಳ್ಳುವವರಿವಿಗು, ಇಹೈವ-ಇಲ್ಲಿಯೇ, ಮುಹೂರ್ತಂ-ಮುಹೂರ್ತಕಾಲವು,ವೈದೆಹ್ಯಾಸಹ-ಸೀತಾದೇವಿಯೊಡಗೂಡ, ತಿಷ್ಠ-ಇರು ॥೧೭॥

---

ಯುಷಿಯಸಂಗಡ ಇಂದ್ರನು ಮಾತಾಡುತ್ತಿರಲು ಆ ಪ್ರದೇಶದಲ್ಲಿ ಶ್ರೀರಾಮನು ಆ ದೇವೇಂದ್ರನಂ ಕಂಡಬಳಿಕ, ಲ ಕ್ಷ್ಮಣನಿಗೆ ಆ ತೇರನ್ನು ತೋರಿಸಿ ಇಂತೆಂದನು ।೧೨। ಎಲೈ ತಮ್ಮನೇ! ಬೆಳಗುವದಾಗಿಯೂ ಕಾಂತಿಯುಕ್ತವಾ ಗಿಯೂ, ಸೂರ್ಯನತೆರದಿ ಹೊಳೆಯುವದಾಗಿಯೂ,ಅಂತರಿಕ್ಷಗತವಾಗಿಯೂ ಇರುವರಥವಂ ನೋಡು ।೧೩। ಇಂ ದ್ರನ ರಥಾಶ್ವಗಳು ಯಾವರೀತಿಯಾಗಿರುವವೆಂದು ನಾವು ಕೇಳಿದ್ದೆವೋ, ದೇವತಾ ಸಂಬಂಧವಾದ ಅಂತರಿಕ್ಷವರ್ತಿ ಗಳಾದ ಆ ಕುದುರೆಗಳೇ ಇವುಗಳು ।೧೪। ಈ ತೇರಿನ ಸುತ್ತುಮುತ್ತಲು ಇರುವ ಈ ನೂರುಮಂದಿ ಪುರು ಷರು,ಕರ್ಣಕುಂಡಲಗಳಂ ಧರಿಸಿದವರಾಗಿಯೂ, ಯೌವನಸ್ಥರಾಗಿಯೂ, ಖಡ್ಗಗಳಂ ಪಿಡಿದವರಾಗಿಯೂ, ಅಗ ಲವಾದ ಮತ್ತೂ ಉದ್ದವಾಗಿರುವ ಎದೆಯುಳ್ಳವರಾಗಿಯೂ, ಪರಿಘಾಯುಧದಂತೆ ದೀರ್ಘವಾದ ತೋಳುಗ ಳುಳ್ಳವರಾಗಿಯೂ ಪದ್ಮರಾಗಮಣಿಯಂತೆ ಪೊಳೆವ ವಸ್ತ್ರಗಳುಳ್ಳವರಾಗಿಯೂ, ವ್ಯಾಘ್ರಂಗಳಂತೆ ಹೊಂದಲಸಾ ಧ್ಯರಾಗಿಯೂ, ಇರುವರು, ಇವರ ಎದೆಗಳಲ್ಲಿ ಹಾರಗಳು ಹೊಳೆಯುತ್ತವೆ,ಇವರು ಯಾವಾಗಲೂ ಇಪ್ಪತ್ತೈದು ವ ರುಷಗಳ ವಯಸ್ಸುಳ್ಳ ಆಕಾರವಂ ಧರಿಸುತ್ತಿರುವರು।೧೫। ಎಲೈ ಪುರುಷಶ್ರೇಷ್ಠನೇ! ಇಂಪಾಗಿಕಾಣುವಈಪುರುಷ ರು ಎಂಥಾರೂಪವುಳ್ಳವರಾಗಿರುವರೋ ಇದೇವಯಸ್ಸು ದೇವತೆಗಳು ಯಾವಾಗಲು ಯಿರುವದು ।೧೬। ಈ ರಥದ

೫

ಸೌಮಿತ್ರಿಮಿಹೈವಸ್ಥೀಯತಾಮಿತಿ ॥ ಅಭಿಚಕ್ರಾಮಕಾಕುತ್ಸ್ಥಶ್ಶರಭಂಗಾಶ್ರಮಂಪ್ರತಿ ।೨೦। ತತಸ್ಸಮಭಿಗಚ್ಛಂತಂಪ್ರೇಕ್ಷ್ಯರಾಮಂಶಚೀಪತಿಃ । ಶರಭಂಗಮನುಪ್ರಾಪ್ಯವಿವಿಕ್ತಇದಮಬ್ರವೀತ್ ।೨೧॥ ಇಹೋಪಯಾತ್ಯಸೌರಾಮೋಯಾವನ್ಮಾಂನಾಭಿಭಾಷತೆ । ನಿಷ್ಠಾಂನಯತುತಾವತ್ತುತತೋಮಾಂದ್ರಷ್ಟುಮರ್ಹತಿ ॥೨೨। ಜಿತವಂತಂಕೃತಾರ್ಥಂಚೆದ್ರಷ್ಟಾಹಮಚಿರಾದಿಮಂ । ಕರ್ಮಹ್ಯನೆನಕರ್ತವ್ಯಂಮಹದನ್ಯೈಸ್ಸುದುಷ್ಕರಂ ॥ ನಿಷ್ಪಾದಯಿತ್ವಾತತ್ಕರ್ಮತತೋಮಾಂದ್ರಷ್ಟುಮರ್ಹತಿ ॥೨೩॥ ಇತಿವಜ್ರೀತಮಾಮಂತ್ರ್ಯಮಾನಯಿತ್ವಾಚತಾಪಸಂ ॥ ರಥೆನಹರಿಯುಕ್ತೆನಯಯೌದಿವಮರಿಂದಮಃ ॥೨೪॥ ಪ್ರಯಾತೆತುಸಹಸ್ರಾಕ್ಷೆರಾಘವಸ್ಸಪರಿಚ್ಛದಂ ।ಅಗ್ನಿಹೋತ್ರಮುಪಾಸೀನಂಶರಭಂಗಮುಪಾಗಮತ್ ॥೨೫॥ ತಸ್ಯಪಾದೌಚಸಂಗೃಹ್ಯರಾಮಸ್ಸೀತಾಚಲಕ್ಷ್ಮಣಃ ॥ ನಿಷೆದುಸ್ಸಮನುಜ್ಞಾತಾಲಬ್ಧವಾಸಾನಿಮಂತ್ರಿತಾಃ ॥೨೬॥ ತತಶ್ಶಕ್ರೋಪಯಾನಂತುಪರ್ಯಪೃಚ್ಛತ್ಸರಾಘವಃ । ಶರಭಂಗಶ್ಚತತ್ಸ

---

ಇಹೈವ–ಇಲ್ಲಿಯೇ. ಸ್ಥೀಯತಾಮಿತಿ–ಇರಲ್ಪಡಲೆಂದು, ತಂ ಸೌಮಿತ್ರಿಂ–ಆ ಲಕ್ಷ್ಮಣಸ್ವಾಮಿಯನ್ನುಕುರಿತು, ಏವಂ–ಈಪರಿಯಾಗಿ, ಉಕ್ತ್ವಾ–ಹೇಳಿ, ಕಾಕುತ್ಸ್ಥಃ–ಶ್ರೀರಾಮನು, ಶರಭಂಗಾಶ್ರಮಂಪ್ರತಿ–ಶರಭಂಗಋಷಿಯ ಆಶ್ರಮವನ್ನುಕುರಿತು, ಅಭಿಚಕ್ರಾಮ–ತೆರಳಿದನು ॥೨೦॥ ತತಃ–ಬಳಿಕ, ಸಮಭಿಗಚ್ಛಂತಂ–ಬರುತ್ತಿರುವ, ರಾಮಂ–ಶ್ರೀರಾಮನನ್ನು, ಪ್ರೇಕ್ಷ್ಯ–ಕಂಡು. ಶಚೀಪತಿಃ–ದೇವೇಂದ್ರನು, ಶರಭಂಗಂ–ಶರಭಂಗಋಷಿಯನ್ನು, ಅನುಪ್ರಾಪ್ಯ–ಹೊಂದಿ. ವಿವಿಕ್ತೆ–ಏಕಾಂತದಲ್ಲಿ; ಇದಂ–ಈ ಮಾತನ್ನು, ಅಬ್ರವೀತ್–ನುಡಿದನು ॥೨೧॥ ಅಸೌರಾಮಃ–ಈ ಶ್ರೀರಾಮನು, ಇಹ–ಇಲ್ಲಿಗೆ, ಉಪಯಾತಿ–ಬರುತ್ತಾನೆ, ಯಾವತ್–ಎಷ್ಟರವರೆಗಾಗಿ. ಮಾಂ–ನನ್ನನ್ನುಕುರಿತು, ನಾಭಿಭಾಷತೆ–ಮಾತನಾಡುವದಿಲ್ಲವೋ. ತಾವತ್–ಅಷ್ಟರವರೆಗಾಗಿ, ನಿಷ್ಠಾಂ–ರಾವಣವಧರೂಪಕಾರ್ಯನಿವೃತ್ತಿಯನ್ನು. ನಯತು–ಹೊಂದಿಸಲೀ. ತತಃ–ಬಳಿಕ, ಮಾಂ–ನನ್ನನ್ನು, ದ್ರಷ್ಟುಂ–ನೋಡುವದಕ್ಕೋಸುಗ. ಅರ್ಹತಿ–ಯೋಗ್ಯನಾಗುತ್ತಾನೆ ॥೨೨॥ ಅನೆನ–ಈ ಶ್ರೀರಾಮನಿಂದ, ಮಹತ್–ದೊಡ್ಡದಾದ, ಅನ್ಯೈಃ–ಇತರರಿಂದ, ಸುದುಷ್ಕರಂ–ಮಾಡಲಸಾಧ್ಯವಾದ. ಕರ್ಮ–ರಾವಣವಧಾರೂಪವ್ಯಾಪಾರವು, ಕರ್ತವ್ಯಂಹಿ–ಮಾಡತಕ್ಕದ್ದಷ್ಟೆ. ಅಹಂ–ನಾನು, ಜಿತವಂತಂ–ಜಯಶೀಲನಾದ, ಅಚಿರಾತ್–ಜಾಗ್ರತೆಯಾಗಿ, ಕೃತಾರ್ಥಂ–ಸಿದ್ಧಪ್ರಯೋಜನವುಳ್ಳ. ಇಮಂ–ಈ ಶ್ರೀರಾಮನನ್ನು, ದ್ರಷ್ಟಾ–ನೋಡುವೆನು, ತತ್ಕರ್ಮ–ಆ ವ್ಯಾಪಾರವನ್ನು. ನಿಷ್ಪಾದಯಿತ್ವಾ–ನೆರವೇರಿಸಿ, ತತಃ–ಬಳಿಕ. ಮಾಂ–ನನ್ನನ್ನು, ದ್ರಷ್ಟುಂ–ನೋಡುವದಕ್ಕೋಸುಗ, ಅರ್ಹತಿ–ಯೋಗ್ಯನಾಗುತ್ತಾನೆ ॥೨೩॥ ಅರಿಂದಮಃ–ಶತ್ರುಸಂಹಾರಕನಾದ, ವಜ್ರೀ–ದೇವೇಂದ್ರನು, ತಂತಾಪಸಂ–ಆ ಶರಭಂಗಋಷಿಯನ್ನುಕುರಿತು, ಇತಿ–ಈಪರಿಯಾಗಿ. ಆಮಂತ್ರ್ಯ–ಆಲೋಚಿಸಿ, ಮಾನಯಿತ್ವಾಚ–ಮರ್ಯಾದೆಯನ್ನೂಮಾಡಿ, ಹರಿಯುಕ್ತೆನ–ಕುದುರೆಗಳಿಂದ ಕೂಡಿಕೊಂಡಿರುವ, ರಥೆನ–ತೇರಿನಿಂದ, ದಿವಂ–ಸ್ವರ್ಗವನ್ನುಕುರಿತು. ಯಯೌ–ತೆರಳಿದನು ॥೨೪॥ ಸಹಸ್ರಾಕ್ಷೆತು–ದೇವೇಂದ್ರನುಆದರೆ, ಪ್ರಯಾತೆಸತಿ–ಹೊರಟುಹೋಗುತ್ತಿರಲೀಕಾಗಿ, ರಾಘವಃ–ಶ್ರೀರಾಮನು, ಸಪರಿಚ್ಛದಂ–ಭಾರ್ಯಾಭ್ರಾತೃಗಳೆಂಬ ಪರಿವಾರದಿಂದಕೂಡಿದಂತೆ, ಅಗ್ನಿಹೋತ್ರಂ–ಅಗ್ನಿಹೋತ್ರವನ್ನು. ಉಪಾಸೀನಂ–ಉಪಾಸನಮಾಡುತ್ತಿರುವ, ಶರಭಂಗಂ–ಶರಭಂಗನಂಕುರಿತು, ಉಪಾಗಮತ್–ಬಂದನು ॥೨೫॥ ರಾಮಃ–ಶ್ರೀರಾಮನು, ಸೀತಾಚ–ಸೀತಾದೇವಿಯೂ. ಲಕ್ಷ್ಮಣಶ್ಚ–ಲಕ್ಷ್ಮಣನೂ, ತಸ್ಯ–ಆ ಶರಭಂಗಋಷಿಯ, ಪಾದೌ–ಚರಣಗಳನ್ನು, ಸಂಗೃಹ್ಯ–ಹಿಡಿದುಕೊಂಡು, ಲಬ್ಧವಾಸಾಃ–ಹೊಂದಲ್ಪಟ್ಟಸ್ಥಾನವುಳ್ಳವರಾಗಿ, ಸಮನುಜ್ಞಾತಾಃ–ಅಜ್ಞಾಪಿಸಲ್ಪಟ್ಟವರಾಗಿ, ನಿಮಂತ್ರಿತಾಃ–ಅತಿಥಿಸತ್ಕಾರದಿಂದ ಪೂಜಿಸಲ್ಪಟ್ಟವರಾಗಿ, ನಿಷೆದುಃ–ಕುಳಿತುಕೊಂಡರು ॥೨೬॥ ತತಃ–ಬಳಿಕ. ಸರಾಘವಃ–ಆ ಶ್ರೀರಾಮನು, ಶಕ್ರೋಪಯಾನಂತು–ದೇವೇಂದ್ರನ ಪ್ರಯಾಣವನ್ನುಕುರಿತು. ಪರ್ಯಪೃಚ್ಛತ್–ಕೇಳಿದನು, ಶರಭಂಗಶ್ಚ–ಶರಭಂಗಋಷಿಯು, ತತ್ಸರ್ವಂ–ಆ ಸಮಸ್ತವೂ

---

ಲ್ಲಿ ಬೆಳಗುವ ಪುರುಷನ್ಯಾರೋ ಸ್ಪಷ್ಟವಾಗಿ ತಿಳಿಯುವವರಿಗೂ ಸ್ವಲ್ಪಕಾಲವು ನೀನಿಲ್ಲಿಯೇ ಯಿರು, ಎಂಬದಾಗಿ ಲಕ್ಷ್ಮಣನಿಗೆ ಹೇಳಿ ಶರಭಂಗಮುನಿಯ ಆಶ್ರಮಕ್ಕೆ ಸಾರಿದನು ।೨೦। ಬಳಿಕ ದೇವೇಂದ್ರನು ಮಹರ್ಷಿಯಂ ಕಾಣಲು ಬರುತ್ತಿರುವ ಶ್ರೀರಾಮನಂ ಕಂಡು, ಆ ಮಹರ್ಷಿಗೆ ರಹಸ್ಯವಾಗಿ ನಿರೂಪಿಸುವನದೆಂತೆನೆ,— ಶ್ರೀರಾಮನಿಲ್ಲಿಗೆ ಬರುವನು ಆತನು ರಾವಣವಧ ರೂಪವಾದ ಕಾರ್ಯವಂ ಗೈದಬಳಿಕನನ್ನನ್ನು ನೋಡಲೀ, ಅದುವರಿವಿಗೂನನ್ನ ಸಂಗಡ ಮಾತಾಡಲಾಗದು, ಈ ರಘುನಂದನನು ಇತರರು ಮಾಡಲಸಾಧ್ಯವಾದ ರಾವಣ ವಧಾದಿರೂಪಕಾರ್ಯವನ್ನು ಮಾಡಬೇಕಾಗಿ ಇರುವದು (ಬಳಿಕ) ಸಫಲವಾದ ಪ್ರಯೋಜನವುಳ್ಳ, ಈತನಂ ನೋಡುವೆನು; ಆಗ ಆತನೂ ಸಹಾ ನನ್ನನ್ನು ನೋಡಲರ್ಹನಾಗುವನು. ಎಂದು ದೇವೇಂದ್ರನು ಆ ಶರಭಂಗಮುನಿಯ ಸಂಗಡ ಯೋಚಿಸಿ ಆತನಿಗೆ ಮರ್ಯಾದೆಯಂ ಗೈದು ತೇರಿನಲ್ಲಿ ಕುಳಿತು ಸ್ವರ್ಗವನ್ನೈದಿದನು ।೨೪॥ ಈ ರೀತಿಯಾಗಿ ಮಾತಾಡಿಕೊಂಡು ದೇವೇಂದ್ರನು ಸ್ವರ್ಗಕ್ಕೆ ತೆರಳಿದವನಾಗಲು, ಶ್ರೀರಾಮನು ಸೀತಾಲಕ್ಷ್ಮಣರಿಂದೊಡಗೂಡಿ, ಅಗ್ನಿಹೋತ್ರವಂ ಮಾಡುವ ಆ ಶರಭಂಗಮುನಿಯ ಸನ್ನಿಧಿಗೆಬಂದು ಆ ಮೂವ್ವರು ಶರಭಂಗ ಋಷಿಯ ಪಾದಗಳಂ ಹಿಡಿದುಕೊಂಡು ಅಪ್ಪಣೆಯಂ ಪಡದು ಕುಳಿತುಕೊಂಡರು ॥೨೬॥ ಬಳಿಕ ಶ್ರೀರಾಮನು ಇಂದ್ರನ ರಥ

ರ್ವಂ ರಾಘವಾಯನ್ಯವೇದಯತ್ ॥೨೭॥ ಮಾಮೇಷವರದೋರಾಮಬ್ರಹ್ಮಲೋಕಂನಿನೀಷತಿ ॥ ಜಿತಮುಗ್ರೇಣತಪಸಾ ದುಷ್ಪ್ರಾಪಮಕೃತಾತ್ಮಭಿಃ ॥೨೮॥ ಅಹಂಜ್ಞಾತ್ವಾನರವ್ಯಾಘ್ರವರ್ತಮಾನಮದೂರತಃ । ಬ್ರಹ್ಮಲೋಕಂನಗಚ್ಛಾಮಿತ್ವಾಮದೃಷ್ಟ್ವಾಪ್ರಿಯಾತಿಥಿಂ ॥೨೯॥ ತ್ವಯಾಹಂಪುರುಷವ್ಯಾಘ್ರಧಾರ್ಮಿಕೇಣಮಹಾತ್ಮನಾ । ಸಮಾಗಮ್ಯಗಮಿಷ್ಯಾಮಿತ್ರಿದಿವಂದೇವಸೇವಿತಂ ॥೩೦॥ ಅಕ್ಷಯಾನರಶಾರ್ದೂಲಮಯಾಲೋಕಾಜಿತಾಶ್ಶುಭಾಃ। ಬ್ರಾಹ್ಮ್ಯಶ್ಚನಾಕಪೃಷ್ಠ್ಯಾಶ್ಚಪ್ರತಿಗೃಹ್ಣೀಷ್ವಮಾಮಕಾನ್ ॥೩೧॥ ಏವಮುಕ್ತೋನರವ್ಯಾಘ್ರಸ್ಸರ್ವಶಾಸ್ತ್ರವಿಶಾರದಃ ॥ಋಷಿಣಾಶರಭಂಗೇಣರಾಘವೋವಾಕ್ಯಮಬ್ರವೀತ್ ॥೩೨॥ ಅಹಮೇವಾಹರಿಷ್ಯಾಮಿಸರ್ವಲೋಕಾನ್ಮಹಾಮುನೇ ॥ ಆವಾಸಂತ್ವಹಮಿಚ್ಛಾಮಿಪ್ರದಿಷ್ಟಮಿಹಕಾನನೇ ॥೩೩॥ ರಾಘವೇಣೈವಮುಕ್ತಸ್ತುಶಕ್ರತುಲ್ಯಬಲೇನವೈ । ಶರಭಂಗೋ

---

ತ್ತಾಂತವನ್ನು, ರಾಘವಾಯ-ಶ್ರೀರಾಮನಿಗೋಸುಗ. ನ್ಯವೇದಯತ್-ತಿಳಿಸಿದನು ॥೨೭॥ ॥ ಹೇರಾಮ-ಎಲೈ ಶ್ರೀರಾಮನೇ, ವರದಃ-ಸರ್ವರಿಗೂ ವರಪ್ರದಾತನಾದ, ಏಷಃ-ಈ ದೇವೇಂದ್ರನು, ಉಗ್ರೇಣ-ಭಯಂಕರವಾದ. ತಪಸಾ-ತಪಸ್ಸಿನಿಂದ, ಜಿತಂ-ಜಯಿಸಲ್ಪಟ್ಟ, ಅಕೃತಾತ್ಮಭಿಃ-ಆತ್ಮಜ್ಞಾನಶೂನ್ಯರಾದವರಿಂದ, ದುಷ್ಪ್ರಾಪಂ-ಹೊಂದಲಸಾಧ್ಯವಾದ, ಬ್ರಹ್ಮಲೋಕಂ-ಬ್ರಹ್ಮಲೋಕವನ್ನುಕುರಿತು. ನಿನೀಷತಿ-ಕರೆದುಕೊಂಡು ಹೋಗಬೇಕೆಂದಿಚ್ಛೈಸಿದ್ದಾನೆ ॥೨೮॥ ॥ ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ. ಅಹಂ-ನಾನು, ಅದೂರತಃ-ಸಮೀಪದಲ್ಲಿ. ವರ್ತಮಾನಂ-ಇರುತ್ತಿರುವ, ಪ್ರಿಯಾತಿಥಿಂ-ಇಷ್ಟನಾಗಿಯೂ ಅಭ್ಯಾಗತನಾಗಿಯೂ ಇರುತ್ತಿರುವ, ತ್ವಾಂ-ನಿನ್ನನ್ನು, ಅದೃಷ್ಟ್ವಾ-ಕಾಣದೆ, ಬ್ರಹ್ಮಲೋಕಂ-ಬ್ರಹ್ಮಲೋಕವಂಕುರಿತು, ನಗಚ್ಛಾಮಿ-ಹೋಗದಿದ್ದೇನೆ ॥೨೯॥ ॥ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಅಹಂ-ನಾನು, ಧಾರ್ಮಿಕೇಣ-ಭಕ್ತಸಂರಕ್ಷಣರೂಪವಾದ ಧರ್ಮವುಳ್ಳ ಸ್ವಭಾವವುಳ್ಳ. (ಯದ್ವಾ-ಧಾರ್ಮಿಕೇಣ-ಧರ್ಮಸ್ವರೂಪನಾದ) ಮಹಾತ್ಮನಾ-ಜಗದಾಧಾರರೂಪವಾದ ಶರೀರವುಳ್ಳ, (ಯದ್ವಾ-ಮಹಾತ್ಮನಾ-ಸತ್ಯಸಂಕಲ್ಪನಾದ.) ತ್ವಯಾ-ನಿನ್ನೊಡನೆ, ಸಮಾಗಮ್ಯ-ಮಾತನಾಡಿ, ದೇವಸೇವಿತಂ-ದೇವತೆಗಳಿಂದ ಸೇವಿಸಲ್ಪಟ್ಟ, ತ್ರಿದಿವಂ-ಬ್ರಹ್ಮಲೋಕವನ್ನು, (ಯದ್ವಾ-ತ್ರಿದಿವಂ-ಮೂರಂಶೆಗಳಿಂದ ಅತಿಶಯವಾದ ಸರ್ವೋತ್ಕೃಷ್ಟ ಲೋಕವನ್ನು) ಗಮಿಷ್ಯಾಮಿ-ಹೋಗುವೆನು ॥೩೦॥ ॥ ಹೇನರಶಾರ್ದೂಲ-ಎಲೈ ನರಶ್ರೇಷ್ಠನೇ, ಮಯಾ-ನನ್ನಿಂದ, ಬ್ರಾಹ್ಮ್ಯಾಃ-ಬ್ರಹ್ಮಲೋಕದಲ್ಲಿರುವ ಭೋಗಪ್ರದೇಶಗಳೂ, ನಾಕಪೃಷ್ಠ್ಯಾಶ್ಚ-ಸ್ವರ್ಗಲೋಕದಲ್ಲಿರುವ ಭೋಗಪ್ರದೇಶವಿಶೇಷಗಳು, ಅಕ್ಷಯಾಃ-ನಾಶರಹಿತವಾದ, ಶುಭಾಃ-ಶುಭಕರವಾದ, ಲೋಕಾಃ-ಲೋಕಂಗಳು. ಜಿತಾಃ-ಜಯಿಸಲ್ಪಟ್ಟಿವೆ, ಮಾಮಕಾನ್-ನನ್ನಸಂಬಂಧಿಗಳಾದ ಲೋಕಗಳನ್ನು, ಪ್ರತಿಗೃಹ್ಣೀಷ್ವ-ಪರಿಗ್ರಹಿಸು, ( ಅಂದರೆ-ಆಯಾಯ ಲೋಕವಾಸಫಲಗಳನ್ನು ನಿನಗೆ ಸಮರ್ಪಿಸುವೆನೆಂದು ತಾತ್ಪರ್ಯವು) ॥೩೧॥ ॥ ಸರ್ವಶಾಸ್ತ್ರವಿಶಾರದಃ-ಸಮಸ್ತಶಾಸ್ತ್ರದಲ್ಲಿ ಸಮರ್ಥನಾದ. ನರವ್ಯಾಘ್ರಃ-ಪುರುಷಶ್ರೇಷ್ಠನಾದ. ರಾಘವಃ-ಶ್ರೀರಾಮನು, ಶರಭಂಗೇಣಋಷಿಣಾ-ಶರಭಂಗಋಷಿಯಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟವನಾಗಿ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೩೨॥ ॥ ಹೇಮಹಾಮುನೇ-ಎಲೈ ಮಹರ್ಷಿಯೇ, ಸರ್ವಲೋಕಾನ್-ಸಮಸ್ತಲೋಕಗಳನ್ನು, ಆಹರಿಷ್ಯಾಮಿ-ಸಂಪಾದನೆಮಾಡಿಸಿಕೊಡುತ್ತೇನೆ, ಯದ್ವಾ-ಅಹಮೇವ-ನಾನೇ, ಸರ್ವಲೋಕಾನ್-ಸಮಸ್ತಲೋಕಗಳನ್ನು, ಸ್ವೀಕಾರಮಾಡುವೆನು, ಇಹಕಾನನೇ-ಈ ಅರಣ್ಯದಲ್ಲಿ, ಪ್ರದಿಷ್ಟಂ-ನಿನ್ನಿಂದ ತೋರಿಸಲ್ಪಟ್ಟ ಆವಾಸಂತು-ಆವಾಸವನ್ನಾದರೆ, ಅಹಂ-ನಾನು, ಇಚ್ಛಾಮಿ-ಇಚ್ಛೈಸುತ್ತೇನೆ ॥೩೩॥ ॥ ಶಕ್ರತುಲ್ಯಬಲೇನ-ಇಂದ್ರನಿಗೆ ಸಮಾನವಾದಬಲವುಳ್ಳ, ರಾಘವೇಣ-ಶ್ರೀರಾಮನಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಮಹಾಪ್ರಾಜ್ಞಃ-ದೊಡ್ಡಪಂಡಿತನಾದ, ಶರಭಂಗಃ-ಶರಭಂಗ

---

ವನ್ನುದ್ದೇಶಿಸಿ ಆ ಮಹರ್ಷಿಯಂ ಕೇಳಲು ಆ ಮುನಿಯು ಹೇಳುವನದೆಂತೆನೆ,—॥೨೭॥ ಎಲೈ ಶ್ರೀರಾಮನೇ! ಸರ್ವರಿಗೂ ವರಗಳನ್ನೀಯುವ ಈ ದೇವೇಂದ್ರನು ತಪದಿಂದ ಸಂತುಷ್ಟನಾಗಿ ನನ್ನನ್ನು ಬ್ರಹ್ಮಲೋಕಕ್ಕೆ ಕರದುಕೊಂಡು ಹೋಗಲಿಚ್ಛೈಸುತ್ತಾನೆ ॥೨೮॥ ಕೇಳೆಲೈ ಪುರುಷಶ್ರೇಷ್ಠನೇ! ಸಮೀಪದಲ್ಲಿರುವ ಇಷ್ಟನಾದ ಅತಿಥಿಯಾದ ನಿನ್ನನ್ನು ನೋಡದೆ ಬ್ರಹ್ಮಲೋಕಕ್ಕೆ ತೆರಳಲಾರೆನು, ಭಕ್ತಸಂರಕ್ಷಣರೂಪವಾದ ಧರ್ಮಸ್ವಭಾವವುಳ್ಳವನಾಗಿಯೂ, (ಅಥವಾ ಧರ್ಮಸ್ವರೂಪನಾಗಿಯೂ) ಜಗಕ್ಕೆಲ್ಲಾ ಆಧಾರಭೂತವಾದ ಶರೀರವುಳ್ಳವನಾಗಿಯೂ, (ಅಥವಾ ಸತ್ಯಸಂಕಲ್ಪನಾಗಿಯೂ) ಇರುವ ನಿನ್ನ ಸಂಗಡ ಮಾತಾಡಿ, ದೇವತೆಗಳಿಂದ ಸೇವಿಸಲ್ಪಡುವ ಸರ್ವೋತ್ಕೃಷ್ಟವಾದ ಲೋಕಕ್ಕೆ ಸಾರುವೆನು ॥೩೦॥ ಎಲೈಶ್ರೀ ರಾಮನೇ! ನನ್ನಿಂದ ಬ್ರಹ್ಮಲೋಕದಲ್ಲಿರುವ ಭೋಗಪ್ರದೇಶಗಳೂ, ಸ್ವರ್ಗದ ಸುಖಸ್ಥಾನಗಳೂ, ಅಕ್ಷಯವಾದ ಮತ್ತು ಶುಭಕರವಾದ ಲೋಕಂಗಳೂ ಇವುಗಳೆಲ್ಲಾ ಜಯಿಸಲ್ಪಟ್ಟಿವೆ, ಆಯಾ ಲೋಕಂಗಳಲ್ಲಿ ವಾಸಿಸುವಣದರಿಂದುಂಟಾಗುವ ಫಲಗಳನ್ನೆಲ್ಲಾ ನಿನಗೊಪ್ಪಿಸುವೆನೆಂದು ನುಡಿಯಲು, ಸಮಸ್ತ ಶಾಸ್ತ್ರಗಳಂ ಬಲ್ಲವನಾದ ಶ್ರೀರಾಮನು ಶರಭಂಗ ಮುನಿಯಿಂದ ಈ ಪರಿಹೇಳಲ್ಪಟ್ಟವನಾಗಿ ಒಂದಾನೊಂದು ವಾಕ್ಯವಂ ಹೇಳುವನದೆಂತೆನೆ,—॥೩೨॥ ಎಲೈ ಮಹರ್ಷಿಯೇ! ಲೋಕಗಳನ್ನೆಲ್ಲಾ ಸಂಪಾದಿಸಿ ಕೊಡುವೆನು (ಅಥವಾ ನಾನೇ ಸಮಸ್ತ ಲೋಕಂಗಳ ಫಲಗಳನ್ನು ಸ್ವೀಕರಿಸುವೆನು) ಈ ಅರಣ್ಯದಲ್ಲಿ ನೀ ತೋರಿಸಿದ ಪ್ರದೇಶದಲ್ಲಿರಲು ಇಚ್ಛೈಸುತ್ತೇನೆನ್ನಲು, ಆ ವಾಕ್ಯವಂ ಕೇಳಿ ಮಹಾಪ್ರಾಜ್ಞನಾದ ಶರಭಂಗಮುನಿ

ಮಹಾಪ್ರಾಜ್ಞಃ ಪುನರೇವಾಬ್ರವೀದ್ವಚಃ ॥೩೪॥ ಇಹರಾಮಮಹಾತೇಜಾಸ್ಸುತೀಕ್ಷ್ಣೋನಾಮಧಾರ್ಮಿಕಃ ॥ ವಸತ್ಯ
ರಣ್ಯೇಧರ್ಮಾತ್ಮಾಸತೇಶ್ರೇಯೋವಿಧಾಸ್ಯತಿ ॥೩೫॥ ಸುತೀಕ್ಷ್ಣಮಭಿಗಚ್ಛತ್ವಂಶುಚೌದೇಶೇತಪಸ್ವಿನಂ । ರಮಣೀಯೇ
ವನೋದ್ದೇಶೇಸತೇವಾಸಂವಿಧಾಸ್ಯತಿ ॥೩೬॥ ಇಮಾಮ್ಮಂದಾಕಿನೀಂರಾಮಪ್ರತಿಸ್ರೋತಾಮನುವ್ರಜ। ನದೀಂಪುಷ್ಪೋ
ಡುಪವಹಾಂತತ್ರತತ್ರಗಮಿಷ್ಯಸಿ ॥೩೭॥ ಏಷಪಂಥಾನರವ್ಯಾಘ್ರಮುಹೂರ್ತಂಪಶ್ಯತಾತಮಾಂ । ಯಾವಜ್ಜಹಾ
ಮಿಗಾತ್ರಾಣಿಜೀರ್ಣಾಂತ್ವಚಮಿವೋರಗಃ ॥೩೮॥ ತತೋಗ್ನಿಂಸುಸಮಾಧಾಯಹುತ್ವಾಚಾಜ್ಯೇನಮಂತ್ರವಿತ್ ॥
ಶರಭಂಗೋಮಹಾತೇಜಾಃಪ್ರವಿವೇಶಹುತಾಶನಂ ॥೩೯॥ ತಸ್ಯರೋಮಾಣಿಕೇಶಾಂಶ್ಚದದಾಹಾಗ್ನಿರ್ಮಹಾತ್ಮನಃ ॥ ಜೀ
ರ್ಣಾಂತ್ವಚಂತಥಾಸ್ಥೀನಿಯಚ್ಚಮಾಂಸಂಸಶೋಣಿತಂ । ರಾಮಸ್ತುವಿಸ್ಮಿತೋಭ್ರಾತ್ರಾಭಾರ್ಯಯಾಚಸಹಾತ್ಮವಾನ್॥
೪೧। ಸಚಪಾವಕಸಂಕಾಶಃಕುಮಾರಸ್ಸಮುಪದ್ಯತ ।ಉತ್ಥಾಯಾಗ್ನಿಚಯಾತ್ತಸ್ಮಾಚ್ಛರಭಂಗೋವ್ಯರೋಚತ॥ಸಲೋ

---

ಋಷಿಯು. ಪುನರೇವ-ಮತ್ತೂ, ವಚಃ-ಮಾತನ್ನು. ಅಬ್ರವೀತ್-ನುಡಿದನು ॥೩೪॥ ಹೇರಾಮ-ಎಲೈ ಶ್ರೀರಾಮನೇ, ಇಹಅರಣ್ಯೇ-ಈ ಅರಣ್ಯದಲ್ಲಿ ಮಹಾತೇಜಾಃ-ಬ್ರಹ್ಮತೇಜೋವಂತನಾದ, ಧಾರ್ಮಿಕಃ-ಧರ್ಮಪ್ರಧಾನನಾದ, ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳ, ಸುತೀಕ್ಷ್ಣೋನಾಮ-ಸುತೀಕ್ಷ್ಣನೆಂದು ಪ್ರಸಿದ್ಧನಾದ ಋಷಿಯು, ವಸತಿ-ಇರುತ್ತಾನೆ, ಸಃ-ಆ ಸುತೀಕ್ಷ್ಣ ಋಷಿಯು, ತೇ-ನಿನಗೆ. ಶ್ರೇಯಃ-ಸಂಪತ್ತನ್ನು, ವಿಧಾಸ್ಯತಿ-ಮಾಡುತ್ತಾನೆ॥೩೫॥ ಶುಚೌದೇಶೇ-ಪರಿಶುದ್ಧವಾದ ಪ್ರದೇಶದಲ್ಲಿ. ತಪಸ್ವಿನಂ-ತಪಸ್ಸುಮಾಡುತ್ತಿರುವ. ಸುತೀಕ್ಷ್ಣಂ-ಸುತೀಕ್ಷ್ಣ ಋಷಿಯಂಕುರಿತು, ಅಭಿಗಚ್ಛ-ತ್ವಂ-ನೀನು, ಹೋಗು, ಸಃ-ಆ ಸುತೀಕ್ಷ್ಣ ಋಷಿಯು, ತೇ-ನಿನಗೆ, ರಮಣೀಯೇ-ಮನೋಹರವಾದ, ವನೋದ್ದೇಶೇ-ವನಪ್ರದೇಶದಲ್ಲಿ, ವಾಸಂ-ನಿವಾಸಸ್ಥಾನವನ್ನು, ವಿಧಾಸ್ಯತಿ-ಮಾಡುತ್ತಾನೆ ॥೩೬॥ ಹೇರಾಮ-ಎಲೈ ಶ್ರೀರಾಮನೇ, ಇಮಾಂಮಂದಾಕಿನೀಂ-ಈ ಗಂಗಾನದಿಯನ್ನು. ಪ್ರತಿಸ್ರೋತಾಂ-ನಿನಗೆ ಅಭಿಮುಖವಾಗಿ, (ಅಂದರೆ-ಎದುರಾಗಿ ಬರುತ್ತಿರುವ ಪ್ರವಾಹವುಳ್ಳದ್ದನ್ನಾಗಿ, ಅನುವ್ರಜ-ಹೋಗು. ತತ್ರತತ್ರ-ಅಲ್ಲಲ್ಲಿ। ಪುಷ್ಪೋಡುಪವಹಾಂ-ತೆಪ್ಪದಂತೆ ತೇಲಿಕೊಂಡುಹೋಗುತ್ತಿರುವ ಪುಷ್ಪಗಳನ್ನು ವಹಿಸಿರುವ। ನದೀಂ-ನದಿಯನ್ನುಕುರಿತು। ಗಮಿಷ್ಯಸಿ-ಹೋಗುವೀ ॥೩೭॥ ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ। ಏಷಪಂಥಾಃ-ಇದೇಮಾರ್ಗವು, ಹೇತಾತ-ಎಲೈ ಅಪ್ಪನೇ। ಗಾತ್ರಾಣಿ-ಅವಯವಗಳನ್ನು, ಉರಗಃ-ಸರ್ಪವು। ಜೀರ್ಣಾಂ-ಶಿಥಿಲವಾದ। ತ್ವಚಮಿವ-ಪೊರೆಯನ್ನಂತೆ। ಯಾವತ್-ಎಷ್ಟರವರೆಗೆ। ಜಹಾಮಿ-ಬಿಡುವೆನೋ। ತಾವತ್-ಅಷ್ಟುಪರ್ಯಂತರಕ್ಕೂ। ಮುಹೂರ್ತಂ-ಒಂದು ಮುಹೂರ್ತಕಾಲವು। ಮಾಂ-ನನ್ನನ್ನು। ಪಶ್ಯ-ನೋಡುತ್ತಿರು ॥೩೮॥ ತತಃ-ಬಳಿಕ। ಮಂತ್ರವಿತ್-ಮಂತ್ರಜ್ಞನಾದ। ಮಹಾತೇಜಾಃ-ಬಹಳ ತೇಜೋವಂತನಾದ। ಶರಭಂಗಃ-ಶರಭಂಗಋಷಿಯು। ಅಗ್ನಿಂ-ಅಗ್ನಿಯನ್ನು। ಸುಸಮಾಧಾಯ-ಆಧಾನಮಾಡಿ। ಆಜ್ಯೇನ-ತುಪ್ಪದಿಂದ। ಹುತ್ವಾ-ಹೋಮಮಾಡಿ, ಹುತಾಶನಂ-ಅಗ್ನಿಯನ್ನು। ಪ್ರವಿವೇಶ-ಹೊಕ್ಕನು ॥೩೯॥ ಅಗ್ನಿಃ-ಅಗ್ನಿಯು। ಮಹಾತ್ಮನಃ-ಮಹಾಮನಸ್ಸುಳ್ಳ। ತಸ್ಯ-ಆ ಶರಭಂಗಋಷಿಯ। ರೋಮಾಣಿ-ದೇಹರೋಮಗಳನ್ನು। ಕೇಶಾಂಶ್ಚ-ಶಿರಸ್ಸಿನಲ್ಲಿ ಪುಟ್ಟಿದ ಕೂದಲುಗಳನ್ನು। ಜೀರ್ಣಾಂ-ಶಿಥಿಲವಾದ। ತ್ವಚಂ-ಚರ್ಮವನ್ನು। ತಥಾ-ಹಾಗೆಯೇ। ಅಸ್ಥೀನಿ-ಎಲುಬುಗಳನ್ನು। ಸಶೋಣಿತಂ-ರಕ್ತದಿಂದೊಡಗೂಡಿದ। ಮಾಂಸಂ-ಮಾಂಸವು। ಯತ್-ಯಾವದುಂಟೋ। ತತ್-ಅದನ್ನು। ದದಾಹ-ದಹಿಸಿದನು। ರಾಮಸ್ತು-ಶ್ರೀರಾಮನಾದರೆ। ಆತ್ಮವಾನ್-ಧೀರನಾಗಿ। ಭ್ರಾತ್ರಾ-ತಮ್ಮನಾದ ಲಕ್ಷ್ಮಣನೊಡ। ಭಾರ್ಯಯಾಚಸಹ-ಹೆಂಡತಿಯೊಡಗೂಡ। ವಿಸ್ಮಿತಃ-ಆಶ್ಚರ್ಯಗೊಂಡನು ॥೪೧॥ ಸಶರಭಂಗಶ್ಚ-ಆ ಶರಭಂಗಋಷಿಯು। ಪಾವಕಸಂಕಾಶಃ-ಅಗ್ನಿಗೆ ಸಮಾನನಾದ। ಕುಮಾರಃ-ಮುವ್ವತ್ತು ವರ್ಷಗಳೊಳಗಿನ ವಯಸ್ಸುಳ್ಳ ಪುರುಷನು। ಸಮುಪದ್ಯತ-ಆದನು। ತಸ್ಮಾದಗ್ನಿಚಯಾತ್-ಆ ಅಗ್ನಿಚಯನದದೆಸೆಯಿಂದ। ಉತ್ಥಾಯ-ಮೇಲಕ್ಕೆಯೆದ್ದು। ವ್ಯರೋಚತ-ಹೊಳೆಯುತ್ತಿದ್ದನು ॥೪೨॥ ಸಃ-ಆ ಶರಭಂಗಋಷಿಯು। ಆಹಿತಾಗ್ನೀನಾಂ-ನಿಯತಾಗ್ನಿಹೋತ್ರಿಗಳಾದ। ಮಹಾತ್ಮನಾಂ-

---

ಯು ಮತ್ತಿಂತೆಂದನು॥೩೪॥ಎಲೈರಘುನಂದನನೇ! ಈ ಕಾಡಿನಲ್ಲಿ ಮಹಾ ತೇಜೋವಂತನಾದ, ಬಹು ಧರ್ಮಿಷ್ಠನಾದ, ಸುತೀಕ್ಷ್ಣನೆಂದು ಪ್ರಸಿದ್ಧನಾದ ಮುನಿಯು ಯಿರುವನು, ಆತನು ನಿನಗಾಶೀರ್ವಾದವಂ ಗೈಯ್ಯುವನು ॥೩೫॥ ಪರಿಶುದ್ಧವಾದ ಪ್ರದೇಶದಲ್ಲಿ ತಪವಂ ಗೈಯ್ಯುವ ಆ ಮಹರ್ಷಿಯ ಸನ್ನಿಧಿಗೆ ಹೋಗು, ಆತನು ಮನೋಹರವಾದ ಈ ವನದಲ್ಲಿ ನಿನಗೆ ವಸತಿಯಾಗಿರುವ ಪ್ರದೇಶವಂ ತೋರಿಸುವನು, ಈ ಗಂಗಾನದಿಗೆದುರಾಗಿ ತೆರಳು, ಅಲ್ಲಲ್ಲಿ ತೆಪ್ಪಗಳಂತೆ ತೇಲುತ್ತಿರುವ ಹುವ್ವುಗಳುಳ್ಳ ನದಿಯಂ ಹೊಂದುವಿ, ಇದೇ ದಾರಿಯು ಎಲೈ ಪುರುಷಶ್ರೇಷ್ಠನೇ! ಸರ್ಪವು ಜೀರ್ಣವಾದ ಪೊರೆಯಂ ಬಿಡುವಂತೆ ಜರ್ಜರೀಭೂತವಾದ ಈ ಶರೀರವನ್ನು ನಾನು ಬಿಡುವವರಿವಿಗೂ ಸ್ವಲ್ಪಕಾಲವು ಇಲ್ಲಿಯೇ ಯಿದ್ದು ನೋಡುವವನಾಗೆಂದು ನುಡಿದು, ಆ ಮಹರ್ಷಿಯು ಅಗ್ನ್ಯಾಧಾನವಂ ಗೈದು ಆಜ್ಯಹೋಮವಂ ಮಾಡಿ ಅದರೊಳು ಪ್ರವೇಶಿಸಿದನು॥೩೯॥ಬಳಿಕ ಅಗ್ನಿಯು ಮಹಾ ಮನಸ್ವಿಯಾದ ಆ ಮಹರ್ಷಿಯ ಶರೀರದಲ್ಲಿನ ರೋಮಗಳನ್ನೂ, ಕೂದಲುಗಳನ್ನೂ ಶಿಥಿಲವಾದಚರ್ಮವನ್ನೂ, ಎಲುಬುಗಳನ್ನೂ ರಕ್ತಸಹಿತವಾದಮಾಂಸವನ್ನೂ ಸಹಾಸುಟ್ಟನು. ಆಗ ಶ್ರೀರಾಮನುಧೀರನಾಗಿಸೀತಾಲಕ್ಷ್ಮಣರಿಂ ದೊಡಗೂಡಿ ಆಶ್ಚರ್ಯಗೊಂಡನು॥ಆ ವೇಳೆಯಲ್ಲಿ ಆ ಶರಭಂಗಮುನಿಯಾದರೆ ಅಗ್ನಿಗೆಸದೃಶವಾದ ಮುವ್ವತ್ತುವರುಷಗಳಿಗೆಮೀರದ

ಶಾಲಿನಾಮಾಹಿತಾಗ್ನೀನಾಮೃಷೀಣಾಂಚ ಮಹಾತ್ಮನಾಂ । ದೇವಾನಾಂಚ ವ್ಯತಿಕ್ರಮ್ಯ ಬ್ರಹ್ಮಲೋಕಂ ವ್ಯರೋಹತ ॥೪೩॥ ಸ ಪುಣ್ಯಕರ್ಮಾ ಭವನೇ ದ್ವಿಜರ್ಷಭಃ ಪಿತಾಮಹಂ ಸಾನುಚರಂ ದದರ್ಶ ಹ । ಪಿತಾಮಹಶ್ಚಾಪಿ ಸಮೀಕ್ಷ್ಯ ತಂ ದ್ವಿಜಂ ನನಂದ ಸುಸ್ವಾಗತಮಿತ್ಯುವಾಚ ಹ ॥೪೪॥ —**ಇತಿ ಶ್ರೀಮದರಣ್ಯಕಾಂಡೆ ಪಂಚಮಸ್ಸರ್ಗಃ॥**—

ಶರಭಂಗೇ ದಿವಂ ಯಾತೇ ಮುನಿಸಂಘಾಸ್ಸಮಾಗತಾಃ । ಅಭ್ಯಗಚ್ಛಂತ ಕಾಕುತ್ಸ್ಥಂ ರಾಮಂ ಜ್ವಲಿತತೇಜಸಂ ॥೧॥ ವೈಖಾನಸಾ ವಾಲಖಿಲ್ಯಾಸ್ಸಂಪ್ರಕ್ಷಾಲಾ ಮರೀಚಿಪಾಃ । ಅಶ್ಮಕುಟ್ಟಾಶ್ಚ ಬಹವಃ ಪತ್ರಾಹಾರಾಶ್ಚ ಧಾರ್ಮಿಕಾಃ ॥೨॥ ದಂತೋಲೂಖಲಿನಶ್ಚೈವ ತಥೈವೋನ್ಮಜ್ಜಕಾಃ ಪರೇ । ಗಾತ್ರಶಯ್ಯಾ ಅಶಯ್ಯಾಶ್ಚ ತಥೈವಾಭ್ರಾವಕಾಶಕಾಃ ॥೩॥ ಮುನಯಸ್ಸಲಿಲಾಹಾರಾ ವಾಯುಭಕ್ಷಾಸ್ತಥಾಪರೇ । ಆಕಾಶನಿಲಯಾಶ್ಚೈವ ತಥಾ ಸ್ಥಂಡಿಲಶಾಯಿನಃ ॥೪॥ ವ್ರತೋಪವಾಸಿ

---

ಮಹಾಪ್ರಭಾವಸಂತರಾದ, ಋಷೀಣಾಂ-ಋಷಿಗಳ, ದೇವಾನಾಂಚ-ದೇವತೆಗಳ, ಲೋಕಾಂಶ್ಚ-ಲೋಕಗಳನ್ನೂ, ವ್ಯತಿಕ್ರಮ್ಯ-ಅತಿಕ್ರಮಿಸಿ, ಬ್ರಹ್ಮಲೋಕಂ-ಸತ್ಯಲೋಕವಂ ಕುರಿತು, (ಯದ್ವಾ-ಬ್ರಹ್ಮಲೋಕಂ-ಬ್ರಹ್ಮಾತ್ಮಕವಾದ ಪರಮಪುರುಷನ ಸಾಯುಜ್ಯವನ್ನು.) ವ್ಯರೋಹತ-ಏರಿದನು ॥೪೩॥ ಪುಣ್ಯಕರ್ಮಾ-ಪುಣ್ಯವ್ಯಾಪಾರಿಯಾದ, ದ್ವಿಜರ್ಷಭಃ-ಬ್ರಾಹ್ಮಣಶ್ರೇಷ್ಠನಾದ, ಸಃ-ಆ ಶರಭಂಗಋಷಿಯು, ಸಾನುಚರಂ-ಸೇವಕರಿಂದೊಡಗೂಡಿದ, ಪಿತಾಮಹಂ-ಚತುರ್ಮುಖಬ್ರಹ್ಮನನ್ನು, ದದರ್ಶ ಹ-ಕಂಡನು, ಪಿತಾಮಹಶ್ಚಾಪಿ-ಚತುರ್ಮುಖಬ್ರಹ್ಮನು, ತಂದ್ವಿಜಂ-ಆ ಶರಭಂಗಋಷಿಯನ್ನು, ಸಮೀಕ್ಷ್ಯ-ಕಂಡು, ನನಂದ-ಸಂತೋಷಗೊಂಡನು, ಸುಸ್ವಾಗತಂ-ಸುಖಾಗಮನವೇ ಎಂದು. ಉವಾಚ ಹ-ಹೇಳಿದನಷ್ಟೆ.॥೪೪॥ —**ಪಂಚಮಸ್ಸರ್ಗಃ**—

ಶರಭಂಗೇ-ಶರಭಂಗಋಷಿಯು, ದಿವಂ-ಬ್ರಹ್ಮಲೋಕವಂ ಕುರಿತು, ಯಾತೇಸತಿ-ಹೊಂದಿದವನಾಗುತ್ತಿರಲೀಕಾಗಿ. ಮುನಿಸಂಘಾಃ-ಋಷಿಗಳ ಕೂಟಗಳು. ಸಮಾಗತಾಃ-ಒಂದವುಗಳಾಗಿ, ಜ್ವಲಿತತೇಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, ಕಾಕುತ್ಸ್ಥಂ-ಕಕುತ್ಸ್ಥವಂಶೋತ್ಪನ್ನನಾದ. ರಾಮಂ-ಶ್ರೀರಾಮನಂ ಕುರಿತು, ಅಭ್ಯಗಚ್ಛಂತ-ಎದುರಾಗಿ ಬಂದವು ॥೧॥ ವೈಖಾನಸಾಃ-ತಪೋವಿಶೇಷದಿಂ ಆ ಹೆಸರು ಪಡೆದ ವೈಖಾನಸರು, (ಯದ್ವಾ-ಬ್ರಹ್ಮದೇವರನಖೋದ್ಭೂತರಾದ ವೈಖಾನಸರೆಂಬವರು. (ಯದ್ವಾ-ವಿಖನಸನೆಂಬ ಋಷಿಯಿಂದ ಪ್ರೋಕ್ತವಾದ ಸೂತ್ರವನ್ನು ಅನುಸರಿಸಿ ನಡೆಯುವರಾದ್ದರಿಂ ವೈಖಾನಸರೆಂದು ಹೇಳಲ್ಪಡುತ್ತಾರೆ.) ವಾಲಖಿಲ್ಯಾಃ-ಬ್ರಹ್ಮನ ಕೂದಲುಗಳಿಂ ಪುಟ್ಟಿದ ವಾಲಖಿಲ್ಯರೆಂಬವರು, (ಯದ್ವಾ-ನೂತನವಾಗಿ ಅನ್ನಲಬ್ಧವಾದರೆ ಪೂರ್ವಾನ್ನವನ್ನು ಪರಿತ್ಯಾಗವಮಾಡುವರು ವಾಲಖಿಲ್ಯರು) ಸಂಪ್ರಕ್ಷಾಲಾಃ-ಆ ಹೊತ್ತು ಬಂದ ಜೀವನವನ್ನು ಆ ಹೊತ್ತೇ ವಿನಿಯೋಗವಮಾಡುವರು.) ಮರೀಚಿಪಾಃ-ಚಂದ್ರಿಕಾಪಾನವನ್ನು ಮಾಡುವವರು, (ಅಂದರೆ ಬೆಳದಿಂಗಳನ್ನು ತಿನ್ನುವರು) ಅಶ್ಮಕುಟ್ಟಾಃ-ಜೀವನಸಾಧನವಾದ ಧಾನ್ಯವನ್ನು ಕಲ್ಲುಗಳ ಮ್ಯಾಲೆ ಕುಟ್ಟಿ ಜೀವನಮಾಡುವವರು. ಬಹವಃ-ಬಹಳವಾದ, ಪತ್ರಾಹಾರಾಶ್ಚ-ಎಲೆಗಳ್ಳೇ ಆಹಾರವಾಗುಳ್ಳವರು. ಧಾರ್ಮಿಕಾಃ-ಧರ್ಮಪ್ರಧಾನರಾದ, ದಂತೋಲೂಖಲಿನಶ್ಚೈವ-ದಂತಗಳ್ಳೇ ಒರಳಾಗಿ ಮಾಡಿಕೊಂಡು ಧಾನ್ಯಗಳನ್ನು ಹೊಟ್ಟು ತೆಗೆದು ಹಾಕಿ ಜೀವನಮಾಡುವರು, ತಥೈವ-ಹಾಗೆಯೇ, ಪರೇ-ಮತ್ತು ಕೆಲಬರಾದ, ಉನ್ಮಜ್ಜಕಾಃ-ಶಿರೋಮಾತ್ರವನ್ನು ಮ್ಯಾಲಕ್ಕೆತ್ತಿಕೊಂಡು ಕಂಠಪರ್ಯಂತರವೂ ನೀರಲ್ಲಿ ಮುಳುಗಿ ತಪಸ್ಸುಮಾಡುವವರು, ಗಾತ್ರಶಯ್ಯಾಃ-ಶರೀರವೇ ಹಾಸಿಕೆಯಾಗುಳ್ಳವರು, (ಅಂದರೆ-ಉರಸ್ಸಿನಲ್ಲಿ ತಲೆಯಿಟ್ಟುಕೊಂಡು ಕೂತುಕೊಂಡೇ ನಿದ್ರೆ ಮಾಡುವರು) ಅಶಯ್ಯಾಶ್ಚ-ಮಲಗದಿರುವರು, ತಥೈವ-ಹಾಗೆಯೇ, ಅಭ್ರಾವಕಾಶಕಾಃ-ಅನಾವೃತಪ್ರದೇಶದಲ್ಲಿ ವಾಸಮಾಡುತ್ತಿರುವರು ॥೩॥ ಸಲಿಲಾಹಾರಾಃ-ನೀರೇ ಆಹಾರವಾಗುಳ್ಳ, ಮುನಯಶ್ಚ-ಋಷಿಗಳೂ. ತಥಾ-ಹಾಗೆಯೇ, ವಾಯುಭಕ್ಷಾಃ-ಗಾಳಿಯೇ ಆಹಾರವಾಗುಳ್ಳ, ಪರೇಚ-ಮತ್ತು ಕೆಲಬರೂ, ಆಕಾಶನಿಲಯಾಶ್ಚ ವ-

---

ಪುರುಷನಾಗಿ ಆ ಅಗ್ನಿಚಯನದಿಂದೆದ್ದು ಬೆಳಗುತ್ತಾ ಆ ಹಿತಾಗ್ನಿಗಳ ಲೋಕಂಗಳನ್ನತಿಕ್ರಮಿಸಿ, ಸತ್ಯಲೋಕವನ್ನೇರಿದನು ॥೪೩॥ ಪುಣ್ಯವ್ಯಾಪಾರಿಯಾದ ಬ್ರಾಹ್ಮಣೋತ್ತಮನಾದ ಆ ಮಹರ್ಷಿಯು ಸೇವಕಪರಿವೃತನಾಗಿ ಬ್ರಹ್ಮಲೋಕವನ್ನೈದಿ ಪಿತಾಮಹನಂ ನೋಡಿದವನಾಗಲು, ಚತುರ್ಮುಖನಾಗ ಬ್ರಾಹ್ಮಣನಂ ಕಂಡು ಸಂತೋಷಗೊಂಡವನಾಗಿ, ಕುಶಲಪ್ರಶ್ನೆಗೆಯ್ದನು ॥೪೪॥ —* ಅರಣ್ಯಕಾಂಡದಲ್ಲಿನ ಐದನೆಯ ಸರ್ಗಂ ಮುಗಿದುದು *—

ಶರಭಂಗಮುನಿಯು ಸ್ವರ್ಗವನ್ನೈದಲು ಮುನಿಸಂಘಗಳು ಕೇರಿ ಹೊಳೆವತೇಜಸ್ಸುಳ್ಳ, ಶ್ರೀರಾಮನ ಸನ್ನಿಧಿಗೆ ಬಂದರದೆಂತೆನೆ,—॥೧॥ ವೈಖಾನಸರೂ, ವಾಲಖಿಲ್ಯರೂ, ಸಂಪ್ರಕ್ಷಾಳರೂ, ಮರೀಚಿಪರೂ, ಜೀವಸಾಧನವಾದ ಧಾನ್ಯವನ್ನು ಕಲ್ಲುಗಳ ಮೇಲೆ ಕುಟ್ಟಿ ಜೀವಿಸುವವರೂ, ಎಲೆಗಳನ್ನು ಆಹಾರವಾಗಿ ತೆಗದುಕೊಳ್ಳುವವರೂ, ಧಾನ್ಯಗಳನ್ನಗಿದು ಹೊಟ್ಟನ್ನು ಬೇರೆಯಾಗಿ ತೆಗದು ಜೀವಿಸುವವರೂ, ಕಂಠದವರಿವಿಗೂ ನೀರಿನಲ್ಲಿ ನಿಂತುಕೊಂಡು ತಪವಂ ಗೈಯ್ಯುವವರೂ, ಎದೆಯಲ್ಲಿ ಮಂಡೆಯನ್ನಿಟ್ಟು ನಿದ್ರಿಸುವವರೂ, ಮಲಗದೆಯೇ ಇರುವವರೂ, ಗಗನದಲ್ಲಿ ವಾಸಿಸುವವರೂ, ಜಲದಿಂದ ಜೀವಿಸುವವರೂ, ಗಾಳಿಯನ್ನು ಆಹಾರವಾಗಿ ತೆಗದುಕೊಳ್ಳುವ ಮತ್ತು ಕೆಲಋಷಿಗಳೂ, ವೃಕ್ಷಾಗ್ರಗಳಲ್ಲಿ ವಾಸಿಸುವವರೂ, ದರ್ಭಾಸನಗಳಲ್ಲಿ ಮಲಗುವವರೂ, ಆಹಾರವನ್ನು ತೆಗದುಕೊಳ್ಳದವರೂ, ಜಿತೇಂದ್ರಿಯರೂ, ಯಾವಾಗಲು ಒದ್ದೆಬಟ್ಟೆಗಳನ್ನುಡುವವರೂ, ಜಪವನ್ನೇ ಮಾಡುವ

ನೋದಾಂತಾಸ್ತಥಾದ್ರ್ರಪಟವಾಸಸಃ । ಸಜಪಾಶ್ಚ ತಪೋನಿತ್ಯಾಸ್ತಥಾ ಪಂಚತಪೋನ್ವಿತಾಃ ॥೫॥ ಸರ್ವೇ ಬ್ರಾಹ್ಮ್ಯಾ ಶ್ರಿಯಾ ಜುಷ್ಟಾ ದೃಢಯೋಗಾಸ್ಸಮಾಹಿತಾಃ । ಶರಭಂಗಾಶ್ರಮೇ ರಾಮಮಭಿಜಗ್ಮುಶ್ಚ ತಾಪಸಾಃ ॥೬॥ ಅಭಿಗಮ್ಯ ಚ ಧರ್ಮಜ್ಞಾ ರಾಮಂ ಧರ್ಮಭೃತಾಂ ವರಮ್ । ಊಚುಃ ಪರಮಧರ್ಮಜ್ಞಮೃಷಿಸಂಘಾಸ್ಸಮಾಹಿತಾಃ ॥೭॥ ತ್ವಮಿಕ್ಷ್ವಾಕುಕುಲಸ್ಯಾಸ್ಯ ಪೃಥಿವ್ಯಾಶ್ಚ ಮಹಾರಥ । ಪ್ರಧಾನಶ್ಚಾಸಿ ನಾಥಶ್ಚ ದೇವಾನಾಂ ಮಘವಾನಿವ ॥೮॥ ತ್ವಾಮಾಸಾದ್ಯ ಮಹಾತ್ಮಾನಂ ಧರ್ಮಜ್ಞಂ ಧರ್ಮವತ್ಸಲಮ್ । ಅರ್ಥಿತ್ವಾನ್ನಾಥ ವಕ್ಷ್ಯಾಮಸ್ತಚ್ಚ ನಃ ಕ್ಷಂತುಮರ್ಹಸಿ ॥೧೦॥ ಅಧರ್ಮಸ್ತು ಮ

ಅಂತರಿಕ್ಷದಲ್ಲಿ ಅಂದರೆ ವೃಕ್ಷಾಗ್ರಗಳಲ್ಲಿ ವಾಸಮಾಡುವವರೂ, ತಥಾ-ಹಾಗೆಯೇ, ಸ್ಥಂಡಿಲಶಾಯಿನಃ-ದರ್ಭೆಗಳಿಂ ಹಾಸಲ್ಪಟ್ಟ ಭೂಪ್ರದೇಶದಲ್ಲಿ ಶಯನಮಾಡುವವರೂ, ವ್ರತೋಪವಾಸನಃ-ಯಾವ ಆಹಾರವೂ ಯಿಲ್ಲದೆ ಉಪಾಸನಮಾಡುವರೂ, ದಾಂತಾಃ-ಜಿತೇಂದ್ರಿಯರೂ, ತಥಾ-ಹಾಗೆಯೇ, ಆದ್ರ್ರಪಟವಾಸಸಃ-ತೋಯಿದವಸ್ತ್ರವನ್ನು ಧಾರಣೆಮಾಡುವವರೂ, (ಅಂದರೆ ಸರ್ವದಾ ಒದ್ದೆ ಗಳನ್ನೇ ಉಡುವವರು) ಸಜಪಾಶ್ಚ-ಮಂತ್ರಜಪವನ್ನೇ ಮಾಡುತ್ತಿರುವವರು, ತಪೋನಿತ್ಯಾಃ-ವೇದಾಧ್ಯಯನವೇ ನಿತ್ಯತಪಸ್ಸಾಗುಳ್ಳವರು, ತಥಾ-ಹಾಗೆಯೇ, ಪಂಚತಪೋನ್ವಿತಾಃ-ಪಂಚಾಗ್ನಿಮಧ್ಯತಪಸ್ಸಿನಿಂದ ಕೂಡಿಕೊಂಡಿರುವವರು ॥೫॥ ಬ್ರಾಹ್ಮ್ಯಾ-ಬ್ರಾಹ್ಮಣಸಂಬಂಧಿಯಾದ, ಶ್ರಿಯಾ-ಋಗ್ಯಜುಸ್ಸಾಮಾಥರ್ವಾತ್ಮಕ ವೇದಸಂಪದ್ರೂಪದಿಂದ, ಜುಷ್ಟಾಃ-ಕೂಡಿಕೊಂಡಿರುವರಾಗಿ, ದೃಢಯೋಗಾಃ-ನಿಯತವಾದ ಅಷ್ಟಾಂಗಯೋಗಗಳುಳ್ಳವರಾಗಿ. ಸಮಾಹಿತಾಃ-ಸಮಾಧಾನಚಿತ್ತರಾದ, ಸರ್ವೇ-ಸಮಸ್ತರಾದ. ತಾಪಸಾಃ-ಋಷಿಗಳು. ಶರಭಂಗಾಶ್ರಮೇ-ಶರಭಂಗಋಷ್ಯಾಶ್ರಮದಲ್ಲಿ, ರಾಮಂ-ಶ್ರೀರಾಮನಂಕುರಿತು. ಅಭಿಜಗ್ಮುಃ-ಎದುರಾಗಿಬಂದರು ॥೬॥ ಧರ್ಮಜ್ಞಾಃ-ಧರ್ಮವಂತಿಳಿದವರಾದ. ಋಷಿಸಂಘಾಃ-ಗುಂಪುಸೇರಿದ ಋಷಿಗಳು, ಸಮಾಹಿತಾಃ-ಸಮಾಧಾನಚಿತ್ತರಾಗಿ, ಧರ್ಮಭೃತಾಂ-ಧರ್ಮಿಷ್ಠರೊಳಗಾಗಿ, ವರಂ-ಶ್ರೇಷ್ಠನಾದ, ಪರಮಧರ್ಮಜ್ಞಂ-ಬಹಳ ಧರ್ಮಗಳನ್ನು ತಿಳಿದಿರುವ, ರಾಮಂ-ಶ್ರೀರಾಮನಂಕುರಿತು. ಊಚುಃ-ಹೇಳಿದರು ॥೭॥ ಹೆಮಹಾರಥ-ಎಲೈ ಮಹಾರಥಿಕನೇ ತ್ವಂ-ನೀನು, ಅಸ್ಯ ಇಕ್ಷ್ವಾಕುಕುಲಸ್ಯ-ಈ ಇಕ್ಷ್ವಾಕುಮಹಾರಾಯನವಂಶಕ್ಕೆ. ದೇವಾನಾಂ-ದೇವತೆಗಳಿಗೆ. ಮಘವಾನಿವ-ದೇವೇಂದ್ರನಂತೆ. ಪ್ರಧಾನಶ್ಚ-ಮುಖ್ಯನು, ಪೃಥಿವ್ಯಾಶ್ಚ-ಭೂಮಿಗೂ, ನಾಥಶ್ಚ-ನಾಥನಾದವನು. ಅಸಿ-ಆಗಿದ್ದೀ. ತ್ರಿಷುಲೋಕೇಷು-ಮೂರು ಲೋಕಗಳಲ್ಲಿ, ಯಶಸಾ-ಕೀರ್ತಿಯಿಂದಲೂ. ವಿಕ್ರಮೇಣಚ-ಪರಾಕ್ರಮದಿಂದಲೂ, ವಿಶ್ರುತಃ-ಪ್ರಸಿದ್ಧನು, (ವಾಸ್ತವಿಕಾರ್ಥವಾದರೆ-ಹೆಮಹಾರಥ-ಎಲೈ ಮಹಾರಥಿಕನೇ, ತ್ವಂ-ನೀನು, ಅಸ್ಯೇಕ್ಷ್ವಾಕುಕುಲಸ್ಯ-ಈ ಇಕ್ಷ್ವಾಕುಕುಲಕ್ಕೆ ಮಾತ್ರಕ್ಕೇನೆ. ಪೃಥಿವ್ಯಾಶ್ಚ-ಭೂಮಿಗೆಮಾತ್ರವೇ, ಪ್ರಧಾನಃ-ಮುಖ್ಯನಾದವನು, ಅಸಿ-ಆಗಿದ್ದೀಯಾ. ಕಿಂತು-ಮತ್ತೇನೆಂದರೆ ಸಕಲ ಲೋಕಗಳಿಗೂ ಸಮಸ್ತ ವಂಶಗಳಿಗೂ. ನಾಥಃ-ನಾಥನೂ ಆಗಿದ್ದೀಯೆ ಯಶಸ್ಸಿಂದಲೂ ಪರಾಕ್ರಮದಿಂದಲೂ, ತ್ರಿಷುಲೋಕೇಷು-ಮೂರುಲೋಕಗಳಲ್ಲಿಯೂ, ವಿಶ್ರುತಃ-ಪ್ರಸಿದ್ಧನಾಗಿದ್ದೀಯೆ) ॥೮॥ ತ್ವಯಿ-ನಿನ್ನಲ್ಲಿ, ಪಿತೃಭಕ್ತಿಶ್ಚ-ತಂದೆಯಲ್ಲಿ ಭಕ್ತಿಯೂ, ಸತ್ಯಂಚ-ಸತ್ಯವಚನವೂ, ಧರ್ಮಶ್ಚ-ಧರ್ಮವೂ, ಪುಷ್ಕಲಃ-ಸಮೃದ್ಧವಾಗಿಧೆ, ಪಿತೃಭಕ್ತಿಶ್ಚ-ತಂದೆಯನಿಮಿತ್ತವಾಗಿ ನಿಯಮವುಳ್ಳವನಾಗಿದ್ದೀಯೆ ಸತ್ಯವಚನವು ಅಧಿಕವಾದ ಧರ್ಮವೂ ನಿನ್ನಲ್ಲಿಧೆ ॥೯॥ ಹೆನಾಥ-ಎಲೈ ಸ್ವಾಮಿಯೇ. ಅರ್ಥಿತ್ವಾತ್-ಯಾಚಕರಾಗಿಧೆ ವಾದಕಾರಣ. ಮಹಾತ್ಮಾನಂ-ಜಗದಾಧಾರಭೂತವಾದ ಶರೀರವುಳ್ಳ, ಧರ್ಮಜ್ಞಂ-ಸಕಲ ಧರ್ಮಗಳನ್ನೂ ತಿಳಿದಿರುವ. (ಅಥವಾ-ಶರಣಾಗತತ್ರಾಣರೂಪವಾದ ಧರ್ಮವನ್ನು ತಿಳಿದಿರುವ, ಧರ್ಮವತ್ಸಲಂ-ಅಂಥಾ ಧರ್ಮಾನುಷ್ಠಾನದಲ್ಲೇ ಆಸಕ್ತಿಯುಳ್ಳ, ತ್ವಾಂ-ನಿನ್ನನ್ನು. ಆಸಾದ್ಯ-ಹೊಂದಿ, ಅರ್ಥಿತ್ವಾತ್-ಯಾಚಕರಾಗಿಧೆ ವಾದಕಾರಣ, ವಕ್ಷ್ಯಾಮಃ-ಹೇಳುತ್ತೇವೆ. ನಃ-ನಮ್ಮಗಳ, ತಚ್ಚ-ಆ ಯಾಚನಾವಚನವನ್ನು, ಕ್ಷಂತುಂ-ಸಹಿಸುವದಕ್ಕೋಸ್ಕರ,

ವರೂ, ವೇದಾಧ್ಯಯನವನ್ನೇ ನಿತ್ಯ ತಪಸ್ಸಾಗಿ ಮಾಡುವವರೂ, ಪಂಚಾಗ್ನಿ ಮಧ್ಯದಲ್ಲಿ ತಪವಂಗೈಯ್ಯುವವರೂ, ಮತ್ತು ಬ್ರಹ್ಮಸಂಬಂಧವಾದ "ಋಗ್ಯಜುಸ್ಸಾಮಾಥರ್ವಣ" ಗಳೆಂಬ ವೇದಸಂಪತ್ತಿನಿಂದ ಕೂಡಿದವರಾಗಿಯೂ. ನಿಯತವಾದ ಅಷ್ಟಾಂಗ ಯೋಗಗಳುಳ್ಳವರಾಗಿಯೂ, ಸಾವಧಾನ ಚಿತ್ತರಾಗಿಯೂ, ಇರುವ ಈ ಸಮಸ್ತರಾದ ಮುನಿಗಳು ಆ ಶರಭಂಗಾಶ್ರಮದಲ್ಲಿ ಶ್ರೀರಾಮನಿಗೆದುರಾಗಿ ಬಂದರು ॥೬॥ ಧರ್ಮಜ್ಞರಾದ ಆ ಮಹರ್ಷಿಗಳೆಲ್ಲರೂ ಸಮಾಧಾನ ಚಿತ್ತರಾಗಿ, ಪರಮಧರ್ಮಿಷ್ಠನಾದ ಶ್ರೀರಾಮನಂ ಕುರಿತು ನಿರೂಪಿಸುವರದೆಂತೆನೆ,-ಎಲೈ ಮಹಾರಥಿಕನೇ! ದೇವತೆಗಳೊಳಗೆ ಇಂದ್ರನಂತೆ ಈ ಇಕ್ಷ್ವಾಕು ವಂಶಕ್ಕೆ ನೀನು ಪ್ರಧಾನನು, ಈ ಭೂಮಿಗೆಲ್ಲಾ ಒಡೆಯನು, ಮೂಜಗಗಳಲ್ಲಿಯೂ ಪ್ರಖ್ಯಾತನಾದವನು,(ತತ್ವಾಭಿಪ್ರಾಯವೇನೆಂದರೆ,— ಎಲೈ ಮಹಾರಥಿಕನೇ! ಈ ಇಕ್ಷ್ವಾಕುವಂಶಕ್ಕೆ ಆಗಲಿ ಭೂಮಿಗೆಮಾತ್ರವೇ ಆಗಲಿ, ಪ್ರಧಾನನಾಗಿ ಇದ್ದೀಯಾ? ಲೋಕಗಳಿಗೆಲ್ಲಾ ನಾಥನು, ಪರಾಕ್ರಮದಿಂದ ತ್ರಿಲೋಕಗಳಲ್ಲಿಯೂ ಪ್ರಸಿದ್ಧನಾದವನೆಂದು ಭಾ) ॥೮॥ ನಿನ್ನ ಪಿತೃಭಕ್ತಿಯೂ,ಸತ್ಯವಚನತ್ವವೂ,ಧರ್ಮವೂ,ನಿನ್ನಲ್ಲಿತುಂಬಿರುವವು॥೯॥ ಕೇಳೆಲೈ ಸ್ವಾಮಿಯೇ! ಜಗತ್ತೆಲ್ಲಾ ಆಧಾರಭೂತವಾದ ಶರೀರಮುಳ್ಳವನಾಗಿಯೂ, ಸಕಲಧರ್ಮಗಳನ್ನರಿತವನಾಗಿಯೂ, ಧರ್ಮಾನುಷ್ಠಾನದಲ್ಲಿಯೇ ಆಸಕ್ತವಾದ ಚಿತ್ತಮುಳ್ಳವನಾಗಿಯೂ, ಇರುವ ನಿನ್ನನ್ನು ಕೇಳಿಕೊಳ್ಳುತ್ತೇವೆ. ಆ ಪ್ರಾರ್ಥನೆಯನ್ನು ಕ್ಷಮಿಸಿಮಾ

ಹಾಂಸ್ತತ್ಭವೇತ್ತಸ್ಯಮಹೀಪತೇಃ । ಯೋಹರೇದ್ಬಲಿಷಡ್ಭಾಗಂನಚರಕ್ಷತಿಪುತ್ರವತ್ ॥೧೧॥ ಯುಂಜಾನಸ್ಸ್ವಾನಿವ ಪ್ರಾಣಾನ್ಪ್ರಾಣೈರಿಷ್ಟಾನ್ಸುತಾನಿವ । ನಿತ್ಯಯುಕ್ತಸ್ಸದಾರಕ್ಷನ್ಸರ್ವಾನ್ವಿಷಯವಾಸಿನಃ । ಪ್ರಾಪ್ನೋತಿಶಾಶ್ವತೀಂರಾಮಕೀರ್ತಿಂಸಬಹುವಾರ್ಷಿಕೀಂ । ಬ್ರಹ್ಮಣಸ್ಸ್ಥಾನಮಾಸಾದ್ಯತತ್ರಚಾಪಿಮಹೀಯತೇ ।೧೨। ಯತ್ಕರೋತಿಪರಂಧರ್ಮಂಮುನಿರ್ಮೂಲಫಲಾಶನಃ । ತತ್ರರಾಜ್ಞಶ್ಚತುರ್ಭಾಗಃಪ್ರಜಾಧರ್ಮೇಣರಕ್ಷತಃ ।೧೪॥ ಸೋಯಂಬ್ರಾಹ್ಮಣಭೂಯಿಷ್ಠೋವಾನಪ್ರಸ್ಥಗಣೋಮಹಾನ್ । ತ್ವನ್ನಾಥೋನಾಥವದ್ರಾಮರಾಕ್ಷಸೈರ್ಬಾಧ್ಯತೇಭೃಶಂ ॥೧೫॥ ಏಹಿಪಶ್ಯಶರೀರಾಣಿಮುನೀನಾಂಭಾವಿತಾತ್ಮನಾಂ । ಹತಾನಾಂರಾಕ್ಷಸೈರ್ಘೋರೈರ್ಬಹೂನಾಂಬಹುಧಾವನೇ ॥೧೬॥ ಪಂಪಾನದೀನಿವಾಸಾನಾಮನುಮಂದಾಕಿನೀಮಪಿ। ಚಿತ್ರಕೂಟಾಲಯಾನಾಂಚಕ್ರಿಯತೇಕದನಂಮಹತ್ ॥೧೭

---

ಅರ್ಹಸಿ-ಯೋಗ್ಯನಾಗು ॥೧೦॥ ಯಃ-ಯಾವ ಅರಸು. ಬಲಿಷಡ್ಭಾಗಂ-ಬಲಿ-ಕಾಣಿಕೆಕಪ್ಪದಲ್ಲಿ, ಷಡ್ಭಾಗಂ-ಆರನೇ ಭಾಗವನ್ನು, (ಅಂದರೆ ಕಾಣಿಕೆಕಪ್ಪಗಳೆಂಬ ಆರನೇ ಭಾಗವನ್ನು, ಹರೇತ್-ತೆಗೆದುಕೊಳ್ಳುವನೋ,) ಪ್ರಜಾಃ-ಪ್ರಜೆಗಳನ್ನು, ಪುತ್ರವತ್-ಮಕ್ಕಳಂತೆ, ನರಕ್ಷತಿಚ-ಸಂರಕ್ಷಿಸುವದಿಲ್ಲವೋ, ಹೇತಾತ-ಎಲೈ ತಂದೆಯೇ, ತಸ್ಯಮಹೀಪತೇಃ-ಅಂಥಾ ಅರಸಿಗೆ, ಮಹಾನ್-ಬಹಳವಾದ, ಅಧರ್ಮಸ್ತು-ಅಧರ್ಮವಾದರೆ. ಭವೇತ್-ಆಗುವದು॥೧೧॥ ಯಃ-ಯಾವ ರಾಜನು, ಯುಂಜಾನಃ-ಯತ್ನಮಾಡಿದವನಾಗಿ, ಸ್ವಾನ್-ಸ್ವಕೀಯವಾದ, ಪ್ರಾಣಾನಿವ-ಪ್ರಾಣಗಳನ್ನಂತೆ. ಪ್ರಾಣೈಃ-ಪ್ರಾಣಗಳಿಗಿಂತಲೂ, ಇಷ್ಟಾನ್-ಹಿತಕರರಾದ, ಸರ್ವಾನ್-ಸಮಸ್ತರಾದ. ವಿಷಯವಾಸಿನಃ-ದೇಶವಾಸಿಗಳಾದ ಪ್ರಜೆಗಳನ್ನು. ಸದಾ-ಸರ್ವಕಾಲದಲ್ಲಿಯೂ, ರಕ್ಷನ್-ಸಂರಕ್ಷಣೆಮಾಡುತ್ತಿರುವನಾಗಿ, ನಿತ್ಯಯುಕ್ತಃ-ನಿರಂತರವೂ ಜಾಗರೂಕಾವಸ್ಥೆಯುಳ್ಳವನಾಗಿ ಇರುತ್ತಾನೋ, ಹೇರಾಮ-ಎಲೈ ಶ್ರೀರಾಮನೇ, ಸಃ-ಆ ಅರಸು, ಬಹುವಾರ್ಷಿಕೀಂ-ಬಹಳ ಸಂವತ್ಸರಗಳು ಇರುತ್ತಿರುವ, ಶಾಶ್ವತೀಂ-ಶಾಶ್ವತವಾದ, ಕೀರ್ತಿಂ-ಯಶಸ್ಸನ್ನು, ಪ್ರಾಪ್ನೋತಿ-ಪಡೆಯುತ್ತಾನೆ, ಬ್ರಹ್ಮಣಃ-ಚತುರ್ಮುಖಬ್ರಹ್ಮನ, ಪದಂ-ಸ್ಥಾನವನ್ನು, ಆಸಾದ್ಯ-ಹೊಂದಿ, ತತ್ರಾಪಿ-ಆ ಲೋಕದಲ್ಲಿಯೂಕೂಡ, ಮಹೀಯತೇ-ಮಹತ್ವವನ್ನು ಪಡೆಯುತ್ತಾನೆ ॥೧೨॥ ಮುನಿಃ-ಋಷಿಯು, ಮೂಲಫಲಾಶನಃ-ಕಂದಮೂಲಗಳೂ ಫಲಗಳೂ ಅಶನವಾಗುಳ್ಳವನಾಗಿ, ಪರಂ-ಶ್ರೇಷ್ಠವಾದ. ಧರ್ಮಂ-ತಪೋರೂಪವಾದ ಧರ್ಮವನ್ನು, ಕರೋತೀತಿಯತ್-ಮಾಡುತ್ತಾನೆಂಬದು ಯಾವದುಂಟೋ, ತತ್ರ-ಆ ಮಾಡಲ್ಪಟ್ಟ ಧರ್ಮದಲ್ಲಿ, ಚತುರ್ಭಾಗಃ-ನಾಲ್ಕನೇಭಾಗವು, ಪ್ರಜಾಃ-ಪ್ರಜೆಗಳನ್ನು, ಧರ್ಮೇಣ-ಧರ್ಮದಿಂದ, ರಕ್ಷತಃ-ಸಂರಕ್ಷಿಸುತ್ತಿರುವ, ರಾಜ್ಞಃ-ಅರಸಿಗೆ. ಭವತಿ-ಆಗುತ್ತದೆ ॥೧೪॥ ಹೇರಾಮ-ಎಲೈ ಶ್ರೀರಾಮನೇ, ಸೋಯಂ-ಆ ಈ, ಬ್ರಾಹ್ಮಣಭೂಯಿಷ್ಠಃ-ಬ್ರಾಹ್ಮಣರೇ ಅಧಿಕವಾಗುಳ್ಳ, ಮಹಾನ್-ದೊಡ್ಡದಾದ, ವಾನಪ್ರಸ್ಥಗಣಃ-ವಾನಪ್ರಸ್ಥಾಶ್ರಮವನ್ನು ವಹಿಸಿದ ಬ್ರಹ್ಮಕ್ಷತ್ರಿಯವೈಶ್ಯರ ಸಮುದಾಯವು. ತ್ವಂನಾಥಃ-ನೀನೇನಾಥನಾಗಿರೊಂಥದ್ದಾಗಿಧೆ, ಯದ್ವಾ-ಬ್ರಾಹ್ಮಣಭೂಯಿಷ್ಠಃ-ಬ್ರಹ್ಮವೇತ್ತೃಗಳೇ ಅಧಿಕವಾಗುಳ್ಳ, (ಅಂದರೆ ಪರಮೈಕಾಂತಭಕ್ತರೇ ಅಧಿಕವಾಗುಳ್ಳ, ತ್ವನ್ನಾಥಃ-ನಿನ್ನನ್ನೇ ನಾಥನನ್ನಾಗಿ ಭಾವಿಸುತ್ತಿರುವ, ಮಹಾನ್-ನಿರತಿಶಯ ಮಹಾಮಹಿಮೆಯುಳ್ಳ, ವಾನಪ್ರಸ್ಥಗಣಃ-ಈ ವನದಲ್ಲಿ ವಾಸಮಾಡುತ್ತಿರುವ ವಾನಪ್ರಸ್ಥರ ತಂಡವು, ಅನಾಥವತ್-ನಾಥನಿಲ್ಲದಹಾಗೆ, ಭೃಶಂ-ಅತ್ಯಂತವಾಗಿ. ರಾಕ್ಷಸೈಃ-ರಕ್ಕಸರಿಂದ. ಬಾಧ್ಯತೇ-ಬಾಧಿಸಲ್ಪಡುತ್ತದೆ ॥೧೫॥ ಏಹಿ-ಬಾ, ವನೇ-ಅರಣ್ಯದಲ್ಲಿ. ಘೋರೈಃ-ಕ್ರೂರರಾದ, ರಾಕ್ಷಸೈಃ-ರಕ್ಕಸರಿಂದ, ಬಹುಧಾ-ಬಹಳವಾಗಿ.. ಹತಾನಾಂ-ಹೊಡೆಯಲ್ಪಟ್ಟ. ಭಾವಿತಾತ್ಮನಾಂ-ಬ್ರಹ್ಮಜ್ಞಾನಿಗಳಾದ, ಮುನೀನಾಂ-ಋಷಿಗಳ. ಶರೀರಾಣಿ-ದೇಹಗಳನ್ನು, ಪಶ್ಯ-ನೋಡು ॥೧೬॥ ಅನುಮಂದಾಕಿನೀಮಪಿ-ಗಂಗಾನದಿಯತೀರದಲ್ಲಿ, ಚಿತ್ರಕೂಟಾಲಯಾನಾಂಚ-ಚಿತ್ರಕೂಟದಲ್ಲಿ ವಾಸವಾಗುಳ್ಳವರ, ಪಂಪಾನದೀನಿವಾಸಾನಾಂಚ-ಪಂಪಾನದಿಯೇ ನಿವಾಸವಾಗುಳ್ಳ. ಋಷೀಣಾಂ-ಋಷಿಗಳ, ಮಹತ್-ಬಹಳವಾದ. ಕದನಂ-ಹಿಂಸೆಯು, ಕ್ರಿಯತೇ-ಮಾಡಲ್ಪಡುತ್ತದೆ ॥೧೭॥ ಏವಂ-ಈಪರಿಯಾಗಿ, ವಯಂ-ನಾವುಗಳು, ತಪಸ್ವಿನಾಂ-ಋಷಿಗಳಿಗೆ. ಭೀಮಕರ್ಮಭಿಃ-ಭಯಂಕರವಾದ

---

ಹುವವನಾಗು ।೧೦। ಅರಸಾದವನುಯಾವಕಾಣಿಕೆಕಪ್ಪಗಳೆಂಬ ಆರರಲ್ಲಿ ಒಂದುಹಿಸ್ಸೆಯನ್ನು ತೆಗೆದುಕೊಳ್ಳುತ್ತಾ ಪ್ರಜೆಗಳನ್ನು ಮಕ್ಕಳಂತೆ ಪಾಲಿಸುವದಿಲ್ಲವೋ, ಅಂಥಾ ರಾಜನಿಗೆ ಅಧರ್ಮವುಂಟಾಗುವದು ।೧೧। ಯಾವ ಅರಸು ಯತ್ನಿಸಿ ತನ್ನ ಪ್ರಾಣಗಳನ್ನು ವಿಶ್ವಾಸವಾಗಿ ನೋಡುವಂತೆ ದೇಶವಲ್ಲಿರುವ ಜನಗಳನ್ನು ಸರ್ವದಾರಕ್ಷಿಸುತ್ತಾ ನಿರಂತರವೂ ಜಾಗರೂಕತೆಯಾಗಿರುವನೊ ಆಧೊರೆಯು, ಶಾಶ್ವತವಾದ ಕೀರ್ತಿಯಂ ಪಡದು ಬ್ರಹ್ಮಸಾಯುಜ್ಯವಂ ಹೊಂದಿ ಅಲ್ಲಿಯೂಕೂಡ ಪೂಜ್ಯನಾಗಿರುವನು ।೧೨। ಋಷಿಯು ಕಂದಮೂಲಗಳನ್ನೂ ಫಲಗಳನ್ನು ಭುಜಿಸುತ್ತಾ ಉತ್ತಮವಾದ ಯಾವಯಾವ ಧರ್ಮವಂ ಗೈಯ್ಯುವನೋ ಆ ಧರ್ಮಗಳಲ್ಲಿ ನಾಲ್ಕನೆಯ ಭಾಗವು ಧರ್ಮವಾಗಿ ಜನಗಳಂ ಪರಿಪಾಲಿಸುವ ರಾಜನಿಗೆ ಉಂಟಾಗುವದು ॥೧೪। ಎಲೈ ಶ್ರೀರಾಮನೇ! ಬ್ರಾಹ್ಮಣರೇ ಅಧಿಕವಾಗಿವುಳ್ಳ ಮಹತ್ತರವಾದ, ಮತ್ತು ವಾನಪ್ರಸ್ಥಾಶ್ರಮವನ್ನು ವಹಿಸಿರುವ “ ಬ್ರಹ್ಮಕ್ಷತ್ರಿಯ ವೈಶ್ಯ ಶೂದ್ರರ ” ಸಮುದಾಯವು ನಿನ್ನನ್ನೆ ನಾಥನನ್ನಾಗಿ ನಂಬಿಧೆ. ಈ ಕಾಡಿನಲ್ಲಿ ಕಡುಭಯಂಕರರಾದ ರಕ್ಕಸರಿಂಧ ವಿಧವಿಧವಾಗಿ ವಧಿಸಲ್ಪಟ್ಟ ಮುನಿಗಳ ಶರೀರಗಳಂ ನೋಡಲು ಬಾ? ಗಂಗಾನದಿಯ ಧಡದಲ್ಲಿ ವಾಸಿಸ

ಏವಂ ವಯಂ ನ ಮೃಷ್ಯಾಮೋ ವಿಪ್ರಕಾರಂ ತಪಸ್ವಿನಾಂ। ಕ್ರಿಯಮಾಣಂ ವನೇ ಘೋರಂ ರಕ್ಷೋಭಿರ್ಭೀಮಕರ್ಮಭಿಃ ॥೧೮॥
ತತಸ್ತ್ವಾಂ ಶರಣಾರ್ಥಂ ಚ ಶರಣ್ಯಂ ಸಮುಪಸ್ಥಿತಾಃ । ಪರಿಪಾಲಯ ನೋ ರಾಮ ವಧ್ಯಮಾನಾನ್ನಿಶಾಚರೈಃ ॥೧೯॥
ಪರಾ ತ್ವತ್ತೋ ಗತಿರ್ವೀರ ಪೃಥಿವ್ಯಾಂ ನೋಪಪದ್ಯತೇ । ಪರಿಪಾಲಯ ನಸ್ಸರ್ವಾನ್ ರಾಕ್ಷಸೇಭ್ಯೋ ನೃಪಾತ್ಮಜ ॥೨೦॥ ಏತ
ಚ್ಛ್ರುತ್ವಾ ತು ಕಾಕುತ್ಸ್ಥಸ್ತಾಪಸಾನಾಂ ತಪಸ್ವಿನಾಂ । ಇದಂ ಪ್ರೋವಾಚ ಧರ್ಮಾತ್ಮಾ ಸರ್ವಾನೇವ ತಪಸ್ವಿನಃ ॥೨೧॥
ನೈವಮರ್ಹಥ ಮಾಂ ವಕ್ತುಮಾಜ್ಞಾಪ್ಯೋಹಂ ತಪಸ್ವಿನಾಂ । ಕೇವಲೇನಾತ್ಮಕಾರ್ಯೇಣ ಪ್ರವೇಷ್ಟವ್ಯಂ ಮಯಾ ವನಂ॥ ವಿಪ್ರ
ಕಾರಮಪಾಕ್ರಷ್ಟುಂ ರಾಕ್ಷಸೈರ್ಭವತಾಮಿಮಂ ॥೨೨॥ ಪಿತುಸ್ತು ನಿರ್ದೇಶಕರಃ ಪ್ರವಿಷ್ಟೋಹಮಿದಂ ವನಂ ॥ ಭವ
ತಾಮರ್ಥಸಿದ್ಧ್ಯರ್ಥಮಾಗತೋಹಂ ಯದೃಚ್ಛಯಾ ॥೨೩॥ ತಸ್ಯ ಮೇಯಂ ವನೇ ವಾಸೋ ಭವಿಷ್ಯತಿ ಮಹಾಫಲಃ ॥೨೪॥
ತಪಸ್ವಿನಾಂ ರಣೇ ಶತ್ರೂನ್ ಹಂತುಮಿಚ್ಛಾಮಿ ರಾಕ್ಷಸಾನ್। ಪಶ್ಯಂತು ವೀರ್ಯಮೃಷಯಸ್ಸಭ್ರಾತುರ್ಮೇ ತಪೋಧನಾಃ ॥೨೫॥

---

ವ್ಯಾಪಾರಮುಳ್ಳ, ರಕ್ಷೋಭಿಃ-ರಾಕ್ಷಸರಿಂದ. ಕ್ರಿಯಮಾಣಂ-ಮಾಡಲ್ಪಡುತ್ತಿರುವ, ಘೋರಂ-ಭಯಂಕರವಾದ, ವಿಪ್ರಕಾರಂ-ಅಪಕಾರವನ್ನು. ನಮೃ
ಷ್ಯಾಮಃ-ಸಹಿಸಲಾರೆವು ॥೧೮॥ ತತಃ-ಆಕಾರಣದದೆಸೆಯಿಂದ, ಹೇರಾಮ-ಎಲೈ ಶ್ರೀರಾಮನೇ, ಶರಣ್ಯಂ-ಸಂರಕ್ಷಕನಾದ. ತ್ವಾಂ-ನಿನ್ನನ್ನು. ಶರಣಾ
ರ್ಥಂ-ರಕ್ಷಣಾರ್ಥವಾಗಿ. ಸಮುಪಸ್ಥಿತಾಃ-ಬಂದಿದ್ದೇವೆ, ನಿಶಾಚರೈಃ-ರಕ್ಕಸರಿಂದ, ವಧ್ಯಮಾನಾನ್-ಸಂಹರಿಸಲ್ಪಡುತ್ತಿರುವ. ನಃ-ನಮ್ಮಗಳನ್ನು, ಪರಿ
ಪಾಲಯ-ಸಂರಕ್ಷಿಸು ॥೧೯॥ ಹೇವೀರ-ಎಲೆ ಶೂರನೇ, ತ್ವತ್ತಃ-ನಿನಗಿಂತಲೂ, ಪರಾ-ಮತ್ತೊಂದಾದ ಗತಿಃ-ಶರಣವು, ಪೃಥಿವ್ಯಾಂ-ನೆಲದಲ್ಲಿ, ನೋಪ
ಪದ್ಯತೇ-ಕಾಣುವದಿಲ್ಲ. ಹೇನೃಪಾತ್ಮಜ-ಎಲೈ ಮನುಷ್ಯಶ್ರೇಷ್ಠನೇ, ಸರ್ವಾನ್-ಸಮಸ್ತರಾದ, ನಃ-ನಮ್ಮಗಳನ್ನು. ರಾಕ್ಷಸೇಭ್ಯಃ-ರಾಕ್ಷಸರದೆಸೆಯಿಂದ,
ಪರಿಪಾಲಯ-ರಕ್ಷಿಸು ॥೨೦॥ ಧರ್ಮಾತ್ಮಾ-ಧರ್ಮಿಷ್ಠನಾದ, ಕಾಕುತ್ಸ್ಥಃ-ಶ್ರೀರಾಮನು, ತಪಸ್ವಿನಾಂ-ತಪೋವಂತರಾದ, ತಾಪಸಾನಾಂ-ಋಷಿಗಳ, ಏತ
ತ್-ಈ ಮಾತನ್ನು, ಶ್ರುತ್ವಾ-ಕೇಳಿ, ಸರ್ವಾನೇವ-ಸಮಸ್ತರಾದ, ತಪಸ್ವಿನಃ-ಋಷಿಗಳಂಕುರಿತು. ಇದಂ-ಈ ಮಾತನ್ನು, ಪ್ರೋವಾಚ-ಹೇಳಿದನು॥೨೧॥
ಮಾಂ-ನನ್ನನ್ನು ಕುರಿತು. ಏವಂ-ಈಪರಿಯಾಗಿ, ವಕ್ತುಂ-ಹೇಳುವದಕ್ಕೋಸ್ಕರ, ನಾರ್ಹಥ-ಯೋಗ್ಯರಾಗಬ್ಯಾಡಿರೀ, ತಪಸ್ವಿನಾಂ-ಋಷಿಗಳಿಂದ,
ಅಹಂ-ನಾನು, ಆಜ್ಞಾಪ್ಯಃ-ಆಜ್ಞಾಪಿಸಲ್ಪಟ್ಟವನು, ಭವತಾಂ-ನಿಮ್ಮಗಳಿಗೆ, ರಾಕ್ಷಸೈಃ-ರಾಕ್ಷಸರಿಂದ, ಇಮಂವಿಪ್ರಕಾರಂ-ಈ ಅಪಕಾರವನ್ನು. ಅಪಾಕ್ರ
ಷ್ಟುಂ-ಹೋಗಲಾಡಿಸುವದಕ್ಕೋಸ್ಕರ, ಮಯಾ-ಎನ್ನಿಂದ. ಕೇವಲೇನ-ಮುಖ್ಯವಾದ, ಆತ್ಮಕಾರ್ಯೇಣ-ಸ್ವಕಾರ್ಯದಿಂದ, ವನಂ-ಅರಣ್ಯವು, ಪ್ರವೇಷ್ಟ
ವ್ಯಾ-ಪ್ರವೇಶಿಸತಕ್ಕದ್ದು ॥೨೨॥ ಪಿತುಸ್ತು-ತಂದೆಯ, ನಿರ್ದೇಶಕರಃ-ಆಜ್ಞೆಯನ್ನು ಮಾಡುವನಾಗಿ, ಅಹಂ-ನಾನು, ಇದಂವನಂ-ಈ ಅರಣ್ಯವ
ನ್ನು, ಪ್ರವಿಷ್ಟಃ-ಪ್ರವೇಶಮಾಡಿದ್ದೇನೆ. ಅಹಂ-ನಾನು, ಯದೃಚ್ಛಯಾ-ಸ್ವೇಚ್ಛೆಯಿಂದ, ಭವತಾಂ-ನಿಮ್ಮಗಳ. ಅರ್ಥಸಿದ್ಧ್ಯರ್ಥಂ-ಕಾರ್ಯಸಿದ್ಧ್ಯರ್ಥ
ವಾಗಿ, ಆಗತಃ-ಬಂದಿದ್ದೇನೆ ॥೨೩॥ ತಸ್ಯ-ಅಂಥಾ, ಮೇ-ಯೆನಗೆ, ಅಯಂ-ಈ, ವನೇ-ಅರಣ್ಯದಲ್ಲಿ, ವಾಸಃ-ನಿವಾಸವು, ಮಹಾಫಲಃ-ಬಹಳ ಫಲವು
ಳ್ಳದ್ದು, ಭವಿಷ್ಯತಿ-ಆಗುವದು ॥೨೪॥ ಹೇತಪೋಧನಾಃ-ಎಲೈ ಋಷಿಗಳಿರ್‍ಯಾ, ತಪಸ್ವಿನಾಂ-ಋಷಿಗಳಿಗೆ. ಶತ್ರೂನ್-ಶತ್ರುಗಳಾದ, ರಾಕ್ಷಸಾನ್-ರಾ
ಕ್ಷಸರನ್ನು, ರಣೇ-ಯುದ್ಧದಲ್ಲಿ. ಹಂತುಂ-ಹೊಡೆಯುವದಕ್ಕೋಸ್ಕರ, ಇಚ್ಛಾಮಿ-ಇಚ್ಛೈಸುತ್ತೇನೆ, ಋಷಯಃ-ಋಷಿಗಳು. ಸಭ್ರಾತುಃ-ತಮ್ಮನಿಂ
ದೊಡಗೂಡಿದ, ಮೇ-ನನ್ನ, ವೀರ್ಯಂ-ಶೌರ್ಯವನ್ನು, ಪಶ್ಯಂತು-ನೋಡಲೀ ॥೨೫॥ ಧರ್ಮೇ-ಧರ್ಮದಲ್ಲಿ, ಧೃತಾತ್ಮಾ-ಇರಿಸಲ್ಪಟ್ಟ ಮನವುಳ್ಳ,
ವೀರಃ-ಶೂರನಾದ ಶ್ರೀರಾಮನು, ತಪೋಧನಾನಾಂ-ಋಷಿಗಳಿಗೆ, ಅಭಯಂ-ಅಭಯವನ್ನು, ದತ್ವಾ-ಕೊಟ್ಟು, ಸಹಲಕ್ಷ್ಮಣೇನ-ಲಕ್ಷ್ಮಣನೊಡನೆ,
ತಪೋಧನೈಶ್ಚಾಪಿ-ಋಷಿಗಳಿಂದಲೂ, ಸಭಾಜ್ಯವೃತ್ತಃ-ಪೂಜನೀಯವಾದ ವ್ಯಾಪಾರವುಳ್ಳವನಾಗಿ, ಸುತೀಕ್ಷ್ಣಮೇವ-ಸುತೀಕ್ಷ್ಣ ಋಷಿಯಂಕುರಿತು,

---

ತ್ತಿರುವ ಮತ್ತು ಪಂಪಾನದಿಯ ತೀರವಾಸಿಗಳಾದ ಋಷಿಗಳ ವಧೆಯು ಮಾಡಲ್ಪಡುತ್ತಿಧೆ- ರಾಕ್ಷಸರು ಮಾಡು
ವ ಭಯಂಕರವಾದ ಈ ಅಪರಾಧವನ್ನು ನಾವು ಸಹಿಸಲಾರೆವು, ಆದಕಾರಣ ನಿನ್ನನ್ನೇ ಶರಣುಹೊಂದಿದ್ದೇವೇ. ನ
ಮ್ಮೆಲ್ಲರನ್ನು ಪರಿಪಾಲಿಸುವನಾಗು, ।೧೯। ನಿನ್ನ ವಿನಹಾ ನಮಗೆ ಮತ್ತ್ಯಾರೂದಿಕ್ಕಿಲ್ಲ, ಈ ರಾಕ್ಷಸಭೀತಿ
ಯಂ ನಿವಾರಿಸಿ ನಮ್ಮಗಳನ್ನು ರಕ್ಷಿಸೆಂದು ಆ ಋಷಿಗಳೆಲ್ಲರು ಪರಿಪರಿಪ್ರಾರ್ಥಿಸಿದವರಾಗಲು ಧರ್ಮಿಷ್ಠನಾದ
ಶ್ರೀರಾಮನು. ಈ ಋಷಿಗಳ ವಾಕ್ಯವಂಕೇಳಿ, ಹೇಳಲೊಡಗಿದನದೆಂತೆನೆ,—ಎಲೈ ಮಹರ್ಷಿಗಳಿರಾ! ನನಗೆ
ಈ ರೀತಿಯಾಗಿ ಹೇಳಬ್ಯಾಡಿರಿ, ನಾನು ನಿಮ್ಮಿಂದಾಜ್ಞಾಪಿಸಲ್ಪಡತಕ್ಕವನು, ತಮಗೆ ಸಂಭವಿಸಿದ ಈ ಅಪಕಾರ
ವನ್ನು ಪರಿಹರಿಸಲೋಸುಗವೇ ಪಿತೃವಾಕ್ಯಪರಿಪಾಲನೆಯಂಗೈಯ್ಯುವನಾಗಿ ಈ ಅರಣ್ಯವಂ ಹೊಕ್ಕೆನು ಅಂಥಾ
ನನಗೆ ಈ ವನವಾಸವು ಮಹಾ ಫಲವುಳ್ಳದ್ದಾಗುವದು, ನಿಮಗೆ ಹಗೆಯವರಾದ ರಕ್ಕಸರನ್ನು ಸಂಗರದಲ್ಲಿ ಕೊ
ಲ್ಲುವೆನು, ನೀವೆಲ್ಲರೂ ತಮ್ಮನಿಂ ದೊಡಗೂಡಿದ ಯನ್ನ ಕಾರ್ಯವಂ ನೋಡಿರೆಂದು ಶೂರನಾದ ಶ್ರೀರಾಮನು ಮು
ನಿಗಳಿಗೆ ಅಭಯವನ್ನಿತ್ತು, ತಮ್ಮನಿಂದಲೂ, ಋಷಿಗಳಿಂದಲೂ, ಶ್ಲಾಘಿಸಲ್ಪಡುವ ವ್ಯಾಪಾರವುಳ್ಳವನಾಗಿ ಸುತೀ
ಕ್ಷ್ಣನೆಂಬ ಮುನಿಯ ಸನ್ನಿಧಾನಕ್ಕೆ ಸಾರಿದನು ।೧೯। —*ಅರಣ್ಯಕಾಂಡದಲ್ಲಿನ ೬ನೆಯಸರ್ಗಂಮುಗಿದುದ್ದು*—

ದತ್ತ್ವಾಭಯಂಚಾಪಿತಪೋಧನಾನಾಂಧರ್ಮೇಧೃತಾತ್ಮಾಸಹಲಕ್ಷ್ಮಣೇನ । ತಪೋಧನೈಶ್ಚಾಪಿಸಭಾಜ್ಯವೃತ್ತಸ್ಸುತೀಕ್ಷ್ಣ ಮೇವಾಭಿಜಗಾಮವೀರಃ ॥೧೯॥ —**ಇತಿಶ್ರೀಮದರಣ್ಯಕಾಂಡೆ ಷಷ್ಠಸ್ಸರ್ಗಃ॥**—

ರಾಮಸ್ತುಸಹಿತೋಭ್ರಾತ್ರಾಸೀತಯಾಚಪರಂತಪಃ। ಸುತೀಕ್ಷ್ಣಸ್ಯಾಶ್ರಮಪದಂಜಗಾಮಸಹತೈರ್ದ್ವಿಜೈಃ॥೧
ಸಗತ್ವಾದೂರಮಧ್ವಾನಂನದೀಸ್ತೀರ್ತ್ವಾಬಹೂದಕಾಃ। ದದರ್ಶವಿಪುಲಂಶೈಲಂಮಹಾಮೇಘಮಿವೋನ್ನತಂ ॥೨॥
ತತಸ್ತದಿಕ್ಷ್ವಾಕುವರೌಸತತಂವಿವಿಧೈರ್ದ್ರುಮೈಃ । ಕಾನನಂತೌವಿವಿಶತುಸ್ಸೀತಯಾಸಹರಾಘವೌ ॥೩॥ ಪ್ರವಿಷ್ಟ
ಸ್ತುವನಂಘೋರಂಬಹುಪುಷ್ಪಫಲದ್ರುಮಂ । ದದರ್ಶಾಶ್ರಮಮೇಕಾಂತೇಚೀರಮಾಲಾಪರಿಷ್ಕೃತಂ ॥೪॥ ತತ್ರತಾಪ
ಸಮಾಸೀನಮ್ಮಲಪಂಕಜಟಾಧರಂ । ರಾಮಸ್ಸುತೀಕ್ಷ್ಣಂವಿಧಿವತ್ತಪೋವೃದ್ಧಮಭಾಷತ ॥೫॥ ರಾಮೋಹಮಸ್ಮಿಭಗ
ವನ್ಭವಂತಂದ್ರಷ್ಟುಮಾಗತಃ । ತ್ವಂಮಾಭಿವದಧರ್ಮಜ್ಞಮಹರ್ಷೇಸತ್ಯವಿಕ್ರಮ ॥೬॥ ಸನಿರೀಕ್ಷ್ಯತತೋವೀರಂ
ರಾಮಂಧರ್ಮಭೃತಾಂವರಂ। ಸಮಾಶ್ಲಿಷ್ಯಚಬಾಹುಭ್ಯಾಮಿದಂವಚನಮಬ್ರವೀತ್ ॥೭॥ ಸ್ವಾಗತಂಖಲುತೇವೀರ

---

ಅಭಿಜಗಾಮ-ತೆರಳಿದನು, (ವರಾರ್ಯವೃತ್ತಃ ಇತಿಪಾಠಾಂತರಂ-ವರ-ಶ್ರೇಷ್ಠವಾದ ರಾಕ್ಷಸವಧಾಪ್ರತಿಜ್ಞಾರೂಪವಾದ, ಆರ್ಯ-ಪೂಜ್ಯವಾದ, ವೃತ್ತಃ-ನಡತೆಯುಳ್ಳವನಾಗಿ ಎಂದು ಆ ಪಾಠದಲ್ಲಿ ಅರ್ಥವು) ॥೧೯॥ —**ಇತಿಶ್ರೀಮದಾರಣ್ಯಕಾಂಡೆ-ಷಷ್ಠಸ್ಸರ್ಗಃ**—

ಪರಂತಪಃ-ಶತ್ರುಸಂಹಾರಕನಾದ, ರಾಮಸ್ತು-ಶ್ರೀರಾಮನಾದರೆ, ಭ್ರಾತ್ರಾ-ತಮ್ಮನೊಡನೆ, ಸೀತಯಾಚ-ಸೀತಾದೇವಿಯೊಡನೆ. ಸಹಿತಃ-ಕೂಡಿದವನಾಗಿ, ತೈಸ್ಸಹ-ಆ ಬ್ರಾಹ್ಮಣರೊಡಗೂಡ, ಸುತೀಕ್ಷ್ಣಸ್ಯ-ಸುತೀಕ್ಷ್ಣನೆಂಬ ಋಷಿಯ, ಆಶ್ರಮಂ-ಆಶ್ರಮಂಕುರಿತು, ಜಗಾಮ-ತೆರಳಿದನು ॥೧॥
ಸಃ-ಆ ಶ್ರೀರಾಮನು, ದೂರಮಧ್ವಾನಂ-ದೂರವಾದ ಮಾರ್ಗದಲ್ಲಿ, ಗತ್ವಾ-ಹೋಗಿ, ಬಹೂದಕಾಃ-ಬಹಳವಾದ ನೀರುಳ್ಳ, ನದೀಃ-ನದಿಗಳನ್ನು, ತೀರ್ತ್ವಾ-ದಾಂಟಿ, ವಿಪುಲಂ-ವಿಸ್ತಾರವಾದ, ಮಹಾಮೇಘಮಿವ-ದೊಡ್ಡ ಮೇಘದಂತೆ. ಉನ್ನತಂ-ಉದ್ದವಾಗಿರುವ. ಶೈಲಂ-ಬೆಟ್ಟವನ್ನು, ದದರ್ಶ-ಕಂಡನು ॥೨॥
ತತಃ-ಬಳಿಕ, ಇಕ್ಷ್ವಾಕುವರೌ-ಇಕ್ಷ್ವಾಕುವಂಶೋತ್ಪನ್ನರಲ್ಲಿ ಶ್ರೇಷ್ಠರಾದ, ರಾಘವೌ-ಆ ರಾಮಲಕ್ಷ್ಮಣರಿಬ್ಬರೂ, ವಿವಿಧೈಃ-ನಾನಾಬಗೆಗಳಾದ, ದ್ರುಮೈಃ-ಗಿಡಗಳಿಂದ, ಸತತಂ-ನಿರಂತರವೂ ತುಂಬಿರುವ, ತತ್ಕಾನನಂ-ಆ ಅರಣ್ಯವನ್ನು, ಸೀತಯಾಸಹ-ಸೀತಾದೇವಿಯೊಡನೆ. ವಿವಿಶತುಃ-ಹೊಕ್ಕರು॥೩॥
ಬಹುಪುಷ್ಪಫಲದ್ರುಮಂ-ಬಹಳವಾದ ಹೂಗಳೂ ಫಲಗಳೂ ಉಳ್ಳ, ವನಂ-ಅರಣ್ಯವನ್ನು, ಪ್ರವಿಷ್ಟಃ-ಹೊಕ್ಕಿದವನಾಗಿ, ಚೀರಮಾಲಾಪರಿಷ್ಕೃತಂ-ನಾರವಸ್ತ್ರಗಳ ಪಙ್ತಿಯಿಂದ ಅಲಂಕರಿಸಲ್ಪಟ್ಟ. ಆಶ್ರಮಂ-ಆಶ್ರಮವನ್ನು, ಏಕಾಂತೇ-ರಹಸ್ಯದಲ್ಲಿ, ದದರ್ಶ-ಕಂಡನು, ॥೪॥
ರಾಮಃ-ಶ್ರೀರಾಮನು. ತತ್ರ-ಆ ಆಶ್ರಮದಲ್ಲಿ, ಆಸೀನಂ-ಕುಳಿತುಕೊಂಡಿರುವ, ಮಲಪಂಕಜಟಾಧರಂ-ವಾರ್ಧಿಕಾವಸ್ಥೆಯಿಂದಲೂ ನಿಶ್ಚಲವಾದ ತಪಸ್ಸುಮಾಡುವಿಕೆಯಿಂದಲೂ ಧೂಳಿಮುಚ್ಚಿಕೊಂಡು ಮಲಿನನಾಗಿ ಕೆಸರಿನಿಂದ ಯುಕ್ತವಾದ ಜಡೆಗಳನ್ನು ಧರಿಸಿರುವ, ತಪೋವೃದ್ಧಂ-ತಪಸ್ವಿಗಳಲ್ಲಿ ಹಳೆ ವೃದ್ಧನಾದ, ಸುತೀಕ್ಷ್ಣಂ-ಸುತೀಕ್ಷ್ಣನೆಂಬ, ತಾಪಸಂ-ಋಷಿಯನ್ನು ವಿಧಿವತ್-ಯಥಾಶಾಸ್ತ್ರವಾಗಿ, ಅಭಾಷತ-ಮಾತನಾಡಿದನು ॥೫॥
ಹೇಧರ್ಮಜ್ಞ-ಎಲೈ ಧರ್ಮಗಳನ್ನರಿತವನೇ. ಹೇ ಭಗವನ್-ಎಲೈ ಷಡ್ಗುಣೈಶ್ವರ್ಯಸಂಪನ್ನನೇ, ಅಹಂ-ನಾನು, ರಾಮಃ-ಶ್ರೀರಾಮನು ಎಂದು ಹೆಸರುಳ್ಳವನು. ಅಸ್ಮಿ-ಆಗಿದ್ದೇನೆ, ಭವಂತಂ-ನಿನ್ನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ ಆಗತಃ-ಬಂದಿದ್ದೇನೆ. ಹೇಮಹರ್ಷೇ-ಎಲೈ ಮಹಾಮುನಿಯೇ. ಹೇಸತ್ಯವಿಕ್ರಮ-ಎಲೈ ಸಫಲವಾದ ತಪಃಪರಾಕ್ರಮವುಳ್ಳವನೇ. ಮಾಂ-ನನ್ನನ್ನು ಕುರಿತು, ತ್ವಂ-ನೀನು, ಮಾಭಿವದ-ನಮಸ್ಕಾರಮಾಡಬ್ಯಾಡ ॥೬॥ ಸಃ-ಆ ಸುತೀಕ್ಷ್ಣಋಷಿಯು, ಧರ್ಮಭೃತಾಂ-ಧರ್ಮಿಷ್ಠರೊಳಗೆ, ವರಂ-ಶ್ರೇಷ್ಠನಾದ, ವೀರಂ-ಶೂರನಾದ, ರಾಮಂ-ಶ್ರೀರಾಮನನ್ನು, ಬಾಹುಭ್ಯಾಂ-ಭುಜಗಳಿಂದ. ಸಮಾಶ್ಲಿಷ್ಯ-ಅಪ್ಪಿಕೊಂಡು ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು ॥೭॥ ಹೇವೀರ-ಎಲೈ ಶೂರನೆ, ಹೇಧರ್ಮಭೃತಾಂವರ-ಧ

---

ಶತ್ರುಸಂಹಾರಕನಾದ ಶ್ರೀರಾಮನು ಸೀತಾಲಕ್ಷ್ಮಣರಿಂದಲೂ, ಬ್ರಾಹ್ಮಣರಿಂದಲೂ,ಯುಕ್ತನಾಗಿಸುತೀಕ್ಷ್ಣ ಋಷಿಯ ಆಶ್ರಮವಂ ಕುರಿತು ತೆರಳಿ, ಬಹುದೂರವು ಪೋಗಿ ಬಹಳ ನೀರುಳ್ಳ ನದಿಗಳಂದಾಂಟಿ ವಿಸ್ತಾರವಾದ ಕಾಲಮೇಘದಂತೆ ಮಹದೌನ್ನತ್ಯವುಳ್ಳ ಬೆಟ್ಟವಂ ಕಂಡನು ।೨। ಬಳಿಕ ಇಕ್ಷ್ವಾಕುವಂಶೋತ್ಪನ್ನರಾದ ಆ ರಾಮಲಕ್ಷ್ಮಣರೀರ್ವರೂ ನಾನಾಬಗೆಗಳಾದ ವೃಕ್ಷಗಳಿಂವ ತುಂಬಿರುವ ಆ ಅರಣ್ಯವನ್ನು ಸೀತಾದೇವಿಯೊಡನೆ ಹೊಕ್ಕು ಅನೇಕ ಫಲಗಳೂ, ಗಿಡಗಳೂ ವುಳ್ಳದ್ದಾಗಿಯೂ, ನಾರುಮಡಿಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಇರುವ ಆಶ್ರಮವನ್ನು ರಹಸ್ಯಪ್ರದೇಶದಲ್ಲಿ ಕಂಡನು ।೪। ಆ ಆಶ್ರಮದಲ್ಲಿ ಮುದಿತನದಿಂದಲೂ, ನಿಶ್ಚಲವಾದ ತಪದಿಂದಲೂ, ಧೂಳುಮುಚ್ಚಿದ ಜಡೆಗಳಂ ಧರಿಸಿದವನಾದ ಮತ್ತು ತಪೋವೃದ್ಧನಾದ ಸುತೀಕ್ಷ್ಣಮುನಿಯನ್ನು ಯಥಾಶಾಸ್ತ್ರವಾಗಿ ಮಾತಾಡಿಸಿದನದೆಂತೆನೆ,-॥೫। ಎಲೈ ಧರ್ಮವನ್ನರಿತವನೇ! ನಾನು ರಾಮನೆಂದು ಹೆಸರುಳ್ಳವನು, ತಮ್ಮ ದರ್ಶನಾರ್ಥವಾಗಿ ಬಂದಿದ್ದೇನೆ. ನನಗೆ ನೀನು ನಮಸ್ಕರಿಸಬ್ಯಾಡವೆಂದು ನುಡಿಯಲು ಆ ಮಹರ್ಷಿಯು ಧರ್ಮಿಷ್ಠರೊಳಗುತ್ತಮನಾದ ಆ ಶ್ರೀರಾಮನನ್ನು ಭುಜಗಳಿಂದಪ್ಪಿಕೊಂಡು ಈ ಮಾತನ್ನು ಹೇಳಿದ

ರಮೇವಧರ್ಮಭೃತಾಂವರ । ಆಶ್ರಮೋಯಂತ್ವಯಾಕ್ರಾಂತಸ್ಸನಾಥಇವಸಾಂಪ್ರತಂ ॥೭॥ ಪ್ರತೀಕ್ಷಮಾಣಸ್ತ್ವಾಮೇವನಾರೋಹೇಹಂಮಹಾಯಶಃ । ದೇವಲೋಕಮಿತೋವೀರದೇಹಂತ್ಯಕ್ತ್ವಾಮಹೀತಲೇ ॥೮॥ ಚಿತ್ರಕೂಟಮುಪಾದಾಯರಾಜ್ಯಭ್ರಷ್ಟೋಸಿಮೇಶ್ರುತಃ ॥೯॥ ಇಹೋಪಯಾತಃಕಾಕುತ್ಸ್ಥದೇವರಾಜಶ್ಶತಕ್ರತುಃ । ಉಪಾಗಮ್ಯಚಮೇದೇವೋಮಹಾದೇವಸ್ಸುರೇಶ್ವರಃ । ಸರ್ವಾನ್ಲೋಕಾನ್ಜಿತಾನಾಹಮಮಪುಣ್ಯೇನಕರ್ಮಣಾ ॥೧೦॥ ತೇಷುದೇವರ್ಷಿಜುಷ್ಟೇಷುಜಿತೇಷುತಪಸಾಮಯಾ । ಮತ್ಪ್ರಸಾದಾತ್ಸಭಾರ್ಯಸ್ತ್ವಂವಿಹರಸ್ವಸಲಕ್ಷ್ಮಣಃ ॥೧೧॥ ತಮುಗ್ರತಪಸಂದೀಪ್ತಂಮಹರ್ಷಿಂಸತ್ಯವಾದಿನಂ । ಪ್ರತ್ಯುವಾಚಾತ್ಮವಾನ್ರಾಮೋಬ್ರಹ್ಮಾಣಮಿವವಾಸವಃ ॥೧೨॥ ಅಹಮೇವಾಹರಿಷ್ಯಾಮಿಸ್ವಯಂಲೋಕಾನ್ಮಹಾಮುನೇ । ಆವಾಸಂತ್ವಹಮಿಚ್ಛಾಮಿಪ್ರದಿಷ್ಟಮಿಹಕಾನನೇ ॥೧೩॥ ಭವಾನ್ಸರ್ವತ್ರಕುಶಲಸ್ಸರ್ವಭೂತಹಿತೇರತಃ । ಆಖ್ಯಾತಶ್ಶರಭಂಗೇಣಗೌತಮೇನಮಹಾತ್ಮನಾ ॥೧೪॥ ಏವಮುಕ್ತಸ್ತು

---

ರ್ಮಿಷ್ಠರೊಳಗೆ ಶ್ರೇಷ್ಠನೆ, ಹೇರಾಮ-ಎಲೈ ಶ್ರೀರಾಮನೇ, ತೇ-ನಿನಗೆ, ಸ್ವಾಗತಂಖಲು-ಸುಖಾಗಮನವೇ ಏನು, ತ್ವಯಾ-ನಿನ್ನಿಂದ. ಆಕ್ರಾಂತಃ-ಹೊಕ್ಕಲ್ಪಟ್ಟ, ಅಯಮಾಶ್ರಮಃ-ಈ ಆಶ್ರಮವು, ಸಾಂಪ್ರತಂ-ಈಗ, ಸನಾಥಇವ-ಸ್ವಾಮಿಯಿಂದೊಡಗೂಡಿದಂತೆ, ಅಭವತ್-ಆಯಿತು ॥೭॥ ಹೇ ಮಹಾಯಶಃ-ಎಲೈ ಬಹಳ ಯಶೋವಂತನೇ, ತ್ವಾಮೇವ-ನಿನ್ನನ್ನೇ, ಪ್ರತೀಕ್ಷಮಾಣಃ-ಯೆದುರುನೋಡುತ್ತಿರುವವನಾಗಿ, ಅಹಂ-ನಾನು, ಹೇವೀರ-ಎಲೈಶೂರನೆ, ಇತಃ-ಇಲ್ಲಿ, ದೇಹಂ-ಶರೀರವನ್ನು, ಮಹೀತಲೇ-ಭೂಪ್ರದೇಶದಲ್ಲಿ, ತ್ಯಕ್ತ್ವಾ-ಬಿಟ್ಟು, ದೇವಲೋಕಂ-ಸ್ವರ್ಗಲೋಕವನ್ನು ಬಿಟ್ಟು, ನಾರೋಹೇ-ಆರೋಹಣಮಾಡಲಿಲ್ಲ ॥೮॥ ಚಿತ್ರಕೂಟಂ-ಚಿತ್ರಕೂಟವೆಂಬ ಬೆಟ್ಟವನ್ನು, ಉಪಾದಾಯ-ಬಂದದ್ದು ಮೊದಲ್ಗೊಂಡು. ರಾಜ್ಯಭ್ರಷ್ಟಃ-ರಾಜ್ಯವನ್ನು ಬಿಟ್ಟು ಬಂದವನಾಗಿ, ಮೇ-ನನ್ನಿಂದ. ಶ್ರುತಃ-ಕೇಳಲ್ಪಟ್ಟೆ ॥೯॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೆ, ಶತಕ್ರತುಃ-ನೂರು ಅಶ್ವಮೇಧ ಕ್ರತುಗಳಂ ಮಾಡಿರುವ. ಮಹಾದೇವಃ-ದೇವತೆಗಳೊಳಗೆ ಹಿರಿಯನಾದ, ದೇವಃ-ಸ್ವಯಂಪ್ರಕಾಶನಾದ, ದೇವರಾಜಃ-ದೇವೇಂದ್ರನು, ಇಹ-ಇಲ್ಲಿಗೆ, ಉಪಯಾತಃ-ಬಂದವನಾಗಿ, ಮಮ-ನನ್ನ ಪುಣ್ಯೇನಕರ್ಮಣಾ-ಪುಣ್ಯಕರವಾದ ತಪೋವ್ಯಾಪಾರದಿಂದ, ಸರ್ವಾನ್ಲೋಕಾನ್-ಸಮಸ್ತಲೋಕಗಳನ್ನು ಜಿತಾನ್-ಜಯಿಸಲ್ಪಟ್ಟವುಗಳನ್ನಾಗಿ, ಆಹ-ಹೇಳಿದನು ॥೧೦॥ ದೇವರ್ಷಿಜುಷ್ಟೇಷು-ದೇವರ್ಷಿಗಳಿಂದ ವ್ಯಾಪ್ತವಾದ, ತೇಷು-ಆ ಲೋಕಗಳು, ಮಯಾ-ನನ್ನಿಂದ, ತಪಸಾ-ತಪಸ್ಸಿನಿಂದ. ಜಿತೇಷುಸತ್ಸು-ಜೈಸಲ್ಪಟ್ಟವುಗಳಾಗುತ್ತಿರಲಾಗಿ, ಮತ್ಪ್ರಸಾದಾತ್-ನನ್ನ ಅನುಗ್ರಹದಿಂದ, ಅಥವಾ-ಮತ್ಪ್ರಸಾದಾತ್-ನನ್ನ ಸಮ್ಮತಿಯದೆಸೆಯಿಂದ. ತ್ವಂ-ನೀನು, ಸಭಾರ್ಯಃ-ಹೆಂಡತಿಯೊಡಗೂಡಿದವನಾಗಿ, ಸಲಕ್ಷ್ಮಣಃ-ಲಕ್ಷ್ಮಣನೊಡಗೂಡಿದವನಾಗಿ, ವಿಹರಸ್ವ-ವಿಹಾರಮಾಡು ॥೧೧॥ ಆತ್ಮವಾನ್-ಧೈರ್ಯಶಾಲಿಯಾದ, ರಾಮಃ-ಶ್ರೀರಾಮನು, ಉಗ್ರತಪಸಂ-ಕ್ರೂರವಾದ ತಪಸ್ಸಿನಿಂದ, ಯುಕ್ತಂ-ಮಾಡಿಕೊಂಡಿರುವ, ಸತ್ಯವಾದಿನಂ-ಸತ್ಯಪ್ರತಿಜ್ಞೆವಂತನಾದ. ತಂಮಹರ್ಷಿಂ-ಆ ಸುತೀಕ್ಷ್ಣ ಋಷಿಯಂಕುರಿತು, ಬ್ರಹ್ಮಾಣಂ-ಬ್ರಹ್ಮದೇವರನ್ನು ಕುರಿತು. ಕಾಶ್ಯಪಇವ-ಕಶ್ಯಪನು ಹೇಳಿಯಂತೆ, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೧೨॥ ಹೇಮಹಾಮುನೇ-ಎಲೈ ಮಹರ್ಷಿಯೇ, ಅಹಮೇವ-ನಾನೆ, ಸ್ವಯಂ-ತನ್ನ ಪ್ರಯತ್ನತಾನೆ ಲೋಕಾನ್-ಲೋಕಗಳನ್ನು, ಆಹರಿಷ್ಯಾಮಿ-ಅಪಹರಿಸುವೆನು, ಕಿಂತು-ಮತ್ತೇನೆಂದರೆ, ಇಹಕಾನನೇ-ಈ ಅರಣ್ಯದಲ್ಲಿ, ಅಹಂ-ನಾನು, ಪ್ರದಿಷ್ಟಂ-ನಿನ್ನಿಂದ ತೋರಲ್ಪಟ್ಟ, ಆವಾಸಂ-ಮನೆಯನ್ನು, ಇಚ್ಛಾಮಿ-ಕೋರುತ್ತೇನೆ, ಭವಾನ್-ನೀನು, ಸರ್ವತ್ರ-ಸರ್ವಲೋಕಗಳಲ್ಲಿ ಕುಶಲಃ-ಸಮರ್ಥನು. (ಅಥವಾ-ಕ್ಷೇಮಕರನು ) ಸರ್ವಭೂತಹಿತೇ-ಸಮಸ್ತಪ್ರಾಣಿಗಳಿಗೂ ಇಷ್ಟವನ್ನು ಮಾಡೋಣದಲ್ಲಿ. ರತಃ-ಆಸಕ್ತನೂ ಎಂದು, ಮಹಾತ್ಮನಾ-ಮಹಾ

---

ನು ಎಂತೆನೆ,- ॥೭॥ ಎಲೈ ರಘುನಂದನನೇ! ಸುಖಾಗಮನವೇ? ನಿನ್ನ ಪ್ರವೇಶದಿಂದೀಯಾಶ್ರಮವೀಗ ನಾಥಯುತ್ತವಾಯಿತು, ಸ್ವರ್ಗಲೋಕಕ್ಕೆ ಹೋಗತಕ್ಕವನಾದರೂ, ನಿನ್ನನ್ನೇ ಎದುರುನೋಡುತ್ತಾ, ನಾನು ಈ ದೇಹವನ್ನು ಇಲ್ಲಿಯೇ ಬಿಟ್ಟುಕೊಂಡಿರುವೆನು, (ಅಂದರೆ ನಿನ್ನನ್ನು ನೋಡಿದನಂತರಾ ಸ್ವರ್ಗಕ್ಕೆಹೋಗುವೆನೆಂದು ಭಾವವು) ನೀನು ರಾಜ್ಯವಂಬಿಟ್ಟು ಚಿತ್ರಕೂಟಪರ್ವತಕ್ಕೆ ಬಂದದ್ದು ಮೊದಲ್ಗೊಂಡು ನನಗೆ ತಿಳಿಯುವದ ॥೯॥ ಎಲೈ ಶ್ರೀರಾಮನೇ! ಶತಾಶ್ವಮೇಧಗಳಂ ಗೈದಿರುವ ಇಂದ್ರನು ಇಲ್ಲಿಗೆ ಬಂದು, ನನ್ನ ಪುಣ್ಯದಿಂದ ಉತ್ತಮಲೋಕಂಗಳು ಜಯಿಸಲ್ಪಟ್ಟವೆಂದು ಹೇಳಿದನು,-ಆ ಲೋಕಂಗಳು ನನ್ನಿಂದ ಜಯಿಸಲ್ಪಟ್ಟವುಗಳಾದರೂ ನಾನಲ್ಲಿಗೆ ಸಾರಲಿಲ್ಲ ಮನ್ನನುಗ್ರಹದಿಂದ ಭಾರ್ಯಾಸಹಿತನಾದ ನೀನು ಲಕ್ಷ್ಮಣನೊಡನೆ ಇಲ್ಲಿ ವಿಹರಿಸುತ್ತಿರೆಂದು ನುಡಿಯಲು, ಧೈರ್ಯವಂತನಾದ ಶ್ರೀರಾಮನು ಘೋರವಾದ ತಪದಿಂ ಯುಕ್ತನಾದ ಆ ಸುತೀಕ್ಷ್ಣಮಹರ್ಷಿಗೆ ಕಶ್ಯಪಮುನಿಯು ಚತುರ್ಮುಖ ಬ್ರಹ್ಮನಿಗೆ ಉತ್ತರವನಿತ್ತಂತೆ ಪ್ರತ್ಯುತ್ತರವಂ ಕೊಟ್ಟನು ॥೧೨॥ ಎಲೈ ಮಹರ್ಷಿಯೇ! ನಾನೇ ಲೋಕಂಗಳನ್ನಪಹರಿಸುವೆನು, ಆದರೆ ಈ ಕಾಡಿನಲ್ಲಿ ನಿನ್ನಿಂದ ತೋರಿಸಲ್ಪಟ್ಟ ಪ್ರದೇಶವ ವಾಸಿಸಲಿಚ್ಛಿಸುತ್ತೇನೆ. ನೀನು ಸರ್ವಲೋಕಗಳಿಗೂ ಕ್ಷೇಮವನ್ನುಂಟುಮಾಡುವವನೂ, ಪ್ರಾಣಿಗೆಲ್ಲಾ ಇಷ್ಟವಂ ಗೈಯ್ಯುವುದರಲ್ಲಿ ಆಸಕ್ತಿಯುಳ್ಳವನೆಂದು ಮಹಾತ್ಮನಾದ ಮತ್ತು ಗೌತಮಮುನಿಯ ವಂಶದಲ್ಲಿ ಹುಟ್ಟಿದ ಶರಭಂಗಮುನಿಯು ನನಗೆ ನಿರೂಪಿ

ರಾಮೇಣಮಹರ್ಷಿರ್ಲೋಕವಿಶ್ರುತಃ । ಅಬ್ರವೀನ್ಮಧುರಂವಾಕ್ಯಂಹರ್ಷೇಣಮಹತಾಪ್ಲುತಃ । ಅಯಮೇವಾಶ್ರಮೋ
ರಾಮಗುಣವಾನ್ರಮ್ಯತಾಮಿಹ । ಋಷಿಸಂಘಾನುಚರಿತಸ್ಸದಾಮೂಲಫಲಾನ್ವಿತಃ ।೧೮। ಇಮಮಾಶ್ರಮಮಾ
ಗಮ್ಯಮೃಗಸಂಘಾಮಹಾಯಶಾಃ । ಅಟಿತ್ವಾಪ್ರತಿಗಚ್ಛಂತಿಲೋಭಯಿತ್ವಾಕುತೋಭಯಾಃ । ನಾನ್ಯದೋಷಂಭವೇ
ತತ್ರಮೃಗೇಭ್ಯೋನ್ಯತ್ರವಿದ್ಧಿವೈ ।೧೯॥ ತಚ್ಛ್ರುತ್ವಾವಚನಂತಸ್ಯಮಹರ್ಷೇರ್ಲಕ್ಷ್ಮಣಾಗ್ರಜಃ । ಉವಾಚವ
ಚನಂಧೀರೋವಿಕೃಷ್ಯಸಶರಂಧನುಃ । ತಾನಹಂಸುಮಹಾಭಾಗಮೃಗಸಂಘಾನ್ಸಮಾಗತಾನ್ । ಹನ್ಯಾಂನಿಶಿತಧಾ
ರೇಣಶರೇಣಾಶನಿವರ್ಚಸಾ ।೨೦॥ ಭವಾಂಸ್ತತ್ರಾಭಿಷಜ್ಯೇತಕಿಂಸ್ಯಾತ್ಕೃಚ್ಛ್ರತರಂತತಃ । ಏತಸ್ಮಿನ್ನಾಶ್ರಮೇವಾ
ಸಂಚಿರಂತುನಸಮರ್ಥಯೇ ॥೨೧॥ ತಮೇವಮುಕ್ತ್ವಾವರದಂರಾಮಸ್ಸಂಧ್ಯಾಮುಪಾಗಮತ್ । ಅನ್ವಾಸ್ಯಪಶ್ಚಿ
ಮಾಂಸಂಧ್ಯಾಂತತ್ರವಾಸಮಕಲ್ಪಯತ್ । ಸುತೀಕ್ಷ್ಣಸ್ಯಾಶ್ರಮೇರಮ್ಯೇಸೀತಯಾಲಕ್ಷ್ಮಣೇನಚ ॥೨೨॥ ತತಶ್ಶು

---

ಉದಾರವಾದ ಮನವುಳ್ಳ, ಗೌತಮೇನ-ಗೌತಮಕುಲೋತ್ಪನ್ನನಾದ, ಶರಭಂಗೇಣ-ಶರಭಂಗಋಷಿಯಿಂದ, ಆಖ್ಯಾತಃ-ಹೇಳಲ್ಪಟ್ಟೆನು ||೧೬|| ಏವಂ-
ಈ ರೀತಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಲೋಕವಿಶ್ರುತಃ-ಲೋಕಪ್ರಸಿದ್ಧನಾದ, ಮಹರ್ಷಿಃ-ಸುತೀಕ್ಷ್ಣಋಷಿಯು, ಮಹತಾ
ಬಹಳವಾದ, ಹರ್ಷೇಣ-ಸಂತೋಷದಿಂದ, ಆಪ್ಲುತಃ-ವ್ಯಾಪ್ತನಾದಂಥವನಾಗಿ, ಮಧುರಂ-ರುಚಿಕರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು
||೧೭|| ಹೇರಾಮ-ಎಲೆ ಶ್ರೀರಾಮನೇ, ಋಷಿಸಂಘಾನುಚರಿತಃ-ಋಷಿಗಳ ಸಮೂಹದಿಂದ ಅನುಚರಿತಃ-ಸಂಚರಿಸಲ್ಪಟ್ಟ, ಸದಾ-ಸರ್ವಕಾಲದಲ್ಲಿ, ಮೂ
ಲಫಲಾನ್ವಿತಃ-ಕಂದಮೂಲಗಳಿಂದಲೂ ಫಲಗಳಿಂದಲೂ ಕೂಡಿಕೊಂಡಿರುವ, ಅಯಮೇವಆಶ್ರಮಃ-ಈ ಆಶ್ರಮವೇ, ಗುಣವಾನ್-ವಾಸಯೋಗ್ಯವಾದ
ಗುಣಗಳುಳ್ಳದ್ದು, ಇಹ-ಇಲ್ಲಿಯೇ, ರಮ್ಯತಾಂ-ವಿಹರಿಸಲ್ಪಡಲಿ ||೧೮|| ಹೇ ಮಹಾಯಶಾಃ-ಎಲೈ ಬಹಳ ಕೀರ್ತಿವಂತನೆ, ಮೃಗಸಂಘಾಃ-ಮೃಗಗಳ
ಗುಂಪುಗಳು, ಅಯಮಾಶ್ರಮಂ-ಈ ಆಶ್ರಮವನ್ನು ಕುರಿತು, ಆಗಮ್ಯ ಬಂದು, ಅಟಿತ್ವಾ-ಸಂಚರಿಸಿ, ಲೋಭಯಿತ್ವಾಚ-ಮೋಹಯುಕ್ತರನ್ನಾಗಿಮಾಡಿ,
ಅಕುತೋಭಯಾಃ-ಯಾವನವೆಡೆಯಿಂದಲೂ ಭಯವಿಲ್ಲದವುಗಳಾಗಿ, ಪ್ರತಿಗಚ್ಛಂತಿ-ಹೊರಟುಹೋಗುತ್ತವೆ, ಅತ್ರ-ಈದಂಡಕಾವನದಲ್ಲಿ, ಮೃಗೇಭ್ಯಃ-
ಮೃಗಗಳಿಗಿಂತಲೂ ಅನ್ಯತ್ರ-ಮತ್ತೊಂದುಸ್ಥಳದಲ್ಲಿ, ದೋಷಂ-ದೋಷವು ನಭವೇತ್-ಆಗಲಾರದು, ಇತಿ-ಇಂತೆಂದು, ವಿದ್ಧಿ-ತಿಳಿದುಕೋ ||೧೯||
ಲಕ್ಷ್ಮಣಾಗ್ರಜಃ-ಶ್ರೀರಾಮನು, ತಸ್ಯ-ಮಹರ್ಷೇಃ-ಆ ಸುತೀಕ್ಷ್ಣಋಷಿಯ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಧೀರಃ-ಧೈರ್ಯಶಾಲಿಯಾದ
ಕಾರಣ, ಸಶರಂ-ಆ ಬಾಣಗಳಿಂದೊಡಗೂಡಿದ, ಧನುಃ-ಬಿಲ್ಲಿನನ್ನು ವಿಕೃಷ್ಯ-ಎಳೆದು, ವಚನಂ-ಮಾತನ್ನು ಉವಾಚ-ಹೇಳಿದನು ಹೆ ಸುಮ
ಹಾಭಾಗ-ಎಲೆ ಮಹಾಪುಣ್ಯವಂತನೇ, ಅಹಂ-ನಾನು, ಅಶನಿವರ್ಚಸಾ-ಸಿಡಿಲಿನ ತೇಜಸ್ಸಿಂತೆ ತೇಜಸ್ಸುಳ್ಳ, ನಿಶಿತಧಾರೇಣ-ತೀಕ್ಷ್ಣವಾದ ಹದವುಳ್ಳ
ಶರೇಣ-ಬಾಣದಿಂದ, ಸಮಾಗತಾನ್-ಬರುತ್ತಿರುವ, ತಾನ್ಮೃಗಸಂಘಾನ್-ಆ ಮೃಗಗಳ ಸಮೂಹಗಳನ್ನು, ಹನ್ಯಾಂ-ಹೊಡೆಯುವೆನು, ತತ್ರ-ಅಲ್ಲಿ,
ಅಂದರೆ-ಆ ಮೃಗವಧ ವಿಷಯದಲ್ಲಿ, ಭವಾನ್-ನೀನು, ಅಭಿಷಜ್ಯೇತ-ವಿಷಾದವನ್ನುಹೊಂದುವಿ, ತತಃ-ಅದಕ್ಕಿಂತಲೂ, ಕೃಚ್ಛ್ರತರಂ-ಕಷ್ಟತರ
ವಾದದ್ದು, ಕಿಂಸ್ಯಾತ್-ಯಾವದಾದೀತು, ಏತಸ್ಮಿನ್ನಾಶ್ರಮೇ-ಈ ಆಶ್ರಮದಲ್ಲಿ, ವಾಸಂ-ಇರುವಿಕೆಯನ್ನು, ಚಿರಂತು-ಬಹಳಕಾಲವಾದರೆ, ನಸಮರ್ಥಯೇ-
ಇರಲಾರೆನು ||೨೧|| ರಾಮಃ-ಶ್ರೀರಾಮನು, ವರದಂ-ವರಪ್ರದನಾದ, ತಂ-ಆ ಸುತೀಕ್ಷ್ಣನನ್ನು ಕುರಿತು, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ,
ಸಂಧ್ಯಾಂ-ಸಂಧ್ಯಾವಂದನೆಯನ್ನು ಕುರಿತು, ಉಪಾಗಮತ್-ಬಂದನು, ಪಶ್ಚಿಮಾಂಸಂಧ್ಯಾಂ-ಸಾಯಂಸಂಧ್ಯೆಯನ್ನು, ಅನ್ವಾಸ್ಯ-ಉಪಾಸನೆಮಾಡಿ, ತ
ತ್ರ-ಆ, ಸುತೀಕ್ಷ್ಣಸ್ಯ-ಸುತೀಕ್ಷ್ಣಋಷಿಯ, ರಮ್ಯೇ-ಮನೋಹರವಾದ ಆಶ್ರಮೇ-ಆಶ್ರಮದಲ್ಲಿ, ಸೀತಯಾ-ಸೀತಾದೇವಿಯೊಡನೆ, ಲಕ್ಷ್ಮಣೇನಚ-
ಲಕ್ಷ್ಮಣನೊಡನೆಯೂ, ವಾಸಂ-ನಿವಾಸವನ್ನು, ಅಕಲ್ಪಯತ್-ಮಾಡಿದನು ||೨೨|| ತತಃ-ಬಳಿಕ, ಮಹಾತ್ಮಾ-ಮಹಾತ್ಮನಾದ, ಸುತೀಕ್ಷ್ಣಃ-ಸುತೀಕ್ಷ್ಣ
ಋಷಿಯು, ಭುಕ್ತವದ್ಭ್ಯಾಂ-ಭುಜಿಸಿದವರಾದ, ತಾಭ್ಯಾಂ-ಆ ರಾಮಲಕ್ಷ್ಮಣರಿಗೋಸುಗ, ಸಂಧ್ಯಾನಿವೃತ್ತೌ-ಸತ್ಯಾಂ-ಸಂಧ್ಯಾಕಾಲಕಳೆದು

---

ನಿರುವನೆಂದು ಶ್ರೀರಾಮನು ನುಡಿದವನಾಗಲು, ಲೋಕದಲ್ಲಿ ಮಹಾಪ್ರಸಿದ್ಧನಾದ ಆ ಸುತೀಕ್ಷ್ಣಮುನಿಯು ಪ
ರಮಹರ್ಷವಂ ನೈದಿ (ಆಗ) ನುಡಿಯುವವನದೆಂತೆನೆ,-।೧೮। ಎಲೈ ರಘುನಂದನನೇ! ಮುನಿಸಂಘಗಳಿಂದ ಸಂಚರಿ
ಸಲ್ಪಡುವ ಮತ್ತು ಯಾವಾಗಲು ಫಲಸಮೃದ್ಧವಾದ ಈ ಆಶ್ರಮವೇ ಉತ್ತಮವು, ನೀನಿಲ್ಲಿಯೇ ಯಿರು! ಅನೇಕ
ಮೃಗಸಮೂಹಗಳು ಈ ಆಶ್ರಮಕ್ಕೆಬಂದು ಸಂಚರಿಸುತ್ತಲೂ, ಮೋಹಿಸುವಂತೆ ಗೈಯುತ್ತಲೂ, ಭಯವಿಲ್ಲ
ದೆ ಹೊರಟುಹೋಗುವವು. ಮೃಗಗಳಿಗಿಂತಲೂ, ಇಲ್ಲಿ ಮತ್ತಾವ ಭಯವು ಇಲ್ಲವೆಂದು ತಿಳಿ ಎಂದು ನುಡಿದನು।೧೯।
ಬಳಿಕ ಶ್ರೀರಾಮನು ಆ ಮಹರ್ಷಿಯು ನುಡಿದ ವಾಕ್ಯವಂ ಕೇಳಿಯೂ, ಧೈರ್ಯಶಾಲಿಯಾದ ಕಾರಣ, ನಿಡುಸರ
ಳ್ಗಳಿಂ ದೊಡಗೂಡಿದ ಕೋದಂಡವನ್ನು ಸೆಳೆದು ಆ ಮಹರ್ಷಿಯನ್ನುದ್ದೇಶಿಸಿ ಈಪರಿನುಡಿಯುವನೆಂತೆನೆ,--
ಎಲೈ ಪುಣ್ಯಶಾಲಿಯೇ! ಸಿಡಿಲಿನ ಬೆಳಕಿನಂತೆ ಬೆಳಗುವ ತೀಕ್ಷ್ಣವಾದ ಹದವುಳ್ಳ ಸರಳುಗಳಿಂದ ಆ ಮೃಗಗಳನ್ನೆ
ಲ್ಲಾ ಕೊಲ್ಲುವೆನೆಂದು ನುಡಿದು ಸಂಧ್ಯಾವಂದನೆಯಂ ಗೈದು ಆ ಮಹರ್ಷಿಯು ಆಶ್ರಮದಲ್ಲಿ ಸುಖವಾಗಿದ್ದ

ಭಂತಾಪಸಭೋಜ್ಯಮನ್ನಂಸ್ವಯಂಸುತೀಕ್ಷ್ಣಃಪುರುಷರ್ಷಭಾಭ್ಯಾಂ । ತಾಭ್ಯಾಂಸುಸತ್ಕೃತ್ಯದದೌಮಹಾತ್ಮಾ
ಸಂಧ್ಯಾನಿವೃತ್ತೌರಜನೀಮವೇಕ್ಷ್ಯ ।೨೪। —**ಇತಿಶ್ರೀಮದಾರಣ್ಯಕಾಂಡೆ ಸಪ್ತಮಸ್ಸರ್ಗಃ॥**—

ರಾಮಸ್ತುಸಹಸೌಮಿತ್ರಿಸ್ಸುತೀಕ್ಷ್ಣೇನಾಭಿಪೂಜಿತಃ । ಪರಿಣಾಮ್ಯನಿಶಾಂತತ್ರಪ್ರಭಾತೇಪ್ರತ್ಯಬುಧ್ಯತ ।೧।
ಉತ್ಥಾಯತುಯಥಾಕಾಲಂರಾಘವಸ್ಸಹಸೀತಯಾ । ಉಪಾಸ್ಪೃಶತ್ಸುಶೀತೇನಜಲೇನೋತ್ಪಲಗಂಧಿನಾ ।೨। ಅಥತೇ
ಗ್ನಿಂಸುರಾಂಶ್ಚೈವವೈದೇಹೀರಾಮಲಕ್ಷ್ಮಣೌ । ಕಾಲ್ಯಂವಿಧಿವದಭ್ಯರ್ಚ್ಯತಪಸ್ವಿಶರಣೇವನೇ । ಉದಯಂತಂದಿನಕ
ರಂದೃಷ್ಟ್ವಾವಿಗತಕಲ್ಮಷಾಃ । ಸುತೀಕ್ಷ್ಣಮಭಿಗಮ್ಯೇದಂಶ್ಲಕ್ಷ್ಣಂವಚನಮಬ್ರುವನ್ ।೪। ಸುಖೋಷಿತಾಸ್ಸ್ಮಭ
ಗವಂಸ್ತ್ವಯಾಪೂಜ್ಯೇನಪೂಜಿತಾಃ । ಆಪೃಚ್ಛಾಮಃಪ್ರಯಾಸ್ಯಾಮಮುನಯಸ್ತ್ವರಯಂತಿನಃ ।೫। ತ್ವರಾಮಹೇ
ವಯಂದ್ರಷ್ಟುಂಕೃತ್ಸ್ನಮಾಶ್ರಮಮಂಡಲಂ । ಋಷೀಣಾಂಪುಣ್ಯಶೀಲಾನಾಂದಂಡಕಾರಣ್ಯವಾಸಿನಾಂ ।೬।

ಸೋಗಸುತ್ತಿರಲೀಕಾಗಿ, ರಜನೀಂ-ರಾತ್ರಿಯನ್ನು, ಅವೇಕ್ಷ್ಯ-ಕಂಡು, ಪುರಸ್ಕೃತ್ಯ-ಪೂಜೆಮಾಡಿ, ಸುಖಂ-ಸುಖಕರವಾದ, ತಾಪಸಭೋಜ್ಯಂ-ಋಷಿಗಳಿ
ಗೆ ಉಚಿತವಾದ ಅನ್ನಂ-ಅನ್ನವನ್ನು, ದದೌ-ಕೊಟ್ಟನು ॥೨೪॥ —** ಇತಿಶ್ರೀಮದಾರಣ್ಯಕಾಂಡೇ-ಸಪ್ತಮಸ್ಸರ್ಗಃ **—

ರಾಮಸ್ತು-ಶ್ರೀರಾಮನಾದರೆ, ಸಹಸೌಮಿತ್ರಿಃ-ಲಕ್ಷ್ಮಣನೊಡಗೂಡಿ, ಸುತೀಕ್ಷ್ಣೇನ-ಸುತೀಕ್ಷ್ಣಋಷಿಯಿಂದ, ಅಭಿಪೂಜಿತಃ-ಮರ್ಯಾದೆಮಾ
ಡಲ್ಪಟ್ಟವನಾಗಿ. ತತ್ರ-ಆ ಸುತೀಕ್ಷ್ಣಾಶ್ರಮದಲ್ಲಿ, ನಿಶಾಂ-ರಾತ್ರಿಯನ್ನು, ಪರಿಣಾಮ್ಯ-ಕಳೆದು, ಪ್ರಭಾತೇ-ಪ್ರಾತಃಕಾಲದಲ್ಲಿ, ಪ್ರತ್ಯಬುಧ್ಯತ-ಎಚ್ಚರಗೊಂ
ಡನು ॥೧॥ ರಾಘವಃ-ಶ್ರೀರಾಮನು, ಸೀತಯಾಸಹ-ಸೀತಾದೇವಿಯೊಡನೆ, ಯಥಾಕಾಲಂ-ಕಾಲದಲ್ಲಿ, ಉತ್ಥಾಯ-ಎದ್ದು, ಉತ್ಪಲಗಂಧಿನಾ-ಕನ್ನೈ
ದಿಲೆ ಹೂವಿನ ವಾಸನೆಯುಳ್ಳ, ಸುಶೀತೇನ-ಬಹಳ ತಣ್ಣಗಿರುವ, ಜಲೇನ-ನೀರಿನಿಂದ, ಉಪಾಸ್ಪೃಶತ್-ಸ್ನಾನಮಾಡಿದನು ॥೨॥ ಅಥ-ಬಳಿಕ, ವೈದೇಹೀ
ಸೀತಾದೇವಿಯು, ರಾಮಲಕ್ಷ್ಮಣೌ-ರಾಮಲಕ್ಷ್ಮಣರೆಂಬ, ತೇ-ಆ ಮೂವರು, ಸುರಾಂಶ್ಚೈವ-ದೇವತೆಗಳನ್ನು, ಕಾಲ್ಯಂ-ಪ್ರಾತಃಕಾಲದಲ್ಲಿ, ತಪಸ್ವಿಶರ
ಣೇ-ಋಷಿಗಳಿಗಾಶ್ರಯಸ್ಥಾನವಾದ, ವನೇ-ದಂಡಕಾವನದಲ್ಲಿ, ವಿಧಿವತ್-ಯಥಾಶಾಸ್ತ್ರೋಕ್ತವಾಗಿ, ಅಭ್ಯರ್ಚ್ಯ-ಪೂಜಿಸಿ, ಉದಯಂತಂ-ಹಟ್ಟುತ್ತಿರುವ.
ದಿನಕರಂ-ಸೂರ್ಯನನ್ನು, ದೃಷ್ಟ್ವಾ-ಕಂಡು, ವಿಗತಕಲ್ಮಷಾಃ-ಹೋದಪಾಪವುಳ್ಳವರಾಗಿ, ಸುತೀಕ್ಷ್ಣಂ-ಸುತೀಕ್ಷ್ಣಋಷಿಯನ್ನು ಅಭಿಗಮ್ಯ-
ಹೊಂದಿ, ಶ್ಲಕ್ಷ್ಣಂ-ಮೃದುವಾದ. ಇದಂವಚನಂ-ಈ ವಾಕ್ಯವನ್ನು ಅಬ್ರುವನ್-ನುಡಿದನು ॥೪॥ ಹೇಭಗವನ್-ಎಲೈ ಷಡ್ಗುಣೈಶ್ವರ್ಯಸಂಪನ್ನನೇ, ಪೂಜ್ಯೇ
ನ-ಪೂಜಾರ್ಹನಾದ. ತ್ವಯಾ-ನಿನ್ನಿಂದ ಪೂಜಿತಾಃ-ಪೂಜಿಸಲ್ಪಟ್ಟವರಾಗಿ, ಸುಖೋಷಿತಾಃ-ಸುಖವಾಗಿದ್ದವರು, ಸ್ಮ-ಆದೆವು, ಮುನಯಃ-ಋಷಿಗ
ಳು, ನಃ-ನಮ್ಮಗಳನ್ನು, ತ್ವರಯಂತಿ-ತ್ವರೆಗೊಳಿಸುತ್ತಾರೆ, ಆಪೃಚ್ಛಾಮಃ-ಅಪ್ಪಣೆಯನ್ನು ಕೇಳುತ್ತೇವೆ. ಪ್ರಯಾಸ್ಯಾಮಃ-ಪ್ರಯಾಣಮಾಡು
ತ್ತೇವೆ ವಯಂ-ನಾವುಗಳು. ಪುಣ್ಯಶೀಲಾನಾಂ-ಪುಣ್ಯಕರವಾದ ಸ್ವಭಾವವುಳ್ಳ, ದಂಡಕಾರಣ್ಯವಾಸಿನಾಂ-ದಂಡಕಾವನದಲ್ಲಿರುತ್ತಿರುವ, ಋಷೀಣಾಂ-
ಋಷಿಗಳ, ಕೃತ್ಸ್ನಂ-ಸಮಸ್ತವಾದ, ಆಶ್ರಮಮಂಡಲಂ-ಆಶ್ರಮ ಬೀಡಿಯನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ. ತ್ವರಾಮಹೇ-ತ್ವರೆಗೊಂಡಿದ್ದೇವೆ.
ಧರ್ಮನಿತ್ಯೈಃ-ನಿತ್ಯವೂ ಧರ್ಮದಲ್ಲಾಸಕ್ತರಾದ. ತಪೋದಾಂತೈಃ-ಕೃಚ್ಛ್ರಚಾಂದ್ರಾಯಣಾದಿ ತಪಸ್ಸಿನಿಂದ ಉಪಶಾಂತರಾದ, ವಿಶಿಖೈಃ-ವಿಸ್ತಾರ
ವಾದ ಶಿಖೆಗಳುಳ್ಳ, ಯದ್ವಾ-ವಿಶಿಖೈಃ-ಜ್ವಾಲೆಗಳಿಂದ ರಹಿತವಾದ, ಪಾವಕೈರಿವ-ಅಗ್ನಿಗಳಂತಿರುವ. ಏಭಿಃಮುನಿಪುಂಗವೈಸ್ಸಹ-ಈ ಋಷಿಶ್ರೇಷ್ಠ
ರೊಡಗೂಡ, ಅಭ್ಯನುಜ್ಞಾತುಂ-ಅಪ್ಪಣೆಯನ್ನು ತೆಗೆದುಕೊಳ್ಳುವದಕ್ಕೋಸುಗ, ಇಚ್ಛಾಮಃ-ಅಪೇಕ್ಷಿಸುತ್ತೇವೆ ॥೬॥ ಯಾವತ್-ಯೆಷ್ಟರೊಳಗೆ,
ಸೂರ್ಯಃ-ಸೂರ್ಯನು, ಅಮಾರ್ಗೇಣ-ಅನ್ಯಾಯಮಾರ್ಗದಿಂದ. ಆಗತಾಂ-ಬಂದಿರುವ ಲಕ್ಷ್ಮೀಂ-ಐಶ್ವರ್ಯವನ್ನು, ಪ್ರಾಪ್ಯ-ಹೊಂದಿ. ಅನ್ಯಾಯೇನವರ್ಜಿತ

ನು ।೨೩॥ ಬಳಿಕ ಮಹಾತ್ಮನಾದ ಸುತೀಕ್ಷ್ಣಮುನಿಯು ಸಂಧ್ಯಾಕಾಲವು ಕಳದು ರಾತ್ರಿಯಾಗಲೂ, ಪುರುಷ
ಶ್ರೇಷ್ಠರಾದ ಆ ರಾಮಲಕ್ಷ್ಮಣರಿಗಾಗಿ ತಾಪಸಯೋಗ್ಯವಾದ ಅನ್ನವನ್ನು ಕೊಟ್ಟನು ।೨೪।

—* ಅರಣ್ಯಕಾಂಡದಲ್ಲಿನ ೭ನೆಯಸರ್ಗಂ ಮುಗಿದುದು *—

ಲಕ್ಷ್ಮಣಸಹಿತನಾದ ಶ್ರೀರಾಮನು ಆ ಆಶ್ರಮದಲ್ಲಿ ಸುತೀಕ್ಷ್ಣಮುನಿಯಿಂದ ಮರ್ಯಾದೆಯಂ ಪಡೆದು ರಾತ್ರಿಯು ಸುಖವಾಗಿದ್ದು. ಪ್ರಾತಃಕಾಲದಲ್ಲೆಚ್ಚರಗೊಂಡು ಕನ್ನೈದಿಲೆಗಳ ಸುವಾಸನೆಯುಳ್ಳದ್ದಾದ ಬಹುತಣ್ಣಗಿರುವ ಜಲದಿಂದ ಸ್ನಾನವಂ ಮಾಡಿದನು ।೨। ಬಳಿಕ ಆ ಸೀತಾರಾಮಲಕ್ಷ್ಮಣರು ಮೂರುಮಂದಿಯೂ ಋಷಿಗಳಿಗೆ ನಿವಾಸಸ್ಥಾನವಾದ ಆ ದಂಡಕಾರಣ್ಯದಲ್ಲಿ ವಿಧಿವತ್ತಾಗಿ ದೇವತೆಗಳಂ ಪೂಜಿಸಿ, ಮುಂಜಾನೆ ಮೂಡುವ ಸೂರ್ಯನದರ್ಶನವಂ ಗೈದು, ಪಾಪವಿಮುಕ್ತರಾಗಿ ಆ ಸುತೀಕ್ಷ್ಣಋಷಿಯ ಸನ್ನಿಧಿಗೆಬಂದು ನುಡಿಯುವರದೆಂತೆನೆ ।೪। ಎಲೈ ಷಡ್ಗುಣೈಶ್ವರ್ಯ ಸಂಪನ್ನನೇ! ಪೂಜ್ಯನಾದ ನಿನ್ನಿಂದ ಅರ್ಚಿಸಲ್ಪಟ್ಟವರಾಗಿ ಸುಖದಿಂದಿದ್ದೆವು, ಋಷಿಗಳೆಲ್ಲರು ಸಾರಲು ನಮ್ಮನ್ನು ತ್ವರೆಗೊಳಿಸುತ್ತಾರೆ, ತೆರಳುವದಕ್ಕೆ ಆಜ್ಞೆಯಂ ಕೊಡು, ಪುಣ್ಯವಂ ಗೈಯ್ಯಲಾಸಕ್ತಿಯುಳ್ಳ, ಈ ದಂಡಕಾರಣ್ಯವಾಸಿಗಳಾದಮುನಿಗಳಆಶ್ರಮಸಮೂಹವನ್ನು ನೋಡಲುತ್ವರೆಪಡುತ್ತೇವೆ, ಧರ್ಮನಿರತರಾಗಿಯೂ, ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದ ಉಪಶಾಂತಮನಸ್ಕರಾಗಿಯೂ, ವಿಸ್ತಾರವಾದ

ಅಭ್ಯನುಜ್ಞಾತುಮಿಚ್ಛಾಮಸ್ಸಹೈಭಿರ್ಮುನಿಪುಂಗವೈಃ। ಧರ್ಮನಿತ್ಯೈಸ್ತಪೋದಾಂತೈರ್ವಿಶಿಖೈರಿವಪಾವಕೈಃ ॥ ಅವಿಷಹ್ಯಾತಪೋಯಾವತ್ಸೂರ್ಯೋನಾತಿವಿರಾಜತೇ। ಅಮಾರ್ಗೇಣಾಗತಾಂಲಕ್ಷ್ಮೀಂಪ್ರಾಪ್ಯೇವಾನ್ವಯವರ್ಜಿತಃ॥ ತಾವದಿಚ್ಛಾಮಹೇಗಂತುಮಿತ್ಯುಕ್ತ್ವಾಚರಣೌಮುನೇಃ। ವವಂದೇಸಹಸೌಮಿತ್ರಿಸ್ಸೀತಯಾಸಹರಾಘವಃ ॥೯॥ ತೌಸಂಸ್ಪೃಶಂತೌಚರಣಾವುತ್ಥಾಪ್ಯಮುನಿಪುಂಗವಃ। ಗಾಢಮಾಲಿಂಗ್ಯಸಸ್ನೇಹಮಿದಂವಚನಮಬ್ರವೀತ್ ॥೧೦॥ ಅರಿಷ್ಟಂಗಚ್ಛಪಂಥಾನಂರಾಮಸೌಮಿತ್ರಿಣಾಸಹ। ಸೀತಯಾಚಾನಯಾಸಾರ್ಧಂಛಾಯಯೇವಾನುವೃತ್ತಯಾ ॥೧೧॥ ಪಶ್ಯಾಶ್ರಮಪದಂರಮ್ಯಂದಂಡಕಾರಣ್ಯವಾಸಿನಾಂ। ಏಷಾಂತಪಸ್ವಿನಾಂವೀರತಪಸಾಭಾವಿತಾತ್ಮನಾಂ ॥೧೨॥ ಸಪ್ರಾಜ್ಯಫಲಮೂಲಾನಿಪುಷ್ಪಿತಾನಿವನಾನಿಚ। ಪ್ರಶಸ್ತಮೃಗಯೂಥಾನಿಶಾಂತಪಕ್ಷಿಗಣಾನಿಚ ॥೧೩॥ ಫುಲ್ಲಪಂಕಜಷಂಡಾನಿಪ್ರಸನ್ನಸಲಿಲಾನಿಚ। ಕಾರಂಡವವಿಕೀರ್ಣಾನಿತಟಾಕಾನಿಸರಾಂಸಿಚ ॥೧೪॥ ದ್ರಕ್ಷ್ಯಸೇದೃಷ್ಟಿರಮ್ಯಾಣಿಗಿರಿಪ್ರಸ್ರವಣಾನಿಚ। ರಮಣೀಯಾನ್ಯರಣ್ಯಾನಿಮಯೂರಾಭಿರುತಾನಿಚ ॥೧೫॥ ಗಮ್ಯತಾಂವತ್ಸಸೌಮಿತ್ರೇಭವಾನಪಿಚಗಚ್ಛತು। ಆಗಂ

ಇವ-ಕುಲದಿಂ ಬಿಸಲ್ಪಟ್ಟವನಂತೆ. (ಅಂದರೆ ದುಷ್ಕುಲಪ್ರಸೂತನಾದ ರಾಜನಂತೆ) ಅವಿಷಹ್ಯಾತಪಃ-ಸಹಿಸಲಸಾಧ್ಯವಾದ ಬಿಸಲುಳ್ಳವನಾಗಿ, ನಾತಿವಿರಾಜತೇ-ಬಹಳ ಪ್ರಕಾಶಿಸುವದಿಲ್ಲವೋ, ತಾವತ್-ಅಷ್ಟರೊಳಗೆ. ಗಂತುಂ-ಹೊರಡುವದಕ್ಕೋಸ್ಕರ, ಇಚ್ಛಾಮಹೇ-ಇಚ್ಛೈಸುತ್ತೇವೆ. ಇತಿ-ಈಪರಿಯಾಗಿ. ಉಕ್ತ್ವಾ-ಹೇಳಿ. ರಾಘವಃ-ಶ್ರೀರಾಮನು. ಸಹಸೌಮಿತ್ರಿಃ-ಲಕ್ಷ್ಮಣನಿಂದೊಡಗೂಡಿದವನಾಗಿ. ಸೀತಯಾಸಹ-ಸೀತಾದೇವಿಯೊಡನೆಯೂ. ಮುನೇಃ-ಸುತೀಕ್ಷ್ಣ ಋಷಿಯ. ಚರಣೌ-ಪಾದಗಳನ್ನುಕುರಿತು, ವವಂದೇ-ನಮಸ್ಕರಿಸಿದನು॥೯॥ ಮುನಿಪುಂಗವಃ-ಋಷಿಶ್ರೇಷ್ಠನಾದ ಸುತೀಕ್ಷ್ಣ ಋಷಿಯು. ಚರಣೌ-ಪಾದಗಳನ್ನು, ಸಂಸ್ಪೃಶಂತೌ-ಸ್ಪರ್ಶಮಾಡುತ್ತಿರುವ. ತೌ-ಆ ರಾಮಲಕ್ಷ್ಮಣರನ್ನು. ಉತ್ಥಾಪ್ಯ-ಯೆಬ್ಬಿಸಿ. ಗಾಢಂ-ಘಟ್ಟಿಯಾಗಿ. ಆಲಿಂಗ್ಯ-ಅಪ್ಪಿಕೊಂಡು, ಸಸ್ನೇಹಂ-ಸ್ನೇಹದಿಂದೊಡಗೂಡಿದಂತೆ. ಇದಂವಚನಂ-ಈ ಮಾತನ್ನು. ಅಬ್ರವೀತ್-ನುಡಿದನು ॥೧೦॥ ಹೇರಾಮ-ಎಲೈ ಶ್ರೀರಾಮನೇ, ಸೌಮಿತ್ರಿಣಾಸಹ-ಲಕ್ಷ್ಮಣನೊಡಗೂಡ. ಛಾಯಯೇವ-ನೆರಳಿನಂತೆ. ಅನುವೃತ್ತಯಾ-ಅನುಸರಿಸಿ ಬರುತ್ತಿರುವ, ಅನಯಾಸೀತಯಾಸಾರ್ಧಂ-ಈ ಸೀತಾದೇವಿಯೊಡಗೂಡಿ, ಅರಿಷ್ಟಂ-ಶುಭಕರವಾಗಿ. ಪಂಥಾನಂ-ಮಾರ್ಗದಲ್ಲಿ, ಗಚ್ಛ-ಹೋಗು ॥೧೧॥ ಹೇವೀರ-ಎಲೈ ಶೂರನೇ. ತಪಸಾ-ಧ್ಯಾನಯೋಗದಿಂದ, ಭಾವಿತಾತ್ಮನಾಂ-ಬ್ರಹ್ಮಜ್ಞಾನಿಗಳಾದ, ತಪಸ್ವಿನಾಂ-ತಪಸ್ವಿಗಳಾದ, ಏಷಾಂದಂಡಕಾರಣ್ಯವಾಸಿನಾಂ-ಈ ದಂಡಕಾರಣ್ಯದಲ್ಲಿ ಯಿರುತ್ತಿರುವ ಋಷಿಗಳ. ರಮ್ಯಂ-ಮನೋಹರವಾದ. ಆಶ್ರಮಪದಂ-ಆಶ್ರಮಪ್ರದೇಶವನ್ನು, ಪಶ್ಯ-ನೋಡು ॥೧೨॥ ಹೇವತ್ಸ-ಎಲೈ ಹುಡುಗನಾದ ಶ್ರೀರಾಮನೇ, ಸಪ್ರಾಜ್ಯಫಲಮೂಲಾನಿ-ಪ್ರಚುರವಾದ ಫಲಗಳಿಂದಲೂ ಕಂದಮೂಲಗಳಿಂದಲೂ ಒಡಗೂಡಿದ, ಪುಷ್ಪಿತಾನಿ-ಸಂಜಾತಪುಷ್ಪಗಳುಳ್ಳ, ಪ್ರಶಸ್ತಮೃಗಯೂಥಾನಿ-ಶ್ಲಾಘನೀಯವಾದ ಮೃಗಗಳ ಗುಂಪುಗಳುಳ್ಳ, ಶಾಂತಪಕ್ಷಿಗಣಾನಿಚ-ಉಪಶಾಂತವಾದ ಪಕ್ಷಿಗಳ ತಂಡಗಳುಳ್ಳ, ವನಾನಿಚ-ಅರಣ್ಯಗಳನ್ನು, ಫುಲ್ಲಪಂಕಜಷಂಡಾನಿ-ಅರಳಿದ ತಾವರೇಹುವ್ವುಗಳ ತಂಡಗಳುಳ್ಳ. ಪ್ರಸನ್ನಸಲಿಲಾನಿಚ-ನಿರ್ಮಲವಾದ ಉದಕಗಳುಳ್ಳ, ಕಾರಂಡವವಿಕೀರ್ಣಾನಿ-ನೀರುಕೋಳಿಗಳಿಂ ತುಂಬಿರುವ. ತಟಾಕಾನಿ-ಕೆರೆಗಳನ್ನು, ಸರಾಂಸಿಚ-ಚಿಕ್ಕಭಾವಿಗಳನ್ನು, ದ್ರಕ್ಷ್ಯಸೇ-ನೋಡುವಿ ॥೧೪॥ ದೃಷ್ಟಿರಮ್ಯಾಣಿ-ನೋಟಕ್ಕೆ ಯಿಂಪಾಗಿರುವ, ಗಿರಿಪ್ರಸ್ರವಣಾನಿಚ-ಬೆಟ್ಟದ ನದಿಗಳನ್ನೂ, ಮಯೂರಾಭಿರುತಾನಿಚ-ನವಿಲುಗಳಿಂದ ಧ್ವನಿಗೊಳಿಸುತ್ತಿರುವ, ರಮಣೀಯಾನಿ-ಮನೋಹರಗಳಾದ, ಅರಣ್ಯಾನಿ-ಅರಣ್ಯಗಳನ್ನು, ದ್ರಕ್ಷ್ಯಸೇ-ನೋಡುವಿ, ಗಮ್ಯತಾಂ-ಹೊರಡಲ್ಪಡಲೀ- ಹೇಸೌಮಿತ್ರೇ-ಎಲೈ ಲ

ಶಾಖೆಗಳುಳ್ಳವರಾಗಿಯೂ, (ಅಥವಾ ಉರಿಯುವ ಅಗ್ನಿಯಂತೆ ಬೆಳಗುವವರಾಗಿಯೂ) ಇರುವ ಈ ಮುನಿಗಳ ಸಂಗಡ ತೆರಳಲು ಅಪ್ಪಣೆಯಂ ಪಡೆಯಲಿಚ್ಛಿಸುತ್ತೇವೆ. ಎಷ್ಟರೊಳಗಾಗಿ ಸೂರ್ಯನು ಸಹಿಸಲಸಾಧ್ಯವಾದ ಬಿಸಲುಳ್ಳವನಾಗಿ, " ದುಷ್ಕುಲಪ್ರಸೂತನು ಅನ್ಯಾಯಾರ್ಜಿತವಾದ ಐಶ್ವರ್ಯವಂ ಪಡದು ಬೆಳಗುವಂತೆ ಬೆಳಗುವದಿಲ್ಲವೋ ಅದರೊಳಗೆ ತೆರಳಲು ಇಚ್ಛೈಸುತ್ತೇವೆ (ಅಂದರೆ ಬಿಸಲು ಹೆಚ್ಚುವದರೊಳಗಾಗಿ ತೆರಳುತ್ತೇವೆಂಬಭಾವವು) ಎಂದುನುಡಿದು ಆ ಮಹರ್ಷಿಯ ಪಾದಗಳಿಗೆರಗಿದರು ॥೯॥ ಬಳಿಕ ಆ ಮಹರ್ಷಿಯು ಚರಣಗಳಂ ಹಿಡಿದಿರುವ ಆ ರಾಮಲಕ್ಷ್ಮಣರನ್ನೆಬ್ಬಿಸಿ ಹರುಷದಿಂದಪ್ಪಿಕೊಂಡು ಸ್ನೇಹದಿಂದಿಂತೆಂದನು,--ಎಲೈ ಶ್ರೀರಾಮನೇ! ಲಕ್ಷ್ಮಣನೊಡನೆಯೂ, ನೆರಳಿನಂತೆ ನಿನ್ನನ್ನೇ ಅನುಸರಿಸುವ ಈ ಸೀತಾದೇವಿಯೊಡನೆಯೂ ದಾರಿಯಲ್ಲಿ ಶುಭವಾಗಿ ಸಾರು।೧೧ ಬ್ರಹ್ಮಜ್ಞಾನಿಗಳಾದ ಈ ದಂಡಕಾರಣ್ಯವಾಸಿಗಳಾಗಿರುವ ಮುನಿಗಳ ಮನೋಹರವಾದ ಈ ಪರ್ಣಶಾಲೆಗಳಂನೋಡು? ಎಲೈ ಬಾಲಕನೇ! ಅಧಿಕವಾದ ಫಲಗಳಿಂದಲೂ ಕಂದಮೂಲಗಳಿಂದಲೂ ಯುಕ್ತವಾದದ್ದಾಗಿಯೂ, ಸಂಜಾತ ಪುಷ್ಪಗಳುಳ್ಳದ್ದಾಗಿಯೂ, ಶ್ಲಾಘನೀಯವಾದ ಮೃಗತಂಡಗಳುಳ್ಳದ್ದಾಗಿಯೂ, ಉಪಶಾಂತಗಳಾದ ಪಕ್ಷಿಸಮೂಹಗಳುಳ್ಳದ್ದಾಗಿಯೂ ಇರುವವನಗಳನ್ನೂ, ಮತ್ತು ವಿಕಸಿತವಾದತಾವರೇಹೂವುಗಳುಳ್ಳದ್ದಾಗಿಯೂ ನಿರ್ಮಲೋದಕವುಳ್ಳದ್ದಾಗಿಯೂ, ನೀರುಕೋಳಿಗಳಿಂದ ತುಂಬಿರುವದಾಗಿಯೂ ಇರುವ ಕೆರೆಗಳನ್ನೂ, ಸರೋವರಗಳನ್ನೂ।೧೪। ನೋಡಲಿಂಪಾಗಿರುವ ಬೆಟ್ಟದ ನದಿಗಳನ್ನೂ, ಮತ್ತು ಮನೋಹರವಾದ ನವಿಲುಧ್ವನಿಗಳಿಂದ ವ್ಯಾಪ್ತವಾದ ಅರ

ಏವಮುಕ್ತಸ್ತಥೇತ್ಯುಕ್ತ್ವಾ ಕಾಕುತ್ಸ್ಥಸ್ಸಹಲಕ್ಷ್ಮಣಃ । ಪ್ರದ
ಕ್ಷಿಣಂ ಮುನಿಂ ಕೃತ್ವಾ ಪ್ರಸ್ಥಾತುಮುಪಚಕ್ರಮೇ ॥೧೭॥ ತತಶ್ಶುಭತರೇ ತೂಣೀ ಧನುಷೀ ಚಾಯತೇಕ್ಷಣಾ । ದದೌ ಸೀ
ತಾ ತಯೋರ್ಭ್ರಾತ್ರೋಃ ಖಡ್ಗೌ ಚ ವಿಮಲೌ ತತಃ ॥೧೮॥ ಆಬಧ್ಯ ಚ ಕಲಾಪೌ ತೌ ಚಾಪೌ ಚಾದಾಯ ಸಸ್ವನೌ । ನಿಷ್ಕ್ರಾಂತಾ
ವಾಶ್ರಮಾದ್ಗಂತುಮುಭೌ ತೌ ರಾಮಲಕ್ಷ್ಮಣೌ ॥೧೯॥ ಶ್ರೀಮಂತೌ ರೂಪಸಂಪನ್ನೌ ದೀಪ್ಯಮಾನೌ ಸ್ವತೇಜಸಾ । ಪ್ರಸ್ಥಿ
ತೌ ಧೃತಚಾಪೌ ತೌ ಸೀತಯಾ ಸಹ ರಾಘವೌ ॥೨೦॥ —** ಇತಿ ಶ್ರೀಮದಾರಣ್ಯಕಾಂಡೇ ಅಷ್ಟಮಸ್ಸರ್ಗಃ **—

ಸುತೀಕ್ಷ್ಣೇನಾಭ್ಯನುಜ್ಞಾತಂ ಪ್ರಸ್ಥಿತಂ ರಘುನಂದನಂ । ಹೃದ್ಯಯಾ ಸ್ನಿಗ್ಧಯಾ ವಾಚಾ ಭರ್ತಾರಮಿದಮಬ್ರವೀ
ತ್ ॥೧॥ ಅಯಂ ಧರ್ಮಸ್ಸುಸೂಕ್ಷ್ಮೇಣ ವಿಧಿನಾ ಪ್ರಾಪ್ಯತೇ ಮಹಾನ್ । ನಿವೃತ್ತೇನ ತು ಶಕ್ಯೋಯಂ ವ್ಯಸನಾತ್ಕಾಮಜಾದಿಹ
॥೨॥ ತ್ರೀಣ್ಯೇವ ವ್ಯಸನಾನ್ಯತ್ರ ಕಾಮಜಾನಿ ಭವಂತ್ಯುತ । ಮಿಥ್ಯಾವಾಕ್ಯಂ ಗುರುತರಂ ತಸ್ಮಾದ್ಗುರುತರಾವುಭೌ ॥ ಪ

ಕ್ಷ್ಮಣನೇ, ಭವಾನಪಿ-ನೀನೂನು. ಗಚ್ಛತು-ಹೋಗುವೆಯಲ್ಲ, ಹೇ ತಾತ-ಎಲೈ ಅಪ್ಪನೇ, (ಅಥವಾ ಜಗತ್ತಿಗೆಲ್ಲಾ ತಂದೆಯೇ) ತ್ವಯಾ-ನಿನ್ನಿಂದ. ಮಮಾ ಶ್ರಮಮೇವ-ನನ್ನಾಶ್ರಮವನ್ನೇ ಕುರಿತು ಪುನಃ-ಮತ್ತು, ಆಗಂತವ್ಯಂ-ಬರತಕ್ಕದ್ದು ॥೧೬॥ ಏವಂ-ಈರೀತಿಯಾಗಿ. ಉಕ್ತಃ-ಹೇಳಲ್ಪಟ್ಟವನಾಗಿ. ತಥೇ ತ್ಯುಕ್ತ್ವಾ-ಹಾಗೇ ಆಗಲೆಂದು. ಕಾಕುತ್ಸ್ಥಃ-ಶ್ರೀರಾಮನು, ಸಹಲಕ್ಷ್ಮಣಃ-ಲಕ್ಷ್ಮಣನೊಡಗೂಡಿ. ಮುನಿಂ-ಸುತೀಕ್ಷ್ಣ ಋಷಿಯನ್ನು ಕುರಿತು, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಕೃತ್ವಾ-ಮಾಡಿ. ಪ್ರಸ್ಥಾತುಂ-ಹೊರಡುವದಕ್ಕೋಸ್ಕರ. ಉಪಚಕ್ರಮೇ-ಪ್ರಯತ್ನಪಟ್ಟನು ॥೧೭॥ ತತಃ-ಬಳಿಕ, ಆಯತೇಕ್ಷಣಾ-ವಿಸ್ತಾರವಾದ ನೇತ್ರಗಳುಳ್ಳ, ಸೀತಾ-ಸೀತಾದೇವಿಯು, ತಯೋರ್ಭ್ರಾತ್ರೋಃ-ಆ ಅಣ್ಣತಮ್ಮಂದಿರಿಬ್ಬರಿಗೂ, ಶುಭತರೇ-ಅತಿಶಯವಾಗಿ ಶುಭಕರವಾದ, ತೂಣೀ ಚ-ಬತ್ತಳಿಕೆಗಳನ್ನೂ, ಧನುಷೀ ಚ-ಬಿಲ್ಲುಗಳನ್ನೂ. ತತಃ-ಬಳಿಕ, ವಿಮಲೌ-ನಿರ್ಮಲವಾದ, ಖಡ್ಗೌ ಚ-ಕತ್ತಿಗಳನ್ನೂ, ದದೌ-ಕೊಟ್ಟ ಳು ॥೧೮॥ ಉಭೌ-ಇಬ್ಬರಾದ, ತೌ ರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರು, ಶುಭೇ-ಶುಭಕರವಾದ, ತೂಣೀ-ಬತ್ತಳಿಕೆಗಳನ್ನು. ಆಬಧ್ಯ-ಕಂಕಳಿ ಗೆ ತಗಲುಹಾಕಿಕೊಂಡು, ಸಸ್ವನೌ-ಧ್ವನಿಯಿಂದೊಡಗೂಡಿದ, ಚಾಪೌ ಚ-ಧನುಸ್ಸುಗಳನ್ನೂ, ಆದಾಯ-ತೆಗೆದುಕೊಂಡು, ಗಂತುಂ-ಪ್ರಯಾಣಮಾಡುವ ಕ್ಕೋಸುಗ, ಆಶ್ರಮಾತ್-ಆಶ್ರಮದ ದೆಶೆಯಿಂದ. ನಿಷ್ಕ್ರಾಂತೌ-ಹೊರಟುಬಂದರು ॥೧೯॥ ಶ್ರೀಮಂತೌ-ಸಂಪದ್ಯುಕ್ತರಾದ, ರೂಪಸಂಪನ್ನೌ-ಸೌಂ ದರ್ಯದಿಂ ಕೂಡಿಕೊಂಡಿರುವ. ಸ್ವತೇಜಸಾ-ತಮ್ಮ ಕಾಂತ್ಯತಿಶಯದಿಂದ. ದೀಪ್ಯಮಾನೌ-ಹೊಳೆಯುತ್ತಿರುವ, ತೌ ರಾಘವೌ-ಆ ರಾಮಲಕ್ಷ್ಮಣರು, ಸೀತಯಾ ಸಹ-ಸೀತಾದೇವಿಯೊಡನೆ, ಧೃತಚಾಪೌ-ಧರಿಸಲ್ಪಟ್ಟ ಧನುಸ್ಸುಗಳುಳ್ಳವರಾಗಿ, ಪ್ರಸ್ಥಿತೌ-ಹೊರಟರು ॥ —**ಅಷ್ಟಮಸ್ಸರ್ಗಃ**—

ಸುತೀಕ್ಷ್ಣೇನ-ಸುತೀಕ್ಷ್ಣ ಋಷಿಯಿಂದ, ಅಭ್ಯನುಜ್ಞಾತಂ-ಸಮ್ಮತಿಸಲ್ಪಟ್ಟ, ಪ್ರಸ್ಥಿತಂ-ಪ್ರಯಾಣೋದ್ಯುಕ್ತನಾದ, ರಘುನಂದನಂ-ಶ್ರೀರಾಮ ನನ್ನು ಕುರಿತು. ಹೃದ್ಯಯಾ-ಮನೋಹರವಾದ. ಸ್ನಿಗ್ಧಯಾ-ಸ್ನೇಹಾಭಿವೃದ್ಧಿಕರವಾದ, ವಾಚಾ-ಮಾತಿನಿಂದ. ಸೀತಾ-ಸೀತಾದೇವಿಯು. ಭರ್ತಾ ರಂ-ಗಂಡನಾದ ಶ್ರೀರಾಮನನ್ನು ಕುರಿತು, ಇದಂ-ಈ ಮಾತನ್ನು ಅಬ್ರವೀತ್-ನುಡಿದಳು ॥೧॥ ಮಹಾನ್-ನೀನು ದೊಡ್ಡವನಾದರೂ, ಅಯಂ ಧರ್ಮಃ-ಈ ಧರ್ಮವು, (ಅಂದರೆ ನಿನ್ನಿಂದ ಅನುಷ್ಠೇಯಮಾನವಾದ ಈ ಋಷಿಧರ್ಮವು) ಸುಸೂಕ್ಷ್ಮೇಣ-ಸೂಕ್ಷ್ಮವಾದ, ವಿಧಿನಾ-ವಿಧಿಮಾರ್ಗವಿಚಾರದಿಂ ದ, ಪ್ರಾಪ್ಯತೇ-ಹೊಂದಲ್ಪಡುತ್ತದೆ, ಇಹ-ಈ ಲೋಕದಲ್ಲಿ. ಕಾಮಜಾತ್-ರಾಗದಿಂದ ಹುಟ್ಟಿದ, ವ್ಯಸನಾತ್-ವ್ಯಸನದ ದೆಶೆಯಿಂದ. ನಿವೃತ್ತೇನ-ಹಿಂತಿರಿಗಿ ದ. ತ್ವಯಾ-ನಿನ್ನಿಂದ, ಅಯಂ-ಈ ಧರ್ಮವು, ಶಕ್ಯಃ-ಪರಿಹಾರಮಾಡಿಕೊಂಬುವದಕ್ಕೆ ಸಾಧ್ಯವು ॥೨॥ ಅತ್ರ-ಈ ಲೋಕದಲ್ಲಿ. ಕಾಮಜಾನಿ-ಕಾಮ ಗುಣದಿಂ ಪುಟ್ಟಿದ, ತ್ರೀಣ್ಯೇವ ವ್ಯಸನಾನಿ-ಮೂರು ವ್ಯಸನಗಳು, ಭವಂತಿ-ಆಗುತ್ತವೆ. ಮಿಥ್ಯಾವಾಕ್ಯಂ-ಸುಳ್ಳುಮಾತು, ಗುರುತರಂ-ದೊಡ್ಡದು

ಣ್ಯಗಳನ್ನೂ ಸಹಾ ನೋಡುತ್ತಾ ಹೊರಡುವನಾಗು, ಯನ್ನಾಶ್ರಮಕ್ಕೆ ಆಗಾಗ್ಯೆ ಬರುತ್ತಲಿರು ॥೧೬॥ ಈ ಪ್ರಕಾರ
ವಾಗಿ ಆ ಮಹರ್ಷಿಯಿಂದ ಹೇಳಲ್ಪಟ್ಟವನಾಗಿ ಶ್ರೀರಾಮನು ಲಕ್ಷ್ಮಣನೊಡನೆ ಮುನಿಗೆ ನಮಸ್ಕರಿಸಿ ಹೊರಡಲು
ದ್ಯುಕ್ತನಾದನು. ಬಳಿಕ ಕಂಜಾಕ್ಷಿಯಾದ ಸೀತಾದೇವಿಯು ಆ ರಾಮಲಕ್ಷ್ಮಣರೀರ್ವರಿಗೆ ಶುಭಕರವಾದ ಧನುರ್ಬಾಣ
ಗಳನ್ನೂ, ನಿರ್ಮಲವಾದ ಖಡ್ಗಗಳನ್ನು ಸಹಾ ಕೊಟ್ಟಳು ॥೧೮॥ ಅನಂತರದಲ್ಲಿ ಅವುಗಳಂ ತೆಗೆದುಕೊಂಡು ಆ ರಾಮಲಕ್ಷ್ಮ
ರು ಕಂಕಳಿಗೆ ಕಟ್ಟಿಕೊಂಡು, ಪ್ರಯಾಣೋನ್ಮುಖರಾಗಿ ಆ ಆಶ್ರಮದಿಂದ ಹೊರಟರೆಂತೆನೆ,-- ಸಂಪದ್ಯುಕ್ತ
ರಾಗಿಯೂ, ಸೌಂದರ್ಯವಂತರಾಗಿಯೂ ಇರುವ ಆ ರಾಮಲಕ್ಷ್ಮಣರು ಕೋದಂಡಪಾಣಿಗಳಾಗಿ ಸೀತಾದೇವಿ
ಯೊಡನೆ ತಮ್ಮ ದೇಹಕಾಂತಿಯಿಂದ ಹೊಳೆಯುವರಾಗಿ ತೆರಳಿದರು ॥೨೦॥ --*೮ನೇ ಸರ್ಗಂ ಮುಗಿದುದು*--

ಈ ರೀತಿಯಾಗಿ ಸುತೀಕ್ಷ್ಣಮುನಿಯಿಂ ದಪ್ಪಣೆಯಂ ಪಡದು ಪ್ರಯಾಣೋನ್ಮುಖನಾದ ಶ್ರೀರಾಮನಂ
ಕುರಿತು ಸೀತಾದೇವಿಯು ಮನೋಹರವಾದ ವಾಕ್ಕಿನಿಂದ ಹೇಳುವಳದೆಂತೆನೆ,--ಎಲೈ ರಘುನಂದನನೇ! ನೀನು
ದೊಡ್ಡವನಾದರೂ ನೀನು ಗೈಯುವ ಈ ಧರ್ಮವು ಸೂಕ್ಷ್ಮಮಾರ್ಗದಿಂದ ವಿಚಾರಣೆಯಂ ಗೈದರೆ ಅಧರ್ಮವೇ ವುಂ
ಟಾಗುವದು, ಈ ಜಗದಲ್ಲಿ ಕಾಮದಿಂದುಂಟಾಗುವ ತ್ರಿವಿಧವಾದ ವ್ಯಸನಂಗಳಿಲ್ಲದಿರುವ ನೀನಿದಂ ಬಿಡಲಸಾಧ್ಯವಲ್ಲ [ಅವ್ಯ
ಸನಂಗಳು ಯಾವವೆಂದರೆ] ಈ ಲೋಕದಲ್ಲಿ ಸುಳ್ಳುಮಾತುಗಳಿಂದುಂಟಾಗುವ ದೋಷು, ಅದಕ್ಕಿಂತಲೂ ದೊಡ್ಡ

ರದಾರಾಭಿಗಮನಂವಿನಾವೈರಂಚರೌದ್ರತಾ ॥೩॥ ಮಿಥ್ಯಾವಾಕ್ಯಂನತೇಭೂತಂನಭವಿಷ್ಯತಿರಾಘವ । ಕುತೋಭಿಲಾ
ಷಣಂಸ್ತ್ರೀಣಾಂಪರೇಷಾಂಧರ್ಮನಾಶನಂ ॥೪॥ ತವನಾಸ್ತಿಮನುಷ್ಯೇಂದ್ರನಚಾಭೂತ್ತೇಕದಾಚನ । ಮನಸ್ಯಪಿತ
ಥಾರಾಮನಚೈತದ್ವಿದ್ಯತೇಕ್ವಚಿತ್ ॥೫॥ ಸ್ವದಾರನಿರತಸ್ತ್ವಂಚನಿತ್ಯಮೇವನೃಪಾತ್ಮಜ । ಧರ್ಮಿಷ್ಠಸ್ಸತ್ಯಸಂಧಶ್ಚಪಿ
ತುರ್ನಿರ್ದೇಶಕಾರಕಃ ॥೬॥ ಸತ್ಯಸಂಧಮಹಾಭಾಗಶ್ರೀಮಲ್ಲಕ್ಷ್ಮಣಪೂರ್ವಜ । ತ್ವಯಿಧರ್ಮಶ್ಚಸತ್ಯಂಚತ್ವಯಿ
ಸರ್ವಂಪ್ರತಿಷ್ಠಿತಂ ॥೭॥ ತಚ್ಚಸರ್ವಂಮಹಾಬಾಹೋಶಕ್ಯಂಧರ್ತುಂಜಿತೇಂದ್ರಿಯೈಃ । ತವವಶ್ಯೇಂದ್ರಿಯತ್ವಂಚಜಾ
ನಾಮಿಶುಭದರ್ಶನ ॥೮॥ ತೃತೀಯಂಯದಿದಂರೌದ್ರಂಪರಪ್ರಾಣಾಭಿಹಿಂಸನಂ । ನಿರ್ವೈರಂಕ್ರಿಯತೇಮೋಹಾತ್ತ
ಚ್ಚತೇಸಮುಪಸ್ಥಿತಂ ॥೯॥ ಪ್ರತಿಜ್ಞಾತಸ್ತ್ವಯಾವೀರದಂಡಕಾರಣ್ಯವಾಸಿನಾಂ । ಋಷೀಣಾಂರಕ್ಷಣಾರ್ಥಾಯವಧ
ಸ್ಸಂಯತಿರಕ್ಷಸಾಂ ॥೧೦॥ ಏತನ್ನಿಮಿತ್ತಂಚವನಂದಂಡಕಾಇತಿವಿಶ್ರುತಂ । ಪ್ರಸ್ಥಿತಸ್ತ್ವಂಸಹಭ್ರಾತ್ರಾಧೃತಬಾ

---

ಪರದಾರಾಭಿಗಮನಂ-ಪರಸ್ತ್ರೀಗಮನವು, ವೈರಂವಿನಾ-ದ್ವೇಷವಿಲ್ಲದೆ. ರೌದ್ರತಾ-ಪರಹಿಂಸಕತ್ವವೂ ಎಂಬ, ಉಭೌ-ಎರಡು ತಸ್ಮಾತ್-ಇದಕ್ಕಿಂತಲೂ, ಗುರುತರೌ-ದೊಡ್ಡವು, ॥೩॥ ಹೇರಾಘವ-ಎಲೈ ಶ್ರೀರಾಮನೇ, ತೇ-ನಿನಗೆ, ಮಿಥ್ಯಾವಾಕ್ಯಂ-ಸುಳ್ಳು ಮಾತೆಂಬ ವ್ಯಸನವು, ನಭೂತಂ-ಇರ ಲೂ ಇಲ್ಲ ನಭವಿಷ್ಯತಿ-ಮುಂದೆಯೂ ಯಿರಲಾರದು, ಧರ್ಮನಾಶನಂ-ಧರ್ಮವನ್ನು ಹೋಗಲಾಡಿಸುತ್ತಿರುವ, ಪರೇಷಾಂ-ಪರಪುರುಷರ, ಸ್ತ್ರೀಣಾಂ-ಹೆಂಗಸರ, ಅಭಿಲಾಷಣಂ-ಅಪೇಕ್ಷೆಯು, ಕುತಃ-ಯೆಲ್ಲಿಂದಬಂತು ॥೪॥ ಹೇಮನುಷ್ಯೇಂದ್ರ-ಎಲೈ ಪುರುಷರಿಗೆ ಇಂದ್ರನಂತಿರುವನೇ, ತವ-ನಿನಗೆ ನಾಸ್ತಿ-ಇಲ್ಲವೇಯಿಲ್ಲ ತೇ-ನಿನಗೆ, ಕದಾಚನ-ಒಂದಾನೊಂದುಕಾಲದಲ್ಲಾದರು ನಾಭೂಚ್ಚ-ಆಗಲಿಲ್ಲ, ಹೇರಾಮ-ಎಲೈ ಶ್ರೀರಾಮನೇ. ತಥಾ-ಹಾಗೆಯೇ, ಮನಸ್ಯಪಿ-ಮನಸ್ಸಿನಲ್ಲಿಯೂ, ಏತತ್-ಈ ಪರದಾರಾಭಿಲಾಷೆಯು, ಕ್ವಚಿತ್-ಯಾವಾಗಲೂ, ನವಿದ್ಯತೇ-ಇರುವದಿಲ್ಲ ॥೫॥ ಹೇನೃಪಾತ್ಮಜ-ಎಲೈ ಅರಸುಮಗನೇ. ತ್ವಂ-ನೀನು, ನಿತ್ಯಮೇವ-ನಿರಂತರವೂ, ಸ್ವದಾರನಿರತಏವ-ಸ್ವಕಳತ್ರದಲ್ಲೇ ಆಸಕ್ತನು, ಧರ್ಮಿಷ್ಠಃ-ಧರ್ಮದಲ್ಲೇ ಆಸಕ್ತನು, ಧರ್ಮಿಷ್ಠಃ-ಧರ್ಮದಲ್ಲಿರುವವನು, ಸತ್ಯಸಂಧಶ್ಚ-ಸತ್ಯಪ್ರತಿಜ್ಞಾವಂತನು, ಪಿತುಃ-ತಂದೆಯ, ನಿರ್ದೇಶಕಾರಕಃ-ಆಜ್ಞೆಯನ್ನು ಪರಿಪಾಲಿಸುವನು ॥೬॥ ಹೇಸತ್ಯಸಂಧ-ಎಲೈ ಸತ್ಯಪ್ರತಿಜ್ಞಾವಂತನೇ, ಹೇಮಹಾಭಾಗ-ಎಲೈ ಪುಣ್ಯವಂತನೇ, ಹೇಶ್ರೀಮನ್-ಎಲೈ ಸಂಪದ್ಯುಕ್ತನೇ, ಹೇಲಕ್ಷ್ಮಣಪೂರ್ವಜ-ಎಲೈ ಲಕ್ಷ್ಮಣನಿಗಿಂತಲೂ ಮೊದಲುಹುಟ್ಟಿದವನೇ, ತ್ವಯಿ-ನಿನ್ನಲ್ಲಿ, ಧರ್ಮಶ್ಚ-ಧರ್ಮವೂ, ತ್ವಯಿ-ನಿನ್ನಲ್ಲಿ, ಸತ್ಯಂಚ-ಯಥಾರ್ಥವೂ, ಸರ್ವಂ-ಸಮಸ್ತವೂ, ಪ್ರತಿಷ್ಠಿತಂ-ಸ್ಥಿರವಾಗಿದೆ ॥೭॥ ಹೇಮಹಾಬಾಹೋ-ಎಲೈ ಬಹಳವಾದ ಭುಜಪರಾಕ್ರಮಶಾಲಿಯೇ, ಜಿತೇಂದ್ರಿಯೈಃ-ಇಂದ್ರಿಯನಿಗ್ರಹವುಳ್ಳವರಿಂದ, ಧರ್ತುಂ-ಧರಿಸುವದಕ್ಕೋಸುಗ, ಶಕ್ಯಂ-ಸಾಧ್ಯವಾದ, ತಚ್ಚಸರ್ವಂ-ಅಧರ್ಮಿಷ್ಠತ್ವಾದಿ ಸಮಸ್ತವೂ, ಹೇಶುಭದರ್ಶನ-ಎಲೈ ಮಂಗಳಕರವಾದ ನೋಡುವಿಕೆಯುಳ್ಳವನೇ, ತವ-ನಿನ್ನ, ವಶ್ಯೇಂದ್ರಿಯತ್ವಂಚ-ಸ್ವಾಧೀನವಾದ ಇಂದ್ರಿಯಗಳುಳ್ಳವನನ್ನು, ಜಾನಾಮಿ-ತಿಳಿದಿಧ್ದೇನೆ ॥೮॥ ತೃತೀಯಂ-ಮೂರನೇ ವ್ಯಸನರೂಪವಾದ, ಪರಪ್ರಾಣಾಭಿಹಿಂಸನಂ-ಪರರ ಪ್ರಾಣಗಳನ್ನು ಕೊಲ್ಲೋಣವೆಂಬುವದು, ಯತ್-ಯಾವದುಂಟೋ, ತದಿದಂ-ಆ ಈ, ರೌದ್ರಂ-ಭಯಂಕರವಾದ ವ್ಯಸನವು, ಮೋಹಾತ್-ಅಜ್ಞಾನದದೆಶೆಯಿಂದ, ನಿರ್ವೈರಂ-ವೈರವಿಲ್ಲದೆ, ಕ್ರಿಯತೇ-ಮಾಡಲ್ಪಡುತ್ತದೆ, ತಚ್ಚ-ಆ ವ್ಯಸನವು, ತೇ-ನಿನಗೆ, ಸಮುಪಸ್ಥಿತಂ-ಸಮೀಪಿಸಿಬಂದಿಧ್ದೆ ॥೯॥ ಹೇವೀರ-ಎಲೈ ಶೂರನೇ, ತ್ವಯಾ-ನಿನ್ನಿಂದ, ದಂಡಕಾರಣ್ಯವಾಸಿನಾಂ-ದಂಡಕಾವನದಲ್ಲಿ ವಾಸಮಾಡುತ್ತಿರುವ, ಋಷೀಣಾಂ-ಮುನಿಗಳ, ರಕ್ಷಣಾರ್ಥಾಯ-ಸಂರಕ್ಷಿಸುವದಕ್ಕೋಸ್ಕರ, ಸಂಯತಿ-ಕಾಳಗದಲ್ಲಿ, ರಕ್ಷಸಾಂ-ರಕ್ಕಸರ,

---

ವಾದ, “ಪರಸ್ತ್ರೀಗಮನ, ವಿರೋಧವಿಲ್ಲದೆ ಪರರಂ ಹಿಂಸಿಸುವಣ” ಎಂಬೆರಡು, ಈ ಮೂರು ವ್ಯಸನಂಗಳು ಕಾಮಗುಣದಿಂದಲೇ ಹುಟ್ಟುವವು, ನೀನು ಪೂರ್ವದಲ್ಲಿ ಯೆಂದಿಗು ಸಟೆಮಾತುಗಳಂ ನುಡಿದವನೂ ಅಲ್ಲ; ಮುಂದೆ ನುಡಿಯತಕ್ಕವನೂ ಅಲ್ಲ ಧರ್ಮಹಾನಿಕರವಾದ ಪರದಾರಾಭಿ ಗಮನವು ನಿನಿಗೆಲ್ಲಿಬಂತು [ಅಂದರೆ ಇಲ್ಲವೇಯಿಲ್ಲ] ಕೇಳೆಲೈ ನರನಾಥನೇ! ಆದಕಾರಣ ನಿನಿಗೆ ಈ ಪರಸ್ತ್ರೀಗಮನಾದಿ ದೋಷವು ಹಿಂದಕ್ಕೆ ಯಿರಲೂ ಇಲ್ಲ, ಮುಂದೆ ಯಾವಾಗಲಾದರೂ ಸಂಭವಿಸುವದೂ ಇಲ್ಲ, ಬಹುಮಾತುಗಳಿಂದೇನು ಪ್ರಯೋಜನವು; ಈ ಪರದಾರಾಭಿಲಾಷೆಯಲ್ಲಿ ನಿನ್ನ ಮನಸ್ಸೇ ಇಲ್ಲ; ಯಾವಾಗಲೂ ಸ್ವಭಾರ್ಯೆಯಲ್ಲಿ ಆಸಕ್ತನಾಗಿರುವನು; ಮಹಾ ಧರ್ಮಿಷ್ಠನು, ಸತ್ಯವಂತನು, ಜನಕನಾಜ್ಞೆಯನ್ನು ಮೀರದಿರುವನು, ನಿನ್ನಲ್ಲಿ ಸತ್ಯಧರ್ಮಗಳೆಂಬೆರಡು ಸ್ಥಿರವಾಗಿ ನಿಂತಿವೆ; ಜಿತೇಂದ್ರಿಯರಾದವರಿಂದ ಧರಿಸಲೂ ಶಕ್ಯವಾದ ಆ ನಿನ್ನ ಧರ್ಮಿಷ್ಠತ್ವಾದಿ ಸಮಸ್ತವನ್ನೂ, ಜಿತೇಂದ್ರಿಯತ್ವವನ್ನೂ ಸಹ ನಾನರಿತಿಧ್ದೇನೆ; [ಆದಕಾರಣ ನಿನಿಗೀ ಯೆರಡು ಬಗೆಗಳಾದ ವ್ಯಸನಂಗಳಿಲ್ಲವೇ ಇಲ್ಲ] ಆದರೆ ಪರಪ್ರಾಣಂಗಳಿಗೆ ಹಿಂಸೆಯಂ ಗೈಯ್ಯುವಣವೆಂಬ ಮಹಾ ಭಯಂಕರವಾದ ವ್ಯಸನವು ಯಾವದೋ, ಅಂಥಾ ಕ್ರೂರವಾದ ವ್ಯಸನವು ಮೋಹದಿಂದ ವೈರವಿನಹಾ ಮಾಡಲ್ಪಡುತ್ತಲ್ಲವೇ; ಅದು ಈಗ ಸನಿಹಿಸಿರುವುದು ॥೯॥ ಕೇಳೆಲೈ ಶೂರನೇ! ದಂಡಕಾರಣ್ಯವಾಸಿಗಳಾದ ಮಹರ್ಷಿಗಳ ಸಂರಕ್ಷಣೆಗಾಗಿ ಸಂಗರದಿ ರಾಕ್ಷಸವಧೆಯಂ ಗೈಯ್ಯುವೆನೆಂದು ಪ್ರತಿ

ತ್ವದ್ವೃತ್ತಂ ಚಿಂತಯಂತ್ಯಾಶ್ಚ ಮನೋ ಮೇ ಚಿಂತಾಕುಲಂ ಮನಃ ॥ ತ್ವಿಶರಾಸನಃ ॥೧೧॥ ತತಸ್ತ್ವಾಂ ಪ್ರಸ್ಥಿತಂ ದೃಷ್ಟ್ವಾ ಮಮ ಚಿಂತಾಕುಲಂ ಮನಃ । ತ್ವದ್ವೃತ್ತಂ ಚಿಂತಯಂತ್ಯಾಶ್ಚ ಭವೇನ್ನಿಶ್ರೇಯಸಂ ಹಿತಂ ॥೧೨॥ ನಹಿ ಮೇ ರೋಚತೇ ವೀರ ಗಮನಂ ದಂಡಕಾನ್ಪ್ರತಿ ॥ ಕಾರಣಂ ತತ್ರ ವಕ್ಷ್ಯಾಮಿ ವದಂತ್ಯಾಃ ಶ್ರೂಯತಾಂ ಮಮ ॥೧೩॥ ತ್ವಂ ಹಿ ಬಾಣಧನುಷ್ಪಾಣಿರ್ಭ್ರಾತ್ರಾ ಸಹ ವನಂ ಗತಃ ॥ ದೃಷ್ಟ್ವಾ ವನಚರಾನ್ಸರ್ವಾನ್ ಕಚ್ಚಿತ್ಕುರ್ಯಾಃ ಶರವ್ಯಯಂ ॥೧೪॥ ಕ್ಷತ್ರಿಯಾಣಾಂ ಚ ಹಿ ಧನುರ್ಹುತಾಶಸ್ಯೇಂಧನಾನಿ ಚ ॥ ಸಮೀಪತಃ ಸ್ಥಿತಂ ತೇಜೋಬಲಮುಚ್ಛ್ರಯತೇ ಭೃಶಂ ॥೧೫॥ ಪುರಾ ಕಿಲ ಮಹಾಬಾಹೋ ತಪಸ್ವೀ ಸತ್ಯವಾಕ್ಛುಚಿಃ । ಕಸ್ಮಿಂಶ್ಚಿದಭವತ್ಪುಣ್ಯೇ ವನೇ ರತಮೃಗದ್ವಿಜೇ ॥೧೬॥ ತಸ್ಯೈವ ತಪಸೋ ವಿಘ್ನಂ ಕರ್ತುಮಿಂದ್ರಶ್ಶಚೀಪತಿಃ । ಖಡ್ಗಪಾಣಿಸ್ತಥಾಗಚ್ಛದಾಶ್ರಮಂ ಭಟರೂಪಧೃತ್ ॥೧೭॥ ತಸ್ಮಿಂಸ್ತದಾಶ್ರಮಪದೇ ನಿಶಿತಃ ಖಡ್ಗ ಉತ್ತಮಃ ॥ ಸನ್ಯಾಸವಿಧಿನಾ ದತ್ತಃ ಪುಣ್ಯೇ ತಪಸಿ ತಿಷ್ಠತಃ ॥೧೮॥ ಸ ತಚ್ಛಸ್ತ್ರಮನುಪ್ರಾಪ್ಯ ನ್ಯಾಸರಕ್ಷಣತತ್ಪರಃ । ವನೇ ತಂ ವಿಚರತ್ಯೇವ ರಕ್ಷನ್

---

ವಧಃ-ಸಂಹಾರವು, ಪ್ರತಿಜ್ಞಾತಃ-ಪ್ರತಿಜ್ಞೆ ಮಾಡಲ್ಪಟ್ಟಿತು ॥೧೦॥ ತ್ವಂ-ನೀನು, ಧೃತಬಾಣಶರಾಸನಃ-ಧರಿಸಲ್ಪಟ್ಟ ಬಾಣಗಳೂ ಬಿಲ್ಲುಗಳೂ ಉಳ್ಳವನಾಗಿ, ಭ್ರಾತ್ರಾಸಹ-ತಮ್ಮನಾದ ಲಕ್ಷ್ಮಣನೊಡನೆ, ಪ್ರಸ್ಥಿತಃ-ಪ್ರಯಾಣಮಾಡಲ್ಪಟ್ಟವನಾದೆ, ತತಃ-ಅದರ ದೆಸೆಯಿಂದ, ನಿಶ್ರೇಯಸಂ-ಶ್ರೇಯಸ್ಸಂಪಾದಕವಾದ, ಹಿತಂ-ಇಷ್ಟವಾದ, ತ್ವದ್ವೃತ್ತಂ-ನಿನ್ನ ವ್ಯಾಪಾರವನ್ನು, ಚಿಂತಯಂತ್ಯಾಃ-ಆಲೋಚಿಸುತ್ತಿರುವ, ಮಮ-ನನಗೆ, ಭವೇದ್ವಾ-ಆಗುತ್ತದೋ ಎಂದು, ಮನಃ-ಮನವು, ಚಿಂತಾಕುಲಂ-ಚಿಂತೆಯಿಂದ ವ್ಯಾಕುಲವಾಗಿದೆ ॥೧೨॥ ಹೇವೀರ-ಎಲೈ ಪರಾಕ್ರಮಿಯೇ, ತೇ-ನಿನ್ನ, ದಂಡಕಾನ್ಪ್ರತಿ-ದಂಡಕಾರಣ್ಯವಂಕುರಿತು, ಗಮನಂ-ಪ್ರಯಾಣವು, ಮೇ-ನನಗೆ, ನರೋಚತೇ-ರುಚಿಸುವದಿಲ್ಲ, ತತ್ರ-ಆ ವಿಷಯದಲ್ಲಿ, ಕಾರಣಂ-ಕಾರಣವನ್ನು, ವಕ್ಷ್ಯಾಮಿ-ಹೇಳುವೆನು, ವದಂತ್ಯಾಃ-ಹೇಳುತ್ತಿರುವ, ಮಮ-ನನ್ನ ದೆಸೆಯಿಂದ, ಶ್ರೂಯತಾಂ-ಕೇಳಲ್ಪಡಲಿ ॥೧೪॥ ತ್ವಂ-ನೀನು, ಬಾಣಧನುಷ್ಪಾಣಿಃ-ಧನುರ್ಬಾಣಗಳು ಹಸ್ತದಲ್ಲಿವುಳ್ಳವನಾಗಿ, ಭ್ರಾತ್ರಾಸಹ-ತಮ್ಮನೊಡಗೂಡ, ವನಂ-ಅರಣ್ಯವನ್ನು ಕುರಿತು, ಗತಃ-ಹೋಗಿ, ಸರ್ವಾನ್-ಸಮಸ್ತರಾದ, ವನಚರಾನ್-ರಾಕ್ಷಸರನ್ನುದ್ದೇಶಿಸಿ, ದೃಷ್ಟ್ವಾ-ಕಂಡು, ಶರವ್ಯಯಂ-ಬಾಣಗಳ ಕಳೆಯುವಣವನ್ನು, ಕುರ್ಯಾಃ ಕಚ್ಚಿತ್-ಮಾಡುವಿ ॥೧೪॥ ಕ್ಷತ್ರಿಯಾಣಾಂ-ಕ್ಷತ್ರಿಯರಿಗೆ, ಧನುಃ-ಧನುರ್ಬಾಣಗಳು, ಹುತಾಶಸ್ಯ-ಅಗ್ನಿಗೆ, ಇಂಧನಾನಿಚ-ಕಾಷ್ಠಗಳು, ಸಮೀಪತಃ-ಸಮೀಪದಲ್ಲಿ, ಸ್ಥಿತಂ-ಇದ್ದವಾಗಿ, ತೇಜಃಬಲಂ-ತೇಜಸ್ಸಿನ ಅಭಿವೃದ್ಧಿಯನ್ನು, ಭೃಶಂ-ಬಹಳವಾಗಿ, ಉಚ್ಛ್ರಯತೇ-ಬೆಳಿಸುತ್ತದೆ ॥೧೫॥ ಹೇಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೇ, ಪುರಾಕಿಲ-ಪೂರ್ವದಲ್ಲಿ, ರತಮೃಗದ್ವಿಜೇ-ಸಂತೋಷಯುಕ್ತವಾದ ಮೃಗಗಳೂ ಹಕ್ಕಿಗಳೂ ಉಳ್ಳ, ಪುಣ್ಯೇ-ಪುಣ್ಯಾಕರವಾದ, ಕಸ್ಮಿಂಶ್ಚಿದ್ವನೇ-ಒಂದಾನೊಂದು ವನದಲ್ಲಿ, ಸತ್ಯವಾಕ್-ಸತ್ಯವಾದ ಮಾತುಳ್ಳ, ಶುಚಿಃ-ಪರಿಶುದ್ಧನಾದ, ತಪಸ್ವೀ-ತಪಸ್ವಿಯಾದ ಋಷಿಯು, ಅಭವತ್ಕಿಲ-ಆದನಷ್ಟೆ ॥೧೬॥ ಅಥ-ಬಳಿಕ, ಶಚೀಪತಿಃ-ಶಚೀದೇವಿಗೆ ಗಂಡನಾದ, ಇಂದ್ರಃ-ದೇವೇಂದ್ರನು, ಭಟರೂಪಧೃತ್-ಕಾಲಾಳಿನ ರೂಪವನ್ನು ಧರಿಸಿ, ತಸ್ಯೈವ-ಆ ಋಷಿಯ, ತಪಸಃ-ತಪಸ್ಸಿಗೆ, ವಿಘ್ನಂ-ಅಂತರಾಯವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಖಡ್ಗಪಾಣಿಃ-ಕತ್ತಿಯೇ ಹಸ್ತವುಳ್ಳವನಾಗಿ, ಆಶ್ರಮಂ-ಆಶ್ರಮವಂಕುರಿತು, ಆಗಚ್ಛತ್-ಬಂದನು॥ ... ... ... ... ॥೧೭॥ ತಸ್ಮಿನ್-ಆ, ತದಾಶ್ರಮಪದೇ-ಆ ಋಷಿಯ ಆಶ್ರಮಪ್ರದೇಶದಲ್ಲಿ, ನಿಶಿತಃ-ತೀಕ್ಷ್ಣವಾದ, ಉತ್ತಮಃ-ಉತ್ಕೃಷ್ಟವಾದ, ಖಡ್ಗಃ-ಕತ್ತಿಯು, ಪುಣ್ಯೇ-ಪುಣ್ಯಾಕರವಾದ, ತಪಸಿ-ತಪಸ್ಸಿನಲ್ಲಿ, ತಿಷ್ಠತಃ-ಇರುವ ಆ ಋಷಿಗೆ, ಸನ್ಯಾಸವಿಧಿನಾ-ಕಾಲಾಂತರದಲ್ಲಿ ತೆಗದುಕೊಳ್ಳುತ್ತೇನೆ ಸದ್ಯಾ ನಿನ್ನಲ್ಲಿರಲೆಂಬ

---

ಜ್ಞೆಯಂ ಗೈದವನಾದೆ ಯಲ್ಲವೆ, ನೀನು ಧನುರ್ಬಾಣಂಗಳಂ ಧರಿಸಿದವನಾಗಿ ತಮ್ಮನಾದ ಲಕ್ಷ್ಮಣನೊಡನೆ ಅರಣ್ಯಪ್ರವೇಶವಂ ಗೈದವನಾದೆ; ಆದಕಾರಣ ನಿನಗೆ ಶ್ರೇಯಸ್ಸಂಪಾದಕವಾಗಿಯೂ ಹಿತವಾಗಿಯೂ ಇರುವ ಕಾರ್ಯವನ್ನೇ ಚಿಂತಿಸುವ ನನ್ನ ಮನವು ವ್ಯಾಕುಳವಾಗಿದೆ ॥೧೨॥ ಎಲೈ ಪರಾಕ್ರಮಶಾಲಿಯೇ! ದಂಡಕಾರಣ್ಯಕ್ಕೆ ಸಾರುವದು ನನಗೆ ರುಚಿಸುವದಿಲ್ಲ; ಆ ವಿಷಯದ ಕಾರಣವಂ ಹೇಳುವ ನನ್ನ ಮಾತಂ ಕೇಳುವನಾಗು; ಯೇನಂದರೆ;—ನೀನು ಕೋದಂಡಪಾಣಿಯಾಗಿ ತಮ್ಮನೊಡನೆ ಅರಣ್ಯಕ್ಕೆ ಹೊರಟವನಾದೆ; ಮುಂದೆ ರಕ್ಕಸರನ್ನುದ್ದೇಶಿಸಿ ಶರಸಂಧಾನವಂ ಗೈಯುವವನಾಗುವೆ, ಕ್ಷತ್ರಿಯರಿಗೆ ಧನುರ್ಬಾಣಂಗಳು, ಅಗ್ನಿಗೆ ಸಮೀಪದಲ್ಲಿರುವ ಕಾಷ್ಠಂಗಳು ತೇಜೋಭಿವೃದ್ಧಿಯಂ ಮಾಡುವಂತೆ; ಬಲಾಧಿಕ್ಯವಂ ಗೈದು ವೃದ್ಧಿಯನ್ನೈದಿಸುತ್ತವೆ ॥೧೫॥ ಎಲೈ ಪರಾಕ್ರಮಶಾಲಿಯೇ! ಕೇಳು; ಪೂರ್ವದಲ್ಲಿ ಸಂತೋಷಯುಕ್ತವಾದ ಮೃಗಂಗಳೂ ಹಕ್ಕಿಗಳೂ ಉಳ್ಳ ಪೊಂದುವ ವನದಲ್ಲಿ ಸತ್ಯವಾದ ವಚನವುಳ್ಳ ಮಹಾತಪಸ್ವಿಯಾದ ಪೂರ್ವಮುನಿ ಯಿದ್ದನು ॥೧೬॥ ಅನಂತರದಲ್ಲಿ ದೇವೇಂದ್ರನು ಭಟರೂಪವಂ ತಾಳಿ ಆ ಮಹರ್ಷಿಯ ತಪಸ್ಸಿಗೆ ಅಂತರಾಯವಂ ಗೈಯಲಿಚ್ಛಿಸಿ ಖಡ್ಗಪಾಣಿಯಾದವನಾಗಿ ಆತನಾಶ್ರಮಕ್ಕೆ ಸಾರಿದನು ॥೧೭॥ ಆ ಆಶ್ರಮದಲ್ಲಿ ಉತ್ತಮವಾದ ಖಡ್ಗವಂ ಕೆಲದಿನಗಳಿಟ್ಟು ಕೊಂಡಿರೆಂದು ಆ ಮಹರ್ಷಿಗೆ ಹೇಳಿ ಇರಿಸಿದವನಾಗಲೂ; ಆ ಮುನಿಯು ಆ ಖಡ್ಗದ ಸಂರಕ್ಷಣೆಯಲ್ಲಿ ಆಸಕ್ತಚಿತ್ತನಾಗಿ ಆ

ಪ್ರತ್ಯಯೆಮಾತ್ಮನಃ ।೧೯। ಯತ್ರಗಚ್ಛತ್ಯುಪಾದಾತುಂಮೂಲಾನಿಚಫಲಾನಿಚ । ನವಿನಾಯಾತಿತಂಖಡ್ಗಂನ್ಯಾಸರಕ್ಷಣತತ್ಪರಃ ।೨೦। ನಿತ್ಯಂಶಸ್ತ್ರಂಪರಿವರ್ಹನ್ಕ್ರಮೇಣಸತಪೋಧನಃ । ಚಕಾರರೌದ್ರೀಂಸ್ವಾಂಬುದ್ಧಿಂತ್ಯಕ್ತ್ವಾತಪಸಿನಿಶ್ಚಯಂ ।೨೧। ತತಸ್ಸರೌದ್ರೇಭಿರತಃಪ್ರಮತ್ತೋಧರ್ಮಕರ್ಶಿತಃ । ತಸ್ಯಶಸ್ತ್ರಸ್ಯಸಂವಾಸಾಜ್ಜಗಾಮನರಕಂಮುನಿಃ ।೨೨। ಏವಮೇತತ್ಪುರಾವೃತ್ತಂಶಸ್ತ್ರಸಂಯೋಗಕಾರಣಂ । ಅಗ್ನಿಸಂಯೋಗವದ್ಧೇತುಶ್ಶಸ್ತ್ರಸಂಯೋಗಉಚ್ಯತೇ । ಸ್ನೇಹಾಚ್ಚಬಹುಮಾನಾಚ್ಚಸ್ಮಾರಯೆತ್ವಾಂನಶಿಕ್ಷಯೆ ।೨೩। ನಕಥಂಚನಸಾಕಾರ್ಯಾಗೃಹೀತಧನುಷಾತ್ವಯಾ । ಬುದ್ಧಿರ್ವೈರಂವಿನಾಹಂತುಂರಾಕ್ಷಸಾನ್ದಂಡಕಾಶ್ರಿತಾನ್ ॥ ಅಪರಾಧಂವಿನಾಹಂತುಂಲೋಕಾನ್ವೀರನಕಾಮಯೆ ।೨೫। ಕ್ಷತ್ರಿಯಾಣಾಂತುವೀರಾಣಾಂವನೇಷುನಿರತಾತ್ಮನಾಂ । ಧನುಷಾಕಾರ್ಯಮೇತಾವದಾರ್ತಾನಾಮಭಿರಕ್ಷಣಂ ।೨೬। ಕ್ವಚಶಸ್ತ್ರಂಕ್ವಚವನಂಕ್ವಚಕ್ಷಾತ್ರಂತಪಃಕ್ವಚ । ವ್ಯಾವಿದ್ಧಮಿದಮಸ್ಮಾಭಿರ್ದೇಶಧರ್ಮಸ್ತುಪೂ

---

ನಿಕ್ಷೇಪವಿಧಿಯಿಂದ, ದತ್ತಃ-ಕೊಡಲ್ಪಟ್ಟಿತು ॥೧೮॥ ಸಃ-ಆ ಋಷಿಯು, ನ್ಯಾಸರಕ್ಷಣತತ್ಪರಃ-ನಿಕ್ಷಿಪ್ತವಾದ ಆ ಖಡ್ಗದ ಸಂರಕ್ಷಣೆಯಲ್ಲಾಸಕ್ತನಾಗಿ, ತಚ್ಛಸ್ತ್ರಂ-ಆ ಖಡ್ಗವನ್ನು, ಅನುಪ್ರಾಪ್ಯ-ಹೊಂದಿ. ವನೇ-ಅರಣ್ಯದಲ್ಲಿ, ಆತ್ಮನಃ-ತನ್ನ. ಪ್ರತ್ಯಯಂ-ಆ ವಿಶ್ವಾಸವನ್ನು, ರಕ್ಷನ್-ಸಂರಕ್ಷಣೆ ಮಾಡುತ್ತಿರುವನಾಗಿ, ವಿಚರತ್ಯೇವ-ಸಂಚಾರಮಾಡುತ್ತಾ ಬಂದನು ॥೧೯॥ ಯತ್ರ-ಯಾವಸ್ಥಳದಲ್ಲಿ, ಮೂಲಾನಿ-ಕಂದಮೂಲಗಳನ್ನು ಫಲಾನಿಚ-ಫಲಗಳನ್ನು ಉಪಾದಾತುಂ-ತೆಗೆದುಕೊಂಡು ಬರುವದಕ್ಕೋಸುಗ, ಗಚ್ಛತಿ-ಹೋಗುತ್ತಾನೋ, ತದಾ-ಆ ಕಾಲದಲ್ಲಿ, ನ್ಯಾಸರಕ್ಷಣತತ್ಪರಃ-ನಿಕ್ಷೇಪರೂಪವಾದ ಖಡ್ಗದ ರಕ್ಷಣೆಯಲ್ಲಾಸಕ್ತನಾಗಿ, ತಂಖಡ್ಗಂವಿನಾ-ಆ ಕತ್ತಿಯನ್ನು ಬಿಟ್ಟು, ನಯಾತಿ-ಹೋಗುವದಿಲ್ಲ, ॥೨೦॥ ಸತಪೋಧನಃ-ಆ ಋಷಿಯು, ನಿತ್ಯಂ-ಯಾವಾಗಲೂ, ಶಸ್ತ್ರಂ-ಖಡ್ಗವನ್ನು, ಪರಿವರ್ಹನ್-ಧರಿಸುತ್ತಿರುವನಾಗಿ, ತಪಸಿ-ತಪಸ್ಸಿನಲ್ಲಿ, ನಿಶ್ಚಯಂ-ದೃಢವನ್ನು, ತ್ಯಕ್ತ್ವಾ-ಬಿಟ್ಟು, ಕ್ರಮೇಣ-ಕ್ರಮವಾಗಿ, ರೌದ್ರೀಂ-ಕ್ರೂರವಾದ, ಸ್ವಾಂ-ಸ್ವಕೀಯವಾದ, ಬುದ್ಧಿಂ-ಮತಿಯನ್ನು, ಚಕಾರ-ಮಾಡಿದನು, ॥೨೧॥ ತತಃ-ಬಳಿಕ, ಮುನಿಃ-ಋಷಿಯು, ರೌದ್ರೇ-ಹಿಂಸಾಕರ್ಮದಲ್ಲಿ, ಅಭಿರತಃ-ಆಸಕ್ತನಾಗಿ, ಪ್ರಮತ್ತಃ-ಮದವೇರಿದವನಾಗಿ, ತಸ್ಯಶಸ್ತ್ರಸ್ಯ-ಆ ಖಡ್ಗದ, ಸಂವಾಸಾತ್-ಸಹವಾಸದ ದೆಶೆಯಿಂದ. ಅಧರ್ಮಕರ್ಶಿತಃ-ಅಧರ್ಮದಿಂ ಪೀಡಿತನಾಗಿ, ನರಕಂ-ನಿರಯವನ್ನು, ಜಗಾಮ-ಹೊಂದಿದನು, ೨೨॥ ॥ಏವಂ-ಈಪರಿಯಾಗಿ. ಶಸ್ತ್ರಸಂಯೋಗಕಾರಣಂ-ಶಸ್ತ್ರಸಂಬಂಧವೇ ಹೇತುವಾಗುಳ್ಳ, ಏತತ್ಪುರಾವೃತ್ತಂ-ಈ ಪೂರ್ವದ ಕಥೆಯು, ಶ್ರುತಂ-ಕೇಳಲ್ಪಟ್ಟಿತ್ತು, ಶಸ್ತ್ರಸಂಯೋಗಃ-ಶಸ್ತ್ರಧಾರಣರೂಪ ಸಂಬಂಧವು, ಅಗ್ನಿಸಂಯೋಗವತ್-ಬೆಂಕಿಯ ಸಹವಾಸದಂತೆ, ಹೇತುಃ-ವಿಕಾರಹೇತುವಾಗಿ, ಉಚ್ಯತೇ-ಹೇಳಲ್ಪಡುತ್ತದೆ, ಸ್ನೇಹಾಚ್ಚ-ಮೈತ್ರಿಯ ದೆಶೆಯಿಂದಲೂ, ಬಹುಮಾನಾಚ್ಚ-ಬಹುಮಾನದ ದೆಶೆಯಿಂದಲೂ, ತ್ವಾಂ-ನಿನ್ನನ್ನು ಕುರಿತು, ಸ್ಮಾರಯೆ-ಜ್ಞಾಪಿಸಿಕೊಟ್ಟೆನು, ನಶಿಕ್ಷಯೆ-ಅಪೂರ್ವಾರ್ಥವನ್ನು (ಅಂದರೆ ನಿನಗೆ ತಿಳಿಯದಿರುವ ಅರ್ಥವನ್ನು, )ಉಪದೇಶಮಾಡಿದವಳಲ್ಲ ॥೨೩॥ ಗೃಹೀತಧನುಷಾ-ಗ್ರಹಿಸಲ್ಪಟ್ಟ ಧನುಸ್ಸುಳ್ಳ, ತ್ವಯಾ-ನಿನ್ನಿಂದ, ವೈರಂವಿನಾ-ದ್ವೇಷವನ್ನು ಬಿಟ್ಟು, ದಂಡಕಾಶ್ರಿತಾನ್-ದಂಡಕಾರಣ್ಯವನ್ನು ಹೊಂದಿರುವ ರಾಕ್ಷಸಾನ್-ರಕ್ಕಸರನ್ನು, ಹಂತುಂ-ಕೊಲ್ಲುವದಕ್ಕೋಸುಗ. ಸಾಬುದ್ಧಿಃ-ಆ ಕ್ರೂರಬುದ್ಧಿಯು. ಕಥಂಚನ-ಹ್ಯಾಗಾದರೂ, ನಕಾರ್ಯಾ-ಮಾಡತಕ್ಕದ್ದಲ್ಲ, ॥೨೪॥ ಹೇವೀರ-ಎಲೈ ಶೂರನೇ. ಅಪರಾಧಂವಿನಾ-ಅಪರಾಧವಿಲ್ಲದೆ, ಲೋಕಾನ್-ಜನರನ್ನು, ಹತುಂ-ಕೊಲ್ಲುವದಕ್ಕೋಸ್ಕರ, ನಕಾಮಯೆ-ಕೋರುವಳಲ್ಲ ॥೨೫॥ ವೀರಾಣಾಂ-ಶೂರರಾದ, ಕ್ಷತ್ರಿಯಾಣಾಂ-ಕ್ಷತ್ರಿಯರಿಗೆ, ವನೇಷು-ವನಗಳಲ್ಲಿ. ನಿರತಾತ್ಮನಾಂ-ಆಸಕ್ತವಾದ ಮನವುಳ್ಳ, ಆರ್ತಾನಾಂ-ದೀನರಾದ ಋಷಿಗಳ, ಅಭಿರಕ್ಷಣಂ-ಸಂರಕ್ಷಣೆಮಾಡೋಣವು, ಯತ್-ಯಾವದೋ, ಏತಾವತ್-ಇಷ್ಟುಮಾತ್ರವು. ಧನುಷಾ-ಧನಸ್ಸಿನಿಂದ, ಕಾರ್ಯಂ-ಮಾಡತಕ್ಕದ್ದು, ॥೨೬॥ ಶಸ್ತ್ರಂ-ಖಡ್ಗಧಾರಣವು, ಕ್ವ-ಯಲ್ಲಿ. ವನಂ-ವನವಾಸವು, ಕ್ವ-ಯಲ್ಲಿ, ಕ್ಷಾತ್ರಂ-ಕ್ಷತ್ರಿಯಧರ್ಮವು,

---

ಕತ್ತಿಯಂ ಪಡದು ಕಾಡಿನಲ್ಲಿ ಅದಂಪಿಡಿದು ಸಂಚರಿಸುತಿದ್ದನದೆಂತೆನೆ;—ಆ ಮಹರ್ಷಿಯು ಕಂದಮೂಲಂಗಳನ್ನೂ ಫಲಂಗಳನ್ನೂ ತರಲಿಕ್ಕಾಗಿ ಯೆಲ್ಲಿ ಪೋದರೂ ಆ ಖಡ್ಗವಂ ತೆಗೆದುಕೊಳ್ಳದೆ ತೆರಳದಿರಲಿಲ್ಲ ।೨೦। ಬಳಿಕ ಆ ಮುನಿಯು ಯಾವಾಗಲೂ ಖಡ್ಗವನ್ನೇ ಧರಿಸುವನಾಗಿ ತಪೋನಿಶ್ಚಯವಂ ಬಿಟ್ಟು, ಕ್ರಮವಾಗಿ ಕ್ರೂರಮತಿಯುಳ್ಳವನಾದನು ।೨೧। ಅನಂತರದಲ್ಲಿ ಹನನವ್ಯಾಪಾರಾದಿ ಮದವೇರಿದವನಾಗಿ, ಖಡ್ಗದ ಸಹವಾಸದ ದೆಶೆಯಿಂದ, ಅಧರ್ಮಿಯಾಗಿ ನರಕವನ್ನೈದಿದನು ।೨೨। ಈ ರೀತಿಶಸ್ತ್ರಸಂಬಂಧವೇ ಹೇತುವಾಗಿಉಳ್ಳ ಈ ಪೂರ್ವಕಥೆಯು ನನ್ನಿಂದ ಕೇಳಲ್ಪಟ್ಟಿದೆ, ಇದು ಅಗ್ನಿಯ ಸಹವಾಸದಂತೆ ವಿಕಾರಕ್ಕೆ ಕಾರಣವಾದದ್ದು; ಸ್ನೇಹದಿಂದಲೂ ಬಹುಮಾನದಿಂದಲೂ ನಿನಗೆ ಜ್ಞಾಪಿಸಿ ಹೇಳಿದೆನೇ ಹೊರತು, ನೀನರಿಯದ ಅರ್ಥವಂ ನಿರೂಪಿಸಿದವಳಲ್ಲ ।೨೩। ಎಲೈ ರಘುವೀರನೇ! ಕೋದಂಡಪಾಣಿಯಾದ ನೀನು ವೈರವಿಲ್ಲದೆ ದಂಡಕಾರಣ್ಯದಲ್ಲಿರುವ ರಾಕ್ಷಸರನ್ನು ಕೊಲ್ಲಬೇಕೆಂಬ ಬುದ್ಧಿಯಂ ಗೈಯುವುದು ಹ್ಯಾಗಾದರೂ ಯುಕ್ತವಲ್ಲ; ವೀರರಾದ ಕ್ಷತ್ರಿಯರಿಗೆ, ವನವಾಸಿಗಳಾದ ಆರ್ತರಾದ ಮುನಿಗಳ ಸಂರಕ್ಷಣಮಾಡೋಣವೆಂಬದು ಯಾವದೋ ಅದೇ ಕೋದಂಡದಿಂದ ಮಾಡತಕ್ಕದ್ದಾಗಿರುವದು ।೨೬। ಶಸ್ತ್ರಧಾರಣವೆಲ್ಲಿ? ವನವಾಸವೆಲ್ಲಿ? ಕ್ಷತ್ರಿಯಧರ್ಮವೆಲ್ಲಿ? ತಪವೆಲ್ಲಿ? ಇವೆಲ್ಲ ಪೊಂದಿಕೊಂ

ಜ್ಯತಾಂ ।೨೭। ತದಾರ್ಯಕಲುಷಾಬುದ್ಧಿರ್ಜಾಯತೇಶಸ್ತ್ರಸೇವನಾತ್ ॥ ಪುನರ್ಗತ್ವಾತ್ವಯೋಧ್ಯಾಯಾಂಕ್ಷತ್ರಧರ್ಮಂ ಚರಿಷ್ಯಸಿ ।೨೮। ಅಕ್ಷಯಾತುಭವೇತ್ಪ್ರೀತಿಶ್ಶ್ವಶ್ರೂಶ್ವಶುರಯೋರ್ಮಮ। ಯದಿರಾಜ್ಯಂಪರಿತ್ಯಜ್ಯಭವೇಸ್ತ್ವಂನಿರತೋಮುನಿಃ ।೨೯। ಧರ್ಮಾದರ್ಥಃಪ್ರಭವತಿಧರ್ಮಾತ್ಪ್ರಭವತೆಸುಖಂ ॥ ಧರ್ಮೇಣಲಭತೆಸರ್ವಂಧರ್ಮಸಾರಮಿದಂಜಗತ್ ।೩೦। ಆತ್ಮಾನಂನಿಯಮೈಸ್ತೈಸ್ತೈಃಕರ್ಶಯಿತ್ವಾಪ್ರಯತ್ನತಃ। ಪ್ರಾಪ್ಯತೆನಿಪುಣೈರ್ಧರ್ಮೋನಸುಖಾಲ್ಲಭ್ಯತೆಸುಖಂ ।೩೧। ನಿತ್ಯಂಶುಚಿಮತಿಸ್ಸೌಮ್ಯಚರಧರ್ಮಂತಪೋವನೆ ॥ ಸರ್ವಂಹಿವಿದಿತಂತುಭ್ಯಂತ್ರೈಲೋಕ್ಯಮಪಿತತ್ವತಃ ।೩೨। ಸ್ತ್ರೀಚಾಪಲಾದೆತದುದಾಹೃತಂಮೆಧರ್ಮಂಚವಕ್ತುಂತವಕಸ್ಸಮರ್ಥಃ॥ ವಿಚಾರ್ಯಬುದ್ಧ್ಯಾತುಸಹಾನುಜೆನಯದ್ರೋಚತೆತತ್ಕುರುಮಾಚಿರೇಣ ।೩೩। —*** ಇತಿಶ್ರೀಮದಾರಣ್ಯಕಾಂಡೆ-ನವಮಸ್ಸರ್ಗಃ. ***—

ವಾಕ್ಯಮೆತತ್ತುವೈದೆಹ್ಯಾವ್ಯಾಹೃತಂಭರ್ತೃಭಕ್ತಯಾ । ಶ್ರುತ್ವಾಧರ್ಮೆಸ್ಥಿತೋರಾಮಃಪ್ರತ್ಯುವಾಚಾಥಮೈ

---

ಕ್ಷ-ಯಲ್ಲಿ, ತಪಃ-ಹಿಂಸಾರಹಿತವಾದ ತಪವು, ಕ್ವ-ಯಲ್ಲಿ. ಇದಂ-ಇದು, ವ್ಯಾವಿದ್ಧಂ-ಪರಸ್ಪರವಿರುದ್ಧವಾಗಿದೆ. ಅಸ್ಮಾಭಿಸ್ತು-ನಮ್ಮಗಳಿಂದ, ದೇಶಧರ್ಮಃ-ವನಪ್ರದೇಶದಲ್ಲಿರುವದಕ್ಕೆ ಯೋಗ್ಯವಾದ ಧರ್ಮವು. ಪೂಜ್ಯತಾಂ-ಶ್ಲಾಘಿಸಲ್ಪಡಲಿ ||೨೭|| ತತ್-ಆ ಕಾರಣದಿಂದಲೆಯಿಂದ, ಹೆ ಆರ್ಯ-ಎಲೈ ಪೂಜ್ಯನೇ, ಬುದ್ಧಿಃ-ಬುದ್ಧಿಯು, ಶಸ್ತ್ರಸೇವನಾತ್-ಶಸ್ತ್ರಧಾರಣೆಯಿಂದ, ಕಲುಷಾ-ಪಾಪಯುಕ್ತವಾದದ್ದು, ಜಾಯತೆ-ಆಗುತದೆ, ಪುನಃ-ಮತ್ತೂ, ಗತ್ವಾ-ಹೋಗಿ, ಅಯೋಧ್ಯಾಯಾಂ-ಅಯೋಧ್ಯಾಪಟ್ಟಣದಲ್ಲಿ, ಕ್ಷತ್ರಧರ್ಮಂ-ರಾಜಧರ್ಮವನ್ನು, ಚರಿಷ್ಯಸಿ-ಮಾಡುವಿ ||೨೮|| ಮಮ-ನನ್ನ, ಶ್ವಶ್ರೂಶ್ವಶುರಯೋಃ-ಅತ್ತೆಮಾವಂದರಿಗೆ, ಪ್ರೀತಿಃ-ವಿಶ್ವಾಸವು, ಅಕ್ಷಯಾ-ಅಪಾರವಾದದ್ದು, ಭವೇತ್-ಆಗುವದು, ತ್ವಂ-ನೀನು, ರಾಜ್ಯಂ ರಾಜ್ಯವನ್ನು, ಪರಿತ್ಯಜ್ಯ-ಬಿಟ್ಟು, ನಿರತಃ-ವನದಲ್ಲಾಸಕ್ತನಾದ, ಮುನಿಃ-ಋಷಿಯು, ಭವೇರ್ಯದಿ-ಆಗುವನೇ ಆದರೆ, ಧರ್ಮಾತ್-ಅಹಿಂಸಾರೂಪವಾದ ಧರ್ಮದದೆಶೆಯಿಂದ, ಅರ್ಥಃ-ಶ್ರೇಯೋರೂಪಾರ್ಥವು, ಪ್ರಭವತಿ-ಹುಟ್ಟುತದೆ, ಧರ್ಮಾತ್-ಧರ್ಮದದೆಶೆಯಿಂದ. ಸುಖಂ-ಸುಖವು, ಪ್ರಭವತಿ-ಹುಟ್ಟುತದೆ, ಧರ್ಮೇಣ-ಸ್ವಧರ್ಮದಿಂದ, ಪುರುಷಃ-ಪುರುಷನು, ಸರ್ವಂ-ಸಮಸ್ತವಾದ ಪುರುಷಾರ್ಥವನ್ನು, ಲಭತೆ-ಹೊಂದುತಾನೆ, ಇದಂ ಜಗತ್-ಈ ಜಗತ್ತು, ಧರ್ಮಸಾರಂ-ಧರ್ಮವೇ ಶ್ರೇಷ್ಠವಾಗುಳ್ಳದ್ದು ||೩೦|| ತೈಸ್ತೈಃ-ಆಯಾ, ನಿಯಮೈಃ-ಕೃಚ್ಛ್ರಚಾಂದ್ರಾಯಣಾದಿವ್ರತಗಳಿಂದ, ಆತ್ಮಾನಂ-ಶರೀರವನ್ನು, ಕರ್ಶಯಿತ್ವಾ-ಕ್ಲೇಶಗೊಳಿಸಿ, ಪ್ರಯತ್ನತಃ-ಪ್ರಯತ್ನದದೆಶೆಯಿಂದ, ನಿಪುಣೈಃ-ಬುದ್ಧಿವಂತರಿಂದ, ಧರ್ಮಃ-ಧರ್ಮವು, ಪ್ರಾಪ್ಯತೆ-ಹೊಂದಲ್ಪಡುತದೆ, ಸುಖಾತ್-ಸುಖದದೆಶೆಯಿಂದ, ಸುಖಂ-ಸುಖವು, ನಲಭ್ಯತೆ-ಹೊಂದಲ್ಪಡುವದಿಲ್ಲ ||೩೧|| ಹೆ ಸೌಮ್ಯ-ಎಲೈ ಪ್ರಸನ್ನನೇ, ನಿತ್ಯಂ-ನಿರಂತರವೂ, ಶುಚಿಮತಿಃ-ಪರಿಶುದ್ಧವಾದ ಬುದ್ಧಿಯುಳ್ಳವನಾಗಿ, ತಪೋವನೆ-ತಪೋವನದಲ್ಲಿ, ಧರ್ಮಂ-ಧರ್ಮವನ್ನು. ಚರ-ಆಚರಿಸು, ತುಭ್ಯಂ-ನಿನಿಗೆ, ಸರ್ವಂ-ಸಮಸ್ತಮಾದ. ತ್ರೈಲೋಕ್ಯಮಪಿ-ಲೋಕತ್ರಯವೂ, ತತ್ವತಃ-ಯಥಾರ್ಥದ ದೆಶೆಯಿಂದ, ವಿದಿತಂ-ತಿಳಿಸಲ್ಪಟ್ಟಿದೆ ||೩೨|| ತವ-ನಿನಗೆ, ಧರ್ಮಂ-ಧರ್ಮವನ್ನು, ವಕ್ತುಂ-ಹೇಳುವದಕ್ಕೋಸ್ಕರ, ಕಃ-ಯಾವನು, ಸಮರ್ಥಃ-ಶಕ್ತನು, ಎತತ್-ಈ ಮಾತು, ಸ್ತ್ರೀಚಾಪಲಾತ್-ಹೆಂಗಸಿನ ಚಾಪಲ್ಯದದೆಶೆಯಿಂದ, ಮೆ-ನನ್ನಿಂದ, ಉದಾಹೃತಂ-ಹೇಳಲ್ಪಟ್ಟಿತು. ಅನುಜೆನಸಹ-ತಮ್ಮನಾದ ಲಕ್ಷ್ಮಣನೊಡನೆ, ಬುದ್ಧ್ಯಾ-ಬುದ್ಧಿಯಿಂದ, ವಿಚಾರ್ಯ-ವಿಮರ್ಶೆಮಾಡಿ, ಯತ್-ಯಾವದು ರೋಚತೆ-ಸಮ್ಮತವಾದ್ದೊ, ತತ್-ಅದನ್ನು ಕುರು-ಮಾಡು, ಚಿರೇಣ-ವಿಲಂಬವನ್ನು ಮಾಕುರು-ಮಾಡಬ್ಯಾಡ ||33|| —**ಇತಿಶ್ರೀಮದಾರಣ್ಯಕಾಂಡೆ-ನವಮಸ್ಸರ್ಗಃ **—

ಧರ್ಮೆ-ಮುನಿಪರಿಪಾಲನ ರೂಪಧರ್ಮದಲ್ಲಿ, ಸ್ಥಿತಃ-ಇರುತ್ತಿರುವ ರಾಮಃ-ಶ್ರೀರಾಮನು. ಭರ್ತೃಭಕ್ತ್ಯಾ-ಪತಿಭಕ್ತಿಯುಳ್ಳ, ವೈದೆಹ್ಯಾ-

---

ದು ವಿರೋಧವಾದದ್ದಲ್ಲವೇ? ವನದಲ್ಲಿರುವದಕ್ಕೆ ಯೋಗ್ಯವಾದ ಧರ್ಮವನ್ನನುವರ್ತಿಸುವ ನಾಗು ।೨೭। ಆದಕಾರಣ ಮತಿಯು ಶಸ್ತ್ರವಂ ಧರಿಸುವದರಿಂದ ಪಾಪಯುಕ್ತವಾಗುವದು, ಅಯೋಧ್ಯಾಪುರವಂ ಸೇರಿದಬಳಿಕ ರಾಜಧರ್ಮವನವಲಂಬಿಸುವವನಾದರೆ, ಅತ್ತೆಮಾವಂದರಿಗೆ ಬಹುಪ್ರೀತಿಯುಂಟಾಗುವದು, ರಾಜ್ಯವಂ ಪರಿತ್ಯಜಿಸಿ ವನದಲ್ಲಿ ಆಸಕ್ತಿಯುಳ್ಳವನಾಗಿ ಋಷಿಯಾದವನಾದರೆ; ಧರ್ಮದಿಂದ ಸುಖವುಂಟಾಗುವದು; ಈ ಜಗವು ಧರ್ಮವೇ ಶ್ರೇಷ್ಠವಾಗುಳ್ಳದ್ದಾದಕಾರಣ ಪುರುಷನು ಧರ್ಮದಿಂದಲೇ ಸಕಲ ಪುರುಷಾರ್ಥಂಗಳಂ ಪಡೆಯುವನು. ಬುದ್ಧಿಶಾಲಿಗಳು ಕೃಚ್ಛ್ರಚಾಂದ್ರಾಯಣಾದಿಗಳಿಂದ ಶರೀರಶೋಷಣೆಯಂ ಗೈದು ಪ್ರಯತ್ನದಿಂ ಧರ್ಮವಂ ಪಡೆಯುತ್ತಾರೆ; ಧರ್ಮದಿಂದ ಸುಖವುಂಟಾಗುವದು ।೩೧। ಎಲೈ ಕೋಪರಹಿತನೇ! ಸದಾಕಾಲದಲ್ಲಿಯೂ ಪರಿಶುದ್ಧವಾದ ಬುದ್ಧಿಯುಳ್ಳವನಾಗಿ ತಪೋವನದಲ್ಲಿ ಧರ್ಮವನ್ನಾಚರಿಸುವನಾಗು; ಲೋಕದಲ್ಲಿ ನೀನರಿಯದ ವಿಷಯವು ಯಾವವೂ ಇಲ್ಲ, ನಿನಿಗೆ ಧರ್ಮವಂ ಹೇಳಲೂ ಯಾರಿಗೆ ಶಕ್ತಿಯಿರುವದು? ಸ್ತ್ರೀಚಾಪಲ್ಯದಿಂ ನಾನೀಮಾತಂ ಹೇಳಿದೆನು, ನೀನು ಲಕ್ಷ್ಮಣನಸಂಗಡ ಮತಿಯಿಂದ ವಿಮರ್ಶಿಸಿ ಯಾವದುಸಂಮತವಾಗಿರುವುದೋ ಅದಂ ಮಾಡುವನಾಗು; ನಾವಕಾಶವಂ ಗೈಯ್ಯಬೇಡೆಂದು ಶ್ರೀರಾಮನಿಗೆ ಸೀತಾದೇವಿಯು ಹೇಳಿದಳು ।೩೩।

—* ಅರಣ್ಯಕಾಂಡದಲ್ಲಿನ ೯ನೆಯ ಸರ್ಗಂ ಮುಗಿದುದು *—

ಥಿಲೀಂ ॥೧। ಹಿತಮುಕ್ತಂತ್ವಯಾದೇವಿಸ್ನಿಗ್ಧಯಾಸದೃಶಂವಚಃ । ಕುಲಂವ್ಯಪದಿಶಂತ್ಯಾಚಧರ್ಮಜ್ಞೇಜನಕಾತ್ಮಜೇ ॥೨॥ ಕಿಂತುವಕ್ಷ್ಯಾಮ್ಯಹಂದೇವಿತ್ವಯೈವೋಕ್ತಮಿದಂವಚಃ । ಕ್ಷತ್ರಿಯೈರ್ಧಾರ್ಯತೇಚಾಪೋನಾರ್ತಶಬ್ದೋಭವೇದಿತಿ ॥೩। ತೇಚಾರ್ತಾದಂಡಕಾರಣ್ಯೇಮುನಯಸ್ಸಂಶ್ರಿತವ್ರತಾಃ । ಮಾಂಸೀತೇಸ್ವಯಮಾಗಮ್ಯಶರಣ್ಯಾಶ್ಶರಣಂಗತಾಃ ॥೪॥ ವಸಂತೋಧರ್ಮನಿರತಾವನೇಮೂಲಫಲಾಶನಾಃ । ನಲಭಂತೇಸುಖಂಭೀತಾರಾಕ್ಷಸೈಃಕ್ರೂರಕರ್ಮಭಿಃ ॥೫॥ ಕಾಲೇಕಾಲೇಚನಿರತಾನಿಯಮೈರ್ವಿವಿಧೈರ್ವನೇ । ಭಕ್ಷ್ಯಂತೇರಾಕ್ಷಸೈರ್ಭೀಮೈರ್ನರಮಾಂಸೋಪಜೀವಿಭಿಃ ॥೬। ತೇಭಕ್ಷ್ಯಮಾಣಾಮುನಯೋದಂಡಕಾರಣ್ಯವಾಸಿನಃ । ಅಸ್ಮಾನಭ್ಯವಪದ್ಯೇತಿಮಾಮೂಚುರ್ದ್ವಿಜಸತ್ತಮಾಃ । ೭॥ ಮಯಾತುವಚನಂಶ್ರುತ್ವಾತೇಷಾಮೇವಂಮುಖಾಚ್ಚ್ಯುತಂ । ಕೃತ್ವಾವಚನಶುಶ್ರೂಷಾಂವಾಕ್ಯಮೇತದುದಾಹೃತಂ ।೮। ಪ್ರಸೀದಂತುಭವಂತೋಮೇಹ್ರೀರೇಷಾಹಿಮಮಾತುಲಾ । ಯದೀದೃಶೈರಹಂವಿಪ್ರೈರುಪಸ್ಥೇಯೈರುಪಸ್ಥಿತಃ ।ಕಿಂಕರೋಮೀತಿಚೆಮಯಾ

---

ಸೀತಾದೇವಿಯಿಂದ. ವ್ಯಾಹೃತಂ-ಹೇಳಲ್ಪಟ್ಟ, ಏತದ್ವಾಕ್ಯಂ-ಈಮಾತನ್ನು. ಶ್ರುತ್ವಾ-ಕೇಳಿ, ಅಥ-ಬಳಿಕ, ಮೈಥಿಲೀಂ-ಸೀತಾದೇವಿಯಂ ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೧॥ ಹೇದೇವಿ-ಎಲೈ ಸೀತಾದೇವಿಯೆ, ಹೇಧರ್ಮಜ್ಞೇ-ಎಲೌ ಧರ್ಮವನ್ನರಿತವಳೇ, ಹೇಜನಕಾತ್ಮಜೇ-ಎಲೌ ಜನಕರಾಯನ ಕುವರಿಯೇ. ಸ್ನಿಗ್ಧಯಾ-ಸ್ನೇಹಯುಕ್ತಳಾದ, ಕುಲಂ-ಸ್ವಕುಲವನ್ನು, ವ್ಯಪದಿಶಂತ್ಯಾ-ಪ್ರಕಾಶಗೊಳಿಸುತ್ತಿರುವ, ತ್ವಯಾ-ನಿನ್ನಿಂದ, ಹಿತಂ-ಹಿತಕರವಾದ, ಸದೃಶಂ-ಅನುರೂಪವಾದ, ವಚಃ-ಮಾತು. ಉಕ್ತಂ-ಹೇಳಲ್ಪಟ್ಟಿತು ॥೨॥ ಹೇದೇವಿ-ಎಲೈ ದೇವಿಯೆ. ಕಿಂತು-ಮತ್ತೇನಂದರೆ ಅಹಂ-ನಾನು, ವಕ್ಷ್ಯಾಮಿ-ಹೇಳುವೆನು, (ಕಿನ್ನುವಕ್ಷ್ಯಾಮ್ಯಹಮಿತಿಪಾಠಾಂತರಂ-ಕಿನ್ನುವಕ್ಷ್ಯಾಮಿ-ಏನು ಹೇಳಲಿ.) ಕ್ಷತ್ರಿಯೈಃ-ಕ್ಷತ್ರಿಯರಿಂದ, ಚಾಪಃ-ಬಿಲ್ಲು, ಆರ್ತಶಬ್ದಃ-ದೀನಧ್ವನಿಯು, ನಭವೇದಿತಿ-ಇಲ್ಲದೆಹೋಗಲೆಂದು, ಧಾರ್ಯತೇ-ಧರಿಸಲ್ಪಡುತ್ತದೆ, ಇತಿ-ಇಹೆಂದು, ಇದಂವಚಃ-ಈ ಮಾತು, ತ್ವಯೈವ-ನಿನ್ನಿಂದಲೇ. ಉಕ್ತಂ-ಹೇಳಲ್ಪಟ್ಟಿತು, ॥೩॥ ಹೇಸೀತೇ-ಎಲೌ ಸೀತಾದೇವಿಯೇ, ದಂಡಕಾರಣ್ಯೇ-ದಂಡಕಾವನದಲ್ಲಿ, ಸಂಶಿತವ್ರತಾಃ-ತೀಕ್ಷ್ಣವಾದ ವ್ರತವುಳ್ಳ, ಶರಣ್ಯಾಃ-ಶರಣಕ್ಕೆ ಅರ್ಹರಾದ, ಮುನಯಃ-ಆ ಋಷಿಗಳು, ಆರ್ತಾಃ-ದೀನರಾಗಿ, ಮಾಂ-ನನ್ನನ್ನು, ಶರಣಂ-ರಕ್ಷಕನನ್ನಾಗಿ, ಗತಾಃ-ಹೊಂದಿದರು, ವನೇ-ಅರಣ್ಯದಲ್ಲಿ, ವಸಂತಃ-ಇರುತ್ತಿರುವ, ಧರ್ಮನಿರತಾಃ-ಅಗ್ನಿಹೋತ್ರಾದಿ ಧರ್ಮಕಾರ್ಯಗಳಲ್ಲಿ ಆಸಕ್ತವಾದ, ಮೂಲಫಲಾಶನಾಃ-ಕಂದಮೂಲಗಳೂ ಫಲಗಳೇ ಅಶನವಾಗುಳ್ಳ ಋಷಿಗಳು, ಕ್ರೂರಕರ್ಮಭಿಃ-ಕ್ರೂರವಾದ ಕೃತ್ಯಗಳುಳ್ಳ. ರಾಕ್ಷಸೈಃ-ರಕ್ಕಸರಿಂದ, ಭೀತಾಃ-ಭಯಗೊಂಡವರಾಗಿ, ಸುಖಂ-ಸುಖವನ್ನು, ನಲಭಂತೇ-ಹೊಂದಲಿಲ್ಲ, ॥೪॥ ಕಾಲೇಕಾಲೇಚ-ಕಾಲಕಾಲದಲ್ಲಿಯೂ, ವನೇ-ಅರಣ್ಯದಲ್ಲಿ, ವಿವಿಧೈಃ-ನಾನಾಬಗೆಗಳಾದ. ನಿಯಮೈಃ-ವ್ರತಗಳಿಂದ, ನಿರತಾಃ-ಆಸಕ್ತರಾದ, ನರಾಃ-ಮನುಷ್ಯರು, ಭೀಮೈಃ-ಭಯಂಕರರಾದ. ಮಾಂಸೋಪಜೀವಿಭಿಃ-ಮಾಂಸದಿಂದ ಜೀವಿಸುವ, ರಾಕ್ಷಸೈಃ-ರಕ್ಕಸರಿಂದ, ಭಕ್ಷ್ಯಂತೇ-ತಿನ್ನಲ್ಪಡುತ್ತಾರೆ, ॥೫॥ ದಂಡಕಾರಣ್ಯವಾಸಿನಃ-ದಂಡಕಾವನದಲ್ಲೇ ಇರುತ್ತಿರುವ, ಭಕ್ಷ್ಯಮಾಣಾಃ-ಭಕ್ಷಣವಾಗಲ್ಪಡುತ್ತಿರುವ. ದ್ವಿಜಸತ್ತಮಾಃ-ಬ್ರಾಹ್ಮಣಶ್ರೇಷ್ಠರಾದ, ಮುನಯಃ-ಆ ಋಷಿಗಳು, ಅಸ್ಮಾನ್-ನಮ್ಮನ್ನು, ಅಭ್ಯವಪದ್ಯ-ಸಂರಕ್ಷಣೆ ಮಾಡೆಂದು, ಮಾಂ-ನನ್ನನ್ನು ಕುರಿತು. ಊಚುಃ-ಹೇಳಿದರು ॥೬॥ ಏವಂ-ಈಪರಿಯಾಗಿ, ತೇಷಾಂ-ಆ ಋಷಿಗಳ, ಮುಖಾತ್-ಮುಖದ ದೆಸೆಯಿಂದ, ಚ್ಯುತಂ-ಹೊರಟುಬಂದ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಚರಣಶುಶ್ರೂಷಾಂ-ಪಾದವಂದನವನ್ನು, ಕೃತ್ವಾ-ಮಾಡಿ, ಮಯಾತು-ನನ್ನಿಂದಲಾದರೆ. ಏತದ್ವಾಕ್ಯಂ-ಈ ಮಾತು. ವ್ಯಾಹೃತಂ-ಹೇಳಲ್ಪಟ್ಟಿತು, ಭವಂತಃ-ನೀವುಗಳು ಮೇ-ನನಗೆ. ಪ್ರಸೀದಂತು-ಪ್ರಸನ್ನರಾಗಿರಿ, ಅಹಂ-ನಾನು, ಈದೃಶೈಃ-ಇಂಥಾವರಾದ, ಉಪಸ್ಥೇಯೈಃ-ಸೇವಿಸತಕ್ಕವರಾದ, ವಿಪ್ರೈಃ-ಬ್ರಾಹ್ಮಣರಿಂದ, ಅಹಂ-ನಾನು, ಉಪಸ್ಥಿತಃಇತಿಯತ್-ಸೇವಿಸಲ್ಪಟ್ಟೆನೆಂಬ

---

ಬಳಿಕ ಧರ್ಮಿಷ್ಠನಾದ ಶ್ರೀರಾಮನು ಪತಿಭಕ್ತಿಯುಳ್ಳ ಸೀತಾದೇವಿಯಿಂದಹೇಳಲ್ಪಟ್ಟ ಈ ಮಾತಂಕೇಳಿಆಕೆಗೆ ಉತ್ತರವಂ ಕೊಡುವನದೆಂತೆನೆ;-ಎಲೌಧರ್ಮವನ್ನರಿತವಳೇ! ಜನಕರಾಯನ ಕುವರಿಯೇ! ಸ್ವಕುಲವನ್ನು ಕಾಂತಿಗೊಳಿಸುವಂತೆಗೈಯ್ಯುವ ನಿನ್ನಿಂದ ಹಿತವಾದ ಮತ್ತು ಅನುರೂಪವಾದ ಮಾತು ಹೇಳಲ್ಪಟ್ಟಿತು ।೨। ಎಲೈ ದೇವಿಯೇ! ಮತ್ತು ನಾನೇನು ಹೇಳಲಿ? ಕ್ಷತ್ರಿಯರು ದೀನಧ್ವನಿಯಿಲ್ಲದಿರಲೆಂದು ಕೋದಂಡವನ್ನು ಧರಿಸುವರೆಂದು ನೀನೇ ಹೇಳಿದೆಯಲ್ಲವೆ? ।೩॥ ದಂಡಕಾರಣ್ಯವಾಸಿಗಳಾದ, ತೀಕ್ಷ್ಣವಾದ ನಿಯಮವುಳ್ಳ,ಶರಣಾರ್ಹರಾದ ಆ ಋಷಿಗಳು ನನ್ನನ್ನು ಶರಣುಹೊಂದಿದರು; ಅರಣ್ಯದಲ್ಲಿರುವ ಅಗ್ನಿಹೋತ್ರಾದಿ ಧರ್ಮಕಾರ್ಯಗಳಲ್ಲಿ ಆಸಕ್ತರಾದ ಕಂದಮೂಲಗಳಂ ಭುಜಿಸುವ ಆ ಮುನಿಗಳು ಕ್ರೂರಕರ್ಮಂಗಳಂ ಗೈಯ್ಯುವ ರಕ್ಕಸರಿಂದ ಭೀತರಾಗಿ ಸುಖವಂಪಡೆಯಲಿಲ್ಲ ।೪॥ ಕಾಲಕಾಲದಲ್ಲಿ ಅರಣ್ಯದಲ್ಲಿ ನಾನಾಬಗೆಗಳಾದ ನಿಯಮಗಳಲ್ಲಿ ಆಸಕ್ತಿಯುಳ್ಳವರಾದ ಮನುಷ್ಯರು ಭಯಂಕರರಾದ ರಾಕ್ಷಸರಿಂದ ಮೇಯಲ್ಪಡುತ್ತಾರೆ॥೬॥ ಆ ದಂಡಕಾರಣ್ಯದಲ್ಲಿ ಭಕ್ಷಿಸಲ್ಪಡುವ ಬ್ರಾಹ್ಮಣೋತ್ತಮರಾದ ಆ ಮುನಿಗಳು ನಮ್ಮನ್ನು ಪಾಲಿಸೆಂದು ನನಗೆ ಹೇಳಿದರು; ಆ ವಾಕ್ಯವಂಕೇಳಿ ಮನಃಪೂರ್ವಕವಾಗಿ ಮಾತನ್ನು ಪೇಳಿದೆನಷ್ಟೆ? " ನೀವುಗಳು ನನಗೆ ಪ್ರಸನ್ನರಾಗಿ, ಇಂಥಾ ಸೇವಿಸತಕ್ಕವರಾದ ಬ್ರಾಹ್ಮಣರಿಂದ ನಾನು ಸೇವಿಸಲ್ಪಟ್ಟೆನೆಂಬುವದು ನನಗೆ ಲಜ್ಜೆಯನ್ನುಂಟುಮಾಡುವದಾಗಿಧೆ, ಏನುಮಾಡಲಿ? ಎಂದು ಬ್ರಾ

ವ್ಯಾಹೃತಂದ್ವಿಜಸನ್ನಿಧೌ ॥೯॥ ಸರ್ವೈರೇತೈಸ್ಸಮಾಗಮ್ಯವಾಗಿಯಂಸಮುದಾಹೃತಾ ॥ ರಾಕ್ಷಸೈರ್ದಂಡಕಾರಣ್ಯೇಬಹುಭಿಃಕಾಮರೂಪಿಭಿಃ । ಅರ್ದಿತಾಸ್ಸ್ಮದೃಢಂರಾಮಭವಾನ್ನಸ್ತತ್ರರಕ್ಷತು ॥೧೧॥ ಹೋಮಕಾಲೇಷುಸಂಪ್ರಾಪ್ತಾಃಪರ್ವಕಾಲೇಷುಚಾನಘ । ಧರ್ಷಯಂತಿಸುದುರ್ಧರ್ಷಾರಾಕ್ಷಸಾಃಪಿಶಿತಾಶನಾಃ ॥೧೨॥ ರಾಕ್ಷಸೈರ್ಧರ್ಷಿತಾನಾಂಚತಾಪಸಾನಾಂತಪಸ್ವಿನಾಂ । ಗತಿಂಮೃಗಯಮಾಣಾನಾಂಭವಾನ್ನಃಪರಮಾಗತಿಃ ॥೧೩॥ ಕಾಮಂತಪಃಪ್ರಭಾವೇನಶಕ್ತಾಹಂತುಂನಿಶಾಚರಾನ್ । ಚಿರಾರ್ಜಿತಂತುನೇಚ್ಛಾಮಸ್ತಪಃಖಂಡಯಿತುಂವಯಂ ॥೧೪॥ ಬಹುವಿಘ್ನಂತಪೋನಿತ್ಯಂದುಶ್ಚರಂಚೈವರಾಘವ । ತೇನಶಾಪಂನಮುಂಚಾಮೋಭಕ್ಷ್ಯಮಾಣಾಶ್ಚರಾಕ್ಷಸೈಃ ॥೧೫॥ ತದರ್ದ್ಯಮಾನಾನ್ರಕ್ಷೋಭಿರ್ದಂಡಕಾರಣ್ಯವಾಸಿಭಿಃ । ರಕ್ಷನಸ್ತ್ವಂಸಹಭ್ರಾತ್ರಾತ್ವನ್ನಾಥಾಹಿವಯಂವನೇ ॥೧೬॥ ಮಯಾಚೈತದ್ವಚಃಶ್ರುತ್ವಾಕಾರ್ತ್ಸ್ನ್ಯೇನಪರಿಪಾಲನಂ । ಋಷೀಣಾಂದಂಡಕಾರಣ್ಯೇಸಂಶ್ರುತಂಜನಕಾತ್ಮಜೇ ॥೧೭॥ ಸಂಶ್ರುತ್ಯಚನಶಕ್ಷ್ಯಾಮಿಜೀವ

ದು ಯಾವದುಂಟೋ. ಏಷಾ–ಇದು, ಮಮ–ನನಿಗೆ, ಅತುಲಾ–ಸಮಾನವಿಲ್ಲದಿರುವ, ಹ್ರೀಃ–ನಾಚಿಕೆಯಾಗಿಧೆ, ಕಿಂಕರೋಮಿ–ಯೇನುಮಾಡಲಿ ಇತಿ–ಇಂತೆಂದು, ಮಯಾ–ನನ್ನಿಂದ. ದ್ವಿಜಸನ್ನಿಧೌ–ಬ್ರಾಹ್ಮಣರ ಸನ್ನಿಧಾನದಲ್ಲಿ. ವ್ಯಾಹೃತಂ–ಹೇಳಲ್ಪಟ್ಟಿತು ॥೯॥ ಸರ್ವೈಃ–ಸಮಸ್ತರಾದ, ಏತೈಃ–ಈ ಋಷಿಗಳಿಂದ, ಸಮಾಗಮ್ಯ–ಬಂದು. ಇಯಂವಾಕ್–ಈಮಾತು, ಸಮುದಾಹೃತಾ–ಹೇಳಲ್ಪಟ್ಟಿತು ॥೧೦॥ ಹೇರಾಮ–ಎಲೈ ಶ್ರೀರಾಮನೇ, ದಂಡಕಾರಣ್ಯೇ–ದಂಡಕಾವನದಲ್ಲಿ, ಬಹುಭಿಃ–ಅನೇಕರಾದ. ಕಾಮರೂಪಿಭಿಃ–ಸ್ವೇಚ್ಛಾಧೀನವಾದರೂಪವುಳ್ಳ, ರಾಕ್ಷಸೈಃ–ರಕ್ಕಸರಿಂದ ಅರ್ದಿತಾಃ–ಸಂಹಾರ ಮಾಡಲ್ಪಟ್ಟವರು, ಸ್ಮ–ಆಗಿಧೇವೆ, ದೃಢಂ–ನಿಶ್ಚಯವು, ತತ್ರ–ಆ ವಿಷಯದಲ್ಲಿ, ನಃ–ನಮ್ಮಗಳನ್ನು, ಭವಾನ್–ನೀನು, ರಕ್ಷತು–ಸಂರಕ್ಷಿಸುವನಾಗು ॥೧೧॥ ಹೇಅನಘ–ಎಲೈ ನಿರ್ದೋಷನೇ, ಹೋಮಕಾಲೇಷು–ಅಗ್ನಿಹೋತ್ರಗಳ ಕಾಲದಲ್ಲಿ, ಪರ್ವಕಾಲೇಷುಚ–ಇಷ್ಟ್ಯಾದಿ ಕಾಲಗಳಲ್ಲಿ, ಸಂಪ್ರಾಪ್ತಾಃ–ಬಂದವರಾಗಿ. ಸುದುರ್ಧರ್ಷಾಃ–ತಿರಸ್ಕರಿಸಲಸಾಧ್ಯರಾದ, ಪಿಶಿತಾಶನಾಃ–ಮಾಂಸಭಕ್ಷಕರಾದ, ರಾಕ್ಷಸಾಃ–ರಕ್ಕಸರು, ಧರ್ಷಯಂತಿ–ತಿರಸ್ಕರಿಸುತ್ತಾರೆ ॥೧೨॥ ರಾಕ್ಷಸೈಃ–ರಕ್ಕಸರಿಂದ, ಧರ್ಷಿತಾನಾಂಚ–ತಿರಸ್ಕರಿಸಲ್ಪಟ್ಟ. ತಪಸ್ವಿನಾಂ–ತಪಸ್ವಿಗಳಾದ, ಗತಿಂ–ಶರಣವನ್ನು, ಮೃಗಯಮಾಣಾನಾಂ–ಹುಡುಕುತ್ತಿರುವ, ತಾಪಸಾನಾಂ–ಋಷಿಗಳಾದ, ನಃ–ನಮ್ಮಗಳಿಗೆ, ಭವಾನ್–ನೀನು, ಪರಮಾಗತಿಃ–ಶ್ರೇಷ್ಠನಾದರಕ್ಷಕನು ॥೧೩॥ ಕಾಮಂ–ಬಹಳವಾಗಿ, ತಪಃಪ್ರಭಾವೇನ–ತಪೋಮಹಾತ್ಮ್ಯದದೆಶೆಯಿಂದ, ವಯಂ–ನಾವುಗಳು, ನಿಶಾಚರಾನ್–ರಾಕ್ಷಸರನ್ನು, ಹಂತುಂ–ಕೊಲ್ಲುವದಕ್ಕೋಸ್ಕರ. ಶಕ್ತಾಃ–ಸಮರ್ಥರು, ಕಿಂತು–ಮತ್ತೇನಂದರೆ. ಚಿರಾರ್ಜಿತಂ–ಬಹಳಕಾಲದಿಂ ಸಂಪಾದಿಸಲ್ಪಟ್ಟ, ತಪಃ–ತಪವನ್ನು. ಖಂಡಯಿತುಂ–ಭಂಗಮಾಡಿಕೊಳ್ಳುವದಕ್ಕೋಸುಗ ನೇಚ್ಛಾಮಃ–ಇಚ್ಛಿಸಲಾರೆವು, ॥೧೪॥ ಹೇರಾಘವ–ಎಲೈಶ್ರೀರಾಮನೇ, ತಪಃ–ತಪವು. ನಿತ್ಯಂ–ಅನವರತವಾಗಿ. ಬಹುವಿಘ್ನಂ–ಬಹಳ ವಿಘ್ನಗಳುಳ್ಳದ್ದು, ದುಶ್ಚರಂಚೈವ–ಬಹಳಮಾಡಲಸಾಧ್ಯವಾದದ್ದು, ತೇನ–ಆ ಕಾರಣದದೆಶೆಯಿಂದ, ರಾಕ್ಷಸೈಃ–ರಕ್ಕಸರಿಂದ, ಭಕ್ಷ್ಯಮಾಣಾಶ್ಚ–ತಿನ್ನಲ್ಪಟ್ಟವರಾದರೂ– ಶಾಪಂ–ಶಾಪವಚನವನ್ನು. ನಮುಂಚಾಮಃ–ಹೊರಡಿಸಲಾರೆವು, ॥೧೫॥ ತತ–ಆ ಕಾರಣದದೆಶೆಯಿಂದ. ದಂಡಕಾರಣ್ಯವಾಸಿಭಿಃ–ದಂಡಕಾರಣ್ಯದಲ್ಲಿ ನಿವಾಸಿಗಳಾದ. ರಕ್ಷೋಭಿಃ–ರಕ್ಕಸರಿಂದ, ಅರ್ದ್ಯಮಾನಾನ್–ಹೊಡೆಯಲ್ಪಡುತ್ತಿರುವ. ನಃ–ನಮ್ಮಗಳನ್ನು, ತ್ವಂ–ನೀನು, ಭ್ರಾತ್ರಾಸಹ–ತಮ್ಮನೊಡಗೂಡ. ರಕ್ಷ–ಪಾಲಿಸು, ವಯಂ–ನಾವುಗಳು. ವನೇ–ಅರಣ್ಯದಲ್ಲಿ, ತ್ವನ್ನಾಥಾಹಿ–ನೀನೇ ನಾಥರಾಗುಳ್ಳವರಷ್ಟೆ ॥೧೬॥ ಹೇಜನಕಾತ್ಮಜೇ–ಎಲೈ ಜನಕರಾಯನ ಮಗಳೇ. ಏತದ್ವಚಃ–ಈ ಮಾತನ್ನು, ಶ್ರುತ್ವಾ–ಕೇಳಿ, ದಂಡಕಾರಣ್ಯೇ–ದಂಡಕಾರಣ್ಯದಲ್ಲಿ, ಋಷೀಣಾಂ–ಋಷಿಗಳ, ಪರಿಪಾಲನಂ–ಸಂರಕ್ಷಣೆಯು. ಮಯಾ–ನನ್ನಿಂದ. ಕಾರ್ತ್ಸ್ನ್ಯೇನ–ಸಾಮಸ್ತ್ಯದಿಂದ, ಸಂಶ್ರುತಂ–ಪ್ರತಿಜ್ಞೆಯಂ ಮಾಡಲ್ಪಟ್ಟಿತು ॥೧೭॥ ಜೀವಮಾನಃ–ಬದುಕಿರುವನಾಗಿ. ಮುನೀನಾಂ–

ಹ್ಮಣರ ಸನ್ನಿಧಾನದಲ್ಲಿ ಹೇಳಲ್ಪಟ್ಟಿತು " ॥೯॥ ಆಗ ಅವರೆಲ್ಲರೂಕೇರಿ ನನಿಗೆ ಹೇಳಿದ್ದೇನಂದರೆ,—ಎಲೈ ಶ್ರೀರಾಮನೇ! ಅನೇಕರಾದ ಮತ್ತು ಸ್ವೇಚ್ಛಾಧೀನ ರೂಪವುಳ್ಳರಕ್ಕಸರಿಂದ ಸಂಹಾರಮಾಡಲ್ಪಟ್ಟವರಾಗಿಧೇವೆ, ಆ ವಿಷಯದಲ್ಲಿ ನಮ್ಮಗಳಂ ಪಾಲಿಸು, ॥೧೧॥ ಎಲೈ ನಿರ್ದೋಷನೇ! ದುರ್ಧರ್ಷರಾದ ಮತ್ತು ಮಾಂಸವಂ ತಿನ್ನುವ ರಕ್ಕಸರುಅಗ್ನಿಹೋತ್ರಮೊದಲಾದ ಸರ್ವಕಾಲದಲ್ಲಿ ಬಂದು ತಿರಸ್ಕರಿಸುತ್ತಾರೆ ॥೧೨॥ (ಹಾಗೆ) ರಕ್ಕಸರಿಂದ ತಿರಸ್ಕರಿಸಲ್ಪಡುವ, ಶರಣವನ್ನು ಹುಡುಕುತ್ತಿರುವ ಋಷಿಗಳಾದ ನಮ್ಮಗೆ ನೀನು ಶ್ರೇಷ್ಠನಾದ ರಕ್ಷಕನು ॥೧೩॥ ನಮ್ಮತಪಃಪ್ರಭಾವದಿಂದ ನಾವು ರಾಕ್ಷಸರನ್ನು ಕೊಲ್ಲುವದಕ್ಕೆ ಶಕ್ತಿಯುಳ್ಳವರಾದರೂಬಹುಕಾಲದಿಂದಸಂಪಾದಿಸಿದ ತಪವನ್ನು ಹೋಗಲಾಡಿಸಿಕೊಳ್ಳಲಾರೆವು ॥೧೪॥ ಎಲೈ ಶ್ರೀರಾಮನೇ! ತಪವು ಅನವರತವೂ ಬಹಳ ವಿಘ್ನಗಳುಳ್ಳದ್ದು, ಮತ್ತು ಮಾಡಲಸಾಧ್ಯವಾದದ್ದು, ಆದ್ದರಿಂದ ರಕ್ಕಸರಿಂದ ತಿನ್ನಲ್ಪಟ್ಟವರಾದರೂ ಶಾಪವನ್ನೀಯಲಾರೆವು; ಆದಕಾರಣ ದಂಡಕಾರಣ್ಯವಾಸಿಗಳಾದ ರಕ್ಕಸರಿಂದ ಸಂಹರಿಸಲ್ಪಡುವ ನಮ್ಮನ್ನು ಲಕ್ಷ್ಮಣನೊಡನೆ ಪಾಲಿಸು; ನಾವು ವನದಲ್ಲಿ ನೀನೇ ನಾಥನಾಗುಳ್ಳವರಷ್ಟೇ? ॥೧೬॥ ಎಲೈ ಜನಕನಂದಿನಿಯೇ! ಈ ಪ್ರಕಾರ ಕೇಳಿ ದಂಡಕಾರಣ್ಯದಲ್ಲಿ ತಪಸ್ವಿಗಳ ರಕ್ಷಣೆಯು ನನ್ನಿಂದ ಪ್ರತಿಜ್ಞೆಮಾಡಲ್ಪಟ್ಟಿತು; ನಾನು ಬದುಕಿರುವನಾಗಿ ಮುನಿಗಳಿಗೆ ಪ್ರತಿಜ್ಞೆಮಾಡಿದ್ದನ್ನು ತಪ್ಪಲಾರೆನು, ನನಿಗೆ ಸತ್ಯವೇ ಸದಾಹಿತವಾಗಿರುವದಷ್ಟೇ ॥೧೮॥ ಎಲೈ ಸೀತೆಯೇ! ನಾನು

ಮಾನೇಃಪ್ರತಿಶ್ರವಂ । ಮುನೀನಾಮನ್ಯಥಾಕರ್ತುಂಸತ್ಯಮಿಷ್ಟಂಹಿಮೇಸದಾ ॥೧೮॥ ಅಪ್ಯಹಂಜೀವಿತಂಜಹ್ಯಾಂತ್ವಾಂವಾಸೀತೇಸಲಕ್ಷ್ಮಣಾಂ ।ನತುಪ್ರತಿಜ್ಞಾಂಸಂಶ್ರುತ್ಯಬ್ರಾಹ್ಮಣೇಭ್ಯೋವಿಶೇಷತಃ ।೧೯। ತದವಶ್ಯಂಮಯಾಕಾರ್ಯಮೃಷೀಣಾಂಪರಿಪಾಲನಂ।ಅನುಕ್ತೇನಾಪಿವೈದೇಹಿಪ್ರತಿಜ್ಞಾಯತುಕಿಂಪುನಃ।೨೦।ಮಮಸ್ನೇಹಾಚ್ಚ ಸೌಹಾರ್ದಾದಿದಮುಕ್ತಂತ್ವಯಾನಘೇ।ಪರಿತುಷ್ಟೋಸ್ಮ್ಯಹಂಸೀತೇನಹ್ಯನಿಷ್ಟೋನುಶಿಷ್ಯತೇ।೨೧।ಸದೃಶಂಚಾನುರೂಪಂಚಕುಲಸ್ಯತವಚಾತ್ಮನಃ।
ಸಧರ್ಮಚಾರಿಣೀಮೇತ್ವಂಪ್ರಾಣೇಭ್ಯೋಪಿಗರೀಯಸೀ।೨೨। ಇತ್ಯೇವಮುಕ್ತ್ವಾವಚನಂಮಹಾತ್ಮಾಸೀತಾಂಪ್ರಿಯಾಂಮೈಥಿಲರಾಜಪುತ್ರೀಂ । ರಾಮೋಧನುಷ್ಮಾನ್ಸಹಲಕ್ಷ್ಮಣೇನಜಗಾಮರಮ್ಯಾಣಿತಪೋವನಾನಿ ॥೨೩॥

—*** ಇತಿಶ್ರೀಮದಾರಣ್ಯಕಾಂಡೇ-ದಶಮಸ್ಸರ್ಗಃ. ***—

ಅಗ್ರತಃಪ್ರಯಯೌರಾಮಸ್ಸೀತಾಮಧ್ಯೇಸುಮಧ್ಯಮಾ।ಪೃಷ್ಠತಸ್ತುಧನುಷ್ಪಾಣಿರ್ಲಕ್ಷ್ಮಣೋನುಜಗಾಮಹ

---

ಋಷಿಗಳಿಗೆ, ಸಂಶ್ರುತ್ಯ-ಪ್ರತಿಜ್ಞೆಮಾಡಿ, ಪ್ರತಿಶ್ರವಂ-ಪ್ರತಿಜ್ಞೆಯನ್ನು. ಅನ್ಯಥಾಕರ್ತುಂ-ಮತ್ತೊಂದುಬಗೆಯಾಗಿ ಮಾಡುವದಕ್ಕೆ- ನಶಕ್ಷ್ಯಾಮಿ-ಸಮರ್ಥನಾಗಲಾರೆನು, ಸತ್ಯಂ-ಸತ್ಯವಚನವೇ. ಮೇ-ನನಗೆ. ಸದಾ-ಸರ್ವಕಾಲದಲ್ಲಿಯೂ. ಇಷ್ಟಂ-ಹಿತವಾಗಿರುವದಷ್ಟೆ ॥೧೮॥ ಹೇಸೀತೆ-ಎಲೆ ಸೀತಾದೇವಿಯೇ, ಅಹಂ-ನಾನು. ಜೀವಿತಂವಾಪಿ-ಪ್ರಾಣವನ್ನೇಆಗಲಿ- ಸಲಕ್ಷ್ಮಣಾಂ-ಲಕ್ಷ್ಮಣನಿಂದೊಡಗೂಡಿದ. ತ್ವಾಂವಾ-ನಿನ್ನನ್ನಾದರೂ. ಜಹ್ಯಾಂ-ಬಿಡುವೆನು. ಕಿಂತು-ಮತ್ತೇನೆಂದರೆ. ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೋಸ್ಕರ. ವಿಶೇಷತಃ-ವಿಶೇಷವಾಗಿ, ಸಂಶ್ರುತ್ಯ-ಪ್ರತಿಜ್ಞೆಮಾಡಿ- ಪ್ರತಿಜ್ಞಾಂ-ಪ್ರತಿಜ್ಞೆಯನ್ನು. ನಜಹ್ಯಾಂ-ಬಿಡಲಾರೆನು ॥೧೯॥ ತತ್-ಆ ಕಾರಣದದೆಶೆಯಿಂದ, ಅನುಕ್ತೇನಾಪಿ-ಅಪ್ರಾರ್ಥಿತನಾದರೂ, ಋಷೀಣಾಂ-ಋಷಿಗಳ,ಪರಿಪಾಲನಂ-ರಕ್ಷಣವು. ಅವಶ್ಯಂ-ಅವಶ್ಯವಾಗಿ, ಮಯಾ-ನನ್ನಿಂದ, ಕಾರ್ಯಂ-ಮಾಡತಕ್ಕದ್ದು, ಹೇವೈದೇಹಿ-ಎಲೆಸೀತಾದೇವಿಯೇ, ಪ್ರತಿಜ್ಞಾಯತು-ಪ್ರತಿಜ್ಞೆಮಾಡಿದ್ದಾದರೆ, ಪುನಃಕಿಂ-ಮತ್ತೇನು ಹೇಳತಕ್ಕದ್ದು ॥೨೦॥ ಹೇಅನಘೇ-ಎಲೆನಿರ್ದೋಷಳೇ, ತ್ವಯಾ-ನಿನ್ನಿಂದ. ಮಮ-ನನ್ನಲ್ಲಿ. ಸ್ನೇಹಾತ್-ಪ್ರೇಮೆಯದೆಶೆಯಿಂದಲೂ, ಸೌಹಾರ್ದಾತ್-ಸ್ನೇಹದದೆಶೆಯಿಂದಲೂ, ಇದಂ-ಈ ಮಾತು- ಉಕ್ತಂ-ಹೇಳಲ್ಪಟ್ಟಿತು- ಹೇಸೀತೆ-ಎಲೆಸೀತಾದೇವಿಯೆ ಪರಿತುಷ್ಟಃ-ಸಂತೋಷಗೊಂಡವನು. ಅಸ್ಮಿ-ಆದೆನು. ಅನಿಷ್ಟಃ-ಪ್ರೇಮಕ್ಕೆ ಪಾತ್ರನಲ್ಲದಿರುವನು. ನಾನುಶಿಷ್ಯತೇಹಿ-ಉಪದೇಶ ಮಾಡುವದಿಲ್ಲವಷ್ಟೆ ॥೨೧॥ ತವ-ನಿನ್ನ, ಕುಲಸ್ಯಚ-ವಂಶಕ್ಕೂನು ಆತ್ಮನಃ-ನನಗೂ, ಸದೃಶಂಚ-ಸಮಾನವಾಗಿ, ಅನುರೂಪಂಚ-ಅನುಗುಣವಾಗಿ, ವಚನಂ ಮಾತು. ತ್ವಯಾ-ನಿನ್ನಿಂದ, ಉಕ್ತಂ-ಹೇಳಲ್ಪಟ್ಟಿತು' ಮೇ-ನನಗೆ, ತ್ವಂ-ನೀನು, ಪ್ರಾಣೇಭ್ಯೋಪಿ-ಪ್ರಾಣಗಳಿಗಿಂತಲೂ. ಗರೀಯಸೀ-ಹೆಚ್ಚಾದವಳು, ಸಧರ್ಮಚಾರಿಣೀ-ಸಮಾನವಾಗಿ ಧರ್ಮಾನುಷ್ಠಾನತತ್ಪರಳು ನೀನೇ ಸರಿ ॥೨೨॥ ಮಹಾತ್ಮಾ-ಮಹಾಧೈರ್ಯಶಾಲಿಯಾದ, ರಾಮಃ-ಶ್ರೀರಾಮನು. ಪ್ರಿಯಾ-ಇಷ್ಟಳಾದ, ಮೈಥಿಲರಾಜಪುತ್ರೀಂ-ಜನಕರಾಯನಿಗೆ ಮಗಳಾದ. ಸೀತಾಂ-ಸೀತಾದೇವಿಯನ್ನುಕುರಿತು, ಇತ್ಯೇವಂ-ಈಪರಿಯಾಗಿ. ವಚನಂ-ಮಾತನ್ನು. ಉಕ್ತ್ವಾ-ಹೇಳಿ, ಲಕ್ಷ್ಮಣೇನಸಹ-ಲಕ್ಷ್ಮಣನೊಡಗೂಡಿ, ಧನುಷ್ಮಾನ್-ಧನುರ್ಧಾರಿಯಾಗಿ, ರಮ್ಯಾಣಿ-ಮನೋಹರವಾದ, ತಪೋವನಾನಿ-ತಪಃಪ್ರಧಾನವಾದ ವನಗಳನ್ನು ಕುರಿತು, ಜಗಾಮ-ತೆರಳಿದನು ॥೨೩॥ —** ಇತಿಶ್ರೀಮದಾರಣ್ಯಕಾಂಡೇ-ದಶಮಸ್ಸರ್ಗಃ **...

ರಾಮಃ-ಶ್ರೀರಾಮನು, ಅಗ್ರತಃ-ಮುಂದುಗಡೆ, ಪ್ರಯಯೌ-ತೆರಳಿದನು, ಸುಮಧ್ಯಮಾ-ಸುಂದರವಾದ ಮಧ್ಯಪ್ರದೇಶವುಳ್ಳ, ಸೀತಾ-ಸೀತಾದೇವಿಯು, ಮಧ್ಯೇ-ಮಧ್ಯಭಾಗದಲ್ಲಿ, ಪ್ರಯಯೌ-ಹೊರಟಳು, ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ಧನುಷ್ಪಾಣಿಃ-ಧನುರ್ಧಾರಿಯಾಗಿ, ಪೃಷ್ಠತಃ-ಹಿಂಭಾಗದಲ್ಲಿ, ಅನುಜಗಾಮಹ-ಅನುಸರಿಸಿಹೋದನು ॥೧॥ ತೌ-ಆ ರಾಮಲಕ್ಷ್ಮಣರು, ವಿವಿಧಾನ್-ನಾನಾಬಗೆಗಳಾದ, ಶೈಲಪ್ರಸ್ಥಾನ್-ಬೆಟ್ಟದಜರಿಗಳ

---

ಪ್ರಾಣವನ್ನಾದರೂ ಲಕ್ಷ್ಮಣನೊಡನೆ ನಿನ್ನಾದರೂಬಿಡುವೆನೇ ಹೊರತು ಬ್ರಾಹ್ಮಣರ ವಿಷಯದಲ್ಲಿ ಮಾಡಿದ ಪ್ರತಿಜ್ಞೆಯಂ ಬಿಡಲಾರೆನು ಆದ್ದರಿಂದ ಅವರನ್ನ ಕೇಳದಿದ್ದರೂ ಅವಶ್ಯಕವಾಗಿ ಮುನಿಗಳ ಪಾಲನೆಯು ಮಾಡತಕ್ಕದ್ದು, ಪ್ರತಿಜ್ಞೆಮಾಡಿದ ಬಳಿಕ ಮತ್ತೇನು ಹೇಳತಕ್ಕದ್ದು? ।೨೦। ಎಲೈ ನಿರ್ದೋಷಳೇ! ನನ್ನಲ್ಲಿಪ್ರೀತಿಯಿಂದಲೂ ಸ್ನೇಹದಿಂದಲೂ ನೀನು ಹೇಳಿದ ಈ ಮಾತಿಗೆ ಸಂತೋಷಗೊಂಡೆನು; ವಿಶ್ವಾಸಪಾತ್ರನಲ್ಲದವನಿಗೆ ಉಪದೇಶ ಮಾಡಲ್ಪಡುವದಿಲ್ಲವಷ್ಟೇ ।೨೧। ನಿನ್ನ ವಂಶಕ್ಕೂ, ನನಗೂ ಯೋಗ್ಯವಾಗಿ ಹೇಳಿದವಳಾದ ನೀನೆನಗೆ ಪ್ರಾಣಗಳಿಗಿಂತಲೂ ಹೆಚ್ಚಾದವಳು;ನನ್ನ ಸಮಾನವಾಗಿ ಧರ್ಮಾನುಷ್ಠಾನವಂ ಮಾಡುವವಳು ನೀನೇಸರಿ ಎಂದು ಧೈರ್ಯವಂತನಾದ ಶ್ರೀರಾಮನು ಸೀತಾದೇವಿಗೆ ಈಪರಿಪೇಳಿ ಲಕ್ಷ್ಮಣನೊಡನೆ ಕೋದಂಡಪಾಣಿಯಾಗಿ ರಮ್ಯವಾದ ತಪೋವನಗಳನ್ನು ಕುರಿತು ಹೊರಟನು।೨೩।—* ಆರಣ್ಯಕಾಂಡದಲ್ಲಿ೧೦ನೆಯಸರ್ಗಂ ಮುಗಿದುದು*—

[ಬಳಿಕ] ಶ್ರೀರಾಮನು ಮುಂಭಾಗದಲ್ಲಿಯೂ ಸುಂದರವಾದ ಮಧ್ಯ ಪ್ರದೇಶವುಳ್ಳ ವೈದೇಹಿಯು ಮಧ್ಯಭಾಗದಲ್ಲಿಯೂ.ಲಕ್ಷ್ಮಣನು ಧನುರ್ಧಾರಿಯಾಗಿಹಿಂಭಾಗದಲ್ಲಿಯೂ ಈರೀತಿ ಹೊರಟರು।೧।ಆ ರಾಮಲಕ್ಷ್ಮಣರು ಕೆಲವಿಧಗಳಾದ ಬೆಟ್ಟದ ಜರಿಗಳನ್ನೂ, ವನಗಳನ್ನೂ, ರಮ್ಯಗಳಾದ ನದಿಗಳನ್ನೂ ಸೀತಾದೇವಿಯೊಂದಿ

ತಾಪಶ್ಯಮಾನೌವಿವಿಧಾನ್ ಶೈಲಪ್ರಸ್ಥಾನ್ವನಾನಿಚ । ನದೀಶ್ಚವಿವಿಧಾರಮ್ಯಾಜಗ್ಮತುಸ್ಸೀತಯಾಸಹ । ಸಾರ
।೧। ಸಾಂಶ್ಚಕ್ರವಾಕಾಂಶ್ಚನದೀಪುಲಿನಚಾರಿಣಃ । ಸರಾಂಸಿಚಸಪದ್ಮಾನಿಯುಕ್ತಾನಿಜಲಜೈಃಖಗೈಃ।೩। ಯೂಥಬದ್ಧಾಂಶ್ಚ
ಪೃಷತಾನ್ಮದೋನ್ಮತ್ತಾನ್ವಿಷಾಣಿನಃ । ಮಹಿಷಾಂಶ್ಚವರಾಹಾಂಶ್ಚನಾಗಾಂಶ್ಚದ್ರುಮವೈರಿಣಃ ।೪॥ ತೇಗತ್ವಾದೂ
ರಮಧ್ವಾನಂಲಂಬಮಾನೆದಿವಾಕರೇ । ದದೃಶುಸ್ಸಹಿತಾರಮ್ಯಂತಟಾಕಂಯೋಜನಾಯುತಂ । ಪದ್ಮಪುಷ್ಕರಸಂಬಾಧಂ
ಗಜಯೂಥೈರಲಂಕೃತಂ । ಸಾರಸೈರ್ಹಂಸಕಾದಂಬೈಸ್ಸಂಕುಲಂಜಲಚಾರಿಭಿಃ ।೬। ಪ್ರಸನ್ನಸಲಿಲೇರಮ್ಯೇತಸ್ಮಿನ್ಸರ
ಸಿಶುಶ್ರುವೆ । ಗೀತವಾದಿತ್ರನಿರ್ಘೋಷೋನತುಕಶ್ಚನದೃಶ್ಯತೇ॥೭॥ ತತಃಕೌತೂಹಲಾದ್ರಾಮೋಲಕ್ಷ್ಮಣಶ್ಚಮಹಾಬಲಃ
ಮುನಿಂಧರ್ಮಭೃತಂನಾಮಪ್ರಷ್ಟುಂಸಮುಪಚಕ್ರಮೇ।ಇದಮತ್ಯದ್ಭುತಂಶ್ರುತ್ವಾಸರ್ವೇಷಾಂನೋಮಹಾಮುನೇ । ಕೌ
ತೂಹಲಂಮಹಜ್ಜಾತಂಕಿಮಿದಂಸಾಧುಕಥ್ಯತಾಂ ॥ ವಕ್ತವ್ಯಂಯದಿಚೇದ್ವಿಪ್ರನಾತಿಗುಹ್ಯಮಪಿಪ್ರಭೋ॥೯॥ ತೇನೈವ

---

ನ್ನು. ವನಾನಿಚ-ಅರಣ್ಯಗಳನ್ನೂ, ವಿವಿಧಾಃ-ನಾನಾಬಗೆಗಳಾದ, ರಮ್ಯಾಃ-ಮನೋಹರಗಳಾದ, ನದೀಶ್ಚ-ನದಿಗಳನ್ನೂ ಸೀತಯಾಸಹ-ಸೀತಾದೇವಿ
ಯೊಡಗೂಡಿ. ಪಶ್ಯಮಾನಂ-ನೋಡುತ್ತಿರುವರಾಗಿ, ಜಗ್ಮತುಃ-ಹೊರಟರು ॥೨॥ ನದೀಪುಲಿನಚಾರಿಣಃ-ನದಿಗಳ ಮರಳು ದಿನ್ನೆಗಳಲ್ಲಿ ಸಂಚರಿಸುತ್ತಿ
ರುವ. ಸಾರಸಾಂಶ್ಚ-ಸಾರಸಪಕ್ಷಿಗಳೆಂಬ ಹಂಸವಿಶೇಷಗಳನ್ನೂ. ಚಕ್ರವಾಕಾಂಶ್ಚ-ಚಕ್ರವಾಕಪಕ್ಷಿಗಳನ್ನೂ, ಸಪದ್ಮಾನಿ-ಕಮಲಗಳಿಂದೊಡಗೂಡಿದ. ಜಲ
ಜೈಃ-ನೀರಿನಲ್ಲಿಪುಟ್ಟಿದ, ಖಗೈಃ-ಹಕ್ಕಿಗಳಿಂದ, ಯುಕ್ತಾನಿ-ಕೂಡಿಕೊಂಡಿರುವ, ಸರಾಂಸಿಚ-ಸರೋವರಗಳನ್ನೂ, ಯೂಥಬದ್ಧಾಂಶ್ಚ-ಗುಂಪುಗಳಲ್ಲೇ
ಶೇರಿರುವ. ಪೃಷತಾನ್-ಜಿಂಕೆಗಳನ್ನೂ, ಮದೋನ್ಮತ್ತಾನ್-ಮದದಿಂ ಉನ್ಮತ್ತದಾವಸ್ಥೆಯನ್ನು ಹೊಂದಿರುವ, ವಿಷಾಣಿನಃ-ಕೊಂಬುಗಳುಳ್ಳ, ಮಹಿ
ಷಾಂಶ್ಚ-ಕಾಡೆಮ್ಮೆಗಳನ್ನೂ. ವರಾಹಾಂಶ್ಚ-ಕಾಡುಹಂದಿಗಳನ್ನೂ, ದ್ರುಮವೈರಿಣಃ-ಗಿಡಗಳಿಗೆಲ್ಲಾ ಶತ್ರುಗಳಾದ, ನಾಗಾಂಶ್ಚ-ಆನೆಗಳನ್ನೂ, ದದೃಶುಃ-
ಕಂಡರು ॥೪॥ ತೇ-ಆ ಸೀತಾರಾಮಲಕ್ಷ್ಮಣರು, ಸಹಿತಃ-ಕೂಡಾಶೇರಿದವರಾಗಿ, ದೂರಮಧ್ವಾನಂ-ಬಹುದೂರವಾದಮಾರ್ಗದಲ್ಲಿ. ಗತ್ವಾ-ಹೋಗಿ, ದಿ
ವಾಕರೇ-ಸೂರ್ಯನು. ಲಂಬಮಾನೇಸತಿ-ಅಸ್ತೋನ್ಮುಖನಾಗುತ್ತಿರಲೀಕಾಗಿ, ರಮ್ಯಂ-ಮನೋಹರವಾದ, ಯೋಜನಾಯತಂ-ಹದಿನಾಲ್ಕುಯೋಜನ
ವುದ್ದವಾದ, ಪದ್ಮಪುಷ್ಕರಸಂಬಾಧಂ-ಕಮಲಗಳಿಂದಲೂ ಸರ್ಪಗಳಿಂದಲೂ ತುಂಬಿರುವ, ಗಜಯೂಥೈಃ-ಆನೆಗಳ ತಂಡಗಳಿಂದ, ಅಲಂಕೃತಂ-ಅಲಂ
ಕಾರಮಾಡಲ್ಪಟ್ಟ, ಜಲಚಾರಿಭಿಃ-ಜಲದಲ್ಲಿ ಶೇಲಾಡುತ್ತಿರುವ, ಸಾರಸೈಃ-ಸಾರಸಪಕ್ಷಿಗಳಿಂದಲೂ, ಹಂಸಕಾದಂಬೈಃ-ಹಂಸಪಕ್ಷಿಗಳ ಗುಂಪುಗಳಿಂದಲೂ
ಸಂಕುಲಂ-ವ್ಯಾಪ್ತವಾದ, ತಟಾಕಂ-ಕೆರೆಯನ್ನೂ. ದದೃಶುಃ-ಕಂಡರು ॥೬॥ ಪ್ರಸನ್ನಸಲಿಲೇ-ನಿರ್ಮಲವಾದ ನೀರುಳ್ಳ, ರಮ್ಯೇ-ಮನೋಹರವಾದ. ತ
ಸ್ಮಿನ್ಸರಸಿ-ಆ ಸರೋವರದಲ್ಲಿ, ಗೀತವಾದಿತ್ರನಿರ್ಘೋಷಃ-ಗಾನದ ವಾದ್ಯವಿಶೇಷಗಳ ಧ್ವನಿಯು, ಶುಶ್ರುವೆ-ಕೇಳಲ್ಪಟ್ಟಿತು, ಕಶ್ಚನ-ಒಬ್ಬಮನುಷ್ಯ
ನು. ನದೃಶ್ಯತೇ-ಕಾಣಲ್ಪಡಲಿಲ್ಲ ॥೭॥ ತತಃ-ಬಳಿಕ, ರಾಮಃ-ಶ್ರೀರಾಮನು, ಮಹಾಬಲಃ-ಮಹಾಬಲಶಾಲಿಯಾದ, ಲಕ್ಷ್ಮಣಶ್ಚ-ಲಕ್ಷ್ಮಣನೂ. ಕೌ
ತೂಹಲಾತ್-ಅಭಿಲಾಷೆಯುದೆಶೆಯಿಂದ, ಧರ್ಮಭೃತಂನಾಮ-ಧರ್ಮಭೃತುವೆಂದು ಪ್ರಸಿದ್ಧನಾದ, ಮುನಿಂ-ಋಷಿಯನ್ನು ಕುರಿತು, ಪ್ರಷ್ಟುಂ-
ಕೇಳುವದಕ್ಕೋಸ್ಕರ, ಸಮುಪಚಕ್ರಮೆ-ಆರಂಭಿಸಿದನು ॥೮॥ ಹೇಮಹಾಮುನೇ-ಎಲೈ ಮಹರ್ಷಿಯೆ, ಸರ್ವೇಷಾಂ-ಸಮಸ್ತರಾದ, ನಃ-ನಮ್ಮಿಗೆ, ಅತ
ದ್ಭುತಂ-ಬಹಳಾಶ್ಚರ್ಯಕರವಾದ, ಇದಂ-ಈ ಗಾನವನ್ನೂ, ಶ್ರುತ್ವಾ-ಕೇಳಿ, ಮಹತ್-ಅಧಿಕವಾದ, ಕೌತೂಹಲಂ-ಉತ್ಕಂಠೆಯು, ಜಾತಂ-ಹುಟ್ಟಿದೆ
ಇದಂ-ಇದು, ಕಿಂ-ಯೇನು, ಸಾಧು-ಚನ್ನಾಗಿ. ಹೇವಿಪ್ರ-ಎಲೈ ಬ್ರಾಹ್ಮಣನೇ, ವಕ್ತವ್ಯಂಯದಿ-ಹೇಳತಕ್ಕದ್ದೇ ಆದರೆ, ಹೇಪ್ರಭೋ-ಎಲೈ ಸಮರ್ಥನೇ
ನಾತಿಗುಹ್ಯಮಪಿಚೇತ್-ಶಾನರಹಸ್ಯವಲ್ಲದೆ ಹೋದರೆ, ಕಥ್ಯತಾಂ-ಹೇಳಲ್ಪಡಲಿ ॥೯॥ ತೆನರಾಘವೇಣ-ಆ ಶ್ರೀರಾಮನಿಂದ, ಏವಂ-ಈ ಪರಿಯಾಗಿ. ಉ

---

ಗೆ ನೋಡುತ್ತಾ ಹೊರಟರು।೨। ನದಿಗಳ ಮರಳುದಿನ್ನೆಗಳಲ್ಲಿ ಚರಿಸುವ ಸಾರಸಪಕ್ಕಿಗಳೆಂಬ ಹಂಸವಿಶೇಷಗಳನ್ನೂ
ಚಕ್ರವಾಕಪಕ್ಷಿಗಳನ್ನೂ, ಪದ್ಮಗಳಿಂ ದೊಡಗೂಡಿ ನೀರಿನಲ್ಲಿ ಪುಟ್ಟಿದ ಪಕ್ಷಿಗಳಿಂದ ಯುಕ್ತವಾದ ಸರೋವರಗ
ಳನ್ನೂ, ಗುಂಪುಗಳಲ್ಲಿಯೇ ಶೇರಿರುವ ಜಿಂಕೆಗಳನ್ನೂ, ಮದೋನ್ಮತ್ತವಾದ ಕೊಂಬುಗಳುಳ್ಳ ಕಾಡೆಮ್ಮೆಗಳನ್ನೂ,
ಕಾಡುಹಂದಿಗಳನ್ನೂ, ವೃಕ್ಷವೈರಿಗಳಾದ ಆನೆಗಳನ್ನೂ (ಸಹಾ) ಕಂಡರು ।೪। ಆ ಸೀತಾರಾಮಲಕ್ಷ್ಮಣರು
ಬಹಳ ದೂರ ಪೋಗಿ ಸೂರ್ಯನು ಅಸ್ತೋನ್ಮುಖನಾಗಲು ಮನೋಹರವಾದ ಹದಿನಾಲ್ಕುಯೋಜನ ಉದ್ದವಾದ,
ಕಮಲಗಳಿಂದಲೂ ಸರ್ಪಗಳಿಂದಲೂ ತುಂಬಿ ಆನೆಗಳ ಸಮೂಹದಿಂದಲಂಕೃತವಾದ, ಜಲದಲ್ಲಿ ಪುಟ್ಟಿದ ಸಾರಸಪ
ಕ್ಕಿಗಳಿಂದಲೂ, ಹಂಸತಂಡಗಳಿಂದಲೂ ವ್ಯಾಪ್ತವಾದ ಕೆರೆಯನ್ನು ನೋಡಿದರು।೬।ನಿರ್ಮಲೋದಕವುಳ್ಳ ಆ ಸರೋ
ವರದಲ್ಲಿ ಗೀತವಾದ್ಯವಿಶೇಷಗಳ ಧ್ವನಿಯು ಕೇಳಲ್ಪಟ್ಟಿತೆ ಹೊರತು ಒಬ್ಬಮನುಷ್ಯನಾದರೂ ಕಾಣಿಸಲಿಲ್ಲ।೭। ಬಳಿ
ಕ ಮಹಾ ಬಲಿಷ್ಠನಾದ ಶ್ರೀರಾಮನು ಲಕ್ಷ್ಮಣಸಹಿತನಾಗಿ, ಬಹುಕುತೂಹಲದಿಂದ ಧರ್ಮಭೃತ್ತನೆಂಬ ಮಹರ್ಷಿ
ಯನ್ನು ಪ್ರಶ್ನೆಯಂ ಮಾಡಲುಪಕ್ರಮಿಸಿದನೆಂತೆನೆ,— ।೮। ಎಲೈ ಮಹರ್ಷಿಯಾದ ಬ್ರಾಹ್ಮಣನೇ! ನಮ್ಮಗೆಬ
ಹಳ ಆಶ್ಚರ್ಯಕರವಾದ ಈ ಗಾನವಂಕೇಳಿ ಮಹದುತ್ಕಂಠೆಯುಂಟಾಗಿದೆ; ಇದೇನು? ಚನ್ನಾಗಿ ಹೇಳತಕ್ಕದ್ದಾ

ಮುಕ್ತೋಧರ್ಮಾತ್ಮಾರಾಘವೇಣಮುನಿಸ್ತದಾ । ಪ್ರಭವಂಸರಸಃಕೃತ್ಸ್ನಮಾಖ್ಯಾತುಮುಪಚಕ್ರಮೇ ॥೧೦॥ ಇದಂ
ಪಂಚಾಪ್ಸರೋನಾಮತಟಾಕಂಸಾರ್ವಕಾಲಿಕಂ । ನಿರ್ಮಿತಂತಪಸಾರಾಮಮುನಿನಾಮಾಂಡಕರ್ಣಿನಾ ॥೧೧॥ ಸಹಿತ
ಪೇತಪಸ್ತೀವ್ರಂಮಾಂಡಕರ್ಣಿರ್ಮಹಾಮುನಿಃ । ದಶವರ್ಷಸಹಸ್ರಾಣಿವಾಯುಭಕ್ಷೋಜಲಾಶ್ರಯಃ ॥೧೨॥ ತತಃಪ್ರವ್ಯ
ಥಿತಾಸ್ಸರ್ವೇದೇವಾಸ್ಸಾಗ್ನಿಪುರೋಗಮಾಃ । ಅಬ್ರುವನ್ವಚನಂಸರ್ವೇಪರಸ್ಪರಸಮಾಗತಾಃ ॥೧೩॥ ಅಸ್ಮಾಕಂಕಸ್ಯಚಿತ್
ಸ್ಥಾನಮೇಷಪ್ರಾರ್ಥಯತೇಮುನಿಃ । ಇತಿಸಂವಿಗ್ನಮನಸಸ್ಸರ್ವೇತತ್ರದಿವೌಕಸಃ ॥೧೪॥ ತತ್ರಕರ್ತುಂತಪೋವಿಘ್ನಂದೆ
ವೈಸ್ಸರ್ವೈರ್ನಿಯೋಜಿತಾಃ । ಪ್ರಧಾನಾಪ್ಸರಸಃಪಂಚವಿದ್ಯುಚ್ಚಲಿತವರ್ಚಸಃ ॥೧೫॥ ಅಪ್ಸರೋಭಿಸ್ತತಸ್ತಾಭಿರ್ಮುನಿ
ರ್ದೃಷ್ಟಪರಾವರಃ । ನೀತೋಮದನವಶ್ಯತ್ವಂಸುರಾಣಾಂಕಾರ್ಯಸಿದ್ಧಯೇ । ತಾಶ್ಚೈವಾಪ್ಸರಸಃಪಂಚಮುನೇಃಪತ್ನೀ
ತ್ವಮಾಗತಾಃ । ತಟಾಕೇನಿರ್ಮಿತಂತಾಸಾಮಸ್ಮಿನ್ನಂತರ್ಹಿತಂಗೃಹಂ ॥೧೬॥ ತತ್ರೈವಾಪ್ಸರಸಃಪಂಚನಿವಸಂತ್ಯೋಯ

---

ಕ್ತಃ-ಹೇಳಲ್ಪಟ್ಟವನಾಗಿ, ತದಾ-ಆ ಕಾಲದಲ್ಲಿ. ಧರ್ಮಾತ್ಮಾ-ಧರ್ಮಿಷ್ಠನಾದ, ಮುನಿಃ-ಧರ್ಮಭೃತ್ತು ಎಂಬ ಋಷಿಯು, ಸರಸಃ-ಸರೋವರದ ಕೃತ್ಸ್ನಂ-ಸಮಸ್ತವಾದ, ಪ್ರಭವಂ-ಉತ್ಪತ್ತಿಯನ್ನು. ಆಖ್ಯಾತುಂ-ಹೇಳುವದಕ್ಕೋಸ್ಕರ. ಉಪಚಕ್ರಮೇ-ಆರಂಭಿಸಿದನು ॥೧೦॥ ಹೇ ರಾಮ-ಎಲೈ ಶ್ರೀರಾಮನೇ. ಇದಂ-ಇದು, ಪಂಚಾಪ್ಸರೋನಾಮ-ಪಂಚಾಪ್ಸರಸ್ಸೆಂಬ ಪ್ರಸಿದ್ಧವಾದ, ಸಾರ್ವಕಾಲಿಕಂ-ಸರ್ವಕಾಲದಲ್ಲಿರುವ. ತಟಾಕಂ-ಸರೋವರವು, ಮಾಂಡಕರ್ಣಿನಾ-ಮಾಂಡಕರ್ಣಿಯೆಂಬ ಮುನಿನಾ-ಋಷಿಯಿಂದ, ತಪಸಾ-ತಪಸ್ಸಿನಿಂದ. ನಿರ್ಮಿತಂ-ನಿರ್ಮಿಸಲ್ಪಟ್ಟಿತು ॥೧೧॥ ಮಾಂಡಕರ್ಣಿಃ-ಮಾಂಡಕರ್ಣಿಯೆಂಬ. ಮಹಾಮುನಿಃ-ಆ ಮಹರ್ಷಿಯು, ದಶವರ್ಷಸಹಸ್ರಾಣಿ-ಹತ್ತುಸಾವಿರವರ್ಷಗಳು, ವಾಯುಭಕ್ಷಃ-ಗಾಳಿಯೇ ಆಹಾರವಾಗುಳ್ಳವನಾಗಿ. ಜಲಾಶ್ರಯಃ-ಉದಕದಲ್ಲೇಯಿರುವವನಾಗಿ, ತೀವ್ರಂ-ತೀಕ್ಷ್ಣವಾದ, ತಪಃ-ತಪವನ್ನು ತೇಪೇ-ತಪಿಸಿದನು ॥೧೨॥ ತತಃ-ಬಳಿಕ, ಸಾಗ್ನಿಪುರೋಗಮಾಃ-ಅಗ್ನಿಯೇ ಮೊದಲಾಗುಳ್ಳವರಿಂದ ಕೂಡಿಕೊಂಡವರಾಗಿ, ಸರ್ವೇ-ಸಮಸ್ತರಾದ, ದೇವಾಃ-ದೇವತೆಗಳು, ಪ್ರವ್ಯಥಿತಾಃ-ವ್ಯಸನಗೊಂಡವರು ಸರ್ವೇ-ಸಮಸ್ತರೂ, ಪರಸ್ಪರಸಮಾಗತಾಃ-ಒಬ್ಬರೊಬ್ಬರು ಸೇರಿದವರಾಗಿ. ವಚನಂ-ಮಾತನ್ನು. ಅಬ್ರುವನ್-ನುಡಿದರು ॥೧೩॥ ಏಷಮುನಿಃ-ಈ ಋಷಿಯು. ಅಸ್ಮಾಕಂ-ನಮ್ಮಗಳೊಳಗೆ, ಕಸ್ಯಚಿತ್-ಒಬ್ಬಾನೊಬ್ಬನ, ಸ್ಥಾನಂ-ಸ್ಥಾನವನ್ನು, ಪ್ರಾರ್ಥಯತೇ-ಕೋರುತ್ತಾನೆ, ಇತಿ-ಇಂತೆಂದು. ಸರ್ವೇ-ಸಮಸ್ತರಾದ ತತ್ರದಿವೌಕಸಃ-ಆ ದೇವತೆಗಳು. ಸಂವಿಗ್ನಮನಸಃ-ಹೆದರಿಗೊಂಡ ಮನವುಳ್ಳವರಾದರು ॥೧೪॥ ತತ್ರ-ಆ ಕಾಲದಲ್ಲಿ. ಸರ್ವೈಃ-ಸಮಸ್ತರಾದ, ದೇವೈಃ-ದೇವತೆಗಳಿಂದ, ತಪೋವಿಘ್ನಂ-ತಪಸ್ಸಿಗೆ ಅಂತರಾಯವನ್ನು, ಕರ್ತುಂ-ಮಾಡುವದಕ್ಕೋಸ್ಕರ ವಿದ್ಯುಚ್ಚಲಿತವರ್ಚಸಃ-ಮಿಂಚುಗಳೋಪಾದಿಯಲ್ಲಿ ಚಲಿಸುತ್ತಿರುವ ತೇಜಸ್ಸುಗಳುಳ್ಳ. ಪ್ರಧಾನಾಪ್ಸರಸಃ-ಮುಖ್ಯವಾದ ಅಪ್ಸರಸ್ತ್ರೀಯರು. ಪಂಚ-ಐದುಮಂದಿಯು, ನಿಯೋಜಿತಾಃ-ಆಜ್ಞಾಪಿಸಲ್ಪಟ್ಟರು ॥೧೫॥ ದೃಷ್ಟಪರಾವರಃ-ದೃಷ್ಟ-ತಿಳಿಯಲ್ಪಟ್ಟ, ಪರಾವರಃ-ಜೀವಾತ್ಮ ಪರಮಾತ್ಮರುಗಳುಳ್ಳ, ಮುನಿಃ-ಆ ಮಾಂಡಕರ್ಣಿ ಎಂಬ ಋಷಿಯು, ತತಃ-ಬಳಿಕ, ಸುರಾಣಾಂ-ದೇವತೆಗಳ, ಕಾರ್ಯಸಿದ್ಧಯೇ-ಕಾರ್ಯನಿರ್ವಾಹಕ್ಕೋಸ್ಕರ, ತಾಭಿರಪ್ಸರೋಭಿಃ-ಆ ಅಪ್ಸರಸ್ತ್ರೀಯರುಗಳಿಂದ, ಮದನವಶ್ಯತ್ವಂ-ಕಾಮ-ಪಾರವಶ್ಯವನ್ನು, ನೀತಃ-ಹೊಂದಲ್ಪಟ್ಟನು ॥೧೬॥ ತಾಃ ಅಪ್ಸರಸಃ ಪಂಚ-ಆ ಐದು ಜನ ಅಪ್ಸರಸ್ತ್ರೀರುಗಳು, ಮುನೇಃ-ಋಷಿಗೆ, ಪತ್ನೀತ್ವಂ-ಹೆಂಡತೀಭಾವವನ್ನು, ಆಗತಾಃ-ಹೊಂದಿದರು, ಅಸ್ಮಿನ್ ತಟಾಕೇ-ಈ ತಟಾಕದಲ್ಲಿ, ತಾಸಾಂ-ಆ ಅಪ್ಸರಸ್ತ್ರೀರುಗಳಿಗೆ. ಗೃಹಂ-ಮನೆಯು. ಅಂತರ್ಹಿತಂ-ಅಂತರ್ಧಾನವಾಗಿ, ನಿರ್ಮಿತಂ-ನಿರ್ಮಾಣ ಮಾಡಲ್ಪಟ್ಟಿದೆ. ತತ್ರೈವ-

---

ದರೆ, ಶ್ಯಾನೀರಹಸ್ಯವಲ್ಲದಿದ್ದರೆ ಹೇಳಲ್ಪಡಲೆಂದು ಕೇಳಲು ಧರ್ಮಿಷ್ಠನಾದ ಧರ್ಮಭೃತ್ತನೆಂಬ ಮುನಿಯು ಆ ಸರೋವರದ ಸಮಸ್ತ ಉತ್ಪತ್ತಿಯನ್ನು ಹೇಳಲುಪಕ್ರಮಿಸಿದನೆಂತೆನೆ,—॥೧೦॥ ಎಲೈ ಶ್ರೀರಾಮನೇ! ಪಂಚಾಪ್ಸರಸ್ಸೆಂದು ಪ್ರಸಿದ್ಧವಾದ, ಸರ್ವಕಾಲದಲ್ಲಿಯೂ ಯಿರುವ ಈ ಸರೋವರವು ಮಾಂಡಕರ್ಣೀ ಎಂಬ ಮುನಿಯ ತಪಸ್ಸಿನಿಂದ ನಿರ್ಮಿಸಲ್ಪಟ್ಟಿತು, ಆ ಮಹರ್ಷಿಯು ಹತ್ತುಸಾವಿರ ವರುಷಗಳು ಗಾಳಿಯನ್ನೇ ಆಹಾರವಾಗಿತೆಗೆದುಕೊಳ್ಳುತ್ತಾ, ಉದಕದಲ್ಲೇ ಇರುತಿರುವವನಾಗಿ ತೀಕ್ಷ್ಣವಾದ ತಪವಂ ಗೈದನು।೧೨॥ಬಳಿಕಅಗ್ನಿಯೇಮೊದಲಾದವರಿಂದ ಕೂಡಿಕೊಂಡಿರುವರಾಗಿ ಸಮಸ್ತರಾದ ದೇವತೆಗಳು ವ್ಯಸನಗೊಂಡು ಒಬ್ಬರೊಬ್ಬರು ಸೇರಿದವರಾಗಿ ಹೇಳಿದರು (ಎಂತೆನೆ,—॥೧೩॥ ಈ ಮುನಿಯು ನಮ್ಮಗಳೊಳು ಯಾವನೊಬ್ಬನ ಸ್ಥಾನವನ್ನಾದರು ಕೋರುತ್ತಾನೆಂದು ಸಮಸ್ತದೇವತೆಗಳು ಭಯಗೊಂಡರು ॥೧೪॥ ಆ ದೇವತೆಗಳಿಂದ ತಪೋವಿಘ್ನವಂ ಮಾಡಲು ಮಿಂಚುಗಳಂತೆ ಚಲಿಸುವ ತೇಜಸ್ಸುಳ್ಳ ಐದುಮಂದಿ ಸ್ತ್ರೀಯರು ಆಜ್ಞಾಪಿಸಲ್ಪಟ್ಟರು ॥೧೫॥ ಬಳಿಕ ಜೀವಾತ್ಮಪರಮಾತ್ಮರನ್ನರಿತ ಆ ಮಾಂಡಕರ್ಣಿ ಋಷಿಯು ದೇವತೆಗಳ ಕಾರ್ಯಸಿದ್ಧಿಗೋಸುಗ ಆ ಸ್ತ್ರೀಯರುಗಳಿಂದ ಮದನವಶ್ಯತ್ವವಂ ಹೊಂದಿದನು, ಆ ಐದುಜನಸ್ತ್ರೀಯರು ಆ ಮುನಿಗೆಹೆಂಡತಿಭಾವವಂಪೊಂದಿದರು, ಆ ಅಪ್ಸರಸ್ತ್ರೀಯರಿಗೆ ಮನೆಯು ಅಂತರ್ಧಾನವಾಗಿ ನಿರ್ಮಿಸಲ್ಪಟ್ಟಿದೆ; ಅವರುಸುಖದಿಂದಿರುತ್ತಾ ತಪೋಬಲದಿಂದ ಯೌವ್ವನವಂ

ಥಾಸುಖಂ ॥ ರಮಯಂತಿತಪೋಯೋಗಾನ್ಮುನಿಂಯೌವನಮಾಸ್ಥಿತಂ ।೧೮॥ ತಾಸಾಂ ಸಂಕ್ರೀಡಮಾನಾನಾಮೇಷ
ವಾದಿತ್ರನಿಸ್ಸ್ವನಃ ॥ ಶ್ರೂಯತೇಭೂಷಣೋನ್ಮಿಶ್ರೋಗೀತಶಬ್ದೋಮನೋಹರಃ ॥೧೯॥ ಆಶ್ಚರ್ಯಮಿತಿತಸ್ಯೈತದ್ವಚ
ನಂಭಾವಿತಾತ್ಮನಃ ॥ ರಾಘವಃಪ್ರತಿಜಗ್ರಾಹಸಹಭ್ರಾತ್ರಾಮಹಾಯಶಾಃ ॥೨೦॥ ಏವಂಕಥಯಮಾನಸ್ಯದದರ್ಶಾಶ್ರ
ಮಮಂಡಲಂ ॥ ಕುಶಚೀರಪರಿಕ್ಷಿಪ್ತಂಬ್ರಾಹ್ಮ್ಯಾಲಕ್ಷ್ಮ್ಯಾಸಮಾವೃತಂ ॥೨೧॥ ಪ್ರವಿಶ್ಯಸಹವೈದೇಹ್ಯಾಲಕ್ಷ್ಮಣೇ
ನಚರಾಘವಃ ।ಉವಾಚಮುನಿಭಿಸ್ಸರ್ವೈಃಪೂಜ್ಯಮಾನೋಮಹಾಯಶಾಃ ।೨೨॥ ತಥಾತಸ್ಮಿನ್ಸಕಾಕುತ್ಸ್ಥಃಶ್ರೀಮ
ತ್ಯಾಶ್ರಮಮಂಡಲೇ । ಉಷಿತ್ವಾತುಸುಖಂತತ್ರಪೂಜ್ಯಮಾನೋಮಹರ್ಷಿಭಿಃ । ಜಗಾಮಚಾಶ್ರಮಾಂಸ್ತೇಷಾಂಪರ್ಯಾ
ಯೇಣತಪಸ್ವಿನಾಂ ॥ ಯೇಷಾಮುಷಿತವಾನ್ಪೂರ್ವಂಸಕಾಶೇಸಮಹಾಸ್ತ್ರವಿತ್ ।೨೪॥ ಕ್ವಚಿತ್ಪರಿದಶಾನ್ಮಾಸಾನೆ
ಕಂಸಂವತ್ಸರಂಕ್ವಚಿತ್ ॥ ಕ್ವಚಿಚ್ಚಚತುರೋಮಾಸಾನ್ಪಂಚಷಟ್ಚಾಪರಾನ್ಕ್ವಚಿತ್ । ಅಪರತ್ರಾಧಿಕಂಮಾಸಾದಧ್ಯ
ರ್ಧಮಧಿಕಂಕ್ವಚಿತ್ ॥ತ್ರೀನ್ಮಾಸಾನಷ್ಟಮಾಸಾಂಶ್ಚರಾಘವೋನ್ಯವಸತ್ಸುಖಂ।೨೬॥ತಥಾಸಂವಸತಸ್ತಸ್ಯಮುನೀನಾ

---

ಹಾಗೆಯೇ, ಅಪ್ಸರಸಃ ಪಂಚ–ಐದುಜನ ಅಪ್ಸರಸ್ತ್ರೀಯರುಗಳು, ಯಥಾಸುಖಂ–ಸುಖವಾಗಿ, ನಿವಸಂತ್ಯಃ–ಯಿರುತ್ತಿರುವರಾಗಿ, ತಪೋಯೋಗಾತ್–ತಪಸ್ಸಿನ ಮಾಹಾತ್ಮ್ಯದಿಂದ, ಯೌವನಂ–ತಾರುಣ್ಯವನ್ನು, ಆಸ್ಥಿತಂ–ಹೊಂದಿರುವ, ಮುನಿಂ–ಋಷಿಯನ್ನು, ರಮಯಂತಿ–ಸಂತೋಷಗೊಳಿಸುತ್ತಾರೆ ॥೧೮॥ ಸಂಕ್ರೀಡಮಾನಾನಾಂ–ವಿಹಾರಮಾಡುತ್ತಿರುವ, ತಾಸಾಂ–ಆ ಅಪ್ಸರಸ್ತ್ರೀಯರುಗಳ, ವಾದಿತ್ರನಿಸ್ವನಂ–ವಾದ್ಯಗಳ ಧ್ವನಿಯೂ, ಮನೋಹರಃ–ಮನಸ್ಸಿಗಿಂಪಾಗಿರುವ, ಗೀತಶಬ್ದಃ–ಗಾನದ ಧ್ವನಿಯು, ಭೂಷಣೋನ್ಮಿಶ್ರಃ–ಒಡವೆಗಳ ಧ್ವನಿಗಳಿಂದ ಕೂಡಿದ್ದಾಗಿ, ಶ್ರೂಯತೇ–ಕೇಳಲ್ಪಡುತ್ತದೆ ॥೧೯॥ ಭಾವಿತಾತ್ಮನಃ–ಊಹಿಸಲ್ಪಟ್ಟ ಪರಮಾತ್ಮನುಳ್ಳ, ತಸ್ಯ–ಆ ಧರ್ಮಭೃತ್ತೆಂಬ ಋಷಿಯ, ಆಶ್ಚರ್ಯಂ–ಆಶ್ಚರ್ಯಕರವಾದ, ಏತದ್ವಚನಂ–ಈ ಮಾತನ್ನು, ಮಹಾಯಶಾಃ–ಬಹಳಕೀರ್ತಿವಂತನಾದ, ರಾಘವಃ–ಶ್ರೀರಾಮನು, ಭ್ರಾತ್ರಾಸಹ–ತಮ್ಮನೊಡಗೂಡ, ಪ್ರತಿಜಗ್ರಾಹ–ಪರಿಗ್ರಹಿಸಿದನು (ಅಂದರೆ–ಕೇಳಿದನು ॥೨೦॥ ॥ ಏವಂ–ಈ ಪರಿಯಾಗಿ, ಕಥಯಮಾನಸ್ಯಸತಃ–ಮಾತಾಡುವನಾಗುತ್ತಿರಲೀಕಾಗಿ. ಕುಶಚೀರಪರಿಕ್ಷಿಪ್ತಂ–ದರ್ಭೆಗಳಿಂದಲೂ ನಾರುಶೀರೆಗಳಿಂದಲೂ ಹಾಸಲ್ಪಟ್ಟ, ಬ್ರಾಹ್ಮ್ಯಾಲಕ್ಷ್ಮ್ಯಾ–ಬ್ರಹ್ಮಲಕ್ಷ್ಮಿಯಿಂದ. ಸಮಾವೃತಂ–ಕೂಡಿಕೊಂಡಿರುವ. ಆಶ್ರಮಮಂಡಲಂ–ಆಶ್ರಮಗಳ ಪ್ರದೇಶವನ್ನು, ದದರ್ಶ–ಕಂಡನು ॥೨೧॥ ॥ ಮಹಾಯಶಾಃ–ಮಹಾಕೀರ್ತಿವಂತನಾದ, ರಾಘವಃ–ಶ್ರೀರಾಮನು. ವೈದೇಹ್ಯಾಸಹ–ಸೀತಾದೇವಿಯೊಡನೆ. ಲಕ್ಷ್ಮಣೇನಚ–ಲಕ್ಷ್ಮಣನೊಡನೆಯೂ, ಪ್ರವಿಶ್ಯ–ಪ್ರವೇಶಿಸಿ, ಸರ್ವೈಃ–ಸಮಸ್ತರಾದ, ಮುನಿಭಿಃ–ಋಷಿಗಳಿಂದ, ಪೂಜ್ಯಮಾನಃ–ಮರ್ಯಾದೆಮಾಡಲ್ಪಟ್ಟವನಾಗಿ, ಉವಾಸ–ಇದ್ದನು ॥೨೨॥ ॥ ಸಕಾಕುತ್ಸ್ಥಃ–ಆ ಶ್ರೀರಾಮನು ಶ್ರೀಮತಿ–ಸಂಪದ್ಯುಕ್ತವಾದ ತಸ್ಮಿನ್ನಾಶ್ರಮಮಂಡಲೇ–ಆ ಆಶ್ರಮಪ್ರದೇಶದಲ್ಲಿ, ತಥಾ–ಹಾಗೆಯೇ, ಉಷಿತ್ವಾ–ಇದ್ದು, ಏಷಾಂ–ಯಾವಋಷಿಗಳ, ಸಕಾಶೇ–ಸಮೀಪದಲ್ಲಿ. ಮಹಾಸ್ತ್ರವಿತ್–ಮಹಾಸ್ತ್ರಪ್ರಯೋಗಗಳುತಿಳಿದಿರುವ ಸಃ–ಆ ಶ್ರೀರಾಮನು, ಪೂರ್ವಂ–ಪೂರ್ವಕಾಲದಲ್ಲಿ, ಉಷಿತವಾನ್–ಇದ್ದನೋ, ತೈಃಮಹರ್ಷಿಭಿಃ–ಆಋಷಿಗಳಿಂದ. ತತ್ರ–ಆ ಆಶ್ರಮ ಮಂಡಲದಲ್ಲಿ, ಪೂಜ್ಯಮಾನಃ–ಪೂಜಿಸಲ್ಪಟ್ಟವನಾಗಿ. ಉಷಿತ್ವಾ–ಮಲಗಿದ್ದು, ತೇಷಾಂತಪಸ್ವಿನಾಂ–ಆಋಷಿಗಳ, ಆಶ್ರಮಾನ್–ಆಶ್ರಮಗಳನ್ನುಕುರಿತು, ಪರ್ಯಾಯೇಣ–ಕ್ರಮದಿಂದ, ಜಗಾಮ–ಸೇರಿದನು ॥ ... ... ... ... ... ... ... ॥೨೪॥ ॥ ಕ್ವಚಿತ್–ಒಂದಾನೊಂದುಕಡೆ, ಪರಿದಶಾ–ಹತ್ತುಸಂಖ್ಯೆಯುಳ್ಳ, ಮಾಸಾನ್–ಮಾಸಗಳಲ್ಲಿ. ಕ್ವಚಿತ್–ಮತ್ತೊಂದುಕಡೆ, ಏಕಂಸಂವತ್ಸರಂ–ಒಂದು ಸಂವತ್ಸರವು, ಕ್ವಚಿಚ್ಚ–ಮತ್ತೊಂದುಕಡೆ, ಚತುರೋಮಾಸಾನ್–ನಾಲ್ಕುಮಾಸಗಳು, ಕ್ವಚಿತ್–ಒಂದುಕಡೆ, ಪಂಚ–ಐದುಮಾಸಗಳು. ಷಟ್ಚ–ಆರುಮಾಸಗಳು, ಅಪರಾನ್–ಮತ್ತೆ ಕೆಲಮಾಸಗಳು, ಅಪರತ್ರ–ಮತ್ತೊಂದುಕಡೆ, ಮಾಸಾತ್–ತಿಂಗಳಿಗಿಂತಲೂ, ಅಧಿಕಂ–ಹೆಚ್ಚಾಗಿ, ಅರ್ಧಮಪಿ–ಅರ್ಧಮಾಸವು,

---

ತಾಳಿದ ಮುನಿಯನ್ನು ಸಂತೋಷಪಡಿಸುತ್ತಾರೆ ।೧೮॥ ಕ್ರೀಡಿಸುತ್ತಿರುವ ಆ ಅಪ್ಸರಸ್ತ್ರೀಯರ ವಾದ್ಯಧ್ವನಿಯೂ ಮನೋಹರವಾದ ಗಾನಧ್ವನಿಯೂ ಒಡವೆಗಳ ಶಬ್ದದಿಂ ಕೂಡಿ ಕೇಳಿಸುತ್ತದೆಂದು ಆ ಭಾವಿತಾತ್ಮನಾದ ಧರ್ಮಭೃತ್ತೆಂಬ ಮುನಿಯು ಹೇಳಿದ ಆಶ್ಚರ್ಯಕರವಾದ ವಾಕ್ಯವಂ ಲಕ್ಷ್ಮಣಸಹಿತನಾದ ಶ್ರೀರಾಮನು ಕೇಳಿದನು ॥೨೦॥ ಈ ಪರಿಮಾತನಾಡುತ್ತಿರಲೀಕಾಗಿ ದರ್ಭೆನಾರುಶೀರೆಗಳಿಂಹಾಸಲ್ಪಟ್ಟ, ಬ್ರಹ್ಮಲಕ್ಷ್ಮಿಯಿಂದಯುಕ್ತವಾದ ಆಶ್ರಮಗಳ ಪ್ರದೇಶವನ್ನು ಕಂಡು ಕೀರ್ತಿವಂತನಾದ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಪ್ರವೇಶಿಸಿ ಸಮಸ್ತ ಮುನಿಗಳಿಂದ ಮರ್ಯಾದೆಯಂ ಪಡದು ಇದ್ದನು ॥೨೨॥ ಶ್ರೀರಾಮನು ಆ ಆಶ್ರಮಪ್ರದೇಶದಲ್ಲಿ ಇದ್ದು ಯಾವ ಋಷಿಗಳ ಸಮೀಪದಲ್ಲಿ ಮಹಾಸ್ತ್ರಸಂಧಾನವನ್ನರಿತ ಶ್ರೀರಾಮನು ಇದ್ದನೋ ಅವರಿಂದ ಆ ಆಶ್ರಮ ಮಂಡಲದಲ್ಲಿ ಪೂಜಿಸಲ್ಪಟ್ಟವನಾಗಿ ಮಲಗಿದ್ದು ಆ ಋಷಿಗಳ ಆಶ್ರಮಗಳಂ ಕುರಿತು ಹೊರಟು; ಒಂದುಕಡೆಹತ್ತುತಿಂಗಳು ಮತ್ತೊಂದುಕಡೆ ಒಂದುವರುಷ ಇನ್ನೊಂದುಕಡೆ ನಾಲ್ಕುತಿಂಗಳು ಬೇರೊಂದುಕಡೆ ಐದುತಿಂಗಳು ಆರುತಿಂಗಳು ಮತ್ತು ಕೆಲಮಾಸಗಳು ಮತ್ತೊಂದು ತಿಂಗಳಿಗಿಂತಲೂ ಹೆಚ್ಚಾಗಿ ಅರ್ಧಮಾಸವು ಒಂದುಕಡೆ

ಪೋಷ ಮೇಷುವೈ ॥ ರಮತಶ್ಚಾನುಕೂಲ್ಯೇನಯಯುಸ್ಸಂವತ್ಸರಾದಶ ॥೨೭॥ ಪರಿಸೃತ್ಯಚಧರ್ಮಜ್ಞೋರಾಘವಸ್ಸ
ಹಸೀತಯಾ ॥ ಸುತೀಕ್ಷ್ಣಸ್ಯಾಶ್ರಮಂಶ್ರೀಮಾನ್ಪುನರೇವಜಗಾಮಹ ॥೨೮॥ ಸತಮಾಶ್ರಮಮಾಸಾದ್ಯಮುನಿಭಿಃಪ್ರ
ತಿಪೂಜಿತಃ ॥ ತತ್ರಾಪಿನ್ಯವಸದ್ರಾಮಃಕಂಚಿತ್ಕಾಲಮರಿಂದಮಃ ॥೨೯॥ ಅಥಾಶ್ರಮಸ್ಥೋವಿನಯಾತ್ಕದಾಚಿತ್ತಂಮ
ಹಾಮುನಿಂ ॥ ಉಪಾಸೀನಸ್ಸಕಾಕುತ್ಸ್ಥಸ್ಸುತೀಕ್ಷ್ಣಮಿದಮಬ್ರವೀತ್ ॥೩೦॥ ಅಸ್ಮಿನ್ನರಣ್ಯೇಭಗವಾನಗಸ್ತ್ಯೋ
ಮುನಿಸತ್ತಮಃ ॥ ವಸತೀತಿಮಯಾನಿತ್ಯಂಕಥಾಃಕಥಯತಾಂಶ್ರುತಂ। ನತುಜಾನಾಮಿತಂದೇಶಂವನಸ್ಯಾಸ್ಯಮಹ
ತ್ತಯಾ ॥ ಕುತ್ರಾಶ್ರಮಮಿದಂಪುಣ್ಯಂಮಹರ್ಷೇಸ್ತಸ್ಯಧೀಮತಃ ॥೩೨॥ ಪ್ರಸಾದಾತ್ತತ್ರಭವತಸ್ಸಾನುಜಸ್ಸಹಸೀತ
ಯಾ ॥ ಅಗಸ್ತ್ಯಮಭಿಗಚ್ಛೇಯಮಭಿವಾದಯಿತುಂಮುನಿಂ ॥೩೩॥ ಮನೋರಥೋಮಹಾನೇಷಃಹೃದಿಮೇಪರಿವರ್ತ

---

ಕ್ವಚಿತ್-ಒಂದುಕಡೆ, ಅಧಿಕಂ-ಹೆಚ್ಚಾಗಿಯೂ, ತ್ರೀನ್ಮಾಸಾನ್-ಮೂರು ಮಾಸಗಳು. ಅಷ್ಟಮಾಸಾನ್-ಎಂಟುಮಾಸಗಳು, ರಾಘವಃ-ಶ್ರೀರಾಮನು, ಸುಖಂ-ಸುಖವಾಗಿ, ನ್ಯವಸತ್-ಇದ್ದನು ॥೨೬॥ ತಥಾ-ಆಪರಿಯಾಗಿ. ಮುನೀನಾಂ-ಋಷಿಗಳ, ಆಶ್ರಮೇಷು-ಆಶ್ರಮಗಳಲ್ಲಿ, ಸಂವಸತಃ-ಇರುತ್ತಿರುವ, ತಸ್ಯ-ಆ ಶ್ರೀರಾಮನು. ಆನುಕೂಲ್ಯೇನ-ಕಳತ್ರಾದ್ಯಾನುಕೂಲ್ಯದಿಂದ, ರಮತಸ್ಸತಃ-ವಿಹರಿಸುತ್ತಿರುವನಾಗುತ್ತಿರಲೀಗಾಗಿ, ದಶಸಂವತ್ಸರಾಃ-ಹತ್ತು ಸಂವತ್ಸರಗಳು, ಯಯುಃ-ಕಳೆದವು ॥೨೭॥ ಧರ್ಮಜ್ಞಃ-ಧರ್ಮವನ್ನರಿತ, ಶ್ರೀಮಾನ್-ಸಂಪದ್ಯುಕ್ತನಾದ, ರಾಘವಃ-ಶ್ರೀರಾಮನು, ಸೀತಯಾಸಹ-ಸೀತಾದೇವಿಯೊಡಗೂಡ. ಪರಿಸೃತ್ಯ-ಹಿಂತಿರುಗಿ, ಪುನರೇವ-ಮತ್ತೂ. ಸುತೀಕ್ಷ್ಣಸ್ಯ-ಸುತೀಕ್ಷ್ಣ ಋಷಿಯ, ಆಶ್ರಮಂ-ಪರ್ಣಶಾಲೆಯನ್ನು ಕುರಿತು ಆಜಗಾಮ-ಬಂದನು ॥೨೮॥ ಅರಿಂದಮಃ-ಶತ್ರುಸಂಹಾರಕನಾದ, ಸರಾಮಃ-ಆ ಶ್ರೀರಾಮನು, ತಮಾಶ್ರಮಂ-ಆ ಸುತೀಕ್ಷ್ಣಾಶ್ರಮವಂ ಕುರಿತು, ಆಸಾದ್ಯ-ಬಂದು, ಮುನಿಭಿಃ-ಋಷಿಗಳಿಂದ, ಪ್ರತಿಪೂಜಿತಃ-ಮತ್ತು ಪೂಜಿಸಲ್ಪಟ್ಟವನಾಗಿ, ತತ್ರಾಪಿ-ಆ ಸುತೀಕ್ಷ್ಣಾಶ್ರಮದಲ್ಲಿಯೂ, ಕಂಚಿತ್ಕಾಲಂ-ಕೆಲಕಾಲವು, ನ್ಯವಸತ್-ಇದ್ದನು ॥೨೯॥ ಅಥ-ಬಳಿಕ, ಆಶ್ರಮಸ್ಥಃ-ಆಶ್ರಮವಾಸಿಯಾದ. ಸಕಾಕುತ್ಸ್ಥಃ-ಆ ಶ್ರೀರಾಮನು, ಕದಾಚಿತ್-ಒಂದಾನೊಂದುಕಾಲದಲ್ಲಿ, ವಿನಯಾತ್-ನಮ್ರತೆಯುದೆಶೆಯಿಂದ, ತಂಮಹಾಮುನಿಂ-ಆ ಮಹರ್ಷಿಯಾದ, ಸುತೀಕ್ಷ್ಣಂ-ಸುತೀಕ್ಷ್ಣ ಋಷಿಯನ್ನು, ಉಪಾಸೀನಃ-ಸೇವಿಸುತ್ತಿರುವನಾಗಿ, ಇದಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ॥೩೦॥ ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಮುನಿಸತ್ತಮಃ-ಋಷಿಶ್ರೇಷ್ಠನಾದ, ಅಗಸ್ತ್ಯಃ-ಅಗಸ್ತ್ಯಋಷಿಯು, ಅಸ್ಮಿನ್ನರಣ್ಯೇ-ಈ ಅರಣ್ಯದಲ್ಲಿ, ವಸತೀತಿ-ಇದ್ದಾನೆಂದು, ಮಯಾ-ನನ್ನಿಂದ, ನಿತ್ಯಂ-ನಿರಂತರವೂ, ಕಥಾಃ-ಪ್ರಸ್ತಾಪಗಳನ್ನು. ಕಥಯತಾಂ-ಹೇಳುತ್ತಿರುವರದೆಶೆಯಿಂದ, ಶ್ರುತಂ-ಕೇಳಲ್ಪಟ್ಟಿತು ॥೩೧॥ ಅಸ್ಯವನಸ್ಯ-ಈ ವನವು, ಮಹತ್ತ್ವಯಾ-ವಿಸ್ತಾರವಾದ್ದರಿಂದ, ತಂದೇಶಂ-ಆ ಪ್ರದೇಶವನ್ನು, ನಜಾನಾಮಿ-ಅರಿಯೆನು, ಧೀಮತಃ-ಜ್ಞಾನಿಯಾದ, ತಸ್ಯಮಹರ್ಷೇಃ-ಆ ಅಗಸ್ತ್ಯಮಹಾಮುನಿಯು, ಪುಣ್ಯಂ-ಪುಣ್ಯಾಕರವಾದ, ಇದಮಾಶ್ರಮಂ-ಈ ಆಶ್ರಮವು, ಕುತ್ರ-ಎಲ್ಲಿಧೆಯೋ ॥೩೨॥ ತತ್ರಭವತಃ-ಪೂಜ್ಯನಾದ ನಿನ್ನ ಪ್ರಸಾದಾತ್-ಅನುಗ್ರಹದದೆಶೆಯಿಂದ, ಸೀತಯಾಸಹ-ಸೀತಾದೇವಿಯೊಡಗೂಡ, ಸಾನಂದಃ-ಸಂತೋಷದಿಂದೊಡಗೂಡಿ, ಅಗಸ್ತ್ಯಂ-ಅಗಸ್ತ್ಯಋಷಿಯಂಕುರಿತು, ಅಭಿವಾದಯಿತುಂ-ನಮುಸ್ಕರಿಸುವದಕ್ಕೋಸ್ಕರ, ಅಭಿಗಚ್ಛೇಯಂ-ಹೋಗುವೆನು ॥೩೩॥ ಅಹಂ-ನಾನು, ಮುನಿವರಂ-ಋಷಿಶ್ರೇಷ್ಠನಾದ, ತಂ-ಆ ಅಗಸ್ತ್ಯಋಷಿಯನ್ನು, ಸ್ವಯಂ-ನಾನೇ ಶುಶ್ರೂಷೆಯ, ಮಿತಿಯತ್-ಸೇವಿಸುವೆನೆಂಬುವದು ಯಾವದುಂಟೋ, ಮಹಾನ್-ದೊಡ್ಡದಾದ, ಏಷಮನೋರಥಃ-ಈ ಮನೋರಥವು, ಮೇ-ನನ್ನ, ಹೃದಿ-ಹೃದಯದಲ್ಲಿ, ಪರಿವರ್ತತೇ-ಇಧೆ ॥೩೪॥ ಇತಿ-ಈಪರಿಯಾಗಿ, ಧರ್ಮಾತ್ಮನಃ-ಧರ್ಮಿಷ್ಠನಾದ, ರಾಮಸ್ಯ-ಶ್ರೀರಾಮನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಸಸುತೀಕ್ಷ್ಣೋಮುನಿಃ-ಆ ಸುತೀಕ್ಷ್ಣ ಋಷಿಯು, ಪ್ರೀತಃ-ಸಂತೋಷ

---

ಹೆಚ್ಚಾಗಿಯೂ ಮೂರುತಿಂಗಳು ಯೆಂಟುತಿಂಗಳು ಈ ಪ್ರಕಾರ ಸುಖದಿಂದಿದ್ದನು ॥೨೬॥ ಆಪ್ರಕಾರ ಶ್ರೀರಾಮನು ಮುನಿಗಳಾಶ್ರಮಗಳಲ್ಲಿರುತ್ತಾ ಕಳತ್ರಾನುಕೂಲ್ಯದಿಂದ ವಿಹರಿಸುತ್ತಿರಲು ಹತ್ತುವರುಷಗಳು ಕಳದವು ॥೨೭॥ ಧರ್ಮಜ್ಞನಾದ ಶತೃನಾಶಕನಾದ ಶ್ರೀರಾಮನುಸೀತಾದೇವಿಯೊಡನೆ ಹಿಂತಿರುಗಿ ಪುನಃ ಸುತೀಕ್ಷ್ಣಮುನಿಯಾಶ್ರಮವಂ ಕುರಿತು ಬಂದು, ಆ ಸುತೀಕ್ಷ್ಣಮುನಿಯಿಂದ ಪುನಃ ಪೂಜಿಸಲ್ಪಟ್ಟು ಅಲ್ಲಿ ಕೆಲವುಕಾಲ ಇದ್ದವನಾದನು ॥೨೯॥ ಬಳಿಕ ಆಶ್ರಮವಾಸಿಯಾದಶ್ರೀರಾಮನು ಕದಾಚಿತ್ ನಮ್ರತೆಯಿಂದಆಸುತೀಕ್ಷ್ಣಮುನಿಯಂ ಸೇವಿಸುತ್ತಾ ಇಂತೆಂದನು,—ಎಲೈ ಪೂಜ್ಯನೇ! ಷಡ್ಗುಣೈಶ್ವರ್ಯಸಂಪನ್ನನಾದ ಋಷಿಶ್ರೇಷ್ಠನಾದ ಅಗಸ್ತ್ಯಮುನಿಯುಈ ವನದಲ್ಲಿಧಾನೆಂದು ಪ್ರಸ್ತಾಪಗಳಂ ಪೇಳುವವರಿಂದ ಕೇಳಿದೆನು ॥೩೧॥ ಈ ವನವುಬಹುದೊಡ್ಡದಾದ್ದರಿಂದ ಆ ಸ್ಥಳವನ್ನರಿಯೆನು; ಜ್ಞಾನಿಯಾದ ಆ ಮಹರ್ಷಿಯ ಆಶ್ರಮವೆಲ್ಲಿಧೆಯೋ (ಪೇಳು) ಪೂಜ್ಯನಾದ ನಿನ್ನನುಗ್ರಹದಿಂದ ಸೀತಾಸಹಿತನಾಗಿ ಸಂತೋಷಗೊಂಡು ಆ ಅಗಸ್ತ್ಯಋಷಿಯಂ ಕುರಿತು ನಮಸ್ಕರಿಸಲುಹೋಗುವೆನು ॥೩೩॥ ಇದು ನನ್ನ ಮನಸ್ಸಿಗೆ ಬಹಳ ಇಷ್ಟವಾಗಿಧೆಯೆಂದು ಧರ್ಮಿಷ್ಠನಾದ ಶ್ರೀರಾಮನು ನುಡಿದ ವಾಕ್ಯವಂ ಕೇಳಿ ಆ ಸುತೀಕ್ಷ್ಣಮುನಿಯು ಸಂತೋಷಗೊಂಡವನಾಗಿ ದಶರಥಪುತ್ರನಾದ ಶ್ರೀರಾಮನಂ ಕುರಿ

ತೇ । ಯದ್ಯಹಂತಂಮುನಿವರಂಶುಶ್ರೂಷೇಯಮಪಿಸ್ವಯಂ ।೩೫॥ ಇತಿರಾಮಸ್ಯಸಮುನಿಶ್ಶ್ರುತ್ವಾಧರ್ಮಾತ್ಮ
ನೋವಚಃ ॥ ಸುತೀಕ್ಷ್ಣಃಪ್ರತ್ಯುವಾಚೇದಂಪ್ರೀತೋದಶರಥಾತ್ಮಜಂ ।೩೬॥ ಅಹಮಪ್ಯೇತದೇವತ್ವಾಂವಕ್ತುಕಾಮಸ್ಸಲ
ಕ್ಷ್ಮಣಂ । ಅಗಸ್ತ್ಯಮಭಿಗಚ್ಛೇತಿಸೀತಯಾಸಹರಾಘವ । ದಿಷ್ಟ್ಯಾತ್ವಿದಾನೀಮರ್ಥೇಸ್ಮಿನ್ಸ್ವಯಮೇವಬ್ರವೀಷಿಮಾಂ ।
ಅಹಮಾಖ್ಯಾಮಿತೇವತ್ಸಯತ್ರಾಗಸ್ತ್ಯೋಮಹಾಮುನಿಃ ।೩೭॥ ಯೋಜನಾನ್ಯಾಶ್ರಮಾದಸ್ಮಾತ್ತಥಾಚತ್ವಾರಿವೈತ
ತಃ । ದಕ್ಷಿಣೇನಮಹಾಞ್ಶ್ರೀಮಾನಗಸ್ತ್ಯಭ್ರಾತುರಾಶ್ರಮಃ ॥೩೮॥ ಸ್ಥಲೀಪ್ರಾಯೇವನೋದ್ದೇಶೇಪಿಪ್ಪಲೀವನಶೋಭಿತೇ ।
ಬಹುಪುಷ್ಪಫಲೇರಮ್ಯೇನಾನಾಶಕುನನಾದಿತೇ । ಪದ್ಮಿನ್ಯೋವಿವಿಧಾಸ್ತತ್ರಪ್ರಸನ್ನಸಲಿಲಾಶ್ಶಿವಾಃ । ಹಂಸಕಾರಂಡವಾ
ಕೀರ್ಣಾಶ್ಚಕ್ರವಾಕೋಪಶೋಭಿತಾಃ ತತ್ರೈಕಾಂರಜನೀಂವ್ಯುಷ್ಯಪ್ರಭಾತೇರಾಮಗಮ್ಯತಾಂ । ದಕ್ಷಿಣಾಂದಿಶಮಾ
ಸ್ಥಾಯವನಷಂಡಸ್ಯಪಾರ್ಶ್ವತಃ । ತತ್ರಾಗಸ್ತ್ಯಾಶ್ರಮಪದಂಗತ್ವಾಯೋಜನಮಂತರಂ ॥ ೪೦॥
ರಮಣೀಯೇವನೋದ್ದೇಶೇಬಹುಪಾದಪಸಂವೃತೇ । ರಂಸ್ಯತೇತತ್ರವೈದೇಹೀಲಕ್ಷ್ಮಣಶ್ಚಸಹತ್ವಯಾ ।೪೧।

---

ಗೊಂಡವನಾಗಿ, ದಶರಥಾತ್ಮಜಂ-ಶ್ರೀರಾಮನಂಕುರಿತು, ಇದಂ-ಈ ಮಾತನ್ನು. ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೩೬॥ ॥ ಹೇರಾಘವ-ಎಲೈ ಶ್ರೀರಾಮನೇ, ಅಹಮಪಿ-ನಾನೂ, ಸೀತಯಾಸಹ-ಸೀತಾದೇವಿಯೊಡಗೂಡ, ಸಲಕ್ಷ್ಮಣಂ-ಲಕ್ಷ್ಮಣನಸಹಿತವಾಗಿರುವ, ತ್ವಾಂ-ನಿನ್ನನ್ನುಕುರಿತು, ಅಗಸ್ತ್ಯಂ-ಅಗಸ್ತ್ಯಋಷಿಯನ್ನುಕುರಿತು, ಅಭಿಗಚ್ಛೇತಿ-ಹೋಗೆಂದು. ಏತದೇವ-ಈ ಮಾತನ್ನೇ, ವಕ್ತುಕಾಮಃ-ಹೇಳಲಿಚ್ಛಿಸಿದ್ದ, ಸ್ವಯಮೇವ-ನೀನೇ, ಅಸ್ಮಿನ್ನರ್ಥೇ-ಈ ಅರ್ಥದಲ್ಲಿ, ಇದಾನೀಂ-ಈಗ, ದಿಷ್ಟ್ಯಾ-ದೈವಾಧೀನದಿಂದ, ಮಾಂ-ನನ್ನನ್ನುಕುರಿತು, ಬ್ರವೀಷಿ-ಕೇಳಿದ್ದಿ, ಹೇವತ್ಸ-ಎಲೈ ಬಾಲಕನಾದ ಶ್ರೀರಾಮನೇ, ಅಹಂ-ನಾನು. ಯತ್ರ-ಯಾವ ಆಶ್ರಮದಲ್ಲಿ, ಮಹಾಮುನಿಃ-ಮಹರ್ಷಿಯಾದ, ಅಗಸ್ತ್ಯಃ-ಅಗಸ್ತ್ಯಋಷಿಯು ಅಸ್ತಿ-ಇರುವನೆಯೋ, ತತ್-ಆ ಆಶ್ರಮವನ್ನು, ತೇ-ನಿನಗೆ, ಅಹಂ-ನಾನು, ಆಖ್ಯಾಮಿ-ಹೇಳುತ್ತೇನೆ ॥೩೭॥ ॥ ಅಸ್ಮಾದಾಶ್ರಮಾತ್-ಈ ಆಶ್ರಮಕ್ಕಿಂತಲೂ, ಚತ್ವಾರಿಯೋಜನಾನಿ-ನಾಲ್ಕು ಗಾವುದಗಳು. ತಥಾ-ಹಾಗೆಯೇ, ತತಃ-ಬಳಿಕ, ದಕ್ಷಿಣೇನ-ದಕ್ಷಿಣಭಾಗದಲ್ಲಿ, ಮಹಾನ್-ದೊಡ್ಡದಾದ, ಶ್ರೀಮಾನ್-ಸಂಪದ್ಯುಕ್ತವಾದ, ಅಗಸ್ತ್ಯಭ್ರಾತುಃ-ಅಗಸ್ತ್ಯಋಷಿಯ ಅಣ್ಣಂದರ, ಆಶ್ರಮಃ-ಆಶ್ರಮವು ॥೩೮॥ ॥ ಸ್ಥಲೀಪ್ರಾಯೇ-ಸ್ಥಲವೇ ಪ್ರಚುರವಾಗಳ್ಳ, ಪಿಪ್ಪಲೀವನಶೋಭಿತೇ-ಪಿಪ್ಪಲೀಗಿಡಗಳ ವನದಿಂದಹೊಳೆಯುತ್ತಿರುವ, ಬಹುಪುಷ್ಪಫಲೇ-ಅನೇಕಹುವ್ವುಗಳೂ ಫಲಗಳೂಉಳ್ಳ, ರಮ್ಯೇ-ಮನೋಹರವಾದ, ನಾನಾಶಕುನನಾದಿತೇ-ಅನೇಕಪಕ್ಷಿಗಳಿಂದ ಧ್ವನಿಗೊಳಿಸುತ್ತಿರುವ, ತತ್ರವನೋದ್ದೇಶೇ-ಆ ವನಪ್ರದೇಶದಲ್ಲಿ. ವಿವಿಧಾಃ-ನಾನಾಬಗೆಗಳಾದ, ಪ್ರಸನ್ನಸಲಿಲಾಃ-ನಿರ್ಮಲವಾದ ಉದಕಗಳುಳ್ಳ, ಶಿವಾಃ-ಶುಭಕರವಾದ, ಹಂಸಕಾರಂಡವಾಕೀರ್ಣಾಃ-ಹಂಸಪಕ್ಷಿಗಳಿಂದಲೂ ನೀರುಕೋಳಿಗಳಿಂದಲೂ ತುಂಬಿರುವ, ಚಕ್ರವಾಕೋಪಶೋಭಿತಾಃ-ಚಕ್ರವಾಕಪಕ್ಷಿಗಳಿಂದ ಹೊಳೆಯುತ್ತಿರುವ, ಪದ್ಮಿನ್ಯಃ-ಕಮಲಸರೋವರಗಳು, ಸಂತಿ-ಇವೆ, ಹೇರಾಮ-ಎಲೈ ಶ್ರೀರಾಮನೇ, ತತ್ರ-ಅಗಸ್ತ್ಯಭ್ರಾತನಾಶ್ರಮದಲ್ಲಿ, ಏಕಾಂರಜನೀಂ-ಬಂದುರಾತ್ರಿಯು, ವ್ಯುಷ್ಯ-ಇದ್ದು, ಪ್ರಭಾತೇ-ಪ್ರಾತಃಕಾಲದಲ್ಲಿ, ವನಷಂಡಸ್ಯ-ವೃಕ್ಷಗಳ ತಂಡಕ್ಕೆ, ಪಾರ್ಶ್ವತಃ-ಪಾರ್ಶ್ವಪ್ರದೇಶದಲ್ಲಿ. ದಕ್ಷಿಣಾಂದಿಶಂ-ದಕ್ಷಿಣದಿಕ್ಕನ್ನುಕುರಿತು, ಆಸ್ಥಾಯ-ಅನುಸರಿಸಿ, ಗಮ್ಯತಾಂ-ಹೋಗಲ್ಪಡಲಿ, ತತ್ರ-ಆ ಸ್ಥಳದಲ್ಲಿ, ಯೋಜನಮಂತರಂ-ಮಧ್ಯದಲ್ಲಿ ಬಂದು ಯೋಜನವಿಸ್ತಾರವನ್ನು, ಗತ್ವಾ-ಹೋಗಿ, ಅಗಸ್ತ್ಯಾಶ್ರಮಪದಂ-ಅಗಸ್ತ್ಯಋಷಿಯ ಆಶ್ರಮಪ್ರದೇಶವು, ಗಮ್ಯತಾಂ-ಹೊಂದಲ್ಪಡಲಿ ॥೪೦॥ ಬಹುಪಾದಪಸಂವೃತೇ-ಅನೇಕ ವೃಕ್ಷಗಳಿಂದ ಕೂಡಿಕೊಂಡಿರುವ, ರಮಣೀಯೇ-ಮನೋಹರಮಾದ, ತತ್ರವನೋದ್ದೇಶೇ-ಆ ವನಪ್ರದೇಶದಲ್ಲಿ, ವೈದೇಹೀ-ಸೀತಾದೇವಿಯು, ಲಕ್ಷ್ಮಣಶ್ಚ-ಲಕ್ಷ್ಮಣನೂ, ತ್ವಯಾಸಹ-ನಿನ್ನೊಡಗೂಡಿ, ರಂಸ್ಯಸೇ-

---

ತು ಇಂತೆಂದನು,—।೩೫॥ ಎಲೈ ಶ್ರೀರಾಮನೇ! ಸೀತಾಲಕ್ಷ್ಮಣರಿಂದೊಡಗೂಡಿ ನೀನು ಅಗಸ್ತ್ಯಋಷಿಯ ಸನ್ನಿಧಾನಕ್ಕೆ ಹೋಗೆಂದು ನಾನೇ ಹೇಳಲಿಚ್ಛೈಸಿದ್ದೆನು, ಈಗ ದೈವಾಧೀನದಿಂದ ನಿಂನ ಮುಖದಿಂದಲೇ ಆ ಮಾತು ಹೊರಟಿತು, ಕೇಳೆಲೈ ಬಾಲಕನೇ! ಆ ಮಹಾಮುನಿಯಿರುವ ಆಶ್ರಮವನ್ನು ಹೇಳುವೆನು ।೩೭॥ ಇಲ್ಲಿಗೆ ನಾಲ್ಕುಯೋಜನಂಗಳ ದೂರದಲ್ಲಿ ಆ ಮಹಾತ್ಮನ ಅನುಜನ ಆಶ್ರಮವಿರುವದು, ಬಹು ವಿಸ್ತಾರವಾಗಿಯೂ, ಹಿಪ್ಪಲೀಗಿಡಗಳಿಂದ ಬೆಳಗುವದಾಗಿಯೂ, ಅನೇಕವಿಧವಾದ ಪುಷ್ಪಗಳೂ ಫಲಗಳೂ ಉಳ್ಳದ್ದಾಗಿಯೂ, ಮನೋಹರವಾಗಿಯೂ, ನಾನಾ ಬಗೆಗಳಾದ ಪಕ್ಷಿಗಳಿಂದ ಶಬ್ದಾಯಮಾನವಾಗಿಯೂ ಇರುವ ಆವನದ ಪ್ರದೇಶದಲ್ಲಿ, ನಾನಾ ವಿಧವಾದ ನಿರ್ಮಲೋದಕವುಳ್ಳ, ಶುಭಕರವಾಗಿರುವ ಮತ್ತು ಹಂಸಪಕ್ಷಿಗಳಿಂದಲೂ, ನೀರುಕೋಳಿಗಳಿಂದಲೂ, ಚಕ್ರವಾಕಪಕ್ಷಿಗಳಿಂದಲೂ ಹೊಳೆವ ಕಮಲಸರೋವರಗಳಿವೆ, ಆ ಅಗಸ್ತ್ಯಾನುಜನ ಆಶ್ರಮದಲ್ಲಿ ಒಂದುರಾತ್ರಿಯು ಇಳಿದುಕೊಂಡು ಪ್ರಾತಃಕಾಲದಲ್ಲಿ ದಕ್ಷಿಣದಿಕ್ಕನ್ನನುಸರಿಸಿ ವೃಕ್ಷಗಳ ಪಾರ್ಶ್ವದಲ್ಲಿ ವೊಂದು ಯೋಜನ ದೂರವು ಗಮಿಸಿದರೆ ಅಗಸ್ತ್ಯಋಷಿಯ ಆಶ್ರಮವಂ ಕಾಣುವಿ, ಅನೇಕವೃಕ್ಷಂಗಳಿಂದ ಕೂಡಿಕೊಂಡಿರುವ ಆ ವನಪ್ರದೇಶದಲ್ಲಿ ಸೀತಾದೇವಿಯೂ, ಲಕ್ಷ್ಮಣನೂ, ನೀನೂ ಸಹಾ ಸಂತೋಷಿಸುವಿರಿ ।೪೧। ಯಾಕಂದರೆ,—೩

ಸಹಿ ರಮ್ಯೋ ವನೋದ್ದೇಶೋ ಬಹುಪಾದಪಸಂಕುಲಃ । ಯದಿ ಬುದ್ಧಿಃ ಕೃತಾ ದ್ರಷ್ಟುಮಗಸ್ತ್ಯಂ ತಂ ಮಹಾಮುನಿಂ ॥ ಅದ್ಯೈವ ಗಮನೇ ಬುದ್ಧಿಂ ರೋಚಯಸ್ವ ಮಹಾಯಶಃ ॥೪೪॥ ಇತಿ ರಾಮೋ ಮುನೇಶ್ಶ್ರುತ್ವಾ ಸಹ ಭ್ರಾತ್ರಾಭಿವಾದ್ಯ ಚ । ಪ್ರತಸ್ಥೇಽಗಸ್ತ್ಯಮುದ್ದಿಶ್ಯ ಸಾನುಜಸ್ಸೀತಯಾ ಸಹ ॥೪೫॥ ಪಶ್ಯನ್ವನಾನಿ ರಮ್ಯಾಣಿ ಪರ್ವತಾಂಶ್ಚಾಭ್ರಸನ್ನಿಭಾನ್ । ಸರಾಂಸಿ ಸರಿತಶ್ಚೈವ ಪಥಿ ಮಾರ್ಗವಶಾನುಗಾಃ । ಸುತೀಕ್ಷ್ಣೇನೋಪದಿಷ್ಟೇನ ಗತ್ವಾ ತೇನ ಪಥಾ ಸುಖಂ । ಇದಂ ಪರಮಸಂಹೃಷ್ಟೋ ವಾಕ್ಯಂ ಲಕ್ಷ್ಮಣಮಬ್ರವೀತ್ ॥೪೭॥ ಏತದೇವಾಶ್ರಮಪದಂ ನೂನಂ ತಸ್ಯ ಮಹಾತ್ಮನಃ । ಅಗಸ್ತ್ಯಸ್ಯ ಮುನೇರ್ಭ್ರಾತುರ್ದೃಶ್ಯತೇ ಪುಣ್ಯಕರ್ಮಣಃ ॥೪೮॥ ಯಥಾ ಹೀಮೇ ವನಸ್ಯಾಸ್ಯ ಜ್ಞಾತಾಃ ಪಥಿ ಸಹಸ್ರಶಃ । ಸನ್ನತಾಃ ಫಲಭಾರೇಣ ಪುಷ್ಪಭಾರೇಣ ಚ ದ್ರುಮಾಃ ॥೪೯॥ ಪಿಪ್ಪಲೀನಾಂ ಚ ಪಕ್ವಾನಾಂ ವನಾದಸ್ಮಾದುಪಾಗತಃ । ಗಂಧೋಯಂ ಪವನೋತ್ಕ್ಷಿಪ್ತಸ್ಸಹಸಾ ಕಟುಕೋದಯಃ ॥೫೦॥ ತತ್ರ ತತ್ರ ಚ ದೃಶ್ಯಂತೇ ಸಂಕ್ಷಿಪ್ತಾಃ ಕಾಷ್ಠಸಂಚಯಾಃ । ಲೂನಾಶ್ಚ ಪಥಿ ದೃಶ್ಯಂತೇ ದರ್ಭಾ ವೈಡೂರ್ಯವರ್ಚಸಃ ॥೫೧॥ ಏತಚ್ಚ ವನಮಧ್ಯಸ್ಥಂ ಕೃಷ್ಣಾಭ್ರಶಿಖರೋಪಮಂ ।

---

ವಿಹರಿಸುತ್ತಾನೆ ॥೪೩॥ ಹಿ-ಯಾವಕಾರಣದದೆಶೆಯಿಂದ, ಬಹುಪಾದಪಸಂಕುಲಃ-ಬಹುಗಿಡಗಳಿಂ ವ್ಯಾಪ್ತವಾದ, ವನೋದ್ದೇಶಃ-ಆ ವನಪ್ರದೇಶವು, ರಮ್ಯಃ-ಮನೋಹರವಾದುದೋ, ತತಃ-ಆಕಾರಣದದೆಶೆಯಿಂದ. ಮಹಾಮುನಿಂ-ಮಹರ್ಷಿಯಾದ, ತಮಗಸ್ತ್ಯಂ-ಆ ಅಗಸ್ತ್ಯಋಷಿಯನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಬುದ್ಧಿಃ-ಮತಿಯು, ಕೃತಾಯದಿ-ಮಾಡಿದ್ದನೇ ಆದರೆ, ಹೇಮಹಾಯಶಃ-ಎಲೆ ಮಹಾಕೀರ್ತಿವಂತನೇ, ಅದ್ಯೈವ-ಈಗಲೇ, ಗಮನೇ-ಪ್ರಯಾಣದಲ್ಲಿ, ಬುದ್ಧಿಂ-ಬುದ್ಧಿಯನ್ನು, ರೋಚಯಸ್ವ-ರುಚಿಸಲ್ಪಡಿಸು ॥೪೪॥ ರಾಮಃ-ಶ್ರೀರಾಮನು, ಮುನೇಃ-ಸುತೀಕ್ಷ್ಣ ಋಷಿಯ, ಇತಿ-ಈಪರಿಯಾದ ಮಾತನ್ನು, ಶ್ರುತ್ವಾ-ಕೇಳಿ, ಸಹಭ್ರಾತ್ರಾ-ತಮ್ಮನಿಂದೊಡಗೂಡಿದವನಾಗಿ, ಅಭಿವಾದ್ಯಚ-ನಮಸ್ಕಾರವನ್ನೂ ಮಾಡಿ, ಸೀತಯಾಸಹ-ಸೀತಾದೇವಿಯೊಡನೆ, ಸಾನುಜಃ-ತಮ್ಮನಿಂದೊಡಗೂಡಿದವನಾಗಿ, ಅಗಸ್ತ್ಯಂ-ಅಗಸ್ತ್ಯಋಷಿಯನ್ನು. ಉದ್ದಿಶ್ಯ-ಉದ್ದೇಶಮಾಡಿ, ಪ್ರತಸ್ಥೇ-ಹೊರಟನು ॥೪೫॥ ಪಥಿ-ಮಾರ್ಗದಲ್ಲಿ. ರಮ್ಯಾಣಿ-ಮನಸ್ಸಿಗಿಂಪಾಗಿರುವ, ವನಾನಿ-ವನಗಳನ್ನು, ಅಭ್ರಸನ್ನಿಭಾನ್-ಮೇಘಕ್ಕೆ ಸಮಾನವಾದ, ಪರ್ವತಾಂಶ್ಚ-ಬೆಟ್ಟಗಳನ್ನು, ಸರಾಂಸಿ-ಸರೋವರಗಳನ್ನೂ, ಮಾರ್ಗವಶಾನುಗಾಃ-ಮಾರ್ಗದಲ್ಲಿ ಸ್ವಾಧೀನವಾಗಿ ಪ್ರವಹಿಸುತ್ತಿರುವ ಸರಿತಶ್ಚ-ನದಿಗಳನ್ನೂ. ಪಶ್ಯನ್-ನೋಡುತ್ತಿರುವನಾಗಿ, ಸುತೀಕ್ಷ್ಣೇನ-ಸುತೀಕ್ಷ್ಣಋಷಿಯಿಂದ. ಉಪದಿಷ್ಟೇನ-ತೋರಿಸಿ ಪೇಳಲ್ಪಟ್ಟ ತೇನಪಥಾ-ಅದೇ ಮಾರ್ಗದಿಂದ, ಸುಖಂ-ಸುಖವಾಗಿ, ಗತ್ವಾ-ಹೋಗಿ, ಪರಮಸಂಹೃಷ್ಟಃ-ಬಹಳ ಸಂತೋಷಗೊಂಡವನಾಗಿ, ಲಕ್ಷ್ಮಣಂ-ಲಕ್ಷ್ಮಣನಂಕುರಿತು ಇದಂವಾಕ್ಯಂ-ಈ ಮಾತನ್ನು, ಅಬ್ರವೀತ್-ನುಡಿದನು ॥೪೭॥ ಇದಮೇವ-ಇದೇ, ಮಹಾತ್ಮನಃ-ಮಹಾಮನಸ್ಸುಳ್ಳವನಾದ, ಪುಣ್ಯಕರ್ಮಣಃ-ಪುಣ್ಯಕರವಾದ ಕರ್ಮಗಳುಳ್ಳ, ಅಗಸ್ತ್ಯಮುನೇಃ-ಅಗಸ್ತ್ಯಋಷಿಯ, ಭ್ರಾತುಃ-ಅಣ್ಣನಾದ, ತಸ್ಯ-ಆ ಅಗಸ್ತ್ಯಭ್ರಾತನ, ಆಶ್ರಮಪದಂ-ಆಶ್ರಮಪ್ರದೇಶವು, ನೂನಂ-ನಿಶ್ಚಯವು, ದೃಶ್ಯತೇ-ಕಾಣಲ್ಪಡುತ್ತದೆ ॥೪೮॥ ಏನನ್ನಿಂದ. ಅಸ್ಯವನಸ್ಯ-ಈ ವನಸಂಬಂಧವಾದ. ಪಥಿ-ಮಾರ್ಗದಲ್ಲಿ, ಫಲಭಾರೇಣ-ಫಲಗಳ ಭಾರದಿಂದಲೂ, ಪುಷ್ಪಭಾರೇಣಚ-ಹೂವುಗಳ ಭಾರದಿಂದಲೂ, ಸನ್ನತಾಃ-ಬೊಗ್ಗಿರುವ. ಸಹಸ್ರಶಃ-ಸಾವಿರಾರಾದ, ದ್ರುಮಾಃ-ಗಿಡಗಳು, ಯಥಾ-ಹ್ಯಾಗೆ, ಜ್ಞಾತಾಹಿ-ತಿಳಿಯಲ್ಪಟ್ಟವೋ ॥೪೯॥ ಪಕ್ವಾನಾಂ-ಪಕ್ವವಾದ, ಪಿಪ್ಪಲೀನಾಂ-ಪಿಪ್ಪಲೀಗಿಡಗಳ, ಪವನೋತ್ಕ್ಷಿಪ್ತಃ-ಗಾಳಿಯಿಂದ ಬಾಸಲ್ಪಟ್ಟದ್ದಾಗಿ, ಕಟುಕೋದಯಃ-ಕಟುರಸವೇ ಅಭಿವ್ಯಕ್ತಿಯುಳ್ಳ, ಅಯಂಗಂಧಃ-ಈ ವಾಸನೆಯು, ಸಹಸಾ-ಜಾಗ್ರತೆಯಾಗಿ, ಅಸ್ಮಾದ್ವನಾತ್-ಈ ವನದದೆಶೆಯಿಂದ, ಉಪಾಗತಃ-ಬರುತ್ತದೆ, ತತ್ರತತ್ರ-ಆಯಾಯ ಸ್ಥಳದಲ್ಲಿ. ಸಂಕ್ಷಿಪ್ತಾಃ-ಸಂಪಾದಿಸಲ್ಪಟ್ಟ, ಕಾಷ್ಠಸಂಚಯಾಃ-ಕಟ್ಟಿಗೆಯ ಹೊ

---

ಪ್ರದೇಶವು ಅನೇಕವೃಕ್ಷಗಳಿಂದ ವ್ಯಾಪ್ತವಾಗಿ ಬಹು ಮನೋಹರವಾಗಿರುವದು. ನೀನು ಆ ಮಹರ್ಷಿಯಾದ ಅಗಸ್ತ್ಯಮುನಿಯಂ ಕಾಣಲಿಚ್ಛಿಸಿದವನಾದರೆ ಈಗಲೇ ಪ್ರಯಾಣದವಿಷಯದಲ್ಲಿ ಮತಿಯಂ ಮಾಡುವನಾಗೆಂದು ನುಡಿಯುತ್ತಿರುವ ಆ ಸುತೀಕ್ಷ್ಣಮುನಿಯ ವಾಕ್ಯವಂ ಕೇಳಿ, ರಘುನಂದನನು ಸೀತಾಲಕ್ಷ್ಮಣರಿಂ ದೊಡಗೂಡಿ ಆ ಮಹರ್ಷಿಗೆ ವಂದನವಂ ಗೈದು ಅಗಸ್ತ್ಯಮುನಿಯ ದರ್ಶನಾರ್ಥವಾಗಿ ಪ್ರಯಾಣ ಮಾಡಿದನದೆಂತೆನೆ,—।೪೫ ಲಕ್ಷ್ಮಣಾಗ್ರಜನಾದ ಶ್ರೀರಾಮನು ದಾರಿಯುಲ್ಲಿ ಮನೋಹರವಾದ ವನಗಳನ್ನೂ, ಮೇಘಸದೃಶವಾದ ಪರ್ವತಗಳನ್ನೂ ಸರೋವರಗಳನ್ನೂ, ನದಿಗಳನ್ನೂ, ನೋಡುವನಾಗಿ ಆ ಸುತೀಕ್ಷ್ಣಮುನಿಯಿಂ ದುಪದೇಶಿಸಲ್ಪಟ್ಟ ಮಾರ್ಗದಲ್ಲಿಯೇ, ಸುಖವಾಗಿ ಪೋಗುವನಾಗಿ ಲಕ್ಷ್ಮಣನಂಕುರಿತು ಇಂತೆಂದನು;—।೪೭। ಎಲೈ ಲಕ್ಷ್ಮಣನೇ! ಮಹಾತ್ಮನಾದ ಪುಣ್ಯಕಾರಿಯಾದ ಅಗಸ್ತ್ಯಋಷಿಯ ತಮ್ಮನ ಆಶ್ರಮವು ಈ ಕಾಣುವದೇ ಇರಬಹುದುಂ ಏಕೆಂದರೆ,— ಫಲಭರಿತವಾದ ಪುಷ್ಪಗಳಿಂದ ಸಮೃದ್ಧವಾದ ಅನೇಕವೃಕ್ಷಂಗಳು ಕಾಣುತ್ತಲಿವೆಯಷ್ಟೆ, ಪಕ್ವವಾದ ಹಿಪ್ಪಲೀಗಿಡಗಳ ವನದವ್ಯಾಲೆ ಬೀಸುವ ಗಾಳಿಯಿಂದ ತರಲ್ಪಟ್ಟ ಕಟುರಸವೇ ಪ್ರಧಾನವಾಗುಳ್ಳ ಈ ವಾಸನೆಯು ಇತ್ತಕಡೆ ಬರುವದು, ಅಲ್ಲಲ್ಲಿ ಕಟ್ಟಿಗೆ ಹೊರೆಗಳು ಕಾಣಲ್ಪಡುವವು, ವೈಡೂರ್ಯಮಣಿಗಳಂತೆ ಹೊಳೆಯುವ ಕುಶಂಗಳು ಕ

ಪಾವಕಸ್ಯಾಶ್ರಮಸ್ಥಸ್ಯ ಧೂಮಾಗ್ರಂ ಸಂಪ್ರದೃಶ್ಯತೇ ॥೫೦॥ ವಿವಿಕ್ತೇಷು ಚ ತೀರ್ಥೇಷು ಕೃತಸ್ನಾನಾ ದ್ವಿಜಾತಯಃ । ಪು
ಷ್ಪೋಪಹಾರಂ ಕುರ್ವಂತಿ ಕುಸುಮೈಃ ಸ್ವಯಮಾರ್ಜಿತೈಃ ॥೫೧॥ ತತ್ಸುತೀಕ್ಷ್ಣಸ್ಯ ವಚನಂ ಯಥಾ ಸೌಮ್ಯ ಮಯಾ ಶ್ರು
ತಂ । ಅಗಸ್ತ್ಯಸ್ಯಾಶ್ರಮೋ ಭ್ರಾತುರ್ನೂನಮೇಷ ಭವಿಷ್ಯತಿ ॥೫೨॥ ನಿಗೃಹ್ಯ ತಪಸಾ ಮೃತ್ಯುಂ ಲೋಕಾನಾಂ ಹಿತಕಾಮ್ಯ
ಯಾ । ಯಸ್ಯ ಭ್ರಾತ್ರಾ ಕೃತೇಯಂ ದಿಕ್ಶರಣ್ಯಾ ಪುಣ್ಯಕರ್ಮಣಾ ॥೫೩॥ ಇಹೈಕದಾ ಕಿಲ ಕ್ರೂರೋ ವಾತಾಪಿರಪಿ ಚೇಲ್ವಲಃ
ಭ್ರಾತರೌ ಸಹಿತಾವಾಸ್ತಾಂ ಬ್ರಾಹ್ಮಣಘ್ನೌ ಮಹಾಸುರೌ ॥೫೪॥ ಧಾರಯನ್ ಬ್ರಾಹ್ಮಣಂ ರೂಪಮಿಲ್ವಲಃ ಸಂಸ್ಕೃತಂ
ವದನ್ । ಆಮಂತ್ರಯತಿ ವಿಪ್ರಾನ್ ಸ ಶ್ರಾದ್ಧಮುದ್ದಿಶ್ಯ ನಿರ್ಘೃಣಃ ॥೫೫॥ ಭ್ರಾತರಂ ಸಂಸ್ಕೃತಂ ಕೃತ್ವಾ ತತಸ್ತಂ ಮೇಷ
ರೂಪಿಣಂ । ತಾನ್ ದ್ವಿಜಾನ್ ಭೋಜಯಾಮಾಸ ಶ್ರಾದ್ಧದೃಷ್ಟೇನ ಕರ್ಮಣಾ ॥೫೬॥ ತತೋ ಭುಕ್ತವತಾಂ ತೇಷಾಂ ವಿಪ್ರಾಣಾ

---

ಕೆಗಳು, ದೃಶ್ಯಂತೇ-ಕಾಣಲ್ಪಡುತ್ತವೆ, ವೈಡೂರ್ಯವರ್ಚಸಃ-ವೈಡೂರ್ಯಮಣಿಗಳ ತೇಜಸ್ಸಿನಂತೆ ತೇಜಸ್ಸುಳ್ಳ, ದರ್ಭಾಃ-ದರ್ಭೆಗಳೂ, ಲೂನಾಃ-ಕತ್ತರಿಸಲ್ಪಟ್ಟವುಗಳಾಗಿ, ಪಥಿ-ಮಾರ್ಗದಲ್ಲಿ, ದೃಶ್ಯಂತೇ-ಕಾಣಲ್ಪಡುತ್ತವೆ ॥೪೯॥ ಆಶ್ರಮಸ್ಥಸ್ಯ-ಆಶ್ರಮದಲ್ಲಿರುವ, ಪಾವಕಸ್ಯ-ಅಗ್ನಿಯ ಸಂಬಂಧವಾದ, ಕೃಷ್ಣಾಭ್ರಶಿಖರೋಪಮಂ-ಕೃಷ್ಣ-ಕಪ್ಪಾಗಿರುವ, ಅಭ್ರ-ಮೇಘವೂ. ಶಿಖರ-ಶಿಖರವೂ, ಉಪಮಂ-ಸಮಾನವಾಗುಳ್ಳ, ವನಮಧ್ಯಸ್ಥಂ-ವನದ ಮಧ್ಯದಲ್ಲಿರುವ, ಧೂಮಾಗ್ರಂ-ಹೊಗೆಯ ತುದಿಯು. ಸಂಪ್ರದೃಶ್ಯತೇ-ಕಾಣಲ್ಪಡುತ್ತದೆ ॥೫೦॥ ವಿವಿಕ್ತೇಷು-ವಿಜನಗಳಾದ, ತೀರ್ಥೇಷು-ಘಟ್ಟಗಳಲ್ಲಿ, (ಅಥವಾ-ವಿವಿಕ್ತೇಷು-ಪರಿಶುದ್ಧಗಳಾದ, ತೀರ್ಥೇಷು-ತೀರಗಳಲ್ಲಿ.) ದ್ವಿಜಾತಯಃ-ಬ್ರಾಹ್ಮಣರು, ಕೃತಸ್ನಾನಾಸ್ಸಂತಃ-ಮಾಡಲ್ಪಟ್ಟ ಸ್ನಾನವುಳ್ಳವರಾಗಿ, ಸ್ವಯಂ-ತಾವೇ. ಆರ್ಜಿತೈಃ-ತರಲ್ಪಟ್ಟ, ಕುಸುಮೈಃ-ಹುವ್ವುಗಳಿಂದ, ಪುಷ್ಪೋಪಹಾರಂ-ಪುಷ್ಪಗಳ ಪೂಜೆಯನ್ನು. ಕುರ್ವಂತಿ-ಮಾಡುತ್ತಾರೆ ॥೫೧॥ ಹೇಸೌಮ್ಯ-ಎಲೈ ಪ್ರಸನ್ನನೇ, ಮಯಾ-ನನ್ನಿಂದ, ಸುತೀಕ್ಷ್ಣಸ್ಯ-ಸುತೀಕ್ಷ್ಣಋಷಿಯ, ತದ್ವಚನಂ-ಆ ಮಾತು, ಯಥಾ-ಹ್ಯಾಗೆ, ಶ್ರುತಂ-ಕೇಳಲ್ಪಟ್ಟಿತೋ, ತಥಾ-ಹಾಗೆಯೇ, ಏಷಃ-ಇದು. ಅಗಸ್ತ್ಯಸ್ಯಭ್ರಾತುಃ-ಅಗಸ್ತ್ಯಋಷಿಯ ಅಣ್ಣನ, ಆಶ್ರಮಃ-ಆಶ್ರಮವು, ಭವಿಷ್ಯತಿ-ಆಗುವದು, ನೂನಂ-ನಿಶ್ಚಯವು ॥೫೨॥ ಪುಣ್ಯಕರ್ಮಣಾ-ಪುಣ್ಯಕರವಾದ ವ್ಯಾಪಾರವುಳ್ಳ, ಯಸ್ಯ-ಯಾವ ಋಷಿಯ, ಭ್ರಾತ್ರಾ-ತಮ್ಮನಾದ ಅಗಸ್ತ್ಯನಿಂದ, ಲೋಕಾನಾಂ-ಲೋಕಗಳಿಗೆ. ಹಿತಕಾಮ್ಯಯಾ-ಇಷ್ಟದ ಅಪೇಕ್ಷೆಯಿಂದ. ತಪಸಾ-ತಪಸ್ಸಿನಿಂದ, ಮೃತ್ಯುಂ-ಯಮನನ್ನು, ನಿಗೃಹ್ಯ-ನಿಗ್ರಹಿಸಿ ಇಯಂದಿಕ್-ಈ ದಕ್ಷಿಣದಿಕ್ಕು, ಶರಣ್ಯಾ-ವಾಸಯೋಗ್ಯವಾಗಿ, ಕೃತಾ-ಮಾಡಲ್ಪಟ್ಟಿತೋ ॥೫೩॥ ಇಹ-ಇಲ್ಲಿ, ಏಕದಾ-ಒಂದಾನೊಂದು ಕಾಲದಲ್ಲಿ, ಕ್ರೂರಃ-ಭಯಂಕರನಾದ, ವಾತಾಪಿಃ-ವಾತಾಪಿ ಎಂಬ ರಾಕ್ಷಸನು, ಇಲ್ವಲಶ್ಚಾಪಿ-ಇಲ್ವಲನೂ ಎಂಬ, ಭ್ರಾತರೌ-ಅಣ್ಣತಮ್ಮಂದಿರಾದ. ಮಹಾಸುರೌ-ಮಹಾರಾಕ್ಷಸರು, ಸಹಿತೌ-ಸೇರಿದವರಾಗಿ, ಬ್ರಾಹ್ಮಣಘ್ನೌ-ಬ್ರಾಹ್ಮಣರಂ ಕೊಲ್ಲುವರಾಗಿ, ಆಸ್ತಾಂ-ಇದ್ದರು ॥೫೪॥ ನಿರ್ಘೃಣಃ-ದಯಾಹೀನನಾದ. ಇಲ್ವಲಃ-ಇಲ್ವಲನು, ಬ್ರಾಹ್ಮಣರೂಪಂ-ಬ್ರಾಹ್ಮಣಸಂಬಂಧವಾದ ರೂಪವನ್ನು, ಧಾರಯನ್-ಧರಿಸುತ್ತಿರುವನಾಗಿ, ಸಂಸ್ಕೃತಂ-ವ್ಯಾಕರಣಶಿಕ್ಷೆಯಾದ ಸಂಸ್ಕೃತಶಬ್ದಗಳನ್ನು, ವದನ್-ಹೇಳುತ್ತಿರುತ್ತಿರುವನಾಗಿ. ಶ್ರಾದ್ಧಂ-ಶ್ರಾದ್ಧವನ್ನು, ಉದ್ದಿಶ್ಯ-ಉದ್ದೇಶಮಾಡಿ. ವಿಪ್ರಾನ್-ಬ್ರಾಹ್ಮಣರನ್ನು, ಆಮಂತ್ರಯತಿಸ್ಮ-ಕರೆಯುತ್ತಿದ್ದನಷ್ಟೆ ॥೫೫॥ ತತಃ-ಬಳಿಕ, ಭ್ರಾತರಂ-ತಮ್ಮನಾದ ವಾತಾಪಿಯನ್ನು, ಸಂಸ್ಕೃತಂ-ಪಾಕಮಾಡಲ್ಪಟ್ಟವನನ್ನಾಗಿ, ಕೃತ್ವಾ-ಮಾಡಿ, ಮೇಷರೂಪಿಣಂ-ಮ್ಯಾಕೆರೂಪವಂ ವಹಿಸಿರುವ, ತಂ-ಆ ವಾತಾಪಿಯನ್ನು, ಶ್ರಾದ್ಧದೃಷ್ಟೇನ-ಶ್ರಾದ್ಧಕ್ಕೆ ಯೋಗ್ಯವಾದ, ಕರ್ಮಣಾ-ವ್ಯಾಪಾರದಿಂದ. ತಾನ್ ದ್ವಿಜಾನ್-ಆ ಬ್ರಾಹ್ಮಣರನ್ನು, ಭೋಜಯಾಮಾಸ-ಭೋಜನಮಾಡಿಸಿದನು ॥೫೬॥ ತತಃ-ಬಳಿಕ. ತೇಷಾಂ ವಿಪ್ರಾಣಾಂ-

---

ತ್ತರಿಸಲ್ಪಟ್ಟವುಗಳಾಗಿ ಮಾರ್ಗದಲ್ಲಿ ಕಾಣುತ್ತಲಿವೆ ॥೪೯॥ ಮತ್ತು ಆಶ್ರಮದಲ್ಲಿನ ಅಗ್ನಿಯ ಸಂಬಂಧವಾದ ಕೃಷ್ಣಾಭ್ರಸದೃಶವಾಗಿರುವ ಹೊಗೆಯು ಕಾಣಲ್ಪಡುತ್ತದೆ ॥೫೦॥ ಪರಿಶುದ್ಧವಾದ ನದೀತೀರಗಳಲ್ಲಿ ಬ್ರಾಹ್ಮಣೋತ್ತಮರು ಸ್ನಾನವಂ ಗೈದು, ತಾವೇ ಪುಷ್ಪಂಗಳಂ ತಂದಿಟ್ಟುಕೊಂಡು ಪೂಜೆಯಂ ಗೈಯ್ಯುತ್ತಿರುವರು ॥೫೧॥ ಆ ಸುತೀಕ್ಷ್ಣಮುನಿಯು ನಮಗೆಂತು ನಿರೂಪಿಸಿದನೋ, ಅಂತು ಈ ಆಶ್ರಮವು ಅಗಸ್ತ್ಯಾನುಜನ ಆಶ್ರಮವೇ ನಿಶ್ಚಯವು ॥೫೨॥ ಪುಣ್ಯಕಾರಿಯಾದ ಯಾವ ಋಷಿಯ ತಮ್ಮನಾದ ಅಗಸ್ತ್ಯಮುನಿಯು, ಲೋಕಂಗಳಿಗೆ ಹಿತವಂ ಗೈಯ್ಯುವದರಲ್ಲಿ ಇಚ್ಛೆಯುಳ್ಳವನಾಗಿ, ತಪದಿಂದ ಯಮನಂ ನಿಗ್ರಹಿಸಿ, ಈ ದಕ್ಷಿಣದಿಕ್ಕನ್ನು ವಾಸಯೋಗ್ಯವಾಗಿ ಮಾಡಿಕೊಂಡನೋ ॥೫೩॥ ಎಲೈ ಲಕ್ಷ್ಮಣನೇ! ಪೂರ್ವಕಾಲದಲ್ಲಿ ಕ್ರೂರರಾದ ವಾತಾಪಿ ಇಲ್ವಲರೆಂಬ ಅಣ್ಣತಮ್ಮಂದರಾದ ಈರ್ವರು ರಕ್ಕಸರು ಕೇರಿಕೊಂಡು ಬ್ರಾಹ್ಮಣರಂ ಕೊಲ್ಲುತ್ತಲಿದ್ದರಷ್ಟೆಂತೆನೆ,— ॥೫೪॥ ದಯಾಶೂನ್ಯನಾದ ಇಲ್ವಲನು ಬ್ರಾಹ್ಮಣರೂಪವಂ ತಾಳಿ ವ್ಯಾಕರಣ ಶಿಕ್ಷಿತವಾಗಿ ಸಂಸ್ಕೃತಶಬ್ದಗಳಂ ನುಡಿಯುತ್ತ, ಶ್ರಾದ್ಧಾರ್ಥವಾಗಿ ಬ್ರಾಹ್ಮಣರಂ ನಿಮಂತ್ರಣವಂ ಗೈಯ್ಯುವದಕ್ಕೆ ಕರೆದಬಳಿಕ, ತಮ್ಮನಾದ ವಾತಾಪಿಯನ್ನು ಮೇಷವನ್ನಾಗಿ ಮಾಡಿ ಪಾಕವಂಗೈದು ಶ್ರಾದ್ಧಕ್ಕಾಗಿ ಬ್ರಾಹ್ಮಣ ಭೋಜನವಂ ಮಾಡಿಸುವನು ॥೫೬॥

ಮಿಲ್ವಲೋಽಬ್ರವೀತ್ । ವಾತಾಪೇ ನಿಷ್ಕ್ರಮಸ್ವೇತಿ ಸ್ವರೇಣ ಮಹತಾ ವದನ್ ॥೫೯॥ ತತೋ ಭ್ರಾತುರ್ವಚಶ್ಶ್ರುತ್ವಾ ವಾತಾಪಿರ್ಮೇಷವನ್ನದನ್ । ಭಿತ್ತ್ವಾ ಭಿತ್ತ್ವಾ ಶರೀರಾಣಿ ಬ್ರಾಹ್ಮಣಾನಾಂ ವಿನಿಷ್ಪತತ್ ॥೬೦॥ ಬ್ರಾಹ್ಮಣಾನಾಂ ಸಹಸ್ರಾಣಿ ತೈರೇವಂ ಕಾಮರೂಪಿಭಿಃ । ವಿನಾಶಿತಾನಿ ಸಂಹತ್ಯ ನಿತ್ಯಶಃ ಪಿಶಿತಾಶನೈಃ ॥೬೧॥ ಅಗಸ್ತ್ಯೇನ ತದಾ ದೇವೈಃ ಪ್ರಾರ್ಥಿತೇನ ಮಹರ್ಷಿಣಾ । ಅನುಭೂಯ ಕಿಲ ಶ್ರಾದ್ಧೇ ಭಕ್ಷಿತಸ್ಸ ಮಹಾಸುರಃ ॥೬೨॥ ತತಸ್ಸಂಪನ್ನಮಿತ್ಯುಕ್ತ್ವಾ ದತ್ತ್ವಾ ಹಸ್ತಾವಸೇಚನಮ್ । ಭ್ರಾತರಂ ನಿಷ್ಕ್ರಮಸ್ವೇತಿ ಚೇಲ್ವಲಸ್ಸೋಽಭ್ಯಭಾಷತ ॥೬೩॥ ಸ ತಂ ತಥಾ ಭಾಷಮಾಣಂ ಭ್ರಾತರಂ ವಿಪ್ರಘಾತಿನಮ್ । ಅಬ್ರವೀತ್ಪ್ರಹಸನ್ಧೀಮಾನಗಸ್ತ್ಯೋ ಮುನಿಸತ್ತಮಃ ॥೬೪॥ ಕುತೋ ನಿಷ್ಕ್ರಮಿತುಂ ಶಕ್ತಿರ್ಮಯಾ ಜೀರ್ಣಸ್ಯ ರಕ್ಷಸಃ । ಭ್ರಾತುಸ್ತೇ ಮೇಷರೂಪಸ್ಯ ಗತಸ್ಯ ಯಮಸಾದನಮ್ ॥೬೫॥ ಅಥ ತಸ್ಯ ವಚಶ್ಶ್ರುತ್ವಾ ಭ್ರಾತುರ್ನಿಧನಸಂಶ್ರಯಮ್ । ಪ್ರಧರ್ಷಯಿತುಮಾರೇಭೇ ಮುನಿಂ ಕ್ರೋಧಾನ್ನಿಶಾಚರಃ ॥೬೬॥ ಸೋಽಭ್ಯದ್ರವದ್ದ್ವಿಜಶ್ರೇಷ್ಠಂ ಮುನಿನಾ ದೀಪ್ತತೇಜಸಾ । ಚಕ್ಷು

---

ಆ ಬ್ರಾಹ್ಮಣರು. ಭುಕ್ತವತಾಂ ತೇಷಾಂ–ಭೋಜನ ಮಾಡುವವರಾಗಲಾಗಿ, ಇಲ್ವಲಃ–ಇಲ್ವಲನು, ಮಹತಾ–ದೊಡ್ಡದಾದ, ಸ್ವರೇಣ–ಸ್ವರದಿಂದ, ಹೇವಾತಾಪೇ–ಎಲೈ ವಾತಾಪಿಯೇ, ನಿಷ್ಕ್ರಮಸ್ವೇತಿ–ಹೊರಟು ಬಾ ಎಂದು, ವದನ್–ಹೇಳುತ್ತಿರುವವನಾಗಿ, ಅಬ್ರವೀತ್–ನುಡಿದನು ॥೫೯॥ ತತಃ–ಬಳಿಕ, ಭ್ರಾತುಃ–ಇಲ್ವಲನ, ವಚಃ–ಮಾತನ್ನು ಶ್ರುತ್ವಾ–ಕೇಳಿ, ವಾತಾಪಿಃ–ವಾತಾಪಿಯು, ಮೇಷವತ್–ಕುರಿಯಂತೆ, ನದನ್–ಕೂಗುತ್ತಿರುವವನಾಗಿ, ಬ್ರಾಹ್ಮಣಾನಾಂ–ಬ್ರಾಹ್ಮಣರ, ಶರೀರಾಣಿ–ದೇಹಗಳನ್ನು ಭಿತ್ವಾ ಭಿತ್ವಾ–ಭೇದಿಸಿ ಭೇದಿಸಿ, ವಿನಿಷ್ಪತತ್–ಹೊರಟು ಬಂದನು ॥೬೦॥ ಏವಂ–ಈ ಪರಿಯಾಗಿ, ಕಾಮರೂಪಿಭಿಃ–ಕಾಮರೂಪಿಗಳಾದ, ತೈಃ ಪಿಶಿತಾಶನೈಃ–ಆ ರಾಕ್ಷಸರಿಂದ, ನಿತ್ಯಶಃ–ನಿರಂತರವೂ, ಸಂಹತ್ಯ–ಹೊಡದು, ಬ್ರಾಹ್ಮಣಾನಾಂ–ಬ್ರಾಹ್ಮಣರ, ಸಹಸ್ರಾಣಿ–ಸಾವಿರಗಳು ವಿನಾಶಿತಾನಿ–ನಾಶಗೊಳಿಸಲ್ಪಟ್ಟವು ॥೬೧॥ ತದಾ–ಆ ಕಾಲದಲ್ಲಿ, ದೇವೈಃ–ದೇವತೆಗಳಿಂದ, ಪ್ರಾರ್ಥಿತೇನ–ಪ್ರಾರ್ಥಿಸಲ್ಪಟ್ಟ, ಮಹರ್ಷಿಣಾ–ಮಹಾಮುನಿಯಾದ, ಅಗಸ್ತ್ಯೇನ–ಅಗಸ್ತ್ಯ ಋಷಿಯಿಂದ, ಶ್ರಾದ್ಧೇ–ಶ್ರಾದ್ಧದಲ್ಲಿ, ಸಮಹಾಸುರಃ–ಆ ವಾತಾಪಿಯೆಂಬ ರಕ್ಕಸನು, ಅನುಭೂಯ–ಅನುಭವಿಸಿ, (ಅಂದರೆ–ಶ್ರಾದ್ಧದಲ್ಲಿ ವರಣಾತ್ತಿಗೆದುಕೊಂಡು) ಭಕ್ಷಿತಃ–ತಿನ್ನಲ್ಪಟ್ಟನು ॥೬೨॥ ತತಃ–ಬಳಿಕ, ಸಂಪನ್ನಮಿತ್ಯುಕ್ತ್ವಾ–ಸಂಪನ್ನವಾಯಿತೆಂದು ಹೇಳಿ, ಹಸ್ತಾವಸೇಚನಂ–ಹಸ್ತೋದಕವನ್ನು, ದತ್ವಾ–ಕೊಟ್ಟು, ಸಇಲ್ವಲಃ–ಆ ಇಲ್ವಲನು, ಭ್ರಾತರಂ–ತಮ್ಮನನ್ನು, ನಿಷ್ಕ್ರಮಸ್ವೇತಿ–ಹೊರಟು ಬಾರೆಂದು, ಅಭ್ಯಭಾಷತ–ಹೇಳಿದನು ॥೬೩॥ ತಥಾ–ಆ ಪರಿಯಾಗಿ, ಭಾಷಮಾಣಂ–ಮಾತನಾಡುತ್ತಿರುವ, ವಿಪ್ರಘಾತಿನಂ–ಬ್ರಾಹ್ಮಣರಂ ಕೊಲ್ಲುತ್ತಿರುವ, ತಂಭ್ರಾತರಂ–ಆ ಅಣ್ಣನಾದ ಇಲ್ವಲನನ್ನು ಕುರಿತು, ಮುನಿಸತ್ತಮಃ–ಋಷಿಶ್ರೇಷ್ಠನಾದ, ಧೀಮಾನ್–ಬುದ್ಧಿಶಾಲಿಯಾದ, ಅಗಸ್ತ್ಯಃ–ಅಗಸ್ತ್ಯ ಋಷಿಯು, ಪ್ರಹಸನ್–ನಗುತ್ತಿರುವವನಾಗಿ, ಅಬ್ರವೀತ್–ನುಡಿದನು ॥೬೪॥ ಮಯಾ–ನನ್ನಿಂದ, ಜೀರ್ಣಸ್ಯ–ಜೀರ್ಣಮಾಡಲ್ಪಟ್ಟ, ಮೇಷರೂಪಸ್ಯ–ಕುರಿಯರೂಪವನ್ನು ವಹಿಸಿರುವ, ಯಮಸಾದನಂ–ಯಮನಮನೆಯನ್ನು, ಗತಸ್ಯ–ಹೊಂದಿರುವ, ತೇ–ನಿನಗೆ, ಭ್ರಾತುಃ–ತಮ್ಮನಾದ, ರಕ್ಷಸಃ–ರಾಕ್ಷಸನಾದ ವಾತಾಪಿಗೆ, ನಿಷ್ಕ್ರಮಿತುಂ–ಹೊರಟು ಬರುವದಕ್ಕೋಸ್ಕರ, ಶಕ್ತಿಃ–ಸಾಮರ್ಥ್ಯವು, ಕುತಃ–ಯಲ್ಲೀದು ॥೬೫॥ ಅಥ–ಬಳಿಕ, ನಿಶಾಚರಃ–ಇಲ್ವಲನು, ಭ್ರಾತುಃ–ತಮ್ಮನಾದ ವಾತಾಪಿಯ, ನಿಧನಸಂಶ್ರಯಂ–ಮರಣವಿಷಯಕವಾದ, ತಸ್ಯ–ಆ ಅಗಸ್ತ್ಯ ಋಷಿಯ, ವಚಃ–ಮಾತನ್ನು, ಶ್ರುತ್ವಾ–ಕೇಳಿ, ಕ್ರೋಧಾತ್–ಕೋಪದದೆಶೆಯಿಂದ, ಮುನಿಂ–ಅಗಸ್ತ್ಯ ಋಷಿಯನ್ನು, ಪ್ರಧರ್ಷಯಿತುಂ–ತಿರಸ್ಕರಿಸುವದಕ್ಕೋಸ್ಕರ, ಆರೇಭೆ–ಉಪಕ್ರಮಿಸಿದನು ॥೬೬॥ ಸಃ–ಆ ಇಲ್ವಲನು, ಮುನಿಶ್ರೇಷ್ಠಂ–ಋಷಿಶ್ರೇಷ್ಠನಾದ ಅಗಸ್ತ್ಯ ಋಷಿಯನ್ನು ಕುರಿತು, ಅಭಿದ್ರವನ್–ಅಟ್ಟಿಕೊಂಡು ಬರುವವನಾಗಿ, ದೀಪ್ತತೇಜಸಾ–ಪ್ರಜ್ವಲಿಸುತ್ತಿರುವ ತೇಜಸ್ಸುಳ್ಳ, ಮುನಿನಾ–ಋಷಿಯಿಂದ, ಅನಲಕಲ್ಪೇನ–ಅಗ್ನಿಗೆ ಸಮಾನವಾದ ಚಕ್ಷುಷಾ–ನೇತ್ರದಿಂದ, ನಿರ್ದಗ್ಧಃ–ದಹಿಸಲ್ಪಟ್ಟ

---

ಅನಂತರದಲ್ಲಿ ಬ್ರಾಹ್ಮಣಭೋಜನವಾಗಲು ಇಲ್ವಲನು ಎಲೈ ವಾತಾಪಿಯೇ! ಹೊರಟು ಬಾರೆಂದು ನುಡಿದ ಕೂಡ್ಲೆ ಆ ವಾತಾಪಿಯು ಕುರಿಯಂತೆ ಕೂಗುತ್ತಾ ಬ್ರಾಹ್ಮಣರಂ ಶರೀರವಂ ಭೇದಿಸಿಕೊಂಡು ಹೊರಟು ಬರುತಿದ್ದನು ॥೬೦॥ ಈ ಪ್ರಕಾರವಾಗಿ ಕಾಮರೂಪಧಾರಿಗಳಾದ ಆ ರಾಕ್ಷಸರಿಂದ, ಅನೇಕ ಸಹಸ್ರ ಬ್ರಾಹ್ಮಣರು ಕೊಲ್ಲಲ್ಪಟ್ಟರು ॥೬೧ ಆ ಸಮಯದಲ್ಲಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಅಗಸ್ತ್ಯಮಹಾ ಮುನಿಯಿಂದ ಶ್ರಾದ್ಧಕಾಲದೊಳು ಆ ವಾತಾಪಿಯು ಭಕ್ಷಿಸಲ್ಪಟ್ಟನು ॥೬೨॥ ಅನಂತರದಲ್ಲಿ ಸಂಪೂರ್ಣವಾಯಿತೆಂದು ಹಸ್ತೋದಕವನ್ನಿತ್ತು, ಆ ಇಲ್ವಲನು ತಮ್ಮನನ್ನು ಹೊರಟು ಬಾರೆಂದು ಕೂಗಿದನು. ಆ ರೀತಿಯಾಗಿ ಕೂಗುವ ಅಣ್ಣನಾದ ಇಲ್ವಲನಂ ಕುರಿತು, ಮಹಾ ಧೈರ್ಯಶಾಲಿಯಾದ ಅಗಸ್ತ್ಯಋುಷಿಯು ನಗುತ್ತಾ ಇಂತೆಂದನು,— ಎಲೈ ಇಲ್ವಲನೇ! ನನ್ನಿಂದ ಜೀರ್ಣಮಾಡಲ್ಪಟ್ಟ, ಮತ್ತು ಮೇಷರೂಪವಂ ತಾಳಿದ, ಯಮಮಂದಿರಕ್ಕೆ ಸಾರಿದ ನಿನ್ನ ತಮ್ಮನಿಗೆ ಹೊರಟು ಬರಲು ಏನು ಶಕ್ತಿ ಇರುವದೆಂದು ನುಡಿದ ಬಳಿಕ, ಆ ಇಲ್ವಲನು ವಾತಾಪಿಯ ವಧೆಯರೂಪವಾದ ಆ ವಾಕ್ಯವಂ ಕೇಳಿ, ಕೋಪದಿಂದ ಆ ಮಹರ್ಷಿಯಂ ತಿರಸ್ಕರಿಸಲುಪಕ್ರಮಿಸಿದನದೆಂತೆನೆ,— ॥೬೬॥ ಆ ಇಲ್ವಲನು ಋುಷಿಶ್ರೇಷ್ಠನಾದ ಅಗಸ್ತ್ಯ ಋುಷಿಯನ್ನಟ್ಟ ಬಂದವನಾಗಿ ಆ ಮಹರ್ಷಿಯು ಅಗ್ನಿಸದೃಶನಾದ ನೇತ್ರಗಳಿಂದ ದಹಿಸಲ್ಪಟ್ಟವನಾಗಿ ಮರಣವ

ಷಾನಲಕಲ್ಪೇನನಿರ್ದಗ್ಧೋನಿಧನಂಗತಃ ॥೧೭॥ ತಸ್ಯಾಯಮಾಶ್ರಮೋಭ್ರಾತುಸ್ತಟಾಕವನಶೋಭಿತಃ । ವಿಪ್ರಾನುಕಂ
ಪಯಾಯೇನಕರ್ಮೇದಂದುಷ್ಕರಂಕೃತಂ ॥೧೮॥ ಏವಂಕಥಯಮಾನಸ್ಯತಸ್ಯಸೌಮಿತ್ರಿಣಾಸಹ । ರಾಮಸ್ಯಾಸ್ತಂಗ
ತಸ್ಸೂರ್ಯಸ್ಸಂಧ್ಯಾಕಾಲೋಭ್ಯವರ್ತತ ॥೧೯॥ ಉಪಾಸ್ಯಪಶ್ಚಿಮಾಂಸಂಧ್ಯಾಂಸಹಭ್ರಾತ್ರಾಯಥಾವಿಧಿ । ಪ್ರವಿವೇಶಾಶ್ರ
ಮಪದಂತಮೃಷಿಂಸೋಭ್ಯವಾದಯತ್ ॥೨೦॥ ಸಮ್ಯಕ್ಪ್ರತಿಗೃಹೀತಸ್ತುಮುನಿನಾತೇನರಾಘವಃ । ನ್ಯವಸತ್ತಾಂನಿಶಾ
ಮೇಕಾಂಪ್ರಾಶ್ಯಮೂಲಫಲಾನಿಚ ॥೨೧॥ ತಸ್ಯಾಂರಾತ್ರ್ಯಾಂವ್ಯತೀತಾಯಾಂವಿಮಲೇಸೂರ್ಯಮಂಡಲೇ । ಭ್ರಾತರಂತ
ಮಗಸ್ತ್ಯಸ್ಯಹ್ಯಾಮಂತ್ರಯತರಾಘವಃ ॥೨೨॥ ಅಭಿವಾದಯೇತ್ವಾಂಭಗವನ್ಸುಖಮಧ್ಯುಷಿತೋನಿಶಾಂ । ಆಮಂತ್ರ
ಯೇತ್ವಾಂಗಚ್ಛಾಮಿಗುರುಂತೇದ್ರಷ್ಟುಮಗ್ರಜಂ ॥೨೩॥ ಗಮ್ಯತಾಮಿತಿತೇನೋಕ್ತೋಜಗಾಮರಘುನಂದನಃ । ಯಥೋ
ದ್ದಿಷ್ಟೇನಮಾರ್ಗೇಣವನಂತಚ್ಚಾವಲೋಕಯನ್ ॥೨೪॥ ನೀವಾರಾನ್ಪನಸಾಂಸ್ತಾಲಾಂಸ್ತಿಮಿಶಾನ್ವಂಜುಲಾನ್ಧವಾನ್ । ಚಿ

---

ವನಾಗಿ, ನಿಧನಂ-ಮರಣವನ್ನು, ಗತಃ-ಹೊಂದಿದನು ॥೧೭॥ ತಸ್ಯ-ಅಂಥಾ ಅಗಸ್ತ್ಯಋಷಿಯ, ಭ್ರಾತುಃ-ಅಣ್ಣನ. ತಟಾಕವನಶೋಭಿತಃ-ಸರೋವರಗಳಿಂದಲೂ ವನಗಳಿಂದಲೂ, ಪ್ರಕಾಶಿಸುತ್ತಿರುವ, ಆಶ್ರಮಃ-ಆಶ್ರಮವು, ಅಯಂ-ಇದು. ಯೇನ-ಯಾವ ಅಗಸ್ತ್ಯಋಷಿಯಿಂದ, ವಿಪ್ರಾನುಕಂಪಯಾ-ಬ್ರಾಹ್ಮಣರಲ್ಲಿ ದಯೆಯಿಂದ, ದುಷ್ಕರಂ-ಮಾಡಲೂ ಅಸಾಧ್ಯವಾದ. ಇದಂಕರ್ಮ-ಈ ವ್ಯಾಪಾರವು, ಕೃತಂ-ಮಾಡಲ್ಪಟ್ಟಿತೋ. ಏವಂ-ಈಪರಿಯಾಗಿ. ತಸ್ಯರಾಮಸ್ಯ-ಆ ಶ್ರೀರಾಮನ, ಸೌಮಿತ್ರಿಣಾಸಹ-ಲಕ್ಷ್ಮಣನೊಡನೆ, ಕಥಯಮಾನಸ್ಯಸತಃ-ಮಾತನಾಡುತ್ತಿರಲಾಗಿ, ಸೂರ್ಯಃ-ಸೂರ್ಯನು, ಅಸ್ತಂ-ಅಸ್ತಮಯಪರ್ವತವನ್ನು, ಗತಃ-ಹೊಂದಿದನು, ಸಂಧ್ಯಾಕಾಲಃ-ಸಾಯಂಕಾಲವು. ಅಭ್ಯವರ್ತತ-ಪ್ರಾಪ್ತವಾಯಿತು ॥೧೯॥ ಸಃ-ಆ ಶ್ರೀರಾಮನು. ಭ್ರಾತ್ರಾಸಹ-ತಮ್ಮನೊಡನೆ, ಯಥಾವಿಧಿ-ವಿಧ್ಯನುಸಾರವಾಗಿ, ಪಶ್ಚಿಮಾಂಸಂಧ್ಯಾಂ-ಸಾಯಂಸಂಧ್ಯೆಯನ್ನು. ಉಪಾಸ್ಯ-ಉಪಾಸನಮಾಡಿ, ಭ್ರಾತ್ರಾಸಹ-ತಮ್ಮನೊಡಗೂಡಿ, ಆಶ್ರಮಪದಂ-ಆಶ್ರಮಪ್ರದೇಶವನ್ನು, ಪ್ರವಿವೇಶ-ಹೊಕ್ಕನು, ತಮೃಷಿಂ-ಆ ಅಗಸ್ತ್ಯಋಷಿಯನ್ನು, ಅಭ್ಯವಾದಯತ್-ನಮಸ್ಕರಿಸಿದನು ॥೨೦॥ ರಾಘವಃ-ಶ್ರೀರಾಮನು, ತೇನಮುನಿನಾ-ಆ ಅಗಸ್ತ್ಯಭ್ರಾತನೆಂಬ ಋಷಿಯಿಂದ, ಸಮ್ಯಕ್-ಚನ್ನಾಗಿ, ಪ್ರತಿಗೃಹೀತಸ್ಸನ್-ಪೂಜಿಸಲ್ಪಟ್ಟವನಾಗಿ, ಮೂಲಫಲಾನಿಚ-ಕಂದಮೂಲಗಳನ್ನೂ ಫಲಗಳನ್ನೂ ಪ್ರಾಶ್ಯ-ಭಕ್ಷಿಸಿ, ಏಕಾಂ-ಒಂದಾದ, ತಾಂನಿಶಾಂ-ಆ ರಾತ್ರಿಯಲ್ಲಿ, ನ್ಯವಸತ್-ಇದ್ದನು ॥೨೧॥ ತಸ್ಯಾಂರಾತ್ರ್ಯಾಂ-ಆ ರಾತ್ರಿಯು, ವ್ಯತೀತಾಯಾಂಸತ್ಯಾಂ-ಕಳೆದುಹೋಗಲಾಗಿ, ಸೂರ್ಯಮಂಡಲೇ-ಸೂರ್ಯಮಂಡಲವು, ವಿಮಲೇಸತಿ-ನಿರ್ಮಲವಾಗಲಾಗಿ, ಅಗಸ್ತ್ಯಸ್ಯಭ್ರಾತರಂ-ಅಗಸ್ತ್ಯಋಷಿಯ ತಮ್ಮನನ್ನು, ರಾಘವಃ-ಶ್ರೀರಾಮನು, ಆಮಂತ್ರಯತ-ಕರೆದನು ॥೨೨॥ ಭಗವನ್-ಎಲೈ ಷಡ್ಗುಣೈಶ್ವರ್ಯಸಂಪನ್ನನೇ, ನಿಶಾಂ-ರಾತ್ರಿಯಲ್ಲಿ, ಸುಖಂ-ಸುಖವಾಗಿ, ಅಧ್ಯುಷಿತಃ-ಇದ್ದೆನು, ತ್ವಾಂ-ನಿನ್ನನ್ನು ಕುರಿತು, ಅಭಿವಾದಯೇ-ವಂದಿಸುತ್ತೇನೆ, ತೇಗುರುಂ-ನಿಮ್ಮ ಗುರುವಾದ, ಅಗ್ರಜಂ-ಅಣ್ಣನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಗಚ್ಛಾಮಿ-ಹೋಗುತ್ತೇನೆ, ತ್ವಾಂ-ನಿನ್ನನ್ನು ಕುರಿತು, ಆಮಂತ್ರಯೇ-ಪ್ರಾರ್ಥಿಸುತ್ತೇನೆ ॥೨೩॥ ತೇನ-ಆ ಅಗಸ್ತ್ಯಭ್ರಾತುವಿನಿಂದ, ಗಮ್ಯತಾಮಿತಿ-ಹೋಗಲ್ಪಡಲೆಂದು, ಉಕ್ತಃ-ಹೇಳಲ್ಪಟ್ಟ. ರಘುನಂದನಃ-ಶ್ರೀರಾಮನು, ಯಥೋದ್ದಿಷ್ಟೇನ-ಯಾವ ವಿಧಿಯಾಗಿ ತಿಳಿಸಲ್ಪಟ್ಟ, ಮಾರ್ಗೇಣ-ಮಾರ್ಗದಿಂದ, ತಚ್ಚವನಂ-ಆ ವನವನ್ನು, ಅವಲೋಕಯನ್-ನೋಡುತ್ತಿರುವನಾಗಿ ॥೨೪॥ ನೀವಾರಾನ್-ನೀರುವಂಜೀಗಿಡಗಳನ್ನು, ಪನಸಾನ್-ಹಲಸಿನಗಿಡಗಳನ್ನು, ತಾಲಾನ್-ತಾಳೇಗಿಡಗಳನ್ನು, ತಿಮಿಶಾನ್-ಹುಲಿಗಿಲೀಗಿಡಗಳನ್ನು, ವಂಜುಲಾನ್-ಅಶೋಕವೃಕ್ಷಗಳನ್ನು, ಧವಾನ್-ಕಗ್ಗಲೀಗಿಡಗಳನ್ನು, ಚಿರಬಿಲ್ವಾನ್-ಕರಂಜಗಿಡಗಳನ್ನು, ಮಧೂ

---

ನ್ನೈದಿದನು ।೧೭। ಯಾವ ಅಗಸ್ತ್ಯಮುನಿಯು ಬ್ರಾಹ್ಮಣರವಿಷಯವಾಗಿ ದಯೆಯಿಂದ ಮಾಡಲಸಾಧ್ಯವಾದ ಈ ಕಾರ್ಯವಂ ಗೈದನೋ ಅಂಥಾ ಅಗಸ್ತ್ಯಮುನಿಯ ತಮ್ಮನ ಸಂಬಂಧವಾದ, ಸರೋವರಗಳಿಂದಲೂ ವನಗಳಿಂದಲೂ ಕಂಗೊಳಿಸುವ ಆ ಆಶ್ರಮವು ಇದೇ ಯಿರಬಹುದೆಂದು ಶ್ರೀರಾಮನು ನುಡಿಯುವವಾಗ ಸೂರ್ಯನು ಅಸ್ತಮಯಪರ್ವತವನ್ನೈದಿದನು, ಸಂಧ್ಯಾಕಾಲವು ಪ್ರಾಪ್ತವಾಯಿತು ।೧೯। ಅನಂತರದಲ್ಲಿ ಶ್ರೀರಾಮನು ತಮ್ಮನೊಡನೆ ಯಥಾವಿಧಿಯಾಗಿ ಸಾಯಂಸಂಧ್ಯೆಯನ್ನಾಚರಿಸಿ ಆ ಮಹರ್ಷಿಯ ಆಶ್ರಮಂ ಹೊಕ್ಕು ಆತನಿಗೆ ವಂದನವಂ ಗೈದವನಾಗಿ ಆ ಮುನಿಯಿಂದ ಆದರಿಸಲ್ಪಟ್ಟು ಆತನಿಂದಲೇ ಕೊಡಲ್ಪಟ್ಟ ಫಲಮೂಲಾದಿಗಳಂ ಭುಜಿಸಿ ಒಂದು ರಾತ್ರಿಯು ಅಲ್ಲಿಯೇ ಇಳಕೊಂಡಿದ್ದನು ।೨೧। ಬಳಿಕ ಪ್ರಾತಃಕಾಲವಾಗಲು ರಘುನಂದನನು ಆ ಮಹರ್ಷಿಯಂ ಕುರಿತು ಇಂತೆಂದನು,—ಎಲೈ ಪೂಜ್ಯನೇ! ರಾತ್ರಿಯು ತಮ್ಮಾಶ್ರಮದಲ್ಲಿ ಸುಖವಾಗಿದ್ದೆ . ಅಭಿವಂದನೆಯಂ ಗೈಯ್ಯುತ್ತೇನೆ, ನಿಮ್ಮಣ್ಣನಂ ಕಾಣಬಚ್ಚಿಸುತ್ತೇನೆ, ನನಗೆ ಅಪ್ಪಣೆಯಂ ಕೊಡುವನಾಗೆಂದು ನುಡಿದು ಆ ಮುನಿಯಿಂದ ಅಪ್ಪಣೆಯಂ ಪಡದು ತಾನು ಮೊದಲೇ ತಿಳಿದುಕೊಂಡಿದ್ದ ಆ ವನವಂ ನೋಡುತ್ತಾ ಸಾರಿದನದೆಂತೆನೆ,—।೨೪। ದಶರಥಪುತ್ರನಾದ ಶ್ರೀರಾಮನು ಅರಣ್ಯದಲ್ಲಿ “ನೀವಾರ, ಪನಸ, ತಾಳ, ತಿಮಿಶ, ವಂಜುಳ, ಧವ, ಚಿರಬಿಲ್ವ, ಮಧೂಕ, ಬಿಲ್ವ, ತಿಂದುಕ,” ಎಂಬಿವುಗಳೇಮೊದಲಾದ ವೃಕ್ಷಂಗಳನ್ನೂ, ಪುಷ್ಪಿಸಿರುವ ಅಗ್ರಭಾ

ಶಿಬಿಲ್ವಾನ್ಮಧೂಕಾಂಶ್ಚಬಿಲ್ವಾನಪಿಚತಿಂದುಕಾನ್ । ಪುಷ್ಪಿತಾನ್ಪುಷ್ಪಿತಾಗ್ರಾಭಿರ್ಲತಾಭಿರನುವೇಷ್ಟಿತಾನ್ । ದದರ್ಶ ರಾಮಶ್ಶತಶಸ್ತತ್ರಕಾಂತಾರಪಾದಪಾನ್ । ಹಸ್ತಿಹಸ್ತೈರ್ವಿಮೃದಿತಾನ್ವಾನರೈರುಪಶೋಭಿತಾನ್ । ಮತ್ತೈಶ್ಶಕುನಿಸಂಘೈಶ್ಚಶತಶಶ್ಚಪ್ರಣಾದಿತಾನ್ ॥೭೬॥ ತತೋಬ್ರವೀತ್ಸಮೀಪಸ್ಥಂರಾಮೋರಾಜೀವಲೋಚನಃ । ಪೃಷ್ಠತೋನುಗತಂವೀರಂಲಕ್ಷ್ಮಣಂಲಕ್ಷ್ಮಿವರ್ಧನಂ ॥೭೭॥ ಸ್ನಿಗ್ಧಪತ್ರಾಯಥಾವೃಕ್ಷಾಯಥಾಶಾಂತಾಮೃಗದ್ವಿಜಾಃ । ಆಶ್ರಮೋನಾತಿದೂರಸ್ಥೋಮಹರ್ಷೇರ್ಭಾವಿತಾತ್ಮನಃ ।೭೮॥ ಅಗಸ್ತ್ಯಇತಿವಿಖ್ಯಾತೋಲೋಕೇಸ್ವೇನೈವಕರ್ಮಣಾ । ಆಶ್ರಮೋದೃಶ್ಯತೇತಸ್ಯಪರಿಶ್ರಾಂತಶ್ರಮಾಪಹಃ ॥ ಪ್ರಾಜ್ಯಧೂಮಾಕುಲವನಶ್ಚೀರಮಾಲಾಪರಿಷ್ಕೃತಃ । ಪ್ರಶಾಂತಮೃಗಯೂಥಶ್ಚನಾನಾಶಕುನಿನಾದಿತಃ ॥೭೯॥ ( ನಿಗೃಹ್ಯತರಸಾಮೃತ್ಯುಂಲೋಕಾನಾಂಹಿತಕಾಮ್ಯಯಾ । ದಕ್ಷಿಣಾದಿಕ್ಕೃತಾಯೇನಶರಣ್ಯಾಪುಣ್ಯಕರ್ಮಣಾ ॥ ) ತಸ್ಯೇದಮಾಶ್ರಮಪದಂಪ್ರಭಾವಾದ್ಯಸ್ಯರಾಕ್ಷಸೈಃ । ದಿಗಿಯಂದಕ್ಷಿಣಾತ್ರಾಸಾದ್ದೃಶ್ಯತೇನೋಪಭುಜ್ಯತೇ ।೮೦॥ ಯದಾಪ್ರಭೃತಿಚಾಕ್ರಾಂತಾದಿಗಿಯಂಪುಣ್ಯಕರ್ಮಣಾ । ತದಾಪ್ರಭೃತಿನಿರ್ವೈರಾಃಪ್ರಶಾಂತಾರಜನೀ

---

ಶಾಂಶ್ಚ–ಇಪ್ಪೇಮರಗಳನ್ನು, ಬಿಲ್ವಾನ್–ಬಿಲ್ಪವೃಕ್ಷಗಳನ್ನು ತಿಂದುಕಾನ್–ಬೇವಿನಗಿಡಗಳನ್ನೂ. ರಾಮಃ–ಶ್ರೀರಾಮನು, ತತ್ರ–ಆ ಅರಣ್ಯದಲ್ಲಿ, ಪುಷ್ಪಿತಾಗ್ರಾಭಿಃ–ಹುವ್ವುಗಳ ಕೊನೆಗಳುಳ್ಳ, ಲತಾಭಿಃ–ಬಳ್ಳಿಗಳಿಂದ, ಅನುವೇಷ್ಟಿತಾನ್–ಸುತ್ತಿಕೊಳ್ಳಲ್ಪಟ್ಟ, ಪುಷ್ಪಿತಾನ್–ಹುವ್ವುಬಿಟ್ಟಿರುವ, ಶತಶಃ–ನೂರಾರು, ಕಾಂತಾರಪಾದಪಾನ್–ಅರಣ್ಯದಲ್ಲಿರುವ ಗಿಡಗಳನ್ನು, ದದರ್ಶ–ಕಂಡನು. ಹಸ್ತಿಹಸ್ತೈಃ–ಆನೆಯ ಸೊಂಡಿಲಗಳಿಂದ, ವಿಮೃದಿತಾನ್–ಮರ್ದಿಸಲ್ಪಟ್ಟ. ವಾನರೈಃ–ಕಪಿಗಳಿಂದ, ಉಪಶೋಭಿತಾನ್–ಪ್ರಕಾಶಿಸಲ್ಪಟ್ಟ. ಮತ್ತೈಃ–ಮದವೇರಿದ, ಶಕುನಿಸಂಘೈಶ್ಚ–ಹಕ್ಕಿಗಳ ತಂಡಗಳಿಂದಲೂ, ಶತಶಶ್ಚ–ಅನೇಕಪ್ರಕಾರವಾಗಿ. ಪ್ರಣಾದಿತಾನ್–ಧ್ವನಿಗೊಳಿಸಲ್ಪಟ್ಟ. ಪಾದಪಾನ್–ವೃಕ್ಷಗಳನ್ನು, ದದರ್ಶ–ಕಂಡನು ॥೭೬॥ ತತಃ–ಬಳಿಕ, ರಾಜೀವಲೋಚನಃ–ಕಮಲಗಳಿಗೆ ಸಮಾನಗಳಾದ ನೇತ್ರಗಳುಳ್ಳ. ಸಮೀಪಸ್ಥಂ–ಸಮೀಪವರ್ತಿಯಾದ. ಪೃಷ್ಠತಃ–ಹಿಂದುಗಡೆ, ಅನುಗತಂ–ಬರುತ್ತಿರುವ, ವೀರಂ–ಶೂರನಾದ. ಲಕ್ಷ್ಮಿವರ್ಧನಂ–ವಿನಯಲಕ್ಷ್ಮೀಸಂಪನ್ನನಾದ, ಲಕ್ಷ್ಮಣಂ–ಲಕ್ಷ್ಮಣಸ್ವಾಮಿಯನ್ನುಕುರಿತು, ಅಬ್ರವೀತ್–ನುಡಿದನು ॥೭೭॥ ಸ್ನಿಗ್ಧಪತ್ರಾಃ–ಸ್ನಿಗ್ಧ–ನುಣ್ಣಗಿರುವ, ಪತ್ರಾಃ–ಯೆಲೆಗಳುಳ್ಳ. ವೃಕ್ಷಾಃ–ಗಿಡಗಳು. ಶಾಂತಾಃ–ಉಪಶಾಂತಗಳಾದ. ಮೃಗದ್ವಿಜಾಃ–ಚಿಗರಿಗಳೂ ಹಕ್ಕಿಗಳೂ, ಯಥಾಯಥಾ–ಹ್ಯಾಗೆಹ್ಯಾಗೆ ಸಮೀಪವರ್ತಿಗಳಾಗುತ್ತವೋ. ತಥಾ–ಹಾಗೆಯೇ. ಭಾವಿತಾತ್ಮನಃ–ಬ್ರಹ್ಮನಿಷ್ಠನಾದ. ಮಹರ್ಷೇಃ–ಅಗಸ್ತ್ಯಋಷಿಯ ಆಶ್ರಮಃ–ಆಶ್ರಮವು, ನಾತಿದೂರಸ್ಥಃ–ಸಮೀಪವರ್ತಿಯಾಯಿತು ॥೭೮॥ ಯಃ–ಯಾವಋಷಿಯು, ಅಗಸ್ತ್ಯಇತಿ–ಅಗಸ್ತ್ಯಋಷಿಯೆಂದು, ಲೋಕೇ–ಲೋಕದಲ್ಲಿ. ಸ್ವೇನ–ಸ್ವಕೀಯವಾದ, ಕರ್ಮಣೈವ–ವ್ಯಾಪಾರದಿಂದಲೇ, ವಿಖ್ಯಾತಃ–ಪ್ರಖ್ಯಾತನಾಗಿದ್ದನೋ. ತಸ್ಯ–ಅಂಥಾ ಅಗಸ್ತ್ಯಋಷಿಯ, ಪರಿಶ್ರಾಂತಶ್ರಮಾಪಹಃ–ಪರಿಶ್ರಾಂತ–ಬಳಲಿದಜನರ, ಶ್ರಮಾಪಹಃ–ಆಯಾಸವಂ ಪರಿಹರಿಸುತ್ತಿರುವ, ಪ್ರಾಜ್ಯಧೂಮಾಕುಲವನಃ–ಪ್ರಚುರವಾದ ಹೊಗೆಯಿಂದ ವ್ಯಾಪ್ತವಾದ ವನಗಳುಳ್ಳ, ಚೀರಮಾಲಾಪರಿಷ್ಕೃತಃ–ನಾರುಮುಡಿಗಳಿಂದ ಅಲಂಕೃತವಾದ, ಪ್ರಶಾಂತಮೃಗಯೂಥಶ್ಚ–ಉಪಶಾಂತವಾದ ಮೃಗಗಳ ಗುಂಪುಗಳುಳ್ಳ, ನಾನಾಶಕುನಿನಾದಿತಃ–ಅನೇಕ ಪಕ್ಷಿಗಳಿಂದ ಧ್ವನಿಗೊಳಿಸಲ್ಪಟ್ಟ, ತಸ್ಯ–ಆ ಅಗಸ್ತ್ಯಋಷಿಯ ಆಶ್ರಮವು, ದೃಶ್ಯತೇ–ಕಾಣಲ್ಪಡುತ್ತದೆ ॥೭೯॥ ಯಸ್ಯ–ಯಾವ ಅಗಸ್ತ್ಯಋಷಿಯ. ಪ್ರಭಾವಾತ್–ಮಹಾತ್ಮ್ಯದಶೆಯಿಂದ, ರಾಕ್ಷಸೈಃ–ರಕ್ಕಸರಿಂದ, ತ್ರಾಸಾತ್–ಭಯದಶೆಯಿಂದ, ಇಯಂದಕ್ಷಿಣಾದಿಕ್–ಈ ದಕ್ಷಿಣದಿಕ್ಕು. ನದೃಶ್ಯತೇ–ನೋಡಲ್ಪಡುವದಿಲ್ಲ. ನೋಪಭುಜ್ಯತೇ–ಅನುಭವಿಸಲ್ಪಡುವದಿಲ್ಲವೋ, (ಅಂದರೆ ಆಕ್ರಮಿಸಲ್ಪಡುವದಿಲ್ಲವೋ) ತಸ್ಯ–ಅಂಥಾ ಅಗಸ್ತ್ಯಋಷಿಯ, ಆಶ್ರಮಂ–ಆಶ್ರಮಪ್ರದೇಶವು, ಇದಂ–ಇದು ॥೮೦॥ ಯದಾಪ್ರಭೃತಿ–ಯಾವಕಾಲವೊದಲ್ಗೊಂ

---

ಗಗಳುಳ್ಳ ಬಳ್ಳಿಗಳಿಂದ ಸುತ್ತಿಕೊಳ್ಳಲ್ಪಟ್ಟ, ಪುಷ್ಪಿಸಿರುವ ಅನೇಕ ವೃಕ್ಷಗಳನ್ನೂ, ಮತ್ತು ಆನೆಯ ಸೊಂಡಿಲಗಳಿಂದ ಮುರಿಯಲ್ಪಟ್ಟ ಕೆಲವುವೃಕ್ಷಂಗಳನ್ನೂ, ಕಪಿಗಳಿಂದ ಕಂಗೊಳಿಸುವ ಮತ್ತು ಮದಿಸಿದ ಪಕ್ಷಿಗಳಿಂದ ವ್ಯಾಪ್ತವಾದ ಇತರ ವೃಕ್ಷಗಳನ್ನೂ ಸಹಾ ಕಂಡಬಳಿಕ, ಹಿಂದೆಬರುವ ತಮ್ಮನಾದ ಲಕ್ಷ್ಮಣನಂ ಕುರಿತು ಇಂತೆಂದನು,--।೭೭॥ ಎಲೈ ಅನುಜನೇ! ಸ್ನಿಗ್ಧವಾದ ಪತ್ರಂಗಳುಳ್ಳ ವೃಕ್ಷಂಗಳೂ, ಉಪಶಾಂತವಾದ ಮೃಗಪಕ್ಷಿಗಳೂ, ಬರುವವು, ಆದ್ದರಿಂದ ಬ್ರಹ್ಮನಿಷ್ಠನಾದ ಆ ಅಗಸ್ತ್ಯಮುನಿಯ ಆಶ್ರಮವು ಸಮೀಪದಲ್ಲಿರಬಹುದು ।೭೮॥ ಯಾವ ಮಹರ್ಷಿಯು ಅಗಸ್ತ್ಯನೆಂದು ಲೋಕದಲ್ಲಿ ಸ್ವಕೀಯವಾದ ಕರ್ಮದಿಂದಲೇ ಪ್ರಖ್ಯಾತಿಯಂ ಪಡೆದನೋ ಅಂಥಾ ಮಹರ್ಷಿಯ ಸಂಬಂಧವಾಗಿಯೂ, ಬಳಲಿದ ಜನರ ಶ್ರಮಪರಿಹಾರವಂ ಗೈಯ್ಯುವುದಾಗಿಯೂ, ಹೊಗೆಗಳ ಸಮೂಹಗಳಿಂದ ವ್ಯಾಪ್ತವಾದದ್ದಾಗಿಯೂ, ನಾರುಮುಡಿಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಉಪಶಾಂತವಾದ ಮೃಗಗಳ ಸಮೂಹಗಳುಳ್ಳದ್ದಾಗಿಯೂ, ಅನೇಕ ಪಕ್ಷಿಗಳಿಂದ ಶಬ್ದವಂ ಗೈಯ್ಯಲ್ಪಡುವದಾಗಿಯೂ, ಇರುವ ಆಶ್ರಮವು ಕಾಣುತ್ತಲಿದೆ. ಯಾವ ಮುನಿಯ ಪ್ರಭಾವದಿಂದ ಈ ದಕ್ಷಿಣದಿಕ್ಕು ರಕ್ಕಸರಿಂದಾಕ್ರಮಿಸಲ್ಪಡುವದಿಲ್ಲವೋ ಅಂಥಾಮಹಾತ್ಮನ ಆಶ್ರಮವಿದೇಸರಿ ।೮೦॥ ಈ ದಿಕ್ಕಿನಲ್ಲಿ ಅಗಸ್ತ್ಯಮಹಾಮುನಿಯು ಪ್ರವೇಶವಂ ಗೈದ

ಚರಾಃ । ನಾಮ್ನಾ ಚೇಯಂ ಭಗವತೋ ದಕ್ಷಿಣಾ ದಿಕ್ ಪ್ರದಕ್ಷಿಣಾ । ಪ್ರಥಿತಾ ತ್ರಿಷು ಲೋಕೇಷು ದುರ್ಧರ್ಷಾ ಕ್ರೂರಕರ್ಮಭಿಃ ॥೮೪॥ ಮಾರ್ಗಂ ನಿರೋದ್ಧುಂ ನಿರತೋ ಭಾಸ್ಕರಸ್ಯಾಚಲೋತ್ತಮಃ । ನಿದೇಶಂ ಪಾಲಯನ್ಯಸ್ಯ ವಿಂಧ್ಯಶ್ಶೈಲೋ ನ ವರ್ಧತೇ ॥೮೫॥ ಅಯಂ ದೀರ್ಘಾಯುಷಸ್ತಸ್ಯ ಲೋಕೇ ವಿಶ್ರುತಕರ್ಮಣಃ । ಅಗಸ್ತ್ಯಸ್ಯಾಶ್ರಮಶ್ಶ್ರೀಮಾನ್ವಿನೀತಜನಸೇವಿತಃ ॥೮೬॥ ಏಷ ಲೋಕಾರ್ಚಿತಸ್ಸಾಧುರ್ಹಿತೇ ನಿತ್ಯರತಸ್ಸತಾಂ । ಅಸ್ಮಾನಭಿಗತಾನೇಷ ಶ್ರೇಯಸಾ ಯೋಜಯಿಷ್ಯತಿ ॥ ಆರಾಧಯಿಷ್ಯಾಮ್ಯತ್ರಾಹಮಗಸ್ತ್ಯಂ ತಂ ಮಹಾಮುನಿಂ । ಶೇಷಂ ಚ ವನವಾಸಸ್ಯ ಸೌಮ್ಯ ವತ್ಸ್ಯಾಮ್ಯಹಂ ಪ್ರಭೋ ॥೮೮॥ ಅತ್ರ ದೇವಾಸ್ಸಗಂಧರ್ವಾಸ್ಸಿದ್ಧಾಶ್ಚ ಪರಮರ್ಷಯಃ । ಅಗಸ್ತ್ಯಂ ನಿಯತಾಹಾರಂ ಸತತಂ ಪರ್ಯುಪಾಸತೇ ॥೮೯॥ ನಾತ್ರ ಜೀವೇನ್ಮೃಷಾವಾದೀ ಕ್ರೂರೋ ವಾ ಯದಿ ವಾ ಶಠಃ । ನೃಶಂಸಃ ಕಾಮವೃತ್ತೋ ವಾ ಮುನಿರೇಷ ತಥಾವಿಧಃ ॥೯೦॥ ಅತ್ರ ದೇವಾಶ್ಚ ಯಕ್ಷಾಶ್ಚ ನಾಗಾಶ್ಚ ಪತಗೈಸ್ಸಹ । ವಸಂತಿ ನಿಯತಾಹಾರಾ ಧರ್ಮಮಾರಾಧಯಿಷ್ಣವಃ ॥೯೧॥ ಅತ್ರ ಸಿದ್ಧಾ ಮಹಾತ್ಮಾ

---

ಇಯಂದಿಕ್—ಈ ದಕ್ಷಿಣದಿಕ್ಕು, ಪುಣ್ಯಕರ್ಮಣಾ—ಪುಣ್ಯವ್ಯಾಪಾರಿಯಾದ ಅಗಸ್ತ್ಯ ಋಷಿಯಿಂದ. ಆಕ್ರಾಂತಾ—ಆಕ್ರಮಿಸಲ್ಪಟ್ಟಿತೋ, ತದಾಪ್ರಭೃತಿ—ಅದು ಮೊದಲ್ಗೊಂಡು, ನಿರ್ವೈರಾಃ—ದ್ವೇಷರಹಿತರಾದ, ರಜನೀಚರಾಃ—ರಕ್ಕಸರು. ಪ್ರಶಾಂತಾಃ—ಉಪಶಾಂತರಾಗಿದ್ದಾರೆ. ನಾಮ್ನಾ—ಹೆಸರಿನಿಂದ, ಭಗವತಃ—ಪೂಜ್ಯನಾದ, ಇಯಂದಕ್ಷಿಣಾದಿಕ್—ಈ ದಕ್ಷಿಣದಿಕ್ಕು, ಪ್ರದಕ್ಷಿಣಾ—ಪ್ರಚುರವಾದ ಸಜ್ಜನರುಳ್ಳದ್ದಾಗಿ, ತ್ರಿಷುಲೋಕೇಷು—ಮೂರು ಲೋಕಗಳಲ್ಲಿ, ಕ್ರೂರಕರ್ಮಭಿಃ—ಉಗ್ರವ್ಯಾಪಾರವುಳ್ಳ ರಾಕ್ಷಸರಿಂದ, ದುರ್ಧರ್ಷಾ—ತಿರಸ್ಕರಿಸಲಸಾಧ್ಯವಾದ್ದಾಗಿ, ಪ್ರಥಿತಾ—ಪ್ರಸಿದ್ಧವಾಗ್ಗಾಯಿತು ॥೮೪॥ ಅಚಲೋತ್ತಮಃ—ಪರ್ವತಶ್ರೇಷ್ಠವಾದ. ಭಾಸ್ಕರಸ್ಯ—ಸೂರ್ಯನ, ಮಾರ್ಗಂ—ಮಾರ್ಗವನ್ನು, ನಿರೋದ್ಧುಂ—ತಡೆಯುವುದಕ್ಕೋಸುಗ, ನಿರತಃ—ಆಸಕ್ತನಾದ, ವಿಂಧ್ಯಶ್ಶೈಲಃ—ವಿಂಧ್ಯಪರ್ವತವು. ಯಸ್ಯ—ಯಾವ ಋಷಿಯ. ನಿದೇಶಂ—ಆಜ್ಞಾವಚನವನ್ನು, ಪಾಲಯನ್—ಪರಿಪಾಲನೆಮಾಡುತ್ತಿರುವನಾಗಿ, ನವರ್ಧತೇ—ವೃದ್ಧಿಗೊಳ್ಳಲಿಲ್ಲ. ದೀರ್ಘಾಯುಷಃ—ದೀರ್ಘಾಯುಷ್ಮಂತನಾದ ಲೋಕೇ—ಲೋಕದಲ್ಲಿ, ವಿಶ್ರುತಕರ್ಮಣಃ—ಪ್ರಸಿದ್ಧವ್ಯಾಪಾರವುಳ್ಳ, ತಸ್ಯಅಗಸ್ತ್ಯಸ್ಯ—ಆ ಅಗಸ್ತ್ಯಋಷಿಯ, ಶ್ರೀಮಾನ್—ಸಂಪದ್ಯುಕ್ತವಾದ. ವಿನೀತಜನಸೇವಿತಃ—ವಿನಯಸಂಪನ್ನರಾದ ಜನರಿಂದ ಸೇವಿಸಲ್ಪಟ್ಟ, ಆಶ್ರಮಃ—ಆಶ್ರಮವು, ಅಯಂ—ಇದು ॥೮೬॥ ಲೋಕಾರ್ಚಿತಃ—ಜನರಿಂ ಸೇವಿಸಲ್ಪಟ್ಟ, ಏಷಃ—ಈ ಅಗಸ್ತ್ಯಋಷಿಯು, ಸಾಧುರ್ಹಿ—ಸತ್ಪುರುಷನಷ್ಟೆ, ಸತಾಂ—ಸತ್ಪುರುಷರಿಗೆ, ಹಿತೇ—ಇಷ್ಟವಮಾಡುವದರಲ್ಲಿ. ನಿತ್ಯರತಃ—ನಿತ್ಯಾಸಕ್ತನಾದ. ಏಷಃ—ಈ ಅಗಸ್ತ್ಯಋಷಿಯು, ಅಭಿಗತಾನ್—ಎದುರಾಗಿಬಂದಿರುವ ಅಸ್ಮಾನ್—ನಮ್ಮುಗಳನ್ನು, ಶ್ರೇಯಸಾ—ಶ್ರೇಯಸ್ಸಿನಿಂದ, ಯೋಜಯಿಷ್ಯತಿ—ಸೇರಿಸುವನು, ಅತ್ರ—ಈ ಆಶ್ರಮದಲ್ಲಿ. ಅಹಂ—ನಾನು, ಮಹಾಮುನಿಂ—ಮಹರ್ಷಿಯಾದ, ತಮಗಸ್ತ್ಯಂ—ಆ ಅಗಸ್ತ್ಯಋಷಿಯನ್ನು. ಆರಾಧಯಿಷ್ಯಾಮಿ—ಸೇವಿಸುವೆನು, ಹೇಸೌಮ್ಯ—ಎಲೈ ಸೌಮ್ಯನೇ, ಹೇಪ್ರಭೋ—ಎಲೈ ಸಮರ್ಥನೇ ಅಹಂ—ನಾನು, ವನವಾಸಸ್ಯ—ವನವಾಸದ. ಶೇಷಂಚ—ಮಿಕ್ಕದ್ದನ್ನು. ವತ್ಸ್ಯಾಮಿ—ಇರುವೆನು ॥೮೮॥ ಅತ್ರ—ಈ ಆಶ್ರಮದಲ್ಲಿ, ಸಗಂಧರ್ವಾಃ—ಗಂಧರ್ವರಿಂದೊಡಗೂಡಿದ ದೇವಾಃ—ದೇವತೆಗಳು, ಸಿದ್ಧಾಶ್ಚ—ಸಿದ್ಧರೂ, ಪರಮರ್ಷಯಶ್ಚ—ದೊಡ್ಡವರಾದ ಋಷಿಗಳೂ, ನಿಯತಾಹಾರಂ—ಮಿತವಾದಾಹಾರವುಳ್ಳ, ಅಗಸ್ತ್ಯಂ—ಅಗಸ್ತ್ಯಋಷಿಯನ್ನು, ಸತತಂ—ನಿರಂತರದಲ್ಲಿಯೂ, ಪರ್ಯುಪಾಸತೇ—ಸೇವಿಸುತ್ತಾರೆ, ಅತ್ರ—ಈ ಆಶ್ರಮದಲ್ಲಿ. ಮೃಷಾವಾದೀ—ಸುಳ್ಳು ಹೇಳುವವನು. ಕ್ರೂರೋವಾ—ದಯಾಹೀನರಾದರೂ. ಶಠಃ—ಗೂಢವಾಗಿ ಅಪ್ರಿಯವನ್ನು ಮಾಡುವವನಾದರೂ, ನೃಶಂಸಃ—ಘಾತುಕನಾದರೂ, ಕಾಮವೃತ್ತೋವಾ—ಸ್ವೇಚ್ಛಾವಿಹಾರಿಯಾದರೂ. ನಜೀವೇತ್—ಬದುಕಲಾರನು, ಏಷಮುನಿಃ—ಈ ಅಗಸ್ತ್ಯಋಷಿಯು. ತಥಾವಿಧಃ—ಅಂಥಾವನು ॥

---

ದ್ದು ಮೊದಲ್ಗೊಂಡು ರಾಕ್ಷಸರು ದ್ವೇಷವಿಲ್ಲದೆ ಉಪಶಾಂತಿಯನ್ನೈದಿದರು. ದಕ್ಷಿಣಲೆಂದು ಮೂರುಲೋಕಂಗಳಲ್ಲಿಯೂ ಪ್ರಸಿದ್ಧವಾದ ಈ ದಿಕ್ಕು ಅಧಿಕವಾದ ಸಜ್ಜನರುಳ್ಳದ್ದಾಗಿ ಕ್ರೂರಕಾರಿಗಳಾದ ಅಸುರರಿಂದ ತಿರಸ್ಕರಿಸಲಸಾಧ್ಯವೆಂದು ಪ್ರಸಿದ್ಧಿಯಂ ಪೊಂದಿತು ॥೮೪॥ ಇದಲ್ಲದೆ ಸೂರ್ಯಮಾರ್ಗವಂ ತಡೆಯುವುದರಲ್ಲಿ ಆಸಕ್ತವಾದ ವಿಂಧ್ಯಪರ್ವತವು ಯಾವ ಮಹರ್ಷಿಯ ಆಜ್ಞೆಯನ್ನು ಪಾಲಿಸುವದಾಗಿ ವೃದ್ಧಿಯನ್ನೈದಿರುವದೋ, ಅಂಥಾ ದೀರ್ಘಾಯುಷ್ಮಂತನಾದ ಅಗಸ್ತ್ಯಮುನಿಯ ಆಶ್ರಮವಿದೇಸರಿ ॥೮೬॥ ಲೋಕಾರಾಧ್ಯನಾದ ಈ ಮುನಿಯು ಬಹಳ ಸತ್ಪುರುಷನು. ಸಜ್ಜನರಿಗೆ ಹಿತವಂ ಗೈಯ್ಯುವದರಲ್ಲಿ ಆಸಕ್ತಿಯುಳ್ಳವನು, ಇಂಥಾಮಹಾತ್ಮನು, ತನ್ನ ಸುದರ್ಶನಾರ್ಥವಾಗಿ ಬಂದಿರುವ ನಮಗೆ ಶ್ರೇಯಸ್ಸನ್ನು ಮಾಡುವನು, ಇಲ್ಲಿ ಆ ಮಹಾಮುನಿಯನ್ನು ನಾನು ಸೇವಿಸುವೆನು, ಈಗ ಉಳಿದಿರುವ ವನವಾಸದ ದಿನಗಳೆಲ್ಲಾ ಇಲ್ಲಿಯೇ ಇರುವೆನು ॥೮೮॥ ಈ ಆಶ್ರಮದಿ ಗಂಧರ್ವರೂ, ದೇವತೆಗಳೂ, ಸಿದ್ಧರೂ, ಪರಮಋಷಿಗಳೂ, ಇವರೆಲ್ಲರೂ ಮಿತವಾದ ಆಹಾರವುಳ್ಳ ಅಗಸ್ತ್ಯಮುನಿಯನ್ನು ಯಾವಾಗಲೂ ಸೇವಿಸುತ್ತಾರೆ. ಈ ಸ್ಥಳದಲ್ಲಿ ಸುಳ್ಳುಹೇಳತಕ್ಕವನೂ, ದಯಾಹೀನನೂ, ಮನದಲ್ಲಿ ಪರರಿಗೆ ಅಪ್ರಿಯವಂ ಗೈಯ್ಯಬೇಕೆಂಬುವನೂ, ಘಾತಕನಾದವನೂ, ಸ್ವೇಚ್ಛಾವಿಹಾರಿಯಾದವನೂ, ಇವರ್ಯಾರು ಜೀವಿಸಲಾರರು, ಈ ಮುನಿಯು ಅಂಥಾಮಹಾತ್ಮೆಯುಳ್ಳವನು ॥೯೦॥ ಇದಲ್ಲದೆ ಈ ಆಶ್ರಮದಲ್ಲಿ ದೇವತೆಗಳೂ, ಯಕ್ಷರೂ,

ನೋವಿವೋನ್ನೈಸ್ಸೂರ್ಯಸನ್ನಿಭೈಃ । ತ್ಯಕ್ತದೇಹಾನ್ನವೈರ್ದೇಹೈಸ್ಸ್ವರ್ಯಾತಾಃ ಪರಮರ್ಷಯಃ ।೯೨। ಯಕ್ಷತ್ವಮಮರ
ತ್ವಂಚರಾಜ್ಯಾನಿವಿವಿಧಾನಿಚ। ಅತ್ರದೇವಾಃ ಪ್ರಯಚ್ಛಂತಿಭೂತೈರಾರಾಧಿತಾಶ್ಶುಭೈಃ ।೯೩। ಆಗತಾಃಸ್ಮಾಶ್ರಮಪದಂ
ಸೌಮಿತ್ರೇಪ್ರವಿಶಾಗ್ರತಃ । ನಿವೇದಯೇಹಮಾಂಪ್ರಾಪ್ತಮೃಷಯೇಸೀತಯಾಸಹ ।೯೪। ... ...

—*** ಇತಿಶ್ರೀಮದಾರಣ್ಯಕಾಂಡೆ-ಏಕಾದಶಸ್ಸರ್ಗಃ. ***—

ಸಪ್ರವಿಶ್ಯಾಶ್ರಮಪದಂಲಕ್ಷ್ಮಣೋರಾಘವಾನುಜಃ । ಅಗಸ್ತ್ಯಶಿಷ್ಯಮಾಸಾದ್ಯವಾಕ್ಯಮೇತದುವಾಚಹ ।೧।
ರಾಜಾದಶರಥೋನಾಮಜ್ಯೇಷ್ಠಸ್ತಸ್ಯಸುತೋಬಲೀ । ರಾಮಃಪ್ರಾಪ್ತೋಮುನಿಂದ್ರಷ್ಟುಂಭಾರ್ಯಯಾಸಹಸೀತಯಾ ।೨।
ಲಕ್ಷ್ಮಣೋನಾಮತಸ್ಯಾಹಂಭ್ರಾತಾತ್ವವರಜೋಹಿತಃ । ಅನುಕೂಲಶ್ಚಭಕ್ತಶ್ಚಯದಿತೇಶ್ರೋತ್ರಮಾಗತಃ ।೩। ತೇವ

ಅತ್ರ-ಈ ಆಶ್ರಮದಲ್ಲಿ, ದೇವಾಶ್ಚ-ದೇವತೆಗಳೂ, ಯಕ್ಷಾಶ್ಚ-ಯಕ್ಷರೂ. ನಾಗಾಶ್ಚ-ಸರ್ಪಗಳೂ, ಪತಗೈಸ್ಸಹ-ಗರುಡಪಕ್ಷಿಗಳೊಡನೆ, ನಿಯತಾಹಾರಾಃ-ನಿಯಮಿಸಲ್ಪಟ್ಟ ಆಹಾರಗಳುಳ್ಳವರಾಗಿ, ಧರ್ಮಂ-ಧರ್ಮವನ್ನು. ಆರಾಧಯಿಷ್ಯವಃ-ಸೇವಿಸಲಿಚ್ಛೆಯುಳ್ಳವರಾಗಿ, ವಸಂತಿ-ಇರುತ್ತಾರೆ ॥೯೧॥ ಅತ್ರ-ಈ ಆಶ್ರಮದಲ್ಲಿ, ಮಹಾತ್ಮನಃ-ಮಹಾಪ್ರಭಾವವಂತರಾದ, ಸಿದ್ಧಾಃ-ತಪಸ್ಸಿದ್ಧರಾದ, ಪರಮರ್ಷಯಃ-ಶ್ರೇಷ್ಠರಾದ ಋಷಿಗಳು, ತ್ಯಕ್ತದೇಹಾಃ-ಬಿಡಲ್ಪಟ್ಟ ಶರೀರಗಳುಳ್ಳವರಾಗಿ, ನವೈರ್ದೇಹೈಃ-ನೂತನಶರೀರಗಳಿಂದ, ಸ್ವರ್ಯಾತಾಃ-ಸ್ವರ್ಗಲೋಕವಂ ಹೊಂದಿದವರಾಗಿ, ಸೂರ್ಯಸನ್ನಿಭೈಃ-ಸೂರ್ಯನಿಗೆ ಸಮಾನಗಳಾದ, ವಿಮಾನಗಳಿಂದ, ಸಂಚರಂತಿ-ಸಂಚಾರಮಾಡುತ್ತಾರೆ ॥೯೨॥ ಅತ್ರ-ಈ ಅಗಸ್ತ್ಯಾಶ್ರಮದಲ್ಲಿ, ಶುಭೈಃ-ಶುಭಕರರಾದ, ಭೂತೈಃ-ಪ್ರಾಣಿಗಳಿಂದ, ಆರಾಧಿತಾಃ-ಪೂಜಿಸಲ್ಪಟ್ಟ, ದೇವಾಃ-ದೇವತೆಗಳು, ಯಕ್ಷತ್ವಂ-ಯಕ್ಷರೆಂಬ ದೇವಯೋನಿಗಳ ಭಾವವನ್ನಾದರೂ, ಅಮರತ್ವಂವಾ-ದೇವತ್ವವನ್ನಾದರೂ. ವಿವಿಧಾನಿ-ನಾನಾಬಗೆಗಳಾದ. ರಾಜ್ಯಾನಿಚ-ರಾಜ್ಯಗಳನ್ನು, ಪ್ರಯಚ್ಛಂತಿ-ಕೊಡುತ್ತಾರೆ ॥೯೩॥ ಆಶ್ರಮಪದಂ-ಆಶ್ರಮಪ್ರದೇಶವಂಕುರಿತು, ಆಗತಾಸ್ಸ್ಮ-ಬಂದವರಾದೆವು, ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ತ್ವಂ-ನೀನು, ಅಗ್ರತಃ-ಮುಂದುಗಡೆ, ಪ್ರವಿಶ-ಪ್ರವೇಶಿಸು, ಇಹ-ಈಗಲೇ, ಋಷಯೇ-ಅಗಸ್ತ್ಯಋಷಿಗೋಸುಗ, ಮಾಂ-ನನ್ನನ್ನು. ಸೀತಯಾಸಹ-ಸೀತಾದೇವಿಯೊಡಗೂಡ, ಪ್ರಾಪ್ತಂ-ಬಂದಿರುವವನನ್ನಾಗಿ, ನಿವೇದಯ-ತಿಳಿಸು

—*** ಇತಿಶ್ರೀಮದಾರಣ್ಯಕಾಂಡೆ_ಏಕಾದಶಸ್ಸರ್ಗಃ ***—

ರಾಘವಾನುಜಃ-ರಾಮನಿಗೆ ತಮ್ಮನಾದ, ಸಲಕ್ಷ್ಮಣಃ-ಆ ಲಕ್ಷ್ಮಣನು, ಆಶ್ರಮಪದಂ-ಆಶ್ರಮದ ಪ್ರದೇಶವಂಕುರಿತು ಪ್ರವಿಶ್ಯ-ಹೊಕ್ಕು, ಅಗಸ್ತ್ಯಶಿಷ್ಯಂ-ಅಗಸ್ತ್ಯಋಷಿಯ ಶಿಷ್ಯನನ್ನು, ಆಸಾದ್ಯ-ಕಂಡು, ಏತದ್ವಾಕ್ಯಂ-ಈಮಾತನ್ನು, ಉವಾಚ-ಹೇಳಿದನದೆಂತೆ ॥೧॥ ದಶರಥೋನಾಮ-ದಶರಥರಾಯನೆಂದು ಪ್ರಸಿದ್ಧನಾದ, ರಾಜಾ-ಅರಸುಂಟು, ತಸ್ಯ-ಆ ದಶರಥರಾಯನಿಗೆ, ಜ್ಯೇಷ್ಠಸ್ಸುತಃ-ಜ್ಯೇಷ್ಠಕುವರನಾದ, ಬಲೀ-ಬಲವಂತನಾದ (ಅಂದರೆ-ಸಾಮರ್ಥ್ಯವಂತನಾದ) ರಾಮಃ-ಶ್ರೀರಾಮನು. ಭಾರ್ಯಯಾ-ಹೆಂಡತಿಯಾದ, ಸೀತಯಾಸಹ-ಸೀತಾದೇವಿಯೊಡನೆ, ಮುನಿಂ-ಅಗಸ್ತ್ಯಋಷಿಯನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಪ್ರಾಪ್ತಃ-ಬಂದಿಧಾನೆ ॥೨॥ ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧನಾದ, ಅಹಂ-ನಾನು, ತಸ್ಯ-ಆ ಶ್ರೀರಾಮನಿಗೆ, ಅವರಜಃ-ತಮ್ಮನಾದ, ಭ್ರಾತಾ-ಸಹೋದರನು, ಹಿತಃ-ಇಷ್ಟವಂಮಾಡುವವನು, ಅನುಕೂಲಶ್ಚ-ಪ್ರಿಯವನ್ನು ಮಾಡುವವನು, ಭಕ್ತಶ್ಚ-ಭಕ್ತನಾಗಿಯೇನೆ. ತೇ-ನಿನ್ನ, ಶ್ರೋತ್ರಂ-ಕರ್ಣವನ್ನುಕುರಿತು, ಆಗತಃ-ಬಂದಿರಬಹುದು ॥೩॥ ತೇವಯಂ-ಆ ಈ ನಾವುಗಳು, ಪಿತೃಶಾಸನಾತ್-ತಂದೆಯ ಆಜ್ಞೆಯದೆಸೆಯಿಂದ, ಅತ್ಯುಗ್ರಂ-ಬಹುಭಯಂಕರವಾದ, ವನಂ-ಅರಣ್ಯವನ್ನು, ಪ್ರವಿಷ್ಟಾಃ-ಪ್ರವೇಶಿಸಿದೇವೆ. ಸರ್ವೇ-ಸಮಸ್ತರೂ, ಭಗವಂತಂ-

ನಾಗರೂ, ಗರುಡಪಕ್ಷಿಗಳೂ, ಇವರೆಲ್ಲಾ ಮಿತವಾದ ಆಹಾರವಂತೆಗೆದುಕೊಳ್ಳುತ್ತಾ, ಧರ್ಮವನ್ನಾಚರಿಸುವರಾಗಿ ಯಿರುವರು, ಮಹಾತ್ಮರಾದ ಸಿದ್ಧಪುರುಷರು ಇಲ್ಲಿದೇಹವಂ ಬಿಟ್ಟು ಹೊಸಶರೀರಗಳುಳ್ಳವರಾಗಿ, ಸೂರ್ಯಸದೃಶವಾದ ವಿಮಾನಗಳಿಂದ ಸ್ವರ್ಗಕ್ಕೆ ಸಾರುವರು, ಇಷ್ಟುಮಾತ್ರವೇ ಅಲ್ಲದೆ ಇಲ್ಲಿ ದೇವತೆಗಳು ಭೂತಂಗಳಿಂದ ಆರಾಧಿಸಲ್ಪಟ್ಟವರಾಗಿ ಯಕ್ಷತ್ವವನ್ನೂ. ಅಮರತ್ವವನ್ನೂ ಕೊಡುವರು, ನಾವಿಲ್ಲಿಗೆ ಬಂದೆವಷ್ಟೆ! ಎಲೈ ಲಕ್ಷ್ಮಣನನೇ ನೀನು ಮುಂದೆ ಸೀತಾಸಮೇತನಾಗಿ ಬಂದಿರುವ ನನ್ನನ್ನು ಮಹರ್ಷಿಗೆ ವಿಜ್ಞಾಪನೆಯಂ ಗೈಯ್ಯುವನಾಗು।

—* ಆರಣ್ಯಕಾಂಡದಲ್ಲಿನ ೧೧ನೆಯ ಸರ್ಗಂ ಮುಗಿದುದು.*—

ರಾಮಾನುಜನಾದ ಲಕ್ಷ್ಮಣನು ಆ ಆಶ್ರಮಪ್ರವೇಶವಂಗೈದು ಅಗಸ್ತ್ಯಮುನಿಯ ಶಿಷ್ಯನ ಸಂದರುಶನವಂ ಮಾಡಿ ನುಡಿಯುವನದೆಂತೆನೆ,—ದಶರಥನೆಂದು ಪ್ರಖ್ಯಾತನಾದ ಶ್ರೇಷ್ಠ ರಾಜನಿದ್ದನು, ಆತನಿಗೆ ಹಿರಿಮಗನಾದ, ಬಹುಸಾಮರ್ಥ್ಯವಂತನಾದ ಶ್ರೀರಾಮನು ತನ್ನ ಭಾರ್ಯೆಯಾದ ಸೀತಾದೇವಿಯೊಡಗೂಡಿ, ಅಗಸ್ತ್ಯ ಮಹರ್ಷಿಯ ಸಂದರುಶನವಂ ಗೈಯ್ಯಲು ಬಂದಿಧಾನೆ. ನಾನು ಲಕ್ಷ್ಮಣನೆಂದು ಪ್ರಖ್ಯಾತನು, ಆ ಶ್ರೀರಾಮನಿಗೆ ತಮ್ಮನಾಗಿಯೂ, ಹಿತನಾಗಿಯೂ, ಅನುಕೂಲನಾಗಿಯೂ, ಭಕ್ತನಾಗಿಯೂ ಇರುವವನು, ಎಂಬದಾಗಿ ನಿನ್ನ ಶ್ರೋತ್ರವು ಕೇಳಿರಬಹುದು ।೩। ಅಂಥಾ ನಾಗಳು ತಂದೆಯಾದ ದಶರಥಮಹಾರಾಯನ ಆಜ್ಞೆಯಿಂದ ಬ

ಯಂವನಮುತ್ಸೃಜ್ಯಂಪ್ರವಿಷ್ಟಃ ಪಿತೃಶಾಸನಾತ್ । ದ್ರಷ್ಟುಮಿಚ್ಛಾಮಹೇಸರ್ವೇಭಗವಂತಂನಿವೇದ್ಯತಾಂ ।೪। ತಸ್ಯತ
ದ್ವಚನಂಶ್ರುತ್ವಾಲಕ್ಷ್ಮಣಸ್ಯತಪೋಧನಃ । ತಥೇತ್ಯುಕ್ತ್ವಾಗ್ನಿಶರಣಂಪ್ರವಿವೇಶನಿವೇದಿತುಂ ।೫। ಸಪ್ರವಿಶ್ಯಮುನಿಶ್ರೇ
ಷ್ಠಂತಪಸಾದುಷ್ಪ್ರಧರ್ಷಣಂ । ಕೃತಾಂಜಲಿರುವಾಚೇದಂರಾಮಾಗಮನಮಂಜಸಾ । ಯಥೋಕ್ತಂಲಕ್ಷ್ಮಣೇನೈವ
ಶಿಷ್ಯೋಗಸ್ತ್ಯಸ್ಯಸಮ್ಮತಃ ।೬। ಪುತ್ರೌದಶರಥಸ್ಯೇಮೌರಾಮೋಲಕ್ಷ್ಮಣಏವಚ ॥ ಪ್ರವಿಷ್ಟಾವಾಶ್ರಮಪದಂಸೀತ
ಯಾಸಹಭಾರ್ಯಯಾ । ದ್ರಷ್ಟುಂಭವಂತಮಾಯಾತೌಶುಶ್ರೂಷಾರ್ಥಮರಿಂದಮೌ । ಯದತ್ರಾನಂತರಂತತ್ತ್ವಮಾ
ಜ್ಞಾಪಯಿತುಮರ್ಹಸಿ ।೭। ತತಶ್ಶಿಷ್ಯಾದುಪಶ್ರುತ್ಯಪ್ರಾಪ್ತಂರಾಮಂಸಲಕ್ಷ್ಮಣಂ । ವೈದೇಹೀಂಚಮಹಾಭಾಗಾಮಿದಂ
ವಚನಮಬ್ರವೀತ್ ।೮। ದಿಷ್ಟ್ಯಾರಾಮಶ್ಚಿರಸ್ಯಾದ್ಯದ್ರಷ್ಟುಂಮಾಂಸಮುಪಾಗತಃ ॥ ಮನಸಾಕಾಂಕ್ಷಿತಂಹ್ಯಸ್ಯ
ಮಯಾಪ್ಯಾಗಮನಂಪ್ರತಿ।ಗಮ್ಯತಾಂಸತ್ಕೃತೋರಾಮಸ್ಸಭಾರ್ಯಸ್ಸಹಲಕ್ಷ್ಮಣಃ ॥ ಪ್ರವೇಶ್ಯತಾಂಸಮೀಪಂಮೇಕಿಂ

---

ಪೂಜ್ಯನಾದ ಅಗಸ್ತ್ಯಋಷಿಯನ್ನು, ದ್ರಷ್ಟುಂ-ನೋಡುವದಕ್ಕೋಸುಗ, ಇಚ್ಛಾಮಹೇ-ಅಪೇಕ್ಷಿಸುತ್ತೇವೆ, ನಿವೇದ್ಯತಾಂ-ತಿಳಿಸಲ್ಪಡಲಿ ॥೪॥ ತಪೋಧನಃ-ತಪವೇ ಧನವಾಗುಳ್ಳ ಅಗಸ್ತ್ಯಶಿಷ್ಯನು, ತಸ್ಯಲಕ್ಷ್ಮಣಸ್ಯ-ಆ ಲಕ್ಷ್ಮಣನ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ತಥೇತ್ಯುಕ್ತ್ವಾ-ಹಾಗೇ ಆಗಲೆಂದು ಹೇಳಿ. ನಿವೇದಿತುಂ-ತಿಳಿಸುವದಕ್ಕೋಸ್ಕರ, ಅಗ್ನಿಶರಣಂ-ಅಗ್ನಿಹೋತ್ರಗೃಹವಂ ಕುರಿತು, ಪ್ರವಿವೇಶ-ಹೊಕ್ಕನು ॥೫॥ ಅಗಸ್ತ್ಯಸ್ಯ-ಅಗಸ್ತ್ಯಮುನಿಗೆ, ಸಮ್ಮತಃ-ಇಷ್ಟನಾದ, ಸಃಶಿಷ್ಯಃ-ಆ ಶಿಷ್ಯನು, ಸಃ-ಆ ಅಗಸ್ತ್ಯಮುನಿಯ ಶಿಷ್ಯನು, ಪ್ರವಿಶ್ಯ-ಪ್ರವೇಶಿಸಿ, ಕೃತಾಂಜಲಿಃ-ಕೈಮುಗಿದವನಾಗಿ, ತಪಸಾ-ತಪಸ್ಸಿನಿಂದ ದುಷ್ಪ್ರಧರ್ಷಣಂ-ತಿರಸ್ಕರಿಸಲಸಾಧ್ಯನಾದ, ಮುನಿಶ್ರೇಷ್ಠಂ-ಋಷಿಶ್ರೇಷ್ಠನಂ ಕುರಿತು, ಅಂಜಸಾ-ಜಾಗ್ರತೆಯಾಗಿ, ಇದಂ-ಈ ರಾಮಾಗಮನಂ-ಶ್ರೀರಾಮನ ಆಗಮನವನ್ನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಯಥೋಕ್ತಮೇವ-ಹೇಳಲ್ಪಟ್ಟಂತೆ, ಉವಾಚ-ಹೇಳಿದನು ॥೬॥ ದಶರಥಸ್ಯ-ದಶರಥಮಹಾರಾಯನ, ಪುತ್ರೌ-ಮಕ್ಕಳಾದ, ರಾಮಃಲಕ್ಷ್ಮಣಏವಚ-ರಾಮನೂ ಲಕ್ಷ್ಮಣನೆಂಬ, ಇಮೌ-ಈ, ಉಭೌ-ಇಬ್ಬರು, ಭಾರ್ಯಯಾ-ಹೆಂಡತಿಯಾದ, ಸೀತಯಾಸಹ-ಸೀತಾದೇವಿಯೊಡನೆ, ಆಶ್ರಮಪದಂ-ಆಶ್ರಮಪ್ರದೇಶವನ್ನು, ಪ್ರವಿಷ್ಟೌ-ಪ್ರವೇಶಮಾಡಿಯಿದ್ಧಾರೆ, ಅರಿಂದಮೌ-ಶತ್ರುಸಂಹಾರಕರಾದ ಇವರಿಬ್ಬರೂ, ಶುಶ್ರೂಷಾರ್ಥಂ-ಸೇವಾರ್ಥವಾಗಿ, ಭವಂತಂ-ನಿನ್ನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಆಯಾತೌ-ಬಂದಿರುತ್ತಾರೆ, ಅತ್ರ-ಈ ವಿಷಯದಲ್ಲಿ, ಅನಂತರಂ-ಮುಂದೆಮಾಡತಕ್ಕದ್ದು, ಯತ್-ಯಾವದೋ, ತತ್-ಅದನ್ನು, ತ್ವಂ-ನೀನು, ಆಜ್ಞಾಪಯಿತುಂ-ಆಜ್ಞೆ ಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೭॥ ತತಃ-ಬಳಿಕ, ಶಿಷ್ಯಾತ್-ಶಿಷ್ಯನದೆಸೆಯಿಂದ, ಸಲಕ್ಷ್ಮಣಂ-ಲಕ್ಷ್ಮಣನಿಂದೊಡಗೂಡಿದ, ರಾಮಂ-ಶ್ರೀರಾಮನನ್ನು, ಪ್ರಾಪ್ತಂ-ಬಂದವನನ್ನಾಗಿ, ಮಹಾಭಾಗಾಂ-ಮಹಾಪುಣ್ಯಶಾಲಿಯಾದ, ವೈದೇಹೀಂಚ-ಸೀತಾದೇವಿಯನ್ನು ಪ್ರಾಪ್ತಾಂ-ಬಂದವಳನ್ನಾಗಿ, ಉಪಶ್ರುತ್ಯ-ಕೇಳಿ. ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು ॥೮॥ ರಾಮಃ-ಶ್ರೀರಾಮನು, ದಿಷ್ಟ್ಯಾ-ದೈವಾಧೀನದಿಂದ. ಚಿರಸ್ಯ-ಬಹುಕಾಲಕ್ಕೆ, ಅದ್ಯ-ಈಗ, ಮಾಂ-ನನ್ನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಸಮುಪಾಗತಃ-ಬಂದನು, ಮಯಾಪಿ-ನನ್ನಿಂದಲೂ. ಮನಸಾ-ಮನಸ್ಸಿನಲ್ಲಿ, ಅಸ್ಯ-ಈ ಶ್ರೀರಾಮನ, ಆಗಮನಂ-ಬರುವಿಕೆಯು, ಕಾಂಕ್ಷಿತಂಪ್ರತಿ-ನಿರೀಕ್ಷಣೆಮಾಡಲ್ಪಡುತ್ತಿತ್ತು, ತ್ವಯಾ-ನಿನ್ನಿಂದ, ಗಮ್ಯತಾಂ-ಹೋಗಲ್ಪಡಲಿ, ಅಸೌ-ಈ ಶ್ರೀರಾಮನು, ಕಿಂನಪ್ರವೇಶಿತಃ-ಯಾತಕ್ಕೆ ಕರೆದುಕೊಂಡುಬರಲಿಲ್ಲ, ಸತ್ಕೃತಃ-ಪೂಜಿಸಲ್ಪಟ್ಟ, ಸಭಾರ್ಯಃ-ಹೆಂಡತಿಸಹಿತನಾದ, ಸಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದ, ರಾಮಃ-ಶ್ರೀರಾಮನು. ಮೇ-ನನ್ನ, ಸಮೀಪಂ-ಅಂತಿಕವನ್ನು ಕುರಿತು, ಪ್ರವೇಶ್ಯ

---

ಹುಭಯಂಕರವಾದ ಈ ಅರಣ್ಯಪ್ರವೇಶವಂಗೈದೆವು. ಯೆಲ್ಲರು ಅಗಸ್ತ್ಯಮಹಾಮುನಿಯ ಸಂದರುಶನವಂ ಮಾಡಲಿಚ್ಛೈಸುತ್ತೇವೆ ವಳಗೆ ತಿಳುಹಿಸಿರೆನ್ನಲು, ತಪೋಧನನಾದ ಅಗಸ್ತ್ಯಮಹಾಮುನಿಗೆ ಸಮ್ಮತನಾದ ಆ ಶಿಷ್ಯನು ಲಕ್ಷ್ಮಣನು ನಿರೂಪಿಶಿದ ಆ ವಾಕ್ಯವಂಕೇಳಿ, ಹಾಗೆಯೇ ಆಗಲೆಂದು ನುಡಿದು ಆ ಮಾತಂ ಬಿನ್ನೈಸಲಿಕ್ಕಾಗಿ ಅಗ್ನಿಹೋತ್ರಮಂದಿರಕ್ಕೆ ಸಾರಿ, ಕೈಮುಗಿದವನಾಗಿ ತಪದಿಂದ ತಿರಸ್ಕರಿಸಲಸಾಧ್ಯನಾದ ಆ ಮಹರ್ಷಿಯನ್ನುದ್ದೇಶಿಸಿ, ತನಗೆ ಲಕ್ಷ್ಮಣನೆಂತುಪೇಳಿದನೋ ಅಂತು ತ್ವರೆಯಾಗಿ ಶ್ರೀರಾಮನ ಆಗಮನವನ್ನು ಕುರಿತು ವಿಜ್ಞಾಪಿಸುವನದೆಂತೆನೆ,— ॥೬॥ ದಶರಥಮಹಾರಾಯನ ಪುತ್ರರಾದ ರಾಮಲಕ್ಷ್ಮಣರೆಂಬಿವರೀರ್ವರು ಆಶ್ರಮಪ್ರವೇಶವಂಗೈದಿಧಾರೆ, ಶತ್ರುಸಂಹಾರಕರಾದ ಇವರೀರ್ವರೂ ನಿಮ್ಮ ಸೇವಾರ್ಥವಾಗಿಯೂ, ಸಂದರುಶನವಂಗೈಯ್ಯುವದಕ್ಕಾಗಿಯೂ ಬಂದಿರುವರು; ಮುಂದೆ ಯಾವರೀತಿಯಲ್ಲಿ ನಡಯಿಸಬೇಕೋ ಅಪ್ಪಣೆಯಂ ಕೊಡುವನಾಗೆಂದು ಶಿಷ್ಯನು ನುಡಿದಬಳಿಕ ಅಗಸ್ತ್ಯಮಹಾಮುನಿಯು, ರಾಮಲಕ್ಷ್ಮಣರನ್ನೂ ಮಹಾಪುಣ್ಯಶಾಲಿಯಾದ ಸೀತಾದೇವಿಯನ್ನೂ ಸಹಾ ಬಂದಿರುವರನ್ನಾಗಿಕೇಳಿ, ನುಡಿವನದೆಂತೆನೆ.—॥೮। ದೈವಾಧೀನದಿಂದ ಶ್ರೀರಾಮನು ನನ್ನಂ ನೋಡುವದಕ್ಕಾಗಿ ಬಹುಕಾಲಕ್ಕೆ ಈಗಬಂದನು. ನಾನುಸಹಾ ಮನದಲ್ಲಿ ಈತನ ಆಗಮನವಂ ನಿರೀಕ್ಷಿಸುತ್ತಿದ್ದೆನು, ನೀನು ತ್ವರೆಯಾಗಿ ಸಾರು. ಈ ರಘುನಂದನನುಯಾಕೆ ಪ್ರವೇಶಿಸಲ್ಪಡಲಿಲ್ಲ? ಉಪಚರಿಸಲ್ಪಟ್ಟ

ಚಾಸೌನಪ್ರವೇಶಿತಃ ।೧೧॥ ಏವಮುಕ್ತಸ್ತುಮುನಿನಾಧರ್ಮಜ್ಞೇನಮಹಾತ್ಮನಾ । ಅಭಿವಾದ್ಯಾಬ್ರವೀಚ್ಛಿಷ್ಯಸ್ತಥೇತಿನಿಯತಾಂಜಲಿಃ ।೧೨॥ ತತೋನಿಷ್ಕ್ರಮ್ಯಸಂಭ್ರಾಂತಶ್ಶಿಷ್ಯೋಲಕ್ಷ್ಮಣಮಬ್ರವೀತ್॥ಕ್ವಾಸೌರಾಮೋಮುನಿಂದ್ರಷ್ಟುಮೇತುಪ್ರವಿಶತುಸ್ವಯಂ ।೧೩॥ ತತೋಗತ್ವಾಶ್ರಮದ್ವಾರಂಶಿಷ್ಯೇಣಸಹಲಕ್ಷ್ಮಣಃ । ದರ್ಶಯಾಮಾಸಕಾಕುತ್ಸ್ಥಂಸೀತಾಂಚಜನಕಾತ್ಮಜಾಂ ॥೧೪॥ ತಂಶಿಷ್ಯಃ ಪ್ರಶ್ರಿತೋವಾಕ್ಯಮಗಸ್ತ್ಯವಚನಂಬ್ರುವನ್ । ಪ್ರಾವೇಶಯದ್ಯಥಾನ್ಯಾಯಂಸತ್ಕಾರಾರ್ಹಂಸುಸತ್ಕೃತಂ ।೧೫॥ ಪ್ರವಿವೇಶತತೋರಾಮಸ್ಸೀತಯಾಸಹಲಕ್ಷ್ಮಣಃ ।ಪ್ರಶಾಂತಹರಿಣಾಕೀರ್ಣಮಾಶ್ರಮಂಹ್ಯವಲೋಕಯನ್॥೧೬॥ಸತತ್ರಬ್ರಹ್ಮಣಸ್ಥಾನಮಗ್ನೇಸ್ಸ್ಥಾನಂತಥೈವಚ॥ವಿಷ್ಣೋಸ್ಸ್ಥಾನಂಮಹೇಂದ್ರಸ್ಯಸ್ಥಾನಂಚೈವವಿವಸ್ವತಃ॥ಸೋಮಸ್ಥಾನಂಭಗಸ್ಥಾನಂಸ್ಥಾನಂಕೌಬೇರಮೇವಚ । ಧಾತುರ್ವಿಧಾತುಸ್ಸ್ಥಾನೇಚವಾಯೋಸ್ಸ್ಥಾನಂತಥೈವಚ । ನಾಗರಾಜಸ್ಯಚಸ್ಥಾನಮನಂತಸ್ಯಮಹಾತ್ಮನಃ।ಸ್ಥಾನಂತಥೈವಗಾಯತ್ರ್ಯಾವಸೂನಾಂಸ್ಥಾನಮೇವಚ । ಸ್ಥಾನಂಚಪಾಶಹಸ್ತಸ್ಯವರುಣಸ್ಯಮಹಾತ್ಮನಃ । ಕಾರ್ತಿಕೇಯಸ್ಯಚಸ್ಥಾನಂ

---

ತಾಂ-ಪ್ರವೇಶಿಸಲ್ಪಡಲಿ ॥೧೧॥ ॥ ಏವಂ-ಈಪರಿಯಾಗಿ, ಧರ್ಮಜ್ಞೇನ-ಧರ್ಮವಂತನಾಗಿರುವ, ಮಹಾತ್ಮನಾ-ಮಹಾಪ್ರಭಾವವಂತನಾದ. ಮುನಿನಾ-ಅಗಸ್ತ್ಯಮಹರ್ಷಿಯಿಂದ, ಉಕ್ತಃ-ಹೇಳಲ್ಪಟ್ಟ ಶಿಷ್ಯಸ್ತು-ಶಿಷ್ಯನಾದರೆ, ಅಭಿವಾದ್ಯ-ನಮಸ್ಕರಿಸಿ, ನಿಯತಾಂಜಲಿಃ-ಬದ್ಧಾಂಜಲಿಯಾಗಿ, ತಥೇತಿ-ಹಾಗೇ ಆಗಲೆಂದು. ಅಬ್ರವೀತ್-ನುಡಿದನು ॥೧೨॥ ॥ ತತಃ-ಬಳಿಕ, ಸಂಭ್ರಾಂತಃ-ತ್ವರೆಯುಳ್ಳವನಾಗಿ, ನಿಷ್ಕ್ರಮ್ಯ-ಹೊರಟುಬಂದು, ಶಿಷ್ಯಃ-ಅಂತೇವಾಸಿಯು, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಅಸೌರಾಮಃ-ಈ ಶ್ರೀರಾಮನು, ಕ್ವ-ಎಲ್ಲಿ, ಮುನಿಂ-ಋಷಿಯನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಏತು-ಬರಲಿ, ಸ್ವಯಂ-ತಾನು, ಪ್ರವಿಶತು-ಪ್ರವೇಶಿಸಲಿ, ಇತಿ-ಇಂತೆಂದು, ಅಬ್ರವೀತ್-ನುಡಿದನು ॥೧೩॥ ॥ ತತಃ-ಬಳಿಕ, ಶಿಷ್ಯೇಣಸಹ-ಶಿಷ್ಯನೊಡಗೂಡ, ಲಕ್ಷ್ಮಣಃ-ಲಕ್ಷ್ಮಣನು, ಆಶ್ರಮದ್ವಾರಂ-ಆಶ್ರಮದ ಬಾಗಿಲನ್ನು ಕುರಿತು. ಗತ್ವಾ-ಬಂದು. ಕಾಕುತ್ಸ್ಥಂ-ಶ್ರೀರಾಮನನ್ನು. ಜನಕಾತ್ಮಜಾಂ-ಜನಕರಾಯನಮಗಳಾದ, ಸೀತಾಂಚ-ಸೀತಾದೇವಿಯನ್ನು, ದರ್ಶಯಾಮಾಸ-ತೋರಿಸಿದನು ॥೧೪॥ ॥ ಶಿಷ್ಯಃ-ಅಂತೇವಾಸಿಯು, ಪ್ರಶ್ರಿತಃ-ನಮ್ರನಾಗಿ, ಅಗಸ್ತ್ಯವಚನಂ-ಅಗಸ್ತ್ಯಋಷಿಯ ವಚನವನ್ನು, ಬ್ರುವನ್-ಹೇಳುವವನಾಗಿ, ಸತ್ಕಾರಾರ್ಹಂ-ಪೂಜಾಯೋಗ್ಯನಾದ. ಯಥಾನ್ಯಾಯ್ಯಂ-ಯಥಾವಿಧಿಯಾಗಿ, ಸುಸತ್ಕೃತಂ-ಪೂಜಿಸಲ್ಪಟ್ಟ. ತಂ-ಆ ಶ್ರೀರಾಮನನ್ನು, ಪ್ರಾವೇಶಯತ್-ಪ್ರವೇಶಮಾಡಿಸಿದನು ॥೧೫॥ ॥ ತತಃ-ಬಳಿಕ ರಾಮಃ-ಶ್ರೀರಾಮನು, ಲಕ್ಷ್ಮಣಶ್ಚ-ಲಕ್ಷ್ಮಣನೂ, ಸೀತಯಾಸಹ-ಸೀತಾದೇವಿಯೊಡಗೂಡ, ಪ್ರಶಾಂತಹರಿಣಾಕೀರ್ಣಂ-ಉಪಶಾಂತವಾದ ಅಂದರೆ ವ್ಯಥೆಯಿಲ್ಲದಿರುವ, ಹರಿಣಾ-ಚಿಗರಿಗಳಿಂದ, ಆಕೀರ್ಣಂ-ತುಂಬಿರುವ, ಆಶ್ರಮಂ-ಅಗಸ್ತ್ಯಾಶ್ರಮವನ್ನು, ಅವಲೋಕಯನ್-ನೋಡುತ್ತಿರುವನಾಗಿ, ಪ್ರವಿವೇಶ-ಹೊಕ್ಕನು ॥೧೬॥ ॥ ಸಃ-ಆ ಶ್ರೀರಾಮನು. ತತ್ರ-ಆ ಅಗಸ್ತ್ಯಾಶ್ರಮದಲ್ಲಿ, ಬ್ರಹ್ಮಣಃ-ಬ್ರಹ್ಮದೇವರ, ಸ್ಥಾನಂ-ಸ್ಥಾನವನ್ನು. ತಥೈವ-ಹಾಗೆಯೇ, ಅಗ್ನೇಃ-ಅಗ್ನಿಯ. ಸ್ಥಾನಂ-ಸ್ಥಳವನ್ನು, ವಿಷ್ಣೋಃ-ಶ್ರೀಮಹಾವಿಷ್ಣುವಿನ, ಸ್ಥಾನಂ-ಸ್ಥಳವನ್ನು, ಮಹೇಂದ್ರಸ್ಯ-ದೇವೇಂದ್ರನ. ಸ್ಥಾನಂ-ಸ್ಥಳವನ್ನು, (ವಿಷ್ಣೋಸ್ಸ್ಥಾನಂಮಹೇಶಸ್ಯೇತಿಪಾಠಾಂತರಂ-ಆ ಪಾಠದಲ್ಲಿ, ಮಹೇಶಸ್ಯ-ಪರಮೇಶ್ವರನ. ಸ್ಥಾನಂ-ಸ್ಥಾನವನ್ನು. ಈ ಸ್ಥಳದಲ್ಲಿ ಕೆಲವರಿಂದ, ಪರಮೇಶ್ವರನಲ್ಲಿ ದ್ವೇಷಬುದ್ಧಿಯಿಂದ, "ಮಹೇಂದ್ರಸ್ಯ" ಎಂದುಪಾಠಕಲ್ಪಿಸಿರುವರು, ವಾಸ್ತವ್ಯವಾಗಿ ಅಗಸ್ತ್ಯಋಷಿಯೇ ಶಿವಭಕ್ತನಾದಕಾರಣ ಶಿವನಿಗೆ ಅಪೂಜ್ಯತ್ವವೆಂಬುವದು, ದ್ವೇಷದಿಂದ ಭ್ರಾಂತಿಕಲ್ಪಿತವೇ ಹೊರತು ಯಥಾರ್ಥವಲ್ಲ) ವಿವಸ್ವತಃ-ಸೂರ್ಯನ, ಸ್ಥಾನಂ-ಸ್ಥಾನವನ್ನು ಸೋಮಸ್ಥಾನಂ-ಚಂದ್ರನಸ್ಥಾನವನ್ನೂ, ಭಗಸ್ಥಾನಂ-ಭಗನೆಂಬ ಸೂರ್ಯನಸ್ಥಾನವನ್ನೂ, ಕೌಬೇರಮೇವಚ-ಕುಬೇರನಸ್ಥಾನವನ್ನೂ, ಧಾತುಃ-ಧಾತೃ ಎಂಬ ಸೃಷ್ಟಿಕರ್ತನ, ವಿಧಾತುಃ-ವಿಧಾತೃವೆಂಬ ದೇವತೆಯ ಸ್ಥಾನೇಚ-ಸ್ಥಾನಗಳನ್ನು, ವಾಯೋಃ-ವಾಯುದೇವರ, ಸ್ಥಾನಂ-ಸ್ಥಾನವನ್ನು, ತಥೈವ-ಹಾಗೆಯೆ, ನಾಗರಾಜಸ್ಯಚ-ನಾಗರಾಜನಾದ (ಅಂದರೆ-ಸರ್ಪಗಳಿಗೆ ಅಧಿಪತಿಯಾದ.) ಮಹಾತ್ಮನಃ-ಮಹಾಪ್ರಭಾವವಂತನಾದ, ಅನಂತಸ್ಯ-ಅನಂತನ

---

ವನಾಗಿ ಆ ಶ್ರೀರಾಮನು ಸೀತಾಲಕ್ಷ್ಮಣರಿಂದೊಡಗೂಡಿ ಯನ್ನಸಮೀಪಕ್ಕೆ ಬರಮಾಡಿಸುವನಾಗು ॥೧೧॥

ಈ ಪ್ರಕಾರವಾಗಿ ಧರ್ಮಜ್ಞನಾದ ಆ ಅಗಸ್ತ್ಯಮಹಾಮುನಿಯಿಂದ ಹೇಳಲ್ಪಟ್ಟವನಾಗಿ ಆ ಶಿಷ್ಯನು ವಂದನೆಯಂ ಗೈದು, ಅಂಜಲಿಬದ್ಧನಾಗಿ ಅಪ್ಪಣೆಯಾದಂತೆ ನಡಿಯುವೆನೆಂದು ನುಡಿದಬಳಿಕ, ತ್ವರೆಯಾಗಿ ಹೊರಟುಬಂದು ಲಕ್ಷ್ಮಣನಂಕುರಿತು ನಿರೂಪಿಸುವನದೆಂತೆನೆ,-ಎಲೈಲಕ್ಷ್ಮಣನೇ! ಆ ಶ್ರೀರಾಮನೆಲ್ಲಿರುವನು? ಮಹಾಮುನಿಯ ದರ್ಶನವಂ ಗೈಯ್ಯುವದಕ್ಕಾಗಿ ಬರಲಿ, ಸ್ವಯಮೇವ ಪ್ರವೇಶವಂ ಮಾಡುವನಾಗಲೆಂದು ನುಡಿದನು ।೧೩॥ ಬಳಿಕ ಲಕ್ಷ್ಮಣನು ಶಿಷ್ಯನಸಂಗಡ ಆಶ್ರಮದ ದ್ವಾರಕ್ಕೆಬಂದು ಸೀತಾರಾಮರೀರ್ವರಂ ತೋರಿಸಿದವನಾಗಲು; ಆ ಶಿಷ್ಯನು ವಿಧೇಯನಾಗಿ ಅಗಸ್ತ್ಯಮಹಾಮುನಿಯ ವಾಕ್ಯವನ್ನು ನುಡಿಯುತ್ತಾ, ಪೂಜಾರ್ಹನಾದ ಶ್ರೀರಾಮನನ್ನು ಯಥಾಯೋಗ್ಯವಾಗಿ ಉಪಚರಿಸಿದವನಾಗಿ ಪ್ರವೇಶವಂ ಮಾಡಿಸಿದನು ।೧೫॥ ಅನಂತರದಲ್ಲಿ ರಾಮಲಕ್ಷ್ಮಣರೂ, ಸೀತಾದೇವಿಯೂ ಸಹಾ ವ್ಯಥೆಯಿಲ್ಲದ ಚಿಗರಿಗಳಿಂದ ತುಂಬಿದ ಆ ಆಶ್ರಮವನ್ನು ನೋಡು

ಧರ್ಮಸ್ಥಾನಂಚಪಶ್ಯತಿ ॥೨೦॥ ತತಶ್ಶಿಷ್ಯೈಃಪರಿವೃತೋಮುನಿರಪ್ಯಭಿನಿಷ್ಪತತ್ । ತಂದದರ್ಶಾಗ್ರತೋರಾಮೋ
ಮುನೀನಾಂದೀಪ್ತತೇಜಸಾಂ ॥೨೧॥ ಅಬ್ರವೀದ್ವಚನಂವೀರೋಲಕ್ಷ್ಮಣಂಲಕ್ಷ್ಮಿವರ್ಧನಂ। ಏಷಲಕ್ಷ್ಮಣನಿಷ್ಕ್ರಾ
ಮತ್ಯಗಸ್ತ್ಯೋಭಗವಾನೃಷಿಃ । ಔದಾರ್ಯೇಣಾವಗಚ್ಛಾಮಿನಿಧಾನಂತಪಸಾಮಿಮಂ ॥೨೩॥ ಏವಮುಕ್ತ್ವಾಮಹಾ
ಬಾಹುರಗಸ್ತ್ಯಂಸೂರ್ಯವರ್ಚಸಂ । ಜಗ್ರಾಹಪರಮಪ್ರೀತಸ್ತಸ್ಯಪಾದೌಪರಂತಪಃ ॥೨೪॥ ಅಭಿವಾದ್ಯತುಧರ್ಮಾತ್ಮಾ
ತಸ್ಥೌರಾಮಃಕೃತಾಂಜಲಿಃ । ಸೀತಯಾಸಹವೈದೇಹ್ಯಾತದಾರಾಮಸ್ಸಲಕ್ಷ್ಮಣಃ ॥೨೫॥ ಪ್ರತಿಜಗ್ರಾಹಕಾಕುತ್ಸ್ಥ
ಮರ್ಘ್ಯಮಿತ್ವಾಸನೋದಕೈಃ । ಕುಶಲಂಪ್ರಶ್ನಮುಕ್ತ್ವಾಚಹ್ಯಾಸ್ಯತಾಮಿತಿಚಾಬ್ರವೀತ್ ॥೨೬॥ ಅಗ್ನಿಂಹುತ್ವಾಪ್ರದಾಯಾ
ರ್ಘ್ಯಮತಿಥೀನ್ಪ್ರತಿಪೂಜ್ಯಚ । ವಾನಪ್ರಸ್ಥೇನಧರ್ಮೇಣಸತೇಷಾಂಭೋಜನಂದದೌ ॥೨೭॥ ಪ್ರಥಮಂಚೋಪವಿಶ್ಯಾಥ

---

...ಯ ಸ್ಥಾನಂ-ಸ್ಥಾನವನ್ನು, ತಥೈವ-ಹಾಗೆಯೇ, ಗಾಯತ್ರ್ಯಾಃ-ಗಾಯತ್ರೀದೇವತೆಯ. ಸ್ಥಾನಂ-ಸ್ಥಾನವನ್ನು, ವಸೂನಾಂ-ಅಷ್ಟವಸುಗಳ ಸ್ಥಾನಮೇವಚ-ಸ್ಥಾನವನ್ನು, ಪಾಶಹಸ್ತಸ್ಯ-ಪಾಶವೇ ಹಸ್ತದಲ್ಲುಳ್ಳ, ಮಹಾತ್ಮನಃ-ಮಹಾಪ್ರಭಾವವಂತನಾದ, ವರುಣಸ್ಯ-ವರುಣನ. ಸ್ಥಾನಂ-ಸ್ಥಾನವನ್ನು. ಕಾರ್ತಿಕೇಯಸ್ಯಚ-ಕುಮಾರಸ್ವಾಮಿಯ, ಸ್ಥಾನಂ-ಸ್ಥಾನವನ್ನು, ಧರ್ಮಸ್ಥಾನಂಚ-ಧರ್ಮಸ್ಥಳವನ್ನು ಪಶ್ಯತಿಹಿ-ನೋಡಿದನಷ್ಟೆ॥ ೨೦॥ ॥ ತತಃ-ಬಳಿಕ, ಶಿಷ್ಯೈಃ-ಶಿಷ್ಯರಿಂದ, ಪರಿವೃತಃ-ಸುತ್ತು ಬಾರಲ್ಪಟ್ಟವನಾಗಿ, ಮುನಿರಪಿ-ಅಗಸ್ತ್ಯಋಷಿಯೂ, ಅಭಿನಿಷ್ಪತತ್-ಯೆದುರಾಗಿ ಬಂದನು. ರಾಮಃ-ಶ್ರೀರಾಮನು. ದೀಪ್ತತೇಜಸಾಂ-ಹೊಳೆಯುತ್ತಿರುವ ಬ್ರಹ್ಮತೇಜಸ್ಸುಳ್ಳ, ಮುನೀನಾಂ-ಋಷಿಗಳ, ಅಗ್ರತಃ-ಮುಂಧುಗಡೆ. ತಂ-ಆ ಅಗಸ್ತ್ಯಋಷಿಯನ್ನು ದದರ್ಶ-ಕಂಡನು ॥೨೧॥ ॥ ವೀರಃ-ಶೂರನಾದ ಶ್ರೀರಾಮನು. ಲಕ್ಷ್ಮಿವರ್ಧನಂ-ಲಕ್ಷ್ಮೀಸಂಪನ್ನನಾದ. ಲಕ್ಷ್ಮಣಂ-ಲಕ್ಷ್ಮಣನಂಕುರಿತು. ವಚನಂ-ಮಾತನ್ನು. ಅಬ್ರವೀತ್-ನುಡಿದನು, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ. ಏಷೋಗಸ್ತ್ಯಃ-ಈ ಅಗಸ್ತ್ಯನೆಂಬ ಋಷಿಃ-ಋಷಿಯು, ನಿಷ್ಕ್ರಾಮತಿ-ಹೊರಟುಬರುತ್ತಾನೆ. ತಪಸಾಂ-ತಪಸ್ವಿಗಳಿಗೆ, ನಿಧಾನಂ-ನಿಕ್ಷೇಪರೂಪವಾದ. ಇಮಂ-ಈ ಅಗಸ್ತ್ಯಋಷಿಯನ್ನು, ಔದಾರ್ಯೇಣ-ಬ್ರಹ್ಮತೇಜಸ್ಸಿನ ಗಾಂಭೀರ್ಯದಿಂದ- ಅವಗಚ್ಛಾಮಿ-ತಿಳಿಯುತ್ತೇನೆ ॥೨೩॥ ॥ ಏವಂ-ಈ ಪರಿಯಾಗಿ ಪರಂತಪಃ-ಶತ್ರುಸಂಹಾರಕನಾದ. ಮಹಾಬಾಹುಃ-ಮಹಾಭುಜಶಾಲಿಯಾದ ಶ್ರೀರಾಮನು, ಉಕ್ತ್ವಾ-ಹೇಳಿ, ಪರಮಪ್ರೀತಃ-ಬಹಳ ಸಂತೋಷಗೊಂಡವನಾಗಿ, ಸೂರ್ಯವರ್ಚಸಂ-ಸೂರ್ಯನ ತೇಜಸ್ಸುಳ್ಳ, ಅಗಸ್ತ್ಯಂ-ಅಗಸ್ತ್ಯಋಷಿಯನ್ನು. ದದರ್ಶ-ಕಂಡನು. ತಸ್ಯ-ಆ ಅಗಸ್ತ್ಯಋಷಿಯ. ಪಾದೌ-ಚರಣಗಳನ್ನು, ಜಗ್ರಾಹ-ಗ್ರಹಿಸಿದನು ॥೨೪॥ ॥ ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಯೋಗಿಗಳಮನಸ್ಸಿಗೆ ಆನಂದಕರನಾದ, ರಾಮಃ-ಶ್ರೀರಾಮನು, ವೈದೇಹ್ಯಾ-ಜನಕರಾಯನ ಮಗಳಾದ, ಸೀತಯಾಸಹ-ಸೀತಾದೇವಿಯೊಡನೆ, ಸಲಕ್ಷ್ಮಣಃ-ಲಕ್ಷ್ಮಣನೊಡಗೂಡಿದವನಾಗಿ, ಅಭಿವಾದ್ಯ ನಮಸ್ಕರಿಸಿ, ತದಾ-ಆ ಕಾಲದಲ್ಲಿ, ಕೃತಾಂಜಲಿಃ-ಅಂಜಲಿಬದ್ಧನಾಗಿ, ತಸ್ಥೌ-ನಿಂತನು ॥೨೫॥ ಕಾಕುತ್ಸ್ಥಂ-ಶ್ರೀರಾಮನನ್ನು. ಆಸನೋದಕೈಃ-ಪೀಠದಿಂದಲೂ ಪಾದ್ಯಾರ್ಘ್ಯಾಚಮನಾರ್ಥವಾದ ಉದಕದಿಂದಲೂ, ಅರ್ಚಯಿತ್ವಾ-ಪೂಜೆಮಾಡಿ, ಪ್ರತಿಜಗ್ರಾಹ-ಯೆದುರುಗೊಂಡನು. ಕುಶಲಪ್ರಶ್ನಂ-ಕ್ಷೇಮವೇ ಮುಂತಾದ ಪ್ರಶ್ನೆಯನ್ನು, ಉಕ್ತ್ವಾ-ಹೇಳಿ, ಆಸ್ಯತಾಂಇತಿಚ-ಕೂಡಲ್ಪಡಲೀ ಯೆಂದು ಅಬ್ರವೀತ್-ನುಡಿದನು ॥೨೬॥ ಸಃ-ಆ ಅಗಸ್ತ್ಯಋಷಿಯು, ಅಗ್ನಿಂ-ಅಗ್ನಿಹೋತ್ರವನ್ನು. ಹುತ್ವಾ-ಹೋಮಮಾಡಿ ಅತಿಥೀನ್-ಅತಿಥಿಗಳನ್ನುಕುರಿತು, ಅರ್ಘ್ಯಂ-ಅರ್ಘ್ಯವನ್ನು, ಪ್ರದಾಯ-

---

ತ್ತು ಪ್ರವೇಶಿಸಿದರದೆಂತೆನೆ,—ಆ ಶ್ರೀರಾಮನು ಅಗಸ್ತ್ಯಾಶ್ರಮದಲ್ಲಿ "ಬ್ರಹ್ಮ, ಅಗ್ನಿ, ವಿಷ್ಣು, ದೇವೇಂದ್ರ, ಶಿವ, ಸೂರ್ಯ, ಚಂದ್ರ, ಭಗ, ಕುಬೇರ ವಿಧಾತೃ, ವಾಯು, ಧರ್ಮ." ಎಂಬ ಈ ದೇವತೆಗಳಸ್ಥಾನಗಳನ್ನು ನೋಡಿದನು ॥೨೦॥ ಬಳಿಕ ಶಿಷ್ಯರಿಂದ ಪರಿವೃತನಾಗಿ ಆ ಅಗಸ್ತ್ಯಮುನಿಯು ಸಹಾ ಎದುರಾಗಿ ಬಂದವನಾಗಲು ಶ್ರೀರಾಮನು ಹೊಳೆವ ಬ್ರಹ್ಮತೇಜಸ್ಸುಳ್ಳ ಋಷಿಗಳ ಮುಂಗಡೆಯಲ್ಲಿ ಆ ಮಹರ್ಷಿಯಂ ಕಂಡು ಲಕ್ಷ್ಮೀಸಂಪನ್ನನಾದ ಲಕ್ಷ್ಮಣನಿಗೆ ಹೇಳುವನದೆಂತೆನೆ,—ಎಲೈ ಒಡಹುಟ್ಟಿದವನೇ! ಷಡ್ಗುಣೈಶ್ವರ್ಯಸಂಪನ್ನನಾದ ಈ ಮಹರ್ಷಿಯು ಹೊರಟುಬರುತ್ತಲಿಹಾನೆ, ತಪಸ್ವಿಗಳಿಗೆ ನಿಕ್ಷೇಪರೂಪವಾಗಿರುವ ಈ ಮಹರ್ಷಿಯ ಔದಾರ್ಯವೆಂಥಾದ್ದು? ಹಾಹಾ!! ಅತ್ಯಾಶ್ಚರ್ಯಕರವಾಗಿರುವದೆಂದು ಈಪ್ರಕಾರವಾಗಿ ಹೇಳಿ ಬಹು ಸಂತೋಷಗೊಂಡವನಾಗಿ, ಸೂರ್ಯನಂತೆ ಬೆಳಗುತ್ತಿರುವ ಆ ಮಹರ್ಷಿಯಂ ಕಂಡು ಆತನ ಪಾದಾರವಿಂದಗಳಂ ಪಿಡಿದನದೆಂತೆನೆ,— ॥೨೪॥ ಯೋಗಿಗಳ ಮನಸ್ಸಿಗೆ ಆನಂದಕರನಾದ, ಮಹಾಧರ್ಮಿಷ್ಠನಾದ ಆ ಶ್ರೀರಾಮನು ಜನಕನಂದಿನಿಯಾದ ಸೀತಾದೇವಿಯೊಡಗೂಡಿ, ಲಕ್ಷ್ಮಣನೊಡನೆಯೂ ಸಹಾ ಆ ಮಹರ್ಷಿಗೆ ನಮಸ್ಕಾರವಂಗೈದು ಅಂಜಲಿಬದ್ಧನಾಗಿ, ನಿಂತವನಾಗಲು, ಆ ಮುನಿಯು "ಪೀಠ, ಪಾದ್ಯ, ಅರ್ಘ್ಯ, ಆಚಮನಾದಿಗಳಿಂದ,, ಪೂಜಿಸಿ ಎದುರ್ಗೊಂಡು, ಕುಶಲಪ್ರಶ್ನೆಯಂಗೈದು ಕುಳಿತುಕೊಳ್ಳೆಂದು ನುಡಿದನು. ॥೨೬॥ ಬಳಿಕ ಆ ಅಗಸ್ತ್ಯಮುನಿಯು ಅಗ್ನಿಹೋತ್ರವಂಗೈದು, ಅತಿಥಿಗಳಾದ ರಾಮಾದಿಗಳನ್ನುದ್ದೇಶಿಸಿ ಅರ್ಘ್ಯವಂಕೊಟ್ಟು ಪೂಜೆಯುಂಗೈದು, ವಾನಪ್ರಸ್ಥಾರ್ಹನಾದ

ಧರ್ಮಜ್ಞೋ ಮುನಿಪುಂಗವಃ । ಉವಾಚ ರಾಮಮಾಸೀನಂ ಪ್ರಾಂಜಲಿಂ ಧರ್ಮಕೋವಿದಂ ॥೧೮॥ ಅಗ್ನಿಂ ಹುತ್ವಾ ಪ್ರದಾಯಾರ್ಘ್ಯಮತಿಥಿಂ ಪ್ರತಿಪೂಜಯೇತ್ । ಅನ್ಯಥಾ ಖಲು ಕಾಕುತ್ಸ್ಥ ತಪಸ್ವೀ ಸಮುದಾಚರನ್ । ದುಸ್ಸಾಕ್ಷೀವ ಪರೇ ಲೋಕೇ ಸ್ವಾನಿ ಮಾಂಸಾನಿ ಭಕ್ಷಯೇತ್ ॥೧೯॥ ರಾಜಾ ಸರ್ವಸ್ಯ ಲೋಕಸ್ಯ ಧರ್ಮಚಾರೀ ಮಹಾರಥಃ । ಪೂಜನೀಯಶ್ಚ ಮಾನ್ಯಶ್ಚ ಭವಾನ್ ಪ್ರಾಪ್ತಃ ಪ್ರಿಯಾತಿಥಿಃ ॥ ಏವಮುಕ್ತ್ವಾ ಫಲೈರ್ಮೂಲೈಃ ಪುಷ್ಪೈರನ್ಯೈಶ್ಚ ರಾಘವಂ । ಪೂಜಯಿತ್ವಾ ಯಥಾಕಾಮಂ ಪುನರೇವ ತತೋಽಬ್ರವೀತ್ । ಇದಂ ದಿವ್ಯಂ ಮಹಚ್ಚಾಪಂ ಹೇಮರತ್ನವಿಭೂಷಿತಂ । ವೈಷ್ಣವಂ ಪುರುಷವ್ಯಾಘ್ರ ನಿ

---

ಕೊಟ್ಟು, ಪ್ರತಿಪೂಜ್ಯ-ಪೂಜೆಮಾಡಿ, ವಾನಪ್ರಸ್ಥೇನ-ವಾನಪ್ರಸ್ಥಾಶ್ರಮಕ್ಕೆ ಯೋಗ್ಯವಾದ, ಧರ್ಮೇಣ-ಧರ್ಮದಿಂದ. ಶೇಷಾಂ-ಆಸೀನರಾದವರಿಗೆ, ಭೋಜನಂ-ಆಹಾರವನ್ನು. ದದೌ-ಕೊಟ್ಟನು ॥ ೧೭॥ ಧರ್ಮಜ್ಞಃ-ಸಕಲ ಧರ್ಮಗಳನ್ನು ತಿಳಿದಿರುವ, ಮುನಿಪುಂಗವಃ-ಅಗಸ್ತ್ಯಋಷಿಯು. ಪ್ರಥಮಂ-ಮೊದಲು, ಉಪವಿಶ್ಯ-ಕುಳಿತುಕೊಂಡು, ಧರ್ಮಕೋವಿದಂ-ಧರ್ಮಾನುಷ್ಠಾನದಲ್ಲಿ ಪಂಡಿತನಾದ, ಪ್ರಾಂಜಲಿಂ-ಅಂಜಲಿಬದ್ಧನಾದ, ಆಸೀನಂ-ಕುಳಿತುಕೊಂಡಿರುವ, ರಾಮಂ-ಶ್ರೀರಾಮನನ್ನು ಕುರಿತು. ಉವಾಚ-ಹೇಳಿದನು ॥೧೮॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೇ, ಅಗ್ನಿಂ ಹುತ್ವಾ-ಅಗ್ನಿಯಲ್ಲಿ ಹೋಮವನ್ನುಮಾಡಿ, ಅರ್ಘ್ಯಂ-ಅರ್ಘ್ಯವನ್ನು. ಪ್ರದಾಯ-ಕೊಟ್ಟು, ಅತಿಥಿಂ-ಅತಿಥಿಯನ್ನು ಪ್ರತಿಪೂಜಯೇತ್-ಪೂಜೆಮಾಡತಕ್ಕದ್ದು, ಅನ್ಯಥಾ-ಹಾಗಲ್ಲದುದಾಗಿ, ಸಮುದಾಚರನ್-ಆಚರಿಸುತ್ತಿರುವ, ತಪಸ್ವೀ-ಋಷಿಯು, ದುಸ್ಸಾಕ್ಷೀವ-ಕೂಟಸಾಕ್ಷಿಯಂತೆ, ಸ್ವಾನಿಮಾಂಸಾನಿ-ಸ್ವಕೀಯವಾದ ಮಾಂಸಗಳನ್ನು, ಭಕ್ಷಯೇತ್-ಭಕ್ಷಿಸುವನು ॥೧೯॥ ಸರ್ವಸ್ಯಲೋಕಸ್ಯ-ಸಮಸ್ತ ಲೋಕಕ್ಕೂ, ರಾಜಾ-ದೊರೆಯಾದ. ಧರ್ಮಚಾರೀ-ಧರ್ಮಾನುಷ್ಠಾನ ತತ್ಪರನಾದ, ಮಹಾರಥಃ-ಮಹಾರಥಿಕನಾದ. ಪೂಜನೀಯಃ-ಪೂಜ್ಯನಾದ. ಮಾನ್ಯಶ್ಚ-ಬಹುಮಾನಿಸತಕ್ಕ, ಭವಾನ್-ನೀನು, ಪ್ರಿಯಾತಿಥಿಃ-ಇಷ್ಟನಾಗಿಯೂ ಅಭ್ಯಾಗತನಾಗಿಯೂ, ಪ್ರಾಪ್ತಃ-ಬಂದಿರುತ್ತೀ, (ತಾತ್ಪರ್ಯಸ್ತು-ಸರ್ವಲೋಕಸ್ಯ-ಸಮಸ್ತ ಲೋಕಗಳಿಗೂ, ರಾಜಾ-ರಂಜಕನಾದ ಅಥವಾ ಪರಿಪಾಲಕನಾದ. ಧರ್ಮಚಾರೀಚ-ಧರ್ಮವ್ಯವಸ್ಥಾಪಕನಾದ, ಮಹಾರಥಃ-ಗರುಡನೇ ರಥವಾಗುಳ್ಳ, ಪ್ರಿಯಾತಿಥಿಃ-ಸಕಲಭೂತಗಳಿಗೂ ಆತ್ಮಸ್ವರೂಪನಾದ್ದರಿಂದ ಪ್ರಿಯನಾದ, ಅತಿಥಿಃ-ಈ ಕಾಲಕ್ಕೆ ಅಭ್ಯಾಗತನಾಗಿ, ಪ್ರಾಪ್ತಃ-ಬಂದಿರುವ.) ಭವಾನ್-ನೀನು. ಪೂಜನೀಯಶ್ಚ-ಸತ್ಕರ್ಮಗಳಿಂ ಆರಾಧನೆಮಾಡತಕ್ಕವನು, ಮಾನ್ಯಶ್ಚ-ಮುಕ್ತರೂ ಯೋಗಿಗಳಿಂದ ಧ್ಯಾನಮಾಡತಕ್ಕವನು ॥೨೦॥ ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ ರಾಘವಂ-ಶ್ರೀರಾಮನನ್ನು, ಫಲೈಃ-ಫಲಗಳಿಂದಲೂ, ಮೂಲೈಃ-ಕಂದಮೂಲಗಳಿಂದಲೂ, ಪುಷ್ಪೈಃ-ಹೂವುಗಳಿಂದಲೂ. ಅನ್ಯೈಃ-ಮತ್ತು ಕೆಲಪದಾರ್ಥಗಳಿಂದಲೂ. ಯಥಾಕಾಮಂ-ಇಷ್ಟಾನುಸಾರವಾಗಿ, ಪೂಜಯಿತ್ವಾ-ಪೂಜೆಮಾಡಿ,ತತಃ-ಬಳಿಕ.ಪುನರೇವ-ಮತ್ತೂ, ಅಬ್ರವೀತ್-ನುಡಿದನು ॥೨೧॥ ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಹೇಮರತ್ನವಿಭೂಷಿತಂ-ಚಿನ್ನದಿಂದಲೂ ರತ್ನಗಳಿಂದಲೂ ಅಲಂಕೃತವಾದ, ದಿವ್ಯಂ-ಮನೋಹರವಾದ. ವೈಷ್ಣವಂ-ವಿಷ್ಣು ಸಂಬಂಧವಾದ, ಮಹತ್-ದೊಡ್ಡದಾದ, ಇದಂಚಾಪಂ-ಈ ಬಿಲ್ಲು, ವಿಶ್ವಕರ್ಮಣಾ-ವಿಶ್ವಕರ್ಮಬ್ರಹ್ಮನಿಂದ, ನಿರ್ಮಿತಂ-ನಿರ್ಮಿಸಲ್ಪಟ್ಟ

---

ಧರ್ಮಗಳಿಂದ ಅವರಿಗೆ ಭೋಜನವಂ ಮಾಡಿಸಿದನು ॥೧೭॥ ಬಳಿಕ ಧರ್ಮಜ್ಞನಾದ ಆ ಮುನಿಯು ತಾನು ಮೊದಲು ಕುಳಿತವನಾಗಿ; ಧರ್ಮಾನುಷ್ಠಾನದಲ್ಲಿ ಕೋವಿದನಾದ ಅಂಜಲಿಬದ್ಧನಾಗಿ ಕುಳಿತ ಆ ಶ್ರೀರಾಮನನ್ನುದ್ದೇಶಿಸಿ ನುಡಿವನದೆಂತೆನೆ,—॥೧೮॥ ಎಲೈಶ್ರೀರಾಮನೇ! ಅಗ್ನಿಯಲ್ಲಿ ಹೋಮವಂಗೈದು ಅರ್ಘ್ಯವಂಕೊಟ್ಟು ಅತಿಥಿಯಂ ಪೂಜಿಸಬೇಕು. ಹಾಗೆ ನಡಿಯದಿದ್ದರೆ ಋಷಿಯಾದವನು ಅಪಸಾಕ್ಷಿ ನುಡಿದವನಂತೆ ತನ್ನ ಮಾಂಸಗಳನ್ನು ಭುಜಿಸುವನು ॥೧೯॥ ಸಮಸ್ತವಾದ ಲೋಕಗಳಿಗೂ ಅಧಿಪತಿಯಾಗಿಯೂ, ಧರ್ಮಾನುಷ್ಠಾನವಂಗೈಯ್ಯುವದರಲ್ಲಿ ಆಸಕ್ತಿಯುಳ್ಳವನಾಗಿಯೂ, ಮಹಾರಥಿಕನಾಗಿಯೂ, ಪೂಜ್ಯನಾಗಿಯೂ, ಮಾನ್ಯನಾಗಿಯೂ ಇರುವನೀನು ಅಭ್ಯಾಗತನಾಗಿಬಂದವನಾದೆ,॥(ವಿಶೇಷಾಭಿಪ್ರಾಯವೇನಂದರೆ,— ಎಲೈ ಶ್ರೀರಾಮನೇ! ನೀನು ಸಮಸ್ತಲೋಕಂಗಳಿಗೂ ಪರಿಪಾಲಕನಾಗಿರುವವನು,ಧರ್ಮವ್ಯವಸ್ಥೆಯಂಗೈಯ್ಯುವವನು;ಗರುಡನೇ ರಥವಾಗುಳ್ಳವನು, ಸರ್ವಭೂತಂಗಳಿಗೂ ಆತ್ಮಸ್ವರೂಪನಾದ್ದರಿಂದಇಷ್ಟವಾಗಿರುವವನು, ಈ ಸಮಯಕ್ಕೆ ಅಭ್ಯಾಗತನಾಗಿ ಬಂದಿರುವನು, ಸತ್ಕರ್ಮಗಳಿಂದ ಆರಾಧನೆಯಂಗೆಯ್ಯುವದಕ್ಕೆ ಯೋಗ್ಯನಾದವನು, ಮುಕ್ತರಾಗಿ ಯೋಗಿಗಳಿಂದ ಧ್ಯಾನವಂಗೈಯ್ಯುವದಕ್ಕೆ ಅರ್ಹನಾದವನು) ॥೨೦॥ ಎಂದು ಈ ಪ್ರಕಾರವಾಗಿ ಶ್ರೀರಾಮನಿಗೆ ನಿರೂಪಿಸಿ, ಫಲಂಗಳಿಂದಲೂ ಕಂದಮೂಲಂಗಳಿಂದಲೂ ಪುಷ್ಪಂಗಳಿಂದಲೂ ಇತರಪದಾರ್ಥಂಗಳಿಂದಲೂ,ಇಷ್ಟಾನುಸಾರವಾಗಿಪೂಜೆಯಂಗೈದಬಳಿಕ ಮತ್ತಿಂತೆಂದನು ॥೨೧॥ಎಲೈ ಪುರುಷಶ್ರೇಷ್ಠನೇ!ಸುವರ್ಣಂಗಳಿಂದಲೂ,ರತ್ನಂಗಳಿಂದಲೂ ಅಲಂಕರಿಸಲ್ಪಟ್ಟ ದಿವ್ಯವಾದ ಈ ಕೋದಂಡವು ವಿಶ್ವಕರ್ಮಬ್ರಹ್ಮನಿಂದ ನಿರ್ಮಿಸಲ್ಪಟ್ಟದ್ದು; ಈ ಅಮೋಘವಾದದ್ದು ಚತುರ್ಮುಖಬ್ರಹ್ಮನಿಂದ ಇಂದ್ರನಿಗೆ ಕೊಡಲ್ಪಟ್ಟದ್ದಾಯಿತು; ಮತ್ತು ಅಗ್ನಿಯಂತೆ ಬೆಳಗುವ ತೀಕ್ಷ್ಣವಾದ ಸರಳುಗಳಿಂದ

ಸ್ಮಿತಂ ವಿಶ್ವಕರ್ಮಣಾ । ಅಮೋಘಸ್ಸೂರ್ಯಸಂಕಾಶೋ ಬ್ರಹ್ಮದತ್ತಶ್ಶರೋತ್ತಮಃ ॥ ದತ್ತೌ ಮಮ ಮಹೇಂದ್ರೇಣ ತೂಣೀ ಚಾಕ್ಷಯಸಾಯಕೌ । ಸಂಪೂರ್ಣೌ ನಿಶಿತೈರ್ಬಾಣೈರ್ಜ್ವಲದ್ಭಿರಿವ ಪಾವಕೈಃ ॥ ಮಹಾರಜತಕೋಶೋಽಯಮಸಿರ್ಹೇಮವಿಭೂಷಿತಃ । ಅನೇನ ಧನುಷಾ ರಾಮ ಹತ್ವಾ ಸಂಖ್ಯೇ ಮಹಾಸುರಾನ್ ॥ ಆಜಹಾರ ಶ್ರಿಯಂ ದೀಪ್ತಾಂ ಪುರಾ ವಿಷ್ಣುರ್ದಿವೌಕಸಾಂ । ತದ್ಧನುಸ್ತೌ ಚ ತೂಣೀರೌ ಶರಂ ಖಡ್ಗಂ ಚ ಮಾನದ । ಜಯಾಯ ಪ್ರತಿಗೃಹ್ಣೀಷ್ವ ವಜ್ರಂ ವಜ್ರಧರೋ ಯಥಾ ॥೩೬॥ ಏವಮುಕ್ತ್ವಾ ಮಹಾತೇಜಾಸ್ಸಮಸ್ತಂ ತದ್ವರಾಯುಧಂ । ದತ್ತ್ವಾ ರಾಮಾಯ ಭಗವಾನಗಸ್ತ್ಯಃ ಪುನರಬ್ರವೀತ್ ॥೩೭॥

—*** ಇತಿ ಶ್ರೀಮದಾರಣ್ಯಕಾಂಡೇ-ದ್ವಾದಶಸ್ಸರ್ಗಃ ***—

ರಾಮ ಪ್ರೀತೋಽಸ್ಮಿ ಭದ್ರಂ ತೇ ಪರಿತುಷ್ಟೋಽಸ್ಮಿ ಲಕ್ಷ್ಮಣ । ಅಭಿವಾದಯಿತುಂ ಯನ್ಮಾಂ ಪ್ರಾಪ್ತೌ ಸ್ಥಃ ಸಹ ಸೀತಯಾ ॥೧॥ ಅಧ್ವಶ್ರಮೇಣ ವಾಂ ಖೇದೋ ಬಾಧತೇ ಪ್ರಚುರಶ್ರಮಃ । ವ್ಯಕ್ತಮುತ್ಕಂಠತೇ ಚಾಪಿ ಮೈಥಿಲೀ ಜನಕಾತ್ಮಜಾ ॥೨॥ ಏ

---

ತ್ತು, ಅಮೋಘಃ-ವ್ಯರ್ಥವಾಗದಿರುವ. ಸೂರ್ಯಸಂಕಾಶಃ-ಸೂರ್ಯನಿಗೆ ಸಮಾನವಾದ. ಶರೋತ್ತಮಃ-ಬಾಣಶ್ರೇಷ್ಠವು. ಬ್ರಹ್ಮದತ್ತಃ-ಬ್ರಹ್ಮದೇವರಿಂದ ಕೊಡಲ್ಪಟ್ಟಿತು. ಮಹೇಂದ್ರೇಣ-ದೇವೇಂದ್ರನಿಂದ. ಪಾವಕೈರಿವ-ಅಗ್ನಿಗಳಂತೆ, ಜ್ವಲದ್ಭಿಃ-ಹೊಳೆಯುತ್ತಿರುವ, ನಿಶಿತೈಃ-ತೀಕ್ಷ್ಣಗಳಾದ. ಬಾಣೈಃ-ಬಾಣಗಳಿಂದ, ಸಂಪೂರ್ಣೌ-ತುಂಬಿರುವ. ಅಕ್ಷಯಸಾಯಕೌ-ಮುಗಿದ ಹೋಗದಿರುವ ಬಾಣಗಳುಳ್ಳ, ತೂಣೀ-ಬತ್ತಳಿಕೆಗಳು. ಮಮ-ಯೆನಗೆ, ದತ್ತೌ-ಕೊಡಲ್ಪಟ್ಟವು, ಹೇರಾಮ-ಎಲೈ ಶ್ರೀರಾಮನೇ, ಮಹಾರಜತಕೋಶಃ-ಬೆಳ್ಳಿಯಿಂದ ಮಾಡಲ್ಪಟ್ಟ ಚೀಲವುಳ್ಳ. ಹೇಮವಿಭೂಷಿತಃ-ಭಂಗಾರದ ಪಿಡಿಯಿಂದಲಂಕೃತವಾದ, ಅಸಿಃ-ಖಡ್ಗವು, ಅಯಂ-ಇದು, ಪುರಾ-ಪೂರ್ವದಲ್ಲಿ, ವಿಷ್ಣುಃ-ಶ್ರೀಮಹಾವಿಷ್ಣುವು, ಅನೇನಧನುಷಾ-ಈ ಧನುಸ್ಸಿನಿಂ ದ, ಸಂಖ್ಯೇ-ಕಾಳಗದಲ್ಲಿ, ಮಹಾಸುರಾನ್-ಬಹಳ್ಳಮಂದಿರಕ್ಕಸರನ್ನು, ಹತ್ವಾ-ಕೊಂದು, ದೀಪ್ತಾಂ-ಹೊಳೆಯುತ್ತಿರುವ, ದಿವೌಕಸಾಂ-ದೇವತೆಗಳ. ಶ್ರಿಯಂ-ರಾಜ್ಯೈಶ್ವರ್ಯವನ್ನು, ಆಜಹಾರ-ಅಪಹರಿಸಿದನು, ಹೇಮಾನದ-ಎಲೈ ಬಹುಮಾನಪ್ರದಾಯಕನೇ, ವಜ್ರಧರಃ-ದೇವೇಂದ್ರನು, ವಜ್ರಂಯಥಾ-ವಜ್ರಾಯುಧವನ್ನಂತೆ, ಜಯಾಯ-ವಿಜಯಕ್ಕೋಸುಗ, ತದ್ಧನುಃ-ಆ ವೈಷ್ಣವಧನುಸ್ಸನ್ನು, ತೌ ತೂಣೀರೌಚ-ಆ ಬತ್ತಳಿಕೆಗಳನ್ನೂ, ಶರಂಚ-ಬಾಣವನ್ನೂ, ಖಡ್ಗಂಚ-ಕತ್ತಿಯನ್ನು, ಪ್ರತಿಗೃಹ್ಣೀಷ್ವ-ಪರಿಗ್ರಹಿಸು ॥೩೬॥ ಮಹಾತೇಜಾಃ-ಬ್ರಹ್ಮತೇಜಸ್ವಿಯಾದ. ಭಗವಾನ್-ಪೂಜ್ಯನಾದ. ಅಗಸ್ತ್ಯಃ-ಅಗಸ್ತ್ಯಋಷಿಯು, ಏವಂ-ಈಪರಿಯಾಗಿ ಉಕ್ತ್ವಾ-ಹೇಳಿ, ಸಮಸ್ತಂ-ಸಮಸ್ತವಾದ ತತ್-ಆ, ವರಾಯುಧಂ-ಶ್ರೇಷ್ಠವಾದ ಆಯುಧಗಳನ್ನು ರಾಮಾಯ-ಶ್ರೀರಾಮನಿಗೋಸುಗ, ದತ್ವಾ-ಕೊಟ್ಟು. ಪುನಃ-ಮತ್ತು, ಅಬ್ರವೀತ್-ನುಡಿದನು ॥ —**ದ್ವಾದಶಸ್ಸರ್ಗಃ**—

ಯುವಾಂ-ನೀವುಗಳು, ಯತ್-ಯಾವಕಾರಣದಶೆಯಿಂದ, ಸೀತಯಾಸಹ-ಸೀತಾದೇವಿಯೊಡಗೂಡ, ಮಾಂ-ನನ್ನನ್ನು, ಅಭಿವಾದಯಿತುಂ-ನಮಸ್ಕರಿಸುವದಕ್ಕಾಗಿ, ಪ್ರಾಪ್ತೌ-ಬಂದವರು, ಸ್ಥಃ-ಆಗಿದ್ದೀರೋ, ತತಃ-ಆಕಾರಣದಶೆಯಿಂದ, ಹೇರಾಮ-ಎಲೈ ಶ್ರೀರಾಮನೇ, ತೇ-ನಿನಗೆ ಭದ್ರಂ-ಶುಭವು, ಅಸ್ತು-ಆಗಲೀ, ಪ್ರೀತಃ-ನಿಮ್ಮಾಗಮನದಿಂದ ಕೇವಲಭಕ್ತಿಯುಳ್ಳವನು. ಅಸ್ಮಿ-ಆದೆನು, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ತೇ-ನಿನಗೆ ಭದ್ರಂ-ಮಂಗಳವು, ಅಸ್ತು-ಆಗಲೀ, ಪರಿತುಷ್ಟಃ-ಸಂತೋಷಗೊಂಡವನು, ಅಸ್ಮಿ-ಆದೆನು ॥೧॥ ವಾಂ-ನಿಮ್ಮಗಳಿಗೆ, ಅಧ್ವಶ್ರಮೇಣ-ಮಾರ್ಗಾಯಾಸದಿಂದ, ಪ್ರಚುರಶ್ರಮಃ-ಹೆಚ್ಚಾದ ಬಳಲಿಕೆಯುಳ್ಳ, ಖೇದಃ-ಖಿನ್ನತೆಯು, ಬಾಧತೇ-ಬಾಧಿಸುತ್ತದೆ. ಜನಕಾತ್ಮಜಾ-ಜನಕರಾಯನ ಮಗಳಾದ, ಮೈಥಿಲೀಚಾಪಿ-ಸೀತಾದೇವಿಯೂ, ಉತ್ಕಂಠತೇ-ಇರಬೇಕೆಂಬ ಅಪೇಕ್ಷೆಯುಳ್ಳವಳಾಗಿದ್ದಾಳೆ, ವ್ಯಕ್ತಂ-ಸ್ಪಷ್ಟವು ॥೨॥ ಹಿ-ಯಾವಕಾರಣದಶೆಯಿಂದ ಸುಕುಮಾರೀ-ಮೃದುಸ್ವಭಾವವುಳ್ಳ, ಏಷಾ-ಈ ಸೀತಾದೇವಿಯು, ದುಃಖೈಃ-ವ್ಯಸನಗಳಿಂದ, ನವಿಮಾನಿತಾ-ಬಾಧಿಸಲ್ಪಟ್ಟವಳಲ್ಲವೋ ತತಃ-ಆ ಕಾರಣದಶೆಯಿಂದ, ಭರ್ತೃಸ್ನೇಹಪ್ರಚೋದಿತಾ-ಗಂಡನಲ್ಲಿ ಪ್ರೀತಿಯಿಂದ ಪ್ರೇರಿತಳಾಗಿ, ಪ್ರಾಜ್ಯದೋಷಂ-ಪ್ರಚುರವಾದ ದೋಷಗಳುಳ್ಳ, ವನಂ-ಅರ

---

ತುಂಬಿದ ಸರಳು ಬತ್ತಳಿಕೆಗಳು ಆ ಕೋದಂಡವು ಸಹ ಇಂದ್ರನು ನನಗೆ ಕೊಟ್ಟನು. ಕೇಳೆಲೈ ರಘುನಂದನನೆ ಸುವರ್ಣವಿಕಾರವಾದ ವರೆಯುಳ್ಳ ಖಡ್ಗವು ಇದಿಗೋ (*) ಪೂರ್ವದಲ್ಲಿ ಶ್ರೀಮನ್ನಾರಾಯಣನು ಸಂಗರದಿ ಈ ಕೋದಂಡದಿಂ ಮಹಾ ಅಸುರರಂ ಕೊಂದು ದೇವತೆಗಳಿಗೆ ಮಹಾ ರಾಜ್ಯೈಶ್ವರ್ಯವಂ ಕೊಟ್ಟನು; ದೇವೇಂದ್ರನು ವಜ್ರಾಯುಧವಂ ಪರಿಗ್ರಹಿಸುವಂತೆ; ನೀನು ಜಯಕ್ಕಾಗಿ ಈ ಧನುರ್ಬಾಣಂಗಳನ್ನೂ, ಸರಳು ಬತ್ತಳಿಕೆಗಳನ್ನೂ ಖಡ್ಗವನ್ನೂ ಸಹ ಪರಿಗ್ರಹಿಸುವನಾಗೆಂದು ಪೂಜ್ಯನಾದ ಅಗಸ್ತ್ಯಮಹರ್ಷಿಯು ಈಪ್ರಕಾರವಾಗಿ ಹೇಳಿ, ಆ ಸಮಸ್ತವಾದ ಆಯುಧಂಗಳಂ ಶ್ರೀರಾಮನಿಗೆ ಕೊಟ್ಟು ಮತ್ತಿಂತೆಂದನು; —*೧೨ನೆಯ ಸರ್ಗಂ ಮುಗಿದುದು*—

ಎಲೈ ರಘುನಂದನನೇ! ಎಲೈ ಲಕ್ಷ್ಮಣನೇ! ನೀವಿರ್ವರು ಸೀತಾಸಮೇತರಾಗಿ ನನಗೆ ವಂದನೆಯಂ ಗೈಯ್ಯುವದಕ್ಕೆ ಸಂಪ್ರಾಪ್ತರಾದ ಕಾರಣ ನಾನು ಸಂತುಷ್ಟನಾದೆನು, ನಿಮಗೆ ಶುಭವಾಗಲಿ ॥೧॥ ಮಾರ್ಗಾಯಾಸದಿಂದುಂಟಾದ ಬಹುದುಃಖವು ನಿಮಗೆ ಬಾಧೆಯಂಗೈಯ್ಯುವದಲ್ಲವೇ ಯೇನು? ಜನಕರಾಜನಂದಿನಿಯಾದ ಸೀತಾದೇವಿಯು ಬಹು ಉತ್ಕಂಠೆಯುಳ್ಳವಳಾಗಿ ಧಾಳೆ ॥೨॥ ಮೃದುಸ್ವಭಾವವುಳ್ಳ ಈ ದೇವಿಯು ಯೆಂದಿಗೂ ದುಃಖಂಗಳಿಂ

ಷಾಹಿಸುಕುಮಾರೀಚದುಃಖೈಶ್ಚನವಿಮಾನಿತಾ । ಪ್ರಾಜ್ಯದೋಷಂವನಂಪ್ರಾಪ್ತಾಭರ್ತೃಸ್ನೇಹಪ್ರಚೋದಿತಾ ॥೩॥ ಯಥೈಷಾರಮತೇರಾಮಇಹಸೀತಾತಥಾಕುರು । ದುಷ್ಕರಂಕೃತವತ್ಯೇಷಾವನೇತ್ವಾಮನುಗಚ್ಛತೀ ॥೪॥ ಏಷಾಹಿಪ್ರಕೃತಿಸ್ಸ್ತ್ರೀಣಾಮಾಸೃಷ್ಟೇರಘುನಂದನ । ಸಮಸ್ಥಮನುರಜ್ಯಂತಿವಿಷಮಸ್ಥಂತ್ಯಜಂತಿಚ ॥೫॥ ಶತಹ್ರದಾನಾಂಲೋಲತ್ವಂಶಸ್ತ್ರಾಣಾಂತೀಕ್ಷ್ಣತಾಂತಥಾ । ಗರುಡಾನಿಲಯೋಶ್ಶೈಘ್ರ್ಯಮನುಗಚ್ಛಂತಿಯೋಷಿತಃ ॥೬॥ ಇಯಂತುಭವತೋಭಾರ್ಯಾದೋಷೈರೇತೈರ್ವಿವರ್ಜಿತಾ । ಶ್ಲಾಘ್ಯಾಚವ್ಯಪದೇಶ್ಯಾಚಯಥಾದೇವೀಹ್ಯರುಂಧತೀ ॥೭॥ ಅಲಂಕೃತೋಽಯಂದೇಶಶ್ಚಯತ್ರಸೌಮಿತ್ರಿಣಾಸಹ । ವೈದೇಹ್ಯಾಚಾನಯಾರಾಮವತ್ಸ್ಯಸಿತ್ವಮರಿಂದಮ ॥೮॥ ಏವಮುಕ್ತಸ್ತುಮುನಿನಾರಾಘವಸ್ಸಂಯತಾಂಜಲಿಃ । ಉವಾಚಪ್ರಶ್ರಿತಂವಾಕ್ಯಮೃಷಿಂದೀಪ್ತಮಿವಾನಲಂ ॥೯॥ ಧನ್ಯೋಽಸ್ಮ್ಯನುಗೃಹೀತೋ

---

ಣ್ಯವನ್ನುಕುರಿತು ಪ್ರಾಪ್ತಾ-ಬಂದವಳಾದಳು, ಹೇರಾಮ-ಎಲೈ ಶ್ರೀರಾಮನೇ ಏಷಾ-ಈ ಸೀತಾದೇವಿಯು; ಯಥಾ-ಹ್ಯಾಗೆ, ಇಹ-ಇಲ್ಲಿ, ರಮತೇ-ಸಂತೋಷಿಸುವಳೋ, ತಥಾ-ಹಾಗೆ, ಕುರು-ಮಾಡು. ಏಷಾ-ಈ ಸೀತಾದೇವಿಯು, ವನೇ-ಅರಣ್ಯದಲ್ಲಿ, ತ್ವಾಂ-ನಿನ್ನನ್ನು, ಅನುಗಚ್ಛತೀ-ಅನುಸರಿಸಿಬಂದವಳಾಗಿ, ದುಷ್ಕರಂ-ಅಸಾಧ್ಯಕಾರ್ಯವನ್ನು, ಕೃತವತೀ-ಮಾಡಿದಳು ॥೪॥ ಹೇರಘುನಂದನ-ಎಲೈ ಶ್ರೀರಾಮನೇ, ಸ್ತ್ರೀಣಾಂ-ಸ್ತ್ರೀಯರುಗಳಿಗೆ, ಆಸೃಷ್ಟೇಃ-ಸೃಷ್ಟಿಮೊದಲ್ಗೊಂಡು, ಏಷಾಪ್ರಕೃತಿರ್ಹಿ-ಇದೇಪ್ರಕೃತಿಯಷ್ಟೇ, ಸಮಸ್ಥಂ-ಚೆನ್ನಾಗಿರುವ ಪುರುಷನನ್ನುಕುರಿತು, ಅನುರಜ್ಯಂತಿ-ಅನುರಕ್ತರಾಗುತ್ತಾರೆ ವಿಷಮಸ್ಥಂ-ದರಿದ್ರನನ್ನು, ತ್ಯಜಂತಿಚ-ಬಿಡುತ್ತಾರೆ. ಇತಿಯತ್-ಎಂಬುವದು ಯಾವದುಂಟೋ, (ಈಸ್ವಭಾವವು ಸ್ತ್ರೀರುಗಳಿಗೆ ಸಾಧಾರಣವಾಗಿರುವದೆಂದು ತಾತ್ಪರ್ಯವು)॥೫॥ ಯೋಷಿತಃ-ಸ್ತ್ರೀರುಗಳು, ಶತಹ್ರದಾನಾಂ-ಮಿಂಚುಗಳ, ಲೋಲತ್ವಂ-ಚಾಂಚಲ್ಯವನ್ನು, ತಥಾ-ಹಾಗೆಯೇ, ಶಸ್ತ್ರಾಣಾಂ-ಶಸ್ತ್ರಗಳ, ತೀಕ್ಷ್ಣತಾಂ-ತೈಕ್ಷ್ಣ್ಯವನ್ನು, ಗರುಡಾನಿಲಯೋಃ-ಗರುಡವಾಯುಗಳ, ಶೈಘ್ರ್ಯಂ-ಶೀಘ್ರಗಮನವನ್ನು, ಅನುಗಚ್ಛಂತಿ-ಅನುಸರಿಸುತ್ತಿರ್ಪರು ॥೬॥ ಭವತಃ-ನಿನ್ನ, ಭಾರ್ಯಾ-ಹೆಂಗತಿಯಾದ, ಇಯಂತು-ಈ ಸೀತಾದೇವಿಯಾದರೆ, ಏತೈರ್ದೋಷೈಃ-ಇಂಥಾ ದೋಷಗಳಿಂದ, ವಿವರ್ಜಿತಾ-ಬಿಡಲ್ಪಟ್ಟವಳಾದಕಾರಣ, ಅರುಂಧತೀದೇವೀಯಥಾ-ಅರುಂಧತೀದೇವಿಯಂತೆ, ಶ್ಲಾಘ್ಯಾಚ-ಸತ್ಪುರುಷರಿಂದ ಶ್ಲಾಘನೀಯಳಾಗಿಯೂ, ವ್ಯಪದೇಶ್ಯಾಚ-ಪತಿವ್ರತೆಯರಲ್ಲಿ ಶ್ರೇಷ್ಠಳಾಗತಕ್ಕವಳಾಗಿದ್ದಾಳೆ ॥೭॥ ಹೇಅರಿಂದಮ-ಎಲೈ ಶತ್ರುಸಂಹಾರಕನೇ, ತ್ವಂ-ನೀನು, ಅನಯಾವೈದೇಹ್ಯಾ-ಈ ಸೀತಾದೇವಿಯೊಡನೆ, ಸೌಮಿತ್ರಿಣಾಸಹ-ಲಕ್ಷ್ಮಣಸ್ವಾಮಿಯೊಡಗೂಡ ಯತ್ರ-ಯಾವಸ್ಥಳದಲ್ಲಿ, ವತ್ಸ್ಯಸಿ-ಇರುವಿಯೋ. ಹೇರಾಮ-ಎಲೈ ಶ್ರೀರಾಮನೇ, ಅಯಂದೇಶಃ-ಈ ಪ್ರದೇಶವು, ಅಲಂಕೃತಃ-ಅಲಂಕರಿಸಲ್ಪಡುತ್ತೆ ॥೮॥ ಏವಂ-ಈಪ್ರಕಾರವಾಗಿ, ಮುನಿನಾ-ಅಗಸ್ತ್ಯಮಹರ್ಷಿಯಿಂದ. ಉಕ್ತಃ-ಹೇಳಲ್ಪಟ್ಟ, ರಾಘವಃ-ಶ್ರೀರಾಮನು. ಸಂಯತಾಂಜಲಿಃ-ಕೈಮುಗಿದವನಾಗಿ, ಅನಲಮಿವ-ಅಗ್ನಿಯಂತೆ. ದೀಪ್ತಂ-ಹೊಳೆಯುತ್ತಿರುವ, ಋಷಿಂ-ಅಗಸ್ತ್ಯಮುನಿಯನ್ನುಕುರಿತು, ಪ್ರಶ್ರಿತಂ-ನಮ್ರನಾದ್ದಂತೆ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೯॥ ಯಸ್ಯ-ಯಾವ, ಸಭ್ರಾತೃಭಾರ್ಯಸ್ಯ-ತಮ್ಮನಿಂದಲೂ ಹೆಂಡತಿಯಿಂದಲೂ ಕೂಡಿಕೊಂಡಿರುವ, ಮುನಿಪುಂಗವಃ-ಅಗಸ್ತ್ಯಮಹರ್ಷಿಯು, ವರದಃ-ವರವಂಕೊಟ್ಟವನಾಗಿ, ಪರಿತುಷ್ಯತಿ-ಸಂತೋಷ

---

ದ ಬಾಧಿಸಲ್ಪಟ್ಟವಳಲ್ಲ, ಬಹು ದೋಷಂಗಳುಳ್ಳ ಈ ಅರಣ್ಯಕ್ಕೆ ಭರ್ತೃಸ್ನೇಹದಿಂದ ಬಂದವಳಾದಳು; ಈ ದೇವಿಯು ಈ ಅರಣ್ಯದಲ್ಲಿ ಯೆಂತು ಸುಖವಾಗಿ ರಮಿಸುತ್ತಿರುವಳೋ ಅಂತು ಗೈಯ್ಯವನಾಗು; ಈ ವನದಲ್ಲಿ ನಿನ್ನನ್ನನುಸರಿಸಿ ಬರುವಳಾಗಿ ದುಷ್ಕರವಾದ ಕಾರ್ಯವಂ ಗೈದಳು ॥೪॥ ಕೇಳೆಲೈ ಶ್ರೀರಾಮನೇ! ಲೋಕದಲ್ಲಿ ಈ ಜಗತ್ಸೃಷ್ಟಿಯಾದದ್ದು ಮೊದಲ್ಗೊಂಡು ಹೆಂಗಳಿಗೆ ಸರ್ವ ಸಾಧಾರಣವಾಗಿ ಇದೇ ಪ್ರಕೃತಿಯಿರುವದು, ಯೇನೆಂದರೆ,-ಪತಿಯಾದವನು [ದ್ರವ್ಯಸಂಪಾದನೆಯಂ ಗೈಯ್ಯುತ್ತಾ] ಮಹೋನ್ನತನಾಗಿರುವಾಗ ಅವನನ್ನು ರಂಜನೆಯಂ ಗೈಯ್ಯುತ್ತಿರುವರು;[ದಾರಿದ್ರ್ಯವು ಸಂಭವಿಸಿ ರಿಕ್ತನಾದ ಕಾಲದಿ ಅವನಂ ಬಿಟ್ಟುಬಿಡುವರು] ॥೫॥ ಮತ್ತು ಸ್ತ್ರೀರುಗಳು ಮಿಂಚುಗಳಂತೆ ಚಾಂಚಲ್ಯವನ್ನೂ, ಶಸ್ತ್ರಂಗಳ ತೆರದಿ ಬಹು ತೈಕ್ಷ್ಣ್ಯವನ್ನೂ, ಗರುಡನು ವಾಯುವು ಗಮಿಸುವಂತೆ ಶೀಘ್ರಗಮನತ್ವವನ್ನೂ. ಅನುಸರಿಸುತ್ತಿರುವರು ॥೬॥ ನಿನ್ನ ಸತಿಯಾದ ಈ ಸೀತಾದೇವಿಯಾದರೆ ಈ ದೋಷಂಗಳಿಂದ ಪರಿತ್ಯಕ್ತಳಾಗಿರುವಳಾದಕಾರಣ, ಅರುಂಧತೀದೇವಿಯ ತೆರದಿ ಬಹುಶ್ಲಾಘನೀಯಳಾಗಿಯೂ, ಪತಿವ್ರತೆಯರಲ್ಲಿ ಉತ್ತಮಳಾಗಿಯೂ ಇರುವಳು ॥೭॥ ಎಲೈ ಶತ್ರುಸಂಹಾರಕನೇ! ನೀನು ಈ ಸೀತಾದೇವಿಯೊಡನೆ ಲಕ್ಷ್ಮಣನೊಡನೆಯೂ ಯಾವ ಪ್ರದೇಶದಲ್ಲಿರುವೆಯೋ, ಅಂಥಾ ಈ ಪ್ರದೇಶವು ಅಲಂಕರಿಸಲ್ಪಡುವದು. ಎಂಬದಾಗಿ ಅಗಸ್ತ್ಯಮಹಾ ಮುನಿಯಿಂದ ಈ ಪರಿಹೇಳಲ್ಪಟ್ಟವನಾಗಿ, ರಘುನಂದನನು ಕೈಗಳಂ ಮುಗಿದವನಾಗಿ, ಅಗ್ನಿಯಂತೆ ಬೆಳಗುವ ಆ ಮಹಾ ಮುನಿಯಂ ಕುರಿತು ವಿಧೇಯನಾಗಿ ನುಡಿದನದೆಂತೆನೆ;- ॥೯॥ ತಮ್ಮನಾದ ಲಕ್ಷ್ಮಣನಿಂದಲೂ, ಸತಿಯಾದ ಸೀತಾದೇವಿಯಿಂದಲೂ ಯುಕ್ತನಾದ ಯಾವ ನನ್ನ ವಿಷಯದಿಯು

ಸ್ಮಿಯಸ್ಯಮೆಮುನಿಪುಂಗವಃ । ಗುಣೈಸ್ಸಭ್ರಾತೃಭಾರ್ಯಸ್ಯವರದಃಪರಿತುಷ್ಯತಿ ।೧೦। ಕಿಂತ್ವಾದಿಶಮೆದೇಶಂಸೋದಕಂಬಹುಕಾನನಂ । ಯತ್ರಾಶ್ರಮಪದಂಕೃತ್ವಾವಸೇಯಂನಿರತಸ್ಸುಖಂ॥೧೧॥ತತೋಬ್ರವೀನ್ಮುನಿಶ್ರೇಷ್ಠಃಶ್ರುತ್ವಾರಾಮಸ್ಯತದ್ವಚಃ।ಧ್ಯಾತ್ವಾಮುಹೂರ್ತಂಧರ್ಮಾತ್ಮಾಧೀರೋಧೀರತರಂವಚಃ।೧೨॥ ಇತೋದ್ವಿಯೋಜನೇತಾತಬಹುಮೂಲಫಲೋದಕಃ।ದೇಶೋಬಹುಮೃಗಶ್ಶ್ರೀಮಾನ್ಪಂಚವಟ್ಯಭಿವಿಶ್ರುತಃ। ತತ್ರಗತ್ವಾಶ್ರಮಪದಂಕೃತ್ವಾಸೌಮಿತ್ರಿಣಾಸಹ।ರಂಸ್ಯಸೇತ್ವಂಪಿತುರ್ವಾಕ್ಯಂಯಥೋಕ್ತಮನುಪಾಲಯನ್ ॥೧೪॥ ಕಾಲೋಯಂಗತಭೂಯಿಷ್ಠೋಯಃಕಾಲಸ್ತವರಾಘವ।ಸಮಯೋಯೋನರೇಂದ್ರೇಣಕೃತೋದಶರಥೇನತೇ।೧೫॥ತೀರ್ಣಪ್ರತಿಜ್ಞಃಕಾಕುತ್ಸ್ಥಸುಖಂರಾಜ್ಯೇನಿವತ್ಸ್ಯಸಿ।ಧನ್ಯಸ್ತೇಜನಕೋರಾಮಸರಾಜಾರಘುನಂದನ । ಯಸ್ತ್ವಯಾಜ್ಯೇಷ್ಠಪುತ್ರೇಣಯಯಾತಿರಿವತಾರಿತಃ॥೧೬॥ ವಿದಿತೋಹ್ಯೇ

ಗೋಂಗವೇನೋ, ಸಃ-ಅಂಥಾ ನಾನು, ಧನ್ಯಃ-ಕೃತಾರ್ಥನು, ಅಸ್ಮಿ-ಆದೆನು, ಅನುಗೃಹೀತೋಸ್ಮಿ-ಅನುಗ್ರಹಿಸಲ್ಪಟ್ಟವನಾದೆನು॥೧೦॥ ಯತ್ರ-ಯಾವಸ್ಥಳದಲ್ಲಿ, ಆಶ್ರಮಪದಂ-ಆಶ್ರಮಪ್ರದೇಶವನ್ನು, ಕೃತ್ವಾ-ಮಾಡಿ, ನಿರತಃ-ಆಸಕ್ತನಾಗಿ, ಸುಖಂ-ಸುಖವಾಗಿ, ವಸೇಯಂ-ಇರುವೆನೋ, ಕಿಂತ್ವನುತ್ತರೀನಂದರೆ, ಮೆ-ನನಿಗೆ, ಸೋದಕಂ-ಉದಕದಿಂದ ಕೂಡಿದ, ಬಹುಕಾನನಂ-ಬಹಳ ಅಡವಿಯಾಗಿರುವ. ತಂದೇಶಂ-ಅಂಥಾ ಪ್ರದೇಶವನ್ನು. ಆದಿಶ-ಆಜ್ಞಾಪಿಸು ॥೧೧॥ ತತಃ-ಬಳಿಕ, ಮುನಿಶ್ರೇಷ್ಠಃ-ಋಷಿಶ್ರೇಷ್ಠನಾದ, ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳ, ಧೀರಃ-ಪಂಡಿತನಾದ ಅಗಸ್ತ್ಯಋಷಿಯು, ರಾಮಸ್ಯ-ಶ್ರೀರಾಮನ. ತದ್ವಚಃ-ಆ ಮಾತನ್ನು. ಶ್ರುತ್ವಾ-ಕೇಳಿ. ಮುಹೂರ್ತಂ-ಎರಡುಘಳಿಗೆಕಾಲ, ಧ್ಯಾತ್ವಾ-ಆಲೋಚಿಸಿ, ಧೀರತರಂ-ಮನೋಹರವಾದ, ವಚಃ-ಮಾತನ್ನು, ಅಬ್ರವೀತ್-ನುಡಿದನು ॥೧೨॥ ಹೇತಾತ-ಎಲೈ ಅಪ್ಪನೇ. ಅಥವಾ-ಹೇತಾತ-ಎಲೈ ಜಗತ್ತಿಗೆ ತಂದೆಯೇ. ಇತಃ-ಇಲ್ಲಿಗೆ, ದ್ವಿಯೋಜನೇ-ಎರಡುಗಾವುದನೆಲದಲ್ಲಿ, ಬಹುಮೂಲಫಲೋದಕಃ-ಅನೇಕವಾದ ಕಂದಮೂಲಗಳೂ ಫಲಗಳೂ ನೀರೂಉಳ್ಳ, ಬಹುಮೃಗಃ-ಅನೇಕಮೃಗಗಳುಳ್ಳ, ಶ್ರೀಮಾನ್-ಶೋಭಾಯಮಾನವಾದ, ಪಂಚವಟ್ಯಭಿವಿಶ್ರುತಃ-ಪಂಚವಟೀಎಂದು ಪ್ರಖ್ಯಾತವಾದ, ದೇಶಃ-ಪ್ರದೇಶವು, ಅಸ್ತಿ-ಇಧೆ. ತತ್ರ-ಅಲ್ಲಿ. ಗತ್ವಾ-ಹೋಗಿ, ಸೌಮಿತ್ರಿಣಾಸಹ-ಲಕ್ಷ್ಮಣನೊಡನೆ, ಆಶ್ರಮಪದಂ-ಆಶ್ರಮಸ್ಥಾನವನ್ನು, ಕೃತ್ವಾ-ಮಾಡಿ. ಪಿತುಃ-ತಂದೆಯ. ವಾಕ್ಯಂ-ಮಾತನ್ನು, ಯಥೋಕ್ತಂ-ಹೇಳಲ್ಪಟ್ಟಂತೆ, ಅನುಪಾಲಯನ್-ಪರಿಪಾಲನೆಮಾಡುತ್ತಿರುವನಾಗಿ. ರಂಸ್ಯಸೇ-ವಿಹರಿಸುವಿ ॥೧೪॥ ಹೇರಾಘವ-ಎಲೈ ಶ್ರೀರಾಮನೇ. ಯಃಕಾಲಃ-ಯಾವ ಅವಧಿಕಾಲವು. ನರೇಂದ್ರೇಣ-ಮನುಜಾಧಿಪತಿಯಾದ, ದಶರಥೇನ-ದಶರಥರಾಯನಿಂದ, ತೆ-ನಿನಗೆ, ಕೃತಃ-ಮಾಡಲ್ಪಟ್ಟಿತ್ತೊ, ಯಃಸಮಯಃ-ಯಾವ ಶಪಥವು. ತವ-ನಿನಗೆ, ಕೃತಃ-ಮಾಡಲ್ಪಟ್ಟಿತ್ತೋ, ಸೋಯಂಕಾಲಃ-ಅಂಥಾ ಕಾಲವು, ಗತಭೂಯಿಷ್ಠಃ-ಕಳೆದ ಬಹಳ ಕಾಲವುಳ್ಳದ್ದು. ಅಭವತ್-ಆಯಿತು ॥೧೫॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೇ, ತೀರ್ಣಪ್ರತಿಜ್ಞಃ-ಕಳೆದ ಪ್ರತಿಜ್ಞೆಯುಳ್ಳವನಾಗಿ. ತ್ವಂ-ನೀನು, ಸುಖಂ-ಸುಖವಾಗಿ. ರಾಜ್ಯೇ-ರಾಜ್ಯದಲ್ಲಿ. ನಿವತ್ಸ್ಯಸಿ-ಇರುವಿ, ಹೇರಾಮ-ಎಲೈ ಶ್ರೀರಾಮನೇ, ತೇಜನಕಃ-ನಿಮ್ಮತಂದೆಯು. ಧನ್ಯಃ-ಕೃತಾರ್ಥನು, ಹೇರಘುನಂದನ-ಎಲೈ ರಘುಕುಲಾನಂದಕರನೇ, ಯಃ-ಯಾವ ದಶರಥರಾಯನು, ಜ್ಯೇಷ್ಠಪುತ್ರೇಣ-ದೊಡ್ಡಮಗನಾದ, ತ್ವಯಾ-ನಿನ್ನಿಂದ, ಯಯಾತಿರಿವ-ಯಯಾತಿಮಹಾರಾಯನಂತೆ. ತಾರಿತಃ-ಕೃತಾರ್ಥನಾಗಿ ಮಾಡಲ್ಪಟ್ಟನೋ, ಸಃ-ಆ ದಶರಥರಾಯನೇ, ರಾಜಾ-ಅರಸು॥೧೬॥ ಹೇಅನಘ-ಎಲೈ ನಿರ್ದೋಷನೇ, ಮಮ-ನನಿಗೆ, ತವ-ನಿನ್ನ, ಸರ್ವಃ-ಸಮಸ್ತವಾದ, ಏಷಃವೃತ್ತಾಂತಃ-ಈ ನಡತೆಯು, ತಪಸಃ-ತಪಸ್ಸಿನ, ಪ್ರಭಾ

ಷಿಶ್ರೇಷ್ಠನಾದ ನೀನು ಸಂತೋಷವಂ ಪೊಂದಿದವನಾದೆಯೋ, ಅಂಥಾ ನಾನು ಧನ್ಯನಾದೆನು, ಅನುಗ್ರಹಿಸಲ್ಪಟ್ಟವನಾದೆನು ।೧೦। ಎಲೈ ಮಹರ್ಷಿಯೇ! ಯಾವ ಸ್ಥಳದಲ್ಲಿ ನಾನು ಆಶ್ರಮವಂ ಗೈದು, ಸುಖವಾಗಿರುವೆನೋ ಅಂಥಾ ಉದಕ ಸಮೃದ್ಧಿಯುಳ್ಳ ಪ್ರದೇಶವಂ ನಿರ್ದೇಶಿಸುವ ನಾಗೆಂದು ನುಡಿದನು ।೧೧। ಅನಂತರದಲ್ಲಿ ಋಷಿಶ್ರೇಷ್ಠನಾದ ಅಗಸ್ತ್ಯಮಹಾಮುನಿಯು ಆ ವಾಕ್ಯವಂ ಕೇಳಿ, ಮುಹೂರ್ತಕಾಲವು ಧ್ಯಾನವಂ ಗೈದು, ನಿರೂಪಿಸುವನದೆಂತೆನೆ;- ।೧೨। ಎಲೈ ತಂದೆಯೇ! ಇಲ್ಲಿಗೆ ಯೆರಡು ಯೋಜನಂಗಳ ದೂರದಲ್ಲಿ ಅನೇಕವಿಧವಾದ ಫಲಂಗಳೂ, ಉದಕಂಗಳೂ ಮೃಗಂಗಳೂ ಉಳ್ಳ ಬಹು ಬೆಳಗುವ "ಪಂಚವಟ" ಎಂದು ಪ್ರಖ್ಯಾತವಾದ ವೊಂದುಸ್ಥಲವಿರುವದು; ನೀನಲ್ಲಿಗೆ ಸಾರಿ ಲಕ್ಷ್ಮಣನೊಡನೆ ಆಶ್ರಮವಂ ಗೈದು, ಪಿತೃವಾಕ್ಯ ಪರಿಪಾಲನೆಯಂ ಗೈಯುತ್ತಾ ವಿಹರಿಸುತ್ತಲಿರು; ॥೧೪॥ ಎಲೈ ಶ್ರೀರಾಮನೇ! ಮನುಜೇಂದ್ರನಾದ ದಶರಥಮಹಾರಾಜನಿಂದ ನಿನಿಗೆ ಯಾವಅವಧಿ ಕಾಲವು ಗೈಯ್ಯಲ್ಪಟ್ಟಿರುವದೋ ಯಾವ ಶಪಥವು ಮಾಡಲ್ಪಟ್ಟಿತೋ, ಅಂಥಾಸಮಯವುಕಳೆಯುತ್ತಲಿಧೆ ।೧೫। ಕೇಳೆಲೈ ಮನುಜೇಂದ್ರನೇ! ನೀನು ತೀರ್ಣವಾದ ಪ್ರತಿಜ್ಞೆಯುಳ್ಳವನಾಗಿ ಸುಖದಿಂ ರಾಜ್ಯದಲ್ಲಿರುವನಾಗುವೆ ನಿನ್ನ ಜನಕನು ಧನ್ಯನು; ಯಾವ ಮಹಾ ರಾಜನು; ಯಯಾತಿ ಮಹಾರಾಜನು ಪುತ್ರನಿಂದ ಕೃತಾರ್ಥನಾದಂತೆ; ಹಿರೀಮಗನಾದ ನಿನ್ನಿಂದ ಧನ್ಯನಾಗಿ ಮಾಡಲ್ಪಟ್ಟನೋ, ಆತನೇ ಅರಸು ।೧೬। ನನಿಗೆ ನಿನ್ನ ವೃತ್ತಾಂತವೆಲ್ಲ

ಷ್ಟವೃತ್ತಾಂತೋಮಮಸರ್ವಸ್ತ್ವಮಾನಘ । ತಪಸಶ್ಚಪ್ರಭಾವೇನಸ್ನೇಹಾದ್ದಶರಥಸ್ಯಚ ।೧೭॥ ಹೃದಯಸ್ಥಶ್ಚತೇಛಂದೋ ವಿಜ್ಞಾತಸ್ತಪಸಾಮಯಾ । ಇಹಾವಾಸಂಪ್ರತಿಜ್ಞಾಯಮಮಯಾಸಹತಪೋವನೇ । ಅತಶ್ಚತ್ವಾಮಹಂಬ್ರೂಮಿಗಚ್ಛಪಂಚವಟೀಮಿತಿ ।೧೮॥ ಸಹಿರಮ್ಯೋವನೋದ್ದೇಶೋಮೈಥಿಲೀತತ್ರರಂಸ್ಯತೇ । ಸದೇಶಶ್ಲಾಘನೀಯಶ್ಚನಾತಿದೂರೇಚರಾಘವ । ಗೋದಾವರ್ಯಾಸಮೀಪೇಚಮೈಥಿಲೀತತ್ರರಂಸ್ಯತೇ ।ಪ್ರಾಜ್ಯಮೂಲಫಲಶ್ಚೈವನಾನಾದ್ವಿಜಗಣಾಯುತಃ । ವಿವಿಕ್ತಶ್ಚಮಹಾಬಾಹೋಪುಣ್ಯೋರಮ್ಯಸ್ತಥೈವಚ ।೨೧॥ ಭವಾನಪಿಸದಾರಶ್ಚಶಕ್ತಶ್ಚಪರಿರಕ್ಷಣೇ । ಅಪಿಚಾತ್ರವಸನ್ರಾಮತಾಪಸಾನ್ಪಾಲಯಿಷ್ಯಸಿ ।೨೨॥ ಏತದಾಲಕ್ಷ್ಯತೇವೀರಮಧೂಕಾನಾಂಮಹದ್ವನಂ ॥ ಉತ್ತರೇಣಾಸ್ಯಗಂತವ್ಯಂನ್ಯಗ್ರೋಧಮಭಿಗಚ್ಛತಾ ।೨೩॥ ತತಸ್ಥಲಮುಪಾರುಹ್ಯಪರ್ವತಸ್ಯಾವಿದೂರತಃ । ಖ್ಯಾತಃಪಂಚವಟೀತ್ಯೇವನಿತ್ಯಪುಷ್ಪಿತಕಾನನಃ ।೨೪॥ ಅಗಸ್ತ್ಯೇನೈವಮುಕ್ತಸ್ತುರಾಮಸ್ಸೌಮಿತ್ರಿಣಾಸಹ । ಸತ್ಕೃತ್ಯಾಮಂತ್ರಯಾ

---

ವೇನ-ಪ್ರಭಾವದಬಲೆಯಿಂದ ದಶರಥಸ್ಯ-ದಶರಥರಾಯನ, ಸ್ನೇಹಾಚ್ಚ-ಮೈತ್ರಿಯಬಲೆಯಿಂದ. ವಿದಿತೋಹಿ-ತಿಳಿಯಲ್ಪಟ್ಟಿದ್ಧೆಯಷ್ಟೆ ॥೧೭॥ ॥ ಇಹತಪೋವನೇ-ಈ ತಪೋವನದಲ್ಲಿ, ಮಯಾಸಹ-ನನ್ನೊಡನೆ, ಆವಾಸಂ-ನಿವಾಸವನ್ನು, ಪ್ರತಿಜ್ಞಾಯ-ಪ್ರತಿಜ್ಞೆ ಮಾಡಿ. ತೇ-ನಿನ್ನ ಹೃದಯಸ್ಥಃ-ಮನದಲ್ಲಿರುವ, ಛಂದಃ-ಅಭಿಪ್ರಾಯವು, ಮಯಾ-ನನ್ನಿಂದ, ತಪಸಾ-ತಪಃಪ್ರಭಾವದಿಂದ. ವಿಜ್ಞಾತಃ-ತಿಳಿಯಲ್ಪಟ್ಟಿತು. ಅತಃ-ಈಕಾರಣದಬಲೆಯಿಂದ ತ್ವಾಂ-ನಿನ್ನನ್ನುಕುರಿತು, ಅಹಂ-ನಾನು, ಪಂಚವಟೀಂ-ಪಂಚವಟೀಕ್ಷೇತ್ರವಂಕುರಿತು ಗಚ್ಛ-ಹೋಗು, ಇತಿ-ಇಂತೆಂದು. ಬ್ರೂಮಿ-ಹೇಳುತ್ತೇನೆ॥೧೮॥ ಹೇರಾಘವ-ಎಲೈ ಶ್ರೀರಾಮನೇ, ಸದೇಶಃ-ಆ ಪ್ರದೇಶವು. ಶ್ಲಾಘನೀಯಃ-ಪ್ರಶಂಸೆಯನ್ನು ಮಾಡತಕ್ಕದ್ದಾಗಿದೆ. ನಾತಿದೂರೇಚ-ಹೆಚ್ಚುದೂರವಿಲ್ಲ. ಸವನೋದ್ದೇಶಃ-ಆ ವನಪ್ರದೇಶವು, ರಮ್ಯೋಹಿ-ಮನಸ್ಸಿಗೆ ಒಪ್ಪಾಗಿದ್ಧೆಯಷ್ಟೆ, ತತ್ರ-ಆ ಸ್ಥಳದಲ್ಲಿ, ಮೈಥಿಲೀ-ಸೀತಾದೇವಿಯು, ರಂಸ್ಯತೇ-ವಿಹಾರಮಾಡುವಳು ॥೨೦॥ ಗೋದಾವರ್ಯಾಃ-ಗೋದಾವರೀನದಿಯ. ಸಮೀಪೇ-ಸಮೀಪದಲ್ಲಿ, ತತ್ರ-ಆ ಪಂಚವಟೀಲಿ, ಮೈಥಿಲೀ-ಸೀತಾದೇವಿಯು, ರಂಸ್ಯತೇ-ವಿಹರಿಸುತ್ತಾಳೆ. ಹೇಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೇ. ಪ್ರಾಜ್ಯಮೂಲಫಲಶ್ಚ-ಬಹು ಚುರವಾದ ಕಂದಮೂಲಗಳೂ ಫಲಗಳೂ ಉಳ್ಳದ್ದು. ನಾನಾದ್ವಿಜಗಣಾಯುತಃ-ಅನೇಕಬಗೆಗಳಾದ ಹಕ್ಕಿಗಳ ಗುಂಪುಗಳಿಂದ ಕೂಡಿಕೊಂಡಿದ್ಧೆ, ವಿವಿಕ್ತಶ್ಚ-ವಿಜನವಾಗಿದ್ಧೆ. ಪುಣ್ಯಶ್ಚ-ಪುಣ್ಯಕರವಾಗಿದ್ಧೆ ತಥೈವ-ಹಾಗೆಯೇ. ರಮ್ಯಶ್ಚ-ಮನೋಹರವಾಗಿದ್ಧೆ॥ ... ... ... .. ... ... ॥೨೧॥ ॥ ಹೇರಾಮ-ಎಲೈ ಶ್ರೀರಾಮನೇ. ಸದಾರಃ-ಹೆಂಡತಿಯಿಂದೊಡಗೂಡಿದ, ಭವಾನಪಿ-ನೀನೂಕೂಡ. ಪರಿರಕ್ಷಣೇ-ಸಂರಕ್ಷಿಸುವ ವಿಷಯದಲ್ಲಿ, ಶಕ್ತಶ್ಚ-ಸಮರ್ಥನಾಗಿದ್ಧೀ, ಅಪಿಚ-ಇಷ್ಟುಮಾತ್ರವೇ ಅಲ್ಲ. ಅತ್ರ-ಈ ಪಂಚವಟಿಯಲ್ಲಿ, ವಸನ್-ಇರುತ್ತಿರುವನಾಗಿ, ತಾಪಸಾನ್-ಋಷಿಗಳನ್ನು, ಪಾಲಯಿಷ್ಯಸಿ-ಸಂರಕ್ಷಿಸುವಿ ॥೨೨॥ ॥ ಹೇವೀರ-ಎಲೈ ಶೂರನೆ, ಏತತ್-ಈ. ಮಧೂಕಾನಾಂ-ಇಪ್ಪೇಗಿಡಗಳ. ಮಹದ್ವನಂ-ದೊಡ್ಡವನವು, ಆಲಕ್ಷ್ಯತೇ-ಕಾಣಿಸಲ್ಪಡುತ್ತದೆ, ಅಸ್ಯ-ಈ ವನಕ್ಕೆ, ಉತ್ತರೇಣ-ಉತ್ತರಭಾಗದಲ್ಲಿ. ನ್ಯಗ್ರೋಧಂ-ವಟವೃಕ್ಷವಂಕುರಿತು, ಅಭಿಗಚ್ಛತಾ-ಹೋಗುತ್ತಿರುವ, ಮಾರ್ಗೇಣ-ಮಾರ್ಗದಿಂದ, ಗಂತವ್ಯಂ-ಹೋಗತಕ್ಕದ್ದು ॥೨೩॥ ॥ ತತಃ-ಬಳಿಕ. ಪರ್ವತಸ್ಯ-ಬೆಟ್ಟದ, ಸ್ಥಲಂ-ಪ್ರದೇಶವನ್ನು, ಉಪಾರುಹ್ಯ-ಏರಿ, ಅವಿದೂರತಃ-ಸಮೀಪದಲ್ಲಿ. ನಿತ್ಯಪುಷ್ಪಿತಕಾನನಃ-ನಿರಂತರವೂ ಪುಷ್ಪಿಸಿರುವ ವನಗಳುಳ್ಳ, ಪಂಚವಟೀತ್ಯೇವ-ಪಂಚವಟೀಯೆಂದು, ಖ್ಯಾತಃ-ಪ್ರಸಿದ್ಧವಾದ ದೇಶವು, ಅಸ್ತಿ-ಇದೆ ॥೨೪॥ ॥ ಏವಂ ಈಪರಿಯಾಗಿ. ಅಗಸ್ತ್ಯೇನ-ಅಗಸ್ತ್ಯಋಷಿಯಿಂದ ಉಕ್ತಃ-ಹೇಳಲ್ಪಟ್ಟ- ರಾಮಸ್ತು-ಶ್ರೀರಾಮನಾದರೆ, ಸೌಮಿತ್ರಿಣಾಸಹ-ಲಕ್ಷ್ಮಣನೊಡಗೂಡಿ, ಸತ್ಯವಾದಿನಂ-ಸತ್ಯವಾಗಿ ಹೇಳುತ್ತಿರುವ. ತಂಋಷಿಂ-ಆ ಅಗಸ್ತ್ಯಋಷಿಯನ್ನು. ಸತ್ಕೃತ್ಯ-ಪೂಜಿಸಿ. ಆ

---

ತಪಃ ಪ್ರಭಾವದಿಂದಲೂ,ದಶರಥಮಹಾರಾಜನಲ್ಲಿರುವ ಪ್ರೇಮಾತಿಶಯದಿಂದಲೂ ತಿಳಿಯಲ್ಪಟ್ಟಿದೆ ।೧೭॥ ಎಲೈ ಶ್ರೀರಾಮನೇ! ಈ ತಪೋವನದಲ್ಲಿ ಯೆನ್ನೊಡನೆ ವಾಸವಂ ಗೈಯ್ಯುತ್ತಿರು, ನಿನ್ನ ಮನೋಭಿಪ್ರಾಯವು ನನಗೆ ಗೊತ್ತಾಗಿರುವದು; ಆದ್ದರಿಂದ ಪಂಚವಟೀ ತೀರಕ್ಕೆ ಸಾರೆಂದು ನಿರೂಪಿಸುತ್ತೇನೆ ।೧೮। ಆ ಪ್ರದೇಶವುಶ್ಲಾಘ್ಯವಾಗಿಯೂ, ರಮ್ಯವಾಗಿಯೂ ಸಮೀಪದಲ್ಲಿಯೇ ಯಿರುವದು.ಅಲ್ಲಿ ಸೀತಾದೇವಿಯುರಮಿಸುತ್ತಿರುವಳು ।೨೦।ಗೋಮತೀನದಿಯ ತೀರದಲ್ಲಿ ಆ ಪಂಚವಟೀ ಕ್ಷೇತ್ರದಲ್ಲಿ ಬಗೆಬಗೆಗಳಾದ ಕಂದಮೂಲಂಗಳೂ ಫಲಂಗಳೂ,ನಾನಾವಿಧವಾದ ಪಕ್ಕಿಗಳೂ ಇರುವದ್ದರಿಂದ ಆ ಪ್ರದೇಶವು, ವಿಜನವಾಗಿಯೂ ಪುಣ್ಯಕರವಾಗಿಯೂರಮ್ಯವಾಗಿಯೂ ಇರುವದು. ನೀನು ಭಾರ್ಯಾಸಹಿತನಾಗಿ ಸಂರಕ್ಷಿಸಲೂ ಶಕ್ತನಾಗಿದ್ಧೀ, ಆದಕಾರಣ ಅಲ್ಲಿವಾಸವಂ ಗೈಯ್ಯುತ್ತಾ ಋಷಿಗಳಂ ಸಂರಕ್ಷಿಸುತಿರು ।೨೨॥ ಆ ಸ್ಥಲದಲ್ಲಿ ಯಿಪ್ಪೇಮರಗಳ ಮಹತ್ತರವಾದ ವನವು ಕಾಣುತ್ತಲಿದೆ; ಆ ವನದ ಉತ್ತರಕಡೆಯಲ್ಲಿ ವಟವೃಕ್ಷವಂ ಕುರಿತು ಪೋಗುವ ಮಾರ್ಗದಿಂದ ಗಮಿಸತಕ್ಕದ್ದು; ಬಳಿಕ ಪರ್ವತವನ್ನೇರಿ ನೋಡಿದರೆ ನಿರಂತರವು ಪುಷ್ಪಂಗಳುಳ್ಳ ಆ ಪಂಚವಟೀಎಂಬ ಪ್ರದೇಶವು ಕಾಣುವದು , ಎಂಬದಾಗಿ ಅಗಸ್ತ್ಯಮಹಾಮುನಿಯು ನಿರೂಪಿಸಿದವನಾಗಲೂ, ಆ ವಚನವಂಕೇಳಿ ಶ್ರೀರಾಮನು ಲಕ್ಷ್ಮಣನಿಂ ದೊಡಗೂಡಿ ಆ

ಮಾಸತಮೃಷಿಂಸತ್ಯವಾದಿನಂ ।೨೫। ತೌತುತೇನಾಭ್ಯನುಜ್ಞಾತೌಕೃತಪಾದಾಭಿವಂದನೌ । ತದಾಶ್ರಮಾತ್ಪಂಚವಟೀಂಜಗ್ಮತುಸ್ಸಹಸೀತಯಾ ।೨೬। ಗೃಹೀತಚಾಪೌತುನರಾಧಿಪಾತ್ಮಜೌವಿಷಕ್ತತೂಣೌಸಮರೇಷ್ವಕಾತರೌ। ಯಥೋಪದಿಷ್ಟೇನಪಥಾಮಹರ್ಷಿಣಾಪ್ರಜಗ್ಮತುಃಪಂಚವಟೀಂಸಮಾಹಿತೌ ... ... ।೨೭।

—*** ಇತಿಶ್ರೀಮದಾರಣ್ಯಕಾಂಡೇ-ತ್ರಯೋದಶಸ್ಸರ್ಗಃ. ***—

ಅಥಪಂಚವಟೀಂಗಚ್ಛನ್ನಂತರಾರಘುನಂದನಃ । ಆಸಸಾದಮಹಾಕಾಯಂಗೃಧ್ರಂಭೀಮಪರಾಕ್ರಮಂ ।೧। ತಂದೃಷ್ಟ್ವಾತೌಮಹಾಭಾಗೌವಟಸ್ಥಂರಾಮಲಕ್ಷ್ಮಣೌ । ಮೇನಾತೇರಾಕ್ಷಸಂಪಕ್ಷಿಂಬ್ರುವಾಣೌಕೋಭವಾನಿತಿ ।೨। ಸತೌಮಧುರಯಾವಾಚಾಸೌಮ್ಯಯಾಪ್ರೀಣಯನ್ನಿವ । ಉವಾಚವತ್ಸ ಮಾಂವಿದ್ಧಿವಯಸ್ಯಂಪಿತುರಾತ್ಮನಃ ।೩। ಸತಂಪಿತೃಸಖಂಬುಧ್ವಾಪೂಜಯಾಮಾಸರಾಘವಃ । ಸತಸ್ಯಕುಲಮವ್ಯಗ್ರಮಥಪಪ್ರಚ್ಛನಾಮಚ ।೪। ರಾಮಸ್ಯವ

ಮಂತ್ರಯಾಮಾಸ-ಅಪ್ಪಣೆಕೇಳಿದನು ॥೨೫॥ ತೌ-ಆ ಅಗಸ್ತ್ಯ ಋಷಿಯಿಂದ. ಅಭ್ಯನುಜ್ಞಾತೌ-ಸಮ್ಮತಿಸಲ್ಪಟ್ಟ, ತೌ-ಆ ರಾಮಲಕ್ಷ್ಮಣರಿಬ್ಬರೂ ಕೃತಪಾದಾಭಿವಂದನೌ-ಮಾಡಲ್ಪಟ್ಟ ನಮಸ್ಕಾರವುಳ್ಳವರಾಗಿ, ತದಾಶ್ರಮಾತ್-ಆ ಅಗಸ್ತ್ಯಾಶ್ರಮದಿಂದ ಸೀತಯಾಸಹ-ಸೀತಾದೇವಿಯೊಡನೆ, ಪಂಚವಟೀಂ-ಪಂಚವಟೀಕ್ಷೇತ್ರವಂ ಕುರಿತು. ಜಗ್ಮತುಃ-ತೆರಳಿದರು ॥೨೬॥ ಗೃಹೀತಚಾಪೌ-ತೆಗೆದುಕೊಳ್ಳಲ್ಪಟ್ಟ ಬಿಲ್ಲಗಳುಳ್ಳ, ಸಮರೇಷು-ಯುದ್ಧಗಳಲ್ಲಿ. ಅಕಾತರೌ-ಭಯವಿಲ್ಲದಿರುವ ವಿಷಕ್ತತೂಣೌ-ಕಟ್ಟಲ್ಪಟ್ಟ ಬತ್ತಳಿಕೆಗಳುಳ್ಳ, ನರಾಧಿಪಾತ್ಮಜೌ-ರಾಜಕುಮಾರರಾದ ರಾಮಲಕ್ಷ್ಮಣರು, ಮಹರ್ಷಿಣಾ-ಅಗಸ್ತ್ಯಋಷಿಯಿಂದ, ಯಥೋಪದಿಷ್ಟೇನ-ಯಥಾವತ್ತಾಗಿ ತೋರಿಸಲ್ಪಟ್ಟ. ಪಥಾ-ಮಾರ್ಗದಿಂದ, ಸಮಾಹಿತೌ-ಏಕಾಗ್ರಚಿತ್ತರಾಗಿ. ಪಂಚವಟೀಂ-ಪಂಚವಟೀಕ್ಷೇತ್ರವಂ ಕುರಿತು ಜಗ್ಮತುಃ-ತೆರಳಿದರು ॥೨೭॥ —*** ತ್ರಯೋದಶಸ್ಸರ್ಗಃ ***—

ಅಥ-ಬಳಿಕ, ರಘುನಂದನಃ-ಶ್ರೀರಾಮನು, ಪಂಚವಟೀಂ-ಪಂಚವಟೀಕ್ಷೇತ್ರವನ್ನುಕುರಿತು, ಗಚ್ಛನ್-ಹೋಗುತ್ತಿರುವವನಾಗಿ. ಅಂತರಾ-ಮಧ್ಯಮಾರ್ಗದಲ್ಲಿ. ಮಹಾಕಾಯಂ-ಮಹಾಶರೀರವುಳ್ಳ, ಭೀಮಪರಾಕ್ರಮಂ-ಭಯಂಕರವಾದ ಪರಾಕ್ರಮವುಳ್ಳ, ಗೃಧ್ರಂ-ಜಟಾಯುವೆಂಬ ಹದ್ದುಗಳಿಗೆ ರಾಜನನ್ನು, ಆಸಸಾದ-ಹೊಂದಿದನು ॥೧॥ ಮಹಾಭಾಗೌ-ಮಹಾಪುಣ್ಯಶಾಲಿಗಳಾದ, ತೌ ರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರಿಬ್ಬರೂ. ವಟಸ್ಥಂ-ಆಲದಮರದಮೇಲಿರುವ, ತಂಪಕ್ಷಿಂ-ಆ ಜಟಾಯುವಿನನ್ನು, ದೃಷ್ಟ್ವಾ-ಕಂಡು, ರಾಕ್ಷಸಂ-ರಕ್ಕಸನನ್ನಾಗಿ. ಮೇನಾತೆ-ಎಣಿಸಿದರು. ಭವಾನ್-ನೀನು, ಕಃಇತಿ-ಯಾರೂಎಂದು. ಬ್ರುವಾಣೌ-ಕೇಳಿದರು ॥೨॥ ಸಃ-ಆ ಜಟಾಯುವು, ತೌ-ಆ ರಾಮಲಕ್ಷ್ಮಣರಂ ಕುರಿತು. ಮಧುರಯಾ-ಮನೋಹರವಾದ, ಸೌಮ್ಯಯಾ-ಪ್ರಸನ್ನವಾದ, ವಾಚಾ-ಮಾತಿನಿಂದ, ಪ್ರೀಣಯನ್ನಿವ-ಸಂತೋಷಗೊಳಿಸುವವನಂತೆ, ಹೇವತ್ಸ-ಎಲೈ ಬಾಲನೇ! ಮಾಂ-ನನ್ನನ್ನು, ಆತ್ಮನಃ-ನಿನಗೆ, ಪಿತುಃ-ತಂದೆಯಾದ ದಶರಥರಾಯನಿಗೆ, ವಯಸ್ಯಂ-ಸಖನನ್ನಾಗಿ, ವಿದ್ಧಿ-ತಿಳಿದುಕೊ, ಇತಿ-ಇಂತೆಂದು, ಉವಾಚ-ಹೇಳಿದನು ॥೩॥ ರಾಘವಃ-ಆ ಶ್ರೀರಾಮನು, ತಂ-ಆ ಗೃಧ್ರರಾಜನನ್ನು, ಪಿತೃಸಖಂ-ತಂದೆಗೆ ಸಖನನ್ನಾಗಿ, ಬುದ್ಧ್ವಾ-ತಿಳಿದು, ಪೂಜಯಾಮಾಸ-ಮರ್ಯಾದೆಮಾಡಿದನು, ಸಃ-ಆ ಶ್ರೀರಾಮನು, ಅಥ-ಬಳಿಕ. ತಸ್ಯ-ಆ ಗೃಧ್ರರಾಜನ, ಅವ್ಯಗ್ರಂ-ದೋಷರಹಿತವಾದ, ಕುಲಂ-ವಂಶವನ್ನು, ನಾಮಚ-ಹೆಸರನ್ನು, ಪಪ್ರಚ್ಛ-ಕೇಳಿದನು ॥೪॥ ರಾಮಸ್ಯ-ಶ್ರೀರಾಮನ, ವಚನಂ-ಮಾತನ್ನು ಶ್ರುತ್ವಾ-ಕೇಳಿ. ದ್ವಿಜಃ-ಪಕ್ಷಿಯು. ಸರ್ವಭೂತಸಮುದ್ಭವಂ-ಸಕ

ಮುನಿಗೆ ನಮಸ್ಕಾರವಂ ಗೈದು, ಅಪ್ಪಣೆಯಂ ಕೇಳಿ ಬಳಿಕ ಅವರೀರ್ವರು ಆ ಮುನಿಯಿಂದ ಅನುಜ್ಞೆಯಂ ಪಡೆದವರಾಗಿ, ಸೀತಾದೇವಿಯೊಡಗೂಡಿ ಆ ಆಶ್ರಮಪ್ರದೇಶದಿಂ ಸಾಗಿದರದೆಂತೆನೆ;— ।೨೬। ಸಂಗರದಲ್ಲಿ ಕಾತರವಂ ಪೊಂದದಿರುವ ಆ ರಾಮಲಕ್ಷ್ಮಣರೀರ್ವರು ಕೋದಂಡಂಗಳನ್ನೂ ಬಾಣಂಗಳನ್ನೂ ಧರಿಸಿದವರಾಗಿ, ಅಗಸ್ತ್ಯಮುನಿಯಿಂದ ತೋರಿಸಲ್ಪಟ್ಟ ಮಾರ್ಗದಿಂ ತವೇಕಾಗ್ರಚಿತ್ತರಾಗಿ ಪಂಚವಟೀ ಕ್ಷೇತ್ರವಂ ಕುರಿತು ತೆರಳಿದರು।೨೭।

—* ಅರಣ್ಯಕಾಂಡದಲ್ಲಿನ ೧೩ನೆಯ ಸರ್ಗಂ ಮುಗಿದುದು *—

ಅನಂತರದಲ್ಲಿ ಶ್ರೀರಾಮನು ಪಂಚವಟೀ ಕ್ಷೇತ್ರವಂ ಕುರಿತು ಸಾರಿದವನಾಗಿ ಮಾರ್ಗ ಮಧ್ಯದಲ್ಲಿ ಮಹಾಶರೀರವುಳ್ಳ, ಭಯಂಕರವಾದ ಪರಾಕ್ರಮವುಳ್ಳ, ಜಟಾಯುವೆಂಬ ಗೃಧ್ರರಾಜನನ್ನು ಹೊಂದಿ ಆ ರಾಮಲಕ್ಷ್ಮಣರೀರ್ವರೂ ಆಲದ ಮರದಮೇಲೆ ಕುಳಿತಿರುವ ಆ ಜಟಾಯುವಿನಂ ಕಂಡು, ರಕ್ಕಸನೆಂದು ತಿಳಿದುಕೊಂಡವರಾಗಿ, ನೀನ್ಯಾರೆಂದು ಕೇಳಿದರು ।೨। ಅನಂತರದಲ್ಲಿ ಆ ಜಟಾಯುವು ಆ ರಾಮಲಕ್ಷ್ಮಣರನ್ನು ಮಧುರವಾಕ್ಯಗಳಿಂ ಸಂತೋಷಗೊಳಿಸುವವನಂತೆ, ಎಲೈ ಬಾಲಕನಾದ ಶ್ರೀರಾಮನೇ! ನನ್ನನ್ನು ನಿನ್ನ ತಂದೆಯಾದ ದಶರಥರಾಯನಿಗೆ ಸಖನನ್ನಾಗಿ ತಿಳಿದುಕೊಳ್ಳೆಂದು ನುಡಿದವನಾಗಲು; ಆ ಶ್ರೀರಾಮನು ಗೃಧ್ರರಾಜನನ್ನು ಪಿತೃಸಖನೆಂದರಿತು, ಮರ್ಯಾದೆಯಂ ಗೈದು ಆತನ ಕುಲವನ್ನೂ, ನಾಮಧೇಯವನ್ನೂ ಸಹಾ ತಿಳಿಯಲಿಚ್ಛೆಯುಳ್ಳವನಾಗಿ ಪ್ರಶ್ನೆಯಂ ಗೈದನು ।೪। ಬಳಿಕಾ ಪಕ್ಷಿಯು ಶ್ರೀರಾಮನ ವಾಕ್ಯವಂ ಕೇಳಿ, ಸರ್ವಪ್ರಾಣಿಗಳ ಉತ್ಪತ್ತಿಯನ್ನೂ, ತನ್ನ ವಂಶ

ಜನಂ ಶ್ರುತ್ವಾ ಸರ್ವಭೂತಸಮುದ್ಭವಂ । ಆಚಚಕ್ಷೇ ದ್ವಿಜಸ್ತಸ್ಮೈ ಕುಲಮಾತ್ಮಾನಮೇವ ಚ ॥೫॥ ಪೂರ್ವಕಾಲೇ ಮಹಾಬಾಹೋ ಯೇ ಪ್ರಜಾಪತಯೋಽಭವನ್ । ತಾನ್ಮೇ ನಿಗದತಸ್ಸರ್ವಾನಾದಿತಶ್ಶೃಣು ರಾಘವ ॥೬॥ ಕರ್ದಮಃ ಪ್ರಥಮಸ್ತೇಷಾಂ ವಿಕ್ರೀತಸ್ತದನಂತರಃ । ಶೇಷಶ್ಚ ಸಂಶ್ರಯಶ್ಚೈವ ಬಹುಪುತ್ರಶ್ಚ ವೀರ್ಯವಾನ್ ॥೭॥ ಸ್ಥಾಣುರ್ಮರೀಚಿರತ್ರಿಶ್ಚ ಕ್ರತುಶ್ಚೈವ ಮಹಾಬಲಃ । ಪುಲಸ್ತ್ಯಶ್ಚಾಂಗಿರಾಶ್ಚೈವ ಪ್ರಚೇತಾಃ ಪುಲಹಸ್ತಥಾ ॥ ದಕ್ಷೋ ವಿವಸ್ವಾನಪರೋಽರಿಷ್ಟನೇಮಿಶ್ಚ ರಾಘವ । ಕಾಶ್ಯಪಶ್ಚ ಮಹಾತೇಜಾಸ್ತೇಷಾಮಾಸೀಚ್ಚ ಪಶ್ಚಿಮಃ ॥೯॥ ಪ್ರಜಾಪತೇಸ್ತು ದಕ್ಷಸ್ಯ ಬಭೂವುರಿತಿ ವಿಶ್ರುತಂ । ಷಷ್ಟಿರ್ದುಹಿತರೋ ರಾಮ ಯಶಸ್ವಿನ್ಯೋ ಮಹಾಯಶಃ ॥೧೦॥ ಕಾಶ್ಯಪಃ ಪ್ರತಿಜಗ್ರಾಹ ತಾಸಾಮಷ್ಟೌ ಸುಮಧ್ಯಮಾಃ । ಅದಿತಿಂ ಚ ದಿತಿಂ ಚೈವ ದನುಮಪ್ಯಥ ಕಾಲಿಕಾಂ ॥ ತಾಮ್ರಾಂ ಕ್ರೋಧವಶಾಂ ಚೈವ ಮನುಂ ಚಾಪ್ಯನಲಾಮಪಿ ॥೧೧॥ ತಾಸ್ತು ಕನ್ಯಾಸ್ತತಃ ಪ್ರೀತಃ ಕಾಶ್ಯಪಃ ಪುನರಬ್ರವೀತ್ । ಪುತ್ರಾಂಸ್ತ್ರೈಲೋಕ್ಯಭರ್ತೄನ್ವೈ ಜನಯಿಷ್ಯಥ ಮತ್ಸಮಾನ್ ॥೧೨॥

---

ಸ್ತ ಪ್ರಾಣಿಗಳ ಉತ್ಪತ್ತಿಯನ್ನು, ಕುಲಂ-ತನ್ನ ವಂಶವನ್ನು, ಆತ್ಮಾನಮೇವಚ-ತನ್ನನ್ನೂ, ತಸ್ಮೈ-ಆ ಶ್ರೀರಾಮನಿಗಾಗಿ, ಆಚಚಕ್ಷೇ-ಹೇಳಿದನು ॥೫॥ ಹೇಮಹಾಬಾಹೋ-ಎಲೈ, ಮಹಾಭುಜಪರಾಕ್ರಮಶಾಲಿಯೆ, ಪೂರ್ವಕಾಲೇಚ-ಸೃಷ್ಟ್ಯಾದಿಭಾಗದಲ್ಲಿ, ಯೇಪ್ರಜಾಪತಯಃ-ಯಾವ ನವಬ್ರಹ್ಮರು, ಅಭವನ್-ಆದರೋ. ಹೇರಾಘವ-ಎಲೈ ಶ್ರೀರಾಮನೆ, ಸರ್ವಾನ್-ಸಮಸ್ತರಾದ, ತಾನ್-ಆ ನವಪ್ರಜಾಪತಿಗಳನ್ನು, ನಿಗದತಃ-ಹೇಳುತ್ತಿರುವ, ಮೇ-ನನ್ನ ಬಳಿಯಿಂದ, ಆದಿತಃ-ವ ದಲಿನಿಂದ, ಶೃಣು-ಕೇಳು ॥೬॥ ಹೇರಾಘವ-ಎಲೈ ಶ್ರೀರಾಮನೇ, ತೇಷಾಂ-ಆ ಪ್ರಜಾಪತಿಗಳಲ್ಲಿ, ಪ್ರಥಮಃ-ಮೊದಲನೆಯವನು, ಕರ್ದಮಃ-ಕರ್ದಮಬ್ರಹ್ಮನು, ವಿಕ್ರೀತಃ-ವಿಕ್ರೀತನು, ತದನಂತರಃ-ಅವನಿಗೆ ಎರಡನೇಯವನು, ಶೇಷಶ್ಚ-ಶೇಷನು, ಸಂಶ್ರಯಶ್ಚೈವ-ಸಂಶ್ರಯನೆಂಬುವನು ವೀರ್ಯವಾನ್-ಸಾಮರ್ಥ್ಯವಂತನಾದ, ಬಹುಪುತ್ರಶ್ಚ-ಬಹುಪುತ್ರನೆಂಬುವನು ॥೭॥ ಸ್ಥಾಣುಃ-ಸ್ಥಾಣುವೆಂಬುವನು, ಮರೀಚಿಃ-ಮರೀಚಿಯೂ, ಅತ್ರಿಶ್ಚ-ಅತ್ರಿಋಷಿಯೂ, ಮಹಾಬಲಃ-ಮಹಾಬಲಿಷ್ಠನಾದ, ಕ್ರತುಶ್ಚೈವ-ಕ್ರತುವೆಂಬುವನೂ, ಪುಲಸ್ತ್ಯಶ್ಚ-ಪುಲಸ್ತ್ಯನೆಂಬುವನು, ಅಂಗಿರಾಶ್ಚೈವ-ಅಂಗಿರಸ್ಸು ಎಂಬುವನು ಪ್ರಚೇತಾಃ-ಪ್ರಚೇತಸ್ಸೆಂಬುವನು, ತಥಾ-ಹಾಗೆಯೇ ಪುಲಹಃ-ಪುಲಹನೆಂಬುವನು, ದಕ್ಷಃ-ದಕ್ಷಬ್ರಹ್ಮನು, ಅಪರಃ-ಮತ್ತೊಬ್ಬನಾದ, ಅರಿಷ್ಟನೇಮಿಃ-ಅರಿಷ್ಟನೇಮಿಯೆಂಬ ನಾಮಾಂತರವುಳ್ಳ ಮಹಾತೇಜಾಃ-ಬಹು ತೇಜೋವಂತನಾದ, ಕಾಶ್ಯಪಶ್ಚ-ಕಾಶ್ಯಪಬ್ರಹ್ಮನು, ತೇಷಾಂ-ಆ ಪ್ರಜಾಪತಿಗಳಲ್ಲಿ, ಪಶ್ಚಿಮಃ-ಆ ಪ್ರಜಾಪತಿಗಳೊಳಗೆ, ಪಶ್ಚಿಮಃ-ಕಿರಿಯವನು ಆಸೀತ್-ಆದನು ॥೯॥ ಹೇಮಹಾಯಶಃ-ಎಲೈ ಮಹಾಕೀರ್ತಿವಂತನೇ, ಹೇರಾಮ-ಎಲೈ ಶ್ರೀರಾಮನೇ, ದಕ್ಷಸ್ಯಪ್ರಜಾಪತೇಃ-ದಕ್ಷಬ್ರಹ್ಮನಿಗೆ, ಯಶಸ್ವಿನ್ಯಃ-ಕೀರ್ತಿವಂತರಾದ, ಷಷ್ಟಿಃ-ಅರವತ್ತು ಸಂಖ್ಯೆಯುಳ್ಳ, ದುಹಿತರಃ-ಹೆಣ್ಣು ಮಕ್ಕಳು, ಬಭೂವುರಿತಿ-ಆದರೂ ಎಂದು, ವಿಶ್ರುತಂ-ಕೇಳಲ್ಪಟ್ಟಿತು ॥೧೦॥ ಕಾಶ್ಯಪಃ-ಕಶ್ಯಪಬ್ರಹ್ಮನು, ತಾಸಾಂ-ಆ ಕನ್ಯೆಯರೊಳಗೆ, ಸುಮಧ್ಯಮಾಃ-ಒಳ್ಳೇ ಮಧ್ಯ ಪ್ರದೇಶಗಳುಳ್ಳ, ಅದಿತಿಂಚ-ಅದಿತೀದೇವಿಯನ್ನು, ದಿತಿಂಚ-ದಿತೀದೇವಿಯನ್ನು, ದನುಮಪಿ-ದನುವೆಂಬುವಳನ್ನು, ಅಥ-ಬಳಿಕ, ಕಾಲಿಕಾಂ-ಕಾಲಿಕಾ ಎಂಬುವಳನ್ನು, ತಾಮ್ರಾಂ-ತಾಮ್ರಾ ಎಂಬುವಳನ್ನು ಕ್ರೋಧವಶಾಂಚೈವ-ಕ್ರೋಧವಶಾ ಎಂಬುವಳನ್ನು, ಮನುಂಚಾಪಿ-ಮನೂ ಎಂಬುವಳನ್ನು, ಅನಲಾಮಪಿ-ಅನಲಾ ಎಂಬುವಳನ್ನು, ಅಷ್ಟೌ-ಎಂಟು ಮಂದಿ ಹೆಣ್ಣುಮಕ್ಕಳನ್ನು. ಪ್ರತಿಜಗ್ರಾಹ-ಪಾಣಿಗ್ರಹಣಮಾಡಿಕೊಂಡನು ॥೧೧॥ ತತಃ-ಬಳಿಕ, ಕಾಶ್ಯಪಃ-ಕಾಶ್ಯಪಬ್ರಹ್ಮನು, ಪ್ರೀತಃ-ಸಂತೋಷಗೊಂಡವನಾಗಿ, ತಾಸ್ತುಕನ್ಯಾಃ-ಆ ಕನ್ಯೆಯರನ್ನು ಕುರಿತು, ಪುನಃ-ಮತ್ತು ತ್ರೈಲೋಕ್ಯಭರ್ತೄನ್-ಲೋಕತ್ರಯಕ್ಕೂ ಪೋಷಕರಾದ ಮತ್ಸಮಾನ್-ನನಗೆ ಸಮಾನಸ್ಕಂಧರಾದ, ಪುತ್ರಾನ್-ಮಕ್ಕಳನ್ನು. ಜನಯಿಷ್ಯಥ-ಹುಟ್ಟಿಸಿರಿ ಎಂದು. ಅಬ್ರವೀತ್-ನುಡಿದನು ॥೧೨॥ ಹೇರಾಮ-ಎಲೈ ಶ್ರೀರಾಮನೇ, ಅದಿತಿಃ-ಅದಿತೀದೇವಿಯು, ತನ್ಮನಾಃ-ಆ ಕಾಶ್ಯಪಬ್ರಹ್ಮನಲ್ಲಿ ಮನಸ್ಸು

---

ಳ್ಳವನ್ನೂ, ತನ್ನನ್ನೂ ಸಹಾ ಆ ಶ್ರೀರಾಮನಿಗೆ ತಿಳುಹಿಸುವವನದೆಂತೆನೆ,—॥೫॥ ಎಲೈ ಮಹಾಭುಜಪರಾಕ್ರಮಿಯಾದ ಶ್ರೀರಾಮನೆ ! ಜಗತ್ಸೃಷ್ಟಿಯ ಆದಿಭಾಗದಲ್ಲಿ ಯಾವ ಬ್ರಹ್ಮರಿದ್ದರೋ, ಆ ಬ್ರಹ್ಮರು ಮೊದಲ್ಗೊಂಡು ಅವರನ್ನೆಲ್ಲಾ ವಿಸ್ತಾರವಾಗಿ ಹೇಳುತ್ತಿರುವ ನನ್ನ ವಾಕ್ಯವಂ ಕೇಳುವನಾಗು; ಎಲೈ ಶ್ರೀರಾಮನೇ! ಆ ಬ್ರಹ್ಮರಲ್ಲಿ ಕರ್ದಮ ಬ್ರಹ್ಮನು ಮೊದಲನೆಯವನು; ವಿಕ್ರೀತನೆಂಬವನು ಯೆರಡನೆಯವನು; ಮತ್ತು " ಶೇಷ, ಸಂಶ್ರಯ, ಬಹುಪುತ್ರ, ಸ್ಥಾಣು, ಮರೀಚಿ, ಅತ್ರಿ, ಕ್ರತು, ಪುಲಸ್ತ್ಯ, ಅಂಗಿರಸ್ಸು, ಪುಲಹ, ದಕ್ಷ, ಅರಿಷ್ಟನೇಮಿಯೆಂದು ನಾಮಾಂತರವುಳ್ಳ ಕಾಶ್ಯಪ, " ಎಂಬ ಬ್ರಹ್ಮರಿದ್ದರು. ಆ ಪ್ರಜಾಪತಿಗಳಲ್ಲಿ ಕಾಶ್ಯಪನೆಂಬವನು ಕಿರೀಮಗನಾಗಿದ್ದನು ॥೯॥ ಎಲೈ ಮಹಾ ಯಶೋವಂತನಾದ ಶ್ರೀರಾಮನೇ! ಆ ದಕ್ಷಬ್ರಹ್ಮನಿಗೆ ಕೀರ್ತಿವಂತರಾದ ಅರವತ್ತುಮಂದಿ ಹೆಣ್ಣುಮಕ್ಕಳುಂಟಾದರೆಂದು ಕೇಳಲ್ಪಟ್ಟಿದೆ ॥೧೦॥ ಕಾಶ್ಯಪಬ್ರಹ್ಮನು ಆ ಕನ್ಯಕೆಯರಲ್ಲಿ ಒಳ್ಳೇ ಮಧ್ಯ ಪ್ರದೇಶಂಗಳುಳ್ಳ, " ಅದಿತಿ, ದಿತಿ, ದನು, ಕಾಲಿಕಾ, ತಾಮ್ರ, ಕ್ರೋಧವಶ, ಮನು, ಅನಲ, " ಎಂಬ ಯೆಂಟುಮಂದಿ ಹೆಣ್ಣು ಹುಡುಗಿಯರನ್ನು ಸ್ವೀಕರಿಸಿದನು ॥೧೧॥ ಆನಂತರದಲ್ಲಿ ಆ ಕಶ್ಯಪಬ್ರಹ್ಮನು ಬಹು ಸಂತೋಷಗೊಂಡವನಾಗಿ, ಆ ಕನ್ಯಕೆಯರಂ ಕುರಿತು ಎಲೈ ಮಕ್ಕಳಿರಾ! ಲೋಕತ್ರಯಾಧಿಪತಿಗಳಾದ ನನಗೆ ಸಮಾನರಾದ

ಅದಿತಿಸ್ತನ್ಮನಾರಾಮದಿತಿಶ್ಚ ಮನುಜರ್ಷಭ। ಕಾಳಿಕಾಚ ಮಹಾಬಾಹೋ ಶೇಷಾಸ್ತ್ವಮನಸೋಭವನ್॥೧೩॥ ಅದಿತ್ಯಾಂ ಜಜ್ಞಿರೇದೇವಾಸ್ತ್ರಯಸ್ತ್ರಿಂಶದರಿಂದಮ। ಆದಿತ್ಯಾವಸವೋರುದ್ರಾಹ್ಯಶ್ವಿನೌಚಪರಂತಪ।೧೪॥ ದಿತಿಸ್ತ್ವಜನಯತ್ಪುತ್ರಾನ್ದೈತ್ಯಾಂಸ್ತಾತಯಶಸ್ವಿನಃ। ತೇಷಾಮಿಯಂವಸುಮತೀಪುರಾಸೀತ್ಸವನಾರ್ಣವಾ।೧೫॥ ದನುಸ್ತ್ವಜನಯತ್ಪುತ್ರಮಶ್ವಗ್ರೀವಮರಿಂದಮ॥ ನರಕಂಕಾಲಕಂಚೈವಕಾಳಿಕಾಪಿವ್ಯಜಾಯತ॥೧೬॥ ಕ್ರೌಂಚೀಂಭಾಸೀಂತಥಾಶ್ಯೇನೀಂಧೃತರಾಷ್ಟ್ರೀಂತಥಾಶುಕೀಂ। ತಾಮ್ರಾಪಿಸುಷುವೇಕನ್ಯಾಃಪಂಚೈತಾಲೋಕವಿಶ್ರುತಾಃ ॥೧೭॥ ಉಲೂಕಾನ್ಜನಯತ್ಕ್ರೌಂಚೀಭಾಸೀಭಾಸಾನ್ವ್ಯಜಾಯತ। ಶ್ಯೇನೀಶ್ಯೇನಾಂಶ್ಚಗೃಧ್ರಾಂಶ್ಚವ್ಯಜಾಯತಸುತೇಜಸಃ। ಧೃತರಾಷ್ಟ್ರೀತುಹಂಸಾಂಶ್ಚಕಲಹಂಸಾಂಶ್ಚಸರ್ವಶಃ॥ ಚಕ್ರವಾಕಾಂಶ್ಚಭದ್ರಂತೇವಿಜಜ್ಞೇಸಾಪಿಭಾಮಿನೀ। ಶುಕೀನತಾಂವಿಜಜ್ಞೇತುನತಾವಿನತಾಸುತಾ॥ ೨೦। ದಶಕ್ರೋಧವಶಾರಾಮವಿಜಜ್ಞೇಹ್ಯಾತ್ಮಸಂಭವಾಃ। ಮೃಗೀಂಚಮೃಗಮಂದಾಂಚಹರೀಂ

---

ಳ್ಳವಳಾದಳು, ಹೇಮನುಜರ್ಷಭ_ಎಲೈ ಮನುಷ್ಯಶ್ರೇಷ್ಠನೇ, ಹೇಮಹಾಬಾಹೋ–ಎಲೈ ಮಹಾಭುಜಪರಾಕ್ರಮಶಾಲಿಯೇ। ದಿತಿಶ್ಚ–ದಿತೀದೇವಿಯೂ, ಕಾಳಿಕಾಚ–ಕಾಳಿಕಾದೇವಿಯೂ, ತನ್ಮನಾಃ–ಆ ಕಶ್ಯಪಬ್ರಹ್ಮನಲ್ಲಿ ಮನವುಳ್ಳವರಾಗಿದ್ದರು. ಶೇಷಾಃ–ವಿಕ್ಕಾದವರು, ಅಮನಸಃ–ಕಶ್ಯಪಬ್ರಹ್ಮನಲ್ಲಿ ಮನಸ್ಸಿಲ್ಲದವರು. ಅಭವನ್–ಆದರು ॥೧೩॥ ॥ ಹೇ ಅರಿಂದಮ–ಎಲೈ ಶತ್ರುಸಂಹಾರಕನೇ, ಅದಿತ್ಯಾಂ_ಅದಿತೀದೇವಿಯಲ್ಲಿ, ತ್ರಯಸ್ತ್ರಿಂಶತ್–ಮುವ್ವತ್ತುಮೂರು. ದೇವಾಃ–ದೇವತೆಗಳು, ಜಜ್ಞಿರೆ_ಹುಟ್ಟಿದರು. ಹೇಪರಂತಪ–ಎಲೈ ಶತ್ರುಸಂಹಾರಕನೇ, ಆದಿತ್ಯಾಃ–ದ್ವಾದಶಾದಿತ್ಯರು. ವಸವಃ–ಅಷ್ಟವಸುಗಳು. ರುದ್ರಾಃ–ಏಕಾದಶರುದ್ರರು, ಅಶ್ವಿನೌಚ–ಅಶ್ವಿನೀದೇವತೆಗಳಿಬ್ಬರೂ. ಅಂತು ಮುವ್ವತ್ತು ಮೂರು ದೇವತೆಗಳು, ಅದಿತಿಯಲ್ಲಿ ಹುಟ್ಟಿದರು ॥೧೪॥ ॥ ದಿತಿಸ್ತು–ದಿತಿದೇವಿಯಾದರೆ, ಯಶಸ್ವಿನಃ–ಕೀರ್ತಿವಂತರಾದ, ದೈತ್ಯಾನ್–ರಾಕ್ಷಸರೆಂಬ, ಪುತ್ರಾನ್–ಮಕ್ಕಳನ್ನು. ಅಜನಯತ್–ಹಡೆದಳು. ಪುರಾ–ಪೂರ್ವದಲ್ಲಿ, ಸವನಾರ್ಣವಾ–ಅರಣ್ಯಗಳಿಂದಲೂ ಕಡಲುಗಳಿಂದಲೂ ಒಡಗೂಡಿದ, ಇಯಂವಸುಮತೀ–ಈ ಭೂಮಿ. ತೇಷಾಂ–ಆ ರಾಕ್ಷಸಸಂಬಂಧವಾಗಿ, ಆಸೀತ್–ಆಯಿತು ॥೧೫॥ ॥ ಹೇಅರಿಂದಮ–ಎಲೈ ಶತ್ರುಸಂಹಾರಕನೇ, ದನುಸ್ತು–ದನು ಯೆಂಬವಳು, ಅಶ್ವಗ್ರೀವಂ–ಹಯಗ್ರೀವನೆಂಬ, ಪುತ್ರಂ–ಮಗನನ್ನು. ಅಜನಯತ್–ಹಡೆದಳು, ಕಾಳಿಕಾಪಿ–ಕಾಳಿಕಾ ಎಂಬವಳು, ನರಕಂ_ನರಕನನ್ನು, ಕಾಲಕಂಚೈವ–ಕಾಲಕನೆಂಬುವನನ್ನು, ವ್ಯಜಾಯತ–ಹಡೆದಳು ॥೧೬॥ ತಾಮ್ರಾಪಿ–ತಾಮ್ರಾ ಯೆಂಬ ಕಶ್ಯಪನ ಪತ್ನಿಯು, ಕ್ರೌಂಚೀಂ–ಕ್ರೌಂಚೀಯೆಂಬುವಳನ್ನು. ಭಾಸೀಂ_ಭಾಸೀ ಯೆಂಬುವಳನ್ನು, ತಥಾ–ಹಾಗೆಯೇ ಶ್ಯೇನೀಂ–ಶ್ಯೇನೀಯೆಂಬವಳನ್ನು, ಧೃತರಾಷ್ಟ್ರೀಂ–ಧೃತರಾಷ್ಟ್ರೀಯೆಂಬವಳನ್ನು, ತಥಾ–ಹಾಗೆಯೇ, ಶುಕೀಂ–ಶುಕೀಯೆಂಬವಳನ್ನು ಏತಾಃ–ಈ ಲೋಕ. ವಿಶ್ರುತಾಃ–ಲೋಕದೊಳ್ ಪ್ರಸಿದ್ಧರಾದ, ಪಂಚಕನ್ಯಾಃ–ಐದುಜನ ಕನ್ನಿಕೆಯರನ್ನು, ಸುಷುವೇ–ಹಡೆದಳು ॥೧೭॥ ಕ್ರೌಂಚೀ–ಕ್ರೌಂಚೀ ಎಂಬ ಕಶ್ಯಪನ ಮಗಳು. ಉಲೂಕಾನ್–ಗೂಬೆಗಳನ್ನು. ಜನಯತ್–ಹಡೆದಳು. ಭಾಸೀ–ಭಾಸೀ ಎಂಬವಳು, ಭಾಸಾನ್–ಶೆಂಬರಕಾಕಿಗಳನ್ನು, ವ್ಯಜಾಯತ–ಹಡೆದಳು, ಶ್ಯೇನೀ–ಶ್ಯೇನೀ ಎಂಬವಳು, ಶ್ಯೇನಾಂಶ್ಚ–ಡ್ಯಾಗೆಗಳನ್ನು, ಸುತೇಜಸಃ–ಒಳ್ಳೇ ತೇಜಸ್ಸುಳ್ಳ, ಗೃಧ್ರಾಂಶ್ಚ–ಹದ್ದುಗಳನ್ನು, ವ್ಯಜಾಯತ–ಹೆತ್ತಳು. ಧೃತರಾಷ್ಟ್ರೀಂತು–ಧೃತರಾಷ್ಟ್ರೀ ಎಂಬವಳು ಹಂಸಾಂಶ್ಚ–ಹಂಸೆಗಳನ್ನು, ಕಲಹಂಸಾಂಶ್ಚ–ಹಂಸಜಾತೀಯಗಳಾದ ಪಕ್ಷಿವಿಶೇಷಗಳನ್ನು, ಸರ್ವಶಃ–ಸಮಸ್ತವಾದ, ಚಕ್ರವಾಕಾಂಶ್ಚ–ಚಕ್ರವಾಕಪಕ್ಷಿಗಳನ್ನು, ಸಾಪಿಭಾಮಿನೀ–ಅದೇಧೃತರಾಷ್ಟ್ರೀ ಎಂಬವಳೇ, ವಿಜಜ್ಞೇ–ಹಡೆದಳು

---

ಮಕ್ಕಳನ್ನು ಹೆರುವಂಥಾವರಾಗೆಂದು ನುಡಿದನು।೧೨॥ ಎಲೈ ಪುರುಷಶ್ರೇಷ್ಠನಾದ ಶ್ರೀರಾಮನೇ! ಕೇಳು; ಅನಂತರದಲ್ಲಿ ಅದಿತಿದೇವಿಯು ದಿತಿದೇವಿಯೂ ಕಾಳಿಕಾದೇವಿಯೂ ಸಹಾ, ಆ ಕಾಶ್ಯಪಬ್ರಹ್ಮನಲ್ಲಿ ಯಿಷ್ಟವುಳ್ಳವರಾದರೇ ಹೊರ್ತು ಇತರ ಕನ್ನಿಕೆಯರ್ಯಾರು ಆತನಲ್ಲಿ ಯಿಷ್ಟವುಳ್ಳವರಾಗಲಿಲ್ಲ ॥೧೩॥ ಎಲೈ ರಘುನಂದನನೇ! ಆ ಅದಿತಿದೇವಿಯಲ್ಲಿ ಮುವ್ವತ್ತುಮೂರು ದೇವತೆಗಳು ಹುಟ್ಟಿದವರಾದರು; ಅವರ್ಯಾರೆಂದರೆ,—" ದ್ವಾದಶಾದಿತ್ಯರು; ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀ ದೇವತೆಗಳಿಬ್ಬರು, " ಈ ಪ್ರಕಾರವಾಗಿ ಮೂವತ್ತು ಮೂರುಮಂದಿ ಹುಟ್ಟಿದರು ।೧೪॥ ಅನಂತರದಲ್ಲಿ ದಿತಿದೇವಿಯಾದರೆ ಮಹಾ ಕೀರ್ತಿವಂತರಾದ, ರಕ್ಕಸರನ್ನೂ ಹಡೆದಳು. ಎಲೈ ಶ್ರೀರಾಮನೇ, ಕೇಳು; ಪೂರ್ವದಲ್ಲಿ ವನಗಳಿಂದಲೂ ಕಡಲುಗಳಿಂದಲೂ ಒಡಗೂಡಿದ ಈ ಮಹೀಮಂಡಲವೆಲ್ಲಾ ಆ ರಾಕ್ಷಸರ ಅಧೀನವಾಗಿಯೇ ಯಿತ್ತು; ।೧೫॥ ಎಲೈ ಶತ್ರುಸಂಹಾರಕನೇ, ಆ ದನುವೆಂಬುವಳಾದರೆ ಅಶ್ವಗ್ರೀವನೆಂಬ ಪುತ್ರನಂ ಪಡೆದಳು. ಅನಂತರದಲ್ಲಿ ಕಾಳಿಕಾದೇವಿಯು ನರಕನನ್ನೂ, ಕಾಲಕನೆಂಬುವನನ್ನೂ ಹಡೆದಳು. ॥೧೬॥ ಬಳಿಕ ತಾಮ್ರಯೆಂಬ ಕಶ್ಯಪ ಪತ್ನಿಯು " ಕ್ರೌಂಚಿ, ಭಾಸಿ, ಶ್ಯೇನಿ, ಧೃತರಾಷ್ಟ್ರಿ, ಶುಕಿ, " ಎಂಬ ಐದುಮಂದಿ ಕನ್ನಿಕೆಯರಂ ಹಡೆದವಳಾದಳು ।೧೭॥ ಅನಂತರದಲ್ಲಿ ಕಶ್ಯಪನ ಪುತ್ರಿಯಾದ ಆ ಕ್ರೌಂಚಿದೇವಿಯು ಉಲೂಕಗಳನ್ನೂ, ಭಾಸಿಯೆಂಬವಳು ಭಾಸವೆಂಬ ಪಕ್ಷಿವಿಶೇಷಂಗಳನ್ನೂ, (ಅಂದರೆ ಶೆಂಬರಕಾಕಿಗಳು) ಶ್ಯೇನಿಯೆಂಬುವಳು ಡ್ಯಾಗೆಗಳನ್ನೂ, ಹದ್ದುಗಳನ್ನೂ, ಧೃತರಾಷ್ಟ್ರಿಯೆಂಬುವಳು ಹಂಸಪಕ್ಷಿಗಳನ್ನೂ, ಚಕ್ರವಾಕ ಪಕ್ಷಿಗಳ

ಭದ್ರಮದಾಮಪಿ। ಮಾತಂಗೀಮಪಿ ಶಾರ್ದೂಲೀಂ ಶ್ವೇತಾಂ ಚ ಸುರಭೀಂ ತಥಾ। ಸರ್ವಲಕ್ಷಣಸಂಪನ್ನಾಂ ಸುರಸಾಂ ಕದ್ರುಕಾಮಪಿ॥ ಅಪತ್ಯಂ ತು ಮೃಗಾಸ್ಸರ್ವೇ ಮೃಗ್ಯಾ ನರವರೋತ್ತಮ। ಋಕ್ಷಾಶ್ಚ ಮೃಗಮಂದಾಯಾಸ್ಸೃಮರಾಶ್ಚಮರಾಸ್ತಥಾ। ಹರ್ಯಾಶ್ಚ ಹರಯೋಪತ್ಯಂ ವಾನರಾಶ್ಚ ತರಸ್ವಿನಃ। ತತಸ್ತ್ವಿರಾವತೀಂ ನಾಮ ಜಜ್ಞೇ ಭದ್ರಮದಾ ಸುತಾಂ ।೨೪। ತಸ್ಯಾಸ್ತ್ವೈರಾವತಃ ಪುತ್ರೋ ಲೋಕನಾಥೋ ಮಹಾಗಜಃ। ಮಾತಂಗಾಸ್ತ್ವಥ ಮಾತಂಗ್ಯಾ ಅಪತ್ಯಂ ಮನುಜರ್ಷಭ ।೨೫। ಗೋಲಾಂಗೂಲಾಂಶ್ಚ ಶಾರ್ದೂಲೀ ವ್ಯಾಘ್ರಾಂಶ್ಚಾಜನಯತ್ಸುತಾನ್ । ದಿಶಾಗಜಾಂಶ್ಚ ಕಾಕುತ್ಸ್ಥ ಶ್ವೇತಾಪ್ಯಜನಯತ್ಸುತಾನ್ । ತತೋ ದುಹಿತರೌ ರಾಮ ಸುರಭಿರ್ದ್ವೇ ವ್ಯಜಾಯತ। ರೋಹಿಣೀಂ ನಾಮ ಭದ್ರಂ ತೇ ಗಂಧರ್ವೀಂ ಚ ಯಶಸ್ವಿನೀಂ। ರೋಹಿಣ್ಯಜನಯದ್ಗಾ ವೈ ಗಂಧರ್ವೀ ವಾಜಿನಸ್ಸುತಾನ್ । ಸುರಸಾಜನಯನ್ನಾಗಾನ್ ರಾಮ ಕದ್ರೂಸ್ತು ಪನ್ನಗಾನ್ ।

---

ತೇ-ನಿನಗೆ. ಭದ್ರಂ-ಶುಭವು, ಅಸ್ತು-ಆಗಲಿ, ಶುಕೀ-ಶುಕೀಎಂಬವಳು, ನತಾಂ-ನತಾಎಂಬವಳನ್ನು, ಜಜ್ಞೇ-ಪ್ರಸವಿಸಿದಳು, ನತಾಯಾಃ-ನತಾದೇವಿಗೆ, ವಿನತಾ-ವಿನತಾಎಂಬವಳು. ಸುತಾ-ಕುವರಿಯು ‖೨೦‖ ಹೇರಾಮ-ಎಲೈ ಶ್ರೀರಾಮನೇ, ಕ್ರೋಧವಶಾ-ಕ್ರೋಧವಶಾಎಂಬವಳು, ದಶಲೋತ್ಮಸಂಭವಾಃ-ಹತ್ತು ಜನಕುವರಿಗಳನ್ನು, ವಿಜಜ್ಞೇ-ಹೆತ್ತಳು, ಅವರ್ಯಾರಂದರೆ,-ಮೃಗೀಂಚ-ಮೃಗೀಎಂಬವಳನ್ನು, ಮೃಗಮಂದಾಂ-ಮೃಗಮಂದಾ ಎಂಬವಳನ್ನು, ಹರಿಂ-ಹರೀ ಯೆಂಬವಳನ್ನು. ಭದ್ರಮದಾಮಪಿ-ಭದ್ರಮದಾಎಂಬವಳನ್ನು. ಮಾತಂಗೀಮಪಿ-ಮಾತಂಗಿಯೆಂಬವಳನ್ನು. ಶಾರ್ದೂಲೀಂ-ಶಾರ್ದೂಲೀ ಎಂಬವಳನ್ನು. ಶ್ವೇತಾಂ-ಶ್ವೇತಾ ಎಂಬವಳನ್ನು. ಸುರಭಿಂ-ಸುರಭೀಎಂಬವಳನ್ನು, ತಥಾ-ಹಾಗೆಯೇ, ಸರ್ವಲಕ್ಷಣಸಂಪನ್ನಾಂ-ಸಮಸ್ತಲಕ್ಷಣಗಳಿಂದಲೂ ಕೂಡಿಕೊಂಡಿರುವ. ಸುರಸಾ-ಸುರಸಾಎಂಬವಳನ್ನು. ಕದ್ರುಕಾಮಪಿ-ಕದ್ರುಎಂಬವಳನ್ನು, ಈ ಹತ್ತುಮಂದಿಯನ್ನು. ವಿಜಜ್ಞೇ-ಹಡದಳು ‖೨೧‖ ಹೇನರವರೋತ್ತಮ-ಎಲೈ ಪುರುಷರಲ್ಲಿ ಶ್ರೇಷ್ಠನಾದರಾಜನೇ, ಸರ್ವೇ-ಸಮಸ್ತವಾದ- ಮೃಗಾಃ-ಮೃಗಗಳು, ಮೃಗ್ಯಾಃ-ಮೃಗೀಎಂಬವಳ, ಅಪತ್ಯಂ-ಮಕ್ಕಳು, ಮೃಗಮಂದಾಯಾಃ-ಮೃಗಮಂದಾಎಂಬವಳಿಗೆ, ಋಕ್ಷಾಃ-ಕರಡಿಗಳು, ಸೃಮರಾಃ-ಕಪ್ಪಗಿರುವ ಚಮರೀಮೃಗಗಳು, ತಥಾ-ಹಾಗೆಯೆ, ಚಮರಾಃ-ಬೆಳ್ಳಗಿರುವ ಚಮರೀಮೃಗಗಳೂ. ಅಪತ್ಯಂ-ಮಕ್ಕಳು, ಹರ್ಯಾಶ್ಚ-ಹರಿ ಯೆಂಬವಳಿಗೆ. ಹರಯಃ-ಸಿಂಹಗಳು, ತರಸ್ವಿನಃ-ಬಲಶಾಲಿಗಳಾದ, ವಾನರಾಶ್ಚ-ಕೋತಿಗಳೂ, ಅಪತ್ಯಂ-ಮಕ್ಕಳು, ತತಃ-ಬಳಿಕ, ಭದ್ರಮದಾ-ಭದ್ರಮದಾಯೆಂಬವಳು, ಇರಾವತೀನಾಮ-ಇರಾವತೀಯೆಂದುಪ್ರಸಿದ್ಧಳಾದ, ಸುತಾಂ-ಕುವರಿಯನ್ನು, ಜಜ್ಞೇ-ಹಡದಳು, ತಸ್ಯಾಸ್ತು-ಆ ಇರಾವತಿಗಾದರೆ. ಲೋಕನಾಥಃ-ಲೋಕದಲ್ಲಿರುವ ಆನೆಗಳಿಗೆಲ್ಲಾ ನಾಥನಾದ. ಐರಾವತಃ-ಐರಾವತವೆಂಬ ದೊಡ್ಡಾನೆ, ಅಪತ್ಯಂ-ಮಗನು, ಹೇಮನುಜರ್ಷಭ-ಎಲೈ ಪುರುಷಶ್ರೇಷ್ಠನೇ, ಅಥ-ಬಳಿಕ. ಮಾತಂಗಾಃ-ಆನೆಗಳು. ಮಾತಂಗ್ಯಾಃ-ಮಾತಂಗೀ ಯೆಂಬವಳ. ಅಪತ್ಯಂ-ಮಕ್ಕಳು ‖೨೫‖ ಶಾರ್ದೂಲೀ-ಶಾರ್ದೂಲಿ ಯೆಂಬವಳು. ಗೋಲಾಂಗೂಲಾಂಶ್ಚ-ಸಿಂಗಳೀಕಗಳೆಂಬ ವಾನರಜಾತಿಗಳನ್ನು, ವ್ಯಾಘ್ರಾಂಶ್ಚ-ಹುಲಿಗಳನ್ನು, ಸುತಾನ್-ಮಕ್ಕಳನ್ನಾಗಿ, ಅಜನಯತ್-ಹಡದಳು. ಹೇಕಾಕುತ್ಸ್ಥ-ಎಲೈ ಶ್ರೀರಾಮನೇ. ಶ್ವೇತಾ-ಶ್ವೇತಾಎಂಬುವಳು, ದಿಶಾಗಜಾನ್-ದಿಗ್ಗಜಗಳೆಂಬ. ಸುತಾನ್-ಮಕ್ಕಳನ್ನು. ಅಜನಯತ್-ಹಡದಳು ‖೨೬‖ ತತಃ-ಬಳಿಕ. ಹೇರಾಮ-ಎಲೈ ಶ್ರೀರಾಮನೇ, ಸುರಭಿಃ-ಸುರಭೀಎಂಬುವಳು. ದ್ವೇದುಹಿತರೌ-ಇಬ್ಬರು ಮಕ್ಕಳಾದ, ರೋಹಿಣೀಂ-ರೋಹಿಣೀದೇವಿಯನ್ನು, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಯಶಸ್ವಿನೀಂ-ಕೀರ್ತಿವಂತಳಾದ. ಗಂಧರ್ವೀಂಚ-ಗಂಧರ್ವೀಎಂಬವಳನ್ನು, ದುಹಿತರೌ-ಈ ಇಬ್ಬರು ಮಕ್ಕಳನ್ನು, ವ್ಯಜಾಯತ-ಹೆತ್ತಳು, ರೋಹಿಣೀ-ರೋಹಿಣೀದೇವಿಯು, ಗಾಃ-ಗೋವುಗಳನ್ನು, ಅಜನಯತ್-ಹೆತ್ತಳು, ಗಂಧರ್ವೀಚ-ಗಂಧರ್ವೀಎಂಬವಳು, ವಾಜಿನಃ-ಕುದುರೆಗಳನ್ನು, ಸುತಾನ್-ಮಕ್ಕಳಾಗಿ. ಅಜನಯತ್-ಹಡದಳು. ಸುರಸಾ-ಸುರಸೆಎಂಬುವಳನ್ನು, ನಾಗಾನ್-ಎರಡು ಮೂರು ಹೆಡೆಗಳುಳ್ಳ ಸರ್ಪಗಳನ್ನು,

---

ನ್ನೂ, ಶುಕಿ ಯೆಂಬುವಳು ನತಾಯೆಂಬ ಕನ್ನಿಕೆಯನ್ನೂ ಹಡದಳು. ಆ ನತಾದೇವಿಗೆ ವಿನತಯೆಂಬ ಕುವರಿಯುಂಟಾದಳು ।೨೦। ಕೇಳೆಲೈ ಶ್ರೀರಾಮನೇ! ಆ ಕ್ರೋಧವಶೆ ಯೆಂಬುವಳು “ ಮೃಗೀ, ಮೃಗಮಂದಾ, ಹರಿ, ಭದ್ರಮದಾ, ಮಾತಂಗೀ, ಶಾರ್ದೂಲೀ, ಶ್ವೇತಾ, ಸುರಭಿ, ಸುರಸಾ, ಕದ್ರು, “ ಯೆಂಬ ಈ ಹತ್ತುಮಂದಿ ಹೆಣ್ಣುಮಕ್ಕಳನ್ನು ಹೆತ್ತಳು ।೨೨। ಎಲೈ ನರನಾಥನೇ, ಈ ಸಮಸ್ತವಾದ ಮೃಗಂಗಳು ಮೃಗಿಯೆಂಬವಳ ಹೊಟ್ಟೆಯಲ್ಲಿ ಹುಟ್ಟಿದವು; ಮೃಗಮಂದೆ ಯೆಂಬವಳಿಗೆ ಕರಡಿಗಳೂ, ಕಪ್ಪಾಗಿರುವ ಕೂದಲುಗಳುಳ್ಳ ಚಮರೀಮೃಗಂಗಳೂ, ಮತ್ತು ಬಿಳೀ ಚಮರೀಮೃಗಂಗಳೂ ಹುಟ್ಟಿದವು; ಹರಿಯೆಂಬವಳದೆಸೆಯಿಂದ ಸಿಂಹಂಗಳೂ, ಬಹು ಬಲವಾಗಿರುವ ಕಪಿಗಳೂ, ಹುಟ್ಟಿದವು. ಅನಂತರದಲ್ಲಿ ಭದ್ರಮಂದೆಯೆಂಬಾಕೆ ಯಾದರೆ ಇರಾವತಿಯೆಂಬ ಪುತ್ರಿಕೆಯಂ ಪಡದಳು, ಆ ಇರಾವತೀ ದೇವಿಗಾದರೆ ಲೋಕದೊಳಗಿರುವ ಆನೆಗಳಿಗೆಲ್ಲಾ ರಾಜನಾಗಿರುವ ಐರಾವತವೆಂಬ ದೊಡ್ಡಾನೆಯು ಹುಟ್ಟಿತು, ಅನಂತರದಲ್ಲಿ ಶಾರ್ದೂಲಿಯೆಂಬವಳು ಸಿಂಗಳೀಕಂಗಳನ್ನೂ, ವ್ಯಾಘ್ರಂಗಳನ್ನೂ ಹಡದಳು; ಆ ಶ್ವೇತಾದೇವಿಯು ದಿಗ್ಗಜಂಗಳನ್ನು ಪ್ರಸವಿಸಿದಳು ।೨೬। ಅನಂತರದಲ್ಲಿ ಸುರಭಿಯೆಂಬವಳಿಗೆ ರೋಹಿಣೀ ದೇವಿಯೂ, ಗಾಂಧರ್ವಿಯೆಂಬವಳೂ ಇವರೀರ್ವರುಂಟಾದರು. ಆ ರೋಹಿಣೀದೇವಿಯು ಗೋವುಗಳನ್ನೆಲ್ಲಾ ಪಡದಳು; ಗಂಧರ್ವಿಯು ಕುದುರೆಗಳನ್ನು ಹೆತ್ತಳು, ಸುರಸಾ ದೇವಿಯು ೨—೩—೪— ಹೆಡೆಗಳುಳ್ಳ ಸ

ಮನುರ್ಮನುಷ್ಯಾನ್ ಜನಯದ್ರಾಮ ಪುತ್ರಾನ್ ಯಶಸ್ವಿನಃ । ಬ್ರಾಹ್ಮಣಾನ್ ಕ್ಷತ್ರಿಯಾನ್ ವೈಶ್ಯಾನ್ ಶೂದ್ರಾಂಶ್ಚ ಮನುಜರ್ಷಭ । ಸರ್ವಾನ್ ಪುಣ್ಯಫಲಾನ್ ವೃಕ್ಷಾನನಲಾಪಿ ವ್ಯಜಾಯತ ॥೨೯॥ ವಿನತಾ ಚ ಶುಕೀಪೌತ್ರೀ ಕದ್ರೂಶ್ಚ ಸುರಸಾಸ್ವಸಾ ॥ ಕದ್ರೂರ್ನಾಗಂ ಸಹಸ್ರಾಸ್ಯಂ ವಿಜಜ್ಞೇ ಧರಣೀಧರಂ । ದ್ವೌ ಪುತ್ರೌ ವಿನತಾಯಾಸ್ತು ಗರುಡೋಽರುಣ ಏವ ಚ ॥ ತಸ್ಮಾಜ್ಜಾತೋಽಹಮರುಣಾತ್ಸಂಪಾತಿಸ್ತು ಮಮಾಗ್ರಜಃ । ಜಟಾಯುರಿತಿ ಮಾಂ ವಿದ್ಧಿ ಶ್ಯೇನೀಪುತ್ರಮರಿಂದಮ ॥೩೧॥ ಸೋಽಹಂ ವಾಸಸಹಾಯಸ್ತೇ ಭವಿಷ್ಯಾಮಿ ಯದೀಚ್ಛಸಿ । ಇದಂ ದುರ್ಗಂ ಹಿ ಕಾಂತಾರಂ ಮೃಗರಾಕ್ಷಸಸೇವಿತಂ ॥೩೨॥ ಸೀತಾಂ ಚ ತಾತ ರಕ್ಷಿಷ್ಯೇ ತ್ವಯಿ ಯಾತೇ ಸಲಕ್ಷ್ಮಣೇ ॥೩೩॥ ಜಟಾಯುಷಂ ತಂ ಪ್ರತಿಪೂಜ್ಯ ರಾಘವೋ ಮುದಾ ಪರಿಷ್ವಜ್ಯ ಚ ಸನ್ನತೋಽಭವತ್ । ಪಿತುರ್ಹಿ ಶುಶ್ರಾವ ಸಖಿತ್ವಮಾತ್ಮವಾನ್ ಜಟಾಯುಷಾ ಸಂಕಥಿತಂ ಪುನಃ ಪುನಃ ॥೩೪॥ ಸತ

---

ಅಜನಯತ್-ಹಡೆದಳು. ಹೇರಾಮ-ಎಲೈ ಶ್ರೀರಾಮನೇ, ಕದ್ರೂಸ್ತು-ಕದ್ರುವೆಂಬುವಳು, ಪನ್ನಗಾನ್-ಸಾಧಾರಣಸರ್ಪಗಳನ್ನು. ಅಜನಯತ್-ಹಡೆದಳು, ಹೇರಾಮ-ಎಲೈ ಶ್ರೀರಾಮನೇ, ಮನುಃ-ಮನುವೆಂಬುವಳು. ಯಶಸ್ವಿನಃ-ಕೀರ್ತಿವಂತರಾದ, ಮನುಷ್ಯಾನ್-ಮನುಷ್ಯರೆಂಬ, ಪುತ್ರಾನ್-ಮಕ್ಕಳನ್ನು. ಅಜನಯತ್-ಹುಟ್ಟಿಸಿದಳು ||೨೮|| ಹೇಮನುಜರ್ಷಭ-ಎಲೈ ಪುರುಷಶ್ರೇಷ್ಠನೇ, ಅನಲಾಪಿ-"ನಲಾ"ವೆಂಬುವಳು ಬ್ರಾಹ್ಮಣಾನ್-ಬ್ರಾಹ್ಮಣರನ್ನು, ಕ್ಷತ್ರಿಯಾನ್-ಕ್ಷತ್ರಿಯರನ್ನು, ವೈಶ್ಯಾನ್-ವೈಶ್ಯರನ್ನು, ಶೂದ್ರಾನ್-ಶೂದ್ರರೆಂಬ ನಾಲ್ಕು ಜಾತಿಯವರನ್ನು, ಸರ್ವಾನ್-ಸಮಸ್ತಗಳಾದ. ಪುಣ್ಯಫಲಾನ್-ಪುಣ್ಯಕರವಾದ ಹಣ್ಣುಗಳುಳ್ಳ, ವೃಕ್ಷಾನ್-ಗಿಡಗಳನ್ನು. ವ್ಯಜಾಯತ-ಹೆತ್ತಳು ||೨೯|| ವಿನತಾಚ-ವಿನತೆಯೆಂಬ, ಶುಕೀಪೌತ್ರೀ-ಶುಕೀಯೆಂಬುವಳ ಮೊಮ್ಮಗಳು, ಕದ್ರೂಶ್ಚ-ಕದ್ರುವೆಂಬುವಳು, ಸುರಸಾ-ಸುರಸಾದೇವಿಗೆ, ಸ್ವಸಾ-ತಂಗಿಯು. ಕದ್ರೂಃ-ಕದ್ರುವೆಂಬುವಳು, ಸಹಸ್ರಾಸ್ಯಂ-ಸಾವಿರಮುಖಗಳುಳ್ಳ, ಧರಣೀಧರಂ-ಭೂಮಿಯನ್ನು ಹೊತ್ತಿರುವ, ನಾಗಂ-ಆದಿಶೇಷನನ್ನು, ವಿಜಜ್ಞೇ-ಹೆತ್ತಳು. ವಿನತಾಯಾಸ್ತು-ವಿನತಾದೇವಿಗಾದರೆ, ಗರುಡಃ-ಗರುಡನು, ಅರುಣ ಏವಚ-ಅರುಣನೂ ಎಂಬ, ದ್ವೌಪುತ್ರೌ-ಇಬ್ಬರು ಕುವರರು, ತಸ್ಮಾತ್ ಅರುಣಾತ್-ಆ ಅರುಣನಿಂದ. ಅಹಂ-ನಾನು. ಸಂಪಾತಿಸ್ತು-ಸಂಪಾತಿಯೆಂಬ, ಮಮ-ನನಗೆ. ಅಗ್ರಜಃ-ಅಣ್ಣನು, ಜಾತಃ-ಹುಟ್ಟಿದನು, (ಅಂದರೆ-ನಾನೂ ಸಂಪಾತಿಯೂ ಇಬ್ಬರೂ ಅರುಣನ ಮಕ್ಕಳೆಂಬ ತಾತ್ಪರ್ಯವು.)ಹೇಅರಿಂದಮ-ಎಲೈ ಶತ್ರುಸಂಹಾರಿಯೇ, ಶ್ಯೇನೀಪುತ್ರಂ-ಶ್ಯೇನೀ-ಶ್ಯೇನಿಯೆಂಬುವಳ,ಪುತ್ರಂ-ಮಗನಾದ, ಮಾಂ-ನನ್ನನ್ನು, ಜಟಾಯುರಿತಿ-ಜಟಾಯುವು ಎಂದು, ವಿದ್ಧಿ-ತಿಳಿದುಕೋ ||೩೧|| ಇಚ್ಛಸಿಯದಿ-ಅಪೇಕ್ಷಿಸಿರುವೆಯಾದರೆ. ತೇ-ನಿನಗೆ, ಸೋಹಂ-ಆ ಈ ನಾನು, ವಾಸಸಹಾಯಃ-ನಿವಾಸಕ್ಕೆ ಸಹಾಯಭೂತನಾದವನು, ಭವಿಷ್ಯಾಮಿ-ಆಗುವೆನು, ಇದಂ-ಈ, ಕಾಂತಾರಂ-ಅರಣ್ಯವು, ಮೃಗರಾಕ್ಷಸಸೇವಿತಂ-ಮೃಗಗಳಿಂದಲೂ ರಾಕ್ಷಸರಿಂದಲೂ ಸೇವಿಸಲ್ಪಟ್ಟದ್ದಾದಕಾರಣ, ದುರ್ಗಂಹಿ-ಸಂಚಾರಮಾಡಲಸಾಧ್ಯವಾಗಿಥೆ ||೩೨|| ಹೇತಾತ-ಎಲೈ ಅಪ್ಪನೇ, ಸಲಕ್ಷ್ಮಣೇ-ಲಕ್ಷ್ಮಣನೊಡಗೂಡಿದ. ತ್ವಯಿ-ನೀನು, ಯಾತೇಸತಿ-ಈ ಅರಣ್ಯವಂಕುರಿತು ಹೋಗುತ್ತಿರಲಾಗಿ. ಸೀತಾಂಚ-ಸೀತಾದೇವಿಯನ್ನು, ರಕ್ಷಿಷ್ಯೇ-ಸಂರಕ್ಷಿಸುವೆನು ||೩೩|| ಆತ್ಮವಾನ್-ಧೈರ್ಯಶಾಲಿಯಾದ, ರಾಘವಃ-ಆ ಶ್ರೀರಾಮನು. ತಂಜಟಾಯುಷಂ-ಆ ಜಟಾಯುವಿನನ್ನು, ಪ್ರತಿಪೂಜ್ಯ-ಪೂಜಿಸಿ. ಮುದಾ-ಸಂತೋಷದಿಂದ, ಪರಿಷ್ವಜ್ಯಚ-ಅಪ್ಪಿಕೊಂಡು, ಸನ್ನತಃ-ನಮ್ರನು, ಅಭವತ್-ಆದನು. ಪುನಃಪುನಃ-ಬಾರಿಬಾರಿಗೂ, ಜಟಾಯುಷಾ-ಜಟಾಯುವಿನಿಂದ, ಸಂಕಥಿತಂ-ಹೇಳಲ್ಪಟ್ಟ, ಪಿತುಃ-ತಂದೆಗೆ, ಸಖಿತ್ವಂ-ಮೈತ್ರೀಭಾವವನ್ನು, ಶುಶ್ರಾವ-ಕೇಳಿದನು ||೩೪|| ಸಃ-ಆ ಶ್ರೀರಾಮನು, ತತ್ರ-ಆ ಅರಣ್ಯದಲ್ಲಿ, ಅತಿಬಲೇನ-ಅತಿಬಲವುಳ್ಳ, ತೇನಪಕ್ಷಿಣಾಸಹೈವ-ಆ ಜಟಾಯುವಿನೊಡಗೂಡಾನೆ, ಮೈಥಿಲೀಂ-ಜನಕರಾಯನ

---

ರ್ಪಂಗಳನ್ನು ಹೆತ್ತಳು; ಕದ್ರುದೇವಿಯು ಸಾಧಾರಣವಾದ ಹಾವುಗಳನ್ನೂ, ಮನುಯೆಂಬುವಳು ಯಶೋವಂತರಾದ ಮನುಷ್ಯರನ್ನೂ, ಅನಲಾ ದೇವಿಯು "ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರ" ರನ್ನೂ ಸಮಸ್ತವಾದ ಪುಣ್ಯ ಫಲಂಗಳನ್ನೂ ಹೆತ್ತರು ಆ ಕನ್ನಿಕೆಯರ್ಯಾರಂದರೆ,—ವಿನತಾದೇವಿಯು ಶುಕೀದೇವಿಯ ಮೊಮ್ಮಗಳು; ಕದ್ರುದೇವಿಯು ಸುರಸೆಯ ತಂಗಿಯು, ಅವರೀರ್ವರಲ್ಲಿ ಆ ಕದ್ರುದೇವಿಯು ಸಾವಿರ ಹೆಡೆಗಳುಳ್ಳ, ಮತ್ತು ಭೂಮಿಯನ್ನು ಹೊತ್ತಿರುವ ಆದಿಶೇಷನಂ ಪಡೆದಳು, ವಿನತಾದೇವಿಗಾದರೆ ಅರುಣನೂ, ಗರುಡನೂ, ಎಂಬ ಈರ್ವರು ಮಕ್ಕಳುಂಟಾದರು, ಆ ಅರುಣನ ದೆಸೆಯಿಂದ ನಮ್ಮಣ್ಣನಾದ ಸಂಪಾತಿಯು ನಾನೂ ಸಹಾ ಪುಟ್ಟಿದೆವು, ಶ್ಯೇನೀದೇವಿಯ ಪುತ್ರನಾದ ನನ್ನನ್ನೂ ಜಟಾಯುವೆಂದೆಲ್ಲರೂ ಕೂಗುವರು, ನಿನಗಿಷ್ಟವಾದರೆ ನಾನು ನೀನಿರುವಸ್ಥಳದಲ್ಲಿ ಸಹಾಯಭೂತನಾಗಿರುವೆನು, ಈ ಅರಣ್ಯವು ಮೃಗಂಗಳಿಂದಲೂ, ರಾಕ್ಷಸರಿಂದಲೂ ಸೇವಿಸಲ್ಪಟ್ಟಿರುವುದಾದ ಕಾರಣ ಸಂಚರಿಸಲಸಾಧ್ಯವಾಗಿರುವದು. ಎಲೈ ತಂದೆಯೇ, ಲಕ್ಷ್ಮಣಸಹಿತನಾಗಿ ನೀನು ಯಲ್ಲಾದ್ಯದರು ಸಾರಿದವನಾದರೆ ಆಗ ನಾನು ಸೀತಾದೇವಿಯನ್ನು ಕಾದುಕೊಂಡಿರುವೆನೆಂದು ಜಟಾಯುವು ನುಡಿದವನಾಗಲು, ಮಹಾ ಧೈರ್ಯಶಾಲಿಯಾದ ಆ ಶ್ರೀರಾಮನು ಆ ವಾಕ್ಯವಂ ಕೇಳಿ ಆ ಜಟಾಯುವಿನನ್ನು ಸನ್ಮಾನಿಸಿ ಸಂತಸದಿಂದಪ್ಪಿಕೊಂಡು ವಿಧೇಯನಾಗಿ, ಆತನಿಂದ ಹೇಳಲ್ಪಟ್ಟ ಪಿತೃಸಖಿತ್ವವನ್ನು ಬಾರಿಬಾರಿಗೂ ಕೇಳಿದನು ॥೩೪॥ ಅನಂತದಲ್ಲಿ ಶ್ರೀರಾಮನು ಆ ಅರಣ್ಯದಲ್ಲಿ ಮಹಾ ಬಲವಂತನಾದ ಆ ಜಟಾಯುವಿನ ವಶಕ್ಕೆ ಸೀತಾದೇವಿಯನ್ನು ಕೊ

ತ್ರ್ಸೀತಾಂಪರಿದಾಯಮೈಥಿಲೀಂಸಹೈವತೆನಾತಿಬಲೇನಪಕ್ಷಿಣಾ । ಜಗಾಮ ತಾಂಪಂಚವಟೀಂಸಲಕ್ಷ್ಮಣೋರಿಪೂನ್ದಿಧಕ್ಷುಃಶಲಭಾನಿವಾನಲಃ ॥೩೬॥ —*** ಇತಿಶ್ರೀಮದಾರಣ್ಯಕಾಂಡೆ-ಚತುರ್ದಶಸ್ಸರ್ಗಃ. ***—

ತತಃಪಂಚವಟೀಂಗತ್ವಾನಾನಾವ್ಯಾಳಮೃಗಾಯುತಾಂ । ಉವಾಚಭ್ರಾತರಂರಾಮಸ್ಸೌಮಿತ್ರಿಂದೀಪ್ತತೇಜಸಂ ॥ ೧ ॥ ಅಗತಾಸ್ಸ್ಮಯಥೋದಿಷ್ಟಮಮುಂದೇಶಂಮಹರ್ಷಿಣಾ । ಅಯಂಪಂಚವಟೀದೇಶಸ್ಸೌಮ್ಯಪುಷ್ಪಿತಪಾದಪಃ ॥ ಸರ್ವತಶ್ಚಾರ್ಯತಾಂದೃಷ್ಟಿಃಕಾನನೇನಿಪುಣೋಹ್ಯಸಿ । ಆಶ್ರಮಃಕತರಸ್ಮಿನ್ನೋದೇಶೇಭವತಿಸಮ್ಮತಃ । ರಮತೇಯತ್ರವೈದೇಹೀತ್ವಮಹಂಚೈವಲಕ್ಷ್ಮಣ । ತಾದೃಶೋದೃಶ್ಯತಾಂದೇಶಸ್ಸನ್ನಿಕೃಷ್ಟಜಲಾಶಯಃ ॥ ವನರಾಮಣ್ಯಕಂಯತ್ರಸ್ಥಲರಾಮಣ್ಯಕಂತಥಾ। ಸನ್ನಿಕೃಷ್ಟಂಚಯತ್ರಸ್ಯಾತ್ಸಮಿತ್ಪುಷ್ಪಕುಶೋದಕಂ।೫॥ಏವಮುಕ್ತಸ್ತುರಾಮೇಣಲಕ್ಷ್ಮಣಸ್ಸಂಯತಾಂಜಲಿಃ । ಸೀತಾಸಮಕ್ಷಂಕಾಕುತ್ಸ್ಥಮಿದಂವಚನಮಬ್ರವೀತ್ ॥ ಪರವಾನಸ್ಮಿಕಾಕುತ್ಸ್ಥ

---

ಮಗಳಾದ, ಸೀತಾಂ-ಸೀತಾದೇವಿಯನ್ನು. ಪರಿದಾಯ-ಕೂಡಾ ಯಿರೂಎಂದಾಜಟಾಯುವಿನವಶಕ್ಕೆಕೊಟ್ಟು, (ಪರಿದಾಯೇತ್ಯತ್ರಾಂತರಂ-ಅಲ್ಲಿ, ಪರಿಧಾಯ-ಸುತ್ತುಮುತ್ತಲೂ ನಿಂತುಕೊಂಡು,) ಸಲಕ್ಷ್ಮಣಃ-ಲಕ್ಷ್ಮಣಸಮೇತನಾಗಿ, ಅನಲಃ-ಅಗ್ನಿಯು, ಶಲಭಾನಿವ-ಪತಂಗದ ಹುಳಗಳನ್ನಂತೆ ರಿಪೂನ್-ಶತ್ರುಗಳನ್ನು, ದಿಧಕ್ಷುಃ-ದಹಿಸಲಿಚ್ಛೆಯುಳ್ಳವನಾಗಿ, ತಾಂಪಂಚವಟೀಂ-ಆ ಪಂಚವಟೀಕ್ಷೇತ್ರವನ್ನು, ಜಗಾಮ-ಹೊಂದಿದನು ॥೩೬॥

—**ಇತಿಶ್ರೀಮದಾರಣ್ಯಕಾಂಡೇ-ಚತುರ್ದಶಸ್ಸರ್ಗಃ**—

ತತಃ- ಬಳಿಕ, ರಾಮಃ-ಶ್ರೀರಾಮನು, ನಾನಾವ್ಯಾಳಮೃಗಾಯುತಾಂ-ಅನೇಕ ಬಗೆಗಳಾದ ಘಾತುಕಮೃಗಗಳಿಂದಲೂ ಜಿಂಕೆಗಳಿಂದಲೂ ಯುಕ್ತವಾದ, ಪಂಚವಟೀಂ-ಪಂಚವಟೀತೀರವನ್ನು, ಗತ್ವಾ-ಹೊಂದಿ, ದೀಪ್ತತೇಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, (ಯದ್ವಾ-ಭಗವತ್ಕೈಂಕರ್ಯಕ್ಕೆ ಉಚಿತವಾದ ಯೋಗ್ಯವಾದ ಪ್ರದೇಶಲಾಭದಿಂದ ಸಂತೋಷಚಿತ್ತನಾದ) ಭ್ರಾತರಂ-ತಮ್ಮನಾದ, ಸೌಮಿತ್ರಿಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಉವಾಚ-ಹೇಳಿದನು ॥೧॥ ಹೇಸೌಮ್ಯ-ಎಲೈ ಪ್ರಸನ್ನನೇ, ಮಹರ್ಷಿಣಾ-ಅಗಸ್ತ್ಯಮಹರ್ಷಿಯಿಂದ ಉಪದೇಶಿಸಲ್ಪಟ್ಟಂತೆ, ಅಮುಂದೇಶಂ-ಈ ಪ್ರದೇಶವನ್ನುಕುರಿತು, ಆಗತಾಸ್ಸ್ಮ-ಬಂದವರಾದೆವಷ್ಟೆ, ಅಯಂಪಂಚವಟೀದೇಶಃ- ಈ ಪಂಚವಟೀಪ್ರದೇಶವು ಪುಷ್ಪಿತಪಾದಪಃ-ಹುವ್ವುಬಿಟ್ಟಿರುವ ಗಿಡಗಳುಳ್ಳದ್ದು, ಕಾನನೇ-ಅರಣ್ಯದಲ್ಲಿ, ನಿಪುಣಃ-ಸಮರ್ಥನು, ಅಸಿ-ಆಗಿದ್ದೀ ॥೨॥ ಸರ್ವತಃ-ಸರ್ವಪ್ರದೇಶಗಳಲ್ಲಿ, ದೃಷ್ಟಿಃ-ದೃಷ್ಟಿಯು, ಚಾರ್ಯತಾಂ-ಮಾಡಲ್ಪಡಲೀ, ನಃ-ನಮ್ಮಗಳಿಗೆ, ಕತರಸ್ಮಿನ್ದೇಶೇ-ಯಾವ ಪ್ರದೇಶದಲ್ಲಿ, ಆಶ್ರಮಃ-ಆಶ್ರಮವು, ಸಮ್ಮತಃ-ಸಮ್ಮತಿಯಾದ್ದೀ, ಯತ್ರ-ಯಾವ ಸ್ಥಳದಲ್ಲಿ, ವೈದೇಹೀ-ಸೀತಾದೇವಿಯು. ರಮತೇ-ಸಮ್ಮತಿಸುತ್ತಾಳೋ, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ತ್ವಂ-ನೀನು.ಯತ್ರ-ಯಾವ ಸ್ಥಳದಲ್ಲಿ, ರಮಸೇ-ಒಪ್ಪುತ್ತೀಯೊ, ಅಹಂ-ನಾನು, ರಮಸೇ-ಒಪ್ಪುಕೊಳ್ಳುತ್ತೇನೂ, ತಾದೃಶಃ-ಅಂಥಾದ್ದಾದ, ಸನ್ನಿಕೃಷ್ಟಜಲಾಶಯಃ-ಸಮೀಪವರ್ತಿಯಾದ ಉದಕಸರೋವರಗಳುಳ್ಳ, ದೇಶಃ-ಪ್ರದೇಶವು, ದೃಶ್ಯತಾಂ-ನೋಡಲ್ಪಡಲೀ. ಯತ್ರ-ಯಾವ ಸ್ಥಳದಲ್ಲಿ. ವನರಾಮಣ್ಯಕಂ-ವನದ ಸೌಂದರ್ಯವು, ಸ್ಥಳರಾಮಣ್ಯಕಂ-ಸ್ಥಳಪ್ರಾಶಸ್ತ್ಯವಾಗಿ, ಅಸ್ತಿ-ಇದೆಯೋ, ಯತ್ರ-ಯಾವ ಸ್ಥಳದಲ್ಲಿ. ಸಮಿತ್ಪುಷ್ಪಕುಶೋದಕಂ-ಹೋಮಾರ್ಥವಾಗಿ ಸಮಿತ್ತುಗಳೂ, ಪುಷ್ಪಗಳನ್ನೂ ಕುಶೆಗಳನ್ನೂ ಉದಕವೂ, ಸಂನಿಕೃಷ್ಟಂ-ಸಮೀಪವರ್ತಿಯಾಗಿದೆಯೋ. ಸದೇಶಃ-ಅಂಥಾ ಪ್ರದೇಶವು, ದೃಶ್ಯತಾಂ-ನೋಡಲ್ಪಡಲೀ ॥೫॥ ಏವಂ-ಈಪರಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲಟ್ಟ, ಲಕ್ಷ್ಮಣಃ-ಲಕ್ಷ್ಮಣನು. ಸಂಯ

---

ಟ್ಟು, ಲಕ್ಷ್ಮಣನು ದೊಡಗೂಡಿದವನಾಗಿ, ಅಗ್ನಿಯು ಪತಂಗದ ಹುಳಗಳಂ ದಹಿಸುವತೆರದಿ ಶತ್ರುಗಳಂ ದಹಿಸಲಿಚ್ಛೆಯುಳ್ಳವನಾಗಿ ಆ ಪಂಚವಟೀ ತೀರವನ್ನೈದಿದನು ॥೩೬॥ —* ೧೪ನೇಯ ಸರ್ಗಂಮುಗಿದುದು *—

ಅನಂತರದಲ್ಲಿ ಶ್ರೀರಾಮನು ನಾನಾವಿಧವಾದ ಘಾತುಕಮೃಗಂಗಳಿಂದಲೂ, ಹುಲ್ಲೆಗಳಿಂದಲೂ, ಯುಕ್ತವಾದ ಆ ಪಂಚವಟೀತೀರವನ್ನೈದಿ; ಭಗವತ್ಕೈಂಕರ್ಯಕ್ಕೆ ಉಚಿತವಾದ ಯೋಗ್ಯವಾಗಿರುವ ಪ್ರದೇಶವು ಸಂಭವಿಸಿತೆಂಬ ಸಂತೋಷದಿಂದ ಯುಕ್ತನಾಗಿರುವ ತಮ್ಮನಾದ ಲಕ್ಷ್ಮಣನಂ ಕುರಿತು ನಿರೂಪಿಸುವನದೆಂತೆನೆ,— ಎಲೈಸೌಮ್ಯನೇ ಅಗಸ್ತ್ಯಮಹಾಮುನಿಯಿಂದ ಯಾವಸ್ಥಳವು ಉಚಿತವಾಗಿರುವದೆಂದು ಹೇಳಲ್ಪಟ್ಟಿತೊ ಆ ಪ್ರದೇಶಕ್ಕೆ ಬಂದವರಾದೆವು. ಈ ಪಂಚವಟೀ ಪ್ರದೇಶವು ಪುಷ್ಪಿಸಿರುವ ವೃಕ್ಷಗಳುಳ್ಳದ್ದಾಗಿರುವದು. ನೀನು ಬಹುಚಮತ್ಕಾರಿಯಾದ ಕಾರಣ ಎಲ್ಲಾ ಕಡೆಯಲ್ಲಿಯೂ ದೃಷ್ಟಿಪ್ರಸರಣವಂಗೈದು ಯಾವಪ್ರದೇಶದಲ್ಲಿ ಆಶ್ರಮವಂ ಗೈಯ್ಯುವದಕ್ಕೆ ಪ್ರಶಸ್ತವಾಗಿರುವದೋ, ಎಲ್ಲಿ ಸೀತಾದೇವಿಯು ಸಮ್ಮತಿಸುವಳೋ; ನೀನು ಯಾವಸ್ಥಳದಲ್ಲಿ ರಮಿಸುವೆಯೋ; ನಾನೆಲ್ಲಿ ಒಪ್ಪುವೆನೋ, ಅಂಥಾದ್ದಾಗಿಯೂ, ಸಮೀಪದಲ್ಲಿ ಸರೋವರಂಗಳುಳ್ಳದ್ದಾಗಿಯೂ, ವನಸೌಂದರ್ಯವುಳ್ಳದ್ದಾಗಿಯೂ, ಸ್ಥಳರಾಮಣೀಯ್ಯಕವಾಗಿಯೂ, ಸಮೀಪದಲ್ಲಿ ಸಮಿತ್ತುಗಳೂ, ಪುಷ್ಪಂಗಳೂ, ಉದಕವೂ ಉಳ್ಳದ್ದಾಗಿಯೂ, ಇರುವ ಪ್ರದೇಶವನ್ನು ನೋಡುವನಾಗೆಂದು ಶ್ರೀರಾಮನಿಂದ ಹೇಳಲ್ಪಟ್ಟವನಾಗಿ, ಆ ಲಕ್ಷ್ಮಣನು ಕೈಗಳಂ ಜೋಡಿಸಿಕೊಂಡವನಾಗಿ ಸೀತಾಸಮಕ್ಷಮದಲ್ಲಿ ಶ್ರೀರಾಮನಂ ಕುರಿತು ನು

ಯಿವರ್ಷಶತಂಸ್ಥಿತೇ | ಸ್ವಯಂತುರುಚಿರೇದೇಶೇಕ್ರಿಯತಾಮಿತಿಮಾಂವದ ||೭|| ಸುಪ್ರೀತಸ್ತೇನವಾಕ್ಯೇನಲಕ್ಷ್ಮಣಸ್ಯಮಹಾತ್ಮನಃ | ವಿಮೃಶನ್ರೋಚಯಾಮಾಸದೇಶಂಸರ್ವಗುಣಾನ್ವಿತಂ ||೮|| ಸತಂರುಚಿರಮಾಕ್ರಮ್ಯದೇಶಮಾಶ್ರಮಕರ್ಮಣಿ | ಹಸ್ತೌಗೃಹೀತ್ವಾಹಸ್ತೇನರಾಮಸ್ಸೌಮಿತ್ರಿಮಬ್ರವೀತ್ ||೯|| ಅಯಂದೇಶಸ್ಸಮಶ್ಶ್ರೀಮಾನ್ಪುಷ್ಪಿತೈಸ್ತರುಭಿರ್ವೃತಃ | ಇಹಾಶ್ರಮಪದಂಸೌಮ್ಯಯಥಾವತ್ಕರ್ತುಮರ್ಹಸಿ ||೧೦|| ಇಯಮಾದಿತ್ಯಸಂಕಾಶೈಃಪದ್ಮೈಸ್ಸುರಭಿಗಂಧಿಭಿಃ | ಅದೂರೇದೃಶ್ಯತೇರಮ್ಯಾಪದ್ಮಿನೀಪದ್ಮಸೇವಿತಾ ||೧೧|| ಯಥಾಖ್ಯಾತಮಗಸ್ತ್ಯೇನಮುನಿನಾಭಾವಿತಾತ್ಮನಾ | ಇಯಂಗೋದಾವರೀರಮ್ಯಾಪುಷ್ಪಿತೈಸ್ತರುಭಿರ್ವೃತಾ || ಹಂಸಕಾರಂಡವಾಕೀರ್ಣಾಚಕ್ರವಾಕೋಪಶೋಭಿತಾ

ಕಾಂಜಲಿಃ-ಬದ್ಧಾಂಜಲಿಪುಟನಾಗಿ, ಸೀತಾಸಮಕ್ಷಂ-ಸೀತಾದೇವಿಗೆದುರಾಗಿ, ಕಾಕುತ್ಸ್ಥಂ-ಶ್ರೀರಾಮನಂ ಕುರಿತು, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು ||೬|| ಹೇಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೇ, ತ್ವಯಿ-ನೀನು, ವರ್ಷಶತಂ-ನೂರುವರುಷಗಳು, ಸ್ಥಿತೇಸತಿ-ಇರುತ್ತಿರುವನಾಗುತ್ತಿರಲೀಗ, ಅಹಂ-ನಾನು, ಪರವಾನಸ್ಮಿ-ಪರಾಧೀನನಾಗಿಧೇನೆ. ಸ್ವಯಂ-ನೀನು, ರುಚಿರೇ-ಮನೋಹರವಾದ. ದೇಶೇ-ಪ್ರದೇಶದಲ್ಲಿ. ಕ್ರಿಯತಾಮಿತಿ-ಮಾಡಲ್ಪಡಲೆಂದು, ಮಾಂ-ನನ್ನನ್ನು ಕುರಿತು, ವದ-ಹೇಳು ||೭|| ಮಹಾತ್ಮನಃ-ಮಹಾಮನವುಳ್ಳ, ಲಕ್ಷ್ಮಣಸ್ಯ-ಲಕ್ಷ್ಮಣನ, ತೇನವಾಕ್ಯೇನ-ಆ ಮಾತಿಂದ, ಸುಪ್ರೀತಃ-ಸಂತೋಷಗೊಂಡವನಾಗಿ, ವಿಮೃಶನ್-ಆಲೋಚಿಸುತ್ತಿರುವವನಾಗಿ. ಸರ್ವಗುಣಾನ್ವಿತಂ-ಸಮಸ್ತಗುಣಗಳಿಂದಲೂ ಕೂಡಿಕೊಂಡಿರುವ, ದೇಶಂ-ಸ್ಥಾನವನ್ನು, ರೋಚಯಾಮಾಸ-ಸಮ್ಮತಿಸಿದನು ||೮|| ಸರಾಮಃ-ಆ ಶ್ರೀರಾಮನು, ರುಚಿರಂ-ಮನೋಹರವಾದ. ದೇಶಂ-ಪ್ರದೇಶವನ್ನು, ಆಶ್ರಮಕರ್ಮಣಿ-ಆಶ್ರಮವ್ಯಾಪಾರದಲ್ಲಿ. ಆಕ್ರಮ್ಯ-ಇದ್ದು ಸರಿಯೆಂದೊಪ್ಪಿ. ಹಸ್ತೇನ-ಕೈಯಿಂದ, ಹಸ್ತೌ-ಲಕ್ಷ್ಮಣನ ಕೈಗಳನ್ನು ಗೃಹೀತ್ವಾ-ಹಿಡಿದುಕೊಂಡು, ಸೌಮಿತ್ರಿಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀತ್-ನುಡಿದನು ||೯|| ಹೇಸೌಮ್ಯ-ಎಲೈ ಪ್ರಸನ್ನನೇ, ಅಯಂದೇಶಃ-ಈ ಪ್ರದೇಶವು, ಸಮಃ-ನಿಮ್ನೋನ್ನತಗಳಿಲ್ಲದೆ ಸಮವಾಗಿಧೆ, ಶ್ರೀಮಾನ್-ಪ್ರಶಸ್ತವಾದದ್ದು, ಪುಷ್ಪಿತೈಃ-ಹುವ್ವುಗಳಂ ಬಿಡುತ್ತಿರುವ, ತರುಭಿಃ-ಗಿಡಗಳಿಂದ, ವೃತಃ-ಸುತ್ತಿಕೊಳ್ಳಲ್ಪಟ್ಟಿಧೆ, ಇಹ-ಇಲ್ಲಿ, ಆಶ್ರಮಪದಂ-ಆಶ್ರಮಪದವನ್ನು, ಯಥಾವತ್-ಯಥಾಯೋಗ್ಯವಾಗಿ, ಕರ್ತುಂ-ಮಾಡುವದಕ್ಕೋಸ್ಕರ. ಅರ್ಹಸಿ-ಯೋಗ್ಯನಾಗು ||೧೦|| ಆದಿತ್ಯಸಂಕಾಶೈಃ-ಸೂರ್ಯನಿಗೆ ಸಮಯನಾದ, ಅಂದರೆ-ಸೂರ್ಯಕಿರಣಗಳಿಂದರಳಿದ, ಸುರಭಿಗಂಧಿಭಿಃ-ಪರಿಮಳಯುಕ್ತವಾದ ಸುಗಂಧಗಳುಳ್ಳ, ಪದ್ಮೈಃ-ಕಮಲಗಳಿಂದ, ರಮ್ಯಾ-ಇಂಪಾಗಿರುವ, ಪದ್ಮಸೇವಿತಾ-ಕಮಲಗಳಿಂದ ಸೇವಿಸಲ್ಪಟ್ಟ. (ಅಥವಾ-ಪದ್ಮಸೇವಿತಾ-ಲಕ್ಷ್ಮೀದೇವಿಯಿಂದ ಶೋಭಾಯಮಾನವಾದ.) ಪದ್ಮಿನೀ-ಪುಷ್ಕರಣಿಯು, ಅದೂರೇ-ಸಮೀಪದಲ್ಲಿ, ದೃಶ್ಯತೇ-ಕಾಣಲ್ಪಡುತ್ತದೆ ||೧೧|| ಭಾವಿತಾತ್ಮನಾ-ಬ್ರಹ್ಮನಿಷ್ಠನಾದ, ಅಗಸ್ತ್ಯೇನಮುನಿನಾ-ಅಗಸ್ತ್ಯಮಹರ್ಷಿಯಿಂದ, ಯಥಾ-ಹ್ಯಾಗೆ, ಆಖ್ಯಾತಂ-ಹೇಳಲ್ಪಟ್ಟಿತೋ, ತಥಾ-ಹಾಗೆಯೇ. ಪುಷ್ಪಿತೈಃ-ಸಂಜಾತಪುಷ್ಪಗಳುಳ್ಳ, ತರುಭಿಃ-ಗಿಡಗಳಿಂದ, ವೃತಾ-ಸುತ್ತಿಕೊಳ್ಳಲ್ಪಟ್ಟ, ರಮ್ಯಾ-ಮನಸ್ಸಿಗಿಂಪಾಗಿರುವ, ಹಂಸಕಾರಂಡವಾಕೀರ್ಣಾ-ಹಂಸಪಕ್ಷಿಗಳಿಂದಲೂ ನೀರುಕೋಳಿಗಳಿಂದಲೂ ತುಂಬಿರುವ, ಚಕ್ರವಾಕೋಪಶೋಭಿತಾ-ಚಕ್ರವಾಕಪಕ್ಷಿಗಳಿಂ ಹೊಳೆಯುತ್ತಿರುವ, ಇಯಂಗೋದಾವರೀ-ಈ ಗೋದಾವರೀನದಿಯು, ಅಸ್ತಿ-ಇಧೆಯೋ ||೧೨|| ಹೇಸೌಮ್ಯ-ಎಲೈ ಪ್ರಸನ್ನನೇ, ನಾತಿದೂರೇ-ಹಾನೆ

ಡವನದೆಂತೆನೆ,—||೭|| ಎಲೈ ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ, ನೀನು ನೂರಾರು ವರುಷಗಳಿದ್ದರೂ, ನಾನು ಪರಾಧೀನನೇ ಹೊರತು ಸ್ವತಂತ್ರನಲ್ಲ, ನಿನಗೆ ಅಧೀನನಾಗಿಯೇ ಇರುವೆನು, ಮನೋಹರವಾದ ಈ ಪ್ರದೇಶದಲ್ಲಿ ಪರ್ಣಶಾಲೆಯಂ ಮಾಡೆಂದು ನೀನು ನಿರೂಪಿಸುತ್ತಿರೂ; ನನ್ನ ಮನಸ್ಸಿಗೆ ಇಂಪಾಗಿರುವ ಪ್ರದೇಶದಲ್ಲಿ ಆಶ್ರಮವಂ ಮಾಡೆಂದು ಎಂದಿಗೂ ನುಡಿಯಬ್ಯಾಡೆಂದು ಹೇಳಿದನು ||೮|| ಅನಂತರದಲ್ಲಿ ಶ್ರೀರಾಮನು ಮಹಾತ್ಮನಾದ ಆ ಲಕ್ಷ್ಮಣನ ವಾಕ್ಯವಂ ಕೇಳಿ ಸಂತೋಷಗೊಂಡು ತಾನೇ ಆಲೋಚಿಸಿದವನಾಗಿ, ಸರ್ವಗುಣಗಳಿಂದ ಪೊಡಗೂಡಿದ ಪ್ರದೇಶವಂ ಕಂಡು, ಇದು ಸರಿಯಾದದ್ದೆಂದು ತಿಳಿದುಕೊಂಡವನಾಗಿ, ಲಕ್ಷ್ಮಣಸ್ವಾಮಿಯ ಹಸ್ತವನ್ನು ತನ್ನ ಹಸ್ತದಿಂದ ಹಿಡಿದು ಕರದುಕೊಂಡು ಪೋಗಿ ಆಗ ಲಕ್ಷ್ಮಣನಂ ಕುರಿತು ನುಡಿವನದೆಂತೆನೆ,—||೯|| ಎಲೈ ಸೌಮ್ಯನೇ! ಈ ಪ್ರದೇಶವು ನಿಮ್ನೋನ್ನತಂಗಳಿಲ್ಲದೆ ಹೊಳೆಯುತ್ತಿರುವದು, ಪುಷ್ಪಿಸಿರುವ ವೃಕ್ಷಂಗಳಿಂದ ಪರಿವೃತವಾಗಿಧೆ; ಇಲ್ಲಿ ಪರ್ಣಶಾಲೆಯಂ ಯಥಾ ಯೋಗ್ಯವಾಗಿಮಾಡುವವನಾಗು||ಸೂರ್ಯಕಿರಣಗಳಿಂದ ವಿಕಸಿತವಾದ, ಪರಿಮಳ ಯುಕ್ತವಾಗಿರುವ ಕಮಲಂಗಳಿಂದ ರಮ್ಯವಾಗಿರುವ ಸರೋವರವು ಸಮೀಪದಲ್ಲಿ ಕಾಣುತ್ತಲಿರುವದು ||೧೧|| ಬ್ರಹ್ಮನಿಷ್ಠಾಪರನಾದ ಅಗಸ್ತ್ಯ ಮಹಾ ಮುನಿಯಿಂದ ನಿರೂಪಿಸಲ್ಪಟ್ಟಂತೆ ಸಂಜಾತ ಪುಷ್ಪಂಗಳುಳ್ಳ, ವೃಕ್ಷಂಗಳಿಂದ ಸುತ್ತು ಬಾರಲ್ಪಟ್ಟ, ಮನೋಹರವಾದ, ಮತ್ತು ಹಂಸಪಕ್ಷಿಗಳಿಂದಲೂ, ನೀರುಕೋಳಿಗಳಿಂದಲೂ, ಕೋಕೀ ಹಕ್ಕಿಗಳಿಂದಲೂ, ಸಹಾ ಹೊಳೆವ ಈ ಗೋದಾವರೀ ನದಿಯು ಸಮೀಪದಲ್ಲಿಯೇ ಇರುವದು. ಇಲ್ಲಿಗೆ ಬಹುದೂರವಲ್ಲದೆಯೂ, ಬಹು ಸಮೀಪವಲ್ಲದೆಯೂ ಇರುವ ಈ ಪ್ರದೇಶದಲ್ಲಿ

ನಾತಿದೂರೇನಚಾಸನ್ನೇ ಮೃಗಯೂಥನಿಪೀಡಿತಾಃ । ಮಯೂರನಾದಿತಾರಮ್ಯಾಃ ಪ್ರಾಂಶವೋಬಹುಕಂ
ದರಾಃ । ದೃಶ್ಯಂತೇಗಿರಯಸ್ಸೌಮ್ಯಫುಲ್ಲೈಸ್ತರುಭಿರಾವೃತಾಃ ।೧೪। ಸೌವರ್ಣೈ ರಾಜತೈಸ್ತಾಮ್ರೈರ್ದೇಶೇದೇಶೇಚಧಾತು
ಭಿಃ । ಗವಾಕ್ಷಿತಾಇವಾಭಾಂತಿಗಜಾಃಪರಮಭಕ್ತಿಭಿಃ ॥೧೫॥ ಸಾಲೈಸ್ತಾಲೈಸ್ತಮಾಲೈಶ್ಚಖರ್ಜೂರಪನಸಾಮ್ರಕೈಃ
ನೀವಾರೈಸ್ತಿಮಿಶೈಶ್ಚೈವಪುನ್ನಾಗೈಶ್ಚೋಪಶೋಭಿತಾಃ । ಚೂತೈರಶೋಕೈಸ್ತಿಲಕೈಶ್ಚಂಪಕೈಃಕೇತಕೈರಪಿ । ಪುಷ್ಪಗುಲ್ಮಲ
ತೋಪೇತೈಸ್ತೈಸ್ತೈಸ್ತರುಭಿರಾವೃತಾಃ । ಚಂದನೈಸ್ಸ್ಯಂದನೈರ್ನೀಪೈಃಪನಸೈರ್ಲಿಕುಚೈರಪಿ । ಧವಾಶ್ವಕರ್ಣಖದಿರೈಶ್ಶಮೀ
ಕಿಂಶುಕಪಾಟಲೈಃ ।೧೮। ಇದಂಪುಣ್ಯಮಿದಂಮೇಧ್ಯಮಿದಂಬಹುಮೃಗದ್ವಿಜಂ । ಇಹವತ್ಸ್ಯಾಮಸೌಮಿತ್ರೇಸಾ
ರ್ಧಮೇತೇನಪಕ್ಷಿಣಾ ।೧೯। ಏವಮುಕ್ತಸ್ತುರಾಮೇಣಲಕ್ಷ್ಮಣಃಪರವೀರಹಾ । ಅಚಿರೇಣಾಶ್ರಮಂಭ್ರಾತುಶ್ಚಕಾರ
ಸುಮಹಾಬಲಃ ।೨೦। ಪರ್ಣಶಾಲಾಂಸುವಿಪುಲಾಂತತ್ರಸಂಘಾತಮೃತ್ತಿಕಾಂ । ಸುಸ್ತಂಭಾಂಮಸ್ಕರೈರ್ದೀರ್ಘೈಃಕೃತ

---

ದೂರವಲ್ಲದಿರುವ, ನಚಾಸನ್ನೇ-ಹಾನೆ ಸಮೀಪವೂ ಅಲ್ಲದಿರುವ ಈ ಪ್ರದೇಶದಲ್ಲಿ, ಮೃಗಯೂಥನಿಪೀಡಿತಾಃ-ಜಿಂಕೆಗಳ ಗುಂಪುಗಳಿಂದ ಬಾಧಿಸಲ್ಪಟ್ಟ, (ಅಂದರೆ-ತುಂಬಿರುವ,) ಮಯೂರನಾದಿತಾಃ-ನವಿಲುಗಳಿಂದ ಧ್ವನಿಗೊಳಿಸುತ್ತಿರುವ, ರಮ್ಯಾಃ-ಇಂಪಾಗಿರುವ, ಪ್ರಾಂಶವಃ-ಉದ್ದವಾಗಿರುವ, ಬಹುಕಂದರಾಃ-ಬಹಳವಾದ ಗುಹೆಗಳುಳ್ಳ, ಗಿರಯಃ-ಬೆಟ್ಟಗಳು, ಫುಲ್ಲೈಃ-ವಿಕಸಿತವಾದ, ತರುಭಿಃ-ಗಿಡಗಳಿಂದ, ಆವೃತಾಃ-ಸುತ್ತಿಕೊಳ್ಳಲ್ಪಟ್ಟವುಗಳಾಗಿ, ದೃಶ್ಯಂತೇ-ಕಾಣಲ್ಪಡುತ್ತವೇ ॥೧೪॥ ಸೌವರ್ಣೈಃ-ಚಿನ್ನದಂತೆ ಬಣ್ಣವುಳ್ಳ, ರಾಜತೈಃ-ಬೆಳ್ಳಿಯಂತಿರುವ, ತಾಮ್ರೈಃ-ತಾಮ್ರಬಣ್ಣವಾದ; ದೇಶೇದೇಶೇಚ-ಆಯಾಯ ಪ್ರದೇಶಗಳಲ್ಲಿ, ಧಾತುಭಿಃ-ಇಂಗಳೀಕ ಹರಿದ್ಯವೇ ಮೊದಲಾದ ಧಾತುವಿಕಾರಗಳಿಂದ, ಉಪಲಕ್ಷಿತಾಃ-ಕೂಡಿಕೊಂಡಿರುವ, ಗಜಾಃ-ಆನೆಗಳು, ಪರಮಭಕ್ತಿಭಿಃ-ಉತ್ಕೃಷ್ಟವಾದ ಅಲಂಕಾರಗಳಿಂದ, ಗವಾಕ್ಷಿತಾಇವ-ಕಿಟಕಿಗಳ ಆಕಾರವುಳ್ಳ ರೇಖೆಗಳುಳ್ಳವುಗಳಂತೆ, ಆಭಾಂತಿ-ಹೊಳೆಯುತ್ತವೆ ॥೧೫॥ ಸಾಲೈಃ-ಸಾಲವೃಕ್ಷಗಳಿಂದಲೂ, ತಾಲೈಃ-ತಾಳೇಗಿಡಗಳಿಂದಲೂ, ತಮಾಲೈಃ-ಹೊಂಗೇಮರಗಳಿಂದಲೂ, ಖರ್ಜೂರಪನಸಾಮ್ರಕೈಃ-ಖರ್ಜೂರಗಿಡಗಳಿಂದಲೂ ಹಲಸಿನಗಿಡಗಳಿಂದಲೂ, ನೀವಾರೈಃ-ನೀರುವಂಜೀಗಿಡಗಳಿಂದಲೂ, ತಿಮಿಶೈಃ-ನೇಮಿಗಿಡಗಳಿಂದಲೂ, ಪುನ್ನಾಗೈಃ-ಹೊನ್ನೇಗಿಡಗಳಿಂದಲೂ, ಉಪಶೋಭಿತಾಃ-ಹೊಳೆಯಲ್ಪಡುತ್ತಿರುವ, ಚೂತೈಃ-ಮಾವಿನಗಿಡಗಳಿಂದಲೂ, ಅಶೋಕೈಃ-ಮಗ್ಗೀಗಿಡಗಳಿಂದಲೂ, ತಿಲಕೈಃ-ತಿಲಕಗಿಡಗಳಿಂದಲೂ, ಚಂಪಕೈಃ-ಸಂಪಿಗೇಗಿಡಗಳಿಂದಲೂ, ಕೇತಕೈರಪಿ-ಗ್ಯಾದಿಗೇಗಿಡಗಳಿಂದಲೂ, ಪುಷ್ಪಗುಲ್ಮಲತೋಪೇತೈಃ-ಪುಷ್ಪಗಳಗುತ್ತಿಗಳುಳ್ಳ ಮಲ್ಲಿಗೆಯೇ ಮೊದಲಾದುವುಳ್ಳ ಬಳ್ಳಿಗಳಿಂದ ಕೂಡಿಕೊಂಡಿರುವ, ತೈಸ್ತೈಃ-ಆಯಾಯ, ತರುಭಿಃ-ಗಿಡಗಳಿಂದಲೂ, ಚಂದನೈಃ-ಶ್ರೀಗಂಧದ ಗಿಡಗಳಿಂದಲೂ, ಸ್ಯಂದನೈಃ-ಟಿವಿ ಶೆಗಳೆಂಬ ವೃಕ್ಷಗಳಿಂದಲೂ, ನೀಪೈಃ-ಈಚಲಮರಗಳಿಂದಲೂ, ಪನಸೈಃ-ಹಲಸಿನಗಿಡಗಳಿಂದಲೂ, ಲಿಕುಚೈಃ-ಹೇರಳೇಗಿಡಗಳಿಂದಲೂ, ಧವಾಶ್ವಕರ್ಣಖದಿರೈಃ-ಧವ-ಕಗ್ಗಲೀಗಿಡಗಳಿಂದಲೂ, ಅಶ್ವಕರ್ಣ-ಬಿಳೀಮದ್ದೀಗಿಡಗಳಿಂದಲೂ, ಖದಿರೈಃ-ಕೆಂಪುಕಗ್ಗಲೀಗಿಡಗಳಿಂದಲೂ, ಶಮೀಕಿಂಶುಕಪಾಟಲೈಃ-ಶಮೀವೃಕ್ಷಗಳಿಂದಲೂ ಮುತ್ತುಗಗಿಡಗಳಿಂದಲೂ ಪಾದರೀಗಿಡಗಳಿಂದಲೂ, ಆವೃತಾಃ-ಸುತ್ತಿಕೊಳ್ಳಲ್ಪಟ್ಟ, ಗಿರಯಃ-ಬೆಟ್ಟಗಳು, ದೃಶ್ಯಂತೇ-ಕಾಣಲ್ಪಡುತ್ತವೆ ॥೧೮॥ ಇದಂ-ಈ ವನವು, ಪುಣ್ಯಂ-ಪುಣ್ಯಕರವಾದ್ದು. ಇದಂ-ಈ ಗಿಡವು, ಮೇಧ್ಯಂ-ಪರಿಶುದ್ಧವಾದದ್ದು, ಇದಂ-ಈ ವನವು, ಬಹುಮೃಗದ್ವಿಜಂ-ಅನೇಕ ಮೃಗಗಳೂ ಪಕ್ಷಿಗಳೂ ಉಳ್ಳದ್ದು. ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಇಹ-ಈ ವನದಲ್ಲಿ ಏತೇನಪಕ್ಷಿಣಾಸಾರ್ಧಂ-ಈ ಜಟಾಯುವೆಂಬ ಪಕ್ಷಿಯೊಡಗೂಡ, ವತ್ಸ್ಯಾಮಃ-ಇರುವೆನು ॥೧೯॥ ಏವಂ-ಈತೆರಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಪರವೀರಹಾ-ಶತ್ರುಸಂಹಾರಕನಾದ, ಸುಮಹಾಬಲಃ-ಮಹಾಸಾಮರ್ಥ್ಯವುಳ್ಳ, ಲಕ್ಷ್ಮಣಃ-ಲಕ್ಷ್ಮಣನು, ಅಚಿರೇಣ-ಜಾಗ್ರತೆಯಾಗಿ, ಭ್ರಾತುಃ-ಅಣ್ಣನಾದ ಶ್ರೀರಾಮನಿಗೆ, ಆಶ್ರಮಂ-ಪರ್ಣಶಾಲೆಯನ್ನು, ಚಕಾರ-ಮಾಡಿದನು ॥೨೦॥

---

ಹುಲ್ಲೆಗಳ ಗುಂಪುಗಳಿಂದ ತುಂಬಿರುವವಾಗಿಯೂ, ನವಿಲುಗಳಿಂದ ಶಬ್ದಾಯಮಾನವಾಗಿಯೂ, ಮನೋಹರವಾಗಿಯೂ, ಉದ್ದವಾಗಿಯೂ ಇರುವ ಪರ್ವತಂಗಳು, ವಿಕಸಿತವಾದ ಪುಷ್ಪಂಗಳುಳ್ಳ ವೃಕ್ಷಂಗಳಿಂದ ಸುತ್ತುವರಲ್ಪಟ್ಟವುಗಳಾಗಿ ಕಾಣುತ್ತಲಿವೆ ।೧೪। ಸುವರ್ಣದಂತೆಯೂ, ಬೆಳ್ಳಿಯಂತೆಯೂ, ತಾಮ್ರದಂತೆಯೂ ಬಣ್ಣವುಳ್ಳ ಇಂಗಳೀಕ, ಹರಿದಳ ಮೊದಲಾದ ಧಾತುಗಳಿಂದ ಯುಕ್ತವಾಗಿರುವ ಗಜಂಗಳು ಅಲಂಕಾರಗಳಿಂದ ಗವಾಕ್ಷಗಳ ಆಕಾರವುಳ್ಳ ರೇಖೆಗಳುಳ್ಳಂತೆ ಹೊಳೆಯುತ್ತಿವೆ. ಇದಲ್ಲದೆ “ ಸಾಲ, ತಾಲ, ತಮಾಲ, ಖರ್ಜೂರ, ಪನಸ, ಆಮ್ರ, ನೀವಾರ, ತಿಮಿಶ, ಪುನ್ನಾಗ, ಚೂತ, ಅಶೋಕ, ತಿಲಕ, ಚಂಪಕ, ಕೇತಕ, ” ಮೊದಲಾದ ವೃಕ್ಷ ವಿಶೇಷಗಳಿಂದಲೂ, ಪುಷ್ಪಗುಚ್ಛಗಳುಳ್ಳ ಮಲ್ಲಿಗೆ ಮೊದಲಾದ ಬಳ್ಳಿಗಳಿಂದ ಸಹಿತವಾಗಿರುವ ಆಯಾ ವೃಕ್ಷಗಳಿಂದಲೂ, “ ಚಂದನ, ಸ್ಪಂದನ, ನೀಪ, ಪನಸ, ಲಿಕುಚ, ಧವ, ಅಶ್ವಕರ್ಣ, ಖದಿರ, ಶಮಿ, ಕಿಂಶುಕ, ಪಾಟಲ, ” ಎಂಬ ವೃಕ್ಷಂಗಳಿಂದ ಯುಕ್ತವಾಗಿರುವ ಪರ್ವತಂಗಳು ಕಾಣುತ್ತಲಿವೆ ।೧೮। ಎಲೈ ಲಕ್ಷ್ಮಣನೇ! ಈ ವನವು ಪುಣ್ಯಕರವಾಗಿಯೂ, ಪರಿಶುದ್ಧವಾಗಿಯೂ, ಅನೇಕವಾದ ಮೃಗಪಕ್ಷಿಗಳುಳ್ಳದ್ದಾಗಿಯೂ, ಇರುವದಾದ

೧೭

ವಂಶಾಂಸುಶೋಭನಾಂ । ಶಮೀಶಾಖಾಭಿರಾಸ್ತೀರ್ಯದೃಢಪಾಶಾವಪಾಶಿತಾಂ। ಕುಶಕಾಶಶರೈಃಪರ್ಣೈಸ್ಸುಪರಿಚ್ಛಾದಿ ತಾಂತಥಾ । ಸಮೀಕೃತತಲಾಂರಮ್ಯಾಂಚಕಾರಲಘುವಿಕ್ರಮಃ । ನಿವಾಸಂರಾಘವಸ್ಯಾರ್ಥೇಪ್ರೇಕ್ಷಣೀಯಮನುತ್ತಮಂ ।೨೩। ಸಹಸಾಲಕ್ಷ್ಮಣಶ್ಶ್ರೀಮಾನ್ನದೀಂಗೋದಾವರೀಂತದಾ। ಸ್ನಾತ್ವಾಪದ್ಮಾನಿಚಾದಾಯಸಫಲಃಪುನರಾಗತಃ ।೨೪। ತತಃಪುಷ್ಪಬಲಿಂಕೃತ್ವಾಶಾಂತಿಂಚಸಯಥಾವಿಧಿ । ದರ್ಶಯಾಮಾಸರಾಮಾಯತದಾಶ್ರಮಪದಂಕೃತಂ ।೨೫। ಸತಂದೃಷ್ಟ್ವಾಕೃತಂಸೌಮ್ಯಮಾಶ್ರಮಂಸೀತಯಾಸಹ। ರಾಘವಃಪರ್ಣಶಾಲಾಯಾಂಹರ್ಷಮಾಹಾರಯದ್ಭೃಶಂ ।೨೬। ಸುಸಂಹೃಷ್ಟಃಪರಿಷ್ವಜ್ಯಬಾಹುಭ್ಯಾಂಲಕ್ಷ್ಮಣಂತದಾ। ಅತಿಸ್ನಿಗ್ಧಂಚಗಾಢಂಚವಚನಂಚೇದಮಬ್ರವೀತ್ ।೨೭। ಪ್ರೀತೋಸ್ಮಿತೇಮಹತ್ಕರ್ಮತ್ವಯಾಕೃತಮಿದಂಪ್ರಭೋ । ಪ್ರದೆಯೊಯನ್ನಿಮಿತ್ತಸ್ತೆಪರಿಷ್ವಂ

---

ತತ್ರ-ಆ ಸ್ಥಳದಲ್ಲಿ, ಸಂಘಾತಮೃತ್ತಿಕಾಂ-ಅಗಿಯಲ್ಪಟ್ಟ ಮಣ್ಣಿನ ಗೋಡೆಗಳುಳ್ಳ, ಸುಪುಲಾಂ-ಶಕಲ ವಿಸ್ತಾರವಾದ, ದೀರ್ಘೈಃ-ಉದ್ದಗಳಾದ ಮಸ್ಕರೈಃ-ಬಿದುರುಗಳಿಂದ, ಸುಸ್ತಂಭಾಂ-ಒಳ್ಳೇ ಕಂಭಗಳುಳ್ಳ, ಕೃತವಂಶಾಂ-ಮಾಡಲ್ಪಟ್ಟ ಜಂತೆಗಳುಳ್ಳ, ಸುಶೋಭನಾಂ-ಮನೋಹರವಾದ, ಶಮೀಶಾಖಾಭಿಃ-ಶಮೀಕೊಂಬೆಗಳಿಂದ, ಆಸ್ತೀರ್ಯ-ಹಾಸಿ, ದೃಢಪಾಶಾವಪಾಶಿತಾಂ-ದೃಢವಾದ ಹಗ್ಗಗಳಿಂದ ಬಿಗಿಯಲ್ಪಟ್ಟ, ಕುಶಕಾಶಶರೈಃ-ದರ್ಭೆ ಹುಲ್ಲುಗಳಿಂದಲೂ ಕಾಚೀಹುಲ್ಲಿನಿಂದಲೂ ಜಂಬಿನಿಂದಲೂ. ಪರ್ಣೈಃ-ಯೆಲೆಗಳಿಂದಲೂ, ತಥಾ-ಹಾಗೆಯೇ. ಸುಪರಿಚ್ಛಾದಿತಾಂ-ಚನ್ನಾಗಿ ಮುಚ್ಚಲ್ಪಟ್ಟ, ಸಮೀಕೃತತಲಾಂ-ಸಮವಾಗಿ ಮಾಡಲ್ಪಟ್ಟ ನೆಲವುಳ್ಳ, ರಮ್ಯಾಂ-ಮನೋಹರವಾದ, ಪರ್ಣಶಾಲಾಂ-ಪರ್ಣಶಾಲೆಯನ್ನು. ರಾಘವಸ್ಯ-ಶ್ರೀರಾಮನ, ಅರ್ಥೇ-ನಿಮಿತ್ತವಾಗಿ, ಪ್ರೇಕ್ಷಣೀಯಂ-ನೋಡತಕ್ಕ, ಅನುತ್ತಮಂ-ಸರ್ವೋತ್ತಮವಾದ, ನಿವಾಸಂ-ಮನೆಯನ್ನಾಗಿ, ಲಘುವಿಕ್ರಮಃ-ಲಾಘವದಿಂ ಸಂಚಾರಶೀಲನಾಗಿ, ಚಕಾರ-ಮಾಡಿದನು ॥೨೩॥ ತದಾ-ಆಕಾಲದಲ್ಲಿ. ಶ್ರೀಮಾನ್-ಶೌರ್ಯಸಂಪನ್ನನಾದ, ಲಕ್ಷ್ಮಣಃ-ಲಕ್ಷ್ಮಣನು, ಸಹಸಾ-ಜಾಗ್ರತೆಯಾಗಿ, ಗೋದಾವರೀಂನದೀಂ-ಗೋದಾವರೀನದಿಯಲ್ಲಿ, ಸ್ನಾತ್ವಾ-ಸ್ನಾನವಂಮಾಡಿ, ಪದ್ಮಾನಿಚ-ತಾವರೇಹೂವುಗಳನ್ನು, ಆದಾಯ-ತೆಗೆದುಕೊಂಡು, ಸಫಲಃ-ಫಲಗಳಿಂಕೂಡಿದವನಾಗಿ, ಪುನಃ-ಮತ್ತೆ, ಆಗತಃ-ಬಂದನು ॥೨೪॥ ತತಃ-ಬಳಿಕ, ಪುಷ್ಪಬಲಿಂ-ಹುಷ್ಪಗಳಿಂದ ವಾಸ್ತುಪೂಜೆಯನ್ನು, ಶಾಂತಿಂಚ-ವಾಸ್ತುಹೋಮವನ್ನು: ಯಥಾವಿಧಿ-ಯಥಾಶಾಸ್ತ್ರವಾಗಿ, ಕೃತ್ವಾ-ಮಾಡಿ, ಕೃತಂ-ಮಾಡಲ್ಪಟ್ಟ. ತದಾಶ್ರಮಪದಂ-ಆ ಆಶ್ರಮಪ್ರದೇಶವನ್ನು, ರಾಮಾಯ-ಶ್ರೀರಾಮನಿಗೆ, ದರ್ಶಯಾಮಾಸ-ತೋರಿಸಿದನು ॥೨೫॥ ಸರಾಘವಃ-ಆ ಶ್ರೀರಾಮನು, ಕೃತಂ-ಮಾಡಲ್ಪಟ್ಟ, ತಮಾಶ್ರಮಂ-ಆ ಪರ್ಣಶಾಲೆಯನ್ನು. ದೃಷ್ಟ್ವಾ-ಕಂಡು, ಸೀತಯಾಸಹ-ಸೀತಾದೇವಿಯೊಡನೆ, ಪರ್ಣಶಾಲಾಯಾಂ-ಆಶ್ರಮದಲ್ಲಿ, ಭೃಶಂ-ಬಹಳವಾಗಿ, ಹರ್ಷಂ-ಸಂತೋಷವನ್ನು. ಆಹಾರಯತ್-ಪಡೆದನು ॥೨೬॥ ತದಾ-ಆಕಾಲದಲ್ಲಿ, ಸುಸಂಹೃಷ್ಟಃ-ಸಂತೋಷಗೊಂಡವನಾಗಿ, ಅತಿಸ್ನಿಗ್ಧಂ-ಅತಿಭಕ್ತನಾದ ಲಕ್ಷ್ಮಣಂ-ಲಕ್ಷ್ಮಣನನ್ನು. ಬಾಹುಭ್ಯಾಂ-ಭುಜಗಳಿಂದ, ಗಾಢಂ-ಘಟ್ಟಿಯಾಗಿ. ಪರಿಷ್ವಜ್ಯ-ಅಪ್ಪಿಕೊಂಡು, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು ॥೨೭॥ ಹೇಪ್ರಭೋ-ಎಲೈ ಸಮರ್ಥನೇ, ಮಹತ್-ದೊಡ್ಡದಾದ, ಇದಂಕರ್ಮ-ಈ ಪರ್ಣಶಾ

---

ಕಾರಣ ಈ ಪ್ರದೇಶದಲ್ಲಿ ಈ ಜಟಾಯುವಿನೊಡಗೂಡಿ ವಾಸಮಾಡುತ್ತಿರೋಣವೆಂದು ಶ್ರೀರಾಮನಿಂದ ಹೇಳಲ್ಪಟ್ಟವನಾಗಿ; ಶತ್ರುಸಂಹಾರಕನಾದ ಲಕ್ಷ್ಮಣನು ತಕ್ಷಣದಲ್ಲಿಯೇ ಅಣ್ಣನಾದ ಶ್ರೀರಾಮನಿಗೆ ಪರ್ಣಶಾಲೆಯಂ ಮಾಡಿದನದೆಂತೆನೆ;—॥೨೨॥ ಮಹಾ ಸಾಮರ್ಥ್ಯವಂತನಾದ ಲಕ್ಷ್ಮಣನಿಂದ ಆ ಪ್ರದೇಶದಲ್ಲಿ ಅಗಿಯಲ್ಪಟ್ಟ ಮಣ್ಣಿನಿಂದ ಕಟ್ಟಲ್ಪಟ್ಟ ಗೋಡೆಗಳುಳ್ಳದ್ದಾಗಿಯೂ, ವಿಶಾಲವಾಗಿಯೂ, ದೀರ್ಘವಾಗಿರುವ ಬಿದುರುಗಳಿಂದ ಗೈಯ್ಯಲ್ಪಟ್ಟ ಸ್ತಂಭಗಳುಳ್ಳದ್ದಾಗಿಯೂ, ದೃಢವಾದ ಜಂತೆಗಳುಳ್ಳದ್ದಾಗಿಯೂ, ಶಮೀವೃಕ್ಷದ ಕೊಂಬೆಗಳನ್ನು ಹಾಸಿ ದೃಢವಾದ ಹಗ್ಗಗಳಿಂದ ಕಟ್ಟಲ್ಪಟ್ಟದ್ದಾಗಿಯೂ, ದರ್ಭೆ ಹುಲ್ಲುಗಳಿಂದಲೂ ಕಾಚೀಹುಲ್ಲುಗಳಿಂದಲೂ, ಜಂಬಿನಿಂದಲೂ, ಎಲೆಗಳಿಂದಲೂ, ಸಹಾ ಚನ್ನಾಗಿ ಮುಚ್ಚಲ್ಪಟ್ಟದ್ದಾಗಿಯೂ, ನಿಮ್ನೋನ್ನತಗಳಿಲ್ಲದಂತೆ ಸಮವಾಗಿ ಮಾಡಲ್ಪಟ್ಟ ನೆಲವುಳ್ಳದ್ದಾಗಿಯೂ, ಮನೋಹರವಾಗಿಯೂ ಇರುವ ಪರ್ಣಶಾಲೆಯನ್ನು ಶ್ರೀರಾಮನಿಗಾಗಿ ಮಾಡಿದಂಥಾವನಾದನು ।೨೩। ಆ ಸಮಯದಲ್ಲಿ ಬಹು ತೇಜೋವಂತನಾದ ಆ ಲಕ್ಷ್ಮಣನು ಗೋದಾವರೀತೀರವನ್ನೈದಿ, ಸ್ನಾನವಂಗೈದು ತಾವರೆ ಹೂವುಗಳನ್ನು ಹಣ್ಣುಗಳನ್ನು ಸಹಾ ತೆಗದುಕೊಂಡು ಬಂದಬಳಿಕ; ಪುಷ್ಪಂಗಳಿಂದ ವಾಸ್ತುಪೂಜೆಯಂಗೈದು ಯಥಾವಿಧಿಯಾಗಿ ಶಾಂತಿಯನ್ನು ಮಾಡಿ ಆ ಆಶ್ರಮಪ್ರದೇಶವನ್ನು ಶ್ರೀರಾಮನಿಗೆ ತೋರಿಸಿದನು ।೨೫। ಅನಂತರದಲ್ಲಿ ಶ್ರೀರಾಮನು ಲಕ್ಷ್ಮಣನಿಂದ ಗೈಯ್ಯಲ್ಪಟ್ಟ ಆ ಪರ್ಣಶಾಲೆಯಂ ಕಂಡು ಅದಂ ಪ್ರವೇಶಿಸಿ ಸೀತಾದೇವಿಯೊಡಗೂಡಿ, ಆ ಪರ್ಣಶಾಲೆಯಲ್ಲಿ ಮಹಾ ಸಂತೋಷವನ್ನೈದಿದನು. ಆ ಕಾಲದಲ್ಲಿ ಶ್ರೀರಾಮನು ಸಂತೋಷಚಿತ್ತನಾಗಿ ಬಹು ಕೈಂಕರ್ಯವಂ ಗೈಯ್ಯುತ್ತಲಿರುವ ಅತಿಭಕ್ತನಾದ ಲಕ್ಷ್ಮಣನನ್ನು ಭುಜಗಳಿಂದ ದೃಢವಾಗಿ ಆಲಿಂಗನಂಗೈದು ನುಡಿದನದೆಂತೆನೆ;—।೨೬। ಎಲೈ ಸಮರ್ಥನೇ; ಬಹಳ ದೊಡ್ಡದಾ

ಗೋಮಯಾಕೃತಃ ।೨೮। ಭಾವಜ್ಞೇನ ಕೃತಜ್ಞೇನ ಧರ್ಮಜ್ಞೇನ ಚ ಲಕ್ಷ್ಮಣ । ತ್ವಯಾ ಪುತ್ರೇಣ ಧರ್ಮಾತ್ಮಾ ನ ಸಂವೃತ್ತಃ ಪಿತಾ ಮಮ ।೨೯। ಏವಂ ಲಕ್ಷ್ಮಣಮುಕ್ತ್ವಾ ತು ರಾಘವೋ ಲಕ್ಷ್ಮಿವರ್ಧನಃ । ತಸ್ಮಿನ್ ದೇಶೇ ಬಹುಫಲೇ ನ್ಯವಸತ್ಸ ಸುಖಂ ವಶೀ ।೩೦। ಕಂಚಿತ್ಕಾಲಂ ಸ ಧರ್ಮಾತ್ಮಾ ಸೀತಯಾ ಲಕ್ಷ್ಮಣೇನ ಚ । ಅನ್ವಾಸ್ಯಮಾನೋ ನ್ಯವಸತ್ಸ್ವರ್ಗಲೋಕೇ ಯಥಾ ಸುರಃ ।೩೧।

—*** ಇತಿ ಶ್ರೀಮದಾರಣ್ಯಕಾಂಡೇ ಪಂಚದಶಸ್ಸರ್ಗಃ ***—

ವಸತಸ್ತಸ್ಯ ತು ಸುಖಂ ರಾಘವಸ್ಯ ಮಹಾತ್ಮನಃ । ಶರದ್ವ್ಯಪಾಯೇ ಹೇಮಂತಋತುರಿಷ್ಟಃ ಪ್ರವರ್ತತೇ ।೧। ಸ ಕದಾಚಿತ್ಪ್ರಭಾತಾಯಾಂ ಶರ್ವರ್ಯಾಂ ರಘುನಂದನಃ । ಪ್ರಯಯಾವಭಿಷೇಕಾರ್ಥಂ ರಮ್ಯಾಂ ಗೋದಾವರೀಂ ನದೀಂ ।೨। ಪ್ರಹ್ವಃ ಕಲಶಹಸ್ತಸ್ತಂ ಸೀತಯಾ ಸಹ ವೀರ್ಯವಾನ್ । ಪೃಷ್ಠತೋಽನುವ್ರಜನ್ಭ್ರಾತಾ ಸೌಮಿತ್ರಿರಿದಮಬ್ರವೀತ್ ।೩। ಅಯಂ ಸ ಕಾಲಸ್ಸಂಪ್ರಾಪ್ತಃ ಪ್ರಿಯೋ ಯಸ್ತೇ ಪ್ರಿಯಂವದ । ಅಲಂಕೃತ ಇವಾಭಾತಿ ಯೇನ ಸಂವತ್ಸರಶ್ಶುಭಃ ।೪। ನೀಹಾರಪ

---

ಲಾನಿರ್ಮಾಣವು, ತ್ವಯಾ–ನಿನ್ನಿಂದ, ಕೃತಂ–ಮಾಡಲ್ಪಟ್ಟಿತು, ತೇ–ನಿನಗೆ, ಪ್ರೀತಃ–ಸಂತುಷ್ಟನು, ಅಸ್ಮಿ–ಆಗಿದ್ದೇನೆ, ಯಸ್ಮಿನ್ ನಿಮಿತ್ತಾತ್–ಯಾವ ಕಾರಣದಿಂದ ನಿಮಿತ್ತವಾಗಿ ಹೇಳಲ್ಪಟ್ಟ, ತೇ–ನಿನಗೆ, ಪ್ರದೇಯಃ–ಕೊಡತಕ್ಕದ್ದಾಗಿರುವುದೋ, ಸಃ–ಅಂಥಾ, ಪರಿಷ್ವಂಗಃ–ಆಲಿಂಗನವು, ಮಯಾ–ನನ್ನಿಂದ, ಕೃತಃ–ಮಾಡಲ್ಪಟ್ಟಿತು ॥೨೮॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಭಾವಜ್ಞೇನ–ಪರಾಭಿಪ್ರಾಯವನ್ನು ತಿಳಿದಿರುವ, ಕೃತಜ್ಞೇನ–ಗೃಹನಿರ್ಮಾಣಾದಿ ಕಾರ್ಯಗಳಂ ತಿಳಿದಿರುವ, ಧರ್ಮಜ್ಞೇನ ಚ–ಸೇವಾಧರ್ಮವನ್ನು ತಿಳಿದಿರುವ, ಪುತ್ರೇಣ–ಮಗನಾದ, ತ್ವಯಾ–ನಿನ್ನಿಂದ, ಧರ್ಮಾತ್ಮಾ–ಧರ್ಮಾತ್ಮನಾದ, ಪಿತಾ–ತಂದೆಯು, ಮಮ–ನನ್ನ, ನ ಸಂವೃತ್ತಃ–ಮೃತನಾಗಲಿಲ್ಲ (ಅಂದರೆ–ನನ್ನ ತಂದೆಯಿಂದ ನಾನು ಹ್ಯಾಗೆ ಸಂರಕ್ಷಿಸಲ್ಪಟ್ಟೆನೋ ಅದರಂತೆ ನಿನ್ನಿಂದ ನಾನು ಸಂರಕ್ಷಿಸಲ್ಪಟ್ಟೆನೆಂದು ತಾತ್ಪರ್ಯವು) ॥೨೯॥ ಏವಂ–ಈಪರಿಯಾಗಿ, ಲಕ್ಷ್ಮಿವರ್ಧನಃ–ಲಕ್ಷ್ಮಿಯನ್ನು ವೃದ್ಧಿಪಡಿಸುವವನಾದ, ವಶೀ–ಜಿತೇಂದ್ರಿಯನಾದ ರಾಘವಃ–ಶ್ರೀರಾಮನು, ಏವಂ–ಈಪರಿಯಾಗಿ, ಲಕ್ಷ್ಮಣಂ–ಲಕ್ಷ್ಮಣನನ್ನು ಕುರಿತು, ಉಕ್ತ್ವಾ–ಹೇಳಿ, ಬಹುಫಲೇ–ಅನೇಕ ಜಾತೀಯ ಫಲಗಳುಳ್ಳ, ತಸ್ಮಿನ್ ದೇಶೇ–ಆ ಪಂಚವಟೀಪ್ರದೇಶದಲ್ಲಿ, ಸುಸುಖಂ–ಬಹಳ ಸುಖವಾಗಿ, ನ್ಯವಸತ್–ಇದ್ದನು ॥೩೦॥ ಧರ್ಮಾತ್ಮಾ–ಧರ್ಮಿಷ್ಠನಾದ, ಸಃ–ಆ ಶ್ರೀರಾಮನು ಸೀತಯಾ–ಸೀತಾದೇವಿಯೊಡಗೂಡ, ಲಕ್ಷ್ಮಣೇನ ಚ–ಲಕ್ಷ್ಮಣನಿಂದ, ಅನ್ವಾಸ್ಯಮಾನಃ–ಅನುಸರಿಸಲ್ಪಟ್ಟವನಾಗಿ, ಸ್ವರ್ಗಲೋಕೇ–ಅಮರಾವತೀಪಟ್ಟಣದಲ್ಲಿ, ಅಮರೋ ಯಥಾ–ದೇವತೆಯಂತೆ, ಕಂಚಿತ್ಕಾಲಂ–ಕೆಲಕಾಲವು, ನ್ಯವಸತ್–ವಾಸಮಾಡಿಕೊಂಡಿದ್ದನು॥ —ಪಂಚದಶಸ್ಸರ್ಗಃ—

ಮಹಾತ್ಮನಃ–ಮಹಾಧೀರನಾದ, ರಾಘವಸ್ಯ ತಸ್ಯ–ಆ ಶ್ರೀರಾಮನು, ಸುಖಂ–ಸುಖವಾಗಿ, ವಸತಃ ಸತಃ–ಇರುತ್ತಿರುವವನಾಗಿ, (ರಾಘವಸ್ಯ–ಶ್ರೀರಾಮನಿಗೆ ರಾಕ್ಷಸವಧೆಯು ಶೂರ್ಪಣಖಾಗಮನವೇ ಮೊದಲಾದ ಕಾರ್ಯಗಳಿಗೆ ಹೇತುವಾದ್ದರಿಂದ.) ಇಷ್ಟಃ–ಇಷ್ಟವಾದ, ಹೇಮಂತಃ–ಋತುಃ–ಹಿಮಂತಋತುವು ಪ್ರವರ್ತತೇ–ಪ್ರವರ್ತಿಸಿತು. ಸಃ ರಘುನಂದನಃ–ಆ ಶ್ರೀರಾಮನು, ಕದಾಚಿತ್–ಒಂದಾನೊಂದು ಕಾಲದಲ್ಲಿ, ಶರ್ವರ್ಯಾಂ–ರಾತ್ರಿಯು, ಪ್ರಭಾತಾಯಾಂ ಸತ್ಯಾಂ–ಬೆಳಗಾಗುತ್ತಿರಲಾಗಿ, ಅಭಿಷೇಕಾರ್ಥಂ–ಸ್ನಾನಕ್ಕೋಸ್ಕರ, ರಮ್ಯಾಂ–ಮನೋಹರವಾದ ಗೋದಾವರೀಂ ನದೀಂ–ಗೋದಾವರೀನದಿಯನ್ನು ಕುರಿತು ಪ್ರಯಯೌ–ಹೊರಟನು ॥೨॥ ವೀರ್ಯವಾನ್–ಸಾಮರ್ಥ್ಯವಂತನಾದ. ಭ್ರಾತಾ–ತಮ್ಮನಾದ ಸೌಮಿತ್ರಿಃ–ಲಕ್ಷ್ಮಣಸ್ವಾಮಿಯು, ಸೀತಯಾ ಸಹ–ಸೀತಾದೇವಿಯೊಡನೇ, ಕಲಶಹಸ್ತಃ–ನೀರಿನ ತಂಬಿಗೆಯ ಹಸ್ತದಲ್ಲುಳ್ಳವನಾಗಿ, ಪ್ರಹ್ವಃ–ನಮ್ರನಾಗಿ, ಪೃಷ್ಠತಃ–ಹಿಂದಗಡೆ, ತಂ–ಆ ಶ್ರೀರಾಮನನ್ನು. ಅನುವ್ರಜನ್–ಅನುಸರಿಸಿ ಹೋದಂಥಾವನಾಗಿ, ಇದಂ–ಈ ಮಾತನ್ನು, ಅಬ್ರವೀತ್–

---

ಗಿರುವ ಈ ಪರ್ಣಶಾಲಾನಿರ್ಮಾಣವು ನಿನ್ನಿಂದ ಗೈಯ್ಯಲ್ಪಟ್ಟಿತು; ಇದರಿಂದ ನನಗೆ ಬಹಳ ಸಂತೋಷವಾಯಿತು; ಈ ಕಾರ್ಯವಂ ಮಾಡಿದ್ದಕ್ಕೆ ನಿನಗೆ ಬಹುಮಾನಾರ್ಥವಾಗಿ, ಈ ಆಲಿಂಗನವು ಕೊಡಲ್ಪಟ್ಟಿದೆ ।೨೮। ಎಲೈ ಪೊಡಹುಟ್ಟಿದವನೇ! ಪರಾಭಿಪ್ರಾಯವನ್ನು ತಿಳಿದವನಾಗಿಯೂ ಗೃಹನಿರ್ಮಾಣಾದಿ ಕಾರ್ಯಗಳಂ ಬಲ್ಲವನಾಗಿಯೂ, ಸೇವಾಧರ್ಮವನ್ನರಿತವನಾಗಿಯೂ, ಇರುವ ಪುತ್ರನಾದ ನಿನ್ನಿಂದ ಧರ್ಮಾತ್ಮನಾದ ನಮ್ಮ ತಂದೆಯಾದ ದಶರಥಮಹಾರಾಯನು ಮೃತನಾಗಲಿಲ್ಲ (ಅಂದರೆ ನೀನು ತಂದೆಯಂತೆ ನನಗೆ ಉಪಚರಿಸುತ್ತೀಯಾದಕಾರಣ; ಜನಕನು ಮರಣವನ್ನೈದಿದರೂ ಮೃತನಾಗದವನಂತೆ ಭಾವಿಸುತ್ತೇನೆಂದು ಭಾವವು) ।೨೯। ಈ ಪ್ರಕಾರವಾಗಿ ಶ್ರೀರಾಮನು ಆ ಲಕ್ಷ್ಮಣನಿಗೆ ಹೇಳಿದವನಾಗಿ ನಾನಾಜಾತೀಯವಾದ ಫಲಂಗಳುಳ್ಳ ಆ ಪಂಚವಟೀತೀರದಲ್ಲಿ ಸುಖವಾಗಿದ್ದನು ।೩೦। ಆ ಸಮಯದಲ್ಲಿ ಧರ್ಮಿಷ್ಠನಾದ ಶ್ರೀರಾಮನು ಸೀತಾಲಕ್ಷ್ಮಣರಿಂದನುಸರಿಸಲ್ಪಟ್ಟವನಾಗಿ; ಅಮರಾವತೀಪುರದಲ್ಲಿ ಇಂದ್ರನು ಸಂತೋಷಚಿತ್ತನಾಗಿರುವಂತೆ ಕೆಲವುಕಾಲ ಆ ಪರ್ಣಶಾಲೆಯಲ್ಲಿ ಸುಖವಾಗಿದ್ದನು। ೩೧।

—**ಆರಣ್ಯಕಾಂಡದಲ್ಲಿನ ೧೫ ನೆಯ ಸರ್ಗಂ ಮುಗಿದುದು**—

ಈ ಪ್ರಕಾರವಾಗಿ ಮಹಾಧೈರ್ಯಶಾಲಿಯಾದ ಆ ಶ್ರೀರಾಮನು ಆ ಪರ್ಣಶಾಲೆಯಲ್ಲಿ ಇರುತ್ತಿರುವನಾಗಲು, ಆ ರಘುನಂದನನಿಗೆ ಇಷ್ಟವಾಗಿರುವ ಹಿಮಂತಋತುವು ಪ್ರವರ್ತಿಸಿತು ಒಂದಾನೊಂದು ಕಾಲದಲ್ಲಿ ರಾತ್ರಿಯು ಕಳೆದು ಪ್ರಾತಃಕಾಲವಾಗಲೂ, ಆ ಶ್ರೀರಾಮನು ಸ್ನಾನವಂಗೈಯ್ಯಲೋಸುಗ ರಮ್ಯವಾದ ಗೋದಾವರೀನದಿ

ರುಷೋಲೋಕಃಪೃಥಿವೀಸಸ್ಯಶಾಲಿನೀ । ಜಲಾನ್ಯನುಪಭೋಗ್ಯಾನಿಸುಭಗೋಹವ್ಯವಾಹನಃ ।೫॥ ನವಾಗ್ರಯಣಪೂಜಾಭಿರಭ್ಯರ್ಚ್ಯ ಪಿತೃದೇವತಾಃ । ಕೃತಾಗ್ರಯಣಕಾಃ ಕಾಲೆಸಂತೊವಿಗತಕಲ್ಮಷಾಃ ।೬॥ ಪ್ರಾಜ್ಯಕಾಮಾಜನಪದಾಸ್ಸಂಪನ್ನತರಗೋರಸಾಃ । ವಿಚರಂತಿಮಹೀಪಾಲಾಯಾತ್ರಾಸ್ಥಾವಿಜಿಗೀಷವಃ ।೭॥ ಸೇವಮಾನೆದೃಢಂಸೂರ್ಯೆದಿಶಮಂತಕಸೆವಿತಾಂ । ವಿಹೀನತಿಲಕೆವಸ್ತ್ರೀನೊತ್ತರಾದಿಕ್ಪ್ರಕಾಶತೆ ।೮। ಪ್ರಕೃತ್ಯಾಹಿಮಕೋಶಾಢ್ಯೋದೂರಸೂರ್ಯಶ್ಚಸಾಂಪ್ರತಂ । ಯಥಾರ್ಥನಾಮಾಸುವ್ಯಕ್ತಂಹಿಮವಾನ್ಹಿಮವಾನ್ಗಿರಿಃ ।೯॥ ಅತ್ಯಂತಸುಖಸಂಚಾರಾಮಧ್ಯಾಹ್ನೆಸ್ಪರ್ಶತಸ್ಸುಖಾಃ । ದಿವಸಾಸ್ಸುಭಗಾದಿತ್ಯಾಶ್ಛಾಯಾಸಲಿಲದುರ್ಭಗಾಃ ।೧೦॥ ಮೃದುಸೂರ್ಯಾಸ್ಸನೀಹಾರಾಃಪಟು

---

ನುಡಿದನು ॥೩॥. ಹೆ ಪ್ರಿಯಂವದ-ಎಲೈ ಇಷ್ಟವನ್ನೇ ಹೇಳುವವನೇ. ಯೇನ-ಯಾವ ಹಿಮಂತಋತುವಿನಿಂದ. ಶುಭಃ-ಶುಭಕರವಾದ. ಯಃ-ಸಂವತ್ಸರಃ-ಯಾವಸಂವತ್ಸರವು, ಅಲಂಕೃತಇವ-ಅಲಂಕರಿಸಲ್ಪಟ್ಟದ್ದಂತೆ, ಆಭಾತಿ-ಹೊಳೆಯುತ್ತಿದ್ದೀಯೋ (ಯದ್ವಾ-ಅಲಂಕೃತಃ-ಅಲಂಕಾರಮಾಡಲ್ಪಟ್ಟದ್ದಾಗಿ, ತೆ-ನಿನಗೆ, ಪ್ರಿಯಇವ-ಇಷ್ಟವಾದ್ದಂತೆ, ಆಭಾತಿ-ತೋರುತದೋ, ಸೋಯಂಕಾಲಃ-ಅಂಥಾ ಹಿಮಂತಋತುವು, ಸಂಪ್ರಾಪ್ತಃ-ಬಂತು ॥೪॥ ಲೋಕಃ-ಜನವು, ನೀಹಾರಪರುಷಃ-ಮಂಜಿನಿಂದ, ಕಠಿನಸ್ಪರ್ಶೆಯುಳ್ಳದ್ದಾಗಿಧೆ, ಪೃಥಿವೀ-ನೆಲವು, ಸಸ್ಯಶಾಲಿನೀ-ಪೈರುಗಳಿಂದ ವಪ್ಪಿಧೆ, ಜಲಾನಿ-ಉದಕಗಳು, ಅನುಪಭೋಗ್ಯಾನಿ-ಸೇವಿಸಲ್ಪಡುವಗಳಲ್ಲಾ, ಹವ್ಯವಾಹನಃ-ಅಗ್ನಿಯು, ಸುಭಗಃ-ಶುಭಕರವಾಗಿಧೆ, ಸಂತಃ-ಸತ್ಪುರುಷರು, ಕಾಲೆ-ಹಿಮಂತಕಾಲದಲ್ಲಿ ಮಾಡಲ್ಪಟ್ಟ ಆಗ್ರ ಇಷ್ಟಿಯುಳ್ಳವರಾಗಿ,ನವಾಗ್ರಯಣಪೂಜಾಭಿಃ-ನೂತನವಾದ ಅನ್ನ ಹೋಮಾದಿಗಳಿಂದಲೂ, ಪೂಜೆಗಳಿಂದಲೂ. ಪಿತೃದೇವತಾಃ-ಪಿತೃಗಳನ್ನೂ. ದೇವತೆಗಳನ್ನೂ. ಅಭ್ಯರ್ಚ್ಯ-ಪೂಜೆಮಾಡಿ, ವಿಗತಕಲ್ಮಷಾಃ-ಹೋದಂಥಾ ಪಾಪಗಳುಳ್ಳವರಾಗಿಧಾರೇ ॥೬॥ ಜನಪದಾಃ-ದೇಶಗಳು, ಪ್ರಾಜ್ಯಕಾಮಾಃ-ಪ್ರಚುರವಾದ ಕೋರಿಕೆಗಳುಳ್ಳವುಗಳಾಗಿ, ಸಪನ್ನತರಗೋರಸಾಃ-ಸಮೃದ್ಧಿಯಾದ ದಧಿಕ್ಷೀರಗಳುಳ್ಳವುಗಳಾಗಿ, ಭವಂತಿ-ಆಗುತವೆ, ವಿಜಿಗೀಷವಃ-ಜಯೇಚ್ಛೆಯುಳ್ಳ, ಮಹೀಪಾಲಾಃ-ಅರಸರು, ಯಾತ್ರಾಸ್ಥಾಃ-ಪ್ರಯಾಣದಲ್ಲಿ ಆಸಕ್ತಿಯುಳ್ಳವರಾಗಿ, ವಿಚರಂತಿ-ಸಂಚಾರಮಾಡುತಾರೇ॥ — — — ... — ॥೭॥ ಸೂರ್ಯೆ-ಸೂರ್ಯನು, ಅಂತಕಸೆವಿತಾಂ-ಯಮನಿಂ ಸೇವಿಸಲಟ್ಟ, ದಿಶಂ-ದಕ್ಷಿಣದಿಕ್ಕನ್ನು ದೃಢಂ-ಘಟ್ಟಿಯಾಗಿ ಸೇವಮಾನೆಸತಿ-ಹೊಂದಿದವನಾಗಿ, ಉತ್ತರಾದಿಕ್-ಉದೀಚೀದಿಕ್ಕು, ವಿಹೀನತಿಲಕಾ-ತಿಲಕವಿಲ್ಲದ, ಸ್ತ್ರೀಇವ-ಹೆಂಗಸಿನಂತೆ,ಪ್ರಕಾಶತೆ-ಹೊಳೆಯುತಿಧೇ॥೮॥ಪ್ರಕೃತ್ಯಾ-ಸ್ವಭಾವದಿಂದ, ಹಿಮಕೋಶಾಢ್ಯಃ-ಮಂಜುಗಡ್ಡೆಗಳಿಂ ಸಮೃದ್ಧಿಯಾದ,ದೂರಸೂರ್ಯಃ-ದೂರದಲ್ಲಿರುವ ಸೂರ್ಯನುಳ್ಳ.ಹಿಮವಾನ್- ಹಿಮವುಳ್ಳ,ಹಿಮವಾನ್ಗಿರಿಃ-ಹಿಮವತ್ಪರ್ವತವು, ಸುವ್ಯಕ್ತಂ-ಸ್ಪಷ್ಟವಾಗಿ, ಸಾಂಪ್ರತಂ-ಈಗ, ಯಥಾರ್ಥನಾಮಾ-ಯಥಾರ್ಥವಾದ ಹೆಸರುಳ್ಳದ್ದಾಗಿಧೇ ॥೯॥ ಮಧ್ಯಾಹ್ನೆ-ಮಧ್ಯಾಹ್ನದಲ್ಲಿ, ಅತ್ಯಂತಸುಖಸಂಚಾರಾಃ-ಬಹಳ ಸುಖವಾಗಿ ಸಂಚಾರವುಳ್ಳ ಸ್ಪರ್ಶತಃ-ಸ್ಪರ್ಶದಿಂದ, ಸುಖಾಃ-ಸುಖಕರಗಳಾದ, ಸುಭಗಾದಿತ್ಯಾಃ-ಸುಖಸ್ಪರ್ಶೆಯುಳ್ಳ ಸೂರ್ಯನುಳ್ಳ, ಛಾಯಾಸಲಿಲದುರ್ಭಗಾಃ-ನೆರಳೂನೀರುಗಳೂ, ಅನಿಷ್ಟವಾಗುಳ್ಳ, ದಿವಸಾಃ-ದಿನಗಳು, ಭಾಂತಿ-ಹೊಳೆಯುತ್ತವೆ

---

ಯನ್ನೈದಿದನು ।೩। ಆ ಸಮಯದಲ್ಲಿ ಮಹಾಪರಾಕ್ರಮಶಾಲಿಯಾದ ಲಕ್ಷ್ಮಣನು ಸೀತಾದೇವಿಯಿಂದೊಡಗೂಡಿ ಕಲಶವಂ ತೆಗದುಕೊಂಡು ಹಿಂದುಬರುವವನಾಗಿ ಆಗ ಶ್ರೀರಾಮನಂಕುರಿತುನುಡಿವನದೆಂತೆನೆ,— ಎಲೈ ಅಣ್ಣನಾದ ಶ್ರೀರಾಮನೇ! ಯಾವದು ನಿನಗೆ ಇಷ್ಟವಾಗಿರುವದೋ ಯಾವ ಹಿಮಂತಋತುವಿನಿಂದ ಶುಭಕರವಾದ ಸಂವತ್ಸರವು ಅಲಂಕರಿಸಲ್ಪಟ್ಟಂತೆ ತೋರುವದೋ ಅಂಥಾ ಹಿಮಂತಋತುವು ಪ್ರಾಪ್ತವಾದಂಥಾದ್ದಾಯಿತು ।೪। ಲೋಕದಲ್ಲಿ ಈ ಸಮಯದಿ ಜನರೆಲ್ಲರೂ ಕಠಿಣವಾದ ಸ್ಪರ್ಶೆಯುಳ್ಳವರಾಗಿಧಾರೆ; ಧರಾತಲವು ಪೈರುಗಳಿಂದವ್ಯಾಪ್ತಮಾಗಿಧೆ; ಜಲವನ್ನುಪಯೋಗಿಸಲಾಗುವದಿಲ್ಲ,ಅಗ್ನಿಯು ಬಹುಸುಖಕರವಾಗಿರುವದು ಈ ಹಿಮಂತಕಾಲದಲ್ಲಿಗೈಯ್ಯಲ್ಪಟ್ಟ ಅಗ್ನಿಷ್ಟೋಮಾದಿ ಕ್ರತುಗಳುಳ್ಳ ಸತ್ಪುರುಷರು ನೂತನನೂತನವಾದ ಅನ್ನಹೋಮಾದಿಗಳಿಂದಲೂ ಪೂಜೆಗಳಿಂದಲೂ ಸಹಾ ಪಿತೃದೇವತೆಗಳ ಪೂಜೆಯಂಗೈದು ಪಾಪವಿನಿರ್ಮುಕ್ತರಾಗಿರುವರು ।೬। ಇದಲ್ಲದೆ ದೇಶಗಳು ಸಮೃದ್ಧವಾದ ಕೋರಿಕೆಗಳುಳ್ಳವುಗಳಾಗಿಯೂ, ಸಮೃದ್ಧವಾದ ದಧಿಕ್ಷೀರಗಳುಳ್ಳದ್ದಾಗಿ ಇರುವವು ಈಗ ಶತ್ರುಗಳಂ ಜಯಿಸಲಿಚ್ಛೆಯುಳ್ಳವರಾಗಿ ಅರಸರೆಲ್ಲರು ಸಂಚರಿಸುತ್ತಲಿರುವರು ।೭। ಇಷ್ಟುಮಾತ್ರವಲ್ಲದೆ ಸೂರ್ಯನು ಯಮನಿಂದ ಸೇವಿಸಲ್ಪಟ್ಟ ದಕ್ಷಿಣದಿಕ್ಕನ್ನು ದೃಢವಾಗಿ ಸೇವಿಸುತಿರುವನಾಗಲೂ, ಉತ್ತರದಿಕ್ಕು ತಿಲಕವಿಲ್ಲದ ಅಂಗನೆಯಂತೆ ಹೊಳೆಯುತ್ತಿರುವದು. ।೮। ಮತ್ತು ಸ್ವತಸ್ಸಿದ್ಧವಾಗಿ ಮಂಜುಗಡ್ಡೆಗಳಿಂದ ತುಂಬಿದ ಮತ್ತು ದೂರವಾದ ಸೂರ್ಯನುಳ್ಳ ಈ ಹಿಮವತ್ಪರ್ವತವೀಗ ಅನ್ವರ್ಥವಾದ ನಾಮಧೇಯವುಳ್ಳದ್ದಾಗಿಧೆ ।೯। ಮಧ್ಯಾಹ್ನಕಾಲದಲ್ಲಿ ಬಹು ಹಾಯಿಯಾಗಿ ಚಲಿಸುವವಾಗಿಯೂ ಸುಖಕರವಾಗಿಯೂ ಸುಖವಾದ ಸ್ಪರ್ಶೆಯುಳ್ಳ ಸೂರ್ಯನುಳ್ಳವುಗಳಾಗಿಯೂ, ಸ್ಪರ್ಶಿಸಲಸಾಧ್ಯವಾದ ನೆರಳು ನೀರುಸಹ ಉಳ್ಳವುಗಳಾಗಿಯೂ ಇರುವ ಈ ದಿವಸಗಳು; ಸ್ವಲ್ಪ ಬಿಸಿಯಾಗಿರುವ ಸೂರ್ಯನುಳ್ಳವುಗಳಾಗಿಯೂ ಮಂಜಿನಿಂದೊಡಗೂಡಿದವಾದಕಾರಣ ಪ್ರಬಲವಾದ

ಶೀತಾಸ್ಸಮಾರುತಾಃ। ಶೂನ್ಯಾರಣ್ಯಾಹಿಮಧ್ವಸ್ತಾದಿವಸಾಭಾಂತಿಸಾಂಪ್ರತಂ॥೧೧॥ ನಿವೃತ್ತಾಕಾಶಶಯನಾಃ ಪುಷ್ಯ ನೀತಾಹಿಮಾರುಣಾಃ। ಶೀತಾವೃದ್ಧತರಾಯಾಮಾಸ್ತ್ರಿಯಾಮಾಯಾಂತಿಸಾಂಪ್ರತಂ ॥೧೨॥ ರವಿಸಂಕ್ರಾಂತಸೌಭಾಗ್ಯಸ್ತುಷಾರಾರುಣಮಂಡಲಃ। ನಿಶ್ವಾಸಾಂಧಇವಾದರ್ಶಶ್ಚಂದ್ರಮಾನಪ್ರಕಾಶತೇ ॥೧೩॥ ಜ್ಯೋತ್ಸ್ನಾತುಷಾರಮಲಿನಾಪೌರ್ಣಮಾಸ್ಯಾಂನರಾಜತೇ। ಸೀತೇವಚಾತಪಶ್ಯಾಮಾಲಕ್ಷ್ಯತೇನತುಶೋಭತೇ ॥೧೪॥ ಪ್ರಕೃತ್ಯಾಶೀತಳಸ್ಪರ್ಶೋಹಿಮವಿದ್ಧಶ್ಚಸಾಂಪ್ರತಂ। ಪ್ರವಾತಿಪಶ್ಚಿಮೋವಾಯುಃಕಾಲೇದ್ವಿಗುಣಶೀತಳಃ ॥೧೫॥ ಬಾಷ್ಪಚ್ಛನ್ನಾನ್ಯರಣ್ಯಾನಿಯವಗೋಧೂಮವಂತಿಚ। ಶೋಭಂತೇಭ್ಯುದಿತೇಸೂರ್ಯೇನದದ್ಭಿಃಕ್ರೌಂಚಸಾರಸೈಃ ॥೧೬॥ ಖರ್ಜೂರಪುಷ್ಪಾಕೃತಿಭಿಶ್ಶಿರೋಭಿಃಪೂರ್ಣತಂಡುಲೈಃ। ಶೋಭಂತೇಕಿಂಚಿದಾನಮ್ರಾಶ್ಶಾಲಯಃಕನಕಪ್ರಭಾಃ ॥ ಮಯೂಖೈರುಪಸರ್ಪದ್ಭಿ

---

ಮೃದುಸೂರ್ಯಾಃ-ಕೊಂಚಬಿಸಿಯಾದ ಸೂರ್ಯನುಳ್ಳ, ಸನೀಹಾರಾಃ-ಮಂಜುಗಳಿಂ ದೊಡಗೂಡಿದ, ಪಟುಶೀತಾಃ-ಪ್ರಬಲವಾದ ಶೀತಸ್ಪರ್ಶವುಳ್ಳ, ಸಮಾರುತಾಃ-ಗಾಳಿಗಳಿಂದೊಡಗೂಡಿದ, ಶೂನ್ಯಾರಣ್ಯಾಃ-ಜನರಹಿತವಾದಅರಣ್ಯಗಳುಳ್ಳ, ದಿವಸಾಃ-ಹಗಲುಗಳು, ಸಾಂಪ್ರತಂ-ಈಗ ಹಿಮಧ್ವಸ್ತಾಃ-ಹಿಮದಿಂದ ವ್ಯಾಪ್ತಗಳಾದವುಗಳಾಗಿ, ಭಾಂತಿ-ಹೊಳೆಯುತವೇ ॥೧೧॥ ನಿವೃತ್ತಾಕಾಶಶಯನಾಃ-ನಿವೃತ್ತ-ಹೋಗಲಾಡಿಸಲ್ಪಟ್ಟ, ಆಕಾಶ-ಬೈಲಿನಲ್ಲಿ, ಶಯನಾಃ-ಮಲಗುವಿಕೆಯುಳ್ಳ, ಪುಷ್ಯನೀತಾಃ-ಪುಷ್ಯಮಾಸದಿಂದ ಕಳೆಯಲ್ಪಟ್ಟ (ಯದ್ವಾ-ಪುಷ್ಯನೀತಾಃ-ಪುಷ್ಯ-ಪೋಷಿಸತಕ್ಕ, ಶೀತನಿವಾರಕವಾದ ಉಪಚಾರಗಳಿಂದ, ನೀತಾಃ-ಕಳೆಯಲ್ಪಟ್ಟ) ಹಿಮಾರುಣಾಃ-ಹಿಮದಿಂದ ಕೆಂಪಾಗಿರುವ (ಅಂದರೇಮಲಿನವಾಗಿರುವ), ಶೀತಾಃ-ಥಣ್ಣಗಿರುವ, ವೃದ್ಧತರಾಯಾಮಾಃ-ಅತಿಪ್ರವೃದ್ಧವಾದ ದೈರ್ಘ್ಯವುಳ್ಳ, ತ್ರಿಯಾಮಾಃ-ರಾತ್ರಿಗಳು, ಸಾಂಪ್ರತಂ-ಈಗ, ಯಾಂತಿ ಬರುತ್ತವೇ ॥೧೨॥ ರವಿಸಂಕ್ರಾಂತಸೌಭಾಗ್ಯಃ-ಸೂರ್ಯನಿಂದ ಆಕ್ರಮಿಸಲ್ಪಟ್ಟ, ಸುಖಸ್ಪರ್ಶವುಳ್ಳ ತುಷಾರಾರುಣ ಮಂಡಲಃ-ಮಂಜಿನಿಂದ ವ್ಯಾಪ್ತವಾದ ಮಂಡಲವುಳ್ಳ, ಚಂದ್ರಮಾಃ-ಚಂದ್ರನು, ನಿಶ್ವಾಸಾಂಧಃ-ನಿಶ್ವಾಸ-ನಿಟ್ಟುಸುರುಗಳಿಂದ, ಅಂಧಃ-ಮಲಿನವಾದ, ಆದರ್ಶಇವ-ಕನ್ನಡಿಯಂತೆ, ನಪ್ರಕಾಶತೇ-ಪ್ರಕಾಶಿಸುವದಿಲ್ಲಾ ॥೧೩॥ ಪೌರ್ಣಮಾಸ್ಯಾಂ-ಪೌರ್ಣಮಿದಿವಸದಲ್ಲಿ, ಜ್ಯೋತ್ಸ್ನಾ-ಬೆಳದಿಂಗಳಿಂದ ಕೂಡಿದರಾತ್ರಿಯು, ತುಷಾರಮಲಿನಾ-ಮಂಜಿನಿಂದ ಮಾಲಿನ್ಯವುಳ್ಳದ್ದಾಗಿ, ನರಾಜತೇ-ಹೊಳಿಯುವದಿಲ್ಲಾ, ಆತಪಶ್ಯಾಮಾ-ಬಿಸಲಿನಿಂದ ಕಪ್ಪಾಗಿರುವ, ಸೀತೇವ-ಸೀತೆಯಂತೆ ಲಕ್ಷ್ಯತೇ-ಕಾಣಲ್ಪಡುತ್ತದೇ, ಸೀತೇವ-ಸೀತೆಯಂತೆ, ನಶೋಭತೇ-ಹೊಳೆಯುವದಿಲ್ಲಾ ॥೧೪॥ ಪ್ರಕೃತ್ಯಾ-ಸ್ವಭಾವದಿಂದ, ಶೀತಲಸ್ಪರ್ಶಃ-ತಣ್ಣಗಿರುವ ಸ್ಪರ್ಶಯುಳ್ಳ, ಸಾಂಪ್ರತಂ-ಈಗ, ಹಿಮವಿದ್ಧಶ್ಚ-ಮಂಜಿನಿಂದವ್ಯಾಪ್ತವಾದಂಥಾದ್ದಾಗಿ. ಪಶ್ಚಿಮೋವಾಯುಃ-ಪಶ್ಚಿಮದ ಗಾಳಿಯು, ಕಾಲೇ-ಪ್ರಾತಃಕಾಲದಲ್ಲಿ, ದ್ವಿಗುಣಶೀತಲಃ-ಎರಡಷ್ಟು ಶೈತ್ಯವುಳ್ಳದ್ದಾಗಿ, ಪ್ರವಾತಿ-ಬೀಸುತ್ತದೆ ॥೧೫॥ ಬಾಷ್ಪಚ್ಛನ್ನಾನಿ-ಉಷ್ಮಗಳಿಂದ ವ್ಯಾಪ್ತವಾದ, ಯವಗೋಧೂಮವಂತಿಚ-ಯವಧಾನ್ಯಗಳೂ, ಗೋಧೂಮಧಾನ್ಯಗಳೂ ಉಳ್ಳ, ಅರಣ್ಯಾನಿ-ಅರಣ್ಯಗಳು, ಸೂರ್ಯೇ-ಸೂರ್ಯನು, ಅಭ್ಯುದಿತೇಸತಿ-ಉದಯವಾಗುತಿರಲಾಗಿ, ನದದ್ಭಿಃ-ಧ್ವನಿಗೊಳಿಸುತಿರುವ, ಕ್ರೌಂಚಸಾರಸೈಃ-ಕ್ರೌಂಚಪಕ್ಷಿಗಳೂ ಸಾರಸಪಕ್ಷಿಗಳಿಂದ, ಶೋಭಂತೇ-ಶೋಭಿಸುತ್ತವೇ ॥೧೬॥ ಖರ್ಜೂರಪುಷ್ಪಾಕೃತಿಭಿಃ-ಖರ್ಜೂರದಪುಷ್ಪಗಳ ಆಕಾರದಂತೆ ಆಕಾರವುಳ್ಳ, ಪೂರ್ಣತಂಡುಲೈಃ-ಪೂರ್ಣವಾದ ತಂಡುಲಗಳುಳ್ಳ, ಶಿರೋಭಿಃ-ತೆನೆಗಳಿಂದ. ಕಿಂಚಿತ್-ಸ್ವಲ್ಪವಾಗಿ, ಆನಮ್ರಾಃ-ಬೊಗ್ಗಿದ, ಕನಕಪ್ರಭಾಃ-ಚಿನ್ನದ ಬಣ್ಣದಂತೆ ಕಾಂತಿಯುಳ್ಳ. ಶಾಲಯಃ-ನೆಲ್ಲುಪೈರುಗಳು, ಶೋಭಂತೇ-ಹೊಳೆಯುತ್ತವೇ ॥೧೭॥ ದೂರಂ-ದೂರವಾಗಿ, ಅಭ್ಯುದಿತಃ-ಉದಯಿಸಿದ, ಸೂರ್ಯಃ-ಸೂರ್ಯನು, ಉಪಸರ್ಪದ್ಭಿಃ-ಪ್ರಸರಿಸುತಿರುವ. ಹಿಮನೀ

---

ಶೈತ್ಯವುಳ್ಳವುಗಳಾಗಿಯೂ, ಗಾಳಿಯಿಂದ ಯುಕ್ತವಾಗಿಯೂ ಜನರಹಿತವಾದ ಅರಣ್ಯಗಳುಳ್ಳವುಗಳಾಗಿಯೂ ಹಿಮದಿಂದ ವ್ಯಾಪ್ತವಾಗಿಯೂ ಇರುವಂಥಾವವುಗಳಾಗಿ ಹೊಳೆಯುತ್ತಿವೆ ॥೧೧॥ ಇದಲ್ಲದೆ ಹೋಗಲಾಡಿಸಲ್ಪಟ್ಟ ಬೈಲಲ್ಲಿ ಮಲುಗುವಣ ವುಳ್ಳವವುಗಳಾಗಿಯೂ, ಪುಷ್ಯಮಾಸದಿಂದ ಕಳೆಯಲ್ಪಡುವವಾಗಿಯೂ, ಹಿಮದಿಂದ ಮಲಿನವಾದವುಗಳಾಗಿಯೂ, ಇರುವ ಅಧಿಕವಾದ ರಾತ್ರಿಗಳು ಈ ಗಬರುತ್ತಲಿವೆ! ॥೧೨॥ ಸೂರ್ಯ ಸಂಕ್ರಾಂತದಿಂದ ಸುಖಕರವಾದ ಸ್ಪರ್ಶಯುಳ್ಳ ಮತ್ತು ಹಿಮದಿಂದ ಕೆಂಪೇರಿದ ಮಂಡಲವುಳ್ಳ ಚಂದಿರನು; ನಿಟ್ಟುಸುರುಗಳಿಂದ ಮಲಿನವಾದ ದರ್ಪಣದಂತೆ ಹೊಳೆವದಿಲ್ಲ ॥೧೩॥ ಮತ್ತು ಪೌರ್ಣಮಾಸ್ಯೆಯಲ್ಲಿ ಬೆಳದಿಂಗಳಿಂ ದೊಡಗೂಡಿದ ರಾತ್ರಿಯು ಹಿಮದಿಂ ಮಲಿನವಾದದ್ದಾಗಿ; ಬಿಸಿಲಿನಿಂದ ಬಾಡಿ ಕಪ್ಪಾದ ಮುಖವುಳ್ಳ ಸೀತಾದೇವಿಯಂತೆ ಕಂಗೊಳಿಸುವದಿಲ್ಲ ॥೧೪॥ ಇಷ್ಟುಮಾತ್ರವಲ್ಲದೆ ಸ್ವಭಾವದಿಂದಲೆ ಥಂಡಿಯಾಗಿರುವ ಸ್ಪರ್ಶಯುಳ್ಳ ಮತ್ತು ಈಗ ಹಿಮದಿಂ ವ್ಯಾಪ್ತವಾದ ಪಶ್ಚಿಮದಿಕ್ಕಿನ ದೆಶೆಯಿಂದ ಬರುವ ಘಾಳಿಯು ಪ್ರಾತಃಕಾಲದಲ್ಲಿ ದ್ವಿಗುಣಿತವಾದ ಶೈತ್ಯವುಳ್ಳದ್ದಾಗಿ ಬೀಸುವದು ॥೧೫॥ ಹಬೆಯಿಂದ ವ್ಯಾಪ್ತವಾದ ಮತ್ತು ಯವೆಗಳು ಗೋಧಿವೆಯೂ ಸಹ ಉಳ್ಳ ಅರಣ್ಯಗಳು, ಸೂರ್ಯೋದಯವಾಗಲೂ ಕ್ರೌಂಚಪಕ್ಷಿಗಳಿಂದಲೂ ಸಾರಸಪಕ್ಷಿಗಳಿಂದಲೂ ಸಹ ಕಂಗೊಳಿಸುತ್ತಲಿವೆ ॥೧೬॥ ಮತ್ತು ಖರ್ಜೂರಪುಷ್ಪಂಗಳ ಆಕಾರವುಳ್ಳ, ತುಂಬಿರುವ ತಂಡುಲಂಗಳುಳ್ಳ, ಸುವರ್ಣದಕಾಂತಿಯಂತೆ ಕಾಂತಿ

ಹಿಮನೀಹಾರಸಂವೃತೈಃ । ದೂರಮಭ್ಯುದಿತಸ್ಸೂರ್ಯಶ್ಶಶಾಂಕಇವಲಕ್ಷ್ಯತೇ॥೧೮॥ ಅಗ್ರಾಹ್ಯವೀರ್ಯಃಪೂರ್ವಾಹ್ಣೇ ಮಧ್ಯಾಹ್ನೇಸ್ಪರ್ಶತಸ್ಸುಖಃ । ಸಂರಕ್ತಃಕಿಂಚಿದಾಪಾಂಡುರಾತಪಶ್ಶೋಭತೇಕ್ಷಿತೌ ॥೧೯॥ ಅವಶ್ಯಾಯನಿಪಾತೇನ ಕಿಂಚಿತ್ಪ್ರಕ್ಲಿನ್ನಶಾದ್ವಲಾ । ವನಾನಾಂಶೋಭತೇಭೂಮಿರ್ನಿವಿಷ್ಟತರುಣಾತಪಾ ॥೨೦॥ ಸ್ಪೃಶಂಸ್ತುವಿಪುಲಂಶೀತ ಮುದಕಂದ್ವಿರದಸ್ಸುಖಂ । ಅತ್ಯಂತತೃಷಿತೋವನ್ಯಃಪ್ರತಿಸಂಹರತೇಕರಂ॥೨೧॥ ಏತೇಹಿಸಮುಪಾಸೀನಾವಿಹಗಾಜಲ ಚಾರಿಣಃ । ನಾವಗಾಹಂತಿಸಲಿಲಮಪ್ರಗಲ್ಭಾಇವಾಹವಂ ॥೨೨॥ ಅವಶ್ಯಾಯತಮೋನದ್ಧಾನೀಹಾರತಮಸಾವೃತಾಃ । ಪ್ರಸುಪ್ತಾಇವಲಕ್ಷ್ಯಂತೇವಿಪುಷ್ಪಾವನರಾಜಯಃ ॥೨೩॥ ಬಾಷ್ಪಸಂಛನ್ನಸಲಿಲಾರುತವಿಜ್ಞೇಯಸಾರಸಾಃ । ಹಿಮಾ ರ್ದ್ರವಾಲುಕೈಸ್ತೀರೈಸ್ಸರಿತೋಭಾಂತಿಸಾಂಪ್ರತಂ ॥೨೪॥ ತುಷಾರಪತನಾಚ್ಚೈವಮೃದುತ್ವಾದ್ಭಾಸ್ಕರಸ್ಯಚ ।ಶೈ ತ್ಯಾದಗಾಗ್ರಸ್ಥಮಪಿಪ್ರಾಯೇಣರಸವಜ್ಜಲಂ॥೨೫॥ ಜರಾಜರ್ಜರಿತೈಃಪದ್ಮೈಶ್ಶೀರ್ಣಕೇಸರಕರ್ಣಿಕೈಃ।ನಾಳಶೇಷೈರ್ಹಿ

---

ಹಾರಸಂವೃತೈಃ-ಥಣ್ಣಗಿರುವ ಮಂಜಿನಿಂದ ವ್ಯಾಪ್ತವಾದ, ಮಯೂಖೈಃ-ಕಿರಣಗಳಿಂದ, ಶಶಾಂಕಇವ-ಚಂದ್ರನಂತೆ, ಲಕ್ಷ್ಯತೇ-ಕಾಣಲ್ಪಡುತ್ತಾ ನೇ ॥೧೮॥ ಪೂರ್ವಾಹ್ಣೇ-ಪ್ರಾತಃಕಾಲದಲ್ಲಿ, ಅಗ್ರಾಹ್ಯವೀರ್ಯಃ-ಕೋಮಲವಾಗಿರುವ ಸಾಮರ್ಥ್ಯವುಳ್ಳ, ಮಧ್ಯಾಹ್ನೇ-ಮಧ್ಯಾಹ್ನಕಾಲದಲ್ಲಿ, ಸ್ಪರ್ಶತಃ- ಸ್ಪರ್ಶಮಾತ್ರದಿಂದ, ಸುಖಃ-ಸುಖಕರವಾದ, ಸಂರಕ್ತಃ-ಕೊಂಚಕೆಂಪಾಗಿರುವ, ಕಿಂಚಿತ್-ಸ್ವಲ್ಪವಾಗಿ, ಆ ಪಾಂಡುಃ-ಪಾಂಡುರವರ್ಣವುಳ್ಳ, ಆತ ಪಃ-ಬಿಸಲು.ಕ್ಷಿತೌ-ನೆಲದಲ್ಲಿ, ಶೋಭತೇ-ಹೊಳೆಯುತ್ತದೆ ॥೧೯॥ ಅವಶ್ಯಾಯನಿಪಾತೇನ- ಮಂಜಿನ ಬೀಳುವಿಕೆಯಿಂದ, ಕಿಂಚಿತ್-ಸ್ವಲ್ಪವಾಗಿ, ಪ್ರಕ್ಲಿ ನ್ನಶಾದ್ವಲಾ-ನೆನಿಯಲ್ಪಟ್ಟ ಹಶೀಹುಲ್ಲುಗಳುಳ್ಳ, ನಿವಿಷ್ಟತರುಣಾತಪಾ-ಪ್ರವೇಶಿಸಲ್ಪಟ್ಟ ಎಳೆಬಿಸಲುಳ್ಳ. ವನಾನಾಂ-ಅರಣ್ಯಗಳ, ಭೂಮಿಃ- ನೆಲವು. ಶೋಭತೇ-ಹೊಳೆಯುತ್ತದೆ ॥೨೦॥ ಅತ್ಯಂತತೃಷಿತಃ-ಬಹಳ ನೀರಡಿಕೆಯುಳ್ಳ, ವನ್ಯಃ-ವನದಲ್ಲಿ ಹುಟ್ಟಿದ ದ್ವಿರದಃ-ಆನೆಯು, ವಿಪುಲಂ- ವಿಸ್ತಾರವಾದ, ಶೀತಂ-ಥಣ್ಣಗಿರುವ. ಉದಕಂ-ಉದಕವನ್ನು, ಸುಖಂ-ಸುಖವಾಗಿ. ಸ್ಪೃಶನ್-ಸ್ಪರ್ಶಮಾಡಿದಂಥಾದ್ದಾಗಿ, ಕರಂ-ಸೊಂಡಿಲವನ್ನು ಪ್ರತಿಸಂಹರತೇ-ಹಿಂದಕ್ಕೆ ತೆಗೆದುಕೊಳ್ಳುತ್ತದೆ ॥೨೧॥ ಸಮುಪಾಸೀನಾಃ-ಚನ್ನಾಗಿ ಕುಳಿತುಕೊಂಡಿರುವ, ಜಲಚಾರಿಣಃ-ಜಲದಲ್ಲಿ ಸಂಚಾರಶೀಲಗಳಾ ದ, ಏತೇವಿಹಗಾಃ-ಈ ಹಕ್ಕಿಗಳು. ಅಪ್ರಗಲ್ಭಾಃ-ಯುದ್ಧಾಭ್ಯಾಸವಾಡದಿರುವವರು, ಆಹವಮಿವ-ಕಾಳಗವನ್ನಂತೆ, ಸಲಿಲಂ-ನೀರಿನನ್ನು, ನಾವಗಾಹಂ ತಿ-ಪ್ರವೇಶಿಸುವದಿಲ್ಲ ॥೨೨॥ ಅವಶ್ಯಾಯತಮೋನದ್ಧಾಃ-ಹಿಮೋದಕವೆಂಬ ಕತ್ತಲಿನಿಂದ ವ್ಯಾಪ್ತವಾದ. ನೀಹಾರತಮಸಾ-ಮಂಜುವೆಂಬ ಅಂಧಕಾರ ದಿಂದ, ಆವೃತಾಃ-ಮುಚ್ಚಿಕೊಳ್ಳಲ್ಪಟ್ಟ, ವಿಪುಷ್ಪಾಃ-ಹೋದಹುವ್ವುಗಳುಳ್ಳ. ವನರಾಜಯಃ-ಅರಣ್ಯಪಂಙ್ತಿಗಳು, ಪ್ರಸುಪ್ತಾಇವ-ಇದ್ದೆಹೋ ಗುವವಗಳಂತೆ, ಲಕ್ಷ್ಯಂತೇ-ಕಾಣಲ್ಪಡುತ್ತವೆ ॥೨೩॥ ಬಾಷ್ಪಸಂಛನ್ನಸಲಿಲಾಃ-ನೀರಿನಮ್ಯಾಲೆ ಬರತಕ್ಕ ಹೊಗೆಗಳಿಂದ ಮುಚ್ಚಲ್ಪಟ್ಟ ನೀರುಗಳು ಳ್ಳ, ರುತವಿಜ್ಞೇಯಸಾರಸಾಃ-ಧ್ವನಿಮಾತ್ರದಿಂ ತಿಳಿಯತಕ್ಕ ಸಾರಸಪಕ್ಷಿಗಳುಳ್ಳ, ಸರಿತಃ-ನದಿಗಳು. ಹಿಮಾರ್ದ್ರವಾಲುಕೈಃ-ಹಿಮದಿಂದ ನೆನದ್ದ ಹೋದ ಮರಳು ದಿನ್ನೆಗಳುಳ್ಳ, ತೀರೈಃ-ದಡಗಳಿಂದ, ಸಾಂಪ್ರತಂ-ಈಗ, ಭಾಂತಿ-ಹೊಳೆಯುತ್ತವೆ ॥೨೪॥ ತುಷಾರಪತನಾಚ್ಚ-ಮಂಜಿನ ಬೀ ಳುವಿಕೆಯುದೆಶೆಯಿಂದ, ಭಾಸ್ಕರಸ್ಯ-ಸೂರ್ಯನ, ಮೃದುತ್ವಾಚ್ಚ-ಮಾರ್ದವದದೆಶೆಯಿಂದಲೂ, ಶೈತ್ಯಾಚ್ಚ-ಶೀತಸ್ಪರ್ಶದದೆಶೆಯಿಂದಲೂ, ಅಗಾಗ್ರಸ್ಥಮಪಿ-

---

ಯುಳ್ಳ, ಸ್ವಲ್ಪವಾಗಿ ಒಗ್ಗಿರುವ ಬೆಳದ ಗದ್ದೆಗಳು ಅಲ್ಲಲ್ಲಿ ಹೊಳೆಯುತ್ತಲಿವೆ ॥೧೭॥ ಇದಲ್ಲದೆ ದೂರದಲ್ಲಿ ಉದ ಯುವನ್ನೈದಿದ ಸೂರ್ಯನು ಪ್ರಸರಿಸುತಲಿರುವ ಛಡಿಯಾದ ಹಿಮದಿಂದ ವ್ಯಾಪ್ತವಾಗಿರುವ ಕಿರಣಗಳಿಂದ ಚಂದಿ ರನ ತೆನದಿ ಕಾಣುತ್ತ ಲಿಧಾನೆ ॥೧೮॥ ಇಷ್ಟುಮಾತ್ರವಲ್ಲದೆ ಮುಂಝಾಮಿನಲ್ಲಿ ಸ್ವಲ್ಪ ಸಾಮರ್ಥ್ಯವುಳ್ಳದ್ದಾಗಿ ಯೂ, ಮಧ್ಯಾಹ್ನದಲ್ಲಿ ಸ್ಪರ್ಶಯಿಂದ ಸುಖವನ್ನೀಯುವದಾಗಿಯೂ, ಕೊಂಚ ಕೆಂಪಾಗಿಯೂ, ಬಿಳುಪಾಗಿ ಯೂ ಇರುವ ವರ್ಣವುಳ್ಳದ್ದಾಗಿಯೂ, ಬಿಸಿಲುನೆಲದಲ್ಲಿ ಬೆಳಗುತಿರುವದು ॥೧೯॥ ಹಿಮಬೀಳುವದರಿಂದ ಸ್ವಲ್ಪ ತೋಯಿಸಲ್ಪಟ್ಟ ಹಶೀಹುಲ್ಲುಗಳುಳ್ಳ ಮತ್ತು ಪ್ರವೇಶಿಸದ ಯಳೇ ಬಿಸಿಲುಳ್ಳ ವನದ ಭೂಪ್ರದೇಶವು ಕಂಗೊಳಿಸು ತ್ತಲಿಧೆ ॥೨೦॥ ಮತ್ತು ಬಹು ಪಾನೇಚ್ಛೆಯುಳ್ಳ ಕಾಡಾನೆಯು ಥಂಡಿಯಾಗಿರುವ ಮತ್ತು ವಿಸ್ತಾರವಾದ ಜಲವ ನ್ನು ಸುಖವಾಗಿ ಸೊಂಡಿಲದಿಂದ ಸ್ಪೃಶಿಸುತ್ತಿರುವದಾಗಿ, ಆ ಸೊಂಡಿಲವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಲಿಧೆ ॥೨೧॥ ಇದಲ್ಲದೆ ಜಲಸಂಚಾರ ಶೀಲವಾದ ಈ ಪಕ್ಷಿಗಳು; ಕಾಳಗವನ್ನಭ್ಯಾಸಮಾಡದಿರುವ ಭಟರು ರಣರಂಗವಂ ಪ್ರವೇಶಿಸದೆ ಇರುವಂತೆ ಪ್ರವೇಶಂ ಗೈಯದೆ ಸುಮ್ಮನೆ ಕುಳಿತಿರುವಂಥಾವವುಗಳಾಗಿವೆ ॥೨೨॥ ಇಷ್ಟು ಮಾತ್ರ ವಲ್ಲದೆ ಹಿಮೋದಕವೆಂಬ ತಮಸ್ಸಿನಿಂದ ವ್ಯಾಪ್ತವಾದ ಮತ್ತು ಮಂಜೆಂಬ ಅಂಧಕಾರದಿಂದ ಮುಚ್ಚಲ್ಪಟ್ಟ, ಪುಷ್ಪಂ ಗಳಿಲ್ಲದವನಪಙ್ತಿಗಳು ನಿದ್ರಿಸುವಂತೆ ಕಾಣುತ್ತಲಿವೆ ॥೨೩॥ ಮತ್ತು ನೀರಿನಮೇಲೆ ಬರುತಿರುವ ಹೊಗೆಯಿಂದ ವ್ಯಾಪ್ತವಾದ ಉದಕವುಳ್ಳ ಶಬ್ದದಿಂದ ತಿಳಿಯತಕ್ಕ ಸಾರಸಪಕ್ಷಿಗಳುಳ್ಳ ನದಿಗಳು, ಹಿಮದಿಂದ ಆರ್ದ್ರವಾದ

ಮಧ್ವಸ್ತೈರ್ನಭಾಂತಿಕಮಲಾಕರಾಃ ।೨೫। ಅಸ್ಮಿಂಸ್ತುಪುರುಷವ್ಯಾಘ್ರಃ ಕಾಲೇದುಃಖಸಮನ್ವಿತಃ । ತಪಶ್ಚರತಿಧರ್ಮಾತ್ಮಾತ್ವದ್ಭಕ್ತ್ಯಾಭರತಃಪುರೇ ।೨೬। ತ್ಯಕ್ತ್ವಾರಾಜ್ಯಂಚಮಾನಂಚಭೋಗಾಂಶ್ಚವಿವಿಧಾನ್ಬಹೂನ್ । ತಪಸ್ವೀನಿಯತಾಹಾರಃಶೇತೇಶೀತೇಮಹೀತಲೇ ।೨೭। ಸೋಪಿವೇಳಾಮಿಮಾಂನೂನಮಭಿಷೇಕಾರ್ಥಮುದ್ಯತಃ । ವೃತಃಪ್ರಕೃತಿಭಿರ್ನಿತ್ಯಂ ಪ್ರಯಾತಿಸರಯೂಂನದೀಂ ।೨೮। ಅತ್ಯಂತಸುಖಸಂವೃದ್ಧಸ್ಸುಕುಮಾರಸ್ಸುಖೋಚಿತಃ । ಕಥನ್ನ್ವಪರರಾತ್ರೇಷು ಸರಯೂಮವಗಾಹತೇ ।೨೯। ಪದ್ಮಪತ್ರೇಕ್ಷಣೋವೀರಶ್ಶ್ಯಾಮೋನಿರುದರೋಮಹಾನ್ । ಧರ್ಮಜ್ಞಸ್ಸತ್ಯವಾದೀಚಹ್ರೀನಿಷೇಧೋಜಿತೇಂದ್ರಿಯಃ । ಪ್ರಿಯಾಭಿಭಾಷೀಮಧುರೋದೀರ್ಘಬಾಹುರರಿಂದಮಃ । ಸಂತ್ಯಜ್ಯವಿವಿಧಾನ್ಭೋಗಾನಾರ್ಯಂಸ

---

ಬೆಟ್ಟದತುದಿಯಲ್ಲಿದ್ದರೂ, ಜಲಂ-ಜಲವು, ಪ್ರಾಯೇಣ-ಬಹುತರವಾಗಿ, ರಸವತ್-ರುಚಿಕರವಾಗಿಧೆ ||೨೪|| ಜರಾಜರ್ಝರಿತೈಃ-ವಾರ್ಧಿಕಾವಸ್ಥೆಯಿಂದ ಶಿಥಿಲವಾಗಿ ಮಾಡಲ್ಪಟ್ಟ, ಶೀರ್ಣಕೇಸರಕರ್ಣಿಕೈಃ-ಶಿಥಿಲವಾದ ಕಿಂಜಲ್ಕಗಳೂ ಮಧ್ಯದಲ್ಲಿರುವ ದಿಂಡೂಸಹ, ನಾಳಶೇಷೈಃ-ಕೋಳವಿಗಳೇ ವಿಶೇಷವಾಗುಳ್ಳ, ಹಿಮಧ್ವಸ್ತೈಃ-ಮಂಜಿನಿಂದ ನಾಶಗೊಳಿಸಲ್ಪಟ್ಟ. ಪದ್ಮೈಃ-ತಾವರೇಹುವ್ವುಗಳಿಂದ, ಕಮಲಾಕರಾಃ-ಪದ್ಮಸರೋವರಗಳು, ನಭಾಂತಿ-ಹೊಳೆಯುವದಿಲ್ಲ ||೨೫|| ಅಸ್ಮಿನ್ಕಾಲೇತು-ಇಂಥಾ ಹಿಮಕಾಲದಲ್ಲಿಆದರೆ. ಪುರುಷವ್ಯಾಘ್ರಃ-ಪುರುಷಶ್ರೇಷ್ಠನಾದ, ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳ, ಭರತಃ-ಭರತನು, ತ್ವದ್ಭಕ್ತ್ಯಾ-ನಿನ್ನಲ್ಲಿ ಭಕ್ತಿಯಿಂದ, ದುಃಖಸಮನ್ವಿತಃ-ವ್ಯಸನದಿಂ ಕೂಡಿದವನಾಗಿ, ಪುರೇ-ಅಯೋಧ್ಯಾಪಟ್ಟಣದಲ್ಲಿ. ತಪಃ-ತಪವನ್ನು. ಚರತಿ-ಮಾಡುತ್ತಾನೆ ||೨೬|| ನಿಯತಾಹಾರಃ-ನಿಯಮಿಸಲ್ಪಟ್ಟ ಆಹಾರವುಳ್ಳವನಾಗಿ, ತಪಸ್ವೀ-ತಪೋವಂತನಾಗಿ, ರಾಜ್ಯಂಚ-ಪ್ರಭುತ್ವವನ್ನು, ಮಾನಂಚ-ರಾಜಪುತ್ರನೆಂಬ ಅಹಂಕಾರವನ್ನು, ವಿವಿಧಾನ್-ನಾನಾಬಗೆಗಳಾದ, ಬಹೂನ್-ಅನೇಕಗಳಾದ, ಭೋಗಾನ್-ಸ್ರಕ್ಚಂದನವನಿತಾದಿ ಭೋಗಗಳನ್ನು. ತ್ಯಕ್ತ್ವಾ-ಬಿಟ್ಟು, ಶೀತೆ-ಥಣ್ಣಗಿರುವ, ಮಹೀತಲೇ-ಭೂಪ್ರದೇಶದಲ್ಲಿ, ಶೇತೆ-ಮಲಗುತ್ತಾನೆ ||೨೭|| ಸೋಪಿ-ಆ ಭರತನೂಕೂಡ, ಇಮಾಂವೇಳಾಂ-ಈ ಕಾಲವನ್ನು, ಪ್ರಾಪ್ಯ-ಹೊಂದಿ, (ಯದ್ವಾ-ಇಮಾಂವೇಳಾಂ-ಈ ಕಾಲದಲ್ಲಿ,) ಅಭಿಷೇಕಾರ್ಥಂ-ಸ್ನಾನಾರ್ಥವಾಗಿ, ಉದ್ಯತಃ-ಉದ್ಯುಕ್ತನಾಗಿ. ಪ್ರಕೃತಿಭಿಃ-ಮಂತ್ರಿಗಳೊಡನೆ, ವೃತಃ-ಸುತ್ತಲ್ಪಟ್ಟವನಾಗಿ, ನಿತ್ಯಂ-ನಿರಂತರವು. ಸರಯೂಂನದೀಂ-ಸರಯೂನದಿಯನ್ನುಕುರಿತು, ಪ್ರಯಾತಿ-ಹೋಗುತ್ತಾನೆ ||೨೮|| ಅತ್ಯಂತಸುಖಸಂವೃದ್ಧಃ-ಬಹಳ ಸುಖದಿಂದಲೇ ಬೆಳದಂಥಾ, ಸುಕುಮಾರಃ-ಮೃದುಸ್ವಭಾವವುಳ್ಳ, ಸುಖೋಚಿತಃ-ಸುಖಕ್ಕೆ ಯೋಗ್ಯನಾದ. ಭರತಃ-ಭರತನು, ಅಪರರಾತ್ರೇಷು-ಬೆಳಗಿನಝಾವಿನ ರಾತ್ರಿಗಳಲ್ಲಿ, ಸರಯೂಂ-ಸರಯೂನದಿಯಲ್ಲಿ. ಕಥಂ-ಹ್ಯಾಗೆ. ಅವಗಾಹತೇ-ಸ್ನಾನಮಾಡುತ್ತಾನೆಯೋ ||೨೯|| ಪದ್ಮಪತ್ರೇಕ್ಷಣಃ-ಕಮಲದಳಗಳಂತೆ ನೇತ್ರಗಳುಳ್ಳ, ವೀರಃ-ಶೂರನಾದ ಶ್ಯಾಮಃ-ಶ್ಯಾಮಲವರ್ಣವುಳ್ಳ, ನಿರುದರಃ-ಸೂಕ್ಷ್ಮವಾದ ಉದರವುಳ್ಳ, ಮಹಾನ್-ದೃಢಾಂಗಿಯಾದ. (ಯದ್ವಾ-ಮಹಾನ್-ಬುದ್ಧಿಯಲ್ಲಿ ಔದಾರ್ಯವುಳ್ಳವನಾದ, ಧರ್ಮಜ್ಞಃ-ಧರ್ಮವನ್ನು ತಿಳಿದಿರುವ, ಸತ್ಯವಾದೀಚ-ಸತ್ಯವಚನವುಳ್ಳ, ಹ್ರೀನಿಷೇಧಃ-ನಾಚಿಕೆಯಿಂದ ಪರಸ್ತ್ರೀದರ್ಶನಾದಿಗಳನ್ನು ನಿಷೇಧಿಸುತ್ತಿರುವ, ಜಿತೇಂದ್ರಿಯಃ-ಜಯಿಸಲ್ಪಟ್ಟ ಜ್ಞಾನೇಂದ್ರಿಯ ವ್ಯಾಪಾರವುಳ್ಳ, ಪ್ರಿಯಾಭಿಭಾಷೀ-ಇಷ್ಟವಾಗಿ ಮಾತಾಡುತ್ತಿರುವ, ಮಧುರಃ-ಸುಂದರನಾ

---

ಸೈಕತವುಳ್ಳ ತೀರಂಗಳಿಂದ ಬೆಳಗುತ್ತಲಿವೆ ।೨೩। ಎಲೈ ಅಣ್ಣನಾದ ಶ್ರೀರಾಮನೇ! ಮಂಜುಬೀಳುವುದರಿಂದಲೂ ಸೂರ್ಯನು ತಪಿಸದಿರುವಣದ ರಿಂದಲೂಸಹ ಪರ್ವತದ ಶಿಖರದಲ್ಲಿರುವ ಜಲವೂಕೂಡಾ ಬಹುರುಚಿಯಾಗಿಧೆ ।೨೪। ಮುತ್ತು ಮುದಿತನದಿಂದ ಶೈಥಿಲ್ಯವನ್ನೈದಿದ ಕಿಂಜಲ್ಕಂಗಳು ದಿಂಡು ಸಹ ಉಳ್ಳ, ಉಳದಿರುವ ಕೋಳವಿಯುಳ್ಳ, ಮಂಜಿನಿಂದ ಉಪಹತವಾದ ತಾವರೆ ಹುವ್ವುಗಳಿಂದ ಪದ್ಮಸರೋವರಂಗಳು ಹೊಳೆವದಿಲ್ಲ ।೨೫। ಈ ಕಾಲದಲ್ಲಾದರೆ ಧರ್ಮಾತ್ಮನಾದ ಭರತನು ನಿನ್ನಭಕ್ತಿಯಿಂದ ವ್ಯಸನಾಕ್ರಾಂತನಾಗಿ ಅಯೋಧ್ಯಾ ಪಟ್ಟಣದಲ್ಲಿ ತಪಸ್ಸಂಗೈಯ್ಯುತಲಿಧಾನೆ ।೨೬। ಅದು ಹ್ಯಾಗಂದರೆ;--ಮಿತವಾದ ಆಹಾರವುಳ್ಳವನಾಗಿಯೂ. ತಪೋವಂತನಾಗಿಯೂ ಇರುವವನಾಗಿ, ರಾಜ್ಯವನ್ನೂ ರಾಜಪುತ್ರನೆಂಬ ಅಹಂಕಾರವನ್ನೂ, ನಾನಾವಿಧವಾದ ಭೋಗಂಗಳನ್ನೂ ಸಹ ತೊರೆದು ಥಂಡಿಯಾಗಿರುವ ನೆಲದಲ್ಲಿ ಮಲಗುತ್ತಲಿಧಾನೆ ।೨೭। ಎಲೈ ಶ್ರೀರಾಮನೇ! ಭರತನೂ ಕೂಡಾ ಈ ಕಾಲದಲ್ಲಿ ಸ್ನಾನಂಗೈಯ್ಯುವದಕ್ಕಾಗಿ, ಮಂತ್ರಿಗಳೊಡಗೂಡಿ ಪ್ರತಿದಿನದಲ್ಲಿಯೂ ಸರಯೂನದಿಗೆ ಸಾರುವನು ।೨೮। ಹಾಹಾ! ಯೇನುಹೇಳಲಿ? ಬಹು ಸುಖದಿಂದ ಬೆಳದವನಾಗಿಯೂ ಸುಕುಮಾರನಾಗಿಯೂ, ಸುಖವನ್ನನುಭವಿಸುವದಕ್ಕೆ ಅರ್ಹನಾಗಿಯೂ ಇರುವ ನಮ್ಮ ಭರತನು ಬೆಳಗಿನ ಝಾವಿನಲ್ಲಿ ಸರಯೂನದಿಯೊಳು ಯೆಂತು ಸ್ನಾನಂಗೈಯುತಲಿಧಾನೆಯೋ ಯೇನೋ ।೨೯। ತಾವರೇ ಯೆಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವನಾಗಿಯೂ, ಶೂರನಾಗಿಯೂ, ಶ್ಯಾಮಲವರ್ಣವುಳ್ಳವನಾಗಿಯೂ, ಸೂಕ್ಷ್ಮವಾದ ಹೊಟ್ಟೆಯುಳ್ಳವನಾಗಿಯೂ, ಮಹಾಬುದ್ಧಿಶಾಲಿಯಾಗಿಯೂ, ಸ್ಥೂಲಸೂಕ್ಷ್ಮರೂಪವಾಗಿರುವ ಧರ್ಮಂಗಳಂ ಬಲ್ಲವನಾಗಿಯೂ, ಸಂಕಟಕಾಲದಲ್ಲಿಯೂ ಸಹ ಸತ್ಯವಚನವನ್ನೇ ನುಡಿವವನಾಗಿಯೂ, ಲಜ್ಜೆಯಿಂದ ಪರಸ್ತ್ರೀದರ್ಶನಾದಿಗಳಂ ಪರಿತ್ಯಜಿಸಿದವನಾಗಿಯೂ

ರ್ವ್ಯಾತ್ಮನಾಶ್ರಿತಃ ।೩೦॥ ಜಿತಸ್ಸ್ವರ್ಗಸ್ತವಭ್ರಾತ್ರಾಭರತೇನಮಹಾತ್ಮನಾ। ವನಸ್ಥಮಪಿತಾಪಸ್ಯೇಯಸ್ತ್ವಾಮನುವಿಧೀಯತೇ ।೩೧। ನಪಿತ್ರ್ಯಮನುವರ್ತಂತೇಮಾತೃಕಂದ್ವಿಪದಾಇತಿ। ಖ್ಯಾತೋಲೋಕಪ್ರವಾದೋಯಂಭರತೇನಾನ್ಯಥಾಕೃತಃ । ೩೨। ಭರ್ತಾದಶರಥೋಯಸ್ಯಸಾಧುಶ್ಚಭರತಸ್ಸುತಃ। ಕಥನ್ನುಸಾಂಬಾಕೈಕೇಯೀತಾದೃಶೀಕ್ರೂರಶೀಲಿನೀ ।೩೩॥ ಇತ್ಯೇವಂಲಕ್ಷ್ಮಣೇವಾಕ್ಯಂಸ್ನೇಹಾದ್ಬ್ರುವತಿಧಾರ್ಮಿಕೇ । ಪರಿವಾದಂಜನನ್ಯಾಸ್ತಮಸಹನ್ರಾಘವೋಬ್ರವೀತ್ ।೩೪॥ ನತೇಂಬಾಮಧ್ಯಮಾತಾತಗರ್ಹಿತವ್ಯಾಕಥಂಚನ। ತಾಮೇವೇಕ್ಷ್ವಾಕುನಾಥಸ್ಯಭರತಸ್ಯಕಥಾಂಕುರು ।೩೫॥ ನಿಶ್ಚಿತಾಪಿಹಿಮೇಬುದ್ಧಿರ್ವನವಾಸೇದೃಢವ್ರತಾ । ಭರತಸ್ನೇಹಸಂತಪ್ತಾಬಾಲಿಶೀಕ್ರಿಯತೇಪುನಃ ।೩೬। ಸಂಸ್ಮರಾಮ್ಯಸ್ಯವಾಕ್ಯಾನಿ

---

ದ, ದೀರ್ಘಬಾಹುಃ-ಉದ್ದವಾದ ಭುಜಗಳುಳ್ಳ, ಅರಿಂದಮಃ-ಶತ್ರುಸಂಹಾರಕನಾದ. ಭರತಃ-ಭರತನು, ವಿವಿಧಾನ್-ನಾನಾಬಗೆಗಳಾದ, ಭೋಗಾನ್-ಸಕ್‌ಚಂದನವನಿತಾದಿ ವಿಷಯಸುಖಗಳನ್ನು, ಸಂತ್ಯಜ್ಯ-ಬಿಟ್ಟು, ಆರ್ಯಂ-ಜ್ಯೇಷ್ಠನಾದ ನಿನ್ನನ್ನು, ಸರ್ವಾತ್ಮನಾ-ಸರ್ವಾಂಶಗಳಿಂದಲೂ, ಶ್ರಿತಃ-ಆಶ್ರಯಿಸಿದನು ॥೩೦॥ ಯಃ-ಯಾವ ಭರತನು, ವನಸ್ಥಮಪಿ-ವನದಲ್ಲಿರುವವನಾದರೂ, ತ್ವಾಂ-ನಿನ್ನನ್ನು, ತಾಪಸ್ಯೇ-ತಾಪಸನೆಂಬ ಋಷಿವೃತ್ತಿಯಲ್ಲಿ, ಅನುವಿಧೀಯತೇ-ಅನುಸರಿಸುತ್ತಾನೆಯೋ, ಮಹಾತ್ಮನಾ-ಮಹಾಮನಸ್ವಿಯಾದ, ತವ-ನಿನಗೆ, ಭ್ರಾತ್ರಾ-ತಮ್ಮನಾದ, ಭರತೇನ-ಭರತನಿಂದ, ಸ್ವರ್ಗಃ-ಸ್ವರ್ಗವು, ಜಿತಃ-ಜಯಿಸಲ್ಪಟ್ಟಿತು ॥೩೧॥ ದ್ವಿಪದಾಃ-ದ್ವಿಪಾತ್ತುಗಳಾದ ಮನುಷ್ಯರು, ಪಿತ್ರ್ಯಂ-ತಂದೆಯಸ್ವಭಾವವನ್ನು. ನಾನುವರ್ತಂತೇ-ಅನುಸರಿಸುವದಿಲ್ಲ, ಕಿಂತು-ಮತ್ತೇನಂದರೆ. ಮಾತೃಕಂ-ಮಾತೃಸ್ವಭಾವವನ್ನು, ಅನುವರ್ತಂತಇತಿ-ಅನುಸರಿಸುತ್ತಾರೆಂಬ. ಲೋಕಪ್ರವಾದಃ-ಲೋಕವಾರ್ತೆಯು, ಖ್ಯಾತಃ-ಪ್ರಸಿದ್ಧವಾದ್ದು, ಅಯಂ-ಈ ಲೋಕಪ್ರವಾದವು, ಭರತೇನ-ಭರತನಿಂದ. ಅನ್ಯಥಾಕೃತಃ-ಮತ್ತೊಂದುಬಗೆಯಾಗಿ ಮಾಡಲ್ಪಟ್ಟಿತು ॥೩೨॥ ಯಸ್ಯ-ಯಾವ ಭರತನಿಗೆ, ಸಾಧುಃ-ಸಜ್ಜನನಾದ, ದಶರಥಃ-ದಶರಥರಾಯನು, ಭರ್ತಾ-ಪೋಷಕನೋ, ಸಃಭರತಃ-ಅಂಥಾ ಭರತನೆಂಬ, ಸುತಃ-ಕುವರನು, ಸಾಧುಃ-ಸತ್ಪುರುಷನು, ಯಸ್ಯ-ಯಾವ ಭರತನಿಗೆ, ತಾದೃಶೀ-ಅಂಥಾವಳಾದ, ಕ್ರೂರಶೀಲಿನೀ-ಉಗ್ರಸ್ವಭಾವಳ್ಳ, ಸಾಕೈಕೇಯೀ-ಆ ಕೈಕೇಯಿದೇವಿಯು, ಅಂಬಾ-ತಾಯಿಯಾಗಿಧ್ದಾಳೋ ॥೩೩॥ ಇತ್ಯೇವಂ-ಈಪರಿಯಾಗಿ, ಧಾರ್ಮಿಕೇ-ಧರ್ಮಿಷ್ಠನಾದ, ಲಕ್ಷ್ಮಣೇ-ಲಕ್ಷ್ಮಣನು, ಸ್ನೇಹಾತ್-ಮೈತ್ರಿಯದೆಶೆಯಿಂದ, ವಾಕ್ಯಂ-ಮಾತನ್ನು, ಬ್ರುವತಿಸತಿ-ಹೇಳುತ್ತಿರುವನಾಗುತ್ತಿರಲಾಗಿ. ರಾಘವಃ-ಶ್ರೀರಾಮನು, ಜನನ್ಯಾಃ-ತಾಯಿಯ, ಪರಿವಾದಂ-ಅಪವಾದವಾಕ್ಯವನ್ನು, ಅಸಹನ್-ಸಹಿಸದಿರುವವನಾಗಿ, ತಂ-ಆ ಲಕ್ಷ್ಮಣನಂಕುರಿತು, ಅಬ್ರವೀತ್-ಮಾತನಾಡಿದನು ॥೩೪॥ ಹೇತಾತ-ಎಲೈ ಅಪ್ಪನೇ. ತೇ-ನಿನಿಂದ, ಮಧ್ಯಮಾಅಂಬಾ-ಮಧ್ಯಮತಾಯಿಯಾದ ಕೈಕೆಯೀದೇವಿಯು, ಕಥಂಚನ-ಹ್ಯಾಗಾದರೂ, ನಗರ್ಹಿತವ್ಯಾ-ನಿಂದೆಮಾಡತಕ್ಕವಳಲ್ಲ, ಇಕ್ಷ್ವಾಕುನಾಥಸ್ಯ-ಇಕ್ಷ್ವಾಕುಕುಲಕ್ಕೆ ಪ್ರಭುವಾದ, ಭರತಸ್ಯ-ಭರತನಸಂಬಂಧಿಯಾದ, ತಾಂಕಥಾಮೇವ-ಆದೇಪ್ರಸ್ತಾಪವನ್ನೇ. ಕುರು-ಮಾಡು ॥೩೫॥ ವನವಾಸೇ-ವನವಾಸದಲ್ಲಿ. ದೃಢವ್ರತಾ-ದೃಢವಾದ ನಿಯಮವುಳ್ಳ, ನಿಶ್ಚಿತಾಪಿ-ನಿಶ್ಚಯಿಸಲ್ಪಟ್ಟದ್ದಾದರೂ, ಮೇ-ನನ್ನ, ಬುದ್ಧಿಃ-ಬುದ್ಧಿಯು, ಭರತಸ್ನೇಹಸಂತಪ್ತಾ-ಭರತ-ಭರತನಲ್ಲಿ, ಸ್ನೇಹ-ಪ್ರೇಮದಿಂದ, ಸಂತಪ್ತಾ-ಪರಿತಪಿಸುತ್ತಿರುವದಾಗಿ, ಪುನಃ-ಮತ್ತು, ಬಾಲಿಶೀಕ್ರಿಯತೇ-ಚಪಲವಾಗಿ ಮಾಡಿಸಲ್ಪಡುತ್ತದೆ ॥೩೬॥ ಅಸ್ಯ-ಈ ಭರತನ, ಪ್ರಿಯಾಣಿ-ಇಷ್ಟಗಳಾದ, ಮಧುರಾಣಿ-ತಾಪಹರಗಳಾದ, (ಯದ್ವಾ-ಮಧುರಾಣಿ-ಹೃದಯಕ್ಕೆ ರುಚಿಕರವಾದ,) ಹೃದ್ಯಾನಿ-ಮನಸ್ಸಿಗಿಂಪಾಗಿರುವ, ಅಮೃತಕಲ್ಪಾನಿ-ಅಮೃತಕ್ಕೆ ಸಮಾನವಾದ, ಮನಃಪ್ರಹ್ಲಾದನಾ

---

ಜಿತೇಂದ್ರಿಯನಾಗಿಯೂ, ಇಷ್ಟವಾಗಿ ಮಾತುಗಳನ್ನಾಡುವವನಾಗಿಯೂ, ದೀರ್ಘವಾದ ಬಾಹುಗಳುಳ್ಳವನಾಗಿಯೂ, ಶತ್ರುಸಂಹಾರಕನಾಗಿಯೂ ಇರುವ ಭರತನು ಸರ್ವಭೋಗಂಗಳಂ ಬಿಟ್ಟು, ಸರ್ವಾತ್ಮನಾ ಜ್ಯೇಷ್ಠಭ್ರಾತನಾದ ನಿನ್ನನ್ನು ಆಶ್ರಯಿಸುತ್ತಲಿಧಾನೆ ।೩೦॥ ಎಲೈ ಅಣ್ಣನೇ! ಯಾವ ಭರತನು, ವನದಲ್ಲಿರುವವನಾದರೂ ನಿನ್ನನ್ನು ತಾಪಸವೃತ್ತಿಯಿಂದನುಸರಿಸುತ್ತಿರುವನೋ, ಅಂಥಾ ಭರತನಿಂದ ಸ್ವರ್ಗವು ಜಯಿಸಲ್ಪಟ್ಟಿತು॥೩೧। ಲೋಕದಲ್ಲಿ ಮನುಷ್ಯರು ತಾಯಿಯ ಗುಣವನ್ನನುಸರಿಸುವರೇ ಹೊರತು ಜನಕನ ಸ್ವಭಾವವನ್ನನುಸರಿಸುವದಿಲ್ಲೆಂದು ಲೋಕಪ್ರವಾದ ವಿರುವದು; ಈಪ್ರವಾದವನ್ನು ಭರತನು ಮತ್ತೊಂದುವಿಧವಾಗಿಗೈದನು।೩೨। ಯಾವ ಭರತನಿಗೆ ದಶರಥಮಹಾರಾಯನು ಪೋಷಕನೋ ಅಂಥಾ ಭರತನೇ ಸತ್ಪುರುಷನು; ಇಂಥಾ ಗುಣವಂತನಾದ ಭರತನಿಗೆ ಮಹಾ ಕ್ರೂರಳಾದ ಆಕೈಕೇಯೀದೇವಿಯು ತಾಯಿಯಾದವಳು ಹ್ಯಾಗಾದಳೋ ಯೇನೋ, ಎಂಬದಾಗಿ ಲಕ್ಷ್ಮಣನು ಮೈತ್ರಿಯ ದೆಶೆಯಿಂದ ನುಡಿವವನಾಗಲೂ; ಶ್ರೀರಾಮನು ಆ ವಾಕ್ಯವಂ ಕೇಳಿ, ತಾಯಿಯಾದ ಕೈಕೇಯೀದೇವಿಯ ದೂಷಣೆಯಂ ಸೈರಿಸದಿರುವವನಾಗಿ, ಲಕ್ಷ್ಮಣನಂ ಕುರಿತು ನುಡಿವನದೆಂತೆನೆ;—।೩೪। ಎಲೋ, ಎಲೋ, ಅಪ್ಪ ಲಕ್ಷ್ಮಣನೇ! ಮಧ್ಯಮಜನನಿಯಾದ ದೇವಿಯಂ ನೀನು ಹ್ಯಾಗಾದರೂ ದೂಷಿಸಬಾರದು, ಇಕ್ಷ್ವಾಕು ಕುಲಕ್ಕೆ ಪ್ರಭುವಾಗಿರುವ ಆ ಭರತನ ಪ್ರಸ್ತಾಪವನ್ನೇ ಮಾಡುವವನಾಗು, ನನ್ನ ಬುದ್ಧಿಯು ವನವಾಸವಂಗೈಯುವುದರಲ್ಲಿ ನಿಶ್ಚಯಿಸಲ್ಪಟ್ಟದ್ದಾದರೂ, ಆ ಭರತನಲ್ಲಿರುವ ಪ್ರೇಮೆಯಿಂದ ಪುನಃ ಚಾಂಚಲ್ಯವಂ ಪೊಂದು

ಪ್ರಿಯಾಣಿ ಮಧುರಾಣಿ ಚ । ಹೃದ್ಯಾನ್ಯಮೃತಕಲ್ಪಾನಿ ಮನಃಪ್ರಹ್ಲಾದನಾನಿ ಚ ॥೩೯॥ ಕದಾನ್ವಹಂ ಸಮೇಷ್ಯಾಮಿ ಭರತೇನ ಮಹಾತ್ಮನಾ । ಶತ್ರುಘ್ನೇನ ಚ ವೀರೇಣ ತ್ವಯಾ ಚ ರಘುನಂದನ ॥೪೦॥ ಇತ್ಯೇವಂ ವಿಲಪಂಸ್ತತ್ರ ಪ್ರಾಪ್ಯ ಗೋದಾವರೀಂ ನದೀಂ । ಚಕ್ರೇಭಿಷೇಕಂ ಕಾಕುತ್ಸ್ಥಸ್ಸಾನುಜಸ್ಸಹ ಸೀತಯಾ ॥೪೧॥ ತರ್ಪಯಿತ್ವಾಥ ಸಲಿಲೈಸ್ತೈ ಪಿತೄನ್ ದೈವತಾನಿ ಚ । ಸ್ತುವಂತಿ ಸ್ಮೋದಿತಂ ಸೂರ್ಯಂ ದೇವತಾಶ್ಚ ಸಮಾಹಿತಾಃ ॥೪೨॥ ಕೃತಾಭಿಷೇಕಸ್ಸ ರರಾಜ ರಾಮಸ್ಸೀತಾದ್ವಿತೀಯಸ್ಸಹ ಲಕ್ಷ್ಮಣೇನ । ಕೃತಾಭಿಷೇಕೋ ಗಿರಿರಾಜಪುತ್ರ್ಯಾ ರುದ್ರಸ್ಸನಂದೀ ಭಗವಾನಿವೇಶಃ ॥೪೩॥

—*** ಇತಿ ಶ್ರೀಮದಾರಣ್ಯಕಾಂಡೇ-ಷೋಡಶಸ್ಸರ್ಗಃ. ***—

ಕೃತಾಭಿಷೇಕೋ ರಾಮಸ್ತು ಸೀತಾ ಸೌಮಿತ್ರಿರೇವ ಚ । ತಸ್ಮಾದ್ಗೋದಾವರೀತೀರಾತ್ತತೋ ಜಗ್ಮುಸ್ಸ್ವಮಾಶ್ರ

---

ನೀಚ-ಮನಸ್ಸಿಗೆ ಆಹ್ಲಾದಕರಂಗಳಾದ, ವಾಕ್ಯಾನಿ-ಮಾತುಗಳನ್ನು. ಸಂಸ್ಮರಾಮಿ-ಜ್ಞಾಪಕಕ್ಕೆ ತರುತ್ತೇನೆ ॥೩೯॥ ಹೇರಘುನಂದನ-ಎಲೈ ರಘುಕುಲಾನಂದಕರನೆ, ಅಹಂ ನಾನು. ಮಹಾತ್ಮನಾ-ಮಹಾಮನಸ್ವಿಯಾದ, ಭರತೇನ-ಭರತನೊಡನೆ, ವೀರೇಣ-ಸಮರ್ಥನಾದ, ಶತ್ರುಘ್ನೇನಚ-ಶತ್ರುಘ್ನನೊಡನೆ. ತ್ವಯಾಚ-ನಿನ್ನಿಂದಲೂ, ಕದಾ-ಯಾವಾಗಲಾದರೆ. ಸಮೇಷ್ಯಾಮಿ-ಸೇರುವೆನು ॥೪೦॥ ಇತ್ಯೇವಂ-ಈಪರಿಯಾಗಿ, ತತ್ರ-ಆ ಗೋದಾವರೀತೀರದಲ್ಲಿ. ವಿಲಪನ್-ಪ್ರಲಾಪವಮಾಡುತ್ತಿರುವ, ಸಾನುಜಃ-ತಮ್ಮನೊಡಗೂಡಿದ, ಕಾಕುತ್ಸ್ಥಃ-ಶ್ರೀರಾಮನು, ಗೋದಾವರೀನದೀಂ-ಗೋದಾವರೀಎಂಬ ನದಿಯನ್ನು, ಪ್ರಾಪ್ಯ-ಹೊಂದಿ, ಸೀತಯಾಸಹ-ಸೀತಾದೇವಿಯೊಡನೆ, ಅಭಿಷೇಕಂ-ಸ್ನಾನವನ್ನು. ಚಕ್ರೇ-ಮಾಡಿದನು ॥೪೧॥ ಅಥ-ಸ್ನಾನಾನಂತರದಲ್ಲಿ. ತೇ-ಆ ಸೀತಾಲಕ್ಷ್ಮಣರಾಮರು, ಸಲಿಲೈಃ-ಉದಕಗಳಿಂದ, ದೈವತಾನಿ-ದೇವತೆಗಳನ್ನು, ಪಿತೄನ್-ಪಿತೃಗಳನ್ನೂ, ತರ್ಪಯಿತ್ವಾ-ತರ್ಪಣವಮಾಡಿ, ಉದಿತಂ ಸೂರ್ಯಂ-ಉದಯವನ್ನು ಹೊಂದಿದ ಸೂರ್ಯನನ್ನು. ದೇವತಾಶ್ಚ-ಇತರದೇವತೆಗಳನ್ನು, ಸಮಾಹಿತಾಸ್ಸಂತಃ-ಸಮಾಧಾನಚಿತ್ತರಾಗಿ, ಸ್ತುವಂತಿಸ್ಮ-ಸ್ತುತಿಸಿದರಷ್ಟೆ ॥೪೨॥ ಕೃತಾಭಿಷೇಕಃ-ಮಾಡಲ್ಪಟ್ಟ ಸ್ನಾನವುಳ್ಳ, ಸರಾಮಃ-ಆ ಶ್ರೀರಾಮನು, ಸೀತಾದ್ವಿತೀಯಃ-ಸೀತೆಯೆ ಎರಡನೆಯವಳಾಗಿರುವನಾಗಿ, ಸಹಲಕ್ಷ್ಮಣೇನ-ಲಕ್ಷ್ಮಣನೊಡಗೂಡ ಕೂಡಿದವನಾಗಿ, ಗಿರಿರಾಜಪುತ್ರ್ಯಾ-ಪರ್ವತರಾಜಪುತ್ರಿಯಾದ ಪಾರ್ವತೀದೇವಿಯೊಡನೆ. ಸನಂದೀ-ನಂದಿವಾಹನನಿಂದೊಡಗೂಡಿದ, ಕೃತಾಭಿಷೇಕಃ-ಮಾಡಲ್ಪಟ್ಟ ಸ್ನಾನವುಳ್ಳ, ಭಗವಾನ್-ಪೂಜ್ಯನಾದ, ಯದ್ವಾ-ಭಗವಾನ್-ಷಡ್ಗುಣೈಶ್ವರ್ಯಸಂಪನ್ನನಾದ, ಈಶಃ-ಜಗತ್ಸ್ವಾಮಿಯಾದ, ರುದ್ರ ಇವ-ಪರಮೇಶ್ವರನಂತೆ, ರರಾಜ-ಹೊಳೆಯುತ್ತಿದ್ದನು, (ರುದ್ರಸ್ಸವಿಷ್ಣುರ್ಭಗವಾನಿವೇಶಃ ಇತಿಪಾಠಾಂತರಂ-ಆ ಪಾಠದಲ್ಲಿ, ಸವಿಷ್ಣುಃ-ವಿಷ್ಣುವಿನಿಂದೊಡಗೂಡಿದ, ಈಶಃ-ಜಗತ್ಸ್ವಾಮಿಯಾದ. ರುದ್ರ ಇವ-ರುದ್ರನಂತೆ ಹೊಳೆಯುತ್ತಿದ್ದನು ಇಲ್ಲಿ ಸಾಕ್ಷಾದ್ವಿಷ್ಣುಸಮೇತನಾಗಿ ಪರಮೇಶ್ವರನು ಯಾವಾಗಲಾದರೂ ಇರುತ್ತಾನೆಂದು ಸಕಲ ಪುರಾಣಗಳಲ್ಲಿ ಪ್ರಸಿದ್ಧವಾಗಿರುವಾಗ ಅಭೂತೋಪಮಾ ಎಂಬುವದು ಬೋಧ್ಯವಾಗಿತೋರುತ್ತದೆ) ॥೪೩॥ —**ಇತಿ ಶ್ರೀಮದಾರಣ್ಯಕಾಂಡೇ-ಷೋಡಶಸ್ಸರ್ಗಃ**—

ತತಃ-ಅನಂತರದಲ್ಲಿ, ಕೃತಾಭಿಷೇಕಃ-ಮಾಡಲ್ಪಟ್ಟ, ಸ್ನಾನವುಳ್ಳ, ರಾಮಃ-ಶ್ರೀರಾಮನು, ಸೀತಾ-ಸೀತಾದೇವಿಯು, ಸೌಮಿತ್ರಿರೇವಚ-ಲಕ್ಷ್ಮಣನೂ. ತ್ರಯಃ-ಮೂವರು, ತಸ್ಮಾತ್-ಆ, ಗೋದಾವರೀತೀರಾತ್-ಗೋದಾವರೀನದಿಯ ಪ್ರದೇಶದಿಂದ, ಸ್ವಂ-ಸ್ವಕೀಯವಾದ, ಆಶ್ರಮಂ-ಪರ್ಣಶಾಲೆಯನ್ನು ಕುರಿತು, ಜಗ್ಮುಃ-ಬಂದರು ॥೧॥ ರಾಘವಃ-ಶ್ರೀರಾಮನು. ತಂ ಆಶ್ರಮಂ-ಆ ಆಶ್ರಮವಂ ಕುರಿತು, ಉಪಾಗಮ್ಯ-ಬಂದು. ಸಹಲಕ್ಷ್ಮ

---

ತ್ತದೆ. ಭರತನು ನುಡಿದ ಪ್ರಿಯವಾದ ಮನೋಹರವಾಗಿರುವ ಮತ್ತು ಅಮೃತದಂತೆ ಬಹಳ ತೃಪ್ತಿಯಂ ಗೈಯ್ಯುವ, ಮನಸ್ಸಿಗೆ ಸಂತವನ್ನುಂಟುಮಾಡುವ ಮಾತುಗಳನ್ನು ಸ್ಮರಿಸುತ್ತಲಿ ಇದ್ದೇನೆ ॥೩೯॥ ಎಲೈ ಲಕ್ಷ್ಮಣನೇ! ನಾನು ನಿನ್ನಿಂದೊಡಗೂಡಿ ಮಹಾತ್ಮನಾದ ಭರತನ ಸಂಗಡಲೂ, ಶೂರನಾದ ಶತ್ರುಘ್ನನ ಸಂಗಡಲೂ ಯಾವಾಗ ಸೇರುವೆನೋ ಯೇನೋ ಯೆಂದು ಆ ಗೋದಾವರೀ ತೀರದಲ್ಲಿ ಶ್ರೀರಾಮನು ತಮ್ಮನಾದ ಲಕ್ಷ್ಮಣನಿಂದೊಡಗೂಡಿ ವಿಲಾಪವಂ ಗೈಯ್ಯುವವನಾಗಿ; ಆ ನದಿಯನ್ನೈದಿ ಸೀತಾದೇವಿಯೊಡನೆ ಸ್ನಾನಗೈದು ॥೪೧॥ ಅನಂತರದಲ್ಲಿ ಆ ಸೀತಾರಾಮಲಕ್ಷ್ಮಣರು ಮೂವ್ವರು ಉದಕದಿಂದ ದೇವತೆಗಳನ್ನೂ ಪಿತೃದೇವತೆಗಳನ್ನೂ ಸಹ ಉದ್ದೇಶಿಸಿ ತರ್ಪಣವಂ ಗೈದು, ಮೂಡಲುಕಡೆಯಲ್ಲಿ ಮೂಡಿರುವ ಸೂರ್ಯಮಂಡಲವನ್ನೂ ಇತರದೇವತೆಗಳನ್ನೂ ಸಹ ಸಮಾಧಾನಚಿತ್ತರಾಗಿ ಸ್ತುತಿಸಿದವರಾದರು ॥೪೨॥ ಆ ದಶರಥನಂದನನಾದ ಶ್ರೀರಾಮನು ಸೀತಾದೇವಿಯೆ ಸಹಾಯವಾಗಿ ಉಳ್ಳವನಾಗಿ ಲಕ್ಷ್ಮಣನಿಂದೊಡಗೂಡಿ ಸ್ನಾನವಂ ಗೈದವನಾಗಿ, ಪಾರ್ವತೀ ದೇವಿಯೊಡನೆ ನಂದಿವಾಹನನಿಂದೊಡಗೂಡಿ ಸ್ನಾನವಂಗೈದ ಭಗವಂತನಾದ ಜಗತ್ಸ್ವಾಮಿಯಾದ ಪರಮೇಶ್ವರನಂತೆ ಹೊಳೆಯುತ್ತಿದ್ದನು ॥೪೩॥

—** ಶ್ರೀಮದಾರಣ್ಯಕಾಂಡದಲ್ಲಿನ ೧೬ನೆಯ ಸರ್ಗಂ ಮುಗಿದುದು. **—

ಈ ಪ್ರಕಾರವಾಗಿ ಆ ರಾಮಲಕ್ಷ್ಮಣರೂ ಸೀತಾದೇವಿಯೂ ಸಹ ಸ್ನಾನಂ ಗೈದಬಳಿಕ ತಮ್ಮ ಆಶ್ರಮವಂ ಕುರಿತು ಆ ಗೋದಾವರೀ ತೀರದಿಂದ ಬಂದವರಾದರು ॥೧॥ ಅನಂತರದಲ್ಲಿ ಶ್ರೀರಾಮನು ತನ್ನಾಶ್ರಮಕ್ಕೆ ಬಂದು

ಮಂ ॥೧॥ ಆಶ್ರಮಂತಮುಪಾಗಮ್ಯರಾಘವಸ್ಸಹಲಕ್ಷ್ಮಣಃ । ಕೃತ್ವಾಪೌರ್ವಾಹ್ಣಿಕಂಕರ್ಮಪರ್ಣಶಾಲಾಮುಪಾಗಮ
ತ್ ॥೨॥ ಉವಾಸಸುಖಿತಸ್ತತ್ರಪೂಜ್ಯಮಾನೋಮಹರ್ಷಿಭಿಃ । ಲಕ್ಷ್ಮಣೇನಸಹಭ್ರಾತ್ರಾಚಕಾರವಿವಿಧಾಃಕಥಾಃ ॥೩॥
ಸರಾಮಃಪರ್ಣಶಾಲಾಯಾಮಾಸೀನಸ್ಸಹಸೀತಯಾ । ವಿರರಾಜಮಹಾಬಾಹುಶ್ಚಿತ್ರಯಾಚಂದ್ರಮಾಇವ ॥೪॥ ತಥಾ
ಸೀನಸ್ಯರಾಮಸ್ಯಕಥಾಸಂಸಕ್ತಚೇತಸಃ । ತಂದೇಶಂರಾಕ್ಷಸೀಕಾಚಿದಾಜಗಾಮಯದೃಚ್ಛಯಾ ॥೫॥ ಸಾತುಶೂರ್ಪಣ
ಖಾನಾಮದಶಗ್ರೀವಸ್ಯರಕ್ಷಸಃ । ಭಗಿನೀರಾಮಮಾಸಾದ್ಯದದರ್ಶತ್ರಿದಶೋಪಮಂ ॥೬॥ ಸಿಂಹೋರಸ್ಕಂಮಹಾಬಾ
ಹುಂಪದ್ಮಪತ್ರನಿಭೇಕ್ಷಣಂ । ಆಜಾನುಬಾಹುಂದೀಪ್ತಾಸ್ಯಮತೀವಪ್ರಿಯದರ್ಶನಂ ॥ ಗಜವಿಕ್ರಾಂತಗಮನಂಜಟಾ
ಮಂಡಲಧಾರಿಣಂ । ಸುಕುಮಾರಂಮಹಾಸತ್ವಂಪಾರ್ಥಿವವ್ಯಂಜನಾನ್ವಿತಂ ॥ ರಾಮಮಿಂದೀವರಶ್ಯಾಮಂಕಂದರ್ಪಸದೃ
ಶಪ್ರಭಂ । ಬಭೂವೇಂದ್ರೋಪಮಂದೃಷ್ಟ್ವಾರಾಕ್ಷಸೀಕಾಮಮೋಹಿತಾ ॥ ಸುಮುಖಂದುರ್ಮುಖೀರಾಮಂವೃತ್ತಮ

---

ಣಃ-ಲಕ್ಷ್ಮಣಸಮೇತನಾಗಿ, ಪೌರ್ವಾಹ್ಣಿಕಂ-ಪ್ರಾತಃಕಾಲೀನವಾದ. ಕರ್ಮ-ಬ್ರಹ್ಮಯಜ್ಞಾದಿ ಕೃತ್ಯವನ್ನು, ಕೃತ್ವಾ-ಮಾಡಿ, ಪರ್ಣಶಾಲಾಂ-ಪರ್ಣಶಾಲೆಯನ್ನು ಕುರಿತು, ಉಪಾಗಮತ್-ಬಂದನು, ಅಂದರೆ ಆಶ್ರಮದ ಬೀದಿಬಾಗಲುಗಳಿಗೆ ಬಂದು ಆ ಬೈಲಿನಲ್ಲಿ ಬ್ರಹ್ಮಯಜ್ಞಾದಿ ಕರ್ಮಗಳನ್ನು ಮಾಡಿ ಪರ್ಣಶಾಲೆಗೆ ಪ್ರವೇಶಮಾಡಿದನೆಂಬ ತಾತ್ಪರ್ಯವು. ॥೨॥ ತತ್ರ-ಆ ಆಶ್ರಮದಲ್ಲಿ, ಮಹರ್ಷಿಭಿಃ-ಮಹರ್ಷಿಗಳಿಂದ, ಪೂಜ್ಯಮಾನಃ-ಪೂಜಿಸಲ್ಪಟ್ಟವನಾಗಿ, ಭ್ರಾತ್ರಾ-ತಮ್ಮನಾದ, ಲಕ್ಷ್ಮಣೇನಸಹ-ಲಕ್ಷ್ಮಣನೊಡಗೂಡ, ಸುಖಿತಃ-ಸಂತೋಷಸುಖವುಳ್ಳವನಾಗಿ, ಉವಾಸ-ಇದ್ದನು, ವಿವಿಧಾಃ-ನಾನಾಬಗೆಗಳಾದ, ಕಥಾಃ-ಕಥೆಗಳನ್ನು, ಚಕಾರ-ಮಾಡಿದನು ॥೩॥ ಮಹಾಬಾಹುಃ-ಮಹಾ ಭುಜಗಳುಳ್ಳ, ಸರಾಮಃ-ಆ ಶ್ರೀರಾಮನು, ಪರ್ಣಶಾಲಾಯಾಂ-ಆಶ್ರಮದಲ್ಲಿ, ಸೀತಯಾಸಹ-ಸೀತಾದೇವಿಯೊಡಗೂಡ, ಆಸೀನಃ-ಕುಳಿತುಕೊಂಡವನಾಗಿ, ಚಿತ್ರಯಾ-ಚಿತ್ರಾನಕ್ಷತ್ರದೊಡನೆ, ಚಂದ್ರಮಾಇವ-ಚಂದ್ರನಂತೆ, ವಿರರಾಜ-ಹೊಳೆಯುತ್ತಿದ್ದನು ॥೪॥ ತಥಾ-ಆಪರಿಯಾಗಿ, ರಾಮಸ್ಯ-ಶ್ರೀರಾಮನು, ಕಥಾಸಂಸಕ್ತಚೇತಸಃ-ಪ್ರಸ್ತಾವಗಳಲ್ಲಿ ಆಸಕ್ತವಾದ ಮನವುಳ್ಳವನಾಗಿ, ಆಸೀನಸ್ಯ-ಕುಳಿತುಕೊಂಡವನಾಗಲೂ, ಕಾಚಿತ್-ಒಬ್ಬಾನೊಬ್ಬಳಾದ, ರಾಕ್ಷಸೀ-ರಾಕ್ಷಸರ ಹೆಂಗಸು, ತಂದೇಶಂ-ಆ ಪ್ರದೇಶವನ್ನು ಕುರಿತು, ಯದೃಚ್ಛಯಾ-ಸ್ವೇಚ್ಛೆಯಿಂದ, ಆಜಗಾಮ-ಬಂದಳು ॥೫॥ ರಕ್ಷಸಃ-ರಕ್ಕಸನಾದ, ದಶಗ್ರೀವಸ್ಯ-ರಾವಣನಿಗೆ, ಭಗಿನೀ-ತಂಗಿಯಾದ, ಶೂರ್ಪಣಖಾನಾಮ-ಶೂರ್ಪಣಖಾ ಯೆಂದು, ಪ್ರಖ್ಯಾತಳಾದ. ಸಾತು-ಆ ರಕ್ಕಸಿಯಾದರೆ, ತ್ರಿದಶೋಪಮಂ-ದೇವತಾಸಮಾನನಾದ, ರಾಮಂ ಶ್ರೀರಾಮನನ್ನು ಕುರಿತು, ಆಸಾದ್ಯ-ಬಂದು, ದದರ್ಶ-ಕಂಡಳು ॥೬॥ ಸಿಂಹೋರಸ್ಕಂ-ಸಿಂಹದ ವಕ್ಷಸ್ಥಲದಂತೆ ಯೆದೆಯುಳ್ಳ, ಮಹಾಬಾಹುಂ-ಮಹಾಭುಜಗಳುಳ್ಳ, ಪದ್ಮಪತ್ರನಿಭೇಕ್ಷಣಂ-ಕಮಲದ ಯೆಸಳಿಗೆ ಸಮಾನವಾದ ನೇತ್ರಗಳುಳ್ಳ, ಆಜಾನುಬಾಹುಂ-ಮೊಳಕಾಲುವರಿಯಂತ ಭುಜಗಳುಳ್ಳ, ದೀಪ್ತಾಸ್ಯಂ-ಹೊಳೆಯುತ್ತಿರುವ ಮುಖವುಳ್ಳ, ಅತೀವ-ಬಹಳವಾಗಿ, ಪ್ರಿಯದರ್ಶನಂ-ಕಣ್ಣಿಗಿಂಪಾದ ನೋಟವುಳ್ಳ, ಗಜವಿಕ್ರಾಂತಗಮನಂ-ಆನೆಯ ಪಾದ ಗಮನದಂತೆ ಗಮನವುಳ್ಳ, ಜಟಾಮಂಡಲಧಾರಿಣಂ-ಜಟಾಮುಕುಟವನ್ನು ಧರಿಸಿರುವ, ಸುಕುಮಾರಂ-ಮೃದುವಾದ ಶರೀರವುಳ್ಳ, ಮಹಾಸತ್ವಂ-ಬಹಳ ಬಲವಂತನಾದ, ಪಾರ್ಥಿವವ್ಯಂಜನಾನ್ವಿತಂ-ರಾಜಲಕ್ಷಣಗಳಿಂ ಕೂಡಿಕೊಂಡಿರುವ. ಇಂದೀವರಶ್ಯಾಮಂ-ನೈದಿಲೆ ಹುವ್ವಿನಂತೆ ನೀಲಿವರ್ಣವುಳ್ಳ, ಕಂದರ್ಪಸದೃಶಪ್ರಭಂ-ಮನ್ಮಥನಿಗೆ ಸಮಾನವಾದ ಕಾಂತಿಯುಳ್ಳ, ಇಂದ್ರೋಪಮಂ-ದೇವೇಂದ್ರನಿಗೆ ಸದೃಶನಾದ. ರಾಮಂ-ಶ್ರೀರಾಮನನ್ನು,

---

ಲಕ್ಷ್ಮಣನಿಂದೊಡಗೂಡಿ, ಪ್ರಾತಃಕಾಲದಲ್ಲಿ ಮಾಡತಕ್ಕ ಬ್ರಹ್ಮಯಜ್ಞಾದಿ ಕರ್ಮಗಳಂ ಮಾಡಿ, ಆಶ್ರಮದ ಪೊಳಗೆ ಪ್ರವೇಶಂಗೈದು, ಅಲ್ಲಿ ಮಹರ್ಷಿಗಳಿಂದ ಪೂಜಿಸಲ್ಪಟ್ಟವನಾಗಿ, ತಮ್ಮನಾದ ಲಕ್ಷ್ಮಣನೊಡನೆ ನಾನಾವಿಧವಾದ ಕಥೆಗಳಂ ಹೇಳುತ್ತಾ, ಸುಖವಾಗಿದ್ದನು ॥೩॥ ಆ ಸಮಯದಲ್ಲಿ ಮಹಾ ಭುಜಪರಾಕ್ರಮಿಯಾದ ಶ್ರೀರಾಮನು ಆ ಪರ್ಣಶಾಲೆಯಲ್ಲಿ ಸೀತಾದೇವಿಯೊಡಗೂಡಿ ಕುಳಿತವನಾಗಿ, ಚಿತ್ರಾನಕ್ಷತ್ರದಿಂ ಕೂಡಿರುವ ಚಂದ್ರನಂತೆ ಹೊಳೆಯುತ್ತಿದ್ದನು ॥೪॥ ಆ ರೀತಿಯಾಗಿ ಶ್ರೀರಾಮನು ಪ್ರಸ್ತಾವಗಳಲ್ಲಿ ಆಸಕ್ತಚಿತ್ತನಾಗಿ ಕುಳಿತುಕೊಂಡಿರುವವನಾಗಲೂ, ಪೋರ್ವಳಾದ ರಾಕ್ಷಸಾಂಗನೆಯು ಆ ಸ್ಥಳಕ್ಕೆ ಸ್ವೇಚ್ಛೆಯಾಗಿ ಬಂದಳು ॥೫॥ ಅನಂತರದಲ್ಲಿ ರಾವಣಾಸುರನಿಗೆ ಪೊಡಹುಟ್ಟಿದವಳಾದ ಆ ಶೂರ್ಪಣಖಿಯೆಂದು ಪ್ರಖ್ಯಾತಳಾದ ಆ ಅಸುರಳು; ದೇವತಾಸದೃಶನಾದ ಶ್ರೀರಾಮನ ಸನ್ನಿಧಾನವನ್ನೈದಿ ಆತನಂ ಕಂಡಳದೆಂತೆನೆ;—॥೬॥ ಸಿಂಹದ ಉರಸ್ಸ್ಥಳದಂತೆ ವಿಸ್ತಾರವಾದ ವಕ್ಷಸ್ಥಲವುಳ್ಳವನಾಗಿಯೂ, ಮಹಾ ಭುಜಪರಾಕ್ರಮಿಯಾಗಿಯೂ, ತಾವರೇ ಯೆಸಳೆಯಂತೆ ಕಂಗೊಳಿಸುವ ಕಣ್ಣುಗಳುಳ್ಳವನಾಗಿಯೂ, ಮೊಳಕಾಲುಗಳವರಿಗೂ ಜೋಲಾಡುತ್ತಿರುವ ದೀರ್ಘವಾದ ಭುಜಗಳುಳ್ಳವನಾಗಿಯೂ, ಬೆಳಗುತ್ತಿರುವ ಮುಖವುಳ್ಳವನಾಗಿಯೂ, ನೋಡುವವನಿಕ್ಕೆ ಬಹಳ ಇಂಪಾಗಿರುವ ದರ್ಶನವುಳ್ಳವನಾಗಿಯೂ, ಮದದಾನೆಯಂತೆ ಸಂಚರಿಸುವವನಾಗಿಯೂ, ಜಟಾಮಂಡಲವಂ ಧರಿಸಿದವನಾಗಿಯೂ, ಮೃದುವಾದ ದೇಹವುಳ್ಳವನಾಗಿಯೂ ಬಹು ಬಲವಂತನಾಗಿಯೂ, ರಾಜಲಕ್ಷಣಗಳಿಂ ದೊಪ್ಪುವನಾಗಿಯೂ, ಕನ್ನೈದಿಲೆಯ ದಳದಂತೆ ಶ್ಯಾಮಲವರ್ಣ

ಧ್ಯಂಮಹೋದರೀ । ವಿಶಾಲಾಕ್ಷಂವಿರೂಪಾಕ್ಷೀಸುಕೇಶಂತಾಮ್ರಮೂರ್ಧಜಾ ॥ ಪ್ರೀತಿರೂಪಂವಿರೂಪಾಸಾಸುಸ್ವರಂಭೈರವಸ್ವರಾ । ತರುಣಂದಾರುಣಾವೃದ್ಧಾದಕ್ಷಿಣಂವಾಮಭಾಷಿಣೀ । ನ್ಯಾಯವೃತ್ತಂಸುದುರ್ವೃತ್ತಾಪ್ರಿಯಮಪ್ರಿಯದರ್ಶನಾ । ಶರೀರಜಸಮಾವಿಷ್ಟಾರಾಕ್ಷಸೀವಾಕ್ಯಮಬ್ರವೀತ್ ।೧೦। ಜಟೀತಾಪಸರೂಪೇಣಸಭಾರ್ಯಶ್ಶರಚಾಪಧೃತ್ । ಆಗತಸ್ತ್ವಮಿಮಂದೇಶಂಕಥಂರಾಕ್ಷಸಸೇವಿತಂ ॥ ಕಿಮಾಗಮನಕೃತ್ಯಂತೇತತ್ವಮಾಖ್ಯಾತುಮರ್ಹಸಿ ।೧೧॥ ಏವಮುಕ್ತಸ್ತುರಾಕ್ಷಸ್ಯಾಶೂರ್ಪನಖ್ಯಾಪರಂತಪಃ ॥ ಋಜುಬುದ್ಧಿತಯಾಸರ್ವಮಾಖ್ಯಾತುಮುಪಚಕ್ರಮೇ । ಅನೃತಂನಹಿ

ದೃಷ್ಟ್ವಾ-ಕಂಡು. ರಾಕ್ಷಸೀ-ಶೂರ್ಪಣಖೆಯೆಂಬ ರಕ್ಕಸಿಯು; ಕಾಮಮೋಹಿತಾ-ಮನ್ಮಥನಿಂದ ಮೋಹಿಸಲ್ಪಟ್ಟವಳು. ಬಭೂವ-ಆದಳು ॥೯॥ ದುರ್ಮುಖೀ-ದುಷ್ಟವಾದ ಮುಖವುಳ್ಳ, ಮಹೋದರೀ-ದೊಡ್ಡದಾದ ಹೊಟ್ಟೆಯುಳ್ಳ, ವಿರೂಪಾಕ್ಷೀ-ಸೊಟ್ಟಯಾಗಿರುವ ನೇತ್ರಗಳುಳ್ಳ, ತಾಮ್ರಮೂರ್ಧಜಾ-ಕೆಂಗೂದಲುಗಳುಳ್ಳ, ವಿರೂಪಾ-ಕುರೂಪಿಯಾದ, ಭೈರವಸ್ವರಾ-ಭಯಂಕರವಾದ ಧ್ವನಿಯುಳ್ಳ, ದಾರುಣಾ-ಕ್ರೂರಳಾದ, ವೃದ್ಧಾ-ಮುದುಕಿಯಾದ. ವಾಮಭಾಷಿಣೀ-ವಕ್ರವಾಗಿ ಮಾತನಾಡುತ್ತಿರುವ, ದುರ್ವೃತ್ತಾ-ದುಷ್ಟವಾದ ನಡತೆಯುಳ್ಳ, ಅಪ್ರಿಯದರ್ಶನಾ-ಮನಸ್ಸಿಗಿಂಪಾಗದಿರುವ ನೋಟವುಳ್ಳ, ಸಾರಾಕ್ಷಸೀ-ಆ ಶೂರ್ಪಣಖೆಯು, ಸುಮುಖಂ-ಸುಂದರವಾದ ಮುಖವುಳ್ಳ. ವೃತ್ತಮಧ್ಯಂ-ಗುಂಡಾಗಿರುವ ಮಧ್ಯಪ್ರದೇಶವುಳ್ಳ, ವಿಶಾಲಾಕ್ಷಂ-ವಿಸ್ತಾರವಾದ ನೇತ್ರಗಳುಳ್ಳ, ಸುಕೇಶಂ-ಉದ್ದವಾದ ಕೂದಲುಗಳುಳ್ಳ, ಪ್ರೀತಿರೂಪಂ-ಪ್ರೀತ್ಯಸಮಾನತಕ್ಕ ಸೌಂದರ್ಯವುಳ್ಳ, ಸುಸ್ವರಂ-ಒಳ್ಳೇ ಕಂಠಸ್ವರವುಳ್ಳ. ತರುಣಂ-ಯೌವನ ಪುರುಷನಾದ. ದಕ್ಷಿಣಂ-ಸಕಲಭೂತಗಳಲ್ಲಿ ದಯಾವಂತನಾದ ನ್ಯಾಯವೃತ್ತಂ-ಉಚಿತವಾದ ಆಚಾರವುಳ್ಳ, ಪ್ರಿಯಂ-ಇಷ್ಟನಾದ, ರಾಮಂ-ಶ್ರೀರಾಮನನ್ನುಕುರಿತು. ಶರೀರಜಸಮಾವಿಷ್ಟಾ-ಕಾಮನಿಂದ ಆಸಕ್ತಳಾಗಿ, ವಾಕ್ಯಂ-ಮಾತನ್ನು ಅಬ್ರವೀತ್-ನುಡಿದಳು.(ಇಲ್ಲಿ ಈ ಶೂರ್ಪಣಖೆಗೆ ಇರುವ ಗುಣಗಳು ಶ್ರೀರಾಮನಲ್ಲಿರುವ ಗುಣಗಳಿಗೆ. ಸರ್ವಾಂಶದಲ್ಲಿಯೆ ವಿರುದ್ಧವಾದ್ದರಿಂದ ತನ್ನ ದೋಷಗಳನ್ನು, ತಾನು ಅರಿಯದೆ ಅಂಥಾ ಶ್ರೀರಾಮನಿಗೆ ಅರ್ಹಳಲ್ಲವೆಂಬ ಪರಿಜ್ಞಾನವಿಲ್ಲದೆ ವ್ಯರ್ಥವಾಗಿ, ಕಾಮಾಸಕ್ತಳಾದಳು, ಲೋಕದಲ್ಲಿ ತಾನೂ ಸುಂದರಳಾಗಿದ್ದು ಅವನೂ ಸುಂದರಪುರುಷನಾದರೆ ಆ ಪುರುಷನಲ್ಲಿ ಆ ಹೆಂಗಸು ಆಸಕ್ತಳಾಗಬಹುದು, ಇಲ್ಲಿ ತನ್ನಲ್ಲಿರುವ ದೋಷಗಳಿಂದ, ಅವನಲ್ಲಿ ತಾನು ಆಸಕ್ತಳಾದರೂ, ಅವನಿಗೆ ತನ್ನಲ್ಲಿ ಅನುರಾಗ ಹುಟ್ಟೋತು. ಹುಟ್ಟದೆಂಬ ಪರಿಜ್ಞಾನ ಈಕೆಗೆ ಇಲ್ಲದೇಹೋಯಿತು. ಹೇಗೆಂದರೆ,—ಆ ಶ್ರೀರಾಮನು ಸುಂದರವಾದ ಮುಖವುಳ್ಳವನು. ತಾನು ದುರ್ಮುಖೀ ಅವನು ಸುಂದರವಾದ ಮಧ್ಯಪ್ರದೇಶವುಳ್ಳವನು, ತಾನು ಮಹೋದರೀ ಆತನು ವಿಶಾಲಾಕ್ಷನು. ಇವಳು ವಿರೂಪಾಕ್ಷಿ. ಆತನು ಸುಕೇಶನು, ಇವಳು ತಾಮ್ರಕೇಶೀ. ಪ್ರಿಯವಾದ ರೂಪವುಳ್ಳವನಾತನು. ಇವಳು ಕುರೂಪಿ, ಒಳ್ಳೇ ಸ್ವರವುಳ್ಳವನಾತನು, ಭೈರವಸ್ವರವುಳ್ಳವಳಿವಳು. ಆತನು ಯೌವನಸ್ಥನು. ಇವಳು ಮುದುಕೀ. ಅವನು ಸಕಲದಾಕ್ಷಿಣ್ಯಪರನು, ಇವಳು ವಿರುದ್ಧವಾದ ಮಾತುಗಳುಳ್ಳವಳು, ಆತನು ಸದಾಚಾರಸಂಪನ್ನನು, ಇವಳು ದುರ್ವ್ಯಾಪಾರಿ. ಆತನು ಸಕಲ ಭೂತಪ್ರಿಯನು. ಇವಳು ಸಕಲಭೂತಗಳಿಗೂ ಅಸಹ್ಯವಾದ ನೋಟವುಳ್ಳವಳು, ಇಂಥಾ ಶೂರ್ಪಣಖಿಯು ಮನುಷ್ಯರಲ್ಲಿ ಶ್ರೇಷ್ಠನಾದ ರಾಮನಲ್ಲಿ, ಆತನಗುಣಗಳಿಗೆ ತಾನು ಯೋಗ್ಯಳಲ್ಲದಿದ್ದರೂ, ಕಾಮಾಸಕ್ತಳಾಗಿ ಒಂದುಮಾತನ್ನು ನುಡಿದಳೆಂದು ತಾತ್ಪರ್ಯವು. ) ॥೧೦॥ ತಾಪಸರೂಪೇಣ-ಋಷಿಯರೂಪದಿಂದ, ಜಟೀ-ಜಟಾಧಾರಿಯಾದ, ತ್ವಂ-ನೀನು. ಸಭಾರ್ಯಃ-ಹೆಂಡತಿಯಿಂದೊಡಗೂಡಿದವನಾಗಿ, ಶರಚಾಪಧೃತ್-ಧನುರ್ಬಾಣಗಳ ಧರಿಸಿದವನಾಗಿ, ರಾಕ್ಷಸಸೇವಿತಂ-ರಕ್ಕಸರಿಂ ಸೇವಿಸಲ್ಪಟ್ಟ. ಇಮಂದೇಶಂ-ಈ ಪ್ರದೇಶವಂಕುರಿತು, ಕಥಮಾಗತಃ-ಹ್ಯಾಗೆಬಂದೆ, ॥ ತೇ-ನಿನಗೆ,ಆಗಮನಕೃತ್ಯಂ-ಬರುವದಕ್ಕೆ ಕಾರ್ಯವು. ಕಿಂ-ಯೇನು, ತತ್ವಂ-ಯಥಾರ್ಥವನ್ನು ಆಖ್ಯಾತುಂ-ಹೇಳುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೧೧॥ ಏವಂ-ಈ ಪರಿಯಾಗಿ, ಪರಂತಪಃ-ಶತ್ರುಸಂಹಾರ

ಬಣ್ಣವುಳ್ಳವನಾಗಿಯೂ, ಮನ್ಮಥನಿಗೆ ಸಮಾನವಾದ ತೇಜಸ್ಸುಳ್ಳವನಾಗಿಯೂ, ಇರುವ ಸಾಕ್ಷಾದ್ದೇವೇಂದ್ರನಿಗೆ ಸಮಾನನಾದ ಶ್ರೀರಾಮನಂ ಕಂಡು ಆ ಶೂರ್ಪಣಖಿಯು ಮನ್ಮಥಬಾಧೆಯಿಂದ ನೊಂದವಳಾದಳು ॥೯॥
ಅನಂತರದಲ್ಲಿ ದುರ್ವಾಸನೆಯುಳ್ಳ ಮುಖವುಳ್ಳವಳಾಗಿಯೂ, ಮಹತ್ತರವಾದ ಹೊಟ್ಟೆಯುಳ್ಳವಳಾಗಿಯೂ, ವಿರೂಪವಾದ ಕಣ್ಣುಗಳುಳ್ಳವಳಾಗಿಯೂ, ಕೆಂಗೂದಲುಳ್ಳವಳಾಗಿಯೂ, ಕುರೂಪಳಾಗಿಯೂ, ಭಯಂಕರವಾದ ಧ್ವನಿಯುಳ್ಳವಳಾಗಿಯೂ, ಬಹುಕ್ರೂರಳಾಗಿಯೂ, ಮುದುಕಿಯಾಗಿಯೂ, ವಕ್ರವಾಗಿ ಮಾತಾಡುವವಳಾಗಿಯೂ, ಕೆಟ್ಟನಡತೆಯುಳ್ಳವಳಾಗಿಯೂ, ಮನಸ್ಸಿಗೆ ಸಂತೋಷವಂಗೆಯ್ಯದಿರುವ ನೋಟವುಳ್ಳವಳಾಗಿಯೂ, ಇರುವ ಆ ಶೂರ್ಪನಖಿಯು, ಸುಂದರವಾದ ಮುಖವುಳ್ಳವನಾಗಿಯೂ, ಗುಂಡಗಿರುವ ಮಧ್ಯಪ್ರದೇಶವುಳ್ಳವನಾಗಿಯೂ, ವಿಸ್ತಾರವಾದ ನೇತ್ರಗಳುಳ್ಳವನಾಗಿಯೂ, ಸಮಿಚೀನವಾದ ಕೇಶಂಗಳುಳ್ಳವನಾಗಿಯೂ ಪ್ರೀತಿಯಂಗೆಯ್ಯಲರ್ಹವಾದ ಸೌಂದರ್ಯವುಳ್ಳವನಾಗಿಯೂ, ಒಳ್ಳೇದಾದ ಕಂಠಸ್ವರವುಳ್ಳವನಾಗಿಯೂ, ಯೌವನವಂತನಾಗಿಯೂ, ಸರ್ವಪ್ರಾಣಿಗಳಲ್ಲಿಯೂ ದಯೆಯಂಗೆಯ್ಯುತಲಿರುವನಾಗಿಯೂ, ಸದಾಚಾರವಂತನಾಗಿಯೂ ಇರುವ ಆ ಶ್ರೀರಾಮನಂಕುರಿತು ಆ ಶೂರ್ಪನಖಿಯು ಮನ್ಮಥಾಕ್ರಾಂತಚಿತ್ತಳಾಗಿ ಒಂದು ವಾಕ್ಯವಂ ಪೇಳುವಳದೆಂತೆನೆ;—ಋಷಿರೂಪದಿಂದ ಜಡೆಗಳಂ ಧರಿಸಿಕೊಂಡಿರುವ ನೀನು ಭಾರ್ಯಾಸಹಿತನಾಗಿಯೂ, ಬಾಣಕೋದಂ

ರಾಮಸ್ಯೈಕದಾಚಿದತಿಸಮ್ಮತಂ । ವಿಶೇಷೇಣಾಶ್ರಮಸ್ಥಸ್ಯಸಮೀಪೇಸ್ತ್ರೀಜನಸ್ಯಚ॥೧೬॥ ಆಸೀದ್ದಶರಥೋನಾಮರಾ
ಜಾತ್ರಿದಶವಿಕ್ರಮಃ । ತಸ್ಯಾಹಮಗ್ರಜಃಪುತ್ರೋರಾಮೋನಾಮಜನೈಶ್ಶ್ರುತಃ । ಭ್ರಾತಾಯಂಲಕ್ಷ್ಮಣೋನಾಮಯ
ವೀಯಾನ್ಮಾಮನುವ್ರತಃ ।೧೭। ಇಯಂಭಾರ್ಯಾಚವೈದೇಹೀಮಮಸೀತೇತಿವಿಶ್ರುತಾ। ನಿಯೋಗಾತ್ತುನರೇಂದ್ರಸ್ಯಪಿತು
ರ್ಮಾತುಶ್ಚಯಂತ್ರಿತಃ ।೧೮। ಧರ್ಮಾರ್ಥಂಧರ್ಮಕಾಂಕ್ಷೀಚವನಂವಸ್ತುಮಿಹಾಗತಃ । ತ್ವಾಂತುವೇದಿತುಮಿಚ್ಛಾಮಿಕ
ಥ್ಯತಾಂಕಾಸಿಕಸ್ಯವಾ ।೧೯। ನಹಿತಾವನ್ಮನೋಜ್ಞಾಂಗೀರಾಕ್ಷಸೀಪ್ರತಿಭಾಸಿಮೇ । ಇಹವಾಕಿಂನಿಮಿತ್ತಂತ್ವಮಾಗತಾ
ಬ್ರೂಹಿತತ್ತ್ವತಃ ॥೨೦॥ ಸಾಬ್ರವೀದ್ವಚನಂಶ್ರುತ್ವಾರಾಕ್ಷಸೀಮದನಾರ್ದಿತಾ । ಶ್ರೂಯತಾಂರಾಮವಕ್ಷ್ಯಾಮಿತತ್ತ್ವಾ
ರ್ಥಂವಚನಂಮಮ ॥೨೧॥ ಅಹಂಶೂರ್ಪಣಖಾನಾಮರಾಕ್ಷಸೀಕಾಮರೂಪಿಣೀ । ಅರಣ್ಯಂವಿಚರಾಮೀದಮೇಕಾಸರ್ವ

---

ಕನಾದ ಶ್ರೀರಾಮನು, ರಾಕ್ಷಸ್ಯಾ-ರಕ್ಕಸಿಯಾದ, ಶೂರ್ಪಣಖ್ಯಾ-ಶೂರ್ಪಣಖಿಯಿಂದ. ಉಕ್ತಃ-ಹೇಳಲ್ಪಟ್ಟವನಾಗಿ, ಋಜುಬುದ್ಧಿತ್ವಾತ್-ವಕ್ರ ವಿಲ್ಲದಿರುವ ಬುದ್ಧಿಯುಳ್ಳವನಾದ್ದರಿಂದ, ಸರ್ವಂ-ಸಮಸ್ತವನ್ನೂ, ಆಖ್ಯಾತುಂ-ಹೇಳುವದಕ್ಕಾಗಿ, ಉಪಚಕ್ರಮೇ-ಆರಂಭಿಸಿದನು ||೧೫|| ರಾಮಸ್ಯ-ಶ್ರೀರಾಮನಿಗೆ, ಕದಾಚಿತ್-ಯಾವಾಗಲಾದರೂ, ಅನೃತಂ- ಸುಳ್ಳುಮಾತು, ನಾತಿಸಮ್ಮತಂಹಿ-ಸಮ್ಮತವಾದ್ದಲ್ಲವಷ್ಟೆ. ವಿಶೇಷೇಣ-ವಿಶೇಷವಾಗಿ, ಆಶ್ರಮಸ್ಥಸ್ಯ-ವಾನಪ್ರಸ್ಥಾಶ್ರಮದಲ್ಲಿರುವವನಿಗೆ. ಸ್ತ್ರೀಜನಸ್ಯ-ಹೆಂಗಸರೆಂಬಜನದ, ಸಮೀಪೇ-ಸಮೀಪದಲ್ಲಿ, ನಸಮ್ಮತಂ-ಸಮ್ಮತವಾದ್ದಲ್ಲ ॥ ಇದು ಕವಿವಾಕ್ಯವು ||೧೬|| ದಶರಥೋನಾಮ-ದಶರಥನೆಂದು ಪ್ರಖ್ಯಾತನಾದ, ತ್ರಿದಶವಿಕ್ರಮಃ-ದೇವತೆಗಳಂತೆ ಪರಾಕ್ರಮಶಾಲಿಯಾದ, ರಾಜಾ-ಅರಸು ಆ ಸೀತ್-ಇದನು, ತಸ್ಯ-ಆ ದಶರಥರಾಯನಿಗೆ, ಅಹಂ-ನಾನು, ಅಗ್ರಜಃಪುತ್ರಃ-ಜ್ಯೇಷ್ಠಪುತ್ರನು, ರಾಮೋನಾಮ-ರಾಮನೆಂದು ಪ್ರಸಿದ್ಧನಾಗಿ, ಜನೈಃ-ಮನುಷ್ಯರಿಂದ, ಶ್ರುತಃ-ಕೇಳಲ್ಪಟ್ಟವನು, ಅಯಂ-ಈತನು, ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧನಾದ, ಯವೀಯಾನ್-ಕನಿಷ್ಠನಾದ, ಭ್ರಾತಾ-ಸಹೋದರನು, ಮಾಂ-ನನ್ನನ್ನು ಅನುವ್ರತಃ-ಅನುಸರಿಸಿ ಬಂದಿದ್ದಾನೆ, ||೧೭|| ಇಯಂ-ಇವಳು, ವೈದೇಹೀ-ಜನಕರಾಯನಮಗಳಾದ, ಸೀತೇತಿ-ಸೀತಾದೇವಿಯೆಂದು, ವಿಶ್ರುತಾ-ಪ್ರಸಿದ್ಧಳು, ಮಮ-ಯನಗೆ, ಭಾರ್ಯಾ-ಹೆಂಡತಿಯು. ನರೇಂದ್ರಸ್ಯ-ರಾಜನಾದ. ಪಿತುಃ-ತಂದೆಯ, ಮಾತುಃ-ತಾಯಿಯಾದ ಕೈಕೇಯೀದೇವಿಯ, ನಿಯೋಗಾತ್-ಆಜ್ಞೆಯದೆಶೆಯಿಂದ, ಯಂತ್ರಿತಃ-ಬದ್ಧನಾಗಿ, ಧರ್ಮಾರ್ಥಂ-ಧರ್ಮಸಂಪಾದನೆಗಾಗಿ. ಧರ್ಮಕಾಂಕ್ಷೀ-ಧರ್ಮವನ್ನೇ ಅಪೇಕ್ಷಿಸುತಿರುವನಾಗಿ. ಇಹ-ಇಲ್ಲಿ, ವನಂ-ಅರಣ್ಯವನ್ನುಕುರಿತು,ವಸ್ತುಂ-ನಿವಾಸಮಾಡುವದಕ್ಕೆ, ಆಗತಃ- ಬಂದಿದ್ದೇನೆ, ||೧೮||| ತ್ವಾಂತು-ನಿನ್ನನ್ನಾದರೆ, ವೇದಿತುಂ-ತಿಳಿಯುವದಕ್ಕೋಸುಗ, ಇಚ್ಛಾಮಿ-ಅಪೇಕ್ಷಿಸುತ್ತೇನೆ, ಕಾ-ಯಾವನಾಮಧೇಯವುಳ್ಳವಳು, ಕಸ್ಯವಾ ಯಾರಸಂಬಂಧಿಯು, ಅಸಿ-ಆಗಿದ್ದೀಯೋ, ಕಥ್ಯತಾಂ-ಹೇಳಲ್ಪಡಲೀ ||೧೯|| ಮನೋಜ್ಞಾಂಗೀತಾವತ್-ಮನೋಹರವಾದ ಶರೀರವುಳ್ಳವಳು, ನ-ಅಲ್ಲವಷ್ಟೇ. ಮೇ-ನನಗೆ, ರಾಕ್ಷಸೀ-ರಕ್ಕಸಿಯಾಗಿ, ಪ್ರತಿಭಾಸಿ-ತೋರುತ್ತೀಯೆ, ಇಹ-ಯಿಲ್ಲಿಗೆ, ತ್ವಂವಾ-ನೀನಾದರೆ. ಕಿಂನಿಮಿತ್ತಂ-ಯಾವನಿಮಿತ್ತವಾಗಿ, ಆಗತಾ-ಬಂದಿದ್ದೀ, ತತ್ತ್ವತಃ-ಯಥಾರ್ಥವಾಗಿ, ಬ್ರೂಹಿ-ಹೇಳುವವಳಾಗು||೨೦|| ಸಾರಾಕ್ಷಸೀ-ಆ ರಕ್ಕಸಿಯು. ಮದನಾರ್ದಿತಾ-ಮನ್ಮಥನಿಂದ ಹೊಡೆಯಲ್ಪಟ್ಟವಳಾಗಿ, ವಚನಂ-ಶ್ರೀರಾಮನ ವಾಕ್ಯವನ್ನು, ಶ್ರುತ್ವಾ-ಕೇಳಿ, ಅಬ್ರವೀತ್-ನುಡಿದಳು, ॥ ಹೇರಾಮ-ಎಲೈ ಶ್ರೀರಾಮನೇ, ತತ್ತ್ವಾರ್ಥಃ-ಯಥಾರ್ಥವಾದ, ಮಮ-ನನ್ನ, ವಚನಂ-ಮಾತನ್ನು, ವಕ್ಷ್ಯಾಮಿ-ಹೇಳುವೆನು, ಶ್ರೂಯತಾಂ-ಕೇಳಲ್ಪಡಲೀ ||೨೧||. ಅಹಂ-ನಾನು

---

ಡಗಳಂ ಧರಿಸುವವನಾಗಿಯೂ ಇರುವವನಾಗಿ, ಅಸುರರಿಂದ ಸೇವಿಸಲ್ಪಡುತಿರುವ ಈ ಸ್ಥಳಕ್ಕೆ ಎಂತು ಬಂದವನಾದೆ? ನೀನಿಲ್ಲಿಗೆ ಬರಲು ಕಾರಣವೇನಿರುವದು? ಯಥಾರ್ಥವಾಗಿ ಹೇಳುವನಾಗೆಂದು ಆ ಶೂರ್ಪನಖಿಯು ಕೇಳಿದವಳಾಗಲೂ, ಆ ದಶರಥನಂದನನಾದ ಶ್ರೀರಾಮನು ಆ ವಾಕ್ಯವಂ ಕೇಳಿದವನಾಗಿ ರುಜುಬುದ್ಧಿಯಿಂದ ಸಮಸ್ತವನ್ನು ಹೇಳಲೊಸಗಿದನದೆಂತೆನೆ:—ಯಾಕಂದರೆ,—ಶ್ರೀರಾಮನಿಗೆ ಯಾವಾಗಲಾದರೂ ಸರಿಯೆ ಅನೃತವಂನುಡಿವದು ಇಷ್ಟವಾದದ್ದಲ್ಲ, ಅದರಲ್ಲಿಯೂ ವಾನಪ್ರಸ್ಥಾಶ್ರಮದಲ್ಲಿರುವವನಿಗೆ ಸ್ತ್ರೀಸನ್ನಿಧಿಯಲ್ಲಿ ಅಸತ್ಯವಂನುಡಿಯಲಾರದು।೧೬॥ಎಲೌ ಅಂಗನೆಯೇ! ಕೇಳುವವಳಾಗು, ದೇವತಾಸದೃಶನಾದ ದಶರಥನೆಂದು ಪ್ರಖ್ಯಾತನಾದ ಒಬ್ಬ ಅರಸಿದ್ದನು ಆ ಮಹಾರಾಜನಿಗೆ ನಾನು ಹಿರೀಮಗನು, ಯೆನ್ನನ್ನು ರಾಮನೆಂದು ಯೆಲ್ಲರೂ ಕರೆವರು, ಈ ನನ್ನ ಸಂಗಡ ಬಂದಿರುವವನು ಲಕ್ಷ್ಮಣನೆಂದು ಪ್ರಸಿದ್ಧನಾದವನು! ಯೆನ್ನನುಜನು. ಈಕೆಯು ಜನಕರಾಜನ ಪುತ್ರಿಕೆಯು; ಸೀತೆಯೆಂದು ಪ್ರಖ್ಯಾತಳಾದವಳು, ಈಕೆಯೇ ಎನ್ನ ಮಡದಿಯು! ನಾನು ಆ ಮಹಾರಾಜನ ಮತ್ತು ಕೈಕೇಯೀದೇವಿಯ ಆಜ್ಞೆಗೆ ವಳಪಟ್ಟವನಾಗಿ, ಧರ್ಮಸಂಪಾದನೆಗೋಸುಗ ಧರ್ಮವನ್ನಿಚ್ಛಿಸಿ ಈ ಅರಣ್ಯದಲ್ಲಿ ವಾಸಂಗೈಯ್ಯುವದಕ್ಕಾಗಿ ಇಲ್ಲಿಗೆ ಬಂದೆನು. ॥೧೮। ನೀನ್ಯಾರು? ನಿನ್ನ ನಾಮಧೇಯವೇನು? ನಿನ್ನ ಬಂಧುಗಳ್ಯಾರು? ಹೇಳುವವಳಾಗು ನಾನು ತಿಳಿಯಲಿಚ್ಛಿಸುತ್ತೇನೆ ।೧೯। ನಿನ್ನನ್ನು ನೋಡಿದರೆ ರಾಕ್ಷಸಿಯಾಗಿ ತೋರುತ್ತಲಿದ್ದೀ ಇಲ್ಲಿ ಯಾತಕ್ಕೋಸುಗ ಬಂದವಳಾದೆ? ಯಥಾರ್ಥವನ್ನು ಹೇಳೆಂದು ಶ್ರೀರಾಮನು ನುಡಿದವನಾ

ಭಯಂಕರಾ ||೨೦|| ರಾವಣೋ ನಾಮ ಮೇ ಭ್ರಾತಾ ಬಲೀಯಾನ್ ರಾಕ್ಷಸೇಶ್ವರಃ । ವೀರೋ ವಿಶ್ರವಸಃ ಪುತ್ರೋ ಯದಿ ತೇ ಶ್ರೋತ್ರಮಾಗತಃ ||೨೧|| ಪ್ರವೃದ್ಧನಿದ್ರಶ್ಚ ಸದಾ ಕುಂಭಕರ್ಣೋ ಮಹಾಬಲಃ । ವಿಭೀಷಣಸ್ತು ಧರ್ಮಾತ್ಮಾ ನತು ರಾಕ್ಷಸಚೇಷ್ಟಿತಃ ||೨೨|| ಪ್ರಖ್ಯಾತವೀರ್ಯೌ ಚ ರಣೇ ಭ್ರಾತರೌ ಖರದೂಷಣೌ । ತಾನಹಂ ಸಮತಿಕ್ರಾಂತಾ ರಾಮ ತ್ವಾ ಪೂರ್ವದರ್ಶನಾತ್ ॥ ಸಮುಪೇತಾಸ್ಮಿ ಭಾವೇನ ಭರ್ತಾರಂ ಪುರುಷೋತ್ತಮಂ ||೨೩|| ಅಹಂ ಪ್ರಭಾವಸಂಪನ್ನಾ ಸ್ವಚ್ಛಂದಬಲಗಾಮಿನೀ । ಚಿರಾಯ ಭವ ಮೇ ಭರ್ತಾ ಸೀತಯಾ ಕಿಂ ಕರಿಷ್ಯಸಿ ||೨೪|| ವಿಕೃತಾ ಚ ವಿರೂಪಾ ಚ ನ ಚೇಯಂ ಸದೃಶೀ ತವ । ಅಹಮೇವಾನುರೂಪಾ ತೇ ಭಾರ್ಯಾರೂಪೇಣ ಪಶ್ಯ ಮಾಂ ||೨೫|| ಇಮಾಂ ವಿರೂಪಾಮಸತೀಂ ಕರಾಳಾಂ ನಿರ್ಣತೋದರೀಂ । ಅನೇನ ಸಹ ತೇ ಭ್ರಾತ್ರಾ ಭಕ್ಷಯಿಷ್ಯಾಮಿ ಮಾನುಷೀಂ । ತತಃ ಪರ್ವತಶೃಂಗಾಣಿ ವನಾನಿ ವಿವಿಧಾನಿ ಚ ॥ ಪಶ್ಯನ್ ಸಹ ಮಯಾ ಕಾಂತ ದಂಡಕಾನ್ ವಿಚರಿಷ್ಯ

---

ಶೂರ್ಪಣಖಾನಾಮ-ಶೂರ್ಪಣಖಿಯೆಂಬ, ರಾಕ್ಷಸೀ-ರಕ್ಕಸಿಯು, ಕಾಮರೂಪಿಣೀ-ಕಾಮರೂಪಿಯಾಗಿ, ಏಕಾ-ಒಬ್ಬಳೇ, ಸರ್ವಭಯಂಕರಾ-ಸರ್ವರಿಗೂ ಭಯಂಕರಳಾಗಿ, ಇದಮರಣ್ಯಂ-ಈ ಅರಣ್ಯದಲ್ಲಿ, ವಿಚರಾಮಿ-ಸಂಚರಿಸುವೆನು ||೨೦|| ಮೇ-ನನಗೆ, ಭ್ರಾತಾ-ಅಣ್ಣನಾದ, ಬಲೀಯಾನ್-ಬಲಿಷ್ಠನಾದ, ವೀರಃ-ಶೂರನಾದ, ವಿಶ್ರವಸಃ-ವಿಶ್ರವಸ್ಸಿಗೆ, ಪುತ್ರಃ-ಮಗನಾದ, ರಾವಣೋನಾಮ-ರಾವಣನೆಂದು ಪ್ರಸಿದ್ಧನಾದ, ರಾಕ್ಷಸೇಶ್ವರಃ-ರಾಕ್ಷಸರಾಜನು, ತೇ-ನಿನ್ನ, ಶ್ರೋತ್ರಂ-ಶ್ರೋತ್ರವನ್ನು ಕುರಿತು, ಆಗತೋಯದಿ-ಬಂದವನಾಗಿರಬಹುದು ||೨೧|| ಮಹಾಬಲಃ-ಮಹಾ ಬಲವಂತರಾದ, ಕುಂಭಕರ್ಣಃ-ಕುಂಭಕರ್ಣನು ಪ್ರವೃದ್ಧನಿದ್ರಶ್ಚ-ಪ್ರವೃದ್ಧಮಾನವಾದ ನಿದ್ರೆಯುಳ್ಳವನು, ವಿಭೀಷಣಸ್ತು-ವಿಭೀಷಣನಾದರೆ, ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳವನು, ರಾಕ್ಷಸಚೇಷ್ಟಿತಃ-ರಾಕ್ಷಸರ ನಡತೆಯುಳ್ಳವನು, ನತು-ಅಲ್ಲವಷ್ಟೇ ||೨೨|| ರಣೇ-ಕಾಳಗದಲ್ಲಿ, ಪ್ರಖ್ಯಾತವೀರ್ಯೌ-ಪ್ರಖ್ಯಾತವಾದ ಪರಾಕ್ರಮವುಳ್ಳ, ಖರದೂಷಣೌ-ಖರದೂಷಣನೂ ಎಂಬ ಭ್ರಾತರೌ-ಅಣ್ಣತಮ್ಮಂದಿರು, ಹೇರಾಮ-ಎಲೈ ಶ್ರೀರಾಮನೇ. ಅಹಂ-ನಾನು. ತಾನ್-ಅಂಥಾ ಅಣ್ಣತಮ್ಮಂದಿರನ್ನು, ಅತಿಕ್ರಾಂತಾ-ಅತಿಕ್ರಮಿಸಿದವಳಾಗಿ, ಅಪೂರ್ವದರ್ಶನಾತ್-ಪೂರ್ವದಲ್ಲಿ ಎಂದಿಗೂ ಕಾಣದಿರುವ ನಿನ್ನ ಸೌಂದರ್ಯದ ದರ್ಶನದಿಂದಲೂ, ಪುರುಷೋತ್ತಮಂ-ಪುರುಷಶ್ರೇಷ್ಠನಾದ, ತ್ವಾ-ನಿನ್ನನ್ನು, ಭರ್ತಾರಂ-ಗಂಡನನ್ನಾಗಿ, ಭಾವೇನ-ಅಭಿಪ್ರಾಯದಿಂದ, ಸಮುಪೇತಾಸ್ಮಿ-ಬಂದವಳಾಗಿದ್ದೇನೆ, ||೨೩|| ಅಹಂ-ನಾನು. ಪ್ರಭಾವಸಂಪನ್ನಾ, ಮಹಾತ್ಮ್ಯದಿಂ ಕೂಡಿದವಳು, ಸ್ವಚ್ಛಂದಬಲಗಾಮಿನೀ-ಸ್ವೇಚ್ಛೆಯಿಂದಲೂ ನನ್ನ ಸಾಮರ್ಥ್ಯದಿಂದಲೂ ಸಂಚಾರಮಾಡುವವಳು. ಚಿರಾಯ-ಬಹುಕಾಲವು, ಮೇ-ಯೆನಗೆ, ಭರ್ತಾ-ಪತಿಯು, ಭವ-ಆಗು, ಸೀತಯಾ-ಸೀತಾದೇವಿಯಿಂದ ಕಿಂಕರಿಷ್ಯಸಿ-ಯೇನುಮಾಡುವಿ ||೨೪|| ವಿಕೃತಾ-ವಿಕಾರವುಳ್ಳ, ವಿರೂಪಾ-ಸೌಂದರ್ಯರಹಿತಳಾದ, ಇಯಂ-ಈ ಸೀತಾದೇವಿಯು, ತವ-ನಿನಗೆ, ಸದೃಶೀ-ಅನುರೂಪಳು, ನ-ಅಲ್ಲ, ಅಹಮೇವ-ನಾನೇ, ತೇ-ನಿನಗೆ ರೂಪೇಣ-ಸೌಂದರ್ಯದಿಂದ, ಅನುರೂಪಾ-ಅರ್ಹಳಾಗಿದ್ದೇನೆ, ಮಾಂ-ನನ್ನನ್ನು, ಭಾರ್ಯಾ-ಹೆಂಡತಿ ಎಂದು, ಪಶ್ಯ-ಕಾಣು, (ಯದ್ವಾ-ಭಾರ್ಯಾರೂಪೇಣ-ಭಾರ್ಯಾಸ್ವರೂಪದಿಂದ, ಮಾಂ-ನನ್ನನ್ನು, ಪಶ್ಯ-ಕಾಣು) ||೨೫|| ವಿರೂಪಾಂ-ವಿಕಾರರೂಪವುಳ್ಳ. ಅಸತೀಂ-ಒಳ್ಳೇವಳಾಗದಿರುವ, ಕರಾಳಾಂ-ವಕ್ರವಾದ ಶರೀರವುಳ್ಳ, ನಿರ್ಣತೋದರೀಂ-ಬಹುವಾದ ಗುಣಿಯಾದ ಉದರವುಳ್ಳ, ಮಾನುಷೀಂ-ಮನುಷ್ಯಸ್ತ್ರೀಯಾದ, ಇಮಾಂ-ಈ ಸೀತಾದೇವಿಯನ್ನು, ತೇ-ನಿನ್ನ, ಭ್ರಾತ್ರಾ-ತಮ್ಮನಾದ, ಅನೇನಸಹ-ಈ ಲಕ್ಷ್ಮಣನೊಡಗೂಡ, ಭಕ್ಷಯಿಷ್ಯಾಮಿ-ತಿನ್ನುವೆನು ||೨೬|| ಹೇಕಾಂತ-ಎಲೈ ಗಂಡನೇ, ತತಃ-ಬಳಿಕ, ಪರ್ವತಶೃಂಗಾಣಿ-ಪರ್ವತದ ತುದಿಗಳನ್ನು, ವಿವಿಧಾನಿ-ನಾನಾಬಗೆಗಳಾದ, ವನಾನಿ-ಅರಣ್ಯಗಳನ್ನು, ಪಶ್ಯನ್-ನೋಡುತ್ತಿರುವವನಾಗಿ, ಮಯಾಸಹ-ನನ್ನೊಡಗೂಡ, ದಂಡಕಾನ್-ದಂಡಕಾರಣ್ಯಗಳಲ್ಲಿ, ವಿಚರಿಷ್ಯಸಿ-ಸಂಚರಿಸುವಿ ||೨೭|| ಇತ್ಯೇವಂ-ಈ ರೀತಿಯಾಗಿ, ಉಕ್ತಃ-ಹೇಳಲ್ಪಟ್ಟ. ವಾಕ್ಯವಿಶಾರದಃ-ಮಾತುಗಳಲ್ಲಿ ಚತುರನಾದ

---

ಗಲು; ಆ ಶೂರ್ಪನಖಿಯು ಮನ್ಮಥಾಕ್ರಾಂತಚಿತ್ತಳಾಗಿ ಎಲೈ ಶ್ರೀರಾಮನೇ ಕೇಳೆಂದು ಹೇಳುವಳದೆಂತೆನೆ;—।೨೦

ನಾನು ಶೂರ್ಪಣಖಿಯೆಂಬ ರಕ್ಕಸಿಯು, ಕಾಮರೂಪಿಣಿಯಾಗಿ ಒಬ್ಬಳೇ, ಸರ್ವರಿಗೂ ಭಯಂಕರಳಾಗಿ ಈ ಅರಣ್ಯದಲ್ಲಿ ತಿರುಗುವೆನು. ನನ್ನ ಅಣ್ಣನಾದ, ಶೂರನಾದ ಮತ್ತು ವಿಶ್ರವಸ್ಸೆಂಬ ಮಹಾಮುನಿಗೆ ಮಗನಾದ ರಾವಣನೆಂದು ಪ್ರಖ್ಯಾತನಾದ ಅಸುರನು ನಿನ್ನ ಶ್ರೋತ್ರವನ್ನು ಕುರಿತು ಇಲ್ಲಿಗೆ ಬಂದಿರಬಹುದು ।೨೧। ಬಹಳ ಬಲಶಾಲಿಯಾದ ಕುಂಭಕರ್ಣನು ಪ್ರವೃದ್ಧಮಾನವಾದ ನಿದ್ರೆಯುಳ್ಳವನು, ವಿಭೀಷಣನಾದರೆ ಧರ್ಮದಲ್ಲೇ ಮನಸ್ಸುಳ್ಳವನು, ರಕ್ಕಸರ ನಡತೆಯುಳ್ಳವನಲ್ಲ ।೨೨। ಎಲೈ ಶ್ರೀರಾಮನೇ! ಯುದ್ಧದಲ್ಲಿ ಅಪ್ರತಿಪರಾಕ್ರಮವುಳ್ಳ ಖರದೂಷಣರೆಂಬವರಿವರು, ನಾನು ಅಂಥಾವರನ್ನತಿಕ್ರಮಿಸಿ ಯೆಂದೆಂದಿಗೂ ಕಾಣದ ನಿನ್ನ ಸೌಂದರ್ಯವಂ ಕಂಡು ನಿನ್ನನ್ನು ಪತಿಯಾಗಿ ವರಿಸಲು ಬಂದಿದ್ದೇನೆ ।೨೩। ನಾನು ಮಹಾ ಪ್ರಭಾವಸಂಪನ್ನಳು, ಸ್ವೇಚ್ಛೆಯಿಂದಲೂ, ಬಲದಿಂದಲೂ ಸಂಚರಿಸತಕ್ಕವಳು, ನನಗೆ ನೀನು ಬಹಳಕಾಲವು ಗಂಡನಾಗಿರು, ಈ ಸೀತಾದೇವಿಯನ್ನೇನುಮಾಡುವಿ? ವಿಕಾರವುಳ್ಳ, ಸೌಂದರ್ಯಹೀನಳಾದ ಈ ಸೀತೆಯು ನಿನಗೆ ಸರಿಯಾದವಳಲ್ಲ, ಸೌಂದರ್ಯದಿಂದ ಅನುರೂಪಳಾಗಿದ್ದೇನೆ, ನನ್ನನ್ನು ಹೆಂಡತಿಯಾಗಿ ಕಾಣು ।೨೫। ಎಲೈ ಪತಿಯೇ! ಬಳಿಕ ಪರ್ವತ ಶಿಖರಗಳನ್ನೂ ಅನೇಕಗ

ಇದಂ ವಚನಮಾರೇಭೇ ವಕ್ತುಂ ವಾಕ್ಯವಿಶಾರದಃ ॥೨೦॥
ಸಿ ॥೨೧॥ ಇತ್ಯೇವಮುಕ್ತಃ ಕಾಕುತ್ಸ್ಥಃ ಪ್ರಹಸ್ಯ ಮದಿರೇಕ್ಷಣಾಂ ।

—*** ಇತಿ ಶ್ರೀಮದಾರಣ್ಯಕಾಂಡೇ-ಸಪ್ತದಶಸ್ಸರ್ಗಃ. ***—

ತತಶ್ಶೂರ್ಪಣಖಾಂ ರಾಮಃ ಕಾಮಪಾಶಾವಪಾಶಿತಾಂ । ಸ್ವೇಚ್ಛಯಾ ಶ್ಲಕ್ಷ್ಣಯಾ ವಾಚಾ ಸ್ಮಿತಪೂರ್ವಮಥಾಬ್ರ
ವೀತ್ ॥೧॥ ಕೃತದಾರೋಽಸ್ಮಿ ಭವತಿ ಭಾರ್ಯೇಯಂ ದಯಿತಾ ಮಮ । ತ್ವದ್ವಿಧಾನಾಂ ತು ನಾರೀಣಾಂ ಸುದುಃಖಾ ಸಸಪತ್ನ
ತಾ ॥೨॥ ಅನುಜಸ್ತ್ವೇಷ ಮೇ ಭ್ರಾತಾ ಶೀಲವಾನ್ ಪ್ರಿಯದರ್ಶನಃ । ಶ್ರೀಮಾನಕೃತದಾರಶ್ಚ ಲಕ್ಷ್ಮಣೋ ನಾಮ ವೀರ್ಯ
ವಾನ್ ॥೩॥ ಅಪೂರ್ವೀ ಭಾರ್ಯಯಾ ಚಾರ್ಥೀ ತರುಣಃ ಪ್ರಿಯದರ್ಶನಃ । ಅನುರೂಪಶ್ಚ ತೇ ಭರ್ತಾ ರೂಪಸ್ಯಾಸ್ಯ ಭವಿಷ್ಯ
ತಿ ॥೪॥ ಏನಂ ಭಜ ವಿಶಾಲಾಕ್ಷಿ ಭರ್ತಾರಂ ಭ್ರಾತರಂ ಮಮ । ಅಸಪತ್ನಾ ವರಾರೋಹೇ ಮೇರುಮರ್ಕಪ್ರಭಾ ಯಥಾ ॥೫॥ ಇ

ಮದಿರೇಕ್ಷಣಾಂ-ಮದಯುಕ್ತವಾದ ನೇತ್ರಗಳುಳ್ಳ, (ಮದ್ಯ-ಮದ್ಯಪಾನದಿಂ ಕೆಂಪೇರಿದ ಕಣ್ಣುಗ
ಕಾಕುತ್ಸ್ಥಃ-ಶ್ರೀರಾಮನು, ಪ್ರಹಸ್ಯ-ನಕ್ಕು, ಇದಂ ವಚನಂ-ಈ ಮಾತನ್ನು, ವಕ್ತುಂ-ಹೇಳುವದಕ್ಕಾಗಿ, ಆರೇಭೇ-ಉಪಕ್ರಮಿಸಿದನು॥ ॥೨೦॥ ॥
ಳುಳ್ಳ ಶೂರ್ಪಣಖಿಯಂ ಕುರಿತು,)

—**ಇತಿ ಶ್ರೀಮದಾರಣ್ಯಕಾಂಡೇ-ಸಪ್ತದಶಸ್ಸರ್ಗಃ**—

ಶ್ರೀರಾಮ॥ ತತಃ-ಬಳಿಕ, ರಾಮಃ-ಶ್ರೀರಾಮನು, ಕಾಮಪಾಶಾವಪಾಶಿತಾಂ-ಮನ್ಮಥಪಾಶದಿಂ ಕಟ್ಟಲ್ಪಟ್ಟ, ಶೂರ್ಪಣಖಾಂ-ಶೂರ್ಪಣ
ಖಿಯನ್ನು ಕುರಿತು, ಸ್ವೇಚ್ಛಯಾ-ಪರಿಹಾಸರೂಪ ವಿನೋದದಿಂದ. ಶ್ಲಕ್ಷ್ಣಯಾ-ಮೃದುವಾದ, ವಾಚಾ-ಮಾತಿನಿಂದ, ಸ್ಮಿತಪೂರ್ವಂ-ಮಂದಹಾಸಪೂ
ರ್ವಕವಾಗುಳ್ಳದ್ದಂತೆ, ಅಥ-ಬಳಿಕ. ಅಬ್ರವೀತ್-ನುಡಿದನು ॥೧॥ ಹೇ ಭವತಿ-ಎಲೈ ಪೂಜ್ಯಳೇ, ಅಹಂ-ನಾನು, ಕೃತದಾರಃ-ಮಾಡಲ್ಪಟ್ಟ ಹೆಂಡ
ತಿಯುಳ್ಳವನು. ಅಸ್ಮಿ-ಆಗಿಧ್ದೇನೆ, ಇಯಂ-ಇವಳು, ಮಮ-ನನಗೆ, ದಯಿತಾ-ಇಷ್ಟಳಾದ, ಭಾರ್ಯಾ-ಹೆಂಡತಿಯು, ತ್ವದ್ವಿಧಾನಾಂ-ನಿನ್ನಂಥಾ ನಾರೀಣಾಂ-ಸ್ತ್ರೀಯರುಗಳಿಗಾದರೆ, ಸಸಪತ್ನತಾ-ಸವತಿಯರಿಂದ ಕೂಡುವಿಕೆ, ಸುದುಃಖಾ-ಬಹು ದುಃಖಕರವಾದದ್ದು ॥೨॥ ಮೇ-ನನಗೆ, ಅನು
ಜಃ-ತಮ್ಮನಾದ, ಭ್ರಾತಾ-ಸಹೋದರನಾದ ಶೀಲವಾನ್-ಒಳ್ಳೇ ಸ್ವಭಾವವುಳ್ಳವನು, ಪ್ರಿಯದರ್ಶನಃ-ಇಷ್ಟವಾದ ನೋಡುವಿಕೆಯುಳ್ಳವನು
ಶ್ರೀಮಾನ್-ಕಾಂತಿವಂತನು, ಅಕೃತದಾರಶ್ಚ-ಮದುವೆಯಲ್ಲಿ ಹೆಂಡತಿಯಿಲ್ಲದವನು, ಲಕ್ಷ್ಮಣೋ ನಾಮ-ಲಕ್ಷ್ಮಣನೆಂದು ಪ್ರಸಿದ್ಧನಾದವನು, ವೀರ್ಯ
ವಾನ್-ಸಮರ್ಥನು ॥೩॥ ಅಪೂರ್ವೀ-ಭಾರ್ಯಾಸುಖವನ್ನು ಪೂರ್ವದಲ್ಲಿ ಅನುಭವಿಸದಿರುವನು, ಭಾರ್ಯಯಾ-ಹೆಂಡತಿಯಿಂದ. ಅರ್ಥೀ-ಪ್ರಯೋಜನ
ವುಳ್ಳವನು. ತರುಣಃ-ಯೌವನಪುರುಷನು, ಪ್ರಿಯದರ್ಶನಃ-ಇಂಪಾದ ನೋಡುವಿಕೆಯುಳ್ಳವನು, ತೇ-ನಿನ್ನ. ರೂಪಸ್ಯ-ಸೌಂದರ್ಯಕ್ಕೆ, (ತೇ-ನಿನ್ನ
ಕುರೂಪಸ್ಯ-ಕುತ್ಸಿತರೂಪಕ್ಕೆ, ಅನುರೂಪಃ-ಸಮಾನವಾದ, ಭರ್ತಾ-ಗಂಡನು, ಭವಿಷ್ಯತಿ-ಆಗುವನು, ತೇ-ನಿನಗೆ, ಅಭರ್ತಾ-ಭರ್ತನಾಗದಿರು
ವನು, ॥೪॥ ಹೇ ವಿಶಾಲಾಕ್ಷಿ-ಎಲೈ ದೊಡ್ಡದಾಗಿರುವ ಕಣ್ಣುಗಳುಳ್ಳವಳೇ ಹೇ ವರಾರೋಹೇ-ಎಲೈ ಶ್ರೇಷ್ಠಳೇ, ಮಮ-ನನ್ನ. ಭ್ರಾತರಂ-ತಮ್ಮನಾದ ಏನಂ-
ಈತನನ್ನು, ಭರ್ತಾರಂ - ಗಂಡನನ್ನಾಗಿ, ಅಸಪತ್ನಾ-ಸವತಿಯಿಲ್ಲದವಳಾಗಿ, ಮೇರುಂ-ಮೇರುಪರ್ವತವನ್ನು, ಅರ್ಕಪ್ರಭಾ ಯಥಾ-ಸೂರ್ಯನ ಪ್ರಭೆ
ಯಂತೆ, ಭಜ-ಹೊಂದು ॥೫॥ ಇತಿ-ಈ ಪರಿಯಾಗಿ, ರಾಮೇಣ-ಶ್ರೀರಾಮನಿಂದ, ಪ್ರೋಕ್ತಾ-ಹೇಳಲ್ಪಟ್ಟ, ಸಾ ರಾಕ್ಷಸೀ-ಆ ರಕ್ಕಸಿಯು, ಕಾಮಮೋ
ಹಿತಾ-ಕಾಮದಿಂ ಭ್ರಾಂತಳಾಗಿ, ತತಃ-ಬಳಿಕ, ರಾಮಂ-ಶ್ರೀರಾಮನನ್ನು, ವಿಸೃಜ್ಯ-ಬಿಟ್ಟು, ಸಹಸಾ-ಜಾಗ್ರತೆಯಾಗಿ, ಲಕ್ಷ್ಮಣಂ-ಲಕ್ಷ್ಮಣನಂ ಕುರಿತು

ನನ್ನೊಂದಿಗೆ ದಂಡಕಾರಣ್ಯಗಳಲ್ಲಿ ಸಂಚರಿಸುವೆನೆಂದು ಹೇಳಲ್ಪಟ್ಟವನಾಗಿ ವಾಗ್ವಿ
ಳಾದ ವನಗಳನ್ನೂ ನೋಡುತ್ತಾ,
ಶಾರದನಾದ ಶ್ರೀರಾಮನು ನಕ್ಕು ಮದಯುಕ್ತವಾದ ಕಂಗಳುಳ್ಳ ಆ ಶೂರ್ಪಣಖಿಯಂ ಕುರಿತು ಹೇಳಲೊಸಗಿದನು॥

—** ಆರಣ್ಯಕಾಂಡದಲ್ಲಿನ ೧೭ನೆಯ ಸರ್ಗಂ ಮುಗಿದುದು. **—

ಬಳಿಕ ಶ್ರೀರಾಮನು ಮನ್ಮಥನಪಾಶದಿಂ ಕಟ್ಟಲ್ಪಟ್ಟ ಶೂರ್ಪಣಖಿಯನ್ನು ಕುರಿತು ಪರಿಹಾಸರೂಪವಾದ ವಿನೋದದಿಂದಲೂ, ಮೃದುವಾಕ್ಕುಗಳಿಂದಲೂ, ಸ್ಮಿತಪೂರ್ವವಾಗಿ ನುಡಿದನದೆಂತೆನೆ,— ॥೧॥ ಎಲೈ ಪೂಜ್ಯಳೇ! ನಾನು ಹೆಂಡತಿಯನ್ನು ಮದುವೆಯಾಗಿಧ್ದೇನೆ; ಈಕೆಯು ನನಗೆ ಇಷ್ಟಳಾದ ಸತಿಯು; ನಿನ್ನಂಥಾ ಸ್ತ್ರೀಯರಿಗೆ ಸಾಪತ್ನ್ಯರಿಂದ ಕೂಡುವದು ದುಃಖಕರವಾದದ್ದು; ಯೆನ್ನನುಜನಾದ ಒಳ್ಳೇ ಸ್ವಭಾವವುಳ್ಳ ಬಹು ಬೆಳಗುತಲಿರುವ ಈ ಲಕ್ಷ್ಮಣನೆಂಬವನು, ಮಹಾ ಸಾಮರ್ಥ್ಯವುಳ್ಳವನು; ಭಾರ್ಯಾಸುಖವನ್ನನುಭವಿಸದಿರುವ ನಾದ ಕಾರಣ ಪ್ರಿಯೆಯನ್ನಿಚ್ಛಿಸುತಲಿರುವನು; ಬಹು ಸೌಂದರ್ಯಶಾಲಿಯು, ನಿನಗೆ ಅನುರೂಪನಾದ ಪತಿಯಾಗಿರುವನು. (ವಿಶೇಷಾಭಿಪ್ರಾಯವೇನೆಂದರೆ,—ನಿನ್ನ ಕುರೂಪಕ್ಕೆ ಮಹಾ ರೂಪವಂತನಾದ ಆತನು ಪತಿಯಾಗಲಾರನೆಂದು ಭಾವವು) ॥೪॥ ಎಲೈ ವಿಸ್ತಾರವಾದ ನೇತ್ರಂಗಳುಳ್ಳವಳೇ! ನನ್ನ ಒಡಹುಟ್ಟಿದವನಾದ ಆತನನ್ನು, ಮೇರು ಗಿರಿಯನ್ನು ಸೂರ್ಯಪ್ರಭೆಯು ಹೊಂದುವಂತೆ ಹೊಂದುವವಳಾಗು ॥೫॥ ಎಂದು ಶ್ರೀರಾಮನಿಂದ ನಿರೂಪಿಸಲ್ಪಟ್ಟವ

ತಿರಾಮೇಣಸಾಪ್ರೋಕ್ತಾರಾಕ್ಷಸೀಕಾಮಮೋಹಿತಾ । ವಿಸೃಜ್ಯರಾಮಂಸಹಸಾತತೋಲಕ್ಷ್ಮಣಮಬ್ರವೀತ್ ।೬। ಅಸ್ಯ
ರೂಪಸ್ಯತೇಯುಕ್ತಾಭಾರ್ಯಾಹಂವರವರ್ಣಿನೀ । ಮಯಾಸಹಸುಖಂಸರ್ವಾಂದಂಡಕಾನ್ವಿಚರಿಷ್ಯಸಿ ।೭। ಏವಮು
ಕ್ತಸ್ತುಸೌಮಿತ್ರೀರಾಕ್ಷಸ್ಯಾವಾಕ್ಯಕೋವಿದಃ । ತತಶ್ಶೂರ್ಪಣಖಾಂಸ್ಮಿತ್ವಾಲಕ್ಷ್ಮಣೋಯುಕ್ತಮಬ್ರವೀತ್ ।೮।
ಕಥಂದಾಸಸ್ಯಮೇದಾಸೀಭಾರ್ಯಾಭವಿತುಮಿಚ್ಛಸಿ । ಸೋಹಮಾರ್ಯೇಣಪರವಾನ್ಭ್ರಾತ್ರಾಕಮಲವರ್ಣಿನಿ ।೯। ಸಮೃ
ದ್ಧಾರ್ಥಸ್ಯಸಿದ್ಧಾರ್ಥಾಮುದಿತಾಮಲವರ್ಣಿನೀ । ಆರ್ಯಸ್ಯತ್ವಂವಿಶಾಲಾಕ್ಷಿಭಾರ್ಯಾಭವಯವೀಯಸೀ ।೧೦। ಏನಾಂವಿ
ರೂಪಾಮಸತೀಂಕರಾಳಾಂನಿರ್ಣತೋದರೀಂ । ಭಾರ್ಯಾಂವೃದ್ಧಾಂಪರಿತ್ಯಜ್ಯತ್ವಾಮೇವೈಷಭಜಿಷ್ಯತಿ ।೧೧। ಕೋಹಿ

---

ರಿತು, ಅಬ್ರವೀತ್-ನುಡಿದಳು ||೬|| ತೇ-ನಿನ್ನ ಸಂಬಂಧವಾದ, ಅಸ್ಯರೂಪಸ್ಯ-ಈ ರೂಪಕ್ಕೆ, ಯುಕ್ತಾ-ಅರ್ಹಳಾದ, ವರವರ್ಣಿನೀ-ಶ್ರೇಷ್ಠಸ್ತ್ರೀ
ಯಾದ, ಅಹಂ-ನಾನು, ಭಾರ್ಯಾ-ಹೆಂಡತಿಯಾಗಿದ್ದೇನೆ. ಮಯಾಸಹ-ನನ್ನೊಡಗೂಡ. ಸುಖಂ-ಸುಖವಾಗಿ, ದಂಡಕಾನ್-ದಂಡಕಾರಣ್ಯದಲ್ಲಿ. ವಿಚರಿ
ಷ್ಯಸಿ-ಸಂಚಾರವಮಾಡುವಿ ||೭|| ರಾಕ್ಷಸ್ಯಾ-ಶೂರ್ಪನಖಿಯಿಂದ. ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ. ವಾಕ್ಯಕೋವಿದಃ-ಮಾತುಗಳಲ್ಲಿ
ಶ್ರೇಷ್ಠನಾದ. ಸೌಮಿತ್ರಿಃ-ಸುಮಿತ್ರಾಪುತ್ರನಾದ, ಲಕ್ಷ್ಮಣಃ-ಲಕ್ಷ್ಮಣನು. ಸ್ಮಿತ್ವಾ-ನಕ್ಕು, ತತಃ-ಬಳಿಕ. ಶೂರ್ಪನಖಾಂ-ಮರಗಳಂತೆ ದೊಡ್ಡವಾಗಿ
ರುವ ಉಗುರುಗಳುಳ್ಳ ಶೂರ್ಪನಖಿಯಂಕುರಿತು. ಯುಕ್ತಂ-ಯೋಗ್ಯವಾಗಿ, ಅಬ್ರವೀತ್-ನುಡಿದನು ||೮|| ಹೇಕಮಲವರ್ಣಿನಿ-ಎಲೌ ಕಮಲ
ವರ್ಣದೋಪಾದಿಯಲ್ಲಿ ಬಣ್ಣವುಳ್ಳವಳೇ, ಹೇಅಕಮಲವರ್ಣಿನೀ-ಕ್ರೂರವಾದ ವರ್ಣವುಳ್ಳವಳೇ, ಸೋಹಂ-ಆ ಈ ನಾನು, ಭ್ರಾತ್ರಾ-ಅಣ್ಣನಾದ,
ಆರ್ಯೇಣ-ಪೂಜ್ಯನಾದ ರಾಮನಿಂದ, ಪರವಾನ್-ಪರಾಧೀನನು, ದಾಸಸ್ಯ-ಚಾಕರನಾದ, ಮೇ-ನನಿಗೆ, ಭಾರ್ಯಾ-ಹೆಂಡತಿಯಾಗಿ. ದಾಸೀ-ಚಾಕರಿಮಾ
ಡುವವಳು, ಭವಿತುಂ-ಆಗುವದಕ್ಕಾಗಿ, ಕಥಮಿಚ್ಛಸಿ-ಹ್ಯಾಗೆ ಸಮ್ಮತಿಪಡುತ್ತೀ ||೯|| ಹೇವಿಶಾಲಾಕ್ಷಿ-ಎಲೌ ವಿಸ್ತಾರವಾದ ನೇತ್ರಗಳುಳ್ಳವಳೇ, ಸಮೃ
ದ್ಧಾರ್ಥಸ್ಯ-ಸಮಸ್ತ ಪ್ರಯೋಜನಗಳುಳ್ಳ, ಆರ್ಯಸ್ಯ-ಶ್ರೀರಾಮನಿಗೆ, ತ್ವಂ-ನೀನು, ಸಿದ್ಧಾರ್ಥಾ-ನಿಷ್ಪನ್ನವಾದ ಪ್ರಯೋಜನವುಳ್ಳವಳಾಗಿ,
ಮುದಿತಾಮಲವರ್ಣಿನೀ-ಸಂತೋಷಗೊಂಡವಳಾಗಿ ನಿರ್ಮಲವಾದ ವರ್ಣವುಳ್ಳ. ಯವೀಯಸೀ-ಕನಿಷ್ಠಳಾದ. ಭಾರ್ಯಾ-ಹೆಂಡತಿ. ಭವ-ಆಗು,
(ಹೇಅಮುದಿತಾಮಲವರ್ಣಿನೀ-ಸಂತೋಷವಿಲ್ಲದವಳಾಗಿ ಮಾಲಿನ್ಯಯುಕ್ತವಾದ ವರ್ಣವುಳ್ಳವಳಾಗಿ. ಯವೀಯಸೀ-ನೀಚಳಾಗು ಎಂದು ಗೂಢಾ
ಭಿಪ್ರಾಯವು) ||೧೦|| ವಿರೂಪಾಂ-ರೂಪರಹಿತಳಾದ, ಅಸತೀಂ-ಅಪ್ರಶಸ್ತಳಾದ, ಕರಾಳಾಂ-ನಿಮ್ನೋನ್ನತರೂಪವುಳ್ಳ, ನಿರ್ಣತೋದರೀಂ-ಬಹಳ ನಿ
ಮ್ನವಾದ ಹೊಟ್ಟೆಯುಳ್ಳ, ವೃದ್ಧಾಂ-ಮುದುಕಿಯಾದ, ಏನಾಂಭಾರ್ಯಾಂ-ಈ ಹೆಂಡತಿಯನ್ನು, ಪರಿತ್ಯಜ್ಯ-ಬಿಟ್ಟು. ತ್ವಾಮೇವ-ನಿನ್ನನ್ನೇ,
ಏಷಃ-ಈ ಶ್ರೀರಾಮನು. ಭಜಿಷ್ಯತಿ-ಹೊಂದುವನು. (ವಸ್ತುತಸ್ತು-ವಿರೂಪಾಂ-ವಿಶೇಷವಾದ ರೂಪವುಳ್ಳ, ಅಸತೀಂ-ಪತಿವ್ರತಾಂತರ ರಹಿತಳಾದ,
ಕರಾಳಾಂ-ಉನ್ನತವಾಗಿರುವ, ನಿರ್ಣತೋದರೀಂ-ನಿಮ್ನವಾಗಿರುವ ಉದರವುಳ್ಳ, ವೃದ್ಧಾಂ-ಜ್ಞಾನಶೀಲಗಳಿಂ ವೃದ್ಧಳಾದ ಇಂಥಾ ಭಾರ್ಯೆಯನ್ನು
ಬಿಟ್ಟು ನಿನ್ನನ್ನು ಹೊಂದುತ್ತಾನೆಯೋ ಎಂದು ತಾತ್ಪರ್ಯವು) ||೧೧|| ಹೇವರವರ್ಣಿನಿ-ಎಲೈ ಶ್ರೇಷ್ಠವಾದ ಕಾಂತಿಯುಳ್ಳವಳೇ, ಹೆವರಾರೋಹೆ-

---

ಳಾಗಿ, ಆ ಶೂರ್ಪಣಖಿಯು ಕಾಮಮೋಹಿತಳಾಗಿ, ಅನಂತರದಲ್ಲಿ ಶ್ರೀರಾಮನಂ ಬಿಟ್ಟು ಅತಿತ್ವರೆಯಾಗಿ ಲಕ್ಷ್ಮಣ
ನ ಸನ್ನಿಧಿಗೆ ಸಾರಿ ನುಡಿವಳದೆಂತೆನೆ;—।೬। ಎಲೈ ಅಗ್ನಿಯಂತೆ ಹೊಳೆವ ಲಕ್ಷ್ಮಣನೇ! ನಿನಗುಂಟಾಗಿರುವ ಈ
ಸೌಂದರ್ಯಕ್ಕೆ ನಾನು ಅರ್ಹಳಾದವಳು; ನಿನ್ನ ಮಡದಿಯಾಗಿದ್ದೇನೆ, ನೀನು ಸುಖವಾಗಿ ನನ್ನೊಡನೆ ಈ ದಂಡಕಾರಣ್ಯಾ
ದಿ ಸಂಚಾರವಂ ಮಾಡುತಲಿರುವನಾಗೆಂದು, ಆ ರಕ್ಕಸಿಯಾದ ಶೂರ್ಪಣಖಿಯು ನುಡಿದವಳಾಗಲೂ, ಮಾತನಾ
ಡುವುದರಲ್ಲಿ ಮಹಾ ಸಮರ್ಥನಾದ ಆ ಲಕ್ಷ್ಮಣನು ನಸುನಗೆಯುಳ್ಳವನಾಗಿ, ಆ ಖರನ ಸಹೋದರಿಯಾದ ಶೂ
ರ್ಪಣಖಿಯಂ ಕುರಿತು ನಿರೂಪಿಸುವನು, ಎಂತೆನೆ,—।೮। ತಾವರೆಯುಸಳೆಯ ಬಣ್ಣದಂತೆ ಬೆಳಗುತಲಿರುವ ಬಣ್ಣ
ವುಳ್ಳವಳೇ! ನಾನು ನಮ್ಮಗ್ರಜನಾದ ಶ್ರೀರಾಮನ ಅಧೀನದಲ್ಲಿರುವವನು, ಸೇವಾವೃತ್ತಿಯಂ ಗೈಯ್ಯುತಲಿರುವ
ನನಿಗೆ ನೀನು ಭಾರ್ಯೆಯಾದವಳಾದರೆ ದಾಸಿಯಾದವಳಾಗುವೆ; ಇದಕ್ಕೆ ನೀನೆಂತು ಪ್ರೊಡಂಬಡುವಳಾಗುವೆ? ಎಲೈ
ವಿಸ್ತಾರವಾದ ಕಂಗಳುಗಳುಳ್ಳವಳೇ! ಕೇಳುವವಳಾಗು; ಸಂಪೂರ್ಣವಾದ ಪ್ರಯೋಜನಂಗಳುಳ್ಳ ಪೂಜ್ಯನಾದ ಶ್ರೀ
ರಾಮನಿಗೆ ನೀನು ದ್ವಿತೀಯ ಭಾರ್ಯೆಯಾದವಳಾದರೆ ಸಫಲವಾದ ಪ್ರಯೋಜನವುಳ್ಳವಳಾಗಿಯೂ, ಸಂತೋಷಚಿತ್ತ
ಳಾಗಿಯೂ, ನಿರ್ಮಲವಾದ ಅಂತಃಕರಣವುಳ್ಳವಳಾಗಿಯೂ ಇರುವವಳಾಗುವೆ. [ವಿಶೇಷಾಭಿಪ್ರಾಯವೇನೆಂದರೆ-
ಕಮಲದಂತೆ ಮನೋಹರವಾದ ಬಣ್ಣವಿಲ್ಲದಿರುವ, ಕುರೂಪಿಯಾದವಳೇ! ಸಂತೋಷಚಿತ್ತಳಾಗದೆ ಮಲಿನಯುಕ್ತ
ವಾದ ದೇಹವುಳ್ಳವಳಾಗಿ ನೀಚಳಾಗಿರುವಳಾಗು] ।೧೦। ರೂಪವಿಲ್ಲದವಳಾಗಿಯೂ ಅಯೋಗ್ಯಳಾಗಿಯೂ, ವಕ್ರ
ಳಾಗಿಯೂ, ಬಹು ನಿಮ್ನವಾದ ಹೊಟ್ಟೆಯುಳ್ಳವಳಾಗಿಯೂ, ಮುದುಕಿಯಾಗಿಯೂ ಇರುವ ಈ ಹೆಂಡತಿಯಂ

ರೂಪಮಿದಂ ಶ್ರೇಷ್ಠಂ ಸಂತ್ಯಜ್ಯ ವರವರ್ಣಿನಿ । ಮಾನುಷೀಷು ವರಾರೋಹೇ ಕುರ್ಯಾದ್ಭಾವಂ ವಿಚಕ್ಷಣಃ ॥೧೨॥ ಇತಿ ಸಾ ಲಕ್ಷ್ಮಣೇನೋಕ್ತಾ ಕರಾಳಾ ನಿರ್ಣತೋದರೀ । ಮನ್ಯತೇ ತದ್ವಚಸ್ತಥ್ಯಂ ಪರಿಹಾಸಾವಿಚಕ್ಷಣಾ ॥೧೩॥ ಸಾ ರಾಮಂ ಪರ್ಣಶಾಲಾಯಾಮುಪವಿಷ್ಟಂ ಪರಂತಪಂ । ಸೀತಯಾ ಸಹ ದುರ್ಧರ್ಷಮಬ್ರವೀತ್ಕಾಮಮೋಹಿತಾ ॥೧೪॥ ಏತಾಂ ವಿರೂಪಾಮಸತೀಂ ಕರಾಲಾಂ ನಿರ್ಣತೋದರೀಂ । ವೃದ್ಧಾಂ ಭಾರ್ಯಾಮವಷ್ಟಭ್ಯ ಮಾಂ ನ ತ್ವಂ ಬಹುಮನ್ಯಸೇ ॥೧೫॥ ಅದ್ಯೇಮಾಂ ಭಕ್ಷಯಿಷ್ಯಾಮಿ ಪಶ್ಯತಸ್ತವ ಮಾನುಷೀಂ । ತ್ವಯಾ ಸಹ ಚರಿಷ್ಯಾಮಿ ನಿಸ್ಸಪತ್ನಾ ಯಥಾಸುಖಂ ॥೧೬॥ ಇತ್ಯುಕ್ತ್ವಾ ಮೃಗಶಾಬಾಕ್ಷೀಮಲಾತಸದೃಶೇಕ್ಷಣಾ । ಅಭ್ಯಧಾವತ್ಸುಸಂಕ್ರುದ್ಧಾ ಮಹೋಲ್ಕಾ ರೋಹಿಣೀಮಿವ ॥೧೭॥ ತಾಂ ಮೃ

---

ಎಲ್ಲಾ ಶ್ರೇಷ್ಠಳಾದವಳೇ, ವಿಚಕ್ಷಣಃ-ಬುದ್ಧಿಶಾಲಿಯಾದ, ಕಃ-ಯಾವ ಪುರುಷನು ತಾನೆ, ಶ್ರೇಷ್ಠಂ-ಶ್ರೇಷ್ಠವಾದ, ಇದಂರೂಪಂ-ಈ ರೂಪವನ್ನು, ಸಂತ್ಯಜ್ಯ ಬಿಟ್ಟು, ಮಾನುಷೀಷು-ಮನುಷ್ಯಸ್ತ್ರೀಯರಲ್ಲಿ, ಭಾವಂ-ಅಭಿಪ್ರಾಯವನ್ನು, ಕುರ್ಯಾತ್-ಮಾಡುವನು, (ಶ್ರೇಷ್ಠಂ ಇದಂರೂಪಂ-ಎಂಬ ಸ್ಥಳದಲ್ಲಿ ಪರಿಹಾಸೋಕ್ತವಾಗಿ ತಾತ್ಪರ್ಯವು) ॥೧೨॥ ಇತಿ-ಈಪರಿಯಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ, ಉಕ್ತಾ-ಹೇಳಲ್ಪಟ್ಟ, ಕರಾಳಾ-ಅತ್ಯುನ್ನತಳಾದ, ನಿರ್ಣತೋದರೀ-ನಿಮ್ನವಾದ ಉದರವುಳ್ಳ ಆ ಶೂರ್ಪಣಖೆಯು, ಪರಿಹಾಸಾವಿಚಕ್ಷಣಾ-ಹಾಸ್ಯವಚನವನ್ನು ತಿಳಿಯದಿರುವವಳಾಗಿ, ತದ್ವಚಃ-ಆ ಲಕ್ಷ್ಮಣನ ವಚನವನ್ನು, ತಥ್ಯಂ-ಯಥಾರ್ಥವಾಗಿ, ಮನ್ಯತೇ-ತಿಳಿದಳು ॥೧೩॥ ಸಾ-ಆ ಶೂರ್ಪಣಖೆಯು, ಪರ್ಣಶಾಲಾಯಾಂ-ಆಶ್ರಮದಲ್ಲಿ, ಸೀತಯಾಸಹ-ಸೀತಾದೇವಿಯೊಡಗೂಡ, ಉಪವಿಷ್ಟಂ-ಕುಳಿತುಕೊಂಡಿರುವ, ದುರ್ಧರ್ಷಂ-ತಿರಸ್ಕರಿಸಲಸಾಧ್ಯನಾದ, ಪರಂತಪಂ-ಶತ್ರುಸಂಹಾರಕನಾದ, ರಾಮಂ-ಶ್ರೀರಾಮನನ್ನು ಕುರಿತು, ಕಾಮಮೋಹಿತಾ-ಕಾಮದಿಂದ ಭ್ರಾಂತಳಾಗಿ, ಅಬ್ರವೀತ್-ನುಡಿದಳು ॥೧೪॥ ವಿರೂಪಾಂ-ವಿಕಾರರೂಪವುಳ್ಳ, ಅಸತೀಂ-ಅಪ್ರಶಸ್ತಳಾದ, ಕರಾಳಾಂ-ನಿಮ್ನೋನ್ನತಳಾದ, ನಿರ್ಣತೋದರೀಂ-ನಿಮ್ನವಾದ ಉದರವುಳ್ಳ, ವೃದ್ಧಾಂ-ಮುದುಕಿಯಾದ, ಭಾರ್ಯಾಂ-ಹೆಂಡತಿಯನ್ನು ಅವಷ್ಟಭ್ಯ-ಅವಲಂಬಿಸಿ, ಮಾಂ-ನನ್ನನ್ನು, ತ್ವಂ-ನೀನು, ನಬಹುಮನ್ಯಸೇ-ಯಾತಕ್ಕೆ ಶ್ಲಾಘಿಸುವದಿಲ್ಲ ॥೧೫॥ ಅದ್ಯ-ಈಗ, ತವ-ನೀನು, ಪಶ್ಯತಃಸತಃ-ನೋಡುತ್ತಿರುವವನಾಗುತ್ತಿರಲಾಗಿ, ಇಮಾಂ-ಈ, ಮಾನುಷೀಂ-ಮನುಷ್ಯನ ಹೆಂಗಸನ್ನು, ಭಕ್ಷಯಿಷ್ಯಾಮಿ-ತಿನ್ನುವೆನು, ತ್ವಯಾಸಹ-ನಿನ್ನೊಡಗೂಡ, ನಿಸ್ಸಪತ್ನಾ-ಸವತಿಯಿಲ್ಲದವಳಾಗಿ, ಯಥಾಸುಖಂ-ಸುಖಾನುಸಾರವಾಗಿ, ಚರಿಷ್ಯಾಮಿ-ಸಂಚರಿಸುವೆನು ॥೧೬॥ ಇತ್ಯುಕ್ತ್ವಾ-ಈಪರಿಯಾಗಿ ಹೇಳಿ, ಅಲಾತಸದೃಶೇಕ್ಷಣಾ-ಕೊಳ್ಳಿಗಳಿಗೆ ಸಮಾನವಾದ ನೇತ್ರಗಳುಳ್ಳವಳಾಗಿ, ಸುಸಂಕ್ರುದ್ಧಾ-ಕೋಪಗೊಂಡವಳಾಗಿ, ಮಹೋಲ್ಕಾ-ಕ್ರೂರಗ್ರಹವು, ರೋಹಿಣೀಮಿವ-ರೋಹಿಣೀನಕ್ಷತ್ರವನ್ನಂತೆ, ಮೃಗಶಾಬಾಕ್ಷೀಂ-ಜಿಂಕೆಮರಿಯ ನೇತ್ರಗಳಂತೆ ನೇತ್ರಗಳುಳ್ಳ, ಸೀತಾಂ-ಸೀತಾದೇವಿಯನ್ನು ಕುರಿತು, ಅಭ್ಯಧಾವತ್-ಓಡಿಬಂದಳು ॥೧೭॥ ಮಹಾಬಲಃ-ಬಹಳ ಸಾಮರ್ಥ್ಯವಂತನಾದ, ರಾಮಃ-ಶ್ರೀರಾಮನು, ಕುಪಿತಃ-ಕೋಪಿಷ್ಠನಾಗಿ, ಮೃತ್ಯುಪಾಶಪ್ರತಿಮಾಂ-ಯಮಪಾಶಕ್ಕೆ ಸಮಾನಳಾದ, ಆಪತಂತೀಂ-ಬರುತ್ತಿರುವ, ತಾಂ-ಆ ಶೂರ್ಪ

---

ಬಿಟ್ಟು ಆ ಶ್ರೀರಾಮನು ನಿನ್ನನ್ನು ಹೊಂದುವನು. [ತತ್ವಾಭಿಪ್ರಾಯವೇನೆಂದರೆ,—ಎಲೈ ಮತಿಗೆಟ್ಟವಳೇ! ಬಹು ರೂಪವಂತಳಾಗಿಯೂ, ತನಗಿಂತಲೂ ಅಧಿಕಳಾದ ಮತ್ತೊಬ್ಬಳಾದ ಪತಿವ್ರತೆಯಿಲ್ಲದವಳಾಗಿಯೂ, ಉನ್ನತಳಾಗಿಯೂ ನಿಮ್ನವಾದ ಉದರವುಳ್ಳವಳಾಗಿಯೂ, ಜ್ಞಾನಶೀಲಾದಿಗಳಲ್ಲಿ ವೃದ್ಧಳಾಗಿಯೂ ಇರುವ ಇಂಥಾ ಸತಿಯಂ ಬಿಟ್ಟು ನಮ್ಮಣ್ಣನಾದ ಶ್ರೀರಾಮನು ಅಸತಿಯಾದ ನಿನ್ನನ್ನು ಹೊಂದುವನೇ ಯೇನು?] ।೧೧। ಎಲೈ ಉತ್ತಮಾಂಗನೆಯೇ! ಬುದ್ಧಿಮಂತನಾದ ಯಾವ ಪುರುಷನು ತಾನೆ, ಸರ್ವೋತ್ತಮವಾದ ಈ ನಿನ್ನ ರೂಪವಂ ಬಿಟ್ಟು ಮಾನುಷಸ್ತ್ರೀಯಲ್ಲಿ ಅಭಿಪ್ರಾಯವಂ ಗೈಯ್ಯುವನು? ಎಂಬದಾಗಿ ಲಕ್ಷ್ಮಣನು ಹಾಸ್ಯಾಸ್ಪದವಾಗಿ ಮಾತಾಡಿದವನಾಗಲೂ, ಹಾಸ್ಯರಸವನ್ನರಿಯದ ಮಹಾ ಉನ್ನತಳಾಗಿರುವ ಆ ಶೂರ್ಪಣಖಿಯು ಆ ಲಕ್ಷ್ಮಣನ ವಾಕ್ಯವನ್ನು ಯಥಾರ್ಥವೆಂದು ತಿಳಿದುಕೊಂಡವಳಾಗಿ, ಪರ್ಣಶಾಲೆಯೊಳು ಸೀತಾಸಹಿತನಾಗಿ ಕುಳಿತಿರುವ ಶತ್ರುಸಂಹಾರಕನಾದ ಶ್ರೀರಾಮನ ಸನ್ನಿಧಿಯನ್ನೈದಿ ನುಡಿವಳದೆಂತೆನೆ,—।೧೪। ಎಲೈ ಶ್ರೀರಾಮನೇ! ನೀನು ಕುರೂಪಿಯಾದ ಅಯೋಗ್ಯಳಾಗಿರುವ ವಕ್ರವಕ್ರವಾಗಿರುವ, ಮುದುಕಿಯಾದ ಈ ಹೆಂಡತಿಯನ್ನವಲಂಬಿಸಿ, ಕಡುರೂಪವತಿಯಾದ ನನ್ನನ್ನು ಯಾಕೆ ಶ್ಲಾಘಿಸುವದಿಲ್ಲ? ಎಲೈ ಶೂರನಾದ ಶ್ರೀರಾಮನೇ! ನೀನು ನೋಡುತಿರುವಾಗಲೆ, ಈ ಮನುಷ್ಯಾಂಗನೆಯಂ ಮೆದ್ದು ಸವತಿ ಯಿಲ್ಲದವಳಾಗಿ, ನಿನ್ನೊಡನೆ ಈ ದಂಡಕಾರಣ್ಯದಲ್ಲಿ ಸುಖವಾಗಿ ಸಂಚಾರಂ ಗೈಯ್ಯುತಲಿರುವೆನೆಂದು, ಆ ಶೂರ್ಪಣಖಿಯು ಬಹು ಕೋಪವುಳ್ಳವಳಾಗಿ, ಕೊಳ್ಳಿಗೆ ಸಮಾನವಾದ ನೇತ್ರಗಳುಳ್ಳವಳಾಗಿ, ಕ್ರೂರಗ್ರಹವು ರೋಹಿಣೀನಕ್ಷತ್ರವನ್ನು ಕುರಿತು ಓಡಿಬರುವಂತೆ ಆ ಸೀತಾದೇವಿಯು ಸಮೀಪಕ್ಕೆ ಓಡಿದಳು ।೧೭। ಆಗ ಮಹಾ ಸಾಮರ್ಥ್ಯವುಳ್ಳ ಶ್ರೀರಾಮನು ಬಹು ಕೋಪವುಳ್ಳವನಾಗಿ, ಯಮಪಾಶದಂತೆ ಸೀ

ತ್ಯುಪಾಶಪ್ರತಿಮಾಮಾಪತಂತೀಮ್ಮಹಾಬಲಃ । ನಿಗೃಹ್ಯರಾಮಃಕುಪಿತಸ್ತತೋಲಕ್ಷ್ಮಣಮಬ್ರವೀತ್ ।೧೮। ಕ್ರೂ
ರೈರನಾರ್ಯೈಸ್ಸೌಮಿತ್ರೇಪರಿಹಾಸಃಕಥಂಚನ । ನಕಾರ್ಯಃಪಶ್ಯವೈದೇಹೀಂಕಥಂಚಿತ್ಸೌಮ್ಯಜೀವತೀಂ ।೧೯। ಇಮಾಂ
ವಿರೂಪಾಮಸತೀಮತಿಮತ್ತಾಮ್ಮಹೋದರೀಂ । ರಾಕ್ಷಸೀಂಪುರುಷವ್ಯಾಘ್ರವಿರೂಪಯಿತುಮರ್ಹಸಿ ।೨೦। ಇತ್ಯು
ಕ್ತೋಲಕ್ಷ್ಮಣಸ್ತಸ್ಯಾಃಕ್ರುದ್ಧೋರಾಮಸ ಪಾರ್ಶ್ವತಃ । ಉದ್ಧೃತ್ಯಖಡ್ಗಂಚಿಚ್ಛೇದಕರ್ಣನಾಸಂಮಹಾಬಲಃ ।೨೧। ನಿ
ಕೃತ್ತಕರ್ಣನಾಸಾತುವಿಸ್ವರಂಸಾವಿನದ್ಯಚ । ಯಥಾಗತಂಪ್ರದುದ್ರಾವಘೋರಾಶೂರ್ಪಣಖಾವನಂ ।೨೨। ಸಾವಿರೂ
ಪಾಮಹಾಘೋರಾರಾಕ್ಷಸೀಶೋಣಿತೋಕ್ಷಿತಾ । ನನಾದವಿವಿಧಾನ್ನಾದಾನ್ಯಥಾಪ್ರಾವೃಷಿತೋಯದಃ ।೨೩। ಸಾವಿಕ್ಷ
ರಂತೀರುಧಿರಂಬಹುಧಾಘೋರದರ್ಶನಾ । ಪ್ರಗೃಹ್ಯಬಾಹೂಗರ್ಜಂತೀಪ್ರವಿವೇಶಮಹಾವನಂ ।।೨೪। ತತಸ್ತುಸಾ
ರಾಕ್ಷಸಸಂಘಸಂವೃತಂಖರಂಜನಸ್ಥಾನಗತಂವಿರೂಪಿತಾ । ಉಪೇತ್ಯತಂಭ್ರಾತರಮುಗ್ರದರ್ಶನಂಪಪಾತಭೂಮೌಗ

---

ನಷೆಯನ್ನು, ನಿಗೃಹ್ಯ-ನಿಗ್ರಹಿಸಿ, ತತಃ-ಬಳಿಕ, ಲಕ್ಷ್ಮಣಂ-ಲಕ್ಷ್ಮಣನಂ ಕುರಿತು, ಅಬ್ರವೀತ್-ನುಡಿದನು ॥೧೮॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ಅನಾರ್ಯೈಃ-ದುಷ್ಟರಾದ, ಕ್ರೂರೈಃ-ಉಗ್ರಜನರೊಡನೆ, ಪರಿಹಾಸಃ-ಹಾಸ್ಯವು, ಕಥಂಚನ-ಹ್ಯಾಗಾದರೂ, ನಕಾರ್ಯಃ-ಮಾಡತಕ್ಕದ್ದಲ್ಲ, ಹೆಸೌಮ್ಯ-ಎಲೈ ಪ್ರಸನ್ನನೇ. ವೈದೇಹೀಂ-ಸೀತಾದೇವಿಯನ್ನು, ಕಥಂಚಿತ್-ಅತಿಪ್ರಯಾಸದಿಂದ. ಜೀವತೀಂ-ಬದುಕಿರುವವಳನ್ನಾಗಿ, ಪಶ್ಯ-ಕಾಣು ॥೧೯॥ ವಿರೂಪಾಂ-ವಿಕಾರರೂಪವುಳ್ಳ, ಅಸತೀಂ-ದುಷ್ಟಳಾದ, ಅತಿಮತ್ತಾಂ-ಬಹಳ ಮದಿಸಿರುವ, ಮಹೋದರೀಂ-ದೊಡ್ಡಹೊಟ್ಟೆಯುಳ್ಳ, ಇಮಾಂರಾಕ್ಷಸೀಂ-ಈ ಶೂರ್ಪಣಖೆಎಂಬ ರಕ್ಕಸಿಯನ್ನು. ವಿರೂಪಯಿತುಂ-ವಿಕಾರರೂಪವುಳ್ಳವಳನ್ನಾಗಿ ಮಾಡುವದಕ್ಕೋಸುಗ, ಅರ್ಹಸಿ-ಯೋಗ್ಯನಾಗು ॥೨೦॥ ಇತ್ಯುಕ್ತಃ-ಈಪರಿ ಹೇಳಲ್ಪಟ್ಟ. ಮಹಾಬಲಃ-ಮಹಾಸಾಮರ್ಥ್ಯವಂತನಾದ, ಲಕ್ಷ್ಮಣಃ-ಲಕ್ಷ್ಮಣನು, ಕ್ರುದ್ಧಃ-ಕೋಪಿಷ್ಠನಾಗಿ, ರಾಮಸ್ಯ-ಶ್ರೀರಾಮನ, ಪಾರ್ಶ್ವತಃ-ಪಾರ್ಶ್ವಭಾಗದಲ್ಲಿನ, ಖಡ್ಗಂ-ಕತ್ತಿಯನ್ನು, ಉದ್ಧೃತ್ಯ-ಎತ್ತಿಕೊಂಡು, ತಸ್ಯಾಃ-ಆ ಶೂರ್ಪಣಖೆಯ. ಕರ್ಣನಾಸಂ-ಕಿವಿಮೂಗುಗಳನ್ನು, ಚಿಚ್ಛೇದ-ಕತ್ತರಿಸಿದನು ॥೨೧॥ ನಿಕೃತ್ತಕರ್ಣನಾಸಾ-ನಿಕೃತ್ತ-ಕತ್ತರಿಸಲ್ಪಟ್ಟ, ಕರ್ಣನಾಸಾ-ಕಿವಿಮೂಗುಗಳುಳ್ಳ, ಘೋರಾ-ಭಯಂಕರಳಾದ, ಸಾಶೂರ್ಪಣಖಾ-ಆ ಶೂರ್ಪಣಖೆಯು. ವಿಸ್ವರಂ-ಕೀಳುಧ್ವನಿಯಾಗಿ, ವಿನದ್ಯ-ಕೂಗಿ, ಯಥಾಗತಂ-ಬಂದಂತೆ, ವನಂ-ಅರಣ್ಯವನ್ನು ಕುರಿತು, ಪ್ರದುದ್ರಾವ-ಓಡಿಹೋದಳು ॥೨೨॥ ವಿರೂಪಾ-ವಿಕಾರರೂಪವುಳ್ಳ, ಮಹಾಘೋರಾ-ಬಹಳ ಭಯಂಕರಳಾದ, ರಾಕ್ಷಸೀ-ರಕ್ಕಸಿಯು, ಶೋಣಿತೋಕ್ಷಿತಾ-ರಕುತದಿಂ ನೆನೆಯಿಸಲ್ಪಟ್ಟವಳಾಗಿ. ಪ್ರಾವೃಷಿ-ವರ್ಷಾಕಾಲದಲ್ಲಿ, ತೋಯದೋಯಥಾ-ಮೇಘದಂತೆ, ವಿವಿಧಾನ್-ನಾನಾಬಗೆಗಳಾದ, ನಾದಾನ್-ಧ್ವನಿಗಳನ್ನು. ನನಾದ-ಕೂಗಿದಳು ॥೨೩॥ ಘೋರದರ್ಶನಾ-ಭಯಂಕರವಾದ ನೋಟವುಳ್ಳ. ಸಾ-ಆ ಶೂರ್ಪಣಖಿಯು ಬಹುಧಾ-ಬಹಳವಾಗಿ, ರುಧಿರಂ-ರಕುತವನ್ನು. ವಿಕ್ಷರಂತೀ-ಸುರಿಸುತ್ತಿರುವವಳಾಗಿ, ಬಾಹೂ-ಭುಜಗಳನ್ನು. ಪ್ರಗೃಹ್ಯ-ಎತ್ತಿಕೊಂಡು ಗರ್ಜಂತೀ-ಕೂಗುತ್ತಿರುವವಳಾಗಿ, ಮಹಾವನಂ-ದೊಡ್ಡ ಅರಣ್ಯವನ್ನು. ಪ್ರವಿವೇಶ-ಪ್ರವೇಶಮಾಡಿದ್ದಳು ॥೨೪॥ ತತಃ-ಬಳಿಕ, ಸಾ-ಆ ಶೂರ್ಪಣಖಿಯು, ವಿರೂಪಿತಾ-ವಿಕಾರರೂಪವಮಾಡಲ್ಪಟ್ಟವಳಾಗಿ, ರಾಕ್ಷಸಸಂಘಸಂವೃತಂ-ರಕ್ಕಸರ ಸಂಘದಿಂ ಸಹಿತನಾದ, ಜನಸ್ಥಾನಗತಂ-ಉಕ್ಕಡವಂ ಹೋದಿರುವ, ಉಗ್ರದರ್ಶನಂ-ಭಯಂಕರವಾದ ನೋಟವುಳ್ಳ, ಭ್ರಾತರಂ-ಅಣ್ಣನಾದ, ತಂ-ಆ ಪ್ರಸಿದ್ಧನಾದ, ಖರಂ-ಖರಾಸುರನನ್ನು, ಉಪೇತ್ಯ-ಹೊಂದಿ, ಗಗನಾತ್-ಅಂತರಿಕ್ಷದದಿಂದ ಬೀಳುವ. ಅಶನಿರ್ಯಥಾ-ಶಿಡಿಲಿನಂತೆ, ಭೂಮೌ-ನೆಲದಲ್ಲಿ, ಪಪಾತ-ಬಿದ್ದಳು ॥೨೫॥ ತತಃ-ಬಳಿಕ, ಶೋಣಿತೋಕ್ಷಿತಾ-ರಕುತದಿಂ ತೋಯಿಸ

---

ತಾದೇವಿಯ ಮೇಲ್ವಾಯ್ದು ಬರುತಿರುವ ಆ ಶೂರ್ಪಣಖಿಯಂ ಘರ್ಜಿಸಿ ಲಕ್ಷ್ಮಣನಂ ಕುರಿತು ನುಡಿವನದೆಂತೆನೆ,—ಎಲೈ ಸುಮಿತ್ರಾಪುತ್ರನಾದ ಲಕ್ಷ್ಮಣನೇ! ದುಷ್ಟರಾದ ಕ್ರೂರರ ಸಂಗಡ ಪರಿಹಾಸವಂ ಗೈಯ್ಯಬಾರದು, ಸೀತಾದೇವಿಯು ಬದುಕುವಂತೆ ನೋಡುವವನಾಗು ।೧೯। ವಿರೂಪಳಾದ ಬಹು ಕೊಬ್ಬಿರುವ ಈ ದುಷ್ಟಳನ್ನು ವಿಕಾರರೂಪವುಳ್ಳವಳನ್ನಾಗಿ ಮಾಡುವವನಾಗೆಂದು ಶ್ರೀರಾಮನು ನಿರೂಪಿಸಲು, ಆ ಲಕ್ಷ್ಮಣನು ಬಹು ಕುಪಿತನಾಗಿ ಆ ಶ್ರೀರಾಮನ ಪಾರ್ಶ್ವದಲ್ಲಿರುವ ಖಡ್ಗವಂ ತೆಗದುಕೊಂಡು, ಆ ಶೂರ್ಪಣಖಿಯ ಕರ್ಣನಾಸಂಗಳಂ ಛೇದಿಸಿದನು ।೨೧। ಅನಂತರದಲ್ಲಿ ಆ ಶೂರ್ಪಣಖಿಯು ಕತ್ತರಿಸಲ್ಪಟ್ಟ ಕರ್ಣನಾಸಂಗಳುಳ್ಳವಳಾಗಿ, ವಿಕಾರವಾಗಿ ಕೂಗುತ್ತಾ, ತಾನು ಬಂದಂತೆ ಅರಣ್ಯದಲ್ಲಿ ಓಡಿಪೋದಳದೆಂತೆನೆ,—ವಿರೂಪಳಾಗಿಯೂ, ಭಯಂಕರಳಾಗಿಯೂ ಇರುವ ಆ ರಕ್ಕಸಿಯು ರಕುತದಿಂದ ತೋಯಿಸಲ್ಪಟ್ಟ ಶರೀರವುಳ್ಳವಳಾಗಿ, ವರ್ಷಾಕಾಲದಲ್ಲಿ ಮೇಘವು ಘರ್ಜಿಸಿದಂತೆ ಘರ್ಜನೆಯಂ ಗೈಯ್ಯುತ್ತಲೂ, ಭುಜಗಳನ್ನೆತ್ತಿಕೊಂಡು ಆ ಅರಣ್ಯದಲ್ಲಿ ಓಡಿಪೋಗಿ, ಬಳಿಕ ರಾಕ್ಷಸಸಮೂಹದಿಂದ ಯುಕ್ತವಾದ ಜನಸ್ಥಾನವನ್ನೈದಿ, ಮಹಾ ಭಯಂಕರನಾಗಿರುವ ತನ್ನಗ್ರಜನಾದ ಖರಾಸುರನ ಸಮೀಪದಲ್ಲಿ ಅಂತರಿಕ್ಷದಿಂದ ಶಿಡಿಲು ಬೀಳುವಂತೆ, ಥಟ್ಟನೆ ನೆಲದಲ್ಲಿ ಬಿದ್ದು ರಕುತದಿಂದ ತೋಯಿಸಲ್ಪಟ್ಟ

ಗನಾದ್ಯಥಾಶನಿಃ ॥೨೫॥ ತತಸ್ಸಭಾರ್ಯಂಭಯಮೋಹಮೂರ್ಛಿತಾಸಲಕ್ಷ್ಮಣಂರಾಘವಮಾಗತಂವನಂ । ವಿರೂಪಣಂ ಚಾತ್ಮನಿಶೋಣಿತೋಕ್ಷಿತಾಶಶಂಸಸರ್ವಂಭಗಿನೀಖರಸ್ಯಸಾ ॥೨೬॥ —*ಇತಿಶ್ರೀಮದಾರಣ್ಯಕಾಂಡೇ-ಅಷ್ಟಾದಶಸ್ಸರ್ಗಃ*— ತಾಂತಥಾಪತಿತಾಂದೃಷ್ಟ್ವಾವಿರೂಪಾಂಶೋಣಿತೋಕ್ಷಿತಾಂ । ಭಗಿನೀಂಕ್ರೋಧಸಂತಪ್ತಃಖರಃಪಪ್ರಚ್ಛರಾಕ್ಷಸಃ ॥೧॥ ಉತ್ತಿಷ್ಠತಾವದಾಖ್ಯಾಹಿಪ್ರಮೋಹಂಜಹಿಸಂಭ್ರಮಂ । ವ್ಯಕ್ತಮಾಖ್ಯಾಹಿಕೇನತ್ವಮೇವಂರೂಪಾವಿರೂಪಿತಾ ॥೨॥ ಕಃಕೃಷ್ಣಸರ್ಪಮಾಸೀನಮಾಶೀವಿಷಮನಾಗಸಂ । ತುದತ್ಯಭಿಸಮಾಪನ್ನಮಂಗುಲ್ಯಗ್ರೇಣಲೀಲಯಾ ॥೩॥ ಕಃಕಾಲಪಾಶಮಾಸಜ್ಯಕಂಠೇಮೋಹಾನ್ನಜಾನತೇ । ಯಸ್ತ್ವಾಮದ್ಯಸಮಾಸಾದ್ಯಪೀತವಾನ್ವಿಷಮುತ್ತಮಂ ॥೪॥ ಬಲವಿಕ್ರಮಸಂಪನ್ನಾಕಾಮಗಾಕಾಮರೂಪಿಣೀ । ಇಮಾಮವಸ್ಥಾಂನೀತಾತ್ವಂಕೇನಾಂತಕಸಮಾಗತಾ ॥೫॥ ದೇವಗಂಧರ್ವಭೂತಾನಾಮೃಷೀಣಾಂಚಮಹಾತ್ಮನಾಂ । ಕೋಯಮೇವಂವಿರೂಪಾಂತ್ವಾಂಮಹಾವೀರ್ಯಶ್ಚಕಾರಹ ॥೬॥ ನಹಿಪ

---

ಶ್ಯಾಮಿ. ಭಯಮೋಹಮೂರ್ಛಿತಾ-ಭಯದಿಂದಲೂ ಮೋಹದಿಂದಲೂ ವ್ಯಾಪ್ತಳಾದ, ಭಗಿನೀ-ತಂಗಿಯಾದ, ಸಾ-ಆ ಶೂರ್ಪಣಖೆಯು. ವನಂ ಅಟ ವಿಯನ್ನು ಕುರಿತು. ಆಗತಂ-ಬಂದಿರುವ, ಸಭಾರ್ಯಂ-ಹೆಂಡತಿಯಿಂದೊಡಗೂಡಿದ. ಸಲಕ್ಷ್ಮಣಂ-ಲಕ್ಷ್ಮಣಸಹಿತನಾದ ರಾಘವಂ-ಶ್ರೀರಾಮನನ್ನೂ ಆತ್ಮನಿ-ತನ್ನಲ್ಲಿ, ವಿರೂಪಣಂ-ವೈರೂಪ್ಯವನ್ನೂ, ಸರ್ವಂ-ಸಮಸ್ತವನ್ನೂ ಖರಸ್ಯ-ಖರಾಸುರನಿಗೆ. ಶಶಂಸ-ಹೇಳಿದಳು॥ ॥೨೬॥

—*ಇತಿಶ್ರೀಮದಾರಣ್ಯಕಾಂಡೇ-ಅಷ್ಟಾದಶಸ್ಸರ್ಗಃ*—

ಖರಃ-ಖರನೆಂಬ, ರಾಕ್ಷಸಃ-ರಕ್ಕಸನು, ತಥಾ-ಆ ಪರಿಯಾಗಿ, ಪತಿತಾಂ-ಬಿದ್ದಿರುವ, ವಿರೂಪಾಂ-ವಿಕಾರರೂಪವುಳ್ಳ, ಶೋಣಿತೋಕ್ಷಿತಾಂ-ರಕ್ತದಿಂತೊಯಿಸಲ್ಪಟ್ಟ ಭಗಿನೀಂ-ತಂಗಿಯಾದ. ತಾಂ-ಆ ಶೂರ್ಪಣಖಿಯನ್ನು. ದೃಷ್ಟ್ವಾ-ಕಂಡು. ಕ್ರೋಧಸಂತಪ್ತಃ-ಕೋಪದಿಂದ ಕಾದಿರ್ದವನಾಗಿ. ಪಪ್ರಚ್ಛ-ಕೇಳಿದನು ॥೧॥ ಉತ್ತಿಷ್ಠ-ಏಳು, ತಾವತ್-ಆದರೆ, ಆಖ್ಯಾಹಿ-ಹೇಳು, ಪ್ರಮೋಹಂ-ಪ್ರಜ್ಞಾಹೀನತೆಯನ್ನೂ, ಸಂಭ್ರಮಂ-ಚಿತ್ತಚಾಂಚಲ್ಯವನ್ನೂ. ಜಹಿ-ಬಿಡು, ತ್ವಂ-ನೀನು, ಏವಂರೂಪಾ-ಇಂಥಾರೂಪವುಳ್ಳವಳಾಗಿ, ಕೇನ-ಯಾವನಿಂದ, ವಿರೂಪಿತಾ-ವಿಕಾರರೂಪಳಾಗಿ ಮಾಡಲ್ಪಟ್ಟೆ? ವ್ಯಕ್ತಂ-ಸ್ಪಷ್ಟವಾಗಿ, ಆಖ್ಯಾಹಿ-ಹೇಳು, ॥೨॥ ಕಃ-ಯಾವ ಪುರುಷನು, ಆಸೀನಂ-ಮಲಗಿರುವ, ಅನಾಗಸಂ-ನಿರಪರಾಧಿಯಾದ, ಆಶೀವಿಷಂ-ಕೋರೆಹಲ್ಲಿನಲ್ಲಿರುವ ವಿಷವುಳ್ಳ, ಅಭಿಸಮಾಪನ್ನಂ- ಎದುರಿಗೆಬರುತ್ತಿರುವ, ಕೃಷ್ಣಸರ್ಪಂ-ಕೃಷ್ಣಸರ್ಪವನ್ನು, ಅಂಗುಲ್ಯಗ್ರೇಣ-ಬೆರಳಿನ ತುದಿಯಿಂದ. ಲೀಲಯಾ-ವಿಲಾಸದಿಂದ, ತುದತಿ-ಚುಚ್ಚುತ್ತಾನೆ, ॥೩॥ ಕಃ-ಯಾವನು, ಕಾಲಪಾಶಂ-ಯಮಪಾಶವನ್ನು, ಕಂಠೇ-ಕೊರಳಿನಲ್ಲಿ, ಮೋಹಾತ್-ಅಜ್ಞಾನದಿಂದ, ಆಸಜ್ಯ-ಕಟ್ಟಿಕೊಂಡು, ನಜಾನತೇ-ತಿಳಿಯದೆ ಇರುವನೆ, (ನಜಾನೀತೇ-ಇತಿಪಾಠಾಂತರಂ-ಆ ಪಾಠದಲ್ಲಿಯೂ ಇದೇ ಅರ್ಥವು. ) ಯಃ-ಯಾವಪುರುಷನು, ತ್ವಾಂ-ನಿನ್ನನ್ನು, ಅದ್ಯ-ಈಗ. ಆಸಾದ್ಯ-ಹೊಂದಿ, ಉತ್ತಮಂ-ಉತ್ಕೃಷ್ಟವಾದ. ವಿಷಂ-ಕಾಲಕೂಟವನ್ನು, ಪೀತವಾನ್-ಪಾನಮಾಡಿದನೋ, ಸಃ-ಅವನು, ಕಃ-ಯಾರು. ॥೪॥ ಬಲವಿಕ್ರಮಸಂಪನ್ನಾ-ಬಲದಿಂದಲೂ ಪರಾಕ್ರಮದಿಂದಲೂ ಕೂಡಿಕೊಂಡಿರುವ. ಕಾಮಗಾ-ಕಾಮಸಂಚಾರಿಣಿಯಾದ, ಕಾಮರೂಪಿಣೀ-ಸ್ವೇಚ್ಛೆಬಂದಂತೆ ರೂಪವಂಧರಿಸುತ್ತಿರುವ, ಅಂತಕಸಮಾ-ಯಮನಿಗೆ ಸಮಾನಳಾದ. ತ್ವಂ-ನೀನು, ಗತಾ-ಹೋದವಳಾಗಿ, ಕೇನ-ಯಾವನಿಂದ, ಇಮಾಮವಸ್ಥಾಂ-ಇಂಥಾ ಅವಸ್ಥೆಯನ್ನು ನೀತಾ-ಹೊಂದಲ್ಪಟ್ಟೆ. ॥೫॥ ದೇವಗಂಧರ್ವಭೂತಾನಾಂ-ದೇವತೆಗಳೂ ಗಂಧರ್ವರೂ ಭೂತಗಳೂ ಇವರೊಳಗೆ, ಮಹಾತ್ಮನಾಂ-ಮಹಾಪ್ರಭಾವವಂತರಾದ, ಋಷೀಣಾಂಚ-ಋಷಿಗಳೊಳಗೆ, ಮಹಾವೀರ್ಯಃ-ಮಹಾಸಮರ್ಥನಾದ. ಕಃ ಯಾವ ಪುರುಷನು, ತ್ವಾಂ-ನಿನ್ನನ್ನು, ಏವಂ-ಈಪರಿಯಾಗಿ, ರೂಪಾಂ-ವಿಕಾರರೂಪವುಳ್ಳವಳನ್ನಾಗಿ ಚಕಾರ-

---

ಶರೀರವುಳ್ಳವಳಾಗಿಯೂ, ಭೀತಿಯಿಂದಲೂ, ಮೋಹದಿಂದಲೂ ಸಹಾ ಮೂರ್ಛಿತಳಾಗಿಯೂ ಇರುವಳಾಗಿ ಅರಣ್ಯಕ್ಕೆ ಬಂದಿರುವ ಭಾರ್ಯಾಸಹಿತನಾದ, ಮತ್ತು ತಮ್ಮನಾದ ಲಕ್ಷ್ಮಣನಿಂದೊಡಗೂಡಿದ ಶ್ರೀರಾಮನಿಂದ ತನಗುಂಟಾದ ಆ ವೈರೂಪ್ಯವನ್ನು ಖರನಿಗೆ ಬಿನ್ನಹಮಾಡಿದಳು ॥೨೬॥ —* ೧೮ನೆಯ ಸರ್ಗಂಮುಗಿದುದು*—

ಅನಂತರದಲ್ಲಿ ಆ ಖರಾಸುರನು ಆ ರೀತಿಯಾಗಿ ನೆಲದಲ್ಲಿಬಿದ್ದು ಹೊರಳಾಡುತ್ತಿರುವ, ಮತ್ತು ವೈರೂಪ್ಯವನ್ನೈದಿದ ಆ ಶೂರ್ಪಣಖಿಯುಂ ಕಂಡು, ಕುಪಿತನಾಗಿ ಕೇಳುವನದಂತೆನೆ,—ಎಲೌ ತಂಗಿಯೇ, ಏಳು, ಏಳು, ಈ ಮೋಹವನ್ನೂ, ಸಂಭ್ರಮವನ್ನೂ ಸಹಾ ಬಿಡುವವಳಾಗು, ನಿನಗೆ ಈ ವೈರೂಪ್ಯವನ್ನು ಯಾರುಂಟುಮಾಡಿದರು? ತತ್ವವಂ ಪೇಳುವವಳಾಗು, ಏನಪರಾಧವಂ ಗೈಯ್ಯದೆ ಮಲಗಿರುವ ಕೃಷ್ಣಸರ್ಪವನ್ನು ಬೆರಳಿನ ತುದಿಯಿಂದ ಯಾವ ಪುರುಷನು ಚುಚ್ಚುವನು? ಹಾ, ಹಾ, ಯಾವ ಮನುಷ್ಯನು ಅಜ್ಞಾನದಿಂದ ಕಾಲಪಾಶವನ್ನು ಕಂಠದಲ್ಲಿ ಕಟ್ಟಿಕೊಂಡು ತಿಳಿಯದಿರುವನು? ಈಗ ನಿನ್ನನ್ನು ಹೊಂದಿ ವಿಷಪಾನವಂ ಮಾಡಿದವನ್ಯಾರು? ಬಲದಿಂದಲೂ, ದೇಹತ್ರಾಣದಿಂದಲೂ ಕೂಡಿರುವ ಕಾಮಗಾಮಿನಿಯಾದ, ಇಷ್ಟಬಂದಂತೆ ರೂಪಗಳಂ ಧರಿಸುತ್ತಿರುವ, ಯಮನಸದೃಶಳಾದ ನೀನು ಯಾವ ಪುರುಷನಿಂದ ಇಂಥಾ ಅವಸ್ಥೆಯನ್ನು ಹೊಂದಿಸಲ್ಪಟ್ಟವಳಾದೆ? ॥೫॥ ನಿನಗೆ ಇಂಥಾ ಅವಸ್ಥೆ

ಪಶ್ಯಾಮ್ಯಹಂ ಲೋಕೇ ಯಃ ಕುರ್ಯಾನ್ಮಮ ವಿಪ್ರಿಯಂ । ಅಮರೇಷು ಸಹಸ್ರಾಕ್ಷಂ ಮಹೇಂದ್ರಂ ಪಾಕಶಾಸನಮ್ ।೩। ಅದ್ಯಾಹಂ ಮಾರ್ಗಣೈಃ ಪ್ರಾಣಾನಾದಾಸ್ಯೇ ಜೀವಿತಾಂತಕೈಃ । ಸಲಿಲೇ ಕ್ಷೀರಮಾಸಕ್ತಂ ನಿಷ್ಪಿಬನ್ನಿವ ಸಾರಸಃ ।೪। ನಿಹತಸ್ಯ ಮಯಾ ಸಂಖ್ಯೇ ಶರಸಂಕೃತ್ತಮರ್ಮಣಃ । ಸಫೇನಂ ರುಧಿರಂ ರಕ್ತಂ ಮೇದಿನೀ ಕಸ್ಯ ಪಾಸ್ಯತಿ ।೫। ಕಸ್ಯ ಪತ್ರರಥಾಃ ಕಾಯಾನ್ಮಾಂಸಮುತ್ಕೃತ್ಯ ಸಂಗತಾಃ । ಪ್ರಹೃಷ್ಟಾ ಭಕ್ಷಯಿಷ್ಯಂತಿ ನಿಹತಸ್ಯ ಮಯಾ ರಣೇ ।೬। ತಂ ನ ದೇವಾ ನ ಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ । ಮಯಾಪಕೃಷ್ಟಂ ಕೃಪಣಂ ಶಕ್ತಾಸ್ತ್ರಾತುಮಿಹಾಹವೇ ।೭। ಉಪಲಭ್ಯ ಶನೈಸ್ಸಂಜ್ಞಾಂ ತಂ ಮೇ ಶಂಸಿತುಮರ್ಹಸಿ । ಯೇನ ತ್ವಂ ದುರ್ವಿನೀತೇನ ವನೇ ವಿಕ್ರಮ್ಯ ನಿರ್ಜಿತಾ ।೮। ಇತಿ ಭ್ರಾತುರ್ವಚಶ್ಶ್ರುತ್ವಾ ಕ್ರುದ್ಧಸ್ಯ ಚ ವಿಶೇಷತಃ । ತತಶ್ಶೂರ್ಪಣಖಾ ವಾಕ್ಯಂ ಸಬಾಷ್ಪಮಿದಮಬ್ರವೀತ್ ।೯। ತರುಣೌ ರೂಪಸಂಪನ್ನೌ ಸುಕುಮಾರೌ

ಮಾಡಿದನು, ಅಯಂ-ಇವನು. ಕಃ-ಯಾವನು ||೨|| ಅಹಂ-ನಾನು, ಲೋಕೇ-ಲೋಕದಲ್ಲಿ, ಯಃ-ಯಾರು, ಅಮರೇಷು-ದೇವತೆಗಳಲ್ಲಿ, ಮಮ-ನನಿಗೆ, ವಿಪ್ರಿಯಂ-ಅನಿಷ್ಟವನ್ನು. ಕುರ್ಯಾತ್-ಮಾಡುವನೋ. ಸಹಸ್ರಾಕ್ಷಂ-ಸಹಸ್ರನೇತ್ರಗಳುಳ್ಳ. ಮಹೇಂದ್ರಂ-ಮಹೇಂದ್ರಶಬ್ದವಾಚ್ಯನಾದ, ಪಾಕಶಾಸನಂ-ದೇವೇಂದ್ರನನ್ನಾದರೂ, ನಪಶ್ಯಾಮಿ-ಕಾಣೆನು, ( ಯದ್ವಾ-ಅಂತರೇಣಸಹಸ್ರಾಕ್ಷಮಿತಿಪಾಠಾಂತರಂ-ತತ್ರ-ಸಹಸ್ರಾಕ್ಷಮಂತರೇಣ-ದೇವೇಂದ್ರನ್ನು ಬಿಟ್ಟು, ಮಮ-ನನಿಗೆ-ಯಃ-ಯಾವನು, ವಿಪ್ರಿಯಂ-ಅನಿಷ್ಟವನ್ನು, ಕುರ್ಯಾತ್-ಮಾಡುವನೋ. ತಂ-ಅಂಥಾವನನ್ನು, ನಪಶ್ಯಾಮಿ-ಕಾಣೆನು ||೩|| ಅದ್ಯ-ಈಗ, ಅಹಂ-ನಾನು, ಜೀವಿತಾಂತಕೈಃ-ಪ್ರಾಣಾಂತಕಗಳಾದ. ಮಾರ್ಗಣೈಃ-ಬಾಣಗಳಿಂದ, ಪ್ರಾಣಾನ್-ಪ್ರಾಣಗಳನ್ನು, ಸಲಿಲೇ-ನೀರಿನಲ್ಲಿ. ಆಸಕ್ತಂ-ಸಂಬಂಧವಾದ, ಕ್ಷೀರಂ-ಹಾಲನ್ನು, ನಿಷ್ಪಿಬನ್-ಪಾನಮಾಡುತ್ತಿರುವ. ಸಾರಸಇವ-ಹಂಸಪಕ್ಷಿ ವಿಶೇಷದಂತೆ, ಆದಾಸ್ಯೇ-ಹೀರುತ್ತೇನೆ ||೪|| ಮಯಾ-ನನ್ನಿಂದ, ಸಂಖ್ಯೇ-ಕಾಳಗದಲ್ಲಿ, ನಿಹತಸ್ಯ-ಹೊಡೆಯಲ್ಪಟ್ಟ, ಶರಸಂಕೃತ್ತಮರ್ಮಣಃ-ಬಾಣಗಳಿಂ ಕತ್ತರಿಸಲ್ಪಟ್ಟ ರಹಸ್ಯಸ್ಥಳಗಳುಳ್ಳ, ಕಸ್ಯ-ಯಾವಪುರುಷನ, ಸಫೇನಂ-ನೊರೆಯಿಂದೊಡಗೂಡಿದ, ರಕ್ತಂ-ಕೆಂಪಾಗಿರುವ, ರುಧಿರಂ-ರಕ್ತವನ್ನು, ಮೇದಿನೀ-ನೆಲವು ಪಾಸ್ಯತಿ-ಪಾನಮಾಡುತ್ತದೆ ||೫|| ಮಯಾ-ನನ್ನಿಂದ, ರಣೇ-ಕಾಳಗದಲ್ಲಿ. ನಿಹತಸ್ಯ-ಹೊಡಿಯಲ್ಪಟ್ಟ. ಕಸ್ಯ-ಯಾವಪುರುಷನ, ಕಾಯಾತ್-ಶರೀರದವೆಳೆಯಿಂದ, ಉತ್ಕೃತ್ಯ-ಎತ್ತಿಕೊಂಡು ಸಂಗತಾಃ-ಗುಂಪುಸೇರಿದ, ಪತ್ರರಥಾಃ-ಕಾಗೆಯೇ ಮೊದಲಾದವುಗಳಾದ, ಪಕ್ಷಿಗಳು ಪ್ರಹೃಷ್ಟಾಃ-ಸಂತೋಷಗೊಂಡವುಗಳಾಗಿ, ಭಕ್ಷಯಿಷ್ಯಂತಿ-ತಿನ್ನುವವು ||೬|| ಮಯಾ-ನನ್ನಿಂದ, ಇಹ-ಈ ಅರಣ್ಯದಲ್ಲಿ, ಆಹವೇ-ಕಾಳಗದಲ್ಲಿ, ಅಪಕೃಷ್ಟಂ-ಶಕ್ತಿಯಳಿಸಲ್ಪಟ್ಟ ಕೃಪಣಂ-ದೀನನಾದ, ತಂ-ಆ ಮನುಜನನ್ನು. ತ್ರಾತುಂ-ಸಂರಕ್ಷಿಸುವದಕ್ಕಾಗಿ, ದೇವಾಃ-ದೇವತೆಗಳು. ನಶಕ್ತಾಃ-ಸಮರ್ಥರಲ್ಲ. ಗಂಧರ್ವಾಃ-ಗಂಧರ್ವರು, ನಶಕ್ತಾಃ-ಸಮರ್ಥರಲ್ಲ. ಪಿಶಾಚಾಃ-ಪಿಶಾಚಿಗಳು, ನ-ಸಮರ್ಥರಲ್ಲ, ರಾಕ್ಷಸಾಃ-ರಾಕ್ಷಸರು, ನ-ಸಮರ್ಥರಲ್ಲ ||೭|| ದುರ್ವಿನೀತೇನ-ದುಷ್ಟನಾದ, ಯೇನ-ಯಾವಪುರುಷನಿಂದ. ತ್ವಂ-ನೀನು. ವನೇ-ಅರಣ್ಯದಲ್ಲಿ, ವಿಕ್ರಮ್ಯ-ಆಕ್ರಮಿಸಿ, ನಿರ್ಜಿತಾ-ಜಯಿಸಲ್ಪಟ್ಟೆಯೋ, ಶನೈಃ-ಮೆಲ್ಲನೆ ಸಂಜ್ಞಾಂ-ಪ್ರಜ್ಞೆಯನ್ನು ಉಪಲಭ್ಯ-ಹೊಂದಿ ತಂ-ಆ ಪುರುಷನನ್ನು, ಮೇ-ನನಗೆ, ಶಂಸಿತುಂ-ಹೇಳುವದಕ್ಕಾಗಿ, ಅರ್ಹಸಿ-ಯೋಗ್ಯಳಾಗು ||೮|| ಇತಿ-ಈಪರಿಯಾಗಿ, ವಿಶೇಷತಃ-ವಿಶೇಷವಾಗಿ, ಕ್ರುದ್ಧಸ್ಯ-ಕೋಪಿಷ್ಟನಾದ. ಭ್ರಾತುಃ-ಅಣ್ಣನಾದ ಖರನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ತತಃ-ಬಳಿಕ, ಶೂರ್ಪಣಖಾ-ಶೂರ್ಪಣಖೆಯು, ಸಬಾಷ್ಪಂ-ಕಂಬನಿಯಿಂದೊಡಗೂಡಿದಂತೆ, ಇದಂವಾಕ್ಯಂ-ಈಮಾತನ್ನು, ಅಬ್ರವೀತ್-ನುಡಿದಳು ||೯|| ತರುಣೌ-ತಾರುಣ್ಯವಯಸ್ಸುಳ್ಳ, ರೂಪಸಂಪನ್ನೌ-ಸೌಂದರ್ಯದಿಂ ಕೂಡಿಕೊಂಡಿರುವ, ಸುಕುಮಾರೌ-ಹುವ್ವಿನಂತೆ ಮೃದುವಾದ ಸ್ವಭಾವ

ಯನ್ನುಂಟುಮಾಡಿದವನು ಸುರನೋ, ಗಂಧರ್ವನೋ, ಋಷಿಯೋ, ಯಾರು? ಹೇಳುವವಳಾಗು, ಲೋಕದಲ್ಲಿ ನನಿಗೆ ದೇವತೆಗಳಲ್ಲಿ ಯಾರಾದರೂ ಅಪಕಾರವಂ ಗೈದರೆ ಅವನು ಸಾಕ್ಷಾದಿಂದ್ರನಾದರೂ, ಮಹೇಂದ್ರನಾದರೂ, ಪಾಕಶಾಸನ ನಾಥರೂ ಆತನಂ ನಾನು ಲಕ್ಷ್ಯವಿಡುವದಿಲ್ಲ. |೩| ಈಗ ನಾನು ಪ್ರಾಣನಾಶವಂ ಗೈಯ್ಯುವ ಶರಗಳುಗಳಿಂದ; ನೀರಿನಲ್ಲಿ ಬೆರೆತ ಹಾಲನ್ನು ಪಾನಮಾಡುತ್ತಿರುವ ಸಾರಸಪಕ್ಷಿಯಂತೆ ಹೀರುವೆನು. ಕಾಳಗದಲ್ಲಿ ಹೊಡಿಯಲ್ಪಟ್ಟ ನಿಡುಗೋಲುಗಳಿಂದ ಕತ್ತರಿಸಲ್ಪಟ್ಟ ಮರ್ಮಸ್ಥಾನಗಳುಳ್ಳ, ಯಾವ ಪುರುಷನ ರಕುತವಂ ಭೂಮಿಯು ಪಾನಮಾಡುವದು? ಮತ್ತು ರಣರಂಗದಲ್ಲಿ ಹೊಡಿಯಲ್ಪಟ್ಟ ಯಾವ ಪುರುಷನ ಶರೀರಕ್ಕೆ ಕಾಗೆ ಮೊದಲಾದ ಪಕ್ಷಿಗಳು ಮುಚ್ಚಿಕೊಂಡು, ಸಂತೋಷವಾಗಿ ಸುತ್ತು ಬಾರಿಕೊಂಡು ಮೋಯಬೇಕಾಗಿದೆ? ನನ್ನಿಂದ ಆ ಹವದಲ್ಲಿ ಕೆಳೆಯಲ್ಪಡುತ್ತಾ ಬಹು ದೀನನಾಗಿ ಕೂಗುತ್ತಿರುವ ಆ ಮನುಷ್ಯನನ್ನು ರಕ್ಷಿಸುವದಕ್ಕಾಗಿ ದೇವತೆಗಳೂ, ಗಂಧರ್ವರೂ, ಪಿಶಾಚಗಳೂ, ರಾಕ್ಷಸರೂ ಯಾರೂ ಸಮರ್ಥರಲ್ಲ |೭| ಎಲೌ ಒಡಹುಟ್ಟಿದವಳೇ; ದುಷ್ಟನಾದ ಯಾವ ಪುರುಷನಿಂದ ಅರಣ್ಯದಲ್ಲಿ ನೀನು ಜಯಿಸಲ್ಪಟ್ಟವಳಾದೆಯೋ, ನನಿಗೆ ಹೇಳುವವಳಾಗೆಂದು ವಿಶೇಷವಾಗಿ ಕುಪಿತನಾಗಿ ಹೇಳುತ್ತಿರುವ ಆ ಅಣ್ಣನಾದ ಖರಾಸುರನ ವಾಕ್ಯವಂ ಕೇಳಿ, ಆ ಶೂರ್ಪಣಖಿಯು ಕಂಬನಿಗಳಂ ಸುರಿಸುತ್ತಾ ನುಡಿವಳಿಂತೆನೆ,— |೯| ಯೌವನವಂತರಾಗಿಯೂ, ಸೌಂದರ್ಯಯುಕ್ತರಾಗಿಯೂ ಪುಷ್ಪಗಳಂತೆ

ಮಹಾಬಲೌ । ಪುಂಡರೀಕವಿಶಾಲಾಕ್ಷೌಚೀರಕೃಷ್ಣಾಜಿನಾಂಬರೌ॥ ಫಲಮೂಲಾಶನೌದಾಂತೌತಾಪಸೌಧರ್ಮಚಾರಿ
ಣೌ । ಪುತ್ರೌದಶರಥಸ್ಯಾಸ್ತಾಂಭ್ರಾತರೌರಾಮಲಕ್ಷ್ಮಣೌ ॥೧೫॥ ಗಂಧರ್ವರಾಜಪ್ರತಿಮೌಪಾರ್ಥಿವವ್ಯಂಜನಾನ್ವಿ
ತೌ । ದೇವೌವಾಮಾನುಷೌವಾತೌನತರ್ಕಯಿತುಮುತ್ಸಹೇ ॥೧೬॥ ತರುಣೀರೂಪಸಂಪನ್ನಾಸರ್ವಾಭರಣಭೂಷಿತಾ । ದೃ
ಷ್ಟಾತತ್ರಮಯಾನಾರೀತಯೋರ್ಮಧ್ಯೇಸುಮಧ್ಯಮಾ ॥೧೭॥ ತಾಭ್ಯಾಮುಭಾಭ್ಯಾಂಸಂಭೂಯಪ್ರಮದಾಮಧಿಕೃತ್ಯ
ತಾಂ । ಇಮಾಮವಸ್ಥಾಂನೀತಾಹಂಯಥಾನಾಥಾಸತೀತಥಾ ॥೧೮॥ ತಸ್ಯಾಶ್ಚಾನೃಜುವೃತ್ತಾಯಾಸ್ತಯೋಶ್ಚಹತ

ಳ್ಳ, ಮಹಾಬಲೌ-ಬಹಳವಾದ ದೇಹಸಾಮರ್ಥ್ಯವುಳ್ಳ, ಪುಂಡರೀಕವಿಶಾಲಾಕ್ಷೌ-ಬಿಳೀಕಮಲಗಳಂತೆ ವಿಸ್ತಾರವಾದ ನೇತ್ರಗಳುಳ್ಳ. ಚೀರಕೃಷ್ಣಾಜಿನಾಂಬರೌ-ನಾರುಮಡಿಗಳೂ ಕೃಷ್ಣಾಜಿನವೇ ವಸ್ತ್ರವಾಗುಳ್ಳವರು, (ಯದ್ವಾ-ತರುಣೌ-ಪ್ರಾರಂಭಿಸಲ್ಪಟ್ಟ ತಾರುಣ್ಯವುಳ್ಳ. ರೂಪಸಂಪನ್ನೌ-ರೂಪದಿಂಮಾತ್ರ ಕೂಡಿಕೊಂಡಿರುವವರು, ಅಂದರೆ, ಪರಾಕ್ರಮಸಂಪನ್ನರಲ್ಲ, ಸುಕುಮಾರೌ-ರಾಜಕುವರರಾದ್ದರಿಂ ಮೃದುಸ್ವಭಾವವುಳ್ಳವರು, ಮಹಾಬಲೌ-ಮಹಾಬಲಿಷ್ಠರಾಗುವರೇ, (ಅಲ್ಲಾ) (ಯದ್ವಾ-ಮಹಾಬಲೌ-ಮೃದುಪದಾರ್ಥಗಳಲ್ಲಿ ಶ್ರೇಷ್ಠವಾದ ಅಂಗಿಯಿಂದ ಯುಕ್ತರು. ಪುಂಡರೀಕವಿಶಾಲಾಕ್ಷೌ-ಬಿಳೀ ಕಮಲಗಳಂತೆ ವಿಶಾಲವಾದ ನೇತ್ರಗಳುಳ್ಳವರು. ಅಂದರೆ, ಶತ್ರುಗಳಮ್ಯಾಲೆ ಕೋಪೋದ್ರೇಕದಿಂ ಕೆಂಗಣ್ಣುಳ್ಳವರಲ್ಲವೆಂದು, ಚೀರಕೃಷ್ಣಾಜಿನಾಂಬರೌ-ನಾರುಶೀರೆಗಳೂ ಕೃಷ್ಣಾಜಿನಗಳೂ ಉಳ್ಳವರು, ಅಂದರೆ-ವೃಕ್ಷವನ್ನುಭೇದಿಕೊಂಡು ನಾರುಶೀರೆ ಪ್ರಟ್ಟಿರುವನೊಬ್ಬನ. ಶಿವ್ಯಗ್ರಜಂತವಾದ ಮೃಗವನ್ನ ಭೇದಿ ಒಬ್ಬನು ಚರ್ಮವನ್ನುಕಿತ್ತಿಥಾನ, ಯದ್ವಾ-ಖನಿಗೆ ಪ್ರೋತ್ಸಾಹಮಾಗುವದಕ್ಕಾಗಿ ಯುದ್ಧಯೋಗ್ಯತೆಯನ್ನು ಅವನಿಗೆ ಹೇಳುತಾಳೆ.) ತರುಣೌ-ಜಯೋತ್ಸಾಹದಿಂ ಯುದ್ಧಯೋಗ್ಯವಯಸ್ಸುಳ್ಳ, ರೂಪಸಂಪನ್ನೌ-ಯುದ್ಧವಿಲ್ಲದಿದ್ದರೂ, ದರ್ಶನಮಾತ್ರದಿಂ ಪರಹೃದಯಕಂಪಜನಕವಾದ ರೂಪದಿಂ ಕೂಡಿಕೊಂಡಿರುವವರು, ಸುಕುಮಾರೌ-ಲೀಲಾಮಾತ್ರದಿಂ ಶತ್ರುಸಂಹಾರದಲ್ಲಿ ಸಮರ್ಥರು ಮಹಾಬಲೌ-ಮಹತ್ತರವಾದ ಬಾಹುಬಲವೂ ಮನೋಬಲವೂ ಉಪಾಯಬಲವೂ ಉಳ್ಳವರು, ಪುಂಡರೀಕವಿಶಾಲಾಕ್ಷೌ-ಶತ್ರುಗಳಲ್ಲಿ ಗೌರವಬುದ್ಧಿಯನ್ನಿಟ್ಟು ಕೋಪದಿಂದ ನೇತ್ರಗಳನ್ನ ಕೆಂಪಗೆ ಮಾಡಿಕೊಳ್ಳದಿದ್ದರೂ, ಉದಾಸೀನಬುದ್ಧಿಯಿಂದ ಬೆಳ್ಳಗಿರುವ ನೇತ್ರಗಳುಳ್ಳವರೇ ಆಗಿಧಾರೆ, ಚೀರಕೃಷ್ಣಾಜಿನಾಂಬರೌ-ನಾರುಶೀರೆಗಳೂ ಕೃಷ್ಣಾಜಿನವೇ ವಸ್ತ್ರವಾಗುಳ್ಳವರಾದ್ದರಿಂದ ಸರ್ವಕಾಲದಲ್ಲಿಯೂ- ಯುದ್ಧಸನ್ನದ್ಧರಾಗಿರುವಂತ್ತೇಯಿಧಾರೆ, ಈ ಅರ್ಥವು ಶೂರ್ಪನಖೆಯಿಂದ ಹೇಳಲ್ಪಟ್ಟದ್ದು ನೋಡಿದರೆ ಇಂಥಾವರಮಕ್ಕಳು ಇಂಥಾವರೆಂದು ಹೇಳುವೆಯಿರುವದ್ದರಿಂದಲೂ, ವೃದ್ಧರಾದರೂ ಆ ಶೂರ್ಪನಖೆಗೆ ರಾಮಲಕ್ಷ್ಮಣರಲ್ಲಿ ಕಾಮೋದ್ರೇಕವೂ ತನಗೆ ವಿರೂಪಮಾಡಿದ್ದರಿಂದ ರೋಷಾಧಿಕ್ಯವೂಸಹ ಉಂಟಾಗಿ ಕಾಮದ್ವೇಷಗಳಿಂದ, ಇವರ ಶೌರ್ಯಾದ್ಯವಸ್ಥೆಯನ್ನೂ, ವರ್ಣಿಸಿದಳೆಂದು ತಾತ್ಪರ್ಯವು) ಫಲಮೂಲಾಶನೌ-ಕಂದಮೂಲಗಳೂ ಫಲಗಳೂ ಆಶನವಾಗುಳ್ಳ, ದಾಂತೌ-ಜಿತೇಂದ್ರಿಯರಾದ, ತಾಪಸೌ-ಋಷಿವೃತ್ತಿಯುಳ್ಳ, ಧರ್ಮಚಾರಿಣೌ-ಧರ್ಮವನ್ನೇ ಆಚರಿಸುತಿರುವ. ಭ್ರಾತರೌ-ಅಣ್ಣತಮ್ಮಂದರಾದ. ರಾಮಲಕ್ಷ್ಮಣೌ-ರಾಮಲಕ್ಷ್ಮಣರೆಂಬ. ದಶರಥಸ್ಯ-ದಶರಥಮಹಾರಾಯನ, ಪುತ್ರೌ-ಮಕ್ಕಳು, ಆಸ್ತಾಂ ಯಿದ್ದರು, ॥೧೫॥ ಗಂಧರ್ವರಾಜಪ್ರತಿಮೌ-ಗಂಧರ್ವರಾಜನಿಗೆ ಸಮಾನರಾದ| ಪಾರ್ಥಿವವ್ಯಂಜನಾನ್ವಿತೌ-ರಾಜಲಕ್ಷಣಗಳಿಂದ ಕೂಡಿಕೊಂಡಿರುವ, ತೌ-ಅವರಿಬ್ಬರು, ದೇವೌವಾ-ದೇವತೆಗಳೆಸೋ, ಮಾನುಷೌವಾ-ಮನುಷ್ಯರೇನೋ, ತರ್ಕಯಿತುಂ-ಹೇಳುವದಕೋಸುಗ, ನೋತ್ಸಹೇ-ಸಮರ್ಥಳಾಗಲಾರೆನು ॥೧೬॥ ತತ್ರ-ಅಲ್ಲಿ, ತರುಣೀ-ತಾರುಣ್ಯಶಾಲಿಯಾದ, ರೂಪಸಂಪನ್ನಾ-ಸೌಂದರ್ಯಾದಿಕೂಡಿಕೊಂಡಿರುವ, ಸರ್ವಾಭರಣಭೂಷಿತಾ-ಸಮಸ್ತವಾದ ಆಭರಣಗಳಿಂದಲಂಕೃತಳಾದ, ಸುಮಧ್ಯಮಾ-ಒಳ್ಳೇಮಧ್ಯಪ್ರದೇಶವುಳ್ಳ. ನಾರೀ-ಹೆಂಗಸು. ತಯೋಃ-ಆ ರಾಮಲಕ್ಷ್ಮಣರೆಂಬಿಬ್ಬರ. ಮಧ್ಯೇ-ಮಧ್ಯದಲ್ಲಿ. ಮಯಾ-ನನ್ನಿಂದ, ದೃಷ್ಟಾ-ನೋಡಲ್ಪಟ್ಟಳು ॥೧೭॥ ತಾಭ್ಯಾಮುಭಾಭ್ಯಾಂ-ಅವರಿಬ್ಬರಿಂದ, ತಾಂ-ಆ, ಪ್ರಮದಾಂ-ಹೆಂಗಸಿನನ್ನು. ಅಧಿಕೃತ್ಯ-ನಿಮಿತ್ತವಾಗಿಮಾಡಿ, ಸಂಭೂಯ ಸೇರಿ, ಅಹಂ-ನಾನು, ಅನಾಥಾ-ನಾಥರಹಿತಳಾದ. ಅಸತೀ-ಕುಲಟಾಸ್ತ್ರೀಯು, ಯಥಾ-ಹ್ಯಾಗೆಯೋ. ತಥಾ-ಹಾಗೆ, ಇಮಾಂಅವಸ್ಥಾಂ-ಈ ಅವಸ್ಥೆಯನ್ನು, ನೀತಾ-ಹೊಂದಲ್ಪಟ್ಟೆ. ॥೧೮॥ ಅನೃಜುವೃತ್ತಾಯಾಃ-ಕುಟಿಲವ್ಯಾಪಾರವುಳ್ಳ. ತಸ್ಯಾಃ-ಆ ಈ ಸನಕೆ, ಅವಸ್ಥಾಂ-ಕರ್ಣನಾಸಾ

ಮೃದುವಾದ ಶರೀರವುಳ್ಳವರಾಗಿಯೂ, ಬಹು ಬಲವಂತರಾಗಿಯೂ, ತಾವರೇ ಯೆಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವರಾಗಿಯೂ, (ವಿಶೇಷಾರ್ಥಗಳು ಪ್ರತಿಪದಟೀಕಿನಲ್ಲಿ ನೋಡಿಕ್ಕೊಳ್ಳಬಹುದು) ಕಂದಮೂಲಫಲಗಳನ್ನು ಭುಜಿಸುವರಾಗಿಯೂ, ಜಿತೇಂದ್ರಿಯರಾಗಿಯೂ, ಋಷಿವೃತ್ತಿಯುಳ್ಳವರಾಗಿಯೂ, ಧರ್ಮವನ್ನಾಚರಿಸುವವರಾಗಿಯೂ ಇರುವ ರಾಮಲಕ್ಷ್ಮಣರೆಂಬ ದಶರಥರಾಯನ ಮಕ್ಕಳೀರ್ವರಿಧಾರೆ ॥೧೫॥ ಗಂಧರ್ವರಾಜನಿಗೆ ಸಮಾನರಾಗಿಯೂ, ರಾಜಲಕ್ಷಣಗಳಿಂ ದೊಪ್ಪುತ್ತಿರುವವರಾಗಿಯೂ ಇರುವ ಅವರಿಬ್ಬರೂ ದೇವತೆಗಳೋ, ಅಥವಾ ಮನುಷ್ಯರೋ ನಾನು ಪೇಳಲಾರೆನು. ಆರಾಜಪುತ್ರರ ಆಶ್ರಮದಲ್ಲಿ ಯವ್ವನವಂತಳಾಗಿಯೂ, ಸೌಂದರ್ಯವತಿಯಾಗಿಯೂ, ಸರ್ವಾಭರಣಗಳಿಂದ ಅಲಂಕರಿಸಲ್ಪಟ್ಟವಳಾಗಿಯೂ, ಸಮೀಚೀನವಾದ ಮಧ್ಯಪ್ರದೇಶವುಳ್ಳವಳಾಗಿಯೂ ಇರುವ ಒಬ್ಬ ಹೆಂಗಸನ್ನು ನೋಡಿದೆನು; ಆಕೆಯು ನಿಮಿತ್ತವಾಗಿ ಆ ಅಣ್ಣತಮ್ಮಂದರೀರ್ವರೂ ಸೇರಿ, ಅನಾಥಳಾದ ಜಾರಿಣಿಯನ್ನು ಜನಗಳು ಯೆಂತು ದುರವಸ್ಥೆಯಂ ಹೊಂದಿಸುವರೋ ಅಂತು ನನ್ನನ್ನು ಇಂಥಾ ಅವಸ್ಥೆಯನ್ನು ಹೊಂದಿಸಿದರು ॥೧೮॥

ಘೋರಹಂ । ನಫೇನಂಪಾತುಮಿಚ್ಛಾಮಿರುಧಿರಂರಣಮೂರ್ಧನಿ ।೧೯। ಏಷಮೇಪ್ರಥಮಃಕಾಮಃಕೃತಸ್ತತ್ರತ್ವಯಾ ಭವೇತ್ । ತಸ್ಯಾಸ್ತಯೋಶ್ಚರುಧಿರಂಪಿಬೇಯಮಹಮಾಹವೇ ।೨೦। ಇತಿತಸ್ಯಾಂಬ್ರುವಾಣಾಯಾಂಚತುರ್ದಶಮಹಾಬಲಾನ್ । ವ್ಯಾದಿದೇಶಖರಃಕ್ರುದ್ಧೋರಾಕ್ಷಸಾನಂತಕೋಪಮಾನ್ ।೨೧। ಮಾನುಷೌಶಸ್ತ್ರಸಂಪನ್ನೌಚೀರಕೃಷ್ಣಾಜಿನಾಂಬರೌ । ಪ್ರವಿಷ್ಟೌದಂಡಕಾರಣ್ಯಂಘೋರಂಪ್ರಮದಯಾಸಹ ।೨೨। ತೌಹತ್ವಾತಾಂಚದುರ್ವೃತ್ತಾಮುಪಾವರ್ತಿತುಮರ್ಹಥ । ಇಯಂಚರುಧಿರಂತೇಷಾಂಭಗಿನೀಮಮಪಾಸ್ಯತಿ । ಮನೋರಥೋಯಮಿಷ್ಟೋಸ್ಯಾಭಗಿನ್ಯಾಮಮರಾಕ್ಷಸಾಃ । ಶೀಘ್ರಂಸಂಪಾದ್ಯತಾಂತತ್ರ ಪ್ರಮಥ್ಯಸ್ವೇನತೇಜಸಾ ।೨೪। ಇತಿಪ್ರತಿಸಮಾದಿಷ್ಟಾರಾಕ್ಷಸಾಸ್ತೇ

---

ಚ್ಛೇದನರೂಪ ಅವಸ್ಥೆಯನ್ನು, ಪಶ್ಯ-ನೋಡು, ರಣಮೂರ್ಧನಿ-ಕಾಳಗದ ತುದಿಯಲ್ಲಿ, ಹತಯೋಃ-ನಿನ್ನಿಂದ ಹೊಡಿಯಲ್ಪಟ್ಟ, ತಯೋಃ-ಆ ರಾಮಲಕ್ಷ್ಮಣರ, ಸಫೇನಂ-ನೊರೆಯಿಂದೊಡಗೂಡಿದ, ರುಧಿರಂ-ರಕುತವನ್ನು, ಪಾತುಂ-ಕುಡಿಯುವದಕ್ಕಾಗಿ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೧೯॥ ಹೇತಾತ-ಎಲೈ ಅಪ್ಪನೇ, ಏಷಃ-ಇದು, ಮೇ-ನನ್ನ, ಪ್ರಥಮಃಕಾಮಃ-ಮೊದಲನೇ ಕೋರಿಕೆಯು, ತ್ವಯಾ-ನಿನ್ನಿಂದ, ಕೃತಃ-ಮಾಡಲ್ಪಡುವದು ಭವೇತ್-ಆಗಬೇಕು. ಅಹಂ-ನಾನು, ಆಹವೇ-ಕಾಳಗದಲ್ಲಿ, ತಸ್ಯಾಃ-ಆ ಸೀತಾದೇವಿಯ. ತಯೋಃ-ಆ ರಾಮಲಕ್ಷ್ಮಣರ, ರುಧಿರಂ-ರಕುತವನ್ನು, ಪಿಬೇಯಂ-ಪಾನಮಾಡುವೆನು, ( ವಾಸ್ತವಾರ್ಥಸ್ತು-ಅನೃಜವೃತ್ತಾಯಾಃ-ಕುಟಿಲವಾದ ನಡತೆಯುಳ್ಳ, ತಸ್ಯಾಃ-ಆ ಸೀತಾದೇವಿಯ ಪ್ರೇರಣೆಯಿಂದ ಆಕೆಯನ್ನು ನಿಮಿತ್ತಮಾಡಿಕೊಂಡು ಅವರಿಬ್ಬರಿಂದ ನಾನು ಈ ಕರ್ಣನಾಸಿಕಾಚ್ಛೇದನರೂಪವಾದ ಅವಸ್ಥೆಯಂ ಹೊಂದಲ್ಪಟ್ಟಿದ್ದೆ ನಾದ್ದರಿಂದ ಅವರ ರಕುತಪಾನವನ್ನುನಾನು ಮಾಡಬೇಕೆಂದು ಯಿಚ್ಛೈಸುತ್ತೇನೆಯೋ ಯಿಚ್ಛಿಸಲಾರೆನು ನನಿಗೆ ಇದೇಪ್ರಯೋಜನಸಾಕು ಎಂದುತಾತ್ಪರ್ಯವು)॥೨೦॥ ಇತಿ-ಈಪರಿಯಾಗಿ, ತಸ್ಯಾಂ-ಆ ಶೂರ್ಪನಖೆಯು, ಬ್ರುವಾಣಾಯಾಂಸತ್ಯಾಂ-ಹೇಳುತ್ತಿರುವಳಾಗಲಾಗಿ, ಖರಃ-ಖರನು, ಕ್ರುದ್ಧಃ-ಕೋಪಿಷ್ಠನಾಗಿ, ಮಹಾಬಲಾನ್-ಮಹಾಬಲವಂತರಾದ, ಅಂತಕೋಪಮಾನ್-ಯಮನಿಗೆ ಸಮಾನರಾದ, ಚತುರ್ದಶ-ಹದಿನಾಲ್ಕುಮಂದಿಯಾದ, ರಾಕ್ಷಸಾನ್-ರಕ್ಕಸರನ್ನು, ವ್ಯಾದಿದೇಶ-ಆಜ್ಞಾಪಿಸಿದನು ॥೨೧॥ ಹೇರಾಕ್ಷಸಾಃ-ಎಲೈ ರಕ್ಕಸಗಳಿರಾ, ಶಸ್ತ್ರಸಂಪನ್ನೌ-ಆಯುಧಗಳಿಂದ ಕೂಡಿಕೊಂಡಿರುವ, ಚೀರಕೃಷ್ಣಾಜಿನಾಂಬರೌ-ನಾರುಮಡಿಗಳೂ ಕೃಷ್ಣಾಜಿನವೇ ವಸ್ತ್ರವಾಗುಳ್ಳ, ಮಾನುಷೌ-ಮನುಷ್ಯರಿಬ್ಬರು, ಪ್ರಮದಯಾಸಹ-ಹೆಂಗಸಿನೊಡನೆ, ಘೋರಂ-ಭಯಂಕರವಾದ, ದಂಡಕಾರಣ್ಯಂ-ದಂಡಕಾರಣ್ಯವನ್ನು, ಪ್ರವಿಷ್ಟೌ-ಪ್ರವೇಶಮಾಡಿಧಾರೆ ॥೨೨॥ ತೌ-ಅವರಿಬ್ಬರನ್ನು, ದುರ್ವೃತ್ತಾಂ-ದುಷ್ಟವ್ಯಾಪಾರವುಳ್ಳ, ತಾಂಚ-ಆ ಹೆಂಗಸಿನನ್ನು. ಹತ್ವಾ-ಕೊಂದು, ಉಪಾವರ್ತಿತುಂ-ಹಿಂದಕ್ಕೆ ತೆಗದುಕೊಂಡುಬರುವದಕ್ಕಾಗಿ, ಅರ್ಹಥ-ಯೋಗ್ಯರಾಗಿರಿ, ಮಮ-ನನ್ನ, ಇಯಂಭಗಿನೀ-ಈ ತಂಗಿಯಾದಶೂರ್ಪನಖೆಯು, ತೇಷಾಂ-ಆ ಮೂವರ, ರುಧಿರಂ-ರಕುತವನ್ನು, ಪಾಸ್ಯತಿ-ಪಾನಮಾಡುತ್ತಾಳೆ, ಅಯಂಮನೋರಥಃ-ಈ ಮನೋರಥವು, ಅಸ್ಯಾಃಭಗಿನ್ಯಾಃ-ಈ ತಂಗಿಗೂ, ಮಮಚ-ನನಿಗೂ, ಇಷ್ಟಃ-ಇಷ್ಟವು ॥೨೩॥ ಸ್ವೇನ-ಸ್ವಕೀಯವಾದ, ತೇಜಸಾ-ಪರಾಕ್ರಮದಿಂದ, ತೌ-ಅವರಿಬ್ಬರನ್ನು, ಪ್ರಮಥ್ಯ-ಸಂಹರಿಸಿ, ಶೀಘ್ರಂ-ಜಾಗ್ರತೆಯಾಗಿ, ಸಂಪಾದ್ಯತಾಂ-ಈ ಮನೋರಥವು ಸಾಧಿಸಲ್ಪಡಲಿ॥ ೨೧॥೨೨॥೨೪॥ (ಈಶ್ಲೋಕಗಳಿಗೆ ವಾಸ್ತವಾರ್ಥವೇನಂದರೆ ಆ ಶೂರ್ಪನಖೆಯು ಹೇಳಿದ ವೃತ್ತಾಂತವಂ ಕೇಳಿ ಶಿವಶಾಪಗ್ರಸ್ತನಾದ ಯಾಜ್ಞವಲ್ಕ್ಯಋಷಿಯ ಕುಮರನಾದ ಚಂದ್ರಕಾಂತನೆಂಬವನ ಅವತಾರಾಂತರವಾದ ಪ್ರಯುಕ್ತ ಈ ಖರನು ಜ್ಞಾನಿಯಾದವನಾಗಿ ಜನ್ಮಾಂತರದಲ್ಲಿ ತಾನು ಮಾಡಿದ ತಪಸ್ಸಿಗೆ ಫಲಕಾಲಬಂತೆಂದು ತಿಳಿದವನಾಗಿ ಬಾಹ್ಯದಲ್ಲಿ ಕೋಪಗೊಂಡವನಾಗಿ ಹೇಳುತ್ತಾನೆ,) ಹೇರಾಕ್ಷಸಾಃ-ಎಲೈ ರಾಕ್ಷ

---

ಕುಟಿಲವ್ಯಾಪಾರವುಳ್ಳ ನನಿಗೆ ಕರ್ಣನಾಸಚ್ಛೇದನರೂಪವಾದ ಈ ಅವಸ್ಥೆಯಂ ನೋಡುವವನಾಗು, ನನಿಗೆ ಇಂಥಾ ದುರವಸ್ಥೆಯನ್ನುಂಟು ಮಾಡಿದ್ದರಿಂದ ಆ ಹವದಲ್ಲಿ ಕೊಲ್ಲಲ್ಪಟ್ಟ ಅವರೀರ್ವರ ರಕ್ತವಂ ಪಾನಮಾಡಲಿಚ್ಛೈಸುತ್ತೇನೆ. ಇದು ನನಿಗೆ ಬಹಳ ಇಷ್ಟವಾದದ್ದು, ನಾನು ರಣರಂಗದಲ್ಲಿ ಆ ಸೀತಾದೇವಿಯು, ಮತ್ತು ರಾಮಲಕ್ಷ್ಮಣರ ರಕುತವನ್ನು ಹ್ಯಾಗಾದರೂ ಪಾನಮಾಡಬೇಕೆಂದು ಆ ಶೂರ್ಪಣಖಿಯು ಹೇಳಿದವಳಾಗಲು, ಆ ಖರಾಸುರನು ಬಹು ಕೋಪವುಳ್ಳವನಾಗಿ, ಮಹಾ ಬಲವಂತರಾದ ಮತ್ತು ಯಮನಿಗೆ ಸಮಾನರಾದ ಹದಿನಾಲ್ಕುಮಂದಿ ರಾಕ್ಷಸರನ್ನು ಕುರಿತು ಆಜ್ಞಾಪಿಸುವನದೆಂತೆನೆ,—।೨೧। ಎಲೈ ರಕ್ಕಸರೇ! ಆಯುಧ ಸಂಪನ್ನರಾಗಿಯೂ, ನಾರುಮಡಿಗಳನ್ನೂ, ಕಷ್ಣಾಜಿನಗಳನ್ನು ಸಹಾ ಧರಿಸಿದವರಾಗಿಯೂ ಇರುವ ಈರ್ವರು ಮನುಷ್ಯರು ಹೆಂಗಸಿನೊಡನೆ ಭಯಂಕರವಾದ ದಂಡಕಾರಣ್ಯವಂ ಪ್ರವೇಶವಂ ಗೈದಿಧಾರೆ ।೨೨। ನೀವುಗಳು ಅವರಿಬ್ಬರನ್ನೂ ದುರ್ವೃತ್ತಳಾದ ಆ ಹೆಂಗಸಿನನ್ನೂ ಸಹಾ ಕೊಂದು ಇಲ್ಲಿಗೆ ತೆಗದುಕೊಂಡು ಬರುವವರಾಗಿ; ನನ್ನ ಒಡಹುಟ್ಟಿದವಳಾದ ಈಕೆಯು ಅವರುಗಳ ರಕ್ತಪಾನವಂ ಗೈಯ್ಯುವಳು, ಇದೇ ಈಕೆಯ ಮನೋರಥವು, ಆದಕಾರಣ ನೀವುಗಳು ಪರಾಕ್ರಮದಿಂದ ಅವರೀರ್ವರಂ ಸಂಹರಿಸಿ ಈಕೆಯ ಇಷ್ಟಾರ್ಥವನ್ನೀಡೇರಿಸುವವರಾಗಿರಿ; (ಇದರ ತತ್ವಾಭಿಪ್ರಾಯವನ್ನು ಪ್ರತಿಪದಟೀಕಿನಲ್ಲಿ ನೋಡಿಕೊಳ್ಳಬಹುದು) ।೨೪। ಈ ರೀತಿಯಾಗಿ ಖರಾಸುರನಿಂದ ಆಜ್ಞಾಪಿಸಲ್ಪಟ್ಟವರಾಗಿ ಆ ಹ

ಚತುರ್ದಶ । ತತ್ರಜಗ್ಮುಸ್ತಯಾಸಾರ್ಧಂಘನಾವಾತೆರಿತಾಯಥಾ ।೨೫॥ ತತಸ್ತುತೆತಂಸಮುದಗ್ರತೆಜಸಂತಥಾಪಿ
ತೀಕ್ಷ್ಣಪ್ರದತಾನಿಶಾಚರಾಃ । ನಶೆಕುರೆನಂಸಹಸಾಪ್ರಮರ್ದಿತುಂವನದ್ವಿಪಾದೀಪ್ತಮಿವಾಗ್ನಿಮುತ್ಥಿತಂ ।೨೬।

— *** ಇತಿಶ್ರೀಮದಾರಣ್ಯಕಾಂಡೆ-ಏಕೋನವಿಂಶಸ್ಸರ್ಗಃ *** —

ತತಶ್ಶೂರ್ಪಣಖಾಘೋರಾರಾಘವಾಶ್ರಮಮಾಗತಾ । ರಕ್ಷಸಾಮಾಚಚಕ್ಷೆತೌಭ್ರಾತರೌಸಹಸೀತಯಾ ।೧। ತೆ
ರಾಮಂಪರ್ಣಶಾಲಾಯಾಮುಪವಿಷ್ಟಂಮಹಾಬಲಂ । ದದೃಶುಸ್ಸೀತಯಾಸಾರ್ಧಂವೈದೆಹ್ಯಾಲಕ್ಷ್ಮಣೆನಚ ।೨। ತಾಂ
ದೃಷ್ಟ್ವಾರಾಘವಶ್ಶ್ರೀಮಾನಾಗತಾಂತಾಂಚರಾಕ್ಷಸೀಂ।ಅಬ್ರವೀದ್ಭ್ರಾತರಂರಾಮೊಲಕ್ಷ್ಮಣಂದೀಪ್ತತೆಜಸಂ ।೩।
ಮುಹೂರ್ತಂಭವಸೌಮಿತ್ರೆಸೀತಾಯಾಃಪ್ರತ್ಯನಂತರಃ।ಇಮಾನಸ್ಯಾವಧಿಷ್ಯಾಮಿಪದವೀಮಾಗತಾನಿಹ।೪।ವಾಕ್ಯಮೆತ

---

ಸರೇ, ಇಯಂಭಗಿನೀ-ಈ ನನ್ನ ತಂಗಿಯು, ಪ್ರಮರ್ಥ್ಯ-ಪೀಡಿಸಿ, ಮಮರುಧಿರಂ-ನನ್ನ ರಕ್ತವನ್ನು, ಪಾಸ್ಯತಿ-ಪಾನಮಾಡುತ್ತಾಳೆ, ಅತಃ-ಆಕಾರಣದದೆಸೆಯಿಂದ. ಸ್ವತೆಜಸಾ-ನಿಮ್ಮಗಳ ಸಾಮರ್ಥ್ಯದಿಂದ, ಶೀಘ್ರಂ-ಜಾಗ್ರತೆಯಾಗಿ. ತೌರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರನ್ನು, ಹತ್ವಾ-ಕೊಲ್ಲುದು, ದುರ್ವೃತ್ತಾಂ-ತನ್ನ ತಂಗಿಗೆ ದುಃಖಕರವಾದ ನಡತೆಯುಳ್ಳ, ತಾಂ-ಆ ಸೀತಾದೇವಿಯನ್ನು ಹತ್ವಾ-ಕೊಲ್ಲುದುಕೊಂಡು, ಉಪಾವರ್ತಿತುಂ-ಹಿಂತಿರುಗುವದಕ್ಕಾಗಿ, ಅರ್ಹಥ-ಯೋಗ್ಯರಾಗಿರಿ, (ಈ ಮನೋರಥವು ನನ್ನ ತಂಗಿಗೆ ಇಷ್ಟವಾದದ್ದು ನನಗೂ ಇಷ್ಟವಾದದ್ದು ಎಂದು ಖರನು ಜನ್ಮಾಂತರದಲ್ಲಿ ತಪಸ್ಸುಮಾಡಿದವನಾದ್ದರಿಂದ ಸಾಕ್ಷಾದ್ಭಗವಂತನೇ ಶ್ರೀರಾಮನೆಂದು ತಿಳಿದು ಈ ಆಜ್ಞೆಯನ್ನು ಮಾಡಿದನೆಂದು ತಾತ್ಪರ್ಯವು ಈ ಕಥಾವೃತ್ತಾಂತಶೇಷವು ಧರ್ಮಾದಿಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ ನೋಡಬಹುದು) ॥೨೪॥ ಇತಿ-ಈಪರಿಯಾಗಿ, ಪ್ರತಿಸಮಾದಿಷ್ಟಾಃ-ಆಜ್ಞಾಪಿಸಲ್ಪಟ್ಟ, ಚತುರ್ದಶಾಃ-ಹದಿನಾಲ್ಕುಸಂಖ್ಯೆಯುಳ್ಳ, ರಾಕ್ಷಸಾಃ-ರಕ್ಕಸರು, ವಾತೆರಿತಾಃ-ಗಾಳಿಯಿಂದ ಪ್ರೇರಿಸಲ್ಪಟ್ಟ, ಘನಾಯಥಾ-ಮೇಘಗಳಂತೆ ತಯಾಸಾರ್ಧಂ-ಆ ಶೂರ್ಪನಖಿಯೊಡಗೂಡಿ, ತತ್ರ-ಆ ದಂಡಕಾರಣ್ಯದಲ್ಲಿ. ಜಗ್ಮುಃ-ತೆರಳಿದರು ॥೨೫॥ ತತಃ-ಬಳಿಕ, ತೆನಿಶಾಚರಾಃ-ಆ ರಾಕ್ಷಸರು, ತೀಕ್ಷ್ಣಪ್ರದರಾಃ-ತೀಕ್ಷ್ಣವಾದ ಬಾಣಗಳುಳ್ಳವರು, ತಥಾಪಿ-ಹಾಗಾದರೂ, ವನದ್ವಿಪಾಃ-ವನಗಜಗಳು, ಉತ್ಥಿತಂ-ಎದ್ದಿರುವ, ದೀಪ್ತಂ-ಪ್ರಜ್ವಲಿಸುತ್ತಿರುವ, ಅಗ್ನಿಮಿವ-ಅಗ್ನಿಯನ್ನಂತೆ, ಸಮುದಗ್ರತೆಜಸಂ-ಉತ್ಕೃಷ್ಟವಾದ ಬಲಶಾಲಿಯಾದ, ತಮೆನಂ-ಆ ಈ ಶ್ರೀರಾಮನನ್ನು, ಸಹಸಾ-ಜಾಗ್ರತೆಯಾಗಿ, ಪ್ರಮರ್ದಿತುಂ-ಹೊಡೆಯುವದಕ್ಕಾಗಿ, ನಶೆಕುಃ-ಸಮರ್ಥರಾಗಲಿಲ್ಲದರು ॥೨೬॥ —*ಏಕೋನವಿಂಶಸ್ಸರ್ಗಃ*—

ತತಃ-ಬಳಿಕ, ಘೋರಾ-ಭಯಂಕರಳಾದ, ಶೂರ್ಪಣಖಾ-ಶೂರ್ಪಣಖೆಯು, ರಾಘವಾಶ್ರಮಂ-ಶ್ರೀರಾಮನ ಪರ್ಣಶಾಲೆಯಂ ಕುರಿತು, ಆಗತಾ-ಬಂದವಳಾಗಿ, ರಕ್ಷಸಾಂ-ಆ ರಾಕ್ಷಸರಿಗೆ, ಸೀತಯಾಸಹ-ಸೀತಾದೇವಿಯೊಡಗೂಡ, ಭ್ರಾತರೌ-ಅಣ್ಣ ತಮ್ಮಂದಿರಾದ, ತೌ-ಆ ರಾಮಲಕ್ಷ್ಮಣರನ್ನ, ಆಚಚಕ್ಷೆ-ಹೇಳಿದಳು ॥೧॥ ತೆ-ಆ ರಾಕ್ಷಸರು, ಪರ್ಣಶಾಲಾಯಾಂ-ಆಶ್ರಮದಲ್ಲಿ, ವೈದೆಹ್ಯಾ-ಜನಕರಾಯನಮಗಳಾದ, ಸೀತಯಾಸಾರ್ಧಂ-ಸೀತಾದೇವಿಯೊಡಗೂಡ, ಲಕ್ಷ್ಮಣೆನಚ-ಲಕ್ಷ್ಮಣನೊಡನೆ. ಉಪವಿಷ್ಟಂ-ಕುಳಿತುಕೊಂಡಿರುವ, ಮಹಾಬಲಂ-ಮಹಾಸಾಮರ್ಥ್ಯವಂತನಾದ, ರಾಮಂ-ಶ್ರೀರಾಮನನ್ನು. ದದೃಶುಃ-ಕಂಡರು ॥೨॥ ಶ್ರೀಮಾನ್-ಕ್ಷಾತ್ರಸಂಪದ್ಯುಕ್ತನಾದ, ರಾಘವಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು ಆಗತಾಂ-ಬಂದಿರುವ, ತಾನ್-ಆ ರಾಕ್ಷಸರನ್ನು. ಆಗತಾಂ-ಬಂದಿರುವ ತಾಂರಾಕ್ಷಸೀಂಚ-ಆರಕ್ಕಸಿಯನ್ನೂಸಹ,ದೃಷ್ಟ್ವಾ-ಕಂಡು, ದೀಪ್ತತೆಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, ಭ್ರಾತರಂ-ತಮ್ಮನಾದ. ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಅಬ್ರವೀತ್-ನುಡಿದನು ॥೩॥ ಹೆಸೌಮಿತ್ರೆ-ಎಲೈ ಲಕ್ಷ್ಮಣನೆ, ಮುಹೂರ್ತಂ-ಎರಡು ಘಳಿಗೆ ಕಾಲವು, ತ್ವಂ-ನೀನು, ಸೀತಾಯಾಃ-ಸೀತಾದೇವಿಗೆ, ಪ್ರತ್ಯನಂತರಃ-ಪ್ರತ್ಯಾಸನ್ನನಾಗಿ ರಕ್ಷಕನು, ಭವ-ಆಗು, ಇಹ-ಈಗಲೇ. ಅಸ್ಯಾಃ-ಈ ಶೂರ್ಪನಖೆಯ, ಪದವೀಂ-ಮಾರ್ಗವನ್ನು. ಆಗತಾನ್-ಅನುಸರಿಸಿ ಬಂದಿರುವ, ಇಮಾನ್-ಈ ರಾಕ್ಷಸರನ್ನು, ವಧಿಷ್ಯಾ

---

ದಿನಾಲ್ಕು ಮಂದಿ ರಾಕ್ಷಸರು ವಾಯುವಿನಿಂದ ಪ್ರೇರಿಸಲ್ಪಟ್ಟ ಮೇಘಗಳಂತೆ ಆ ಶೂರ್ಪಣಖಿಯಿಂದೊಡಗೂಡಿ, ತೀಕ್ಷ್ಣವಾದ ಬಾಣಂಗಳುಳ್ಳವರಾಗಿ, ದಂಡಕಾರಣ್ಯಕ್ಕೆ ತೆರಳಿ, ಅನಂತರದಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿಯಂತೆ ಮಹಾ ತೇಜೋವಂತನಾ ಆ ಶ್ರೀರಾಮನನ್ನು ಮರ್ದಿಸುವದಕ್ಕೆ ಶಕ್ತರಾಗಲಿಲ್ಲ.॥-*೧೯ನೆಯಸರ್ಗಂಮುಗಿದುದು*-

ಅನಂತರದಲ್ಲಿ ಮಹಾದಾರುಣಳಾದ ಆ ಶೂರ್ಪಣಖಿಯು ಶ್ರೀರಾಮನ ಪರ್ಣಶಾಲೆಯ ಸಮೀಪಕ್ಕೆ ಬಂದವಳಾಗಿ, ತನ್ನ ಸಂಗಡ ಬಂದಿರುವ ಆ ರಾಕ್ಷಸರಿಗೆ ಸೀತಾಸಮೇತರಾದ ಆ ರಾಮಲಕ್ಷ್ಮಣರನ್ನು ತೋರಿಸಿದವಳಾಗಲು, ಆ ಅಸುರರು ಆಶ್ರಮದಲ್ಲಿ ಸೀತಾಸಮೇತನಾಗಿ, ಲಕ್ಷ್ಮಣನೊಡನೆ ಕುಳಿತಿರುವ ಮಹಾ ಬಲವಂತನಾದ ಶ್ರೀರಾಮನಂ ಕಂಡರು ।೨। ಅನಂತರದಲ್ಲಿ ಆ ಶ್ರೀರಾಮನು ಆಶ್ರಮದ ಸಮೀಪಕ್ಕೆ ಬಂದಿರುವ ಆ ರಾಕ್ಷಸರನ್ನೂ, ರಾಕ್ಷಸಿಯನ್ನು ಸಹಾ ಕಂಡು ಮಹಾ ತೇಜೋವಂತನಾದ ಲಕ್ಷ್ಮಣನಂ ಕುರಿತು ನುಡಿವನವೆಂತೆನೆ,—ಎಲೈ ಒಡಹುಟ್ಟಿದವನೇ, ಮುಹೂರ್ತಕಾಲವು ನೀನು ಸೀತಾದೇವಿಯ ಸಮೀಪದಲ್ಲಿ ಕಾದುಕೊಂಡಿರುವವನಾಗು, ಈಗ ಈ ರಕ್ಕಸಿಯ ಮಾರ್ಗಕ್ಕೆ ಬಂದಿರುವ ಈ ಅಸುರರಂ ಕೊಲ್ಲುವೆನೆಂದು ನುಡಿದನು ।೪। ಅನಂತರದಲ್ಲಿ ಲಕ್ಷ್ಮ

ತ್ತತಶ್ಶ್ರುತ್ವಾರಾಮಸ್ಯವಿದಿತಾತ್ಮನಃ । ತಥೇತಿಲಕ್ಷ್ಮಣೋವಾಕ್ಯಂರಾಮಸ್ಯಪ್ರತ್ಯಪೂಜಯತ್ ।೫। ರಾಘವೋಪಿ ಮಹಚ್ಚಾಪಂಚಾಮೀಕರವಿಭೂಷಿತಂ । ಚಕಾರಸಜ್ಯಂಧರ್ಮಾತ್ಮಾತಾನಿರಕ್ಷಾಂಸಿಚಾಬ್ರವೀತ್ ।೬। ಪುತ್ರೌದಶರಥಸ್ಯಾವಾಂಭ್ರಾತರೌರಾಮಲಕ್ಷ್ಮಣೌ । ಪ್ರವಿಷ್ಟೌಸೀತಯಾಸಾರ್ಧಂದುಶ್ಚರಂದಂಡಕಾವನಂ । ಫಲಮೂಲಾಶನೌದಾಂತೌತಾಪಸೌಧರ್ಮಚಾರಿಣೌ। ವಸಂತೌದಂಡಕಾರಣ್ಯೇಕಿಮರ್ಥಮುಪಹಿಂಸಥ॥ ಯುಷ್ಮಾನ್ಪಾಪಾತ್ಮಕಾನ್ಹಂತುಂ ವಿಪ್ರಕಾರಾನ್ಮಹಾಹವೇ। ಋಷೀಣಾಂತುನಿಯೋಗೇನಪ್ರಾಪ್ತೋಹಂಸಶರಾಯುಧಃ। ತಿಷ್ಠತೈವಾತ್ರಸಂತುಷ್ಟಾನೋಪಾವರ್ತಿತುಮರ್ಹಥ । ಯದಿಪ್ರಾಣೈರಿಹಾರ್ಥೋವಾನಿವರ್ತಧ್ವಂನಿಶಾಚರಾಃ ।೧೦॥ ತಸ್ಯತದ್ವಚನಂಶ್ರುತ್ವಾರಾಕ್ಷಸಾಸ್ತೇಚತುರ್ದಶ। ಊಚುರ್ವಾಚಂಸುಸಂಕ್ರುದ್ಧಾಬ್ರಹ್ಮಘ್ನಾಶ್ಶೂಲಪಾಣಯಃ ॥೧೧। (ಸಂರಕ್ತನಯನಾಘೋರಾರಾಮಂಸಂರಕ್ತಲೋಚನಂ । ಪರುಷಂಮಧುರಾಭಾಷಂಹೃಷ್ಟಾದೃಷ್ಟಪರಾಕ್ರಮಂ ) ಕ್ರೋಧಮುತ್ಪಾದ್ಯನೋಭರ್ತುಃಖರಸ್ಯಾನು

---

ವಿ—ಸಂಹಾರಮಾಡುವೆನು ॥೫॥ ತತಃ—ಬಳಿಕ, ಲಕ್ಷ್ಮಣಃ—ಲಕ್ಷ್ಮಣನು, ವಿದಿತಾತ್ಮನಃ—ತಿಳಿಯಲ್ಪಟ್ಟ ಸ್ವಭಾವವುಳ್ಳ, ರಾಮಸ್ಯ—ಶ್ರೀರಾಮನ, ಏತದ್ವಾಕ್ಯಂ—ಈ ಮಾತನ್ನು ಶ್ರುತ್ವಾ—ಕೇಳಿ. ತಥೇತಿ—ಹಾಗೇ ಆಗಲೆಂದು, ರಾಮಸ್ಯ—ಶ್ರೀರಾಮನ, ವಾಕ್ಯಂ—ಮಾತನ್ನು ಪ್ರತ್ಯಪೂಜಯತ್—ಶ್ಲಾಘಿಸಿದನು॥ ಧರ್ಮಾತ್ಮಾ—ಧರ್ಮದಲ್ಲೇ ಮನವುಳ್ಳ, ರಾಮೋಪಿ—ಶ್ರೀರಾಮನೂಕೂಡ. ಚಾಮೀಕರವಿಭೂಷಿತಂ—ಚಿನ್ನಕಟ್ಟಿನಿಂದಲಂಕೃತವಾದ. ಮಹತ್—ದೊಡ್ಡದಾದ, ಚಾಪಂ—ಬಿಲ್ಲಿನನ್ನು, ಸಜ್ಯಂ—ಹೆದೆಯಿಂದೊಡಗೂಡಿದಂತೆ, ಚಕಾರ—ಮಾಡಿದನು ॥೬॥ ಆವಾಂ—ನಾವುಗಳು, ದಶರಥಸ್ಯ—ದಶರಥರಾಯನ, ಪುತ್ರೌ—ಕುವರರಾದ, ರಾಮಲಕ್ಷ್ಮಣೌ—ರಾಮಲಕ್ಷ್ಮಣರೆಂಬ, ಭ್ರಾತರೌ—ಅಣ್ಣತಮ್ಮಂದಿರು, ಸೀತಯಾ ಸಾರ್ಧಂ—ಸೀತಾದೇವಿಯೊಡಗೂಡ, ದುಶ್ಚರಂ—ಸಂಚರಿಸಲನರ್ಹವಾದ, ದಂಡಕಾವನಂ—ದಂಡಕಾರಣ್ಯವನ್ನು. ಪ್ರವಿಷ್ಟೌ—ಪ್ರವೇಶಮಾಡಿದ್ದೇವೆ ॥೭॥ ಫಲಮೂಲಾಶನೌ—ಫಲಗಳೂ ಕಂದಮೂಲಗಳೇ ಆಹಾರವಾಗುಳ್ಳ. ದಾಂತೌ—ಜಿತೇಂದ್ರಿಯರಾದ, ತಾಪಸೌ—ಋಷಿಗಳ ದ ಧರ್ಮಚಾರಿಣೌ—ಧರ್ಮಾನುಷ್ಠಾನತತ್ಪರರಾದ, ದಂಡಕಾರಣ್ಯೇ—ದಂಡಕಾವನದಲ್ಲಿ, ವಸಂತೌ—ವಾಸಮಾಡಿಕೊಂಡಿರುವ ನಮ್ಮಗಳನ್ನು, ಕಿಮರ್ಥಂ—ಯಾವನಿಮಿತ್ತವಾಗಿ ಉಪಹಿಂಸಥ—ಹಿಂಸೆಮಾಡುವಿರೀ ॥೮॥ ಪಾಪಾತ್ಮಕಾನ್—ಪಾಪಸ್ವಭಾವವುಳ್ಳ, ಮಹಾಹವೇ—ದೊಡ್ಡಕಾಳಗದಲ್ಲಿ, ವಿಪ್ರಕಾರಾನ್—ಹಿಂಸಕರರಾದ, ಯುಷ್ಮಾನ್—ನಿಮ್ಮಗಳನ್ನು ಹಂತುಂ—ಹೊಡಿಯುವದಕ್ಕೆ. ಋಷೀಣಾಂ—ಋಷಿಗಳ. ನಿಯೋಗೇನ—ಆಜ್ಞೆಯಿಂದ, ಅಹಂ—ನಾನು, ಸಶರಾಯುಧಃ—ಬಾಣಗಳಿಂದಲೂ ಆಯುಧಗಳಿಂದಲೂ ಕೂಡಿದವನಾಗಿ. ಪ್ರಾಪ್ತಃ—ಬಂದಿದ್ದೇನೆ ॥೯॥ ಹೇನಿಶಾಚರಾಃ—ಎಲೈ ರಾಕ್ಷಸರುಗಳಿರಾ, ಇಹ—ಇಲ್ಲಿ, ಪ್ರಾಣೈಃ—ಪ್ರಾಣಗಳಿಂದ, ಅರ್ಥಃ—ಪ್ರಯೋಜನವಾಗತಕ್ಕದ್ದೇ ಆದರೆ, ನಿವರ್ತಧ್ವಂ—ಹೊರಟುಹೋಗಿರಿ, ಅಥವಾ—ಹಾಗಲ್ಲದಿದ್ದರೆ, ಅತ್ರೈವ—ಇಲ್ಲಿಯೇ. ಸಂತುಷ್ಟಾಃ—ಸಂತೋಷಗೊಂಡವರಾಗಿ ತಿಷ್ಠತ—ನಿಲ್ಲಿರೀ. ಉಪಾವರ್ತಿತುಂ—ಹಿಂತಿರುಗಿಸುವದಕ್ಕೋಸ್ಕರ, ನಾರ್ಹಥ—ಯೋಗ್ಯರಾಗಬ್ಯಾಡಿರಿ ॥೧೦॥ ತಸ್ಯ—ಆ ಶ್ರೀರಾಮನ. ತದ್ವಚನಂ—ಆ ಮಾತನ್ನು, ಶ್ರುತ್ವಾ—ಕೇಳಿ. ಬ್ರಹ್ಮಘ್ನಾಃ—ಬ್ರಾಹ್ಮಣರನ್ನು ಕೊಲ್ಲುವ, ಶೂಲಪಾಣಯಃ—ಶೂಲಾಯುಧಗಳೇ ಕೈಗಳಲ್ಲಿ ಉಳ್ಳ. ಚತುರ್ದಶ—ಹದಿನಾಲ್ಕು ಸಂಖ್ಯೆಯುಳ್ಳ. ತೇರಾಕ್ಷಸಾಃ—ಆ ರಕ್ಕಸರು, ಸಂಕ್ರುದ್ಧಾಃ—ಕೋಪಗೊಂಡವರಾಗಿ, ವಾಚಂ—ಮಾತನ್ನು. ಊಚುಃ—ನುಡಿದರು ॥೧೧॥ ನಃ—ನಮಗೆ, ಭರ್ತುಃ—ಯಜಮಾನನಾದ, ಸುಮಹಾತ್ಮನಃ—ಮಹಾಧೈರ್ಯಶಾಲಿಯಾದ, ಖರಸ್ಯ—ಖರಾಸುರನಿಗೆ, ಕ್ರೋಧಂ—ಕೋಪವನ್ನು ಉತ್ಪಾದ್ಯ—ಹುಟ್ಟಿಸಿ, ತ್ವಮೇವ—ನೀನೆ, ಅದ್ಯ—ಈಗ. ಯುಧಿ—ಕಾಳಗದಲ್ಲಿ, ಅಸ್ಮಾಭಿಃ—ನಮ್ಮಗಳಿಂದ, ಹತಃ—ಹೊಡೆಯಲ್ಪಟ್ಟವನಾಗಿ, ಪ್ರಾಣಾನ್—ಪ್ರಾಣಗಳ

---

ಣನು ಶ್ರೀರಾಮನಿಂದ ಪೇಳಲ್ಪಟ್ಟ ಆ ವಾಕ್ಯವಂಕೇಳಿ, ಹಾಗೆಯೇ ಆಗಲೆಂದು ವೊಪ್ಪಿಕೊಂಡನು ।೫। ಅನಂತರದಲ್ಲಿ ಧರ್ಮಿಷ್ಠನಾದ ಶ್ರೀರಾಮನು ಸ್ವರ್ಣದ ಕಟ್ಟುಗಳಿಂದಲಂಕರಿಸಲ್ಪಟ್ಟ ಮಹತ್ತರವಾದ ಕೋದಂಡವನ್ನು ಜ್ಯಾ ಸಹಿತವನ್ನಾಗಿಮಾಡಿ, ಆ ರಾಕ್ಷಸರಂ ಕುರಿತು ಇಂತೆಂದನು,—।೬। ಎಲೈ ಅಸುರರೇ. ದಶರಥರಾಜ ನಂದನರಾದ ರಾಮಲಕ್ಷ್ಮಣರೆಂದು ಪ್ರಸಿದ್ಧರಾದ ಅಣ್ಣತಮ್ಮಂದರಾದ ನಾವೀರ್ವರೂ ಸೀತಾದೇವಿಯಿಂದೊಡಗೂಡಿ ಈ ದಂಡಕಾರಣ್ಯವಂ ಪ್ರವೇಶಿಸಿದ್ಧೇವೆ. ॥೭॥ ಕಂದಮೂಲ ಫಲಗಳಂ ಭುಜಿಸುತ್ತಾ; ಇಂದ್ರಿಯ ನಿಗ್ರಹವಂಗೈದು, ಋಷಿಗಳಾಗಿ, ಧರ್ಮಾನುಷ್ಠಾನವಂ ಗೈಯ್ಯುತ್ತಾ ವಾಸಿಸುತಿರುವ ನಮ್ಮಗಳನ್ನು ಯಾಕೆ ಹಿಂಸೆಮಾಡುವಿರಿ? ಅಪಾಪಿಗಳಾದ, ಮತ್ತು ನಮ್ಮಗಳನ್ನು ಯಾಕೆ ಹಿಂಸೆಮಾಡುವಿರಿ? ಪಾಪಿಗಳಾದ, ಮತ್ತು ಹಿಂಸೆಯಂ ಗೈಯ್ಯುತ್ತಿರುವ ನಿಮ್ಮಗಳನ್ನು ಆ ಹವದಲ್ಲಿ ಕೊಲ್ಲುವದಕ್ಕಾಗಿ ಮುನಿಗಳ ಆಜ್ಞೆಯಿಂದ ನಾನು ಕೋದಂಡಪಾಣಿಯಾಗಿಬಂದಿದ್ಧೇನೆ. ನಿಮ್ಮಗಳಿಗೆ ಪ್ರಾಣದಲ್ಲಿ ಆಶೆಯಿದ್ದಲ್ಲಿ, ಹಿಂತಿರುಗುವವರಾಗಿ, ಇಲ್ಲದಿದ್ದರ ಸಂತೋಷವಾಗಿ ಇಲ್ಲಿಯೇ ನಿಲ್ಲುವರಾಗಿ, ಹಿಂತಿರುಗಬ್ಯಾಡಿರೆಂದು ಶ್ರೀರಾಮನು ನುಡಿದವನಾಗಲೂ, ಬ್ರಹ್ಮಘ್ನರಾದ, ಶೂಲಾಯುಧಗಳಂ ಪಿಡಿದಿರುವ ಆ ಹದಿನಾಲ್ಕುಮಂದಿ ರಾಕ್ಷಸರು ಮಹಾ ಕೋಪವುಳ್ಳವರಾಗಿಶ್ರೀರಾಮನಿಗೆ ಪೇಳುವರದಂತೆನೆ,-।೧೧। ನಮ್ಮ ಧಣಿಯಾದ, ಮಹಾಧೈರ್ಯಶಾಲಿಯಾದ ಖರಾಸುರನಿಗೆ ಕೋಪವನ್ನು ಪುಟ್ಟಿಸಿ, ಈಗ ನೀನೇ ಕಾಳಗದಲ್ಲಿ

ಮಹಾತ್ಮನಃ । ತ್ವಮೇವಹಾಸ್ಯಸೇಪ್ರಾಣಾನದ್ಯಾಸ್ಮಾಭಿರ್ಹತೋಯುಧಿ ।೧೨। ಕಾಹಿತೇಶಕ್ತಿರೇಕಸ್ಯಬಹೂನಾಂರಣ
ಮೂರ್ಧನಿ । ಅಸ್ಮಾಕಮಗ್ರತಸ್ಸ್ಥಾತುಂಕಿಂಪುನರ್ಯೋದ್ಧುಮಾಹವೇ ।೧೩। ಏಭಿರ್ಬಾಹುಪ್ರಯುಕ್ತೈರ್ನಃಪರಿಘೈ
ಶ್ಶೂಲಪಟ್ಟಿಸೈಃ । ಪ್ರಾಣಾಂಸ್ತ್ಯಕ್ಷ್ಯಸಿವೀರ್ಯಂಚಧನುಶ್ಚಕರಪೀಡಿತಂ ।೧೪। ಇತ್ಯೇವಮುಕ್ತ್ವಾಸಂಕ್ರುದ್ಧಾರಾಕ್ಷ
ಸಾಸ್ತೇಚತುರ್ದಶ । ಚಿಕ್ಷಿಪುಸ್ತಾನಿಶೂಲಾನಿರಾಘವಂಪ್ರತಿದುರ್ಜಯಂ ।೧೫। ತಾನಿಶೂಲಾನಿಕಾಕುತ್ಸ್ಥಸ್ಸಮಸ್ತಾನಿಚ
ತುರ್ದಶ । ತಾವದ್ಭಿರೇವಚಿಚ್ಛೇದಶರೈಃಕಾಂಚನಭೂಷಣೈಃ ।೧೬। ತತಃಪಶ್ಚಾನ್ಮಹಾತೇಜಾನಾರಾಚಾನ್ಸೂರ್ಯಸನ್ನಿಭಾನ್
ಜಗ್ರಾಹಪರಮಕ್ರುದ್ಧಶ್ಚತುರ್ದಶಶಿಲಾಶಿತಾನ್ ।೧೭। ಗೃಹೀತ್ವಾಧನುರಾಯಮ್ಯಲಕ್ಷ್ಯಾನುದ್ದಿಶ್ಯರಾಕ್ಷಸಾನ್ ।ಮು
ಮೋಚರಾಘವೋಬಾಣಾನ್ವಜ್ರಾನಿವಶತಕ್ರತುಃ ।೧೮। ರುಕ್ಮಪುಂಖಾಸ್ತುವಿಶಿಖಾದೀಪ್ತಾಹೇಮವಿಭೂಷಿತಾಃ । ತೇಭಿ
ತ್ವಾರಕ್ಷಸಾಂವೇಗಾದ್ವಕ್ಷಾಂಸಿರುಧಿರಾಪ್ಲುತಾಃ । ವಿನಿಷ್ಪೇತುಸ್ತದಾಭೂಮೌನ್ಯಮಜ್ಜಂತಾಶನಿಸ್ವನಾಃ ।೧೯।

---

ನ್ನು, ಹಾಸ್ಯಸೇ-ಬಿಡುವೀ ‖೧೨‖ ಏಕಸ್ಯ-ಒಬ್ಬನಾದ. ತೇ-ನಿನಗೆ, ರಣಮೂರ್ಧನಿ-ಯುದ್ಧರಂಗದಲ್ಲಿ. ಬಹೂನಾಂ-ಬಹುಮಂದಿಯಾದ, ಅಸ್ಮಾಕಂ-ನಮ್ಮುಗಳ, ಅಗ್ರತಃ-ಮುಂದುಗಡೆ, ಸ್ಥಾತುಂ-ನಿಲ್ಲುವದಕ್ಕಾಗಿ, ಶಕ್ತಿಃ-ಸಾಮರ್ಥ್ಯವು. ಕಾಹಿ-ಯೇನಿರ್ಧೀ, ಆಹವೇ-ಕಾಳಗದಲ್ಲಿ, ಯೋದ್ಧುಂ-ಯುದ್ಧಮಾಡುವದಕ್ಕಾಗಿ, ಕಿಂಪುನಃ-ಏನುಹೇಳತಕ್ಕದ್ದು ‖೧೩‖ ನಃ-ನಮ್ಮ, ಬಾಹುಪ್ರಯುಕ್ತೈಃ-ಭುಜಗಳಿಂದ ಪ್ರಯೋಗಮಾಡಲ್ಪಟ್ಟ, ಪರಿಘೈಃ-ಪರಿಘಾಯುಧಗಳಿಂದಲೂ, ಶೂಲಪಟ್ಟಿಸೈಃ-ತ್ರಿಶೂಲಗಳಿಂದಲೂ ಕತ್ತಿಗಳಿಂದಲೂ. ಪ್ರಾಣಾನ್-ಪ್ರಾಣಗಳನ್ನು, ತ್ಯಕ್ಷ್ಯಸಿ-ಬಿಡುವಿ. ವೀರ್ಯಂಚ-ಸಾಮರ್ಥ್ಯವನ್ನು, ಕರಪೀಡಿತಂ-ಹಸ್ತದಿಂ ಹಿಡಿಯಲ್ಪಟ್ಟ, ಧನುಶ್ಚ-ಬಿಲ್ಲಿನನ್ನೂ, ತ್ಯಕ್ಷ್ಯಸಿ-ಬಿಟ್ಟುಬಿಡುವಿ ‖೧೪‖ ಇತ್ಯೇವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಸಂಕ್ರುದ್ಧಾಃ-ಕೋಪಿಷ್ಠರಾದ, ತೇಚತುರ್ದಶರಾಕ್ಷಸಾಃ-ಆ ಹದಿನಾಲ್ಕು ಮಂದಿ ರಕ್ಕಸರು, ದುರ್ಜಯಂ-ಜಯಿಸಲಸಾಧ್ಯನಾದ. ರಾಘವಂಪ್ರತಿ-ಶ್ರೀರಾಮನನ್ನುದ್ದೇಶಿಸಿ, ತಾನಿಶೂಲಾನಿ-ಆ ತ್ರಿಶೂಲಗಳನ್ನು ಚಿಕ್ಷಿಪುಃ-ಯೆತ್ತಿ ಹಾಕಿದರು ‖೧೫‖ ಕಾಕುತ್ಸ್ಥಃ-ಶ್ರೀರಾಮನು, ಸಮಸ್ತಾನಿ-ಸಮಸ್ತಗಳಾದ, ತಾನಿಚತುರ್ದಶಶೂಲಾನಿ-ಆ ಹದಿನಾಲ್ಕು ಭಲ್ಲೆಗಳನ್ನು ಕಾಂಚನಭೂಷಣೈಃ-ಚಿನ್ನದ ಹಿಡಿಗಳೇ ಅಲಂಕಾರವಾಗುಳ್ಳ, ತಾವದ್ಭಿರೇವ-ಅಷ್ಟೇ ಸಂಖ್ಯೆಯುಳ್ಳ, ಶರೈಃ-ಬಾಣಗಳಿಂದ, ಚಿಚ್ಛೇದ-ಕತ್ತರಿಸಿದನು ‖೧೬‖ ತತಃಪಶ್ಚಾತ್-ಅನಂತರದಲ್ಲಿ, ಮಹಾತೇಜಾಃ-ಬಹಳ ಪರಾಕ್ರಮಶಾಲಿಯಾದ ಶ್ರೀರಾಮನು, ಪರಮಕ್ರುದ್ಧಃ-ಬಹಳಕೋಪಗೊಂಡವನಾಗಿ, ಶಿಲಾಶಿತಾನ್-ಸಾಣೇಕಲ್ಲಿನಲ್ಲಿ ಹದಹಿಡಿಯಲ್ಪಟ್ಟ, ಸೂರ್ಯಸನ್ನಿಭಾನ್-ಸೂರ್ಯನಿಗೆ ಸಮಾನಪ್ರಕಾಶವುಳ್ಳ. ಚತುರ್ದಶ-ಹದಿನಾಲ್ಕಾದ. ನಾರಾಚಾನ್-ಬಾಣಗಳನ್ನು, ಜಗ್ರಾಹ-ತೆಗೆದುಕೊಂಡನು ‖೧೭‖ ರಾಘವಃ-ಶ್ರೀರಾಮನು, ಧನುಃ-ಧನುಸ್ಸನ್ನು, ಆಯಮ್ಯ-ಬೊಗ್ಗಿಸಿ. ಗೃಹೀತ್ವಾ-ಹಿಡಿದುಕೊಂಡು ಲಕ್ಷ್ಯಾನ್-ಲಕ್ಷ್ಯಭೂತರಾದ. ರಾಕ್ಷಸಾನ್-ರಕ್ಕಸರನ್ನು.ಉದ್ದಿಶ್ಯ-ಲಕ್ಷೀಕರಿಸಿ, ಶತಕ್ರತುಃ-ದೇವೇಂದ್ರನು. ವಜ್ರಾನೀವ-ವಜ್ರಾಯುಧಗಳನ್ನಂತೆ, ಬಾಣಾನ್-ಬಾಣಗಳನ್ನು, ಮುಮೋಚ-ಬಿಟ್ಟನು ‖೧೮‖ ರುಕ್ಮಪುಂಖಾಃ-ಭಂಗಾರದ ಕೊಂಕಿಗಳುಳ್ಳ. ಹೇಮವಿಭೂಷಿತಾಃ-ಭಂಗಾರದ ಕಟ್ಟುಗಳಿಂದಲಂಕೃತಂಗಳಾದ, ದೀಪ್ತಾಃ-ಹೊಳೆಯುತ್ತಿರುವ, ತೇವಿಶಿಖಾಃ-ಆ ಬಾಣಗಳು, ರಕ್ಷಸಾಂ-ರಕ್ಕಸರ, ವಕ್ಷಾಂಸಿ-ಯದೆಗಳನ್ನು, ವೇಗಾತ್-ಜವದವೇಗದಿಂದ, ಭಿತ್ವಾ-ಭೇದಿಸಿ, ರುಧಿರಾಪ್ಲುತಾಃ-ರಕ್ತದಿಂ ತೊಯಿಸಲ್ಪಟ್ಟವುಗಳಾಗಿ. ತದಾ-ತತ್ಕ್ಷಣದಲ್ಲಿ, ಅಶನಿಸ್ವನಾಸ್ಸಂತಃ-ಸಿಡಿಲಂತೆ ಧ್ವನಿವುಳ್ಳವುಗಳಾಗಿ, ಭೂಮೌ-ನೆಲದಲ್ಲಿ, ವಿನಿಷ್ಪೇತುಃ-ಬಿದ್ದವು, ನ್ಯಮಜ್ಜಂತ-ಮುಳುಗಿಹೋದವು ‖೧೯‖ ಭಿನ್ನಹೃದಯಾಃ-ಭೇದಿಸಲ್ಪಟ್ಟ ಯದೆಗಳುಳ್ಳ. ತೇ-ಆ ರಕ್ಕಸರು, ಶೋಣಿತಾರ್ದ್ರಾಂಗಾಃ-ರಕುತದಿಂದ ನೆನಿ

---

ನಮ್ಮಿಂದ ಹತನಾಗಿ ಪ್ರಾಣಗಳಂ ಬಿಡುವವನಾಗುವೆ; ಒಬ್ಬನಾದ ನಿನಗೆ ರಣರಂಗದಲ್ಲಿ ಅನೇಕರಾದ ನಮ್ಮಗಳ ಮುಂದೆ ನಿಲ್ಲುವದಕ್ಕೆ ಏನುಶಕ್ತಿಯಿರುವದು? ಹೀಗಿರುವಾಗ ಯುದ್ಧಮಾಡುವದರಲ್ಲಿ ಶಕ್ತಿಯಿಲ್ಲವೆಂಬವಿಷಯದಲ್ಲಿ ಏನುಹೇಳತಕ್ಕದ್ದು ।೧೩। ನಮ್ಮ ಭುಜಗಳಿಂದ ಪ್ರಯೋಗಿಸಲ್ಪಟ್ಟ (ಪರಿಘ, ಶೂಲ, ಪಟ್ಟಸ,) ಮೊದಲಾದ ಆಯುಧಂಗಳಿಂದ ನೀನು ಪ್ರಾಣಂಗಳಂ ಬಿಡುವವನಾಗುವೆ, ಮತ್ತು ಸಾಮರ್ಥ್ಯವನ್ನೂ, ಹಸ್ತದಲ್ಲಿ ಪಿಡಿದಿರುವ ಕೋದಂಡವನ್ನೂ ಸಹಾ ಬಿಡುವಿ; ಎಂದು ಆ ಹದಿನಾಲ್ಕು ಮಂದಿ ರಾಕ್ಷಸರು ನುಡಿದು ಜಯಿಸಲಸಾಧ್ಯನಾದ ಶ್ರೀರಾಮನಂ ಕುರಿತು ಆ ಆಯುಧಂಗಳನ್ನೆಸೆದರು. ।೧೫। ಅನಂತರದಲ್ಲಿ ಶ್ರೀರಾಮನು ಆ ಆಯುಧಗಳನ್ನು ಚಿನ್ನದ ಪಿಡಿಗಳುಳ್ಳ ಸರಳುಗಳಿಂದ ಕತ್ತರಿಸಿದಬಳಿಕ, ಮಹಾಕೋಪಿಷ್ಠನಾಗಿ ಬಹು ಹದವಾಗಿರುವ ಸೂರ್ಯಸದೃಶವಾದ ಹದಿನಾಲ್ಕು ನಿಡಿಗೋಲುಗಳಂ ತೆಗದುಕೊಂಡು ತನ್ನ ಕೋದಂಡವನ್ನು ಬಗ್ಗಿಸಿ ಪಿಡಿದುಕೊಂಡು ಲಕ್ಷ್ಯಭೂತರಾಗಿರುವ ಆ ರಾಕ್ಷಸರನ್ನುದ್ದೇಶಿಸಿ, ಇಂದ್ರನು ವಜ್ರಾಯುಧಗಳಂ ಬಿಡುವಂತೆ ನಿಡುಸರಳ್ಗಳಂ ಬಿಟ್ಟವನಾಗಲು; ಭಂಗಾರದ ಕೊಂಕಿಗಳುಳ್ಳ ಆ ಬಾಣಂಗಳು ಆ ರಾಕ್ಷಸರ ವಕ್ಷಸ್ಥಳಗಳನ್ನು ಅತಿವೇಗದಿಂ ಭೇದಿಸಿ ರಕುತದಿಂದ ತೊಯಿಸಲ್ಪಟ್ಟವುಗಳಾಗಿ ತತ್ಕ್ಷಣದಲ್ಲಿ ಸಿಡಿಲಿನಂತೆ, ಘೋಷೆಯಂ ಗೈಯ್ಯುತ್ತಾ ನೆಲದಲ್ಲಿ ಬಿದ್ದು ಹೂತುಕೊಂಡವು ।೧೯। ಭೇದಿಸಲ್ಪಟ್ಟ ಹೃದಯಗಳುಳ್ಳ ಆ ಅಸುರರು ರಕುತದಿಂದ

ತೇಭಿನ್ನಹೃದಯಾಭೂಮೌಭಿನ್ನಮೂಲಾಇವದ್ರುಮಾಃ।ನಿಪೇತುಶ್ಶೋಣಿತಾರ್ದ್ರಾಂಗಾವಿಕೃತಾವಿಗತಾಸವಃ।೧೮।
ತಾನ್ದೃಷ್ಟ್ವಾಪತಿತಾನ್ಭೂಮೌರಾಕ್ಷಸೀಕ್ರೋಧಮೂರ್ಛಿತಾ।ಪರಿತ್ರಸ್ತಾಪುನಸ್ತತ್ರವ್ಯಸೃಜದ್ಭೈರವಸ್ವನಾನ್।೧೯।
ಸಾನದಂತೀಪುನರ್ನಾದಂಜವಾಚ್ಛೂರ್ಪಣಖಾಪುನಃ । ಉಪಗಮ್ಯಖರಂಸಾತುಕಿಂಚಿತ್ಸಂಶುಷ್ಕಶೋಣಿತಾ । ಪಪಾತ
ಪುನರೇವಾರ್ತಾಸನಿರ್ಯಾಸೇವಸಲ್ಲಕೀ ।೨೦। ಭ್ರಾತುಸ್ಸಮೀಪೇಶೋಕಾರ್ತಾಸಸರ್ಜನಿನದಂಮುಹುಃ । ಸಸ್ವರಂಮು
ಮುಚೇಬಾಷ್ಪಂವಿಷಣ್ಣವದನಾತದಾ ।೨೧। ನಿಪಾತಿತಾನ್ದೃಶ್ಯರಣೇತುರಾಕ್ಷಸಾನ್ಪ್ರಧಾವಿತಾಶೂರ್ಪಣಖಾಪುನಸ್ತ
ತಃ । ವಧಂಚತೇಷಾಂನಿಖಿಲೇನರಕ್ಷಸಾಂಶಶಂಸಸರ್ವಂಭಗಿನೀಖರಸ್ಯಸಾ ।೨೨।

—*** ಇತಿಶ್ರೀಮದಾರಣ್ಯಕಾಂಡೇ-ವಿಂಶಸ್ಸರ್ಗಃ. ***—

ಸಪುನಃಪತಿತಾಂದೃಷ್ಟ್ವಾಕ್ರೋಧಾಚ್ಛೂರ್ಪಣಖಾಂಖರಃ । ಉವಾಚವ್ಯಕ್ತಯಾವಾಚಾತಾಮನರ್ಥಾರ್ಥಮಾ

---

ಯುಳ್ಳ ಶರೀರವುಳ್ಳವರಾಗಿ, ವಿಕೃತಾಃ-ವಿಕಾರ ಧ್ವನಿಯುಳ್ಳವರಾಗಿ, ವಿಗತಾಸವಸ್ಸಂತಃ-ಹೋದಂಥಾ ಪ್ರಾಣಗಳುಳ್ಳವರಾಗಿ, ಭಿನ್ನಮೂಲಾಃ-ಕತ್ತರಿಸಲ್ಪಟ್ಟ ಬುಡವುಳ್ಳ, ದ್ರುಮಾಇವ-ಗಿಡಗಳಂತೆ, ಭೂಮೌ-ನೆಲದಲ್ಲಿ, ನಿಪೇತುಃ-ಬಿದ್ದರು ||೧೮|| ಭೂಮೌ-ನೆಲದಲ್ಲಿ, ಪತಿತಾನ್-ಬಿದ್ದಿರುವ, ತಾನ್-ಆ ರಾಕ್ಷಸರನ್ನು. ದೃಷ್ಟ್ವಾ-ಕಂಡು, ರಾಕ್ಷಸೀ-ರಾಕ್ಷಸಸ್ತ್ರೀಯಾದ ಶೂರ್ಪನಖೆಯು, ಕ್ರೋಧಮೂರ್ಛಿತಾ-ಕೋಪದಿಂವ್ಯಾಪ್ತಳಾಗಿ, ಪುನಃ-ಮತ್ತು, ಪರಿತ್ರಸ್ತಾ-ಹೆದರಿದವಳಾಗಿ, ತತ್ರ-ಆ ಅರಣ್ಯದಲ್ಲಿ, ಭೈರವಸ್ವನಾನ್-ನಾಯಿ ಕೂಗಿನಂತೆ ಕೂಗನ್ನು, ವ್ಯಸೃಜತ್-ಬಿಟ್ಟಳು ||೧೯|| ಸಾಶೂರ್ಪಣಖಾ-ಆ ಶೂರ್ಪನಖೆಯು, ಪುನಃ-ಮತ್ತು, ನಾದಂ-ಧ್ವನಿಯನ್ನು, ನದಂತೀ-ಮಾಡುತ್ತಿರುವವಳಾಗಿ, ಜವಾತ್-ವೇಗದದೆಸೆಯಿಂದ ಖರಂ-ಖರನಂಕುರಿತು, ಅಭಿಗಮ್ಯ-ಬಂದು, ಕಿಂಚಿತ್-ಸ್ವಲ್ಪವಾಗಿ, ಸಂಶುಷ್ಕಶೋಣಿತಾ-ಒಣಗಿದ ರಕ್ತವುಳ್ಳವಳಾಗಿ, ಸಾತು-ಆ ಶೂರ್ಪನಖೆಯಾದರೆ ಪುನರೇವ-ಮತ್ತೂ, ಆರ್ತಾ-ದೀನಳಾಗಿ, ಸನಿರ್ಯಾಸಾ-ಅಂಟಿನಿಂದೊಡಗೂಡಿದ ಸಲ್ಲಕೀವ-ಸಲ್ಲಕೀವೃಕ್ಷದಂತೆ, ಪಪಾತ-ಬಿದ್ದಳು ||೨೦|| ತದಾ-ಆಕಾಲದಲ್ಲಿ, ಭ್ರಾತುಃ-ಅಣ್ಣನಾದ ಖರಾಸುರನ, ಸಮೀಪೇ-ಸಮೀಪದಲ್ಲಿ, ಶೋಕಾರ್ತಾ-ವ್ಯಸನಗೊಂಡವಳಾಗಿ, ಮುಹುಃ-ಬಾರಿಬಾರಿಗೂ, ನಿನದಂ-ದೀನಧ್ವನಿಯನ್ನು, ಸಸರ್ಜ-ಬಿಟ್ಟಳು, ವಿಷಣ್ಣವದನಾ-ವ್ಯಸನಗೊಂಡಮುಖವುಳ್ಳವಳಾಗಿ, ಸಸ್ವರಂ-ಸ್ವರದಿಂ ಕೂಡಿದಂತೆ, ಬಾಷ್ಪಂ-ಕಂಬನಿಯನ್ನು, ಮುಮುಚೇ-ಬಿಟ್ಟಳು ||೨೧|| ಖರಸ್ಯ-ಖರನಿಗೆ, ಭಗಿನೀ-ತಂಗಿಯಾದ, ಸಾಶೂರ್ಪಣಖಾ-ಆ ಶೂರ್ಪನಖೆಯು, ರಣೇತು-ಯುದ್ಧದಲ್ಲಾದರೆ, ನಿಪಾತಿತಾನ್-ಬೀಳಿಸಲ್ಪಟ್ಟ, ರಾಕ್ಷಸಾನ್-ರಕ್ಕಸರನ್ನು, ದೃಷ್ಟ್ವಾ-ಕಂಡು, ಪುನಃ-ಮತ್ತು, ಪ್ರಧಾವಿತಾ-ಓಡಿಬಂದವಳಾಗಿ, ತತಃ-ಬಳಿಕ, ತೇಷಾಂರಕ್ಷಸಾಂ-ಆ ರಾಕ್ಷಸರ, ಸರ್ವಂ-ಸಮಸ್ತವಾದ, ವಧಂಚ-ಸಂಹಾರವನ್ನು, ಶಶಂಸ-ಹೇಳಿದಳು|| —**ವಿಂಶಸ್ಸರ್ಗಃ**—

ಸಖರಃ-ಆ ಖರಾಸುರನು, ಪುನಃ-ಮತ್ತು, ಪತಿತಾಂ-ನೆಲದಮೇಲೆ ಬಿದ್ದಿರುವ, ಅನರ್ಥಾರ್ಥಂ-ಸ್ವಕುಲಕ್ಕೆ ಅನರ್ಥವಾಗಿ ಬಂದಿರುವ, ತಾಂಶೂರ್ಪಣಖಾಂ-ಆ ಶೂರ್ಪನಖೆಯನ್ನು, ದೃಷ್ಟ್ವಾ-ಕಂಡು, ಕ್ರೋಧಾತ್-ಕೋಪದದೆಸೆಯಿಂದ, ವ್ಯಕ್ತಯಾ-ಸ್ಪಷ್ಟವಾದ, ವಾಚಾ-ಮಾತಿನಿಂದ ಉವಾಚ-ಹೇಳಿದನು ||೧|| ಮಯಾತು-ನನ್ನಿಂದಲಾದರೆ, ಇದಾನೀಂ-ಈಗ, ಶೂರಾಃ-ಶೂರರಾದ, ಪಿಶಿತಾಶನಾಃ-ರಕ್ತಮಾಂಸಭಕ್ಷಕರಾದ...

---

ತೊಲಿಸಲ್ಪಟ್ಟ ಶರೀರವುಳ್ಳವರಾಗಿಯೂ, ವಿಕಾರಸ್ವರವುಳ್ಳವರಾಗಿಯೂ, ಹೋದಂಥಾ ಪ್ರಾಣಗಳುಳ್ಳವರಾಗಿಯೂ ಸಹ ಬುಡವನ್ನು ಕತ್ತರಿಸಿದ ಗಿಡದಂತೆ ನೆಲದಲ್ಲಿ ಬಿದ್ದರು ।೧೮। ಬಳಿಕ ನೆಲದಲ್ಲಿ ಬಿದ್ದಿರುವ ಆ ರಕ್ಕಸರಂ ನೋಡಿ ಶೂರ್ಪನಖಿಯು ಕೋಪಯುಕ್ತಳಾಗಿ ಮತ್ತು ಭಯಗೊಂಡವಳಾಗಿ ಆ ಆರಣ್ಯದಲ್ಲಿ ನಾಯಿಯು ಕೂಗಿನಂತೆ ಧ್ವನಿಮಾಡುತ್ತಾ ಅಳುತ್ತಾ ಜಾಗ್ರತೆಯಾಗಿ ಖರಾಸುರನಂ ಕುರಿತು ಬಂದು, ಸ್ವಲ್ಪವಾಗಿ ಒಣಗಿದ ರಕುತವುಳ್ಳವಳಾಗಿಯೂ, ದೀನಳಾಗಿಯೂ ಅಂಟಿನಿಂದೊಡಗೂಡಿದ ಸಲ್ಲಕೀ ವೃಕ್ಷದಂತೆ ನೆಲದಲ್ಲಿ ಬಿದ್ದಳು, ।೨೦। ಆಗ ಅಣ್ಣನಾದ ಖರಾಸುರನ ಬಳಿಯಲ್ಲಿ ದುಃಖಗೊಂಡವಳಾಗಿ ಬಾರಿಬಾರಿಗೂ ದೀನಧ್ವನಿಯನ್ನು ಮಾಡುತ್ತಾ ವ್ಯಸನಗೊಂಡ ಮುಖವುಳ್ಳವಳಾಗಿ, ಸ್ವರದಿಂ ಕೂಡಿದಂತೆ ಕಂಬನಿಯಂ ಬಿಟ್ಟಳು ।೨೧। ಖರನಿಗೆ ತಂಗಿಯಾದ ಶೂರ್ಪನಖಿಯು ಯುದ್ಧದಲ್ಲಿ ಬೀಳಿಸಲ್ಪಟ್ಟ ರಕ್ಕಸರಂ ಕಂಡು ಪುನಃ ಓಡಿಬಂದವಳಾಗಿ ಆ ರಾಕ್ಷಸರ ಸಮಸ್ತವಾದ ಸಂಹಾರವನ್ನು ಹೇಳಿದಳು ।೨೨। —*ಆರಣ್ಯಕಾಂಡದಲ್ಲಿ ಇಪ್ಪತ್ತನೆಯ ಸರ್ಗವು ಮುಗಿದುದು*—

ಪುನಃ ಬಹುಕೋಪದಿಂದ ಹಿಂತಿರುಗಿ ಬಂದು ನೆಲದಲ್ಲಿ ಬಿದ್ದು ಹೊರಳಾಡುತ್ತಿರುವ ಆ ಶೂರ್ಪನಖಿಯಂ ಕಂಡು, ಖರಾಸುರನು ತಮ್ಮ ಕುಲಕ್ಕೆ ಅನರ್ಥವನ್ನುಂಟುಮಾಡುವದಕ್ಕಾಗಿ ಬಂದಿರುವ ಆಕೆಯಂ ಕುರಿತು ವ್ಯಕ್ತವಾದ ಮಾತಿನಿಂದ ನುಡಿದನದೆಂತೆನೆ,—ಎಲೌ ಒಡಹುಟ್ಟಿದವಳೇ! ನಿನ್ನ ನಿಮಿತ್ತವಾಗಿ ನಾನೀಗತಾನೇ ಮಾಂಸಾಹಾರಿಗಳಾದ ಮಹಾ ಶೂರರಾದ ರಾಕ್ಷಸರನ್ನು ಕಳುಹಿಸಿದೆನಲ್ಲವೆ? ಪುನಃ ಯಾಕೆರೋದನವಂ ಗೈಯು

ಗತಾಃ ||೧|| ಮಯಾತ್ವಿದಾನೀಂಶೂರಾಸ್ತೇರಾಕ್ಷಸಾರುಧಿರಾಶನಾಃ। ತ್ವತ್ಪ್ರಿಯಾರ್ಥಂವಿನಿರ್ದಿಷ್ಟಾಃಕಿಮರ್ಥಂರುದ್ಯತೇ
ಪುನಃ ||೨|| ಭಕ್ತಾಶ್ಚೈವಾನುರಕ್ತಾಶ್ಚಹಿತಾಶ್ಚಮಮನಿತ್ಯಶಃ । ಘ್ನಂತೋಪಿನನಿಹಂತವ್ಯಾನ್ನಕುರ್ಯುರ್ವಚೋ
ಮಮ ||೩|| ಕಿಮೇತಚ್ಛ್ರೋತುಮಿಚ್ಛಾಮಿಕಾರಣಂಯತ್ಕೃತೇಪುನಃ । ಹಾನಾಥೇತಿವಿನರ್ದಂತೀಸರ್ಪವಲ್ಲುಠಸಿಕ್ಷಿ
ತೌ ||೪|| ಅನಾಥವದ್ವಿಲಪಸಿನಾಥೇತುಮಯಿಸಂಸ್ಥಿತೇ । ಉತ್ತಿಷ್ಠೋತ್ತಿಷ್ಠಮಾಭೈಷೀರ್ವೈಕ್ಲಬ್ಯಂತ್ಯಜ್ಯತಾಮಿಹ ||೫||
ಇತ್ಯೇವಮುಕ್ತಾದುರ್ಧರ್ಷಾಖರೇಣಪರಿಸಾಂತ್ವಿತಾ । ವಿಮೃಜ್ಯನಯನೇಸಾಸ್ರೇಖರಂಭ್ರಾತರಮಬ್ರವೀತ್ ||೬|| ಅಸ್ಮೀ
ದಾನೀಮಹಂಪ್ರಾಪ್ತಾಹೃತಶ್ರವಣನಾಸಿಕಾ । ಶೋಣಿತೌಘಪರಿಕ್ಲಿನ್ನಾತ್ವಯಾಚಪರಿಸಾಂತ್ವಿತಾ ||೭|| ಪ್ರೇಷಿತಾಶ್ಚ
ತ್ವಯಾವೀರರಾಕ್ಷಸಾಸ್ತೇಚತುರ್ದಶ । ನಿಹಂತುಂರಾಘವಂಘೋರಾಮತ್ಪ್ರಿಯಾರ್ಥಂಸಲಕ್ಷ್ಮಣಂ ||೮|| ತೇತುರಾಮೇಣ
ಸಾಮರ್ಷಾಃಶೂಲಪಟ್ಟಿಸಪಾಣಯಃ । ಸಮರೇನಿಹತಾಸ್ಸರ್ವೇಸಾಯಕೈರ್ಮರ್ಮಭೇದಿಭಿಃ ||೯|| ತಾನ್ದೃಷ್ಟ್ವಾಪತಿ

---

ಸುವ ಸಾಮರ್ಥ್ಯವುಳ್ಳ, ತೇರಾಕ್ಷಸಾಃ-ಆ ರಕ್ಕಸರು, ತ್ವತ್ಪ್ರಿಯಾರ್ಥಂ-ನಿನ್ನ ಇಷ್ಟಕ್ಕೋಸ್ಕರ, ವಿನಿರ್ದಿಷ್ಟಾಃ-ಆಜ್ಞಾಪಿಸಲ್ಪಟ್ಟಿತು, ಕಿಮರ್ಥಂ-ಯಾವ ನಿಮಿತ್ತವಾಗಿ, ಪುನಃ-ಮತ್ತು, ರುದ್ಯತೇ-ರೋದನಮಾಡಲ್ಪಡುತ್ತದೆ ||೧|| ಭಕ್ತಾಃ-ವಿಶ್ವಾಸವನ್ನು ಹೊಂದಿದವರಾದ, ಅನುರಕ್ತಾಶ್ಚ-ನನ್ನಲ್ಲೇ ಅನುರಾಗವುಳ್ಳವರಾದ. ಮಮ-ನನಗೆ, ನಿತ್ಯಶಃ-ನಿರಂತರವೂ. ಹಿತಾಃ-ಇಷ್ಟರಾದ ರಾಕ್ಷಸರು, ಘ್ನಂತೋಪಿ-ಹೊಡೆಯುವವರಾದರೂ, ನನಿಹಂತವ್ಯಾಃ-ಹೊಡಿಸಿಕೊಳ್ಳತಕ್ಕವರಲ್ಲ, ಮಮ-ನನ್ನ, ವಚಃ-ಮಾತನ್ನು, ನಕುರ್ಯುರಿತಿನ-ಮಾಡುವುದಿಲ್ಲ ಯೆಂಬುವದಿಲ್ಲ ||೨|| ಯತ್ಕೃತೇ-ಯಾವ ನಿಮಿತ್ತವಾಗಿ. ಪುನಃ-ಮತ್ತು, ಹಾನಾಥೇತಿ-ಎಲೌ ಸ್ವಾಮಿಯೇ ಎಂದು. ವಿನರ್ದಂತೀ-ಗರ್ಜಿಸುತ್ತಿರುವವಳಾಗಿ. ಕ್ಷಿತೌ-ನೆಲದಲ್ಲಿ ಸರ್ಪವತ್-ಹಾವಿನಂತೆ, ಲುಠಸಿ-ಹೊರಳಾಡುತ್ತೀಯೆ, ಏತತ್-ಇದು, ಕಿಂಕಾರಣಂ-ಏನುಕಾರಣವೋ ಆ ಕಾರಣವನ್ನು, ಶ್ರೋತುಂ-ಕೇಳಲೋಸುಗ, ಇಚ್ಛಾಮಿ-ಅಪೇಕ್ಷಿಸುತ್ತೇನೆ ||೩|| ನಾಥೇ-ಸ್ವಾಮಿಯಾದ, ಮಯಿ-ನಾನು. ಸಂಸ್ಥಿತೇಸತಿ-ಇರುತ್ತಿರಲಾಗಿ, ಅನಾಥವತ್-ದಿಕ್ಕಿಲ್ಲದವಳಂತೆ, ವಿಲಪಸಿ-ಅಳುತ್ತೀಯಾ. ಉತ್ತಿಷ್ಠೋತ್ತಿಷ್ಠ-ಏಳು ಏಳು, ಮಾಭೈಷೀಃ-ಭಯಗೊಳ್ಳಬ್ಯಾಡ, ಇಹ-ಈಗ, ವೈಕ್ಲಬ್ಯಂ-ಮನಃಕಲುಷವು. ತ್ಯಜ್ಯತಾಂ-ಬಿಡಲ್ಪಡಲಿ ||೪|| ಇತ್ಯೇವಂ-ಈಪರಿಯಾಗಿ, ಉಕ್ತಾ-ಹೇಳಲ್ಪಟ್ಟವಳಾಗಿ, ದುರ್ಧರ್ಷಾ-ದುಷ್ಟಳಾದ ಆ ಶೂರ್ಪನಖೆಯು. ಖರೇಣ-ಖರಾಸುರನಿಂದ, ಪರಿಸಾಂತ್ವಿತಾ-ಸಮಾಧಾನಗೊಳಿಸಲ್ಪಟ್ಟವಳಾಗಿ, ಸಾಸ್ರೇ-ಕಂಬನಿಗಳಿಂದೊಡಗೂಡಿದ, ನಯನೇ-ನೇತ್ರಗಳನ್ನು, ವಿಮೃಜ್ಯ-ಒರಸಿಕೊಂಡು. ಭ್ರಾತರಂ-ತಮ್ಮನಾದ, ಖರಂ-ಖರಾಸುರನನ್ನುಕುರಿತು, ಅಬ್ರವೀತ್-ನುಡಿದಳು ||೫|| ಇದಾನೀಂ-ಈಗಲೆ, ಹೃತಶ್ರವಣನಾಸಿಕಾ-ಅಪಹರಿಸಲ್ಪಟ್ಟ ಶ್ರೋತ್ರಗಳೂ ಮೂಗೂ ಉಳ್ಳವಳಾಗಿ, ಶೋಣಿತೌಘಪರಿಕ್ಲಿನ್ನಾ-ರಕ್ತಪ್ರವಾಹದಿಂ ನನಿಸಲ್ಪಟ್ಟವಳಾಗಿ, ಅಹಂ-ನಾನು, ಪ್ರಾಪ್ತಾ-ಬಂದವಳು ಅಸ್ಮಿ-ಆದೆನು, ತ್ವಯಾಚ-ನಿನ್ನಿಂದಲೂ, ಪರಿಸಾಂತ್ವಿತಾ-ಸಮಾಧಾನಗೊಳಿಸಲ್ಪಟ್ಟೆನು ||೬|| ಹೇವೀರ-ಎಲೈ ಶೂರನೇ, ತ್ವಯಾ-ನಿನ್ನಿಂದ, ಕ್ರೋಧಾತ್-ಕೋಪದದೆಶೆಯಿಂದ, ಚತುರ್ದಶ-ಹದಿನಾಲ್ಕುಸಂಖ್ಯೆಯುಳ್ಳ, ತೇರಾಕ್ಷಸಾಃ-ಆ ರಾಕ್ಷಸರು, ಮತ್ಪ್ರಿಯಾರ್ಥಂ-ನನ್ನ ಹಿತಕ್ಕೋಸುಗ, ಸಲಕ್ಷ್ಮಣಂ-ಲಕ್ಷ್ಮಣನಿಂದೊಡಗೂಡಿದ, ರಾಘವಂ-ಶ್ರೀರಾಮನನ್ನು, ನಿಹಂತುಂ-ಹೊಡೆಯುವದಕ್ಕಾಗಿ. ಪ್ರೇಷಿತಾಶ್ಚ-ಕಳುಹಿಸಿಕೊಡಲ್ಪಟ್ಟರು, ಶೂಲಪಟ್ಟಿಸಪಾಣಯಃ-ಶೂಲಗಳೂ ಕತ್ತಿಗಳೂ ಹಸ್ತದಲ್ಲುಳ್ಳವರಾಗಿ, ಸಾಮರ್ಷಾಃ-ಕೋಪದಿಂದೊಡಗೂಡಿದ, ಸರ್ವೇ-ಸಮಸ್ತರಾ

---

ತಲಿರುವೆ? ನಾನು ನಿನ್ನ ಸಂಗಡಕಳುಹಿಸಿದ ಆ ಅಸುರರು ನನಿಗೆ ಭಕ್ತರಾಗಿಯೂ, ಯಾವಾಗಲೂ ನನ್ನಲ್ಲಿ ಅನುರಾಗವುಳ್ಳವರಾಗಿಯೂ, ಇರುವರಾದಕಾರಣ ಯೆಂದಿಗೂನನ್ನಾಜ್ಞೆಯನ್ನು, ಮೀರುವವರಲ್ಲ; ಇದಲ್ಲದೆ ಅವರು ಇತರರಿಂದ ಜಯಿಸಲಸಾಧ್ಯರಾಗಿಯೂ ಬಹು ಘಾತಕರಾಗಿಯೂ ಇರುವರು; ಹೀಗಿರುವಾಗ ನೀನು, ಅಯ್ಯೋ! ನಾಥನೇ! ಯೆಂಬದಾಗಿ ಕೂಗುತ್ತಾ ಸರ್ಪದಂತೆ ಪುನಃ ಯಾಕೆ ಹೊರಳಾಡುತಲಿರುವೆ? ಇದಕ್ಕೆ ಕಾರಣವೇನು? ಹೇಳುವವಳಾಗು; ನಾನು ಮಹೋನ್ನತನಾಗಿ ನಾಥನಾಗಿರುವಾಗ ನೀನು ಅನಾಥಳಂತೆ ಯಾಕೆ ಅಳುತಿರುವಿ? ಯೇಳೇಳು, ಹೆದರಬ್ಯಾಡ; ಈ ದುಃಖವನ್ನೀಗಲೇ ಬಿಡುವವಳಾಗೆಂದು ಖರಾಸುರನು ಸಮಾಧಾನಗೊಳಿಸಿದವನಾಗಲೂ, ಆ ಶೂರ್ಪನಖಿಯು ಕಂಬನಿಗಳಂ ಸುರಿಸುತ್ತಿರುವ ತನ್ನ ನಯನಂಗಳನ್ನು ಹಸ್ತಂಗಳಿಂದ ಒರೆಸಿಕೊಳ್ಳುತ್ತಾ ಆ ಖರಾಸುರನಂ ಕುರಿತು ನುಡಿವಳದೆಂತೆನೆ,—||೬|| ಎಲೈ ಅಣ್ಣನೇ! ನಾನು ಶ್ರವಣನಾಸಿಕಾ ಛೇದನವಂ ಪಡೆದು ರಕುತವಂ ಸುರಿಸುತ್ತಾ ನಿನ್ನ ಸವಿಾಪಕ್ಕೆ ಬಂದು, ಈಗ ತಾನೇ ನಿನ್ನಿಂದಲೂ ಸಹ ಸಮಾಧಾನಮಾಡಲ್ಪಟ್ಟವಳಾದೆನಲ್ಲವೆ; ಮತ್ತೂ ನನ್ನ ಪ್ರೀತಿಗಾಗಿ ಆ ರಾಮಲಕ್ಷ್ಮಣರಂ ಸಂಹಾರವಂ ಗೈಯ್ಯಲೋಸುಗ ನೀನು ಮಹಾ ಶೂರರಾದ ಹದಿನಾಲ್ಕುಮಂದಿ ರಾಕ್ಷಸರನ್ನು ಕಳುಹಿಸಿ ಕೊಟ್ಟದ್ದು ಸಹ ಸರಿಯಷ್ಟೆ? ಎಲೈ ಧಣಿಯೇ! ಕೇಳುವವನಾಗು; ಬಹು ಕೋಪವಂತರಾಗಿ, "ಶೂಲಪಟ್ಟಿಸ," ಮೊದಲಾದ ಆಯುಧಂಗಳಂಪಿಡಿದು

ತಾನ್ಭೂಮೌಕ್ಷಣೇನೈವಮಹಾಬಲಾನ್ । ರಾಮಸ್ಯಚಮಹತ್ಕರ್ಮಮಹಾಂಸ್ತ್ರಾಸೋಭವನ್ಮಮ ॥೧೦॥ ಅಹಮಸ್ಮಿ
ಸಮುದ್ವಿಗ್ನಾವಿಷಣ್ಣಾಚನಿಶಾಚರ । ಶರಣಂತ್ವಾಂಪುನಃಪ್ರಾಪ್ತಾಸರ್ವತೋಭಯದರ್ಶಿನೀ॥೧೧॥ ವಿಷಾದನಕ್ರಾಧ್ಯು
ಷಿತೇಪರಿತ್ರಾಸೋರ್ಮಿಮಾಲಿನಿ । ಕಿಂಮಾಂನತ್ರಾಯಸೇಮಗ್ನಾಂವಿಪುಲೇಶೋಕಸಾಗರೇ ॥೧೨॥ ಏತೇಚನಿಹತಾಭೂಮೌ
ರಾಮೇಣನಿಶಿತೈಶ್ಶರೈಃ । ಯೇಪಿಮೇಪದವೀಂಪ್ರಾಪ್ತಾರಾಕ್ಷಸಾಃಪಿಶಿತಾಶನಾಃ ॥೧೩॥ ಮಯಿತೇಯದ್ಯನುಕ್ರೋಶೋ
ಯದಿರಕ್ಷಸ್ಸುತೇಷುಚ । ರಾಮೇಣಯದಿತೇಶಕ್ತಿಸ್ತೇಜೋವಾಸ್ತಿನಿಶಾಚರ । ದಂಡಕಾರಣ್ಯನಿಲಯಂಜಹಿರಾಕ್ಷಸಕಂಟ
ಕಂ । ಯದಿರಾಮಂಮಮಾಮಿತ್ರಂನತ್ವಮದ್ಯವಧಿಷ್ಯಸಿ । ತವಚೈವಾಗ್ರತಃಪ್ರಾಣಾಂಸ್ತ್ಯಕ್ಷ್ಯಾಮಿನಿರಪತ್ರ
ಪಾ ॥೧೫॥ ಬುದ್ಧ್ಯಾಹಮನುಪಶ್ಯಾಮಿನತ್ವಂರಾಮಸ್ಯಸಂಯುಗೇ । ಸ್ಥಾತುಂಪ್ರತಿಮುಖೇಶಕ್ತಸ್ಸಬಲಶ್ಚಮಹಾ
ತ್ಮನಃ ॥೧೬॥ ಶೂರಮಾನೀನಶೂರಸ್ತ್ವಂಮಿಥ್ಯಾರೋಪಿತವಿಕ್ರಮಃ । ಮಾನುಷೌಯೌನಶಕ್ನೋಷಿಹಂತುಂತೌರಾ

---

ದ. ತೇತು-ಆ ರಾಕ್ಷಸರಾದರೆ. ರಾಮೇಣ-ಶ್ರೀರಾಮನಿಂದ, ಮರ್ಮಭೇದಿಭಿಃ-ಮರ್ಮಸ್ಥಾನವಂ ಭೇದಿಸುತ್ತಿರುವ. ಸಾಯಕೈಃ-ಬಾಣಗಳಿಂದ, ಸಮರೇ-ಕಾಳಗದಲ್ಲಿ, ನಿಹತಾಃ-ಸಂಹರಿಸಲ್ಪಟ್ಟರು ॥೯॥ ಕ್ಷಣೇನೈವ-ಕ್ಷಣಮಾತ್ರದಿಂದಲೇ, ಮಹಾಬಲಾನ್-ಬಹಳ ಸಾಮರ್ಥ್ಯವಂತರಾದ, ಭೂಮೌ-ನೆಲದಲ್ಲಿ, ಪತಿತಾನ್-ಬಿದ್ದಿರುವ, ತಾನ್-ಆ ರಾಕ್ಷಸರನ್ನು, ದೃಷ್ಟ್ವಾ-ಕಂಡು, ರಾಮಸ್ಯಚ-ಶ್ರೀರಾಮನ, ಮಹತ್-ದೊಡ್ಡದಾದ. ಕರ್ಮ-ವ್ಯಾಪಾರವನ್ನು ದೃಷ್ಟ್ವಾ-ಕಂಡು, ಮಮ-ನನಗೆ, ಮಹಾನ್-ಬಹಳವಾದ, ತ್ರಾಸಃ-ಭಯವು, ಅಭವತ್-ಆಯಿತು ॥೧೦॥ ಹೇನಿಶಾಚರ-ಎಲೈ ರಾಕ್ಷಸನೇ. ಅಹಂ-ನಾನು, ಸಮುದ್ವಿಗ್ನಾ-ಹೆದರಿಗೊಂಡವಳು, ವಿಷಣ್ಣಾಚ-ವ್ಯಸನಗೊಂಡವಳೂ, ಅಸ್ಮಿ-ಆಗಿದ್ದೇನೆ, ಸರ್ವತಃ-ಸರ್ವಪ್ರದೇಶಗಳಲ್ಲಿಯೂ, ಭಯದರ್ಶಿನೀ-ಭಯವನ್ನೇ ಕಾಣುತ್ತಿರುವವಳಾಗಿ, ತ್ವಾಂ-ನಿನ್ನನ್ನು. ಶರಣಂ-ರಕ್ಷಕನನ್ನಾಗಿ, ಪುನಃ-ಮತ್ತು, ಪ್ರಾಪ್ತಾ-ಹೊಂದಿದವಳು, ಅಸ್ಮಿ-ಆಗಿದ್ದೇನೆ॥೧೧॥ ವಿಷಾದನಕ್ರಾಧ್ಯುಷಿತೇ-ಶೋಕವೆಂಬ ನೆಗಳಿಂದ ಅಧಿಷ್ಠಿಸಲ್ಪಟ್ಟ, ಪರಿತ್ರಾಸೋರ್ಮಿಮಾಲಿನಿ-ಭಯವೆಂಬ ತೆರೆಗಳ ಪಂಕ್ತಿಯುಳ್ಳ, ವಿಪುಲೇ-ವಿಸ್ತಾರವಾದ, ಶೋಕಸಾಗರೇ-ಅಳುವೆಂಬ ಸಮುದ್ರದಲ್ಲಿ. ಮಗ್ನಾಂ-ಮುಳುಗಿದ, ಮಾಂ-ನನ್ನನ್ನು. ನತ್ರಾಯಸೇಕಿಂ-ಸಂರಕ್ಷಿಸುವದಿಲ್ಲವೋ ಏನು ॥೧೨॥ ಯೇ-ಯಾವ, ಪಿಶಿತಾಶನಾಃ-ಮಾಂಸಭಕ್ಷಕರಾದ, ರಾಕ್ಷಸಾಃ-ರಕ್ಕಸರು, ಮೇ-ನನ್ನ, ಪದವೀಂ-ಮಾರ್ಗವನ್ನು, ಪ್ರಾಪ್ತಾಃ-ಅನುಸರಿಸಿಬಂದರೋ, ಏತೇ-ಇವರು, ರಾಮೇಣ-ಶ್ರೀರಾಮನಿಂದ, ನಿಶಿತೈಃ-ತೀಕ್ಷ್ಣಗಳಾದ, ಶರೈಃ-ಬಾಣಗಳಿಂದ, ನಿಹತಾಶ್ಚ-ಹೊಡೆಯಲ್ಪಟ್ಟರು ॥೧೩॥ ಹೇನಿಶಾಚರ-ಎಲೈ ರಾಕ್ಷಸನೇ, ತೇ-ನಿನಗೆ, ಮಯಿ-ನನ್ನಲ್ಲಿ, ಅನುಕ್ರೋಶಃ-ದಯೆಯು, ತೇಷುರಕ್ಷಸ್ಸುಚ-ಆ ರಾಕ್ಷಸರಲ್ಲಿಯೂ, ಅನುಕ್ರೋಶಃ-ಕರುಣೆಯು. ಅಸ್ತಿಯದಿ-ಇದ್ದದ್ದೇ ಆದರೆ. ರಾಮೇಣ-ಶ್ರೀರಾಮನೊಡಗೂಡ, ಯುದ್ಧಂಕರ್ತುಂ-ಯುದ್ಧವನ್ನು ಮಾಡುವದಕ್ಕಾಗಿ, ತೇ-ನಿನಗೆ, ಶಕ್ತಿಃ-ಸಾಮರ್ಥ್ಯವು, ತೇಜೋವಾ-ಅಂತಸ್ಸಾರವು, ಅಸ್ತಿಯದಿ-ಇದ್ದದ್ದೇ ಆದರೆ, ದಂಡಕಾರಣ್ಯನಿಲಯಂ-ದಂಡಕಾರಣ್ಯವೇ ಆವಾಸವಾಗುಳ್ಳ, ರಾಕ್ಷಸಕಂಟಕಂ-ರಕ್ಕಸರಿಗೆ ಶತ್ರುವಾದ, ರಾಮಂ ಶ್ರೀರಾಮನನ್ನು, ಜಹಿ-ಜೈಸು॥೧೪॥ ॥ತ್ವಂ-ನೀನು, ಅದ್ಯ-ಈಗ, ಮಮ-ನನಗೆ, ಅಮಿತ್ರಂ-ಶತ್ರುವಾದ, ರಾಮಂ-ಶ್ರೀರಾಮನನ್ನು, ನವಧಿಷ್ಯಸಿಯದಿ-ಹೊಡೆಯದೇಹೋದರೆ. ನಿರಪತ್ರಪಾ-ನಾಚಿಕೆಯಿಲ್ಲದವಳಾಗಿ, ತವಚ-ನಿನ್ನ, ಅಗ್ರತಏವ-ಮುಂದುಗಡೇಲೆ, ಪ್ರಾಣಾನ್-ಪ್ರಾಣಗಳನ್ನು, ತ್ಯಕ್ಷ್ಯಾಮಿ-ಬಿಡುವೇನೆಂದು ಯೋಚಿಸುತ್ತೇನೆ, ತ್ವಂ-ನೀನು, ಸಬಲಶ್ಚ-ಸೈನ್ಯಸಮೇತನಾದರೂ, ಸಂಯುಗೇ-ಕಾಳಗದಲ್ಲಿ, ಮಹಾತ್ಮನಃ-ಮಹಾ ಧೈರ್ಯಶಾಲಿ

---

ಕೊಂಡು ಕೋಪಗೊಂಡ ಆ ರಕ್ಕಸರೆಲ್ಲರೂ ಶ್ರೀರಾಮನಿಂದ ಮರ್ಮಸ್ಥಾನಗಳಂ ಭೇದಿಸುವ ಬಾಣಂಗಳಿಂದ ಯುದ್ಧದಲ್ಲಿ ಸಂಹರಿಸಲ್ಪಟ್ಟರು ॥೯॥ ಕ್ಷಣಮಾತ್ರದಲ್ಲಿ ಮಹಾ ಬಲವಂತರಾದ, ಭೂಮಿಯಲ್ಲಿ ಬಿದ್ದಿರುವ ರಕ್ಕಸರನ್ನೂ, ಶ್ರೀರಾಮನ ಅದ್ಭುತವ್ಯಾಪಾರವನ್ನೂ ನೋಡಿ ನನಗೆ ಬಹಳ ಭೀತಿಯುಂಟಾಯಿತು ॥೧೦॥ ಎಲೈ ರಾಕ್ಷಸನೇ! ನಾನು ಹೆದರಿದವಳೂ, ವ್ಯಸನಗೊಂಡವಳೂ ಆಗಿದ್ದೇನೆ. ಸರ್ವಪ್ರದೇಶಗಳಲ್ಲಿಯೂ ಭಯವನ್ನೇ ಕಾಣುತ್ತಿರುವವಳಾಗಿ ನಿನ್ನನ್ನು ಶರಣುಹೊಂದಿದ್ದೇನೆ. ದುಃಖವೆಂಬ ನೆಗಳಿನಿಂದ ಅಧಿಷ್ಠಿಸಲ್ಪಟ್ಟ, ಭಯವೆಂಬ ತೆರೆಗಳ ಪಂಕ್ತಿಯುಳ್ಳ, ವಿಸ್ತಾರವಾದ ಶೋಕಸಾಗರದಲ್ಲಿ ಮುಳುಗಿದ ನನ್ನನ್ನು ರಕ್ಷಿಸುವದಿಲ್ಲವೋ ಏನು? ॥೧೨॥ ಮಾಂಸಾಹಾರಿಗಳಾದ ಯಾವ ರಾಕ್ಷಸರು ನನ್ನ ಮಾರ್ಗದಲ್ಲಿರುವರೋ, ಅವರುಗಳು ಶ್ರೀರಾಮನಿಂದ ಹೊಡೆಯಲ್ಪಟ್ಟರಾದಕಾರಣ ನಿನಗೆ ನನ್ನಲ್ಲಿಯೂ, ಆ ರಾಕ್ಷಸರಲ್ಲಿಯೂ ಸಹಾ ದಯೆಯುಂಟಾಗಿದ್ದರೆ; ಶ್ರೀರಾಮನ ಸಂಗಡ ಯುದ್ಧವಂ ಗೈಯ್ಯುವದಕ್ಕೆ ಶಕ್ತಿಯೂ ಇದ್ದಲ್ಲಿ, ದಂಡಕಾರಣ್ಯದಲ್ಲಿ ವಾಸವಂ ಗೈಯ್ಯುವ ಆ ಶ್ರೀರಾಮನನ್ನು ಜಯಿಸುವವನಾಗು. ॥೧೪॥ ನೀನೀಗಲೇ ಆ ಶ್ರೀರಾಮನನ್ನು ಸಂಹರಿಸಬೇಕು; ಇಲ್ಲದಿದ್ದರೆ ನಾನು ನಾಚಿಕೆಯಿಲ್ಲದೆ ನಿನ್ನೆದುರಾಗಿಯೇ ಪ್ರಾಣಂಗಳಂ ಬಿಡುವೆನು ॥೧೫॥ ನೀನು ಸೈನ್ಯಸಮೇತನಾಗಿದ್ದರೂ, ಮಹಾ ಧೈರ್ಯಶಾಲಿಯಾದ ಆ ಶ್ರೀರಾಮನ ಮುಂದುಗಡೆಯಲ್ಲಿ ನಿಲ್ಲುವದಕ್ಕೆ ನಿನಗೆ ಶಕ್ತಿಯಿಲ್ಲವೆಂದು ನಾನು ಯೋಚಿಸುತ್ತೇನೆ.

ಮಲಕ್ಷ್ಮಣೌ ॥೧೭॥ ರಾಮೇಣಯದಿತೇಶಕ್ತಿಸ್ತೇಜೋವಾಸ್ತಿನಿಶಾಚರ ॥ ದಂಡಕಾರಣ್ಯನಿಲಯಂಜಹಿತಂಕುಲಪಾಂಸನ ॥೧೮॥ ನಿಸ್ಸತ್ವಸ್ಯಾಲ್ಪವೀರ್ಯಸ್ಯವಾಸಸ್ತೇಕೀದೃಶಸ್ತ್ವಿಹ । ಅಪಯಾಹಿಜನಸ್ಥಾನಾತ್ತ್ವರಿತಸ್ಸಹಬಾಂಧವಃ ॥೧೯॥ ರಾಮತೇಜೋಭಿಭೂತೋಹಿತ್ವಂಕ್ಷಿಪ್ರಂವಿನಶಿಷ್ಯಸಿ । ಸಹಿತೇಜಸ್ಸಮಾಯುಕ್ತೋರಾಮೋದಶರಥಾತ್ಮಜಃ ॥ ಭ್ರಾತಾಚಾಸ್ಯಮಹಾವೀರ್ಯೋಯೇನಚಾಸ್ಮಿವಿರೂಪಿತಾ ॥೨೦॥ ಏವಂವಿಲಪ್ಯಬಹುಶೋರಾಕ್ಷಸೀಪ್ರಥಿತೋದರೀ (ಭ್ರಾ

ಯಾದ. ರಾಮಸ್ಯ-ಶ್ರೀರಾಮನಿಗೆ, ಪ್ರತಿಮುಖೇ-ಯದುರಾಗಿ, ಸ್ಥಾತುಂ-ನಿಲ್ಲುವದಕ್ಕೋಸುಗ, ನಶಕ್ತಃ-ಸಮರ್ಥನಲ್ಲ ॥೧೬॥ ಹೇನಿಶಾಚರ-ಎಲೈ ರಾಕ್ಷಸನೇ, ಯೌ-ಯಾವ, ತ್ವಂ-ನೀನು, ಮಾನುಷೌ-ಮನುಷ್ಯರಾದ. ತೌರಾಮಲಕ್ಷ್ಮಣೌ-ಆ ಶ್ರೀರಾಮಲಕ್ಷ್ಮಣರನ್ನು, ಹಂತುಂ-ಹೊಡಿಯುವದಕ್ಕೆ, ನಶಕ್ನೋಷಿ-ಸಮರ್ಥನಾಗಲಾರೆಯೋ ಸತ್ವಂ-ಆ ನೀನು, ಶೂರಮಾನೀ-ನಿನ್ನನ್ನು ಶೂರನನ್ನಾಗಿ ನೀನೇ ತಿಳಿದುಕೊಂಡಿದ್ದೀ,ತ್ವಂ-ನೀನು, ಶೂರಃ-ಶೂರನು. ನ-ಅಲ್ಲ, ಮಿಥ್ಯಾರೋಪಿತವಿಕ್ರಮಃ-ಸುಳ್ಳಾಗಿ ಆರೋಪಿಸಲ್ಪಟ್ಟ ಪರಾಕ್ರಮವುಳ್ಳವನು ॥೧೭॥ ಹೇಕುಲಪಾಂಸನ-ಎಲೈ ಕುಲದಲ್ಲಿ ನೀಚನೇ, ತೇ-ನಿನಗೆ, ರಾಮೇಣ-ಶ್ರೀರಾಮನೊಡನೆ, ಶಕ್ತಿಃ-ಸಾಮರ್ಥ್ಯವು. ತೇಜೋವಾ-ಅಂತರ್ಬಲವು, ಅಸ್ತಿಯದಿ-ಇದ್ದದ್ದೇ ಆದರೆ, ದಂಡಕಾರಣ್ಯನಿಲಯಂ-ದಂಡಕಾರಣ್ಯವೇ ವಾಸವಾಗುಳ್ಳ, ತಂ-ಆ ಶ್ರೀರಾಮನನ್ನು,ಜಹಿ-ಹೊಡಿ (ರಾಮೇಣೇತ್ಯಾದಿಶ್ಲೋಕ ಚತುಷ್ಟಯಕ್ಕೂ,ಪದಪದಾರ್ಥ ಸ್ಪಷ್ಟವಾಯಿತು. ವಾಸ್ತವಿಕಾರ್ಥವಾದರೆ ಶೂರ್ಪನಖಾ-ಶೂರ್ಪನಖೆಯು, ರಾಮಂ-ಶ್ರೀರಾಮನನ್ನು, ನಜಹಿ-ಹೊಡಿಯಬ್ಯಾಡವೆಂದು ಖರನನ್ನು ಶಪೆಮಾಡುತ್ತಾಳೆ. ಹೇನಿಶಾಚರ-ಎಲೈ ರಾಕ್ಷಸನೇ. ರಾಮೇಣ-ರಾಮನೊಡನೆ, ತೇ-ನಿನಗೆ, ಶಕ್ತಿಃ-ಸಾಮರ್ಥ್ಯವು, ತೇಜೋವಾ-ಪರಾಕ್ರಮವು, ಯದ್ಯಸ್ತಿ-ಹ್ಯಾಗಾದರೂ ಇದ್ದೀತು, ತಥಾಪಿ-ಹಾಗಾದರೂ ಶತ್ರುಸಂಹಾರಕನಾದ ರಾಮನನ್ನು ನೀನು ಹೊಡಿಯಬ್ಯಾಡ, ಯದಿಹನಿಷ್ಯಸಿ-ಹೊಡಿಯುವವನೇ ಆದರೆ, ತವ-ನಿನ್ನ. ಅಗ್ರತಃ-ಮುಂದುಗಡೆ, ಪ್ರಾಣಾನ್-ಪ್ರಾಣಗಳನ್ನು ಬಿಡುತ್ತೇನೆ, ವಿಮರ್ಶೆಮಾಡಲಾಗಿ ಅವರಿಬ್ಬರನ್ನು ಹೊಡಿಯುವದರಲ್ಲಿ ನಿನಗೆ ಸಾಮರ್ಥ್ಯವುಯಿಲ್ಲಾ. ಕಾಳಗದಲ್ಲಿ ಶ್ರೀರಾಮನಿಗೆ ಯೆದುರಾಗಿ ನಿಲ್ಲುವದಕ್ಕು ಕೂಡಾ ನಿನಿಗೆ ಶಕ್ತಿಯಿಲ್ಲವೆಂದು ಆಲೋಚಿಸಿಧೇನೆ, ನೀನು ಶೂರನಲ್ಲಾ ಮನುಷ್ಯರನ್ನೂ ಕೂಡಾ ಹೊಡಿಯುವದಕ್ಕೆ ನಿನಿಗೆ ಶಕ್ತಿಯುಯೆಲ್ಲಿ, ದಂಡಕಾರಣ್ಯವ ಬಿಟ್ಟು ನೀನು ಯೆಲ್ಲ್ಯಾದರೂ, ಹೊರಟುಹೋಗೆಂದು ತಾತ್ಪರ್ಯವು) ॥೧೮॥ ನಿಸ್ಸತ್ವಸ್ಯ-ಸಾಮರ್ಥ್ಯವಿಲ್ಲದಿರುವ, ಅಲ್ಪವೀರ್ಯಸ್ಯ-ಸ್ವಲ್ಪವಾದ ಸಾಮರ್ಥ್ಯವುಳ್ಳ, ತೇ-ನಿನಗೆ, ಇಹ-ಇಲ್ಲಿ, ವಾಸಃ-ವಾಸವು, ಕೀದೃಶಃ-ಇಂಥಾದ್ದು, ತ್ವರಿತಃ-ಜಾಗರೂಕನಾಗಿ. ಸಹಬಾಂಧವಃ-ಬಂಧುಗಳಿಂದೊಡಗೂಡಿದವನಾಗಿ. ಜನಸ್ಥಾನಾತ್-ಉಕ್ಕಟದ ದೇಶದಿಂದ, ಅಪಯಾಹಿ-ಹೊರಟುಹೋಗು ॥೧೯॥ ತ್ವಂ-ನೀನು. ರಾಮತೇಜೋಭಿಭೂತಃ-ಶ್ರೀರಾಮನ ತೇಜಸ್ಸಿನಿಂದ ತಿರಸ್ಕರಿಸಲ್ಪಟ್ಟವನಾಗಿ, ಕ್ಷಿಪ್ರಂ-ಜಾಗ್ರತೆಯಾಗಿ, ವಿನಶಿಷ್ಯಸಿಹಿ-ನಶಿಸಿಹೋಗುವಿ, ದಶರಥಾತ್ಮಜಃ-ದಶರಥನಕುವರನಾದ, ಸರಾಮಃ-ಆ ಶ್ರೀರಾಮನು, ತೇಜಸ್ಸಮಾಯುಕ್ತಃ-ಪರಾಕ್ರಮದಿಂಕೂಡಿದವನು, ಯೇನ-ಯಾವ ಲಕ್ಷ್ಮಣನಿಂದ, ವಿರೂಪಿತಾ-ಕುರೂಪಿಯಾಗಿ ಮಾಡಲ್ಪಟ್ಟವಳಾ, ಅಸ್ಮಿ-ಆಗಿಧೇನೆ, ಸಃ-ಅಂಥಾವನಾದ, ಅಸ್ಯ-ಈಶ್ರೀರಾಮನಿಗೆ, ಭ್ರಾತಾ-ತಮ್ಮನಾದ, ಲಕ್ಷ್ಮಣಃ-ಲಕ್ಷ್ಮಣನು, ಮಹಾವೀರ್ಯಃ-ಬಹಳ ಸಾಮರ್ಥ್ಯವಂತನು ॥೨೦॥ ಏವಂ-ಈಪರಿಯಾಗಿ, ಬಹುಶಃ-

॥೧೭॥ ಎಲೈ ರಾಕ್ಷಸನೇ! ಯಾವನೀನು ಮನುಷ್ಯರಾದ ಆ ರಾಮಲಕ್ಷ್ಮಣರನ್ನು ಹೊಡಿಯುವದಕ್ಕೆ ಅಸಮರ್ಥನೋ, ಅಂಥಾನೀನು ಶೂರನೆಂದು ಯಾಕೆ ತಿಳಿದುಕೊಂಡಿದ್ದೀ? ನೀನೆಷ್ಟುಮಾತ್ರವೂ ಶೂರನಲ್ಲ; ಅಸತ್ಯವಾಗಿ ಆರೋಪಿಸಲ್ಪಟ್ಟ ಪರಾಕ್ರಮವುಳ್ಳವನು. ಎಲೈ ಕುಲನಾಶಕನೇ! ಶ್ರೀರಾಮನ ಸಂಗಡ ಕಾಳಗವಂ ಗೈಯ್ಯುವದಕ್ಕೆ ನಿನಗೆ ಶಕ್ತಿಯೂ, ಅಂತರ್ಬಲವೂ ಸಹಾ ಇದ್ದದ್ದಾದರೆ, ದಂಡಕಾರಣ್ಯವಾಸಿಯಾದ ಆ ರಾಮನನ್ನು ಹೊಡಿಯುವವನಾಗು,, [ತತ್ವಾಭಿಪ್ರಾಯವೇನಂದರೆ,-ಶೂರ್ಪನಖಿಯುಖರಾಸುರನಂ ಕುರಿತು ಎಲೈ ರಾಕ್ಷಸನೇ!ನೀನು ಶ್ರೀರಾಮನ ಸಂಗಡಯುದ್ಧವಂಗೈಯ್ಯುವದಕ್ಕೆ ನಿನಗೆ ಸಾಮರ್ಥ್ಯವೂ ಪರಾಕ್ರಮವೂ ಸಹಾ ಯಿದ್ದರೂಶತ್ರುಸಂಹಾರಕನಾದ, ಆ ಶ್ರೀರಾಮನನ್ನು ಹೊಡೆಯಬ್ಯಾಡ; ಒಂದುವ್ಯಾಳೆ ನೀನು ಆತನ ಸಂಹಾರವಂ ಗೈದರೆ ನಾನು ನಿನ್ನಮುಂದೆ ಪ್ರಾಣಂಗಳಂ ಬಿಡುವೆನು. ಯಾಕಂದರೆ,—ಅವರೀರ್ವರ ಸಂಗಡ ಕಾಳಗವಂ ಗೈಯ್ಯುವದಕ್ಕೂ ಎದುರಾಗಿ ನಿಲ್ಲುವದಕ್ಕೂ ಸಹಾ ನಿನಗೆ ಸಾಮರ್ಥ್ಯವಿಲ್ಲವೆಂದೆಣಿಸುತ್ತೇನೆ. ನೀನು ಶೂರನಲ್ಲ, ಮನುಷ್ಯರನ್ನೂ ಕೂಡ ಕೊಲ್ಲುವದಕ್ಕೆ ಶಕ್ತಿಯಿಲ್ಲದ ನೀನು ಈ ದಂಡಕಾರಣ್ಯವಂ ಬಿಟ್ಟು ಯೆಲ್ಲಿ ಯಾದರೂ ಒಂದುಕಡೆಯಲ್ಲಿ ಔತುಕೊಂಡವನಾಗಿರೆಂಬ ಭಾವವು] ।೧೮। ಸಾಮರ್ಥ್ಯವಿಲ್ಲದವನಾಗಿಯೂ ಅಲ್ಪ ವೀರ್ಯನಾಗಿಯೂ ಇರುವ ನೀನು ಈ ಪ್ರದೇಶದಲ್ಲಿರಬಾರದು, ಬಂಧುಗಳೊಡನೆ ಬಹು ಜಾಗರೂಕನಾಗಿ ಈ ಸ್ಥಳದಿಂದ ಮತ್ತೊಂದು ಪ್ರದೇಶಕ್ಕೆ ಹೊರಡುವವನಾಗು, ನೀನಿಲ್ಲಿಯೇ ಇದ್ದವನಾದರೆ ಶ್ರೀರಾಮನ ತೇಜಸ್ಸಿನಿಂದತಿರಸ್ಕರಿಸಲ್ಪಟ್ಟವನಾಗಿತ್ವರೆಯಿಂದನಾಶವನ್ನೈದುವವನಾಗುವೆ. ದಶರಥಪುತ್ರನಾದ ಆ ಶ್ರೀರಾಮನು ಮಹಾ ಪರಾಕ್ರಮಶಾಲಿಯು,ನನ್ನ ಕರ್ಣನಾಸಾಛೇದನವಂ ಗೈದ, ಆ ಶ್ರೀರಾಮನ ತಮ್ಮನಾದ ಲಕ್ಷ್ಮಣನೂ ಸಹಾ ಬಹು ಸಮರ್ಥನು, ಎಂದೀರೀತಿಯಾ

ಭ್ರಾತುಸ್ಸಮೀಪೇದುಃಖಾರ್ತಾನಷ್ಟಸಂಜ್ಞಾಬಭೂವಹ ) ಕರಾಭ್ಯಾಮುದರಂಹತ್ವಾರುರೋದಭೃಶದುಃಖಿತಾ ॥೨೦॥

—*** ಇತಿಶ್ರೀಮದಾರಣ್ಯಕಾಂಡೇ-ಏಕವಿಂಶಸ್ಸರ್ಗಃ. ***—

ಏವಮಾಧರ್ಷಿತಶ್ಶೂರಶ್ಶೂರ್ಪಣಖ್ಯಾಖರಸ್ತದಾ । ಉವಾಚರಕ್ಷಸಾಂಮಧ್ಯೇಖರಃಖರತರಂವಚಃ ॥೧॥ ತವಾ
ಪಮಾನಪ್ರಭವಃಕ್ರೋಧೋಯಮತುಲೋಮಮ । ನಶಕ್ಯತೇಧಾರಯಿತುಂಲವಣಾಂಭಇವೋತ್ಥಿತಂ ॥೨॥ ನರಾಮಂ
ಗಣಯೇವೀರ್ಯಾನ್ಮಾನುಷಂಕ್ಷೀಣಜೀವಿತಂ । ಆತ್ಮದುಶ್ಚರಿತೈಃಪ್ರಾಣಾನ್ಹತೋಯೋದ್ಯವಿಮೋಕ್ಷ್ಯತಿ ॥೩॥ ಬಾಷ್ಪ
ಸ್ಸಂಹ್ರಿಯತಾಮೇಷಸ್ಸಂಭ್ರಮಶ್ಚವಿಮುಚ್ಯತಾಂ । ಅಹಂರಾಮಂಸಹಭ್ರಾತ್ರಾನಯಾಮಿಯಮಸಾದನಂ ॥೪॥ ಪ
ರಶ್ವಧಹತಸ್ಯಾದ್ಯಮಂದಪ್ರಾಣಸ್ಯಸಂಯುಗೇ । ರಾಮಸ್ಯರುಧಿರಂರಕ್ತಮುಷ್ಣಂಪಾಸ್ಯಸಿರಾಕ್ಷಸಿ ॥೫॥ ಸಾಪ್ರಹೃ

---

ಬಹಳವಾಗಿ, ವಿಲಪ್ಯ-ಶೋಕಿಸಿ, ವಿತತೋದರೀ-ವಿಸ್ತಾರವಾದ ಉದರವುಳ್ಳ. ರಾಕ್ಷಸೀ-ಶೂರ್ಪಣಖೆಯು, ಕರಾಭ್ಯಾಂ-ಹಸ್ತಗಳಿಂದ, ಉದರಂ-ಹೊ
ಟ್ಟೆಯನ್ನು, ಹತ್ವಾ-ಹೊಡೆದುಕೊಂಡು, ಭೃಶದುಃಖಿತಾ-ಬಹಳ ದುಃಖಗೊಂಡವಳಾಗಿ, ರುರೋದ-ಅಳುತ್ತಿದ್ದಳು ॥೨೦॥—*ಏಕವಿಂಶಸ್ಸರ್ಗಃ*—
ಏವಂ-ಈಪರಿಯಾಗಿ, ಶೂರ್ಪಣಖ್ಯಾ-ಶೂರ್ಪಣಖಿಯಿಂದ. ಆಧರ್ಷಿತಃ-ತಿರಸ್ಕರಿಸಲ್ಪಟ್ಟ. ಶೂರಃ-ಶೂರನಾದ, ಖರಃ-ಖರಾಸುರನು. ತ
ದಾ-ಆಕಾಲದಲ್ಲಿ, ರಕ್ಷಸಾಂ-ರಾಕ್ಷಸರ, ಮಧ್ಯೇ-ಮಧ್ಯಪ್ರದೇಶದಲ್ಲಿ, ಖರಃ-ಕ್ರೂರನಾಗಿ, ಖರತರಂ-ಅತಿಕ್ರೂರವಾದ, ವಚಃ-ಮಾತನ್ನು. ಉವಾ
ಚ-ಹೇಳಿದನು ॥೧॥ ತವ-ನಿನ್ನ, ಅಪಮಾನಪ್ರಭವಃ-ಅಪಮಾನಪ್ರಸ್ತಾಪವು, ಅತುಲಃ-ಸಾಟಿಯಿಲ್ಲದ. ಮಮ-ನನ್ನ, ಅಯಂಕ್ರೋಧಃ-ಈ
ಕೋಪವು, ಉತ್ಥಿತಂ-ಉಕ್ಕಿಬಂದ, ಲವಣಾಂಭಇವ-ಲವಣಸಮುದ್ರೋದಕದಂತೆ, ಧಾರಯಿತುಂ-ಧರಿಸುವದಕ್ಕೆ. ನಶಕ್ಯತೇ-ಸಮರ್ಥನಾಗಲಾರೆನು ॥೨॥
ಯಃ-ಯಾವ ಶ್ರೀರಾಮನು, ಅದ್ಯ-ಈಗಲೇ. ಆತ್ಮದುಶ್ಚರಿತೈಃ-ತನ್ನ ದುರ್ವ್ಯಾಪಾರಗಳಿಂದಲೇ. ಹತಃ-ಕೊಲೆಯುಳ್ಳವನಾಗಿ, ಪ್ರಾಣಾನ್-
ಪ್ರಾಣಗಳನ್ನು, ವಿಮೋಕ್ಷ್ಯತಿ-ಬಿಡುವನೋ, ಮಾನುಷಂ-ಮನುಷ್ಯನಾದ, ಕ್ಷೀಣಜೀವಿತಂ-ಕ್ಷಣಕಾಲದಲ್ಲಿ ಬದುಕಿರುವ. ತಂರಾಮಂ-ಅಂಥಾ ಶ್ರೀರಾ
ಮನನ್ನು. ವೀರ್ಯಾತ್-ಪರಾಕ್ರಮದದೆಸೆಯಿಂದ. ನಗಣಯೇ-ಎಣಿಸಲಾರೆನು ॥೩॥ ಏಷಃಬಾಷ್ಪಃ-ಈ ಕಂಬನಿಯು, ಸಂಹ್ರಿಯತಾಂ-ವರಸಿಕೊ
ಳ್ಳಲ್ಪಡಲಿ, ಸಂಭ್ರಮಶ್ಚ-ಕೋಪವೂ, ವಿಮುಚ್ಯತಾಂ-ಬಿಡಲ್ಪಡಲೀ, ಅಹಂ-ನಾನು. ರಾಮಂ-ಶ್ರೀರಾಮನನ್ನು, ಭ್ರಾತ್ರಾಸಹ-ತಮ್ಮನೊಡಗೂಡ.
ಯಮಸಾದನಂ-ಯಮನಮನೆಯಂಕುರಿತು, ನಯಾಮಿ-ಹೊಂದುತ್ತೇನೆ ॥೪॥ ಹೇರಾಕ್ಷಸಿ-ಎಲೆ ರಾಕ್ಷಸಿಯೇ. ಅದ್ಯ-ಈಗ, ಸಂಯುಗೇ-ಕಾಳಗ
ದಲ್ಲಿ, ಪರಶ್ವಧಹತಸ್ಯ-ಗೊಡ್ಲಿಯಿಂದ ಕೊಲ್ಲಲ್ಪಟ್ಟ, ಮಂದಪ್ರಾಣಸ್ಯ-ಸ್ವಲ್ಪಪ್ರಾಣವುಳ್ಳ. ರಾಮಸ್ಯ-ಶ್ರೀರಾಮನ, ಉಷ್ಣಂ-ಬಿಸಿಯಾಗಿರುವ
ರಕ್ತಂ-ಕೆಂಪಾಗಿರುವ, ರುಧಿರಂ-ರಕುತವನ್ನು. ಪಾಸ್ಯಸಿ-ಕುಡಿಯುತ್ತೀಯೆ ॥೫॥ (ತವಾಪಮಾನಪ್ರಭವಃ-ಎಂಬ ಶ್ಲೋಕವು ಮೊದಲ್ಗೊಂಡು ನಾಲ್ಕು

---

ಗಿ ಬಹಳ ಪ್ರಲಾಪಮಂ ಗೈಯ್ಯುತ್ತಾ ಆ ಶೂರ್ಪಣಖೆಯು ಹಸ್ತಂಗಳಿಂದ ಎದೆಯಂ ಕುಟ್ಟಿಕೊಂಡು ಬಹು ದುಃ
ಖಿಸುತ್ತಾ ಘಟ್ಟಿಯಾಗಿ ಅಳುತ್ತಿದ್ದಳು ॥೨೦॥ —* ಆರಣ್ಯಕಾಂಡದಲ್ಲಿನ ೨೦ನೆಯ ಸರ್ಗಂ ಮುಗಿದುದು *—

ಈರೀತಿಯಾಗಿ ಆ ಶೂರ್ಪನಖಿಯಿಂದ, ದೂಷಿಸಲ್ಪಟ್ಟ ಮಹಾ ಶೂರನಾದ ಆ ಖರಾಸುರನು ಆ ಸಮ
ಯದಲ್ಲಿ, ರಕ್ಕಸರ ಮಧ್ಯದಲ್ಲಿ ಬಹು ಕೋಪಮುಳ್ಳವನಾಗಿ, ಅತಿಕ್ರೂರವಾಗಿ ನುಡಿದನದೆಂತೆನೆ;— ಎಲೌಶೂರ್ಪ
ನಖಿಯೇ! ನೀನು ಮಾಡಿದಈ ಅವಮಾನವು ಅಸದೃಶವಾದದ್ದು. ನನಗೀಗ ಸಮುದ್ರದಜಲದಂತೆ ಉಕ್ಕಿ ಬರುತ್ತಿ
ರುವ ಈ ಕ್ರೋಧವನ್ನು ನಾನು ಸೈರಿಸಲಾರೆನು. ಯಾವ ಶ್ರೀರಾಮನು ಈಗ ತನ್ನ ದುರ್ವ್ಯಾಪಾರಗಳಿಂದ
ತಾನೇ ಹತನಾಗಿ ಪ್ರಾಣಂಗಳಂ ಬಿಡುವನೋ; ಕ್ಷಣಮಾತ್ರವು ಬದುಕುವ ಮನುಷ್ಯಮಾತ್ರನಾದ ಆ ಶ್ರೀರಾಮನ
ನ್ನು ನಾನೆನ್ನ ಪರಾಕ್ರಮದಿಂದ ಯೆಣಿಸಲಾರೆನು. ಯಾಕೆ ಅಳುತ್ತಿರುವಿ? ಈ ಕೋಪವಂ ಬಿಡುವವಳಾಗು;
ತಮ್ಮನಿಂದೊಡಗೂಡಿದ ಆ ರಾಮನನ್ನು ಯಮಮಂದಿರವಂ ಶೇರಿಸುವೆನು. ॥೪॥ ಕೇಳೆಲೌ ರಕ್ಕಸಿಯೇ! ಈಗ
ಕಾಳಗದಲ್ಲಿ ಪರಶ್ವಧಾಯುಧದಿಂದ ಮಂದವಾದ ಪ್ರಾಣಗಳುಳ್ಳ, ಆ ರಾಮನ ಬಿಸಿಯಾಗಿರುವ ರಕ್ತವನ್ನು
ನೀನು ಪಾನಮಾಡುವವಳಾಗುವೆ. [ವಾಸ್ತವಾಭಿಪ್ರಾಯವೇನೆಂದರೆ;—ಎಲೌ ಸೂರ್ಪನಖಿಯೇ! ನೀನು ಮಾಡಿದ
ಅವಮಾನದಿಂದುಂಟಾದ ರೋಷವನ್ನು ನಾನು ಧರಿಸಲಾರೆನು. ಮನುಷ್ಯನಾದ ಆ ಶ್ರೀರಾಮನನ್ನು ಯನ್ನ
ಶೌರ್ಯದಿಂದ ಕ್ಷಣಿಕಕಾಲಿಕವಾದ ಜೀವವುಳ್ಳವನನ್ನಾಗಿಯೂ ಎಣಿಸಲಾರೆನು. ಅಂದರೆ;—ಆತನು ಶಾಶ್ವತನಾದವನು
ಆತನಂ ಜಯಿಸಲು ನಾನು ಸಮರ್ಥನಲ್ಲ: ಆ ಶ್ರೀರಾಮನೇ ನನ್ನನ್ನು ಕೊಲ್ಲುವವನಾದಕಾರಣ ನನ್ನ ದುರ್ವ್ಯಾ
ಪಾರಗಳಿಂದ ಶುಭರೂಪವಾದ ಸರ್ವಸಮೃದ್ಧಿಯೂ ಇಂದಿಗೆ ನಾಶವಾಯಿತು. ನಿನ್ನ ನಿಮಿತ್ತವಾಗಿ ನನ್ನೈಶ್ವರ್ಯ
ವು ಕ್ಷಣಿಕವಾಯಿತು, ಇತಃಪರ ನೀನು ಕಂಬನಿಗಳಂ ಸುರಿಸಬ್ಯಾಡ, ಈ ಕೋಪವನ್ನು ಬಿಡುವವಳಾಗು, ನಾನೂ

ಷ್ಟಾವಚಶ್ಶ್ರುತ್ವಾ ಖರಸ್ಯೈವದನಾಚ್ಚ್ಯುತಂ । ಪ್ರಶಶಂಸಪುನರ್ಮೌರ್ಖ್ಯಾದ್ಭ್ರಾತರಂರಕ್ಷಸಾಂವರಂ ।೬। ತಯಾಪರುಷಿತಃಪೂರ್ವಂಪುನರೇವಪ್ರಶಂಸಿತಃ। ಅಬ್ರವೀದ್ದೂಷಣಂನಾಮಖರಸ್ಸೇನಾಪತಿಂತದಾ ।೭। ಚತುರ್ದಶಸಹಸ್ರಾಣಿಮಮಚಿತ್ತಾನುವರ್ತಿನಾಂ। ರಕ್ಷಸಾಂಭೀಮವೇಗಾನಾಂಸಮರೇಷ್ವನಿವರ್ತಿನಾಂ।ನೀಲಜೀಮೂತವರ್ಣಾನಾಂಘೋರಾಣಾಂಕ್ರೂರಕರ್ಮಣಾಂ। ಲೋಕಹಿಂಸಾವಿಹಾರಾಣಾಂಬಲಿನಾಮುಗ್ರತೇಜಸಾಂ। ತೇಷಾಂಶಾರ್ದೂಲದರ್ಪಾಣಾಂಮಹಾಸ್ಯಾನಾಂಮಹೌಜಸಾಂ । ಸರ್ವೋದ್ಯೋಗಮುದೀರ್ಣಾನಾಂರಕ್ಷಸಾಂಸೌಮ್ಯಕಾರಯ ॥೧೦। ಉಪಸ್ಥಾಪಯಮೇಕ್ಷಿಪ್ರಂರಥಂಸೌಮ್ಯಧನೂಂಷಿಚ । ಶರಾಂಶ್ಚಿತ್ರಾಂಶ್ಚಖಡ್ಗಾಂಶ್ಚಶಕ್ತೀಶ್ಚವಿವಿಧಾಶ್ಶಿತಾಃ ।೧೧। ಅಗ್ರೇನಿ

ಶ್ಲೋಕಗಳಿಗೆ ವಾಸ್ತವಿಕಾರ್ಥವೇನಂದರೆ ನಿನ್ನಸಂಬಂಧವಾದ ಅವಮಾನದಿಂ ಉತ್ಪನ್ನವಾದ ಕ್ರೋಧವು ನನಗೆ ಧರಿಸುವದಕ್ಕೆ ಅಶಕ್ಯವಾಗಿದೆ. ಆ ಮನುಷ್ಯನಾದ ಶ್ರೀರಾಮನನ್ನು ನನ್ನ ಶೌರ್ಯದಿಂ ಕ್ಷಣಿಕವಾದ ಜೀವಿತನನ್ನಾಗಿ ಎಣಿಸಲಾರೆನು. ಅಂದರೆ ಅವನು ಶಾಶ್ವತನಾಗಿರುತ್ತಾನೆ ಅವನನ್ನು ನಾನು ಜಯಿಸಲೂ ಸಮರ್ಥನಲ್ಲ. ಆ ರಾಮನೇ ನನ್ನನ್ನು ಕೊಲ್ಲುತ್ತಾನೆ ಈ ಕಾರಣದಿಂ ನನ್ನ ದುರ್ವ್ಯಾಪಾರಗಳಿಂದಲೇ ಈಗಲೇ ಶುಭಾವಹವಿಧಿರೂಪವಾದ ಸಮೃದ್ಧಿಯು ಹತವಾಯಿತು. ನಿನ್ನನಿಮಿತ್ತವಾಗಿ ನನ್ನ ಐಶ್ವರ್ಯವು ಕ್ಷಣಜೀವಿತವಾಯಿತು, ಯಿಕ್ಕಿಪರರ್ಕಣ್ಣೀರು ಹಾಕಬ್ಯಾಡ ಕೋಪವನ್ನೂ ಮಾಡಬ್ಯಾಡ ನಾನು ನಮ್ಮ ತಮ್ಮಂದಿರಸಹ ಶ್ರೀರಾಮನಂಕುರಿತು ಹೋಗಿ, ಯಮನ ಮನೆಯಂಕುರಿತು ಹೋಗುತ್ತೇವೆ, ಸಂದೇಹವಿಲ್ಲವೆಂದು ತಾತ್ಪರ್ಯವು ॥೫॥ ಸಾ-ಆ ಶೂರ್ಪನಖಿಯು, ಖರಸ್ಯ-ಖರನ, ವದನಾತ್-ಮುಖದದೆಶೆಯಿಂದ, ಚ್ಯುತಂ-ಹೊರಟಬಂದ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಪ್ರಹೃಷ್ಟಾ-ಸಂತೋಷಗೊಂಡವಳಾಗಿ, ಮೌರ್ಖ್ಯಾತ್-ಮೂಢಭಾವದದೆಶೆಯಿಂದ ರಕ್ಷಸಾಂ-ರಕ್ಕಸರೊಳಗೆ, ವರಂ-ಶ್ರೇಷ್ಠನಾದ. ಭ್ರಾತರಂ-ಅಣ್ಣನನ್ನು, ಪುನಃ-ಮತ್ತು, ಪ್ರಶಶಂಸ-ಶ್ಲಾಘಿಸಿದಳು ॥೬॥ ತಯಾ-ಆ ಶೂರ್ಪನಖಿಯಿಂದ, ಪೂರ್ವಂ-ಮೊದಲು, ಪರುಷಿತಃ-ದೂಷಿಸಲ್ಪಟ್ಟವನಾಗಿ. ಪುನರೇವ-ಮತ್ತೂ, ಪ್ರಶಂಸಿತಃ-ಶ್ಲಾಘಿಸಲ್ಪಟ್ಟವನಾಗಿ, ಖರಃ-ಖರಾಸುರನು, ತದಾ-ತತ್ಕ್ಷಣದಲ್ಲಿ, ಸೇನಾಪತಿಂ-ಸೈನ್ಯಕ್ಕೆ ಅಧಿಪತಿಯಾದ, ದೂಷಣಂನಾಮ-ದೂಷಣನೆಂದು ಪ್ರಸಿದ್ಧನಾದ ತಮ್ಮನಂಕುರಿತು, ಅಬ್ರವೀತ್-ನುಡಿದನು ॥೭॥ ಹೇಸೌಮ್ಯ-ಎಲೋ ಸೌಮ್ಯನೇ, ಮಮ-ನನ್ನ, ಚಿತ್ತಾನುವರ್ತಿನಾಂ-ಮನವನ್ನು ಅನುಸರಿಸುತ್ತಿರುವ, ರಕ್ಷಸಾಂ-ರಾಕ್ಷಸರಾದ. ಭೀಮವೇಗಾನಾಂ-ಭಯಂಕರವಾದ ಜವವುಳ್ಳ, ಸಮರೇಷು-ಕಾಳಗಗಳಲ್ಲಿ, ಅನಿವರ್ತಿನಾಂ-ಹಿಂದಕ್ಕೆ ತಿರುಗದಿರುವ, ನೀಲಜೀಮೂತವರ್ಣಾನಾಂ-ನೀಲಮೇಘದಂತೆ ಕಾಂತಿಯುಳ್ಳ. ಘೋರಾಣಾಂ-ಭಯಂಕರರಾದ, ಕ್ರೂರಕರ್ಮಣಾಂ-ಉಗ್ರವಾದ ವ್ಯಾಪಾರವುಳ್ಳ, ಲೋಕಹಿಂಸಾವಿಹಾರಾಣಾಂ-ಜನರಿಗೆ ಹಿಂಸೆಮಾಡುವದೇ ವಿಲಾಸವಾಗುಳ್ಳ, ಬಲಿನಾಂ-ಬಲವಂತರಾದ, ಉಗ್ರತೇಜಸಾಂ-ಭಯಂಕರವಾದ ಪರಾಕ್ರಮಗಳುಳ್ಳ, ತೇಷಾಂ-ಪ್ರಸಿದ್ಧರಾದ, ಶಾರ್ದೂಲದರ್ಪಾಣಾಂ-ವ್ಯಾಘ್ರದದರ್ಪದಂತೆ ದರ್ಪವುಳ್ಳ, ಮಹಾಸ್ಯಾನಾಂ-ಅಗಲವಾದ ಮುಖಗಳುಳ್ಳ, ಮಹೌಜಸಾಂ-ಮಹಾತೇಜಸ್ವಿಗಳಾದ ಉದೀರ್ಣಾನಾಂ-ಗರ್ವಿಷ್ಠರಾದ, ರಕ್ಷಸಾಂ-ರಾಕ್ಷಸರ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳನ್ನು, ಸರ್ವೋದ್ಯೋಗಂ-ಸಮಸ್ತ ಸಾಮಗ್ರಿಗಳಿಂದ ಪ್ರಯತ್ನವನ್ನು, ಕಾರಯ-ಮಾಡಿಸು ॥೧೦॥ ಹೇಸೌಮ್ಯ-ಎಲೆ ಸೌಮ್ಯನೇ, ಕ್ಷಿಪ್ರಂ-ಜಾಗ್ರತೆಯಾಗಿ. ಮೇ-ನನ್ನ, ರಥಂ-ತೇರನ್ನು. ಧನೂಂಷಿಚ-ಬಿಲ್ಲುಗಳನ್ನು, ಶರಾನ್ಶ್ಚ-ಬಾಣಗಳನ್ನು, ಚಿತ್ರಾಂಶ್ಚ-ನಾನಾಬಣ್ಣಗಳಾದ, ಖಡ್ಗಾಂಶ್ಚ-ಪಟ್ಟಾಕತ್ತಿಗಳನ್ನು. ವಿವಿಧಾಃ-ನಾನಾಬಗೆಗಳಾದ, ಶಿತಾಃ-ಹದವುಳ್ಳ. ಶಕ್ತೀಶ್ಚ-ಶಕ್ತ್ಯಾಯುಧಗಳನ್ನು. ಉಪಸ್ಥಾಪಯ-ತೆಗೆದುಕೊಂಡುಬಾ ॥೧೧॥ ಪೌಲಸ್ತ್ಯಾನಾಂ-ಪುಲಸ್ತ್ಯವಂಶೋದ್ಭವರಾದ, ಮಹಾತ್ಮನಾಂ-ಮಹಾಪ್ರಭಾವವಂತ

ನನ್ನ ಒಡಹುಟ್ಟಿದವರೂ ಸಹಾ ಆ ಶ್ರೀರಾಮನನ್ನೈದಿ, ಯಮಮಂದಿರವಂ ಸೇರುವೆವೆಂದು ತಾತ್ಪರ್ಯವು ] ॥೫। ಅನಂತರದಲ್ಲಿ ಆ ಶೂರ್ಪನಖಿಯು ಖರಾಸುರನು ನುಡಿದ ಈ ವಾಕ್ಯವಂ ಕೇಳಿ, ಸಂತೋಷಗೊಂಡವಳಾಗಿ, ಮೂಢಭಾವದಿಂದ ರಾಕ್ಷಸರಲ್ಲಿ ಉತ್ತಮನಾದ ಆ ಖರನನ್ನು ಪುನಃ ಶ್ಲಾಘಿಸಿದಳು॥೬। ಈ ರೀತಿಯಾಗಿ ಆ ಶೂರ್ಪನಖಿಯಿಂದ ಮೊದಲು ದೂಷಿಸಲ್ಪಟ್ಟವನಾಗಿ, ಪುನಃ ಶ್ಲಾಘಿಸಲ್ಪಟ್ಟವನಾಗಿಯೂ ಇರುವ ಖರಾಸುರನು ತತ್ಕ್ಷಣದಲ್ಲಿ ಸೇನಾಪತಿಯಾದ, ದೂಷಣನೆಂದು ಪ್ರಸಿದ್ಧನಾದ ತಮ್ಮನಂಕುರಿತು ನುಡಿವನದೆಂತೆನೆ,-- ॥೭। ಎಲೈಸೌಮ್ಯನೇ! ನನ್ನ ಮನವನ್ನನುಸರಿಸಿರುವ, ಬಹುವೇಗಶಾಲಿಗಳಾದ, ಕಾಳಗದಲ್ಲಿ ಹಿಂತಿರುಗದ, ಕಾಲಮೇಘದಂತೆ ಕಂಗೊಳಿಸುವ, ಕ್ರೂರವ್ಯಾಪಾರಿಗಳಾದ ಮಹಾ ಭಯಂಕರರಾದ, ಜನರಿಗೆ ಹಿಂಸೆಯಂ ಗೈಯುವದರಿಂದಲೇ ವಿಹರಿಸುತ್ತಿರುವ, ಬಹುಬಲವಂತರಾದ, ವ್ಯಾಘ್ರಂಗಳಂದದಿ ಗರ್ವಿಸಿರುವ, ಅಗಲವಾದ ಮುಖವುಳ್ಳ, ಬಹುತೇಜೋವಂತರಾದ, ಹದಿನಾಲ್ಕುಸಾವಿರ ಸಂಖ್ಯೆಯುಳ್ಳ ನಮ್ಮ ಸೈನ್ಯವನ್ನು ಯುದ್ಧಸನ್ನದ್ಧವಾಗಿ ಮಾಡಿಸುವವನಾಗು, ಮತ್ತು ನನ್ನ ರಥವನ್ನೂ, ಧನಸ್ಸುಗಳನ್ನೂ, ಬಾಣಂಗಳನ್ನೂ, ನಾನಾವಿಧವಾದ ಖಡ್ಗಂಗಳನ್ನೂ, ಅನೇಕಬಗೆಗಳಾದ ಶಕ್ತ್ಯಾಯುಧಗಳನ್ನೂ ಸಹಾ ತೆಗೆದುಕೊಂಡು ಬರುವವನಾಗು, ಎಲೈ ಕೋಪವಿಲ್ಲದವನೇ ಪುಲಸ್ತ್ಯವಂಶದಲ್ಲಿ ಪುಟ್ಟಿದ ಮಹಾಪ್ರಭಾವವಂತರಾದ ರಾಕ್ಷಸರೊಳಗೆ ಶ್ರೇಷ್ಠನಾದ ಮತ್ತು ಕಾಳಗವಂ ಗೈಯುವವನ

ರ್ಯಾತುಮಿಚ್ಛಾಮಿ ಪೌಲಸ್ತ್ಯಾನಾಂ ಮಹಾತ್ಮನಾಮ್ । ವಧಾರ್ಥಂ ದುರ್ವಿನೀತಸ್ಯ ರಾಮಸ್ಯ ರಣಕೋವಿದಃ ॥೧೦॥ ಇತಿ ತಸ್ಯ ಬ್ರುವಾಣಸ್ಯ ಸೂರ್ಯವರ್ಣಂ ಮಹಾರಥಮ್ । ಸದಶ್ವೈಶ್ಶಬಲೈರ್ಯುಕ್ತಮಾಚಚಕ್ಷೇಥ ದೂಷಣಃ ॥೧೧॥ ತಂ ಮೇರುಶಿಖರಾಕಾರಂ ತಪ್ತಕಾಂಚನಭೂಷಣಮ್ । ಹೇಮಚಕ್ರಮಸಂಬಾಧಂ ವೈಡೂರ್ಯಮಯಕೂಬರಮ್ । ಮತ್ಸ್ಯೈಃ ಪುಷ್ಪೈರ್ದ್ರುಮೈಶ್ಶೈಲೈಶ್ಚಂದ್ರಸೂರ್ಯೈಶ್ಚ ಕಾಂಚನೈಃ । ಮಂಗಳೈಃ ಪಕ್ಷಿಸಂಘೈಶ್ಚ ತಾರಾಭಿರಭಿಸಂವೃತಮ್ ॥ ಧ್ವಜನಿಸ್ತ್ರಿಂಶಸಂಪನ್ನಂ ಕಿಂಕಿಣೀಕವಿರಾಜಿತಮ್ । ಸದಶ್ವಯುಕ್ತಂ ಸೋಮರ್ಷಾದಾರುರೋಹ ಖರೋ ರಥಮ್ ॥೧೪॥ ನಿಶಾಮ್ಯ ತು ರಥಸ್ಥಂ ತಂ ರಾಕ್ಷಸಾ ಭೀಮವಿಕ್ರಮಾಃ । ತಸ್ಥುಸ್ಸಂಪರಿವಾರ್ಯೈನಂ ದೂಷಣಂ ಚ ಮಹಾಬಲಮ್ ॥೧೫॥ ಖರಸ್ತು ತಾನ್ಮಹೇಷ್ವಾ

---

ರಾದ ರಾಕ್ಷಸರ. ಅಗ್ರೇ-ಮುಂದುಗಡೆ, ರಣಕೋವಿದಃ-ಕಾಳಗದಲ್ಲಿ ಪಂಡಿತನಾದ, ಅಹಂ-ನಾನು, ದುರ್ವಿನೀತಸ್ಯ-ದುಷ್ಟನಾದ, ರಾಮಸ್ಯ-ಶ್ರೀರಾಮನ, ವಧಾರ್ಥಂ-ಕೊಲ್ಲುವನಿಮಿತ್ತವಾಗಿ, ನಿರ್ಯಾತುಂ-ಹೊರಡುವದಕ್ಕಾಗಿ, ಇಚ್ಛಾಮಿ-ಅಪೇಕ್ಷಿಸುತ್ತೇನೆ, (ಈ ಶ್ಲೋಕಾರ್ಥಸ್ವಾರಸ್ಯದಲ್ಲಿ ಪುಲಸ್ತ್ಯಬ್ರಹ್ಮವಂಶಸ್ಥರಾದ ಮಹಾತ್ಮರಾದ ರಕ್ಕಸರ ವಧಾರ್ಥವಾಗಿ.) ದುರ್ವಿನೀತಸ್ಯ-ಧೂರ್ತನಾದ. ರಾಮಸ್ಯ ಶ್ರೀರಾಮನ, ಅಗ್ರೇ-ಮುಂಭಾಗದಲ್ಲಿ, ಅಹಂ-ನಾನು, ಮೊದಲು ವಧಾರ್ಥವಾಗಿ ಹೋಗುತ್ತೇನೆಂದು ತಾತ್ಪರ್ಯವು ಸೂಚಕವಾಯಿತು ॥೧೦॥ ಇತಿ-ಈಪರಿಯಾಗಿ. ಬ್ರುವಾಣಸ್ಯ-ಹೇಳುತ್ತಿರುವ, ತಸ್ಯ-ಆ ಖರಾಸುರನಿಗೆ, ಅಥ-ಬಳಿಕ, ದೂಷಣಃ-ದೂಷಣನು, ಸೂರ್ಯವರ್ಣಂ-ಸೂರ್ಯನಬಣ್ಣದಂತೆ ಬಣ್ಣವುಳ್ಳ, ಮಹಾರಥಂ-ದೊಡ್ಡರಥವನ್ನು, ಶಬಲೈಃ-ಕಬ್ಬುರಬಣ್ಣವುಳ್ಳ, ಸದಶ್ವೈಃ-ಒಳ್ಳೇಕುದುರೆಗಳಿಂದ, ಯುಕ್ತಂ-ಕಟ್ಟಲ್ಪಟ್ಟದ್ದನ್ನಾಗಿ, ಆಚಚಕ್ಷೇ-ಹೇಳಿದನು ॥೧೧॥ ಸಖರಃ-ಆ ಖರನು, ಮೇರುಶಿಖರಾಕಾರಂ-ಮೇರುಪರ್ವತದ ತುದಿಯಂತೆ ಆಕಾರವುಳ್ಳ, ತಪ್ತಕಾಂಚನಭೂಷಣಂ-ಪುಟಪಾಕಶೋಧಿತವಾದ ಚಿನ್ನದಾಕಾರದಂತೆ ಆಕಾರವುಳ್ಳ, ಹೇಮಚಕ್ರಂ-ಚಿನ್ನದ ಚಕ್ರಗಳುಳ್ಳ- ಅಸಂಬಾಧಂ-ಸಮ್ಮರ್ದವಿಲ್ಲದಿರುವ, ವೈಡೂರ್ಯಮಯಕೂಬರಂ-ವೈಡೂರ್ಯರತ್ನವಿಕಾರವಾದ ಈಚೆಮರವುಳ್ಳ. ಕಾಂಚನೈಃ-ಸುವರ್ಣವಿಕಾರಂಗಳಾದ, ಮತ್ಸ್ಯೈಃ-ಮತ್ಸ್ಯಗಳಿಂದಲೂ, ಪುಷ್ಪೈಃ-ಹೂವುಗಳಿಂದಲೂ ದ್ರುಮೈಃ-ಗಿಡಗಳಿಂದಲೂ. ಶೈಲೈಃ-ಬೆಟ್ಟಗಳಿಂದಲೂ, ಚಂದ್ರಸೂರ್ಯೈಃ-ಚಂದ್ರಾಕಾರರೇಖೆಗಳಿಂದಲೂ ಸೂರ್ಯಾಕಾರರೇಖೆಗಳಿಂದಲೂ. ಮಂಗಳೈಃ-ಶುಭಕರವಾದ, ಪಕ್ಷಿಸಂಘೈಃ-ಹಕ್ಕಿಗಳತಂಡಗಳಿಂದಲೂ, ತಾರಾಭಿಃ-ನಕ್ಷತ್ರಗಳಿಂದಲೂ, ಅಭಿಸಂವೃತಂ-ಸುತ್ತಿಕೊಳ್ಳಲ್ಪಟ್ಟ, ಧ್ವಜನಿಸ್ತ್ರಿಂಶಸಂಪನ್ನಂ-ಧ್ವಜಗಳಿಂದಲೂ ಕತ್ತಿಗಳಿಂದಲೂ ಕೂಡಿಕೊಂಡಿರುವ, ಕಿಂಕಿಣೀಕವಿರಾಜಿತಂ-ಚಿಕ್ಕಘಂಟೆಗಳಿಂ ಹೊಳೆಯುತ್ತಿರುವ, ಸದಶ್ವಯುಕ್ತಂ-ಒಳ್ಳೇಕುದುರೆಗಳಿಂ ಕೂಡಿಕೊಂಡಿರುವ, ರಥಂ-ತೇರನ್ನು, ಅಮರ್ಷಾತ್-ಕೋಪದದೆಸೆಯಿಂದ. ಆರುರೋಹ-ಏರಿದನು ॥೧೪॥ ಭೀಮವಿಕ್ರಮಾಃ-ಭಯಂಕರವಾದ ಪರಾಕ್ರಮವುಳ್ಳ, ರಾಕ್ಷಸಾಃ-ರಕ್ಕಸರು, ತಂ-ಆ ಖರನನ್ನು, ರಥಸ್ಥಂ-ರಥಾರೂಢನನ್ನಾಗಿ ನಿಶಾಮ್ಯ-ಕಂಡು, ಏನಂ-ಈ ಖರನನ್ನು, ಮಹಾಬಲಂ-ಬಹಳ ಸಾಮರ್ಥ್ಯವಂತನಾದ, ದೂಷಣಂಚ-ದೂಷಣನನ್ನು, ಸಂಪರಿವಾರ್ಯ-ಸುತ್ತಿಕೊಂಡು, ತಸ್ಥುಃ-ನಿಂತರು ॥೧೫॥ ಖರಸ್ತು-ಖರನಾದರೆ, ರ

---

ಲ್ಲು ಪಂಡಿತನಾದ ನಾನು, ಆ ಶ್ರೀರಾಮನ ಸಂಹಾರಾರ್ಥವಾಗಿ ಹೊರಡಲಿಚ್ಛೈಸುತ್ತೇನೆ [ವಿಶೇಷಾಭಿಪ್ರಾಯವೇನೆಂದರೆ,--ಪುಲಸ್ತ್ಯಬ್ರಹ್ಮನ ವಂಶೋತ್ಪನ್ನರಾದ, ಮಹಾನುಭಾವರಾದ ರಾಕ್ಷಸರ ಸಂಹಾರಾರ್ಥವಾಗಿ, ಮಹಾಧೂರ್ತನಾದ ಶ್ರೀರಾಮನ ಮುಂದೆ ನಾನು ಪ್ರಥಮತಃ ಪೋಗುವೆನು, ಬಳಿಕ ಯೆಲ್ಲರೂ ಸಾಯುವರೆಂಬರ್ಥವು ಸೂಚಕವಾಗುತ್ತದೆ] ।೧೦॥ ಈ ರೀತಿಯಾಗಿ ಆ ಖರಾಸುರನು ಪೇಳಿದ ಬಳಿಕ ಆ ದೂಷಣನು ಸೂರ್ಯನಂತೆ ಬೆಳಗುವ ಆತನ ಮಹಾರಥಕ್ಕೆ ಕುದುರೆಗಳಂ ಕಟ್ಟಿಸಿ, ತೆಗದುಕೊಂಡುಬಂದು ಬಿನ್ನಹವಂಗೈದನು ॥೧೧॥ ಅನಂತರದಲ್ಲಿ ಆಖರನು ಮೇರುಶಿಖರದಂತೆ ಮಹಾ ಉನ್ನತವಾಗಿಯೂ, ಅಪರಂಜೀಬಡವೆಗಳಿಂದ ಅಲಂಕೃತವಾಗಿಯೂ, ಸುವರ್ಣವಿಕಾರವಾದ ಚಕ್ರಂಗಳುಳ್ಳದ್ದಾಗಿಯೂ, ವಿಸ್ತಾರವಾಗಿಯೂ, ವೈಡೂರ್ಯಮಣಿಗಳ ವಿಕಾರವಾದ ಈಚೆಮರವುಳ್ಳದ್ದಾಗಿಯೂ, ಸುವರ್ಣಮಯವಾದ ಮತ್ಸ್ಯಂಗಳಿಂದಲೂ, ಪುಷ್ಪಂಗಳಿಂದಲೂ, ವೃಕ್ಷಂಗಳಿಂದಲೂ, ಪರ್ವತಂಗಳಿಂದಲೂ, ಚಂದ್ರಾಕಾರರೇಖೆಗಳಿಂದಲೂ, ಸೂರ್ಯಾಕಾರವಾಗಿರುವ ಗೆರೆಗಳಿಂದಲೂ, ಶುಭಕರವಾದ ಪಕ್ಕಿತಂಡಂಗಳಿಂದಲೂ, ನಕ್ಷತ್ರಂಗಳಿಂದಲೂ ಸಹಾ ಪೊಡಗೂಡಿದ್ದಾಗಿಯೂ, ಮತ್ತು ಧ್ವಜಂಗಳಿಂದಲೂ, ಖಡ್ಗಂಗಳಿಂದಲೂ, ಕಿರುಗೆಜ್ಜೆಗಳಿಂದಲೂ, ಒಳ್ಳೇಕುದುರೆಗಳಿಂದಲೂಸಹಾ ಯುಕ್ತವಾಗಿರುವ ಆ ರಥವನ್ನು ಬಹುಕೋಪದಿಂದೇರಿದನು ।೧೪। ಅನಂತರದಲ್ಲಿ ಮಹಾ ಪರಾಕ್ರಮಶಾಲಿಗಳಾದ ರಾಕ್ಷಸರು, ಖರಾಸುರನು ರಥಾರೂಢನಾದನೆಂಬುವದಂ ಕೇಳಿ, ದೂಷಣನನ್ನು ಸುತ್ತುಬಾರಿಕೊಂಡು, ನಿಂತುಕೊಂಡರು. ಆಗ ಖರಾಸುರನಾದರೆ ರಥಾರೂಢನಾಗಿಯೂ ಮಹತ್ತರವಾದ ಕೋದಂಡಗಳುಳ್ಳವನಾಗಿಯೂ ಇರುವವನಾಗಿ, ಭಯಂಕರವಾದ ಕವಚಂಗಳೂ, ಆಯುಧಂಗಳೂ, ಧ್ವಜಂಗಳೂ ಉಳ್ಳ ಆ ರಕ್ಕಸರಂ ಕಂಡು ಹೊರಡಿರೆಂದು ನುಡಿದ ಬಳಿಕ ಬಹು

ಸ್ತಾನ್ಘೋರವರ್ಮಾಯುಧಧ್ವಜಾನ್ । ನಿರ್ಯಾತೇತ್ಯಬ್ರವೀದ್ದೃಷ್ಟ್ವಾ ರಥಸ್ಥಸ್ಸರ್ವರಾಕ್ಷಸಾನ್ ॥೧೮॥ ತತಸ್ತದ್ರಾಕ್ಷ
ಸಂಸೈನ್ಯಂಘೋರವರ್ಮಾಯುಧಧ್ವಜಂ । ನಿರ್ಜಗಾಮಜನಸ್ಥಾನಾನ್ಮಹಾನಾದಂಮಹಾಜವಂ ॥೧೯॥ ಮುದ್ಗರೈಃಪಟ್ಟ
ಸೈಶ್ಶೂಲೈಸ್ಸುತೀಕ್ಷ್ಣೈಶ್ಚಪರಶ್ವಧೈಃ । ಖಡ್ಗೈಶ್ಚಕ್ರೈಶ್ಚಹಸ್ತಸ್ಥೈರ್ಭ್ರಾಜಮಾನೈಶ್ಚತೋಮರೈಃ॥ಶಕ್ತಿಭಿಃಪರಿಘೈ
ರ್ಘೋರೈರತಿಮಾತ್ರೈಶ್ಚಕಾರ್ಮುಕೈಃ । ಗದಾಸಿಮುಸಲೈರ್ವಜ್ರೈರ್ಗೃಹೀತೈರ್ಭೀಮದರ್ಶನೈಃ। ರಾಕ್ಷಸಾನಾಂ
ಸುಘೋರಾಣಾಂಸಹಸ್ರಾಣಿಚತುರ್ದಶ । ನಿರ್ಯಾತಾನಿಜನಸ್ಥಾನಾತ್ಖರಚಿತ್ತಾನುವರ್ತಿನಾಂ ॥೨೧॥ ತಾಂಸ್ತ್ವಭಿದ್ರವ
ತೋದೃಷ್ಟ್ವಾರಾಕ್ಷಸಾನ್ಭೀಮವಿಕ್ರಮಾನ್ । ಖರಸ್ಯಾಪಿರಥಃಕಿಂಚಿಜ್ಜಗಾಮತದನಂತರಂ॥೨೨॥ತತಸ್ತಾಂಶ್ಶಬಳಾ
ನಶ್ವಾಂಸ್ತಪ್ತಕಾಂಚನಭೂಷಿತಾನ್ । ಖರಸ್ಯಮತಿಮಾಜ್ಞಾಯಸಾರಥಿಸ್ಸಮಚೋದಯತ್ ॥೨೩॥ ಸಚೋದಿತೋರಥ
ಶ್ಶೀಘ್ರಂಖರಸ್ಯರಿಪುಘಾತಿನಃ । ಶಬ್ದೇನಾಪೂರಯಾಮಾಸದಿಶಶ್ಚಪ್ರದಿಶಸ್ತದಾ ॥೨೪॥ ಪ್ರವೃದ್ಧಮನ್ಯುಸ್ತುಖರಃಖರ

---

ಥಸ್ಥಃ-ರಥಾರೂಢನಾಗಿ, ಮಹೇಷ್ವಾಸಾನ್-ದೊಡ್ಡದಾದ ಬಿಲ್ಲುಗಳುಳ್ಳ, ಘೋರವರ್ಮಾಯುಧಧ್ವಜಾನ್-ಭಯಂಕರವಾದ ಕವಚಗಳೂ ಆಯುಧಗ
ಳೂ ನಿಶಾನಿಗಳೂಉಳ್ಳ, ತಾನ್ ಸರ್ವರಾಕ್ಷಸಾನ್-ಆ ಸಮಸ್ತರಾದ ರಾಕ್ಷಸರನ್ನು. ದೃಷ್ಟ್ವಾ-ಕಂಡು. ನಿರ್ಯಾತೇತಿ-ಹೊರಡಿರೀಎಂದು, ಅಬ್ರವೀ
ತ್-ನುಡಿದನು ॥೧೮॥ ತತಃ-ಬಳಿಕ, ಘೋರವರ್ಮಾಯುಧಧ್ವಜಂ-ಭಯಂಕರವಾದ ಕವಚಗಳೂ ಆಯುಧಗಳೂ ನಿಶಾನಿಗಳೂಉಳ್ಳ, ಮಹಾನಾ
ದಂ-ಭಯಂಕರವಾದ ಧ್ವನಿಯುಳ್ಳ, ಮಹಾಜವಂ-ಬಹಳ ವೇಗವತ್ತಾದ, ರಾಕ್ಷಸಂ-ರಕ್ಕಸರಸಂಬಂಧಿಯಾದ, ತತ್ಸೈನ್ಯಂ-ಆ ದಂಡು. ಜನಸ್ಥಾನಾ
ತ್-ಉಕ್ಕಟದದೆಸೆಯಿಂದ, ನಿರ್ಜಗಾಮ-ತೆರಳಿತು ॥೧೯॥ ಮುದ್ಗರೈಃ-ಕಬ್ಬಿಣದ ಗದೆಗಳಿಂದಲೂ, ಪಟ್ಟಸೈಃ-ಕತ್ತಿಗಳಿಂದಲೂ. ಸುತೀಕ್ಷ್ಣೈಃ-
ಮಹಾತೀಕ್ಷ್ಣವಾಗಿರುವ ಶೂಲೈಃ-ಶೂಲಾಯುಧಗಳಿಂದಲೂ,ಪರಶ್ವಧೈಃ-ಗೊಡ್ಲಿಗಳಿಂದಲೂ ಖಡ್ಗೈಃ-ಚಿಕ್ಕಕತ್ತಿಗಳಿಂದಲೂ ಹಸ್ತಸ್ಥೈಃ-ಕೈಗಳಲ್ಲಿರುವ,
ಚಕ್ರೈಶ್ಚ-ಚಕ್ರಾಯುಧಗಳಿಂದಲೂ, ಭ್ರಾಜಮಾನೈಃ-ಹೊಳೆಯುತ್ತಿರುವ. ತೋಮರೈಃ-ಮರದ ಕೊಡತಿಗಳಿಂದಲೂ, ಶಕ್ತಿಭಿಃ-ಶಕ್ತ್ಯಾಯುಧಗ
ಳಿಂದಲೂ, ಘೋರೈಃ-ಭಯಂಕರವಾದ. ಪರಿಘೈಃ-ಕಬ್ಬಿಣದ ಕಟ್ಟುಹಾಕಿದ ದೊಣ್ಣೆಗಳಿಂದಲೂ, ಅತಿಮಾತ್ರೈಶ್ಚ-ಬಹಳ ದೀರ್ಘಗಳಾದ, ಕಾರ್ಮು
ಕೈಃ-ಬಿಲ್ಲುಗಳಿಂದಲೂ. ಗದಾಸಿಮುಸಲೈಃ-ಗದಾಯುಧಗಳಿಂದಲೂ ಖಡ್ಗಗಳಿಂದಲೂ ಒನಕೆಗಳಿಂದಲೂ, ಗೃಹೀತೈಃ-ತೆಗೆದುಕೊಳ್ಳಲ್ಪಟ್ಟ,
ಭೀಮದರ್ಶನೈಃ-ಭಯಂಕರವಾದ ನೋಟವುಳ್ಳ. ವಜ್ರೈಃ-ವಜ್ರಾಯುಧಗಳಿಂದ, ಉಪಲಕ್ಷಿತಾನಿ-ಕೂಡಿಕೊಂಡಿರುವ. ಸುಘೋರಾಣಾಂ-ಭಯಂ
ಕರರಾದ, ಖರಚಿತ್ತಾನುವರ್ತಿನಾಂ-ಖರಾಸುರನ ಮನವನ್ನನುಸರಿಸುತ್ತಿರುವ, ರಾಕ್ಷಸಾನಾಂ-ರಕ್ಕಸರ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗ
ಳು, ಜನಸ್ಥಾನಾತ್-ಉಕ್ಕಟದದೆಸೆಯಿಂದ, ನಿರ್ಯಾತಾನಿ-ಹೊರಟುಬಂದವು ॥೨೧॥ ಅಭಿದ್ರವತಃ-ಸುತ್ತುಮುತ್ತಲೂ ಓಡಿಹೋಗುತ್ತಿರುವ. ಭೀಮವಿ
ಕ್ರಮಾನ್-ಭಯಂಕರವಾದ ಪರಾಕ್ರಮವುಳ್ಳ, ತಾನ್ರಾಕ್ಷಸಾನ್-ಆ ರಕ್ಕಸರನ್ನು, ದೃಷ್ಟ್ವಾ-ಕಂಡು, ಖರಸ್ಯ-ಖರಾಸುರನ, ರಥೋಪಿ-ರಥವೂ.
ಕಿಂಚಿತ್-ಸ್ವಲ್ಪವಾಗಿ. ತದನಂತರಂ-ಆಬಳಿಕ, ಜಗಾಮ-ಹೊರಡಿತು ॥೨೨॥ ತತಃ-ಬಳಿಕ, ಖರಸ್ಯ-ಖರಾಸುರನ. ಮತಿಂ-ಬುದ್ಧಿಯನ್ನು. ಆಜ್ಞಾ
ಯ-ತಿಳಿದು, ಸಾರಥಿಃ-ಸಾರಥಿಯು, ತಪ್ತಕಾಂಚನಭೂಷಿತಾನ್-ಕಾಸಲ್ಪಟ್ಟ ಚಿನ್ನದ ಮುಖರಜ್ಜುಗಳಿಂದಅಲಂಕರಿಸಲ್ಪಟ್ಟ, ಶಬಳಾನ್-ಕೆಂಪು ಕ
ಪ್ಪು ಮಿಶ್ರಮಾದ ಬಣ್ಣವುಳ್ಳ. ತಾನಶ್ವಾನ್-ಕುದುರೆಗಳನ್ನು, ಸಮಚೋದಯತ್-ನಡಸಿದನು ॥೨೩॥ ಚೋದಿತಃ-ಪ್ರೇರೇಪಿಸಲ್ಪಟ್ಟ, ರಿಪುಘಾತಿ
ನಃ-ಶತ್ರುಸಂಹಾರಕನಾದ, ಖರಸ್ಯ-ಖರಾಸುರನ. ಸರಥಃ-ಆ ರಥವು, ಶೀಘ್ರಂ-ಜಾಗ್ರತೆಯಾಗಿ. ತದಾ-ಆಕಾಲದಲ್ಲಿ, ಶಬ್ದೇನ-ರಥಘೋಷದಿಂದ
ದಿಶಶ್ಚ-ದಿಕ್ಕುಗಳನ್ನೂ, ಪ್ರದಿಶಶ್ಚ-ವಿದಿಕ್ಕುಗಳನ್ನೂ, ಪೂರಯಾಮಾಸ-ತುಂಬಿಸಿತು ॥೨೪॥ ಖರಸ್ವನಃ-ಕ್ರೂರವಾದ ಧ್ವನಿಯುಳ್ಳ. ಅಂತಕೋಯ
ಥಾ-ಯಮನಂತೆ, ರಿಪೋಃ-ಶತ್ರುವಿನ, ವಧಾರ್ಥಂ-ಸಂಹಾರಾರ್ಥವಾಗಿ. ತ್ವರಿತಃ-ಜಾಗರೂಕನಾದ. ಖರಃ-ಖರಾಸುರನು, ಪ್ರವೃದ್ಧಮನ್ಯುಃ-
ಉಕ್ಕಿದ ಕೋಪವುಳ್ಳವನಾಗಿ, ಅಶ್ಮವರ್ಷವಾನ್-ಕಲ್ಲುಮಳೆಯನ್ನು ಮಾಡುತ್ತಿರುವ, ಮಹಾಬಲಃ-ಬಹಳ ತ್ರಾಣವುಳ್ಳ, ಮೇಘಇವ-ಮೇಘದಂ

---

ಘೋರವಾದ ಆಯುಧಾದಿಗಳುಳ್ಳ, ಮಹಾ ಘೋಷೆಯಂ ಗೈಯ್ಯುತಲಿರುವ ಬಹು ವೇಗವತ್ತಾದ ಆ ರಾಕ್ಷಸರ
ಸೈನ್ಯವು, ಜನಸ್ಥಾನದಿಂದ ತೆರಳಿತದೆಂತೆನೆ,—॥೧೯॥ ಜನಸ್ಥಾನವಾಸಿಯಾದ ಆ ಖರಾಸುರನ ಸೈನ್ಯವು “ಮು
ದ್ಗರ, ಪಟ್ಟಸ, ಶೂಲ, ಪರಶ್ವಧ, ಖಡ್ಗ, ಚಕ್ರ, ತೋಮರ, ಶಕ್ತಿ, ಪರಿಘ, ಕೋದಂಡ, ಗದ, ಮುಸಲ, ವಜ್ರ”
ಎಂಬಿವುಗಳೇ ಮೊದಲಾದ ಅನೇಕಾಯುಧಗಳಿಂದ ಒಡಗೂಡಿ, ಹೊರಟಂಥಾದ್ದಾಗಲೂ, ಆ ಖರಾಸುರನೂ ಕೂ
ಡ ಸುತ್ತಮುತ್ತಲೂ ಹೊರಡಲುದ್ಯುಕ್ತರಾಗಿರುವ ಮಹಾ ಭಯಂಕರರಾದ ಆ ರಾಕ್ಷಸರಂ ಕಂಡು, ತನ್ನ ರಥವ
ನ್ನು ನಡೆಯಿಸೆಂದು ಸಾರಥಿಗೆ ಪೇಳಿದವನಾದನು ॥೨೨॥ ಅನಂತರದಲ್ಲಿ ಆ ಸಾರಥಿಯು ಖರಾಸುರನ ಅಭಿಪ್ರಾಯ
ವನ್ನರಿತು, ಸುವರ್ಣ ವಿಕಾರವಾದ ಮುಖರಜ್ಜುಗಳಿಂದಲಂಕರಿಸಲ್ಪಟ್ಟ, ಮತ್ತು ಕೆಂಪು, ಕಪ್ಪುಬೆರತ ಬಣ್ಣವುಳ್ಳ
ಆ ಕುದುರೆಗಳನ್ನು ನಡಯಿಸಿದವನಾಗಲು, ಶತ್ರುಸಂಹಾರಕನಾದ ಆ ಖರಾಸುರನ ರಥವು ತನ್ನ ಘೋಷೆಯಿಂದ
ದಶದಿಕ್ಕುಗಳನ್ನು ಪ್ರತಿಧ್ವನಿಗೊಳಿಸುವಂತೆ ಮಾಡುತ್ತಿತ್ತು ॥೨೪॥ ಆ ವೇಳೆಯಲ್ಲಿ ಕ್ರೂರವಾದ ಘೋಷೆಯುಳ್ಳ,

ಸ್ಯನೋರಿ ಪೂರ್ವಧಾರ್ತ್ಥಂ ತ್ವರಿತೋಯಥಾಂಕಃ । ಅಚೂಚುದತ್ಸಾರಥಿಮುನ್ನದೇ ಘನಂ ಮಹಾಬಲೋಮೇಘಇವಾಶ್ಮವರ್ಷವಾನ್ ॥೨೮॥

—*** ಇತಿಶ್ರೀಮದಾರಣ್ಯಕಾಂಡೇ-ದ್ವಾವಿಂಶಸ್ಸರ್ಗಃ. ***—

ತಸ್ಮಿನ್ಯಯಾತೇಜನಸ್ಥಾನಾದಶಿವಂ ಶೋಣಿತೋದಕಂ । ಅಭ್ಯವರ್ಷನ್ಮಹಾಮೇಘಸ್ತುಮುಲೋಗರ್ದಭಾರುಣಃ ॥೧॥ ನಿಪೇತುಸ್ತುರಗಾಸ್ತಸ್ಯ ರಥಯುಕ್ತಾ ಮಹಾಜವಾಃ । ಸಮೇ ಪುಷ್ಪಚಿತೇ ದೇಶೇ ರಾಜಮಾರ್ಗೇ ಯದೃಚ್ಛಯಾ ॥೨॥ ಶ್ಯಾಮಂ ರುಧಿರಪರ್ಯಂತಂ ಬಭೂವ ಪರಿವೇಷಣಂ । ಅಲಾತಚಕ್ರಪ್ರತಿಮಂ ಪರಿಗೃಹ್ಯ ದಿವಾಕರಂ ॥೩॥ ತತೋಧ್ವಜಮುಪಾಗಮ್ಯ ಹೇಮದಂಡಂ ಸಮುಚ್ಛ್ರಿತಂ । ಸಮಾಕ್ರಮ್ಯ ಮಹಾಕಾಯಸ್ತಸ್ಥೌ ಗೃಧ್ರಸ್ಸುದಾರುಣಃ ॥೪॥ ಜನಸ್ಥಾನಸಮೀಪೇ ತು ಸಮಾಗಮ್ಯ ಖರಸ್ವನಾಃ । ವಿಸ್ವರಾನ್ವಿವಿಧಾಂಶ್ಚಕ್ರುರ್ಮಾಂಸಾದಾ ಮೃಗಪಕ್ಷಿಣಃ ॥೫॥ ವ್ಯಾಜಹ್ರುಶ್ಚ ಪ್ರದೀಪ್ತಾಯಾಂ ದಿಶಿ ವೈ ಭೈರವಸ್ವನಂ । ಅಶಿವಂ ಯಾತುಧಾನಾನಾಂ ಶಿವಾ ಘೋರಾ ಮಹಾಸ್ವನಾಃ ॥೬॥ ಪ್ರಭಿನ್ನಗಿರಿಸಂಕಾಶಾಸ್ತೋ

ತೆ. ಘನಂ-ಘಟ್ಟಿಯಾಗಿ, ಉನ್ನದನ್-ಕೋಲಾಹಲಧ್ವನಿಯಂ ಮಾಡುತ್ತಿರುವವನಾಗಿ, ಸಾರಥಿಂ-ಸಾರಥಿಯನ್ನು, ಅಚೂಚುದತ್-ಜಾಗ್ರತೆಯಾಗಿ ನಡಿಸೆಂದು ಪ್ರೇರಿಸಿದನು, (ಯಥಾ-ಮಹಾನಿಲಯತ್ಯಪಿ ಪಾಠಃ-ತತ್ರ ಮಹಾನಿಲಃ-ದೊಡ್ಡ ಬಿರುಗಾಳಿಯಿಂ ಕೂಡಿಕೊಂಡಿರುವ. ಅಶ್ಮವರ್ಷವಾನ್-ಆಣೆ ಕಲ್ಲುಮಳೆಯಂ ಸುರಿಸುತ್ತಿರುವ, ಮೇಘಃ-ಮೇಘವು, ಘನಮಿವ-ಮೇಘವನ್ನಂತೆ, ಸಾರಥಿಂ-ಸಾರಥಿಯನ್ನು, ಅಚೂಚುದತ್-ಪ್ರೇರೇಪಿಸಿದನು) ॥೨೮॥

—**ಇತಿಶ್ರೀಮದಾರಣ್ಯಕಾಂಡೇ-ದ್ವಾವಿಂಶಸ್ಸರ್ಗಃ**—

ತಸ್ಮಿನ್-ಆ ಖರಾಸುರನು, ಜನಸ್ಥಾನಾತ್-ಉಕ್ಕಟದದೆಶೆಯಿಂದ. ಯಾತೇಸತಿ-ಬಂದವನಾಗಲಾಗಿ, ಗರ್ದಭಾರುಣಃ-ಕತ್ತೆಯಂತೆ ಧೂಸರವರ್ಣವುಳ್ಳ, ತುಮುಲಃ-ಸಂಕುಲವಾದ, ಮಹಾಮೇಘಃ-ದೊಡ್ಡ ಮೇಘವು. ಅಶಿವಂ-ಅಶುಭವಾದ, ಶೋಣಿತೋದಕಂ-ರಕ್ತೋದಕವನ್ನು, ಅಭ್ಯವರ್ಷತ್-ಸುರಿಸಿತು, ಅಥವಾ ತಸ್ಮಿನ್ಯಯಾತೇ-ಎಂಬಸ್ಥಳದಲ್ಲಿ. ಯಾತೇ-ಹೋಗುತ್ತಿರುವ, ತಸ್ಮಿನ್-ಆಸೈನ್ಯದಲ್ಲಿಯಂತಲೂ, ಅರ್ಥಾಂತರ ॥೧॥ ತಸ್ಯ-ಆ ಖರಾಸುರನ, ರಥಯುಕ್ತಾಃ-ರಥಕ್ಕೆ ಕಟ್ಟಿರುವ, ಮಹಾಜವಾಃ-ಮಹಾವೇಗಶಾಲಿಗಳಾದ, ತುರಗಾಃ-ಕುದುರೆಗಳು, ಸಮೇ-ನಿಮ್ನೋನ್ನತಗಳಿಲ್ಲದಿರುವ, ಪುಷ್ಪಚಿತೆ-ಹೂವುಗಳಿಂದ ಹಾಸಲ್ಪಟ್ಟ, ರಾಜಮಾರ್ಗೇ-ರಾಜಬೀದಿಗೆ ಸೇರಿರುವ, ದೇಶೇ-ಪ್ರದೇಶದಲ್ಲಿ, ಯದೃಚ್ಛಯಾ-ಸ್ವೇಚ್ಛೆಯಿಂದ, ನಿಪೇತುಃ-ಬಿದ್ದವು ॥೨॥ ಶ್ಯಾಮಂ-ಕಪ್ಪಾಗಿರುವ, ರುಧಿರಪರ್ಯಂತಂ-ರಕ್ತ ಬಣ್ಣದ ಕೊನೆಗಳುಳ್ಳ, ಅಲಾತಚಕ್ರಪ್ರತಿಮಂ-ಕೊಳ್ಳಿಗಳ ಚಕ್ರಾಕಾರಕ್ಕೆ ಸಮಾನವಾದ, ಪರಿವೇಷಣಂ-ಪರಿವೇಷದಿಂದ. ದಿವಾಕರಂ-ಸೂರ್ಯನನ್ನು, ಪರಿಗೃಹ್ಯ-ಸುತ್ತಿಕೊಂಡು, ಬಭೂವ-ನಿಂತಿತು ॥೩॥ ತತಃ-ಬಳಿಕ, ಮಹಾಕಾಯಃ-ದೊಡ್ಡ ಶರೀರವುಳ್ಳ, ಸುದಾರುಣಃ-ಬಹಳ ಕ್ರೂರವಾದ. ಗೃಧ್ರಃ-ಹದ್ದು, ಹೇಮದಂಡಂ-ಚಿನ್ನದ ದಂಡವುಳ್ಳ, ಸಮುಚ್ಛ್ರಿತಂ-ಉನ್ನತವಾದ, ಧ್ವಜಂ-ನಿಶಾಣಿಯನ್ನು ಕುರಿತು. ಉಪಾಗಮ್ಯ-ಬಂದು, ಸಮಾಕ್ರಮ್ಯ-ಆಕ್ರಮಿಸಿಕೊಂಡು, ತಸ್ಥೌ-ನಿಂತಿತು ॥೪॥ ಜನಸ್ಥಾನಸಮೀಪೇತು-ಜನಸ್ಥಾನದ ಸಮೀಪದಲ್ಲಾದರೆ, ಸಮಾಗಮ್ಯ-ಬಂದು, ಖರಸ್ವನಾಃ-ಕ್ರೂರಸ್ವರಗಳುಳ್ಳ. ಮಾಂಸಾದಾಃ-ಮಾಂಸವನ್ನು ತಿನ್ನುತ್ತಿರುವ, ಮೃಗಪಕ್ಷಿಣಃ-ಮೃಗಗಳೂ ಹಕ್ಕಿಗಳೂ. ವಿವಿಧಾನ್-ನಾನಾಬಗೆಗಳಾದ, ವಿಸ್ವರಾನ್-ದೀನಧ್ವನಿಗಳನ್ನು, ಚಕ್ರುಃ-ಮಾಡಿದುವು ॥೫॥ ಪ್ರದೀಪ್ತಾಯಾಂ-ಉರಿಯುತ್ತಿರುವ, ದಿಶಿ-ದಿಕ್ಕಿನಲ್ಲಿ, ಘೋರಾಃ-ಭಯಂಕರಗಳಾದ, ಮಹಾಸ್ವನಾಃ-ಮಹಾಧ್ವನಿಗಳುಳ್ಳ, ಶಿವಾಃ-ನರಿಗಳು, ಯಾತುಧಾನಾನಾಂ-ರಾಕ್ಷಸರಿಗೆ, ಅಶಿವಂ-ಅಶುಭಸೂಚಕವಾದ, ಭೈರವಸ್ವನಂ-ಭಯಂಕರವಾದ ಧ್ವನಿಯನ್ನು, ವ್ಯಾಜಹ್ರುಃ-ಹೇಳಿದುವು ॥೬॥ ಪ್ರಭಿನ್ನಗಿರಿಸಂಕಾಶಾಃ-ಪರಸ್ಪರಸಂಘರ್ಷವಾಗಿರುವ ಬೆ

ಯುವನಂತೆ ಶತ್ರುಸಂಹಾರವಂ ಗೈಯ್ಯಲೋಸುಗ ಬಹು ಜಾಗರೂಕನಾದ ಆ ಖರನು ಉಕ್ಕಿಬರುವ ಕೋಪಾಟೋಪವುಳ್ಳವನಾಗಿ, ಕಲ್ಲುಮಳೆಯಂ ಸುರಿಸುವ ಮಹಾ ಮೇಘದಂತೆ ಘಟ್ಟಿಯಾಗಿ ಕೋಲಾಹಲ ಧ್ವನಿಯನ್ನು ಗೈಯ್ಯುತ್ತಾ ಸಾರಥಿಯನ್ನು ಕುರಿತು ಎಲೈ ಸಾರಥಿಯೇ! ತ್ವರಿತವಾಗಿ ರಥವನ್ನು ತರುವುವನಾಗೆಂದು ನುಡಿದನು ॥೨೮॥

—* ಆರಣ್ಯಕಾಂಡದಲ್ಲಿ ೨೨ನೆಯ ಸರ್ಗಂ ಮುಗಿದುದು *—

ಆ ಖರಾಸುರನು ಈ ರೀತಿಯಾಗಿ ಜನಸ್ಥಾನದಿಂದ ತೆರಳಿದವನಾಗಲೂ, ಗಾರ್ದಭದಂತೆ ಧೂಸರವಾದ ವರ್ಣವುಳ್ಳ, ಸಂಕುಲವಾದ ಕಾಲಮೇಘವು ಅಶುಭಕರವಾದ ರಕ್ತವಿಕಾರವಾದ ಉದಕವನ್ನು, ಆ ಸೈನ್ಯದಮೇಲೆ ವರ್ಷಿಸಿತು. ಆಗ ಆ ಖರಾಸುರನ ರಥಕ್ಕೆ ಕಟ್ಟಿರುವ, ಬಹುವೇಗವಾಗಿ ಹೋಗುವ ಕುದುರೆಗಳು ನಿಮ್ನೋನ್ನತಂಗಳಿಲ್ಲದ, ಮತ್ತು ಪುಷ್ಪಂಗಳಿಂದ ಹಾಸಲ್ಪಟ್ಟ ರಾಜಬೀದಿಯಲ್ಲಿ ಥಟ್ಟನೆ ಬಿದ್ದವು ॥೨॥ ಕಪ್ಪಾಗಿರುವ ಮತ್ತು ಕೆಂಪಾಗಿರುವ ಕೊನೆಗಳುಳ್ಳ ಕೊಳ್ಳಿಗಳು ಸೂರ್ಯನ ಸುತ್ತುಮುತ್ತಲೂ ನಿಂತಂಥಾದ್ದಾಯಿತು ॥೩॥ ಅನಂತರದಲ್ಲಿ ಮಹಾ ಶರೀರವುಳ್ಳ, ಬಹು ಭಯಂಕರವಾಗಿರುವ ಒಂದಾನೊಂದು ರಣಹದ್ದು ಸುವರ್ಣವಿಕಾರವಾದ ದಂಡವುಳ್ಳ, ಧ್ವಜದಮೇಲೆ ಕುಳಿತುಕೊಂಡಿತು. ಇದಲ್ಲದೆ ಆ ಜನಸ್ಥಾನದ ಸಮೀಪದಲ್ಲಿ ಘಾತುಕ ಮೃಗಂಗಳೂ ಪಕ್ಷಿಗಳೂ ಸಹಾ ಬಂದು ನಾನಾ ವಿಧಗಳಾದ ಕ್ರೂರಧ್ವನಿಗಳಂ ಮಾಡುತ್ತಿದ್ದವು. ಇದಲ್ಲದೆ ನರಿಗಳು ರಾಕ್ಷಸರಿಗೆ

ಯಶೋಣಿತಧಾರಿಣಃ । ಆಕಾಶಂತದನಾಕಾಶಂಚಕ್ರುರ್ಭೀಮಾವಲಾಹಕಾಃ ॥ ಬಭೂವತ್ತಿಮಿರಂಘೋರಮುದ್ಧತಂರೋಮಹರ್ಷಣಂ । ದಿಶೋವಾವಿದಿಶೋವಾಪಿನಚವ್ಯಕ್ತಂಚಕಾಶಿರೇ ॥೮॥ ಕ್ಷತಜಾರ್ದ್ರಸವರ್ಣಾಭಾಸಂಧ್ಯಾಕಾಲಂವಿನಾಬಭೌ । ಖರಸ್ಯಾಭಿಮುಖಾನೇದುಸ್ತದಾಘೋರಾಶ್ಶಿವಾಃಖಗಾಃ । ಕಂಕಗೋಮಾಯುಗೃಧ್ರಾಶ್ಚಚುಕ್ರುಶುರ್ಭಯಶಂಸಿನಃ ॥೯॥ ನಿತ್ಯಾಶುಭಕರಾಯುದ್ಧೇಶಿವಾಘೋರನಿದರ್ಶನಾಃ । ನೇದುರ್ಬಲಸ್ಯಾಭಿಮುಖಂಜ್ವಾಲೋದ್ಗಾರಿಭಿರಾನನೈಃ ॥೧೦॥ ಕಬಂಧಃಪರಿಘಾಭಾಸೋದೃಶ್ಯತೇಭಾಸ್ಕರಾಂತಿಕೇ । ಜಗ್ರಾಹಸೂರ್ಯಂಸ್ವರ್ಭಾನುರಪರ್ವಣಿಮಹಾಗ್ರಹಃ ॥೧೧॥ ಪ್ರವಾತಿಮಾರುತಶ್ಶೀಘ್ರಂನಿಷ್ಪ್ರಭೋಭೂದ್ದಿವಾಕರಃ । ಉತ್ಪೇತುಶ್ಚವಿನಾರಾತ್ರಿಂತಾರಾಃಖದ್ಯೋತಸಪ್ರಭಾಃ ॥೧೨॥ ಸಂಲೀನಮೀನವಿಹಗಾನಲಿನ್ಯಶ್ಶುಷ್ಕಪಂಕಜಾಃ । ತಸ್ಮಿನ್‌ಕ್ಷಣೇಬಭೂವುಶ್ಚವಿನಾಪುಷ್ಪೈಃಫಲೈರ್ದ್ರುಮಾಃ ॥೧೩॥ ಉ

---

ಟ್ಟಗಳಿಗೆ ಸಮಾನವಾದ, ತೋಯಶೋಣಿತಧಾರಿಣಃ-ರಕ್ತದಂತಿರುವ ಉದಕಗಳಂ ಧರಿಸಿರುವ, ಭೀಮಾಃ-ಭಯಂಕರಗಳಾದ, ವಲಾಹಕಾಃ-ಮೇಘಗಳು, ತತ್ ಆಕಾಶಂ-ಆ ಅಂತರಿಕ್ಷವನ್ನು, ಅನಾಕಾಶಂ-ಅವಕಾಶವಿಲ್ಲದ್ದನ್ನಾಗಿ, ಚಕ್ರುಃ-ಮಾಡಿದವು ॥೭॥ ರೋಮಹರ್ಷಣಂ-ರೋಮಾಂಚಕರವಾದ ಘೋರಂ-ಭಯಂಕರವಾದ, ತಿಮಿರಂ-ಗಾಢಾಂಧಕಾರವು, ಉದ್ಧತಂ-ಉತ್ಕಟವಾದಂಥಾದ್ದು, ಬಭೂವ-ಆಯಿತು, ದಿಶೋವಾ-ದಿಕ್ಕುಗಳೇ ಆಗಲಿ, ವಿದಿಶೋವಾ-ವಿದಿಕ್ಕುಗಳೇ ಆಗಲೀ, ವ್ಯಕ್ತಂ-ಸ್ಪಷ್ಟವಾಗಿ, ನಚಕಾಶಿರೇ-ಪ್ರಕಾಶಿಸಲಿಲ್ಲ ॥೮॥ ಕ್ಷತಜಾರ್ದ್ರಸವರ್ಣಾಭಾ-ರಕ್ತದಿಂ ನನೆದಿರ್ಪ ವಸ್ತುವಿಗೆ ಸಮಾನವಾದ ಕಾಂತಿಯುಳ್ಳ, ಸಂಧ್ಯಾ-ಸಂಧ್ಯಾಕಾಲವು, ಕಾಲಂವಿನಾ-ಸಾಯಂಕಾಲವನ್ನು ಹೊರತು, ಖರಸ್ಯ-ಖರಾಸುರನಿಗೆ, ಅಭಿಮುಖಾಃ-ಎದುರಾದಂಥಾದ್ದಾಗಿ, ಬಭೌ-ಹೊಳೆಯುತ್ತಿತ್ತು, ತದಾ-ಆ ಕಾಲದಲ್ಲಿ, ಘೋರಾಃ-ಭಯಂಕರಗಳಾದ, ಶಿವಾಃ-ನರಿಗಳೂ, ಖಗಾಃ-ಪಕ್ಷಿಗಳೂ, ಕಂಕಗೋಮಾಯುಗೃಧ್ರಾಶ್ಚ-ಶ್ವೇತಗೃಧ್ರಗಳೂ ನರಿಗಳೂ ಹದ್ದುಗಳೂ ಸಹ. ಭಯಶಂಸಿನಃ-ಭಯವನ್ನೇ ಹೇಳುತ್ತಿರುವವಾಗಿ, ಚುಕ್ರುಶುಃ-ಕೂಗಿದವು ॥೯॥ ಯುದ್ಧೇ-ಕಾಳಗದಲ್ಲಿ, ನಿತ್ಯಾಶುಭಕರಾಃ-ನಿರಂತರವೂ ಅಶುಭವನ್ನೇ ಸೂಚಿಸುತ್ತಿರುವ, ಘೋರನಿದರ್ಶನಾಃ-ದುರ್ನಿಮಿತ್ತಕ್ಕೆ ದೃಷ್ಟಾಂತಭೂತಗಳಾದ, ಶಿವಾಃ-ನರಿಗಳು, ಜ್ವಾಲೋದ್ಗಾರಿಭಿಃ-ಉರಿಯುಸುರುವ ಮಸವೆ ಮಾಡುತ್ತಿರುವ, ಆನನೈಃ-ಮುಖಗಳಿಂದ, ಬಲಸ್ಯ-ಸೈನ್ಯಕ್ಕೆ, ಅಭಿಮುಖಂ-ಎದುರಾಗಿ, ನೇದುಃ-ಧ್ವನಿಗೈದವು ॥೧೦॥ ಪರಿಘಾಭಾಸಃ-ಕಬ್ಬಿಣಕಟ್ಟುಹಾಕಿದ ದೊಣ್ಣೆಯಂತೆ ಹೊಳೆಯುತ್ತಿರುವ, ಕಬಂಧಃ-ಧೂಮಕೇತುವು, ಭಾಸ್ಕರಾಂತಿಕೇ-ಸೂರ್ಯನ ಸಮೀಪದಲ್ಲಿ, ದೃಶ್ಯತೇ-ಕಾಣಲ್ಪಟ್ಟಿತು. ಅಪರ್ವಣಿ-ಪರ್ವಕಾಲವಲ್ಲದ ಕಾಲದಲ್ಲಿ, ಸ್ವರ್ಭಾನುಃ-ರಾಹುವೆಂಬ, ಮಹಾಗ್ರಹಃ-ದೊಡ್ಡಗ್ರಹವು, ಸೂರ್ಯಂ-ಸೂರ್ಯನನ್ನು, ಜಗ್ರಾಹ-ಹಿಡಿದುಕೊಂಡನು ॥೧೧॥ ಮಾರುತಃ-ಗಾಳಿಯು, ಶೀಘ್ರಂ-ಜಾಗ್ರತೆಯಾಗಿ ಪ್ರವಾತಿ-ಪ್ರತಿಕೂಲವಾಗಿ ಬೀಸಿತು. ದಿವಾಕರಃ-ಸೂರ್ಯನು, ನಿಷ್ಪ್ರಭಃ-ಕಾಂತಿಹೀನನು, ಅಭೂತ್-ಆದನು, ರಾತ್ರಿಂವಿನಾ-ರಾತ್ರಿಯ ಹೊರತು, ತಾರಾಃ-ನಕ್ಷತ್ರಗಳು. ಖದ್ಯೋತಸಪ್ರಭಾಃ-ಜ್ಯೋತಿರಿಂಗಣಗಳೆಂಬ ಹುಳುಗಳಿಗೆ ಸಮಾನಕಾಂತಿಯುಳ್ಳವುಗಳಾಗಿ, ಉತ್ಪೇತುಃ-ಉದಯಿಸಿದುವು ॥೧೨॥ ನಲಿನ್ಯಃ-ಕಮಲಸರೋವರಗಳು, ಸಂಲೀನಮೀನವಿಹಗಾಃ-ಬೆದರಿಕೊಂಡ ಮತ್ಸ್ಯಗಳೂ ಪಕ್ಷಿಗಳೂ ಉಳ್ಳವುಗಳಾಗಿ, ಶುಷ್ಕಪಂಕಜಾಃ-ಒಣಗಿದ ಕಮಲಗಳುಳ್ಳವುಗಳಾದವು, ತಸ್ಮಿನ್ ಕ್ಷಣೇ-ಆ ಕ್ಷಣದಲ್ಲಿ. ದ್ರುಮಾಃ-ಗಿಡಗಳು, ಪುಷ್ಪಫಲೈಃ-ಹುವ್ವುಗಳಿಂದಲೂ ಫಲಗಳಿಂದಲೂ, ವಿನಾಬಭೂವುಃ-ಶೂನ್ಯಗಳಾದವು ॥೧೩॥ ವಾತಂವಿನಾ-ಗಾಳಿಯ ಹೊರತು, ಜಲಧರಾರುಣಾಃ-ಮೇಘದಂತೆ ಕೆಂಪಾಗಿರುವ, ರೇಣುಃ-ಧೂಳಿಯು, ಉದ್ಧೃತಃ-ಉ

---

ಅಶುಭಸೂಚಕವಾಗಿರುವ, ಭಯಂಕರವಾದ ಶಬ್ದಗಳು ಗೈಯುತ್ತಿದ್ದವು ॥೬॥ ಇಷ್ಟುಮಾತ್ರವಲ್ಲದೆ ಬೀದಕ್ಕೂ ಕಿದು ಸೇರಿರುವ, ಬೆಟ್ಟಗಳಂತೆ ತೋರುವ, ಮತ್ತು ರಕ್ತವಂತಿರುವ, ಜಲವಂ ಧರಿಸುವ ಮೇಘಂಗಳು ಗಗನದಲ್ಲಿ ಸಮ್ಮರ್ದವಾಗಿ ಸೇರಿದವು ॥೭॥ ಮತ್ತು ರೋಮಾಂಚಕರವಾದ ಮಹಾ ಗಾಢಾಂಧಕಾರವು ಮುಚ್ಚಿಕೊಂಡಿತು, ಆಗ ದಿಕ್ಕುಗಳೂ ಯಾವವೂ ಸಹಾ ಸ್ಪಷ್ಟವಾಗಿ ಕಾಣಲಿಲ್ಲ ॥೮॥ ರಕ್ತದಿಂದ ತೋಯಿಸಲ್ಪಟ್ಟ ವಸ್ತುವಿನಂತೆ ಕೆಂಪಾಗಿರುವ ಸಂಧ್ಯಾಕಾಲವು ಸಾಯಂಕಾಲವಾಗದಿದ್ದರೂ ಸಾಯಂಕಾಲದಂತೆ ಖರನಿಗೆ ತೋರುತ್ತಿತ್ತು, ಆ ಸಮಯದಲ್ಲಿ ಭಯಂಕರವಾದ ನರಿಗಳೂ, ಪಕ್ಷಿಗಳೂ, ರಣಹದ್ದುಗಳೂ, ಹದ್ದುಗಳೂ ರಾಕ್ಷಸನಾಶವಂ ಪೇಳುವವಾಗಿ ಸೈನ್ಯಕ್ಕೆದುರಾಗಿ ಕೂಗುತ್ತಿದ್ದವು ॥೧೦॥ ಇದಲ್ಲದೆ ಕಬ್ಬಿಣಕಟ್ಟುಗಳುಳ್ಳ ಮರದ ದೊಣ್ಣೆಯಂತೆ ಹೊಳೆವ ಧೂಮಕೇತುವು ಸೂರ್ಯನ ಸಮೀಪದಲ್ಲಿ ಕಾಣುತ್ತಿತ್ತು, ಮತ್ತೂ ಪರ್ವಕಾಲವು ಪ್ರಾಪ್ತವಾಗದಿದ್ದರೂ ಕ್ರೂರಗ್ರಹವಾದ ರಾಹುವು ಸೂರ್ಯನಂ ಪಿಡಿದುಕೊಂಡನು ॥೧೧॥ ಆ ಸಮಯದಲ್ಲಿ ಗಾಳಿಯು ಎದುರಾಗಿ ಬೀಸುತ್ತಿತ್ತು, ಸೂರ್ಯನು ಕಾಂತಿಹೀನನಾದನು, ಹಗಲೇ ನಕ್ಷತ್ರಂಗಳು ಜ್ಯೋತಿರಿಂಗಣಗಳೆಂಬ ಹುಳುಗಳಂತೆ ಕಂಗೊಳಿಸುತ್ತಾ ನೆಲದಲ್ಲಿ ಬೀಳುತ್ತಿದ್ದವು ॥೧೨॥ ಇದಲ್ಲದೆ ಕಮಲಸರೋವರಂಗಳು ಬೆದರಿಕೊಂಡ ಮೀನುಗಳು ಪಕ್ಷಿಗಳೂ ಸಹಾ ಉಳ್ಳವುಗಳಾಗಿಯೂ, ಒಣಗಿದ ತಾವರೇ ಹುವ್ವುಗಳುಳ್ಳವುಗಳಾಗಿಯೂ ಇದ್ದವು, ಆಗ ವೃಕ್ಷಂಗಳಲ್ಲಿರುವ ಪುಷ್ಪಂಗಳು ಫಲಂಗಳು ಇವೆಲ್ಲ ಕೆಳಗೆ ಉದುರಿದವು, ಆ ವೇಳೆಯಲ್ಲಿ ಬಿರುಗಾಳಿಯು ಬೀಸದಿದ್ದಾಗೂ ಮೇಘವಂದದ

ದ್ಧಿತಶ್ಚ ವಿನಾ ವಾತಂ ಶೋಣಾರ್ದ್ರಶಲಭಕಾರುಣಃ । ವೀಚೀಕೂಚೀತಿ ವಾಶ್ಯಂತ್ಯೋ ಬಭೂವುಸ್ತತ್ರ ಶಾರಿಕಾಃ ।೧೪॥ ಉಲ್ಕಾಶ್ಚಾಪಿ ಸನಿರ್ಘಾತಾ ನಿಪೇತುರ್ಘೋರದರ್ಶನಾಃ । ಪ್ರಚಚಾಲ ಮಹೀ ಸರ್ವಾ ಸಶೈಲವನಕಾನನಾ ।೧೫॥ ಖರಸ್ಯ ಚ ರಥಸ್ಥಸ್ಯ ನರ್ದಮಾನಸ್ಯ ಧೀಮತಃ ॥ ಪ್ರಾಕಂಪತ ಭುಜಸ್ಸವ್ಯಸ್ಸ್ವರಶ್ಚಾಸ್ಯಾವಸಜ್ಜತ ।೧೬॥ ಸಾಸ್ರಾ ಸಂಪದ್ಯತೇ ದೃಷ್ಟಿಃ ಪಶ್ಯಮಾನಸ್ಯ ಸರ್ವತಃ । ಲಲಾಟೇ ಚ ರುಜಾ ಜಾತಾ ನ ಚ ಮೋಹಾನ್ನ್ಯವರ್ತತ ।೧೭॥ ತಾನ್ ಸಮೀಕ್ಷ್ಯ ಮಹೋತ್ಪಾತಾನುತ್ಥಿತಾನ್ ರೋಮಹರ್ಷಣಾನ್ । ಅಬ್ರವೀದ್ರಾಕ್ಷಸಾನ್ ಸರ್ವಾನ್ ಪ್ರಹಸನ್ ಸ ಖರಸ್ತದಾ ।೧೮॥ ಮಹೋತ್ಪಾತಾನಿಮಾನ್ ಸರ್ವಾನುತ್ಥಿತಾನ್ ಘೋರದರ್ಶನಾನ್ ॥ ನ ಚಿಂತಯಾಮ್ಯಹಂ ವೀರ್ಯಾದ್ಬಲವಾನ್ ದುರ್ಬಲಾನಿವ ।೧೯॥ ತಾರಾ ಅಪಿ ಶರೈಸ್ತೀಕ್ಷ್ಣೈಃ ಪಾತಯಾಮಿ ನಭಸ್ಥಲಾತ್ । ಮೃತ್ಯುಂ ಮರಣಧರ್ಮೇಣ ಸಂಕ್ರುದ್ಧೋ ಯೋಜಯಾಮ್ಯಹಂ ।೨೦॥ ರಾಘವಂ ತಂ ಬಲೋತ್ಸಿಕ್ತಂ ಭ್ರಾತರಂ ಚಾಸ್ಯ ಲಕ್ಷ್ಮಣಂ । ಅಹತ್ವಾ ಸಾಯಕೈಸ್ತೀಕ್ಷ್ಣೈರ್ನೋ

---

ದ್ಧ್ಯೂತವಾಯಿತು. ॥ ತತ್ರ–ಆ ಕಾಲದಲ್ಲಿ, ಶಾರಿಕಾಃ–ಗಿಣಿಗಳು, ವೀಚೀಕೂಚೀತಿ–ವೀಚ್ ಕೂಚ್ ಎಂಬ ಅನುಕರಣ ಶಬ್ದವೆಲ್ಲಿದಂತೆ, ವಾಶ್ಯಂತಿಃ–ಧ್ವನಿಮಾಡುತ್ತಿರುವವು. ಬಭೂವುಃ–ಆದವು ॥೧೪॥ ಉಲ್ಕಾಃ–ಕೊಳ್ಳಿಗಳೂ ಸನಿರ್ಘಾತಾಃ–ಮಹಾಧ್ವನಿಯಿಂದ ಕೂಡಿದವುಗಳಾಗಿ, ಘೋರದರ್ಶನಾಃ–ಭಯಂಕರವಾದ ನೋಟವುಳ್ಳವುಗಳಾಗಿ, ನಿಪೇತುಃ–ಬಿದ್ದವು, ಸರ್ವಾ–ಸಮಸ್ತವಾದ, ಸಶೈಲವನಕಾನನಾ–ಬೆಟ್ಟಗಳು ಅರಣ್ಯಗಳಿಂದೊಡಗೂಡಿದ, ಮಹೀ–ಭೂಮಿಯು. ಪ್ರಚಚಾಲ–ಕಂಪಿಸಿತು ॥೧೫॥ ರಥಸ್ಥಸ್ಯ–ರಥಾರೂಢನಾದ, ನರ್ದಮಾನಸ್ಯ–ಕೂಗುತ್ತಿರುವ, ಧೀಮತಃ–ಬುದ್ಧಿಶಾಲಿಯಾದ, ಅಸ್ಯ ಖರಸ್ಯ–ಈ ಖರಾಸುರನ, ಸವ್ಯೋ ಭುಜಃ–ಎಡಭುಜವು, ಪ್ರಾಕಂಪತ–ಅದರಿತು, ಸ್ವರಶ್ಚ–ಕಂಠಸ್ವರವೂ, ಅವಸಜ್ಜತ–ಕೀಳಾಯಿತು, ॥೧೬॥ ಸರ್ವತಃ–ಸರ್ವಪ್ರದೇಶದಲ್ಲಿಯೂ, ಪಶ್ಯಮಾನಸ್ಯ–ನೋಡುತ್ತಿರುವ. ದೃಷ್ಟಿಃ–ನೋಟವು. ಸಾಸ್ರಾ–ಕಂಬನಿಯಿಂದ ಕೂಡಿದ್ದು ಸಂಪದ್ಯತೇ–ಆಯಿತು, ಲಲಾಟೇ ಚ–ಹಣೆಯಲ್ಲಿಯೂ, ರುಜಾ–ನೋವು, ಜಾತಾ–ಹುಟ್ಟಿತು, ಮೋಹಾತ್–ಅಜ್ಞಾನದಿಂದ, ನ ನ್ಯವರ್ತತ–ಹಿಂತಿರುಗಲಿಲ್ಲ ॥೧೭॥ ॥ ತದಾ–ಆ ಕಾಲದಲ್ಲಿ. ಸ ಖರಃ–ಆ ಖರಾಸುರನು. ಉತ್ಥಿತಾನ್–ಹುಟ್ಟಿರುವ, ರೋಮಹರ್ಷಣಾನ್–ರೋಮಾಂಚನವನ್ನುಂಟುಮಾಡುತ್ತಿರುವ, ತಾನ್ ಮಹೋತ್ಪಾತಾನ್–ಆ ಮಹಾ ಅಪಶಕುನಗಳನ್ನು. ಸಮೀಕ್ಷ್ಯ–ಕಂಡು, ಸರ್ವಾನ್–ಸಮಸ್ತರಾದ, ರಾಕ್ಷಸಾನ್–ರಕ್ಕಸರನ್ನು ಕುರಿತು, ಪ್ರಹಸನ್–ನಗುತ್ತಿರುವವನಾಗಿ. ಅಬ್ರವೀತ್–ನುಡಿದನು ॥೧೮॥ ॥ ಸರ್ವಾನ್–ಸಮಸ್ತವಾದ, ಘೋರದರ್ಶನಾನ್–ಭಯಂಕರವಾದ ನೋಟವುಳ್ಳ, ಉತ್ಥಿತಾನ್–ಹುಟ್ಟಿರುವ ಇಮಾನ್ ಮಹೋತ್ಪಾತಾನ್–ಈ ಮಹೋತ್ಪಾತಗಳನ್ನು, ಬಲವಾನ್–ಬಲವಂತನು, ದುರ್ಬಲಾನಿವ–ಬಲಹೀನರನ್ನಂತೆ. ಅಹಂ–ನಾನು. ವೀರ್ಯಾತ್–ಪರಾಕ್ರಮದ ಬಲೆಯಿಂದ, ನ ಚಿಂತಯಾಮಿ–ಆಲೋಚಿಸಿದವನಲ್ಲ ॥೧೯॥ ॥ ತೀಕ್ಷ್ಣೈಃ–ಹದವುಳ್ಳ, ಶರೈಃ–ಬಾಣಗಳಿಂದ, ತಾರಾಃ–ನಕ್ಷತ್ರಗಳನ್ನು, ನಭಸ್ಥಲಾತ್–ಅಂತರಿಕ್ಷದ ಬಳಿಯಿಂದ, ಪಾತಯಾಮಿ–ಕೆಡಹುವೆನು, ಸಂಕ್ರುದ್ಧಃ–ಕೋಪಿಷ್ಠನಾದ, ಅಹಂ–ನಾನು, ಮೃತ್ಯುಂ–ಯಮನನ್ನು, ಮರಣಧರ್ಮೇಣ–ಮರಣವೆಂಬ ಧರ್ಮದಿಂದ, ಯೋಜಯಾಮಿ–ಸೇರಿಸುವೆನು ॥೨೦॥ ಬಲೋತ್ಸಿಕ್ತಂ–ಬಲಾಧಿಕನಾದ, ರಾಘವಂ–ಆ ಶ್ರೀರಾಮನನ್ನು, ಅಸ್ಯ–ಈ ರಾಮನಿಗೆ, ಭ್ರಾತರಂ–ತಮ್ಮನಾದ. ಲಕ್ಷ್ಮಣಂ ಚ–ಲಕ್ಷ್ಮಣನನ್ನು. ತೀಕ್ಷ್ಣೈಃ–ಬಾಣಗಳಿಂದ, ಅಹತ್ವಾ–ಕೊಲ್ಲದೆ, ಉಪಾವರ್ತಿತುಂ–ಹಿಂತಿರುಗುವದಕ್ಕಾಗಿ. ನೋತ್ಸಹೇ–ಉದ್ಯುಕ್ತನಾಗಲಾರೆನು, (ವಸ್ತುತಸ್ತು) ರಾಘವಂ–ಶ್ರೀರಾಮನನ್ನು, ಅಹತ್ವಾ–ಹೊಡೆಯದೆ, ಅಂದರೆ–ಹೊಡೆಯುವದಕ್ಕೆ ಸಮರ್ಥನಾಗದೆ, ಉಪಾವರ್ತಿತುಂ–ಹಿಂತಿರುಗುವದಕ್ಕಾಗಿ, ನೋತ್ಸಹೇ–ಉದ್ಯುಕ್ತನಾಗಲಾರೆನು. ಅಂದರೆ ಹಿಂತಿರುಗದೇ ಅಲ್ಲೇ ಸಾಯುವೆನು ಎಂಬುದು ತಾತ್ಪರ್ಯ. ಅಲ್ಲದೆ ಹಿಂತಿರುಗದೇ ಅಲ್ಲೇ ನಾಶವಾಗುವೆನು ಎಂದರ್ಥದಲ್ಲಿ ಹೊ

---

ಗಡು ಕೆಂಪಾದ ಧೂಳಿಯು ಉದ್ಭವವಾಯಿತು; ಆ ಸಮಯದಲ್ಲಿ ಗಿಣಿಗಳು ಕೀಚುಕೀಚೆಂದು ಕೂಗುತ್ತಿದ್ದವು ಕೊಳ್ಳಿಗಳು ಮಹಾ ಭಯಂಕರವಾಗಿ ಕೆಳಗೆಬಿದ್ದವು, ಆಗ ಪರ್ವತಂಗಳಿಂದಲೂ ವನಂಗಳಿಂದಲೂ ಅರಣ್ಯಗಳಿಂದಲೂ ಯುಕ್ತವಾದ ಭೂಮಿಯು ಗಡಗಡನೆ ನಡುಗಿತು. ।೧೫। ಆ ವೇಳೆಯಲ್ಲಿ ರಥದಲ್ಲಿ ಕುಳಿತಿರುವ ಆ ಖರಾಸುರನ ಯೆಡಗೈಯ್ಯಿ ಅದಿರಿತು; ಕಂಠವು ಕುಗ್ಗಿದಂಥಾದ್ದಾಯಿತು; ಸುತ್ತುಮುತ್ತಲೂ ನೋಡುತ್ತಿದ್ದರೂ ಅವನ ದೃಷ್ಟಿಯು ಕಂಬನಿಗಳಿಂದ ಮಾಂದ್ಯವಾಯಿತು; ಲಲಾಟಪ್ರದೇಶದಲ್ಲಿ ರೋಗವು ಸಂಜನಿಸಿತು. ಈ ರೀತಿಯಾಗಿ ತನ್ನ ನಾಶಸೂಚಕವಾದ ಮಹಾ ಉತ್ಪಾತಂಗಳುಂಟಾದರೂ ಆ ಖರಾಸುರನು ಅವುಗಳಂ ಕಂಡು ಆಗ ತನ್ನ ಸಂಗಡ ಬರುವ ರಾಕ್ಷಸರಂ ಕುರಿತು ನುಡಿವನದೆಂತೆಂದೆನೆ,—।೧೮। ಎಲೈ ಅಸುರರುಗಳಿರಾ! ಅಲ್ಪರು ಉತ್ಪಾತಂಗಳಂ ಕಂಡು ಹೆದರುವಂತೆ ನಾನು ಹೆದರತಕ್ಕವನಲ್ಲ ಯೆನ್ನ ಪರಾಕ್ರಮವಂ ನೋಡುವವರಾಗಿ ಈಗ ತೀಕ್ಷ್ಣವಾದ ನಿಶಿತಶರಂಗಳಿಂದ ನಕ್ಷತ್ರಂಗಳಂ ಗಗನದಿಂದ ಕೆಳಗೆ ಬೀಳಿಸುವೆನು, ಕಡುಕೋಪವುಳ್ಳವನಾಗಿ ಮೃತ್ಯುವನ್ನೂ ಕೂಡಾ ಸಾಯುವಂತೆ ಗೈಯುವೆನು, ಬಹು ಬಲವಂತನಾದ ಆ ಶ್ರೀರಾಮನನ್ನೂ ಆತನ ತಮ್ಮನಾದ ಲಕ್ಷ್ಮಣನನ್ನೂ ಸಹ ಕೊಲ್ಲದೆ ಇಂದಿಗೆ ಹಿಂತಿರುಗುವದಿಲ್ಲ; [ತತ್ತ್ವಾಭಿಪ್ರಾಯವೇನೆಂದರೆ,— ಆ ಶ್ರೀರಾಮನಂ ಹೊಡೆಯುವ

ಕ್ಷ್ಣೋಪಾವರ್ತಿತುಮುತ್ಸಹೇ ॥೧೧॥ ಸಕಾಮಾಭಗಿನೀಮೇಸ್ತುಪೀತ್ವಾತುರುಧಿರಂತಯೋಃ । ಯನ್ನಿಮಿತ್ತಸ್ತುರಾಮಸ್ಯಲಕ್ಷ್ಮಣಸ್ಯವಿಪರ್ಯಯಃ ॥೧೨॥ ನಕ್ವಚಿತ್ಪ್ರಾಪ್ತಪೂರ್ವೋಮೇಸಂಯುಗೇಷುಪರಾಜಯಃ । ಯುಷ್ಮಾಕಮೇತತ್ಪ್ರತ್ಯಕ್ಷಂನಾನೃತಂಕಥಯಾಮ್ಯಹಂ ॥೧೩॥ ದೇವರಾಜಮಪಿಕ್ರುದ್ಧೋಮತ್ತೈರಾವತಯಾಯಿನಂ । ವಜ್ರಹಸ್ತಂರಣೇಹನ್ಯಾಂಕಿಂಪುನಸ್ತೌಕುಮಾನುಷೌ ॥೧೪॥ ಸಾತಸ್ಯಗರ್ಜಿತಂಶ್ರುತ್ವಾರಾಕ್ಷಸಸ್ಯಮಹಾಚಮೂಃ । ಪ್ರಹರ್ಷಮತುಲಂಲೇಭೇಮೃತ್ಯುಪಾಶಾವಪಾಶಿತಾ ॥೧೫॥ ಸಮೀಯುಶ್ಚಮಹಾತ್ಮಾನೋಯುದ್ಧದರ್ಶನಕಾಂಕ್ಷಿಣಃ । ಋಷಯೋದೇವಗಂಧರ್ವಾಸ್ಸಿದ್ಧಾಶ್ಚಸಹಚಾರಣೈಃ । ಸಮೇತ್ಯಚೋಚುಸ್ಸಹಿತಾಸ್ತೇನ್ಯೋನ್ಯಂಪುಣ್ಯಕರ್ಮಣಃ ॥೧೬॥ ಸ್ವಸ್ತಿಗೋಬ್ರಾಹ್ಮಣೇಭ್ಯೋಸ್ತುಲೋಕಾನಾಂಯೇಭಿಸಂಗತಾಃ । ಜಯತಾಂರಾಘವಸ್ಸಂಖ್ಯೇಪೌಲಸ್ತ್ಯಾನ್ರಜನೀಚರಾನ್ ॥

---

ಗುತ್ತೇನೆಂಬ ತಾತ್ಪರ್ಯವು ॥೧೧॥ ॥ ರಾಮಸ್ಯ-ಶ್ರೀರಾಮನಿಗೂ, ಲಕ್ಷ್ಮಣಸ್ಯಚ-ಲಕ್ಷ್ಮಣನಿಗೂ, ವಿಪರ್ಯಯಃ-ನಾಶವು, ಯನ್ನಿಮಿತ್ತಃ-ಯಾವ ಶೂರ್ಪಣಖೆಯೇ ನಿಮಿತ್ತವಾಗಬಲ್ಲದ್ದೋ, ಸಾ-ಅಂಥಾ, ಮೇ-ನನ್ನ, ಭಗಿನೀ-ತಂಗಿಯಾದ ಶೂರ್ಪಣಖೆಯು, ತಯೋಃ-ಆ ರಾಮಲಕ್ಷ್ಮಣರ ರುಧಿರಂ-ರಕುತವನ್ನು, ಪೀತ್ವಾ-ಪಾನಮಾಡಿ, ಸಕಾಮಾ-ಕೋರಿಕೆಯುಂಕೂಡಿದವಳು, ಅಸ್ತು-ಆಗಲೀ. (ವಸ್ತುತಸ್ತು-ರಾಮಸ್ಯ-ಲಕ್ಷ್ಮಣಸ್ಯಚ-ರಾಮಲಕ್ಷ್ಮಣರ ಸಮೀಪದಲ್ಲಿ. ಮಮ-ನನ್ನ. ವಿಪರ್ಯಯಃ-ನಾಶವು, ಯನ್ನಿಮಿತ್ತಃ-ಯಾವಶೂರ್ಪಣಖೆಯೇ ನಿಮಿತ್ತವಾಗಬಲ್ಲದ್ದೋ ಅಂಥಾ ಶೂರ್ಪಣಖೆಯು, ಮಮ-ನನ್ನ. ರುಧಿರಂ-ರಕುತವನ್ನು, ಪೀತ್ವಾ-ಕುಡಿದು, ಸಕಾಮಾ-ಕೋರಿಕೆಯಿಂದ ಕೂಡಿದವಳು. ಅಸ್ತು-ಆಗಲೀ ॥೧೨॥ ಮೇ-ನನಗೆ, ಸಂಯುಗೇಷು-ಕಾಳಗಗಳಲ್ಲಿ. ಪರಾಜಯಃ-ಪರಾಭವವು, ಕ್ವಚಿತ್-ಯಾವಸ್ಥಳದಲ್ಲಿಯೂ, ನಪ್ರಾಪ್ತಪೂರ್ವಃ-ಪೂರ್ವದಲ್ಲಿ ಪ್ರಾಪ್ತವಾಗಲಿಲ್ಲ. ಯುಷ್ಮಾಕಂ-ನಿಮ್ಮಗಳಿಗೆ. ಏತತ್-ಇದು, ಪ್ರತ್ಯಕ್ಷಂ-ಪ್ರಮಾಣಸಿದ್ಧವಾಗಿದೆ, ಅಹಂ-ನಾನು, ಅನೃತಂ-ಸುಳ್ಳಾದವಚನನ್ನು, ನಕಥಯಾಮಿ-ಹೇಳುವನಲ್ಲ. ಅಹಂ-ನಾನು. ಕ್ರುದ್ಧಃ-ಕೋಪಿಷ್ಠನಾಗಿ, ಮತ್ತೈರಾವಣಯಾಯಿನಂ-ಮದವೇರಿದ ಐರಾವತವೆಂಬ ಗಜದಿಂದ ಬರುತ್ತಿರುವ, ವಜ್ರಹಸ್ತಂ-ವಜ್ರಪಾಣಿಯಾದ, ದೇವರಾಜಮಪಿ-ದೇವೇಂದ್ರನನ್ನೂ, ರಣೇ-ಕಾಳಗದಲ್ಲಿ. ಹನ್ಯಾಂ-ಹೊಡೆಯುವೆನು. ತೌ ಕುಮಾನುಷೌ-ಆ ಕುತ್ಸಿತಮನುಷ್ಯರನ್ನು, ಕಿಂಪುನಃ-ಯೇನುಹೇಳತಕ್ಕದ್ದು ॥೧೪॥ ॥ ರಾಕ್ಷಸಸ್ಯ-ಖರಾಸುರನ, ಸಾಮಹಾಚಮೂಃ-ಆ ಮಹಾಸೈನ್ಯವು, ತಸ್ಯ-ಆ ಖರಾಸುರನ, ಘರ್ಜಿತಂ-ಕೋಲಾಹಲಧ್ವನಿಯನ್ನು, ಶ್ರುತ್ವಾ-ಕೇಳಿ, ಮೃತ್ಯುಪಾಶಾ-ಪಾಶಿತಾ-ಯಮಪಾಶದಿಂ ಬದ್ಧವಾಗಿ, ಅತುಲಂ-ಸಮಾನವಿಲ್ಲದಿರುವ, ಪ್ರಹರ್ಷಂ-ಸಂತೋಷವನ್ನು, ಲೇಭೆ-ಹೊಂದಿತು ॥೧೫॥ ॥ ಮಹಾತ್ಮಾನಃ-ಮಹಾತ್ಮರಾದ, ದೇವಗಂಧರ್ವಾಃ-ದೇವತೆಗಳೂ ಗಂಧರ್ವರೂ. ಸಿದ್ಧಾಶ್ಚ-ಸಿದ್ಧರೂ, ಋಷಯಶ್ಚ-ಋಷಿಗಳೂ. ಚಾರಣೈಸ್ಸಹ-ಚಾರಣರೊಡಗೂಡ, ಯುದ್ಧದರ್ಶನಕಾಂಕ್ಷಿಣಃ-ಯುದ್ಧವಂ ನೋಟದಲ್ಲಿ ಅಭಿಲಾಷೆಯುಳ್ಳವರಾಗಿ. ಸಮೀಯುಃ-ಬಂದರು, ತೇ-ಆ ಋಷಿದೇವತೆಗಳೆಲ್ಲರೂ, ಸಮೇತ್ಯ-ಬಂದು, ಸಹಿತಾಃ-ಗುಂಪುಕೂಡಿದವರಾಗಿ, ಪುಣ್ಯಕರ್ಮಣಃ-ಪುಣ್ಯಕರವಾದ ಸತ್ಕರ್ಮಗಳುಳ್ಳವರಾಗಿ, ಅನ್ಯೋನ್ಯಂ-ಒಬ್ಬರಿಗೊಬ್ಬರು, ಊಚುಃ-ಹೇಳಿದರು ॥೧೬॥ ಯೇ-ಯಾರು, ಲೋಕಾನಾಂ-ಲೋಕಗಳಿಗೆ ಅಭಿಸಂಗತಾಃ-ಅನುಕೂಲರೋ.-ತೇಭ್ಯಃ ಗೋಬ್ರಾಹ್ಮಣೇಭ್ಯಃ-ಅಂಥಾ ಗೋವುಗಳಿಗೂ ಬ್ರಾಹ್ಮಣರಿಗೂ. ಸ್ವಸ್ತಿ-ಶುಭವು ಅಸ್ತು-ಆಗಲಿ. ರಾಘವಃ-ಶ್ರೀರಾಮನು, ಸಂಖ್ಯೇ-ಕಾಳಗದಲ್ಲಿ, ಚಕ್ರಹಸ್ತಃ-ಶ್ರೀಮಹಾವಿಷ್ಣುವು, ಯುದ್ಧೇ-ಕಾಳಗದಲ್ಲಿ, ಸರ್ವಾನ್-ಸಮಸ್ತರಾದ, ಅಸುರಪುಂಗವಾನ್ಯಥಾ-ರಾಕ್ಷಸ

---

ದಕ್ಕೆ ಸಮರ್ಥನಾಗದೆ ಹಿಂತಿರುಗುವವನೇ ಯಿಲ್ಲ, ಅಂದರೆ ಇಲ್ಲಿಯೇ ಮರಣವನ್ನೈದುವೆನೆಂದು ಭಾವವು] ॥೧೧॥ ದಶರಥಪುತ್ರರಾದ ರಾಮಲಕ್ಷ್ಮಣರೀರ್ವರಿಗೂ ಯಾವ ಶೂರ್ಪಣಖಿಯಿಂದ ನಾಶವುಂಟಾಗುವದೋ ಅಂಥಾ ನನ್ನ ಒಡಹುಟ್ಟಿದವಳು ಅವರೀರ್ವರ ರಕುತವಂ ಪಾನಂಗೈದು ತೃಪ್ತಳಾಗಲಿ, [ತತ್ವಾಭಿಪ್ರಾಯವೇನೆಂದರೆ,—ರಾಮಲಕ್ಷ್ಮಣರ ಸನ್ನಿಧಾನದಲ್ಲಿ ನನ್ನ ವಿನಾಶಕ್ಕೆ ಯಾವ ಶೂರ್ಪನಖಿಯೇ ಕಾರಣವಾದಳೋ, ಅಂಥಾ ಶೂರ್ಪನಖಿಯು ನನ್ನ ರಕ್ತಪಾನವಂ ಗೈದು ಇಂದಿಗೆ ತೃಪ್ತಳಾಗಲಿ] ॥೧೨॥ ಕಾಳಗದಲ್ಲಿ ನನಗೆಂದಿಗೂ ಪರಾಜಯವಿಲ್ಲ ನಿಮಗೆಲ್ಲಾ ಇದು ಪ್ರತ್ಯಕ್ಷವಾಗಿಯೇ ಇಧೆಯಷ್ಟೆ? ನಾನು ಅನೃತವಂ ಹೇಳತಕ್ಕವನಲ್ಲ, ಎನಗೆ ಕೋಪಮುಂಟಾದೊಡೆ ಐರಾವತದಲ್ಲಿ ಕುಳಿತಿರುವ, ವಜ್ರಾಯುಧವಂ ಪಿಡಿದಿರುವ ದೇವೇಂದ್ರನನ್ನು ಸಹಾ ಕೊಲ್ಲಲು ಶಕ್ತಿಯುಂಟು ಹೀಗಿರುವಾಗ ಆ ರಾಮಲಕ್ಷ್ಮಣರ ವಿಷಯದಲ್ಲಿ ಏನು ಹೇಳತಕ್ಕದ್ದೆಂದು ನುಡಿದವನಾಗಲು, ಆ ಸೈನ್ಯವೆಲ್ಲಾ, ಅವನ ಅಟ್ಟಹಾಸವಂ ಕೇಳಿ, ಯಮಪಾಶದಿಂದ ಬದ್ಧವಾದೆಂಥಾದ್ದಾಗಿ ಮಹಾ ಸಂತೋಷವನ್ನೈದಿತು ॥೧೫॥ ಆ ಸಮಯದಲ್ಲಿ ಮಹಾತ್ಮರಾದ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಚಾರಣರೂ ಋಷಿಗಳೂ ಆ ಕಾಳಗವಂ ನೋಡುವದಕ್ಕಾಗಿ ಗುಂಪುಕೂಡಿ ಒಬ್ಬರಿಗೊಬ್ಬರು ಹೇಳಿಕೊಳ್ಳುವದಹೇಂತೆನೆ,—ಲೋಕಂಗಳಿಗೆ ಅನುಕೂಲವಂ ಬಯಸುವ, ಗೋವುಗಳಿಗೂ, ಬ್ರಾಹ್ಮರಿಗೂ ಶುಭವುಂಟಾಗಲಿ, ಶ್ರೀಮಹಾವಿಷ್ಣುವು ರಾಕ್ಷಸಗುಂಪುಗಳನ್ನು ಜಯಿಸುವಂತೆ ಶ್ರೀರಾಮನು ಪುಲಸ್ತ್ಯವಂಶೋತ್ಪನ್ನರಾದ ಈ ರಾಕ್ಷಸರನ್ನೆಲ್ಲಾ

ಚಕ್ರಹಸ್ತೋ ಯಥಾಯುದ್ಧೇ ಸರ್ವಾನಸುರಪುಂಗವಾನ್ | ಏತಚ್ಚಾನ್ಯಚ್ಚ ಬಹುಶೋ ಬ್ರುವಾಣಾಃ ಪರಮರ್ಷಯಃ | ಜಾ
ತಕೌತೂಹಲಾಸ್ತತ್ರ ವಿಮಾನಸ್ಥಾಶ್ಚ ದೇವತಾಃ | ದದೃಶುರ್ವಾಹಿನೀಂ ತೇಷಾಂ ರಾಕ್ಷಸಾನಾಂ ಗತಾಯುಷಾಂ ||೩೦|| ರಥೇ ನ
ತು ಖರೋ ವೇಗಾದುಗ್ರಸೈನ್ಯೋ ವಿನಿಸ್ಸೃತಃ | ತಂ ದೃಷ್ಟ್ವಾ ರಾಕ್ಷಸಂ ಭೂಯೋ ರಾಕ್ಷಸಾಶ್ಚ ವಿನಿಸ್ಸೃತಾಃ | ಶ್ಯೇನಗಾಮೀ ಪೃ
ಥುಗ್ರೀವೋ ಯಜ್ಞಶತ್ರುರ್ವಿಹಂಗಮಃ | ದುರ್ಜಯಃ ಕರವೀರಾಕ್ಷಃ ಪರುಷಃ ಕಾಲಕಾರ್ಮುಕಃ | ಮೇಘಮಾಲೀ ಮಹಾ
ಮಾಲೀ ಸರ್ಪಾಸ್ಯೋ ರುಧಿರಾಶನಃ | ದ್ವಾದಶೈತೇ ಮಹಾವೀರ್ಯಾಃ ಪ್ರತಸ್ಥುರಭಿತಃ ಖರಂ ||೩೩|| ಮಹಾಕಪಾಲಸ್ಸ್ಥೂ
ಲಾಕ್ಷಃ ಪ್ರಮಾಥೀ ತ್ರಿಶಿರಾಸ್ತಥಾ | ಚತ್ವಾರ ಏತೇ ಸೇನಾನ್ಯೋ ದೂಷಣಂ ಪೃಷ್ಠತೋಽನ್ವಯುಃ ||೩೪|| ಸಾ ಭೀಮವೇಗಾ ಸ
ಮರಾಭಿಕಾಮಾ ಮಹಾಬಲಾ ರಾಕ್ಷಸವೀರಸೇನಾ | ತೌ ರಾಜಪುತ್ರೌ ಸಹಸಾಭ್ಯುಪೇತಾ ಮಾಲಾ ಗ್ರಹಾಣಾಮಿವ ಚಂದ್ರ
ಸೂರ್ಯೌ ||೩೫||

---*** ಇತಿಶ್ರೀಮದಾರಣ್ಯಕಾಂಡೇ-ತ್ರಯೋವಿಂಶಸ್ಸರ್ಗಃ. ***---

ಆಶ್ರಮಂ ಪ್ರತಿಯಾತೇ ತು ಖರೇ ಖರಪರಾಕ್ರಮೇ | ತಾನೇವೌತ್ಪಾತಿಕಾನ್ ರಾಮಸ್ಸಹ ಭ್ರಾತ್ರಾ ದದರ್ಶ ಹ ||೧|| ತಾ

---

ಶ್ರೇಷ್ಠರನಂತೆ. ಪೌಲಸ್ತ್ಯಾನ್-ಪುಲಸ್ತ್ಯ ವಂಶಸ್ಥರಾದ, ರಜನೀಚರಾನ್-ರಕ್ಕಸರನ್ನು, ಜಯತಾಂ-ಜಯಿಸಲಿ, ಇತಿ-ಇಂತೆಂದು, ಏತಚ್ಚ-ಮತ್ತೊಂದು ಮಾತನ್ನು. ಭೂಯಃ-ಬಹುವಾಗಿ. ಬ್ರುವಾಣಾಃ-ಹೇಳುತ್ತಿರುವವರಾಗಿ, ಪರಮರ್ಷಯಃ-ಶ್ರೇಷ್ಠರಾದ ಋಷಿಗಳೂ ವಿಮಾನಸ್ಥಾಃ-ವಿಮಾನಾರೂಢರಾದ, ದೇವತಾಶ್ಚ-ದೇವತೆಗಳೂ, ತತ್ರ-ಆ ಕಾಲದಲ್ಲಿ, ಜಾತಕೌತೂಹಲಾಸ್ಸಂತಃ-ಹುಟ್ಟಿದ ಅಪೇಕ್ಷೆಯುಳ್ಳವರಾಗಿ. ಗತಾಯುಷಾಂ-ಸವೆಸಿಹೋದ ಆಯುಸ್ಸುಳ್ಳ, ತೇಷಾಂರಾಕ್ಷಸಾನಾಂ-ಆ ರಾಕ್ಷಸರ, ವಾಹಿನೀಂ-ಸೈನ್ಯವನ್ನು, ದದೃಶುಃ-ಕಂಡರು ||೩೦|| ಉಗ್ರಸೈನ್ಯಃ-ಭಯಂಕರವಾದ ಸೈನ್ಯವುಳ್ಳ, ಖರಃ-ಖರಾಸುರನು, ವೇಗಾತ್-ಜವದಿಡೆಯಿಂದ, ರಥೇನ-ರಥದೊಡನೆ ವಿನಿಸ್ಸೃತಃ-ಹೊರಟುಬಂದನು, ತಂರಾಕ್ಷಸಂ-ಆ ಖರಾಸುರನನ್ನು, ದೃಷ್ಟ್ವಾ-ಕಂಡು, ಭೂಯಃ-ಮತ್ತು, ರಾಕ್ಷಸಾಶ್ಚ-ರಾಕ್ಷಸರೂ, ವಿನಿಸ್ಸೃತಾಃ-ಹೊರಟರು ||೩೧|| ಶ್ಯೇನಗಾಮೀ-ಶ್ಯೇನಗಾಮಿಯೆಂಬುವನು, ಪೃಥುಗ್ರೀವಃ-ಪೃಥುಗ್ರೀವನು, ಯಜ್ಞಶತ್ರುಃ-ಯಜ್ಞಶತ್ರುವು. ವಿಹಂಗಮಃ-ವಿಹಂಗಮನು, ದುರ್ಜಯಃ-ದುರ್ಜಯನು, ಕರವೀರಾಕ್ಷಃ-ಕರವೀರಾಕ್ಷನು, ಪರುಷಃ-ಪರುಷನು, ಕಾಲಕಾರ್ಮುಕಃ-ಕಾಲಕಾರ್ಮುಕನು, ಮೇಘಮಾಲೀ-ಮೇಘಮಾಲಿಯು, ಮಹಾಮಾಲೀ-ಮಹಾಮಾಲಿಯು. ಸರ್ಪಾಸ್ಯಃ-ಸರ್ಪಾಸ್ಯನು, ರುಧಿರಾಶನಃ-ರುಧಿರಾಶನನೂ ಎಂಬ, ಮಹಾವೀರ್ಯಾಃ-ಬಹಳ ಪರಾಕ್ರಮಶಾಲಿಗಳಾದ, ಏತೇದ್ವಾದಶ-ಈ ಹನ್ನೆರಡು ಜನ ರಾಕ್ಷಸರು, ಖರಂ-ಖರಾಸುರನ, ಅಭಿತಃ-ಸುತ್ತಲೂ, ಪ್ರತಸ್ಥುಃ-ಹೊರಟರು ||೩೩|| ಮಹಾಕಪಾಲಃ-ಮಹಾಕಪಾಲನು, ಸ್ಥೂಲಾಕ್ಷಃ-ಸ್ಥೂಲಾಕ್ಷನು. ಪ್ರಮಾಥೀ-ಪ್ರಮಾಥಿಯೆಂಬುವನು, ತ್ರಿಶಿರಾಶ್ಚ-ತ್ರಿಶಿರಸ್ಕನೂ ಎಂಬ, ಏತೇಚತ್ವಾರಃ-ಈ ನಾಲ್ಕುಮಂದಿಯು, ಸೇನಾನ್ಯಃ-ಸೇನಾಧ್ಯಕ್ಷರಾಗಿ, ದೂಷಣಂ-ದೂಷಣನನ್ನು ಕುರಿತು. ಪೃಷ್ಠತಃ-ಹಿಂಭಾಗದಲ್ಲಿ, ಅನ್ವಯುಃ-ಹೊರಟರು ||೩೪|| ಭೀಮವೇಗಾ-ಭಯಂಕರವಾದ ಜವವುಳ್ಳ. ಸಮರಾಭಿಕಾಮಾ-ಕಾಳಗವನ್ನೇ ಕೋರುತ್ತಿರುವ, ಮಹಾಬಲಾ-ಬಹಳ ಸಾಮರ್ಥ್ಯವುಳ್ಳ, ಸಾರಾಕ್ಷಸವೀರಸೇನಾ-ಆ ರಾಕ್ಷಸಶ್ರೇಷ್ಠರ ಸೈನ್ಯವು, ಚಂದ್ರಸೂರ್ಯೌ-ಸೂರ್ಯಚಂದ್ರರನ್ನು ಕುರಿತು. ಗ್ರಹಾಣಾಂ-ಅಂಗಾರಕಾದಿ ಗ್ರಹಗಳ, ಮಾಲೇವ-ಪಙ್ಕ್ತಿಯಂತೆ, ರಾಜಪುತ್ರೌ-ದಶರಥರಾಯನ ಮಕ್ಕಳಾದ. ತೌ-ಆ ರಾಮಲಕ್ಷ್ಮಣರನ್ನು ಕುರಿತು, ಸಹಸಾ-ಜಾಗ್ರತೆಯಾಗಿ, ಅಭ್ಯುಪೇತಾ-ಅಭಿಮುಖವಾಗಿ ಬಂತು|| ||೩೫||

—**ಇತಿಶ್ರೀಮದಾರಣ್ಯಕಾಂಡೇ-ತ್ರಯೋದಶಸ್ಸರ್ಗಃ**—

ಖರಪರಾಕ್ರಮೇ-ಬಹುಕಠಿನವಾದ ಪರಾಕ್ರಮವುಳ್ಳ, ಖರೇ-ಖರಾಸುರನು, ಆಶ್ರಮಂಪ್ರತಿ-ಪರ್ಣಶಾಲೆಯಂ ಕುರಿತು, ಪ್ರತಿಯಾತೇಸತಿ-ಪ್ರ

---

ಜಯಿಸುವವನಾಗಲೆಂಬದಾಗಿಯೂ. ಮತ್ತು ಕೆಲವಿಧಗಳಾಗಿಯೂ ಹೇಳುತ್ತಾ, ವಿಮಾನಂಗಳಲ್ಲಿ ಕುಳಿತಿರುವವರಾ
ಗಿ; ಬಹು ಅನುರಾಗದಿಂದ ನೋಡುತ್ತಿರಲು ಮಹಾ ಭಯಂಕರವಾದ ಸೈನ್ಯಂಗಳುಳ್ಳ ಆ ಖರಾಸುರನು ರಥಾ
ರೂಢನಾಗಿ, ಬಹು ವೇಗದಿಂ ಬಂದವನಾಗಲೂ; ಆ ರಾಕ್ಷಸಸೈನ್ಯವೂ ಕೂಡ ಬಂದದ್ದಾಯಿತದೆಂತೆನೆ;— ||೩೧||
"ಶ್ಯೇನಗಾಮಿ, ಪೃಥುಗ್ರೀವ, ಯಜ್ಞಶತ್ರು, ವಿಹಂಗಮ, ದುರ್ಜಯ, ಕರವೀರಾಕ್ಷ, ಪರುಷ, ಕಾಲಕಾರ್ಮುಕ,
ಮೇಘಮಾಲಿ, ಮಹಾಮಾಲಿ, ಸರ್ಪಾಸ್ಯ, ರುಧಿರಾಶನ" ಎಂಬೀ ಮಹಾ ಪರಾಕ್ರಮಶಾಲಿಗಳಾದ ಹನ್ನೆರಡು
ಮಂದಿ ರಾಕ್ಷಸರು ಖರನಸುತ್ತ ಮುತ್ತಲೂ ಹೊರಟರು ||೩೩|| ಮತ್ತು "ಮಹಾಕಪಾಲ, ಸ್ಥೂಲಾಕ್ಷ, ಪ್ರ
ಮಾಥಿ, ತ್ರಿಶಿರಸ್ಕ," ಎಂಬೀ ನಾಲ್ಕುಮಂದಿಯು ಸೇನಾನಾಯಕರಾಗಿ ದೂಷಣನ ಹಿಂಭಾಗದಲ್ಲಿ ಬಂದರು||೩೪||
ಈ ರೀತಿಯಾಗಿ ಆ ರಾಕ್ಷಸಸೈನ್ಯವು ಯುದ್ಧವನ್ನಿಚ್ಛಿಸುವವದಾಗಿ, ಚಂದ್ರಸೂರ್ಯರಂ ಕುರಿತು ಅಂಗಾರಕಾದಿಗ್ರಹಂ
ಗಳ ಪಙ್ಕ್ತಿಯು ಬರುವಂತೆ ಆ ದಶರಥಪುತ್ರರಾದ ರಾಮಲಕ್ಷ್ಮಣರಂ ಕುರಿತು ತ್ವರೆಯಾಗಿ ಬಂದದ್ದಾಯಿತು||

—*ಅರಣ್ಯಕಾಂಡದಲ್ಲಿ ೨೩ನೆಯ ಸರ್ಗಂ ಮುಗಿದುದು*—

ನುತ್ಪಾತಾನ್ಮಹಾಘೋರಾನುತ್ಥಿತಾನ್ ರೋಮಹರ್ಷಣಾನ್ । ಪ್ರಜಾನಾಮಹಿತಾನ್ದೃಷ್ಟ್ವಾ ವಾಕ್ಯಂ ಲಕ್ಷ್ಮಣಮಬ್ರವೀತ್ ।೨। ಇಮಾನ್ಪಶ್ಯ ಮಹಾಬಾಹೋ ಸರ್ವಭೂತಾಪಹಾರಿಣಃ । ಸಮುತ್ಥಿತಾನ್ಮಹೋತ್ಪಾತಾನ್ ಸಂಹರ್ತುಂ ಸರ್ವರಾಕ್ಷಸಾನ್ ।೩। ಅಮೀ ರುಧಿರಧಾರಾಸ್ತು ವಿಸೃಜಂತಃ ಖರಸ್ವನಾನ್ । ವ್ಯೋಮ್ನಿ ಮೇಘಾ ವಿವರ್ತಂತೇ ಪರುಷಾ ಗರ್ದಭಾರುಣಾಃ ।೪। ಸಧೂಮಾಶ್ಚ ಶರಾಸ್ಸರ್ವೇ ಮಮ ಯುದ್ಧಾಭಿನಂದಿತಾಃ । ರುಕ್ಮಪೃಷ್ಠಾನಿ ಚಾಪಾನಿ ವಿವೇಷ್ಟಂತೇ ಚ ಲಕ್ಷ್ಮಣ । ಯಾದೃಶಾ ಇಹ ಕೂಜಂತಿ ಪಕ್ಷಿಣೋ ವನಚಾರಿಣಃ । ಅಗ್ರತೋ ನೋ ಭಯಂ ಪ್ರಾಪ್ತಂ ಸಂಶಯೋ ಜೀವಿತಸ್ಯ ಚ ।೬। ಸಂಪ್ರಹಾರಸ್ತು ಸುಮಹಾನ್ಭವಿಷ್ಯತಿ ನ ಸಂಶಯಃ । ಅಯಮಾಖ್ಯಾತಿ ಮೇ ಬಾಹುಸ್ಸ್ಫುರಮಾಣೋ ಮುಹುರ್ಮುಹುಃ । ಸನ್ನಿಕರ್ಷೇ ತು ನಶ್ಶೂರ ಜಯಂ ಶತ್ರೋಃ ಪರಾಜಯಂ ।೭। ಸಪ್ರಭಂ ಚ ಪ್ರಸನ್ನಂ ಚ ತವ ವಕ್ತ್ರಂ ಹಿ ಲಕ್ಷ್ಯತೇ । ಉದ್ಯ

---

ಯಾಣದಿಂ ಬಂದವನಾಗಲೀಕಾಗಿ. ರಾಮಃ-ಶ್ರೀರಾಮನು, ಭ್ರಾತ್ರಾಸಹ-ತಮ್ಮನಾದ ಲಕ್ಷ್ಮಣನೊಡನೆ. ತಾನ್ ಉತ್ಪಾತಾನೇವ-ಆದೇ ದುರ್ನಿಮಿತ್ತಗಳನ್ನೇ, ದದರ್ಶಹ-ಕಂಡನಷ್ಟೆ ॥೧॥ ಉತ್ಥಿತಾನ್-ಹುಟ್ಟಿರುವ, ಮಹಾಘೋರಾನ್-ಅತಿಭಯಂಕರಗಳಾದ, ರೋಮಹರ್ಷಣಾನ್-ರೋಮಾಂಚವನ್ನುಂಟುಮಾಡುತ್ತಿರುವ, ಪ್ರಜಾನಾಂ-ಪ್ರಜೆಗಳಿಗೆ, ಅಹಿತಾನ್-ಹಿತಕರವಲ್ಲದಿರುವ. ತಾನುತ್ಪಾತಾನ್-ಆ ಉತ್ಪಾತಗಳನ್ನು, ದೃಷ್ಟ್ವಾ-ಕಂಡು, ಲಕ್ಷ್ಮಣಂ-ಲಕ್ಷ್ಮಣನಂ ಕುರಿತು, ವಾಕ್ಯಂ-ಮಾತನ್ನು. ಅಬ್ರವೀತ್-ನುಡಿದನು ॥೨॥ ಹೇಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೇ, ಸರ್ವರಾಕ್ಷಸಾನ್-ಸಮಸ್ತ ರಕ್ಕಸರನ್ನು ಸಂಹರ್ತುಂ-ಸಂಹಾರಮಾಡುವದಕ್ಕೋಸುಗ, ಸಮುತ್ಥಿತಾನ್-ಹುಟ್ಟಿರುವ, ಸರ್ವಭೂತಾಪಹಾರಿಣಃ-ಸರ್ವರಾಕ್ಷಸರಿಗೂ ನಾಶಸೂಚಕವಾದ, ಇಮಾನ್ಮಹೋತ್ಪಾತಾನ್-ಈ ದುಷ್ಟನಿಮಿತ್ತಗಳನ್ನು, ಪಶ್ಯ-ನೋಡು ॥೩॥ ಗರ್ದಭಾರುಣಾಃ-ಕತ್ತೆಗಳಂತೆ ಧೂಸರವರ್ಣವುಳ್ಳ, ಪರುಷಾಃ-ಕ್ರೂರಗಳಾದ, ಅಮೀಮೇಘಾಃ-ಈ ಮೇಘಗಳು, ರುಧಿರಧಾರಾಃ-ರಕ್ತಧಾರೆಗಳನ್ನು, ಖರಸ್ವನಾನ್-ಕ್ರೂರಧ್ವನಿಗಳನ್ನು, ವಿಸೃಜಂತಃ-ಬಿಡುತ್ತಿರುವವುಗಳಾಗಿ, ವ್ಯೋಮ್ನಿ-ಅಂತರಿಕ್ಷದಲ್ಲಿ, ವಿವರ್ತಂತೇ-ಸಂಚರಿಸುತ್ತವೆ ॥೪॥ ಹೇಲಕ್ಷ್ಮಣ-ಎಲೆ ಲಕ್ಷ್ಮಣನೇ, ಮಮ-ನನ್ನ, ಸರ್ವೇಶರಾಃ-ಸಮಸ್ತ ಬಾಣಗಳೂ, ಸಧೂಮಾಶ್ಚ-ಹೊಗೆಯಿಂದೊಡಗೂಡಿದವುಗಳಾಗಿ, ಯುದ್ಧಾಭಿನಂದಿತಾಃ-ಯುದ್ಧದಲ್ಲೇ ಸಂತೋಷಗೊಂಡವುಗಳಾಗಿವೆ. ರುಕ್ಮಪೃಷ್ಠಾನಿ-ಚಿನ್ನದಪಿಡಿಗಳುಳ್ಳ, ಚಾಪಾನಿ-ಧನುಸ್ಸುಗಳೆಲ್ಲ, ವಿವೇಷ್ಟಂತೇ-ಚಲಿಸುತ್ತವೆ ॥೫॥ ಇಹ-ಈ ಅರಣ್ಯದಲ್ಲಿ ಯಾದೃಶಾಃ-ಯೆಂಥಾವುಗಳಾದ, ಪಕ್ಷಿಣಃ-ಹಕ್ಕಿಗಳು, ವನಚಾರಿಣಃ-ವನದಲ್ಲಿ ಸಂಚಾರಮಾಡುವವು. ಕೂಜಂತಿ-ಕೂಗುತ್ತವೋ, ತೈರ್ನಿಮಿತ್ತೈಃ-ಆ ನಿಮಿತ್ತಗಳಿಂದ, ನಃ-ನಮಗೆ, ಅಗ್ರತಃ-ಮುಂದೆ, ಅಭಯಂ-ಅಭಯವು. ಪ್ರಾಪ್ತಂ-ಬರುತ್ತದೆ. ಶತ್ರೂಣಾಂ-ಶತ್ರುಗಳಿಗೆ. ಜೀವಿತಸ್ಯಚ-ಪ್ರಾಣಕ್ಕೂ, ಸಂಶಯಃ-ಸಂಶಯವು ॥೬॥ ಸುಮಹಾನ್-ಬಹಳವಾದ ಸಂಪ್ರಹಾರಃ-ಯುದ್ಧವು. ಭವಿಷ್ಯತಿ-ಆಗುತ್ತಲಿದೆ. ನಸಂಶಯಃ-ಸಂಶಯವಿಲ್ಲ. ಹೇಶೂರ-ಎಲೈ ಶೂರನೇ, ಮೇ-ನನ್ನ, ಅಯಂಬಾಹುಃ-ಈ ಭುಜವು. ಮುಹುರ್ಮುಹುಃ-ಬಾರಿಬಾರಿಗೂ, ಸ್ಫುರಮಾಣಃ-ಅದುರುತ್ತಿರುವದಾಗಿ, ಸನ್ನಿಕರ್ಷೇತು-ಸಮೀಪದಲ್ಲೇ, ನಃ-ನಮಗೆ, ಜಯಂ-ಜಯವನ್ನು, ಶತ್ರೋಃ-ಶತ್ರುವಿಗೆ, ಪರಾಜಯಂ-ಅಪಜಯವನ್ನು. ಆಖ್ಯಾತಿ-ಪೇಳುತ್ತದೆ ॥೭॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ತವ-ನಿನ್ನ, ವಕ್ತ್ರಂ-ಮುಖವಾದರೆ, ಪ್ರಸನ್ನಂ-ಸೌಮ್ಯವಾದುದಾದ್ದಾಗಿ, ಸಪ್ರಭಂ-ಕಾಂತಿಯುಕ್ತವಾದುದಾದ್ದಾಗಿ, ಲಕ್ಷ್ಯತೇ-ಕಾಣಲ್ಪಡುತ್ತದೆ. ಯುದ್ಧಾರ್ಥಂ-ಯುದ್ಧನಿಮಿತ್ತವಾಗಿ, ಉದ್ಯತಾನಾಂ-ಉದ್ಯುಕ್ತರಾದ, ಯೇಷಾಂ-ಯಾರ, ವದನಂ-ಮುಖವು. ನಿಷ್ಪ್ರಭಂ-ಕಾಂತಿಹೀನವಾದ್ದು. ಭವತಿ-ಆಗುತ್ತದೋ, ತೇಷಾಂ-ಅವರಿಗೆ, ಆಯುಃಪರಿಕ್ಷಯಃ-ಆಯುಸ್ಸಿಗೆ ನಾಶವು. ಭವತಿ-ಆಗುತ್ತದೆ ॥೮॥

---

ಈ ರೀತಿಯಾಗಿ ಮಹಾ ಪರಾಕ್ರಮಶಾಲಿಯಾದ ಆ ಖರಾಸುರನು ಆಶ್ರಮದ ಸಮೀಪವಂ ಕುರಿತು ಬರುತ್ತಿರಲೂ; ಶ್ರೀರಾಮನು ಲಕ್ಷ್ಮಣನಿಂದೊಡಗೂಡಿ ಮಹಾ ಭಯಂಕರವಾದ ಆ ಉತ್ಪಾತಂಗಳಂ ಕಂಡು, ಆ ಲಕ್ಷ್ಮಣನಂ ಕುರಿತು ನುಡಿಯುವನದೆಂತೆನೆ,— ಎಲೈ ಮಹಾ ಭುಜಪರಾಕ್ರಮಶಾಲಿಯಾದ ಲಕ್ಷ್ಮಣನೇ! ರಾಕ್ಷಸ ಸಂಹಾರಾರ್ಥವಾಗಿ ಹುಟ್ಟಿರುವ ಈ ಉತ್ಪಾತಂಗಳನ್ನು ನೋಡುವವನಾಗು ।೩। ಗಾರ್ದಭದಂತೆ ಧೂಸರವಾದ ವರ್ಣವುಳ್ಳ, ಕ್ರೂರಂಗಳಾದ ಈ ಗಗನದಲ್ಲಿ ನಿಂತಿರುವ ಮೇಘಂಗಳು ರಕ್ತಧಾರೆಗಳಿಂ ಸುರಿಸುತ್ತಲೂ, ಕ್ರೂರಧ್ವನಿಗಳಂಗೈಯುತ್ತಲೂ ಸಂಚರಿಸುತ್ತಲಿವೆ. ಯೆನ್ನ ಬಾಣಂಗಳೆಲ್ಲಾ ಹೊಗೆಯೊಡನೆ ಯುದ್ಧಾಸಕ್ತಿಯುಳ್ಳವಗಳಾಗಿವೆ. ಚಿನ್ನದ ಪಿಡಿಗಳುಳ್ಳ ಕೋದಂಡಂಗಳು ಚಲಿಸುತ್ತವೆ ।೫। ಈ ಅರಣ್ಯದಲ್ಲಿ ಸಂಚರಿಸುವ ಪಕ್ಷಿಗಳೆಲ್ಲಾ ವಿಕಾರವಾಗಿ ಕೂಗುತ್ತವೆ. ಇದರಿಂದ ನಮಗೆ ಅಭಯವೂ, ಶತ್ರುಗಳಿಗೆ ಪ್ರಾಣಸಂಶಯವೂ ಸಹಾ ಉಂಟಾಗುವಂತೆ ತೋರುತ್ತೆ. ಮಹತ್ತರವಾದ ಕಾಳಗವು ಬಹುತರವಾಗಿ ಸಂಭವಿಸಬಹುದು; ಈ ವಿಷಯದಲ್ಲಿ ಸಂಶಯವಿಲ್ಲ: ನನ್ನ ಬಲಭಾಗದ ಭುಜವು ಬಾರಿಬಾರಿಗೂ ಚಲಿಸುವದಾದಕಾರಣ ನಮಗೆ ಜಯವೂ, ಶತ್ರುಗಳಿಗೆ ಪರಾಜಯವೂ ಉಂಟಾಗುವದು ।೭। ಎಲೈ ಲಕ್ಷ್ಮಣನೇ! ನಿನ್ನ ಮುಖವು ಸೌಮ್ಯವಾಗಿಯೂ, ಕಾಂತಿಯುಕ್ತವಾಗಿಯೂ ಕಾಣುತ್ತಿದೆ. ಸಂಗರವಂ ಗೈಯ್ಯುವದಕ್ಕಾಗಿ ಬರುತ್ತಿರುವ ಈ ರಕ್ಕಸರ ಮುಖವು ಕಂಗೆಟ್ಟಿದೆ; ಆದಕಾರಣ ಇವರು

ತಾನಾಂಹಿಯುದ್ಧಾರ್ಥಿನಾಂಯೆಷಾಂಭವತಿಲಕ್ಷ್ಮಣ। ನಿಷ್ಪ್ರಭಾವದನಂತೆಷಾಂಭವತ್ಯಾಯುಃಪರಿಕ್ಷಯಃ ॥೯॥ ರಕ್ಷಸಾಂನರ್ದತಾಂಘೋರಶ್ಶ್ರೂಯತೆಚಮಹಾಧ್ವನಿಃ। ಆಹತಾನಾಂಚಭೇರೀಣಾಂರಾಕ್ಷಸೈಃಕ್ರೂರಕರ್ಮಭಿಃ ॥೧೦॥ ಅನಾಗತವಿಧಾನಂತುಕರ್ತವ್ಯಂಶುಭಮಿಚ್ಛತಾ। ಆಪದಂಶಂಕಮಾನೇನಪುರುಷೇಣವಿಪಶ್ಚಿತಾ ॥೧೧॥ ತಸ್ಮಾದ್ಗೃಹೀತ್ವಾವೈದೆಹೀಂಶರಪಾಣಿರ್ಧನುರ್ಧರಃ। ಗುಹಾಮಾಶ್ರಯಶೈಲಸ್ಯದುರ್ಗಾಂಪಾದಪಸಂಕುಲಾಂ ॥೧೨॥ ಪ್ರತಿಕೂಲಿತುಮಿಚ್ಛಾಮಿನಹಿವಾಕ್ಯಮಿದಂತ್ವಯಾ। ಶಾಪಿತೋಮಮಪಾದಾಭ್ಯಾಂಗಮ್ಯತಾಂವತ್ಸಮಾಚಿರಂ ॥೧೩॥ ತ್ವಂಹಿಶೂರಶ್ಚಬಲವಾನ್ಹನ್ಯಾಹ್ಯೇತಾನ್ನಸಂಶಯಃ। ಸ್ವಯಂತುಹಂತುಮಿಚ್ಛಾಮಿಸರ್ವಾನೇವನಿಶಾಚರಾನ್ ॥೧೪॥ ಏವಮುಕ್ತಸ್ತುರಾಮೇಣಲಕ್ಷ್ಮಣಸ್ಸಹಸೀತಯಾ। ಶರಾನಾದಾಯಚಾಪಂಚಗುಹಾಂದುರ್ಗಾಂಸಮಾಶ್ರಯತ್ ॥೧೫॥ ತಸ್ಮಿನ್ಪ್ರವಿಷ್ಟೆತುಗುಹಾಂಲಕ್ಷ್ಮಣೆಸಹಸೀತಯಾ। ಹಂತನಿರ್ಯುಕ್ತಮಿತ್ಯುಕ್ತ್ವಾರಾಮಃಕವಚಮಾವಿಶತ್ ॥೧೬॥ ಸತೆನಾಗ್ನಿನಿಕಾಶೆನಕ

---

ನದತಾಂ-ಕೂಗುತ್ತಿರುವ, ರಕ್ಷಸಾಂ-ರಕ್ಕಸರ, ಘೋರಃ-ಭಯಂಕರವಾದ, ಮಹಾಧ್ವನಿಃ-ಮಹಾಘೋಷೆಯು, ಕ್ರೂರಕರ್ಮಭಿಃ-ಕ್ರೂರವ್ಯಾಪಾರಗಳುಳ್ಳ, ರಾಕ್ಷಸೈಃ-ರಕ್ಕಸರಿಂದ, ಆಹತಾನಾಂ-ಹೊಡೆಯಲ್ಪಟ್ಟ, ಭೇರೀಣಾಂ-ಭೇರಿಗಳ, ಮಹಾಧ್ವನಿಶ್ಚ-ದೊಡ್ಡಶಬ್ದವೂ, ಶ್ರೂಯತೆ-ಕೇಳಲ್ಪಡುತ್ತದೆ ॥೯॥ ಆಪದಂ-ಮುಂದೆ ಬರುವ ಆಪತ್ತಿನನ್ನು, ಶಂಕಮಾನೇನ-ಊಹಿಸುತ್ತಿರುವ, ವಿಪಶ್ಚಿತಾ-ವಿವೇಕಿಯಾದ, ಶುಭಂ-ಶುಭವನ್ನು, ಇಚ್ಛತಾ-ಅಪೇಕ್ಷಿಸುತ್ತಿರುವ, ಪುರುಷೇಣ-ಪುರುಷನಿಂದ, ಅನಾಗತವಿಧಾನಂತು-ಮುಂದೆ ಬರತಕ್ಕ ಅನಿಷ್ಟಕ್ಕೆ ಪ್ರತಿಕ್ರಿಯೆಯು, ಕರ್ತವ್ಯಂ-ಮಾಡತಕ್ಕದ್ದು ॥೧೧॥ ತಸ್ಮಾತ್-ಆಕಾರಣದದೆಸೆಯಿಂದ, ಶರಪಾಣಿಃ-ಬಾಣಗಳೇ ಹಸ್ತದಲ್ಲುಳ್ಳವನಾಗಿ, ಧನುರ್ಧರಃ-ಧನುರ್ಧಾರಿಯಾಗಿ, ವೈದೇಹೀಂ-ಸೀತಾದೇವಿಯನ್ನು, ಗೃಹೀತ್ವಾ-ಕರೆದುಕೊಂಡು, ಶೈಲಸ್ಯ-ಬೆಟ್ಟದ, ಪಾದಪಸಂಕುಲಾಂ-ಗಿಡಗಳಿಂದ ತುಂಬಿರುವ, ದುರ್ಗಾಂ-ಪ್ರವೇಶಿಸಲಸಾಧ್ಯವಾದ, ಗುಹಾಂ-ಗುಹೆಯನ್ನು, ಆಶ್ರಯ-ಆಶ್ರಯಿಸು ॥೧೨॥ ಹೆವತ್ಸ-ಎಲೈ ಹುಡುಗನೇ, ಇದಂವಾಕ್ಯಂ-ಈ ನನಾ ಮಾತನ್ನು, ತ್ವಯಾ-ನಿನ್ನಿಂದ, ಪ್ರತಿಕೂಲಿತಂ-ಪ್ರತಿಭಟಿಸುವದಕ್ಕಾಗಿ, ನೇಚ್ಛಾಮಿ-ಇಚ್ಛೆಗೊಳಿಸೆನು, ಮಮ-ನನ್ನ, ಪಾದಾಭ್ಯಾಂ-ಪಾದಗಳಿಂದ, ಶಾಪಿತಃ-ಶಪಥಮಾಡಲ್ಪಟ್ಟವನು, ಅಸಿ-ಆಗಿದ್ದೀ, ಮಾಚಿರಂ-ಸಾವಕಾಶಮಾಡದೆ ಗಮ್ಯತಾಂ-ಪ್ರಯಾಣಮಾಡಲ್ಪಡಲೀ, ತ್ವಂಹಿ-ನೀನಾದರೆ, ಶೂರಃ-ಶೂರನು, ಬಲವಾನ್-ಬಲಾಢ್ಯನಾಗಿದ್ದೀ, ಏತಾನ್-ಈ ರಕ್ಕಸರನ್ನು, ಹನ್ಯಾಃ-ಹೊಡೆಯುತ್ತೀಯೆ, ನಸಂಶಯಃ-ಸಂಶಯವಿಲ್ಲ, ಸ್ವಯಂ-ನಾನೇ, ಸರ್ವಾನೇವ-ಸಮಸ್ತರಾದ, ನಿಶಾಚರಾನ್-ರಕ್ಕಸರನ್ನು, ಹಂತುಂ-ಹೊಡೆಯುವದಕ್ಕಾಗಿ, ಇಚ್ಛಾಮಿ-ಇಚ್ಛಿಸುತ್ತೇನೆ ॥೧೪॥ ಏವಂ-ಈರೀತಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ಸೀತಯಾಸಹ-ಸೀತಾದೇವಿಯೊಡಗೂಡ, ಶರಾನ್-ಬಾಣಗಳನ್ನು, ಚಾಪಂಚ-ಧನುಸ್ಸಿನನ್ನು, ಆದಾಯ-ತೆಗೆದುಕೊಂಡು, ದುರ್ಗಾಂ-ದುರ್ಗಸ್ಥಾನರೂಪವಾದ, ಗುಹಾಂ-ಗಹ್ವರವನ್ನು, ಸಮಾಶ್ರಯತ್-ಆಶ್ರಯಿಸಿದನು ॥೧೫॥ ತಸ್ಮಿನ್ಲಕ್ಷ್ಮಣೆ-ಆ ಲಕ್ಷ್ಮಣನು, ಸೀತಯಾಸಹ-ಸೀತಾದೇವಿಯೊಡಗೂಡ, ಗುಹಾಂ-ಗಹ್ವರವನ್ನು, ಪ್ರವಿಷ್ಟೆಸತಿ-ಹೊಕ್ಕವನಾಗುತ್ತಿರಲಾಗಿ, ನಿರ್ಯುಕ್ತಮಿತಿ-ಒಳ್ಳೇ ಉಪಾಯು ಆಲೋಚಿಸಲ್ಪಟ್ಟಿತು, ಹಂತ-ಸಂತೋಷವು, ಇತಿ-ಇಂತೆಂದು, ಉಕ್ತ್ವಾ-ಹೇಳಿ, ರಾಮಃ-ಶ್ರೀರಾಮನು, ಕವಚಂ-ಕವಚವನ್ನು, ಆವಿಶತ್-ತೊಟ್ಟುಕೊಂಡನು ॥೧೬॥ ಅಗ್ನಿನಿಕಾಶೆನ-ಬೆಂಕಿಗೆ ಸಮಾನವಾದ, ತೆನಕವಚೆನ-ಆ ಕವಚದಿಂದ, ವಿಭೂಷಿತಃ-ಅಲಂಕರಿಸಲ್ಪಟ್ಟ, ಸರಾಮಃ-ಆ ಶ್ರೀರಾಮನು, ತಿಮಿರೆ-ಅಂಧಕಾರದಲ್ಲಿ, ವಿಧೂಮಃ-ಹೊಗೆಯಿಲ್ಲದ, ಉತ್ಥಿತಃ-ಪ್ರಜ್ವಲಿಶವಾದ, ಅಗ್ನಿರಿವ-ಅಗ್ನಿಯಂ

---

ಗಳ ಆಯುಸ್ಸು ಕ್ಷೀಣವಾಗಿರುವಂತೆ ತೋರುವದು ॥೯॥ ಅಟ್ಟಹಾಸವಂ ಗೈಯ್ಯುವ ಇವರುಗಳ ಮಹಾ ಭಯಂಕರವಾದ ಘೋಷೆಯೂ, ಭೇರಿಧ್ವನಿಗಳೂ ಸಹಾ ಕೇಳಲ್ಪಡುತ್ತಲಿವೆ ॥೯॥ ಆದಕಾರಣ ಲೋಕದಲ್ಲಿ ತಿಳುವಳಿಕೆಯುಳ್ಳ ಪುರುಷನು ತನಗೆ ಆಪತ್ತುಂಟಾಗುವದಕ್ಕಿಂತಲೂ ಮುಂಚಿತವಾಗಿಯೇ ಅದನ್ನರಿತು ಅದಕ್ಕೆ ಪ್ರತಿಕ್ರಿಯೆಯಂ ಗೈಯ್ಯಬೇಕು ॥೧೧॥ ಆದ್ದರಿಂದ ನೀನೇ ಕೋದಂಡಪಾಣಿಯಾಗಿ ಸೀತಾದೇವಿಯನ್ನು ಕರೆದುಕೊಂಡು ಪರ್ವತದ ದುರ್ಗಪ್ರದೇಶಕ್ಕೆ ಸಾರುವವನಾಗು, ಎಲೈ ಬಾಲಕನೇ! ಯೆನ್ನ ಮಾತಿಗೆ ಪ್ರತಿಯಾಗಿ ಪೇಳಬ್ಯಾಡ; ನೀನು ಪ್ರತಿನುಡಿದವನಾದರೆ ಯೆನ್ನ ಪಾದಂಗಳಿಂದ ಶಪಿಸಲ್ಪಡುವಿ, ತ್ವರೆಯಾಗಿ ಪೋಗುವವನಾಗು. ನೀನು ಬಲವಂತನಾಗಿಯೂ, ಶೂರನಾಗಿಯೂ ಇರುವವನು. ಈ ರಾಕ್ಷಸರನ್ನೆಲ್ಲಾ ಸಂಹರಿಸಲು ಶಕ್ತಿಯುಳ್ಳವನಾಗಿದ್ದೀ. ಆದರೂ ನಾನೇ ಈ ರಾಕ್ಷಸರನ್ನು ಹೊಡೆಯಲಿಚ್ಛಿಸುತ್ತೇನೆ, ನೀನು ಸೀತಾದೇವಿಯಂ ಕಾದುಕೊಂಡಿರೆಂದು ಶ್ರೀರಾಮನು ನುಡಿದವನಾಗಲೂ, ಆ ಲಕ್ಷ್ಮಣನು ಧನುರ್ಬಾಣಂಗಳಂ ತೆಗದುಕೊಂಡು ಸೀತಾದೇವಿಯೊಡನೆ ತೆರಳಿ, ಪೊದಾನೊಂದು ಗುಹೆಯಂ ಸೇರಿದನು ॥೧೫॥ ಆ ಲಕ್ಷ್ಮಣನು ಈ ರೀತಿಯಾಗಿ ಗುಹೆಯಂ ಪ್ರವೇಶಿಸಿದವನಾಗಲೂ; ಶ್ರೀರಾಮನು ಕವಚವಂ ತೊಟ್ಟು ಅದರಿಂದ ಹೊಗೆಯಿಲ್ಲದಿರುವ ಪ್ರಜ್ವಾಲಿಸುವ ಅಗ್ನಿಯು ಅಂಧ

ವಚೆನವಿಭೂಷಿತಃ । ಬಭೂವರಾಮಸ್ತಿಮಿರವಿಧೂಮೋಗ್ನಿರಿವೋತ್ಥಿತಃ ॥೧೭॥ ಸಚಾಪಮುದ್ಯಮ್ಯಮಹಚ್ಛರಾನಾದಾ
ಯವೀರ್ಯವಾನ್ । ಬಭೂವಾವಸ್ಥಿತಸ್ತತ್ರಜ್ಯಾಸ್ವನೈಃಪೂರಯನ್ದಿಶಃ ॥೧೮॥ ತತೋದೇವಾಸ್ಸಗಂಧರ್ವಾಸ್ಸಿದ್ಧಾಶ್ಚಸಹ
ಚಾರಣೈಃ । ಸಮೇಯುಶ್ಚಮಹಾತ್ಮಾನೋಯುದ್ಧದರ್ಶನಕಾಂಕ್ಷಿಣಃ ॥ ಋಷಯಶ್ಚಮಹಾತ್ಮಾನೋಲೋಕೇಬ್ರಹ್ಮರ್ಷಿ
ಸತ್ತಮಾಃ । ಸಮೇತ್ಯಚೋಚುಸ್ಸಹಿತಾಅನ್ಯೋನ್ಯಂಪುಣ್ಯಕರ್ಮಣಃ ॥೨೦॥ ಸ್ವಸ್ತಿಗೋಬ್ರಾಹ್ಮಣೇಭ್ಯೋಸ್ತುಲೋಕಾನಾಂ
ಯೇಭಿಸಂಗತಾಃ । ಜಯತಾಂರಾಘವೋಯುದ್ಧೇಪೌಲಸ್ತ್ಯಾನ್ರಜನೀಚರಾನ್ ॥ ಚಕ್ರಹಸ್ತೋಯಥಾಯುದ್ಧೇಸರ್ವಾನ
ಸುರಪುಂಗವಾನ್ । ಏವಮುಕ್ತ್ವಾಪುನಃಪ್ರೋಚುರಾಲೋಕ್ಯಚಪರಸ್ಪರಂ । ಚತುರ್ದಶಸಹಸ್ರಾಣಿರಕ್ಷಸಾಂಭೀಮಕ
ರ್ಮಣಾಂ । ಏಕಶ್ಚರಾಮೋಧರ್ಮಾತ್ಮಾಕಥಂಯುದ್ಧಂಭವಿಷ್ಯತಿ ॥೨೩॥ ಇತಿರಾಜರ್ಷಯಸ್ಸಿದ್ಧಾಸ್ಸಗಣಾಶ್ಚದ್ವಿಜರ್ಷ
ಭಾಃ । ಜಾತಕೌತೂಹಲಾಸ್ತಸ್ಥುರ್ವಿಮಾನಸ್ಥಾಶ್ಚದೇವತಾಃ ॥೨೪॥ ಆವಿಷ್ಟಂತೇಜಸಾರಾಮಂಸಂಗ್ರಾಮಶಿರಸಿಸ್ಥಿತಂ।
ದೃಷ್ಟ್ವಾಸರ್ವಾಣಿಭೂತಾನಿಭಯಾದ್ವಿವ್ಯಥಿರೇತದಾ ॥೨೫॥ ರೂಪಮಪ್ರತಿಮಂತಸ್ಯರಾಮಸ್ಯಾಕ್ಲಿಷ್ಟಕರ್ಮಣಃ ।

---

ಶೆ, ಬಭೂವ-ಆದನು ॥೧೭॥ ವೀರ್ಯವಾನ್-ಪರಾಕ್ರಮಶಾಲಿಯಾದ. ಸಃ-ಆ ಶ್ರೀರಾಮನು, ಮಹತ್-ದೊಡ್ಡದಾದ. ಚಾಪಂ-ಬಿಲ್ಲಿನನ್ನು ಶರಾನ್-ಬಾಣ
ಗಳನ್ನು, ಆದಾಯ-ತೆಗೆದುಕೊಂಡು, ಜ್ಯಾಸ್ವನೈಃ-ಧನುಷ್ಟಂಕಾರ ಧ್ವನಿಗಳಿಂದ .ದಿಶಃ-ದಿಕ್ಕುಗಳನ್ನು ಪೂರಯನ್-ತುಂಬಿಸುತ್ತಿರುವವನಾಗಿ. ತತ್ರ-
ಆ ಆಶ್ರಮದಲ್ಲಿ, ಅವಸ್ಥಿತಃ-ಇರುವವನು, ಬಭೂವ-ಆದನು ॥೧೮॥ ತತಃ-ಬಳಿಕ, ಸಗಂಧರ್ವಾಃ-ಗಂಧರ್ವರಿಂದೊಡಗೂಡಿದ, ದೇವಾಃ-ದೇವತೆಗಳು,
ಸಿದ್ಧಾಶ್ಚ-ಸಿದ್ಧರೂ, ಚಾರಣೈಸ್ಸಹ-ಚಾರಣರೊಡಗೂಡ. ಮಹಾತ್ಮಾನಃ-ಬಹಳ ಮನಸ್ಸುಳ್ಳವರಾಗಿ, ಯುದ್ಧದರ್ಶನಕಾಂಕ್ಷಿಣಃ-ಕಾಳಗವನ್ನು
ನೋಡಲಪೇಕ್ಷೆಯುಳ್ಳವರಾಗಿ, ಲೋಕೆ-ಲೋಕದಲ್ಲಿ, ಮಹಾತ್ಮಾನಃ-ಮಹಾಪೂಜ್ಯರಾದ, ಋಷಯಶ್ಚ-ಋಷಿಗಳೂ, ಬ್ರಹ್ಮರ್ಷಿಸತ್ತಮಾಃ-ಬ್ರಹ್ಮ
ರ್ಷಿಶ್ರೇಷ್ಠರೂ, ಸಮೇಯುಃ-ಬಂದರು ॥೧೯॥ ಸಮೇತ್ಯ-ಬಂದು, ಸಹಿತಾಃ-ಸೇರಿದವರಾಗಿ. ಪುಣ್ಯಕರ್ಮಣಃ-ಪುಣ್ಯವ್ಯಾಪಾರಗಳ್ಳಾಗಿ, ಅನ್ಯೋ
ನ್ಯಂ-ಪರಸ್ಪರವಾಗಿ. ಊಚುಃ-ಮಾತನಾಡಿದರು ॥೨೦॥ ಯೇ-ಯಾರು, ಲೋಕಾನಾಂ-ಲೋಕಗಳಿಗೆ, ಅಭಿಸಂಗತಾಃ-ಅನುಕೂಲರಾಗಿಧಾರೋ, ತೆ
ಭ್ಯಃ-ಅಂಥಾ, ಗೋಬ್ರಾಹ್ಮಣೇಭ್ಯಃ-ಗೋವುಗಳಿಗೂ ಬ್ರಾಹ್ಮಣರಿಗೋಸುಗ, ಸ್ವಸ್ತಿ-ಶುಭವು, ಅಸ್ತು-ಆಗಲೀ, ಯುದ್ಧೇ-ಕಾಳಗದಲ್ಲಿ, ಸರ್ವಾನ್-
ಸಮಸ್ತರಾದ ಅಸುರಪುಂಗವಾನ್-ರಾಕ್ಷಸಶ್ರೇಷ್ಠರನ್ನು ಚಕ್ರಹಸ್ತೋಯಥಾ-ಚಕ್ರಪಾಣಿಯಾದ ಶ್ರೀಮಹಾವಿಷ್ಣು ವಂತೆ, ರಾಘವಃ-ಶ್ರೀರಾಮನು.
ಯುದ್ಧೇ-ಕಾಳಗದಲ್ಲಿ. ಪೌಲಸ್ತ್ಯಾನ್-ಪುಲಸ್ತ್ಯವಂಶೋತ್ಪನ್ನರಾದ, ರಜನೀಚರಾನ್-ರಕ್ಕಸರನ್ನು, ಜಯತಾಂ-ಜೈಸಲೀ, ಏವಂ-ಈಪರಿಯಾಗಿ,
ಉಕ್ತ್ವಾ-ಹೇಳಿ. ಅವಲೋಕ್ಯ-ಕಂಡು ಪುನಃ-ಮತ್ತು, ಪರಸ್ಪರಂ-ಒಬ್ಬರಿಗೊಬ್ಬರು, ಭೀಮಕರ್ಮಣಾಂ-ಉಗ್ರವ್ಯಾಪಾರಗಳುಳ್ಳ, ರಕ್ಷಸಾಂ-ರಕ್ಕಸರ,
ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳು, ಸಂತಿ-ಇವೆ, ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಶ್ರೀರಾಮನು, ಏಕಶ್ಚ-ಒಬ್ಬನೇ ಆಗಿಧಾನೆ. ಯು
ದ್ಧಂ-ಕಾಳಗವು, ಕಥಂಭವಿಷ್ಯತಿ-ಹ್ಯಾಗಾಗುವದು, ಇತಿ-ಇಂತೆಂದು, ಪ್ರೋಚುಃ-ಮಾತನಾಡಿದರು॥ ... ... ... ॥೨೩॥
ಇತಿ-ಈಪರಿಯಾಗಿ, ರಾಜರ್ಷಯಃ-ರಾಜರ್ಷಿಗಳೂ, ಸಗಣಾಃ-ತಮ್ಮತಮ್ಮ ಗುಂಪುಗಳಿಂದೊಡಗೂಡ, ಸಿದ್ಧಾಃ-ಸಿದ್ಧರೂ, ದ್ವಿಜರ್ಷಭಾಃ-
ಬ್ರಾಹ್ಮಣಶ್ರೇಷ್ಠರು, ಜಾತಕೌತೂಹಲಾಃ-ಹುಟ್ಟಿದ ಸಂತೋಷವುಳ್ಳವರಾಗಿ. ದೇವತಾಃ-ದೇವತೆಗಳು, ವಿಮಾನಸ್ಥಾಶ್ಚ-ವಿಮಾನಾರೂಢರಾಗಿ,
ತಸ್ಥುಃ-ನಿಂತರು ॥೨೪॥ ತೇಜಸಾ-ಪರಾಕ್ರಮದಿಂದ, ಯದ್ವಾ-ತೇಜಸಾ-ರುದ್ರತೇಜಸಿನಿಂದ, ಆವಿಷ್ಟಂ-ಆವೇಶವಾಗಲ್ಪಟ್ಟ. ಸಂಗ್ರಾಮಶಿರಸಿ-ಯು
ದ್ಧರಂಗದಲ್ಲಿ, ಸ್ಥಿತಂ-ನಿಂತಿರುವ, ರಾಮಂ-ಶ್ರೀರಾಮನನ್ನು, ದೃಷ್ಟ್ವಾ-ಕಂಡು, ತದಾ-ಆ ಕಾಲದಲ್ಲಿ, ಸರ್ವಾಣಿಭೂತಾನಿ-ಸಮಸ್ತ ಪ್ರಾಣಿಗಳು,
ಭಯಾತ್-ಭೀತಿಯಿಂದ. ವಿವ್ಯಥಿರೆ-ವ್ಯಸನಗೊಂಡರು ॥೨೫॥ ಅಕ್ಲಿಷ್ಟಕರ್ಮಣಃ-ಕ್ಲೇಶವಿಲ್ಲದ ವ್ಯಾಪಾರವುಳ್ಳ, ತಸ್ಯರಾಮಸ್ಯ-ಆ ಶ್ರೀರಾಮನ,

---

ಕಾರದಲ್ಲಿ ಹೊಳೆಯುವಂತೆ ಹೊಳೆಯುತ್ತಿದ್ದನು ॥೧೭॥ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು ತನ್ನ
ಕೋದಂಡವನ್ನೂ, ನಿಡುಸರಳ್ಗಳನ್ನೂ ಸಹಾ ತೆಗೆದುಕೊಂಡು, ಧನುಷ್ಟಂಕಾರದಿಂದ ದಶದಿಕ್ಕುಗಳನ್ನು ಪೂರಿ
ಸುವವನಾಗಿ ಆ ಆಶ್ರಮದ ಸಮೀಪದಲ್ಲಿ ನಿಂತುಕೊಂಡನು ॥೧೮॥ ಅನಂತರದಲ್ಲಿ ಗಂಧರ್ವರೂ, ದೇವತೆಗಳೂ,
ಸಿದ್ಧರೂ, ಚಾರಣರೂ, ಬ್ರಹ್ಮರ್ಷಿಗಳೂ ಇವರೆಲ್ಲರೂ ಆ ಯುದ್ಧವಂ ನೋಡಲಿಚ್ಛೆಯುಳ್ಳವರಾಗಿ ಗುಂಪುಸೇರಿ ಅ
ನ್ಯೋನ್ಯವಾಗಿ ಮಾಡುವರದೆಂತೆನೆ,—ಯಾರು ಲೋಕಂಗಳಿಗೆ ಅನುಕೂಲವಾಗಿರುವರೋ, ಅಂಥಾ ಗೋವುಗಳಿ
ಗೂ ಬ್ರಾಹ್ಮಣರಿಗೂ ಶುಭಉಂಟಾಗಲಿ ಸಂಗರದಲ್ಲಿ ಶ್ರೀರಾಮನು ಶ್ರೀಮಹಾ ವಿಷ್ಣುವು ರಾಕ್ಷಸರಂ ಜಯಿಸುವಂ
ತೆ ಜಯಶೀಲನಾಗಿರಲೆಂದು ಪೇಳುತ್ತಾ, ಮತ್ತು ಸಮೀಪಕ್ಕೆ ಬಂದು ಪುನಃ ಅತ್ಯಾಶ್ಚರ್ಯದಿಂ ನುಡಿವರು. ಏನೆಂದ
ರೆ;—ಕ್ರೂರವ್ಯಾಪಾರಿಗಳಾದ ಈ ರಾಕ್ಷಸರು ಹದಿನಾಲ್ಕು ಸಾವಿರ ಸಂಖ್ಯೆಯುಳ್ಳವರಾಗಿಧಾರೆ; ಧರ್ಮಾತ್ಮನಾದ
ಶ್ರೀರಾಮನೋರ್ವನೇ ಇಧಾನೇ. ಕಾಳಗವೆಂತಾಗುವದೋ ಏನೋ ಯೆಂದು ಈ ರೀತಿಯಾಗಿ ರಾಜರ್ಷಿಗಳೂ,
ಸಿದ್ಧಚಾರಣರೂ, ಬ್ರಾಹ್ಮಣಶ್ರೇಷ್ಠರೂ, ದೇವತೆಗಳೂ ಯೆಲ್ಲರೂ ವಿಮಾನಾರೂಢರಾಗಿ. ಬಹು ಕುತೂಹಲದಿಂದ

ಬಭೂವರೂಪಂಕ್ರುದ್ಧಸ್ಯರುದ್ರಸ್ಯೇವಮಹಾತ್ಮನಃ |೨೬| ( ಇತಿಸಂಭಾಷ್ಯಮಾಣೇತುದೇವಂಗಧರ್ವಚಾರಣೈಃ )
ತತೋಗಂಭೀರನಿರ್ಹ್ರಾದಂಘೋರವರ್ಮಾಯುಧಧ್ವಜಂ|ಅನೀಕಂಯಾತುಧಾನಾನಾಂಸಮಂತಾತ್ಪ್ರತ್ಯದೃಶ್ಯತ|೨೭|
ಸಿಂಹನಾದಂವಿಸೃಜತಾಮನ್ಯೋನ್ಯಮಭಿಗರ್ಜತಾಂ| ಚಾಪಾನಿವಿಸ್ಫಾರಯತಾಂಜೃಂಭತಾಂಚಾಪ್ಯಭೀಕ್ಷ್ಣಶಃ| ವಿಪ್ರ
ಘುಷ್ಟಸ್ವನಾನಾಂಚದುಂದುಭೀಶ್ಚಾಪಿನಿಘ್ನತಾಂ | ತೇಷಾಂಸುತುಮುಲಶ್ಶಬ್ದಃಪೂರಯಾಮಾಸತದ್ವನಂ|೨೯| ತೇನ
ಶಬ್ದೇನವಿತ್ರಸ್ತಾಶ್ಶ್ವಾಪದಾವನಚಾರಿಣಃ| ದುದ್ರುವುರ್ಯತ್ರನಿಶ್ಶಬ್ದಂಪೃಷ್ಠತೋನವ್ಯಲೋಕಯನ್ |೩೦| ತತ್ತ್ವ
ನೀಕಂಮಹಾವೇಗಂರಾಮಂಸಮುಪಸರ್ಪತ | ಧೃತನಾನಾಪ್ರಹರಣಂಗಂಭೀರಂಸಾಗರೋಪಮಂ | ರಾಮೋಪಿಚಾರ
ಯನ್ಚಕ್ಷುಸ್ಸರ್ವತೋರಣಪಂಡಿತಃ | ದದರ್ಶಖರಸೈನ್ಯಂತದ್ಯುದ್ಧಾಭಿಮುಖಮುತ್ಥಿತಂ |ವಿತತ್ಯಚಧನುರ್ಭೀಮಂತೂ
ಣ್ಯಾಶ್ಚೋದ್ಧೃತ್ಯಸಾಯಕಾನ್ | ಕ್ರೋಧಮಾಹಾರಯತ್ತೀವ್ರಂವಧಾರ್ಥಂಸರ್ವರಕ್ಷಸಾಂ|೩೩|ದುಷ್ಪ್ರೇಕ್ಷ್ಯಸ್ಸೋ

---

ಅಪ್ರತಿಮಂ-ಸಮಾನವಿಲ್ಲದಿರುವ, ರೂಪಂ-ರೂಪವು ಕ್ರುದ್ಧಸ್ಯ-ಕೋಪಗೊಂಡ, ಮಹಾತ್ಮನಃ-ಮಹಾಧೈರ್ಯಶಾಲಿಯಾದ, ರುದ್ರಸ್ಯ-ಪರಮೇಶ್ವರನ, ರೂಪಮಿವ-ಆಕಾರದಂತೆ. ಬಭೂವ-ಆಯಿತು ||೨೬|| ತತಃ-ಬಳಿಕ, ಗಂಭೀರನಿರ್ಹ್ರಾದಂ-ಗಂಭೀರವಾದ ಕೋಲಾಹಲ ಧ್ವನಿಯುಳ್ಳ, ಘೋರವರ್ಮಾಯುಧಧ್ವಜಂ-ಭಯಂಕರವಾದ ಕವಚಗಳೂ ಆಯುಧಗಳೂ ಉಳ್ಳ, ಯಾತುಧಾನಾನಾಂ-ರಕ್ಕಸರ, ಅನೀಕಂ-ಸೈನ್ಯವು, ಸಮಂತಾತ್-ಎಲ್ಲಾ ಕಡೆಯಲ್ಲಿ, ಪ್ರತ್ಯದೃಶ್ಯತ-ಕಾಣಿಸಿತು ||೨೭|| ಸಿಂಹನಾದಂ-ಕೋಲಾಹಲಧ್ವನಿಯನ್ನು, ವಿಸೃಜತಾಂ-ಬಿಡುತ್ತಿರುವ. ಅನ್ಯೋನ್ಯಂ-ಒಬ್ಬರಿಗೊಬ್ಬರು, ಅಭಿಗರ್ಜತಾಂ-ಗರ್ಜನೆಮಾಡುತ್ತಿರುವ, ಅಭೀಕ್ಷ್ಣಶಃ-ಅತ್ಯಂತವಾಗಿ, ಜೃಂಭತಾಂ-ವಿಜೃಂಭಿಸುತ್ತಿರುವ, ವಿಪ್ರಘುಷ್ಟಸ್ವನಾನಾಂಚ-ಮಹಾಶಬ್ದವನ್ನು ಮಾಡುತ್ತಿರುವ, ದುಂದುಭೀಶ್ಚಾಪಿ-ಭೇರಿಗಳನ್ನು ನಿಘ್ನತಾಂ-ಹೊಡೆಯುತ್ತಿರುವ, ತೇಷಾಂ-ಆ ರಕ್ಕಸರ, ಸುತುಮುಲಃ-ಸಂಕುಲವಾದ, ಶಬ್ದಃ ಘೋಷೆಯು. ತದ್ವನಂ-ಆ ವನವನ್ನು, ಪೂರಯಾಮಾಸ-ತುಂಬಿಸಿತು ||೨೯|| ತೇನಶಬ್ದೇನ-ಆ ಕೋಲಾಹಲಧ್ವನಿಯಿಂದ ವಿತ್ರಸ್ತಾಃ-ಹೆದರಿಕೊಂಡ, ವನಚಾರಿಣಃ-ವನದಲ್ಲಿ ಸಂಚರಿಸುತ್ತಿರುವ, ಶ್ವಾಪದಾಃ-ವ್ಯಾಘ್ರಾದಿ ಘಾತುಕಮೃಗಗಳು, ಯತ್ರ-ಯಾವಸ್ಥಳದಲ್ಲಿ, ನಿಶ್ಶಬ್ದಂ-ಶಬ್ದವಿಲ್ಲದಿರುವದೋ, ತಂದೇಶಂ-ಆ ಪ್ರದೇಶವಂ ಕುರಿತು, ದುದ್ರುವುಃ-ಓಡಿದವು, ಪೃಷ್ಠತಃ-ಹಿಂದುಗಡೆ, ನವ್ಯಲೋಕಯನ್-ನೋಡದಲಿಲ್ಲ ||೩೦|| || ಧೃತನಾನಾಪ್ರಹರಣಂ-ಧರಿಸಲ್ಪಟ್ಟ ನಾನಾ ಆಯುಧಗಳುಳ್ಳ. ಸಾಗರೋಪಮಂ-ಕಡಲಿಗೆ ಸಮಾನವಾದ, ಗಂಭೀರಂ-ಇತರರಿಗೆ ದುಷ್ಪ್ರವೇಶವಾದ- ಮಹಾವೇಗಂ-ಮಹಾಜವವುಳ್ಳ, ತದನೀಕಂತು-ಆ ಸೈನ್ಯವಾದರೆ, ರಾಮಂ-ಶ್ರೀರಾಮನಂ ಕುರಿತು, ಸಮುಪಸರ್ಪತ-ಸಮೀಪವರ್ತಿಯಾಯಿತು ||೩೧|| || ರಣಪಂಡಿತಃ-ಕಾಳಗದಲ್ಲಿ ಪಂಡಿತನಾದ ರಾಮೋಪಿ-ಶ್ರೀರಾಮನೂ, ಸರ್ವತೋದಿಕ್ಷು-ಸರ್ವದಿಕ್ಕುಗಳಲ್ಲಿಯೂ, ಚಕ್ಷುಃ-ನೇತ್ರಗಳನ್ನು. ಚಾರಯನ್-ಪ್ರಸರಿಸುತ್ತಿರುವವನಾಗಿ, ಯುದ್ಧಾಭಿಮುಖಂ-ಯುದ್ಧಾರ್ಥ ಯೆದುರಾಗಿ ಬರುತ್ತಿರುವ ಉತ್ಥಿತಂ-ಉದ್ಯುಕ್ತವಾದ, ತತ್ಖರಸೈನ್ಯಂ-ಆ ಖರಾಸುರನ ದಂಡಿನನ್ನು, ದದರ್ಶ-ಕಂಡನು ||೩೨|| ಭೀಮಂ-ಭಯಂಕರವಾದ. ಧನುಃ-ಧನುಸ್ಸನ್ನು, ವಿತತ್ಯ-ಮ್ಯಾಲಕ್ಕೆಯೆತ್ತಿ, ತೂಣ್ಯಾಃ-ಬತ್ತಳಿಕೆಯ ದೆಸೆಯಿಂದ. ಸಾಯಕಾನ್-ಬಾಣಗಳನ್ನು, ಉದ್ಧೃತ್ಯ-ಮ್ಯಾಲಕ್ಕೆತ್ತಿ, ಸರ್ವರಕ್ಷಸಾಂವಧಾರ್ಥಂ-ಸಮಸ್ತ ರಕ್ಕಸರವಧಾರ್ಥವಾಗಿ, ತೀವ್ರಂ-ತೀಕ್ಷ್ಣವಾದ, ಕ್ರೋಧಂ-ಕೋಪೋದ್ರೇಕವನ್ನು, ಆಹಾರಯತ್-ತೆಗೆದುಕೊಂಡನು ||೩೩|| || ಕ್ರುದ್ಧಃ-ಕೋಪಿಷ್ಠನಾದ ಸಃ-ಆ ಶ್ರೀರಾಮನು, ಯುಗಾಂತಾಗ್ನಿರಿವ-ಪ್ರಳಯಾಗ್ನಿಯಂತೆ, ದುಷ್ಪ್ರೇಕ್ಷ್ಯಃ-ನೋಡಲಸಾಧ್ಯನ, ಅಭವತ್-ಆದನು, ತೇಜಸಾ-ಕ್ರೋಧಾಗ್ನಿತೇಜಸ್ಸಿನಿಂದ.(ಅಥವಾ-ರೌದ್ರತೇಜಸ್ಸಿ

---

ನಿಂತುಕೊಂಡರು. ಆ ಸಮಯದಲ್ಲಿ ರುದ್ರತೇಜಸ್ಸಿನಿಂದ ಆವೇಶವಂ ಗೈಯ್ಯಲ್ಪಟ್ಟ ರಣರಂಗದಲ್ಲಿ ನಿರ್ಭಯವಾಗಿ ನಿಂತಿರುವ ಆ ಶ್ರೀರಾಮನಂ ಕಂಡು; ಸರ್ವಪ್ರಾಣಿಗಳೂ ಭೀತಿಯಿಂದ ವ್ಯಸನಗೊಂಡರು. |೨೫| ಈ ಪ್ರಕಾರವಾಗಿ ಅಸದೃಶವಾಗಿರುವ ಆ ಶ್ರೀರಾಮನ ರೂಪವು ಮಹಾ ಧೈರ್ಯಶಾಲಿಯಾದ ಪರಮೇಶ್ವರನ ರೂಪದಂತೆ ಕಾಣುತ್ತಿತ್ತು |೨೬| ಬಳಿಕ ಗಂಭೀರವಾದ ಕೋಲಾಹಲ ಧ್ವನಿಯುಳ್ಳ, ಮತ್ತು ಭಯಂಕರವಾದ ಆಯುಧಂಗಳೂ, ಕವಚಂಗಳೂ, ಧ್ವಜಂಗಳೂ ಉಳ್ಳ ಆ ರಾಕ್ಷಸಸೈನ್ಯವು ಯೆಲ್ಲಾ ಕಡೆಯಲ್ಲಿಯೂ ಬರುವಂಥಾದ್ದಾಯಿತದೆಂತೆನೆ,—ಅಟ್ಟಹಾಸವಂ ಗೈಯ್ಯುತ್ತಲೂ, ಒಬ್ಬರನೊಬ್ಬರು ಗರ್ಜಿಸುತ್ತಲೂ, ಧನುಷ್ಟಂಕಾರವಂ ಗೈಯ್ಯುತ್ತಲೂ, ಭೇರಿಗಳನ್ನು ಹೊಡಿಯುತ್ತಲೂ ಇರುವ ಆ ರಾಕ್ಷಸರ ಸಂಕುಲವಾದ ಘೋಷೆಯು ಆ ವನದಲ್ಲೆಲ್ಲಾ ತುಂಬಿತು |೨೯| ಆ ಶಬ್ದಂಗಳಿಂದ ವನಚಾರಿಗಳಾದ ವ್ಯಾಘ್ರಾದಿಗಳು ಹಿಂತಿರುಗಿ ನೋಡದೆ ಓಡಿಹೋದವು|೩೦| ಅನೇಕ ಬಗೆಗಳಾದ ಆಯುಧಗಳಂ ಧರಿಸಿರುವ, ಸಮುದ್ರದಂತೆ ಪ್ರವೇಶಿಸಲಸಾಧ್ಯವಾದ ಬಹು ವೇಗವಾಗಿ ಬರುತ್ತಿರುವ ಆ ಸೈನ್ಯವು ಶ್ರೀರಾಮನ ಸಮೀಪಕ್ಕೆ ಬಂದದ್ದಾಗಲೂ, ರಣಧೀರನಾದ ಆ ಶ್ರೀರಾಮನು ಎಲ್ಲಾ ಕಡೆಗಳಲ್ಲಿಯೂ, ತನ್ನ ದೃಷ್ಟಿಪ್ರಚಾರವಂ ಗೈದು ಯುದ್ಧಾರ್ಥವಾಗಿ ಎದುರಾಗಿ ಬರುತ್ತಿರುವ ಆ ಸೈನ್ಯವಂ ಕಂ

ಭವತ್ಕ್ರುದ್ಧೋಯುಗಾಂತಾಗ್ನಿರಿವಜ್ವಲನ್ ‖ ತಂದೃಷ್ಟ್ವಾತೇಜಸಾವಿಷ್ಟಂಪ್ರಾದ್ರವನ್ವನದೇವತಾಃ ॥೩೪॥ ತಸ್ಯ
ಕ್ರುದ್ಧಸ್ಯರೂಪಂತು ರಾಮಸ್ಯದದೃಶೇತದಾ ‖ ದಕ್ಷಸ್ಯೇವಕ್ರತುಂಹಂತುಮುದ್ಯತಸ್ಯಪಿನಾಕಿನಃ ॥೩೫॥ ಆವಿಷ್ಟಂ
ತೇಜಸಾರಾಮಂಸಂಗ್ರಾಮಶಿರಸಿಸ್ಥಿತಂ । ದೃಷ್ಟ್ವಾಸರ್ವಾಣಿಭೂತಾನಿಭಯಾರ್ತಾನಿಪ್ರದುದ್ರುವುಃ ॥೩೬॥ ತತ್ಕಾ
ರ್ಮುಕೈರಾಭರಣೈರ್ಧ್ವಜೈಶ್ಚವರ್ಮಭಿಶ್ಚಾಗ್ನಿಸಮಾನವರ್ಣೈಃ । ಬಭೂವಸೈನ್ಯಂಪಿಶಿತಾಶನಾನಾಂಸೂರ್ಯೋದಯೇ
ನೀಲಮಿವಾಭ್ರಬೃಂದಂ ॥೩೭॥ —*** ಇತಿಶ್ರೀಮದಾರಣ್ಯಕಾಂಡೇ-ಚತುರ್ವಿಂಶಸ್ಸರ್ಗಃ ***—

ಅವಷ್ಟಬ್ಧಧನುಂರಾಮಂಕ್ರುದ್ಧಂಚರಿಪುಘಾತಿನಂ । ದದರ್ಶಾಶ್ರಮಮಾಗಮ್ಯಖರಸ್ಸಹಪುರಸ್ಸರೈಃ ॥೧॥
ತಂದೃಷ್ಟ್ವಾಸಶರಂಚಾಪಮುದ್ಯಮ್ಯಖರನಿಸ್ಸ್ವನಂ ।ರಾಮಸ್ಯಾಭಿಮುಖಂಸೂತಂಚೋದ್ಯತಾಮಿತ್ಯಚೋದಯ
ತ್ ॥೨॥ ಸಖರಸ್ಯಾಜ್ಞಯಾಸೂತಸ್ತುರಗಾನ್ಸಮಚೋದಯತ್ । ಯತ್ರರಾಮೋಮಹಾಬಾಹುರೇಕೋಧುನ್ವನ್ಸ್ಥಿ

ನಿಂದ, ಆವಿಷ್ಟಂ-ಪ್ರವೇಶಿಸಲ್ಪಟ್ಟ, ತಂ-ಆ ಶ್ರೀರಾಮನನ್ನು, ದೃಷ್ಟ್ವಾ-ಕಂಡು, ವನದೇವತಾಃ-ಅರಣ್ಯದಲ್ಲಿರುವ ದೇವತೆಗಳು, ಪ್ರಾದ್ರವನ್-ಓಡಿ ಹೋದವು ॥೩೪॥ ॥ ತದಾ-ಆಕಾಲದಲ್ಲಿ, ಕ್ರುದ್ಧಸ್ಯ-ಕೋಪಿಷ್ಠನಾದ, ತಸ್ಯರಾಮಸ್ಯ-ಆ ಶ್ರೀರಾಮನ, ರೂಪಂ-ಆಕಾರವು, ದಕ್ಷಸ್ಯ-ದಕ್ಷಬ್ರಹ್ಮನ ಕ್ರತುಂ-ಯಜ್ಞವನ್ನು, ಹಂತುಂ-ಧ್ವಂಸಮಾಡುವದಕ್ಕಾಗಿ, ಉದ್ಯತಸ್ಯ-ಪ್ರಯತ್ನಪಟ್ಟ, ಪಿನಾಕಿನಃ-ಪರಮೇಶ್ವರನ, ರೂಪಮಿವ-ಆಕಾರದಂತೆ, ದದೃಶೇ-ಕಾಣಿತು॥೩೫॥ ॥ಸಂಗ್ರಾಮಶಿರಸಿ-ಯುದ್ಧರಂಗದಲ್ಲಿ, ಸ್ಥಿತಂ-ನಿಂತಿರುವ, ತೇಜಸಾ-ರುದ್ರತೇಜಸ್ಸಿನಿಂದ, ಆವಿಷ್ಟಂ-ಸಂಪನ್ನನಾದ, ಅಥವಾ-ತೇಜಸಾ-ಪರಾಕ್ರಮದಿಂದ, ಆವಿಷ್ಟಂ-ಆವೇಶನಾದ, ರಾಮಂ-ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಸರ್ವಾಣಿ-ಸಮಸ್ತಗಳಾದ, ಭೂತಾನಿ-ಪ್ರಾಣಿಗಳು, ಭಯಾರ್ತಾನಿ-ಭಯಗೊಂಡವುಗಳಾಗಿ, ಪ್ರದುದ್ರುವುಃ-ಓಡಿಹೋದವು ॥೩೬॥ ॥ ಪಿಶಿತಾಶನಾನಾಂ-ರಕ್ಕಸರ, ಸೈನ್ಯಂ-ದಂಡು, ತತ್ಕಾರ್ಮುಕೈಃ-ಆ ಬಿಲ್ಲುಗಳಿಂದಲೂ, ಧ್ವಜೈಃ-ಆ ನಿಶಾಣಿಗಳಿಂದಲೂ, ಅಗ್ನಿಸಮಾನವರ್ಣೈಃ-ಬೆಂಕೀಗೆ ಸಮಾನವರ್ಣವುಳ್ಳ, ವರ್ಮಭಿಶ್ಚ-ಕವಚಗಳಿಂದಲೂ, ಸೂರ್ಯೋದಯೇ-ಪ್ರಾತಃಕಾಲದಲ್ಲಿ, ನೀಲಂ-ಕಪ್ಪಾಗಿರುವ, ಅಭ್ರಬೃಂದಮಿವ-ಮೇಘಗಳ ತಂಡದಂತೆ, ಬಭೂವ-ಆಯಿತು॥೩೭॥ ॥ **ಚತುರ್ವಿಂಶಸ್ಸರ್ಗಃ**

ಖರಃ-ಖರಾಸುರನು, ಪುರಸ್ಸರೈಸ್ಸಹ-ಮಂತ್ರಿಜನಗಳೊಡಗೂಡ, ಆಶ್ರಮಂ-ಪರ್ಣಶಾಲೆಯಂಕುರಿತು, ಆಗಮ್ಯ-ಬಂದು, ಅವಷ್ಟಬ್ಧಧನುಂ-ಸೆಗದುಕೊಳ್ಳಲ್ಪಟ್ಟ ಬಿಲ್ಲುಉಳ್ಳ, ಕ್ರುದ್ಧಂ-ಕೋಪಿಷ್ಠನಾದ, ರಿಪುಘಾತಿನಂ-ಶತ್ರುಸಂಹಾರಕನಾದ ರಾಮಂ-ಶ್ರೀರಾಮನನ್ನು, ದದರ್ಶ-ಕಂಡನು ॥೧॥ ತಂ-ಆ ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಖರನಿಸ್ಸ್ವನಂ-ಕ್ರೂರವಾದ ಧ್ವನಿಯುಳ್ಳ, ಸಶರಂ-ಬಾಣದಿಂದೊಡಗೂಡಿದ, ಚಾಪಂ-ಬಿಲ್ಲಿನನ್ನು, ಉದ್ಯಮ್ಯ-ಮ್ಯಾಲಕ್ಕೆಯೆತ್ತಿ, ರಾಮಸ್ಯ-ಶ್ರೀರಾಮನಿಗೆ, ಅಭಿಮುಖಂ-ಎದುರಾಗಿ, ಚೋದ್ಯತಾಂಇತಿ-ಹೋಗಲ್ಪಡಲೆಂದು, ಸೂತಂ-ಸಾರಥಿಯನ್ನು ಕುರಿತು, ಅಚೋದಯತ್-ಪ್ರೇರಿದನು ॥೨॥ ಸಸೂತಃ-ಆ ಸಾರಥಿಯು, ಯತ್ರ-ಯಾವಸ್ಥಳದಲ್ಲಿ, ಮಹಾಬಾಹುಃ-ಮಹಾಭುಜಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ಧನುಃ-ಧನುಸ್ಸಿನನ್ನು, ಧುನ್ವನ್-ಕೊಡವಿದವನಾಗಿ, ಏಕಃ-ಒಬ್ಬನೇ, ಸ್ಥಿತಃ-ಇದ್ದಾನೋ, ತತ್ರ-ಆ ಸ್ಥಳದಲ್ಲಿ

ಡ. ಬಳಿಕ, ಭಯಂಕರವಾಗಿರುವ ಕೋದಂಡವನ್ನು ಮೇಲಕ್ಕೆ ಎತ್ತಿಕೊಂಡು ಬತ್ತಳಿಕೆಯಿಂ ಸರಳುಗಳನ್ನು ತೆಗದು ರಾಕ್ಷಸ ಸಂಹಾರಾರ್ಥವಾಗಿ ಬಹು ಕೋಪವಂ ಗೈದು, ಪ್ರಳಯಾಗ್ನಿಯಂತೆ ನೋಡಲಸಾಧ್ಯನಾಗಿದ್ದನು. ಅಂಥಾ ಶ್ರೀರಾಮನಂ ಕಂಡು ದೇವತೆಗಳೆಲ್ಲರೂ ಓಡಿಹೋದರು ॥೩೪॥ ಆ ಸಮಯದಲ್ಲಿ ಬಹು ಕೋಪಾಟೋಪವುಳ್ಳ ಆ ಶ್ರೀರಾಮನ ರೂಪವು, ದಕ್ಷಬ್ರಹ್ಮನ ಯಾಗಧ್ವಂಸವಂ ಗೈಯ್ಯುವದಕ್ಕೆ ಯತ್ನವಂ ಮಾಡಿದ ಪರಮೇಶ್ವರನ ರೂಪದಂತೆ ಮಹಾ ಭಯಂಕರವಾಗಿ ಕಾಣಲ್ಪಡುತ್ತಿತ್ತು ॥೩೫॥ ಈ ರೀತಿಯಲ್ಲಿ ಆ ರಣರಂಗದಲ್ಲಿ ನಿಂತಿರುವ ಮಹಾ ತೇಜೋವಂತನಾದ ಆ ಶ್ರೀರಾಮನಂ ಕಂಡು, ಸರ್ವ ಭೂತಂಗಳು ಭೀತಿಗೊಂಡು ಓಡಿದವು ॥೩೬॥ ಈ ಪ್ರಕಾರವಾಗಿ ಆ ಅಸುರರಕೋದಂಡಗಳಿಂದಲೂ, ಓಡಿವೆಗಳಿಂದಲೂ, ಧ್ವಜಂಗಳಿಂದಲೂ, ಅಗ್ನಿಯಂತೆ ಕಂಗೊಳಿಸುವ ಕವಚಂಗಳಿಂದಲೂ, ಸಹ ಸೂರ್ಯೋದಯಕಾಲದಲ್ಲಿ ಕಪ್ಪಾಗಿರುವ ಕಾಲಮೇಘದ ದಳ ಸೈನ್ಯವು ಬೆಳಗುತ್ತಿತ್ತು ॥೩೭॥ —* ಆರಣ್ಯಕಾಂಡದಲ್ಲಿನ ೨೪ನೆಯ ಸರ್ಗಂ ಮುಗಿದುದು *—

ಅನಂತರದಲ್ಲ ಆ ಖರಾಸುರನು ತನ್ನ ಮಂತ್ರಿಗಳಿಂ ದೊಡಗೂಡಿ, ಪರ್ಣಶಾಲೆಯ ಸಮೀಪಕ್ಕೆ ಬಂದವನಾಗಿ, ಕೋದಂಡವಂ ಪಿಡಿದು ಬಹು ಕೋಪಾಟೋಪವುಳ್ಳವನಾಗಿರುವ ಶತ್ರುಸಂಹಾರಕನಾದ, ಆ ಶ್ರೀರಾಮನಂ ಕಂಡು, ಬಹು ಘೋಷಣಂ ಗೈಯ್ಯುವ ತನ್ನ ಧನುರ್ದಂಡವನ್ನೆತ್ತಿಕೊಂಡು, ಸಾರಥಿಯಂ ಕುರಿತು, ಎಲೈ ಸಾರಥಿಯೇ! ನನ್ನ ರಥವಂ ರಾಮನಿಗಭಿಮುಖವಾಗಿ ಮಾಡುವವನಾಗೆಂದು ನುಡಿದವನಾಗಲೂ, ಆ ಸಾರಥಿಯು ಶ್ರೀರಾಮನಿರುವ ಪ್ರದೇಶಕ್ಕೆ ತ್ವರಿತವಾಗಿ ಆ ರಥವನ್ನು ನಡೆಯಿಸಿದನು ॥೨॥ ಆ ಸಮಯದಲ್ಲಿ ಆ ಖರಾಸುರನ ಮಂ

ತೋಧನುಃ ॥೩॥ ತಂತುನಿಷ್ಪತಿತಂದೃಷ್ಟ್ವಾಸರ್ವೇತೇರಜನೀಚರಾಃ । ನರ್ದಮಾನಾಮಹಾನಾದಂಸಚಿವಾಃಪರ್ಯವಾರ
ಯನ್ ।೪॥ ಸತೇಷಾಂಯಾತುಧಾನಾನಾಂಮಧ್ಯೇರಥಗತಃಖರಃ । ಬಭೂವಮಧ್ಯೇತಾರಾಣಾಂಲೋಹಿತಾಂಗಇವೋದಿ
ತಃ ॥೫॥ ತತಶ್ಶರಸಹಸ್ರೇಣರಾಮಮಪ್ರತಿಮೌಜಸಂ । ಅರ್ದಯಿತ್ವಾಮಹಾನಾದಂನನಾದಸಮರೇಖರಃ ॥೬॥ ತತಸ್ತಂ
ಭೀಮಧನ್ವಾನಂಕ್ರುದ್ಧಾಸ್ಸರ್ವೇನಿಶಾಚರಾಃ । ರಾಮಂನಾನಾವಿಧೈಶ್ಶಸ್ತ್ರೈರಭ್ಯವರ್ಷಂತದುರ್ಜಯಂ ।೭॥ ಮು
ದ್ಗರೈಃಪಟ್ಟಿಸೈಶ್ಶೂಲೈಃಪ್ರಾಸೈಃಖಡ್ಗೈಃಪರಶ್ವಧೈಃ । ರಾಕ್ಷಸಾಸ್ಸಮರೇರಾಮಂನಿಜಘ್ನೂರೋಷತತ್ಪರಾಃ ॥೮। ತೇಬ
ಲಾಹಕಸಂಕಾಶಾಮಹಾನಾದಾಮಹೌಜಸಃ । ಅಭ್ಯಧಾವಂತಕಾಕುತ್ಸ್ಥಂರಥೈರ್ವಾಜಿಭಿರೇವಚ ॥ ಗಜೈಃಪರ್ವತಕೂ
ಟಾಭೈರಾಮಂಯುದ್ಧೇಜಿಘಾಂಸವಃ ।೯। ತೇರಾಮೇಶರವರ್ಷಾಣಿವ್ಯಸೃಜನ್ರಕ್ಷಸಾಂಗಣಾಃ ।೧೦॥ ತಾನಿಮುಕ್ತ್ವಾನಿಶ

ಶುರಿಗೆ ಕುದುರೆಗಳನ್ನೂ. ಖರಸ್ಯ-ಖರಾಸುರನ. ಲಜ್ಞಯಾ-ನಾಸನದಿಂದ, ಸಮುಜ್ಜೋದಯತ್-ಹೊಸದನು ॥ ॥ ಸರ್ವೇ-ಸಮಸ್ತರಾದ. ರಜನೀ
ಚರಾಃ-ಆ ರಕ್ಷಸರಾದ. ಸಚಿವಾಃ-ಮಂತ್ರಿಗಳು ನಿಷ್ಪತಿತಂ-ಈಚೆಗೆ ಹೊರಟುಬಂದ. ತಂ-ಆ ಶ್ರೀರಾಮನನ್ನು ದೃಷ್ಟ್ವಾ-ಕಂಡು, ಮಹಾನಾದಂ-
ದೊಡ್ಡಕೋಲಾಹಲ ಧ್ವನಿಯುಳ್ಳಂತೆ, ನರ್ದಮಾನಾಃ-ಕೂಗುತ್ತಿರುವವರಾಗಿ, ಪರ್ಯವಾರಯನ್-ಸುತ್ತಿಕೊಂಡರು ॥೪॥ ಸಃ-ಆ ಖರಾಸುರನು ತೇ
ಷಾಂಯಾತುಧಾನಾನಾಂ-ಆ ರಕ್ಕಸರ, ಮಧ್ಯೇ-ಮಧ್ಯಪ್ರದೇಶದಲ್ಲಿ, ರಥಗತಃ-ರಥಾರೂಢನಾಗಿ. ತಾರಾಣಾಂ-ನಕ್ಷತ್ರಗಳ. ಮಧ್ಯೇ-ಮಧ್ಯದಲ್ಲಿ. ಉದಿ
ತಃ-ಉತ್ಪನ್ನನಾದ, ಲೋಹಿತಾಂಗಇವ-ಅಂಗಾರಕನಂತೆ, ಬಭೂವ-ಆದನು ॥೫॥ ತತಃ-ಬಳಿಕ, ಸಮರೇ-ಕಾಳಗದಲ್ಲಿ, ಖರಃ-ಖರಾಸುರನು, ಅಪ್ರತಿ
ಮೌಜಸಂ-ಅಸದೃಶವಾದ ತೇಜಸ್ಸುಳ್ಳ, ರಾಮಂ-ಶ್ರೀರಾಮನನ್ನು, ಶರಸಹಸ್ರೇಣ-ಸಾವಿರಬಾಣಗಳಿಂದ, ಅರ್ದಯಿತ್ವಾ-ಹೊಡೆದು. ಮಹಾನಾ
ದಂ-ದೊಡ್ಡಘೋಷವನ್ನು. ನನಾದ-ಮಾಡಿದನು ॥೬॥ ತತಃ-ಬಳಿಕ, ಸರ್ವೇ-ಸಮಸ್ತರಾದ, ನಿಶಾಚರಾಃ-ರಾಕ್ಷಸರು ಕ್ರುದ್ಧಾಃ-ಕೋಪಗೊಂಡವ
ರಾಗಿ, ದುರ್ಜಯಂ-ಜಯಿಸಲಸಾಧ್ಯನಾದ, ಭೀಮಧನ್ವಾನಂ-ಭಯಂಕರವಾದ ಧನುಸ್ಸುಳ್ಳ. ತಂರಾಮಂ-ಆ ಶ್ರೀರಾಮನನ್ನು, ನಾನಾವಿಧೈಃ-ಅನೇ
ಕಬಗೆಗಳಾದ, ಶಸ್ತ್ರೈಃ-ಆಯುಧಗಳಿಂದ, ಅಭ್ಯವರ್ಷಂತ-ಸುರಿಸಿದರು ॥೭॥ ರಾಕ್ಷಸಾಃ-ರಕ್ಕಸರು ಸಮರೇ-ಕಾಳಗದಲ್ಲಿ. ರೋಷತತ್ಪರಾಃ-ಕೋ
ಪದಿಂ ಕೂಡಿದವರಾಗಿ, ಮುದ್ಗರೈಃ-ಗದೆಗಳಿಂದಲೂ. ಶೂಲೈಃ-ಶೂಲಾಯುಧಗಳಿಂದಲೂ, ಪ್ರಾಸೈಃ-ಕುಂತಾಯುಧಗಳಿಂದಲೂ, ಖಡ್ಗೈಃ-ಚಿಕ್ಕಕ
ತ್ತಿಗಳಿಂದಲೂ, ಪರಶ್ವಧೈಃ-ಕೊಡ್ಲಿಗಳಿಂದಲೂ ರಾಮಂ-ಶ್ರೀರಾಮನನ್ನು ನಿಜಘ್ನುಃ-ಹೊಡೆದರು ॥೮॥ ವಲಾಹಕಸಂಕಾಶಾಃ-ಮೇಘಗಳಿಗೆ ಸಮಾ
ನವಾದ. ಮಹಾನಾದಾಃ-ಮಹಾಧ್ವನಿಗಳುಳ್ಳ. ಮಹೌಜಸಃ-ಮಹಾಪರಾಕ್ರಮಶಾಲಿಗಳಾದ, ತೇ-ಆ ರಕ್ಕಸರು, ಯುದ್ಧೇ-ಕಾಳಗದಲ್ಲಿ, ಕಾಕುತ್ಸ್ಥಂ-
ಕಕುತ್ಸ್ಥವಂಶೋತ್ಪನ್ನನಾದ, ರಾಮಂ-ಶ್ರೀರಾಮನನ್ನು, ಜಿಘಾಂಸವಃ-ಹೊಡೆಯಲಿಚ್ಛೆಯುಳ್ಳವರಾಗಿ, ರಥೈಃ-ತೇರುಗಳಿಂದಲೂ, ವಾಜಿಭಿರೇವಚ-
ಕುದುರೆಗಳಿಂದಲೂ, ಪರ್ವತಕೂಟಾಭೈಃ-ಬೆಟ್ಟದ ಕೂಟಗಳಂತೆ ಹೊಳೆಯುತ್ತಿರುವ, ಗಜೈಃ-ಆನೆಗಳಿಂದಲೂ, ಅಭ್ಯಧಾವಂತ-ಓಡಿಬಂದರು ॥೯॥
ತೇರಕ್ಷಸಾಂಗಣಾಃ-ಆ ರಾಕ್ಷಸರಗಣಗಳು, ಶೈಲೇಂದ್ರಂ-ಪರ್ವತವಂ ಕುರಿತು, ಧಾರಾಭಿಃ-ಉದಕಧಾರೆಗಳಿಂದ. ವರ್ಷಮಾಣಾಃ-ಸುರಿಯುತ್ತಿರುವ. ವಲಾ
ಹಕಾಇವ-ಮೇಘಗಳಂತೆ. ರಾಮೇ-ಶ್ರೀರಾಮನಲ್ಲಿ, ಶರವರ್ಷಾಣಿ-ಬಾಣವೃಷ್ಟಿಯನ್ನು, ವ್ಯಸೃಜನ್-ಸುರಿಸಿದರು ॥೧೦॥ ॥ ಸಂಘೋಷೈಃ-ಆ ಶ್ರೀ

ತ್ರಗಳು ಇತರರಾಕ್ಷಸರರೂ ಸಹ, ಪರ್ಣಶಾಲೆಯಿಂದ ಹೊರಕ್ಕೆಬರುತಿರುವಆ ಶ್ರೀರಾಮನಂ ಕಂಡು, ಘಟ್ಟಿಯಾ
ಗಿಕೂಗುತ್ತಾ ಆತನಂ ಸುತ್ತುಬಾರಿಕೊಂಡರು ।೪। ಆ ಸಮಯದಲ್ಲಿ ಖರಾಸುರನು ಆ ರಾಕ್ಷಸರ ಮಧ್ಯಪ್ರದೇಶದ
ಲ್ಲಿ ರಥಾರೂಢನಾಗಿ, ನಕ್ಷತ್ರಂಗಳ ಮಧ್ಯದಲ್ಲಿರುವ ಅಂಗಾರಕನಂತೆ ಬಹು ಕ್ರೂರವಾಗಿ ಹೊಳೆಯುತ್ತಿದ್ದನು ।೫।
ಅನಂತರದಲ್ಲಿ ಆ ಖರಾಸುರನು ಸಂಗರದಲ್ಲಿ ಅಸದೃಶವಾದ ಪರಾಕ್ರಮವುಳ್ಳ ಶ್ರೀರಾಮನನ್ನು ಸಹಸ್ರಬಾಣಗಳಿಂ
ದ ಹೊಡದು ಅಟ್ಟಹಾಸಂಗೈದವನಾಗಲೂ, ಆ ಸಮಸ್ತರಾದ ರಾಕ್ಷಸರು ಕಡುಕುಪಿತರಾಗಿ, ಭಯಂಕರವಾದಕೋ
ದಂಡವಂ ಪಿಡಿದಿರುವ ಆ ದಶರಥಪುತ್ರನಾದ ಶ್ರೀರಾಮನಂ ಕುರಿತು ಅನೇಕ ವಿಧಂಗಳಾದ ಆಯುಧಂಗಳಂ ಸುರಿ
ಸಿದರದೆಂತೆನೆ, —।೭। ರಣರಂಗದಲ್ಲಿ ಆ ರಾಕ್ಷಸರು ಬಹು ಕೋಪಾಟೋಪವುಳ್ಳವರಾಗಿ, “ ಮುದ್ಗರ, ಪಟ್ಟಸ, ಶೂ
ಲ, ಪ್ರಾಸ, ಖಡ್ಗ, ಪರಶ್ವಧ, ” ಎಂಬಿವುಗಳು ಮೊದಲಾದ ಆಯುಧಂಗಳಿಂದ ಶ್ರೀರಾಮನಂ ಹೊಡೆದರು ।೮।
ಮತ್ತೂ ಮಹಾ ಪರಾಕ್ರಮಶಾಲಿಗಳಾದ ಇನ್ನುಕೆಲ ಆ ರಾಕ್ಷಸರು ಮೇಘಗರ್ಜನೆಯಂ ಗೈದು, ಕಕುತ್ಸ್ಥವಂ
ಶೋತ್ಪನ್ನನಾದ ಆ ಶ್ರೀರಾಮನಂ ಹೊಡೆಯಲಿಚ್ಛೆಯುಳ್ಳವರಾಗಿ, ರಥಂಗಳನ್ನು, ಕುದುರೆಗಳನ್ನೂ, ಗಿರಿಸದೃಶ
ವಾದ ಗಜಂಗಳನ್ನೂ, ಏರಿಓಡಿಬಂದರು ।೯। ಈ ರೀತಿಯಾಗಿ ಆ ರಾಕ್ಷಸಗಣವು, ಮೇಘಂಗಳು ಪರ್ವತೋ
ತ್ತಮದಲ್ಲಿ ಉದಕಧಾರೆಗಳಂ ಸುರಿಸುವಂತೆ, ಆ ಶ್ರೀರಾಮನಲ್ಲಿ ಬಾಣವರ್ಷವಂ ಸುರಿಸುತ್ತಾ ಮಹಾ ಭಯಂಕರ
ವಾಗಿ, ಶ್ರೀರಾಮನಿಗೆ ಸುತ್ತುಮುತ್ತಲೂ ಸುತ್ತಿಕೊಂಡದ್ದಾಯಿತು ।೧೦। ಆ ಸಮಯದಲ್ಲಿ ಶ್ರೀರಾಮನು ಸಮು

ಸ್ತ್ರಾಣಿಯಾತುಧಾನೈಸ್ಸರಾಘವಃ । ಪ್ರತಿಜಗ್ರಾಹವಿಶಿಖೈರ್ನದ್ಯೋಘಾನಿವಸಾಗರಃ ॥೧೦॥ ಸತೈಃಪ್ರಹರಣೈರ್ಘೋರೈರ್ಭಿ
ನ್ನಗಾತ್ರೋನವಿವ್ಯಥೇ । ರಾಮಃಪ್ರದೀಪ್ತೈರ್ಬಹುಭಿರ್ವಜ್ರೈರಿವಮಹಾಚಲಃ ॥೧೧॥ ಸವಿದ್ಧಃಕ್ಷತಜಾದಿಗ್ಧಸ್ಸರ್ವಗಾ
ತ್ರೇಷುರಾಘವಃ । ಬಭೂವರಾಮಸ್ಸಂಧ್ಯಾಭ್ರೈರ್ದಿವಾಕರಇವಾವೃತಃ ॥೧೨॥ ವಿಷೇದುರ್ದೇವಗಂಧರ್ವಾಸ್ಸಿದ್ಧಾಶ್ಚಪರ
ಮರ್ಷಯಃ । ಏಕಂಸಹಸ್ರೈರ್ಬಹುಭಿಸ್ತದಾದೃಷ್ಟ್ವಾಸಮಾವೃತಂ ॥೧೩॥ ತತೋರಾಮಸ್ಸುಸಂಕ್ರುದ್ಧೋಮಂಡಲೀ
ಕೃತಕಾರ್ಮುಕಃ । ಸಸರ್ಜವಿಶಿಖಾನ್‌ಬಾಣಾನ್‌ಶತಶೋಥಸಹಸ್ರಶಃ ॥೧೪॥ ದುರಾವಾರಾನ್‌ದುರ್ವಿಷಹಾನ್‌ಕಾಲದಂ
ಡೋಪಮಾನ್‌ರಣೇ । ಮುಮೋಚಲೀಲಯಾರಾಮಃಕಂಕಪತ್ರಾನಜಿಹ್ಮಗಾನ್ ॥೧೫॥ ತೇಶರಾಶ್ಶತ್ರುಸೈನ್ಯೇಷುಮುಕ್ತಾ
ರಾಮೇಣಲೀಲಯಾ । ಆದದೂರಕ್ಷಸಾಂಪ್ರಾಣಾನ್‌ಪಾಶಾಃಕಾಲಕೃತಾಇವ ॥೧೬॥ ಭಿತ್ವಾರಾಕ್ಷಸದೇಹಾಂಸ್ತಾಂಸ್ತೇಶ

ರಾಮನು ಘೋರೈಃ–ಭಯಂಕರಗಳಾದ. ತೈಃರಕ್ಷಸಾಂಗಣೈಃ–ಆ ರಾಕ್ಷಸರ ಗಣಗಳಿಂದ. ಪರಿವೃತಃ–ಸುತ್ತಿಕೊಳ್ಳಲ್ಪಟ್ಟನು ॥೯॥ ಸರಾಘವಃ–
ಆ ಶ್ರೀರಾಮನು. ಸಾಗರಃ–ಕಡಲು. ನದ್ಯೋಘಾನಿವ–ಹೊಳೆಗಳ ಪ್ರವಾಹಗಳನ್ನಂತೆ, ಯಾತುಧಾನೈಃ–ರಾಕ್ಷಸರಿಂದ. ಮುಕ್ತಾನಿ–ಬಿಡಲ್ಪಟ್ಟ. ತಾನಿ
ಶಸ್ತ್ರಾಣಿ–ಆ ಶಸ್ತ್ರಗಳನ್ನು, ವಿಶಿಖೈಃ–ಬಾಣಗಳಿಂದ, ಪ್ರತಿಜಗ್ರಾಹ–ತಡೆಮಾಡಿದನು ॥೧೦॥ ಮಹಾಬಲಃ–ಮಹಾಸಾಮರ್ಥ್ಯವುಳ್ಳ, ಸರಾ
ಮಃ–ಆ ಶ್ರೀರಾಮನು. ವಜ್ರೈರಿವ–ಸಿಡಿಲುಗಳಂತೆ, ಪ್ರದೀಪ್ತೈಃ–ಪ್ರಜ್ವಲಿಸುತ್ತಿರುವ, ಬಹುಭಿಃ–ಅನೇಕಗಳಾದ, ಘೋರೈಃ–ಭಯಂಕರಗಳಾದ. ತೈಃ
ಪ್ರಹರಣೈಃ–ಆ ಶಸ್ತ್ರಗಳಿಂದ, ಭಿನ್ನಗಾತ್ರಃ–ಭೇದಿಸಲ್ಪಟ್ಟ ಶರೀರವುಳ್ಳವನಾದರೂ, ನವಿವ್ಯಥೇ–ವ್ಯಸನಪಟ್ಟವನಾಗಲಿಲ್ಲ ॥೧೧॥ ರಾಘವಃ–ರಘು
ವಂಶೋತ್ಪನ್ನನಾದ, ರಾಮಃ–ಶ್ರೀರಾಮನು. ಸರ್ವಗಾತ್ರೇಷು–ಸಮಸ್ತಾವಯವಗಳಲ್ಲಿ, ವಿದ್ಧಃ–ಹೊಡೆಯಲ್ಪಟ್ಟವನಾಗಿ. ಕ್ಷತಜಾದಿಗ್ಧಃ–ರಕ್ತ
ದಿಂದ ಲೇಪನಮಾಡಲ್ಪಟ್ಟವನಾಗಿ, ಸಂಧ್ಯಾಭ್ರೈಃ–ಸಾಯಂಕಾಲದಲ್ಲಿ ಮೇಘಗಳಿಂದ, ಆವೃತಃ–ಸುತ್ತಿಕೊಳ್ಳಲ್ಪಟ್ಟ. ದಿವಾಕರಇವ–ಸೂರ್ಯನಂತೆ,
ಬಭೂವ–ಆದನು ॥೧೨॥ ತದಾ–ಆ ಕಾಲದಲ್ಲಿ, ಏಕಂ–ಒಬ್ಬನನ್ನು. ಬಹುಭಿಃ–ಅನೇಕಗಳಾದ, ಸಹಸ್ರೈಃ–ಸಾವಿರಗಳಿಂದ, ಸಮಾವೃತಂ–ಸುತ್ತಿಕೊ
ಳ್ಳಲ್ಪಟ್ಟವನನ್ನಾಗಿ, ದೃಷ್ಟ್ವಾ–ಕಂಡು. ದೇವಗಂಧರ್ವಾಃ–ದೇವತೆಗಳೂ ಗಂಧರ್ವರೂ. ಸಿದ್ಧಾಃ–ಸಿದ್ಧರು, ಪರಮರ್ಷಯಶ್ಚ–ಬ್ರಹ್ಮಋಷಿಗಳೂ
ಸಹ. ವಿಷೇದುಃ–ವ್ಯಸನಗೊಂಡರು ॥೧೩॥ ತತಃ–ಬಳಿಕ. ರಾಮಃ–ಶ್ರೀರಾಮನು ಸುಸಂಕ್ರುದ್ಧಃ–ಬಹಳ ಕೋಪಗೊಂಡವನಾಗಿ, ಮಂಡಲೀಕೃತಕಾರ್ಮು
ಕಃ–ಗುಂಡಾಗಿ ಮಾಡಲ್ಪಟ್ಟ ಬಿಲ್ಲುಳ್ಳವನಾಗಿ, ಶತಶಃ–ನೂರಾರು, ವಿಶಿಖಾನ್–ಬಾಣಗಳನ್ನು, ಸಸರ್ಜ–ಬಿಟ್ಟನು, ಅಥ–ಬಳಿಕ, ಸಹಸ್ರಶಃ–ಬಾ
ಣಾನ್–ಅರ್ಧಚಂದ್ರಾಕಾರವಾದ ಸಾವಿರಾರು ಬಾಣಗಳನ್ನು, ಸಸರ್ಜ–ಬಿಟ್ಟನು. ... ... ... ... ... .. ॥೧೪॥
ರಾಮಃ–ಶ್ರೀರಾಮನು, ಲೀಲಯಾ–ವಿಲಾಸಮಾತ್ರದಿಂದ, ದುರಾವಾರಾನ್–ತಡೆಮಾಡುವದಕ್ಕೆ ಅಸಾಧ್ಯಗಳಾದ, ರಣೇ–ಕಾಳಗದಲ್ಲಿ, ದುರ್ವಿಷಹಾನ್–
ಸಹಿಸಲಸಾಧ್ಯಂಗಳಾದ, ಕಾಲದಂಡೋಪಮಾನ್–ಯಮದಂಡಕ್ಕೆ ಸಮಾನಗಳಾದ. ಅಜಿಹ್ಮಗಾನ್–ಸರಿಯಾಗಿ ಗುರಿಭೇದನಮಾಡತಕ್ಕ, ಕಂಕಪತ್ರಾನ್–
ಬಾಣಗಳನ್ನು, ಮುಮೋಚ–ಬಿಟ್ಟನು ॥೧೫॥ ರಾಮೇಣ–ಶ್ರೀರಾಮನಿಂದ. ಶತ್ರುಸೈನ್ಯೇಷು–ಶತ್ರುಗಳ ದಂಡಿನಲ್ಲಿ. ಲೀಲಯಾ–ವಿಲಾಸಮಾತ್ರದಿಂದ,
ಮುಕ್ತಾಃ–ಬಿಡಲ್ಪಟ್ಟ, ತೇಶರಾಃ–ಆ ಬಾಣಗಳು, ಕಾಲಕೃತಾಃ–ಯಮಧರ್ಮರಾಯನಿಂದ ಹಾಕಲ್ಪಟ್ಟ, ಪಾಶಾಇವ–ಪಾಶಾಯುಧಗಳಂತೆ. ರಕ್ಷ

ದ್ರನು ನದೀಪ್ರವಾಹಂಗಳಂ ತಡೆಯುವಂತೆ, ಆ ರಾಕ್ಷಸರಿಂದಬಿಡಲ್ಪಡುವ ಶಸ್ತ್ರಾಸ್ತ್ರಂಗಳನ್ನು ತನ್ನನಿಡುಸರ
ಳುಗಳಿಂದ ತಡದನು ॥೧೦॥ ಆ ರಣರಂಗದಲ್ಲಿ ಮಹಾ ಸಮರ್ಥನಾದ ಶ್ರೀರಾಮನು, ಸಿಡಿಲುಗಳಂದದಿ ಬೆಳಗುವ
ಮಹಾ ಭಯಂಕರವಾದ ಆ ಶಸ್ತ್ರಾಸ್ತ್ರಂಗಳಿಂದ ಭೇದಿಸಲ್ಪಟ್ಟ ಶರೀರವುಳ್ಳವನಾದರೂ ವ್ಯಸನವನ್ನೈದಿದವ
ನಾಗಲಿಲ್ಲ ॥೧೧॥ ಮತ್ತೂ ಶೂರನಾದ ಆ ಶ್ರೀರಾಮನು ಸರ್ವಾವಯವಗಳಲ್ಲಿಯೂ, ಹೊಡೆಯಲ್ಪಟ್ಟವನಾಗಿ ರಕ್ತ
ತದಿಂದ ತೊಯಿಸಲ್ಪಟ್ಟವನಾಗಿಯೂ ಇರುವವನಾಗಿ, ಸಂಧ್ಯಾಕಾಲದಲ್ಲಿ ಮೇಘಂಗಳಿಂದ ಆವೃತನಾದ ಸೂರ್ಯನ
ತೆರದಿ ಪೊಳೆಯುತ್ತಿದ್ದನು ॥೧೨॥ ಆ ಸಮಯದಲ್ಲಿ ದೇವತೆಗಳೂ ಸಿದ್ಧರೂ ಚಾರಣರೂ ಮಹರ್ಷಿಗಳೂ ಸಹ,
ಅನೇಕರಾದ ರಾಕ್ಷಸರಿಂದ ಪರಿವೃತನಾಗಿರುವ ಸಹಾಯವಿಲ್ಲದಿರುವ ಆ ಶ್ರೀರಾಮನಂ ಕಂಡು ವ್ಯಥೆಯನ್ನೈದಿದ
ರು ॥೧೩॥ ಅನಂತರದಲ್ಲಿ ಶ್ರೀರಾಮನು ಬಹು ಕೋಪವುಳ್ಳವನಾಗಿ, ತಾನು ಪಿಡಿದಿರುವ ಕೋದಂಡವಂ ಕುಂಡಲಾ
ಕಾರವನ್ನೈದಿಸಿ, ನೂರು ನೂರು ಬಾಣಂಗಳನ್ನೂ ಸಾವಿರಸಾವಿರ ಬಾಣಂಗಳನ್ನೂ ಪೊಂದೊಂದಸಲ ಬಿಡುತ್ತಿದ್ದ
ನದೆಂತೆನೆ,—॥೧೪॥ ಆ ದಶರಥಪುತ್ರನಾದ ಶ್ರೀರಾಮನು ವಿಲಾಸಮಾತ್ರದಿಂದ ಆ ರಣರಂಗದಲ್ಲಿ ತಡೆಯಲಸಾಧ್ಯವಾ
ದ ಸಹಿಸಲಶಕ್ಯವಾದ, ಯಮದಂಡದಂದದಿ ಗಡಗಡನೆ ನಡುಗಿಸುವ ಮತ್ತು ಲಕ್ಷ್ಯವಂ ಭೇದಿಸುವ ನಿಡಿಗೋಲು
ಗಳನ್ನು ಬಿಡುತಿದ್ದನು ॥೧೫॥ ಈ ರೀತಿಯಲ್ಲಿ ವಿಲಾಸಮಾತ್ರದಿಂದ ಶ್ರೀರಾಮನಿಂ ಪ್ರಯೋಗಿಸಲ್ಪಡುವ ಆ ಬಾಣಂ
ಗಳು, ಕಾಲಪಾಶದಂತೆ ರಾಕ್ಷಸರ ಪ್ರಾಣಗಳನ್ನು ತೆಗೆದುಹಾಕಿದವು. ಮತ್ತೂ ಆ ಬಾಣಂಗಳು ಆ ಅಸುರರ ಶ

ಶಾರುಧಿರಾಪ್ಲುತಾಃ । ಅಂತರಿಕ್ಷಗತಾರೇಜುರ್ದೀಪ್ತಾಗ್ನಿಸಮತೇಜಸಃ ।೧೯। ಅಸಂಖ್ಯೇಯಾಸ್ತು ರಾಮಸ್ಯ ಸಾಯಕಾಶ್ಚಾ
ಪಮಂಡಲಾತ್ । ವಿನಿಷ್ಪೇತುರತೀವೋಗ್ರಾ ರಕ್ಷಃಪ್ರಾಣಾಪಹಾರಿಣಃ ।೨೦। ತೈರ್ಧನೂಂಷಿಧ್ವಜಾಗ್ರಾಣಿವರ್ಮಾ
ಣಿಚಶಿರಾಂಸಿಚ ।ಬಾಹೂನ್ಸಹಸ್ತಾಭರಣಾನೂರೂನ್ಕರಿಕರೋಪಮಾನ್।ಚಿಚ್ಛೇದರಾಮಸ್ಸಮರೇಶತಶೋಽಥಸಹಸ್ರಶಃ।
ಹಯಾನ್ಕಾಂಚನಸನ್ನಾಹಾನ್ರಥಯುಕ್ತಾನ್ಸಸಾರಥೀನ್ । ಗಜಾಂಶ್ಚ ಸಗಜಾರೋಹಾನ್ಸಹಯಾನ್ಸಾದಿನಸ್ತಥಾ ।
ಪದಾತೀನ್ಸಮರೇಹತ್ವಾಹ್ಯನಯದ್ಯಮಸಾದನಂ ।೨೨। ತತೋನಾಳೀಕನಾರಾಚೈಸ್ತೀಕ್ಷ್ಣಾಗ್ರೈಶ್ಚವಿಕರ್ಣಿಭಿಃ ।
ಭೀಮಮಾರ್ತಸ್ವರಂಚಕ್ರುರ್ಭಿದ್ಯಮಾನಾನಿಶಾಚರಾಃ।೨೩।ತತ್ಸೈನ್ಯಂನಿಶಿತೈರ್ಬಾಣೈರರ್ದಿತಂಮರ್ಮಭೇದಿಭಿಃ।ರಾಮೇಣನ
ಸುಖಂಲೇಭೇಶುಷ್ಕಂವನಮಿವಾಗ್ನಿನಾ।೨೪।ಕೇಚಿದ್ಭೀಮಬಲಾಶ್ಶೂರಾಶ್ಶೂಲಾನ್ಖಡ್ಗಾನ್ಪರಶ್ವಧಾನ್। ರಾಮಸ್ಯಾಭಿ

---

ಸಾಂ-ರಕ್ಕಸರ, ಪ್ರಾಣಾನ್-ಪ್ರಾಣವಾಯುಗಳನ್ನು. ಆದದುಃ-ತೆಗೆದುಹಾಕಿದವು ॥೧೮॥ ತೇಶರಾಃ-ಆ ಬಾಣಗಳು, ರಾಕ್ಷಸದೇಹಾನ್-ಆ ರಕ್ಕಸರ ಶರೀರಗಳನ್ನು. ಭಿತ್ವಾ-ಭೇದಿಸಿ, ರುಧಿರಾಪ್ಲುತಾಃ-ರಕ್ತದಿಂ ನೆನೆದವುಗಳಾಗಿ, ಅಂತರಿಕ್ಷಗತಾಃ-ನಕ್ಷತ್ರಮಂಡಲವಂ ಪೊಂದಿದವುಗಳಾಗಿ. ದೀಪ್ತಾಗ್ನಿಸಮತೇಜಸಃ-ಉರಿಯುತ್ತಿರುವ ಬೆಂಕಿಗೆ ಸಮಾನತೇಜಸ್ಸುಳ್ಳವುಗಳಾಗಿ, ರೇಜುಃ-ಹೊಳೆಯುತ್ತಿದ್ದವು ॥೧೯॥ ರಾಮಸ್ಯ-ಶ್ರೀರಾಮನ, ಚಾಪಮಂಡಲಾತ್-ಕುಂಡಲಾಕಾರವಾದ ಧನುರ್ದಂಡದೆಡೆಯಿಂದ, ಅಸಂಖ್ಯೇಯಾಃ-ಎಣಿಸಲಸಾಧ್ಯಗಳಾದ. ಅತೀವ-ಬಹಳವಾಗಿ, ಉಗ್ರಾಃ-ಕ್ರೂರಗಳಾದ, ರಕ್ಷಃಪ್ರಾಣಾಪಹಾರಿಣಃ-ರಕ್ಕಸರ ಪ್ರಾಣವನ್ನು ಅಪಹರಿಸುತ್ತಿರುವ, ಸಾಯಕಾಃ-ಬಾಣಗಳು, ವಿನಿಷ್ಪೇತುಃ-ಹೊರಟವು ॥೨೦॥ ರಾಮಃ-ಶ್ರೀರಾಮನು, ತೈಃ-ಆ ಬಾಣಗಳಿಂದ. ಸಮರೇ-ಕಾಳಗದಲ್ಲಿ, ಶತಶಃ-ನೂರಾದ, ಧನೂಂಷಿ-ಬಿಲ್ಲುಗಳನ್ನು, ಧ್ವಜಾಗ್ರಾಣಿ-ನಿಶಾನೆಗಳ ತುದಿಗಳನ್ನು, ವರ್ಮಾಣಿ ಚ-ಕವಚಗಳನ್ನು. ಶಿರಾಂಸಿಚ-ಶಿರಸ್ಸುಗಳನ್ನು, ಸಹಸ್ತಾಭರಣಾನ್-ಹಸ್ತಾಭರಣಗಳಿಂದೊಡಗೂಡಿದ, ಬಾಹೂನ್-ಭುಜಗಳನ್ನು, ಕರಿಕರೋಪಮಾನ್-ಆನೆಗಳ ಸೊಂಡಿಲಗಳಿಗೆ ಸಮಾನಗಳಾದ, ಊರೂನ್-ತೊಡೆಗಳನ್ನು. ಚಿಚ್ಛೇದ-ಕತ್ತರಿಸಿದನು. ಅಥ-ಬಳಿಕ. ಸಹಸ್ರಶಃ-ಸಹಸ್ರಗಳನ್ನು, ಚಿಚ್ಛೇದ-ಕತ್ತರಿಸಿದನು ॥೨೧॥ ಕಾಂಚನಸನ್ನಾಹಾನ್-ಸುವರ್ಣದ ಲಗಾಮುಗಳೇ ಮೊದಲಾದ ಸಾಮಗ್ರಿಗಳುಳ್ಳ, ರಣಯುಕ್ತಾನ್-ಕಾಳಗಕ್ಕೆ ಯೋಗ್ಯಗಳಾದ, ಸಸಾರಥೀನ್-ಸಾರಥಿಗಳಿಂದೊಡಗೂಡಿದ, ಹಯಾನ್-ಕುದುರೆಗಳನ್ನು. ಸಗಜಾರೋಹಾನ್-ಆನೆಮಾವಟಿಗರಿಂದೊಡಗೂಡಿದ, ಗಜಾನ್-ಆನೆಗಳನ್ನು. ತಥಾ-ಹಾಗೆಯೇ, ಸಹಯಾನ್-ಕುದುರೆಗಳಿಂದೊಡಗೂಡಿದ, ಸಾದಿನಃ-ಕುದುರೆಸವಾರರನ್ನು, ಪದಾತೀಂಶ್ಚ-ಕಾಲಾಳುಗಳನ್ನು, ಸಮರೇ-ಯುದ್ಧದಲ್ಲಿ, ಹತ್ವಾ-ಕೊಂದು. ಯಮಸಾದನಂ-ಯಮನಮನೆಯನ್ನು. ಅನಯದ್ಧಿ-ಕೊಂಡೊಯ್ದನಷ್ಟೆ ॥೨೨॥ ತತಃ-ಬಳಿಕ ನಾಳೀಕನಾರಾಚೈಃ ಬಾಣಗಳಿಂದಲೂ ಕಬ್ಬಿಣವಿಕಾರವಾದ ಬಾಣಗಳಿಂದಲೂ, ತೀಕ್ಷ್ಣಾಗ್ರೈಃ-ಹದವಾದ ತುದಿಗಳುಳ್ಳ, ವಿಕರ್ಣಿಭಿಃ-ಉಗ್ರವಾದ ಅಂಕುಶಗಳಿಂದಲೂ, ಭಿದ್ಯಮಾನಾಃ-ಭೇದಿಸಲ್ಪಟ್ಟವರಾಗಿ, ನಿಶಾಚರಾಃ-ರಕ್ಕಸರು, ಭೀಮಂ-ಭಯಂಕರವಾದ, ಆರ್ತಸ್ವರಂ-ದೀನಧ್ವನಿಯನ್ನು, ಚಕ್ರುಃ-ಮಾಡಿದರು ॥೨೩॥ ತತ್ಸೈನ್ಯಂ-ಆ ದಂಡು, ರಾಮೇಣ-ಶ್ರೀರಾಮನಿಂದ, ನಿಶಿತೈಃ-ತೀಕ್ಷ್ಣಗಳಾದ, ಮರ್ಮಭೇದಿಭಿಃ-ಮರ್ಮಸ್ಥಾನವನ್ನು ಭೇದಿಸುತ್ತಿರುವ, ಬಾಣೈಃ-ಬಾಣಗಳಿಂದ, ಅರ್ದಿತಂ-ಹೊಡೆಯಲ್ಪಟ್ಟದ್ದಾಗಿ, ಶುಷ್ಕಂ-ಒಣಗಿದ, ವನಂ-ಅರಣ್ಯವು, ಅಗ್ನಿನೇವ-ಅಗ್ನಿಯಿಂದಲಂತೆ, ಸುಖಂ-ಸುಖವನ್ನು, ನಲೇಭೇ-ಹೊಂದಲಿಲ್ಲ ॥೨೪॥ ಕೇಚಿತ್-ಕೆಲಬರಾದ, ಭೀಮಬಲಾಃ-ಭಯಂಕರವಾದ ಶಕ್ತಿಯುಳ್ಳ, ಶೂರಾಃ-ಪರಾಕ್ರಮಿಗಳು, ರಾಮಸ್ಯ-ಶ್ರೀರಾಮನಿಗೆ, ಅಭಿಮುಖಂ-ಎದುರಾಗಿ, ಗತ್ವಾ-ಬಂದು, ಶೂಲಾನ್-ಭಲ್ಲೆಯಾಯುಧಗಳನ್ನು, ಖಡ್ಗಾನ್-ಕತ್ತಿಗಳನ್ನು, ಪರಶ್ವ

---

ರೀರಂಗಳಂ ಭೇದಿಸಿ ರಕ್ತದಿಂದ ತೋಯಿಸಲ್ಪಟ್ಟವುಗಳಾಗಿ, ನಕ್ಷತ್ರಮಾರ್ಗವನ್ನೈದಿ, ಉರಿಯುವ ಬೆಂಕಿಯಂ
ತೆ ಕಂಗೊಳಿಸುತ್ತಿದ್ದವು ।೧೯। ಈ ಪ್ರಕಾರವಾಗಿ ಶ್ರೀರಾಮನ ಧನುರ್ದಂಡದಿಂದ ಅನೇಕಬಾಣಂಗಳು, ಆ
ರಾಕ್ಷಸರ ಪ್ರಾಣಂಗಳನ್ನಪಹರಿಸುವವಾಗಿ ಹೊರಟವು ।೨೦। ಆ ರಣರಂಗದಲ್ಲಿ ಶ್ರೀರಾಮನು ಮೇಲ್ವಾಯ್ದುಬರು
ವ ಆ ರಾಕ್ಷಸರ ಅನೇಕವಾದ ಕೋದಂಡಂಗಳನ್ನೂ ಧ್ವಜಾಗ್ರಂಗಳನ್ನೂ, ಕವಚಂಗಳನ್ನೂ, ಮಂಡೆಗಳನ್ನೂ,
ಭುಜಂಗಳನ್ನೂ, ಮತ್ತೂ ಆನೆಗಳ ಸೊಂಡಿಲಗಳಂತಿರುವ ತೊಡೆಗಳನ್ನೂ, ರಥಸಾರಥ್ಯವಂ ಗೈಯುವ ಸಾರಥಿ
ಗಳನ್ನೂ, ರಥಂಗಳನ್ನೂ, ರಥಾಶ್ವಂಗಳನ್ನೂ, ಕುದುರೆಗಳನ್ನೂ, ಗಜಾರೂಢರನ್ನೂ, ಆನೆಗಳನ್ನೂ, ಕುದುರೆ
ಯ ಸವಾರರನ್ನೂ, ಕಾಲಾಳುಗಳನ್ನೂ, ಸಹ ನಿಡಿಗೋಲುಗಳಿಂದ ಕುಟ್ಟಿಕುಟ್ಟಿ ಯಮಮಂದಿರಕ್ಕೆ ಕಳುಹಿಸು
ತ್ತಿದ್ದನು ।೨೨। ಈ ರೀತಿಯಾಗಿ ಬಾಣಂಗಳಿಂದಲೂ ಕಬ್ಬಿಣವಿಕಾರವಾದ ಸಿಡುಸರಳುಗಳಿಂದಲೂ, ಬಹಳ ಹದ
ವಾದ ಅಂಕುಶಂಗಳಿಂದಲೂ ಭೇದಿಸಲ್ಪಟ್ಟ ಆ ರಾಕ್ಷಸರು ಭಯಂಕರವಾಗಿಯೂ ದೀನವಾಗಿಯೂ ಕೂಗಿಕೊಂಡ
ರು ।೨೩। ಆ ಸಮಯದಲ್ಲಿ ಆ ಸೈನ್ಯವು ಶ್ರೀರಾಮನಿಂದ ಹೊಡೆಯಲ್ಪಟ್ಟದ್ದಾಗಿ, ಶುಷ್ಕರವಾದ ಅರಣ್ಯವು ಅಗ್ನಿ
ಯಿಂದ ಸುಖವನ್ನು ಯೆಂತು ಪಡೆಯುವದಿಲ್ಲವೋ ಅಂತು ಸುಖವನ್ನೈದಿದಲ್ಲಿ ।೨೪। ಆ ರಣರಂಗದಲ್ಲಿ ಬಹು ಪ
ರಾಕ್ರಮಶಾಲಿಗಳಾದ ಕೆಲಶೂರರು ಶ್ರೀರಾಮನಿಗಭಿಮುಖವಾಗಿ ಬಂದು, ಶೂಲಂಗಳಿಂದಲೂ ಖಡ್ಗಂಗಳಿಂದ

ಮುಖಂಗತ್ವಾಚಿಚ್ಛಿದುಃಪರಮಾಯುಧಾನ್ ॥೨೬॥ ತಾನಿಬಾಣೈರ್ಮಹಾಬಾಹುಶ್ಶಸ್ತ್ರಾಣ್ಯಾವಾರ್ಯರಾಘವಃ । ಜಹಾ
ರಸಮರೆಪ್ರಾಣಾಂಶ್ಚಿಚ್ಛೇದಚಶಿರೋಧರಾನ್ ॥೨೭॥ ತೇಭಿನ್ನಶಿರಸಃಪೇತುಶ್ಛಿನ್ನವರ್ಮಶರಾಸನಾಃ । ಸುಪರ್ಣವಾತವಿಕ್ಷಿ
ಪ್ತಾಜಗತ್ಯಾಂಪಾದಪಾಯಥಾ ॥೨೮॥ ಅವಶಿಷ್ಟಾಶ್ಚಯೇತತ್ರವಿಷಣ್ಣಾಸ್ತೇನಿಶಾಚರಾಃ । ಖರಮೇವಾಭ್ಯಧಾವಂತಶರಣಾರ್ಥಂಶರಾರ್ದಿತಾಃ ॥೨೯॥
ತಾನ್ಸರ್ವಾನ್ಪುನರಾದಾಯಸಮಾಶ್ವಾಸ್ಯಚದೂಷಣಃ । ಅಭ್ಯಧಾವತಕಾಕುತ್ಸ್ಥಂಕ್ರುದ್ಧೋರುದ್ರಮಿವಾಂತಕಃ ।
೩೦। ನಿವೃತ್ತಾಸ್ತುಪುನಸ್ಸರ್ವೇದೂಷಣಾಶ್ರಯಸಂಶ್ರಿತಾಃ । ರಾಮಮೇವಾಭ್ಯಧಾವಂತಸಾಲತಾಲಶಿಲಾಯುಧಾಃ ॥೩೧॥
ಶೂಲಮುದ್ಗರಹಸ್ತಾಶ್ಚಚಾಪಹಸ್ತಾಮಹಾಬಲಾಃ । ಸೃಜಂತಶ್ಶರವರ್ಷಾಣಿಶಸ್ತ್ರವರ್ಷಾಣಿಸಂಯುಗೇ ॥ ದ್ರುಮ
ವರ್ಷಾಣಿಮುಂಚಂತಶ್ಶಿಲಾವರ್ಷಾಣಿರಾಕ್ಷಸಾಃ ॥೩೨॥ ತದ್ಬಭೂವಾದ್ಭುತಂಯುದ್ಧಂತುಮುಲಂರೋಮಹರ್ಷ
ಣಂ। ರಾಮಸ್ಯಾಚಮಹಾಘೋರಂಪುನಸ್ತೇಷಾಂಚರಕ್ಷಸಾಂ ॥೩೩॥ ತೇಸಮಂತಾದಭಿಕ್ರುದ್ಧಾರಾಘವಂಪುನರಭ್ಯ

ಧಾನ್-ಕೊಡ್ಲಿಗಳನ್ನೂ, ಪರಮಾಯುಧಾನ್-ಮತ್ತೂ ಉತ್ತಮಗಳಾದ ಆಯುಧಗಳನ್ನೂ, ಚಿಚ್ಛಿದುಃ-ಛೇದಿಸಿದರು ॥೨೬॥ ಮಹಾಬಾಹುಃ-ಮ
ಹಾಭುಜಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ತಾನಿಶಸ್ತ್ರಾಣಿ-ಆ ಆಯುಧಗಳನ್ನೂ, ಬಾಣೈಃ-ಬಾಣಗಳಿಂದ, ಆವಾರ್ಯ-ತಪ್ಪಿಸಿ,
ಸಮರೆ-ಕಾಳಗದಲ್ಲಿ, ಪ್ರಾಣಾನ್-ಪ್ರಾಣಗಳನ್ನೂ, ಜಹಾರ-ಅಪಹರಿಸಿದನು, ಶಿರೋಧರಾನ್-ಕಂಠಗಳನ್ನೂ, ಚಿಚ್ಛೇದ-ಕತ್ತರಿಸಿದನು ॥೨೭॥ ಭಿನ್ನಶಿರ
ಸಃ-ಕತ್ತರಿಸಲ್ಪಟ್ಟ ಮೊಂಡೆಗಳುಳ್ಳವರಾಗಿ, ಛಿನ್ನವರ್ಮಶರಾಸನಾಃ-ಕತ್ತರಿಸಲ್ಪಟ್ಟ ಕವಚಗಳೂ ಬಿಲ್ಲುಗಳೂ ಉಳ್ಳ, ತೇ-ಆ ರಕ್ಕಸರು, ಸುಪರ್ಣ
ವಾತವಿಕ್ಷಿಪ್ತಾಃ-ಗರುಡನ ವೇಗದಿಂ ಹೊಡೆಯಲ್ಪಟ್ಟ, ಪಾದಪಾಯಥಾ-ಗಿಡಗಳಂತೆ, ಜಗತ್ಯಾಂ-ನೆಲದಲ್ಲಿ, ಪೇತುಃ-ಬಿದ್ದರು ॥೨೮॥ ತತ್ರ-
ಆ ರಣರಂಗದಲ್ಲಿ, ಅವಶಿಷ್ಟಾಃ-ಮಿಕ್ಕವರು. ಯೆ-ಯಾರುಂಟೋ, ತೇನಿಶಾಚರಾಃ-ಆ ರಕ್ಕಸರು, ಶರಾರ್ದಿತಾಃ-ಬಾಣಗಳಿಂ ಹೊಡೆಯಲ್ಪಟ್ಟವರಾ
ಗಿ, ವಿಷಣ್ಣಾಶ್ಚ-ವಿಷಾದವಂ ಹೊಂದಿದವರಾಗಿ, ಖರಮೇವ-ಖರಾಸುರನನ್ನೇ, ಶರಣಾರ್ಥಂ-ರಕ್ಷಣಾರ್ಥವಾಗಿ, ಅಭ್ಯಧಾವಂತ-ಓಡಿಬಂದರು ॥೨೯॥
ದೂಷಣಃ-ದೂಷಣನು, ತಾನ್ಸರ್ವಾನ್-ಆ ಸಮಸ್ತರನ್ನೂ, ಸಮಾಶ್ವಾಸ್ಯ-ಸಮಾಧಾನಗೊಳಿಸಿ, ಪುನರಾದಾಯ ಮತ್ತು ಕರೆದುಕೊಂಡು ಕ್ರು
ದ್ಧಃ-ಕೋಪಿಷ್ಠನಾದ, ಅಂತಕಃ-ಯಮನು, ರುದ್ರಮಿವ-ಪ್ರಳಯಕಾಲರುದ್ರನಂತೆ, ಕಾಕುತ್ಸ್ಥಂ-ಶ್ರೀರಾಮನನ್ನು ಕುರಿತು, ಅಭ್ಯಧಾವತ-ಓಡಿಬಂದ
ನು ॥೩೦॥ ದೂಷಣಾಶ್ರಯಸಂಶ್ರಿತಾಃ-ದೂಷಣ-ದೂಷಣನೆಂಬ ರಕ್ಕಸನ, ಆಶ್ರಯ-ಅವಲಂಬನದಿಂದ, ಸಂಶ್ರಿತಾಃ-ಆಶ್ರಯಿಸಲ್ಪಟ್ಟ, ಸರ್ವೇ-
ಸಮಸ್ತ ರಕ್ಕಸರೂ. ಪುನಃ-ಮತ್ತು, ನಿವೃತ್ತಾಸ್ಸಂತಃ-ಹಿಂತಿರುಗಿದವರಾಗಿ, ಸಾಲತಾಲಶಿಲಾಯುಧಾಃ-ಸಾಲವೃಕ್ಷಗಳೂ ತಾಳೇವೃಕ್ಷಗಳೂ ಕ
ಲ್ಲುಗಳೇ ಆಯುಧಗಳಾಗುಳ್ಳವರಾಗಿ, ರಾಮಮೇವ-ಶ್ರೀರಾಮನನ್ನೇ ಕುರಿತೆ, ಅಭ್ಯಧಾವಂತ-ಓಡಿಬಂದರು ॥೩೧॥ ಶೂಲಮುದ್ಗರಹಸ್ತಾಶ್ಚ-ಶೂಲಾಯು
ಧಗಳೂ ಗದಾಯುಧಗಳೂ ಹಸ್ತದಲ್ಲುಳ್ಳವರಾಗಿ, ಚಾಪಹಸ್ತಾಃ-ಧನುಷ್ಪಾಣಿಗಳಾಗಿ, ಮಹಾಬಲಾಃ-ಮಹಾಬಲವಂತರಾದ ರಾಕ್ಷಸರು. ಸಂಯು
ಗೆ-ಯುದ್ಧದಲ್ಲಿ, ಶರವರ್ಷಾಣಿ-ಬಾಣವರ್ಷಗಳನ್ನೂ, ಶಸ್ತ್ರವರ್ಷಾಣಿ-ಆಯುಧಗಳ ಮಳೆಯನ್ನೂ ಸೃಜಂತಃ-ಸುರಿಸುತ್ತಿರುವವರಾಗಿ. ರಾಕ್ಷ
ಸಾಃ-ರಕ್ಕಸರು, ದ್ರುಮವರ್ಷಾಣಿ-ಗಿಡಗಳ ವೃಷ್ಟಿಗಳನ್ನೂ, ಶಿಲಾವರ್ಷಾಣಿ-ಕಲ್ಲುಗಳ ಮಳೆಗಳನ್ನೂ, ಮುಂಚಂತಃ-ಬಿಡುತ್ತಿರುವವರಾದರು ॥೩೨॥
ರಾಮಸ್ಯಾಚ-ಶ್ರೀರಾಮನಿಗೂ, ತೇಷಾಂರಕ್ಷಸಾಂಚ-ಆ ರಕ್ಕಸರಿಗೂ, ಮಹಾಘೋರಂ-ಬಹಳ ಭಯಂಕರವಾದ, ರೋಮಹರ್ಷಣಂ-ರೋಮಾಂಚ
ವನ್ನುಂಟುಮಾಡುತ್ತಿರುವ, ಅದ್ಭುತಂ-ಆಶ್ಚರ್ಯಕರವಾದ, ತದ್ಯುದ್ಧಂ-ಆ ಯುದ್ಧವು, ಪುನಃ-ಮತ್ತು, ಬಭೂವ-ಆಯಿತು ॥೩೩॥ ತೇ-ಆ ರಕ್ಕ

ಲೂ ಪರಶ್ವಧಂಗಳಿಂದಲೂ ಆ ಶ್ರೀರಾಮನಂ ಹೊಡದವರಾಗಲೂ, ಮಹಾ ಭುಜಪರಾಕ್ರಮಶಾಲಿಯಾದ
ಆ ರಘುನಂದನನು, ಆ ಆಯುಧಂಗಳನ್ನು ತನ್ನ ಬಾಣಂಗಳಿಂದ ನಿವಾರಿಸಿ, ಅವರಪ್ರಾಣಂಗಳನ್ನಪಹರಿಸಿದನು
ಮತ್ತೂ ಅವರಕಂಠಂಗಳಂ ಕತ್ತರಿಸಿದನು ॥೨೭॥ ಈ ರೀತಿಯಲ್ಲಿ ಛೇದಿಸಲ್ಪಟ್ಟ ಶಿರಸ್ಸುಗಳೂ ಕವಚಂಗಳೂ ಧ
ನುಸ್ಸುಗಳೂಉಳ್ಳವರಾಗಿ ಆ ಅಸುರರೆಲ್ಲರು, ಬಹುವೇಗವಾಗಿ ಗಮಿಸುವ ಗರುಡನ ರೆಕ್ಕೆಗಳಿಂದುಂಟಾದ ಗಾಳಿಯಿಂ
ದ ಗಿಡಗಳು ಕೆಳಗೆ ಬೀಳುವಂತೆ ಕೆಳಗೆಬಿದ್ದರು ॥೨೮॥ ಈ ಪ್ರಕಾರವಾಗಿ ಆ ರಣರಂಗದಲ್ಲಿ ಯೆಲ್ಲರು ಬಿದ್ದವರಾ
ಗಲೂ, ಅವಶಿಷ್ಟರಾದ ಕೆಲವುರಾಕ್ಷಸರು ನಿಡುಸರಳುಗಳಿಂದ ಹೊಡೆಯಲ್ಪಟ್ಟವರಾಗಿ ವಿಷಾದಪಟ್ಟೈದಿ ಖರಾಸು
ರನನ್ನು ಶರಣುಹೊಂದಿದವರಾದರು ॥೨೯॥ ಅಷ್ಟರಲ್ಲಿ ದೂಷಣನು ಅವರೆಲ್ಲರಂ ಸಮಾಧಾನಗೊಳಿಸಿ, ಕಡುಕೋಪ
ಪುಳ್ಳವನಾಗಿ, ಪುನಃ ಅವರಂ ಕರೆದುಕೊಂಡು, ಯಮನು ರುದ್ರನಂ ಕುರಿತು ಪೋಡಿಬಂದಂತೆ ಶ್ರೀರಾಮನಂ ಕು
ರಿತು ಪೋಡಿಬಂದವನಾಗಲೂ, ಆ ರಾಕ್ಷಸರು ದೂಷಣನನ್ನಾಶ್ರಯಿಸಿ, ಪುನಃ ಹಿಂತಿರುಗಿ ಬಂದವರಾಗಿ, ಸಾಲವೃ
ಕ್ಷಂಗಳನ್ನೂ ತಾಳೇ ಗಿಡಗಳನ್ನೂ ಸಹ ಆಯುಧಂಗಳಾಗಿ ತೆಗದುಕೊಂಡು ಕೆಲವರು ಶ್ರೀರಾಮನಂ ಕುರಿತು, ಓಡಿ
ಬಂದರು ॥೩೧॥ ಆ ಸಮಯದಲ್ಲಿ ಬಹುಬಲವಂತರಾದ ಮತ್ತು ಕೆಲವರು ಶೂಲಾಯುಧಗಳನ್ನೂ ಮುದ್ಗರಾಯುಧಂ
ಗಳನ್ನೂ ಧನುರ್ದಂಡಂಗಳನ್ನೂಸಹ ಪಿಡಿದವರಾಗಿ, ಶಸ್ತ್ರಾಸ್ತ್ರಂಗಳ ವರುಷವನ್ನೂ ವೃಕ್ಷಂಗಳ ವರ್ಷಂಗಳನ್ನೂ

ಯಾಃ ।೩೫॥ ತೈಶ್ಚಸರ್ವಾದಿಶೋದೃಷ್ಟ್ವಾಪ್ರದಿಶಶ್ಚಸಮಾವೃತಾಃ । ರಾಕ್ಷಸೈರುದ್ಯತಪ್ರಾಸೈಶ್ಶರವರ್ಷಾಭಿವರ್ಷಿಭಿಃ॥ ಸಕೃತ್ವಾಭೈರವಂನಾದಮಸ್ತ್ರಂಪರಭಾಸ್ವರಂ । ಸಂಯೋಜಯತಗಾಂಧರ್ವಂರಾಕ್ಷಸೇಷುಮಹಾಬಲಃ ।೩೬। ತತಶ್ಶರಸಹಸ್ರಾಣಿನಿರ್ಯಯುಶ್ಚಾಪಮಂಡಲಾತ್ । ಸರ್ವಾದಶದಿಶೋಬಾಣೈರವಾರ್ಯಂತಸಮಾಗತೈಃ ।೩೭। ನಾದದಾನಂ ಶರಾನ್ಘೋರಾನ್ನಮುಂಚಂತಂಶಿಲೀಮುಖಾನ್ । ವಿಕರ್ಷಮಾಣಂಪಶ್ಯಂತಿರಾಕ್ಷಸಾಸ್ತೇಶರಾರ್ದಿತಾಃ ।೩೮। ಶರಾಂಧಕಾರಮಾಕಾಶಮಾವೃಣೋತ್ಸದಿವಾಕರಂ । ಬಭೂವಾವಸ್ಥಿತೋರಾಮಃಪ್ರವಮನ್ನಿವತಾನ್ಶರಾನ್ ।೩೯। ಯುಗಪತ್ಪತಮಾನೈಶ್ಚಯುಗಪಚ್ಚಹತೈರ್ಭೃಶಂ । ಯುಗಪತ್ಪತಿತೈಶ್ಚೈವವಿಕೀರ್ಣಾವಸುಧಾಭವತ್ ।೪೦। ನಿಹತಾಃಪತಿತಾಃಕ್ಷೀಣಾಶ್ಛಿನ್ನಾಭಿನ್ನಾವಿದಾರಿತಾಃ । ತತ್ರತತ್ರಸ್ಮದೃಶ್ಯಂತೇರಾಕ್ಷಸಾಸ್ತೇಸಹಸ್ರಶಃ ।೪೧।ಸೋಷ್ಣೀಷೈರುತ್ತಮಾಂಗೈ

---

ಸರು. ಅಭಿಕ್ರುದ್ಧಾಃ-ಕೋಪಗೊಂಡವರಾಗಿ, ಸಮಂತಾತ್-ಎಲ್ಲಾ ಕಡೆಯಲ್ಲಿಯೂ, ರಾಘವಂ-ಶ್ರೀರಾಮನಂ ಕುರಿತು, ಪುನಃ-ಮತ್ತು, ಅಭ್ಯೇಯುಃ-ಬಂದರು ॥೩೫॥ ಉದ್ಯತಪ್ರಾಸೈಃ-ಎತ್ತಿಕೊಳ್ಳಲ್ಪಟ್ಟ ಪ್ರಾಸಾಯುಧಗಳುಳ್ಳ. ಶರವರ್ಷಾಭಿವರ್ಷಿಭಿಃ-ಬಾಣವೃಷ್ಟಿಯನ್ನು ಸುರಿಸುತ್ತಿರುವ, ತೈಃರಾಕ್ಷಸೈಃ-ಆ ರಕ್ಕಸರಿಂದ, ಸಮಾವೃತಾಃ-ಸುತ್ತಿಕೊಳ್ಳಲ್ಪಟ್ಟ. ಸರ್ವಾಃ-ಸಮಸ್ತಗಳಾದ, ದಿಶಃ-ದಿಕ್ಕುಗಳನ್ನು. ಪ್ರದಿಶಶ್ಚ-ಮೂಲೆಗಳನ್ನು. ದೃಷ್ಟ್ವಾ-ಕಂಡು, ಮಹಾಬಲಃ-ಮಹಾಸಾಮರ್ಥ್ಯವಂತನಾದ. ಸಃ-ಆ ಶ್ರೀರಾಮನು, ಭೈರವಂ-ಭಯಂಕರವಾದ, ನಾದಂ-ಕೋಲಾಹಲಧ್ವನಿಯನ್ನು. ಕೃತ್ವಾ-ಮಾಡಿ, ರಾಕ್ಷಸೇಷು-ರಕ್ಕಸರಲ್ಲಿ, ಗಾಂಧರ್ವಂ-ಗಂಧರ್ವದೇವತಾಕವಾದ, ಪರಮಭಾಸ್ವರಂ-ಬಹಳ ಹೊಳೆಯುತ್ತಿರುವ, ಅಸ್ತ್ರಂ-ಅಸ್ತ್ರವನ್ನು, ಸಂಯೋಜಯತ-ಪ್ರಯೋಗಮಾಡಿದನು ॥೩೬॥ ತತಃ-ಬಳಿಕ, ಶರಸಹಸ್ರಾಣಿ-ಅನೇಕ ಸಹಸ್ರ ಬಾಣಗಳು ಚಾಪಮಂಡಲಾತ್-ಬಿಲ್ಲಿನ ಚಕ್ರದಿಂದ. ನಿರ್ಯಯುಃ-ಹೊರಟುಬಂದವು, ಸಮಾಗತೈಃ-ಬಂದ. ಬಾಣೈಃ-ಬಾಣಗಳಿಂದ, ಸರ್ವಾಃ-ಸಮಸ್ತಗಳಾದ, ದಶದಿಶಃ-ಹತ್ತು ದಿಕ್ಕುಗಳು. ಅವಾರ್ಯಂತ-ನಿವಾರಿಸಲ್ಪಟ್ಟವು ॥೩೭॥ ತೇರಾಕ್ಷಸಾಃ-ಆ ರಕ್ಕಸರು, ಶರಾರ್ದಿತಾಃ-ಬಾಣಗಳಿಂ ಹೊಡೆಯಲ್ಪಟ್ಟವರಾಗಿ. ಘೋರಾನ್-ಭಯಂಕರಗಳಾದ, ಶರಾನ್-ಬಾಣಗಳನ್ನು ಆದದಾನಂ-ತೆಗೆಯುತ್ತಿರುವನನ್ನು, ನಪಶ್ಯಂತಿ-ನೋಡದೇಹೋದರು. ಶಿಲೀಮುಖಾನ್-ಬಾಣಗಳನ್ನು, ಮುಂಚಂತಂ-ಬಿಡುತ್ತಿರುವರಾಮನನ್ನು, ನಪಶ್ಯಂತಿ-ನೋಡಲಿಲ್ಲ, ವಿಕರ್ಷಮಾಣಂ-ಎಳೆಯುತ್ತಿರುವನನ್ನು, ನಪಶ್ಯಂತಿ-ನೋಡಲಿಲ್ಲ ॥೩೮॥ ರಾಮಃ-ಶ್ರೀರಾಮನು, ತಾನ್ಶರಾನ್-ಆ ಬಾಣಗಳನ್ನು, ಪ್ರವಮನ್ನಿವ-ಉದ್ಗಾರವನ್ನು ಮಾಡುತಿರ್ಪನೆಂಬಂತೆ. ಅವಸ್ಥಿತಃ-ನಿಂತವನಾಗಿ, ಸದಿವಾಕರಂ-ಸೂರ್ಯನೊಡಗೂಡಿದ, ಆಕಾಶಂ-ಅಂತರಿಕ್ಷವನ್ನು, ಶರಾಂಧಕಾರಂ-ಬಾಣಗಳೆಂಬ ಅಂಧಕಾರವುಳ್ಳದ್ದನ್ನಾಗಿ, ಆವೃಣೋತ್-ಆಚ್ಛಾದನಮಾಡಿದನು ॥೩೯॥ ಯುಗಪತ್-ಏಕಕಾಲದಲ್ಲಿ. ಪತಮಾನೈಶ್ಚ-ಬೀಳುತ್ತಿರುವವರಿಂದಲೂ, ಯುಗಪತ್-ಏಕಕಾಲದಲ್ಲಿ, ಭೃಶಂ-ಬಹಳವಾಗಿ, ಹತೈಶ್ಚ-ಹೊಡೆಯಲ್ಪಟ್ಟವರಿಂದಲೂ, ಯುಗಪತ್-ಏಕಕಾಲದಲ್ಲಿ, ಪತಿತೈಶ್ಚೈವ-ಬಿದ್ದಂಥಾವರಿಂದಲೂ, ವಸುಧಾ-ನೆಲವು, ವಿಕೀರ್ಣಾ-ತುಂಬಿದ್ದು, ಅಭವತ್-ಆಯಿತು॥೪೦॥ ನಿಹತಾಃ-ಹೊಡೆಯಲ್ಪಟ್ಟ, ಪತಿತಾಃ-ಕೆಡಹಲ್ಪಟ್ಟ, ಕ್ಷೀಣಾಃ-ಕಂಠಗತಪ್ರಾಣರಾದ, ಛಿನ್ನಾಃ-ಛೇದಿಸಲ್ಪಟ್ಟ, ಭಿನ್ನಾಃ-ಮುರಿಯಲ್ಪಟ್ಟ ವಿದಾರಿತಾಃ-ಸೀಳಲ್ಪಟ್ಟ, ಸಹಸ್ರಶಃ-ಸಾವಿರಾರು ಸಂಖ್ಯೆಯುಳ್ಳ, ತೇರಾಕ್ಷಸಾಃ-ಆ ರಕ್ಕಸರು. ತತ್ರತತ್ರ-ಆಯಾಯ ಪ್ರದೇಶಗಳಲ್ಲಿ. ದೃಶ್ಯಂ

---

ಸಹ ಸುರಿಸುತ್ತಿದ್ದರು ।೩೫। ಈರೀತಿಯಲ್ಲಿ ಶ್ರೀರಾಮನಿಗೂ ಆ ರಾಕ್ಷಸರಿಗೂ ಸಹ ಬಹುಭಯಂಕರವಾದ ಮತ್ತೂ ರೋಮಾಂಚಕರವಾದ,ಯುದ್ಧವು ನಡೆಯುತ್ತಿರುವಾಗ ಆ ಅಸುರರು ಶ್ರೀರಾಮನ ಸುತ್ತುಮುತ್ತಲೂ ಬಂದು ತಿಂಬಿಕೊಂಡವರಾಗಿ,ಪ್ರಾಸಾಯುಧಗಳಿಂದಲೂ, ಬಾಣವರ್ಷಂಗಳಿಂದಲೂ, ಯೆಲ್ಲಾದಿಕ್ಕುಗಳೂತುಂಬಿದಂಥಾವಹಾಗಲೂ, ದಶರಥನಂದನನಾದ ಶ್ರೀರಾಮನದಂಕಂಡು ಭಯಂಕರವಾಗಿ ಕೋಲಾಹಲಧ್ವನಿಯಂಗೈದು, ಆ ಅಸುರರಲ್ಲಿ ಗಾಂಧರ್ವಾಮಸ್ತ್ರ ಪ್ರಯೋಗವಂ ಗೈದಬಳಿಕ ಆ ಕೋದಂಡದಿಂದ ಅನೇಕ ಸಹಸ್ರವಾದ ಬಾಣಗಳುಹೊರಟವು, ರಾಮನಾಮಾಂಕಿತವಾದ ಆ ಬಾಣಗಳಿಂದ ಯೆಲ್ಲಾ ದಿಕ್ಕುಗಳು ನಿವಾರಿಸಲ್ಪಟ್ಟವು।೩೭॥ ಈ ರೀತಿಯಲ್ಲಿ ಪ್ರಯೋಗಿಸಲ್ಪಡಲೂ, ಆ ರಾಕ್ಷಸರು ಬಾಣಪೀಡಿತರಾಗಿ, ಭಯಂಕರವಾದ ಬಾಣಸಂಧಾನವಂಗೈಯ್ಯುತ್ತಲೂ ಸೆಳೆಯುತ್ತಲೂನಿಡುಗೋಲುಗಳಂ ಬಿಡುತ್ತಲೂ ಇರುವ ಶ್ರೀರಾಮನಂ ನೋಡಲಿಲ್ಲ ।೩೮।ಯಾಕಂದರೆ,—ಆ ಸಮಯದಲ್ಲಿ ಶ್ರೀರಾಮನು ಆ ಬಾಣಗಳನ್ನು ವಮನ ಮಾಡುವನೋಯೇನೋ ಯೆಂಬಂತೆ ನಿಂತವನಾಗಿ, ಸೂರ್ಯಸಹಿತವಾದ ಗಗನವನ್ನು ಬಾಣಗಳೆಂಬ ಅಂಧಕಾರವುಳ್ಳದ್ದನ್ನಾಗಿ ಆಚ್ಛಾದನವಂಗೈದನು ।೩೯। ಆಗ ಭೂಮಿಯು ಏಕಕಾಲದಲ್ಲಿಯೆ ಬೀಳುತ್ತಲೂ ಹೊಡೆಯಲ್ಪಡುತ್ತಲೂಸಹ ಕೆಳಗೆ ಬಿದ್ದಿರುವ ರಾಕ್ಷಸರಿಂದ ವ್ಯಾಪ್ತವಾದದ್ದಾಯಿತು ।೪೦। ಮತ್ತೂ ಆ ರಣರಂಗದಲ್ಲಿ ಯೆತ್ತಕಡೆಯಲ್ಲಿ ನೋಡಿದರೂ ಹೊಡೆಯಲ್ಪಟ್ಟು, ಕೆಳಗೆಬಿದ್ದು ಕಂಠಗತವಾದ ಪ್ರಾಣಗಳುಳ್ಳವರಾಗಿಯೂ, ಛೇದಿಸಲ್ಪಟ್ಟವರಾಗಿಯೂ, ಮುರಿಯಲ್ಪಟ್ಟವರಾಗಿಯೂ, ಸೀಳಲ್ಪಟ್ಟವರಾಗಿಯೂ ಇರುವ ಅನೇಕ ರಾಕ್ಷಸರು ಕಾಣಲ್ಪಡುತ್ತಿದ್ದರು ।೪೧। ಈ ರೀತಿಯಾಗಿ ಶ್ರೀರಾಮನ

ಕ್ಷೈಸ್ಸಾಂಗದೈರ್ಬಾಹುಭಿಸ್ತಥಾ|ಊರುಭಿರ್ಜಾನುಭಿಶ್ಛಿನ್ನೈರ್ನಾನಾರೂಪವಿಭೂಷಣೈಃ । ಹಯೈಶ್ಚದ್ವಿಪಮುಖ್ಯೈಶ್ಚ
ರಥೈರ್ಭಿನ್ನೈರನೇಕಶಃ|ಚಾಮರೈರ್ವ್ಯಜನೈಶ್ಛತ್ರೈರ್ಧ್ವಜೈರ್ನಾನಾವಿಧೈರಪಿ। ರಾಮಸ್ಯಬಾಣಾಭಿಹತೈರ್ವಿಚಿತ್ರೈಶ್ಶೂ
ಲಪಟ್ಟಸೈಃ । ಖಡ್ಗೈಃಖಂಡೀಕೃತೈಃಪ್ರಾಸೈರ್ವಿಕೀರ್ಣೈಶ್ಚಪರಶ್ವಧೈಃ । ಚೂರ್ಣಿತಾಭಿಶ್ಶಿಲಾಭಿಶ್ಚಶರೈಶ್ಚಿತ್ರೈರನೇಕಶಃ ।
ವಿಚ್ಛಿನ್ನೈಸ್ಸಮರೇಭೂಮಿಃವಿಕೀರ್ಣಾಭೂದ್ಭಯಂಕರಾ ||೪೪|| —*** ಪಂಚವಿಂಶಸ್ಸರ್ಗಃ. ****—

ದೂಷಣಸ್ತುಸ್ವಕಂಸೈನ್ಯಂಹನ್ಯಮಾನಂನಿರೀಕ್ಷ್ಯಸಃ| ಸಂದಿದೇಶಮಹಾಬಾಹುರ್ಭೀಮವೇಗಾನ್ನಿಶಾಚರಾನ್ । ರಾಕ್ಷ
ಸಾನ್ ಪಂಚಸಾಹಸ್ರಾನ್ಸಮರೇಷ್ವನಿವರ್ತಿನಃ ||೧||ತೇಶೂಲೈಃಪಟ್ಟಸೈಃಖಡ್ಗೈಶ್ಶಿಲಾವರ್ಷೈರ್ದ್ರುಮೈರಪಿ । ಶರವ
ರ್ಷೈರವಿಚ್ಛಿನ್ನಂವವೃಷುಸ್ತಂಸಮಂತತಃ||೨|| ಸದ್ರುಮಾಣಾಂಶಿಲಾನಾಂಚವರ್ಷಂಪ್ರಾಣಹರಂಮಹತ್ । ಪ್ರತಿ

ಶೇಸ್ತ-ನೋಡಲ್ಪಟ್ಟರಷ್ಟೆ ||೪೧|| ಸೋಷ್ಣೀಷೈಃ-ರುಮಾಲುಗಳಿಂ ಕೂಡಿಕೊಂಡಿರುವ; ಉತ್ತಮಾಂಗೈಃ-ತಲೆಗಳಿಂದ, ತಥಾ-ಹಾಗೆಯೇ,
ಸಾಂಗದೈಃ-ತೋಳುಬಂದಿಗಳಿಂದೊಡಗೂಡಿದ ಬಾಹುಭಿಃ-ಭುಜಗಳಿಂದಲೂ. ಛಿನ್ನೈಃ-ಕತ್ತರಿಸಲ್ಪಟ್ಟ ಊರುಭಿಃ-ತೊಡೆಗಳಿಂದಲೂ, ಜಾನುಭಿಃ-
ಮೊಣಕಾಲುಗಳಿಂದಲೂ, ನಾನಾರೂಪವಿಭೂಷಣೈಃ-ಅನೇಕ ಬಗೆಗಳಾದ ಆಕಾರವೂ ಒಡವೆಗಳೂ ಉಳ್ಳ, ಹಯೈಶ್ಚ-ಕುದುರೆಗಳಿಂದಲೂ, ಅನೇಕಶಃ-
ಬಹಳಪ್ರಕಾರವಾಗಿ, ಭಿನ್ನೈಃ-ಛೇದಿಸಲ್ಪಟ್ಟ; ದ್ವಿಪಮುಖ್ಯೈಶ್ಚ-ಆನೆಗಳಶ್ರೇಷ್ಠಗಳಿಂದಲೂ, ರಥೈಶ್ಚ-ತೇರುಗಳಿಂದಲೂ, ರಾಮಸ್ಯ-ಶ್ರೀರಾಮನ,
ಬಾಣಾಭಿಹತೈಃ-ಬಾಣಗಳಿಂ ಹೊಡೆಯಲ್ಪಟ್ಟ, ಚಾಮರೈಃ-ಚಾಮರಗಳಿಂದಲೂ, ಛತ್ರೈಃ-ಛತ್ರಿಗಳಿಂದಲೂ, ನಾನಾವಿಧೈಃ-ನಾನಾಬಗೆಗಳಾದ,
ಧ್ವಜೈಶ್ಚ-ನಿಶಾಣಿಗಳಿಂದಲೂ, ವಿಚಿತ್ರೈಃ-ನಾನಾಬಣ್ಣಗಳಾದ, ಶೂಲಪಟ್ಟಸೈಃ-ಶೂಲಾಯುಧಗಳಿಂದಲೂ ದೊಡ್ಡಕತ್ತಿಗಳಿಂದಲೂ, ಖಂಡೀಕೃ
ತೈಃ-ತುಂಡುತುಂಡು ಮಾಡಲ್ಪಟ್ಟ, ಖಡ್ಗೈಃ-ಕತ್ತಿಗಳಿಂದಲೂ, ಪ್ರಾಸೈಃ-ತೋಮರಾಯುಧಗಳಿಂದಲೂ, ವಿಕೀರ್ಣೈಃ-ಚೆಲ್ಲಾಡಲ್ಪಟ್ಟ, ಪರಶ್ವಧೈಃ-
ಕೊಡ್ಲಿಗಳಿಂದಲೂ. ಚೂರ್ಣಿತಾಭಿಃ-ಪುಡಿಯಾಗಿ ಮಾಡಲ್ಪಟ್ಟ, ಶಿಲಾಭಿಃ-ಕಲ್ಲುಗಳಿಂದಲೂ. ಚಿತ್ರೈಃ-ನಾನಾಬಣ್ಣಗಳಾದ, ಅನೇಕಶಃ-ಅನೇಕಗಳಾದ,
ಸಮರೇ-ಕಾಳಗದಲ್ಲಿ, ವಿಚ್ಛಿನ್ನೈಃ-ಕತ್ತರಿಸಲ್ಪಟ್ಟ, ಶರೈಃ-ಬಾಣಗಳಿಂದ. ವಿಕೀರ್ಣಾ-ತುಂಬಿರುವ, ಭೂಮಿಃ-ನೆಲವು, ಭಯಂಕರಾ-ಭೀತಿಕರವಾದದ್ದು
ಅಭವತ್-ಆಯಿತು||೪೪|| —**ಇತಿಶ್ರೀಮದಾರಣ್ಯಕಾಂಡೇ-ಪಂಚವಿಂಶಸ್ಸರ್ಗಃ**—

ಮಹಾಬಾಹುಃ-ಮಹಾ ಭುಜಶಾಲಿಯಾದ, ಸದೂಷಣಃ-ಆ ದೂಷಣನೆಂಬವನು, ಸ್ವಕಂ-ಸ್ವಕೀಯವಾದ, ಸೈನ್ಯಂ-ದಂಡಿನನ್ನು,
ಹನ್ಯಮಾನಂ-ಹೊಡೆಯಲ್ಪಡುತ್ತಿರುವದನ್ನಾಗಿ, ನಿರೀಕ್ಷ್ಯ-ಕಂಡು, ಭೀಮವೇಗಾನ್-ಭಯಂಕರವಾದ ಜವವುಳ್ಳ, ನಿಶಾಚರಾನ್-ರಾತ್ರಿಸಂಚಾರದಲ್ಲಿ ಸಮ
ರ್ಥರಾದ, ಪಂಚಸಹಸ್ರಾನ್-ಐದುಸಾವಿರಸಂಖ್ಯೆಯುಳ್ಳ, ಸಮರೇಷು-ಕಾಳಗದಲ್ಲಿ, ಅನಿವರ್ತಿನಃ-ಹಿಂತಿರುಗದಿರುವ, ರಾಕ್ಷಸಾನ್-ರಕ್ಕಸರನ್ನು, ಸಂದಿ
ದೇಶ-ಆಜ್ಞಾಪಿಸಿದನು ||೧|| ತೇ-ಆ ರಕ್ಕಸರು, ಸಮಂತತಃ-ಎಲ್ಲಾಕಡೆಯಲ್ಲಿ. ತಂ-ಆ ಶ್ರೀರಾಮನಂಕುರಿತು, ಶೂಲೈಃ-ಭಲ್ಲಾಯುಧಗಳಿಂದ, ಪ
ಟ್ಟಸೈಃ-ಕಬ್ಬಿಣದ ದೊಣ್ಣೆಗಳಿಂದ; ಖಡ್ಗೈಃ-ಕತ್ತಿಗಳಿಂದಲೂ, ಶಿಲಾವರ್ಷೈಃ-ಪಾಷಾಣಗಳ ಮಳೆಯಿಂದಲೂ, ದ್ರುಮೈರಪಿ-ಗಿಡಗಳಿಂದಲೂ ಶರವ
ರ್ಷೈಃ-ಬಾಣವೃಷ್ಟಿಗಳಿಂದಲೂ, ಅವಿಚ್ಛಿನ್ನಂ-ಸಂತತವಾಗಿ, ವವೃಷುಃ-ಸುರಿಸಿದರು ||೨|| ಧರ್ಮಾತ್ಮಾ-ಧರ್ಮಿಷ್ಠನಾದ, ಸರಾಘವಃ-
ಆ ಶ್ರೀರಾಮನು, ದ್ರುಮಾಣಾಂ-ಗಿಡಗಳ, ಶಿಲಾನಾಂಚ-ಪಾಷಾಣಗಳ, ಮಹತ್-ಬಹಳವಾಗಿ, ಪ್ರಾಣಹರಂ-ಪ್ರಾಣಾಪಹಾರಕವಾದ, ವರ್ಷಂ-

ಬಾಣಗಳಿಂದ ಛೇದಿಸಲ್ಪಟ್ಟ ರುಮಾಲುಗಳಿಂದ ಯುಕ್ತವಾದ ಶಿರಸ್ಸುಗಳಿಂದಲೂ, ತೋಳುಬಂದಿಗಳಿಂದೊಡಗೂ
ಡಿದ ಬಾಹುಗಳಿಂದಲೂ, ಕತ್ತರಿಸಲ್ಪಟ್ಟ ತೊಡೆಗಳಿಂದಲೂ, ಮೊಣಕಾಲುಗಳಿಂದಲೂ, ಅಲಂಕಾರಯುಕ್ತವಾದ
ಕುದುರೆಗಳಿಂದಲೂ, ಛೇದಿಸಲ್ಪಟ್ಟ ಆನೆಗಳಿಂದಲೂ, ರಥಂಗಳಿಂದಲೂ, ಛತ್ರ ಚಾಮರ ವ್ಯಜನಂಗಳಿಂದಲೂ,
ಧ್ವಜಂಗಳಿಂದಲೂ, ನಾನಾವಿಧದಿಂದ ತುಂಡುತುಂಡುಗಳಾಗಿ ಮಾಡಲ್ಪಟ್ಟ ಖಡ್ಗಗಳಿಂದಲೂ, ತೋಮರಾಯು
ಧಂಗಳಿಂದಲೂ, ಪುಡಿಪುಡಿಯಾಗಿ ಮಾಡಲ್ಪಟ್ಟ ಕಲ್ಲುಗಳಿಂದಲೂ, ಕತ್ತರಿಸಲ್ಪಟ್ಟ ಬಾಣಗಳಿಂದಲೂ ತುಂಬಿದ್ದಾಗಿ
ಭೂಮಿಯು ಬಹು ಭಯಂಕರವಾಗಿತ್ತು ।೪೪। —**ಆರಣ್ಯಕಾಂಡದಲ್ಲಿನ ೨೫ನೆಯ ಸರ್ಗಂ ಮುಗಿದುದು**—

ಅನಂತರದಲ್ಲಿ ಮಹಾಭುಜಪರಾಕ್ರಮಶಾಲಿಯಾದ ದೂಷಣನು, ತನ್ನ ಸೇನೆಯು ನಾಶವನ್ನೈದುವದಂ
ಕಂಡು, ಬಹು ವೇಗಶಾಲಿಗಳಾದ ಮತ್ತು ರಾತ್ರಿ ಸಂಚಾರ ಶೀಲರಾದ ಮಹಾ ಸಮರ್ಥರಾದ ಕಾಳಗದಲ್ಲಿ ಹಿಂ
ಜರಿಯದ ಐದುಸಾವಿರಮಂದಿ ರಾಕ್ಷಸರಂಕುರಿತು ಮೇಲ್ವಾಯ್ದು ಬನ್ನಿರೆಂದು ನುಡಿದವನಾಗಲೂ, ಆ ರಾಕ್ಷಸ
ರು ಶ್ರೀರಾಮನಂ ಸುತ್ತುಬಾರಿಕೊಂಡು, ಶೂಲ, ಪಟ್ಟಸ, ಖಡ್ಗ, ಬಾಣ, ವೃಕ್ಷ, ಮೊದಲಾದವುಗಳಿಂದ ಅವಿಚ್ಛಿ
ನ್ನವಾಗಿ ವರುಷವಂ ಸುರಿಸಿದರು, ।೨। ಅನಂತರದಲ್ಲಿ ಶ್ರೀರಾಮನು ಪ್ರಾಣಂಗಳನ್ನಪಹರಿಸುವ ಆ ಬಾಣಾದಿಗಳ
ವರ್ಷವಂ ತೀಕ್ಷ್ಣವಾದ ತನ್ನ ಬಾಣಂಗಳಿಂದ ತಡೆಮಾಡಿ, ಕಣ್ಣುಗಳಂ ಮುಚ್ಚಿಕೊಂಡು, ವೃಷಭದಂತೆ ಆ ವರ್ಷವಂ

ಜಗ್ರಾಹಧನ್ವಾ ತತ್ಕ್ಕರಾಘವಸ್ತೀಕ್ಷ್ಣಸಾಯಕೈಃ॥೩॥ ಪ್ರತಿಗೃಹ್ಯಚತದ್ವರ್ಷಂನಿಮೀಲಿತಇವರ್ಷಭಃ। ರಾಮಃ ಕ್ರೋಧಂಪರಂಲೇಭೇವಧಾರ್ಥಂಸರ್ವರಕ್ಷಸಾಂ ॥೪॥ ತತಃ ಕ್ರೋಧಸಮಾವಿಷ್ಟಃಪ್ರದೀಪ್ತಇವತೇಜಸಾಶರೈರವಾಕಿರತ್ಸೈನ್ಯಂಸ್ಸರ್ವತಸ್ಸಹದೂಷಣಂ। ತತಸ್ಸೇನಾಪತಿಃ ಕ್ರುದ್ಧೋದೂಷಣಶ್ಶತ್ರುದೂಷಣಃ॥ ಶರೈರಶನಿಕಲ್ಪೈಸ್ತಂರಾಘವಂಸಮವಾಕಿರತ್॥ತತೋ ರಾಮಸ್ಸುಸಂಕ್ರುದ್ಧಃ ಕ್ಷುರೇಣಾಸ್ಯಮಹದ್ಧನುಃ।ಚಿಚ್ಛೇದಸಮರೇವೀರಶ್ಚತುರ್ಭಿಶ್ಚತುರೋಹಯಾನ್।ಹತ್ವಾಚಾಶ್ವಾನ್ ಶರೈಸ್ತೀಕ್ಷ್ಣೈರರ್ಧಚಂದ್ರೇಣಸಾರಥೇಃ।ಶಿರೋಜಹಾರತದ್ರಕ್ಷಸ್ತ್ರಿಭಿರ್ವಿವ್ಯಾಧವಕ್ಷಸಿ।ಸಂಛಿನ್ನಧನ್ವಾವಿರಥೋಹತಾಶ್ವೋಹತಸಾರಥಿಃ।ಜಗ್ರಾಹಗಿರಿಶೃಂಗಾಭಂಪರಿಘಂರೋಮಹರ್ಷಣಂ।ವೇಷ್ಟಿತಂಕಾಂಚನೈಃಪಟ್ಟೈರ್ದೇವಸೈನ್ಯಪ್ರಮರ್ದನಂ। ಆಯಸೈಶ್ಶಂಕುಭಿಸ್ತೀಕ್ಷ್ಣೈಃಕೀರ್ಣಂಪರವಸೋಕ್ಷಿತಂ।ವಜ್ರಾಶನಿಸಮಸ್ಪರ್ಶಂಪರಗೋಪುರದಾರಣಂ। ತಂಮಹೋರಗಸಂಕಾಶಂಪ್ರಗೃಹ್ಯಪರಿಘಂರಣೇ। ದೂಷಣೋಭ್ಯದ್ರವದ್ರಾಮಂಕ್ರೂರಕರ್ಮಾನಿಶಾಚರಃ ॥೧೦॥ ತಸ್ಯ

---

ವೃಷ್ಟಿಯನ್ನು. ತೀಕ್ಷ್ಣೈಸ್ಸಾಯಕೈಃ-ನಿಶಿತವಾದ ಬಾಣಗಳಿಂದಲೇ, ಪ್ರತಿಜಗ್ರಾಹ-ತಡೆಮಾಡಿದನ || || ರಾಮಃ-ಶ್ರೀರಾಮನು, ನಿಮೀಲಿತಃ-ಕಣ್ಣು ಮುಚ್ಚಿಕೊಂಡಿರುವ, ಋಷಭಇವ-ಎತ್ತಿನಂತೆ. ತದ್ವರ್ಷಂ-ಆ ಆಯುಧವೃಷ್ಟಿಯನ್ನು. ಪ್ರತಿಗೃಹ್ಯ-ನಿಗ್ರಹಿಸಿ, ಸರ್ವರಕ್ಷಸಾಂ-ಸಮಸ್ತರಕ್ಕಸರ, ವಧಾರ್ಥಂ-ಸಂಹಾರಾರ್ಥವಾಗಿ, ಪರಂ-ಹೆಚ್ಚಾದ, ಕ್ರೋಧಂ-ಕೋಪವನ್ನು, ಲೇಭೇ-ಹೊಂದಿದನು ||೪|| ತತಃ-ಬಳಿಕ, ಕ್ರೋಧಸಮಾವಿಷ್ಟಃ-ಕೋಪಾಕ್ರಾಂತನಾಗಿ, ತೇಜಸಾ-ಪರಾಕ್ರಮದಿಂದ, ಪ್ರದೀಪ್ತ ಇವ-ಪ್ರಜ್ವಲಿಸುತ್ತಿರುವವನಂತೆ, ಸಹದೂಷಣಂ-ದೂಷಣನೊಡಗೂಡಿದ. ಸೈನ್ಯಂ ದಂಡಿನನ್ನು, ಸರ್ವತಃ-ಸರ್ವಪ್ರದೇಶಗಳಲ್ಲಿ, ಶರೈಃ- ಬಾಣಗಳಿಂದ; ಅವಾಕಿರತ್-ಎರಚಿದನು ||೫|| ತತಃ-ಬಳಿಕ, ಸೇನಾಪತಿಃ-ಸೈನ್ಯಾಧಿಪತಿಯಾದ, ಶತ್ರುದೂಷಣಃ-ಶತ್ರುಸಂಹಾರಕನಾದ ದೂಷಣನು, ಕ್ರುದ್ಧಃ-ಕೋಪಿಷ್ಠನಾಗಿ, ಅಶನಿಕಲ್ಪೈಃ-ವಜ್ರಾಯುಧಗಳಿಗೆ ಸಮಾನವಾದ, ಶರೈಃ-ಬಾಣಗಳಿಂದ, ತಂರಾಘವಂ-ಆ ಶ್ರೀರಾಮನನ್ನು. ಸಮವಾಕಿರತ್-ಎರಚಿದನು ||೬|| ತತಃ-ಬಳಿಕ, ವೀರಃ-ಶೂರನಾದ, ರಾಮಃ-ಶ್ರೀರಾಮನು, ಸುಸಂಕ್ರುದ್ಧಃ-ಬಹಳಕೋಪಗೊಂಡವನಾಗಿ, ಕ್ಷುರೇಣ-ಚಿಕ್ಕಕತ್ತಿಯಿಂದ, ಅಸ್ಯ-ಈ ದೂಷಣನ, ಮಹತ್-ದೊಡ್ಡದಾದ, ಧನುಃ-ಬಿಲ್ಲಿನನ್ನು ಸಮರೇ-ಕಾಳಗದಲ್ಲಿ, ಚಿಚ್ಛೇದ-ಕತ್ತರಿಸಿದನು || ... ... ... ... ... ... ... ... ... ... ||೭|| ಚತುರ್ಭಿಃ-ನಾಲ್ಕುಬಾಣಗಳಿಂದ, ಚತುರೋಹಯಾನ್-ನಾಲ್ಕು ಕುದುರೆಗಳನ್ನು, ಚಿಚ್ಛೇದ-ಕತ್ತರಿಸಿದನು, ತೀಕ್ಷ್ಣೈಃ-ಹದವುಳ್ಳ. ಶರೈಃ-ಬಾಣಗಳಿಂದ. ಅಶ್ವಾನ್-ಕುದುರೆಗಳನ್ನು. ಹತ್ವಾ-ಹೊಡೆದು. ಅರ್ಧಚಂದ್ರೇಣ-ಅರ್ಧಚಂದ್ರಬಾಣದಿಂದ, ಸಾರಥೇಃ-ಸಾರಥಿಯ, ಶಿರಃ-ತಲೆಯನ್ನು, ಜಹಾರ-ಅಪಹರಿಸಿದನು, ತ್ರಿಭಿಃ-ಮೂರುಬಾಣಗಳಿಂದ, ತದ್ರಕ್ಷಃ-ಆ ದೂಷಣನನ್ನು, ವಕ್ಷಸಿ-ವಕ್ಷಸ್ಥಳದಲ್ಲಿ, ವಿವ್ಯಾಧ-ಹೊಡೆದನು ||೮|| ||ಸಂಛಿನ್ನಧನ್ವಾ-ಕತ್ತರಿಸಲ್ಪಟ್ಟ ಬಿಲ್ಲುಳ್ಳ, ವಿರಥಃ-ರಥವಿಲ್ಲದವನಾಗಿ, ಹತಾಶ್ವಃ-ಹೊಡೆಯಲ್ಪಟ್ಟ ಕುದುರೆಉಳ್ಳವನಾಗಿ, ಹತಸಾರಥಿಃ-ಹತವಾದ ಸಾರಥಿಯುಳ್ಳವನಾಗಿ, ಗಿರಿಶೃಂಗಾಭಂ-ಬೆಟ್ಟದ ಶಿಖರದಕಾಂತಿಯಂತೆ ಹೊಳೆಯುತ್ತಿರುವ, ರೋಮಹರ್ಷಣಂ-ರೋಮಾಂಚವನ್ನುಂಟುಮಾಡುತ್ತಿರುವ ದೇವಸೈನ್ಯಪ್ರಮರ್ದನಂ-ದೇವತೆಗಳ ಸೈನ್ಯವನ್ನು ಹೊಡೆಯುತ್ತಿರುವ, ಕಾಂಚನೈಃ-ಸುವರ್ಣವಿಕಾರವಾದ, ಪಟ್ಟೈಃ-ಕಟ್ಟುಗಳಿಂದ, ವೇಷ್ಟಿತಂ-ಸುತ್ತಲ್ಪಟ್ಟ, ಪರಿಘಂ-ಲೋಹದಂಡವನ್ನು. ಜಗ್ರಾಹ-ತೆಗೆದುಕೊಂಡನು ||೯|| ಆಯಸೈಃ-ಕಬ್ಬಿಣವಿಕಾರವಾದ, ತೀಕ್ಷ್ಣೈಃ-ಹದವುಳ್ಳ, ಶಂಕುಭಿಃ-ಗೂಟಗಳಿಂದ, ಕೀರ್ಣಂ-ವ್ಯಾಪ್ತವಾದ, ಪರವಸೋಕ್ಷಿತಂ-ಶತ್ರುಗಳ ಮೇದಸ್ಸಿನಿಂದ ನೆನಿಸಲ್ಪಟ್ಟ, ವಜ್ರಾಶನಿಸಮಸ್ಪರ್ಶಂ-ವಜ್ರಾಯುಧಕ್ಕೆ ಸಮವಾದ ಸ್ಪರ್ಶವುಳ್ಳ, ಪರಗೋಪುರದಾರಣಂ-ಶತ್ರುಗಳ ಊರುಬಾಗಿಲುಗಳನ್ನು ಮುರಿಯುತ್ತಿರುವ. ಮಹೋರಗಸಂಕಾಶಂ-ಮಹಾಸರ್ಪಕ್ಕೆ ಸಮಾನವಾದ. ತಂಪರಿಘಂ-ಆ ಲೋಹದಂಡವನ್ನು, ಪ್ರಗೃಹ್ಯ-ತೆಗದುಕೊಂಡು,ಕ್ರೂರಕರ್ಮಾ-ಉಗ್ರವ್ಯಾಪಾರವುಳ್ಳ. ನಿಶಾಚರಃ-ರಕ್ಕಸನಾದ, ದೂಷಣಃ-

---

ಸೈರಿಸಿ, ಬಹುಕೋಪವುಳ್ಳವನಾಗಿ, ದೂಷಣಸಹಿತವಾದ ಆ ಸೈನ್ಯವಂಕುರಿತು ಬಾಣವರ್ಷವಂ ಸುರಿಸಿದನು ॥೫॥ ಅನಂತರದಲ್ಲಿ ಸೈನ್ಯಾಧಿಪತಿಯಾದ ದೂಷಣನು, ಬಹು ಕೋಪೋದ್ರೇಕವುಳ್ಳವನಾಗಿ, ಸಿಡಿಲಿಗೆ ಸಮಾನವಾದ ಬಾಣಗಳನ್ನು ಶ್ರೀರಾಮನಮೇಲೆ ಪ್ರಯೋಗಿಸಿದವನಾಗಲೂ,ಆ ರಘುವೀರನಾದಶ್ರೀರಾಮನು,ಮಹಾಕೋಪವಂತನಾಗಿ ಚಿಕ್ಕ ಕತ್ತಿಯಿಂದ ಆ ದೂಷಣನ ಕೋದಂಡವಂ ಕತ್ತರಿಸಿ, ನಾಲ್ಕು ಬಾಣಂಗಳಿಂದ ಅವನರಥಾಶ್ವಗಳಂ ಹೊಡದು, ಅರ್ಧಚಂದ್ರಬಾಣದಿಂದ ಸಾರಥಿಯ ಶಿರವಂ ಛೇದಿಸಿ, ಮತ್ತೂ ಮೂರು ಬಾಣಗಳಿಂದ ಆ ದೂಷಣನ ವಕ್ಷಸ್ಥಲದಲ್ಲಿ ಹೊಡದವನಾಗಲೂ, ಆ ಅಸುರನು ಛೇದಿಸಲ್ಪಟ್ಟ ಧನುರ್ದಂಡವುಳ್ಳವನಾಗಿಯೂ, ರಥಹೀನನಾಗಿಯೂ, ಹತವಾದ ಕುದುರೆಗಳುಳ್ಳವನಾಗಿಯೂ, ಮರಣವನ್ನೈದಿದ ಸಾರಥಿಯುಳ್ಳವನಾಗಿಯೂ ಇರುವವನಾಗಿ, ಗಿರಿಶಿಖರದಂತೆ ಬಹುಭಯಂಕರವಾಗಿರುವ, ರೋಮಾಂಚಕರವಾದ ದೇವಸೈನ್ಯವಂಸಹಾ ಹೊಡೆಯುವ, ಚಿನ್ನದ ಕಟ್ಟುಗಳುಳ್ಳ ಪರಿಘಾಯುಧವಂ ತೆಗದುಕೊಂಡು, ಕಡುಕೋಪದಿಂದ ಶ್ರೀರಾಮನಂಕುರಿತು ಓಡಿಬಂದನು ।೧೦। ಅನಂತರದಲ್ಲಿ ಶ್ರೀರಾಮನು ತನ್ನಮೇಲ್ವಾಯ್ದು ಬರುತ್ತಿರುವ ಆ ದೂಷಣನ ಹಸ್ತಾಭರಣಗ

ಭಿಪತಮಾನಸ್ಯದೂಷಣಸ್ಯಸರಾಘವಃ । ದ್ವಾಭ್ಯಾಂಶರಾಭ್ಯಾಂಚಿಚ್ಛೇದಸಹಸ್ತಾಭರಣೌಭುಜೌ ॥೧೩॥ ಭ್ರಷ್ಟಸ್ತ ಸ್ಯಮಹಾಕಾಯಃಪಪಾತರಣಮೂರ್ಧನಿ । ಪರಿಘಶ್ಛಿನ್ನಹಸ್ತಸ್ಯಶಕ್ರಧ್ವಜಇವಾಗ್ರತಃ ॥೧೪॥ ಸಕರಾಭ್ಯಾಂವಿಕೀರ್ಣಾ ಭ್ಯಾಂಪಪಾತಭುವಿದೂಷಣಃ । ವಿಷಾಣಾಭ್ಯಾಂವಿಶೀರ್ಣಾಭ್ಯಾಂಮನಸ್ವೀವಮಹಾಗಜಃ ॥೧೫॥ ತಂದೃಷ್ಟ್ವಾಪತಿತಂ ಭೂಮೌದೂಷಣಂನಿಹತಂರಣೇ । ಸಾಧುಸಾಧ್ವಿತಿಕಾಕುತ್ಸ್ಥಂಸರ್ವಭೂತಾನ್ಯಪೂಜಯನ್ ॥೧೬॥ ಏತಸ್ಮಿನ್ನಂತರೇ ಕ್ರುದ್ಧಾಸ್ತ್ರಯಸ್ಸೇನಾಗ್ರಯಾಯಿನಃ । ಸಂಹತ್ಯಾಭ್ಯದ್ರವನ್‌ರಾಮಂಮೃತ್ಯುಪಾಶಾವಪಾಶಿತಾಃ । ಮಹಾಕಪಾಲ ಸ್ಸ್ಥೂಲಾಕ್ಷಃಪ್ರಮಾಥೀಚಮಹಾಬಲಃ । ಮಹಾಕಪಾಲೋವಿಪುಲಂಶೂಲಮುದ್ಯಮ್ಯರಾಕ್ಷಸಃ ॥ ಸ್ಥೂಲಾಕ್ಷಃಪಟ್ಟ ಸಂಗೃಹ್ಯಪ್ರಮಾಥೀಚಪರಶ್ವಧಂ ॥೧೭॥ ದೃಷ್ಟ್ವೈವಾಪತತಸ್ತೂರ್ಣಂರಾಘವಸ್ಸಾಯಕೈಶ್ಶಿತೈಃ ॥ ತೀಕ್ಷ್ಣಾ ಗ್ರೈಃಪ್ರತಿಜಗ್ರಾಹಸಂಪ್ರಾಪ್ತಾನತಿಥೀನಿವ ॥೧೯॥ ಮಹಾಕಪಾಲಸ್ಯಶಿರಶ್ಚಿಚ್ಛೇದಪರಮೇಷುಭಿಃ। ಅಸಂಖ್ಯೇಯೈ

ದೂಷಣನು, ರಾಮಂ-ಶ್ರೀರಾಮನಂಕುರಿತು, ಅಭ್ಯದ್ರವತ್-ಓಡಿಬಂದನು ॥೧೨॥ ಸರಾಘವಃ-ಆ ಶ್ರೀರಾಮನು, ಅಭಿಪತಮಾನಸ್ಯ-ಎದುರಾಗಿ ಬರು ತ್ತಿರುವ, ತಸ್ಯದೂಷಣಸ್ಯ-ಆ ದೂಷಣನ, ಸಹಸ್ತಾಭರಣೌ-ಕಡಗಗಳಿಂದೊಡಗೂಡಿದ, ಭುಜೌ-ಬಾಹುಗಳನ್ನು, ದ್ವಾಭ್ಯಾಂಶರಾಭ್ಯಾಂ-ಎರಡು ಬಾಣಗಳಿಂದ, ಚಿಚ್ಛೇದ-ಕತ್ತರಿಸಿದನು ॥೧೩॥ ರಣಮೂರ್ಧನಿ-ಯುದ್ಧರಂಗದಲ್ಲಿ. ಪರಿಘಃ-ಪರಿಘಾಯುಧವು. ಛಿನ್ನಹಸ್ತಸ್ಯ-ಕತ್ತರಿಸಲ್ಪಟ್ಟ ಹ ಸ್ತಗಳುಳ್ಳ, ತಸ್ಯ-ಆ ದೂಷಣನ, ಭ್ರಷ್ಟಃ-ಕೈಯಿಂದ ಜಾರುತ್ತಿರುವ, ಮಹಾಕಾಯಃ-ಬಹಳ ದೀರ್ಘವಾದ, ಅಗ್ರತಃ-ಮುಂದುಗಡೆ. ಶಕ್ರಧ್ವಜ ಇವ-ದೇವೇಂದ್ರನ ನಿಶಾಣಿಯಂತೆ, ಪಪಾತ-ಬಿತ್ತು ॥೧೪॥ ಮನಸ್ವೀ-ಯುದ್ಧದಲ್ಲಿ ಮನಸ್ಸುಳ್ಳ, ಸದೂಷಣಃ-ಆ ದೂಷಣನು, ವಿಕೀರ್ಣಾ ಭ್ಯಾಂ-ಯೆಸೆಯಲ್ಪಟ್ಟ, ಕರಾಭ್ಯಾಂಸಹ-ಕೈಗಳಿಂದೊಡಗೂಡ, ವಿಶೀರ್ಣಾಭ್ಯಾಂ-ಶೀಳಲ್ಪಟ್ಟ, ವಿಷಾಣಾಭ್ಯಾಂ-ದಂತಗಳೊಡನೆ. ಮಹಾಗಜಇವ- ದೊಡ್ಡಾನೆಯಂತೆ, ದೂಷಣಃ-ದೂಷಣನು, ಭುವಿ-ನೆಲದಲ್ಲಿ, ಪಪಾತ-ಬಿದ್ದನು ॥೧೫॥ ರಣೇ-ಕಾಳಗದಲ್ಲಿ, ನಿಹತಂ-ಹೊಡೆಯಲ್ಪಟ್ಟ, ಭೂಮೌ- ನೆಲದಲ್ಲಿ, ಪತಿತಂ-ಬಿದ್ದಿರುವ, ತಂದೂಷಣಂ-ಆ ದೂಷಣನನ್ನು, ದೃಷ್ಟ್ವಾ-ಕಂಡು, ಸರ್ವಭೂತಾನಿ-ಸಮಸ್ತಪ್ರಾಣಿಗಳು, ಕಾಕುತ್ಸ್ಥಂ-ಶ್ರೀರಾ ಮನನ್ನು, ಸಾಧುಸಾಧ್ವಿತಿ-ಬಳ್ಳೇದಾಯಿತೆಂದು, ಅಪೂಜಯನ್-ಶ್ಲಾಘಿಸಿದರು ॥೧೬॥ ಏತಸ್ಮಿನ್ನಂತರೇ-ಈ ಮಧ್ಯಕಾಲದಲ್ಲಿ, ಕ್ರುದ್ಧಾಃ-ಕೋಪಿ ಷ್ಠರಾದ, ಸೇನಾಗ್ರಯಾಯಿನಃ-ಸೇನಾಧಿಪತಿಗಳಾದ. ಮಹಾಕಪಾಲಃ-ಮಹಾಕಪಾಲನು, ಸ್ಥೂಲಾಕ್ಷಃ-ಸ್ಥೂಲಾಕ್ಷನು. ಮಹಾಬಲಃ-ಬಹಳ ಬಲವಂ ತನಾದ, ಪ್ರಮಾಥೀಚ-ಪ್ರಮಾಥೀಎಂಬ, ತ್ರಯಃ-ಮೂವರು, ಮೃತ್ಯುಪಾಶಾವಪಾಶಿತಾಃ-ಕಾಲಪಾಶದಿಂ ಕಟ್ಟಲ್ಪಟ್ಟವರಾಗಿ, ಸಂಹತ್ಯ-ಒಬ್ಬರಿ ಗೊಬ್ಬರುಸೇರಿ, ರಾಮಂ-ಶ್ರೀರಾಮನನ್ನುಕುರಿತು, ಅಭ್ಯದ್ರವನ್-ಓಡಿಬಂದರು ॥೧೭॥ ಮಹಾಕಪಾಲಃ-ಮಹಾಕಪಾಲನೆಂಬ, ರಾಕ್ಷಸಃ-ರಕ್ಕಸನು, ವಿ ಪುಲಂ-ವಿಸ್ತಾರವಾದ, ಶೂಲಂ-ಶೂಲಾಯುಧವನ್ನು. ಉದ್ಯಮ್ಯ-ಎತ್ತಿಕೊಂಡು, ಸ್ಥೂಲಾಕ್ಷಃ-ಸ್ಥೂಲಾಕ್ಷನು, ಪಟ್ಟಸಂ-ಕಬ್ಬಿಣದ ದಂಡವ ನ್ನು, ಪ್ರಮಾಥೀಚ-ಪ್ರಮಾಥೀಎಂಬುವನು, ಪರಶ್ವಧಂ-ಕೊಡ್ಲಿಯನ್ನು, ಗೃಹ್ಯ-ತೆಗದುಕೊಂಡು, ಪ್ರಾದ್ರವನ್-ಓಡಿಬಂದರು ॥೧೮॥ ರಾಘವಃ- ಶ್ರೀರಾಮನು. ಆಪತತಃ-ಬರುತ್ತಿರುವವರನ್ನು, ದೃಷ್ಟ್ವೈವ-ನೋಡುತ್ತಲೇ, ತೂರ್ಣಂ-ಜಾಗ್ರತೆಯಾಗಿ. ತೀಕ್ಷ್ಣಾಗ್ರೈಃ-ಹದವಾದತುದಿಗಳುಳ್ಳ. ಶಿತೈಃ-ತೀಕ್ಷ್ಣವಾದ, ಸಾಯಕೈಃ-ಬಾಣಗಳಿಂದ, ಸಂಪ್ರಾಪ್ತಾನ್-ಬಂದಿರುವ, ಅತಿಥೀನ್-ಅಭ್ಯಾಗತರನ್ನಂತೆ, ಪ್ರತಿಜಗ್ರಾಹ-ಎದುರುಗೊಂಡನು ॥೧೯॥

ಳಿಂದ ಯುಕ್ತವಾದ ಭುಜಗಳನ್ನು ಯೆರಡು ಬಾಣಗಳಿಂದ ಕತ್ತರಿಸಿದವನಾಗಲೂ, ಆ ರಣರಂಗದಲ್ಲಿ ಆ ಪರಿಘಾ ಯುಧವು ಅವನ ಕೈಯಿಂದ ಜಾರಿ ಮುಂದುಗಡೆಯಲ್ಲಿ ದೇವೇಂದ್ರನ ಧ್ವಜದಂತೆ ಬಿದ್ದದ್ದಾಯಿತು ॥೧೪॥ ಆದ ರೂ ಯುದ್ಧಂಗೈಯ್ಯುವದರಲ್ಲಿಯೆ ಮನವುಳ್ಳ ಆ ದೂಷಣನು, ದೂರದಲ್ಲಿ ಯೆಸೆಯಲ್ಪಟ್ಟ ಆ ತೋಳುಗಳಿಂದ ಆ ಸಮಯದಲ್ಲಿ, ಶೀಳಲ್ಪಟ್ಟ ದಂತಗಳುಳ್ಳ ಮದದಾನೆಯಂತೆ ನೆಲದಲ್ಲಿ ಬಿದ್ದನು, ಆಗ ಸಮಸ್ತಭೂತಂಗಳು ನಿಹತ ವಾದ ಆ ದೂಷಣನನ್ನು ಕಂಡು ಶ್ರೀರಾಮನಂ ಶ್ಲಾಘಿಸಿದರು ॥೧೬॥ ಇಷ್ಟರಲ್ಲಿ ಸೇನಾನಾಯಕರಾದ ಮಹಾಕ ಪಾಲ,ಸ್ಥೂಲಾಕ್ಷ,ಪ್ರಮಾಥಿ,ಎಂಬೀಮೂವರು,ಬಹುಕೋಪವುಳ್ಳವರಾಗಿಏಕೀಭವಿಸಿಕೊಂಡು,ಯಮಪಾಶದಿಂದಬದ್ಧ ರಾಗಿ ಓಡಿಬಂದರು ॥೧೭॥ ಅವರಲ್ಲಿ ಮಹಾಕಪಾಲನೆಂಬ ರಾಕ್ಷಸನು ಶೂಲಾಯುಧವಂ ಪಿಡಿದುಕೊಂಡುಬಂದನು ಸ್ಥೂಲಾಕ್ಷನೆಂಬವನು ಪಟ್ಟಸಾಯುಧವನ್ನೂ, ಪ್ರಮಾಥಿಯೆಂಬಸುರನು ಪರಶ್ವಧಾಯುಧವನ್ನೂ, ತೆಗದುಕೊಂ ಬಂದರು ॥೧೮॥ ಅನಂತರದಲ್ಲಿ ಮೇಲ್ವಾಯ್ದು ಬರುವ ಆ ಅಸುರರಂ ನೋಡುತಲೇ, ತಕ್ಷಣದಲ್ಲಿ ಬಹು ಹದ ವಾದ ಬಾಣಂಗಳಿಂದ, ಗೃಹಸ್ಥರು ಅರ್ಘ್ಯಾದಿಗಳಿಂದ ಅತಿಥಿಗಳನ್ನು ಸ್ವೀಕರಿಸುವಂತೆ ಸ್ವೀಕಾರವಂ ಗೈದನ ದೆಂತೆನೆ,—ದಶರಥನಂದನನಾದ ಶ್ರೀರಾಮನು, ಮಹಾ ಕಪಾಲನೆಂಬವನ ಶಿರಸ್ಸನ್ನು ಪೊಳ್ಳೆಬಾಣಂಗಳಿಂದ ಕ ತ್ತರಿಸಿದನು; ಮತ್ತು ಅನೇಕವಾದ ಸಿಡುಸರಳುಗಳಿಂದ ಪ್ರಮಾಥಿಯೆಂಬವನನ್ನು ಹೊಡೆದವನಾಗಲೂ, ಆ ರಾ

ಸ್ತ್ರಬಾಣೌಘೈಃ ಪ್ರಮಮಾಥ ಪ್ರಮಾಥಿನಮ್। ಸಪಪಾತ ಹತೋ ಭೂಮೌ ವಿಟಪೀವ ಮಹಾದ್ರುಮಃ । ಸ್ಥೂಲಾಕ್ಷಸ್ಯಾಕ್ಷಿಣೀ ತೀಕ್ಷ್ಣೈಃ ಪೂರಯಾಮಾಸ ಸಾಯಕೈಃ॥೧೧॥ ದೂಷಣಸ್ಯಾನುಗಾನ್ ಪಂಚಸಾಹಸ್ರಾನ್ ಕುಪಿತಃ ಕ್ಷಣಾತ್ । ಬಾಣೌಘೈಃ ಪಂಚಸಾಹಸ್ರೈರನಯದ್ಯಮಸಾದನಮ್ ।೧೨॥ ದೂಷಣಂ ನಿಹತಂ ದೃಷ್ಟ್ವಾ ತಸ್ಯ ಚೈವ ಪದಾನುಗಾನ್ । ವ್ಯಾದಿದೇಶ ಖರಃ ಕ್ರುದ್ಧಸ್ಸೇನಾಧ್ಯಕ್ಷಾನ್ ಮಹಾಬಲಾನ್ ॥೧೩॥ ಅಯಂ ವಿನಿಹತಸ್ಸಂಖ್ಯೇ ದೂಷಣಸ್ಸಪದಾನುಗಃ ॥ ಮಹತ್ಯಾ ಸೇನಯಾ ಸಾರ್ಧಂ ಯುದ್ಧ್ವಾ ರಾಮಂ ಕುಮಾನುಷಮ್ । ಶಸ್ತ್ರೈರ್ನಾನಾವಿಧಾಕಾರೈರ್ಹನಧ್ವಂ ಸರ್ವರಾಕ್ಷಸಾಃ । ಏವಮುಕ್ತ್ವಾ ಖರಃ ಕ್ರುದ್ಧೋ ರಾಮಮೇವಾಭಿದುದ್ರುವೇ॥೧೪॥ ಶ್ಯೇನಗಾಮೀ ಪೃಥುಗ್ರೀವೋ ಯಜ್ಞಶತ್ರುರ್ವಿಹಂಗಮಃ। ದುರ್ಜಯಃ ಕರವೀರಾಕ್ಷಃ ಪರುಷಃ ಕಾಲಕಾರ್ಮುಕಃ। ಮೇಘಮಾಲೀ ಮಹಾಮಾಲೀ ಸರ್ಪಾಸ್ಯೋ ರುಧಿರಾಶನಃ। ದ್ವಾದಶೈತೇ ಮಹಾವೀರ್ಯಾ ಬಲಾಧ್ಯಕ್ಷಾಸ್ಸಸೈನಿಕಾಃ। ರಾಮಮೇವಾಭ್ಯವರ್ತಂತ ವಿಕಿರಂತಶ್ಶರೋತ್ತಮಾನ್ ॥೧೮॥ ತತಃ ಪಾವಕಸಂಕಾ

---

ಮಹಾಕಪಾಲಸ್ಯ-ಮಹಾಕಪಾಲನ, ಶಿರಃ-ತಲೆಯನ್ನು. ಪರಮೇಷುಭಿಃ-ಒಳ್ಳೇಬಾಣಗಳಿಂದ, ಚಿಚ್ಛೇದ-ಕತ್ತರಿಸಿದನು, ಅಸಂಖ್ಯೇಯೈಃ-ಸಂಖ್ಯೆಯಿಲ್ಲದ. ಬಾಣೌಘೈಃ-ಬಾಣಗಳ ತಂಡಗಳಿಂದ, ಪ್ರಮಾಥಿನಂ-ಪ್ರಮಾಥಿ ಎಂಬುವನನ್ನು. ಪ್ರಮಮಾಥ-ಹೊಡೆದನು, ಸಃ-ಆ ಪ್ರಮಾಥಿಎಂಬುವನು, ಹತಃ-ಹೊಡೆಯಲ್ಪಟ್ಟವನಾಗಿ. ವಿಟಪೀ-ಕೊಂಬೆಗಳುಳ್ಳ, ಮಹಾದ್ರುಮಇವ-ದೊಡ್ಡಗಿಡದಂತೆ, ಭೂಮೌ-ನೆಲದಲ್ಲಿ, ಪಪಾತ-ಬಿದ್ದನು. ಸ್ಥೂಲಾಕ್ಷಸ್ಯ-ಸ್ಥೂಲಾಕ್ಷನ, ಅಕ್ಷಿಣೀ-ನೇತ್ರಗಳನ್ನು, ತೀಕ್ಷ್ಣೈಃ-ತೀಕ್ಷ್ಣಗಳಾದ. ಸಾಯಕೈಃ-ಬಾಣಗಳಿಂದ, ಪೂರಯಾಮಾಸ-ತುಂಬಿಸಿದನು ||೧೧|| ಕುಪಿತಃ-ಕೋಪಿಷ್ಠನಾದ ಶ್ರೀರಾಮನು. ದೂಷಣಸ್ಯ-ದೂಷಣನ, ಅನುಗಾನ್-ಅನುಚರರಾದ, ಪಂಚಸಾಹಸ್ರಾನ್-ಐದುಸಾವಿರ ಜನರನ್ನು. ಕ್ಷಣಾತ್-ಕ್ಷಣಮಾತ್ರದಲ್ಲಿ. ಪಂಚಸಾಹಸ್ರೈಃ-ಐದುಸಾವಿರ ಸಂಖ್ಯೆಯುಳ್ಳ, ಬಾಣೌಘೈಃ-ಬಾಣಗಳ ತಂಡಗಳಿಂದ. ಯಮಸಾದನಂ-ಯಮನಮನೆಯನ್ನು, ಅನಯತ್-ಹೊಂದಿಸಿದನು ||೧೨|| ಖರಃ-ಖರಾಸುರನು, ದೂಷಣಂ-ದೂಷಣನನ್ನು, ನಿಹತಂ-ಮೃತನನ್ನಾಗಿ, ದೃಷ್ಟ್ವಾ-ಕಂಡು, ತಸ್ಯ-ಆ ದೂಷಣನ. ಪದಾನುಗಾನ್-ಮಾರ್ಗವನ್ನು ಅನುಸರಿಸಿಬಂದಿರುವ ಐದುಸಾವಿರ ಜನರನ್ನು, ನಿಹತಾನ್-ಹತರನ್ನಾಗಿ, ದೃಷ್ಟ್ವಾ-ಕಂಡು, ಕ್ರುದ್ಧಃ-ಕೋಪಿಷ್ಠನಾಗಿ, ಮಹಾಬಲಾನ್-ಮಹಾಸಾಮರ್ಥ್ಯವಂತರಾದ ಸೇನಾಧ್ಯಕ್ಷಾನ್-ಸೈನ್ಯಾಧಿಪತಿಗಳನ್ನು, ವ್ಯಾದಿದೇಶ-ಆಜ್ಞಾಪಿಸಿದನು|| ೧೩|| ಅಯಂದೂಷಣಃ-ಈ ದೂಷಣನು, ಸಪದಾನುಗಃ-ಪಾದಚಾರಿಗಳಿಂದೊಡಗೂಡಿದವನಾಗಿ, ಸಂಖ್ಯೇ-ಕಾಳಗದಲ್ಲಿ. ವಿನಿಹತಃ-ಸಂಹೃತನಾದನು, ಹೇಸರ್ವರಾಕ್ಷಸಾಃ-ಎಲೈ ಸಮಸ್ತರಾಕ್ಷಸರೇ, ಮಹತ್ಯಾಸೇನಯಾ-ಬಹಳ ಸೇನೆಯಿಂದೊಡಗೂಡಿ, ಯುದ್ಧ್ವಾ-ಯುದ್ಧಮಾಡಿ, ಕುಮಾನುಷಂ-ಕುತ್ಸಿತಮನುಷ್ಯನಾದ, ರಾಮಂ-ಶ್ರೀರಾಮನನ್ನು, ನಾನಾವಿಧಾಕಾರೈಃ-ನಾನಾವಿಧಂಗಳಾದ ಆಕಾರಗಳುಳ್ಳ, ಶಸ್ತ್ರೈಃ-ಶಸ್ತ್ರಗಳಿಂದ, ಹನಧ್ವಂ-ಹೊಡೆಯಿರಿ, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಖರಃ-ಖರಾಸುರನು, ಕ್ರುದ್ಧಃ-ಕೋಪಿಷ್ಠನಾಗಿ, ರಾಮಮೇವ-ಶ್ರೀರಾಮನನ್ನೇಕುರಿತು, ಅಭಿದುದ್ರುವೇ-ಎದುರಾಗಿ ಓಡಿಬಂದನು || ೧೪|| ಶ್ಯೇನಗಾಮೀ-ಶ್ಯೇನಗಾಮೀಎಂಬುವನು, ಪೃಥುಗ್ರೀವಃ-ಪೃಥುಗ್ರೀವನು, ಯಜ್ಞಶತ್ರುಃ-ಯಜ್ಞಶತ್ರುವು, ವಿಹಂಗಮಃ-ವಿಹಂಗಮನು, ದುರ್ಜಯಃ-ದುರ್ಜಯನು, ಕರವೀರಾಕ್ಷಃ-ಕರವೀರಾಕ್ಷನು, ಪರುಷಃ-ಪರುಷನು, ಕಾಲಕಾರ್ಮುಕಃ-ಕಾಲಕಾರ್ಮುಕನು, ಮೇಘಮಾಲೀ-ಮೇಘಮಾಲಿಯು. ಮಹಾಮಾಲೀ-ಮಹಾಮಾಲಿಯು, ಸರ್ಪಾಸ್ಯಃ-ಸರ್ಪಾಸ್ಯನು, ರುಧಿರಾಶನಃ-ರುಧಿರಾಶನನು, ಏತೇ-ಈ, ದ್ವಾದಶ-ಹನ್ನೆರಡು ಸಂಖ್ಯೆಯುಳ್ಳ. ಮಹಾವೀರ್ಯಾಃ-ಮಹಾಪರಾಕ್ರಮವುಳ್ಳ. ಬಲಾಧ್ಯಕ್ಷಾಃ-ಸೈನ್ಯಾಧಿಪತಿಗಳು, ಸಸೈನಿಕಾಃ-ಸೇನಾಜನರೊಡಗೂಡಿ. ಶರೋತ್ತಮಾನ್-ಬಾಣಶ್ರೇಷ್ಠಗಳನ್ನು, ವಿಸೃಜಂತಃ-ಬಿಡುತ್ತಿರುವವರಾಗಿ, ರಾಮಮೇವ-ಶ್ರೀರಾಮನನ್ನು, ಅಭ್ಯವರ್ತಂತ-ಎದುರಾಗಿ ಬಂದುನಿಂತರು ||೧೮|| ತತಃ-ಬಳಿಕ, ತೇಜಸ್ವೀ-ಪರಾಕ್ರಮಶಾಲಿಯಾದ ಶ್ರೀರಾಮನು, ಪಾವಕಸಂಕಾಶೈಃ-ಅಗ್ನಿಗೆ ಸಮಾನವಾದ, ಹೇಮವಜ್ರವಿ

---

ಕ್ಷಸನು ಮಹಾ ವೃಕ್ಷದಂತೆ ನೆಲದಲ್ಲಿ ಬಿದ್ದನು; ಸ್ಥೂಲಾಕ್ಷನೆಂಬವನ ಅಕ್ಷಂಗಳಂ ಬಾಣಂಗಳಿಂದ ತುಂಬಿಸಿ, ಮತ್ತೂ ಕೋಪವುಳ್ಳವನಾಗಿ, ದೂಷಣನ ಹಿಂಬಲವಾಗಿ ಬಂದಿರುವ ಐದುಸಾವಿರ ರಾಕ್ಷಸರನ್ನು ಐದುಸಹಸ್ರಸಂಖ್ಯಾಕವಾದ ಬಾಣಂಗಳಿಂದ ತತ್ಕ್ಷಣದಲ್ಲಿಯೆ ಯಮಮಂದಿರವನ್ನೈದಿಸಿದನು ॥೧೨॥ ಅನಂತರದಲ್ಲಿ ಖರಾಸುರನು ಮೃತನಾಗಿರುವ ದೂಷಣನನ್ನೂ, ಮರಣವನ್ನೈದಿದ ಆ ಐದುಸಾವಿರರಾಕ್ಷಸರನ್ನೂ ಸಹಾ ಕಂಡು, ಕಡುಕುಪಿತನಾಗಿ, ಮಹಾ ಪರಾಕ್ರಮಶಾಲಿಗಳಾದ ಸೇನಾ ನಾಯಕರಂ ಕುರಿತು ನುಡಿವನದೆಂತೆನೆ,—॥೧೩॥ ಎಲೈ ರಾಕ್ಷಸರೇ! ಈ ದೂಷಣನು ಪಾದಚಾರಿಗಳಿಂದೊಡಗೂಡಿ ಸಂಗರದಲ್ಲಿ ನಿಹತನಾದನು; ಆದಕಾರಣ ನೀವೆಲ್ಲರು ಮಹಾ ಸೈನ್ಯದಿಂದ ಯುಕ್ತರಾಗಿ ಪದಾತಿಯಾದ ಶ್ರೀರಾಮನಂ ಹೊಡಿಯುತಿರುವವರಾಗೆಂದು ನುಡಿದು, ಕಡುಕೋಪವುಳ್ಳವನಾಗಿ ರಾಮನಂ ಕುರಿತು ಓಡಿಬಂದನು ।೧೪॥ ಆಗ ‘‘ ಶ್ಯೇನಗಾಮಿ, ಪೃಥುಗ್ರೀವ, ಯಜ್ಞಶತ್ರು, ವಿಹಂಗಮ, ದುರ್ಜಯ, ಕರವೀರಾಕ್ಷ, ಪರುಷ, ಕಾಲಕಾರ್ಮುಕ, ಮೇಘಮಾಲಿ, ಮಹಾಮಾಲಿ, ಸರ್ಪಾಸ್ಯ, ರುಧಿರಾಶನ, ’’ ಎಂಬ ಮಹಾ ಪರಾಕ್ರಮಶಾಲಿಗಳಾದ ಈ ಹನ್ನೆರಡುಮಂದಿ ರಾಕ್ಷಸರು, ತಮ್ಮತಮ್ಮ ಸೈನ್ಯಗ

ಸ್ವರ್ಣವಜ್ರವಿಭೂಷಿತೈಃ | ಜಘಾನಶೇಷಂತೇಜಸ್ವೀತಸ್ಯಸೈನ್ಯಸ್ಯಸಾಯಕೈಃ ॥೧೯॥ ತೇರುಕ್ಮಪುಂಖಾವಿಶಿಖಾಸ್ಸ
ಧೂಮಾಇವಪಾವಕಾಃ | ನಿಜಘ್ನುಸ್ತಾನಿರಕ್ಷಾಂಸಿವಜ್ರಾಇವಮಹಾದ್ರುಮಾನ್ ॥೨೦॥ ರಕ್ಷಸಾಂತುಶತಂರಾಮಶ್ಶತೇ
ನೈಕೇನಕರ್ಣಿನಾ | ಸಹಸ್ರಂಚಸಹಸ್ರೇಣಜಘಾನರಣಮೂರ್ಧನಿ ॥೨೧॥ ತೈರ್ಭಿನ್ನವರ್ಮಾಭರಣಾಶ್ಛಿನ್ನಭಿನ್ನಶರಾಸ
ನಾಃ | ನಿಪೇತುಶ್ಶೋಣಿತಾದಿಗ್ಧಾಧರಣ್ಯಾಂರಜನೀಚರಾಃ ॥೨೨॥ ತೈರ್ಮುಕ್ತಕೇಶೈಸ್ಸಮರೇಪತಿತೈಶ್ಶೋಣಿತೋಕ್ಷಿತೈಃ |
ಆಸ್ತೀರ್ಣಾವಸುಧಾಕೃತ್ಸ್ನಾಮಹಾವೇದಿಃಕುಶೈರಿವ ॥೨೩॥ ಕ್ಷಣೇನತುಮಹಾಘೋರಂವನಂನಿಹತರಾಕ್ಷಸಂ | ಬಭೂ
ವನಿರಯಪ್ರಖ್ಯಂಮಾಂಸಶೋಣಿತಕರ್ದಮಂ ॥೨೪॥ ಚತುರ್ದಶಸಹಸ್ರಾಣಿರಕ್ಷಸಾಂಭೀಮಕರ್ಮಣಾಂ | ಹತಾನ್ಯೇಕೇನ
ರಾಮೇಣಮಾನುಷೇಣಪದಾತಿನಾ ॥೨೫॥ ತಸ್ಯಸೈನ್ಯಸ್ಯಸರ್ವಸ್ಯಖರಶ್ಶೇಷೋಮಹಾರಥಃ | ರಾಕ್ಷಸಸ್ತ್ರಿಶಿರಾಶ್ಚೈವ
ರಾಮಶ್ಚರಿಪುಸೂದನಃ ॥ಶೇಷಾಹತಾಮಹಾಸತ್ವಾರಾಕ್ಷಸಾರಣಮೂರ್ಧನಿ | ಘೋರಾದುರ್ವಿಷಹಾಸ್ಸರ್ವೇಲಕ್ಷ್ಮಣಸ್ಯಾ

---

ಭೂಷಿತೈಃ-ಭಂಗಾರದ ರೇಖೆಗಳಿಂದಲೂ ವಜ್ರಗಳಿಂದಲೂ ಅಲಂಕೃತವಾದ, ಸಾಯಕೈಃ-ಬಾಣಗಳಿಂದ, ತಸ್ಯಸೈನ್ಯಸ್ಯ-ಆ ದಂಡಿನ, ಶೇಷಂ-ಮಿಕ್ಕಾ
ದ ಸೈನ್ಯವನ್ನು, ಜಘಾನ-ಹೊಡೆದನು ॥೧೯॥ ರುಕ್ಮಪುಂಖಾಃ-ಚಿನ್ನದತುದಿಗಳುಳ್ಳ, ಸಧೂಮಾಃ-ಹೊಗೆಯಿಂದೊಡಗೂಡಿದ, ಪಾವಕಾಇವ-ಅ
ಗ್ನಿಗಳಂತಿರುವ, ತೇವಿಶಿಖಾಃ-ಆ ಬಾಣಗಳು, ವಜ್ರಾಃ-ವಜ್ರಾಯುಧಗಳು, (ಅಥವಾ-ವಜ್ರಾಃ-ಶಿಡಿಲುಗಳು,) ಮಹಾದ್ರುಮಾನಿವ-ದೊಡ್ಡಗಿಡಗಳನ್ನಂ
ತೆ, ತಾನಿರಕ್ಷಾಂಸಿ-ಆ ರಕ್ಕಸರನ್ನು, ನಿಜಘ್ನುಃ-ಹೊಡೆದವು ॥೨೦॥ ರಾಮಃ-ಶ್ರೀರಾಮನು, ರಣಮೂರ್ಧನಿ-ಯುದ್ಧರಂಗದಲ್ಲಿ, ರಕ್ಷಸಾಂ-ರಕ್ಕಸರ
ಶತಂ-ನೂರನ್ನು, ಏಕೇನಶತೇನ-ಒಂದೇನೂರಾದ, ಕರ್ಣಿನಾ-ಬಾಣಗಳಿಂದ, ಸಹಸ್ರಂಚ-ರಕ್ಕಸರ ಸಹಸ್ರವನ್ನು, ಸಹಸ್ರೇಣ-ಸಾವಿರಬಾಣಗಳಿಂದ, ಜ
ಘಾನ-ಹೊಡೆದನು ॥೨೧॥ ತೈಃ-ಆ ಬಾಣಗಳಿಂದ, ಭಿನ್ನವರ್ಮಾಭರಣಾಃ-ಭೇದಿಸಲ್ಪಟ್ಟ ಕವಚಗಳೂ ಆಭರಣಗಳೂಉಳ್ಳ, ಛಿನ್ನಭಿನ್ನಶರಾಸನಾಃ-
ಕತ್ತರಿಸಲ್ಪಟ್ಟ ಭೇದಿಸಲ್ಪಟ್ಟ ಧನುಸ್ಸುಗಳುಳ್ಳ, ರಜನೀಚರಾಃ-ರಕ್ಕಸರು, ಶೋಣಿತಾದಿಗ್ಧಾಃ-ರಕುತದಿಂ ವ್ಯಾಪ್ತರಾಗಿ, ಧರಣ್ಯಾಂ-ಭೂಮಿಯಲ್ಲಿ,
ನಿಪೇತುಃ-ಬಿದ್ದರು ॥೨೨॥ ಸಮರೇ-ಕಾಳಗದಲ್ಲಿ, ಪತಿತೈಃ-ಬಿದ್ದಿರುವ, ಶೋಣಿತೋಕ್ಷಿತೈಃ-ರಕುತದಿಂ ನೆನೆಯಲ್ಪಟ್ಟ, ಮುಕ್ತಕೇಶೈಃ-ಬಿಚ್ಚಿಹೋದ ಕೂ
ದಲುಗಳುಳ್ಳ, ತೈಃ-ಆ ರಕ್ಕಸರಿಂದ, ಆಸ್ತೀರ್ಣಾ-ಹಾಸಲ್ಪಟ್ಟ, ಕೃತ್ಸ್ನಾ-ಸಮಸ್ತವಾದ, ವಸುಧಾ-ಭೂಮಿಯು, ಕುಶೈಃ-ದರ್ಭೆಹುಲ್ಲುಗಳಿಂ
ಆಸ್ತೀರ್ಣಾ-ಹಾಸಲ್ಪಟ್ಟ, ಮಹಾವೇದಿರಿವ-ಯಜ್ಞವೇದಿಕೆಯಂತೆ, ಬಭೂವ-ಆಯಿತು ॥೨೩॥ ಮಹಾಘೋರಂ-ಮಹಾಭಯಂಕರವಾದ, ವನಂ-ಅರ
ಣ್ಯವು, ಕ್ಷಣೇನ-ಕ್ಷಣಮಾತ್ರದಲ್ಲಿ, ನಿಹತರಾಕ್ಷಸಂ-ಹೊಡೆಯಲ್ಪಟ್ಟ ರಾಕ್ಷಸರುಳ್ಳದ್ದಾದಕಾರಣ, ಮಾಂಸಶೋಣಿತಕರ್ದಮಂ-ಮಾಂಸಗಳಿಂದಲೂ
ರಕುತಗಳಿಂದಲೂ ಕೆಸರುಳ್ಳದ್ದಾಗಿ, ನಿರಯಪ್ರಖ್ಯಂ-ನರಕಕ್ಕೆ ಸಮಾನವಾಗಿ, ಬಭೂವ-ಆಯಿತು ॥೨೪॥ ಭೀಮಕರ್ಮಣಾಂ-ಭಯಂಕರವಾದ
ಕೃತ್ಯಗಳುಳ್ಳ, ರಕ್ಷಸಾಂ-ರಾಕ್ಷಸರ, ಚತುರ್ದಶಸಹಸ್ರಾಣಿ-ಹದಿನಾಲ್ಕು ಸಾವಿರಗಳು, ಪದಾತಿನಾ-ಪಾದಚಾರಿಯಾದ, ಮಾನುಷೇಣ-ಮನುಷ್ಯ
ನಾದ, ಏಕೇನ-ಒಬ್ಬನಾದ, ರಾಮೇಣ-ಶ್ರೀರಾಮನಿಂದ, ಹತಾನಿ-ಹೊಡೆಯಲ್ಪಟ್ಟವು ॥೨೫॥ ಸರ್ವಸ್ಯ-ಸಮಸ್ತವಾದ, ತಸ್ಯಸೈನ್ಯಸ್ಯ-ಆ ಸೈನ್ಯಕ್ಕೆ,
ಮಹಾರಥಃ-ಮಹಾರಥಿಕನಾದ, ಖರಃ-ಖರಾಸುರನು, ಶೇಷಃ-ಮಿಕ್ಕನು, ತ್ರಿಶಿರಾಶ್ಚೈವ-ತ್ರಿಶಿರಸ್ಸನೆಂಬ, ರಾಕ್ಷಸಃ-ರಕ್ಕಸನು, ಶೇಷಃ-ಮಿಕ್ಕನು, ರಿಪು

---

ಳಿಂ ಮೊಡಗೂಡಿ, ಬಾಣವರ್ಷವಂಸುರಿಸುತ್ತಾ ಮೇಲ್ವಾಯ್ದು ಬಂದಬಳಿಕ, ಶ್ರೀರಾಮನು ಅಗ್ನಿಸದೃಶನಾದಮತ್ತು
ಸುವರ್ಣದಿಂದಲೂ ವಜ್ರಮಣಿಗಳಿಂದಲೂ ಅಲಂಕೃತವಾದ, ಬಾಣಂಗಳಿಂದ, ಉಳಿದ ಸೇನೆಯಂ ಹೊಡದನು
॥೧೯॥ ಆಗ ಸುವರ್ಣ ವಿಕಾರವಾದ ಕೊಂಕಿಗಳುಳ್ಳ, ಧೂಮಯುಕ್ತವಾದ ಅಗ್ನಿಯಂತೆ ಬೆಳಗುವ, ಆ ಬಾಣಂಗಳು
ಶಿಡಿಲುಗಳು ವೃಕ್ಷಂಗಳಂ ಹೊಡೆಯುವಂದದಿ ಆ ರಾಕ್ಷಸರಂ ಹೊಡದಂಥಾದ್ದವು ॥೨೦॥ ಆ ರಣರಂಗದಲ್ಲಿ ಶ್ರೀ
ರಾಮನು ನೂರುಮಂದಿ ರಾಕ್ಷಸರನ್ನು ನೂರುಬಾಣಂಗಳಿಂದಲೂ, ಸಹಸ್ರ ಸಂಖ್ಯಾಕರಾದ ಅಸುರರನ್ನು ಸಹ
ಸ್ರಬಾಣಂಗಳಿಂದಲೂ ಹೊಡೆಯುತ್ತಿದ್ದನು ॥೨೧॥ ಆ ಬಾಣಂಗಳಿಂದ ಭೇದಿಸಲ್ಪಟ್ಟ ಕವಚಂಗಳೂ ಆಭರಣಂಗ
ಳೂ ಉಳ್ಳ, ಮತ್ತು ಭೇದಿಸಲ್ಪಟ್ಟ ಕೋದಂಡಂಗಳುಳ್ಳ ಆ ರಾಕ್ಷಸರು, ರಕ್ತದಿಂದ ತೊಯಿಸಲ್ಪಟ್ಟ ಶರೀರಂಗಳು
ಳ್ಳವರಾಗಿ ನೆಲದಲ್ಲಿ ಬಿದ್ದರು ॥೨೨॥ ರಕ್ತವಂ ಸ್ರವಿಸುತ್ತಾ ಆ ರಣರಂಗದಲ್ಲಿ ಬಿದ್ದಿರುವ ಆ ರಾಕ್ಷಸರಿಂದ ನಿಬಿಡಿತವಾ
ದ ಭೂಮಿಯು, ದರ್ಭೆಗಳಿಂದ ಹಾಸಲ್ಪಟ್ಟ ಯಜ್ಞವೇದಿಕೆಯಂತೆ ಹೊಳೆಯುತ್ತಿತ್ತು ॥೨೩॥ ಆಗ ಮಹಾ ಭ
ಯಂಕರವಾದ ಆ ಅರಣ್ಯವು, ಕ್ಷಣಮಾತ್ರದಲ್ಲಿ ನಿಹತರಾದ ರಾಕ್ಷಸರುಳ್ಳದ್ದಾದಕಾರಣ, ಮಾಂಸದಿಂದಲೂ ರಕ್ತ
ದಿಂದಲೂ ವ್ಯಾಪ್ತವಾದದ್ದಾಗಿ, ನರಕಕ್ಕೆ ಸಮಾನವಾಗಿ ತೋರುತ್ತಿತ್ತು ॥೨೪॥ ಈ ರೀತಿಯಾಗಿ ಆ ಹದಿನಾಲ್ಕು
ಸಾವಿರರಾಕ್ಷಸರು ಪಾದಚಾರಿಯಾದ ಮನುಷ್ಯನಾದ ಶ್ರೀರಾಮನೋರ್ವನಿಂದಲೇ ಹತವಾದವು ॥೨೫॥ ಆ ರಣರಂ
ಗದಲ್ಲಿ ಮಹಾರಥಿಕನಾದ ಖರಾಸುರನೋರ್ವನೂ, ತ್ರಿಶಿರಸ್ಕನೂ, ಶ್ರೀರಾಮನೂ ಈ ಮೂರುಮಂದಿಮಾತ್ರ

ಗ್ರಜೇನ ತೇ ॥೩೭॥ ತತಸ್ತದ್ಭೀಮಬಲಂ ಮಹಾಹವೇ ಸಮೀಕ್ಷ್ಯ ರಾಮೇಣ ಹತಂ ಬಲೀಯಸಾ । ರಥೇನ ರಾಮಂ ಮಹತಾ
ಖರಸ್ತದಾ ಸಮಾಸಸಾದೇಂದ್ರ ಇವೋದ್ಯತಾಶನಿಃ —*** ಷಡ್ವಿಂಶಸ್ಸರ್ಗಃ ***—
ಖರಂ ತು ರಾಮಾಭಿಮುಖಂ ಪ್ರಯಾಂತಂ ವಾಹಿನೀಪತಿಃ । ರಾಕ್ಷಸಸ್ತ್ರಿಶಿರಾ ನಾಮ ಸನ್ನಿಪತ್ಯೇದಮಬ್ರವೀತ್ ॥೧॥
ಮಾಂ ನಿಯೋಜಯ ವಿಕ್ರಾಂತ ಸನ್ನಿವರ್ತಸ್ವ ಸಾಹಸಾತ್ । ಪಶ್ಯ ರಾಮಂ ಮಹಾಬಾಹುಂ ಸಂಯುಗೇ ವಿನಿಪಾತಿತಮ್ ॥೨॥ ಪ್ರತಿ
ಜಾನಾಮಿ ತೇ ಸತ್ಯಮಾಯುಧಂ ಚಾಹಮಾಲಭೇ । ಯಥಾ ರಾಮಂ ವಧಿಷ್ಯಾಮಿ ವಧಾರ್ಹಂ ಸರ್ವರಕ್ಷಸಾಮ್ ॥೩॥ ಅಹಂ ವಾ
ಸ್ಯ ರಣೇ ಮೃತ್ಯುರೇಷ ವಾ ಸಮರೇ ಮಮ । ವಿನಿವೃತ್ಯ ರಣೋತ್ಸಾಹಾನ್ಮುಹೂರ್ತಂ ಪ್ರಾಶ್ನಿಕೋ ಭವ ॥೪॥ ಪ್ರಹೃಷ್ಟೋ ವಾ
ಹತೇ ರಾಮೇ ಜನಸ್ಥಾನಂ ಪ್ರಯಾಸ್ಯಸಿ । ಮಯಿ ವಾ ನಿಹತೇ ರಾಮಂ ಸಂಯುಗಾಯೋಪಯಾಸ್ಯಸಿ ॥೫॥ ಖರಸ್ತ್ರಿಶಿರಸಾ

ಸೂದನೈಃ-ಶತ್ರುಸಂಹಾರಕನಾದ, ರಾಮೇಣ-ಶ್ರೀರಾಮನು, ಶಿಷ್ಟಾಃ-ಮಿಕ್ಕ ಳಿದವರಾದರೂ, ಶಿಷ್ಟಾಃ-ಮಿಕ್ಕಾದ, ಮಹಾಸತ್ತ್ವಾಃ-ಮಹಾಸಾಮರ್ಥ್ಯವಂ
ತರಾದ ಭೀಮಾಕ್ಷಾಃ-ಭಯಂಕರರಾದ, ದುರ್ವಿಷಹಾಃ-ಸಹಿಸಲಸಾಧ್ಯರಾದ, ಸರ್ವೇ-ಸಮಸ್ತರಾದ, ನಿಶಾಚರಾಃ-ಆ ರಾಕ್ಷಸರು, ಲಕ್ಷ್ಮಣಸ್ಯ-ಲಕ್ಷ್ಮಣನ
ಅಗ್ರಜೇನ-ಅಣ್ಣನಾದ ಶ್ರೀರಾಮನಿಂದ, ಹತಾಃ-ಹೊಡೆಯಲ್ಪಟ್ಟರು ॥೩೭॥ ತತಃ-ಬಳಿಕ, ಮಹಾಹವೇ-ದೊಡ್ಡ ಕಾಳಗದಲ್ಲಿ, ಬಲೀಯಸಾ-ಅತಿಬಲಿ
ಷ್ಠನಾದ, ರಾಮೇಣ-ಶ್ರೀರಾಮನಿಂದ, ತದ್ಭೀಮಬಲಂ-ಆ ಭಯಂಕರವಾದ ಸೈನ್ಯವನ್ನು, ಹತಂ-ಸಂಹರಿಸಲ್ಪಟ್ಟುದನ್ನಾಗಿ, ಸಮೀಕ್ಷ್ಯ-ಕಂಡು, ತದಾ-
ಆ ಕ್ಷಣದಲ್ಲಿ, ಉದ್ಯತಾಶನಿಃ-ಧರಿಸಲ್ಪಟ್ಟ ವಜ್ರಾಯುಧವುಳ್ಳ, ಇಂದ್ರ ಇವ-ದೇವೇಂದ್ರನಂತೆ, ಖರಃ-ಖರಾಸುರನು, ಮಹತಾ-ದೊಡ್ಡದಾದ, ರಥೇನ-
ತೇರಿನಿಂದ, ರಾಮಂ-ಶ್ರೀರಾಮನಂ ಕುರಿತು, ಆಸಸಾದ-ಬಂದನು ॥ —**ಇತಿಶ್ರೀಮದಾರಣ್ಯಕಾಂಡೇ-ಷಡ್ವಿಂಶಸ್ಸರ್ಗಃ**—
ರಾಮಾಭಿಮುಖಂ-ಶ್ರೀರಾಮನಿಗೆ ಅಭಿಮುಖವಾಗಿ, ಪ್ರಯಾಂತಂ-ಹೋಗುತ್ತಿರುವ, ಖರಂ ತು-ರಾಕ್ಷಸನನ್ನು ಕುರಿತು, ವಾಹಿನೀಪತಿಃ-ಸೈನ್ಯಾಧಿ
ಪತಿಯಾದ, ತ್ರಿಶಿರಾನಾಮ ರಾಕ್ಷಸಃ-ತ್ರಿಶಿರಸ್ಕನೆಂಬ ರಾಕ್ಷಸನು, ಸನ್ನಿಪತ್ಯ-ಸಮೀಪವರ್ತಿಯಾಗಿ, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು ॥೧॥
ಹೇ ವಿಕ್ರಾಂತ-ಎಲೈ ಪರಾಕ್ರಮಶಾಲಿಯೇ, ಮಾಂ-ನನ್ನನ್ನು ನಿಯೋಜಯ-ಆಜ್ಞಾಪಿಸು, ಸನ್ನಿವರ್ತಸ್ವ-ಹಿಂದಕ್ಕೆ ಹೋಗು, ಸಂಯುಗೇ-ಕಾಳಗದಲ್ಲಿ,
ಸಾಹಸಾತ್-ಯುದ್ಧೋದ್ಯೋಗದ ದೆಸೆಯಿಂದ, ವಿನಿಪಾತಿತಂ-ಕೆಳಗೆ ಬಿದ್ದವನನ್ನಾಗಿ, ಮಹಾಬಾಹುಂ-ಮಹಾಭುಜಪರಾಕ್ರಮಶಾಲಿಯಾದ, ರಾಮಂ-
ಶ್ರೀರಾಮನನ್ನು, ಪಶ್ಯ-ಕಾಣು ॥೨॥ ತೇ-ನಿನಗೆ, ಸತ್ಯಂ-ಸತ್ಯವಾಗಿ, ಪ್ರತಿಜಾನಾಮಿ-ಪ್ರತಿಜ್ಞೆ ಮಾಡುವೆನು, ಸರ್ವರಕ್ಷಸಾಂ-ಸಮಸ್ತ ರಾಕ್ಷಸರಿಗೆ, ವ
ಧಾರ್ಹಂ-ಸಂಹಾರಕ್ಕೆ ಅರ್ಹನಾದ, ರಾಮಂ-ಶ್ರೀರಾಮನನ್ನು, ಯಥಾ-ಹ್ಯಾಗೆ, ವಧಿಷ್ಯಾಮಿ-ಸಂಹರಿಸುವೆನು, ತಥಾ-ಹಾಗೆ, ಅಹಂ-ನಾನು, ಆ
ಯುಧಂ-ಆಯುಧವನ್ನು, ಆಲಭೇ-ಮುಟ್ಟಿ ಪ್ರತಿಜ್ಞೆ ಮಾಡುತ್ತೇನೆ ॥೩॥ ಅಹಂ ವಾ-ನಾನಾದರೂ, ಅಸ್ಯ-ಈ ಶ್ರೀರಾಮನಿಗೆ, ರಣೇ-ಕಾಳಗದಲ್ಲಿ, ಮೃ
ತ್ಯುಃ-ಮಾರಕನು, ಏಷವಾ-ಆ ಶ್ರೀರಾಮನೇ ಆಗಲೀ, ಸಮರೇ-ಕಾಳಗದಲ್ಲಿ, ಮಮ-ನನಗೆ, ಮೃತ್ಯುಃ-ಮೃತ್ಯುವು, ರಣೋತ್ಸಾಹಾತ್-ಯುದ್ಧೋ
ದ್ಯೋಗದ ದೆಸೆಯಿಂದ, ವಿನಿವರ್ತ್ಯ-ಹಿಂದಕ್ಕೆ ತಿರುಗಿ, ಮುಹೂರ್ತಂ-ಎರಡುಘಳಿಗೆಯವರೆಗೂ, ಪ್ರಾಶ್ನಿಕಃ-ಜಯಾಪಜಯಂಗಳನ್ನು ನಿರ್ಣಯಿಸುವ
ವನು, ಭವ-ಆಗು ॥೪॥ ರಾಮೇ-ಶ್ರೀರಾಮನು, ಹತೇ ಸತಿ-ಸತ್ತುಹೋದವನಾಗುತ್ತಿರಲಾಗಿ ಆದರೂ ಪ್ರಹೃಷ್ಟಃ-ಸಂತೋಷಗೊಂಡವನಾಗಿ
ಜನಸ್ಥಾನಂ-ಜನಸ್ಥಾನವನ್ನು ಕುರಿತು, ಪ್ರಯಾಸ್ಯಸಿ-ಹೋಗುವವನಾಗು, ಮಯಿ ವಾ-ನಾನಾದರೂ ಅರಿಯೇ, ನಿಹತೇ ಸತಿ-ಸತ್ತವನಾದರೆ, ರಾಮಂ-ಶ್ರೀ
ರಾಮನಂ ಕುರಿತು, ಸಂಯುಗಾಯ-ಕಾಳಗಕ್ಕೋಸುಗ, ಉಪಯಾಸ್ಯಸಿ-ಹೋಗು ॥೫॥ ತ್ರಿಶಿರಸಾ-ಆ ತ್ರಿಶಿರಸ್ಕನಿಂದ, ಖರಃ-ಖರನು, ಮೃತ್ಯು

ಉಳಕೊಂಡರು ಇತರರಾದ ಮಹಾ ಸಾಮರ್ಥ್ಯವಂತರಾದ, ಸಹಿಸಲಸಾಧ್ಯರಾದ ರಾಕ್ಷಸರೆಲ್ಲರು, ಲಕ್ಷ್ಮಣಾಗ್ರಜ ನಾದ ಶ್ರೀರಾಮನಿಂದ ಹೊಡೆಯಲ್ಪಟ್ಟರು. ಅನಂತರದಲ್ಲಿ ಆ ಆಹವದಲ್ಲಿ ಬಹು ಬಲಶಾಲಿಯಾದ ಶ್ರೀರಾಮನಿಂದ ಹತವಾದ ಆ ಸೇನೆಯಂ ಕಂಡು, ಆಗ ಖರಾಸುರನು, ವಜ್ರಪಾಣಿಯಾದ ಸಾಕ್ಷಾದಿಂದ್ರನಂತೆ ರಥದಲ್ಲಿ ಕುಳಿತವ ನಾಗಿ ಶ್ರೀರಾಮನಂ ಕುರಿತು ಬಂದನು ॥೩೮॥ —*ಅರಣ್ಯಕಾಂಡದಲ್ಲಿನ ೨೬ನೆಯ ಸರ್ಗಂ ಮುಗಿದುದು*—

ಅನಂತರದಲ್ಲಿ ಸೈನ್ಯಾಧಿಪತಿಯಾದ ತ್ರಿಶಿರಸ್ಕನು ಶ್ರೀರಾಮನಿಗಭಿಮುಖನಾಗಿ ಇರುತಿರುವ ಆ ಖರಾಸುರನಂ ಕುರಿತು, ಸಮೀಪಕ್ಕೆ ಬಂದು ನುಡಿವನದೆಂತೆನೆ;—ಎಲೈ ಪರಾಕ್ರಮಶಾಲಿಯಾದ ಖರಾಸುರನೇ! ನನಿಗಾಜ್ಞಾಪಿಸಿ ಈ ರಣೋದ್ಯೋಗವಂ ಬಿಟ್ಟು ಹಿಂತಿರುಗುವವನಾಗು; ಈಗಲೇ ಹತನಾದ ಶ್ರೀರಾಮನಂ ನೋಡು ವವನಾಗುವೆ; ನಿನಿಗೆ ಯಥಾರ್ಥವಂ ಪೇಳುವೆನು, ಕೇಳುವವನಾಗು; ಸಮಸ್ತರಾದ ರಾಕ್ಷಸರನ್ನು ಸಂಹಾರವಂ ಗೈಯುವ ರಾಮನಂ ಈ ನಾನು ಪಿಡಿದಿರುವ ಆಯುಧ ಸಾಕ್ಷಿಯಾಗಿ ಹನನವಂ ಗೈಯ್ಯುತ್ತೇನೆ; ಈ ರಣರಂಗದ ಲ್ಲಿ ನಾನೇ ಈ ಶ್ರೀರಾಮನಿಗೆ ಮೃತ್ಯುವೋ, ಅಥವಾ ಆತನೆ ನನಿಗೆ ಮೃತ್ಯುಪ್ರಾಯನೋ, ಸ್ವಲ್ಪಕಾಲವು ಜಯಾ ಪಜಯಂಗಳನ್ನು ವಿಮರ್ಶೆಯಂ ಗೈಯ್ಯುತಲಿರುವವನಾಗು; ರಾಮನು ನನ್ನಿಂದ ಹತನಾದರೆ ಸಂತೋಷದಿಂ ಜನಸ್ಥಾನಕ್ಕೆ ಸಾರುವಣ; ಪೊಂದುವೇಳೆಯಲ್ಲಿ ನಾನೇ ಆತನಿಂದ ಹತನಾದವನಾದರೆ ಸಂಗರಕ್ಕಾಗಿ ನೀ

ರೇಣಮೃತ್ಯುಲೋಭಾತ್ಪ್ರಸಾದಿತಃ । ಗಚ್ಛ ಯುಧ್ಯೇತ್ಯನುಜ್ಞಾತೋ ರಾಘವಾಭಿಮುಖೋ ಯಯೌ ॥೬॥ ತ್ರಿಶಿರಾಶ್ಚ ರ
ಥೇನೈವ ವಾಜಿಯುಕ್ತೇನ ಭಾಸ್ವತಾ । ಅಭ್ಯದ್ರವದ್ರಣೇ ರಾಮಂ ತ್ರಿಶೃಂಗ ಇವ ಪರ್ವತಃ ॥೭॥ ಶರಧಾರಾಸಮೂಹಾನ್ಸ ಮ
ಹಾಮೇಘ ಇವೋತ್ಸೃಜನ್ । ವ್ಯಸೃಜತ್ಸದೃಶಂ ನಾದಂ ಜಲಾರ್ದ್ರಸ್ಯ ತು ದುಂದುಭೇಃ ॥೮॥ ಆಗಚ್ಛಂತಂ ತ್ರಿಶಿರಸಂ ರಾ
ಕ್ಷಸಂ ಪ್ರೇಕ್ಷ್ಯ ರಾಘವಃ । ಧನುಷಾ ಪ್ರತಿಜಗ್ರಾಹ ವಿಧೂನ್ವನ್ಸಾಯಕಾನ್ಶಿತಾನ್ ॥೯॥ ಸ ಸಂಪ್ರಹಾರಸ್ತುಮುಲೋ ರಾ
ಮತ್ರಿಶಿರಸೋರ್ಮಹಾನ್ । ಬಭೂವಾತೀವ ಬಲಿನೋಃ ಸಿಂಹಕುಂಜರಯೋರಿವ ॥೧೦॥ ತತಸ್ತ್ರಿಶಿರಸಾ ಬಾಣೈರ್ಲಲಾಟೇ

---

ಲೋಭಾತ್-ಮರಣದಲ್ಲಿ ಆಸಕ್ತಿಯಿಂದ, ಪ್ರಸಾದಿತಃ-ಸಮಾಧಾನಗೊಳಿಸಲ್ಪಟ್ಟವನು, ತ್ರಿಶಿರಾಃ-ತ್ರಿಶಿರಸ್ಕನು, ಖರೇಣ-ಖರಾಸುರನಿಂದ ಗಚ್ಛ-ಹೋಗು, ಯುದ್ಧ್ಯ-ಯುದ್ಧ ಮಾಡು, ಇತಿ-ಇಂತೆಂದು. ಅಭ್ಯನುಜ್ಞಾತಃ-ಸಮ್ಮತಿಗೊಳ್ಳಪಟ್ಟವನಾಗಿ, ರಾಘವಾಭಿಮುಖಃ-ಶ್ರೀರಾಮನಿಗೆ ಅಭಿಮುಖನಾಗಿ. ಯಯೌ-ತೆರಳಿದನು ॥೬॥ ಭಾಸ್ವತಾ-ಹೊಳೆಯುತ್ತಿರುವ, ವಾಜಿಯುಕ್ತೇನ-ಕುದುರೆಗಳಿಂ ಕಟ್ಟಲ್ಪಟ್ಟ. ರಥೇನೈವ-ರಥದಿಂದಲೇ ತ್ರಿಶೃಂಗಃ-ಮೂರುಕಲಶಗಳುಳ್ಳ, ಪರ್ವತ ಇವ-ಬೆಟ್ಟದಂತೆ. ರಣೇ-ಕಾಳಗದಲ್ಲಿ, ರಾಮಂ-ಶ್ರೀರಾಮನನ್ನು ಕುರಿತು, ಅಭ್ಯದ್ರವತ್-ಓಡಿಬಂದನು ॥೭॥ ಸಃ-ಆ ತ್ರಿಶಿರಸ್ಕನು, ಮಹಾಮೇಘ ಇವ-ದೊಡ್ಡ ಮೇಘದಂತೆ, ಶರಧಾರಾಸಮೂಹಾನ್-ಬಾಣಧಾರೆಯ ಪರಂಪರೆಯನ್ನು ಉತ್ಸೃಜನ್-ಬಿಡುತ್ತಿರುವವನಾಗಿ ಜಲಾರ್ದ್ರಸ್ಯ-ನೀರಿನಿಂ ನೆನೆದುಹೋದ, ದುಂದುಭೇಃ-ಭೇರಿಗೆ, ಸದೃಶಂ-ಸಮಾನವಾದ, ನಾದಂ-ಧ್ವನಿಯನ್ನು, ವ್ಯಸೃಜತ್-ಬಿಟ್ಟನು ॥೮॥ (ಮಾಂ ನಿಯೋಜಯೇತ್ಯಾದಿ ಶ್ಲೋಕ ಚತುಷ್ಟಯಕ್ಕೆ, ವಾಸ್ತವಾರ್ಥವಾದರೆ, ಹೇ ಖರ-ಎಲೈ ಖರನೇ, ಸಂಯುಗೇ-ಕಾಳಗದಲ್ಲಿ, ರಾಮಂ-ಶ್ರೀರಾಮನನ್ನು, ತೇನ-ಆ ಶ್ರೀರಾಮನಿಂದ, ವಿನಿಪಾತಿತಂ-ಕೆಡಹಲ್ಪಟ್ಟ, ಸೈನ್ಯಂ ಚ-ಸೈನ್ಯವನ್ನು ಪಶ್ಯ-ನೋಡು, ಅತಃ-ಆ ಕಾರಣದ ದೆಸೆಯಿಂದ. ತ್ವಂ-ನೀನು, ಸಾಹಸಾತ್-ರಣೋದ್ಯೋಗದ ದೆಸೆಯಿಂದ, ನಿವರ್ತಸ್ವ-ಹಿಂದಕ್ಕೆ ಹೋಗು, ಮಾಂ-ನನ್ನನ್ನು, ನಿಯೋಜಯ-ಆಜ್ಞಾಪಿಸು, ಸರ್ವರಕ್ಷಸಾಂ-ಸರ್ವರಾಕ್ಷಸರಿಗೂ, ಹಂತಾರಂ-ಸಂಹಾರಕನಾದ, ರಾಮಂ-ಶ್ರೀರಾಮನನ್ನು, ಯಥಾ-ಯಥಾವತ್ಸ್ಥಿತಿಯಾಗಿ. ಅಹಂ-ನಾನು. ಪ್ರತಿಜಾನಾಮಿ-ಒಲ್ಲೆನು. ಸರ್ವಂ-ಸಮಸ್ತವಾದ, ಆಯುಧಂ-ಆಯುಧವನ್ನು ಆಲಭೇ-ಗ್ರಹಿಸುತ್ತೇನೆ, ಅಹಂ-ನಾನು, ಅಸ್ಯ ರಾಮಸ್ಯ-ಈ ಶ್ರೀರಾಮನಿಗೆ, ಮೃತ್ಯುರ್ವಾ-ಮೃತ್ಯುವೋ ಯೇನು. ಏಷೋ ವಾ-ಈ ಶ್ರೀರಾಮನೇ, ಸಮರೇ-ಕಾಳಗದಲ್ಲಿ, ಮಮ-ನನಗೆ. ಮೃತ್ಯುಃ-ಮೃತ್ಯುವು, ಅತಃ-ಈ ಕಾರಣದ ದೆಸೆಯಿಂದ, ತ್ವಂ-ನೀನು, ಮಹೋತ್ಸಾಹಾತ್-ಬಹಳ ಸಂತೋಷದಿಂದ, ನಿವರ್ತಸ್ವ-ಹಿಂದಕ್ಕೆ ಹೋಗು, ರಾಮೇ-ಶ್ರೀರಾಮನು, ಅಹತೇಸತಿ-ಹೊಡೆಯಲ್ಪಡದಿರುವವನಾಗುತ್ತಿರಲಾಗಿ. ಮಯಿ ಚ-ನಾನು, ನಿಹತೇಸತಿ-ಹೊಡೆಯಲ್ಪಟ್ಟವನಾಗುತ್ತಿರಲಾಗಿ, ಪ್ರಹೃಷ್ಟಃ-ಸಂತೋಷಗೊಂಡ, ತ್ವಂ-ನೀನು, ರಾಮಂ ಪ್ರತಿ-ಶ್ರೀರಾಮನಂ ಕುರಿತು, ಸಂಯುಗಾಯ-ಯುದ್ಧಕ್ಕಾಗಿ. ಉಪಯಾಸ್ಯಸಿ, ಹೋಗು, ಅಥವಾ ಜನಸ್ಥಾನಂ ವಾ-ಜನಸ್ಥಾನವಂ ಕುರಿತಾದರೂ. ಉಪಯಾಸ್ಯಸಿ-ಹೋಗುವವನಾಗು,) ॥೮॥ ರಾಘವಃ-ಶ್ರೀರಾಮನು. ಆಗಚ್ಛಂತಂ-ಬರುತ್ತಿರುವ, ತ್ರಿಶಿರಸಂ-ತ್ರಿಶಿರಸ್ಕನೆಂಬ, ರಾಕ್ಷಸಂ-ರಕ್ಕಸನನ್ನು. ಪ್ರೇಕ್ಷ್ಯ-ಕಂಡು, ಧನುಷಾ-ಧನುಸ್ಸಿನಿಂದ, ಶಿತಾನ್-ತೀಕ್ಷ್ಣಗಳಾದ. ಸಾಯಕಾನ್-ಬಾಣಗಳನ್ನು, ವಿಧೂನ್ವನ್-ಕೊಡಹುತ್ತಿರುವವನಾಗಿ. ಪ್ರತಿಜಗ್ರಾಹ-ಎದುರುಗೊಂಡನು ॥೯॥ ಬಲಿನೋಃ-ಬಲವಂತರಾದ, ರಾಮತ್ರಿಶಿರಸೋಃ-ಶ್ರೀರಾಮ ತ್ರಿಶಿರಸ್ಕರಿಬ್ಬರಿಗೂ, ಸಿಂಹಕುಂಜರಯೋರಿವ-ಸಿಂಹ ಆನೆಗಳಂತೆ, ಮಹಾನ್-ದೊಡ್ಡದಾದ, ತುಮುಲಃ-ಸಂಕುಲವಾದ. ಸಸಂಪ್ರಹಾರಃ-ಆ ಕಾಳಗವು, ಅತೀವ-ಬಹಳವಾಗಿ, ಬಭೂವ-ಆಯಿತು. ॥೧೦॥ ತತಃ-

---

ನು ಬರುವವನಾಗು, ಎಂದು ತ್ರಿಶಿರಸ್ಕನು ಮರಣಾಶಕ್ತಿಯಿಂದ ಆ ಖರಾಸುರನಂ ಸಮಾಧಾನಗೊಳಿಸಿ, ಆತನಿಂದಲೂ ಅಪ್ಪಣೆಯಂ ಪಡೆದು, ಶ್ರೀರಾಮನಿಗೆ ಅಭಿಮುಖವಾಗಿ ಬಂದನದೆಂತೆನೆ:— ॥೬॥ ಕುದುರೆಗಳು ಕಟ್ಟಿದ ಬಹು ಪ್ರಕಾಶಿಸುವ ರಥದಿಂದ, ಮೂರುಶಿಖರಗಳುಳ್ಳ ಪರ್ವತದಂತೆ ಆ ರಣರಂಗದಲ್ಲಿ ಶ್ರೀರಾಮನಂ ಕುರಿತು ಓಡಿಬಂದು. ಮಹಾ ಮೇಘದಂತೆ ಬಾಣವರ್ಷವಂ ಸುರಿಸುತ್ತಾ, ಭೇರಿಗೆ ಸಮಾನವಾದ ಬಾಯಂ ತೆರೆದನು [ಈ ನಾಲ್ಕು ಶ್ಲೋಕಂಗಳಿಗೆ ತತ್ತ್ವಾಭಿಪ್ರಾಯವೇನೆಂದರೆ,—ಎಲೈ ಖರಾಸುರನೇ! ರಣಶೂರನಾದ ಶ್ರೀರಾಮನನ್ನೂ ಆತನಿಂದ ಹೊಡೆಯಲ್ಪಟ್ಟ ನಮ್ಮ ಸೈನ್ಯವನ್ನೂ ಸಹ ನೋಡಿ, ನೀನು ಈ ಯುದ್ಧಪ್ರಯತ್ನವಂ ಬಿಡುಬಿಡು; ಮಹಾ ಪರಾಕ್ರಮಿಯಹ ರಾಕ್ಷಸ ಸಂಹಾರಕನಾದ ಶ್ರೀರಾಮನು ಯಥಾವತ್ಸ್ಥಿತಿಯಾಗಿರುವವನೆಂದು ನನಗೆ ತಿಳಿವದು; ನಾನು ಆಯುಧಸ್ವೀಕಾರವಂ ಗೈಯ್ಯುವೆನು, ನಾನು ಆ ಶ್ರೀರಾಮನಿಗೆ ಮೃತ್ಯುವೋಯೇನು (ಮೃತ್ಯುವಲ್ಲ) ಮತ್ತೇನೆಂದರೆ,—ಈ ಶ್ರೀರಾಮನೇ ನನಗೆ ಮೃತ್ಯುವಾದಕಾರಣ ನೀನು ಬಹು ಸಂತೋಷದಿಂದ ಹಿಂದಕ್ಕೆ ತಿರುಗುವವನಾಗು, ರಾಮನು ಮರಣವನ್ನೈದದೆ ನಾನು ಮೃತನಾಗಲೂ, ಬಳಿಕ ನೀನು ಕಾಳಗಕ್ಕೆ ಬರುವವನಾಗು, (ಅಥವಾ-ಜನಸ್ಥಾನಕ್ಕೆ ಸಾರುವವನಾಗು) ಎಂದು ತ್ರಿಶಿರಸ್ಕನು ಖರನಿಗೆ ನುಡಿದನೆಂದು ಭಾವವು] ॥೮॥ ಅನಂತರದಲ್ಲಿ ಶ್ರೀರಾಮನು ಧನುಷ್ಟಂಕಾರವಂ ಗೈಯುತ್ತಿರುವವನಾಗಿ, ಆ ತ್ರಿಶಿರಸ್ಕನೆಂಬ ರಾಕ್ಷಸನನ್ನು ಎದುರುಗೊಂಡನು ॥೯॥ ಬಳಿಕ ಸಿಂಹವೂ ಆನೆಯೂ ಸಹ ಹೊಡೆದಾಡುವಂತೆ ಮಹಾ ಬಲಶಾಲಿಗಳಾದ ಆ ಶ್ರೀರಾಮನಿಗೂ

ತಾಡಿತಸ್ತ್ರಿಭಿಃ । ಅಮರ್ಷೀ ಕುಪಿತೋ ರಾಮಸ್ಸಂರಬ್ಧ ಇದಮಬ್ರವೀತ್ ॥೧೧॥ ಅಹೋ ವಿಕ್ರಮಶೂರಸ್ಯ ರಾಕ್ಷಸಸ್ಯೇ
ದೃಶಂ ಬಲಂ । ಪುಷ್ಪೈರಿವ ಶರೈರ್ಯಸ್ಯ ಲಲಾಟೇಽಸ್ಮಿ ಪರಿಕ್ಷತಃ । ಮಮಾಪಿ ಪ್ರತಿಗೃಹ್ಣೀಷ್ವ ಶರಾಂಶ್ಚಾಪಗುಣಚ್ಯುತಾನ್ ।
ಏವಮುಕ್ತ್ವಾ ತು ಸಂರಬ್ಧಶ್ಶರಾನಾಶೀವಿಷೋಪಮಾನ್ । ತ್ರಿಶಿರೋವಕ್ಷಸಿ ಕ್ರುದ್ಧೋ ನಿಜಘಾನ ಚತುರ್ದಶ ॥೧೩॥ ಚ
ತುರ್ಭಿಸ್ತುರಗಾನಸ್ಯ ಶರೈಸ್ಸನ್ನತಪರ್ವಭಿಃ । ನ್ಯಪಾತಯತ ತೇಜಸ್ವೀ ಚತುರಸ್ತಸ್ಯ ವಾಜಿನಃ ॥೧೪॥ ಅಷ್ಟಭಿಸ್ಸಾ
ಯಕೈಸ್ಸೂತಂ ರಥೋಪಸ್ಥೇ ನ್ಯಪಾತಯತ್ । ರಾಮಶ್ಚಿಚ್ಛೇದ ಬಾಣೇನ ಧ್ವಜಂ ಚಾಸ್ಯ ಸಮುಚ್ಛ್ರಿತಂ ॥೧೫॥ ತ
ತೋ ಹತರಥಾತ್ತಸ್ಮಾದುತ್ಪತಂತಂ ನಿಶಾಚರಂ । ಬಿಭೇದ ರಾಮಸ್ತಂ ಬಾಣೈರ್ಹೃದಯೇ ಸೋಽಭವಜ್ಜಡಃ ॥೧೬॥ ಸಾ
ಯಕೈಶ್ಚಾಪ್ರಮೇಯಾತ್ಮಾ ಸಾಮರ್ಷಸ್ತಸ್ಯ ರಕ್ಷಸಃ । ಶಿರಾಂಸ್ಯಪಾತಯದ್ರಾಮೋ ವೇಗವದ್ಭಿಸ್ತ್ರಿಭಿಶ್ಶಿತೈಃ ॥೧೭॥
ಸ ಭೂಮೌ ರುಧಿರೋದ್ಗಾರೀ ರಾಮಬಾಣಾಭಿಪೀಡಿತಃ । ನ್ಯಪತತ್ಪತಿತೈಃ ಪೂರ್ವಂ ಸ್ವಶಿರೋಭಿರ್ನಿಶಾಚರಃ ॥೧೮॥ ಹತ

---

ಬಳಿಕ, ತ್ರಿಶಿರಸಾ-ತ್ರಿಶಿರಸ್ಸಿನಿಂದ, ತ್ರಿಭಿರ್ಬಾಣೈಃ-ಮೂರು ಬಾಣಗಳಿಂದ, ಲಲಾಟೇಚ-ಹಣೆಯಲ್ಲಿ. ತಾಡಿತಃ-ಹೊಡೆಯಲ್ಪಟ್ಟವನಾದ ಬಳಿಕ, ಅಮರ್ಷೀ-ಸಹನವಿಲ್ಲದವನಾಗಿ, ಕುಪಿತಃ-ಕೋಪಿಸಿದ್ದವನಾದ, ರಾಮಃ-ಶ್ರೀರಾಮನು, ಸಂರಬ್ಧಃ-ಕೋಪದಿಂ ಕೂಡಿಕೊಂಡಂತೆ, ಇದಂ-ಈ ವಚನವನ್ನು, ಅಬ್ರವೀತ್-ನುಡಿದನು ॥೧೧॥ ಯಸ್ಯ-ಯಾವ ರಕ್ಕಸನ, ಶರೈಃ ಬಾಣಗಳಿಂದಂತೆ, ಲಲಾಟೇ-ಫಾಲಪ್ರದೇಶದಲ್ಲಿ. ಪರಿಕ್ಷತಃ-ಹೊಡೆಯಲ್ಪಟ್ಟವನು, ಅಸ್ಮಿ-ಆದೆನೋ. ವಿಕ್ರಮಶೂರಸ್ಯ-ಪರಾಕ್ರಮದಿಂ ಶೂರನಾದ. ತಸ್ಯ ರಾಕ್ಷಸಸ್ಯ-ಆ ರಾಕ್ಷಸನಿಗೆ, ಬಲಂ-ಶೌರ್ಯವು, ಈದೃಶಂ-ಇಂಥಾ ದ್ದು. ಅಹೋ-ಆಶ್ಚರ್ಯವು ॥೧೨॥ ಮಮ-ನನ್ನ, ಚಾಪಗುಣಚ್ಯುತಾನ್-ಧನುಸ್ಸಿನ ಹೆದೆಯಿಂದ ಜಾರುತ್ತಿರುವ ಶರಾನಪಿ ಬಾಣಗಳನ್ನು ಪ್ರತಿಗೃಹ್ಣೀಷ್ವ-ಸ್ವೀಕರಿಸು, ಏವಂ-ಈಪರಿಯಾಗಿ, ಉಕ್ತ್ವಾತು-ಹೇಳಿಯಾದಬಳಿಕ, ಕ್ರುದ್ಧಃ-ಕೋಪಿಸಿದವನಾಗಿ, ಸಂರಬ್ಧಃ-ತ್ವರೆಯುಳ್ಳವನಾಗಿ, ಆಶೀವಿಷೋಪಮಾನ್-ಸರ್ಪಗಳಿಗೆ ಸಮಾನವಾದ, ಚತುರ್ದಶ-ಹದಿನಾಲ್ಕಾದ, ಶರಾನ್-ಬಾಣಗಳನ್ನು, ತ್ರಿಶಿರೋವಕ್ಷಸಿ-ತ್ರಿಶಿರಸ್ಸಿನ ಎದೆಯಲ್ಲಿ, ನಿಜಘಾನ-ಹೊಡೆದನು ॥೧೩॥ ತೇಜಸ್ವೀ-ಪರಾಕ್ರಮವಂತನಾದ ರಾಮನು, ಸನ್ನತಪರ್ವಭಿಃ-ಬಾಗಿದ ಕೊಣೆಗಳುಳ್ಳ, ಚತುರ್ಭಿಃ-ನಾಲ್ಕಾದ, ಶರೈಃ-ಬಾಣಗಳಿಂದ. ತಸ್ಯ-ಆ ಈ ತ್ರಿಶಿರಸ್ಸಿನ, ಚತುರಃ-ನಾಲ್ಕಾದ, ವಾಜಿನಃ-ಕುದುರೆಗಳನ್ನು. ನ್ಯಪಾತಯತ-ಕೆಡಹಿದನು ॥೧೪॥ ಅಷ್ಟಭಿಃ ಸಾಯಕೈಃ-ಎಂಟಾದ ಬಾಣಗಳಿಂದ. ಸೂತಂ-ಸಾರಥಿಯನ್ನು, ರಥೋಪಸ್ಥೇ-ರಥದ ನಡುಭಾಗದ ಪೆಠೆಯಿಂದ, ನ್ಯಪಾತಯತ್-ಕೆಡಹಿದನು ರಾಮಃ-ಶ್ರೀರಾಮನು ಬಾಣೇನ-ಬಾಣದಿಂದ, ಅಸ್ಯ-ಈ ತ್ರಿಶಿರಸ್ಸಿನ, ಸಮುಚ್ಛ್ರಿತಂ-ಅತ್ಯುನ್ನತವಾದ. ಧ್ವಜಂಚ-ನಿಶಾಣಿಯನ್ನೂ. ಚಿಚ್ಛೇದ-ಕತ್ತರಿಸಿದನು ॥೧೫॥ ತತಃ-ಬಳಿಕ. ತಸ್ಮಾತ್-ಆ, ಹತರಥಾತ್-ಹೊಡೆಯಲ್ಪಟ್ಟ ಸಾರಥಿ ಕುದುರೆಗಳುಳ್ಳ, ರಥದಮೇಲಿಂದ. ಉತ್ಪತಂತಂ-ಹಾರುತ್ತಿರುವ. ತಂನಿಶಾಚರಂ-ಆ ರಾಕ್ಷಸನನ್ನು, ರಾಮಃ-ಶ್ರೀರಾಮನು, ಬಾಣೈಃ-ಬಾಣಗಳಿಂದ, ಹೃದಯೇ-ಎದೆಯಲ್ಲಿ, ಬಿಭೇದ-ಭೇದಿಸಿದನು. ಸಃ-ಆ ತ್ರಿಶಿರಸನು, ಜಡಃ-ಸ್ತಬ್ಧನು, ಅಭವತ್-ಆದನು ॥೧೬॥ ಅಪ್ರಮೇಯಾತ್ಮಾ-ಅಪರಿಮಿತವಾದ ಧೈರ್ಯವುಳ್ಳ, ರಾಮಃ ಶ್ರೀರಾಮನು ವೇಗವದ್ಭಿಃ-ವೇಗವತ್ತುಳ್ಳ ಶಿತೈಃ-ಹರಿತವಾದ. ತ್ರಿಭಿಸ್ಸಾಯಕೈಃ-ಮೂರು ಬಾಣಗಳಿಂದ. ಸಾಮರ್ಷಃ-ಕೋಪದಿಂದೊಡಗೂಡಿದ್ದವನಾಗಿ, ತಸ್ಯರಕ್ಷಸಃ ಆ ತ್ರಿಶಿರಸ್ಸಿನ, ಶಿರಾಂಸಿ-ತಲೆಗಳನ್ನು, ಅಪಾತಯತ್-ಕೆಡುಹಿದನು ॥೧೭॥ ರಾಮಬಾಣಾಭಿಪೀಡಿತಃ-ಶ್ರೀರಾಮನ ಬಾಣದಿಂ ಹೊಡೆಯಲ್ಪಟ್ಟ, ನಿಶಾಚರಃ-ಆ ರಕ್ಕಸನು. ಪೂರ್ವಂ ಮುಂಚಿತವಾಗಿ, ಪತಿತೈಃ ಬೀಳುತ್ತಿರುವ, ಸ್ವಶಿರೋಭಿಃ-ತನ್ನ ಶಿರಸ್ಸುಗಳೊಡನೆ. ರುಧಿರೋದ್ಗಾರೀ-ರಕ್ತವಂ ಸು

---

ತ್ರಿರಸ್ಕನಿಗೂ ಸಹ ಸಂಕುಳವಾದ ಸಂಗರವು ಸಂಭವಿಸಿತದೆಂತೆನೆ;—॥೧೦॥ ಅನಂತರದಲ್ಲಿ ಶ್ರೀರಾಮನು ತ್ರಿಶಿರ
ಸ್ಕನಿಂದ ಮೂರುಬಾಣಂಗಳಿಂದ ಲಲಾಟಪ್ರದೇಶದಲ್ಲಿ ಹೊಡೆಯಲ್ಪಟ್ಟವನಾಗಿ, ಬಹು ಕೋಪವನ್ನೈದಿ ಆ ತ್ರಿಶಿರ
ನಂ ಕುರಿತಿಂತೆಂದನು ॥೧೧॥ ನಿನ್ನಿಂದ ಬಿಡಲ್ಪಟ್ಟ ಮೂರುಬಾಣಂಗಳು ಪುಷ್ಪಂಗಳಂತೆ ನನ್ನ ಲಲಾಟಪ್ರದೇಶದಲ್ಲಿ
ಬಿದ್ದಿಹವಾದಕಾರಣ, ನಾನು ಪರಾಕ್ರಮದಿಂದ ಶೂರನಾದ ನಿನ್ನ ಶಕ್ತಿಯು ಎಷ್ಟಾಶ್ಚರ್ಯಕರವಾದದ್ದು? ಈಗ
ನನ್ನ ಕೋದಂಡದಿಂದ ಬಿಡಲ್ಪಡುವ ನಿಡುಸರಳುಗಳನ್ನು ನೀನು ಸ್ವೀಕರಿಸುವವನಾಗೆಂದು ನುಡಿದು, ಕಡುಕೋ
ಪವುಳ್ಳವನಾಗಿ, ಸರ್ಪಸದೃಶವಾದ ಹದಿನಾಲ್ಕು ಬಾಣಂಗಳಂ ತ್ರಿಶಿರಸ್ಕನ ವಕ್ಷಸ್ಥಲದಲ್ಲಿ ಪ್ರಯೋಗಿಸಿದನ
ದೆಂತೆನೆ,—ಎಂಟು ನಿಡುಗೋಲುಗಳಿಂದ ಸಾರಥಿಯಂ ಕೆಡಹಿ, ಮತ್ತೊಂದು ಬಾಣದಿಂದ ಅತ್ಯುನ್ನತವಾದ ಧ್ವಜ
ವಂ ಭೇದಿಸಿದಬಳಿಕ, ಹತವಾದ ಅಶ್ವಂಗಳುಳ್ಳ ರಥದಿಂದ ಹಾರಿಹೋಗುತ್ತಿರುವ ಆ ತ್ರಿಶಿರಸ್ಕನನ್ನು ಎದೆಯಲ್ಲಿ
ಬಾಣಂಗಳಿಂದ ಹೊಡದವನಾಗಲೂ, ಆ ತ್ರಿಶಿರಸ್ಕನು ಸ್ತಬ್ಧತೆಯನ್ನೈದಿದನು ॥೧೬॥ ಆಗ ಅಪರಿಮಿತಧೈರ್ಯಶಾಲಿ
ಯಾದ ಶ್ರೀರಾಮನು, ಬಹು ವೇಗವತ್ತುವಾದ ಹದವಾಗಿರುವ ಮೂರುಬಾಣಂಗಳಿಂದ ಆ ತ್ರಿಶಿರಸ್ಕನ ಮೂರು ಶಿರ
ಸ್ಸುಗಳಂ ಕೆಡಹಿದವನಾಗಲೂ, ಆ ತ್ರಿಶಿರಸ್ಕನು ಪ್ರಥಮತಃ ಬೀಳುತಿರುವ ಮತ್ತು ರಕ್ತಸ್ರಾವಿಯಾದ ತನ್ನ ಶಿರ
ಸ್ಸುಗಳಿಂ ಕೂಡಗೂಡಿ, ನೆಲದಲ್ಲಿ ಬಿದ್ದನು ॥೧೮॥ ಅನಂತರದಲ್ಲಿ ಹತಶೇಷರಾದ ರಾಕ್ಷಸರು ಪರಾಜಯವನ್ನೈದಿ

ಶೇಷಾಸ್ತತೋಭಗ್ನಾ ರಾಕ್ಷಸಾಃ ಖರಸಂಶ್ರಯಾಃ । ದ್ರವಂತಿಸ್ಮ ನತಿಷ್ಠಂತಿ ವ್ಯಾಘ್ರತ್ರಸ್ತಾ ಮೃಗಾ ಇವ ॥ ತಾನ್ ಖರೋದ್ರ
ವತೋದೃಷ್ಟ್ವಾ ನಿವರ್ತ್ಯ ರುಷಿತಸ್ಸ್ವಯಂ । ರಾಮಮೇವಾಭಿದುದ್ರಾವ ರಾಹುಶ್ಚಂದ್ರಮಸಂಯಥಾ

—*** ಇತಿಶ್ರೀಮದಾರಣ್ಯಕಾಂಡೇ-ಸಪ್ತವಿಂಶಸ್ಸರ್ಗಃ. ***—

ನಿಹತಂ ದೂಷಣಂ ದೃಷ್ಟ್ವಾ ರಣೇ ತ್ರಿಶಿರಸಾ ಸಹ । ಖರಸ್ಯಾಪ್ಯಭವತ್ತ್ರಾಸೋ ದೃಷ್ಟ್ವಾ ರಾಮಸ್ಯ ವಿಕ್ರಮಂ ॥೧॥
ಸ ದೃಷ್ಟ್ವಾ ರಾಕ್ಷಸಂ ಸೈನ್ಯಮವಿಷಹ್ಯಂ ಮಹಾಬಲಂ । ಹತಮೇಕೇನ ರಾಮೇಣ ತ್ರಿಶಿರೋದೂಷಣಾವಪಿ । ತದ್ಬಲಂ ಹತ
ಭೂಯಿಷ್ಠಂ ವಿಮನಾಃ ಪ್ರೇಕ್ಷ್ಯ ರಾಕ್ಷಸಃ । ಆಸಸಾದ ಖರೋ ರಾಮಂ ನಮುಚಿರ್ವಾಸವಂ ಯಥಾ ॥೩॥ ವಿಕೃಷ್ಯ ಬಲವ
ಚ್ಚಾಪಂ ನಾರಾಚಾನ್ ರಕ್ತಭೋಜನಾನ್ । ಖರಶ್ಚಿಕ್ಷೇಪ ರಾಮಾಯ ಕ್ರುದ್ಧಾನಾಶೀವಿಷಾನಿವ ॥೪॥ ಜ್ಯಾಂ ವಿಧೂನ್ವನ್ ಸುಬ
ಹುಶಶ್ಶಿಕ್ಷಯಾಸ್ತ್ರಾಣಿ ದರ್ಶಯನ್ । ಚಚಾರ ಸಮರೇ ಮಾರ್ಗಾನ್ ಶರೈ ರಥಗತಃ ಖರಃ ॥೫॥ ಸ ಸರ್ವಾಶ್ಚ ದಿಶೋ ಬಾಣೈಃ

---

ರಿಯುತ್ತಿರುವನಾಗಿ. ಭೂಮೌ-ನೆಲದಲ್ಲಿ, ನ್ಯಪತತ್-ಬಿದ್ದನು ॥೧೪॥ ॥ ತತಃ-ಬಳಿಕ. ಹತಶೇಷಾಃ-ಹತ-ಹೊಡೆಯಲ್ಪಟ್ಟ ದಂಡಿನೆಲ್ಲಿ. ಶೇಷಾಃ-
ಮಿಕ್ಕಂಥಾ, ಭಗ್ನಾಃ-ಭಂಗವನ್ನು ಹೊಂದಿದ, ರಾಕ್ಷಸಾಃ-ರಕ್ಕಸರಾದ, ಖರಸಂಶ್ರಯಾಃ-ಖರನ ಸೇವಕರೆಲ್ಲರು, ವ್ಯಾಘ್ರತ್ರಸ್ತಾಃ-ಹುಲಿಯಿಂದ
ಹೆದರಿ ಕೊಳ್ಳಲ್ಪಟ್ಟ, ಮೃಗಾಃಇವ-ಜಿಗರಿಗಳಂತೆ, ದ್ರವಂತಿಸ್ಮ-ಓಡಿದರಷ್ಟೆ, ನತಿಷ್ಠಂತಿ-ಒಂದುಕಡೆ ಇರಲಿಲ್ಲ ॥೧೯॥ ॥ ಖರಃ-ಖರಾಸುರನು,
ದ್ರವತಃ-ಓಡಿಹೋಗುತ್ತಿರುವ, ತಾನ್-ಆ ರಕ್ಕಸರನ್ನು ದೃಷ್ಟ್ವಾ-ಕಂಡು, ನಿವರ್ತ್ಯ-ಹಿಂತಿರುಗಿಸಿ, ಸ್ವಯಂ-ತಾನು ರುಷಿತಃ-ಕೋಪಿಸಿದನಾಗಿ. ರಾ
ಹುಃ-ರಾಹುಗ್ರಹವು, ಚಂದ್ರಮಸಂಯಥಾ-ಚಂದಿರನಂತೆ, ರಾಮಮೇವ-ಶ್ರೀರಾಮನಂಕುರಿತೇ. ಅಭಿದುದ್ರಾವ-ಓಡಿಬಂದನು ॥೨೦॥ ॥ಸಪ್ತವಿಂಶಸ್ಸರ್ಗಃ॥

ರಣೇ-ಕಾಳಗದಲ್ಲಿ, ತ್ರಿಶಿರಸಾಸಹ-ತ್ರಿಶಿರಸ್ಕನೊಡಗೂಡಿ. ನಿಹತಂ-ಹತನಾದ. ದೂಷಣಂ-ದೂಷಣನನ್ನು, ದೃಷ್ಟ್ವಾ-ಕಂಡು, ರಾಮಸ್ಯ-
ಶ್ರೀರಾಮನ, ವಿಕ್ರಮಂಚ-ಪರಾಕ್ರಮವನ್ನೂಕೂಡ, ದೃಷ್ಟ್ವಾ-ಕಂಡು, ಖರಸ್ಯಾಪಿ-ಖರನಿಗೂ, ತ್ರಾಸಃ-ಹೆದರಿಕೆ, ಅಭವತ್-ಆಯಿತು ॥೧॥
ಮಹಾಬಲಃ-ಸಾಮರ್ಥ್ಯವುಳ್ಳ, ಸಃರಾಕ್ಷಸಃಖರಃ-ಆ ಖರಾಸುರನು, ಏಕೇನರಾಮೇಣ-ಒಬ್ಬಶ್ರೀರಾಮನಿಂದ. ಹತಂ-ಹೊಡೆಯಲ್ಪಟ್ಟ, ಅವಿಷಹ್ಯಂ-
ಸಹಿಸಲಸಾಧ್ಯವಾದ. ರಾಕ್ಷಸಂ-ರಕ್ಕಸರ ಸಂಬಂಧವಾದ, ಸೈನ್ಯಂ-ದಂಡಿನನ್ನು, ತ್ರಿಶಿರೋದೂಷಣಾವಪಿ-ತ್ರಿಶಿರಸ್ಕ ದೂಷಣರಿಬ್ಬರನ್ನೂ, ದೃ
ಷ್ಟ್ವಾ-ಕಂಡು. ಹತಭೂಯಿಷ್ಠಂ-ಹತವಾದ ಶ್ರೇಷ್ಠರಾಕ್ಷಸರುಳ್ಳ, ತದ್ಬಲಂ-ಆ ಸೈನ್ಯವನ್ನು, ಪ್ರೇಕ್ಷ್ಯ-ನೋಡಿ, ವಿಮನಾಃ-ಮನಸ್ಸಿಲ್ಲದವನಾಗಿ,
ನಮುಚಿಃ-ನಮುಚಿಯೆಂಬ ರಕ್ಕಸನು, ವಾಸವಂಯಥಾ-ದೇವೇಂದ್ರನಂತೆ. ರಾಮಂ-ಶ್ರೀರಾಮನಂಕುರಿತು, ಆಸಸಾದ-ಬಂದನು ॥೩॥ ಖರಃ-ಖರಾಸು
ರನು. ಚಾಪಂ-ಬಿಲ್ಲಿನನ್ನು ಬಲವತ್-ದೃಢವಾಗಿ, ವಿಕೃಷ್ಯ-ಸೆಳೆದು. ರಕ್ತಭೋಜನಾನ್-ರಕುತಪಾನವಮಾಡುತ್ತಿರುವ, ಕ್ರುದ್ಧಾನ್-ಕೋಪಗೊಂಡ,
ಆಶೀವಿಷಾನಿವ-ಹಾವುಗಳಂತಿರುವ, ನಾರಾಚಾನ್-ಬಾಣವಿಶೇಷಗಳನ್ನು, ರಾಮಾಯ-ಶ್ರೀರಾಮನಿಗೋಸುಗ. ಚಿಕ್ಷೇಪ-ಎಸೆದನು ॥೪॥ ರಥಗತಃ-
ರಥಾರೂಢನಾದ, ಖರಃ-ಖರಾಸುರನು. ಜ್ಯಾಂ-ಹೆದೆಯನ್ನು, ಸುಬಹುಶಃ-ಬಹಳಬಗೆಯತಾಗಿ, ವಿಧೂನ್ವನ್-ಕೊಂಕಿಸಿದವನಾಗಿ, ಶಿಕ್ಷಯಾ-ಅಸ್ತ್ರ
ವಿದ್ಯಾಭ್ಯಾಸದಿಂದ. ಅಸ್ತ್ರಾಣಿ-ಅಸ್ತ್ರಗಳನ್ನು, ದರ್ಶಯನ್-ತೋರಿಸುತ್ತಿರುವನಾಗಿ, ಸಮರೇ-ಕಾಳಗದಲ್ಲಿ, ಶರೈಃ-ಬಾಣಗಳಿಂದ, ಮಾರ್ಗಾನ್-
ನಾನಾಪ್ರಕಾರಗಳನ್ನು. ಚಚಾರ-ಮಾಡಿದನು ॥೫॥ ಮಹಾರಥಃ-ಮಹಾರಥಿಕನಾದ, ಸಃ-ಆ ಖರನು, ಬಾಣೈಃ-ಬಾಣಗಳಿಂದ, ಸರ್ವಾಃ-ಸಮಸ್ತಗಳಾದ,

---

ದವರಾಗಿ, ಹುಲಿಯಂ ಕಂಡು ಹೆದರಿದ ಮೃಗಗಳಂತೆ ದಿಕ್ಕುದಿಕ್ಕುಗಳಲ್ಲಿಯೂ ಓಡಿಬಂದರು ॥೧೯॥ ಅನಂತರದಲ್ಲಿ
ಖರಾಸುರನು ಓಡಿಪೋಗುವ ಆ ರಾಕ್ಷಸರಂ ಕಂಡು, ತಾನು ಪುನಃ ಹಿಂತಿರುಗಿ ಕಡು ಕೋಪವುಳ್ಳವನಾಗಿ, ರಾಹುವು
ಚಂದಿರನಂ ಕುರಿತು ಓಡಿಬರುವಂತೆ ಶ್ರೀರಾಮನಂ ಕುರಿತು ಓಡಿಬಂದನು ॥-* ೨೭ನೆಯ ಸರ್ಗಂ ಮುಗಿದುದು *-

ಆ ರಣರಂಗದಲ್ಲಿ ದಶರಥಪುತ್ರನಾದ ಶ್ರೀರಾಮನಿಂದ ಹೊಡೆಯಲ್ಪಟ್ಟ ಆ ತ್ರಿಶಿರಸ್ಕನನ್ನೂ ದೂಷಣನನ್ನೂ
ಶ್ರೀರಾಮನ ಪರಾಕ್ರಮವನ್ನೂ ಸಹ ಕಂಡು, ಆ ಖರಾಸುರನಿಗೂ ಸಹ ಭೀತಿಯುಂಟಾಯಿತು ॥೧॥ ಆಗ ಮಹಾ
ಪರಾಕ್ರಮಶಾಲಿಯಾದ ಆ ಖರಾಸುರನು, ಶ್ರೀರಾಮನೊರ್ವನಿಂದಲೇ ಹೊಡೆಯಲ್ಪಟ್ಟ ಆ ರಾಕ್ಷಸಸೈನ್ಯವನ್ನೂ
ದೂಷಣತ್ರಿಶಿರಸ್ಕರನ್ನೂ ಸಹ ಕಂಡು ಹತವಾಗಿರುವ ಉತ್ತಮೋತ್ತಮ ರಾಕ್ಷಸರುಳ್ಳ ಸೈನ್ಯವನ್ನು ನೋಡಿ, ಮ
ನಗೆಟ್ಟವನಾಗಿ, ನಮುಚಿಯು ಇಂದ್ರನಂ ಕುರಿತು ಬಂದ ತೆರದಿ ಶ್ರೀರಾಮನನ್ನು ಕುರಿತು ಬಂದು ಕೋದಂಡ
ವಂ ದೃಢವಾಗಿ ಸೆಳೆದು, ರಕ್ತಪಾನವಂ ಗೆಯ್ಯುವ ಸರ್ಪಂಗಳೋ ಯೇನೋ ಯೆಂಬಂತಿರುವ ನಿಡುಗೋಲುಗ
ಳಿಂದ ಶ್ರೀರಾಮನಂ ಹೊಡೆದು, ಆ ರಣರಂಗದಲ್ಲಿ ತನ್ನ ಶಸ್ತ್ರಂಗಳ ವಿದ್ಯೆಯಂ ತೋರಿಸಿ, ಬಾಣಂಗಳಿಂದ ನಾ
ನಾ ರೀತಿಗಳಾಗಿ ಯುದ್ಧವಂ ಮಾಡಿ, ಮತ್ತು ದಿಕ್ಕುದಿಕ್ಕುಗಳನ್ನು ತನ್ನ ನಿಡಿಗೋಲುಗಳಿಂದ ತುಂಬಿಸಿದವನಾ
ಗಲೂ, ಶ್ರೀರಾಮನದಂ ಕಂಡು ಧನುಷ್ಟಂಕಾರವಂ ಗೈದು ಸೈರಿಸಲಸಾಧ್ಯವಾದ ಕಿಡಿಗಳಿಂದ ಯುಕ್ತವಾದ,

ಪ್ರದಿಶಶ್ಚೈವ ಮಹಾರಥಃ । ಪೂರಯಾಮಾಸ ತಂ ದೃಷ್ಟ್ವಾ ರಾಮೋಽಪಿ ಸುಮಹದ್ಧನುಃ ॥೬॥ ಸ ಸಾಯಕೈರ್ದುರ್ವಿಷಹೈಸ್ಸ
ಸ್ಫುಲಿಂಗೈರಿವಾಗ್ನಿಭಿಃ । ನಭಶ್ಚಕಾರಾವಿವರಂ ಪರ್ಜನ್ಯ ಇವ ವೃಷ್ಟಿಭಿಃ ॥೭॥ ತದ್ಬಭೂವ ಶಿತೈರ್ಬಾಣೈಃ ಖರರಾಮವಿಸ
ರ್ಜಿತೈಃ । ಪರ್ಯಾಕಾಶಮನಾಕಾಶಂ ಸರ್ವತಶ್ಶರಸಂಕುಲಮ್ ॥೮॥ ಶರಜಾಲಾವೃತಸ್ಸೂರ್ಯೋ ನ ತದಾ ಸ್ಮ ಪ್ರಕಾಶತೇ । ಅನ್ಯೋ
ನ್ಯವಧಸಂರಂಭಾದುಭಯೋಸ್ಸಂಪ್ರಯುಧ್ಯತೋಃ ॥೯॥ ತತೋ ನಾಲೀಕನಾರಾಚೈಸ್ತೀಕ್ಷ್ಣಾಗ್ರೈಶ್ಚ ವಿಕರ್ಣಿಭಿಃ । ಆಜ
ಘಾನ ಖರೋ ರಾಮಂ ತೋತ್ರೈರಿವ ಮಹಾದ್ವಿಪಮ್ ॥೧೦॥ ತಂ ರಥಸ್ಥಂ ಧನುಷ್ಪಾಣಿಂ ರಾಕ್ಷಸಂ ಪರ್ಯವಸ್ಥಿತಮ್ । ದದೃಶುಸ್ಸರ್ವ
ಭೂತಾನಿ ಪಾಶಹಸ್ತಮಿವಾಂತಕಮ್ ॥೧೧॥ ಹಂತಾರಂ ಸರ್ವಸೈನ್ಯಸ್ಯ ಪೌರುಷೇ ಪರ್ಯವಸ್ಥಿತಮ್ । ಪರಿಶ್ರಾಂತಂ ಮಹಾಸತ್ತ್ವಂ ಮೇ
ನೇ ರಾಮಂ ಖರಸ್ತದಾ ॥೧೨॥ ತಂ ಸಿಂಹಮಿವ ವಿಕ್ರಾಂತಂ ಸಿಂಹವಿಕ್ರಾಂತಗಾಮಿನಮ್ । ದೃಷ್ಟ್ವಾ ನೋದ್ವಿಜತೇ ರಾಮಸ್ಸಿಂಹಃ ಕ್ಷು
ದ್ರಮೃಗಂ ಯಥಾ ॥೧೩॥ ತತಸ್ಸೂರ್ಯನಿಕಾಶೇನ ರಥೇನ ಮಹತಾ ಖರಃ । ಆಸಸಾದ ರಣೇ ರಾಮಂ ಪತಂಗ ಇವ ಪಾವಕಮ್ ॥೧೪॥

---

ದಿಶಶ್ಚ-ದಿಕ್ಕುಗಳನ್ನೂ ಪ್ರದಿಶಶ್ಚ-ವಿದಿಕ್ಕುಗಳನ್ನೂ, ಪೂರಯಾಮಾಸ-ತುಂಬಿಸಿದನು, ತಂ-ಆ ಖರಾಸುರನನ್ನು. ದೃಷ್ಟ್ವಾ-ಕಂಡು. ರಾಮೋಽಪಿ-ಶ್ರೀರಾಮನೂಕೂಡ, ಸುಮಹತ್-ಬಹಳ ದೊಡ್ಡದಾದ, ಧನುಃ-ಬಿಲ್ಲನ್ನು. ದಿಶಶ್ಚ ಪ್ರದಿಶಶ್ಚ-ದಿಕ್ಕು ವಿದಿಕ್ಕುಗಳನ್ನು, ಪೂರಯಾಮಾಸ-ತುಂಬಿಸಿದನು, (ಅಂದರೆ-ಧನುಷ್ಟಂಕಾರದಿಂ ಧ್ವನಿಗೊಳಿಸಿದನೆಂದು ತಾತ್ಪರ್ಯವು) ॥೬॥ ಸಃ-ಆ ಶ್ರೀರಾಮನು, ದುರ್ವಿಷಹೈಃ-ಸಹಿಸಲಸಾಧ್ಯವಾದ, ಸಸ್ಫುಲಿಂಗೈಃ-ಕಿಡಿಗಳಿಂದೊಡಗೂಡಿದ ಅಗ್ನಿಭಿರಿವ-ಬೆಂಕಿಗಳಂತಿರುವ, ಸಾಯಕೈಃ-ಬಾಣಗಳಿಂದ, ವೃಷ್ಟಿಭಿಃ-ವರ್ಷಗಳಿಂದ, ಪರ್ಜನ್ಯ ಇವ-ವರ್ಷಾಭಿಮಾನಿದೇವತೆಯಂತೆ, ನಭಃ-ಅಂತರಿಕ್ಷವನ್ನು, ಅವಿವರಂ-ಅವಕಾಶವಿಲ್ಲದ್ದನ್ನಾಗಿ, ಚಕಾರ-ಮಾಡಿದನು ॥೭॥ ಖರರಾಮವಿಸರ್ಜಿತೈಃ-ಖರನಿಂದಲೂ ಶ್ರೀರಾಮನಿಂದಲೂ ಬಿಡಲ್ಪಟ್ಟ, ಶಿತೈಃ-ಹದಹಿಡಿಯಲ್ಪಟ್ಟ, ಬಾಣೈಃ-ಬಾಣಗಳಿಂದ, ತತ್ಪರ್ಯಾಕಾಶಂ-ಎಲ್ಲಾ ಕಡೆಯಲ್ಲಿರುವ ಆ ಅಂತರಿಕ್ಷವು, ಶರಸಂಕುಲಂ-ಬಾಣಗಳಿಂ ತುಂಬಿದಂಥಾದ್ದಾಗಿ, ಸರ್ವತಃ-ಎಲ್ಲಾ ಕಡೆಯಲ್ಲಿಯೂ. ಅನಾಕಾಶಂ-ಅವಕಾಶವಿಲ್ಲದ್ದಾಗಿ, ಬಭೂವ-ಆಯಿತು ॥೮॥ ಅನ್ಯೋನ್ಯವಧಸಂರಂಭಾತ್-ಒಬ್ಬರಿಗೊಬ್ಬರು ಹೊಡೆಯುವ ವಿಷಯವಾದ ಕೋಪದಬೇಗೆಯಿಂದ, ಸಂಪ್ರಯುಧ್ಯತೋಃ-ಯುದ್ಧವಂ ಮಾಡುತ್ತಿರುವ, ಉಭಯೋಃ-ಆ ರಾಮ ಖರಾಸುರರಿಬ್ಬರ, ಶರಜಾಲಾವೃತಃ-ಬಾಣಸಮೂಹಗಳಿಂ ಮುಚ್ಚಲ್ಪಟ್ಟ. ಸೂರ್ಯಃ-ಸೂರ್ಯನು, ತದಾ-ಆಕಾಲದಲ್ಲಿ. ಪ್ರಕಾಶತೇಸ್ಮ-ಪ್ರಕಾಶಿಸಲಿಲ್ಲವಷ್ಟೆ ॥೯॥ ತತಃ-ಬಳಿಕ, ಖರಃ-ಖರಾಸುರನು, ತೀಕ್ಷ್ಣಾಗ್ರೈಃ-ಹರಿತವಾದ ತುದಿಗಳುಳ್ಳ, ನಾಲೀಕನಾರಾಚೈಃ-ನಾಲೀಕನಾರಾಚಗಳೆಂಬ ಬಾಣವಿಶೇಷಗಳಿಂದ, ವಿಕರ್ಣಿಭಿಃ-ಬಾಣವಿಶೇಷಗಳಿಂದಲೂ, ರಾಮಂ-ಶ್ರೀರಾಮನನ್ನು, ಮಹಾದ್ವಿಪಂ-ದೊಡ್ಡಾನೆಯನ್ನು, ತೋತ್ರೈರಿವ-ಅಂಕುಶದಂತೆ, ಆಜಘಾನ-ಹೊಡೆದನು ॥೧೦॥ ಸರ್ವಭೂತಾನಿ-ಸಮಸ್ತಪ್ರಾಣಿಗಳು, ರಥಸ್ಥಂ-ರಥಾರೂಢನಾಗಿ, ಪರ್ಯವಸ್ಥಿತಂ-ಇರುತ್ತಿರುವ, ಧನುಷ್ಪಾಣಿಂ-ಧನುರ್ಧಾರಿಯಾದ, ತಂ ರಾಕ್ಷಸಂ-ಆ ರಾಕ್ಷಸನನ್ನು, ಪಾಶಹಸ್ತಂ-ಪಾಶವೇ ಹಸ್ತದಲ್ಲಿ ಉಳ್ಳ. ಅಂತಕಮಿವ-ಯಮನಂತೆ, ದದೃಶುಃ-ಕಂಡರು ॥೧೧॥ ಖರಃ-ಖರಾಸುರನು. ತದಾ-ಆಕಾಲದಲ್ಲಿ. ಸರ್ವಸೈನ್ಯಸ್ಯ-ಸಮಸ್ತಸೈನ್ಯಕ್ಕೂ, ಹಂತಾರಂ-ಸಂಹಾರಕರ್ತನಾದ, ಪರಿಶ್ರಾಂತಂ-ಬಳಲಿದ. ರಾಮಂ-ಶ್ರೀರಾಮನನ್ನು, ಪೌರುಷೇ-ಪರಾಕ್ರಮದಲ್ಲಿ, ಪರ್ಯವಸ್ಥಿತಂ-ನಿಂತಿರುವ, ಮಹಾಸತ್ತ್ವಂ-ಮಹಾಬಲವಂತನನ್ನಾಗಿ, ಮೇನೇ-ತಿಳಿದನು ॥೧೨॥ ರಾಮಃ-ಶ್ರೀರಾಮನು, ಸಿಂಹಮಿವ-ಸಿಂಹದಂತೆ, ವಿಕ್ರಾಂತಂ-ಓಡ್ಯಾಡುತ್ತಿರುವ, ಸಿಂಹವಿಕ್ರಾಂತಗಾಮಿನಂ-ಸಿಂಹದ ಗಮನದಂತೆ ಗಮನವುಳ್ಳ, ತಂ-ಆ ಖರಾಸುರನನ್ನು, ಸಿಂಹಃ-ಸಿಂಹವು ಕ್ಷುದ್ರಮೃಗಂ ಯಥಾ-ಸ್ವಲ್ಪಮೃಗವನ್ನಂತೆ, ದೃಷ್ಟ್ವಾ-ಕಂಡು, ನೋದ್ವಿಜತೇ-ಹೆದರಲಿಲ್ಲ ॥೧೩॥ ತತಃ-ಬಳಿಕ, ಖರಃ-ಖರಾಸುರನು, ಸೂರ್ಯನಿಕಾಶೇನ-ಸೂರ್ಯನ ಪ್ರಭೆಗೆ ಸಮಾನವಾದ ಪ್ರಕಾಶವುಳ್ಳ, ಮಹತಾ-ದೊಡ್ಡದಾದ, ರಥೇನ-ರಥದಿಂದ, ಪತಂಗಃ-ಪತಂಗದಹುಳುವು. ಪಾವಕಮಿವ-ಅಗ್ನಿಯ

---

ಅಗ್ನಿಯಂತೆ ಹೊಳೆವ ಬಾಣಂಗಳಿಂದ, ಪರ್ಜನ್ಯನು ವರ್ಷಗಳಿಂದ ಗಗನವಂ ತುಂಬಿಸುವಂತೆ ಅಂತರಿಕ್ಷವನ್ನು ನಿರಂಧ್ರವಾಗಿ ಮಾಡಿದನು ॥೭॥ ಈ ಪ್ರಕಾರವಾಗಿ ಆ ಖರಾಸುರನಿಂದಲೂ ಶ್ರೀರಾಮನಿಂದಲೂ ಸಹ ಬಿಡಲ್ಪಡುವ ಆ ಬಾಣಂಗಳಿಂದ ಅವರೀರ್ವರ ಸುತ್ತುಮುತ್ತಲೂ ಗಗನವು ತುಂಬಿಕೊಂಡಿತು ॥೮॥ ಮತ್ತು ಆ ರಾಮಖರರೀರ್ವರು ಒಬ್ಬರನ್ನೊಬ್ಬರು ಹೊಡೆಯಲಿಚ್ಛೆಯಿಂದ ಕಾಳಗವಂ ಗೈಯ್ಯುವ ಸಮಯದಲ್ಲಿ ಸೂರ್ಯನು ನಿಸ್ತೇಜಸ್ಕನಾದನು ॥೯॥ ಅನಂತರದಲ್ಲಿ ಖರಾಸುರನು ಬಹು ತೀಕ್ಷ್ಣವಾದ ಬಾಣಂಗಳಿಂದ ಶ್ರೀರಾಮನನ್ನು, ಅಂಕುಶಂಗಳಿಂದ ಮದದಾನೆಯನ್ನು ತಿವಿಯುವಂತೆ ಹೊಡೆದವನಾಗಲು, ಸಮಸ್ತಪ್ರಾಣಿಗಳು ರಥಾರೂಢನಾಗಿ, ಕೋದಂಡವಂ ಪಿಡಿದಿರುವ ಆ ಖರನಂ ಕಂಡು ಯಮನೆನ್ನಾಗಿ ಅರಿತುಕೊಂಡರು ॥೧೧॥ ಆಗ ಖರಾಸುರನು, ಬಹು ಸೈನ್ಯವಂ ಹೊಡೆದು ಪರಿಶ್ರಾಂತನಾಗಿರುವನಾದರೂ ಕಾಳಗವಂ ಗೈಯ್ಯುತಲೇ ಇರುವ ಆ ಶ್ರೀರಾಮನಂ ಪರಾಕ್ರಮವಂತನಾಗಿ ತಿಳಿದುಕೊಂಡನು ॥೧೨॥ ಅನಂತರದಲ್ಲಿ ಶ್ರೀರಾಮನು ಸಿಂಹದಂದದಿ ಮೇಲ್ವಾಯ್ದು ಬರುವ ಆ ಖರಾಸುರನಂ ಮಹಾಸಿಂಹವು ಕ್ಷುದ್ರಮೃಗವಂ ಕಂಡು ಹೆದರದೆ ಇರುವನಂತೆ ಭೀತಿಯನ್ನೈದವನಾಗಲಿಲ್ಲ ॥೧೩॥ ಅನಂತರದಲ್ಲಿ ಖರಾಸುರನು ಸೂರ್ಯಸದೃಶವಾದ ರಥದಿಂದ, ಪತಂಗದ ಹುಳು ಬೆಂಕಿಯಲ್ಲಿ ಬೀಳುವಂತೆ ಆ ರಣರಂಗ

ತತೋಽಸ್ಯಸಶರಂಚಾಪಂಮುಷ್ಟಿದೇಶೇಮಹಾತ್ಮನಃ । ಖರಶ್ಚಿಚ್ಛೇದರಾಮಸ್ಯದರ್ಶಯನ್ಪಾಣಿಲಾಘವಂ ॥ ಸಪುನಸ್ತ್ವ
ಪರಾನ್ಸಪ್ತಶರಾನಾದಾಯವರ್ಮಣಿ । ನಿಜಘಾನಖರಃಕ್ರುದ್ಧಶ್ಶಕ್ರಾಶನಿಸಮಪ್ರಭಾನ್ ।೧೬। ತತಸ್ತತ್ಪ್ರಹತಂಬಾ
ಣೈಃಖರಮುಕ್ತೈಸ್ಸುಪರ್ವಭಿಃ । ಪಪಾತಕವಚಂಭೂಮೌರಾಮಸ್ಯಾದಿತ್ಯವರ್ಚಸಃ ।೧೭। ತತಶ್ಶರಸಹಸ್ರೇಣರಾಮಮ
ಪ್ರತಿಮೌಜಸಂ । ಅರ್ದಯಿತ್ವಾಮಹಾನಾದಂನನಾದಸಮರೇಖರಃ ।೧೮। ಸಶರೈರರ್ಪಿತಃಕ್ರುದ್ಧಸ್ಸರ್ವಗಾತ್ರೇಷುರಾಘವಃ ।
ರರಾಜಸಮರೇರಾಮೋವಿಧೂಮೋಽಗ್ನಿರಿವಜ್ವಲನ್ ।೧೯। ತತೋಗಂಭೀರನಿರ್ಹ್ರಾದಂರಾಮಶ್ಶತ್ರುನಿಬರ್ಹಣಃ । ಚಕಾರಾಂ
ತಾಯಸರಿಪೋಸ್ಸಜ್ಯಮನ್ಯನ್ಮಹದ್ಧನುಃ ।೨೦। ಸುಮಹದ್ವೈಷ್ಣವಂಯತ್ತದತಿಸೃಷ್ಟಂಮಹರ್ಷಿಣಾ । ವರಂತದ್ಧ
ನುರುದ್ಯಮ್ಯಖರಂಸಮಭಿಧಾವತ ।೨೧। ತತಃಕನಕಪುಂಖೈಸ್ತುಶರೈಸ್ಸನ್ನತಪರ್ವಭಿಃ । ಬಿಭೇದರಾಮಸ್ಸಂಕ್ರುದ್ಧಃ
ಖರಸ್ಯಸಮರೇಧ್ವಜಂ ।೨೨। ಸದರ್ಶನೀಯೋಬಹುಧಾವಿಕೀರ್ಣಃಕಾಂಚನಧ್ವಜಃ । ಜಗಾಮಧರಣೀಂಸೂರ್ಯೋದೇವತಾ

---

ನ್ನಂತೆ, ರಾಮಂ-ಶ್ರೀರಾಮನನ್ನುಕುರಿತು. ರಣೇ-ಕಾಳಗದಲ್ಲಿ, ಆಸಸಾದ-ಬಂದನು ॥೧೪॥ ತತಃ-ಬಳಿಕ. ಖರಃ-ಖರಾಸುರನು, ಪಾಣಿಲಾಘವಂ-ಕರಲಾಘವವನ್ನು, ದರ್ಶಯನ್-ತೋರಿಸುತ್ತಿರುವವನಾಗಿ, ಮಹಾತ್ಮನಃ-ಮಹಾಧೈರ್ಯಶಾಲಿಯಾದ, ಅಸ್ಯ ರಾಮಸ್ಯ-ಈ ಶ್ರೀರಾಮನ. ಮುಷ್ಟಿದೇಶೇ-ಹಿಡಿಯಲ್ಲಿ. ಸಶರಂ-ಬಾಣದಿಂದೊಡಗೂಡಿದ, ಚಾಪಂ-ಬಿಲ್ಲಿನನ್ನು. ಚಿಚ್ಛೇದ-ಕತ್ತರಿಸಿದನು ॥೧೫॥ ಸಖರಃ-ಆ ಖರಾಸುರನು, ಕ್ರುದ್ಧಃ-ಕೋಪಿಷ್ಠನಾಗಿ, ಪುನಃ-ಮತ್ತು, ಅಪರಾನ್-ಮತ್ತು ಕೆಲವಾದ, ಸಪ್ತ-ಏಳಾದ, ಶಕ್ರಾಶನಿಸಮಪ್ರಭಾನ್-ಇಂದ್ರಾಯುಧಕ್ಕೆ ಸಮವಾದ ಕಾಂತಿಯುಳ್ಳ, ಶರಾನ್-ಬಾಣಗಳನ್ನು, ಆದಾಯ-ತೆಗದುಕೊಂಡು, ವರ್ಮಣಿ-ಕವಚದಲ್ಲಿ, ನಿಜಘಾನ-ಹೊಡೆದನು ॥೧೬॥ ತತಃ-ಬಳಿಕ, ಖರಮುಕ್ತೈಃ-ಖರಾಸುರನಿಂ ಬಿಡಲ್ಪಟ್ಟ, ಸುಪರ್ವಭಿಃ-ಒಳ್ಳೇ ತುದಿಗಳುಳ್ಳ, ಬಾಣೈಃ-ಬಾಣಗಳಿಂದ, ಪ್ರತಿಹತಂ-ಹೊಡೆಯಲ್ಪಟ್ಟ, ಆದಿತ್ಯವರ್ಚಸಃ-ಸೂರ್ಯನ ತೇಜಸ್ಸಿಗೆ ಸಮಾನವುಳ್ಳ, ರಾಮಸ್ಯ-ಶ್ರೀರಾಮನ, ತತ್ಕವಚಂ-ಆ ಕವಚವು, ಭೂಮೌ-ನೆಲದಲ್ಲಿ. ಪಪಾತ-ಬಿತ್ತು ॥೧೭॥ ತತಃ-ಬಳಿಕ, ಖರಃ-ಖರಾಸುರನು, ಅಪ್ರತಿಮೌಜಸಂ-ಸಮಾನವಿಲ್ಲದ ಪರಾಕ್ರಮವುಳ್ಳ. ರಾಮಂ-ಶ್ರೀರಾಮನನ್ನು, ಶರಸಹಸ್ರೇಣ-ಸಾವಿರ ಬಾಣಗಳಿಂದ, ಅರ್ದಯಿತ್ವಾ-ಹೊಡೆದು ಸಮರೇ-ಕಾಳಗದಲ್ಲಿ, ಮಹಾನಾದಂ-ಕೋಲಾಹಲಧ್ವನಿಯನ್ನು, ನನಾದ-ಮಾಡಿದನು ॥೧೮॥ ರಾಘವಃ-ರಘುಕುಲೋತ್ಪನ್ನನಾದ, ಸರಾಮಃ-ಆ ಶ್ರೀರಾಮನು, ಸರ್ವಗಾತ್ರೇಷು-ಸಮಸ್ತಾವಯವಗಳಲ್ಲಿಯೂ, ಶರೈಃ-ಬಾಣಗಳಿಂದ, ಅರ್ಪಿತಃ-ಸಮರ್ಪಿಸಲ್ಪಟ್ಟವನಾಗಿ, ಕ್ರುದ್ಧಃ-ಕೋಪಿಷ್ಠನಾಗಿ, ವಿಧೂಮಃ-ಹೊಗೆಯಿಲ್ಲದ, ಅಗ್ನಿರಿವ-ಅಗ್ನಿಯಂತೆ, ಸಮರೇ-ಕಾಳಗದಲ್ಲಿ, ಜ್ವಲನ್-ಉರಿಯುತ್ತಿರುವವನಾಗಿ, ರರಾಜ-ಹೊಳೆಯುತ್ತಿದ್ದನು ॥೧೯॥ ತತಃ-ಬಳಿಕ, ಶತ್ರುನಿಬರ್ಹಣಃ-ಶತ್ರುಸಂಹಾರಕನಾದ, ಸರಾಮಃ-ಆ ಶ್ರೀರಾಮನು. ಗಂಭೀರನಿರ್ಹ್ರಾದಂ-ಗಂಭೀರಧ್ವನಿಯುಳ್ಳ, ಅನ್ಯತ್-ಮತ್ತೊಂದಾದ, ಮಹತ್-ದೊಡ್ಡದಾದ, ಧನುಃ-ಬಿಲ್ಲಿನನ್ನು, ರಿಪೋಃ-ಶತ್ರುವಿನ, ಅಂತಾಯ-ನಾಶಕ್ಕಾಗಿ. ಸಜ್ಯಂ-ಹೆದೆಯಿಂದ ಕೂಡಿದ್ದನ್ನಾಗಿ ಚಕಾರ-ಮಾಡಿದನು ॥೨೦॥ ಯತ್-ಯಾವ ಧನುಸ್ಸು, ಮಹರ್ಷಿಣಾ-ಅಗಸ್ತ್ಯಮಹರ್ಷಿಯಿಂದ, ಅತಿಸೃಷ್ಟಂ-ಕೊಡಲ್ಪಟ್ಟಿತ್ತೋ, ವೈಷ್ಣವಂ-ವಿಷ್ಣು ಸಂಬಂಧವಾದ, ಸುಮಹತ್-ದೊಡ್ಡದಾದ, ವರಂ-ಶ್ರೇಷ್ಠವಾದ. ತತ್-ಪ್ರಸಿದ್ಧವಾದ, ತದ್ಧನುಃ-ಆ ಧನುಸ್ಸಿನನ್ನು, ಉದ್ಯಮ್ಯ-ಎತ್ತಿಕೊಂಡು, ಖರಂ-ಖರಾಸುರನನ್ನುಕುರಿತು, ಸಮಭಿಧಾವತ-ಅನುಸರಿಸಿಬಂದನು ॥೨೧॥ ತತಃ-ಬಳಿಕ. ರಾಮಃ-ಶ್ರೀರಾಮನು, ಸಂಕ್ರುದ್ಧಃ-ಕೋಪಗೊಂಡವನಾಗಿ, ಸನ್ನತಪರ್ವಭಿಃ-ಬೊಗ್ಗಿಸಲ್ಪಟ್ಟ ಕೊನೆಗಳುಳ್ಳ, ಕನಕಪುಂಖೈಃ-ಚಿನ್ನದವಿಕಾರವಾದ ಕೊಂಕಿಗಳುಳ್ಳ, ಶರೈಃ-ಬಾಣಗಳಿಂದ, ಸಮರೇ-ಕಾಳಗದಲ್ಲಿ, ಖರಸ್ಯ-ಖರಾಸುರನ, ಧ್ವಜಂ-ರಥಧ್ವಜವನ್ನು ಬಿಭೇದ-ಛೇದಿಸಿದನು ॥೨೨॥ ಬಹುಧಾ-ಅನೇಕಪ್ರಕಾರವಾಗಿ, ದರ್ಶನೀಯಃ-ನೋಡ

---

ದಲ್ಲಿ ಬಂದು, ತನ್ನ ಹಸ್ತಲಾಘವವನ್ನು ತೋರಿಸುತ್ತಾ, ಶ್ರೀರಾಮನ ಧನುರ್ದಂಡವಂ ಕತ್ತರಿಸಿ, ಮತ್ತು ಸಿಡಿಲಿನಂ
ತಿರುವ ಏಳು ನಿಡುಸರಳ್ಗಳಿಂ ಶ್ರೀರಾಮನ ಮರ್ಮಸ್ಥಾನದಲ್ಲಿ ಹೊಡೆದವನಾಗಲೂ, ಆ ಶ್ರೀರಾಮನ ಕವಚವು, ಅ
ಭೇದ್ಯವಾದರೂ ಕತ್ತರಿಸಲ್ಪಟ್ಟದ್ದಾಗಿ, ನೆಲದಲ್ಲಿ ಬಿದ್ದಂಥಾದ್ದಾಯಿತು ।೧೭। ಅನಂತರದಲ್ಲಿ ಖರಾಸುರನು ಅಸ
ದೃಶವಾದ ಪರಾಕ್ರಮವುಳ್ಳ ಆ ಶ್ರೀರಾಮನಂ ಸಹಸ್ರಬಾಣಂಗಳಿಂದ ಹೊಡೆದು ಕೋಲಾಹಲಧ್ವನಿಯಂ ಗೈದವನಾ
ಗಲೂ, ಆಗ ದಶರಥನಂದನನಾದ ಶ್ರೀರಾಮನು ಸರ್ವಾವಯವಂಗಳಲ್ಲಿಯೂ ಹೊಡೆಯಲ್ಪಟ್ಟವನಾಗಿ, ಪ್ರಜ್ವಲಿ
ಸುವ ಅಗ್ನಿಯಂತೆ ಪ್ರಕಾಶಿಸುತ್ತಿದ್ದನು ।೧೯। ಅನಂತರದಲ್ಲಿ ಶತ್ರುಸಂಹಾರಕನಾದ ಶ್ರೀರಾಮನು, ದೃಢವಾಗಿ
ರುವ ಮತ್ತೊಂದು ಧನುರ್ದಂಡವಂ ತೆಗದುಕೊಂಡು, ಆ ಖರಾಸುರನ ನಾಶಕ್ಕಾಗಿ ಅದಂ ಬಿಗಿದು ಕಟ್ಟಿದವನಾ
ದನು ।೨೦। [ಆ ಧನುಸ್ಸು ಯಾವದೆಂದರೆ ನುಡಿವೆನು] ಮಹರ್ಷಿಯಾದ ಅಗಸ್ತ್ಯಮುನಿಯಿಂದ ಯಾವಕೋ
ದಂಡವು ಸೃಜಿಸಲ್ಪಟ್ಟಿತ್ತೋ, ಅಂಥಾ ವೈಷ್ಣವ ಕೋದಂಡವನ್ನು ಹಿಡಿದವನಾಗಿ ಆ ಖರನನ್ನಟ್ಟಿಕೊಂಡು ಬಂದಬ
ಳಿಕ ಬಹು ಕೋಪವುಳ್ಳವನಾಗಿ, ಸುವರ್ಣದ ಕೊಂಕಿಗಳುಳ್ಳ ಬಾಣಂಗಳಿಂದ ಆ ಖರನ ಧ್ವಜಭಂಜನವಂ ಗೈದವ
ನಾಗಲೂ, ಆ ಸುವರ್ಣವಿಕಾರವಾದ ಧ್ವಜವು ತುಂಡುತುಂಡುಗಳಾಗಿ ಬೀಳುವಾಗ, ದೇವತೆಗಳ ಆಜ್ಞೆಯಿಂದ ಭೂಮಿಗೆ

ನಾದಿನಃ ಪ್ರಾಂಜಲಯಃ |೨೩| ತಂ ಚತುರ್ಭಿಃ ಖರಃ ಕ್ರುದ್ಧೋ ರಾಮಂ ಗಾತ್ರೇಷು ಮಾರ್ಗಣೈಃ | ವಿವ್ಯಾಧ ಯುಧಿ ಮರ್ಮಜ್ಞೋ ಮಾತಂಗಮಿವ ತೋಮರೈಃ |೨೪| ಸ ರಾಮೋ ಬಹುಭಿರ್ಬಾಣೈಃ ಖರಕಾರ್ಮುಕನಿಸ್ಸೃತೈಃ | ವಿದ್ಧೋ ರುಧಿರಸಿಕ್ತಾಂಗೋ ಬಭೂವ ರುಷಿತೋ ಭೃಶಂ |೨೫| ಸ ಧನುರ್ಧನ್ವಿನಾಂ ಶ್ರೇಷ್ಠಃ ಪ್ರಗೃಹ್ಯ ಪರಮಾಹವೇ | ಮುಮೋಚ ಪರಮೇಷ್ವಾಸಃ ಷಟ್ಛರಾನಭಿಲಕ್ಷಿತಾನ್ |೨೬| ಶಿರಸ್ಯೇಕೇನ ಬಾಣೇನ ದ್ವಾಭ್ಯಾಂ ಬಾಹ್ವೋರಥಾರ್ಪಯತ್ | ತ್ರಿಭಿಶ್ಚಂದ್ರಾರ್ಧವಕ್ತ್ರೈಶ್ಚ ವಕ್ಷಸ್ಯಭಿಜಘಾನ ಹ |೨೭| ತತಃ ಪಶ್ಚಾನ್ಮಹಾತೇಜಾ ನಾರಾಚಾನ್ ಭಾಸ್ಕರೋಪಮಾನ್ | ಜಿಘಾಂಸೂ ರಾಕ್ಷಸಂ ಕ್ರುದ್ಧಸ್ತ್ರಯೋದಶ ಸಮಾದದೇ |೨೮| ತತೋಸ್ಯ ಯುಗಮೇಕೇನ ಚತುರ್ಭಿಶ್ಚತುರೋ ಹಯಾನ್ | ಷಷ್ಠೇನ ತು ಶಿರಸ್ಸಂಖ್ಯೇ ಖರಸ್ಯ ರಥಸಾರಥೇಃ | ತ್ರಿಭಿಸ್ತ್ರಿವೇಣುಂ ಬಲವಾನ್ ದ್ವಾಭ್ಯಾಮಕ್ಷಂ ಮಹಾಬಲಃ | ದ್ವಾದಶೇನ ತು ಬಾಣೇನ ಖರಸ್ಯ ಸಶರಂ ಧನುಃ | ಛಿತ್ವಾ ವಜ್ರನಿಕಾಶೇನ ರಾಘವಃ ಪ್ರಹಸನ್ನಿವ | ತ್ರಯೋದಶೇನೇಂದ್ರಸಮೋ ಬಿಭೇದ ಸಮರೇ ಖರಂ |೩೦| ಪ್ರಭಗ್ನಧನ್ವಾ ವಿರಥೋ ಹತಾಶ್ವೋ ಹತ

---

ಶಕ್ಯ, ವಿಕೀರ್ಣಾಃ-ಮುರಿಯಲ್ಪಟ್ಟ, ಕಾಂಚನಧ್ವಜಾಃ-ಭಂಗಾರದ ನಿಶಾಣೆಯು, ದೈವತಾನಾಂ-ದೇವತೆಗಳ, ಆಜ್ಞಯಾ-ಅಜ್ಞೆಯಿಂದ ಸೂರ್ಯನಂ-ಸೂರ್ಯನಂತೆ, ಧರಣೀಂ-ನೆಲವನ್ನು, ಜಗಾಮ-ಐದಿತು ||೨೩|| ಯುಧಿ-ಕಾಳಗದಲ್ಲಿ, ಮರ್ಮಜ್ಞಃ-ರಹಸ್ಯಜ್ಞನಾದ. ಖರಃ-ಖರಾಸುರನು ಕ್ರುದ್ಧಃ-ಕೋಪಿಷ್ಠನಾಗಿ, ಚತುರ್ಭಿಃ-ನಾಲ್ಕಾದ ಮಾರ್ಗಣೈಃ-ಬಾಣಗಳಿಂದ, ತೋಮರೈಃ-ಗದಾಯುಧಗಳಿಂದ. ಮಾತಂಗಮಿವ-ಆನೆಯನ್ನಂತೆ, ಗಾತ್ರೇಷು-ಅವಯವಗಳಲ್ಲಿ. ತಂರಾಮಂ-ಆ ಶ್ರೀರಾಮನನ್ನು, ವಿವ್ಯಾಧ-ಹೊಡೆದನು ||೨೪|| ಖರಕಾರ್ಮುಕನಿಸ್ಸೃತೈಃ-ಖರಾಸುರನ ಬಿಲ್ಲಿನಿಂದ ಹೊರಟು ಬರುತ್ತಿರುವ. ಬಹುಭಿಃ-ಅನೇಕಗಳಾದ. ಬಾಣೈಃ-ಬಾಣಗಳಿಂದ, ವಿದ್ಧಃ-ಹೊಡೆಯಲ್ಪಟ್ಟವನಾದ್ದರಿಂದಲೇ, ರುಧಿರಸಿಕ್ತಾಂಗಃ-ರಕ್ತದಿಂ ನನಿಯಲ್ಪಟ್ಟ, ಶರೀರವುಳ್ಳವನಾಗಿ, ಸರಾಮಃ-ಆ ಶ್ರೀರಾಮನು, ಭೃಶಂ-ಬಹಳವಾಗಿ, ರುಷಿತಃ-ಕೋಪಗೊಂಡವನು, ಬಭೂವ-ಆದನು ||೨೫|| ಧನ್ವಿನಾಂ-ಧನುರ್ಧಾರಿಗಳ್ಗೆ, ಶ್ರೇಷ್ಠಃ-ಅಗ್ರೇಸರನಾದ, ಪರಮೇಷ್ವಾಸಃ-ಶ್ರೇಷ್ಠವಾದ ಧನುಸ್ಸುಳ್ಳ, ಸಃ-ಆ ಶ್ರೀರಾಮನು, ಪರಮಾಹವೇ-ದೊಡ್ಡಯುದ್ಧದಲ್ಲಿ, ಧನುಃ-ಧನುಸ್ಸನ್ನು. ಪ್ರಗೃಹ್ಯ-ಹಿಡಿದುಕೊಂಡು, ಅಭಿಲಕ್ಷಿತಾನ್-ಪ್ರಸಿದ್ಧಗಳಾದ, ಷಟ್ಛರಾನ್-ಆರುಬಾಣಗಳನ್ನು. ಮುಮೋಚ-ಬಿಟ್ಟನು ||೨೬|| ಶಿರಸಿ-ತಲೆಯಲ್ಲಿ ಏಕೇನಬಾಣೇನ-ಒಂದುಬಾಣದಿಂದ, ದ್ವಾಭ್ಯಾಂ-ಎರಡರಿಂದ. ಬಾಹ್ವೋಃ-ಭುಜಗಳಲ್ಲಿ, ಅರ್ಪಯತ್-ಹೊಡೆದನು, ಚಂದ್ರಾರ್ಧವಕ್ತ್ರೈಃ-ಅರ್ಧಚಂದ್ರನಂತೆ ಮುಖಗಳುಳ್ಳ, ತ್ರಿಭಿಃ-ಮೂರು ಬಾಣಗಳಿಂದ, ಅಭಿಜಘಾನಹ-ಹೊಡೆದನಷ್ಟೆ ||೨೭|| ತತಃಪಶ್ಚಾತ್-ಅಬಳಿಕ, ಮಹಾತೇಜಾಃ-ಮಹಾಪ್ರತಾಪಶಾಲಿಯಾದ ಶ್ರೀರಾಮನು, ಭಾಸ್ಕರೋಪಮಾನ್-ಸೂರ್ಯನಿಗೆ ಸಮಾನವಾದ, ತ್ರಯೋದಶ-ಹದಿಮೂರುಸಂಖ್ಯೆಯುಳ್ಳ. ನಾರಾಚಾನ್-ಬಾಣವಿಶೇಷಗಳನ್ನು. ರಾಕ್ಷಸಂ-ಖರಾಸುರನನ್ನು, ಜಿಘಾಂಸುಃ-ಕೊಲ್ಲಲಪೇಕ್ಷೆಯುಳ್ಳವನಾಗಿ, ಕ್ರುದ್ಧಃ-ಕೋಪಿಷ್ಠನಾಗಿ ಸಮಾದದೇ-ತೆಗೆದುಕೊಂಡನು ||೨೮|| ತತಃ-ಬಳಿಕ. ಅಸ್ಯ-ಆ ಖರಾಸುರನ, ಯುಗಂ-ನೊಗವನ್ನು, ಏಕೇನ-ಒಂದು ಬಾಣದಿಂದ, ಚತುರ್ಭಿಃ-ನಾಲ್ಕು ಬಾಣಗಳಿಂದ, ಚತುರಃ-ನಾಲ್ಕಾದ, ಹಯಾನ್-ಕುದುರೆಗಳನ್ನು ಷಷ್ಠೇನತು ಆರನೇ ಬಾಣದಿಂದ ಸಂಖ್ಯೇ-ಕಾಳಗದಲ್ಲಿ. ಖರಸ್ಯ ಖರಾಸುರನ. ರಥಸಾರಥೇಃ-ರಥನಡೆಸುವ ಸಾರಥಿಯ, ಶಿರಃ-ತಲೆಯನ್ನು, ತ್ರಿಭಿಃ-ಮೂರುಬಾಣಗಳಿಂದ. ತ್ರಿವೇಣುಂ-ಧ್ವಜಸ್ತಂಭಕ್ಕೆ ಆಧಾರಭೂತವಾದ ದಂಡವನ್ನೂ ದ್ವಾಭ್ಯಾಂ-ಎರಡರಿಂದ, ಅಕ್ಷಂ-ಚಕ್ರಾಧಾರವಾದ ಮರವನ್ನು ದ್ವಾದಶೇನಬಾಣೇನತು-ಹನ್ನೆರಡನೇ ಬಾಣದಿಂದ, ಖರಸ್ಯ-ಖರಾಸುರನ, ಸಶರಂ-ಬಾಣದಿಂದೊಡಗೂಡಿದ, ಧನುಃ-ಧನುಸ್ಸನ್ನು. ಛಿತ್ವಾ-ಛೇದಿಸಿ, ಬಲವಾನ್-ಬಲಶಾಲಿಯಾದ. ವಜ್ರನಿಕಾಶೇನ-ವಜ್ರಾಯುಧಕ್ಕೆ ಸಮಾನವಾದ, ತ್ರಯೋದಶೇನ-ಹದಿಮೂರನೇ ಬಾಣದಿಂದ, ಸಮರೇ-ಕಾಳಗದಲ್ಲಿ, ಖರಂ-ಖರಾಸುರನನ್ನು, ಬಿಭೇದ-ಭೇದಿಸಿದನು ||೩೦||

---

ಇಳಿದು ಬರುತ್ತಿರುವ ಸೂರ್ಯನಂದದಿ ಪ್ರಕಾಶಿಸುತ್ತಿತ್ತು |೨೩| ಅನಂತರದಲ್ಲಿ ಖರಾಸುರನು ಮಹಾ ಕೋಪವುಳ್ಳವನಾಗಿ ಮರ್ಮವಂ ತಿಳಿದವನಾದ ಕಾರಣ ತೋಮರಾಯುಧಗಳಿಂದ ಆನೆಯಂ ಹೊಡಿಯುವಂತೆ ಶ್ರೀರಾಮನಂ ಮರ್ಮಸ್ಥಾನಂಗಳಲ್ಲಿ ಹೊಡದವನಾಗಲೂ, ಆ ಶ್ರೀರಾಮನು ಈಪರಿಯಾಗಿ ಹೊಡೆಯಲ್ಪಟ್ಟವನಾಗಿ ರಕ್ತದಿಂದ ತೊಯಿಸಲ್ಪಟ್ಟ ಶರೀರವುಳ್ಳವನಾಗಿ ಮಹಾ ಕೋಪವನ್ನೈದಿ ಆರುಬಾಣಗಳಂ ಬಿಟ್ಟನಲ್ಲದೇ,— |೨೬| ದಶರಥಪುತ್ರನಾದ ಆ ಶ್ರೀರಾಮನು ರಣರಂಗದಲ್ಲಿ ಒಂದುಬಾಣದಿಂದ ಶಿರಸ್ಸಿನಲ್ಲಿಯೂ ಎರಡುಬಾಣಗಳಿಂದ ತೋಳುಗಳಲ್ಲಿಯೂ, ಅರ್ಧಚಂದ್ರಾಕಾರವಾದ ಮೂರುಬಾಣಗಳಿಂದ ವಕ್ಷಸ್ಥಳದಲ್ಲಿಯೂ, ಹೊಡದ ಬಳಿಕ ಮತ್ತು ಕೋಪವುಳ್ಳವನಾಗಿ ಆ ರಾಕ್ಷಸನನ್ನು ಹೊಡೆಯಲಿಚ್ಛೆಯಿಂದ ಸೂರ್ಯಸದೃಶವಾದ ಹದಿನಾಲ್ಕು ಬಾಣಂಗಳನ್ನು ಸಂಧಾನವಂಗೈದು ನಾಲ್ಕುಬಾಣಂಗಳಿಂದ ನಾಲ್ಕು ರಥಾಶ್ವಂಗಳನ್ನು ಒಂದು ಬಾಣದಿಂದ ಸಾರಥಿಯ ಶಿರಸ್ಸನ್ನು ಮೂರು ಬಾಣಂಗಳಿಂದ ರಥದ ಮೂಕಣಿಯನ್ನು ಮತ್ತೊಂದು ಬಾಣದಿಂದ ಅವನ ಕೋದಂಡವನ್ನು ಹದಿಮೂರನೆಯದ್ದಾದ ಇನ್ನೊಂದು ಬಾಣದಿಂದ ಆ ಖರಾಸುರನನ್ನು ಹೊಡದನು |೩೦| ಈಪರಿಯಾಗಿ ಶ್ರೀರಾ

ಸಾರಥಿಃ । ಗದಾಪಾಣಿರವಪ್ಲುತ್ಯ ತಸ್ಥೌ ಭೂಮೌ ಖರಸ್ತದಾ ॥೩೦॥ ತತ್ಕರ್ಮ ರಾಮಸ್ಯ ಮಹಾರಥಸ್ಯ ಸಮೇತ್ಯ ದೇವಾಶ್ಚ ಮಹರ್ಷಯಶ್ಚ । ಅಪೂಜಯನ್ಪ್ರಾಂಜಲಯಃ ಪ್ರಹೃಷ್ಟಾಸ್ತದಾ ವಿಮಾನಾಗ್ರಗತಾಸ್ಸಮೇತಾಃ ॥೩೧॥

—*** ಇತಿ ಶ್ರೀಮದಾರಣ್ಯಕಾಂಡೇ-ಅಷ್ಟಾವಿಂಶಸ್ಸರ್ಗಃ ***—

ಖರಂತು ವಿರಥಂ ರಾಮೋ ಗದಾಪಾಣಿಮವಸ್ಥಿತಂ । ಮೃದುಪೂರ್ವಂ ಮಹಾತೇಜಾಃ ಪರುಷಂ ವಾಕ್ಯಮಬ್ರವೀತ್ ॥೧॥ ಗಜಾಶ್ವರಥಸಂಬಾಧೇ ಬಲೇ ಮಹತಿ ತಿಷ್ಠತಾ । ಕೃತಂ ಸುದಾರುಣಂ ಕರ್ಮ ಸರ್ವಲೋಕಜುಗುಪ್ಸಿತಂ ॥೨॥ ಉದ್ವೇಜನೀಯೋ ಭೂತಾನಾಂ ನೃಶಂಸಃ ಪಾಪಕರ್ಮಕೃತ್ । ತ್ರಯಾಣಾಮಪಿ ಲೋಕಾನಾಮೀಶ್ವರೋಽಪಿ ನ ತಿಷ್ಠತಿ ॥೩॥ ಕರ್ಮ ಲೋಕವಿರುದ್ಧಂ ತು ಕುರ್ವಾಣಂ ಕ್ಷಣದಾಚರ । ತೀಕ್ಷ್ಣಂ ಸರ್ವಜನೋ ಹಂತಿ ಸರ್ಪಂ ದುಷ್ಟಮಿವಾಗತಂ ॥೪॥ ಲೋಭಾತ್ಪಾಪಾನಿ ಕುರ್ವಾಣಃ ಕಾಮಾದ್ವಾ ಯೋ ನ ಬುಧ್ಯತೇ । ಭ್ರಷ್ಟಃ ಪಶ್ಯತಿ ತಸ್ಯಾಂತಂ ಬ್ರಾಹ್ಮಣೀ ಕರಕಾದಿವ ॥೫॥ ವಸತೋ ದಂಡಕಾರಣ್ಯೇ

---

ತದಾ-ಆಕಾಲದಲ್ಲಿ, ಪ್ರಭಗ್ನಧನ್ವಾ-ಮುರಿಯಲ್ಪಟ್ಟ ಧನುಸ್ಸುಳ್ಳ, ವಿರಥಃ-ರಥಹೀನನಾದ. ಹತಾಶ್ವಃ-ಸಂಹೃತವಾದ ಕುದುರೆಗಳುಳ್ಳ. ಹತಸಾರಥಿಃ-ಮೃತಪಟ್ಟ ಸಾರಥಿಯುಳ್ಳ, ಖರಃ-ಖರಾಸುರನು. ಗದಾಪಾಣಿಃ-ಗದಾಯುಧವೇ ಹಸ್ತದಲ್ಲುಳ್ಳವನಾಗಿ, ಅವಪ್ಲುತ್ಯ-ಹಾರಿ. ಭೂಮೌ-ನೆಲದಲ್ಲಿ, ತಸ್ಥೌ-ನಿಂತನು ॥೩೦॥ ಮಹಾರಥಸ್ಯ-ಮಹಾರಥಿಕನಾದ, ರಾಮಸ್ಯ-ಶ್ರೀರಾಮನ, ತತ್ ಕರ್ಮ-ಆ ವ್ಯಾಪಾರವನ್ನು. ತದಾ-ಆಕಾಲದಲ್ಲಿ. ವಿಮಾನಾಗ್ರಗತಾಃ-ವಿಮಾನಗಳ ತುದಿಗಳನ್ನು ಹೊಂದಿದಂಥಾ, ಸಮೇತಾಃ-ಗುಂಪುಕೂಡಿದ, ದೇವಾಃ-ದೇವತೆಗಳೂ. ಮಹರ್ಷಯಶ್ಚ-ಮಹರ್ಷಿಗಳೂ ಸಮೇತ್ಯ-ಗುಂಪುಕೂಡಿ. (ಯದ್ವಾ-ಸಮೇತ್ಯ-ಬಂದು) ಪ್ರಾಂಜಲಯಃ-ಅಂಜಲಿಬದ್ಧರಾಗಿ, ಅಪೂಜಯನ್-ಶ್ಲಾಘಿಸಿದರು ॥ ***ಅಷ್ಟಾವಿಂಶಸ್ಸರ್ಗಃ***

ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ. ರಾಮಃ-ಶ್ರೀರಾಮನು, ವಿರಥಂ-ರಥಹೀನನಾದ, ಗದಾಪಾಣಿಂ-ಗದಾಯುಧವೇ ಹಸ್ತದಲ್ಲುಳ್ಳ, ಅವಸ್ಥಿತಂ-ನಿಂತಿರುವ, ಖರಂ-ಖರಾಸುರನನ್ನಾದರೆ, ಮೃದುಪೂರ್ವಂ-ಮೃದುವಾದ ಅಕ್ಷರಗಳೇ ಮೊದಲುಳ್ಳ, ಪರುಷಂ-ಕಠಿನವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧॥ ಗಜಾಶ್ವರಥಸಂಬಾಧೇ-ಆನೆಗಳಿಂದಲೂ ಕುದುರೆಗಳಿಂದಲೂ ರಥಗಳಿಂದಲೂ ತುಂಬಿರುವ, ಮಹತಿ-ದೊಡ್ಡದಾದ ಬಲೇ-ಸೈನ್ಯದಲ್ಲಿ, ತಿಷ್ಠತಾ-ಇರುತ್ತಿರುವ, ತ್ವಯಾ-ನಿನ್ನಿಂದ, ಸರ್ವಲೋಕಜುಗುಪ್ಸಿತಂ-ಸರ್ವಜನರಿಗೂ ಅಸಹ್ಯವಾದ. ಸುದಾರುಣಂ-ಬಹು ಕ್ರೂರವಾದ, ಕರ್ಮ-ವ್ಯಾಪಾರವು. ಕೃತಂ-ಮಾಡಲ್ಪಟ್ಟಿತು ॥೨॥ ಭೂತಾನಾಂ-ಪ್ರಾಣಿಗಳಿಗೆ, ಉದ್ವೇಜನೀಯಃ-ಹೆದರಿಕೆಯನ್ನುಂಟುಮಾಡುವ, ಪಾಪಕರ್ಮಕೃತ್-ಪಾಪಕೃತ್ಯವನ್ನು ಮಾಡುವ, ನೃಶಂಸಃ-ಘಾತುಕನು, ತ್ರಯಾಣಾಂ ಲೋಕಾನಾಮಪಿ-ಮೂರುಲೋಕಗಳಿಗೂ. ಈಶ್ವರೋಽಪಿ-ಸಮರ್ಥನಾದರೂ, ನ ತಿಷ್ಠತಿ-ಇರುವದಿಲ್ಲ ॥೩॥ ಕ್ಷಣದಾಚರ-ಎಲೈ ರಾಕ್ಷಸನೇ, ಲೋಕವಿರುದ್ಧಂ-ಲೋಕಕ್ಕೆಲ್ಲಾ ವಿರೋಧಕರವಾದ, ಕರ್ಮ-ಕೆಲಸವನ್ನು, ಕುರ್ವಾಣಂ-ಮಾಡುತ್ತಿರುವ, ತೀಕ್ಷ್ಣಂ-ಕಠಿನನಾದ ಪುರುಷನನ್ನು, ದುಷ್ಟಂ-ದುಷ್ಟವಾದ, ಆಗತಂ-ಬಂದ, ಸರ್ಪಮಿವ-ಹಾವನ್ನಂತೆ, ಸರ್ವಜನಃ-ಸಮಸ್ತಜನವು, ಹಂತಿ-ಕೊಲೆಯುತ್ತಲೇ ॥೪॥ ಯಃ-ಯಾವನು. ಲೋಭಾತ್-ಲೋಭದಿಂದಲೇ ಆಗಲಿ, ಕಾಮಾದ್ವಾ-ಕಾಮಗುಣದಿಂದಲೇ ಆಗಲೀ, ಪಾಪಾನಿ-ಪಾಪಕೃತ್ಯಗಳನ್ನು. ಕುರ್ವಾಣಃ-ಮಾಡುತ್ತಿರುವವನಾಗಿ, ನ ಬುಧ್ಯತೇ-ತಿಳಿದುಕೊಳ್ಳುವದಿಲ್ಲವೋ, ಸಃ-ಆ ಪುರುಷನು, ಭ್ರಷ್ಟಃ-ಐಶ್ವರ್ಯದಿಂ ಚ್ಯುತಿಯನ್ನು ಹೊಂದಿ, ಬ್ರಾಹ್ಮಣೀ-ರಕ್ತಪುಚ್ಛವುಳ್ಳ ಜಿಗಣಿಯು, ಕರಕಾದಿವ-ಆನೇಕಲ್ಲಿನ ಭಕ್ಷಣದಿಂದಲೋಪಾದಿಯಲ್ಲಿ, ತಸ್ಯ-ಆ ಪಾಪಕರ್ಮಕ್ಕೆ, ಅಂತಂ-ನಾಶವನ್ನು. ಪಶ್ಯತಿ-ಕಾಣುತ್ತಲೇನೆ ॥೫॥ ಹೇ ರಾಕ್ಷಸ-ಎಲೈ ರಾಕ್ಷಸನೇ. ದಂಡಕಾರಣ್ಯೇ-ದಂಡಕಾರಣ್ಯದಲ್ಲಿ, ವಸತಃ-

---

ಮನು ಹೊಡೆದವನಾಗಲು ಆ ಖರಾಸುರನು ಭಗ್ನವಾದ ಧನುಸ್ಸು ರಥವು ಉಳ್ಳವನಾಗಿ ಹತವಾದ ಕುದುರೆಗಳು ಸಾರಥಿಯೂ ಉಳ್ಳವನಾಗಿಯೂ ಇರುವವನಾಗಿ ಗದಾಯುಧವಂ ಪಿಡಿದು ಆ ರಥದಿಂದ ಧುಮುಕಿ ನೆಲದಲ್ಲಿ ನಿಂತನು ॥೩೦॥ ಆ ಸಮಯದಲ್ಲಿ ದೇವತೆಗಳು ಮಹರ್ಷಿಗಳು ಇವರೆಲ್ಲರೂ ಶ್ರೀರಾಮಕೃತವಾದ ಈ ಕಾರ್ಯವಂ ನೋಡಿ ಶ್ಲಾಘನೆಯಂಗೈದು ಅಂಜಲಿಬದ್ಧರಾಗಿ ಸಂತೋಷದಿಂದ ಗಗನದಲ್ಲಿ ಇಂಡು ಇಂಡುಗಳಾಗಿ ಸೇರಿದರು ॥೩೧॥

—** ಆರಣ್ಯಕಾಂಡದಲ್ಲಿನ ೨೮ನೆಯ ಸರ್ಗಂ ಮುಗಿದುದು **—

ಈ ಪರಿಯಾಗಿ ರಥಹೀನನಾಗಿ ಗದಾಪಾಣಿಯಾಗಿ ನಿಂತಿರುವ ಆ ಖರಾಸುರನಂ ಕುರಿತು ಮಹಾ ತೇಜೋವಂತನಾದ ಶ್ರೀರಾಮನು ಮೃದುವಾಗಿ ಬಹು ಕ್ರೂರವಾದ ವಾಕ್ಯವನ್ನು ನುಡಿದನದೆಂತೆನೇ,—ಎಲೈ ರಾಕ್ಷಸನೇ ಗಜಅಶ್ವರಥಾದಿಗಳಿಂದ ಯುಕ್ತವಾದ ಮಹಾ ಸೈನ್ಯದಲ್ಲಿರುವ ನಿನ್ನಿಂದ ಬಹು ದಾರುಣವಾದ ಕಾರ್ಯವು ಗೈಯಲ್ಪಟ್ಟಿತು ಭೂತಂಗಳಿಗೆಲ್ಲಾ ಘಾತಕಳಾದ ಮತ್ತು ಪಾಪಿಯಾದ ಪುರುಷನು ಸಮಸ್ತವಾದ ಲೋಕಗಳಿಗೂ ಕೂಡ ಈಶ್ವರನಾಗಿ ಇದ್ದರೂ ಸ್ಥಿರವಾಗಿ, ನಿಲ್ಲಲಾರನು ಅವನನ್ನು ಯಲ್ಲರೂ ಸೇರಿ ಸ್ಥಾನಭ್ರಂಶನಾಗುವಂತೆ ಮಾಡುವರು ॥೩॥ ಎಲೈ ರಾಕ್ಷಸನೇ! ಲೋಕವಿರುದ್ಧವಾದ ಕಾರ್ಯವಂ ಮಾಡುವ ಪುರುಷನನ್ನು ಜನರೆಲ್ಲರು ದುಷ್ಟವಾದ ಸರ್ಪವಂ ಕೊಲ್ಲುವಂತೆ ಕೊಂದುಬಿಡುವರು ॥೪॥ ಲೋಭದಿಂದಲಾಗಲೀ, ಕಾಮದಿಂದಲಾಗಲೀ, ಪಾಪವನ್ನೇ ಮಾಡುತ್ತಾ

ತಾಪಸಾನ್ಧರ್ಮಚಾರಿಣಃ । ಕಿಂನುಹತ್ವಾಮಹಾಭಾಗಾನ್ಫಲಂಪ್ರಾಪ್ಸ್ಯಸಿರಾಕ್ಷಸ ॥೬॥ ನಚಿರಂಪಾಪಕರ್ಮಾಣಃಕ್ರೂ
ರಾಲೋಕಜುಗುಪ್ಸಿತಾಃ । ಐಶ್ವರ್ಯಂಪ್ರಾಪ್ಯತಿಷ್ಠಂತಿಶೀರ್ಣಮೂಲಾಇವದ್ರುಮಾಃ ॥೭॥ ಅವಶ್ಯಂಲಭತೇಜಂತುಃಫಲಂ
ಪಾಪಸ್ಯಕರ್ಮಣಃ । ಘೋರಂಪರ್ಯಾಗತೇಕಾಲೇದ್ರುಮಾಃಪುಷ್ಪಮಿವಾರ್ತವಂ ॥೮॥ ನಚಿರಾತ್ಪ್ರಾಪ್ಯತೇಲೋಕೇಪಾಪಾನಾಂ
ಕರ್ಮಣಾಂಫಲಂ । ಸವಿಷಾಣಾಮಿವಾನ್ನಾನಾಂಭುಕ್ತಾನಾಂಕ್ಷಣದಾಚರ ॥೯॥ ಪಾಪಮಾಚರತಾಂಘೋರಂಲೋಕಸ್ಯಾ
ಪ್ರಿಯಮಿಚ್ಛತಾಂ । ಅಹಮಾಸಾದಿತೋರಾಜ್ಞಾಪ್ರಾಣಾನ್ಹಂತುಂನಿಶಾಚರ ॥೧೦॥ ಅದ್ಯಹಿತ್ವಾಂಮಯಾಮುಕ್ತಾ
ಶ್ಶರಾಃಕಾಂಚನಭೂಷಣಾಃ । ವಿದಾರ್ಯಾತಿಪತಿಷ್ಯಂತಿವಲ್ಮೀಕಮಿವಪನ್ನಗಾಃ ॥೧೧॥ ಯೇತ್ವಯಾದಂಡಕಾರಣ್ಯೇಭ
ಕ್ಷಿತಾಧರ್ಮಚಾರಿಣಃ । ತಾನದ್ಯನಿಹತಸ್ಸಂಖ್ಯೇಸಸೈನ್ಯೋನುಗಮಿಷ್ಯಸಿ ॥೧೨॥ ಅದ್ಯತ್ವಾಂಪತಿತಂಬಾಣೈಃಪಶ್ಯಂತು
ಪರಮರ್ಷಯಃ । ನಿರಯಸ್ಥಂವಿಮಾನಸ್ಥಾಯೇತ್ವಯಾಹಿಂಸಿತಾಃಪುರಾ ॥೧೩॥ ಪ್ರಹರತ್ವಂಯಥಾಕಾಮಂಕುರು

---

ಇರುತ್ತಿರುವ, ಧರ್ಮಚಾರಿಣಃ-ಧರ್ಮವನ್ನೇ ನಡಿಸುತ್ತಿರುವ, ತಾಪಸಾನ್-ಋಷಿಗಳಾದ, ಮಹಾಭಾಗಾನ್-ಪುಣ್ಯಶಾಲಿಗಳಾದ ಋಷಿಗಳನ್ನು, ಹತ್ವಾ-ಕೊಂದು. ಕಿಂಫಲಂ-ಯಾವಫಲವನ್ನು ಪ್ರಾಪ್ಸ್ಯಸಿ-ಹೊಂದುವಿ ॥೬॥ ಪಾಪಕರ್ಮಾಣಃ-ಪಾಪಕೃತ್ಯವನ್ನು ಮಾಡುತ್ತಿರುವ, ಕ್ರೂರಾಃ-ಕಠಿನಚಿತ್ತರಾದ, ಲೋಕಜುಗುಪ್ಸಿತಾಃ-ಲೋಕನಿಂದಿತರು. ಐಶ್ವರ್ಯಂ-ಪರಾಭವವನ್ನು ಪ್ರಾಪ್ಯ-ಹೊಂದಿ, ಶೀರ್ಣಮೂಲಾಃ-ಶಿಥಿಲವಾದ ಬುಡಗಳುಳ್ಳ, ದ್ರುಮಾಇವ-ಗಿಡಗಳಂತೆ. ಚಿರಂ-ಬಹಳಕಾಲವು, ನತಿಷ್ಠಂತಿ-ಇರುವದಿಲ್ಲ ॥೭॥ ಜಂತುಃ-ಮನುಷ್ಯನು. ಪಾಪಸ್ಯಕರ್ಮಣಃ-ಪಾಪಕೃತ್ಯಕ್ಕೆ, ಘೋರಂ-ಭಯಂಕರವಾದ, ಫಲಂ-ಫಲವನ್ನು, ಕಾಲೇ-ಪರಿಪಾಕಕಾಲವು, ಪರ್ಯಾಗತೇಸತಿ-ಬರುತ್ತಿರಲಾಗಿ, ದ್ರುಮಾಃ-ಗಿಡಗಳು, ಆರ್ತವಂ-ಆಯಾಯ ಋತುಸಂಬಂಧವಾದ, ಪುಷ್ಪಮಿವ-ಪುಷ್ಪವನ್ನಂತೆ. ಅವಶ್ಯಂ-ಅವಶ್ಯಕವಾಗಿ, ಲಭತೇ-ಹೊಂದುತ್ತಾನೆ ॥೮॥ ಕ್ಷಣದಾಚರ-ಎಲೈ ರಾತ್ರಿಕಾಲದಲ್ಲಿ ಸಂಚಾರ ಶೀಲನೇ, ಲೋಕೇ-ಲೋಕದಲ್ಲಿ, ಸವಿಷಾಣಾಂ-ವಿಷಮಿಶ್ರವಾದ, ಭುಕ್ತಾನಾಂ-ಭೋಜನಮಾಡಲ್ಪಟ್ಟ, ಅನ್ನಾನಾಮಿವ-ಅನ್ನಗಳಿಗಂತೆ. ಪಾಪಾನಾಂಕರ್ಮಣಾಂ-ಪಾಪಕೃತ್ಯಗಳಿಗೆ, ಫಲಂ-ಫಲವು, ನಚಿರಾತ್-ಜಾಗ್ರತೆಯಾಗಿ, ಪ್ರಾಪ್ಯತೇ-ಹೊಂದಲ್ಪಡುತ್ತದೆ ॥೯॥ ಹೇನಿಶಾಚರ-ಎಲೈ ರಾಕ್ಷಸನೇ, ಲೋಕಸ್ಯ-ಲೋಕಕ್ಕೆ, ಘೋರಂ-ಭಯಂಕರವಾದ, ಪಾಪಂ-ಪಾಪಕೃತ್ಯವನ್ನು. ಆಚರತಾಂ-ಮಾಡುತ್ತಿರುವ, ಅಪ್ರಿಯಂ-ಜನರಿಗೆ ಅನಿಷ್ಟವನ್ನೇ, ಇಚ್ಛತಾಂ-ಅಪೇಕ್ಷಿಸುತ್ತಿರುವರ, ಪ್ರಾಣಾನ್-ಪ್ರಾಣಗಳನ್ನು. ಹಂತುಂ-ಕೊಡಿಯುವದಕ್ಕಾಗಿ, ರಾಜ್ಞಾ-ದಶರಥರಾಯನಿಂದ, ಅಹಂ-ನಾನು ಆಸಾದಿತಃ-ಹೊಂದಲ್ಪಟ್ಟೆನು. ಯದ್ವಾ-ರಾಜ್ಞಾ-ಭರತನಿಂದ, ಅಹಂ-ನಾನು. ಆಸಾದಿತಃ-ನಿಯಮಿಸಲ್ಪಟ್ಟಿದ್ದೇನೆ ॥೧೦॥ ಅದ್ಯ-ಈಗ, ಮಯಾ-ನನ್ನಿಂದ, ಮುಕ್ತಾಃ-ಬಿಡಲ್ಪಟ್ಟ, ಕಾಂಚನಭೂಷಣಾಃ-ಸುವರ್ಣದ ರೇಖೆಗಳೇ ಭೂಷಣವಾಗುಳ್ಳ, ಶರಾಃ-ಬಾಣಗಳು. ಪನ್ನಗಾಃ-ಸರ್ಪಗಳೂ, ವಲ್ಮೀಕಮಿವ-ಹುತ್ತವನ್ನಂತೆ, ತ್ವಾಂ-ನಿನ್ನನ್ನು, ವಿದಾರ್ಯ-ಸೀಳಿ, ಅತಿಪತಿಷ್ಯಂತಿ-ಮ್ಯಾಲಕ್ಕೆ ಯೇಳುತ್ತವೆ ॥೧೧॥ ದಂಡಕಾರಣ್ಯೇ-ದಂಡಕಾವನದಲ್ಲಿ, ಧರ್ಮಚಾರಿಣಃ-ಧರ್ಮಾನುಷ್ಠಾನತತ್ಪರರಾದ, ಯೇ-ಯಾರು, ತ್ವಯಾ-ನಿನ್ನಿಂದ, ಭಕ್ಷಿತಾಃ-ತಿನ್ನಲ್ಪಟ್ಟರೋ, ಸಂಖ್ಯೇ-ಕಾಳಗದಲ್ಲಿ, ನಿಹತಃ-ಹೊಡೆಯಲ್ಪಟ್ಟವನಾಗಿ, ಸಸೈನ್ಯಃ-ಸೈನ್ಯಸಮೇತನಾಗಿ. ತಾನ್-ಆಋಷಿಗಳನ್ನು. ಅದ್ಯ-ಈಗ, ಅನುಗಮಿಷ್ಯಸಿ-ಅನುಸರಿಸಿಹೋಗುವಿ ॥೧೨॥ ಪುರಾ-ಪೂರ್ವದಲ್ಲಿ, ಯೇ-ಯಾವಋಷಿಗಳು. ತ್ವಯಾ-ನಿನ್ನಿಂದ, ಹಿಂಸಿತಾಃ-ಹೊಡೆಯಲ್ಪಟ್ಟರೋ, ತೇ-ಅಂಥಾ, ಪರಮರ್ಷಯಃ-ಆ ಶ್ರೇಷ್ಠರಾದ ಋಷಿಗಳು, ವಿಮಾನಸ್ಥಾಃ-ವಿಮಾನಾರೂಢರಾಗಿ, ಬಾಣೈಃ-ಬಾಣಗಳಿಂದ. ಅದ್ಯ-ಈಗ. ಪತಿತಂ-ಬಿದ್ದಿರುವ. ತ್ವಾಂ-ನಿನ್ನನ್ನು, ನಿರಯಸ್ಥಂ-

---

ಡುತ್ತಾ ತಿಳಿಯದಿರುವನೋ ಅವನು ಆನೇಕಲ್ಲುಗಳಂಭಕ್ಷಿಸಿದಜಿಗಣಿಯಂತೆ ನಾಶವನ್ನೈದಿ ಕೆಳಗೆಬೀಳುವನು।೫
ಎಲೈ ಅಸುರನೇ! ದಂಡಕಾರಣ್ಯದಲ್ಲಿ ವಾಸಿಸುವ ತಾಪಸರನ್ನು ಮಹಾ ಪುಣ್ಯಶಾಲಿಗಳಾದ ಮುನಿಗಳನ್ನು ಕೊಂದು ಯೇನು ಫಲವಂ ಪೊಂದುವೀ, ಪಾಪಕೃತ್ಯಗಳನ್ನು ಗೈಯ್ಯುವ ಕ್ರೂರರಾದ ದುಷ್ಟರು ಪರಾಭವವನ್ನೈದಿ, ಶಿಥಿಲವಾದ ಬುಡಗಳುಳ್ಳ ಗಿಡಗಳಂತೆ ಬಹು ದಿನಗಳೂ ನಿಲ್ಲಲಾರರು ಲೋಕದಲ್ಲಿ ಪಾಪವನ್ನೇ ಮಾಡುವ ಪುರುಷನಿಗೆ ಪರಿಪಾಕಕಾಲವು ಸಂಭವಿಸಲೂ, ವೃಕ್ಷಂಗಳು ಪುಷ್ಪಂಗಳಂ ಬಿಡುವಂತೆ ಅದರ ಫಲವು ಅವಶ್ಯವಾಗಿ ಸಂಭವಿಸುವದು ॥೮॥ ಎಲೈ ಅಸುರನೇ! ಲೋಕದಲ್ಲಿ ವಿಷಮಿಶ್ರವಾದ ಪದಾರ್ಥಗಳಂ ಭುಜಿಸುವ ಮನುಷ್ಯನಿಗೆ ಅದರಫಲವು ತೀವ್ರವಾಗಿಯೇ ಸಂಭವಿಸುವದು ।೯। ಕೇಳೆಲೈ ರಾಕ್ಷಸನೇ! ಜನಗಳಿಗೆಲ್ಲ ಪಾಪಕಾರ್ಯವಂ ಗೈಯ್ಯುವ ನಿಮ್ಮ ಪ್ರಾಣವಿವೇಚನವಂ ಗೈಯ್ಯುವದಕ್ಕಾಗಿ, ನಾನು ದಶರಥಮಹಾ ರಾಜನಿಂದ ನಿಯಮಿಸಲ್ಪಟ್ಟಿದ್ದೇನೆ, ಈಗ ನನ್ನಿಂದ ಬಿಡಲ್ಪಡುವ ಬಹು ತೀಕ್ಷ್ಣಂಗಳಾದ ಬಾಣಂಗಳು, ಸರ್ಪಂಗಳು ವಲ್ಮೀಕಂಗಳನ್ನು ಶೀಳುವಂತೆ ನಿನ್ನನ್ನು ಶೀಳಿ ಮೇಲಕ್ಕೆ ಬರುವವು ।೧೧। ಈ ದಂಡಕಾರಣ್ಯದಲ್ಲಿ ನಿನ್ನಿಂದ ಯಾವ ಯಾವ ಋಷಿಗಳು ಸಂಹರಿಸಲ್ಪಟ್ಟರೋ, ಈ ರಣರಂಗದಲ್ಲಿ ಮರಣವನ್ನೈದಿದವನಾಗಿ ನೀನು ಸಹ ಅವರಂ ನೋಡುವವನಾಗುವೆ. ।೧೨। ಮತ್ತು ಅವರೆಲ್ಲರು ದೇವತ್ವವಂ ಪಡೆದು ವಿಮಾನಂಗಳಲ್ಲಿ ಕುಳಿತವರಾಗಿ, ಈಗ ಸಂಹೃತನಾಗುವ ನಿನ್ನಂ ನೋಡು

ಯಸ್ತ್ವಂಕುಲಾಧಮ|ಅದ್ಯತೇಪಾತಯಿಷ್ಯಾಮಿಶಿರಸ್ತಾಲಫಲಂಯಥಾ।೧೪। ಏವಮುಕ್ತಸ್ತುರಾಮೇಣಕ್ರುದ್ಧಸ್ಸಂರಕ್ತ
ಲೋಚನಃ। ಪ್ರತ್ಯುವಾಚಖರೋರಾಮಂಪ್ರಹಸನ್ಕ್ರೋಧಮೂರ್ಛಿತಃ ॥೧೫॥ ಪ್ರಾಕೃತಾನ್ರಾಕ್ಷಸಾನ್ಹತ್ವಾಯುದ್ಧೇ
ದಶರಥಾತ್ಮಜ। ಆತ್ಮನಾಕಥಮಾತ್ಮಾನಮಪ್ರಶಸ್ಯಂಪ್ರಶಂಸಸಿ ॥೧೬। ವಿಕ್ರಾಂತಾಬಲವಂತೋವಾಯೇಭವಂತಿನರರ್ಷ
ಭಾಃ। ಕಥಯಂತಿನತೇಕಿಂಚಿತ್ತೇಜಸಾಸ್ವೇನಗರ್ವಿತಾಃ ॥೧೭॥ ಪ್ರಾಕೃತಾಸ್ತ್ವಕೃತಾತ್ಮಾನೋಲೋಕೇಕ್ಷತ್ರಿಯಪಾಂಸ
ವಾಃ। ನಿರರ್ಥಕಂವಿಕತ್ಥಂತೇಯಥಾರಾಮವಿಕತ್ಥಸೇ ।೧೮। ಕುಲಂವ್ಯಪದಿಶನ್ವೀರಸ್ಸಮರೇಕೋಭಿಧಾಸ್ಯತಿ ॥ ಮೃತ್ಯು
ಕಾಲೇಹಿಸಂಪ್ರಾಪ್ತೇಸ್ವಯಮಪ್ರಸ್ತವೇಸ್ತವಂ ॥೧೯॥ ಸರ್ವಥೈವಲಘುತ್ವಂತೇಕತ್ಥನೇನವಿದರ್ಶಿತಂ। ಸುವರ್ಣಪ್ರತಿರೂಪೇಣ
ತಪ್ತೇನೇವಕುಶಾಗ್ನಿನಾ ।೨೦। ನತುಮಾಮಿಹತಿಷ್ಠಂತಂಪಶ್ಯಸಿತ್ವಂಗದಾಧರಂ। ಧರಾಧರಮಿವಾಕಂಪ್ಯಂಪರ್ವತಂಧಾ
ತುಭಿಶ್ಚಿತಂ।೨೧॥ ಪರ್ಯಾಪ್ತೋಹಂಗದಾಪಾಣಿರ್ಹಂತುಂಪ್ರಾಣಾನ್ರಣೇತವ। ತ್ರಯಾಣಾಮಪಿಲೋಕಾನಾಂಪಾಶಹಸ್ತಇ

---

ನರಕದಲ್ಲಿರುವವನನ್ನಾಗಿ. ಪಶ್ಯಂತು-ನೋಡಲಿ, ॥೧೩॥ ಹೇಕುಲಾಧಮ-ಎಲೋ ನೀಚಕುಲೋತ್ಪನ್ನನೇ, ತ್ವಂ-ನೀನು. ಯಥಾಕಾಮಂ-ಮನಸ್ಸಿನಂ ದಂತೆ ಪ್ರಹರ-ಹೊಡಿ. ಯತ್ನಂ-ಪ್ರಯತ್ನವನ್ನು ಕುರು-ಮಾಡು, ಅದ್ಯ-ಈಗಲೇ, ತೇ-ನಿನ್ನ, ಶಿರಃ-ತಲೆಯನ್ನು ತಾಲಫಲಂಯಥಾ-ತಾಳೇಗಿಡದ ಫಲವನ್ನಂತೆ, ಪಾತಯಿಷ್ಯಾಮಿ-ಕೆಡಹುವೆನು ॥೧೪॥ ಏವಂ-ಈಪರಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಕ್ರುದ್ಧಃ-ಕೋಪಿಷ್ಠನಾದ. ಸಂರಕ್ತಲೋಚನಃ-ಕೆಂಗಣ್ಣುಗಳುಳ್ಳ, ಖರಃ-ಖರಾಸುರನು, ಪ್ರಹಸನ್-ನಗುತ್ತಿರುವವನಾಗಿ, ಕ್ರೋಧಮೂರ್ಛಿತಃ-ಕೋಪದಿಂ ವ್ಯಾಪ್ತನಾದ ರಾಮಂ-ಶ್ರೀರಾಮನಂಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು, ॥೧೫॥ ಹೇದಶರಥಾತ್ಮಜ-ಎಲೈ ದಶರಥರಾಯನ ಮಗನೇ, ಯುದ್ಧೇ-ಕಾಳಗದಲ್ಲಿ. ಪ್ರಾಕೃತಾನ್-ಮೂಢರಾದ, ರಾಕ್ಷಸಾನ್-ರಕ್ಕಸರನ್ನು, ಹತ್ವಾ-ಕೊಂದು, ಆತ್ಮನಾ-ಮನಸ್ಸಿನಿಂದ, ಅಪ್ರಶಸ್ಯಂ-ಪ್ರಶಂಸೆಗೆ ಅನರ್ಹನಾದ, ಆತ್ಮಾನಂ-ನಿನ್ನನ್ನು, ಕಥಂಪ್ರಶಂಸಸಿ-ಹ್ಯಾಗೆ ಶ್ಲಾಘಿಸಿಕೊಳ್ಳುತ್ತೀ, ವಿಕ್ರಾಂತಾಃ-ಪರಾಕ್ರಮಶಾಲಿಗಳಾಗಿ, ನರರ್ಷಭಾಃ-ಮನುಷ್ಯಶ್ರೇಷ್ಠರಾದ, ಬಲವಂತಃ-ಬಲಿಷ್ಠರು, ಯೇ-ಯಾರು, ಭವಂತಿ-ಆಗುವರೋ, ತೇ-ಅವರುಗಳು, ಸ್ವೇನತೇಜಸಾ-ಸ್ವಕೀಯಪ್ರಭಾವದಿಂದಲೇ, ಗರ್ವಿತಾಃ-ಗರ್ವಿಷ್ಠರಾಗಿ, ಕಿಂಚಿತ್-ಸ್ವಲ್ಪವಾದರೂ, ನಕಥಯಂತಿ-ಹೇಳುವದಿಲ್ಲಾ ॥೧೭॥ ಪ್ರಾಕೃತಾಃ-ಕ್ಷುದ್ರರಾದ. ಅಕೃತಾತ್ಮಾನಃ-ಸ್ವಸ್ವರೂಪಜ್ಞಾನಶೂನ್ಯರಾದ, (ಅಂದರೆ-ಕಲ್ಮಷಚಿತ್ತರಾದ, ) ಕ್ಷತ್ರಿಯಪಾಂಸವಾಃ-ನೀಚಕ್ಷತ್ರಿಯರು- ಲೋಕೇ-ಲೋಕದಲ್ಲಿ, ನಿರರ್ಥಕಂ-ವ್ಯರ್ಥವಾಗಿ, ಯಥಾ-ಹ್ಯಾಗೆ ವಿಕತ್ಥಂತೇ-ಹೊಗಳಿಕೊಳ್ಳುವರೋ, ಹೇರಾಮ-ಎಲೈ ಶ್ರೀರಾಮನೇ, ತಥಾ-ಹಾಗೆ, ವಿಕತ್ಥಸೇ-ಹೊಗಳಿಕೊಳ್ಳುತ್ತೀ ॥೧೮॥ ಕುಲಂ-ಸ್ವಕುಲವನ್ನು ವ್ಯಪದಿಶನ್-ಪ್ರಕಟವಾಗಿ ಮಾಡುತ್ತಿರುವ, ಅಂದರೆ ಮಹಾಕುಲೀನತ್ವವನ್ನು ತೋರಿಸುತ್ತಿರುವ, ವೀರಃ-ಶೂರನಾದ, ಕಃ-ಯಾರುತಾನೇ, ಸಮರೇ-ಕಾಳಗದಲ್ಲಿ, ಅಭಿಧಾಸ್ಯತಿ-ಹೇಳುವನು, ಮೃತ್ಯುಕಾಲೇ-ಮರಣಕಾಲವು, ಸಂಪ್ರಾಪ್ತೇಸತಿ-ಬರುತ್ತಿರಲಾಗಿ, ಅಪ್ರಸ್ತವೇ-ಸ್ತೋತ್ರಪ್ರಸಕ್ತಿಯಿಲ್ಲದ ಕಾಲದಲ್ಲಿ, ಸ್ವಯಂ-ತಾನು, ಸ್ತವಂ-ಸ್ತೋತ್ರವನ್ನು ಕಃ-ಯಾರು, ಕರೋತಿ-ಮಾಡುತ್ತಾನೆ ॥೧೯॥ ಸುವರ್ಣಪ್ರತಿರೂಪೇಣ-ಸುವರ್ಣಕ್ಕೆಸಮಾನವಾದ. ಅಗ್ನಿನಾ-ಅಗ್ನಿಯಿಂದ, ತಪ್ಯತೇ-ತಪಿಸಲ್ಪಡುತ್ತದೆ, ಅಶ್ಮನಾ-ಪಾಷಾಣದಿಂದ ನತಪ್ಯತೇ-ತಪಿಸುವದಿಲ್ಲ, (ತಪ್ತೇನೇವಕುಶಾಗ್ನಿನೇತಿಪಾಠಾಂತರಂ) (ತಪ್ತೇನೇವ-ತಪಿಸುತ್ತಿರುವ. ಕುಶಾಗ್ನಿನಾ-ಸುವರ್ಣಶೋಧಕಾಗ್ನಿಯಿಂದ, ಸುವರ್ಣಪ್ರತಿರೂಪೇಣೇವ-ಸುವರ್ಣಕ್ಕೆ ಸಮಾನವಾಗಿ ಯಿರುವ ಮೂಸೆಯಿಂದಲಂತೆ, ತ್ವಯಾ-ನಿನ್ನಿಂದ, ಕತ್ಥನೇನ-ಆತ್ಮಪ್ರಶಂಸೆಯಿಂದ, ತೇ-ನಿನಗೆ, ಲಘುತ್ವಂ-ಲಾಘವವು, ಸರ್ವಥಾ-ಸರ್ವಪ್ರಕಾರದಲ್ಲಿಯೂ, ವಿದರ್ಶಿತಂ-ತೋರಿಸಲ್ಪಟ್ಟಿತು )॥೨೦॥ ಇಹ-ಇಲ್ಲಿ, ತಿಷ್ಠಂತಂ-ನಿಂತಿರುವ. ಧಾತುಭಿಃ-ಗೈರಿಕಾದಿ ಧಾತುಗಳಿಂದ. ಚಿತಂ-ವ್ಯಾಪ್ತನಾದ, ಧರಾಧರಂ-ಸಕಲ ಭೂಮಿಯನ್ನುಹೊತ್ತಿರುವ, ಪರ್ವತಮಿವ-ಬೆಟ್ಟದಂತೆ, ಅಕಂಪ್ಯಂ-ಚಲಿಸಲಸಾಧ್ಯನಾದ. ಗದಾಧರಂ-ಗದಾಧಾರಿಯಾದ. ಮಾಂ-ನನ್ನನ್ನು. ನಪಶ್ಯಸಿ-ನೋಡದೇಹೋದೆ ॥೨೧॥ ಅಹಂ-ನಾನು. ಗದಾಪಾಣಿಃ-ಗದಾಪಾಣಿಯಾಗಿ, ತ್ರಯಾಣಾಂ-ಮೂರಾದ. ಲೋಕಾನಾಂ-ಲೋಕಗಳಿಗೆ, ಪಾಶಹಸ್ತಃ

---

ವರು, ಎಲೈ ನೀಚನೇ! ಈಗ ನಿನ್ನಿಷ್ಟವಿದ್ದಂತೆ ಹೊಡೆಯುವವನಾಗು, ತಾಳೇ ಗಿಡದ ದಶೆಯಿಂದ ಹಣ್ಣಾದಫಲವು ಕೆಳಗೆಬೀಳುವಂತೆ ನಿನ್ನ ಮಂಡೆಯನ್ನು ಕೆಳಗೆ ಬೀಳಿಸುವೆನೆಂದು ಶ್ರೀರಾಮನು ನುಡಿದವನಾಗಲೂ, ಆ ಖರಾಸುರನು ಬಹು ಕೋಪವುಳ್ಳವನಾಗಿ, ಶ್ರೀರಾಮನಂ ಕುರಿತಿಂತೆಂದನು ॥೧೫। ಎಲೈ ದಶರಥಪುತ್ರನೇ! ಸಂಗರದಲ್ಲಿ ಸಾಧಾರಣರಾದ ರಾಕ್ಷಸರಂ ಕೊಂದು, ನನ್ನ ಸದೃಶನ್ಯಾರು ಇಲ್ಲವೆಂದು ನಿನ್ನನ್ನು ನೀನೇಶ್ಲಾಘಿಸಿಕೊಳ್ಳುವಿಯೋ, ಪರಾಕ್ರಮಶಾಲಿಗಳಾದವರು ಯಾರೋ ಅವರು ಈ ರೀತಿಯಲ್ಲಿ ಸ್ತೋತ್ರವಂ ಮಾಡಿಕೊಳ್ಳುವದಿಲ್ಲ, ಲೋಕದಲ್ಲಿ ಯಾರು ನೀಚರೋ ಅವರು ಈರೀತಿನಿನ್ನಂತೆ ತನ್ನನ್ನು ತಾನೇ ಹೊಗಳಿಕೊಳ್ಳುವರು, ಸತ್ಕುಲದಲ್ಲಿ ಹುಟ್ಟದವನು ಯಾವ ಪುರುಷನು ತಾನೇ ಈ ರೀತಿಕಾಳಗದಲ್ಲಿ ಹೇಳುವನು, ಮರಣಕಾಲವು ಸಂಭವಿಸಿ ಸ್ತೋತ್ರಪ್ರಸಕ್ತಿ ಇಲ್ಲದಾಗ ಯಾವ ಪುಷನು ತಾನೇ ಸ್ತೋತ್ರವಂ ಮಾಡಿಕೊಳ್ಳುವನು ॥೧೯॥ ಸುವರ್ಣಸದೃಶವಾದ ಅಗ್ನಿಯಿಂದ ತಪಿಸಲ್ಪಡುವದೇ ಹೊರತು ಪಾಷಾಣದಿಂದ ತಪಿಸಲ್ಪಡುವದೆ? ಸರ್ವಪ್ರಕಾರವಾಗಿಯೂ ಈ ಶ್ಲಾಘನೆಯು ಲಘು

ವಾಂತಕಃ ||೨೨|| ಕಾಮಂಬಹ್ವಪಿವಕ್ತವ್ಯಂತ್ವಯಿವಕ್ಷ್ಯಾಮಿನತ್ವಹಂ | ಅಸ್ತಂಗಚ್ಛೇದ್ಧಿಸವಿತಾಯುದ್ಧವಿಘ್ನಸ್ತತೋಭ
ವೇತ್ ||೨೩|| ಚತುರ್ದಶಸಹಸ್ರಾಣಿರಾಕ್ಷಸಾನಾಂಹತಾನಿತೇ | ತ್ವದ್ವಿನಾಶಾತ್ಕರೋಮ್ಯದ್ಯತೇಷಾಮಶ್ರುಪ್ರಮಾರ್ಜನಂ ||೨೪||
ಇತ್ಯುಕ್ತ್ವಾಪರಮಕ್ರುದ್ಧಸ್ತಾಂಗದಾಂಪರಮಾಂಗದಃ | ಖರಶ್ಚಿಕ್ಷೇಪರಾಮಾಯಪ್ರದೀಪ್ತಾಮಶನಿಂಯಥಾ ||೨೫||
ಖರಬಾಹುಪ್ರಮುಕ್ತಾಸಾಪ್ರದೀಪ್ತಾಮಹತೀಗದಾ | ಭಸ್ಮವೃಕ್ಷಾಂಶ್ಚಗುಲ್ಮಾಂಶ್ಚಕೃತ್ವಾಗಾತ್ತತ್ಸಮೀಪತಃ ||೨೬||
ತಾಮಾಪತಂತೀಂಜ್ವಲಿತಾಂಮೃತ್ಯುಪಾಶೋಪಮಾಂಗದಾಂ | ಅಂತರಿಕ್ಷಗತಾಂರಾಮಶ್ಚಿಚ್ಛೇದಬಹುಧಾಶರೈಃ ||೨೭||
ಸಾವಿಶೀರ್ಣಾಶರೈರ್ಭಗ್ನಾಪಪಾತಧರಣೀತಲೇ | ಗದಾಮಂತ್ರೌಷಧಬಲೈರ್ವ್ಯಾಳೀವವಿನಿಪಾತಿತಾ ||೨೮||

—*** ಇತಿಶ್ರೀಮದಾರಣ್ಯಕಾಂಡೇ-ಏಕೋನತ್ರಿಂಶಸ್ಸರ್ಗಃ. ***—

ಭಿತ್ತ್ವಾತುತಾಂಗದಾಂಬಾಣೈರಾಘವೋಧರ್ಮವತ್ಸಲಃ | ಸ್ಮಯಮಾನಃಖರಂವಾಕ್ಯಂಸಂರಬ್ಧಮಿದಮಬ್ರವೀತ್ ||೧||

---

ಪಾಶವೇ ಹಸ್ತದಲ್ಲಿಯುಳ್ಳ, ಅಂತಕಇವ-ಯಮನಂತೆ, ರಣೇ-ಕಾಳಗದಲ್ಲಿ, ತವ-ನಿನ್ನ, ಪ್ರಾಣಾನ್-ಪ್ರಾಣಗಳನ್ನು, ಹಂತುಂ-ಹೊಡೆಯುವದಕ್ಕಾಗಿ, ಪರ್ಯಾಪ್ತಃ-ಸಾಕಾಗಿಯೇನೆ, (ವಸ್ತುತಾರ್ಥವು-ತವ-ನಿನ್ನ, ಪ್ರಾಣಾನ್-ಪ್ರಾಣಗಳನ್ನು ಹಂತುಂ-ಹೊಡೆಯುವದಕ್ಕಾಗಿ ಅಹಂ-ನಾನು, ಪರ್ಯಾಪ್ತಃ-ಸಮರ್ಥನೇ, ಇತಿನಪರ್ಯಾಪ್ತಃ-ಸಮರ್ಥನಲ್ಲವೆಂದು ತಾತ್ಪರ್ಯವು.) ||೨೨|| ತ್ವಯಿ-ನಿನ್ನವಿಷಯದಲ್ಲಿ, ಕಾಮಂ-ಯಥೇಷ್ಟವಾಗಿ, ಬಹ್ವಪಿ-ಬಹಳಮಾತು, ವಕ್ತವ್ಯಂ-ಹೇಳತಕ್ಕದ್ದು, ತಥಾಪಿ-ಹಾಗಾದರೂ, ಅಹಂತು-ನಾನಾದರೆ, ನವಕ್ಷ್ಯಾಮಿ-ಹೇಳಲಾರೆನು, ಸವಿತಾ-ಸೂರ್ಯನು, ಅಸ್ತಂ-ಅಸ್ತಮಯ ಪರ್ವತವನ್ನು, ಗಚ್ಛೇದ್ಧಿ-ಹೊಂದುವನಷ್ಟೆ, ತತಃ-ಬಳಿಕ, ಯುದ್ಧವಿಘ್ನಃ-ಕಾಳಗಕ್ಕೆ ಅಂತರಾಯವು, ಭವೇತ್-ಆಗುವದು ||೨೩|| ರಾಕ್ಷಸಾನಾಂ-ರಕ್ಕಸರ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳು, ತೇ-ನಿನ್ನಿಂದ, ಹತಾನಿ-ಕೊಲೆಯಾಳ್ಪಟ್ಟವು, ತ್ವದ್ವಿನಾಶಾತ್-ನಿನ್ನನಾಶದ ಬೆಸೆಯಿಂದ, ಅದ್ಯ-ಈ ನಾನು, ತೇಷಾಂ-ಆ ಸತ್ತವರ ಬಂಧುಜನಗಳಿಗೆ, ಅಶ್ರುಪ್ರಮಾರ್ಜನಂ-ಕಣ್ಣೀರು ಹೋಗಲಾಡಿಸುವಿಕೆಯನ್ನು, ಕರೋಮಿ-ಮಾಡುತ್ತೇನೆ, (ವಾಸ್ತವಿಕಾರ್ಥವು-ತ್ವದ್ವಿನಾಶಾತ್-ನಿನ್ನ ಬೆಸೆಯಿಂದ ನಾನು ಮರಣವನ್ನು ಹೊಂದಿ, ತೇಷಾಂ-ಅವರಿಗೆ ಅಶ್ರುಪ್ರಮಾರ್ಜನಂ-ಕಂಬನಿಯ ಹೋಗಲಾಡಿಸುವಿಕೆಯನ್ನು, ಕರೋಮಿ-ಮಾಡುತ್ತೇನೆ) ||೨೪|| ಇತ್ಯುಕ್ತ್ವಾ-ಈಪರಿಯಾಗಿಹೇಳಿ, ಪರಮಕ್ರುದ್ಧಃ-ಬಹಳ ಕೋಪಿಷ್ಠನಾದ, ಪರಮಾಂಗದಃ-ಶ್ರೇಷ್ಠಗಳಾದ ಬಾಹುಪುರಿಗಳುಳ್ಳ, ಖರಃ-ಖರಾಸುರನು, ರಾಮಾಯ-ಶ್ರೀರಾಮನಿಗೋಸುಗ, ಅಶನಿಂಯಥಾ-ಸಿಡಿಲಿನಂತೆ, ಪ್ರದೀಪ್ತಾಂ-ಉರಿಯುತ್ತಿರುವ, ತಾಂಗದಾಂ-ಆ ಗದಾಯುಧವನ್ನು, ಚಿಕ್ಷೇಪ-ಬಿಸುಟಿಸು|| ... ... ... ... .. ||೨೫|| ಖರಬಾಹುಪ್ರಮುಕ್ತಾ-ಖರಾಸುರನ ಭುಜದಿಂ ಬಿಸುಟಲ್ಪಟ್ಟ, ಪ್ರದೀಪ್ತಾ-ಹೊಳೆಯುತ್ತಿರುವ, ಮಹತೀ-ದೊಡ್ಡದಾದ, ಸಾಗದಾ-ಆ ಗದಾಯುಧವು, ವೃಕ್ಷಾನ್-ಗಿಡಗಳನ್ನು, ಗುಲ್ಮಾಂಶ್ಚ-ಪೊದೆಗಳನ್ನು, ಭಸ್ಮ-ಬೂದಿಯನ್ನಾಗಿ, ಕೃತ್ವಾ-ಮಾಡಿ, ತತ್ಸಮೀಪತಃ-ಆ ಶ್ರೀರಾಮನ ಸಮೀಪದಲ್ಲಿ, ಅಗಾತ್-ಬಂತು ||೨೬|| ರಾಮಃ-ಶ್ರೀರಾಮನು, ಆಪತಂತೀಂ-ಬರುತ್ತಿರುವ, ಜ್ವಲಿತಾಂ-ಉರಿಯುತ್ತಿರುವ, ಮೃತ್ಯುಪಾಶೋಪಮಾಂ-ಯಮಪಾಶಕ್ಕೆ ಸಮಾನವಾದ, ತಾಂಗದಾಂ-ಆ ಗದಾಯುಧವನ್ನು, ಅಂತರಿಕ್ಷಗತಾಂ-ಅಂತರಿಕ್ಷವನ್ನು ಹೊಂದಿದ್ದನ್ನಾಗಿ, ಶರೈಃ-ಬಾಣಗಳಿಂದ, ಬಹುಧಾ-ಅನೇಕಬಗೆಯಾಗಿ, ಚಿಚ್ಛೇದ-ಕತ್ತರಿಸಿದನು ||೨೭|| ಶರೈಃ-ಬಾಣಗಳಿಂದ, ಭಗ್ನಾ-ಮುರಿಯಲ್ಪಟ್ಟ, ವಿಶೀರ್ಣಾ-ಎರಚಲ್ಪಟ್ಟ, ಸಾಗದಾ-ಆ ಗದಾಯುಧವು, ಮಂತ್ರೌಷಧಬಲೈಃ-ಮಂತ್ರಮೂಲಿಕೆಗಳಿಂದ, ವಿನಿಪಾತಿತಾ-ಕೆಡಹಲ್ಪಟ್ಟ, ವ್ಯಾಳೀವ-ಹಾವಿನಂತೆ, ಧರಣೀತಲೇ-ಭೂಪ್ರದೇಶದಲ್ಲಿ, ಪಪಾತ-ಬಿದ್ದುಹೋಯಿತು ||೨೮||

—**ಇತಿಶ್ರೀಮದಾರಣ್ಯಕಾಂಡೇ-ಏಕೋನತ್ರಿಂಶಸ್ಸರ್ಗಃ**—

ಧರ್ಮವತ್ಸಲಃ-ಧರ್ಮದಲ್ಲೇ ಅಭಿಮಾನಶಾಲಿಯಾದ, ರಾಮಃ-ಶ್ರೀರಾಮನು, ತಾಂಗದಾಂ-ಆ ಗದಾಯುಧವನ್ನು, ಬಾಣೈಃ-ಬಾಣಗಳಿಂ

---

ತ್ವವನ್ನೇ ತೋರಿಸುತ್ತದೆ. ಚಲಿಸಲಸಾಧ್ಯನಾಗಿಯೂ ಗದಾಪಾಣಿಯಾಗಿಯೂ ಇರುವ ನನ್ನನ್ನು ನೀನು ನೋಡಲಿಲ್ಲವೋ ಏನೋ ಅದಕ್ಕಾಗಿಯೇ ನೀನು ಈ ರೀತಿಹೇಳಿರಬಹುದು, ನಿನ್ನಂತೆ ನಾನು ಆತ್ಮಸ್ತುತಿಯಂ ಮಾಡಿಕೊಳ್ಳದೆ, ಈದಿನದಲ್ಲಿ ಸೂರ್ಯಾಸ್ತಮಾನವಾಗುವದರೊಳಗಾಗಿ, ನಮ್ಮ ಹದಿನಾಲ್ಕು ಸಾವಿರ ರಾಕ್ಷಸರನ್ನು ಸಂಹಾರ ಮಂಗೈದ ನಿನ್ನ ಸಂಹಾರವಂಗೈದು, ಅವರ ಬಂಧು ಜನಗಳಿಗೆ ಕಂಬನಿಗಳಂ ಪೋರಿಸುವೆನೆಂದು, ನುಡಿದು ಬಹುಕೋಪವನ್ನೈದಿ ಆ ಖರಾಸುರನು ಸಿಡಿಲಿನಂತೆ ಹೊಳೆವ ಆ ಗದಾಯುಧವಂ ಘೋರ್ರನೆ ತಿರಿವಿ ಬಿಟ್ಟವನಾದನು ||೨೫|| ಅನಂತರದಲ್ಲಿ ಖರಾಸುರನ ಭುಜದಿಂದ ಬಿಡಲ್ಪಟ್ಟ ಆ ಗದಾಯುಧವು, ವೃಕ್ಷಂಗಳನ್ನೂ ಪೊದೆಗಳನ್ನೂ ಸಹ ಭಸ್ಮವನ್ನೈದಿಸುತ್ತಾ ಶ್ರೀರಾಮನಸಮೀಪವನ್ನೈದಿತು ||೨೬|| ಆವೇಳೆಯಲ್ಲಿ ಶ್ರೀರಾಮನು, ಮೃತ್ಯುಪಾಶಕ್ಕೆ ಸಮಾನವಾದ ಆ ಗದಾಯುಧವು ಅಂತರಿಕ್ಷದಲ್ಲಿ ಬರುತಿರುವಾಗಲೇ ಬಾಣಂಗಳಿಂದ ತುಂಡುತುಂಡುಗಳಾಗಿ ಕತ್ತರಿಸಿದವನಾಗಲೂ, ಆ ಗದಾಯುಧವು ರಾಮಬಾಣಂಗಳಿಂದ ಕತ್ತರಿಸಲ್ಪಟ್ಟದ್ದಾಗಿ, ಮಂತ್ರೌಷಧಿಗಳಿಂದ ಕೆಳಗೆಕೆಡಹಲ್ಪಟ್ಟಸರ್ಪದಂದದಿ ಕೆಳಗೆಬಿದ್ದಂಥಾದ್ದಾಯಿತು *೨೮ನೆಯಸರ್ಗ ಮುಗಿದುದು*

ಏತತ್ತೆಬಲಸರ್ವಸ್ವಂದರ್ಶಿತಂರಾಕ್ಷಸಾಧಮ । ಶಕ್ತಿಹೀನತರೋಮತ್ತೋವೃಥಾತ್ವಮವಗರ್ಜಸಿ ।೨। ಏಷಾಬಾಣವಿನಿ
ರ್ಭಿನ್ನಾಗದಾಭೂಮಿತಲಂಗತಾ । ಅಭಿಧಾನಪ್ರಗಲ್ಭಸ್ಯತವಪ್ರತ್ಯಯಘಾತಿನೀ ।೩। ಯತ್ತ್ವಯೋಕ್ತಂವಿನಷ್ಟಾನಾ
ಮಿದಮಶ್ರುಪ್ರಮಾರ್ಜನಂ । ರಾಕ್ಷಸಾನಾಂಕರೋಮೀತಿಮಿಥ್ಯಾತದಪಿತೇವಚಃ ।೪। ನೀಚಸ್ಯಕ್ಷುದ್ರಶೀಲಸ್ಯಮಿಥ್ಯಾ
ವೃತ್ತಸ್ಯರಕ್ಷಸಃ । ಪ್ರಾಣಾನಪಹರಿಷ್ಯಾಮಿಗರುತ್ಮಾನಮೃತಂಯಥಾ ।೫। ಅದ್ಯತೇಭಿನ್ನಕಂಠಸ್ಯಫೇನಬುದ್ಬುದಭೂ
ಷಿತಂ । ವಿದಾರಿತಸ್ಯಮದ್ಬಾಣೈರ್ಮಹೀಪಾಸ್ಯತಿಶೋಣಿತಂ ।೬। ಪಾಂಸುರೂಷಿತಸರ್ವಾಂಗಸ್ಸ್ರಸ್ತವ್ಯಸ್ತಭುಜ
ದ್ವಯಃ । ಸ್ವಪ್ಸ್ಯಸೇಗಾಂಸಮಾಲಿಂಗ್ಯದುರ್ಲಭಾಂಪ್ರಮದಾಮಿವ ।೭। ಪ್ರವೃದ್ಧನಿದ್ರಶಯಿತೇತ್ವಯಿರಾಕ್ಷಸಪಾಂ
ಸನೇ । ಭವಿಷ್ಯಂತಿಶರಣ್ಯಾನಾಂಶರಣ್ಯಾದಂಡಕಾಇಮೇ ।೮। ಜನಸ್ಥಾನೇಹತಸ್ಥಾನೇತವರಾಕ್ಷಸಮಚ್ಛರೈಃ ।

---

ದ, ಭಿತ್ತ್ವಾ-ಭೇದಿಸಿ, ಸಂರಬ್ಧಂ-ಭ್ರಾಂತನಾದ, ಖರಂ-ಖರಾಸುರನನ್ನುಕುರಿತು, ಸ್ಮಯಮಾನಃ-ಪರಿಹಾಸಮಾಡುತ್ತಿರುವವನಾಗಿ, ಇದಂವಾಕ್ಯಂ-ಈ ಮಾತನ್ನು, ಅಬ್ರವೀತ್-ನುಡಿದನು ।।೧।। ಹೇರಾಕ್ಷಸಾಧಮ-ಎಲೈ ನೀಚನಾದ ರಾಕ್ಷಸನೇ. ಏತತ್-ಈ, ತೇ-ನಿನ್ನ ಬಲಸರ್ವಸ್ವಂ-ಸಾಮರ್ಥ್ಯದ ಸರ್ವಸ್ವವೂ. ತೇ-ನಿನ್ನಿಂದ, ದರ್ಶಿತಂ-ತೋರಿಸಲ್ಪಟ್ಟಿತು, ಶಕ್ತಿಹೀನತರಃ-ಸಾಮರ್ಥ್ಯದಿಂ ಬಹಳವಾಗಿರಹಿತನಾದ, ತ್ವಂ-ನೀನು, ಮತ್ತಃ-ನನ್ನಲ್ಲಿ, ವೃಥಾ-ವ್ಯರ್ಥವಾಗಿ, ಅವಗರ್ಜಸಿ-ಗರ್ಜನೆಮಾಡುತ್ತೀ ।।೨।। ಅಭಿಧಾನಪ್ರಗಲ್ಭಸ್ಯ-ಅಭಿಧಾನ-ಮಾತಾಡುವದರಲ್ಲಿ. ಪ್ರಗಲ್ಭಸ್ಯ-ಪ್ರೌಢನಾದ, ತವ-ನಿನ್ನ. ತ್ಯಘಾತಿನೀ-ಶತ್ರುಗಳನ್ನು ಹೊಡೆಯುತ್ತಿರುವ, ಏಷಾಗದಾ-ಈ ಗದಾಯುಧವು, ಬಾಣವಿನಿರ್ಭಿನ್ನಾ-ಬಾಣಗಳಿಂ ಭೇದಿಸಲ್ಪಟ್ಟದ್ದಾಗಿ, ಭೂಮಿತಲಂ-ನೆಲಪ್ರದೇಶವನ್ನು, ಗತಾ-ಹೊಂದಿತು ।।೩।। ತ್ವಯಾ-ನಿನ್ನಿಂದ, ಅಹಂ-ನಾನು, ವಿನಷ್ಟಾನಾಂ-ಯುದ್ಧದಲ್ಲಿ ಹತರಾದ. ರಾಕ್ಷಸಾನಾಂ-ರಾಕ್ಷಸರಿಗೆ. ಅಶ್ರುಪ್ರಮಾರ್ಜನಂ-ಕಂಬನಿಗಳ ಪರಿಸುವಿಕೆಯನ್ನು, ಕರೋಮೀತಿ-ಮಾಡುತ್ತೇನೆಂದು, ಯದುಕ್ತಂ-ಯಾವ ಮಾತು ಹೇಳಲ್ಪಟ್ಟಿತೋ ತೇ-ನಿನ್ನ. ತದಪಿ-ಆ ಮಾತು, ಮಿಥ್ಯಾ-ಸುಳ್ಳಾಯಿತು ।।೪।। ನೀಚಸ್ಯ-ಕ್ಷುದ್ರನಾದ. ಕ್ಷುದ್ರಶೀಲಸ್ಯ-ಚಾಡಿಕೋರನಾದ- ಮಿಥ್ಯಾವೃತ್ತಸ್ಯ-ಸುಳ್ಳಾದ ನಡತೆಯುಳ್ಳ, ರಕ್ಷಸಃ-ರಾಕ್ಷಸನಾದ ನಿನ್ನ, ಪ್ರಾಣಾನ್-ಪ್ರಾಣಗಳನ್ನು, ಗರುತ್ಮಾನ್-ಗರುಡನು, ಅಮೃತಂಯಥಾ-ಅಮೃತವನ್ನು ಎಂತೆ. ಅಪಹರಿಷ್ಯಾಮಿ-ಅಪಹರಿಸುವೆನು ।।೫।। ಅದ್ಯ-ಈಗ, ಮದ್ಬಾಣೈಃ-ನನ್ನಬಾಣಗಳಿಂದ, ವಿದಾರಿತಸ್ಯ-ಶೀಳಲ್ಪಟ್ಟ, ಛಿನ್ನಕಂಠಸ್ಯ-ಭೇದಿಸಲ್ಪಟ್ಟ ಕೊರಳುಳ್ಳ, ತೇ-ನಿನ್ನ, ಫೇನಬುದ್ಬುದಭೂಷಿತಂ-ಫೇನ-ನೊರೆಯಿಂದಲೂ. ಬುದ್ಬುದ-ನೀರುಗುಳ್ಳೆಗಳಿಂದ, ಭೂಷಿತಂ-ಅಲಂಕೃತವಾದ, ಶೋಣಿತಂ ರಕ್ತವನ್ನು, ಮಹೀ-ನೆಲವು, ಪಾಸ್ಯತಿ-ಪಾನಮಾಡಲೀ ।।೬।। ಪಾಂಸುರೂಷಿತಸರ್ವಾಂಗಃ-ಧೂಳಿಗಳಿಂದ ವ್ಯಾಪ್ತವಾದ ಸರ್ವಾವಯವಗಳುಳ್ಳವನಾಗಿ, ಸ್ರಸ್ತವ್ಯಸ್ತಭುಜದ್ವಯಃ-ಸ್ರಸ್ತ-ಜಾರಿಬಿದ್ದಂತೆ, ವ್ಯಸ್ತ-ವ್ಯತ್ಯಸ್ತವಾದ. ಭುಜದ್ವಯಃ-ಎರಡುಭುಜಗಳುಳ್ಳವನಾಗಿ, ದುರ್ಲಭಾಂ-ಹೊಂದಲಸಾಧ್ಯಳಾದ, ಪ್ರಮದಾಮಿವ-ಸ್ತ್ರೀಯಳಂತೆ, ಗಾಂ-ಭೂಮಿಯನ್ನು. ಸಮಾಲಿಂಗ್ಯ-ಅಪ್ಪಿಕೊಂಡು, ಸ್ವಪ್ಸ್ಯಸೇ-ಮಲಗುವೀ ।।೭।। ಪ್ರವೃದ್ಧನಿದ್ರೇ-ವೃದ್ಧಿಗೊಂಡ ನಿದ್ರೆಯುಳ್ಳ, ರಾಕ್ಷಸಪಾಂಸನಿ-ರಕ್ಕಸರೊಳಗೆ ನೀಚನಾದ, ತ್ವಯಿ-ನೀನು, ಶಯಿತೇಸತಿ-ಮಲಗಿದವನಾಗುತ್ತಿರಲಾಗಿ, ಶರಣ್ಯಾನಾಂ-ಶರಣಾರ್ಹರಾದ ಋಷಿಗಳಿಗೆ, ಇಮೇದಂಡಕಾಃ-ಈ ದಂಡಕಾರಣ್ಯವು, ಶರಣ್ಯಾಃ-ಮನೆಗಳಿಗೆ ಯೋಗ್ಯವಾದವು, ಭವಿಷ್ಯಂತಿ-ಆಗುವವು ।।೮।।

---

ಅನಂತರದಲ್ಲಿ ಧರ್ಮಿಷ್ಠನಾದ ಶ್ರೀರಾಮನು, ಆ ಗದಾಯುಧವಂ ತನ್ನ ಬಾಣಂಗಳಿಂದ ಭೇದಿಸಿ ನಸುನಗೆಯುಳ್ಳವನಾಗಿ ಆ ಖರಾಸುರನಂ ಕುರಿತು ನುಡಿವನದೆಂತೆನೆ,—ಎಲೈ ನೀಚನಾದ ರಾಕ್ಷಸನೇ! ನಿನ್ನ ಸಾಮರ್ಥ್ಯವೆಲ್ಲ ತೋರಿಸಲ್ಪಟ್ಟಿತಲ್ಲವೆ? ಅನ್ಯಾಯವಾಗಿ ಯಾಕೆ ಸ್ತೋತ್ರವಂ ಮಾಡಿಕೊಂಡವನಾದೆ, ಮಾತಾಡುವದರಲ್ಲಿ ಪಂಡಿತನಾದ ನಿನ್ನ ಈ ಗದಾಯುಧವು ಯೆನ್ನ ಬಾಣಂಗಳಿಂದ ಹೊಡೆಯಲ್ಪಟ್ಟು ನೆಲದಲ್ಲಿ ಬಿದ್ದದ್ದಾಯಿತು ।೩। ನಾನು ಯುದ್ಧದಲ್ಲಿ ಹತರಾದ ರಾಕ್ಷಸರ ಕಂಬನಿಗಳಂ ಪೂರಿಸುವೆನೆಂದು ಯಾವ ಮಾತು ನುಡಿದವನಾದೋ ಆ ವಾಕ್ಯವೂ ಸಹ ಈಗ ಅಸತ್ಯವಾಯಿತು. ।೪। ನೀಚನಾಗಿಯೂ ಕ್ಷುದ್ರಸ್ವಭಾವವುಳ್ಳವನಾಗಿಯೂ, ಅಸತ್ಯವಾದ ನಡತೆಯುಳ್ಳವನಾಗಿಯೂ ಇರುವ ರಾಕ್ಷಸನಾದ ನಿನ್ನ ಪ್ರಾಣಂಗಳನ್ನು, ಗರುತ್ಮಂತನು ಅಮೃತವನ್ನು ಅಪಹರಿಸಿದಂತೆ ಅಪಹರಿಸುವೆನು ।೫। ಈಗ ಕತ್ತರಿಸಲ್ಪಟ್ಟ ಕಂಠವುಳ್ಳ ಮತ್ತು ಬಾಣಗಳಿಂದ ಶೀಳಲ್ಪಟ್ಟ ನಿನ್ನ ಸಂಬಂಧವಾದ ರಕ್ತವನ್ನು ಭೂಮಿಯು ಪಾನಂಗೈಯ್ಯುವದು ।೬। ಮತ್ತು ನೀನು ಧೂಳೀಧೂಸರವಾದ ಸಮಸ್ತವಾದ ಅವಯವಂಗಳುಳ್ಳವನಾಗಿಯೂ ಮುರಿದುಹೋದ ಕೀಲುಗಳುಳ್ಳ ಭುಜಂಗಳುಳ್ಳವನಾಗಿಯೂ ಇರುವವನಾಗಿ, ಹೊಂದಲಸಾಧ್ಯವಾದ ವನಿತೆಯನ್ನಪ್ಪಿಕೊಳ್ಳುವಂತೆ ಭೂಮಿಯನ್ನಾಲಿಂಗನಂಗೈದು ದೀರ್ಘನಿದ್ರೆಯಂ ಪಡೆಯುವವನಾಗುವೆ, ಈರೀತಿಯಾಗಿ ಮಹಾಪಾಪಿಯಾದ ನೀನು ನೆಲದಲ್ಲಿ ಮಲಗಿದವನಾಗಲೂ, ಈದಂಡಕಾರಣ್ಯವು ಸ್ವಸ್ಥವಾಗಿರುವದು ।೮। ಎಲೈ ನೀಚನಾದ ರಾಕ್ಷಸನೇ! ನನ್ನ ಬಾಣಗಳಿಂದ ಈ ಜನಸ್ಥಾನವು ನಾಶವಾಗಲೂ,

ಯಾವಿಚರಿಷ್ಯಂತಿಸರ್ವತೋಮುನಯೋವನೇ ।೯। ಅದ್ಯವಿಪ್ರಸರಿಷ್ಯಂತಿರಾಕ್ಷಸ್ಯೋಹತಬಾಂಧವಾಃ । ಬಾಷ್ಪಾ
ದ್ರ್ರವದನಾದೀನಾಭಯಾದನ್ಯಭಯಾವಹಾಃ ।೧೦। ಅದ್ಯಶೋಕರಸಜ್ಞಾಸ್ತಾಭವಿಷ್ಯಂತಿನಿರರ್ಥಕಾಃ । ಅನುರೂಪ
ಕುಲಾಃಪತ್ನ್ಯೋಯಾಸಾಂತ್ವಂಪತಿರೀದೃಶಃ ।೧೧। ನೃಶಂಸನೀಚಕ್ಷುದ್ರಾತ್ಮನ್ನಿತ್ಯಂಬ್ರಾಹ್ಮಣಕಂಟಕ । ಯ
ತ್ಕೃತೇಶಂಕಿತೈರಗ್ನೌಮುನಿಭಿಃ ಪಾತ್ಯತೇಹವಿಃ ।೧೨। ತಮೇವಮಭಿಸಂರಬ್ಧಂಬ್ರುವಾಣಂರಾಘವಂರಣೇ । ಖರೋ
ನಿರ್ಭರ್ತ್ಸಯಾಮಾಸರೋಷಾತ್ಖರತರಸ್ವನಃ ।೧೩। ದೃಢಂಖಲ್ವವಲಿಪ್ತೋಸಿಭಯೇಷ್ವಪಿಚನಿರ್ಭಯಃ । ವಾಚ್ಯಾವಾ
ಚ್ಯಂತತೋಹಿತ್ವಂಮೃತ್ಯುವಶ್ಯೋನಬುಧ್ಯಸೇ ।೧೪। ಕಾಲಪಾಶಪರಿಕ್ಷಿಪ್ತಾಭವಂತಿಪುರುಷಾಹಿಯೇ ॥ ವಾಚ್ಯಾವಾ
ಚ್ಯಂನಜಾನಂತಿತೇನಿರಸ್ತಷಡಿಂದ್ರಿಯಾಃ ।೧೫। ಏವಮುಕ್ತ್ವಾತತೋರಾಮಂಸಂರುಧ್ಯಭ್ರುಕುಟೀಂತತಃ । ಸದದ
ರ್ಶಮಹಾಸಾಲಮವಿದೂರೇನಿಶಾಚರಃ ॥ ರಣೇಪ್ರಹರಣಸ್ಯಾರ್ಥೇಸರ್ವತೋಹ್ಯವಲೋಕಯನ್ ॥೧೬॥ ಸತಮುತ್ಪಾಟ

---

ಹೇರಾಕ್ಷಸ-ಎಲೈ ರಾಕ್ಷಸನೇ. ತವ-ನಿನ್ನ. ಜನಸ್ಥಾನೇ-ಜನಸ್ಥಾನವು, ಮುಕ್ತೈಃ-ನನ್ನ ಬಾಣಗಳಿಂದ, ಹತಸ್ಥಾನೇಸತಿ-ಹೊಡೆಯಲ್ಪಟ್ಟ ಸ್ಥಾನವುಳ್ಳದ್ದಾಗುತ್ತಿರಲಾಗಿ, ವನೇ-ಅರಣ್ಯದಲ್ಲಿ, ಮುನಯಃ-ಋಷಿಗಳು, ಸರ್ವತಃ-ಎಲ್ಲಾ ಕಡೆಯಲ್ಲಿ ನಿರ್ಭಯಾಃ-ಭಯವಿಲ್ಲದವನಾಗಿ ವಿಚರಿಷ್ಯಂತಿ-ಸಂಚರಿಸುವರು ॥೯॥ ಅನ್ಯಭಯಾವಹಾಃ-ಇತರರಿಗೆ ಭಯಂಕರರಾದ. ರಾಕ್ಷಸ್ಯಃ-ರಕ್ಕಸರ ಹೆಂಗಳು, ಹತಬಾಂಧವಾಃ-ಹೊಡೆಯಲ್ಪಟ್ಟ ಬಂಧುಗಳುಳ್ಳವರಾಗಿ ಬಾಷ್ಪಾರ್ದ್ರವದನಾಃ-ಕಂಬನಿಗಳಿಂ ನೆನೆದ ಮುಖವುಳ್ಳವರಾಗಿ, ಅದ್ಯ-ಈಗ, ಭಯಾತ್-ಭಯದಬೆಶೆಯಿಂದ, ದೀನಾಃ-ದೈನ್ಯನಾಗಿ ವಿಪ್ರಸರಿಷ್ಯಂತಿ-ಅಸ್ವತ್ರ ಓಡಿಹೋಗುತ್ತಾರೆ ॥೧೦॥ ಅದ್ಯ-ಈಗ, ಅನುರೂಪಕುಲಾಃ-ಸದೃಶವಾದ ಕುಲೋತ್ಪನ್ನರಾದ, ಪತ್ನ್ಯಃ-ಹೆಂಡತಿಯರು, ರಾವ ತಾಃ-ಆ ಹೆಂಗಳು, ಅದ್ಯ-ಈಗ, ನಿರರ್ಥಕಾಃ-ಕಾಮಾದಿ ಪುರುಷಾರ್ಥಗಳಿಲ್ಲದವರಾಗಿ. ಶೋಕರಸಜ್ಞಾಃ-ಶೋಕರಸವನ್ನು ತಿಳಿದವರು, ಭವಿಷ್ಯಂತಿ-ಆಗುವರು, ಯಾಸಾಂ-ಯಾವಹೆಂಗಳಿಗೆ, ಪತಿಃ-ಗಂಡನಾದ. ತ್ವಂ-ನೀನು, ಈದೃಶಃ-ಇಂಥಾವನಾದೆಯೋ, ॥೧೧॥ ಹೇನೃಶಂಸ-ಎಲೈ ಘಾತುಕನೇ ಹೇನೀಚ ಎಲೈ ನೀಚನೇ. ಹೇಕ್ಷುದ್ರಾತ್ಮನ್-ಎಲೈ ದುಷ್ಟಸ್ವಭಾವವುಳ್ಳವನೇ, ಹೇಬ್ರಾಹ್ಮಣಕಂಟಕ-ಎಲೋ ಬ್ರಾಹ್ಮಣರಿಗೆ ಶತ್ರುವೇ, ಯತ್ಕೃತೇ-ಯಾವ ನಿನ್ನನಿಮಿತ್ತವಾಗಿ, ನಿತ್ಯಂ-ನಿರಂತರವೂ, ಶಂಕಿತೈಃ-ಭಯಬೀಳುತ್ತಿರುವ, ಮುನಿಭಿಃ-ಋಷಿಗಳಿಂದ, ಅಗ್ನೌ-ಅಗ್ನಿಯಲ್ಲಿ, ಹವಿಃ-ಹವಿರ್ಭಾಗವು. ಪಾತ್ಯತೇ-ಹೋಮಮಾಡಲ್ಪಡುತ್ತದೋ, ಇತಿ-ಇಂತೆಂದು, ಅಬ್ರವೀತ್-ನುಡಿದನು, ॥೧೨॥ ಖರಃ-ಖರಾಸುರನು, ರೋಷಾತ್-ಕೋಪದಬೆಶೆಯಿಂದ ಖರತರಸ್ವನಃ-ಅತಿಕ್ರೂರವಾದ ಧ್ವನಿಯುಳ್ಳವನಾಗಿ, ರಣೇ-ಕಾಳಗದಲ್ಲಿ, ಏವಂಬ್ರುವಾಣಂ-ಈಪರಿಹೇಳುತ್ತಿರುವ, ಅಭಿಸಂರಬ್ಧಂ-ಬಹಳ ಕೋಪಿಷ್ಠನಾದ, ತಂರಾಘವಂ-ಆ ಶ್ರೀರಾಮನನ್ನು, ನಿರ್ಭರ್ತ್ಸಯಾಮಾಸ-ಘರ್ಜಿಸಿದನು ॥೧೩॥ ತ್ವಂ-ನೀನು, ಅವಲಿಪ್ತಃ-ಗರ್ವಿಷ್ಠನು ಅಸಿ-ಆಗಿದ್ದೀ. ದೃಢಂಖಲು-ನಿಶ್ಚಯವಾಗಿಯೇ, ಭಯೇಷ್ವಪಿ-ಭಯಕಾಲಗಳಲ್ಲಿಯೂ. ನಿರ್ಭಯಃ-ಭಯರಹಿತನು, ಅಸಿ-ಆಗಿದ್ದೀ, ತತಃ-ಆಕಾರಣದಬೆಶೆಯಿಂದ ತ್ವಂ-ನೀನು. ಮೃತ್ಯುವಶ್ಯಃ-ಯಮನಿಗೆ ವಶನಾಗಿ. ವಾಚ್ಯಾವಾಚ್ಯಂ-ಹೇಳತಕ್ಕಮಾತನ್ನು ಹೇಳಬಾರದಮಾತನ್ನು, ನಬುಧ್ಯಸೇ-ಅರಿಯುತ್ತಾರೆ ॥೧೪॥ ಯೇಪುರುಷಾಃ-ಯಾವಪುರುಷರು, ಕಾಲಪಾಶಪರಿಕ್ಷಿಪ್ತಾಃ-ಯಮಪಾಶದಿಂ ಕಟ್ಟಲ್ಪಟ್ಟವರು ಭವಂತಿ-ಆಗುವರೋ, ತೇ-ಅವರುಗಳು. ನಿರಸ್ತಷಡಿಂದ್ರಿಯಾಃ-ಹೋಗಲಾಡಿಸಲ್ಪಟ್ಟ ಇಂದ್ರಿಯವ್ಯಾಪಾರಗಳುಳ್ಳವರಾಗಿ, ಕಾರ್ಯಾಕಾರ್ಯಂ-ಕರ್ತವ್ಯಅಕರ್ತವ್ಯಗಳನ್ನು, ನಜಾನಂತಿ-ತಿಳಿಯಲಾರರು. ॥೧೫॥ ಏವಂ-ಈಪರಿಯಾಗಿ, ಸನಿಶಾಚರಃ-ಆ ರಾಕ್ಷಸನು, ರಾಮಂ-ಶ್ರೀರಾಮನಂ ಕುರಿತು, ಉಕ್ತ್ವಾ-ಹೇಳಿ, ತತಃ-ಬಳಿಕ. ಭ್ರುಕುಟೀಂ-ಕಣ್ಣುಬ್ಬುಗಳನ್ನು, ಸಂರುಧ್ಯ-ಗಂಟುಹಾಕಿ, ತತಃ-ಬಳಿಕ, ರಣೇ-ಕಾಳಗದಲ್ಲಿ. ಪ್ರಹರಣಸ್ಯಾರ್ಥೇ-ಆಯುಧಾರ್ಥವಾಗಿ, ಸರ್ವತಃ-ಎಲ್ಲಾ ಕಡೆಯಲ್ಲಿ, ಅವಲೋಕಯನ್-ನೋಡುತ್ತಿರುವವನಾಗಿ, ಅವಿದೂರೇ-ಸಮೀಪದಲ್ಲಿ, ಮಹಾಸಾಲಂ-ದೊಡ್ಡಮದ್ದೀಗಿಡವನ್ನು, ದದರ್ಶ-ಕಂಡನು॥೧೬

---

ಮುನಿಗಳೆಲ್ಲರು ಈ ವನದಲ್ಲಿ ಭೀತಿರಹಿತರಾಗಿ ಸಂಚಾರವಂ ಗೈಯ್ಯುವರು ॥೯॥ ಇದಲ್ಲದೆ ಈಗ ರಾಕ್ಷಸಸ್ತ್ರೀಯರು ಮರಣವನ್ನೈದಿದ ಬಂಧುಗಳುಳ್ಳವರಾಗಿ, ಕಂಬನಿಗಳಿಂದ ವ್ಯಾಪ್ತವಾದ ಮುಖಂಗಳುಳ್ಳವರಾಗಿ ಮತ್ತೊಂದು ಕಡೆಗೆ ಓಡಿಹೋಗುವರು ।೧೦। ಎಲೈ ರಾಕ್ಷಸನೇ! ಪತಿಯಾದವನಾದ ನೀನು ಇಂಥಾವನಾದಕಾರಣ ನಿನ್ನ ದೋಷದಿಂದ ಅವರೆಲ್ಲರು ಅನ್ಯಾಯವಾಗಿ ಅಳುವವರಾಗುವರು ।೧೧। ಎಲೈ ಘಾತುಕನೇ! ನೀಚನೇ! ಬ್ರಾಹ್ಮಣರಿಗೆಲ್ಲ ಕಂಟಕಪ್ರಾಯನಾದವನೇ! ಯಾವ ನಿನಗಾಗಿ ಹೆದರುತ್ತಾ ಬ್ರಾಹ್ಮಣರು ಹವಿಸ್ಸನ್ನು ಅಗ್ನಿಯಲ್ಲಿ ಹೋಮಂಗೈಯ್ಯುತ್ತಿರುವರೋ, ಅಂಥಾ ನಿನ್ನನ್ನು ಕೊಂದು ಅವರಭೀತಿಯನ್ನು ಪರಿಹರಿಸುವನೆಂದು ನುಡಿಯುತ್ತಿರುವ, ಆ ಶ್ರೀರಾಮನನ್ನು, ಖರಾಸುರನು ಗದರಿಕೊಂಡು ನುಡಿವನದೆಂತೆನೆ,—।೧೨। ಎಲೈ ಮನುಷ್ಯನೇ! ಬಹು ಭೀತಿಪಡುವಕಾಲದಲ್ಲಿಯೂ ಕೂಡಾ ನಿರ್ಭಯವಾಗಿರುವವನಾಗಿ, ವಾಚ್ಯಾವಾಚ್ಯಂಗಳಂ ಬಿಟ್ಟು ಬಹು ಕೊಬ್ಬಿದವನಾಗಿದ್ದೀ, ಮೃತ್ಯುವಿಗೆ ಅಧೀನನಾಗಿರುವದನ್ನು ತಿಳಿದುಕೊಳ್ಳಲಿಲ್ಲ; ಲೋಕದಲ್ಲಿ ಕಾಲಪಾಶದಿಂದ ಬಂಧಿತರಾದವರು ಯಾರೋ ಅವರುಗಳು ಇದು ಮಾಡಬಹುದು ಇದು ಮಾಡತಕ್ಕದ್ದಲ್ಲ ಎಂಬದನ್ನು ತಿಳಿಯರು, ಎಂ

ಧ್ಯಾಮಾಸಸಂದಶ್ಯದಶನಚ್ಛದಂ । ತಂಸಮುತ್ಕ್ಷಿಪ್ಯಬಾಹುಭ್ಯಾಂವಿನದ್ಯಚಮಹಾಬಲಃ । ರಾಮಮುದ್ದಿಶ್ಯಚಿಕ್ಷೇಪಹತಸ್ತ್ವಮಿತಿಚಾಬ್ರವೀತ್ ।೧೮। ತಮಾಪತಂತಂಬಾಣೌಘೈಶ್ಛಿತ್ವಾರಾಮಃಪ್ರತಾಪವಾನ್ । ರೋಷಮಾಹಾರಯತ್ತೀವ್ರಂನಿಹಂತುಂಸಮರೇಖರಂ ।೧೯। ಜಾತಸ್ವೇದಸ್ತತೋರಾಮೋರೋಷಾದ್ರಕ್ತಾಂತಲೋಚನಃ । ನಿರ್ಬಿಭೇದಸಹಸ್ರೇಣಬಾಣಾನಾಂಸಮರೇಖರಂ ।೨೦। ತಸ್ಯಬಾಣಾಂತರಾದ್ರಕ್ತಂಬಹುಸುಸ್ರಾವಫೇನಿಲಂ । ಗಿರೇಃಪ್ರಸ್ರವಣಸ್ಯೇವತೋಯಧಾರಾಪರಿಸ್ರವಃ ।೨೧। ವಿಹ್ವಲಸ್ಸಕೃತೋಬಾಣೈಃಖರೋರಾಮೇಣಸಂಯುಗೇ । ಮತ್ತೋರುಧಿರಗಂಧೇನತಮೇವಾಭ್ಯದ್ರವದ್ದ್ರುತಂ ।೨೨। ತಮಾಪತಂತಂಸಂರಬ್ಧಂಕೃತಾಸ್ತ್ರೋರುಧಿರಾಪ್ಲುತಂ । ಅಪಾಸರ್ಪತ್ಪ್ರತಿಪದಂಕಿಂಚಿತ್ತ್ವರಿತವಿಕ್ರಮಃ ।೨೩। ತತಃಪಾವಕಸಂಕಾಶಂವಧಾಯಸಮರೇಶರಂ । ಖರಸ್ಯರಾಮೋಜಗ್ರಾಹಬ್ರಹ್ಮದಂಡಮಿವಾಪರ

ಮಹಾಬಲಃ-ಬಹಳ ಸಾಮರ್ಥ್ಯವಂತನಾದ, ಸಃ-ಆ ಖರಾಸುರನು, ದಶನಚ್ಛದಂ-ಅಧರೋಷ್ಠಗಳನ್ನು, ಸಂದಶ್ಯ-ಕಚ್ಚಿಕೊಂಡು. ಬಾಹುಭ್ಯಾಂ-ಭುಜಗಳಿಂದ, ತಂ-ಆ ಗಿಡವನ್ನು, ಉತ್ಕ್ಷಿಪ್ಯ-ಕಿತ್ತುಕೊಂಡು, ವಿನದ್ಯ-ಕೂಗಿ, ರಾಮಂ-ಶ್ರೀರಾಮನಂಕುರಿತು, ಉದ್ದಿಶ್ಯ-ಲಕ್ಷ್ಯವನ್ನಾಗಿ ಮಾಡಿ, ತಂ-ಆ ಗಿಡವನ್ನು, ಸಮುತ್ಕ್ಷಿಪ್ಯ-ಎತ್ತಿಹಾಕಿ, ತ್ವಂ-ನೀನು, ಹತೋಸಿ-ಇತಿ-ಸತ್ತುಹೋದೆಯೆಂದು, ಅಬ್ರವೀತ್ ಚ-ಹೇಳಲೂ ಹೇಳಿದನು ॥೧೮॥ ಪ್ರತಾಪವಾನ್-ಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು. ಆಪತಂತಂ-ಬರುತ್ತಿರುವ, ತಂ-ಆ ಗಿಡವನ್ನು. ಬಾಣೌಘೈಃ-ಬಾಣಸಮೂಹಗಳಿಂದ ಛಿತ್ವಾ-ಛೇದಿಸಿ, ಸಮರೇ-ಕಾಳಗದಲ್ಲಿ, ಖರಂ-ಖರಾಸುರನನ್ನು, ತೀವ್ರಂ-ಬಹಳ ತೀಕ್ಷ್ಣವಾದ, ರೋಷಂ-ಕೋಪವನ್ನು ಆಹಾರಯತ್-ತೆಗೆದುಕೊಂಡನು ॥೧೯॥ ತತಃ-ಬಳಿಕ, ಜಾತಸ್ವೇದಃ-ಹುಟ್ಟಿದ ಬೆವರುಳ್ಳ, ರಾಮಃ-ಶ್ರೀರಾಮನು, ರೋಷಾತ್-ರೋಷದಿಂದ, ರಕ್ತಾಂತಲೋಚನಃ-ಕೆಂಪಾದ ಕಡೆಗಣ್ಣುಗಳುಳ್ಳವನಾಗಿ, ಸಮರೇ-ಕಾಳಗದಲ್ಲಿ ಬಾಣಾನಾಂ ಬಾಣಗಳ, ಸಹಸ್ರೇಣ-ಸಾವಿರದಿಂದ, ಖರಂ-ಖರಾಸುರನನ್ನು, ನಿರ್ಬಿಭೇದ-ಸೀಳಿದನು ॥೨೦॥ ಬಾಣಾಂತರಾತ್-ಬಾಣಗಳಿಂದ ಮಾಡಲಟ್ಟ ಶರೀರದ ರಂಧ್ರಗಳಿಂದ, ಫೇನಿಲಂ-ನೊರೆಯುಳ್ಳ, ಬಹು-ಬಹಳವಾದ, ತಸ್ಯ-ಆ ಖರಾಸುರನ, ರಕ್ತಂ-ರಕುತವು, ಪ್ರಸ್ರವಣಸ್ಯ-ಪ್ರಸ್ರವಣವೆಂಬ, ಗಿರೇಃ-ಬೆಟ್ಟದ, ತೋಯಧಾರಾಪರಿಸ್ರವಃ ಇವ-ಉದಕಧಾರಾಪ್ರವಾಹದಂತೆ, ಸುಸ್ರಾವ-ಸುರಿಯುತ್ತಿತ್ತು ॥೨೧॥ ರಾಮೇಣ-ಶ್ರೀರಾಮನಿಂದ, ಸಂಯುಗೇ-ಕಾಳಗದಲ್ಲಿ, ಬಾಣೈಃ-ಬಾಣಗಳಿಂದ, ವಿಹ್ವಲಃ-ನಿರ್ವಿಣ್ಣನಾಗಿ, ಸಃ ಖರಃ-ಆ ಖರಾಸುರನು, ರುಧಿರಗಂಧೇನ-ರಕುತದ ದುರ್ವಾಸನೆಯಿಂದ. ಮತ್ತಃ-ಮದವೇರಿದವನಾಗಿ. ತಮೇವ-ಆ ಶ್ರೀರಾಮನನ್ನೇ, ದ್ರುತಂ-ಜಾಗ್ರತೆಯಾಗಿ ಅಭ್ಯದ್ರವತ್-ಓಡಿಬಂದನು ॥೨೨॥ ಕೃತಾಸ್ತ್ರಃ-ಮಾಡಲ್ಪಟ್ಟ ಅಸ್ತ್ರಾಭ್ಯಾಸವುಳ್ಳ ಶ್ರೀರಾಮನು, ಆಪತಂತಂ-ಬರುತ್ತಿರುವ, ಸಂರಬ್ಧಂ-ಕೋಪಿಸಿದ್ದ, ರುಧಿರಾಪ್ಲುತಂ-ರಕ್ತದಿಂ ವ್ಯಾಪ್ತನಾದ, ತಂ-ಆ ಖರಾಸುರನಂಕುರಿತು, ತ್ವರಿತವಿಕ್ರಮಃ-ತ್ವರಿತವಾದ ಪಾದನ್ಯಾಸವುಳ್ಳವನಾಗಿ, ಪ್ರತಿಪದಂ-ಪ್ರತ್ಯೇಕವಾದ ಪಾದವುಳ್ಳದ್ದಂತೆ, ಅಪಾಸರ್ಪತ್-ಹಿಂತಿರಿಗಿಬಂದನು, (ಯುದ್ಧವು-ಪ್ರತಿಪದಂ-ಪ್ರತಿಮಾರ್ಗದಲ್ಲಿ ರಕ್ತಬಿಂದುಗಳು ಬಿದ್ದಿರೆಂಬ ಬುದ್ಧಿಯಿಂದ, ಅಪಾಸರ್ಪತ್-ಹಿಂದಕ್ಕೆ ಬಂದನು.) (ಅಥವಾ-ಬಾಣಬಿಡುವದಕ್ಕೆ ಅವಕಾಶವಿಲ್ಲದಂತೆ ಅತಿಸಮೀಪಕ್ಕೆ ಬಂದಿರುವ ಖರಾಸುರನಂ ಕುರಿತು ಬಾಣಸಂಧಾನಮಾಡುವದಕ್ಕೆ ಎಷ್ಟು ಅವಕಾಶವೋ ಅಷ್ಟು ಅವಕಾಶಮಾಡಿಕೊಂಡು ೨-೩ ಹೆಜ್ಜೆಗಳು ಹಿಂದಕ್ಕೆ ಬಂದನು ಇದು ತಾನೆ ಸರ್ವಕಾಲದಲ್ಲಿ ಶೂರರಾದವರಿಗೆಸಮ್ಮತವಾದದ್ದೇ ಹೊರತು ಪರಾಜಯ ಚಿಹ್ನವಲ್ಲವೆಂದು ತಾತ್ಪರ್ಯವು)॥ ೨೩॥ ತತಃ-ಬಳಿಕ. ರಾಮಃ-ಶ್ರೀರಾಮನು ಸಮರೇ- ಕಾಳಗದಲ್ಲಿ ಖರಸ್ಯ-ಖರಾಸುರನ, ವಧಾಯ-ಸಂಹಾರಕ್ಕಾಗಿ, ಅಪರಂ-ಮತ್ತೊಂದಾದ ಯಮದಂಡವೋ ಎಂಬೂತಿರುವ, ಪಾವಕಸಂಕಾಶಂ-ಅಗ್ನಿ

ಬದಾಗಿ ಖರಾಸುರನು ಬಹಳಕೋಪದಿಂ ನುಡಿದು, ಕಣ್ಣುಹುಬ್ಬುಗಳಂ ಗಂಟಿಕ್ಕಿ, ತನ್ನ ಸಮೀಪದಲ್ಲಿರುವ ಮಹತ್ತರವಾದ ದೊಡ್ಡದಾದೊಂದು ಸಾಲವೃಕ್ಷವಂ ಕಂಡು, ಅದನ್ನು ಸಮೂಲವಾಗಿ ಕಿತ್ತುಕೊಂಡು, ಘಟ್ಟಿಯಾಗಿ ಅಟ್ಟಹಾಸವಂ ಗೈದು, ಶ್ರೀರಾಮನನ್ನುದ್ದೇಶಿಸಿ ಎಸೆದು ನೀನು ಸತ್ತವನಾದೆಂದು ನುಡಿದವನಾದನು।೧೮। ಅನಂತರದಲ್ಲಿ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು, ಬರುತಿರುವ ಆ ವೃಕ್ಷವನ್ನು, ಬಾಣಂಗಳಿಂದ ಛೇದಿಸಿ, ಆ ಖರಾಸುರನಂ ಕುರಿತು ಬಹು ಕೋಪವಂ ಗೈದು, ಬೆವರಿದ ಶರೀರವುಳ್ಳವನಾಗಿ, ಕೆಂಗಣ್ಣುಗಳುಳ್ಳವನಾಗಿಯೂ, ಇರುವವನಾಗಿ, ಸಹಸ್ರಬಾಣಂಗಳಿಂದ, ಆ ಖರಾಸುರನಂ ಹೊಡೆದನು।೧೯। ಅನಂತರದಲ್ಲಿ ಆ ಬಾಣಗಳ ರಂಧ್ರಂಗಳಿಂದ ರಕುತವು, ಬೆಟ್ಟದಿಂದ ಉದಕವು ಸ್ರವಿಸುವಂತೆ ಸ್ರವಿಸುತ್ತಿತ್ತು।೨೧। ಈ ರೀತಿಯಲ್ಲಿ ಆ ಕಾಳಗದಲ್ಲಿ ರಾಮಬಾಣಂಗಳಿಂದ ನಿರ್ವಿಣ್ಣನಾಗಿ, ಆ ಖರಾಸುರನು ರಕ್ತದ ದುರ್ವಾಸನೆಯಿಂದ ಮತ್ತನಾಗಿ ಆ ಶ್ರೀರಾಮನನ್ನೇ ಕುರಿತು ಓಡಿಬಂದನು।೨೨। ಅನಂತರದಲ್ಲಿ ಅಸ್ತ್ರಪ್ರಯೋಗವಂ ಬಲ್ಲವನಾದ ಶ್ರೀರಾಮನು, ಮೇಲ್ಬಿದ್ದು ಬರುವ ಆ ಖರಾಸುರನಂ ಕಂಡು, ಯೆರಡುಮೂರು ಹೆಜ್ಜೆಗಳು ಹಿಂದಕ್ಕೆಸಾರಿದನು।೨೩। ಅನಂತರದಲ್ಲಿ ಶ್ರೀರಾಮನು, ಆ ಖರಾಸುರನ ಸಂಹಾರಾರ್ಥವಾಗಿ ಯಮದಂಡದಂತಿರುವ ಮತ್ತು ಅಗ್ನಿಯಂತೆ ಬೆಳಗುವ ಬಾಣವಂ ತೆಗದುಕೊಂಡನು।೨೪। (ಆ ಬಾಣವು ಯಾವದೆಂದರೆ) ಧರ್ಮಾತ್ಮನಾದ ಆ ಶ್ರೀರಾಮನು ಮಹಾ ಬುದ್ಧಿ

ಧೀ ॥೨೪॥ ಸತಂದತ್ತಂಮರುತ್ವತಾಸುರರಾಜೇನಧೀಮತಾ । ಸಂದಧೇಚಾಪಿಧರ್ಮಾತ್ಮಾಮುಕ್ತುಕಾಮೋಚಖರಂಪ್ರತಿ ॥೨೫॥ ಸವಿಮುಕ್ತೋಮಹಾಬಾಣೋನಿರ್ಘಾತಸಮನಿಸ್ವನಃ । ರಾಮೇಣಧನುರಾಯಮ್ಯಖರಸ್ಯೋರಸ್ಯಪಾತಯತ್ ॥೨೬॥ ಸಪಪಾತಖರೋಭೂಮೌದಹ್ಯಮಾನಶ್ಶರಾಗ್ನಿನಾ । ರುದ್ರೇಣೇವವಿನಿರ್ದಗ್ಧಶ್ಶ್ವೇತಾರಣ್ಯೇಯಥಾಂಧಕಃ ॥೨೭॥ ಸವೃತ್ರಇವವಜ್ರೇಣಫೇನೇನನಮುಚಿರ್ಯಥಾ । ಬಲೋವೇಂದ್ರಾಶನಿಹತೋನಿಪಪಾತಹತಃಖರಃ ॥೨೮॥ ತತೋರಾಜರ್ಷಯಸ್ಸರ್ವೇಸಂಗತಾಃಪರಮರ್ಷಯಃ । ಸಭಾಜ್ಯಮುದಿತಾರಾಮಮಿದಂವಚನಮಬ್ರುವನ್ ॥೨೯॥ ಏತದರ್ಥಂಮಹಾತೇಜಾಮಹೇಂದ್ರಃಪಾಕಶಾಸನಃ । ಶರಭಂಗಾಶ್ರಮಂಪುಣ್ಯಮಾಜಗಾಮಪುರಂದರಃ ॥೩೦॥ ಆನೀತಸ್ತ್ವಮಿಮಂದೇಶಮುಪಾಯೇನಮಹರ್ಷಿಭಿಃ । ಏಷಾಂವಧಾರ್ಥಂಕ್ರೂರಾಣಾಂರಕ್ಷಸಾಂಪಾಪಕರ್ಮಣಾಂ ॥೩೧॥ ತದಿದಂನಃಕೃತಂಕಾರ್ಯಂತ್ವಯಾದಶರಥಾತ್ಮಜ । ಸುಖಂಧರ್ಮಂಚರಿಷ್ಯಂತಿದಂಡಕೇಷುಮಹರ್ಷಯಃ ॥೩೨॥ ಏತಸ್ಮಿನ್ನಂತರೇದೇವಾಶ್ಚಾರಣೈಸ್ಸಹಸಂಗ

---

ಕಿ.೯. ಸಮಾನನಾದ, ಶರಂ-ಬಾಣವನ್ನು, ಜಗ್ರಾಹ-ತೆಗೆದುಕೊಂಡನು ॥೨೪॥ ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ ಶ್ರೀರಾಮನು, ಧೀಮತಾ-ಬುದ್ಧಿಶಾಲಿಯಾದ, ಸುರರಾಜ್ಞೇನ-ದೇವರಾಜನಾದ, ಮರುತ್ವತಾ-ದೇವೇಂದ್ರನಿಂದ, ದತ್ತಂ-ಕೊಡಲ್ಪಟ್ಟ, ತಂ-ಆ ಬಾಣವನ್ನು, ಖರಂಪ್ರತಿ-ಖರಾಸುರನನ್ನುದ್ದೇಶಿಸಿ, ಸಂದಧೇ-ಸಂಧಾನಮಾಡಿದನು ॥೨೫॥ ರಾಮೇಣ-ಶ್ರೀರಾಮನಿಂದ, ಧನುಃ-ಧನುಸ್ಸನ್ನು, ಆಯಮ್ಯ-ಬೊಗ್ಗಿಸಿ, ವಿಮುಕ್ತಃ-ಬಿಸಲ್ಪಟ್ಟ, ಸಮಹಾಬಾಣಃ-ಆ ದೊಡ್ಡಬಾಣವು, ನಿರ್ಘಾತಸಮನಿಸ್ವನಃ-ಸಿಡಿಲಿಗೆ ಸಮಾನವಾದ ಧ್ವನಿಗೊಂಡದ್ದಾಗಿ, ಖರಸ್ಯ-ಖರಾಸುರನ, ಉರಸಿ-ಯೆದೆಯಮೇಲೆ, ಅಪಾತಯತ್-ಬಿತ್ತು ॥೨೬॥ ಸಖರಃ-ಆ ಖರಾಸುರನು, ಶ್ವೇತಾರಣ್ಯೇ-ಶ್ವೇತಾರಣ್ಯದಲ್ಲಿ, ರುದ್ರೇಣ-ಪರಮೇಶ್ವರನಿಂದ, ವಿನಿರ್ದಗ್ಧಃ-ದಹಿಸಲ್ಪಟ್ಟ, ಅಂಧಕೋಯಥಾ-ಅಂಧಕಾಸುರನಂತೆ, ಶರಾಗ್ನಿನಾ-ಬಾಣಾಗ್ನಿಯಿಂದ, ದಹ್ಯಮಾನಃ-ದಹಿಸಲ್ಪಟ್ಟವನಾಗಿ, ಭೂಮೌ-ನೆಲದಲ್ಲಿ, ಪಪಾತ-ಬಿದ್ದನು ॥೨೭॥ ಸಖರಃ-ಆ ಖರಾಸುರನು, ಹತಃ-ರಾಮಬಾಣದಿಂ ಹೊಡೆಯಲ್ಪಟ್ಟವನಾಗಿ, ವಜ್ರೇಣ-ವಜ್ರಾಯುಧದಿಂದ, ವೃತ್ರಇವ-ವೃತ್ರಾಸುರನಂತೆ, ಫೇನೇನ-ನೊರೆಯಿಂದ, ನಮುಚಿರ್ಯಥಾ-ನಮುಚಿಎಂಬ ರಾಕ್ಷಸನಂತೆ, ಇಂದ್ರಾಶನಿಹತಃ-ಇಂದ್ರಾಯುಧದಿಂ ಹೊಡೆಯಲ್ಪಟ್ಟ, ಬಲೋವಾ-ಬಲಾಸುರನಂತೆ, ನಿಪಪಾತ-ಬಿದ್ದನು ॥೨೮॥ ತತಃ-ಬಳಿಕ, ಸರ್ವೇ-ಸಮಸ್ತರಾದ, ರಾಜರ್ಷಯಃ-ರಾಜಋಷಿಗಳೂ, ಪರಮರ್ಷಯಃ-ಬ್ರಹ್ಮಋಷಿಗಳೂ, ಸಂಗತಾಃ-ಗುಂಪುಸೇರಿದವರಾಗಿ, ಮುದಿತಾಃ-ಸಂತೋಷಗೊಂಡವರಾಗಿ, ರಾಮಂ-ಶ್ರೀರಾಮನನ್ನು, ಸಭಾಜ್ಯ-ಸನ್ಮಾನಮಾಡಿ, ಇದಂವಚನಂ-ಈ ಮಾತನ್ನು, ಅಬ್ರುವನ್-ನುಡಿದರು ॥೨೯॥ ಏತದರ್ಥಂ-ಈ ಕಾರ್ಯನಿಮಿತ್ತವಾಗಿ, ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ಪಾಕಶಾಸನಃ-ಪಾಕಾಸುರಸಂಹಾರಕನಾದ, ಪುರಂದರಃ-ಶತ್ರುಪುರಗಳಂ ದಹಿಸುತ್ತಿರುವ, ಮಹೇಂದ್ರಃ-ದೇವೇಂದ್ರನು, ಪುಣ್ಯಂ-ಪುಣ್ಯಕರವಾದ, ಶರಭಂಗಾಶ್ರಮಂ-ಶರಭಂಗಮಹರ್ಷಿಯ ಆಶ್ರಮವಂಕುರಿತು, ಆಜಗಾಮ-ಬಂದಿದ್ದನು ॥೩೦॥ ಮಹರ್ಷಿಭಿಃ-ಋಷಿಗಳಿಂದ, ಉಪಾಯೇನ-ಆಯಾಯ ಆಶ್ರಮಾಗಮನ ರೂಪವ್ಯಾಜದಿಂದ, ಕ್ರೂರಾಣಾಂ-ಭಯಂಕರರಾದ, ಪಾಪಕರ್ಮಣಾಂ-ಪಾಪಕೃತ್ಯವಂತರಾದ, ಏಷಾಂ ರಕ್ಷಸಾಂ-ಈ ರಾಕ್ಷಸರ, ವಧಾರ್ಥಂ-ಸಂಹಾರಾರ್ಥವಾಗಿ, ತ್ವಂ-ನೀನು, ಇಮಂದೇಶಂ-ಈ ಪ್ರದೇಶವಂಕುರಿತು, ಆನೀತಃ-ಕರೆದುಕೊಂಡು ಬರಲ್ಪಟ್ಟಿದ್ದೀ ॥೩೧॥ ಹೇದಶರಥಾತ್ಮಜ-ಎಲೈ ಶ್ರೀರಾಮನೇ, ತ್ವಯಾ-ನಿನ್ನಿಂದ, ನಃ-ನಮ್ಮಗಳ, ತದಿದಂ-ಆ ಈ, ಕಾರ್ಯಂ-ಕೆಲಸವು, ಕೃತಂ-ಮಾಡಲ್ಪಟ್ಟಿತು, ದಂಡಕೇಷು-ದಂಡಕಾರಣ್ಯದಲ್ಲಿ, ಮಹರ್ಷಯಃ-ಬ್ರಹ್ಮರ್ಷಿಗಳು, ಸುಖಂ-ಸುಖವಾಗಿ, ಧರ್ಮಂ-ಧರ್ಮವನ್ನು, ಚರಿಷ್ಯಂತಿ-ನಡಿಸುವರು ॥೩೨॥ ಏತಸ್ಮಿನ್ನಂತರೇ-

---

ಶಾಲಿಯಾದ ದೇವೇಂದ್ರನಿಂದ ಯಾವ ಬಾಣವು ಕೊಡಲ್ಪಟ್ಟಿತ್ತೋ, ಆ ಬಾಣವನ್ನು ಸಂಧಾನವಂ ಗೈದು, ಬಲವಾಗಿ ಕೋದಂಡವಂ ಸೆಳೆದು, ಅದನ್ನು ಲಕ್ಷ್ಯವನ್ನಿಟ್ಟು ಆ ಖರಾಸುರನ ಯೆದೆಯಲ್ಲಿ ಬಿಟ್ಟವನಾಗಲು, ಆ ಮಹಾಬಾಣವು ಸಿಡಿಲಿನಂತೆ ಶಬ್ದವಂ ಗೈಯ್ಯುತ್ತಾ ಅವನ ವಕ್ಷಸ್ಥಳದಲ್ಲಿ ಬಿದ್ದದ್ದಾಯಿತು ॥೨೬॥ ಅನಂತರದಲ್ಲಿ ಆ ಖರಾಸುರನು ಶ್ವೇತಾರಣ್ಯದಲ್ಲಿ ಪರಮೇಶ್ವರನಿಂದ ಹೊಡೆಯಲ್ಪಟ್ಟ ಅಂಧಕಾಸುರನಂತೆ ಆ ಬಾಣದಿಂದ ದಹಿಸಲ್ಪಟ್ಟವನಾಗಿ ನೆಲದಲ್ಲಿ ಬಿದ್ದನು ॥೨೭॥ ಈ ರೀತಿಯಾಗಿ ಆ ಖರಾಸುರನು ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರಾಸುರನಂತೆಯೂ, ನಮುಚಿಯಂತೆಯೂ, ಬಲಾಸುರನಂತೆಯೂ, ಕೆಳಗೆ ಬಿದ್ದವನಾಗಲು ಬಳಿಕ ಸಮಸ್ತರಾದ ರಾಜರ್ಷಿಗಳು ಪರಮರ್ಷಿಗಳೂ ಇವರೆಲ್ಲ ಬಹು ಸಂತೋಷದಿಂದ ಗುಂಪುಗುಂಪುಗಳಾಗಿ ಸೇರಿ, ಶ್ರೀರಾಮನಂ ಶ್ಲಾಘಿಸುತ್ತಾ ನುಡಿವರದೆಂತೆನೆ,— ॥೨೯॥ ಇದಕ್ಕಾಗಿಯೇ ಮಹಾ ತೇಜೋವಂತನಾದ ದೇವೇಂದ್ರನು ಪುಣ್ಯಕರವಾದ ಶರಭಂಗಮುನಿಯ ಆಶ್ರಮಕ್ಕೆ ಬಂದವನಾದನು ॥೩೦॥ ಪಾಪಕಾರಿಗಳಾದ ಈ ರಾಕ್ಷಸರ ಸಂಹಾರಾರ್ಥವಾಗಿ ಉಪಾಯದಿಂದ ಈ ಪ್ರದೇಶಕ್ಕೆ ಮಹರ್ಷಿಗಳಿಂದ ಕರೆದುಕೊಂಡು ಬರಲ್ಪಟ್ಟವನಾದೆ. ಎಲೈ ಶ್ರೀರಾಮನೇ ನಮಗಾಗಿ ಈ ಕಾರ್ಯವು ಮಾಡಲ್ಪಟ್ಟಿತು, ಈ ದಂಡಕಾರಣ್ಯದಲ್ಲಿ ಮಹಾಮುನಿಗಳು ಸುಖದಿಂ ಧರ್ಮವ [illegible] ಯುತ್ತಿರುವರೆಂದು ನುಡಿಯುತ್ತಿರಲು, ಇಷ್ಟರಲ್ಲಿ ದೇವತೆಗಳು [illegible]

ಯಥಾ ಮಹಾಸಂದಶ್ಯ ದಶನಚ್ಛದಂ । ತಂ ಸಮುತ್ಕ್ಷಿಪ್ಯ ಬಾಹುಭ್ಯಾಂ ವಿನದ್ಯ ಚ ಮಹಾಬಲಃ । ರಾಮಮುದ್ದಿಶ್ಯ ಚಿಕ್ಷೇಪ ಹತಸ್ತ್ವಮಿತಿ ಚಾಬ್ರವೀತ್ ॥೧೮॥ ತಮಾಪತಂತಂ ಬಾಣೌಘೈಶ್ಛಿತ್ತ್ವಾ ರಾಮಃ ಪ್ರತಾಪವಾನ್ । ರೋಷಮಾಹಾರಯತ್ತೀವ್ರಂ ನಿಹಂತುಂ ಸಮರೇ ಖರಂ ॥೧೯॥ ಜಾತಸ್ವೇದಸ್ತತೋ ರಾಮೋ ರೋಷಾದ್ರಕ್ತಾಂತಲೋಚನಃ । ನಿರ್ಬಿಭೇದ ಸಹಸ್ರೇಣ ಬಾಣಾನಾಂ ಸಮರೇ ಖರಂ ॥೨೦॥ ತಸ್ಯ ಬಾಣಾಂತರಾದ್ರಕ್ತಂ ಬಹು ಸುಸ್ರಾವ ಫೇನಿಲಂ । ಗಿರೇಃ ಪ್ರಸ್ರವಣಸ್ಯೇವ ತೋಯಧಾರಾಪರಿಸ್ರವಃ ॥೨೧॥ ವಿಹ್ವಲಸ್ಸ ಕೃತೋ ಬಾಣೈಃ ಖರೋ ರಾಮೇಣ ಸಂಯುಗೇ । ಮತ್ತೋ ರುಧಿರಗಂಧೇನ ತಮೇವಾಭ್ಯದ್ರವದ್ದ್ರುತಂ ॥೨೨॥ ತಮಾಪತಂತಂ ಸಂರಬ್ಧಂ ಕೃತಾಸ್ತ್ರೋ ರುಧಿರಾಪ್ಲುತಂ । ಅಪಾಸರ್ಪತ್ಪ್ರತಿಪದಂ ಕಿಂಚಿತ್ತ್ವರಿತವಿಕ್ರಮಃ ॥೨೩॥ ತತಃ ಪಾವಕಸಂಕಾಶಂ ವಧಾಯ ಸಮರೇ ಶರಂ । ಖರಸ್ಯ ರಾಮೋ ಜಗ್ರಾಹ ಬ್ರಹ್ಮದಂಡಮಿವಾಪರ

---

ಮಹಾಬಲಃ-ಬಹಳ ಸಾಮರ್ಥ್ಯವುಳ್ಳವನಾದ, ಸಃ-ಆ ಖರಾಸುರನು, ದಶನಚ್ಛದಂ-ಅಧರೋಷ್ಠಗಳನ್ನು, ಸಂದಶ್ಯ-ಕಚ್ಚಿಕೊಂಡು. ಬಾಹುಭ್ಯಾಂ-ಭುಜಗಳಿಂದ, ತಂ-ಆ ಗಿಡವನ್ನು, ಉತ್ಕ್ಷಿಪ್ಯ-ಎತ್ತಿಕೊಂಡು, ವಿನದ್ಯ-ಕೂಗಿ, ರಾಮಂ-ಶ್ರೀರಾಮನಂಕುರಿತು, ಉದ್ದಿಶ್ಯ-ಲಕ್ಷ್ಯವನ್ನಾಗಿ ಮಾಡಿ, ತಂ-ಆ ಗಿಡವನ್ನು, ಚಿಕ್ಷೇಪ-ಎತ್ತಿಹಾಕಿ, ತ್ವಂ-ನೀನು, ಹತೋಸೀತಿ-ಸತ್ತುಹೋದೆಯೆಂದು, ಅಬ್ರವೀಚ್ಚ-ಹೇಳಲೂ ಹೇಳಿದನು ॥೧೮॥ ಪ್ರತಾಪವಾನ್-ಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು. ಆಪತಂತಂ-ಬರುತ್ತಿರುವ, ತಂ-ಆ ಗಿಡವನ್ನು. ಬಾಣೌಘೈಃ-ಬಾಣವೃಷ್ಟಿಯಿಂದ ಛಿತ್ವಾ-ಛೇದಿಸಿ, ಸಮರೇ-ಕಾಳಗದಲ್ಲಿ, ಖರಂ-ಖರಾಸುರನನ್ನು, ತೀವ್ರಂ-ಬಹಳ ತೀಕ್ಷ್ಣವಾದ, ರೋಷಂ-ಕೋಪವನ್ನು ಆಹಾರಯತ್-ತೆಗೆದುಕೊಂಡನು ॥೧೯॥ ತತಃ-ಬಳಿಕ, ಜಾತಸ್ವೇದಃ-ಹುಟ್ಟಿದ ಬೆವರುಳ್ಳ, ರಾಮಃ-ಶ್ರೀರಾಮನು, ರೋಷಾತ್-ರೋಷದದೆಸೆಯಿಂದ, ರಕ್ತಾಂತಲೋಚನಃ-ಕೆಂಪಾದ ಕಡೆಗಣ್ಣುಗಳುಳ್ಳವನಾಗಿ, ಸಮರೇ-ಕಾಳಗದಲ್ಲಿ ಬಾಣಾನಾಂ ಬಾಣಗಳ, ಸಹಸ್ರೇಣ-ಸಾವಿರದಿಂದ, ಖರಂ-ಖರಾಸುರನನ್ನು, ನಿರ್ಬಿಭೇದ-ಸೀಳಿದನು ॥೨೦॥ ಬಾಣಾಂತರಾತ್-ಬಾಣಗಳಿಂದ ಮಾಡಲ್ಪಟ್ಟ ಶರೀರದ ರಂಧ್ರಗಳಿಂದ, ಫೇನಿಲಂ-ನೊರೆಯುಳ್ಳ, ಬಹು-ಬಹಳವಾದ, ತಸ್ಯ-ಆ ಖರಾಸುರನ, ರಕ್ತಂ-ರಕ್ತವು, ಪ್ರಸ್ರವಣಸ್ಯ-ಪ್ರಸ್ರವಣವೆಂಬ, ಗಿರೇಃ-ಬೆಟ್ಟದ. ತೋಯಧಾರಾಪರಿಸ್ರವಇವ-ಉದಕಧಾರಾಪ್ರವಾಹದಂತೆ, ಸುಸ್ರಾವ-ಸುರಿಯುತ್ತಿತ್ತು ॥೨೧॥ ರಾಮೇಣ-ಶ್ರೀರಾಮನಿಂದ. ಸಂಯುಗೇ-ಕಾಳಗದಲ್ಲಿ, ಬಾಣೈಃ-ಬಾಣಗಳಿಂದ, ವಿಹ್ವಲಃ-ನಿರ್ವಿಣ್ಣನಾಗಿ, ಸಖರಃ-ಆ ಖರಾಸುರನು, ರುಧಿರಗಂಧೇನ-ರಕ್ತದ ದುರ್ವಾಸನೆಯಿಂದ. ಮತ್ತಃ-ಮದವೇರಿದವನಾಗಿ. ತಮೇವ-ಆ ಶ್ರೀರಾಮನನ್ನೇ, ದ್ರುತಂ-ಜಾಗ್ರತೆಯಾಗಿ ಅಭ್ಯದ್ರವತ್-ಓಡಿಬಂದನು ॥೨೨॥ ಕೃತಾಸ್ತ್ರಃ-ಮಾಡಲ್ಪಟ್ಟ ಅಸ್ತ್ರಾಭ್ಯಾಸವುಳ್ಳ ಶ್ರೀರಾಮನು, ಆಪತಂತಂ-ಬರುತ್ತಿರುವ, ಸಂರಬ್ಧಂ-ಕೋಪಿಸಿದ್ದಂಥಾದ, ರುಧಿರಾಪ್ಲುತಂ-ರಕ್ತದಿಂ ವ್ಯಾಪ್ತನಾದ, ತಂ-ಆ ಖರಾಸುರನಂಕುರಿತು, ತ್ವರಿತವಿಕ್ರಮಃ-ತ್ವರಿತವಾದ ಪಾದನ್ಯಾಸವುಳ್ಳವನಾಗಿ, ಪ್ರತಿಪದಂ-ಪ್ರತಿ ಪದವಿನ್ಯಾಸದಲ್ಲಿ, ಅಪಾಸರ್ಪತ್-ಹಿಂತಿರುಗಿಬಂದನು, (ಯುದ್ಧಪ್ರತೀಪಂ-ಪ್ರತಿಮಾರ್ಗದಲ್ಲಿ ರಕ್ತಬಿಂದುಗಳು ಬೀಳಲೆ ಬೀಳದಂತೆಂಬ ಬುದ್ಧಿಯಿಂದ, ಅಪಾಸರ್ಪತ್-ಹಿಂದಕ್ಕೆ ಬಂದನು.) (ಅಥವಾ-ಬಾಣಬಿಡುವುದಕ್ಕೆ ಅವಕಾಶವಿಲ್ಲದಂತೆ ಅತಿಸಮೀಪಕ್ಕೆ ಬಂದಿರುವ ಖರಾಸುರನಂ ಕಂಡು ಬಾಣಸಂಧಾನಮಾಡುವುದಕ್ಕೆ ಎಷ್ಟು ಅವಕಾಶವೋ ಅಷ್ಟು ಅವಕಾಶವಮಾಡಿಕೊಳ್ಳಲು ೨-೩ ಹೆಜ್ಜೆಗಳು ಹಿಂದಕ್ಕೆ ಬಂದನು ಇದು ತಾನೆ ಸನ್ಮಾರ್ಗಕಾಲದಲ್ಲಿ ಶೂರರಾದವರಿಗೆ ಸಮ್ಮತವಾದದ್ದೇ ಹೊರತು ಪರಾಜಯ ಚಿಹ್ನವಲ್ಲವೆಂದು ತಾತ್ಪರ್ಯವು) ॥೨೩॥ ತತಃ-ಬಳಿಕ. ರಾಮಃ-ಶ್ರೀರಾಮನು. ಸಮರೇ- ಕಾಳಗದಲ್ಲಿ ಖರಸ್ಯ-ಖರಾಸುರನ, ವಧಾಯ-ಸಂಹಾರಕ್ಕಾಗಿ, ಅಪರಂ-ಯಮದಂಡವೆನಿಸಿಕೊಳ್ಳದ ಇನ್ನೊಂದಾದ ಯಮದಂಡವೋ ಎಂಬುತಿರುವ, ಪಾವಕಸಂಕಾಶಂ-ಅಗ್ನಿ

---

ಬದಾಗಿ ಖರಾಸುರನು ಬಹಳ ಕೋಪದಿಂ ನುಡಿದು, ಕಣ್ಣುಹುಬ್ಬುಗಳಂ ಗಂಟಿಕ್ಕಿ, ತನ್ನ ಸಮೀಪದಲ್ಲಿರುವ ಮಹತ್ತರವಾದ ದೊಡ್ಡದಾದೊಂದು ಸಾಲವೃಕ್ಷವಂ ಕಂಡು, ಅದನ್ನು ಸಮೂಲವಾಗಿ ಕಿತ್ತುಕೊಂಡು, ಘಟ್ಟಿಯಾಗಿ ಅಟ್ಟಹಾಸವಂ ಗೈದು, ಶ್ರೀರಾಮನನ್ನು ದ್ವೇಷಿಸಿ ಎಸೆದು ನೀನು ಸತ್ತವನಾದೆಯೆಂದು ನುಡಿದವನಾದನು ॥೧೮॥ ಅನಂತರದಲ್ಲಿ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು, ಬರುತಿರುವ ಆ ವೃಕ್ಷವನ್ನು, ಬಾಣಂಗಳಿಂದ ಛೇದಿಸಿ, ಆ ಖರಾಸುರನಂ ಕುರಿತು ಬಹು ಕೋಪವಂ ಗೈದು, ಬೆವರಿದ ಶರೀರವುಳ್ಳವನಾಗಿ, ಕೆಂಗಣ್ಣುಗಳುಳ್ಳವನಾಗಿಯೂ, ಇರುವವನಾಗಿ, ಸಹಸ್ರಬಾಣಂಗಳಿಂದ, ಆ ಖರಾಸುರನಂ ಹೊಡೆದನು ॥೨೦॥ ಅನಂತರದಲ್ಲಿ ಆ ಬಾಣಗಳ ರಂಧ್ರಂಗಳಿಂದ ರಕ್ತವು, ಬೆಟ್ಟದಿಂದ ಉದಕವು ಸ್ರವಿಸುವಂತೆ ಸ್ರವಿಸುತ್ತಿತ್ತು ॥೨೧॥ ಈ ರೀತಿಯಲ್ಲಿ ಆ ಕಾಳಗದಲ್ಲಿ ರಾಮಬಾಣಂಗಳಿಂದ ನಿರ್ವಿಣ್ಣನಾಗಿ, ಆ ಖರಾಸುರನು ರಕ್ತದ ದುರ್ವಾಸನೆಯಿಂದ ಮತ್ತನಾಗಿ ಆ ಶ್ರೀರಾಮನನ್ನೇ ಕುರಿತು ಓಡಿಬಂದನು ॥೨೨॥ ಅನಂತರದಲ್ಲಿ ಅಸ್ತ್ರಪ್ರಯೋಗವಂ ಬಲ್ಲವನಾದ ಶ್ರೀರಾಮನು, ಮೇಲೆ ಬೀಳುತ್ತ ಬರುವ ಆ ಖರಾಸುರನಂ ಕಂಡು, ಯೆರಡುಮೂರು ಹೆಜ್ಜೆಗಳು ಹಿಂದಕ್ಕೆ ಸರಿದನು ॥೨೩॥ ಅನಂತರದಲ್ಲಿ ಶ್ರೀರಾಮನು, ಆ ಖರಾಸುರನ ಸಂಹಾರಾರ್ಥವಾಗಿ ಯಮದಂಡದಂತಿರುವ ಮತ್ತು ಅಗ್ನಿಯಂತೆ ಬೆಳಗುವ ಬಾಣವಂ ತೆಗೆದುಕೊಂಡನು ॥೨೪॥ (ಆ ಬಾಣವು ಯಾವದೆಂದರೆ) ಧರ್ಮಾತ್ಮನಾದ ಆ ಶ್ರೀರಾಮನು ಮಹಾ ಬುದ್ಧಿ

ಳಃ ||೧೪|| ಸತಂದತ್ತಂಮಘವತಾಸುರರಾಜೇನಧೀಮತಾ | ಸಂದಧೇಚಾಪಿಧರ್ಮಾತ್ಮಾಮುಮೋಚಚಖರಂಪ್ರತಿ ||೧೫|| ಸವಿಮುಕ್ತೋಮಹಾಬಾಣೋನಿರ್ಘಾತಸಮನಿಸ್ಸ್ವನಃ | ರಾಮೇಣಧನುರಾಯಮ್ಯಖರಸ್ಯೋರಸ್ಯಪಾತಯತ್ ||೧೬|| ಸಪಪಾತಖರೋಭೂಮೌದಹ್ಯಮಾನಶ್ಶರಾಗ್ನಿನಾ | ರುದ್ರೇಣೇವವಿನಿರ್ದಗ್ಧಶ್ಶ್ವೇತಾರಣ್ಯೇಯಥಾಂಧಕಃ ||೧೭|| ಸವೃತ್ರಇವವಜ್ರೇಣಫೇನೇನನಮುಚಿರ್ಯಥಾ | ಬಲೋವೇಂದ್ರಾಶನಿಹತೋನಿಪಪಾತಹತಃಖರಃ ||೧೮|| ತತೋರಾಜರ್ಷಯಸ್ಸರ್ವೇಸಂಗತಾಃಪರಮರ್ಷಯಃ | ಸಭಾಜ್ಯಮುದಿತಾರಾಮಮಿದಂವಚನಮಬ್ರುವನ್ ||೧೯|| ಏತದರ್ಥಂಮಹಾತೇಜಾಮಹೇಂದ್ರಃಪಾಕಶಾಸನಃ | ಶರಭಂಗಾಶ್ರಮಂಪುಣ್ಯಮಾಜಗಾಮಪುರಂದರಃ ||೨೦|| ಆನೀತಸ್ತ್ವಮಿಮಂದೇಶಮುಪಾಯೇನಮಹರ್ಷಿಭಿಃ | ಏಷಾಂವಧಾರ್ಥಂಕ್ರೂರಾಣಾಂರಕ್ಷಸಾಂಪಾಪಕರ್ಮಣಾಂ ||೨೧|| ತದಿದಂನಃಕೃತಂಕಾರ್ಯಂತ್ವಯಾದಶರಥಾತ್ಮಜ | ಸುಖಂಧರ್ಮಂಚರಿಷ್ಯಂತಿದಂಡಕೇಷುಮಹರ್ಷಯಃ ||೨೨|| ಏತಸ್ಮಿನ್ನಂತರೇದೇವಾಶ್ಚಾರಣೈಸ್ಸಹಸಂಗ

---

ಕಿಗೆ ಸಮಾನನಾದ, ಶರಂ-ಬಾಣವನ್ನು, ಜಗ್ರಾಹ-ತೆಗೆದುಕೊಂಡನು ||೧೪|| ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ ಶ್ರೀರಾಮನು, ಧೀಮತಾ-ಬುದ್ಧಿಶಾಲಿಯಾದ, ಸುರರಾಜೇನ-ದೇವರಾಜನಾದ, ಮಘವತಾ-ದೇವೇಂದ್ರನಿಂದ, ದತ್ತಂ-ಕೊಡಲ್ಪಟ್ಟ, ತಂ-ಆ ಬಾಣವನ್ನು, ಖರಂಪ್ರತಿ-ಖರಾಸುರನನ್ನುದ್ದೇಶಿಸಿ, ಸಂದಧೇ-ಸಂಧಾನಮಾಡಿದನು ||೧೫|| ರಾಮೇಣ-ಶ್ರೀರಾಮನಿಂದ, ಧನುಃ-ಧನುಸ್ಸನ್ನು, ಆಯಮ್ಯ-ಬೊಗ್ಗಿಸಿ, ವಿಮುಕ್ತಃ-ಬಿಡಲ್ಪಟ್ಟ, ಸಮಹಾಬಾಣಃ-ಆ ದೊಡ್ಡಬಾಣವು, ನಿರ್ಘಾತಸಮನಿಸ್ಸ್ವನಃ-ಸಿಡಿಲಿಗೆ ಸಮಾನವಾದ ಧ್ವನಿಗೊಂಡದ್ದಾಗಿ. ಖರಸ್ಯ-ಖರಾಸುರನ, ಉರಸಿ-ಎದೆಯಮೇಲೆ, ಅಪಾತಯತ್-ಬಿತ್ತು ||೧೬|| ಸಃಖರಃ-ಆ ಖರಾಸುರನು. ಶ್ವೇತಾರಣ್ಯೇ-ಶ್ವೇತಾರಣ್ಯದಲ್ಲಿ, ರುದ್ರೇಣ-ಪರಮೇಶ್ವರನಿಂದ ವಿನಿರ್ದಗ್ಧಃ-ದಹಿಸಲ್ಪಟ್ಟ, ಅಂಧಕೋಯಥಾ-ಅಂಧಕಾಸುರನಂತೆ. ಶರಾಗ್ನಿನಾ-ಬಾಣಾಗ್ನಿಯಿಂದ, ದಹ್ಯಮಾನಃ-ದಹಿಸಲ್ಪಟ್ಟವನಾಗಿ, ಭೂಮೌ-ನೆಲದಲ್ಲಿ. ಪಪಾತ-ಬಿದ್ದನು ||೧೭|| ಸಃಖರಃ-ಆ ಖರಾಸುರನು, ಹತಃ-ರಾಮಬಾಣದಿಂ ಹೊಡೆಯಲ್ಪಟ್ಟವನಾಗಿ, ವಜ್ರೇಣ-ವಜ್ರಾಯುಧದಿಂದ, ವೃತ್ರಇವ-ವೃತ್ರಾಸುರನಂತೆ, ಫೇನೇನ-ನೊರೆಯಿಂದ, ನಮುಚಿರ್ಯಥಾ-ನಮುಚಿಯೆಂಬ ರಾಕ್ಷಸನಂತೆ, ಇಂದ್ರಾಶನಿಹತಃ-ಇಂದ್ರಾಯುಧದಿಂ ಹೊಡೆಯಲ್ಪಟ್ಟ, ಬಲೋವಾ-ಬಲಾಸುರನಂತೆ, ನಿಪಪಾತ-ಬಿದ್ದನು ||೧೮|| ತತಃ-ಬಳಿಕ, ಸರ್ವೇ-ಸಮಸ್ತರಾದ, ರಾಜರ್ಷಯಃ-ರಾಜಋಷಿಗಳೂ, ಪರಮರ್ಷಯಃ-ಬ್ರಹ್ಮಋಷಿಗಳೂ. ಸಂಗತಾಃ-ಗುಂಪುಕೂಡಿದವರಾಗಿ, ಮುದಿತಾಃ-ಸಂತೋಷಗೊಂಡವರಾಗಿ, ರಾಮಂ-ಶ್ರೀರಾಮನನ್ನು, ಸಭಾಜ್ಯ-ಸನ್ಮಾನಮಾಡಿ, ಇದಂವಚನಂ-ಈ ಮಾತನ್ನು, ಅಬ್ರುವನ್-ನುಡಿದರು ||೧೯|| ಏತದರ್ಥಂ-ಈ ಕಾರ್ಯನಿಮಿತ್ತವಾಗಿ, ಮಹಾತೇಜಾಃ-ಮಹಾಪ್ರಕಾಶಶಾಲಿಯಾದ, ಪಾಕಶಾಸನಃ-ಪಾಕಾಸುರಸಂಹಾರಕನಾದ, ಪುರಂದರಃ-ಶತ್ರುಪುರಗಳಂ ದಹಿಸುತ್ತಿರುವ, ಮಹೇಂದ್ರಃ-ದೇವೇಂದ್ರನು, ಪುಣ್ಯಂ-ಪುಣ್ಯಕರವಾದ, ಶರಭಂಗಾಶ್ರಮಂ-ಶರಭಂಗಋಷಿಯ ಆಶ್ರಮವಂ ಕುರಿತು, ಆಜಗಾಮ-ಬಂದಿದ್ದನು ||೨೦|| ಮಹರ್ಷಿಭಿಃ-ಋಷಿಗಳಿಂದ, ಉಪಾಯೇನ-ಆಯಾಯ ಆಶ್ರಮಾಗಮನ ರೂಪವ್ಯಾಜದಿಂದ, ಕ್ರೂರಾಣಾಂ-ಭಯಂಕರರಾದ, ಪಾಪಕರ್ಮಣಾಂ-ಪಾಪಕೃತ್ಯವಂತರಾದ, ಏಷಾಂರಕ್ಷಸಾಂ-ಈ ರಾಕ್ಷಸರ, ವಧಾರ್ಥಂ-ಸಂಹಾರಾರ್ಥವಾಗಿ, ತ್ವಂ-ನೀನು, ಇಮಂದೇಶಂ-ಈ ಪ್ರದೇಶವಂ ಕುರಿತು, ಆನೀತಃ-ಕರೆದುಕೊಂಡು ಬರಲ್ಪಟ್ಟಿದ್ದೀ ||೨೧|| ದಶರಥಾತ್ಮಜ-ಎಲೈ ಶ್ರೀರಾಮನೇ, ತ್ವಯಾ-ನಿನ್ನಿಂದ, ನಃ-ನಮ್ಮಗಳ, ತದಿದಂ-ಆ ಈ, ಕಾರ್ಯಂ-ಕಾರ್ಯವು, ಕೃತಂ-ಮಾಡಲ್ಪಟ್ಟಿತು, ದಂಡಕೇಷು-ದಂಡಕಾರಣ್ಯದಲ್ಲಿ. ಮಹರ್ಷಯಃ-ಬ್ರಹ್ಮರ್ಷಿಗಳು, ಸುಖಂ-ಸುಖವಾಗಿ, ಧರ್ಮಂ-ಧರ್ಮವನ್ನು, ಚರಿಷ್ಯಂತಿ-ನಡಿಸುವರು ||೨೨|| ಏತಸ್ಮಿನ್ನಂತರೇ-

---

ಶಾಲಿಯಾದ ದೇವೇಂದ್ರನಿಂದ ಯಾವ ಬಾಣವು ಕೊಡಲ್ಪಟ್ಟಿತ್ತೋ, ಆ ಬಾಣವನ್ನು ಸಂಧಾನವಂ ಗೈದು, ಬಲವಾಗಿ ಕೋದಂಡವಂ ಸೆಳೆದು, ಅದನ್ನು ಲಕ್ಷ್ಯವನ್ನಿಟ್ಟು ಆ ಖರಾಸುರನ ಯೆದೆಯಲ್ಲಿ ಬಿಟ್ಟವನಾಗಲು, ಆ ಮಹಾಬಾಣವು ಸಿಡಿಲಿನಂತೆ ಶಬ್ದವಂ ಗೈಯ್ಯುತ್ತಾ ಅವನ ವಕ್ಷಸ್ಥಳದಲ್ಲಿ ಬಿದ್ದದ್ದಾಯಿತು ||೧೬|| ಅನಂತರದಲ್ಲಿ ಆ ಖರಾಸುರನು ಶ್ವೇತಾರಣ್ಯದಲ್ಲಿ ಪರಮೇಶ್ವರನಿಂದ ಹೊಡೆಯಲ್ಪಟ್ಟ ಅಂಧಕಾಸುರನಂತೆ ಆ ಬಾಣದಿಂದ ದಹಿಸಲ್ಪಟ್ಟವನಾಗಿ ನೆಲದಲ್ಲಿ ಬಿದ್ದನು ||೧೭|| ಈ ರೀತಿಯಾಗಿ ಆ ಖರಾಸುರನು ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರಾಸುರನಂತೆಯೂ, ನಮುಚಿಯಂತೆಯೂ, ಬಲಾಸುರನಂತೆಯೂ, ಕೆಳಗೆ ಬಿದ್ದವನಾಗಲು ಬಳಿಕ ಸಮಸ್ತರಾದ ರಾಜರ್ಷಿಗಳು ಪರಮರ್ಷಿಗಳೂ ಇವರೆಲ್ಲ ಬಹು ಸಂತೋಷದಿಂದ ಗುಂಪುಗುಂಪುಗಳಾಗಿ ಸೇರಿ, ಶ್ರೀರಾಮನಂ ಶ್ಲಾಘಿಸುತ್ತಾ ನುಡಿವರದೆಂತೆನೆ,— ||೧೯|| ಇದಕ್ಕಾಗಿಯೇ ಮಹಾ ತೇಜೋವಂತನಾದ ದೇವೇಂದ್ರನು ಪುಣ್ಯಕರವಾದ ಶರಭಂಗಮುನಿಯ ಆಶ್ರಮಕ್ಕೆ ಬಂದವನಾದನು ||೨೦|| ಪಾಪಕಾರಿಗಳಾದ ಈ ರಾಕ್ಷಸರ ಸಂಹಾರಾರ್ಥವಾಗಿ ಉಪಾಯದಿಂದ ಈ ಪ್ರದೇಶಕ್ಕೆ ಮಹರ್ಷಿಗಳಿಂದ ಕರೆದುಕೊಂಡು ಬರಲ್ಪಟ್ಟವನಾದ, ಎಲೈ ಶ್ರೀರಾಮನೇ! ನಿನ್ನಿಂದಾಗಿ ಈ ಕಾರ್ಯವು ಮಾಡಲ್ಪಟ್ಟಿತು, ಈ ದಂಡಕಾರಣ್ಯದಲ್ಲಿ ಮಹಾಮುನಿಗಳು ಸುಖದಿಂ ಧರ್ಮವಂ ಗೈಯ್ಯುತ್ತಿರುವರೆಂದು ನುಡಿಯುತ್ತಿರಲು, ಇಷ್ಟರಲ್ಲಿ ದೇವತೆಗಳು ಚಾರಣರಿಂದೊಡಗೂಡಿ, ದೇವದುಂದುಭಿಗಳನ್ನು

ತಾಃ । ದುಂದುಭೀಂಶ್ಚಾಪಿನಿಘ್ನಂತಃಪುಷ್ಪವರ್ಷಂಸಮಂತತಃ । ರಾಮಸ್ಯೋಪರಿಸಂಹೃಷ್ಟಾವವೃಷುರ್ವಿಸ್ಮಿತಾಸ್ತ
ದಾ ॥೩೪॥ ಅರ್ಧಾಧಿಕಮುಹೂರ್ತೇನರಾಮೇಣನಿಶಿತೈಶ್ಶರೈಃ । ಚತುರ್ದಶಸಹಸ್ರಾಣಿರಕ್ಷಸಾಂಭೀಮಕರ್ಮಣಾಂ । ಖರ
ದೂಷಣಮುಖ್ಯಾನಾಂನಿಹತಾನಿಮಹಾಹವೇ ॥ ಅಹೋಬತಮಹತ್ಕರ್ಮರಾಮಸ್ಯವಿದಿತಾತ್ಮನಃ । ಅಹೋವೀರ್ಯಮಹೋ
ದಾಕ್ಷ್ಯಂ ವಿಷ್ಣೋರಿವಹಿದೃಶ್ಯತೇ । ಇತ್ಯೇವಮುಕ್ತ್ವಾತೇಸರ್ವೇಯಯುರ್ದೇವಾಯಥಾಗತಂ ॥೩೬॥ ಏತಸ್ಮಿನ್ನಂತರೇವೀ
ರೋಲಕ್ಷ್ಮಣಸ್ಸಹಸೀತಯಾ । ಗಿರಿದುರ್ಗಾದ್ವಿನಿಷ್ಕ್ರಮ್ಯಸಂವಿವೇಶಾಶ್ರಮಂಸುಖೀ ॥೩೭॥ ತತೋರಾಮಸ್ತುವಿಜ
ಯೀಪೂಜ್ಯಮಾನೋಮಹರ್ಷಿಭಿಃ । ಪ್ರವಿವೇಶಾಶ್ರಮಂವೀರೋಲಕ್ಷ್ಮಣೇನಾಭಿಪೂಜಿತಃ ॥೩೮॥ ತಂದೃಷ್ಟ್ವಾಶತ್ರು
ಹಂತಾರಂಮಹರ್ಷೀಣಾಂಸುಖಾವಹಂ । ಬಭೂವಹೃಷ್ಟಾವೈದೇಹೀಭರ್ತಾರಂಪರಿಷಸ್ವಜೇ ॥೩೯॥ ಮುದಾಪರಮ

---

ಇದ್ದವರೊಳಗೆ ದೇವಾಃ-ದೇವತೆಗಳು, ಚಾರಣೈಸ್ಸಹ-ಚಾರಣರೊಡಗೂಡ, ಸಂಗತಾಃ-ಸೇರಿದವರಾಗಿ, ದುಂದುಭೀಂಶ್ಚಾಪಿ-ದೇವದುಂದುಭಿಗಳನ್ನೂ ಅಭಿನಿಘ್ನಂತಃ-ಹೊಡೆಯುತ್ತಿರುವವರಾಗಿ, ತದಾ-ಆಕಾಲದಲ್ಲಿ, ವಿಸ್ಮಿತಾಃ-ಆಶ್ಚರ್ಯಪಟ್ಟವರಾಗಿಯೂ, ಸಂಹೃಷ್ಟಾಃ-ಸಂತೋಷಗೊಂಡವರಾಗಿಯೂ. ಸಮಂತತಃ-ಎಲ್ಲಾ ಕಡೆಯಲ್ಲಿಯೂ. ರಾಮಸ್ಯ-ಶ್ರೀರಾಮನ, ಉಪರಿ-ಮೇಲ್ಭಾಗದಲ್ಲಿ, ಪುಷ್ಪವರ್ಷಂ-ಹುವ್ವಿನಮಳೆಯನ್ನು, ವವೃಷುಃ-ಸುರಿಸಿದರು ||೩೪|| || ರಾಮೇಣ-ಶ್ರೀರಾಮನಿಂದ. ಮಹಾಹವೇ-ದೊಡ್ಡಕಾಳಗದಲ್ಲಿ, ಅರ್ಧಾಧಿಕಮುಹೂರ್ತೇನ-ಅರ್ಧವೇ ಅಧಿಕವಾಗುಳ್ಳ ಮುಹೂರ್ತಕಾಲದಲ್ಲಿ, (ಅಂದರೆ ಮೂರೂಮುಕ್ಕಾಲು ಘಳಿಗೆ ಕಾಲದಲ್ಲಿ, ಖರದೂಷಣಮುಖ್ಯಾನಾಂ-ಖರದೂಷಣನೇ ಮೊದಲಾಗುಳ್ಳ, ಭೀಮಕರ್ಮಣಾಂ-ಭಯಂಕರವಾದ ಕೃತ್ಯಗಳುಳ್ಳ. ರಕ್ಷಸಾಂ-ರಕ್ಕಸರ, ಚತುರ್ದಶಸಹಸ್ರಾಣಿ-ಹದಿನಾಲ್ಕು ಸಾವಿರಗಳು, ನಿಶಿತೈಃ-ತೀಕ್ಷ್ಣಗಳಾದ, ಶರೈಃ-ಬಾಣಗಳಿಂದ ನಿಹತಾನಿ-ಹೊಡೆಯಲ್ಪಟ್ಟವು, ವಿದಿತಾತ್ಮನಃ-ತಿಳಿಯಲ್ಪಟ್ಟ ಸ್ವಸ್ವರೂಪಜ್ಞಾನವುಳ್ಳ, ರಾಮಸ್ಯ-ಶ್ರೀರಾಮನ, ಕರ್ಮ-ವ್ಯಾಪಾರವು, ಮಹತ್-ಬಹಳ ದೊಡ್ಡದು, ಅಹೋ-ಆಶ್ಚರ್ಯವು. ವೀರ್ಯಂ-ಪರಾಕ್ರಮವು, ಅಹೋ-ಆಶ್ಚರ್ಯಕರವಾದದ್ದು. ವಿಷ್ಣೋರಿವ-ಶ್ರೀಮಹಾವಿಷ್ಣುವಿನ ಪರಾಕ್ರಮದಂತೆ ದಾಕ್ಷ್ಯಂ-ಸಾಮರ್ಥ್ಯವು. ಅಹೋ-ಆಶ್ಚರ್ಯಕರವಾಗಿ. ದೃಶ್ಯತೇಹಿ-ಕಾಣಲ್ಪಡುತ್ತದಷ್ಟೆ, ಇತ್ಯೇವಂ-ಈ ರೀತಿಯಾಗಿ, ಉಕ್ತ್ವಾ-ಹೇಳಿ. ಸರ್ವೇ-ಸಮಸ್ತರಾದ, ತೇದೇವಾಃ-ಆ ದೇವತೆಗಳು. ಯಥಾಗತಂ-ಬಂದಂತೆ, ಯಯುಃ-ತೆರಳಿದರು ||೩೬|| || ಏತಸ್ಮಿನ್ನಂತರೇ-ಈ ಮಧ್ಯಕಾಲದಲ್ಲಿ. ವೀರಃ-ಶೂರನಾದ, ಲಕ್ಷ್ಮಣಃ-ಲಕ್ಷ್ಮಣನು, ಸೀತಯಾಸಹ-ಸೀತಾದೇವಿಯೊಡಗೂಡ, ಗಿರಿದುರ್ಗಾತ್-ಬೆಟ್ಟದ ಗುಹೆಯದೆಸೆಯಿಂದ, ವಿನಿಷ್ಕ್ರಮ್ಯ-ಹೊರಟುಬಂದು, ಸುಖೀ-ಸುಖವಂತನಾಗಿ, ಆಶ್ರಮಂ-ರಾಮಾಶ್ರಮವನ್ನು ಸಂವಿವೇಶ-ಹೊಕ್ಕನು ||೩೭|| ತತಃ-ಬಳಿಕ, ವೀರಃ-ಶೂರನಾದ. ರಾಮಸ್ತು-ಶ್ರೀರಾಮನಾದರೆ, ವಿಜಯೀ-ಜೈಸಿದಂಥಾವನಾಗಿ, ಮಹರ್ಷಿಭಿಃ-ಬ್ರಹ್ಮರ್ಷಿಗಳಿಂದ, ಪೂಜ್ಯಮಾನಃ-ಪೂಜಿಸಲ್ಪಟ್ಟವನಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ ಅಭಿಪೂಜಿತಃ-ನಮಸ್ಕರಿಸಲ್ಪಟ್ಟವನಾಗಿ. ಆಶ್ರಮಂ-ಆಶ್ರಮವಂಕುರಿತು, ಪ್ರವಿವೇಶ-ಹೊಕ್ಕನು ||೩೮|| || ವೈದೇಹೀ-ಸೀತಾದೇವಿಯು, ಶತ್ರುಹಂತಾರಂ-ಶತ್ರುಸಂಹಾರಕನಾದ, ಮಹರ್ಷೀಣಾಂ-ಮಹಾಋಷಿಗಳಿಗೆ, ಸುಖಾವಹಂ-ಸುಖಕರನಾದ, ಭರ್ತಾರಂ-ಗಂಡನಾದ, ತಂ-ಆ ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಹೃಷ್ಟಾ-ಸಂತೋಷಗೊಂಡವಳು. ಬಭೂವ-ಆದಳು, ಪರಿಷಸ್ವಜೇ-ಅಪ್ಪಿಕೊಂಡಳು ||೩೯|| || ಜನಕಾತ್ಮಜಾ-ಸೀತಾದೇವಿಯು, ರಕ್ಷೋಗಣಾನ್-ರಕ್ಕಸರ ತಂಡಗಳನ್ನು. ಹತಾನ್-ಹತರನ್ನಾಗಿ, ದೃಷ್ಟ್ವಾ-ಕಂಡು, ಪರಮಯಾ-ಬಹಳವಾದ, ಮುದಾ-ಸಂತೋಷದಿಂದ, ಯುಕ್ತಾ-ಕೂಡಿದವಳಾಗಿ, ರಾಮಂಚೈವ-ಶ್ರೀರಾಮನನ್ನೇ, ಅವ್ಯಥಂ-ವ್ಯಥೆಯಿಲ್ಲದವನನ್ನಾಗಿ, ದೃಷ್ಟ್ವಾ-ಕಂಡು. ತುತೋಷ-ಸಂತೋಷಿಸಿದಳು || (ತಂದೃಷ್ಟ್ವಾಶತ್ರುಹಂತಾರಮಿತಿಶ್ಲೋಕದ್ವಯಸ್ಯ|| ವಿಶೇಷಾರ್ಥಸ್ತು-ವಿಶೇಷಾರ್ಥವಾದರೆ, ತಂ-ಎಷ್ಟುಜನ ರಾಕ್ಷಸರೋ ಅಂಥಾ ಸಂಖ್ಯೆಯುಳ್ಳವನಾಗಿ ಕಾಣಿಸುತ್ತಿರುವ, ಯದ್ವಾ-ಯಾವ ಶ್ರೀರಾಮನು ಇಂದ್ರಾದಿಗಳಿಗೂಕೂಡ ತಿರಸ್ಕರಿಸಲಸಾಧ್ಯರಾದ ಹದಿನಾಲ್ಕುಸಾವಿರ ರಾಕ್ಷಸರನ್ನು ಅರ್ಧಾಧಿಕ ಮುಹೂರ್ತದಿಂದ ತಾನು ಘಾಯವಿಲ್ಲದೆ ಸಂಹಾರಮಾಡಿ ತಾನೊಬ್ಬನೇ ಶತ್ರುನಿಗ್ರಹವನ್ನು ಯಾವೋನು ಮಾಡಿದನೋ, ಯದ್ವಾ-ಯಾವ ಶ್ರೀರಾಮನ

---

ಹೊಡಿಯುತ್ತಾ, ಪುಷ್ಪವೃಷ್ಟಿಯಂ ಗರೆದರು, ಹಾಹಾ! ಯೇನಾಶ್ಚರ್ಯವು, ಮಹಾರಥಿಕನಾದ ಶ್ರೀರಾಮನು ಮೂರುಮುಕ್ಕಾಲು ಘಳಿಗೆ ವೊಳಗಾಗಿ, ಕ್ರೂರಕಾರ್ಯವಂ ಗೈಯ್ಯುವ ಮಹಾಭಯಂಕರರಾದ ಹದಿನಾಲ್ಕು ಸಾವಿರ ರಾಕ್ಷಸರಂ, ಖರದೂಷಣರನ್ನೂ, ಇವರನ್ನೆಲ್ಲ ಸಂಹಾರವಂ ಗೈದನಲ್ಲವೆ; ಈತನ ಶೌರ್ಯವೇಂಥಾದ್ದು? ಈತನು ಮಹಾಸಮರ್ಥನೆಂದು ನುಡಿದು ಸ್ವಸ್ಥಾನಂಗಳಿಗೆ ಸಾರಿದರು।೩೬॥ ಈ ಮಧ್ಯಕಾಲದಲ್ಲಿ ಶೂರನಾದ ಲಕ್ಷ್ಮಣನು ಆಗುಹೆಯ ದೆಶೆಯಿಂದ ಸೀತಾದೇವಿಯಂ ಕರೆದುಕೊಂಡು ಶ್ರೀರಾಮನಸಾನ್ನಿಧ್ಯವನ್ನೈದಿದನು, ಅನಂತರದಲ್ಲಿ ಜಯಶೀಲನಾದ ಶ್ರೀರಾಮನು ಮಹರ್ಷಿಗಳಿಂದಲೂ, ಲಕ್ಷ್ಮಣನಿಂದಲೂ ವೊಡಗೂಡಿದವನಾಗಿ ಪರ್ಣಶಾಲೆಯಂ ಪ್ರವೇಶವಂ ಗೈದವನಾದನು ।೩೮॥ ಆಗ ಸೀತಾದೇವಿಯು ಶತ್ರುಸಂಹಾರಕನಾದ ಮತ್ತು ಮುನಿಗಳಿಗೆ ಪ್ರೀತಿಯಂ ಗೈಯ್ಯುವ ಆ ಪತಿಯಾದ ಶ್ರೀರಾಮನಂ ಕಂಡು, ಸಂತಸದಿಂದಾಲಿಂಗನಂ ಗೈದಳದೆಂತೆನೆ,— ।೩೯। ಜನಕರಾಜನಂದಿನಿಯಾದ ಸೀತಾದೇವಿಯು ಸಂಹೃತರಾಗಿರುವ ಆ ರಾಕ್ಷಸರ ಗುಂಪುಗುಂಪುಗಳನ್ನೂ ವ್ಯಥೆಯಿಲ್ಲದಿರುವ

ಯೋಯುಕ್ತಾದೃಷ್ಟ್ವಾರಕ್ಷೋಗಣಾರ್ಹಂತಾರಂ । ರಾಮಂಚೈವಾವ್ಯಥಂದೃಷ್ಟ್ವಾತುತೋಷಜನಕಾತ್ಮಜಾ ॥೪೦॥

ನ್ನು ಸೀತಾದೇವಿಯು ಪುರುಷವಿಗ್ರಹಮಾತ್ರವುಳ್ಳ ಸ್ತ್ರೀರೂಪಿಯಾದ ನಿನ್ನಂಥ ಅಳಿಯನನ್ನು ಹೊಂದಿ ಏನು ತಿಳಿದುಕೊಂಡನೆಂದು ಪೂರ್ವದಲ್ಲಿ ನಿಂದಿಸಿದಳೋ. ತಂ-ಅಂಥಾ, ಶತ್ರುಹಂತಾರಂ-ಶತ್ರುಗಳನ್ನೆಲ್ಲಾ ಸಂಹಾರಮಾಡಿ, ಅನೇಕವಚನಗಳೂ ಅನೇಕಬಾಹುಗಳೂ ಅನೇಕಹಸ್ತಗಳೂ ಇವುಗಳ ನ್ನೆಲ್ಲಾ ಕತ್ತರಿಸಿ ಶತ್ರುನಿಗ್ರಹವನ್ನು ಮಾಡಿರುವ. ಮಹರ್ಷೀಣಾಂ-ಸಜ್ಜನಸಂರಕ್ಷಣಾರ್ಥವಾಗಿ ದುರ್ಜನವಿನಾಶಾರ್ಥವಾಗಿಯೂ ಧರ್ಮಸಂಸ್ಥಾಪ ನಾರ್ಥವಾಗಿಯೂ ಯುಗಯುಗದಲ್ಲಿಯೂಕೂಡ ಅವತರಿಸುವೆನೆಂದು ತಾನು ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸುವ ನಿಮಿತ್ತವಾಗಿ ಖರನೇ ಮೊ ದಲಾಗುಳ್ಳ ದುಷ್ಟರನ್ನು ಕೊಂದು ಸತ್ಪುರುಷರಾದ ಮಹರ್ಷಿಗಳಿಗೆ ಜಗನ್ಮೋಹಕವಾದ ದಿವ್ಯಮಂಗಳರೂಪವಾದ ಸ್ವಶರೀರದ ಸಾಕ್ಷಾತ್ಕಾರದಿಂ ಪರಮಾನಂದವಂ ಕೊಟ್ಟು ಆ ಋಷಿಗಳಿಗೆ. ಸುಖಾವಹಂ-ಸುಖಕರನಾದ. ರಾಮಂ-ಶ್ರೀರಾಮನನ್ನು ದೃಷ್ಟ್ವಾ-ಕಂಡು ವೈದೇಹೀ-ವಿದೇಹರಾಜನ ಮ ಗಳಾದ ಸೀತಾದೇವಿಯು, ಬಭೂವ-ಸತ್ತಾಸ್ವರೂಪಳಾದಳು, ಹ್ಯಾಗಂದರೆ,-ಶ್ರೀರಾಮನು ಶತ್ರುಮಧ್ಯದಲ್ಲಿ ಸೇರಿಕೊಂಡನಲ್ಲವೆ, ಯೇನಾಗುತ್ತದೋ ಎಂಬ ಭೀತಿಯಿಂ ತಾನು ಇದ್ದರೂಕೂಡ ಅಸತ್ಪ್ರಾಯಳಾಗಿದ್ದೇನೆಂದು ಪೂರ್ವದಲ್ಲಿ ತನ್ನಲ್ಲಿ ಒಂದು ಅಸತ್ವವನ್ನು ತಿಳಿದಿದ್ದಳು ಈಗ ಸ್ವಪ್ರಾಣನಾ ಯಕನಾದ ಶ್ರೀರಾಮನಿಗೆ ಸತ್ವವುಂಟಾಯಿತು ಆದ್ದರಿಂ ನನಿಗೂ ಸತ್ವವುಂಟಾಯಿತೆಂದು ತಿಳಿದುಕೊಂಡಳು, ಆದ್ದರಿಂ ಸಂತೋಷವಾಗಿ ಆಯು ಧವ್ರಣಗಳನ್ನು ಪರಿಸುವ ನಿಮಿತ್ತವಾಗಿ. ಪರಿಷಸ್ವಜೆ-ಆಲಿಂಗನಮಾಡಿಕೊಂಡಳು (ಸ್ವಕೀಯಸ್ತನಗಳ ಊಷ್ಮದಿಂ ಶ್ರೀರಾಮನ ದೇಹದ ವ್ರಣ ಪರಿಹಾರ ಮಾಡಿಸಿದಳೆಂಬ ತಾತ್ಪರ್ಯವು) ಯ.ದ್ಯಾ-ವೈದೇಹೀ-ಶೂರನಾದ ಜನಕರಾಯನಮಗಳಾದ ಸೀತಾದೇವಿಯು ಪೂರ್ವದಲ್ಲಿ ಯಾವ ಶ್ರೀರಾಮನು ಕಾಳಗ ಮಾಡುವಕಾಲದಲ್ಲಿ ಅದೃಶ್ಯನಾಗಿದ್ದನೋ, ತಂ-ಅಂಥಾ ಶ್ರೀರಾಮನನ್ನು, ಯದ್ವಾ-ಲತೆಗಳಿಂ ಕಟ್ಟಲ್ಪಟ್ಟ ಜಟಾಮಂಡಲದಿಂದ ನಡಿಕಟ್ಟಿನಿಂದಲೂ ಕೂಡಿರುವದ್ದರಿಂದಲೂ ಕಿವಿಗಳಲ್ಲಿ ಜೋಲಾಡುವ ಬತ್ತಳಿಕೆಗಳುಳ್ಳವನಾದ್ದರಿಂದಲೂ ಕಾಳಗ ಮುಗಿದಬಳಿಕ ತಣ್ಣಗೆ ಮಾಡಲ್ಪಟ್ಟ ಕೋಪಾಗ್ನಿ ಯುಳ್ಳವನಾದ್ದರಿಂದಲೂ ಶತ್ರುನಿಗ್ರಹವಾಯಿತು ಆದರೂ ಲಕ್ಷ್ಮಣನ ಆಗಮನವನ್ನು ನಿರೀಕ್ಷಿಸುವನಾದ್ದರಿಂದಲೂ ಮತ್ತು ತಿರುಗಾ ಶತ್ರುಗಳು ಎ ಷ್ಟುಮಂದಿ ಬರುವರೆಂದು ನಿರೀಕ್ಷಿಸುತ್ತಿರುವ, ತಂ-ಅಂಥಾವನನ್ನು. ಶತ್ರುಹಂತಾರಂ-ಶತ್ರುಗಳನ್ನು ಸಂಹಾರಮಾಡಿದ್ದೇ ಹೊರ್ತು ಬಾಣ ಸಂಧಾನಮಾಡಿದ್ದು ಬಾಣಗಳನ್ನು ಬಿಟ್ಟಿದ್ದು ಈ ಎರಡು ಕಾರ್ಯಗಳನ್ನು ಯಾರಿಗೂ ತೋರಿಸದಿರುವ ಕೇವಲಶತ್ರುಹನನ ವ್ಯಾಪಾರದ ಲ್ಲಾಸಕ್ತನಾದ. ಮಹರ್ಷೀಣಾಂ-ತಪಸ್ಸಾಮರ್ಥ್ಯದಿಂ ರಾಕ್ಷಸ ಸಂಹಾರದಲ್ಲಿ ಸಮರ್ಥನಾದರೂ ನಾವು ರಕ್ಷಣೀಯಸ್ವರೂಪವುಳ್ಳವರು, ರಕ್ಷಕ ಸ್ವಭಾವವುಳ್ಳವನು ಭಗವಂತನು. ಆದ್ದರಿಂ ರಕ್ಷಕನ ಸ್ವರೂಪವನ್ನಂ, ನಿರೀಕ್ಷಣೆಮಾಡೋಣವೆಂದು, ಶ್ರೀರಾಮನ ಪ್ರತೀಕ್ಷೆಯನ್ನೇ ನಿರೀಕ್ಷಣೆ ಮಾಡುತ್ತಿರುವ, ಋಷಿಗಳಿಗೆ, ಸುಖಾವಹಂ-ಸುಖವಂ ಮಾಡುತ್ತಿರುವ. ಭರ್ತಾರಂ-ನಿರವಧಿಕಪ್ರೇಮಭಾವದಿಂದ ಭರಿತನಾದ ಜಯಶೀಲನಾದ, ಯು

ಪತಿಯಾದ ಶ್ರೀರಾಮನಂ ಸಹಾ ಕಂಡು, ಸಂತಸವನ್ನೈದಿದಳು ॥೪೦॥ (ವಿಶೇಷಾಭಿಪ್ರಾಯವೇನಂದರೆ,—ಆ ರಾ ಕ್ಷಸರು ಯೆಷ್ಟುಮಂದಿ ಇದ್ದವರಾದರೋ ಅಷ್ಟುಮಂದಿಯಾಗಿ ಆ ರಾಕ್ಷಸರಿಗೆ ಕಾಣುವವನಾಗಿಯೂ, ಅ ಥವಾ ಇಂದ್ರಾದಿಗಳಿಗೂ ಸಹ ಜಯಿಸಲಸಾಧ್ಯನಾಗಿಯೂ, ಅಥವಾ ಹದಿನಾಲ್ಕುಸಾವಿರರಾಕ್ಷಸರನ್ನು ಮೂರು ಮುಕ್ಕಾಲುಘಳಿಗೆ ಪೊಳಗಾಗಿ ಸಂಹಾರವಂ ಗೈಯ್ದವನಾಗಿಯೂ, ಮತ್ತು ಸಜ್ಜನರಂ ಪಾಲಿಸುವದಕ್ಕಾಗಿಯೂ, ದುರ್ಜನರ ವಿನಾಶಾರ್ಥವಾಗಿ, ಧರ್ಮಸ್ಥಾಪನವಂ ಗೈಯ್ಯುವದಕ್ಕಾಗಿಯೂ, ಪ್ರತಿಯುಗದಲ್ಲಿಯು ಅವತಾರವಂ ಗೈಯ್ಯುವಂತೆ ಈ ತ್ರೇತಾಯುಗದಲ್ಲಿಯೂ ಅವತಾರವನ್ನೈದಿದವನಾಗಿಯೂ, ದಿವ್ಯಮಂಗಳ ವಿಗ್ರಹವಾಗಿರುವ ತನ್ನ ಶರೀರದ ಸಾಕ್ಷಾತ್ಕಾರದಿಂದ ಪರಮಸಂತಸವನ್ನು ಕೊಟ್ಟು ಮುನಿಗಳಿಗೆ ಸುಖವನ್ನುಂಟುಮಾಡುವವನಾಗಿ ಯೂ, ಇರುವ ಆ ಶ್ರೀರಾಮನಂ ಕಂಡು, ಸೀತಾದೇವಿಯು ಸತ್ತಾ ಸ್ವರೂಪಳಾದಳು (ಅಂದರೆ ಶ್ರೀರಾಮನು ಹಗೆಯರ ಮಧ್ಯದಲ್ಲಿ ಸಿಲುಕಿರುವನಲ್ಲವೆ, ಯೇನಾಗುವನೋ ಯೇನೋ ಎಂದು ಭೀತಿಯನ್ನೈದಿ, ತನ್ನಲ್ಲಿ ಅಸತ್ವ ವಂ ತಿಳಿದುಕೊಂಡಿದ್ದಳು, ಈಗ ತನ್ನ ಪ್ರಾಣನಾಯಕನಾದ ಆ ಶ್ರೀರಾಮನಿಗೆ ಸತ್ವವುಂಟಾಯಿತಾದ್ದರಿಂದ ಸ ತ್ವಯುಕ್ತಳಾದಳು, ಆದಕಾರಣ ಆ ಪತಿಯ ಶರೀರದಲ್ಲಿ ಆಯುಧಂಗಳಿಂದುಂಟಾದ ಆ ವ್ರಣಂಗಳಂ ಒಣ್ಣಿಸುವದ ಕ್ಕಾಗಿ, ಆಲಿಂಗನಂ ಗೈದು ತನ್ನ ಕುಚಂಗಳ ಊಷ್ಮೆಯಿಂದ ಆ ವ್ರಣಂಗಳ ಪರಿಹಾರವಂ ಗೈದಳೆಂದು ಭಾವವು) ಅಥವಾ ಶೂರನಾದ ಜನಕರಾಯನ ಮಗಳಾದ ಸೀತಾದೇವಿಯು, ಪೂರ್ವದಲ್ಲಿ ಯಾವ ಶ್ರೀರಾಮನಂ ಅಸದೃಶನ ನ್ನಾಗಿ ನೋಡಿದಳೋ ಅಂಥಾ ಶ್ರೀರಾಮನಂ, ಅಥವಾ ಬಳ್ಳಿಗಳಿಂದ ಕಟ್ಟಲ್ಪಟ್ಟ ಜಟಾಮಂಡಲ ದಿಂದಲೂ ನಡು ಕಟ್ಟುಗಳಿಂದಲೂಸಹ ಕೂಡಿರುವದರಿಂದಲೂ ಮತ್ತೂ ಕಂಠದಲ್ಲಿ ಜೋಲಾಡುವ ಬತ್ತಳಿಕೆಗಳುಳ್ಳವನಾದ್ದ ರಿಂದಲೂ, ಕುಪಿತನಾಗದಿರುವದರಿಂದಲೂ, ಶತ್ರುನಿಗ್ರಹವಾದರೂ ಸಹ ಲಕ್ಷ್ಮಣನ ಆಗಮನವಂ ನಿರೀಕ್ಷಿಸುತಿರು ವುದರಿಂದಲೂ, ತಮ್ಮ ತಮ್ಮ ತಪಸ್ಸಾಮರ್ಥ್ಯದಿಂದ ರಾಕ್ಷಸ ಸಂಹಾರವಂ ಗೈಯ್ಯಲೂ ಶಕ್ತಿಯುಳ್ಳವರಾದರೂ

ತತಸ್ತುತಂರಾಕ್ಷಸಸಂಘಮರ್ದನಂಸಭಾಜ್ಯಮಾನಂಮುದಿತೈರ್ಮಹರ್ಷಿಭಿಃ । ಪುನಃಪರಿಷ್ವಜ್ಯಶಶಿಪ್ರಭಾನನಾಬಭೂವಹೃಷ್ಟಾಜನಕಾತ್ಮಜಾತದಾ ॥೪೧॥

—***ಇತಿಶ್ರೀಮದಾರಣ್ಯಕಾಂಡೆ-ತ್ರಿಂಶಸ್ಸರ್ಗಃ.***—

ತ್ವರಮಾಣಸ್ತತೋಗತ್ವಾಜನಸ್ಥಾನಾದಕಂಪನಃ । ಪ್ರವಿಶ್ಯಲಂಕಾಂವೇಗೇನರಾವಣಂವಾಕ್ಯಮಬ್ರವೀತ್ ॥೧॥ ಜನಸ್ಥಾನಸ್ಥಿತಾರಾಜನ್ರಾಕ್ಷಸಾಬಹವೋಹತಾಃ । ಖರಶ್ಚನಿಹತಸ್ಸಂಖ್ಯೇಕಥಂಚಿದಹಮಾಗತಃ ॥೨॥ ಏವಮುಕ್ತೋದಶಗ್ರೀವಃಕ್ರುದ್ಧಸ್ಸಂರಕ್ತಲೋಚನಃ । ಅಕಂಪನಮುವಾಚೇದಂನಿರ್ದಹನ್ನಿವಚಕ್ಷುಷಾ ॥೩॥ ಕೇನರಮ್ಯಂಜನಸ್ಥಾ

---

ದ್ವಾ-ಭರ್ತಾರಂ-ಲೋಕಕ್ಕೆಸ್ವಾಮಿಯಾದ ಶ್ರೀರಾಮನನ್ನು. ವೈದೇಹೀ-ಸೀತಾದೇವಿಯು ತಾನು ಸರ್ವಲೋಕಕ್ಕೂ ತಾಯಿಯಾದ್ದರಿಂದ, ಸ್ವಪತಿಯನ್ನು ಶೌರ್ಯಾವಲೋಕನಮಾತ್ರದಿಂ ಸಂತುಷ್ಟೆಯಾಗಿ, ಪರಿಷಸ್ವಜೆ-ಅಪ್ಪಿಕೊಂಡಳು. (ಯದ್ವಾ-ತಾನು ಜಗಜ್ಜನನೀ, ತನ್ನಗಂಡನು ಜಗತ್ಪಿತಾ-ಆದ್ದರಿಂದ ಋಷಿಗಳು ತನ್ನ ಮಕ್ಕಳು ಋಷಿಗಳಿಗೆಲ್ಲಾ ಸುಖಕರನಾದವನುಶ್ರೀರಾಮನೂಎಂಬಸಂತೋಷದಿಂದ ಸಂಸಾರದಲ್ಲಿ ಸ್ತ್ರೀಯರುಗಳು ಹ್ಯಾಗೆ ಸಂತೋಷಬೀಳುತ್ತಾರೋ ಹಾಗೆ ತಾನು ಸಂತೋಷಗೊಂಡವಳಾಗಿ, ಅಪ್ಪಿಕೊಂಡಳೆಂದು ತಾತ್ಪರ್ಯವು) ಯದ್ವಾ-ಜೀವನು ಪರನಿಂದನು. ಹೃದಯಗುಹೆಯಲ್ಲಿರತಕ್ಕವನು, ಪರಮಾತ್ಮನು. ಶೇಷಭೂತನು ಅವನ ಅನುಗ್ರಹದಿಂ ವಿರೋಧಿ ವರ್ಗವೆಲ್ಲನಶಿಸಲಾದ ಹೃದಯಗುಹೆಯಲ್ಲಿರುವ ಸೀತಾದೇವಿಯುಶೇಷಭೂತನಾದ ಪರಮಾತ್ಮನನ್ನು ಹೊಂದಿ ಭೋಗಪ್ರವಾಹವನ್ನು ಅನುಭವಿಸಿದಳೆಂಬ ಧ್ವನ್ಯರ್ಥವೇ ಮುಂದಿನ ಶ್ಲೋಕದಲ್ಲಿಯೂ ಕೂಡ. ಸ್ಪಷ್ಟವಾಗಿ ಹೇಳುತ್ತಾನೆ. ॥೪೦॥ ತತಃ-ಬಳಿಕ ಜನಕಾತ್ಮಜಾ-ಸೀತಾದೇವಿಯು, ತದಾ-ಆ ಕಾಲದಲ್ಲಿ. ರಾಕ್ಷಸಸಂಘಮರ್ದನಂ-ರಕ್ಕಸರ ಸಮೂಹವನ್ನು ಸಂಹರಿಸಿದ. ಮುದಿತೈಃ-ಸಂತೋಷಗೊಂಡ, ಮಹರ್ಷಿಭಿಃ-ಋಷಿಗಳಿಂದ. ಸಭಾಜ್ಯಮಾನಂ-ಬಹುಮತಿಸಲ್ಪಟ್ಟ, ತಂ-ಆ ಶ್ರೀರಾಮನನ್ನು, ಪುನಃ-ಭಾರಿಬಾರಿಗೂ, ಪರಿಷಸ್ವಜ್ಯ-ಅಪ್ಪಿಕೊಂಡು. ಶಶಿಪ್ರಭಾನನಾ-ಚಂದ್ರನಪ್ರಕಾಶದಂತೆ ಪ್ರಕಾಶಿಸುವ ಮುಖವುಳ್ಳವಳಾಗಿ, ಹೃಷ್ಟಾ-ಸಂತೋಷಗೊಂಡವಳು ಬಭೂವ-ಆದಳು ॥೪೧॥

—** ಇತಿಶ್ರೀಮದಾರಣ್ಯಕಾಂಡೆ-ತ್ರಿಂಶಸ್ಸರ್ಗಃ **—

ತತಃ-ಬಳಿಕ, ಅಕಂಪನಃ-ಅಕಂಪನೆಂಬ ರಾವಣನ ಚಾರನು, ತ್ವರಮಾಣಃ-ಜಾಗರೂಕನಾಗಿ, ಜನಸ್ಥಾನಾತ್-ಉಕ್ತದದೇಶದಿಂದ, ಗತ್ವಾ-ಹೋಗಿ, ಲಂಕಾಂ-ಲಂಕಾಪಟ್ಟಣವನ್ನು ವೇಗೇನ-ಜವದಿಂದ, ಪ್ರವಿಶ್ಯ-ಹೊಕ್ಕು, ರಾವಣಂ-ರಾವಣಾಸುರನಂಕುರಿತು ವಾಕ್ಯಂ-ಮಾತನ್ನು, ಅಬ್ರವೀತ್ ನುಡಿದನು ॥೧॥ ಹೇರಾಜನ್-ಎಲೈರಾವಣನೇ, ಜನಸ್ಥಾನಸ್ಥಿತಾಃ-ಉಕ್ತಸ್ಥಳದಲ್ಲಿರುವ, ರಾಕ್ಷಸಾಃ-ರಕ್ಕಸರು, ಬಹವಃ-ಅನೇಕಮಂದಿಯು. ಹತಾಃ-ಹೊಡೆಯಲ್ಪಟ್ಟರು, ಖರಶ್ಚ-ಖರಾಸುರನು, ಸಂಖ್ಯೇ-ಕಾಳಗದಲ್ಲಿ. ನಿಹತಃ-ಹೊಡೆಯಲ್ಪಟ್ಟನು, ಅಹಂ-ನಾನು. ಕಥಂಚಿತ್-ಅತಿಪ್ರಯಾಸದಿಂದ, (ಅಂದರೆ-ಸ್ತ್ರೀವೇಷದಿಂದ.) ಆಗತಃ-ಬಂದೆನು ॥೨॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ದಶಗ್ರೀವಃ-ರಾವಣನು, ಕ್ರುದ್ಧಃ-ಕೋಪಗೊಂಡವನಾಗಿ, ಸಂರಕ್ತಲೋಚನಃ-ಕೆಂಗಣ್ಣುಗಳುಳ್ಳವನಾಗಿ ಚಕ್ಷುಷಾ-ಕಣ್ಣಿನಿಂದ, ನಿರ್ದಹನ್ನಿವ-ಸುಡುತ್ತಾನೆಂಬಂತೆ, ಅಕಂಪನಂ-ಅಕಂಪನನಂಕುರಿತು ಇದಂ-ಈಮಾತನ್ನು, ಉವಾಚ-ಹೇಳಿದನು ॥೩॥ ರಮ್ಯಂ-ಮನೋಹರವಾದ, ಮಮಜನಸ್ಥಾನಂ-ನನ್ನ ಉಕ್ತಪ್ರದೇಶವು, ಪರಾಸುನಾ-ಮೃತಪ್ರಾಯನಾ

---

ನಾವು ರಕ್ಷಣೀಯರು ರಕ್ಷಕನಾದವನು ಭಗವಂತನಾದ್ದರಿಂದ, ಆ ರಕ್ಷಕನ ಸ್ವರೂಪವನ್ನೂ, ಆತನ ಪ್ರತಿಜ್ಞೆಯನ್ನೂ ಸಹ ನಿರೀಕ್ಷಣೆಯಂಗೈಯ್ಯುವ ಋಷಿಗಳಿಗೆಸುಖವನ್ನುಂಟುಮಾಡುವವನಾಗಿಯೂ, ನಿರವಧಿಕವಾದ ಪ್ರೇಮಾತಿಶಯದಿಂ ಭರಿತನಾಗಿಯೂ, ಜಯಶೀಲನಾಗಿಯೂ, (ಅಥವಾ ಲೋಕಸ್ವಾಮಿಯಾಗಿಯೂ) ಇರುವ ಶ್ರೀರಾಮನಂ ಕಂಡು ಆಲಿಂಗನಂಗೈದಳು, ಅಥವಾ ತಾನು ಜಗಜ್ಜನನಿಯಾದ್ದರಿಂದಲೂ, ತನ್ನ ಮಕ್ಕಳಾದ ಮುನಿಗಳಿಗೆಲ್ಲ ಸುಖಕರನಾದವನು ಆ ತನ್ನ ಪತಿಯು, ಎಂಬ ಸಂತಸದಿಂದ, ಲೋಕದಲ್ಲಿ ಸ್ತ್ರೀಯರು ಪುತ್ರವಾತ್ಸಲ್ಯದಿಂದ ಪತಿಯುವಿಷಯವಾಗಿ ಯೆಂತು ಸಂತೋಷಿಸುವರೋ, ಅಂತು ತಾನು ಸಂತಸವನ್ನೈದಿದವಳಾಗಿ, ಶ್ರೀರಾಮುನನ್ನಪ್ಪಿಕೊಂಡಳೆಂದು ಭಾವವು) ॥೪೦॥ ಆ ಸಮಯದಲ್ಲಿ ಸೀತಾದೇವಿಯು ರಾಕ್ಷಸಸಂಹಾರವಂ ಗೈದ ಮತ್ತು ಮಹಾಮುನಿಗಳಿಂದಶ್ಲಾಘಿಸಲ್ಪಡುವವ ಶ್ರೀರಾಮುನನ್ನಪ್ಪಿಕೊಂಡು, ಚಂದಿರನಂತೆಬೆಳಗುವಮುಖವುಳ್ಳವಳಾದಳು ॥

—* ಆರಣ್ಯಕಾಂಡದಲ್ಲಿನ ೩೦ನೆಯ ಸರ್ಗಂಮುಗಿದುದು *—

ಅನಂತರದಲ್ಲಿ ಅಕಂಪನನೆಂಬ ರಾಕ್ಷಸನು ಆ ಜನಸ್ಥಾನದಿಂದ ತ್ವರೆಯಾಗಿ ಲಂಕಾಪುರಿಗೆ ಸಾರಿ, ರಾವಣನಂ ಕುರಿತು ನುಡಿವನಪೊತೆನೆ,—ಎಲೈ ರಾವಣನೇ! ಜನಸ್ಥಾನದಲ್ಲಿರುವ ಸಮಸ್ತರಾದ ರಾಕ್ಷಸರೂ ಖರಾಸುರನೂ ಇವರೆಲ್ಲರು ಹತರಾದರು, ನಾನು ಸ್ತ್ರೀವೇಷದಿಂದ ತಪ್ಪಿಸಿಕೊಂಡು ಬಂದೆನೆಂದು ನುಡಿದವನಾಗಲೂ, ಲೋಕಕಂಟಕನಾದ ದಶಕಂಠನು ಕಡುಕೋಪವುಳ್ಳವನಾಗಿ, ಆ ಅಕ್ಷಿವಾಕ್ಯವಂ ಪೇಳಿದ ಅಕಂಪನನಂ ಸುಡುವವನಂತೆ ದೃಷ್ಟಿಯಾಗಿ ಹೇಳಲೊಸಗಿದನು ॥೩॥ ಬಹು ಮನೋಹರವಾದ ನನ್ನ ಜನಸ್ಥಾನವು ಯಾರಿಂದ ಹತವಾಯಿ

ನಂಹತಂಮೇಮಮಪರಾಸುನಾ । ಕೋಹಿಸರ್ವೇಷುಲೋಕೇಷುಗತಿಂಚಾಧಿಗಮಿಷ್ಯತಿ ॥೪॥ ನಹಿಮೇವಿಪ್ರಿಯಂಕೃತ್ವಾ ಶಕ್ಯಂಮಘವತಾಸುಖಂ । ಪ್ರಾಪ್ತುಂವೈಶ್ರವಣೇನಾಪಿನಯಮೇನನವಿಷ್ಣುನಾ ॥೫॥ ಕಾಲಸ್ಯಚಾಪ್ಯಹಂಕಾಲೋದಹೇಯಮಪಿಪಾವಕಂ । ಮೃತ್ಯುಂಮರಣಧರ್ಮೇಣಸಂಯೋಜಯಿತುಮುತ್ಸಹೇ॥೬॥ ದಹೇಯಮಪಿಸಂಕ್ರುದ್ಧಸ್ತೇಜಸಾದಿತ್ಯಪಾವಕೌ । ವಾತಸ್ಯತರಸಾವೇಗಂನಿಹಂತುಮಹಮುತ್ಸಹೇ ॥೭॥ ತಥಾಕ್ರುದ್ಧಂದಶಗ್ರೀವಂಕೃತಾಂಜಲಿರಕಂಪನಃ । ಭಯಾತ್ಸಂದಿಗ್ಧಯಾವಾಚಾರಾವಣಂಯಾಚತೇಭಯಂ ॥೮॥ ದಶಗ್ರೀವೋಭಯಂತಸ್ಮೈಪ್ರದದೌರಕ್ಷಸಾಂವರಃ । ಸವಿಸ್ರಬ್ಧೋಬ್ರವೀದ್ವಾಕ್ಯಮಸಂದಿಗ್ಧಮಕಂಪನಃ ॥೯॥ ಪುತ್ರೋದಶರಥಸ್ಯಾಸ್ತಿಸಿಂಹಸಂಹನನೋಯುವಾ । ರಾಮೋನಾಮವೃಷಸ್ಕಂಧೋವೃತ್ತಾಯತಮಹಾಭುಜಃ । ವೀರಃಪೃಥುಯಶಾಃಶ್ರೀಮಾನತುಲ್ಯಬಲವಿಕ್ರಮಃ। ಹತಂತೇನಜನಸ್ಥಾನಂಖರಶ್ಚಸಹದೂಷಣಃ ॥೧೧॥ ಅಕಂಪನವಚಶ್ಶ್ರುತ್ವಾರಾವಣೋರಾಕ್ಷಸಾಧಿಪಃ । ನಾಗೇಂದ್ರಇವನಿಶ್ವಸ್ಯೈವ

---

ದ. ಕೇನ-ಯಾವನಿಂದ. ಹತಂ-ಹೊಡೆಯಲ್ಪಟ್ಟಿತು ಕೋಹಿ-ಯಾವಪುರುಷನುತಾನೇ, ಸರ್ವೇಷು-ಸಮಸ್ತವಾದ ಲೋಕೇಷು-ಲೋಕಗಳಲ್ಲಿ, ಗತಿಂ-ಸ್ಥಿತಿಯನ್ನು. ಅಧಿಗಮಿಷ್ಯತಿ-ಹೊಂದುವನು ॥೪॥ ಮೇ-ಯನಗೆ, ವಿಪ್ರಿಯಂ-ಅನಿಷ್ಟವನ್ನು, ಕೃತ್ವಾ-ಮಾಡಿ, ಸುಖಂ-ಸುಖವು, ಗಂತುಂ-ಪಡೆಯುವದಕ್ಕೆ, ಶಕ್ಯಂ-ಸಾಧ್ಯವೇ, ವೈಶ್ರವಣೇನಾಪಿ-ಕುಬೇರನಿಂದಲಾದರೂ, ಸುಖಂ-ಸುಖವು, ಪ್ರಾಪ್ತುಂ-ಹೊಂದುವದಕ್ಕಾಗಿ, ನಶಕ್ಯಂ-ಸಮರ್ಥವಲ್ಲ, ಯಮೇನ-ಯಮನಿಂದಲಾದರೂ, ವಿಷ್ಣುನಾಪಿ-ವಿಷ್ಣುವಿನಿಂದಲಾದರೂ. ಸುಖಂ-ಸುಖವು, ಪ್ರಾಪ್ತುಂ-ಹೊಂದುವದಕ್ಕಾಗಿ. ನಶಕ್ಯಂ-ಸಾಧ್ಯವಲ್ಲ॥ ಅಹಂ-ನಾನು, ಕಾಲಸ್ಯಾಪಿ-ಕಾಲಪುರುಷನಿಗೂ ಕಾಲಸ್ವರೂಪನು. ಪಾವಕಮಪಿ-ಅಗ್ನಿಯನ್ನು ದಹಿಸುವನು. ಮೃತ್ಯುಂ-ಯಮನನ್ನು. ಮರಣಧರ್ಮೇಣ-ಮರಣಧರ್ಮದಿಂದ, ಸಂಯೋಜಯಿತುಂ-ಶೇರಿಸುವದಕ್ಕಾಗಿ, ಉತ್ಸಹೇ-ಪ್ರಯತ್ನ ಮಾಡುವೆನು ॥೬॥ ಸಂಕ್ರುದ್ಧಃ-ಕೋಪಿಷ್ಟನಾಗಿ. ತೇಜಸಾ-ದೇಹತೇಜಸ್ಸಿನಿಂದ, ಆದಿತ್ಯಪಾವಕಾವಪಿ-ಸೂರ್ಯಾಗ್ನಿಗಳನ್ನು. ದಹೇಯಂ-ಸುಡುವೆನು, ತರಸಾ-ಬಲದಿಂದ. ಅಹಂ-ನಾನು, ವಾತಸ್ಯ-ವಾಯುವಿನ ವೇಗಂ-ತ್ರಾಣೆಯನ್ನು, ನಿಹಂತುಂ-ಹೊಡೆಯುವದಕ್ಕಾಗಿ, ಉತ್ಸಹೇ-ಉದ್ಯುಕ್ತನಾಗುವೆನು ॥೭॥ ತಥಾ-ಆ ಪರಿಯಾಗಿ. ಕ್ರುದ್ಧಂ-ಕೋಪಿಷ್ಟನಾದ, ದಶಗ್ರೀವಂ-ರಾವಣಾಸುರನನ್ನು, ಅಕಂಪನಃ-ಅಕಂಪನನು ಕೃತಾಂಜಲಿಃ-ಬದ್ಧಾಂಜಲಿಪುಟನಾಗಿ, ಭಯಾತ್-ಭಯದದೆಶೆಯಿಂದ ಸಂದಿಗ್ಧಯಾ-ಸಂದಿಗ್ಧವಾದ ಅಕ್ಷರಗಳುಳ್ಳ, ವಾಚಾ-ಮಾತಿನಿಂದ, ರಾವಣಂ-ರಾವಣಾಸುರನನ್ನು. ಅಭಯಂ-ಅಭಯವನ್ನು, ಯಾಚತೇ-ಪ್ರಾರ್ಥಿಸಿದನು ॥೮॥ ರಕ್ಷಸಾಂ-ರಾಕ್ಷಸರಿಗೆ. ವರಃ-ಶ್ರೇಷ್ಠನಾದ, ದಶಗ್ರೀವಃ-ರಾವಣನು, ತಸ್ಮೈ-ಆ ಅಕಂಪನನಿಗೆ, ಅಭಯಂ-ವರವನ್ನು. ಪ್ರದದೌ-ಕೊಟ್ಟನು, ಸಃ-ಅಕಂಪನಃ-ಆ ಅಕಂಪನನೆಂಬ ಚಾರನು, ವಿಸ್ರಬ್ಧಃ-ವಿಶ್ವಾಸಪಾತ್ರನಾಗಿ. ಅಸಂದಿಗ್ಧಂ-ಸಂದಿಗ್ಧಾರ್ಥವಲ್ಲದಿರುವ. ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೯॥ ದಶರಥಸ್ಯ-ದಶರಥಮಹಾರಾಯನಿಗೆ, ಪುತ್ರಃ-ಮಗನಾದ. ಸಿಂಹಸಂಹನನಃ-ಸುಂದರವಾದ ರೂಪಯುಕ್ತವಾದ ಶರೀರವುಳ್ಳ, ಯುವಾ-ಯೌವನಪುರುಷನಾದ, ರಾಮೋನಾಮ-ಶ್ರೀರಾಮನೆಂದು ಪ್ರಸಿದ್ಧನಾದವನು ಅಸ್ತಿ-ಇದ್ದಾನೆ. ವೃಷಭಸ್ಕಂಧಃ-ವೃಷಭದಭುಜಗೋಪುರದಂತೆ ಭುಜಶಿರಸ್ಸುಗಳುಳ್ಳವನು, ವೃತ್ತಾಯತಮಹಾಭುಜಃ-ಗುಂಡಾಗಿರುವ ಆ ಮಹತ್ತರವಾದ ಭುಜಗಳುಳ್ಳವನು. ವೀರಃ-ಶೂರನು, ಪೃಥುಯಶಾಃ-ವಿಸ್ತಾರವಾದ ಕೀರ್ತಿಯುಳ್ಳವನು. ಶ್ರೀಮಾನ್-ಸಂಪದ್ಯುಕ್ತನು ಅತುಲ್ಯಬಲವಿಕ್ರಮಃ-ಸಮಾನವಿಲ್ಲದಿರುವ ದೇಹಸಾಮರ್ಥ್ಯವೂ ಪರಾಕ್ರಮವೂ ಉಳ್ಳವನು. ತೇನ-ಆ ಶ್ರೀರಾಮನಿಂದ. ಜನಸ್ಥಾನಂ-ನಿನ್ನ ಉಕ್ಕುಡಪ್ರದೇಶವು, ಹತಂ-ಹೊಡೆಯಲ್ಪಟ್ಟಿತು. ಸಹದೂಷಣಃ-ದೂಷಣನಿಂದೊಡಗೂಡಿದ. ಖರಃ-ಖರಾಸುರನು, ಹತಃ-ಹೊಡೆಯಲ್ಪಟ್ಟನು ॥೧೧॥ ಅಕಂಪನವಚಃ-ಅಕಂಪನನಮಾತನ್ನು, ಶ್ರುತ್ವಾ-ಕೇಳಿ. ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ,

---

ತು? ಯಾವನು ಪರಲೋಕವಂ ಪಡೆಯುವನು? ನನಗಪಕೃತಿಯಂ ಗೈದು ಸುಖವಂ ಪಡೆಯಲಾಗದು. ನನಗಿಂತಲೂ ಹಿರಿಯವನಾದ ಕುಬೇರನಾಗಲೀ, ವಿಷ್ಣುವಾಗಲೀ ನನಗೆ ಅಪಕಾರವಂ ಮಾಡಿ ಯೆಂದಿಗೂ ಸುಖಿತರಾಗಲಾರರು, ನಾನು ಕಾಲಪುರುಷನಿಗೂ ಕೂಡಾ ಕಾಲಸ್ವರೂಪನು, ಸಮಸ್ತವಂ ಸುಡುವ ಅಗ್ನಿಯನ್ನು ದಹಿಸುವದಕ್ಕೆ. ಅಗ್ನಿಸ್ವರೂಪನಾದವನು ಮೃತ್ಯುವಿನನ್ನೂ ಸಹ ಮರಣಧರ್ಮದಿಂ ಶೇರಿಸಲಿಕ್ಕೆ ಯತ್ನಿಸುವೆನು, ಕುಪಿತನಾಗಿ ತೇಜಸ್ಸಿನಿಂದೆ ಸೂರ್ಯ ಚಂದ್ರಾದಿಗಳಂ ಸಹ ಸುಡುವೆನು ಬಲದಿಂದ ವಾಯುವಿನ ತ್ರಾಣೆಯಂ ಭಂಜನವಂ ಗೈಯ್ಯುವೆನೆಂದು· ಪರಿಪರಿನುಡಿಯುತಿರುವ ಆ ರಾವಣನಂ ಕುರಿತು, ಅಕಂಪನನು ಅಂಜಲಿಬದ್ಧನಾಗಿ ಭೀತಿಯಿಂದ ಆತನನ್ನು ಅಭಯವಂ ಬೇಡಿಕೊಂಡವನಾಗಲೂ, ರಾಕ್ಷಸೋತ್ತಮನಾದ ದಶಕಂಠನು ಅಕಂಪನನಿಗೆ ಅಭಯಪ್ರದಾನವಂ ಗೈದನು, ಆಗ ಅಕಂಪನನು ನಂಬಿದವನಾಗಿ ಮೆಲ್ಲಮೆಲ್ಲನೆ ನುಡಿವನದೆಂತೆನೆ,—॥೯॥ ಎಲೈ ಒಡೆಯನೇ! ದಶರಥಪುತ್ರನಾದ ಸುಂದರಾಕಾರನಾದ, ಯೌವನಶಾಲಿಯಾದ, ರಾಮನೆಂದು ಪ್ರಸಿದ್ಧನಾದವ ನೋರ್ವನಿರುವನು, ಆತನು ವೃಷಭದಸ್ಕಂಧದಂತೆ ಹೆಗಲುಳ್ಳವನಾಗಿಯೂ, ಗುಂಡಾಗಿರುವ ಭುಜಗಳುಳ್ಳವನಾಗಿಯೂ ಬಹು ಸಾಮರ್ಥ್ಯವುಳ್ಳವನಾಗಿಯೂ, ಇರುವವನು, ಆತನು ನಮ್ಮ ಜನಸ್ಥಾನವನ್ನೈದಿ ಖರದೂಷಣಾದಿಗಳ

ಚನಂಚೇದಮಬ್ರವೀತ್ ।೧೨। ಸಸುರೇಂದ್ರೇಣಸಂಯುಕ್ತೋರಾಮಸ್ಸರ್ವಾಮರೈಸ್ಸಹ । ಉಪಯಾತೋಜನಸ್ಥಾನಂಬ್ರೂ
ಹಿಕಚ್ಚಿದಕಂಪನ ।೧೩। ರಾವಣಸ್ಯಪುನರ್ವಾಕ್ಯಂನಿಶಮ್ಯತದಕಂಪನಃ । ಆಚಚಕ್ಷೇಬಲಂತಸ್ಯವಿಕ್ರಮಂಚಮಹಾ
ತ್ಮನಃ ।೧೪। ರಾಮೋನಾಮಮಹಾತೇಜಾಶ್ಶ್ರೇಷ್ಠಸ್ಸರ್ವಧನುಷ್ಮತಾಂ । ದಿವ್ಯಾಸ್ತ್ರಗುಣಸಂಪನ್ನಃಪುರಂದರಸಮೋಯು
ಧಿ ।೧೫। ತಸ್ಯಾನುರೂಪೋಬಲವಾನ್ರಕ್ತಾಕ್ಷೋದುಂದುಭಿಸ್ವನಃ । ಕನೀಯಾನ್ಲಕ್ಷ್ಮಣೋನಾಮಭ್ರಾತಾಶಶಿನಿಭಾ
ನನಃ ॥ ಸತೇನಸಹಸಂಯುಕ್ತಃಪಾವಕೇನಾನಿಲೋಯಥಾ । ಶ್ರೀಮಾನ್ರಾಜವರಸ್ತೇನಜನಸ್ಥಾನಂನಿಪಾತಿತಂ ।೧೬। ನೈ
ವದೇವಾಮಹಾತ್ಮಾನೋನಾತ್ರಕಾರ್ಯಾವಿಚಾರಣಾ ।೧೭। ಶರಾರಾಮೇಣತೂತ್ಸೃಷ್ಟಾರುಕ್ಮಪುಂಖಾಃಪತತ್ರಿಣಃ । ಸ
ರ್ಪಾಃಪಂಚಾನನಾಭೂತ್ವಾಭಕ್ಷಯಂತಿಸ್ಮರಾಕ್ಷಸಾನ್ ॥೧೮॥ ಯೇನಯೇನಚಗಚ್ಛಂತಿರಾಕ್ಷಸಾಭಯಕರ್ಶಿತಾಃ ।
ತೇನತೇನಸ್ಮಪಶ್ಯಂತಿರಾಮಮೇವಾಗ್ರತಸ್ಥಿತಂ ॥೧೯॥ ಇತ್ಥಂವಿನಾಶಿತಂತೇನಜನಸ್ಥಾನಂತವಾನಘ ।೨೦। ಅಕಂಪನ

---

ರಾವಣಃ-ರಾವಣನು. ನಾಗೇಂದ್ರ ಇವ-ಸರ್ಪಶ್ರೇಷ್ಠದಂತೆ ನಿಶ್ವಸ್ಯ-ನಿಟ್ಟುಸುರುಬಿಟ್ಟು, ಇದಂವಚಃ-ಈಮಾತನ್ನು. ಅಬ್ರವೀತ್-ನುಡಿದನು ||೧೨||
ಹೇ ಅಕಂಪನ-ಎಲೆ! ಅಕಂಪನನೇ ಸರಾಮಃ-ಆ ಶ್ರೀರಾಮನು, ಸುರೇಂದ್ರೇಣಸಂಯುಕ್ತಃ-ದೇವೇಂದ್ರನೊಡನೆ ಕೂಡಿದವನಾಗಿ. ಸರ್ವಾಮರೈಸ್ಸಹ-ಸ
ಮಸ್ತ ದೇವತೆಗಳೊಡಗೂಡ. ಜನಸ್ಥಾನಂ-ಉಕ್ತಸ್ಥಳವನ್ನು ಕುರಿತು, ಉಪಯಾತಃಕಚ್ಚಿತ್-ಬಂದಿರ್ಧಾನೆಯೋ ಏನು, ಬ್ರೂಹಿ-ಹೇಳೆನ್ನಲು ರಾವಣ
ಸ್ಯ-ರಾವಣನ, ತದ್ವಾಕ್ಯಂ-ಆ ಮಾತನ್ನು. ನಿಶಮ್ಯ-ಕೇಳಿ.. ಅಕಂಪನಃ-ಅಕಂಪನನು, ಮಹಾತ್ಮನಃ-ಮಹಾ ಧೀರನಾದ, ತಸ್ಯ-ಆ ಶ್ರೀರಾಮನ. ಬ
ಲಂ-ಸಾಮರ್ಥ್ಯವನ್ನೂ ವಿಕ್ರಮಂ-ಪರಾಕ್ರಮವನ್ನೂ ಆಚಚಕ್ಷೇ-ಹೇಳಿದನು ||೧೪|| ರಾಮೋನಾಮ-ರಾಮನೆಂಬುವನು, ಮಹಾತೇಜಾಃ-ಮಹಾ ಅಂತ
ಸ್ಸಾರವುಳ್ಳವನು. ಸರ್ವಧನುಷ್ಮತಾಂ-ಸಮಸ್ತರಾದ ಧನುರ್ಧಾರಿಗಳೊಳಗೆ ಶ್ರೇಷ್ಠಃ-ಅಗ್ರೇಸರನು. ದಿವ್ಯಾಸ್ತ್ರಗುಣಸಂಪನ್ನಃ-ದೇವತಾಸ್ತ್ರ ಗ
ಳನ್ನಭ್ಯಾಸಮಾಡಿದವನು ಗುಣಗಳಿಂ ಕೂಡಿಕೊಂಡಿರುವವನು. ಯುಧಿ-ಕಾಳಗದಲ್ಲಿ, ಪುರಂದರಸಮಃ-ದೇವೇಂದ್ರನಿಗೆ ಸಮಾನನು ||೧೫|| ತಸ್ಯ-ಆ
ಶ್ರೀರಾಮನಿಗೆ. ಅನುರೂಪಃ-ಸಮಾನನಾದ, ಬಲವಾನ್-ಬಲಶಾಲಿಯಾದ, ರಕ್ತಾಕ್ಷಃ-ಕೆಂಗಣ್ಣುಗಳುಳ್ಳ, ದುಂದುಭಿಸ್ವನಃ-ಭೇರೀಧ್ವನಿಯಂತೆ ಕಂಠಧ್ವ
ನಿಯುಳ್ಳ. ಕನೀಯಾನ್ಭ್ರಾತಾ-ತಮ್ಮನಾದ, ಶಶಿನಿಭಾನನಃ-ಚಂದ್ರನಿಗೆ ಸಮಾನವಾದ ಮುಖವುಳ್ಳ. ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧ
ನು, ವರ್ತತೇ-ಇರ್ಧಾನೆ ||೧೬|| ತೇನಸಹ-ಆ ಲಕ್ಷ್ಮಣನೊಡಗೂಡ. ಸಂಯುಕ್ತಃ-ಕೂಡಿಕೊಂಡಿರುವ. ಪಾವಕೇನ-ಅಗ್ನಿಯಿಂದ. ಅನಿಲೋಯಥಾ-
ವಾಯುವಿನಂತೆ, ರಾಜವರಃ-ರಾಜಶ್ರೇಷ್ಠನಾದ. ಸಃ-ಆ ಶ್ರೀರಾಮನು, ಶ್ರೀಮಾನ್-ಸಂಪದ್ಯುಕ್ತನಾದವನು, ತೇನ-ಆ ಆ ಶ್ರೀರಾಮನಿಂದ. ಜನಸ್ಥಾನಂ-
ಉಕ್ಕಟವು. ನಿಪಾತಿತಂ-ಧ್ವಂಸಮಾಡಲ್ಪಟ್ಟಿತ್ತು ||೧೭|| ಮಹಾತ್ಮನಃ-ಮಹಾಪ್ರಭಾವವುಳ್ಳ, ದೇವಾಃ-ದೇವತೆಗಳು. ನೈವ-ಇಲ್ಲ, ಅತ್ರ-ಈ ಅರ್ಥದಲ್ಲಿ
ವಿಚಾರಣಾ-ಚರ್ಚೆಯು, ನಕಾರ್ಯಾ-ಮಾಡತಕ್ಕದ್ದಲ್ಲಾ ||೧೭|| ರಾಮೇಣ-ಶ್ರೀರಾಮನಿಂದ, ಉತ್ಸೃಷ್ಟಾಃ-ಬಿಡಲ್ಪಟ್ಟ, ರುಕ್ಮಪುಂಖಾಃ-ಬಂಗಾರದ
ಕೋರೆಕಿಗಳುಳ್ಳ, ಪತತ್ರಿಣಃ-ರೆಕ್ಕೆಗಳುಳ್ಳ. ಶರಾಃ-ಬಾಣಗಳು. ಪಂಚಾನನಾಃ-ಐದುಮುಖಗಳುಳ್ಳ, ಯದ್ವಾ-ವಿಸ್ತಾರವಾದ ಮುಖಗಳುಳ್ಳ, ಸ
ರ್ಪಾಃ-ಹಾವುಗಳು. ಭೂತ್ವಾ-ಆಗಿ. ರಾಕ್ಷಸಾನ್-ರಕ್ಕಸರನ್ನು, ಭಕ್ಷಯಂತಿಸ್ಮ-ತಿನ್ನುತ್ತವೆ ||೧೮|| ರಾಕ್ಷಸಾಃ-ರಕ್ಕಸರು, ಭಯಕರ್ಶಿ
ತಾಃ-ಭಯದಿಂ ಕೃಶೀಭೂತರಾಗಿ, ಯೇನಯೇನಚ-ಯಾವಯಾವ ಮಾರ್ಗದಿಂದ. ಗಚ್ಛಂತಿ-ಹೋಗುತ್ತಾರೋ. ಯೇನಯೇನ-ಯಾವಯಾವ ರೂಪ
ದಿಂದ, ಗಚ್ಛಂತಿ-ಹೋಗುತ್ತಾರೋ, ತೇನತೇನ-ಆಯಾಯ ರೂಪದಿಂದ, ತೇನತೇನ-ಆಯಾಯ ಮಾರ್ಗದಿಂದ. ರಾಮಮೇವ-ಶ್ರೀರಾಮನನ್ನೇ. ಅಗ್ರತಃ-

---

ನ್ನೂ ಇತರ ಸೈನ್ಯವನ್ನೂ ಸಹಾ ಸಂಹಾರವಂಗೈದನೆಂದು ನುಡಿಪವನಾಗಲೂ, ದಶಕಂಠನು ಆ ವಾಕ್ಯವಂ ಕೇ
ಳಿ ನಾಗರಾಜನಂತೆ ದೀರ್ಘವಾಗಿ ನಿಟ್ಟುಸುರುಗಳಂ ಬಿಟ್ಟು ನುಡಿವನದೆಂತೆನೆ,— ।೧೩। ಎಲೈ ಅಕಂಪನನೇ!
ಆ ಶ್ರೀರಾಮನು ದೇವತೆಗಳಿಂದಲೂ ದೇವೇಂದ್ರನಿಂದಲೂ, ಸಹ ಕೂಡಗೂಡಿ ಜನಸ್ಥಾನಕ್ಕೆ ಬಂದಿರುವನೇ ಯೇ
ನು? ಎಂಬದಾಗಿ ರಾವಣಾಸುರನು ಕೇಳಿದವನಾಗಲೂ, ಆ ವಾಕ್ಯವಂ ಕೇಳಿ ಅಕಂಪನನು ಮಹಾತ್ಮನಾದ ಶ್ರೀ
ರಾಮನ ಬಲವನ್ನೂ ಸಾಮರ್ಥ್ಯವನ್ನೂ ಸಹ ಪೇಳುವನದೆಂತೆನೆ,— ।೧೪। ಎಲೈ ಒಡೆಯನಾದ ರಾವಣನೇ, ಸ
ರ್ವರಾದ ಧನುರ್ಧಾರಿಗಳೊಳಗೆ ಉತ್ತಮನಾದ ಮಹಾ ತೇಜೋವಂತನಾದ ಶ್ರೀರಾಮನು ದಿವ್ಯವಾದ ಅಸ್ತ್ರ
ಗಳಿಂದ ಕೂಡಿಕೊಂಡಿರುವವನು, ಕಾಳಗದಲ್ಲಿ ದೇವೇಂದ್ರನಂತೆ ಯುದ್ಧವಂಗೈಯ್ಯುವನು, ಆತನಿಗೆ ಅನುರೂ
ಪನಾಗಿಯೂ ಬಲವಂತನಾಗಿಯೂ, ಕೆಂಗಣ್ಣುಗಳುಳ್ಳವನಾಗಿಯೂ ದುಂದುಭಿಯಂತೆ ಶಬ್ದವುಳ್ಳವನಾಗಿಯೂ, ಚಂ
ದ್ರನಿಗೆ ಸಮಾನವಾದ ಮುಖವುಳ್ಳವನಾಗಿಯೂ, ಇರುವ ಲಕ್ಷ್ಮಣನೆಂಬ ಅನುಜನಿರುವನು, ಆತನು ಆ ತಮ್ಮನಿಂ
ದ ಅಗ್ನಿಯಿಂದ ವಾಯುವು ಯುಕ್ತನಾದಂತೆ ಯುಕ್ತನಾಗಿರುವನು, ರಾಜೋತ್ತಮನಾದ ಆ ಶ್ರೀರಾಮನು ಆ
ಆ ತಮ್ಮನಿಂದೊಡಗೂಡಿ ಜನಸ್ಥಾನವನ್ನು ಧ್ವಂಸಂಗೈದನು, ಈ ಕಾರ್ಯಕ್ಕೆ ದೇವತೆಗಳೇ ಆಗಲಿ ಯಾರೇ ಆಗಲಿ

ವಚಶ್ಶ್ರುತ್ವಾ ರಾವಣೋ ವಾಕ್ಯಮಬ್ರವೀತ್ । ಜನಸ್ಥಾನಂ ಗಮಿಷ್ಯಾಮಿ ಹಂತುಂ ರಾಮಂ ಸಲಕ್ಷ್ಮಣಂ ॥ ೧೧ ॥ ಅಥೈವಮು ಕ್ತೇ ವಚನೇ ಪ್ರೋವಾಚೇದಮಕಂಪನಃ । ಶೃಣು ರಾಜನ್ ಯಥಾವೃತ್ತಂ ರಾಮಸ್ಯ ಬಲಪೌರುಷಂ ॥ ೧೨ ॥ ಅಸಾಧ್ಯಃ ಕುಪಿ ತೋ ರಾಮೋ ವಿಕ್ರಮೇಣ ಮಹಾಯಶಾಃ । ಆಪಗಾಯಾಸ್ಸುಪೂರ್ಣಾಯಾ ವೇಗಂ ಪರಿಹರೇಚ್ಛರೈಃ ॥ ೧೩ ॥ ಸತಾರಗ್ರಹನಕ್ಷ ತ್ರಂ ನಭಶ್ಚಾಪ್ಯವಸಾದಯೇತ್ । ಅಸೌ ರಾಮಸ್ತು ಸೀದಂತೀಂ ಶ್ರೀಮಾನಭ್ಯುದ್ಧರೇನ್ಮಹೀಂ ॥ ೧೪ ॥ ಭಿತ್ವಾ ವೇಲಾಂ ಸಮುದ್ರ ಸ್ಯ ಲೋಕಾನಾಪ್ಲಾವಯೇದ್ವಿಭುಃ । ವೇಗಂ ವಾಪಿ ಸಮುದ್ರಸ್ಯ ವಾಯುಂ ವಾ ವಿಧಮೇಚ್ಛರೈಃ ॥ ೧೫ ॥ ಸಂಹೃತ್ಯ ವಾ ಪುನ

---

ಮುಂದುಗಡೆ, ಸ್ಥಿತಂ-ಇರುವವನನ್ನಾಗಿ. ಪಶ್ಯಂತಿಸ್ಮ-ನೋಡಿದರಷ್ಟೆ ॥೯॥ ಹೇಅನಘ-ಎಲೈ ನಿರ್ದೋಷನೇ, ತೇನ-ಆ ಶ್ರೀರಾಮನಿಂದ, ಇತ್ಥಂ-ಈಪರಿ, ತವ-ನಿನ್ನ, ಜನಸ್ಥಾನಂ-ಜನರು ಇರತಕ್ಕ ಸ್ಥಳವು, ವಿನಾಶಿತಂ-ಬಟ್ಟನೂ ಇಲ್ಲದಂತೆ ಮಾಡಲ್ಪಟ್ಟಿತು ॥೧೦॥ ಅಕಂಪನವಚಃ-ಅಕಂಪನನ ಮಾತನ್ನು. ಶ್ರುತ್ವಾ-ಕೇಳಿ, ರಾವಣಃ-ರಾವಣಾಸುರನು, ಅಹಂ-ನಾನು, ಸಲಕ್ಷ್ಮಣಂ-ಲಕ್ಷ್ಮಣನೊಡಗೂಡಿದ, ರಾಮಂ-ಶ್ರೀರಾಮನನ್ನು, ಹಂತುಂ-ಹೊಡೆಯುವದಕ್ಕಾಗಿ, ಜನಸ್ಥಾನಂ-ಉಕ್ತಸ್ಥಳವನ್ನು ಕುರಿತು, ಗಮಿಷ್ಯಾಮಿ-ಹೋಗುವೆನು, ಇತಿ-ಇಂತೆಂದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೧॥ ಏವಂ-ಈಪರಿಯಾಗಿ, ವಚನೇ-ಮಾತು, ಉಕ್ತೇಸತಿ-ಹೇಳಲ್ಪಟ್ಟವನಾಗುತ್ತಿರಲಾಗಿ, ಅಥ-ಬಳಿಕ, ಅಕಂಪನಃ-ಅಕಂಪನನು, ಇದಂ-ಈ ಮಾತನ್ನು, ಪ್ರೋವಾಚ-ಹೇಳಿದನು, ಹೇರಾಜನ್-ಎಲೈ ಅರಸೇ. ರಾಮಸ್ಯ-ಶ್ರೀರಾಮನ, ಬಲಪೌರುಷಂ-ಸಾಮರ್ಥ್ಯಪರಾಕ್ರಮಗಳನ್ನು, ಯಥಾವೃತ್ತಂ-ನಡದಂತೆ (ಹೇಳ್ವೆ-ಹೇಳುವೆನು,) ಶೃಣು-ಕೇಳು ॥೧೨॥ ರಾಮಃ-ಶ್ರೀರಾಮನು, ಕುಪಿತಃ-ಕೋಪಿಷ್ಠನಾದರೆ, ಅಸಾಧ್ಯಃ-ಪರಾಕ್ರಮದಿಂದ ನಿವಾರಿಸಲಸಾಧ್ಯನು, ವಿಕ್ರಮೇಣ-ಪರಾಕ್ರಮದಿಂದ. ಮಹಾಯಶಾಃ-ಕೀರ್ತಿಪಡೆದವನು, ಪೂರ್ಣಾಯಾಃ-ಸಂಪೂರ್ಣವಾದ, ಆಪಗಾಯಾಃ-ನದಿಯ, ವೇಗಂ-ವೇಗವನ್ನು ಶರೈಃ-ಬಾಣಗಳಿಂದ, ಪರಿಹರೇತ್-ಪರಿಹಾರಮಾಡುವೆನು ॥೧೩॥ ಸತಾರಗ್ರಹನಕ್ಷತ್ರಂ-ನಕ್ಷತ್ರಗಳಿಂದೊಡಗೂಡಿದ ನವಗ್ರಹಗಳೊಳುಳ್ಳ. ನಭಶ್ಚ-ಅಂತರಿಕ್ಷವನ್ನು, ಅವಸಾದಯೇತ್-ಕೆಳಕ್ಕೆ ಬೀಳಿಸುವನು, (ಇದರಿಂದ ತ್ರಿವಿಕ್ರಮಾವತಾರ ಸೂಚಕವಾಯಿತು) ಅಸೌ ರಾಮಃ-ಈ ಶ್ರೀರಾಮನು, ಶ್ರೀಮಾನ್-ಶೌರ್ಯಲಕ್ಷ್ಮೀಸಮೇತನಾದ್ದರಿಂದ, ಸೀದಂತೀಂ-ಮುಳುಗಿಹೋದ. ಮಹೀಂ-ಭೂದೇವತೆಯನ್ನು, ಉದ್ಧರೇತ್-ಮೇಲಕ್ಕೆ ಎತ್ತುವನು,. ಯದ್ವಾ-ಶ್ರೀಮಾನ್-ಲಕ್ಷ್ಮೀಸಂಪನ್ನನಾದ, ಅಸೌರಾಮಸ್ತು-ಈ ಶ್ರೀರಾಮನಾದರೆ, ಸೀದಂತೀಂ-ಸಂಸಾರಸಮುದ್ರದಲ್ಲಿ ಮುಳುಗಿರುವ, ಮಹೀಂ-ಭೂಮಿಸ್ಥಜನವನ್ನು, ಉದ್ಧರೇತ್-ಉದ್ಧಾರಮಾಡುವನು, (ಅಂದರೆ-ಮೋಕ್ಷವಂ ಕೊಡುವನು ಪೂರ್ವದಲ್ಲಿ ಹೇಳಿದ ಅರ್ಥದಿಂ ವರಾಹವತಾರಸೂಚಿಕವಾಯಿತು) ॥೧೪॥ ವಿಭುಃ-ಸಮರ್ಥನಾದ ಶ್ರೀರಾಮನು, ಸಮುದ್ರಸ್ಯ-ಕಡಲಿನ, ವೇಲಾಂ-ದಡವನ್ನು, ಭಿತ್ವಾ-ಭೇದಿಸಿ, ಲೋಕಾನ್-ಲೋಕಗಳನ್ನು, ಆಪ್ಲಾವಯೇತ್-ಮುಳುಗಿಸುವನು, (ಇದರಿಂದ ಪ್ರಳಯಮಾಡುವನೆಂಬ ಅರ್ಥಸೂಚಿಕವಾಯಿತು) ಶರೈಃ-ಬಾಣಗಳಿಂದ, ಸಮುದ್ರಸ್ಯ-ಕಡಲಿನ, ವೇಗಂವಾಪಿ-ವೇಗವನ್ನಾಗಲಿ. ವಾಯುಂವಾ-ಗಾಳಿಯನ್ನಾಗಲಿ. ವಿಧಮೇತ್-ಧ್ವಂಸಮಾಡುವನು, (ಇದರಿಂದ ಭವಿಷ್ಯತ್ತು ಆಗತಕ್ಕ ಸೇತುಬಂಧನ ಸೂಚಿಕವಾಯಿತು) ॥೧೫॥ ಮಹಾಯಶಾಃ-ಮಹಾಕೀರ್ತಿವಂತನಾದ, ಪುರುಷವ್ಯಾಘ್ರಃ-ಪುರುಷಶ್ರೇಷ್ಠನಾದ, ಸಃ-

---

ಬಂದವರಲ್ಲಿ, ಈ ವಿಷಯದಲ್ಲಿ ಸಂದೇಹಿಸಬೇಡ ॥೧೦॥ ಎಲೈ ರಾವಣನೇ! ಶ್ರೀರಾಮನಿಂದ ಬಿಡಲ್ಪಟ್ಟ, ಮತ್ತು ಗರಿಗಳು ಕಟ್ಟದ ಬಾಣಂಗಳು, ಐದು ಶಿರಗಳುಳ್ಳ ಸರ್ಪಂಗಳಾಗಿ ರಾಕ್ಷಸರನ್ನು ಗ್ರಾಸಂಗೈದವು. ಭಯದಿಂದ ಕೃಶರಾಗಿ ರಾಕ್ಷಸರು ಯಾವಯಾವ ಮಾರ್ಗದಿಂದ ಗಮಿಸಿದರೊ, ಆಯಾಮಾರ್ಗದಲ್ಲಿ ಮುಂದುಗಡೆ ಶ್ರೀರಾಮನನ್ನೇ ಕಂಡರು. ಈ ರೀತಿಯಾಗಿ ನಿನ್ನ ಜನಸ್ಥಾನವು ವಿನಾಶಂ ಗೈಯ್ಯಲ್ಪಟ್ಟಿತೆಂದು ಅಕಂಪನನು ನುಡಿದವನಾಗಲೂ, ಆ ವಾಕ್ಯವಂ ಕೇಳಿ ರಾವಣನಿಂತೆಂದನು, ಎಲೈ ಅಕಂಪನನೇ! ಲಕ್ಷ್ಮಣಸಹಿತನಾದ ಆ ರಾಮನಂ ಸಂಹಾರವಂ ಗೈಯ್ಯುವದಕ್ಕೆ ಜನಸ್ಥಾನಕ್ಕೆ ಸಾರುವೆನೆಂದು ನಿರೂಪಿಸಿದನು ॥೧೧॥ ಅನಂತರದಲ್ಲಿ ಅಕಂಪನನು, ಆ ರಾವಣಾಸುರನಂ ಕುರಿತು, ಎಲೈ ರಾವಣನೇ! ಶ್ರೀರಾಮನ ನಡತೆಯೂ ಬಲವೂ ಪೌರುಷವೂ ಸಹ ಯೆಂಥಾದ್ದಾಗಿರುವದೋ ಪೇಳುವೆನು ಕೇಳುವವನಾಗು ॥೧೨॥ ಯೇನಂದರೆ,—ಮಹಾ ಯಶೋವಂತನಾದ ಶ್ರೀರಾಮನು ಕುಪಿತನಾದರೆ ಜಯಿಸಲಸಾಧ್ಯನು, ಆತನು ತುಂಬಿರುವ ಪ್ರವಾಹದ ವೇಗವನ್ನಾದರೂ ಬಾಣಂಗಳಿಂ ಪರಿಹರಿಸುವನು, ಅಶ್ವಿನ್ಯಾದಿ ನಕ್ಷತ್ರಂಗಳಿಂದಲೂ ನವಗ್ರಹಂಗಳಿಂದ ಇತರನಕ್ಷತ್ರಂಗಳಿಂದಲೂ ಯುಕ್ತವಾದ ಬ್ರಹ್ಮಾಂಡವನ್ನೂ ಕೂಡಾ ಕೆಳಗೆ ಬೀಳಿಸುವನು, [ಹೀಗೆ ಹೇಳಿದ್ದರಿಂದ ತ್ರಿವಿಕ್ರಮಾವತಾರವಂ ಗೈದವನೆಂದು ತೋರುವದು] ಮತ್ತು ಮುಳುಗುತ್ತಿರುವ ಭೂಮಿಯನ್ನು ಸಹ ಮೇಲಕ್ಕೆತ್ತುವನು [ಈ ಅರ್ಥದಿಂದ ವರಹಾವತಾರವು ಸೂಚಕವಾಯಿತು] ॥೧೪॥ [ಇದಲ್ಲದೆ ಮಹಾ ಸಮರ್ಥನಾದ ಆತನೇ ಸಂಹಾರಕ್ಕೆ ಕಾರಣನೆಂದು ನುಡಿವನದೆಂತೆನೆ,—] ವಿಭುವಾದ ಆ ಶ್ರೀರಾಮನು ಸಮುದ್ರದ ಮೇರೆಯಂ ಭೇದಿಸಿ ಲೋಕಂಗಳಂ ಮುಳುಗಿಸುವನು, ಅಥವಾ ಸಮುದ್ರದ ವೇಗವನ್ನಾಗಲೀ ವಾಯುವಿನನ್ನಾಗಲೀ ಬಾಣಂಗಳಿಂದ ಭಂಜನವಂ ಗೈಯ್ಯುವನು, [ಹೀಗೆ ಹೇಳಿದ್ದರಿಂದ ಆತನೇ ಪ್ರ

ಶಕ್ತಃ ಸ ಪುರುಷವ್ಯಾಘ್ರಃ ಸ್ರಷ್ಟುಂ ಪುನರಪಿ ಪ್ರಜಾಃ ॥೨೬॥ ನ ಹಿ ರಾಮೋ ದಶಗ್ರೀವ ಶಕ್ಯೋ ಜೇತುಂ ತ್ವಯಾ ಯುಧಿ । ರಕ್ಷಸಾಂ ವಾಪಿ ಲೋಕೇನ ಸ್ವರ್ಗಃ ಪಾಪಜನೈರಿವ ॥೨೭॥ ನ ತಂ ವಧ್ಯಮಹಂ ಮನ್ಯೇ ಸರ್ವೈರ್ದೇವಾಸುರೈರಪಿ । ಅಯಂ ತಸ್ಯ ವಧೋಪಾಯಸ್ತಂ ಮಮೈಕಮನಾಃ ಶೃಣು ॥೨೮॥ ಭಾರ್ಯಾ ತಸ್ಯೋತ್ತಮಾ ಲೋಕೇ ಸೀತಾ ನಾಮ ಸುಮಧ್ಯಮಾ । ಶ್ಯಾಮಾ ಸಮವಿಭಕ್ತಾಂಗೀ ಸ್ತ್ರೀರತ್ನಂ ರತ್ನಭೂಷಿತಾ ॥ ನೈವ ದೇವೀ ನ ಗಂಧರ್ವೀ ನಾಪ್ಸರಾ ನಾಪಿ ದಾನವೀ । ತುಲ್ಯಾ ಸೀಮಂತಿನೀ ತಸ್ಯಾ ಮಾನುಷೀಷು ಕುತೋ ಭವೇತ್ ॥೩೦॥ ತಸ್ಯಾಪಹರ ಭಾರ್ಯಾಂ ತ್ವಂ ಪ್ರಮಥ್ಯ ತು ಮಹಾವನೇ । ಸೀತಯಾ ರಹಿತಃ ಕಾಮೀ ರಾಮೋ ಹಾಸ್ಯತಿ ಜೀವಿತಂ ॥೩೧॥ ಅರೋಚಯತ ತದ್ವಾಕ್ಯಂ ರಾವಣೋ ರಾಕ್ಷಸಾಧಿಪಃ । ಚಿಂತಯಿತ್ವಾ ಮಹಾಬಾಹುರಕಂಪನಮುವಾಚ ಹ ॥೩೨॥ ಬಾಢಂ ಕಾಲ್ಯಂ ಗಮಿಷ್ಯಾಮಿ ಹ್ಯೇ

ಆ ಶ್ರೀರಾಮನು, ವಿಕ್ರಮೇಣ-ಪರಾಕ್ರಮದಿಂದ, ಲೋಕಾನ್-ಲೋಕಗಳನ್ನು, ಪುನಃ-ಮತ್ತು, ಸ್ರಷ್ಟುಂ-ಸೃಷ್ಟಿ ಮಾಡುವದಕ್ಕೋಸ್ಕರ, ಪ್ರಜಾಃ-ಜನಗಳನ್ನು, ಪುನರಪಿ-ಮತ್ತೂ, ಸ್ರಷ್ಟುಂ-ಸೃಷ್ಟಿ ಮಾಡುವದಕ್ಕಾಗಿ, ಶಕ್ತಃ-ಶಕ್ತನು ॥೨೬॥ ಹೇ ದಶಗ್ರೀವ-ಎಲೈ ರಾವಣಾಸುರನೇ, ರಾಮಃ-ಶ್ರೀರಾಮನು, ಸ್ವರ್ಗಃ-ಸ್ವರ್ಗವು, ಪಾಪಜನೈರಿವ-ಪಾಪಿಷ್ಠ ಜನರಿಂದಂತೆ, ತ್ವಯಾ-ನಿನ್ನಿಂದಲೇ ಆಗಲಿ, ರಕ್ಷಸಾಂ-ರಾಕ್ಷಸರ, ಲೋಕೇನವಾಪಿ-ಜನರಿಂದಲೇ ಆಗಲಿ, ಜೇತುಂ-ಜಯಿಸುವದಕ್ಕಾಗಿ, ನ ಶಕ್ಯಃ-ಸಮರ್ಥನಲ್ಲ ॥೨೭॥ ಅಹಂ-ನಾನು, ಸರ್ವೈಃ-ಸಮಸ್ತರಾದ, ದೇವಾಸುರೈರಪಿ-ದೇವತೆಗಳಿಂದಲೂ ರಾಕ್ಷಸರಿಂದಲೇ ಆಗಲಿ, ತಂ-ಆ ಶ್ರೀರಾಮನನ್ನು, ವಧ್ಯಂ-ವಧಾರ್ಹನನ್ನಾಗಿ, ನ ಮನ್ಯೇ-ತಿಳಿಯುವದಿಲ್ಲ. ಅಯಂ-ಇದು, ತಸ್ಯ-ಆ ಶ್ರೀರಾಮನ, ವಧೋಪಾಯಃ-ಸಂಹಾರೋಪಾಯವು. ತಂ-ಆ ಉಪಾಯವನ್ನು, ಮಮ-ನನ್ನ ಉಪದೇಶದಿಂದ, ಏಕಮನಾಃ-ಒಂದೇ ಮನವುಳ್ಳವನಾಗಿ. ಶೃಣು-ಕೇಳು ॥೨೮॥ ತಸ್ಯ-ಆ ಶ್ರೀರಾಮನ, ಭಾರ್ಯಾ-ಹೆಂಡತಿಯು, ಲೋಕೇ-ಲೋಕದಲ್ಲಿ, ಉತ್ತಮಾ-ಸರ್ವೋತ್ತಮಳಾದ, ಸೀತಾನಾಮ-ಸೀತಾದೇವಿಯೆಂದು ಪ್ರಸಿದ್ಧಳು, ಸುಮಧ್ಯಮಾ-ಒಳ್ಳೇ ಮಧ್ಯ ಪ್ರದೇಶವುಳ್ಳವಳು, ಶ್ಯಾಮಾ-ಯೌವನವತಿಯು. ಸಮವಿಭಕ್ತಾಂಗೀ-ಸಮವಾಗಿ ವಿಭಜಿಸಲ್ಪಟ್ಟ ಅವಯವಗಳುಳ್ಳವಳೂ, ಸ್ತ್ರೀರತ್ನಂ-ಸ್ತ್ರೀಯರುಗಳೊಳಗೆ ಶ್ರೇಷ್ಠಳು, ರತ್ನಭೂಷಿತಾ-ರತ್ನಗಳ ಒಡವೆಗಳಿಂದಲಂಕೃತಳಾಗಿ, ಅಸ್ತಿ-ಇರುವಳೆ ॥೨೯॥ ತಸ್ಯಾಃ-ಆ ಸೀತಾದೇವಿಗೆ, ತುಲ್ಯಾ-ಸಮಾನಳಾದ, ಸೀಮಂತಿನೀ-ಹೆಂಗಸು. ದೇವೀ-ದೇವತಾಸ್ತ್ರೀಯು, ನೈವ-ಅಲ್ಲ. ಗಂಧರ್ವೀ-ಗಂಧರ್ವಸ್ತ್ರೀಯು, ತುಲ್ಯಾ-ಸಮಾನಳು, ನ-ಅಲ್ಲ, ಅಪ್ಸರಾಃ-ಅಪ್ಸರಸ್ತ್ರೀಯು, ನ-ಅಲ್ಲ ದಾನವೀ-ರಾಕ್ಷಸಸ್ತ್ರೀಯು, ನ-ಅಲ್ಲ. ಮಾನುಷೀಷು-ಮನುಷ್ಯಸ್ತ್ರೀಯರುಗಳಲ್ಲಿ, ಕುತಃ-ಎಲ್ಲಿಂದ, ಭವೇತ್-ಇರುವದು ॥೩೦॥ ತ್ವಂ-ನೀನು, ಮಹಾವನೇ-ಮಹದರಣ್ಯದಲ್ಲಿ, ಪ್ರಮಥ್ಯ-ಬಲಾತ್ಕಾರವಾಗಿ, ತಸ್ಯ-ಆ ಶ್ರೀರಾಮನ, ಭಾರ್ಯಾಂ-ಹೆಂಡತಿಯನ್ನು, ಅಪಹರ-ಅಪಹರಿಸಿಕೊಂಡುಬಾ, ಸೀತಯಾ-ಸೀತಾದೇವಿಯಿಂದ, ರಹಿತಃ-ವಿಯುಕ್ತನಾಗಿ, ಕಾಮೀ-ಕಾಮುಕನಾದ, ರಾಮಃ-ಶ್ರೀರಾಮನು, ಜೀವಿತಂ-ಪ್ರಾಣವನ್ನು ಹಾಸ್ಯತಿ-ಬಿಡುವನು ॥೩೧॥ ರಾಕ್ಷಸಾಧಿಪಃ-ರಕ್ಕಸಾಧಿಪತಿಯಾದ, ರಾವಣಃ-ರಾವಣಾಸುರನು. ತದ್ವಾಕ್ಯಂ-ಆ ಅಕಂಪನನ ವಚನವನ್ನು, ಅರೋಚಯತ-ಸಮ್ಮತಿಸಿದನು, ಮಹಾಬಾಹುಃ-ಮಹಾಭುಜಪರಾಕ್ರಮಶಾಲಿಯಾದ ರಾವಣನು ಚಿಂತಯಿತ್ವಾ-ಆಲೋಚಿಸಿ, ಅಕಂಪನಂ-ಅಕಂಪನನ್ನು ಕುರಿತು, ಉವಾಚಹ-ಹೇಳಿದನಷ್ಟೆ ॥೩೨॥ ಬಾಢಂ-ಅಂಗೀಕರಿಸಿದ್ದೇನೆ. ಕಾಲ್ಯಂ-ಪ್ರಾತಃಕಾ

ಳಿಯುಕ್ಕೆ ಕಾರಣನೆಂಬರ್ಥವು ಸೂಚಕವಾಯಿತು] ॥೨೫॥ ಮಹಾ ಯಶೋವಂತನಾದ ಮತ್ತು ಪುರುಷಶ್ರೇಷ್ಠನಾದ ಆ ಶ್ರೀರಾಮನು ಪರಾಕ್ರಮದಿಂದ ಲೋಕಗಳನ್ನು ಸಂಹರಿಸಿದರೂ, ಪುನಃ ಜನಗಳನ್ನೆಲ್ಲ ಸೃಷ್ಟಿಯಂಗೈಯ್ಯುವದಕ್ಕೂ ಕೂಡಾ ಆತನೇ ಸಮರ್ಥನಾದವನು [ಅಂದರೆ, ಆತನೇ ಸೃಷ್ಟಿಗೂಸಹ ಕಾರಣನೆಂಬರ್ಥವು ಧ್ವನಿಸುತ್ತದೆ] ॥೨೬॥ ಆದಕಾರಣ ಎಲೈ ರಾವಣನೇ! ಆ ಶ್ರೀರಾಮನು ರಣರಂಗದಲ್ಲಿ ದಶಕಂಠನಾದ ನಿನ್ನಿಂದ ಶತಕಂಠನಿಂದಲೂ ಸಹಸ್ರಕಂಠನಿಂದಲೂ, ಮತ್ತು ರಾಕ್ಷಸೋತ್ತಮರಾದ ನಮುಚಿ ಹಿರಣ್ಯಕಶಿಪು ಮೊದಲಾದವರಿಂದಲೂ ಸಹ, ಸ್ವರ್ಗವು ಪಾಪಿಗಳಾದವರಿಂದ ಯೆಂತು ಜಯಿಸಲಸಾಧ್ಯವೋ ಅಂತು ಜಯಿಸಲಶಕ್ಯನು ॥೨೭॥ ಆದಕಾರಣ ಆ ಶ್ರೀರಾಮನಂ ಜಯಿಸಲೂ ದೇವರಾಕ್ಷಸರಿಗೆ ಯಾರಿಗೂ ಕೂಡಾ ಅಸಾಧ್ಯವು, ಆದರೆ ಆತನ ವಧೆಗೆ ಒಂದು ಉಪಾಯವಿರುವದು, ಅದನ್ನು ತದೇಕಾಯತ್ತ ಚಿತ್ತದಿಂ ಕೇಳುವವನಾಗು ॥೨೮॥ ಯೇನೆಂದರೆ;—ಆತನ ಸತಿಯಾದ ಸೀತೆಯೆಂದು ಪ್ರಸಿದ್ಧಳಾದ ಅಂಗನಾಮಣಿಯು ಸಮೀಚೀನವಾದ ಮಧ್ಯಪ್ರದೇಶವುಳ್ಳವಳಾಗಿಯೂ, ಶ್ಯಾಮಲವರ್ಣವುಳ್ಳವಳಾಗಿಯೂ, (ಅಥವಾ ಯೌವನವತಿಯಾಗಿಯೂ) ಒಂದಕ್ಕೊಂದು ಸರಿಯಾಗಿರುವ ಅವಯವಗಳುಳ್ಳವಳಾಗಿಯೂ, ರತ್ನಗಳ ಒಡವೆಗಳಿಂದ ಅಲಂಕರಿಸಲ್ಪಟ್ಟವಳಾಗಿಯೂ ಇರುವಳು ॥೨೯॥ ಆ ಉತ್ತಮಸ್ತ್ರೀಗೆ ಸಮಾನಳಾದ ಹೆಂಗಸು ಗಂಧರ್ವರಲ್ಲಿಯೇ ಆಗಲೀ ಅಪ್ಸರಸ್ತ್ರೀಯರಲ್ಲಿಯೇ ಆಗಲಿ, ರಾಕ್ಷಸರಲ್ಲಿಯೇ ಆಗಲೀ, ಯಲ್ಲಿಯೂ ಇಲ್ಲ, ಹೀಗಿರುವಾಗ ಮನುಷ್ಯರಲ್ಲಿ ಯೆಂತಾದೀತು ॥೩೦॥ ಆದ್ದರಿಂದ ನೀನು ಆತನ ಸತಿಯನ್ನು ಅಪಹರಿಸುವವನಾಗು, ಬಳಿಕ ಆ ರಾಮನು ಆಕೆಯನ್ನಗಲಿ ಕಾಮೋದ್ರೇಕವುಳ್ಳವನಾಗಿ

ಕಸ್ಸಾರಥಿನಾಸಹ । ಆನಯಿಷ್ಯಾಮಿವೈದೇಹೀಮಿಮಾಂಹೃಷ್ಟೋಮಹಾಪುರೀಂ ॥೩೩॥ ಅಥೈವಮುಕ್ತ್ವಾ ಪ್ರಯಯೌ ಖರಯುಕ್ತೇನರಾವಣಃ । ರಥೇನಾದಿತ್ಯವರ್ಣೇನದಿಶಸ್ಸರ್ವಾಃಪ್ರಕಾಶಯನ್ ॥೩೪॥ ಸರಥೋರಾಕ್ಷಸೇಂದ್ರಸ್ಯನಕ್ಷತ್ರಪಥಗೋಮಹಾನ್ । ಸಂಚಾರ್ಯಮಾಣಶ್ಶುಶುಭೇಜಲದೇಚಂದ್ರಮಾಇವ ॥೩೫॥ ಸಮಾರೀಚಾಶ್ರಮಂಪ್ರಾಪ್ಯತಾಟಕೇಯಮುಪಾಗಮತ್ । ಮಾರೀಚೇನಾರ್ಚಿತೋರಾಜಾಭಕ್ಷ್ಯಭೋಜ್ಯೈರಮಾನುಷೈಃ ॥೩೬॥ ತಂಸ್ವಯಂಪೂಜಯಿತ್ವಾತುಆಸನೇನೋದಕೇನಚ । ಅರ್ಥೋಪಹಿತಯಾವಾಚಾಮಾರೀಚೋವಾಕ್ಯಮಬ್ರವೀತ್ ॥೩೭॥ ಕಚ್ಚಿತ್ಸುಕುಶಲಂರಾಜನ್ಲೋಕಾನಾಂರಾಕ್ಷಸೇಶ್ವರ । ಆಶಂಕೇನಾಥಜಾನೇತ್ವಂಯತಸ್ತೂರ್ಣಮಿಹಾಗತಃ ॥೩೮॥ ಏವಮುಕ್ತೋಮಹಾತೇಜಾಮಾರೀಚೇನಸರಾವಣಃ । ತತಃಪಶ್ಚಾದಿದಂವಾಕ್ಯಮಬ್ರವೀದ್ವಾಕ್ಯಕೋವಿದಃ ॥೩೯॥ ಆರಕ್ಷೋಮೇಹತಸ್ತಾತರಾಮೇಣಾಕ್ಲಿ

---

ಲದಲ್ಲಿ. ಏಕಃ-ಒಬ್ಬನೇ, ನಾರಥಿನಾಸಹ-ಸಾರಥಿಯೊಡಗೂಡ, ಗಮಿಷ್ಯಾಮಿ-ಹೋಗುವೆನು, ಹೃಷ್ಟಃ-ಸಂತುಷ್ಟನಾಗಿ, ವೈದೇಹೀಂ-ಸೀತಾದೇವಿಯನ್ನು, ಇಮಾಂಪುರೀಂ-ಈ ಲಂಕಾಪಟ್ಟಣವಂಕುರಿತು, ಆನಯಿಷ್ಯಾಮಿ-ತರುವೆನು ॥೩೩॥ ಅಥ-ಬಳಿಕ, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ರಾವಣಃ-ರಾವಣನು, ಖರಯುಕ್ತೇನ-ಹೇಸರಕತ್ತೆಗಳಿಂ ಕೂಡಿಕೊಂಡಿರುವ, ಆದಿತ್ಯವರ್ಣೇನ-ಸೂರ್ಯನ ಬಣ್ಣದಂತೆ ಬಣ್ಣವುಳ್ಳ, ರಥೇನ-ರಥದಿಂದ, ಸರ್ವಾಃ-ಸಮಸ್ತವಾದ, ದಿಶಃ-ದಿಕ್ಕುಗಳನ್ನು, ಪ್ರಕಾಶಯನ್-ಪ್ರಕಾಶಿಸುತ್ತಿರುವಂತೆ ಮಾಡುವವನಾಗಿ, ಪ್ರಯಯೌ-ಹೋದನು ॥೩೪॥ ರಾಕ್ಷಸೇಂದ್ರಸ್ಯ-ರಾವಣನ, ಮಹಾನ್-ದೊಡ್ಡದಾದ, ಸರಥಃ-ಆ ರಥವು, ನಕ್ಷತ್ರಪಥಗಃ-ಅಂತರಿಕ್ಷಮಾರ್ಗವನ್ನು ಹೊಂದಿರುವದಾಗಿ, ಸಂಚಾರ್ಯಮಾಣಃ-ನಡೆಸಲ್ಪಟ್ಟದ್ದಾಗಿ, ಜಲದೇ-ಮೇಘದಲ್ಲಿ. ಚಂದ್ರಮಾಇವ-ಚಂದ್ರನಂತೆ, ಶುಶುಭೇ-ಹೊಳೆಯುತ್ತಿತ್ತು ॥೩೫॥ ಸಃ-ಆ ರಾವಣನು, ಮಾರೀಚಾಶ್ರಮಂ-ಮಾರೀಚ-ಮಾರೀಚನ, ಆಶ್ರಮಂ-ಪರ್ಣಶಾಲೆಯನ್ನು ಕುರಿತು, ಪ್ರಾಪ್ಯ-ಬಂದು, ತಾಟಕೇಯಂ-ತಾಟಕಾಪುತ್ರನಾದ ಮಾರೀಚನಂಕುರಿತು. ಉಪಾಗಮತ್-ಬಂದನು, ಮಾರೀಚೇನ-ಮಾರೀಚನಿಂದ. ಅಮಾನುಷೈಃ-ಮನುಷ್ಯರಿಗೆ ದುರ್ಲಭವಾದ. ಭಕ್ಷ್ಯಭೋಜ್ಯೈಃ-ತಿನಸುಗಳಾದ ಪದಾರ್ಥಗಳಿಂದಲೂ ಭೋಜನಮಾಡತಕ್ಕ ಪದಾರ್ಥಗಳಿಂದಲೂ, ಅರ್ಚಿತಃ-ಪೂಜೆಮಾಡಲ್ಪಟ್ಟನು ॥೩೬॥ ಮಾರೀಚಃ-ಮಾರೀಚನು, ಸ್ವಯಂ-ತಾನು, ತಂ-ಆ ರಾವಣಾಸುರನನ್ನು ಆಸನೇನ-ಪೀಠದಿಂದಲೂ, ಉದಕೇನ-ಉದಕದಿಂದಲೂ, ಪೂಜಯಿತ್ವಾ-ಪೂಜೆಮಾಡಿ, ಅರ್ಥೋಪಹಿತಯಾ-ಅರ್ಥದಿಂ ಗಂಭೀರವಾದ, ವಾಚಾ-ಮಾತಿನಿಂದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೩೭॥ ಹೇರಾಜನ್-ಎಲೈ ಅರಸೇ, ಹೇರಾಕ್ಷಸೇಶ್ವರ-ಎಲೈ ರಾಕ್ಷಸರಾಜನೇ ಲೋಕಾನಾಂ-ರಕ್ಕಸಜನರಿಗೆ. ಸುಕುಶಲಂಕಚ್ಚಿತ್-ಕ್ಷೇಮವೇ ಏನು, ಅಥವಾ-ಹಾಗಲ್ಲದೇಹೋದರೆ, ಯತಃ-ಯಾವಕಾರಣದದೆಸೆಯಿಂದ, ತ್ವಂ-ನೀನು, ತೂರ್ಣಂ-ಜಾಗ್ರತೆಯಾಗಿ, ಇಹ-ಇಲ್ಲಿ. ಆಗತಃ-ಬಂದಿದ್ದೀಯೋ. ಅತಃ-ಈಕಾರಣದದೆಸೆಯಿಂದ, ಕುಶಲಂನೇತಿ-ಕುಶಲವಿಲ್ಲವೆಂದು, ಆಶಂಕೇ-ಊಹಿಸುತ್ತೇನೆ, ಅಥವಾ-ಹಾಗಲ್ಲಮಿರ್ದೊಡಂ. ತತ್-ಅದನ್ನು, ವಿಶಿಷ್ಯ-ವಿಶೇಷವಾಗಿ, ನಜಾನೇ-ತಿಳಿಯಲಾರೆ ॥೩೮॥ ಏವಂ-ಈಪರಿಯಾಗಿ, ಮಾರೀಚೇನ-ಮಾರೀಚನಿಂದ, ಉಕ್ತಃ-ಹೇಳಲ್ಪಟ್ಟ, ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ವಾಕ್ಯಕೋವಿದಃ-ಮಾತಿನಲ್ಲಿ ಬುದ್ಧಿವಂತನಾದ, ಸರಾವಣಃ-ಆ ರಾವಣಾಸುರನು, ತತಃಪಶ್ಚಾತ್-ಆಬಳಿಕ. ಇದಂವಾಕ್ಯಂ-ಈ ಮಾತನ್ನು. ಅಬ್ರವೀತ್-ನುಡಿದನು ॥೩೯॥ ಹೇತಾತ-ಎಲೈ ಅಪ್ಪನೇ, ಮೇ-

---

ಪ್ರಾಣಂಗಳಂ ಬಿಡುವೆನೆಂದು ನುಡಿದವನಾಗಲೂ, ಆಮಾತು ರಾವಣನಿಗೆ ರುಚಿಯಾಗಿ ತೋರಿ, ಮನಸಾ ಆಲೋಚನೆಯಂ ಗೈದು ಆ ರಾವಣಾಸುರನು ಆ ಅಕಂಪನನಂ ಕುರಿತು ನುಡಿವನದೆಂತೆನೆ,—॥೩೦॥ ಎಲೈ ಅಕಂಪನನೇ! ನೀನು ಪೇಳಿದ್ದು ಸರಿಯಾಗಿಧೆ, ಹಾಗೆಯೇಆಗಲಿ, ಪ್ರಾತಃಕಾಲದಲ್ಲಿ ನಾನೋರ್ವನೆ ತೇರನ್ನೇರಿ ಅಲ್ಲಿಗೆ ಸಾರಿ, ಜನಕನಂದಿನಿಯೆಂಬ ಆ ಅಂಗನಾಮಣಿಯನ್ನ ಪಹರಿಸಿಕೊಂಡು, ಪುರಿಗೆ ಬಂದವನಾಗಿ ಸಂತೋಷವಾಗಿರುವೆನೆಂದು ನುಡಿದು, ಖರಯುಕ್ತವಾದ ರಥದಲ್ಲಿ ಕುಳಿತು, ಸಮಸ್ತದಿಕ್ಕುಗಳಂ ಪ್ರಕಾಶೆಯಂ ಗೈಯುತ್ತಾ ತೆರಳಿದವನಾಗಲೂ, ಆ ರಾಕ್ಷಸೇಂದ್ರನಾದ ರಾವಣನ ಮಹಾರಥವು ಗಗನದಲ್ಲಿ ಪೋಗುತ್ತಾ ಮೇಘಮಂಡಲದಲ್ಲಿ ಚಂದಿರನಂತೆ ಹೊಳೆಯುತ್ತಿತ್ತು ॥೩೫॥ ಅನಂತರದಲ್ಲಿ ಆ ರಾವಣಾಸುರನು ತಾಟಕಾಪುತ್ರನಾದ ಮಾರೀಚಾಶ್ರಮವನ್ನೈದಿದವನಾಗಲೂ, ಆ ಮಾರೀಚನೂ ಸಹ ಅಮಾನುಷವಾದ ಭಕ್ಷ್ಯಭೋಜ್ಯಾದಿಗಳಂ ಕೊಟ್ಟು ಸತ್ಕರಿಸಿದ ಬಳಿಕ, ಆಸನಾದಿಗಳಿಂದ ಉಪಚಾರವಂ ಗೈದು, ನುಡಿವನದೆಂತೆನೆ,—॥೩೭॥ ಎಲೈ ಲಂಕೇಶ್ವರನಾದ ದಶಕಂಠನೇ! ರಾಕ್ಷಸರೆಲ್ಲರು ಕ್ಷೇಮವಾಗಿರುವರೇ ಯೇನು? ಅಥವಾ ಯೆಲ್ಲರು ಕ್ಷೇಮವಾದ್ದಲ್ಲಿ ಯಿಲ್ಲಿಗೆ ಇಷ್ಟು ತ್ವರೆಯಾಗಿ ಯಾಕೆ ಬಂದವನಾದೆ? ಯೇನೋ ಸಂಭವಿಸಿರಬಹುದೆಂದೆಣಿಸುತ್ತೇನೆಂದು ಮಾರೀಚನು ನುಡಿದವನಾಗಲೂ, ಮಹಾಪರಾಕ್ರಮಶಾಲಿಯಾದ ದಶಕಂಠನು ಆ ಮಾತಂಕೇಳಿ ನುಡಿವನು, ಯೇನೆಂದರೆ,—ಎಲೋ ಎಲೋ, ಅಪ್ಪ, ಮಾರೀಚನೇ! ದೇಶದಕೊನೆಯಲ್ಲಿರುವ ನನ್ನ ಉಕ್ಕುಟವು ಅಕ್ಲಿಷ್ಟಕಾರಿಯಾದ ಆ ಶ್ರೀರಾಮನಿಂದ ಪಾಳಾಯಿತು, ಅಲ್ಲಿದ್ದ ರಾಕ್ಷಸರೆಲ್ಲರು ಹೊಡೆಯಲ್ಪಟ್ಟರು, ಈಗೆ ಆತನ ಭಾರ್ಯಾಪಹಾರವಂ ಗೈಯ್ಯಲಿಚ್ಛಿಸುತ್ತೇನೆ, ಈ ಕಾರ್ಯ

ತಸ್ಯಾಮೇಕಾಂತರಕ್ಷಾರ್ಥಾಯ ... ಜನಸ್ಥಾನಮವಧ್ಯಂ ತತ್ಸರ್ವಂ ಯುಧಿ ನಿಪಾತಿತಂ । ತಸ್ಯಾಮೇಕಾರಸಾಚಿವ್ಯಂ ತಸ್ಯ ಭಾರ್ಯಾಪಹಾರಣೆ ಕ್ಲಿಷ್ಟಕರ್ಮಣಾ । ಜನಸ್ಥಾನಮವಧ್ಯಂ ತತ್ಸರ್ವಂ ಯುಧಿ ನಿಪಾತಿತಂ ... ವಾಕ್ಯಮಬ್ರವೀತ್ ।೪೧। ಆಖ್ಯಾತಾ ಕೇನ ಸೀತಾ ಸಾ ಮಿತ್ರರೂಪೇಣ ಶತ್ರುಣಾ ।
ರಣೆ ।೪೦।। ರಾಕ್ಷಸೇಂದ್ರವಚಃ ಶ್ರುತ್ವಾ ಮಾರೀಚೋ ವಾಕ್ಯಮಬ್ರವೀತ್ ।೪೧। ಆಖ್ಯಾತಾ ಕೇನ ಸೀತಾ ಸಾ ಮಿತ್ರ
ರೂಪೇಣ ಶತ್ರುಣಾ । ತ್ವಯಾ ರಾಕ್ಷಸಶಾರ್ದೂಲ ಕೋ ನ ನಂದತಿ ನಿಂದಿತಃ ॥ ಸೀತಾಮಿಹಾನಯಸ್ವೇತಿ ಕೋ ಬ್ರವೀತಿ ಬ್ರ
ವೀಹಿ ಮೇ ।೪೨। ರಕ್ಷೋಲೋಕಸ್ಯ ಸರ್ವಸ್ಯ ಕಃ ಶೃಂಗಂ ಛೇತ್ತುಮಿಚ್ಛತಿ ॥ ಪ್ರೋತ್ಸಾಹಯತಿ ಕಶ್ಚ ತ್ವಾಂ ಸ ಹಿ ಶತ್ರುರ
ಸಂಶಯಃ ॥೪೩॥ ಆಶೀವಿಷಮುಖಾದ್ದಂಷ್ಟ್ರಾಮುದ್ಧರ್ತುಂ ಚೇಚ್ಛತಿ ತ್ವಯಾ । ಕರ್ಮಣಾ ತೇನ ಕೇನಾಸಿ ಕಾಪಥಂ
ಪ್ರತಿಪಾದಿತಃ । ಸುಖಸುಪ್ತಸ್ಯ ತೇ ರಾಜನ್ ಪ್ರಹೃತಂ ಕೇನ ಮೂರ್ಧನಿ ।೪೫॥ ವಿಶುದ್ಧವಂಶಾಭಿಜನಾಗ್ರಹಸ್ತಸ್ತೇಜೋ
ಮದಸ್ಸಂಸ್ಥಿತದೋರ್ವಿಷಾಣಃ । ಉದೀಕ್ಷಿತುಂ ರಾವಣ ನೇಹ ಯುಕ್ತಸ್ಸ ಸಂಯುಗೇ ರಾಘವಗಂಧಹಸ್ತೀ ।೪೬। ಅಸೌ

---

ನನ್ನ, ಅರಕ್ಷಃ-ಸೇವಾರಕ್ಷಪಾಲಕಜನವು, ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದೆ ಕಾರ್ಯಕರ್ತನಾದ. ರಾಮೇಣ-ಶ್ರೀರಾಮನಿಂದ, ಹತಃ-ಹೊಡೆಯಲ್ಪಟ್ಟ ತತ್ಸರ್ವಂ-ಆ ಸಮಸ್ತವಾದ, ಜನಸ್ಥಾನಂ-ನಮ್ಮ ರಾಜ್ಯದ ಎಲ್ಲಾ ಕಟ್ಟುಭೂಮಿಯು, ಯುಧಿ-ಯುದ್ಧರಂಗದಲ್ಲಿ ನಿಪಾತಿತಂ-ಧ್ವಂಸವಾಗ ಲ್ಪಟ್ಟಿತು ॥೪೦॥ ತಸ್ಯಾಮೆ-ಅಂಥಾ ನನಗೆ, ತಸ್ಯ-ಆ ಶ್ರೀರಾಮನ. ಭಾರ್ಯಾಪಹಾರಣೆ-ಹೆಂಡತಿಯನ್ನು ಕದ್ದುಕೊಳ್ಳುವಿಕೆಯಲ್ಲಿ, ಸಾಚಿವ್ಯಂ-ಸಹಾಯಕರ್ತವ ನ್ನು, ಕುರು-ಮಾಡು ॥೪೦॥ ॥ ರಾಕ್ಷಸೇಂದ್ರವಚಃ-ರಾವಣಾಸುರನ ವಚನವನ್ನು, ಶ್ರುತ್ವಾ-ಕೇಳಿ. ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೪೧॥ ಸಾಸೀತಾ-ಆ ಸೀತಾದೇವಿಯು, ಆಹರ್ತವ್ಯೇತಿ-ಕದ್ದುಕೊಂಡು ಬರತಕ್ಕವಳೆಂದು ಮಿತ್ರರೂಪೇಣ-ಕೃತ್ರಿಮಸ್ನೇಹಿತನಾದ. ಶತ್ರುಣಾ-ಶತ್ರುವಾದ, ಕೇನ-ಯಾವ ಪುರುಷನಿಂದ, ಆಖ್ಯಾತಾ-ಹೇಳಲ್ಪಟ್ಟಳು, ಹೇರಾಕ್ಷಸಶಾರ್ದೂಲ-ಎಲೈ ರಾಕ್ಷಸಶ್ರೇಷ್ಠನೇ, ತ್ವಯಾ-ನಿನ್ನಿಂದ, ನಿಂದಿತಃ-ತಿರಸ್ಕರಿಸ ಲ್ಪಟ್ಟವನಾಗಿ, ತ್ವಾಂ-ನಿನ್ನನ್ನು. ದೃಷ್ಟ್ವಾ-ಕಂಡು, ಕಃ-ಯಾರು, ನನಂದತಿ-ಸಂತೋಷಗೊಂಡವನಾಗಲಿಲ್ಲ, ಸೀತಾಂ-ಸೀತಾದೇವಿಯನ್ನು, ಇಹ- ಇಲ್ಲಿ. ಆನಯಸ್ವೇತಿ-ತೆಗೆದುಕೊಂಡು ಬಾ ಎಂದು ಕಃ-ಯಾವೋನು, ಬ್ರವೀತಿ-ಹೇಳುತ್ತಾನೆ, ಮೇ-ನನಗೆ, ಬ್ರೂಹಿ-ಹೇಳು ॥೪೨॥ ಸರ್ವಸ್ಯ-ಸಮ ಸ್ತವಾದ ರಕ್ಷೋಲೋಕಸ್ಯ-ರಾಕ್ಷಸಜನದ. ಶೃಂಗಂ-ಐಶ್ವರ್ಯವನ್ನು. ಛೇತ್ತುಂ-ಭಂಗಗೊಳಿಸುವದಕ್ಕಾಗಿ. ಕಃ-ಯಾವೋನು, ಇಚ್ಛತಿ-ಅಪೇಕ್ಷಿಸು ತ್ತಾನೆಯೋ, ಕಃ-ಯಾವೋನು, ತ್ವಾಂ-ನಿನ್ನನ್ನು. ಪ್ರೋತ್ಸಾಹಯತಿ-ಸೀತಾಪಹಾರವಿಷಯದಲ್ಲಿ ಉದ್ಯುಕ್ತನನ್ನಾಗಿ ಮಾಡುತ್ತಾನೆಯೋ, ಸಹಿ-ಆ ಪುರುಷನೇ. ಶತ್ರುಃ-ಶತ್ರುವು, ನಸಂಶಯಃ-ಸಂಶಯವಿಲ್ಲ ॥೪೩॥ ಆಶೀವಿಷಮುಖಾತ್-ಸರ್ಪದಮುಖದದೆಸೆಯಿಂದ, ದಂಷ್ಟ್ರಾಂ-ಕೋರೇಹಲ್ಲಿನ ನ್ನು. ತ್ವಯಾ-ನಿನ್ನಿಂದ, ಉದ್ಧರ್ತುಂ-ಕೀಳಿಸುವದಕ್ಕಾಗಿ. ಇಚ್ಛತಿ-ಅಪೇಕ್ಷಿಸುತ್ತಾನೆ. ತೇನಕರ್ಮಣಾ-ಆ ವ್ಯಾಪಾರದಿಂದ, ಕೇನ-ಯಾವ ಪುರುಷನಿಂದ, ಕಾಪಥಂ-ದುರ್ಮಾರ್ಗವನ್ನು, ಪ್ರತಿಪಾದಿತಃ-ಹೊಂದಿಸಲ್ಪಟ್ಟವನು, ಅಸಿ-ಆದೆ ॥೪೪॥ ॥ ಹೇರಾಜನ್-ಎಲೈ ಅರಸೇ. ಸುಖಸುಪ್ತಸ್ಯ-ಸುಖವಾಗಿ ನಿ ದ್ದೆಗೊಂಡಿರುವ, ತೆ-ನಿನ್ನ, ಮೂರ್ಧನಿ-ಮಂಡೆಯಲ್ಲಿ, ಕೇನ-ಯಾವ ಪುರುಷನಿಂದ, ಪ್ರಹೃತಂ-ಹೊಡೆಯಲ್ಪಟ್ಟಿತು ॥೪೫॥ ವಿಶುದ್ಧವಂಶಾಭಿಜನಾಗ್ರ ಹಸ್ತಃ-ಸತ್ಕುಲಪ್ರಸೂತತ್ವವೆಂಬ ಸೊಂಡಿಲದತುದಿಯುಳ್ಳ, ತೇಜೋಮದಃ-ಅಂತಸ್ಸಾರವೆಂಬ ಮದವುಳ್ಳ, ಸಂಸ್ಥಿತದೋರ್ವಿಷಾಣಃ-ಸಂಸ್ಥಿತ-ಚ ನ್ನಾಗಿರುವ, ದೋರ್ವಿಷಾಣಾಃ-ಭುಜಗಳೆಂಬ ದಂತಗಳುಳ್ಳ. ರಾಘವಗಂಧಹಸ್ತೀ-ಆ ಶ್ರೀರಾಮನೆಂಬ ಗಂಧಪ್ರಧಾನವಾದ ಗಜವು, ಇಹ-ಇಲ್ಲಿ. ಸಂ ಯುಗೆ-ಕಾಳಗದಲ್ಲಿ, ಹೇರಾವಣ-ಎಲೋ ರಾವಣನೇ. ಉದೀಕ್ಷಿತುಂ-ನೋಡುವದಕ್ಕಾಗಿ, ನಯುಕ್ತಃ-ಯುಕ್ತವಲ್ಲ ॥೪೬॥ ರಣಾಂತಸ್ಥಿತಸಂಧಿವಾಲಃ- ರಣಾಗ್ರದಲ್ಲಿ ವಾಸವೆಂಬ ರೋಮಪುಂಜಸಹಿತವಾದ ಪುಚ್ಛವುಳ್ಳ, (ಯದ್ವಾ-ರಣಾಗ್ರದಲ್ಲಿ ಅವಸ್ಥಾನವೆಂಬಸಂಧಿವಾಲವುಳ್ಳ,) ವಿದಗ್ಧರಕ್ಷೋ

---

ಕ್ಕೆ ನೀನು ನನಗೆ ಸಹಾಯಂ ಗೈಯ್ಯುವವನಾಗೆಂದು ನುಡಿದವನಾಗಲು, ಆ ಮಾರೀಚನು, ಎಲೈ ರಾಕ್ಷಸಾಧಿ ಪತಿಯಾದ ರಾವಣನೇ! ಆ ಸೀತಾ ದೇವಿಯಂ ಅಪಹರಿಸುವವನಾಗೆಂದು ಮಿತ್ರರೂಪವಾಗಿ ಹಗೆಯನಾದವನುಯಾ ವಪುರುಷನು ನಿನಗೆ ಪೇಳಿದವನಾದನು?ಹಾಹಾ!!ನಿನ್ನೈಶ್ವರ್ಯಂ ಕಂಡು ಯಾವನುಸಹಿಸನೋಅವನುಈ ರೀತಿಯಾಗಿ ಹೇಳಿರುವನು, ಅವನಂ ದಂಡಿಸಬೇಕೆಂದು ಯೆಣಿಸುತ್ತೇನೆ,ಇದಂ ಪೇಳಿದವನಾರೋ, ಪೇಳುವವನಾಗು ।೪೨।। ಈ ರಾಕ್ಷಸರ ಸರ್ವೈಶ್ವರ್ಯವನ್ನು ನಾಶಪಡಿಸಬೇಕೆಂದು ಯಾವ ಪುರುಷನು ಇಚ್ಛೈಸುವವನಾಗಿ ನಿನ್ನನ್ನು ಪ್ರೋತ್ಸಾ ಹಗೊಳಿಸಿದನೋ ಅವನೆ ನಿನಗೆ ಶತ್ರುವು, ಈ ವಿಷಯದಲ್ಲಿ ಸಂದೇಹವಿಲ್ಲ ।೪೩।। ಸರ್ಪದ ಬಾಯಲ್ಲಿರುವ ಕೋ ರೆದಾಡನ್ನು ಕೀಳಿಸುವಂತೆ ಆ ಕೃತ್ಯವನ್ನು ನಿನ್ನ ಮುಖದಿಂದ ಮಾಡಿಸುವದಕ್ಕಾಗಿ ಯಾವನು ಉಪದೇಶಂ ಗೈದ ನೋ ಯೇನೋ, ನೀನೀದುರ್ಮಾರ್ಗವನ್ನೈದಿದವನಾದೆ ।೪೪।। ಎಲೈ ಅರಸೇ, ಸುಖವಾಗಿ ನಿದ್ದೆಯಂ ಗೈ ಯ್ಯುವ ನಿನ್ನ ಮಂಡೆಯಲ್ಲಿ ಯಾವಪುರುಷನಿಂದ ಹೊಡೆಯಲ್ಪಟ್ಟಿತು? ।೪೫।। ಎಲೈ ರಾವಣನೇ! ಸತ್ಕುಲಪ್ರಸೂ ತತ್ವವೆಂಬ ಸೊಂಡಿಲದ ತುದಿಯುಳ್ಳದ್ದಾಗಿಯೂ, ಅಂತಸ್ಸಾರವೆಂಬ ಮದವುಳ್ಳದ್ದಾಗಿಯೂ ಚೆನ್ನಾಗಿ ಬಲಿತಿರು ವ ಭುಜಗಳೆಂಬ ದಂತಗಳುಳ್ಳದ್ದಾಗಿಯೂ, ಇರುವ ಶ್ರೀರಾಮನೆಂಬ ಮದಗಜವು ಈ ಕಾಳಗದಲ್ಲಿ ನೋಡಲು ಯುಕ್ತವಲ್ಲ।೪೬।ಮತ್ತು ರಣಾಗ್ರದಲ್ಲಿ ನಿಲ್ಲುವಣವೆಂಬ ರೋಮಪುಂಜದಿಂದಯುಕ್ತವಾದ ಬಾಲವುಳ್ಳದ್ದಾಗಿಯೂ

ರಣಾಂತಸ್ಥಿತಿಸಂಘವಾಲೋವಿದಗ್ಧರಕ್ಷೋಮೃಗಹಾನೃಸಿಂಹಃ। ಸುಪ್ತಸ್ತ್ವಯಾಬೋಧಯಿತುಂನಯುಕ್ತಶ್ಶರಾಂಗಪೂರ್ಣೋನಿಶಿತಾಸಿದಂಷ್ಟ್ರಃ ।೪೭॥ ಚಾಪಾಪಹಾರೆಭುಜವೇಗಪಂಕೇಶರೋರ್ಮಿಮಾಲೇಸುಮಹಾಹವೌಘೇ । ನರಾಮಪಾತಾಳಮುಖೇತಿಘೋರೆಪ್ರಸ್ಕಂದಿತುಂರಾಕ್ಷಸರಾಜಯುಕ್ತಂ ॥೪೮॥ ಪ್ರಸೀದಲಂಕೇಶ್ವರರಾಕ್ಷಸೇಂದ್ರಲಂಕಾಂಪ್ರಸನ್ನೋಭವಸಾಧುಗಚ್ಛ । ತ್ವಂಸ್ವೇಷುದಾರೇಷುರಮಸ್ವನಿತ್ಯಂರಾಮಸ್ಸಭಾರ್ಯೋರಮತಾಂವನೇಷು ।೪೯॥ ಏವಮುಕ್ತೋದಶಗ್ರೀವೋಮಾರೀಚೇನಸರಾವಣಃ। ನ್ಯವರ್ತತಪುರೀಂಲಂಕಾಂವಿವೇಶಚಗೃಹೋತ್ತಮಂ।—* ಏಕತ್ರಿಂಶಸ್ಸರ್ಗಃ*—

ತತಶ್ಶೂರ್ಪನಖೀದೃಷ್ಟ್ವಾಸಹಸ್ರಾಣಿಚತುರ್ದಶ । ಹತಾನ್ಯೇಕೇನರಾಮೇಣರಕ್ಷಸಾಂಭೀಮಕರ್ಮಣಾಂ॥ ದೂಷಣಂಖರಂಚೈವಹತಂತ್ರಿಶಿರಸಾಸಹ । ದೃಷ್ಟ್ವಾಪುನರ್ಮಹಾನಾದಂನನಾದಜಲದೋಯಥಾ ।೧। ಸಾದೃ

ಮೃಗಹಾ-ವಿದಗ್ಧ-ಸಮರ್ಥರಾದ, ರಕ್ಷಃ-ರಾಕ್ಷಸರೆಂಬ, ಮೃಗಹಾ-ಚಿಗರಿಗಳನ್ನು ಹೊಡೆಯುತ್ತಿರುವ. ಶರಾಂಗಪೂರ್ಣಃ-ಬಾಣಗಳೆಂಬ ನಖಾದ್ಯವಯವಗಳಿಂದ ತುಂಬಿರುವ, ನಿಶಿತಾಸಿದಂಷ್ಟ್ರಃ-ತೀಕ್ಷ್ಣಗಳಾದ ಖಡ್ಗಗಳೆಂಬ ಕೋರೆಹಲ್ಲುಗಳುಳ್ಳ, ಸುಪ್ತಃ-ಮಲಗಿರುವ, ನೃಸಿಂಹಃ-ಮನುಷ್ಯಶ್ರೇಷ್ಠನಾದ ಶ್ರೀರಾಮನೆಂಬ ಪುರುಷಸಿಂಹನು, ತ್ವಯಾ-ನಿನ್ನಿಂದ, ಬೋಧಯಿತುಂ-ಎಚ್ಚರಿಕೆಯಂಗೊಳಿಸುವದಕ್ಕಾಗಿ, ನಯುಕ್ತಃ-ಯೋಗ್ಯವಲ್ಲ ॥೪೭॥ ಹೇರಾಕ್ಷಸರಾಜ-ಎಲೈ ರಾಕ್ಷಸಶ್ರೇಷ್ಠನೇ, ಚಾಪಾಪಹಾರೆ-ಧನುಸ್ಸೆಂಬ ನೇಗಲುಗಳುಳ್ಳ. ಭುಜವೇಗಪಂಕೇ-ಭುಜಪರಾಕ್ರಮವೆಂಬ ಕೇಸರುಳ್ಳ, ಶರೋರ್ಮಿಮಾಲೇ-ಬಾಣಗಳೆಂಬ ತೆರೆಗಳ ತಂಡಗಳುಳ್ಳ, ಸುಮಹಾಹವೌಘೇ-ದೊಡ್ಡಕಾಳಗಗಳೆಂಬ ಪ್ರವಾಹಗಳುಳ್ಳ, ಅತಿಘೋರೆ-ಅತಿಭಯಂಕರವಾದ. ರಾಮಪಾತಾಳಮುಖೇ-ಶ್ರೀರಾಮನೆಂಬ ಪಾತಾಳದ, ಮುಖೇ-ಮಧ್ಯದಲ್ಲಿ, ಪ್ರಸ್ಕಂದಿತುಂ-ಬೀಳುವದಕ್ಕಾಗಿ- ನಯುಕ್ತಂ-ಯುಕ್ತವಲ್ಲ ॥೪೮॥ ಹೇಲಂಕೇಶ್ವರ-ಎಲೋ ಲಂಕಾಪುರಕ್ಕೆ ಅಧಿಪತಿಯೇ. ಹೇರಾಕ್ಷಸೇಂದ್ರ-ಎಲೋರಾಕ್ಷಸಾಧಿಪತಿಯೇ, ಪ್ರಸೀದ-ಪ್ರಸನ್ನನಾಗು, ಪ್ರಸನ್ನಃ-ಕೋಪವಿಲ್ಲದವನು. ಭವ-ಆಗು, ಸಾಧು-ಚನ್ನಾಗಿ. ಲಂಕಾಂ-ಲಂಕಾಪುರವನ್ನುಕುರಿತು, ಗಚ್ಛ-ಹೋಗು. ತ್ವಂ-ನೀನು, ಸ್ವೇಷುದಾರೇಷು-ಸ್ವಕೀಯ ಹೆಂಡತಿಗಳಲ್ಲಿ. ನಿತ್ಯಂ-ಸರ್ವಕಾಲದಲ್ಲೂ, ರಮಸ್ವ-ವಿಹಾರಮಾಡು, ರಾಮಃ-ಶ್ರೀರಾಮನು, ಸಭಾರ್ಯಃ-ಹೆಂಡತಿಯಿಂದೊಡಗೂಡಿದವನಾಗಿ, ವನೇಷು-ಅರಣ್ಯಗಳಲ್ಲಿ, ರಮತಾಂ-ವಿಹರಿಸಲಿ ॥೪೯॥ ದಶಗ್ರೀವಃ-ಹತ್ತು ಕಂಠಗಳುಳ್ಳ, ಸರಾವಣಃ-ಆ ರಾವಣಾಸುರನು, ಮಾರೀಚೇನ-ಮಾರೀಚನಿಂದ. ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟವನಾಗಿ, ಲಂಕಾಂಪುರೀಂ-ಲಂಕಾಪುರವಂಕುರಿತು, ನ್ಯವರ್ತತ-ಹಿಂತಿರಿಗಿದನು, ಗೃಹೋತ್ತಮಂ-ಉತ್ತಮವಾದ ತನ್ನಮನೆಯನ್ನು, ವಿವೇಶಚ-ಹೊಕ್ಕನು ॥೫೦॥ —**** ಇತಿಶ್ರೀಮದಾರಣ್ಯಕಾಂಡೇ-ಏಕತ್ರಿಂಶಸ್ಸರ್ಗಃ ****—

ತತಃ-ಬಳಿಕ, ಶೂರ್ಪನಖೀ-ಶೂರ್ಪನಖಿಯು, ಏಕೇನರಾಮೇಣ-ಒಬ್ಬನಾದ ಶ್ರೀರಾಮನಿಂದ, ಭೀಮಕರ್ಮಣಾಂ-ಭಯಂಕರವಾದ ಕೃತ್ಯಗಳುಳ್ಳ, ರಕ್ಷಸಾಂ-ರಕ್ಕಸರ, ಚತುರ್ದಶಸಹಸ್ರಾಣಿ-ಹದಿನಾಲ್ಕು ಸಾವಿರಗಳನ್ನು. ಹತಾನಿ-ಹೊಡೆಯಲ್ಪಟ್ಟವುಗಳನ್ನಾಗಿ, ದೃಷ್ಟ್ವಾ-ಕಂಡು, ದೂಷಣಂಚ-ದೂಷಣವನ್ನು. ತ್ರಿಶಿರಸಾಸಹ-ತ್ರಿಶಿರಸ್ಕರನೊಡಗೂಡ, ಖರಂಚೈವ-ಖರಾಸುರನನ್ನು, ಹತಂ-ಹೊಡೆಯಲ್ಪಟ್ಟವನನ್ನಾಗಿ. ದೃಷ್ಟ್ವಾ-ಕಂಡು, ಜಲದೋಯಥಾ-ಮೇಘದಂತೆ, ಪುನಃ-ಮತ್ತು. ಮಹಾನಾದಂ-ದೊಡ್ಡಸ್ವರವಾಗಿ, ನನಾದ-ಧ್ವನಿಗೊಂಡಳು ॥೧॥ ಸಾ-ಆ ಶೂರ್ಪನಖೆಯು,

ಸಮರ್ಥರಾದ ರಾಕ್ಷಸರೆಂಬ ಚಿಗರಿಗಳನ್ನು ಹೊಡೆವದಾಗಿಯೂ, ಬಾಣಂಗಳೆಂಬ ನಖಾದಿ ಅವಯವಂಗಳಿಂದ ತುಂಬಿರುವದಾಗಿಯೂ, ತೀಕ್ಷ್ಣವಾದ ಖಡ್ಗಂಗಳೆಂಬ ಕೋರೆದಾಡೆಗಳುಳ್ಳದ್ದಾಗಿಯೂ, ಇರುವ ಪುರುಷಶ್ರೇಷ್ಠನಾದ ಶ್ರೀರಾಮನೆಂಬ ಸಿಂಹವು ನಿನ್ನಿಂದ ಎಚ್ಚರಗೊಳಿಸಲ್ಪಡುವದು ಯುಕ್ತವಲ್ಲ ।೪೭। ಎಲೈ ರಾವಣನೇ; ಕೋದಂಡವೆಂಬ ನೆಗಳುಗಳುಳ್ಳದ್ದಾಗಿಯೂ, ಭುಜಪರಾಕ್ರಮವೆಂಬ ಕೆಸರುಳ್ಳದ್ದಾಗಿಯೂ, ಬಾಣಂಗಳೆಂಬ ತೆರೆಗಳುಳ್ಳದ್ದಾಗಿಯೂ, ದೊಡ್ಡ ದೊಡ್ಡಕಾಳಗಂಗಳೆಂಬ ಪ್ರವಾಹಂಗಳುಳ್ಳದ್ದಾಗಿಯೂ, ಮಹಾ ಭಯಂಕರವಾಗಿಯೂ, ಇರುವ ಶ್ರೀರಾಮನೆಂಬ ಪಾತಾಳದ ಮುಖದಲ್ಲಿ ಬೀಳುವದು ನ್ಯಾಯವಲ್ಲ॥೪೮। ಲಂಕಾಧಿಪತಿಯಾದ ದಶಕಂಠನೇ, ಕೋಪವಂ ಗೈಯ್ಯಬ್ಯಾಡ, ನೀನು ಈ ಕಾರ್ಯವಂ ಬಿಟ್ಟು ಲಂಕಾಪುರಿಗೆ ಸಾರಿ ಸ್ವಕೀಯರಾದ ಹೆಂಡತಿಯರಲ್ಲಿ ರಮಿಸುತಿರುವವನಾಗು, ಆ ಶ್ರೀರಾಮನು ತನ್ನ ಪತ್ನಿಯಿಂದೊಡಗೂಡಿ ಸುಖವಾಗಿರಲೆಂದು, ಮಾರೀಚನಿಂದ ಹೇಳಲ್ಪಟ್ಟವನಾಗಿ, ಆ ರಾವಣಾಸುರನು ಲಂಕಾಪುರಿಗೆ ಸಾರಿ, ತನ್ನ ಮಂದಿರವಂ ಪ್ರವೇಶವಂಗೈದನು ।೫೦। —* ಅರಣ್ಯಕಾಂಡದಲ್ಲಿನ ೩೧ನೆಯಸರ್ಗಂ ಮುಗಿದುದು *—

ಅನಂತರದಲ್ಲಿ ಸೂರ್ಪನಖಿಯು ಶ್ರೀರಾಮನೋರ್ವನಿಂದಲೇ ಸಂಹರಿಸಲ್ಪಟ್ಟ ಆ ಹದಿನಾಲ್ಕು ಸಾವಿರ ರಾಕ್ಷಸರನ್ನೂ, ಖರದೂಷಣ ತ್ರಿಶಿರಸ್ಕರನ್ನೂ ಸಹ ಕಂಡು ಮೇಘದಂತೆ ಗರ್ಜನೆಯಂ ಗೈಯ್ದು, ಇತರರಿಂದ ಮಾಡಲಸಾಧ್ಯವಾದ ಆ ಶ್ರೀರಾಮನಿಂದ ಮಾಡಲ್ಪಟ್ಟ ಆ ಕೃತ್ಯವಂ ನೋಡಿ ಹೆದರಿದವಳಾಗಿ, ರಾವಣನಿಂದ ಪರಿಪಾಲಿಸಲ್ಪ

ಷ್ಟ್ವಾ ಕರ್ಮರಾಮಸ್ಯಕೃತಮನ್ಯೈಸ್ಸುದುಷ್ಕರಂ । ಜಗಾಮಪರಮೋದ್ವಿಗ್ನಾಲಂಕಾಂರಾವಣಪಾಲಿತಾಂ ॥೩॥ ಸಾದ ದರ್ಶವಿಮಾನಾಗ್ರೇರಾವಣಂದೀಪ್ತತೇಜಸಂ । ಉಪೋಪವಿಷ್ಟಂಸಚಿವೈರ್ಮರುದ್ಭಿರಿವವಾಸವಂ । ಆಸೀನಂಸೂರ್ಯಸಂ ಕಾಶೇಕಾಂಚನೇಪರಮಾಸನೇ । ರುಕ್ಮವೇದಿಗತಂಪ್ರಾಜ್ಯಂಜ್ವಲಂತಮಿವಪಾವಕಂ । ದೇವಗಂಧರ್ವಭೂತಾನಾಮೃಷೀ ಣಾಂಚಮಹಾತ್ಮನಾಂ । ಅಜೇಯಂಸಮರೇಶೂರಂವ್ಯಾತ್ತಾನನಮಿವಾಂತಕಂ ॥ ದೇವಾಸುರವಿಮರ್ದೇಷುವಜ್ರಾಶನಿಕೃ ತವ್ರಣಂ । ಐರಾವತವಿಷಾಣಾಗ್ರೈರುತ್ಕೃಷ್ಟಕಿಣವಕ್ಷಸಂ ॥ ವಿಂಶದ್ಭುಜಂದಶಗ್ರೀವಂದರ್ಶನೀಯಪರಿಚ್ಛದಂ । ವಿಶಾಲವಕ್ಷಸಂವೀರಂರಾಜಲಕ್ಷಣಶೋಭಿತಂ । ಸ್ನಿಗ್ಧವೈಡೂರ್ಯಸಂಕಾಶಂತಪ್ತಕಾಂಚನಕುಂಡಲಂ । ಸುಭುಜಂಶುಕ್ಲ ದಶನಂಮಹಾಸ್ಯಂಪರ್ವತೋಪಮಂ ॥ ವಿಷ್ಣುಚಕ್ರನಿಪಾತೈಶ್ಚಶತಶೋದೇವಸಂಯುಗೇ । ಅನ್ಯೈಶ್ಶಸ್ತ್ರಪ್ರಹಾರೈಶ್ಚ ಮಹಾಯುದ್ಧೇಷುತಾಡಿತಂ । ಆಹತಾಂಗಂಸಮಸ್ತೈಶ್ಚದೇವಪ್ರಹರಣೈಸ್ತಥಾ ॥ ಅಕ್ಷೋಭ್ಯಾಣಾಂಸಮುದ್ರಾಣಾಂ

---

ಅನ್ಯೈಃ-ಇತರ ಮನುಷ್ಯರಿಂದ. ಸುದುಷ್ಕರಂ-ಮಾಡಲಸಾಧ್ಯವಾದ, ರಾಮಸ್ಯ-ಶ್ರೀರಾಮನಿಂದ, ಕೃತಂ-ಮಾಡಲ್ಪಟ್ಟ, ಕರ್ಮ-ಖರಾದಿಗಳ ಸಂಹಾರವೆಂಬ ವ್ಯಾಪಾರವನ್ನು, ದೃಷ್ಟ್ವಾ-ಕಂಡು, ಪರಮೋದ್ವಿಗ್ನಾ-ಬಹಳ ಭಯಗೊಂಡವಳಾಗಿ, ರಾವಣಪಾಲಿತಾಂ-ರಾವಣಾಸುರನಿಂ ರಕ್ಷಿಸಲ್ಪಡು ತ್ತಿರುವ, ಲಂಕಾಂ-ಲಂಕಾಪಟ್ಟಣವನ್ನು ಕುರಿತು, ಜಗಾಮ-ತೆರಳಿದಳು ॥3॥ ಸಾ-ಆ ಶೂರ್ಪಣಖೆಯು, ವಿಮಾನಾಗ್ರೇ-ಉಪ್ಪರಿಗೆಯ ಅಗ್ರಭಾಗದಲ್ಲಿ, ( ಅಥವಾ-ವಿಮಾನಾಗ್ರೇ-ಪುಷ್ಪಕದ ಅಗ್ರಭಾಗದಲ್ಲಿ, ಸೂರ್ಯಸಂಕಾಶೇ-ಸೂರ್ಯನಿಗೆ ಸಮಾನವಾದ, ಕಾಂಚನೇ-ಸುವರ್ಣವಿಕಾರವಾದ ಪರಮಾಸನೇ- ಸಿಂಹಾಸನದಲ್ಲಿ. ಆಸೀನಂ-ಕುಳಿತುಕೊಂಡಿರುವ, ಮರುದ್ಭಿಃ-ದೇವತೆಗಳೊಡಗೂಡಿ. ವಾಸವಮಿವ-ದೇವೇಂದ್ರನಂತೆ, ಸಚಿವೈಃ-ಮಂತ್ರಿಗಳೊಡಗೂಡ, ಉಪೋಪವಿಷ್ಟಂ-ಕುಳಿತುಕೊಂಡಿರುವ, ದೀಪ್ತತೇಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, ರುಕ್ಮವೇದಿಗತಂ-ಭಂಗಾರದ ವೇದಿಕೆಯನ್ನು ಹೊಂದಿರುವ, ಪ್ರಾಜ್ಯಂ-ಪ್ರಚುರವಾದ, ಪಾವಕಮಿವ-ಅಗ್ನಿಯಂತೆ ( ಯದ್ವಾ-ಪ್ರಾಜ್ಯಂ-ಪ್ರಚುರವಾದ ಆಜ್ಯದಿಂ ವೃದ್ಧಿಗೊಳಿಸಲ್ಪಟ್ಟ. ಅಗ್ನಿಮಿವ-ಯಜ್ಞೇಶ್ವ ರನಂತೆ. ) ಜ್ವಲಂತಂ-ಪ್ರಜ್ವಲಿಸುತ್ತಿರುವ, ದೇವಗಂಧರ್ವಭೂತಾನಾಂ-ದೇವತೆಗಳಿಗೂ ಗಂಧರ್ವರಿಗೂ ಭೂತಗಳಿಗೂ, ಮಹಾತ್ಮನಾಂ-ಮಹಾಪ್ರಭಾವ ವಂತರಾದ. ಋಷೀಣಾಂಚ-ಋಷಿಗಳಿಗೂ. ಸಮರೇ-ಕಾಳಗದಲ್ಲಿ, ಅಜೇಯಂ-ಜಯಿಸಲಸಾಧ್ಯನಾದ, ಶೂರಂ-ಶೌರ್ಯವಂತನಾದ. ವ್ಯಾತ್ತಾನನಂ-ತೆರೆಯ ಲ್ಪಟ್ಟ ಮುಖವುಳ್ಳ, ಅಂತಕಮಿವ-ಯಮನಂತಿರುವ, ದೇವಾಸುರವಿಮರ್ದೇಷು-ದೇವರಾಕ್ಷಸರ ಕಾಳಗಗಳಲ್ಲಿ, ವಜ್ರಾಶನಿಕೃತವ್ರಣಾಃ-ವಜ್ರಾಯುಧದಿಂ ದಲೂ. ಸಿಡಿಲುಗಳಿಂದಲೂ ಮಾಡಲ್ಪಟ್ಟ ಗಾಯಗಳುಳ್ಳ, ಐರಾವತವಿಷಾಣಾಗ್ರೈಃ-ಐರಾವತವೆಂಬ ಆನೆಯ ದಂತಗಳ ಕೊನೆಗಳಿಂದ. ಉತ್ಕೃಷ್ಟ ಕಿಣವಕ್ಷಸಂ-ಘರ್ಷಣದಿಂಪುಟ್ಟಿದ ಕಾಯಿಗಟ್ಟೇ ವಕ್ಷಸ್ಥಲವುಳ್ಳ, ವಿಂಶದ್ಭುಜಂ-ಇಪ್ಪತ್ತು ಭುಜಗಳುಳ್ಳ, ದಶಗ್ರೀವಂ-ಹತ್ತು ಕಂಠಗಳುಳ್ಳ, ದರ್ಶನೀ ಯಪರಿಚ್ಛದಂ-ನೋಡತಕ್ಕ ಹೊದ್ದಿಕೆ ವಸ್ತ್ರವುಳ್ಳ. ವಿಶಾಲವಕ್ಷಸಂ-ವಿಸ್ತಾರವಾದ ವಕ್ಷಸ್ಥಲವುಳ್ಳ, ವೀರಂ-ಸಾಮರ್ಥ್ಯವಂತನಾದ, ರಾಜಲಕ್ಷ ಣಶೋಭಿತಂ-ರಾಜಚಿಹ್ನೆಗಳಿಂ ಹೊಳೆಯುತ್ತಿರುವ, ಸ್ನಿಗ್ಧವೈಡೂರ್ಯಸಂಕಾಶಂ-ಸ್ನಿಗ್ಧ-ಸಾಣೆಹಿಡಿಯಲ್ಪಟ್ಟ, ವೈಡೂರ್ಯ-ವೈಡೂರ್ಯಮಣಿಗೆ. ಸಂ ಕಾಶಂ-ಸಮಾನವಾದ, ತಪ್ತಕಾಂಚನಕುಂಡಲಂ-ಪುಟಪಾಕಶೋಭಿತವಾದ ಚಿನ್ನದ ಕುಂಡಲಗಳುಳ್ಳ, ಸುಭುಜಂ-ದೊಡ್ಡಭುಜಗಳುಳ್ಳ, ಶುಕ್ಲದಶನಂ- ಬೆಳ್ಳಗಿರುವ ದಂತಗಳುಳ್ಳ. ಮಹಾಸ್ಯಂ-ದೊಡ್ಡಮುಖಗಳುಳ್ಳ, ಪರ್ವತೋಪಮಂ-ಬೆಟ್ಟಕ್ಕೆ ಸಮಾನನಾದ, ದೇವಸಂಯುಗೇ-ದೇವತೆಗಳೊಡನೆ ಕಾ ಳಗದಲ್ಲಿ. ಶತಶಃ-ನೂರಾರಾವರ್ತಿಯು, ವಿಷ್ಣುಚಕ್ರನಿಪಾತೈಶ್ಚ-ಶ್ರೀಮಹಾವಿಷ್ಣುವಿನ ಚಕ್ರಪ್ರಹಾರಗಳಿಂದಲೂ, ಮಹಾಯುದ್ಧೇಷು-ದೊಡ್ಡ ಕಾಳ ಗದಲ್ಲಿ, ಅನ್ಯೈಃ-ಇತರರಾದ, ಶಸ್ತ್ರಪ್ರಹಾರೈಶ್ಚ-ಆಯುಧಗಳ ಪೆಟ್ಟುಗಳಿಂದ, ತಾಡಿತಂ-ಹೊಡೆಯಲ್ಪಟ್ಟ. ತಥಾ-ಹಾಗೆಯೇ. ಸಮಸ್ತೈಃ-ಸಮ

---

ಡುವ ಲಂಕಾ ಪುರಿಯನ್ನೈದಿ, ಪುಷ್ಪಕವಿಮಾನದಲ್ಲಿ ಸೂರ್ಯನಂತೆ ಕಂಗೊಳಿಸುವ ಸಿಂಹಾಸನದಲ್ಲಿ ಕುಳಿತಿರುವವನಾ ಗಿಯೂ, ದೇವತೆಗಳಿಂ ದೊಡಗೂಡಿದ ಇಂದ್ರನಂತೆ ಮಂತ್ರಿಗಳಿಂದ ಹೊಳೆವವನಾಗಿಯೂ, ಮತ್ತು ಭಂಗಾರವೇದಿ ಕೆಯಲ್ಲಿ ಬೆಳಗುವ ಅಗ್ನಿಯಂತೆ ಕಂಗೊಳಿಸುವವನಾಗಿಯೂ, ಬಹು ತಪಸ್ವಿಗಳಾದ ಪರಮರ್ಷಿಗಳಿಗೂ, ಸಹ ತಿರ ಸ್ಕರಿಸಲಸಾಧ್ಯನಾಗಿಯೂ, ಯಮನಂತೆ ಬಾಯಂ ತೆರೆದವನಾಗಿಯೂ, ರಣರಂಗದಲ್ಲಿ ವಜ್ರಾಯುಧಂಗಳಿಂದ ಲೂ ಸಿಡಿಲುಗಳಿಂದಲೂ, ಉಂಟಾದ ಗಾಯಗಳುಳ್ಳವನಾಗಿಯೂ, ಐರಾವತದ ದಂತಾಗ್ರಭಾಗಂಗಳ ಪೊರಿಯುವಿಕೆ ದರಿಂದುಂಟಾದ ಕಾಯಿಕಟ್ಟಿದ ವಕ್ಷಸ್ಥಲವುಳ್ಳವನಾಗಿಯೂ, ಇಪ್ಪತ್ತು ಭುಜಗಳುಳ್ಳವನಾಗಿಯೂ, ದಶಶಿರಸ್ಸುಗ ಳುಳ್ಳವನಾಗಿಯೂ, ಅಂದವಾಗಿರುವ ವಸ್ತ್ರವಂ ಧರಿಸಿದವನಾಗಿಯೂ, ವಿಸ್ತಾರವಾದ ವಕ್ಷಸ್ಥಲವುಳ್ಳವನಾಗಿಯೂ ರಾಜಚಿಹ್ನೆಗಳಿಂ ದೊಪ್ಪುವವನಾಗಿಯೂ, ಸಾಣೆಹಿಡಿಯಲ್ಪಟ್ಟ ವೈಡೂರ್ಯ ಮಣಿಗಳಂತೆ ಬೆಳಗುವವನಾಗಿಯೂ, ಅಪ ರಂಜೀ ವಿಕಾರವಾದ ಕರ್ಣಕುಂಡಲಂಗಳುಳ್ಳವನಾಗಿಯೂ, ದೊಡ್ಡ ದೊಡ್ಡ ಭುಜಗಳುಳ್ಳವನಾಗಿಯೂ, ಶುಭ್ರವಾದ ದಂತಂಗಳುಳ್ಳವನಾಗಿಯೂ, ಮಹತ್ತರವಾದ ಮುಖವುಳ್ಳವನಾಗಿಯೂ, ಪರ್ವತಾಕಾರದಂತೆ ಬೃಹತ್ತಾಗಿರುವ ಆ ಕಾರವುಳ್ಳವನಾಗಿಯೂ, ದೇವರಾಕ್ಷಸರ ರಣರಂಗದಲ್ಲಿ ವಿಷ್ಣುಚಕ್ರದ ಕ್ಷತಿಯಿಂದ ಇತರವಾದ ಶಸ್ತ್ರಾಸ್ತ್ರಂಗಳ

ಕ್ಷೋಭಣಂಕ್ಷಿಪ್ರಕಾರಿಣಂ । ಕ್ಷೇಪ್ತಾರಂಪರ್ವತೇಂದ್ರಾಣಾಂಸುರಾಣಾಂಚಪ್ರಮರ್ದನಂ । ಉಚ್ಛೇತ್ತಾರಂಚಧರ್ಮಾಣಾಂ ಪರದಾರಾಭಿಮರ್ಶನಂ । ಸರ್ವದಿವ್ಯಾಸ್ತ್ರಯೋಕ್ತಾರಂಯಜ್ಞವಿಘ್ನಕರಂಸದಾ । ಪುರೀಂಭೋಗವತೀಂಪ್ರಾಪ್ಯಪರಾಜಿತ್ಯಚವಾಸುಕಿಂ । ತಕ್ಷಕಸ್ಯಪ್ರಿಯಾಂಭಾರ್ಯಾಂಪರಾಜಿತ್ಯಜಹಾರಯಃ । ಕೈಲಾಸಂಪರ್ವತಂಗತ್ವಾವಿಜಿತ್ಯನರವಾಹನಂ । ವಿಮಾನಂಪುಷ್ಪಕಂತಸ್ಯಕಾಮಗಂವೈಜಹಾರಯಃ । ವನಂಚೈತ್ರರಥಂದಿವ್ಯಂನಳಿನೀಂನಂದನಂವನಂ । ವಿನಾಶಯತಿಯಃಕ್ರೋಧಾದ್ದೇವೋದ್ಯಾನಾನಿವೀರ್ಯವಾನ್ । ಚಂದ್ರಸೂರ್ಯೌಮಹಾಭಾಗಾವುತ್ತಿಷ್ಠಂತೌಪರಂತಪೌ । ನಿವಾರಯತಿಬಾಹುಭ್ಯಾಂಯಶ್ಶೈಲಶಿಖರೋಪಮಃ । ದಶವರ್ಷಸಹಸ್ರಾಣಿತಪಸ್ತಪ್ತ್ವಾಮಹಾವನೇ । ಪುರಾಸ್ವಯಂಭುವೇಧೀರಶ್ಶಿರಾಂಸ್ಯುಪಜಹಾರಯಃ । ದೇವದಾನವಗಂಧರ್ವಪಿಶಾಚಪತಗೋರಗೈಃ । ಅಭಯಂಯಸ್ಯಸಂಗ್ರಾಮೇಮೃತ್ಯುತೋಮಾನುಷಾದೃತೇ । ಮಂತ್ರೈರಭಿಷ್ಟುತಂಪುಣ್ಯಮಧ್ವರೇಷುದ್ವಿಜಾತಿಭಿಃ । ಹವಿರ್ಧಾನೇಷುಯಸ್ಸೋ

---

ಸ್ತ್ರಗಳಾದ, ದೇವಪ್ರಹರಣೈಃ-ದೇವತೆಗಳ ಆಯುಧಗಳಿಂದ, ಆಹತಾಂಗಂ-ಹೊಡೆಯಲ್ಪಟ್ಟ ಅಂಗಗಳುಳ್ಳ, ಅಕ್ಷೋಭ್ಯಾಣಾಂ-ಕ್ಷೋಭಿಸಲಸಾಧ್ಯಂಗಳಾದ, ಸಮುದ್ರಾಣಾಂ-ಸಮುದ್ರಗಳಿಗೆ, ಕ್ಷೋಭಣಂ-ಶೋಷಣವಂ ಮಾಡುತ್ತಿರುವ, ಕ್ಷಿಪ್ರಕಾರಿಣಂ-ಶೀಘ್ರವಾಗಿ ಕಾರ್ಯವಂಮಾಡುತ್ತಿರುವ, ಪರ್ವತೇಂದ್ರಾಣಾಂ-ಪರ್ವತಶ್ರೇಷ್ಠಗಳಿಗೆ, ಕ್ಷೇಪ್ತಾರಂ-ಎತ್ತಿ ಹಾಕುವದಕ್ಕೆ ಕರ್ತನಾದ, ಸುರಾಣಾಂಚ-ದೇವತೆಗಳಿಗೆ, ಪ್ರಮರ್ದನಂ-ಪ್ರಹಾರಕನಾದ, ಧರ್ಮಾಣಾಂ-ಧರ್ಮಗಳನ್ನು, ಉಚ್ಛೇತ್ತಾರಂ-ಭಂಗಗೊಳಿಸುತ್ತಿರುವ. ಪರದಾರಾಭಿಮರ್ಶನಂ-ಪರಸ್ತ್ರೀಗಮನ ಮಾಡುತ್ತಿರುವ, ಸರ್ವದಿವ್ಯಾಸ್ತ್ರಯೋಕ್ತಾರಂ-ಸಮಸ್ತವಾದ ದೇವತಾಸ್ತ್ರಗಳನ್ನು ಪ್ರಯೋಗಮಾಡುತ್ತಿರುವ. ಸದಾ-ಸರ್ವಕಾಲದಲ್ಲಿಯೂ. ಯಜ್ಞವಿಘ್ನಕರಂ-ಯಜ್ಞಗಳಿಗೆ ವಿಘ್ನವಂ ಮಾಡುತ್ತಿರುವ, ಭೋಗವತೀಂಪುರೀಂ-ಭಗವತೀಪುರವನ್ನು ಪ್ರಾಪ್ಯ-ಹೊಂದಿ, ವಾಸುಕಿಂಚ-ಆದಿಶೇಷನನ್ನು, ಪರಾಜಿತ್ಯ-ಜಯಿಸಿದಂಥ, ರಾವಣಂ ರಾವಣಾಸುರನನ್ನು. ದದರ್ಶ-ಕಂಡಳು ॥ ಯಃ-ಯಾವ ರಾವಣಾಸುರನು, ತಕ್ಷಕಸ್ಯ-ತಕ್ಷಕನ-ಪ್ರಿಯಾಂ-ಇಷ್ಟಳಾದ, ಭಾರ್ಯಾಂ-ಹೆಂಡತಿಯನ್ನು, ಪರಾಜಿತ್ಯ-ಪರಾಜಯಮಾಡಿ, ಜಹಾರ-ತೆಗೆದುಕೊಂಡು ಬಂದನೋ, ಯಃ-ಯಾವಪುರುಷನು, ಕೈಲಾಸಪರ್ವತಂ-ಕೈಲಾಸವೆಂಬ ಬೆಟ್ಟವಂಕುರಿತು, ಗತ್ವಾ-ಹೋಗಿ, ನರವಾಹನಂ-ಕುಬೇರನನ್ನು, ವಿಜಿತ್ಯ-ಜಯಿಸಿ, ತಸ್ಯ-ಆ ಕುಬೇರನ, ಕಾಮಗಂ-ಕಾಮಯಾನವಾದ, ಪುಷ್ಪಕಂ-ಪುಷ್ಪಕವೆಂಬ, ವಿಮಾನಂ-ವಿಮಾನವನ್ನು, ಜಹಾರ-ಅಪಹರಿಸಿಕೊಂಡು ಬಂದನೋ, ಚೈತ್ರರಥಂ-ಚೈತ್ರರಥವೆಂಬ ದಿವ್ಯಂ-ದೇವತಾಸಂಬಂಧವಾದ, ವನಂ-ವನವನ್ನು ನಳಿನೀಂ-ಪುಷ್ಕರಿಣೀಯನ್ನು, ನಂದನಂವನಂ-ದೇವೇಂದ್ರನ ಉದ್ಯಾನವನವನ್ನು, ಯಃ-ಯಾವಪುರುಷನು, ವಿನಾಶಯತಿ-ನಾಶಗೊಳಿಸುತ್ತಾನೋ ಯಃ-ಯಾವಪುರುಷನು. ವೀರ್ಯವಾನ್-ಪರಾಕ್ರಮಶಾಲಿಯಾದವನಾಗಿ, ಕ್ರೋಧಾತ್-ಕೋಪದದೆಶೆಯಿಂದ, ದೇವೋದ್ಯಾನಾನಿ-ದೇವತಾ ವನಗಳನ್ನು ವಿನಾಶಯತಿ-ನಾಶಗೊಳಿಸುತ್ತಾನೆಯೋ. ಶೈಲಶಿಖರೋಪಮಃ-ಬೆಟ್ಟದಶಿಖರಕ್ಕೆ ಸಮಾನವಾದ, ಯಃ-ಯಾವ ರಾವಣನು, ಉತ್ತಿಷ್ಠಂತೌ-ಉದಯವಾಗುತ್ತಿರುವ, ಮಹಾಭಾಗೌ-ಮಹಾಪುಣ್ಯಶಾಲಿಗಳಾದ, ಪರಂತಪೌ-ಶತ್ರುಸಂಹಾರಕರಾದ, ಚಂದ್ರಸೂರ್ಯೌ-ಚಂದ್ರಸೂರ್ಯರನ್ನು. ಬಾಹುಭ್ಯಾಂ-ಭುಜಗಳಿಂದ, ನಿವಾರಯತಿ-ತಡೆಮಾಡುತ್ತಾನೆಯೋ, ಯಃ-ಯಾವ ರಾವಣನು, ಧೀರಃ-ಧೈರ್ಯವಂತನಾಗಿ, ಮಹಾವನೇ-ದೊಡ್ಡ ಅರಣ್ಯದಲ್ಲಿ, ಪುರಾ-ಆದಿಭಾಗದಲ್ಲಿ, ದಶವರ್ಷಸಹಸ್ರಾಣಿ-ಹತ್ತುಸಹಸ್ರ ವರುಷಗಳಲ್ಲಿ. ತಪಃ-ತಪಸ್ಸನ್ನು. ತಪ್ತ್ವಾ-ತಪಿಸಿ, ಸ್ವಯಂಭುವೇ-ಬ್ರಹ್ಮದೇವರಿಗಾಗಿ, ಶಿರಾಂಸಿ-ಮಂಡೆಗಳನ್ನು, ಉಪಜಹಾರ-ಕಾಣಿಕೆಗಳನ್ನಾಗಿ ಕೊಡದು ಸಮರ್ಪಿಸಿದನೋ, ಯಸ್ಯ-ಯಾವ ರಾವಣನಿಗೆ, ಸಂಗ್ರಾಮೇ-ಕಾಳಗದಲ್ಲಿ. ಮಾನುಷಾದೃತೇ-ಮನುಷ್ಯನನ್ನು ಬಿಟ್ಟು. ದೇವದಾನವಗಂಧರ್ವಪಿಶಾಚಪತಗೋರಗೈಃ-ದೇವತೆಗಳಿಂದಲೂ ದಾನವರಿಂದಲೂ ಗಂಧರ್ವರಿಂದಲೂ ಪಿಶಾಚಗಳಿಂದಲೂ ಪಕ್ಷಿಗಳಿಂದಲೂ ಸರ್ಪಗಳಿಂದಲೂ, ಮೃತ್ಯುತಃ-ಮರಣದದೆಶೆಯಿಂದ, ಅಭಯಂ-ಭಯವಿಲ್ಲವೋ. ಮಹಾಬಲಃ- ಮಹಾಸಾಮರ್ಥ್ಯವಂತನಾದ, ಯಃ-ಯಾವರಾವಣನು, ಅಧ್ವರೇಷು-ಯಾಗಗಳಲ್ಲಿ, ದ್ವಿಜಾತಿಭಿಃ-ಬ್ರಾಹ್ಮಣರಿಂದ, ಮಂತ್ರೈಃ-ಗ್ರಾವಸ್ತೋತ್ರಾದ್ಯನುವಾಕ್ಯಗಳಿಂದ, ಅಭಿಷ್ಟು

---

ಪಾತದಿಂದಲೂ, ದೇವತೆಗಳ ಆಯುಧಪ್ರಹಾರಂಗಳಿಂದಲೂ ಸಹ ಉಂಟಾದ ವ್ರಣಂಗಳುಳ್ಳ ಶರೀರವುಳ್ಳವನಾಗಿಯೂ ಸಮುದ್ರಗಳಿಗೂ ಸಹ ಶೋಷಣವನ್ನುಂಟುಮಾಡುವವನಾಗಿಯೂ, ಪರ್ವತೋತ್ತಮಗಳನ್ನೂ ಕೂಡಾ ಯೆತ್ತಿ ಬಿಸುಟುವವನಾಗಿಯೂ, ಧರ್ಮಭಂಗವಂ ಗೈಯ್ಯುವವನಾಗಿಯೂ, ಪರಸ್ತ್ರೀಸಂಗವಂ ಮಾಡುವವನಾಗಿಯೂ, ಸಮಸ್ತವಾದ ದಿವ್ಯಾಸ್ತ್ರಂಗಳಂ ಪ್ರಯೋಗಿಸುವವನಾಗಿಯೂ, ಯಾವಾಗಲೂ ಯಾಗಂಗಳಿಗೆ ವಿಘ್ನಂಗಳಂ ಮಾಡುವವನಾಗಿಯೂ, ಮತ್ತು ಭೋಗವತೀಪುರಿಗೆ ಸಾರಿ ವಾಸುಕಿಯನ್ನೂ ಆದಿಶೇಷನನ್ನೂ ಸಹ ಜಯಿಸಿದವನಾಗಿಯೂ ಇರುವ ರಾವಣನಂ ಕಂಡಳದೆಂತೆನೆ,--ಯಾವ ರಾವಣಾಸುರನು ತಕ್ಷಕನ ಪುರಿಯನ್ನೈದಿ ಅವನಂ ಪರಾಜಯವನ್ನೈದಿಸಿ, ಆತನ ಸತಿಯನ್ನಪಹರಿಸಿದನೋ, ಮತ್ತೂ ಕೈಲಾಸಪರ್ವತಕ್ಕೆ ತೆರಳಿ, ಕುಬೇರನಂ ಸೋಲಿಸಿ ಪುಷ್ಪಕವಿಮಾನವನ್ನಪಹರಿಸಿದನೋ, ಇದಲ್ಲವೆ ಚೈತ್ರರಥವೆಂಬ ದೇವತೆಗಳ ಉದ್ಯಾನವನ್ನೂ ಪುಷ್ಕರಿಣಿಯನ್ನೂ, ನಂದನವನ್ನೂ ಸಹ ನಾಶವನ್ನೈದಿಸಿದನೋ, ಮತ್ತು ಉದಯಿಸುವ ಚಂದ್ರಸೂರ್ಯರಂ ತನ್ನ ಭು

ಮಮುಪಶಂತಿಮಹಾಬಲಃ । ಆಪ್ತಯಜ್ಞಹರಂಕ್ರೂರಂಬ್ರಹ್ಮಘ್ನಂದುಷ್ಟಚಾರಿಣಂ ॥ ಕರ್ಕಶಂನಿರನುಕ್ರೋಶಂ ಪ್ರಜಾನಾಮಹಿತೇರತಂ । ರಾವಣಂಸರ್ವಭೂತಾನಾಂಸರ್ವಲೋಕಭಯಾವಹಂ ॥ ರಾಕ್ಷಸೀಭ್ರಾತರಂಕ್ರೂರಂಸಾದದ ರ್ಶಮಹಾಬಲಂ ।೧೧। ತಂದಿವ್ಯವಸ್ತ್ರಾಭರಣಂದಿವ್ಯಮಾಲ್ಯೋಪಶೋಭಿತಂ । ಆಸನೇಸೂಪವಿಷ್ಟಂಚಕಾಲಕಾಲ ಮಿವೋದ್ಯತಂ । ರಾಕ್ಷಸೇಂದ್ರಂಮಹಾಭಾಗಂಪೌಲಸ್ತ್ಯಕುಲನಂದನಂ । ರಾವಣಂಶತ್ರುಹಂತಾರಂಮಂತ್ರಿಭಿಃಪರಿ ವಾರಿತಂ । ಅಭಿಗಮ್ಯಾಬ್ರವೀದ್ವಾಕ್ಯಂರಾಕ್ಷಸೀಭಯವಿಹ್ವಲಾ ।೧೪॥ ತಮಬ್ರವೀದ್ದೀಪ್ತವಿಶಾಲಲೋಚನಂಪ್ರದ ರ್ಶಯಿತ್ವಾಭಯಮೋಹಮೂರ್ಛಿತಾ । ಸುದಾರುಣಂವಾಕ್ಯಮಭೀತಚಾರಿಣೀಮಹಾತ್ಮನಾಶೂರ್ಪನಖಾವಿರೂಪಿ ತಾ ।೧೫।

—*** ಇತಿಶ್ರೀಮದಾರಣ್ಯಕಾಂಡೆ-ದ್ವಾತ್ರಿಂಶಸ್ಸರ್ಗಃ. ***—

---

ಶಂ-ಅಭಿಮಂತ್ರಿತವಾದ, ಪುಣ್ಯಂ-ಪುಣ್ಯಕರವಾದ, ಹವಿರ್ಧಾನೇಷು-ಹವಿರ್ಗೇಹಗಳಲ್ಲಿ, ಸೋಮಂ-ಸೋಮಲತಾರಸವನ್ನು, ಉಪಹಂತಿ-ಹಾಳುಮಾ ಡುವನೋ, ಪ್ರಾಪ್ತಯಜ್ಞಹರಂ-ದಕ್ಷಿಣಾಕಾಲವನ್ನು ಹೊಂದಿದ ಯಜ್ಞಗಳನ್ನು ಧ್ವಂಸಮಾಡುತ್ತಿರುವ, ಕ್ರೂರಂ-ಕ್ರೂರನಾದ, ಬ್ರಹ್ಮಘ್ನಂ-ಬ್ರಾಹ್ಮಣ ದ್ರೋಹಿಯಾದ, ದುಷ್ಟಚಾರಿಣಂ-ದುರ್ವ್ಯಾಪಾರಿಯಾದ, ಕರ್ಕಶಂ-ಕಠಿನನಾದ, ನಿರನುಕ್ರೋಶಂ-ದಯಾಹೀನನಾದ, ಪ್ರಜಾನಾಂ-ಜನಗಳಿಗೆ, ಅಹಿ ತೇ-ಅನಿಷ್ಟದಲ್ಲಿ, ರತಂ-ಆಸಕ್ತನಾದ, ಸರ್ವಭೂತಾನಾಂ-ಸಮಸ್ತಭೂತಗಳಿಗೂ, ರಾವಣಂ-ರೋದನವನ್ನುಂಟುಮಾಡುತ್ತಿರುವ, ಸರ್ವಲೋಕಭಯಾ ವಹಂ-ಸರ್ವಲೋಕಗಳಿಗೂ ಭಯಂಕರನಾದ, ಭ್ರಾತರಂ-ಅಣ್ಣನಾದ, ಕ್ರೂರಂ-ಕ್ರೂರನಾದ, ಮಹಾಬಲಂ-ಮಹಾಸಾಮರ್ಥ್ಯವಂತನಾದ, ತಂ-ಆರಾ ವಣನನ್ನು, ಸಾರಾಕ್ಷಸೀ-ಆ ಶೂರ್ಪನಖೆಯು, ದದರ್ಶ-ಕಂಡಳು ॥೧೧॥ ದಿವ್ಯವಸ್ತ್ರಾಭರಣಂ-ಅಮೂಲ್ಯಗಳಾದ ವಸ್ತ್ರಗಳೂ ಒಡವೆಗಳೂ ಉಳ್ಳ, ದಿವ್ಯಮಾಲ್ಯೋಪಶೋಭಿತಂ-ದಿವ್ಯವಾದ ಮಂದಾರಾದಿ ಪುಷ್ಪಮಾಲಿಕೆಗಳಿಂದ ಅಲಂಕೃತನಾದ, ಆಸನೇ-ಸಿಂಹಾಸನದಲ್ಲಿ, ಸೂಪವಿಷ್ಟಂ-ಸುಖವಾ ಗಿ ಕುಳಿತುಕೊಂಡಿರುವ, ಉದ್ಯತಂ-ಮ್ಯಾಲಕ್ಕೆಯೆದ್ದಿರುವ, ಕಾಲಕಾಲಮಿವ-ಯಮನಿಗೂ ಯಮನಂತಿರುವ, ರಾಕ್ಷಸೇಂದ್ರಂ-ರಾಕ್ಷಸರಿಗೆ ಅಧಿಪತಿಯಾದ, ಮಹಾಭಾಗಂ-ಮಹಾಪುಣ್ಯಶಾಲಿಯಾದ, ಪೌಲಸ್ತ್ಯಕುಲನಂದನಂ-ಪುಲಸ್ತ್ಯಬ್ರಹ್ಮನವಂಶಕ್ಕೆ ಆನಂದಕರನಾದ, ಶತ್ರುಹಂತಾರಂ-ಶತ್ರುಸಂಹಾರಕನಾ ದ, ಮಂತ್ರಿಭಿಃ-ಮಂತ್ರಿಗಳಿಂದ, ಪರಿವಾರಿತಂ-ಸುತ್ತಿಕೊಳ್ಳಲ್ಪಟ್ಟ, ತಂರಾವಣಂ-ಆ ರಾವಣನಂಕುರಿತು, ಅಭಿಗಮ್ಯ-ಬಂದು, ರಾಕ್ಷಸೀ-ರಕ್ಕಸಿ ಯಾದ ಶೂರ್ಪನಖೆಯು. ಭಯವಿಹ್ವಲಾ-ಭಯದಿಂ ಘಾಬರಿಬಿದ್ದವಳಾಗಿ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದಳು ॥೧೪॥ ಮಹಾತ್ಮನಾ-ಮ ಹಾಪ್ರಭಾವವಂತನಾದ ಶ್ರೀರಾಮನಿಂದ, ವಿರೂಪಿತಾ-ಕುರೂಪಿಯಾಗಿ ಮಾಡಲ್ಪಟ್ಟ, ಅಭೀತಚಾರಿಣೀ-ಸಮಸ್ತಲೋಕಗಳಲ್ಲಿಯೂ ಭಯವಿಲ್ಲದೇ ಸಂಚರಿಸುವಳಾದ, ಶೂರ್ಪನಖಾ-ಶೂರ್ಪನಖೆಯು. ಭಯಮೋಹಮೂರ್ಛಿತಾ-ಭಯವೆಂಬ ಮೋಹದಿಂದಲೂ ಮೂರ್ಛೆಗೊಂಡವಳಾಗಿ, ದೀಪ್ತವಿಶಾ ಲಲೋಚನಂ-ಹೊಳೆಯುತ್ತಿರುವ ವಿಸ್ತಾರವಾದ ನೇತ್ರಗಳುಳ್ಳ, ತಂ-ಆ ರಾವಣನನ್ನು ಕುರಿತು, ವೈರೂಪ್ಯಂ-ತನ್ನ ವಿರೂಪವನ್ನು ಪ್ರದರ್ಶಯಿ ತ್ವಾ-ತೋರಿಸಿ, ಸುದಾರುಣಂ-ಬಹಳಕ್ರೂರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದಳು ॥೧೫॥ —** ದ್ವಾತ್ರಿಂಶಸ್ಸರ್ಗಃ **—

---

ಜಗಳಿಂದ ತಡೆಮಾಡುತ್ತಿರುವನೋ, ಹತ್ತುಸಾವಿರವರ್ಷಗಳು ತಪವಂ ಗೈದು ಬ್ರಹ್ಮಪ್ರೀತಿಗಾಗಿ ತನ್ನ ಶಿರಂಗಳಂ ಛೇದಿಸಿದವನಾದನೋ, ಇದಲ್ಲದೆ ಮನುಷ್ಯರೆ ಹೊರತು ದೇವದಾನವ, ರಾಕ್ಷಸ, ಯಕ್ಷ, ಪಕ್ಷಿ. ಸರ್ಪ, " ಎಂಬಿ ವುಗಳಿಂದ ಅಭಯವನ್ನೈದಿದವನಾದನೋ, ಯಾಗಂಗಳಲ್ಲಿ ಬ್ರಾಹ್ಮಣರಿಂದ ಮಂತ್ರಂಗಳಿಂದ ಸ್ತೋತ್ರವಂ ಗೈಯ್ಯ ಲ್ಪಡುವವನಾದನೋ, ಮತ್ತು ದಕ್ಷಿಣಾಕಾಲದಲ್ಲಿಯಜ್ಞಧ್ವಂಸೆಯಂ ಮಾಡುವವನಾಗಿಯೂ, ಬ್ರಾಹ್ಮಣಕಂಟಕನಾ ಗಿಯೂ, ದುರ್ವ್ಯಾಪಾರಿಯಾಗಿಯೂ, ದಯಾಹೀನನಾಗಿಯೂ, ಸರ್ವಪ್ರಾಣಿಗಳು ರೋದಿಸುವಂತೆ ಗೈಯ್ಯುವವ ನಾಗಿಯೂ, ಸಮಸ್ತವಾದ ಲೋಕಂಗಳಿಗುಂ ಭೀತಿಯಂ ಮಾಡುವವನಾಗಿಯೂ, ಮಹಾ ಸಾಮರ್ಥ್ಯವಂತನಾಗಿ ಯೂ ಇರುವ ಲೋಕಕಂಟಕನಾದ ದಶಕಂಠನಂ ಕಂಡಳು ।೧೧। ಅನಂತರದಲ್ಲಿ ಶೂರ್ಪನಖಿಯುಅಮೂಲ್ಯವಾದ ವಸ್ತ್ರಂಗಳನ್ನೂ ಒಡವೆಗಳನ್ನೂ ಸಹ ಧರಿಸಿದವನಾಗಿಯೂ, ದಿವ್ಯವಾದ ಉಪಭೋಗಂಗಳುಳ್ಳವನಾಗಿಯೂ, ಸಿಂಹಾಸನದಲ್ಲಿ ಕುಳಿತವನಾಗಿಯೂ, ಯೆದ್ದೇಳುವ ಯಮನಂತೆ ಬಹು ಭಯಂಕರನಾಗಿಯೂ, ಪೌಲಸ್ತ್ಯಕು ಲದಲ್ಲಿ ಪುಟ್ಟಿದವನಾಗಿಯೂ, ಶತ್ರುಸಂಹಾರಕನಾಗಿಯೂ, ಮಂತ್ರಿಪರಿವೃತನಾಗಿಯೂ, ಇರುವ ಆ ರಾವಣಾಸು ರನ ಸಮೀಪಕ್ಕೆ ಬಂದು, ಭೀತಿಯಿಂದ ಗಾಬರಿಬಿದ್ದವಳಾಗಿ, ಮಹಾತ್ಮನಾದ ಶ್ರೀರಾಮನಿಂದುಂಟಾದ ವೈರೂ ಪ್ಯವುಳ್ಳವಳಾದ ಸಮಸ್ತಲೋಕಂಗಳಲ್ಲಿಯೂ ಭೀತಿಯಿಲ್ಲದೆ ಸಂಚರಿಸುವ ಆ ಶೂರ್ಪನಖಿಯು ಕೋಪವುಳ್ಳವಳಾ ಗಿ, ವಿಸ್ತಾರವಾದ ನೇತ್ರಂಗಳುಳ್ಳ ಆ ರಾವಣನಿಗೆ ತನ್ನ ವೈರೂಪ್ಯವಂ ತೋರಿಸಿ ಮಹಾ ಕ್ರೂರವಾಗಿ ನುಡಿದಳು।

—* ಆರಣ್ಯಕಾಂಡದಲ್ಲಿನ ೩೨ನೆಯಸರ್ಗಂ ಮುಗಿದುದು *—

ತತಶ್ಶೂರ್ಪಣಖಾದೀನಾರಾವಣಂಲೋಕರಾವಣಂ । ಅಮಾತ್ಯಮಧ್ಯೇಸಂಕ್ರುದ್ಧಾಪರುಷಂವಾಕ್ಯಮಬ್ರವೀತ್ ।೧॥ ಪ್ರಮತ್ತಃಕಾಮಭೋಗೇಷುಸ್ವೈರವೃತ್ತೋನಿರಂಕುಶಃ । ಸಮುತ್ಪನ್ನಂಭಯಂಘೋರಂಬೋದ್ಧವ್ಯಂನಾವಬುಧ್ಯಸೇ ।೨॥ ಸಕ್ತಂಗ್ರಾಮ್ಯೇಷುಭೋಗೇಷುಕಾಮವೃತ್ತಂಮಹೀಪತಿಂ । ಲುಬ್ಧಂನಬಹುಮನ್ಯಂತೇಶ್ಮಶಾನಾಗ್ನಿಮಿವಪ್ರಜಾಃ ।೩॥ ಸ್ವಯಂಕಾರ್ಯಾಣಿಯಃಕಾಲೇನಾನುತಿಷ್ಠತಿಪಾರ್ಥಿವಃ । ಸತುವೈಸಹರಾಜ್ಯೇನತೈಶ್ಚಕಾರ್ಯೈರ್ವಿನಶ್ಯತಿ ।೪॥ ಅಯುಕ್ತಚಾರಂದುರ್ದರ್ಶಮಸ್ವಾಧೀನಂನರಾಧಿಪಂ । ವರ್ಜಯಂತಿನರಾದೂರಾನ್ನದೀಪಂಕಮಿವದ್ವಿಪಾಃ ।೫॥ ಯೇನರಕ್ಷಂತಿವಿಷಯಮಸ್ವಾಧೀನಾನರಾಧಿಪಾಃ । ತೇನವೃದ್ಧ್ಯಾಪ್ರಕಾಶಂತೇಗಿರಯಸ್ಸಾಗರೇಯಥಾ ।೬॥ ಆತ್ಮವದ್ಭಿರ್ವಿಗೃಹ್ಯತ್ವಂದೇವಗಂಧರ್ವದಾನವೈಃ । ಅಯುಕ್ತಚಾರಶ್ಚಪಲಃಕಥಂರಾಜಾಭವಿಷ್ಯಸಿ ।೭॥ ತ್ವಂತುಬಾಲಸ್ವಭಾವ

---

ತತಃ-ಬಳಿಕ, ಶೂರ್ಪಣಖಾ-ಶೂರ್ಪಣಖಿಯು, ದೀನಾ-ಕುಪಿಸುತ್ತಿರುವವಳಾಗಿ, ಲೋಕರಾವಣಂ-ಜನಗಳಿಗೆ ದುಃಖವನ್ನುಂಟುಮಾಡುತ್ತಿರುವ, ರಾವಣಂ-ರಾವಣಾಸುರನನ್ನುಕುರಿತು, ಅಮಾತ್ಯಮಧ್ಯೇ-ಮಂತ್ರಿಗಳ ಮಧ್ಯದಲ್ಲಿ, ಸಂಕ್ರುದ್ಧಾ-ಕೋಪಗೊಂಡವಳಾಗಿ, ಪರುಷಂ-ಕ್ರೂರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದಳು ॥೧॥ ಕಾಮಭೋಗೇಷು-ಕಾಮಪ್ರಯುಕ್ತವಾದ ಕಾಮ್ಯಭೋಗಗಳಲ್ಲಿ, ಪ್ರಮತ್ತಃ-ಮದವೇರಿದವನಾಗಿ, ಸ್ವೈರವೃತ್ತಃ-ಸ್ವತಂತ್ರನಾಗಿ, ನಿರಂಕುಶಃ-ತಡೆಯಿಲ್ಲದವನಾಗಿ, ಸಮುತ್ಪನ್ನಂ-ಹುಟ್ಟಿರುವ, ಬೋದ್ಧವ್ಯಂ-ತಿಳಿದುಕೊಳ್ಳತಕ್ಕ, ಘೋರಂ-ಕ್ರೂರವಾದ, ಭಯಂ-ಭಯವನ್ನು, ನಾವಬುಧ್ಯಸೇ-ತಿಳಿಯದೇಹೋದೆ ॥೨॥ ಗ್ರಾಮ್ಯೇಷು-ನೀಚಗಳಾದ, ಭೋಗೇಷು-ವಿಷಯಸುಖಗಳಲ್ಲಿ, ಸಕ್ತಂ-ಆಸಕ್ತನಾದ, ಕಾಮವೃತ್ತಂ-ಕಾಮಪರತಂತ್ರನಾದ, ಲುಬ್ಧಂ-ಲೋಭಿಯಾದ, ಮಹೀಪತಿಂ-ಅರಸನನ್ನು, ಪ್ರಜಾಃ-ಜನಗಳು, ಶ್ಮಶಾನಾಗ್ನಿಮಿವ-ಚಿತಾಗ್ನಿಯನ್ನಂತೆ, ನಬಹುಮನ್ಯಂತೇ-ಶ್ಲಾಘಿಸುವದಿಲ್ಲ ॥೩॥ ಯಃಪಾರ್ಥಿವಃ-ಯಾವ ಅರಸು, ಕಾಲೇ-ಕಾಲದಲ್ಲಿ, ಕಾರ್ಯಾಣಿ-ಕಾರ್ಯಗಳನ್ನು, ಸ್ವಯಂ-ತಾನು, ನಾನುತಿಷ್ಠತಿ-ನಡಿಸುವದಿಲ್ಲವೋ, ಸತು-ಆ ಅರಸಾದರೆ, ರಾಜ್ಯೇನಸಹ-ರಾಜ್ಯದೊಡಗೂಡ, ತೈಶ್ಚಕಾರ್ಯೈಃ-ಆ ಕಾರ್ಯಗಳಿಂದ, ವಿನಶ್ಯತಿ-ನಶಿಸಿಹೋಗುವನು, ಅಯುಕ್ತಚಾರಂ-ನಿಯಮಿಸಲ್ಪಡದಿರುವ ಚಾರರುಳ್ಳ, ದುರ್ದರ್ಶಂ-ಕಾರ್ಯಗಳ ಕಾಲದಲ್ಲಿ ನೋಡಲಸಾಧ್ಯನಾದ, ಅಸ್ವಾಧೀನಂ-ಸ್ವಾಧೀನನಲ್ಲದಿರುವ, (ಅಂದರೆ-ಪಶ್ವಾದ್ಯಾದಿ ಪರತಂತ್ರನಾದ) ನರಾಧಿಪಂ-ಅರಸಿನನ್ನು, ನರಾಃ-ಮನುಷ್ಯರು, ನದೀಪಂಕಂ-ನದಿಯಕೆಸರನ್ನು, ದ್ವಿಪಾಇವ-ಆನೆಗಳಂತೆ ದೂರಾತ್-ದೂರದಲ್ಲಿ. ವರ್ಜಯಂತಿ-ಬಿಡುತ್ತಾರೆ ॥೫॥ ಯೇನರಾಧಿಪಾಃ-ಯಾವ ಅರಸರು, ಅಸ್ವಾಧೀನಾಃ-ಪರತಂತ್ರರಾಗಿ, ವಿಷಯಂ-ತಮ್ಮದೇಶವನ್ನು, ನರಕ್ಷಂತಿ-ರಕ್ಷಿಸುವದಿಲ್ಲವೋ, ತೇ-ಆ ಅರಸರು, ಸಾಗರೇ-ಸಮುದ್ರದಲ್ಲಿ, ಗಿರಯೋಯಥಾ-ಬೆಟ್ಟಗಳಂತೆ. ವೃದ್ಧ್ಯಾ-ಅಭ್ಯುದಯದಿಂದ. ನಪ್ರಕಾಶಂತೇ-ಪ್ರಕಾಶಿಸುವದಿಲ್ಲ ॥೬॥ ತ್ವಂ-ನೀನು, ಆತ್ಮವದ್ಭಿಃ-ಪ್ರಶಸ್ತವಾದ ಧೈರ್ಯವುಳ್ಳ, ದೇವಗಂಧರ್ವದಾನವೈಃ-ದೇವತೆಗಳಿಂದಲೂ ಗಂಧರ್ವರಿಂದಲೂ ರಕ್ಕಸರಿಂದಲೂ, ವಿಗೃಹ್ಯ-ಕಲಹವಂಮಾಡಿ, ಅಯುಕ್ತಚಾರಃ-ನಿಯಮಿಸದಿರುವ ಚಾರರುಳ್ಳವನಾಗಿ, ಚಪಲಃ-ಚಪಲಚಿತ್ತನಾಗಿ, ರಾಜಾ-ಅರಸು, ಕಥಂಭವಿಷ್ಯಸಿ-ಹ್ಯಾಗಾಗುವಿ ॥೭॥ ಹೇರಾಕ್ಷಸ-ಎಲೈ ರಾಕ್ಷಸನೇ, ತ್ವಂ-ನೀನು. ಬಾಲಸ್ವಭಾವಶ್ಚ-ವಿವೇಕಶೂನ್ಯವಾದ ಸ್ವಭಾವವುಳ್ಳವನು, ಬುದ್ಧಿಹೀ

---

ಅನಂತರದಲ್ಲಿ ಶೂರ್ಪಣಖಿಯು ದೀನಳಾಗಿಯೂ ಕುಪಿತಳಾಗಿಯೂ ಇರುವವಳಾಗಿ, ಮಂತ್ರಿಗಳ ಮಧ್ಯದಲ್ಲಿ ಕುಳಿತಿರುವ ಲೋಕಕಂಟಕನಾದ ದಶಕಂಠನಂ ಕುರಿತು ಕಠಿಣವಾಗಿ ನುಡಿವಳದೆಂತೆನೆ,— ಎಲೈ ರಾವಣನೇ! ಸದಾಕಾಲದಲ್ಲಿಯೂ ಕಾಮವಶನಾಗಿ ಮದಮತ್ತನಾಗಿಯೂ ಇರುವವನಾಗಿ, ಈಗ ಸಂಭವಿಸಿರುವದು ಯಾವ ಭೀತಿಯುಂಟೋ, ಯಾವದನ್ನು ನೀನು ಅವಶ್ಯವಾಗಿ ತಿಳಿಯಬೇಕಾಗಿರುವದೋ, ಅದನ್ನು ಅರಿಯದವನಾದೆ ।೨॥ ಎಲೈ ಮತ್ತನೇ! ಕೇಳುವವನಾಗು, ಗ್ರಾಮ್ಯಸುಖಂಗಳಲ್ಲಿ ಆಸಕ್ತನಾಗಿಯೂ, ಕಾಮಪರಾಧೀನನಾಗಿಯೂ, ಲುಬ್ಧನಾಗಿಯೂ ಇರುವ ರಾಜನನ್ನು ಸ್ಮಶಾನಾಗ್ನಿಯಂತೆ ಜನಗಳು ಬಹುಮಾನವಂ ಗೈಯ್ಯುವದಿಲ್ಲ ।೩। ಇದಲ್ಲದೆ ಯಾವ ಅರಸುಕಾಲದಲ್ಲಿ ಸ್ವಯಮೇವ ತನ್ನ ರಾಜಕಾರ್ಯಗಳನ್ನು ಮಾಡದಿರುವನೋ, ಆ ರಾಜನು ತನ್ನ ರಾಜ್ಯದಿಂದಲೂ, ಆ ಕಾರ್ಯಂಗಳಿಂದಲೂ ಸಹ ಭ್ರಷ್ಟನಾಗುವನು ।೪। ಮತ್ತು ಜನಗಳೆಲ್ಲರು ಚಾರರಂ ನಿಯಾಮಿಸದೇಯೂ, ಸಂಕಟಕಾಲದಲ್ಲಿಯೂ ಸಹ ಮಂತ್ರಿಮೊದಲಾದವರಿಗೆ ದರ್ಶನವನ್ನೀಯದೇಯೂ, ಸ್ತ್ರೀಲೋಲನಾಗಿ ಅವರಿಗೆ ಅಧೀನನಾಗಿರುವ ನರಪತಿಯನ್ನು ಗಜಂಗಳು ನದಿಯಕೆಸರನ್ನು ಪ್ರವೇಶಿಸದೇ ದೂರದಿಂ ಬಿಡುವಂತೆ ಜನರೆಲ್ಲ ಬಿಡುವರು ॥೫॥ ಸ್ತ್ರೀಜಿತರಾದ ರಾಜರುಗಳು ಯಾರು ತಮ್ಮ ದೇಶವಂ ಪಾಲಿಸುವದಿಲ್ಲವೊ, ಅಂಥಾ ರಾಜರು, ಪರ್ವತಂಗಳು ಸಮುದ್ರದಲ್ಲಿ ಮುಳುಗುವಂತೆ ಮುಳುಗುವರೇ ಹೊರತು ಯೆಂದಿಗೂ ಅಭಿವೃದ್ಧಿಯನ್ನೈದುವದಿಲ್ಲ ।೬। ಎಲೈ ರಾವಣನೇ! ಉತ್ತಮವಾದ ಧೈರ್ಯವುಳ್ಳ "ದೇವ, ಗಂಧರ್ವ, ದಾನವ" ಎಂಬಿವರುಗಳ ಸಂಗಡ ವೈರವಂ ಬೆಳೆಯಿಸಿ, ಚಾರಪ್ರಚಾರವಂ ಗೈಯ್ಯದೆ ಚಪಲಚಿತ್ತನಾಗಿರುವ ನೀನು ಎಂತು ರಾಜನಾಗಿರುವಿ? ।೭। ಎ

ಶ್ಚಬುದ್ಧಿಹೀನಶ್ಚರಾಕ್ಷಸ । ಜ್ಞಾತವ್ಯಂತುನಜಾನೀಷೆಕಥಂರಾಜಾಭವಿಷ್ಯಸಿ ॥೮॥ ಯೇಷಾಂಚಾರಶ್ಚಕೋಶಶ್ಚನಯಶ್ಚ ಜಯತಾಂವರ । ಅಸ್ವಾಧೀನಾನರೇಂದ್ರಾಣಾಂಪ್ರಾಕೃತೈಸ್ತೇಜನೈಸ್ಸಮಾಃ ॥೯॥ ಯಸ್ಮಾತ್ಪಶ್ಯಂತಿದೂರಸ್ಥಾನ್ಸರ್ವಾನರ್ಥಾನ್ನರಾಧಿಪಾಃ । ಚಾರೇಣತಸ್ಮಾದುಚ್ಯಂತೇರಾಜಾನೋದೀರ್ಘಚಕ್ಷುಷಃ ॥೧೦॥ ಅಯುಕ್ತಚಾರಂಮನ್ಯೇತ್ವಾಂಪ್ರಾಕೃತೈಸ್ಸಚಿವೈರ್ವೃತಂ । ಸ್ವಜನಂತುಜನಸ್ಥಾನಂಹತಂಯೋನಾವಬುಧ್ಯಸೆ ॥೧೧॥ ಚತುರ್ದಶಸಹಸ್ರಾಣಿರಕ್ಷಸಾಂಕ್ರೂರಕರ್ಮಣಾಂ । ಹತಾನ್ಯೇಕೇನರಾಮೇಣಖರಶ್ಚಸಹದೂಷಣಃ ॥೧೨॥ ಋಷೀಣಾಮಭಯಂದತ್ತಂಕೃತಕ್ಷೇಮಾಶ್ಚದಂಡಕಾಃ । ಧರ್ಷಿತಂಚಜನಸ್ಥಾನಂರಾಮೇಣಾಕ್ಲಿಷ್ಟಕರ್ಮಣಾ ॥೧೩॥ ತ್ವಂತುಲುಬ್ಧಃಪ್ರಮತ್ತಶ್ಚಪರಾಧೀನಶ್ಚರಾವಣ । ವಿಷಯೇಸ್ವೇಸಮುತ್ಪನ್ನಂಭಯಂಯೋನಾವಬುಧ್ಯಸೇ ॥೧೪॥ ತೀಕ್ಷ್ಣಮಲ್ಪಪ್ರದಾತಾರಂಪ್ರಮತ್ತಂಗರ್ವಿತಂಶಠಂ । ವ್ಯಸನೇಸರ್ವಭೂತಾನಿನಾಭಿಧಾವಂತಿಪಾರ್ಥಿವಂ ॥೧೫॥ ಅತಿಮಾನಿನಮಗ್ರಾಹ್ಯಮಾತ್ಮಸಂಭಾವಿತಂ

---

ಸಶ್ಚ-ವಿವೇಕಹೇತುಭೂತಬುದ್ಧಿಯಿಲ್ಲದ ಶೂನ್ಯನು, ಜ್ಞಾತವ್ಯಂ-ತಿಳಿಯತಕ್ಕ ಕಾರ್ಯವನ್ನು, ನಜಾನೀಷೆ-ತಿಳಿಯಲಾರೆ. ರಾಜಾ-ಅರಸು, ಕಥಂಭವಿಷ್ಯಸಿ-ಹ್ಯಾಗೆ ಆಗುವಿ ॥೮॥ ಹೇಜಯತಾಂವರ-ಎಲೈ ಜಯಶೀಲರಲ್ಲಿ ಶ್ರೇಷ್ಠನೇ, ಯೇಷಾಂ-ಯಾವ ರಾಜರಿಗೆ, ಚಾರಶ್ಚ-ಗೂಢಚಾರನು, ಕೋಶಶ್ಚ-ಬಕ್ಕಸದನುನೆಯು, ನಯಶ್ಚ-ನೀತಿಯು, ಅಸ್ವಾಧೀನಾಃ-ಸ್ವಾಧೀನವಿಲ್ಲದೇಹೋದವೋ, ತೇ-ಅವರು, ಪ್ರಾಕೃತೈಃಜನೈಃ-ಮೂಢಜನರೊಡನೆ, ಸಮಾಃ-ಸಮಾನರು ಯಸ್ಮಾತ್-ಯಾವಕಾರಣದಿಂದ. ನರಾಧಿಪಾಃ-ಅರಸರು, ಚಾರೇಣ-ಚಾರರಿಂದ, ದೂರಸ್ಥಾನ್-ದೂರದೇಶವರ್ತಿಗಳಾದ, ಸರ್ವಾನ್-ಸಮಸ್ತವಾದ, ಅರ್ಥಾನ್-ಪ್ರಯೋಜನಕಾರ್ಯಗಳನ್ನು, ಪಶ್ಯಂತಿ-ನೋಡುತ್ತಾರೆಯೋ. ತಸ್ಮಾತ್-ಆಕಾರಣದಿಂದ, ರಾಜಾನಃ-ಅರಸರು, ದೀರ್ಘಚಕ್ಷುಷಃ-ದೂರದರ್ಶಿಗಳೂ ಎಂಬದಾಗಿ, ಉಚ್ಯಂತೇ-ಹೇಳಲ್ಪಡುತ್ತಾರೆ ॥೧೦॥ ಯಃ-ಯಾವ ನೀನು, ಜನಸ್ಥಾನಂ-ನಿನ್ನದೇಶದಲ್ಲೇ ಇರುವ, ಸ್ವಜನಂತು-ತನ್ನ ಜನವನ್ನಾದರೂ, ಹತಂ-ಹೊಡೆಯಲ್ಪಟ್ಟದ್ದನ್ನಾಗಿ, ನಾವಬುಧ್ಯಸೇ-ತಿಳಿಯದೇ ಇದ್ದೀಯೋ, ಅಯುಕ್ತಚಾರಂ-ನಿಯಮಿಸಲ್ಪಡದಿರುವ ಚಾರರುಳ್ಳ, ತ್ವಾಂ-ನಿನ್ನನ್ನು, ಪ್ರಾಕೃತೈಃ-ಮೂರ್ಖರಾದ, ಸಚಿವೈಃ-ಮಂತ್ರಿಗಳಿಂದ, ವೃತಂ-ಪರಿವಾರವನ್ನಾಗಿ, ಮನ್ಯೇ-ತಿಳಿದಿದ್ದೇನೆ ॥೧೧॥ ಕ್ರೂರಕರ್ಮಣಾಂ-ಘೋರವಾದ ಕಾರ್ಯಗಳುಳ್ಳ, ರಕ್ಷಸಾಂ-ರಕ್ಕಸರ. ಚತುರ್ದಶಸಹಸ್ರಾಣಿ-ಹದಿನಾಲ್ಕು ಸಾವಿರಗಳು, ಏಕೇನರಾಮೇಣ-ಒಬ್ಬನಾದ ಶ್ರೀರಾಮನಿಂದ, ಹತಾನಿ-ಸಂಹರಿಸಲ್ಪಟ್ಟವು, ಸಹದೂಷಣಃ-ದೂಷಣನಿಂದೊಡಗೂಡಿದ, ಖರಶ್ಚ-ಖರಾಸುರನು, ಹತಃ-ಹೊಡೆಯಲ್ಪಟ್ಟನು ॥೧೨॥ ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದೆ ಕಾರ್ಯವನ್ನು ಮಾಡುವ, ರಾಮೇಣ-ಶ್ರೀರಾಮನಿಂದ, ಋಷೀಣಾಂ-ಋಷಿಗಳಿಗೆ. ಅಭಯಂ-ಅಭಯವು, ದತ್ತಂ-ಕೊಡಲ್ಪಟ್ಟಿತು. ದಂಡಕಾಃ-ದಂಡಕಾರಣ್ಯಪ್ರದೇಶಗಳು, ಕೃತಕ್ಷೇಮಾಃ-ಹೊಂದಲ್ಪಟ್ಟ ಪರಿಪಾಲನೆಯುಳ್ಳವಾದವು, ಜನಸ್ಥಾನಂ-ನಿನ್ನಿಂದಯಾಳಲ್ಪಟ್ಟ ಪ್ರದೇಶವು, ಧರ್ಷಿತಂ-ನಿರ್ಜನವಾಗಿ ತಿರಸ್ಕರಿಸಲ್ಪಟ್ಟಿತು ॥೧೩॥ ಹೇರಾವಣ-ಎಲೈ ರಾವಣನೇ, ಯಃ-ಯಾವ ನೀನು, ಸ್ವೇವಿಷಯೇ-ತನ್ನ ದೇಶದಲ್ಲಿ. ಸಮುತ್ಪನ್ನಂ-ಹುಟ್ಟಿರುವ, ಭಯಂ-ಭಯವನ್ನು, ನಾವಬುಧ್ಯಸೇ-ತಿಳಿಯದೇ ಇದ್ದೀಯೋ, ಸತ್ವಂ-ಆ ಈ ನೀನು, ಲುಬ್ಧಃ-ವಿಷಯಾಸಕ್ತನು, ಪ್ರಮತ್ತಶ್ಚ-ಮೈಮರತಿರುವನು, ಪರಾಧೀನಶ್ಚ-ಸ್ತ್ರೀಪರಾಧೀನನು ॥೧೪॥ ತೀಕ್ಷ್ಣಂ-ಕ್ರೂರಸ್ವಭಾವವುಳ್ಳವನನ್ನು, ಅಲ್ಪಪ್ರದಾತಾರಂ-ಚಾಕರಿಹೆಚ್ಚಾಗಿಮಾಡಿಸಿಕೊಂಡು ಸ್ವಲ್ಪ ಸಂಬಳವಂ ಕೊಡತಕ್ಕವನನ್ನು, ಪ್ರಮತ್ತಂ-ಮದ್ಯಪಾನಾದಿಗಳಿಂ ಮತ್ತನಾಗಿರುವನನ್ನು, ಗರ್ವಿತಂ-ಗರ್ವಿಷ್ಠನನ್ನೂ, ಶಠಂ-ಗೂಢವಾಗಿ ವಿಪ್ರಿಯವಮಾಡುವಂಥಾವನನ್ನು. ಪಾರ್ಥಿವಂ-ಇಂಥಾ ಅರಸನನ್ನು, ವ್ಯಸನೇ-ಆಪತ್ಕಾಲದಲ್ಲಿ, ಸರ್ವಭೂತಾನಿ-ಸಮಸ್ತಪ್ರಾಣಿಗಳು,

---

ಲೈ ರಾಕ್ಷಸನೇ! ಬಾಲಸ್ವಭಾವವುಳ್ಳವನಾಗಿಯೂ ಮತಿಯಿಲ್ಲದವನಾಗಿಯೂ, ಇರುವವನಾಗಿ ನೀನು, ತಿಳಿಯತಕ್ಕದ್ದನ್ನು ತಿಳಿದುಕೊಳ್ಳದೆ ಹ್ಯಾಗೆ ರಾಜನಾಗಿರುವೆ? ॥೮॥ ಯಾವ ಅರಸರು ಚಾರರನ್ನೂ ಭಂಡಾರವನ್ನು ನೀತಿಯನ್ನೂ ಸ್ವಾಧೀನ ಗೊಳಿಸಿಕೊಂಡಿರುವದಿಲ್ಲವೋ, ಅಂಥಾ ರಾಜರು ಸಾಧಾರಣಜನರಿಗೆ ಸಮಾನರಾದವರೇಸರಿ, ರಾಜರುಗಳು ಚಾರರ ಮುಖಾಂತರವಾಗಿ ದೂರದಲ್ಲಿರುವ ಅರ್ಥಂಗಳನ್ನು ತಿಳಿವರಾದ್ದರಿಂದ, ಅರಸರು ದೂರಚಕ್ಷುಸ್ಸುಳ್ಳವರೆಂದು ಹೇಳಲ್ಪಡುವರು ॥೧೦॥ ಯಾವ ನೀನು ಹತವಾದ ಜನಸ್ಥಾನವನ್ನರಿಯದೆ ಇರುವಿಯೋ, ಚಾರರಂ ನಿಯೋಗಿಸದ ಅಂಥಾ ನಿನ್ನನ್ನು ಮೂರ್ಖರಾದ ಮಂತ್ರಿಗಳಿಂ ದೊಡಗೂಡಿದವನನ್ನಾಗಿ ಭಾವಿಸುತ್ತೇನೆ. ॥೧೧॥ ಹಾಹಾ!! ಪಾದಚಾರಿಯಾದ ಶ್ರೀರಾಮನೊರ್ವನಿಂದಲೇ ನಿನ್ನ ಜನಸ್ಥಾನವೂ ಖರದೂಷಣರೂ ಸಹ ಹತರಾದರು ಕ್ಲೇಶವಿಲ್ಲದೇ ಕಾರ್ಯವಂ ಗೈಯ್ಯುವ ಆತನಿಂದ ಋಷಿಗಳಿಗೆ ಅಭಯವು ಕೊಡಲ್ಪಟ್ಟಿತು, ದಂಡಕಾರಣ್ಯವನ್ನು ಕ್ಷೇಮವಾಗಿರುವಂತೆ ಮಾಡಲ್ಪಟ್ಟಿತು, ಜನಸ್ಥಾನವು ತಿರಸ್ಕರಿಸಲ್ಪಟ್ಟಿತು, ಲುಬ್ಧನಾಗಿಯೂ ಮತ್ತನಾಗಿಯೂ ಸ್ತ್ರೀಪರಾಧೀನನಾಗಿಯೂ ಇರುವ ನೀನಾದರೆ, ನಿನ್ನ ದೇಶದಲ್ಲಿ ಸಂಭವಿಸಿರುವಭೀತಿಯನ್ನರಿಯದಿರುವವನಾದೆ । ಲೋಕದಲ್ಲಿ ಜನರು ಪ್ರತ್ಯಕ್ಷವಾಗಿ ಅಪಕಾರವಂ ಮಾಡುವವನಾಗಿಯೂ, ದಾತೃತ್ವವಿಲ್ಲದವನಾಗಿಯೂ, ಮತ್ತನಾಗಿಯೂ, ಗರ್ವವುಳ್ಳವನಾಗಿಯೂ, ಗೂಢವಾಗಿ ಅಪಕೃತಿಯಂ ಗೈಯ್ಯುವವನಾಗಿಯೂ ಇರುವ ರಾಜನಿಗೆ ಆಪ

ನರಂ । ಕ್ರೋಧಿನಂ ವ್ಯಸನೇ ಹಂತಿ ಸ್ವಜನೋಽಪಿ ಮಹೀಪತಿಂ ॥೧೬॥ ನಾನುತಿಷ್ಠತಿ ಕಾರ್ಯಾಣಿ ಭಯೇಷು ನ ಬಿಭೇತಿ ಚ । ಕ್ಷಿಪ್ರಂ ರಾಜ್ಯಾಚ್ಚ್ಯುತೋ ದೀನಸ್ತೃಣೈಸ್ತುಲ್ಯೋ ಭವಿಷ್ಯತಿ ॥೧೭॥ ಶುಷ್ಕಕಾಷ್ಠೈರ್ಭವೇತ್ಕಾರ್ಯಂ ಲೋಷ್ಟೈರಪಿ ಚ ಪಾಂಸುಭಿಃ । ನ ತು ಸ್ಥಾನಾತ್ಪರಿಭ್ರಷ್ಟೈಃ ಕಾರ್ಯಂ ಸ್ಯಾದ್ವಸುಧಾಧಿಪೈಃ ॥೧೮॥ ಉಪಭುಕ್ತಂ ಯಥಾ ವಾಸಸ್ಸ್ರಜೋ ವಾ ಮೃದಿತಾ ಯಥಾ । ಏವಂ ರಾಜ್ಯಾತ್ಪರಿಭ್ರಷ್ಟಸ್ಸಮರ್ಥೋಽಪಿ ನಿರರ್ಥಕಃ ॥೧೯॥ ಅಪ್ರಮತ್ತಶ್ಚ ಯೋ ರಾಜಾ ಸರ್ವಜ್ಞೋ ವಿಜಿತೇಂದ್ರಿಯಃ । ಕೃತಜ್ಞೋ ಧರ್ಮಶೀಲಶ್ಚ ಸ ರಾಜಾ ತಿಷ್ಠತೇ ಚಿರಂ ॥೨೦॥ ನಯನಾಭ್ಯಾಂ ಪ್ರಸುಪ್ತೋಽಪಿ ಜಾಗರ್ತಿ ನಯಚಕ್ಷುಷಾ । ವ್ಯಕ್ತಕ್ರೋಧಪ್ರಸಾದಶ್ಚ ಸ ರಾಜಾ ಪೂಜ್ಯತೇ ಜನೈಃ ॥೨೧॥ ತ್ವಂ ತು ರಾವಣ ದುರ್ಬುದ್ಧಿರ್ಗುಣೈರೇತೈರ್ವಿವರ್ಜಿತಃ । ಯಸ್ಯ ತೇಽವಿದಿತಶ್ಚಾರೈ ರಕ್ಷಸಾಂ ಸುಮಹಾನ್ವಧಃ ॥೨೨॥ ಪರಾವಮಂತಾ ವಿಷಯೇಷು ಸಂಗತೋ

---

ನಾಭಿಧಾವಂತಿ-ಅನುಸರಿಸಿ ಬರುವದಿಲ್ಲ ॥೧೫॥ ಅತಿಮಾನಿನಂ-ಅತಿಗರ್ವಿಷ್ಠನಾದ. ಅಗ್ರಾಹ್ಯಂ-ಸತ್ಪುರುಷರಿಂದ ಗ್ರಹಿಸಲ್ಪಡದವನನ್ನು, ಆತ್ಮಸಂಭಾವಿತಂ-ತನ್ನಿಂದ ತನ್ನಷ್ಟಕ್ಕೆ ಶ್ಲಾಘಿಸಲ್ಪಟ್ಟವನನ್ನು, ಸದಾ-ಸರ್ವಕಾಲದಲ್ಲಿ. ಕ್ರೋಧಿನಂ-ಕೋಪಿಷ್ಠನಾದ, ಮಹೀಪತಿಂ-ರಾಜನನ್ನು. ಸ್ವಜನೋಽಪಿ-ತನ್ನ ಜನವೂ ಕೂಡ, ವ್ಯಸನೇ-ವ್ಯಸನಕಾಲದಲ್ಲಿ, ಹಂತಿ-ಹೊಡೆಯುತ್ತದೆ ॥೧೬॥ ಯಃ-ಯಾವ ರಾಜನು ಕಾರ್ಯಾಣಿ-ಕಾರ್ಯಗಳನ್ನು, ನಾನುತಿಷ್ಠತಿ-ನಡಿಸುವದಿಲ್ಲವೋ. ಭಯೇಷು-ಭಯಕಾಲಗಳಲ್ಲಿ, ನಬಿಭೇತಿಚ-ಭಯಗೊಳ್ಳುವದಿಲ್ಲವೋ, ಸಃ-ಆ ಅರಸು, ಕ್ಷಿಪ್ರಂ-ಜಾಗ್ರತೆಯಾಗಿ, ರಾಜ್ಯಾತ್-ರಾಜ್ಯದ ದೆಸೆಯಿಂದ, ಚ್ಯುತಃ-ಜಾರಿದವನಾಗಿ, ದೀನಃ-ದರಿದ್ರನಾಗಿ, ತೃಣೈಃ-ಹುಲ್ಲುಗಳಿಗೆ, ತುಲ್ಯಃ-ಸದೃಶನು. ಭವಿಷ್ಯತಿ-ಆಗುವನು ॥೧೭॥ ಶುಷ್ಕೈಃ-ಒಣಗಿರುವ, ಕಾಷ್ಠೈಃ-ಕಟ್ಟಿಗೆಗಳಿಂದಲೂ. ಕಾರ್ಯಂ-ಕಾರ್ಯವು, ಭವೇತ್-ಆಗುವದು. ಲೋಷ್ಟೈಃ-ಮಣ್ಣಿನಿಂದಲೂ ಹೆಂಟೆಗಳಿಂದಲೂ, ಪಾಂಸುಭಿಃ-ಧೂಳಿಗಳಿಂದಲೂ, ಕಾರ್ಯಂ-ಪ್ರಯೋಜನವು, ಭವೇತ್-ಆಗುವದು, ಕಿಂತು-ಮತ್ತೇನೆಂದರೆ, ಸ್ಥಾನಾತ್-ಸ್ವಸ್ಥಾನದ ದೆಸೆಯಿಂದ. ಪರಿಭ್ರಷ್ಟೈಃ-ತಪ್ಪಲ್ಪಟ್ಟ, ವಸುಧಾಧಿಪೈಃ-ಅರಸನಿಂದ, ಕಾರ್ಯಂ-ಕಾರ್ಯವು, ನಸ್ಯಾತ್-ಆಗತಕ್ಕದ್ದು ॥೧೮॥ ಯಥಾ-ಹ್ಯಾಗೆ, ಉಪಭುಕ್ತಂ-ಅನುಭವಿಸಲ್ಪಟ್ಟ, ವಾಸಃ-ವಸ್ತ್ರವೋ, ಮೃದಿತಾಃ-ಬಾಡಿಹೋದ, ಸ್ರಜೋವಾ-ಮಾಲಿಕೆಗಳಾದರೂ, ಯಥಾ-ಹ್ಯಾಗೆಯೋ, ಏವಂ-ಈಪರಿಯಾಗಿ, ರಾಜ್ಯಾತ್-ರಾಜ್ಯದ ದೆಸೆಯಿಂದ, ಪರಿಭ್ರಷ್ಟಃ-ಚ್ಯುತನಾದವನು, ಸಮರ್ಥೋಽಪಿ-ಸಮರ್ಥನಾದರೂ, ನಿರರ್ಥಕಃ-ನಿಷ್ಪ್ರಯೋಜಕನು ॥೧೯॥ ಯಃರಾಜಾ-ಯಾವ ಅರಸು, ಅಪ್ರಮತ್ತಃ-ಭ್ರಾಂತಿಯಂ ಪಡೆದಿರುವನೋ. ಸರ್ವಜ್ಞಃ-ಸ್ವದೇಶ ಪರದೇಶ ವಿಚಾರಣೆಯನ್ನು ತಿಳಿದಿರುವನೋ, ವಿಜಿತೇಂದ್ರಿಯಃ-ಜಯಿಸಲ್ಪಟ್ಟ ಇಂದ್ರಿಯವ್ಯಾಪಾರವುಳ್ಳವನೋ, ಕೃತಜ್ಞಶ್ಚ-ಕೃತೋಪಕಾರವನ್ನು ಎಣಿಸುವನೋ. ಧರ್ಮಶೀಲಶ್ಚ-ಧರ್ಮಸ್ವಭಾವವುಳ್ಳನೋ. ಸರಾಜಾ-ಆ ಅರಸು, ಚಿರಂ-ಬಹಳಕಾಲವು, ತಿಷ್ಠತೇ-ಇರುತ್ತಾನೆ ॥೨೦॥ ಯಃ-ಯಾವ ಪುರುಷನು, ನಯನಾಭ್ಯಾಂ-ನೇತ್ರಗಳಿಂದ. ಪ್ರಸುಪ್ತೋಽಪಿ-ನಿದ್ದೆಗೊಂಡವನಾದರೂ, ನಯಚಕ್ಷುಷಾ-ನೀತಿಶಾಸ್ತ್ರವೆಂಬ ನೇತ್ರದಿಂದ, ಜಾಗರ್ತಿ-ಎದ್ದಿರುವನೋ. ವ್ಯಕ್ತಕ್ರೋಧಪ್ರಸಾದಶ್ಚ-ಸ್ಪಷ್ಟವಾದ ಕ್ರೋಧಪ್ರಸಾದಗಳುಳ್ಳವನೋ, ಸರಾಜಾ-ಅಂಥಾ ಅರಸು, ಜನೈಃ-ಜನರಿಂದ, ಪೂಜ್ಯತೇ-ಪೂಜಿಸಲ್ಪಡುತ್ತಾನೆ ॥೨೧॥ ಹೇರಾವಣ-ಎಲೆ ರಾವಣನೇ, ಯಸ್ಯ-ಯಾವ, ತೇ-ನಿನ್ನ, ಚಾರೈಃ-ಚಾರರಿಂದ, ರಕ್ಷಸಾಂ-ರಕ್ಕಸರ, ಸುಮಹಾನ್-ದೊಡ್ಡದಾದ, ವಧಃ-ಸಂಹಾರವು, ಅವಿದಿತಃ-ತಿಳಿಯಲ್ಪಡಲಿಲ್ಲವೋ, ಸತ್ವಂ-ಆ ಈ

---

ತ್ತು ಸಂಭವಿಸಿದಾಗ, ಆತನ ಸಂರಕ್ಷಣೆಗಾಗಿ ಪ್ರವರ್ತಿಸುವದಿಲ್ಲ ॥೧೫॥ ಇದಲ್ಲದೆ ತಾನು ರಾಜನೆಂಬ ಅತಿಮಾನವುಳ್ಳವನಾಗಿಯೂ, ಸತ್ಪುರುಷರಿಂದ ಪರಿಗ್ರಹಿಸಲ್ಪಡದಿರುವವನಾಗಿಯೂ, ತನ್ನನ್ನು ತಾನೇ ಶ್ಲಾಘಿಸುವವನಾಗಿಯೂ, ಯಾವಾಗಲೂ ಕೋಪವುಳ್ಳವನಾಗಿಯೂ, ಇರುವ ರಾಜನಿಗೆ ವ್ಯಸನವು ಪೊದಗಿದರೆ, ಆಗ ತನ್ನ ಜನವೂ ಸಹ ಆ ರಾಜನನ್ನು ಹೊಡೆವರು. ॥೧೬॥ ಮತ್ತು ಕಾಲಕಾಲದಲ್ಲಿ ಕಾರ್ಯಂಗಳಂ ಗೈಯ್ಯದೇಯೂ ಭೀತಿಕಾಲದಲ್ಲಿ ಹೆದರದೆಯೂ ಯಾವ ರಾಜನಿರುವನೋ. ಅವನು ಕ್ಷಿಪ್ರವಾಗಿ ರಾಜ್ಯಭ್ರಂಶವನ್ನೈದಿ, ದರಿದ್ರನಾಗಿ ತೃಣದಂತೆ ನಿಕೃಷ್ಟನಾಗುವನು. ॥೧೭॥ ಲೋಕದಲ್ಲಿ ಒಣಗಿದ ಕಾಷ್ಠಂಗಳಿಂದಲಾಗಲೀ ಮಣ್ಣುಹೆಂಟೆಗಳಿಂದಲಾಗಲೀ, ಧೂಳುಗಳಿಂದಲಾಗಲೀ ಪ್ರಯೋಜನವಾದರೂ ಪ್ರಯೋಜನಪ್ರಟಾಗುವದು ರಾಜ್ಯಭ್ರಷ್ಟನಾದ ರಾಜನಿಂದ ಯಾವ ಕೆಲಸವು ಉಂಟಾಗಲಾರದು, ಮತ್ತು ಅನುಭವಿಸಲ್ಪಟ್ಟ ವಸ್ತ್ರದಂತೆಯೂ, ಬಾಡಿದ ಪುಷ್ಪಮಾಲಿಕೆಗಳಂತೆಯೂ ರಾಜ್ಯಪದವಿಯನ್ನಗಲಿದ ಅರಸು ನಿಷ್ಪ್ರಯೋಜನನಾಗುವನು ॥೧೮॥ ಎಲೈ ರಾವಣನೇ! ಕೇಳುವವನಾಗು, ಯಾವ ರಾಜನು ಭ್ರಾಂತಿಯನ್ನೈದದಿರುವವನಾಗಿಯೂ, ತನ್ನ ದೇಶದಲ್ಲಿ ಪರಸ್ಥಳದಲ್ಲಿಯೂ ಸಹ ನಡೆಯುವ ವರ್ತಮಾನಂಗಳಂ ಬಲ್ಲವನಾಗಿಯೂ, ಜಿತೇಂದ್ರಿಯನಾಗಿಯೂ, ಕೃತಜ್ಞನಾಗಿಯೂ, ಧರ್ಮಸ್ವಭಾವವುಳ್ಳವನಾಗಿಯೂ, ನಿದ್ರಿಸುವಕಾಲದಲ್ಲಿಯೂ ಸಹ ನೀತಿಯೆಂಬ ನೇತ್ರದಿಂದ ಜಾಗರೂಕನಾಗಿಯೂ, ಸ್ಪಷ್ಟವಾದ ಕೋಪಾನುಗ್ರಹಂಗಳುಳ್ಳವನಾಗಿಯೂ, ಇರುವನೋ, ಅಂಥಾ ರಾಜನು ದೀರ್ಘಕಾಲವಿರುವನು ॥೨೧॥ ಅಯ್ಯೋ ರಾವಣನೇ! ಯಾವ

ನದೇಶಕಾಲಪ್ರವಿಭಾಗತತ್ತ್ವವಿತ್ । ಅಯುಕ್ತಬುದ್ಧಿರ್ಗುಣದೋಷನಿಶ್ಚಯೇ ವಿಪನ್ನರಾಜ್ಯೋನಚಿರಾದ್ವಿಪತ್ಸ್ಯಸೇ ॥೨೩॥
ಇತಿಸ್ವದೋಷಾಃಪರಿಕೀರ್ತಿತಾಂಸ್ತಯಾಸಮೀಕ್ಷ್ಯಬುದ್ಧ್ಯಾಕ್ಷಣದಾಚರೇಶ್ವರಃ । ಧನೇನದರ್ಪೇಣಬಲೇನಚಾನ್ವಿತೋ
ವಿಚಿಂತಯಾಮಾಸಚಿರಂಸರಾವಣಃ ॥೨೪॥ —**ಇತಿಶ್ರೀಮದಾರಣ್ಯಕಾಂಡೇ ತ್ರಯಸ್ತ್ರಿಂಶಸ್ಸರ್ಗಃ ॥ **—
ತತಶ್ಶೂರ್ಪಣಖಾಂಕ್ರುದ್ಧಾಂಬ್ರುವಂತೀಂಪರುಷಂವಚಃ । ಅಮಾತ್ಯಮಧ್ಯೇಸಂಕ್ರುದ್ಧಃಪರಿಪಪ್ರಚ್ಛರಾವ
ಣಃ । ಕಶ್ಚರಾಮಃಕಥಂವೀರ್ಯಃಕಿಂರೂಪಃಕಿಂಪರಾಕ್ರಮಃ । ಕಿಮರ್ಥಂದಂಡಕಾರಣ್ಯಂಪ್ರವಿಷ್ಟಸ್ಸುದುರಾಸದಂ ॥
ಆಯುಧಂಕಿಂಚರಾಮಸ್ಯನಿಹತಾಯೇನರಾಕ್ಷಸಾಃ । ಖರಶ್ಚನಿಹತಸ್ಸಂಖ್ಯೇದೂಷಣಸ್ತ್ರಿಶಿರಾಸ್ತಥಾ ॥೩॥ ಇತ್ಯುಕ್ತಾ
ರಾಕ್ಷಸೇಂದ್ರೇಣರಾಕ್ಷಸೀಕ್ರೋಧಮೂರ್ಛಿತಾ । ತತೋರಾಮಂಯಥಾತತ್ತ್ವಮಾಖ್ಯಾತುಮುಪಚಕ್ರಮೇ ॥೪॥ ದೀರ್ಘ

---

ನೀನು, ದುರ್ಬುದ್ಧಿಃ-ದುಷ್ಟಬುದ್ಧಿಯುಳ್ಳವನು. ಏತೈರ್ಗುಣೈಃ-ಈ ಪೂರ್ವೋಕ್ತಗುಣಗಳಿಂದ. ವಿವರ್ಜಿತಃ-ಬಿಡಲ್ಪಟ್ಟವನು ॥೨೨॥ ಪರಾವ
ಮಂತಾ-ಪರರಿಗೆ ಅವಮಾನಮಾಡತಕ್ಕವನು, ವಿಷಯೇಷು-ಸ್ರಕ್ಚಂದನಾದಿ ವಿಷಯಾದಿಗಳಲ್ಲಿ, ಸಕ್ತಃ-ಆಸಕ್ತನು, ನದೇಶಕಾಲಪ್ರವಿಭಾಗತತ್ತ್ವವಿತ್-ದೇಶ
ಭೇದದಿಂದಲೂ ಕಾಲಭೇದದಿಂದಲೂ ಮಾಡತಕ್ಕ ಕಾರ್ಯನಿಶ್ಚಯವನ್ನು ತಿಳಿಯದಿರುವವನು. ಗುಣದೋಷನಿಶ್ಚಯೇ-ಗುಣಗಳ ದೋಷಗಳ ನಿಶ್ಚಯಿಸುವ
ವಿಷಯದಲ್ಲಿ, ಅಯುಕ್ತಬುದ್ಧಿಃ-ವಿನಿಯೋಗಿಸಲ್ಪಡದಿರುವ ಬುದ್ಧಿಯುಳ್ಳವನು, ವಿಪನ್ನರಾಜ್ಯಃ-ಆಪತ್ತುಹೊಂದಿದ ರಾಜ್ಯವುಳ್ಳವನಾದ, ತ್ವಂ-
ನೀನು, ನಚಿರಾತ್-ಜಾಗ್ರತೆಯಾಗಿ. ವಿಪತ್ಸ್ಯಸೇ-ವಿಪತ್ತನ್ನು ಹೊಂದುವಿ ॥೨೩॥ ಕ್ಷಣದಾಚರೇಶ್ವರಃ-ನಿಶಾಚರರಿಗೆ ಅಧಿಪತಿಯಾದ. ಸರಾವಣಃ-ಆ ರಾ
ವಣನು, ತಯಾ-ಆ ಶೂರ್ಪನಖೆಯಿಂದ, ಇತಿ-ಈಪರಿಯಾಗಿ, ಪರಿಕೀರ್ತಿತಾನ್-ಹೇಳಲ್ಪಟ್ಟ. ಸ್ವದೋಷಾನ್-ತನ್ನ ದೋಷಗಳನ್ನು, ಬುದ್ಧ್ಯಾ-
ಬುದ್ಧಿಯಿಂದ. ಸಮೀಕ್ಷ್ಯ-ಕಂಡು, ಧನೇನ-ದ್ರವ್ಯದಿಂದಲೂ. ದರ್ಪೇಣ-ಗರ್ವದಿಂದಲೂ. ಬಲೇನ-ಸೈನ್ಯದಿಂದಲೂ, (ಯದ್ವಾ-ದೇಹಪ್ರಾಣದಿಂದಲೂ)
ಅನ್ವಿತಶ್ಚ-ಕೂಡಿದವನಾದರೂ, ಚಿರಂ-ಬಹಳಕಾಲವು, ಚಿಂತಯಾಮಾಸ-ಆಲೋಚಿಸಿದನು॥ —**ತ್ರಯಸ್ತ್ರಿಂಶಸ್ಸರ್ಗಃ**—
ತತಃ-ಬಳಿಕ. ರಾವಣಃ-ರಾವಣನು. ಅಮಾತ್ಯಮಧ್ಯೇ-ಮಂತ್ರಿಗಳ ಮಧ್ಯಪ್ರದೇಶದಲ್ಲಿ, ಸಂಕ್ರುದ್ಧಃ-ಕೋಪಿಷ್ಠನಾಗಿ, ಪರುಷಂ-ಕ್ರೂ
ರವಾದ, ವಚಃ-ಮಾತನ್ನು, ಬ್ರುವಂತೀಂ-ಹೇಳುತ್ತಿರುವ, ಕ್ರುದ್ಧಾಂ-ಕೋಪಗೊಂಡವಳಾದ. ಶೂರ್ಪಣಖಾಂ-ಶೂರ್ಪನಖೆಯನ್ನು, ಪರಿಪಪ್ರಚ್ಛ-
ಕೇಳಿದನು ॥೧॥ ರಾಮಃ-ಶ್ರೀರಾಮನು, ಕಃ-ಯಾರು, ಕಥಂವೀರ್ಯಃ-ಯಂಥಾಸಾಮರ್ಥ್ಯವುಳ್ಳವನು, ಕಿಂರೂಪಃ-ಯಂಥಾ ರೂಪವುಳ್ಳವನು. ಕಿಂ
ಪರಾಕ್ರಮಃ-ಯೆಂಥಾ ಪರಾಕ್ರಮವುಳ್ಳವನು, ಸುದುರಾಸದಂ-ಹೊಂದಲಸಾಧ್ಯವಾದ, ದಂಡಕಾರಣ್ಯಂ-ದಂಡಕಾವನವನ್ನು ಕಿಮರ್ಥಂ-ಯಾತಕೋ
ಸ್ಕರ, ಪ್ರವಿಷ್ಟಃ-ಪ್ರವೇಶಮಾಡಿದನು ॥೨॥ ರಾಮಸ್ಯ-ಶ್ರೀರಾಮನಿಗೆ, ಆಯುಧಂ-ಆಯುಧವು. ಕಿಂ-ಏನು. ಯೇನ-ಯಾವ ಆಯುಧದಿಂದ. ಖರಃ-
ಖರಾಸುರನು, ಸಂಖ್ಯೇ-ಕಾಳಗದಲ್ಲಿ, ನಿಹತಃ-ಹೊಡೆಯಲ್ಪಟ್ಟನು. ದೂಷಣಃ-ದೂಷಣನು, ತಥಾ-ಹಾಗೆಯೇ, ತ್ರಿಶಿರಾಶ್ಚ-ತ್ರಿಶಿರಸ್ಸನು, ರಾಕ್ಷಸಾಃ-
ರಕ್ಕಸರು, ಯೇನ-ಯಾವ ಆಯುಧದಿಂದ, ಹತಾಃ-ಹೊಡೆಯಲ್ಪಟ್ಟರು ॥೩॥ ರಾಕ್ಷಸೇಂದ್ರೇಣ-ರಾವಣನಿಂದ, ಇತ್ಯುಕ್ತಾ-ಈಪರಿಹೇಳಲ್ಪಟ್ಟ, ರಾಕ್ಷ
ಸೀ-ಶೂರ್ಪನಖೆಯು, ಕ್ರೋಧಮೂರ್ಛಿತಾ-ಕ್ರೋಧಾವಿಷ್ಟಳಾಗಿ, ತತಃ-ಬಳಿಕ, ರಾಮಂ-ಶ್ರೀರಾಮನನ್ನು, ಯಥಾತತ್ತ್ವಂ-ಹ್ಯಾಗೋಹಾಗೆಯೇ,
ಆಖ್ಯಾತುಂ-ಹೇಳುವದಕ್ಕೆ, ಉಪಚಕ್ರಮೇ-ಉಪಕ್ರಮಿಸಿದಳು ॥೪॥ ರಾಮಃ-ಶ್ರೀರಾಮನು, ದಶರಥಾತ್ಮಜಃ-ದಶರಥರಾಯನಮಗನು, ದೀರ್ಘಬಾಹುಃ-

---

ನಿನಗೆ ಮಹತ್ತರವಾದ ರಾಕ್ಷಸಸಂಹಾರವೇ ತಿಳಿಯಲಿಲ್ಲವೋ, ಅಂಥಾ ದುರ್ಬುದ್ಧಿಯುಳ್ಳ ನೀನು ರಾಜಗುಣಗಳಿಂ
ದ ವರ್ಜಿತನಾದವನು, ಪರರಿಗೆ ತಿರಸ್ಕಾರವಂ ಮಾಡುವವನು, ಸ್ರಕ್ಚಂದನಾದಿ ವಿಷಯ ಸುಖಂಗಳಲ್ಲಿ ಆಸಕ್ತನಾ
ದವನು, ದೇಶಕಾಲಾದಿವಿಭಾಗಂಗಳ ತತ್ತ್ವಂಗಳನ್ನರಿಯದವನು, ಗುಣದೋಷಂಗಳಂ ನಿಶ್ಚಯಿಸುವದರಲ್ಲಿ ಮತಿ
ಯಿಲ್ಲದವನು, ವಿಪತ್ತನ್ನು ಹೊಂದಿದ ರಾಜ್ಯವುಳ್ಳವನು, ಆದಕಾರಣ ನಿನಗೆ ತ್ವರೆಯಾಗಿ ಆಪತ್ತು ಬರುವದೆಂದು
ಅತಿ ಕಠಿಣವಾಗಿ ಶೂರ್ಪನಖಿಯು ನುಡಿದವಳಾಗಲೂ, ಆ ರಾಕ್ಷಸಾಧಿಪತಿಯಾದ ರಾವಣನು ತನ್ನ ದೋಷಂಗ
ಳನ್ನರಿತು, ಧನ, ಗರ್ವ, ಬಲಾದಿಗಳಿಂದ ಕೂಡಿದವನಾದರೂ ಬಹುಕಾಲವು ಆಲೋಚನೆಯಂ ಗೈದನು ॥೨೪॥

—* ಆರಣ್ಯಕಾಂಡದಲ್ಲಿ ೩೩ನೆಯ ಸರ್ಗಂ ಮುಗಿದುದು *—

ಅನಂತರದಲ್ಲಿ ರಾವಣಾಸುರನು ಮಂತ್ರಿಗಳ ಮಧ್ಯದಲ್ಲಿ ಬಹು ಕ್ರೂರವಾಗಿ ಮಾತಾಡುವ ಆ ಶೂರ್ಪನ
ಖಿಯಂ ಕೇಳುವನದೆಂತೆನೆ,—ಎಲೈ ತಂಗಿಯೇ! ನೀಪೇಳಿದ ಆ ಶ್ರೀರಾಮನೆಂಬವನ್ಯಾರು? ಅವನ ಪರಾಕ್ರಮವೆಂ
ಥಾದ್ದು? ಅವನು ಯೆಂಥಾರೂಪವುಳ್ಳವನು? ಹೊಂದಲಸಾಧ್ಯವಾದ ದಂಡಕಾರಣ್ಯಕ್ಕೆ ಯಾಕೆ ಬಂದವನಾದನು?
ಆತನ ಆಯುಧವೇನು? ಯಾವ ಆಯುಧದಿಂದ ಖರಾಸುರನು ಹೊಡೆಯಲ್ಪಟ್ಟನು? ದೂಷಣನು ಯೆಂಥಾ ಆಯು
ಧದಿಂದ ಹತನಾದನು? ಮಹಾ ಶೂರರಾದ ಹದಿನಾಲ್ಕು ಸಾವಿರ ರಾಕ್ಷಸರು ಯಾವ ಪ್ರಕರಣದಿಂದ ಪ್ರಹರಿಸಲ್ಪಟ್ಟ
ರು? ಪೇಳುವವಳಾಗೆಂದು ರಾವಣಾಸುರನು ನುಡಿದವನಾಗಲೂ, ಆ ಶೂರ್ಪನಖಿಯು, ಕೋಪೋದ್ರೇಕವುಳ್ಳವಳಾಗಿ,

ಏವಮುಕ್ತಃ ಕ್ಷಣೇನೈವಸಾರಥಿರ್ಲಘುವಿಕ್ರಮಃ ॥ ರಥಂಸಂಯೋಜಯಾಮಾಸತಸ್ಯಾಭಿಮತಮುತ್ತಮಂ॥೫॥ಕಾಂಚನಂರಥಮಾಸ್ಥಾಯಕಾಮಗಂರತ್ನಭೂಷಿತಂ । ಪಿಶಾಚವದನೈರ್ಯುಕ್ತಂಖರೈಃಕಾಂಚನಭೂಷಣೈಃ ।೬। ಮೇಘಪ್ರತಿಮನಾದೇನಸತೇನಧನದಾನುಜಃ । ರಾಕ್ಷಸಾಧಿಪತಿಶ್ಶ್ರೀಮಾನ್ಯಯೌನದನದೀಪತಿಂ ।೭। ಸಶ್ವೇತವಾಲವ್ಯಜನಶ್ಶ್ವೇತಚ್ಛತ್ರೋದಶಾನನಃ । ಸ್ನಿಗ್ಧವೈಡೂರ್ಯಸಂಕಾಶಸ್ತಪ್ತಕಾಂಚನಕುಂಡಲಃ ।ವಿಂಶದ್ಭುಜೋದಶಗ್ರೀವೋದರ್ಶನೀಯಪರಿಚ್ಛದಃ । ತ್ರಿದಶಾರಿರ್ಮುನೀಂದ್ರಘ್ನೋದಶಶೀರ್ಷಇವಾದ್ರಿರಾಟ್ । ಕಾಮಗಂರಥಮಾಸ್ಥಾಯಶುಶುಭೇರಾಕ್ಷಸೇಶ್ವರಃ । ವಿದ್ಯುನ್ಮಂಡಲವಾನ್ಮೇಘಸ್ಸಬಲಾಕಇವಾಂಬರೇ ॥೧೦। ಸಶೈಲಂಸಾಗರಾನೂಪಂವೀರ್ಯವಾನವಲೋಕಯನ್॥ ನಾನಾಪುಷ್ಪಫಲೈರ್ವೃಕ್ಷೈರನುಕೀರ್ಣಂಸಹಸ್ರಶಃ । ಶೀತಮಂಗಳತೋಯಾಭಿಃಪದ್ಮಿನೀಭಿಸ್ಸಮಂತತಃ । ವಿಶಾಲೈ

---

ತಸ್ಯ-ಆ ರಾವಣಾಸುರನಿಗೆ, ಅಭಿಮತಂ-ಸಮ್ಮತವಾದ ಉತ್ತಮಂ-ಉತ್ಕೃಷ್ಟವಾದ ರಥಂ-ರಥವನ್ನು ಸಂಯೋಜಯಾಮಾಸ-ಕಟ್ಟಿದನು ॥೫॥ ಪಿಶಾಚವದನೈಃ-ಪಿಶಾಚಗಳ ಮುಖದಂತೆ ಮುಖವುಳ್ಳ, ಕಾಂಚನಭೂಷಣೈಃ-ಸುವರ್ಣದ ಮುಖರಜ್ಜುವೇ ಅಲಂಕಾರವಾಗುಳ್ಳ, ಖರೈಃ-ಕತ್ತೆಗಳಿಂದ ಯುಕ್ತಂ-ಕೂಡಿಕೊಂಡಿರುವ, ರತ್ನಭೂಷಿತಂ-ರತ್ನಗಳಿಂದ ಅಲಂಕರಿಸಲ್ಪಟ್ಟ, ಕಾಮಗಂ-ಸ್ವೇಚ್ಛೆಯಾಗಿ ಗಮನವುಳ್ಳ, ಕಾಂಚನಂ-ಚಿನ್ನದವಿಕಾರವಾದ ರಥಂ-ತೇರನ್ನು, ಆಸ್ಥಾಯ-ಹತ್ತಿ, ಮೇಘಪ್ರತಿಮನಾದೇನ-ಮೇಘದ ಧ್ವನಿಗೆ ಸಮಾನವಾದ ಧ್ವನಿಯುಳ್ಳ, ತೇನ-ಆ ರಥದಿಂದ, ಧನದಾನುಜಃ-ಕುಬೇರನಿಗೆ ತಮ್ಮನಾದ. ಶ್ರೀಮಾನ್-ಸೌಂದರ್ಯಯುಕ್ತನಾದ, ರಾಕ್ಷಸಾಧಿಪತಿಃ-ರಾಕ್ಷಸರಾಜನಾದ ರಾವಣನು. ನದನದೀಪತಿಂ-ಸಮುದ್ರವನ್ನುಕುರಿತು ಯಯೌ-ತೆರಳಿದನು ॥೭॥ ಸಶ್ವೇತವಾಲವ್ಯಜನಃ-ಬೆಳ್ಳಗಿರುವ ಚಾಮರಗಳಿಂದೊಡಗೂಡಿದವನಾಗಿ. ಶ್ವೇತಚ್ಛತ್ರಃ-ಶುಭ್ರವಾದಛತ್ರಗಳುಳ್ಳ, ಸ್ನಿಗ್ಧವೈಡೂರ್ಯಸಂಕಾಶಃ-ಸಾಣೆ ಹಿಡಿದ ವೈಡೂರ್ಯಗಳಿಗೆ ಸಮಾನವಾದ ಕಾಂತಿಯುಳ್ಳ, ತಪ್ತಕಾಂಚನಕುಂಡಲಃ-ಕಾಸಲ್ಪಟ್ಟ ಚಿನ್ನದ ಕರ್ಣಭೂಷಣಗಳುಳ್ಳ, ವಿಂಶದ್ಭುಜಃ-ಇಪ್ಪತ್ತು ಭುಜಗಳುಳ್ಳ, ದಶಗ್ರೀವಃ-ಹತ್ತು ಕೊರಳುಗಳುಳ್ಳ, ದರ್ಶನೀಯಪರಿಚ್ಛದಃ-ನೋಡತಕ್ಕ ಸಾಮಗ್ರಿಗಳುಳ್ಳ, ತ್ರಿದಶಾರಿಃ-ದೇವತೆಗಳಿಗೆ ಶತ್ರುವಾದ, ಮುನೀಂದ್ರಘ್ನಃ-ಋಷಿಶ್ರೇಷ್ಠರನ್ನು ಹೊಡೆಯುವವನಾದ. ದಶಶೀರ್ಷಃ-ಹತ್ತು ತಲೆಯುಳ್ಳ, ಅದ್ರಿರಾಟಿವ-ಪರ್ವತಶ್ರೇಷ್ಠದಂತಿರುವ, ರಾಕ್ಷಸೇಶ್ವರಃ-ರಾಕ್ಷಸರಾಜನಾದ, ನಿಶಾಚರಃ-ರಾವಣನು, ಕಾಮಗಂ-ಸ್ವೇಚ್ಛೆಯಾಗಿ ಹೋಗುತ್ತಿರುವ, ರಥಂ-ರಥದಲ್ಲಿ, ಆಸ್ಥಾಯ-ಕುಳಿತುಕೊಂಡವನು. ವಿದ್ಯುನ್ಮಂಡಲವಾನ್-ಮಿಂಚುಗಳ ಸಮುದಾಯವುಳ್ಳ, ಸಬಲಾಕಃ-ಬಲಾಕಗಳೆಂಬ ಪಕ್ಷಿಗಳಿಂದೊಡಗೂಡಿದ. ಮೇಘ ಇವ-ಮೇಘದಂತೆ. ಅಂಬರೇ-ಅಂತರಿಕ್ಷಮಾರ್ಗದಲ್ಲಿ, ಶುಶುಭೇ-ಹೊಳೆಯುತ್ತಿದ್ದನು ॥೧೦॥ ವೀರ್ಯವಾನ್-ಪರಾಕ್ರಮಶಾಲಿಯಾದ ರಾವಣನು, ಸಶೈಲಂ-ಬೆಟ್ಟಗಳಿಂದೊಡಗೂಡಿದ, ನಾನಾಪುಷ್ಪಫಲೈಃ-ಅನೇಕಬಗೆಗಳಾದ ಹುವ್ವುಗಳೂ ಫಲಗಳೂಉಳ್ಳ, ಸಹಸ್ರಶಃ-ಸಹಸ್ರಾರುಗಳಾದ. ವೃಕ್ಷೈಃ-ಗಿಡಗಳಿಂದ, ಅನುಕೀರ್ಣಂ-ತುಂಬಿರುವ, ಶೀತಮಂಗಳತೋಯಾಭಿಃ-ಥಣ್ಣಗಿರುವ ಶುಭಕರವಾದ ಉದಕವುಳ್ಳ, ಪದ್ಮಿನೀಭಿಃ-ಕಮಲಸರೋವರಗಳಿಂದಲೂ, ಸಮಂತತಃ-ಎಲ್ಲಾಕಡೆಯಲ್ಲಿಯೂ, ವಿಶಾಲೈಃ-ವಿಸ್ತಾರವಾದ. ವೇದಿಮದ್ಭಿಃ-ಜಗುಲಿಗಳುಳ್ಳ, ಆಶ್ರಮಪದೈಃ-ಆಶ್ರಮಸ್ಥಾನಗಳಿಂದಲೂ, ಸಮಾವೃತಂ-ಸುತ್ತಿಕೊಳ್ಳಲ್ಪಟ್ಟ, ಕದಳ್ಯಾಢಕಿಸಂಬಾಧಂ-ಬಾಳೇಗಿಡಗಳಿಂದಲೂ ತೊಗರೀಗಿಡಗಳಿಂದಲೂ ತುಂಬಿರುವ. ನಾರಿಕೇಳೋಪಶೋಭಿತಂ-ತೆಂಗಿ

---

ತತ್ಕ್ಷಣದಲ್ಲಿಯೇ ರಥಕ್ಕೆ ಕುದುರೆಗಳಂ ಕಟ್ಟಿ ಸಿದ್ಧಪಡಿಸಿದನು ।೫। ಅನಂತರದಲ್ಲಿ ಪಿಶಾಚಗಳ ಮುಖಗಳಂತೆ ಮುಖಂಗಳುಳ್ಳ ಮತ್ತು ಸುವರ್ಣನಿರ್ಮಿತವಾದ ಮುಖರಜ್ಜುಗಳಿಂದ ಅಲಂಕರಿಸಲ್ಪಟ್ಟ, ಖರಯುಕ್ತವಾದ ಇಷ್ಟವಿದ್ದಂತೆ ಹೋಗಲೂ ಶಕ್ತಿಯುಳ್ಳದ್ದಾದ ಆ ರಥವನ್ನೇರಿ ರಾಕ್ಷಸಾಧಿಪತಿಯಾದ ಆ ರಾವಣಾಸುರನು, ಮೇಘಘರ್ಜನೆಯಂತೆ ಗಂಭೀರವಾದ ಶಬ್ದವುಳ್ಳ ಆ ರಥದಿಂದ ಸಮುದ್ರವಂ ಕುರಿತು ತೆರಳಿದನದೆಂತೆನೆ, — ।೭। ಶುಭ್ರವಾದ ಚಾಮರಂಗಳಿಂದ ಯುಕ್ತನಾಗಿಯೂ, ಶ್ವೇತಚ್ಛತ್ರದಿಂ ದೊಡಗೂಡಿದವನಾಗಿಯೂ, ಅಪರಂಜಿಯಿಂದ ಮಾಡಲ್ಪಟ್ಟ ಕುಂಡಲಂಗಳುಳ್ಳವನಾಗಿಯೂ, ಇಪ್ಪತ್ತು ಭುಜಗಳುಳ್ಳವನಾಗಿಯೂ, ದಶಕಂಠಂಗಳುಳ್ಳವನಾಗಿಯೂ, ಮನೋಹರವಾದ ವಸ್ತ್ರಗಳನ್ನುಟ್ಟವನಾಗಿಯೂ, ದೇವಶತ್ರುವಾಗಿಯೂ, ಮುನಿಕಂಟಕನಾಗಿಯೂ ಹತ್ತು ಮಂಡೆಗಳುಳ್ಳವನಾಗಿಯೂ, ರಾಕ್ಷಸೇಶ್ವರನಾಗಿಯೂ ಇರುವ ಆ ರಾವಣಾಸುರನು ಸ್ವೇಚ್ಛಾಗಾಮಿಯಾದ ವಿಮಾನವನ್ನೇರಿ, ಮಿಂಚುಗಳ ತಂಡಗಳುಳ್ಳ ಮತ್ತು ವಲಾಹಕಗಳೆಂಬ ಪಕ್ಷಿ ಸಮೂಹಂಗಳುಳ್ಳ ಮಹಾ ಮೇಘದಂತೆ ಗಗನಮಾರ್ಗದಲ್ಲಿ ಹೊಳೆಯುತ್ತಿದ್ದನು ।೧೦। ಮಹಾ ಪರಾಕ್ರಮಶಾಲಿಯಾದ ಆ ರಾವಣಾಸುರನು, ಪರ್ವತಂಗಳಿಂದಲೂ, ನಾನಾವಿಧವಾದ ಪುಷ್ಪಂಗಳಿಂದಲೂ ಫಲಂಗಳಿಂದಲೂ, ವೃಕ್ಷಂಗಳಿಂದಲೂ ಸಹತುಂಬಿರುವದಾಗಿಯೂ, ತಂಡಿಯಾಗಿರುವ ಮತ್ತು ಶುಭಕರವಾದಜಲಂಗಳುಳ್ಳಸರೋವರಂಗಳಿಂದಲೂ, ನಾನಾವಿಧವಾದ ವೇದಿಕೆಗಳುಳ್ಳ ಆಶ್ರಮಂಗಳಿಂದಲೂ, ಸಹ ಯುಕ್ತವಾಗಿಯೂ, ಬಾಳೇಗಿಡ ತೊಗರೀ ಗಿಡಗಳಿಂದಲೂ

ರಾಶ್ರಮಪದೈರ್ನದೀಮದ್ಭಿಸ್ಸಮಾವೃತಂ । ಕದಲ್ಯಾಢಕಿಸಂಬಾಧಂ ನಾಳಿಕೇರೋಪಶೋಭಿತಂ । ಸಾಲೈಸ್ತಾಲೈಸ್ತಮಾಲೈಶ್ಚ ಪುಷ್ಪಿತೈಸ್ತರುಭಿರ್ವೃತಂ । ನಾಗೈಸ್ಸುಪರ್ಣೈರ್ಗಂಧರ್ವೈಃ ಕಿನ್ನರೈಶ್ಚ ಸಹಸ್ರಶಃ । ಅಜೈರ್ವೈಖಾನಸೈರ್ಮಾಷೈರ್ವಾಲಖಿಲ್ಯೈರ್ಮರೀಚಿಪೈಃ । ಅತ್ಯಂತನಿಯತಾಹಾರೈಶ್ಶೋಭಿತಂ ಪರಮರ್ಷಿಭಿಃ । ಜಿತಕಾಮೈಶ್ಚ ಸಿದ್ಧೈಶ್ಚ ಚಾರಣೈರುಪಶೋಭಿತಂ । ದಿವ್ಯಾಭರಣಮಾಲ್ಯಾಭಿರ್ದಿವ್ಯರೂಪಾಭಿರಾವೃತಂ । ಕ್ರೀಡಾರತಿವಿಧಿಜ್ಞಾಭಿರಪ್ಸರೋಭಿಸ್ಸಹಸ್ರಶಃ । ಸೇವಿತಂ ದೇವಪತ್ನೀಭಿಶ್ಶ್ರೀಮತೀಭಿಶ್ಶ್ರಿಯಾವೃತಂ । ದೇವದಾನವಸಂಘೈಶ್ಚ ಚರಿತಂ ತ್ವಮೃತಾಶಿಭಿಃ । ಹಂಸಕ್ರೌಂಚಪ್ಲವಾಕೀರ್ಣಂ ಸಾರಸೈಸ್ಸಂಪ್ರಣಾದಿತಂ । ವೈಡೂರ್ಯಪ್ರಸ್ತರಂ ರಮ್ಯಂ ಸ್ನಿಗ್ಧಂ ಸಾಗರತೇಜಸಾ । ಪಾಂಡುರಾಣಿ ವಿಶಾಲಾನಿ ದಿವ್ಯಮಾಲ್ಯಯುತಾನಿ ಚ । ತೂರ್ಯಗೀತಾಭಿಜುಷ್ಟಾನಿ ವಿಮಾನಾನಿ ಸಮಂತತಃ ॥ ತಪಸಾ ಜಿತಲೋಕಾನಾಂ ಕಾಮಗಾನ್ಯಭಿಸಂಪತನ್ । ಗಂಧರ್ವಾಪ್ಸರಸಶ್ಚೈವ ದದರ್ಶ ಧನದಾನುಜಃ ॥೨೦॥ ನಿರ್ಯಾಸರಸಮೂಲಾನಾಂ ಚಂದನಾನಾಂ ಸಹಸ್ರಶಃ । ವನಾನಿ ಪಶ್ಯನ್ ಸೌಮ್ಯಾನಿ ಘ್ರಾಣತೃಪ್ತಿಕರಾಣಿ ಚ । ಅಗರೂಣಾಂ ಚ ಮುಖ್ಯಾನಾಂ ವನಾನ್ಯುಪ

---

ಸಗಿಡಗಳಿಂದಲೂ. ಪುಷ್ಪಿತೈಃ-ಹುವ್ವು ಬಿಟ್ಟಿರುವ. ತಮಾಲೈಃ-ಹೊಂಗೇಗಿಡಗಳೆಂಬ, ತರುಭಿಃ-ಗಿಡಗಳಿಂದಲೂ, ನಾಗೈಃ-ಆನೆಗಳಿಂದಲೂ, ಸುಪರ್ಣೈಃ-ಗರುಡಪಕ್ಷಿಗಳಿಂದಲೂ, ಗಂಧರ್ವೈಃ-ಗಂಧರ್ವರಿಂದಲೂ. ಸಹಸ್ರಶಃ-ಅನೇಕ ಸಹಸ್ರಸಂಖ್ಯೆಯುಳ್ಳ. ಕಿನ್ನರೈಶ್ಚ-ಕಿನ್ನರರಿಂದಲೂ ಅಜೈಃ-ಅಯೋನಿಜರಾದ, ವೈಖಾನಸೈಃ-ವೈಖಾನಸರೆಂಬ ಋಷಿಗಳಿಂದಲೂ, ಮಾಷೈಃ-ಮಾಷಪ್ರಧಾನರುಳ್ಳ, ವಾಲಖಿಲ್ಯೈಃ-ವಾಲಖಿಲ್ಯರೆಂಬವರಿಂದಲೂ, ಮರೀಚಿಪೈಃ-ಸೂರ್ಯಕಿರಣಗಳನ್ನು ಪಾನಮಾಡಿ ಜೀವಿಸುತ್ತಿರುವ. ಅತ್ಯಂತನಿಯತಾಹಾರೈಃ-ಬಹಳವಾಗಿ ಮಿತವಾದ ಆಹಾರವುಳ್ಳ, ಪರಮರ್ಷಿಭಿಃ-ದೊಡ್ಡಋಷಿಗಳಿಂದ, ಶೋಭಿತಂ-ಹೊಳೆಯುತ್ತಿರುವ, ಜಿತಕಾಮೈಃ-ಜಯಿಸಲ್ಪಟ್ಟ ಕಾಮಗುಣವುಳ್ಳ, ಸಿದ್ಧೈಶ್ಚ-ಸಿದ್ಧರಿಂದಲೂ, ಚಾರಣೈಶ್ಚ-ಚಾರಣರಿಂದಲೂ, ಉಪಶೋಭಿತಂ-ಹೊಳೆಯುತ್ತಿರುವ, ದಿವ್ಯಾಭರಣಮಾಲ್ಯಾಭಿಃ-ದೇವತಾಸಂಬಂಧವಾದ ಒಡವೆಗಳೂ ಪುಷ್ಪಮಾಲಿಕೆಗಳೂ ಉಳ್ಳ, ದಿವ್ಯರೂಪಾಭಿಃ-ಮನೋಹರವಾದ ರೂಪವುಳ್ಳ, ಕ್ರೀಡಾರತಿವಿಧಿಜ್ಞಾಭಿಃ-ಕ್ರೀಡಾವಿಲಾಸಗಳ ವಿಧಾನವಂ ತಿಳಿದಿರುವ. ಸಹಸ್ರಶಃ-ಸಹಸ್ರಸಂಖ್ಯೆಯುಳ್ಳ, ಅಪ್ಸರೋಭಿಃ-ಅಪ್ಸರಸ್ತ್ರೀಯರುಗಳಿಂದಲೂ, ಆವೃತಂ-ತುಂಬಿಸಲ್ಪಟ್ಟ, ಶ್ರೀಮತೀಭಿಃ-ಕಾಂತಿಯುಕ್ತರಾದ, ದೇವಪತ್ನೀಭಿಃ-ದೇವತೆಗಳ ಹೆಂಡತಿಗಳಿಂದಲೂ. ಸೇವಿತಂ-ಸೇವಿಸಲ್ಪಟ್ಟ, ಶ್ರಿಯಾ-ಶೋಭೆಯಿಂದ, ಆವೃತಂ-ಸುತ್ತಿಕೊಳ್ಳಲ್ಪಟ್ಟ, ಅಮೃತಾಶಿಭಿಃ-ಅಮೃತವೇ ಅಶನವಾಗುಳ್ಳ, ದೇವದಾನವಸಂಘೈಶ್ಚ-ದೇವರಾಕ್ಷಸರ ತಂಡಗಳಿಂದ, ಚರಿತಂ-ಸಂಚರಿಸಲ್ಪಟ್ಟ. ಹಂಸಕ್ರೌಂಚಪ್ಲವಾಕೀರ್ಣಂ-ಹಂಸಪಕ್ಷಿಗಳಿಂದಲೂ ಕ್ರೌಂಚಪಕ್ಷಿಗಳಿಂದಲೂ ನೀರುಕೋಳಿಗಳಿಂದಲೂ ತುಂಬಿರುವ, ಸಾರಸೈಃ-ಸಾರಸಪಕ್ಷಿಗಳಿಂದ. ಸಂಪ್ರಣಾದಿತಂ-ಧ್ವನಿಗೊಳಿಸುತ್ತಿರುವ. ವೈಡೂರ್ಯಪ್ರಸ್ತರಂ-ವೈಡೂರ್ಯಮಣಿಗಳ ವಿಕಾರವಾದ ಪಾಷಾಣಗಳುಳ್ಳ, ಸಾಗರತೇಜಸಾ-ಸಮುದ್ರದ ತೇಜಸ್ಸಿನಿಂದ. ಸ್ನಿಗ್ಧಂ-ಮನೋಹರವಾದ, ರಮ್ಯಂ-ಮನಸ್ಸಿಗಿಂಪಾಗಿರುವ ಸಾಗರಾನೂಪಂ-ಸಮುದ್ರದ ಜಲಪ್ರಾಯಭೂಮಿಯನ್ನು. ಅವಲೋಕಯನ್-ನೋಡುತ್ತಿರುವವನಾಗಿ, ಪಾಂಡುರಾಣಿ-ಬೆಳ್ಳಗಿರುವ, ವಿಶಾಲಾನಿ-ವಿಸ್ತಾರಗಳಾದ, ದಿವ್ಯಮಾಲ್ಯಯುತಾನಿಚ-ದೇವತಾಸಂಬಂಧವಾದ ಪುಷ್ಪಮಾಲಿಕೆಗಳಿಂ ಕೂಡಿಕೊಂಡಿರುವ, ತೂರ್ಯಗೀತಾಭಿಜುಷ್ಟಾನಿ-ಭೇರಿಗಳ ಧ್ವನಿಗಳಿಂದಲೂ ಗಾನಧ್ವನಿಗಳಿಂದಲೂ ಕೂಡಿಕೊಂಡಿರುವ. ಸಮಂತತಃ-ಎಲ್ಲಾಕಡೆಯಲ್ಲಿ, ತಪಸಾ-ತಪಸ್ಸಿನಿಂದ, ಜಿತಲೋಕಾನಾಂ-ಜಯಿಸಲ್ಪಟ್ಟ ಪರಲೋಕಗಳುಳ್ಳ ಋಷಿಗಳ, ಕಾಮಗಾನಿ-ಇಷ್ಟಾನುಸಾರವಾಗಿ ಹೋಗುತ್ತಿರುವ, ವಿಮಾನಾನಿಚ-ವಿಮಾನಗಳನ್ನು. ಅಭಿಸಂಪತನ್-ದಾಟಿದವನಾಗಿ. ಧನದಾನುಜಃ-ಕುಬೇರನ ತಮ್ಮನಾದ ರಾವಣನು, ಗಂಧರ್ವಾಪ್ಸರಸಶ್ಚೈವ-ಅಪ್ಸರಸ್ತ್ರೀಯರುಗಳನ್ನೂ ಗಂಧರ್ವರನ್ನೂ. ದದರ್ಶ-ಕಂಡನು ॥೨೦॥ ನಿರ್ಯಾಸರಸಮೂಲಾನಾಂ-ಹಿಂಗೂರಸಯುಕ್ತವಾದ ಔಷಧಿಮೂಲಗಳ, ಸಹಸ್ರಶಃ-ಸಾವಿರಾರು. ಚಂದನಾನಾಂ-ಶ್ರೀಗಂಧದ ವೃಕ್ಷಗಳ, ಸೌಮ್ಯಾನಿ-ಮನೋಹರಗಳಾದ, ಘ್ರಾಣತೃಪ್ತಿಕರಾಣಿಚ-ಮೂಗಿಗೆ ಸಂತೋಷಗೊಳಿಸುತ್ತಿರುವ, ವನಾನಿ-ವನಗಳನ್ನು. ಪಶ್ಯನ್-ನೋಡುತ್ತಿರುವವನಾಗಿ, ಮುಖ್ಯಾ

---

ತೆಂಗಿನ ಮೊದಲಿಂದಲೂ, ಮತ್ತು " ಸಾಲ, ತಾಲ, ತಮಾಲ, ನಾಗ, " ಎಂಬಿವುಗಳೇ ಮೊದಲಾದ ಅನೇಕವೃಕ್ಷಂಗಳಿಂದಲೂ, " ಗರುಡ, ಗಂಧರ್ವ, ಕಿನ್ನರ, ವೈಖಾನಸ, ವಾಲಖಿಲ್ಯ, ಮರೀಚಿಪಾದಿ ಮಹಾ ಮುನಿಗಳಿಂದಲೂ ಸಹ ಯುಕ್ತವಾಗಿಯೂ, ಮತ್ತು ಜಯಿಸಲ್ಪಟ್ಟ ಕಾಮಗುಣಗಳುಳ್ಳ, ಸಿದ್ಧ, ಚಾರಣರಿಂದಲೂ, ದಿವ್ಯವಾದ ಆಭರಣಂಗಳೂ ಪುಷ್ಪಂಗಳೂ ಸಹ ಉಳ್ಳ ಅನೇಕರಾದ ಅಪ್ಸರಸ್ತ್ರೀಯರಿಂದ ತುಂಬಿರುವದಾಗಿಯೂ, ಬಹು ಬೆಳಗುವ ದೇವತಾಸ್ತ್ರೀಯರಿಂದ ದೇವಗಣಂಗಳಿಂದಲೂ ಸಹ ಸಂಚರಿಸಲ್ಪಡುವದಾಗಿಯೂ, ಮತ್ತು, ಹಂಸ, ಕ್ರೌಂಚ, ಸಾರಸಾದಿ, ಪಕ್ಷಿಗಳಿಂದ ಶಬ್ದಾಯಮಾನವಾಗಿಯೂ, ವೈಡೂರ್ಯ ಮಣಿಗಳ ವಿಕಾರವಾದ ಪಾಷಾಣಂಗಳುಳ್ಳದ್ದಾಗಿಯೂ, ಸಮುದ್ರದ ತೇಜಸ್ಸಿನಿಂದ ಮನೋಹರವಾಗಿಯೂ ಇರುವ ಸಮುದ್ರದ ಜಲಪ್ರಾಯ ಭೂಮಿಯನ್ನುಂ ನೋಡುತ್ತಾ, ಶುಭ್ರವಾದ ವಿಸ್ತಾರವಾಗಿರುವ ಮತ್ತು ಉತ್ತಮವಾದ ಪುಷ್ಪಂಗಳಿಂದ ಯುಕ್ತವಾಗಿರುವ ಮಹಾ ಮುನಿಗಳ ವಿಮಾನಂಗಳಂ ದಾಟಿದಬಳಿಕ ಗಂಧರ್ವ ಸ್ತ್ರೀಯರನ್ನೂ ಸಹ ಕಂಡನು ॥೨೦॥

ವನಾನಿಚ । ತಕ್ಕೋಲಾನಾಂಚಜಾತ್ಯಾನಾಂಫಲಾನಾಂಚಸುಗಂಧಿನಾಂ । ಪುಷ್ಪಾಣಿಚತಮಾಲಸ್ಯಗುಲ್ಮಾನ್ಮರಿಚ
ಸ್ಯಚ । ಮುಕ್ತಾನಾಂಚಸಮೂಹಾನಿಶುಷ್ಯಮಾಣಾನಿತೀರತಃ । ಶಂಖಾನಾಂಪ್ರಸ್ತರಂಚೈವಪ್ರವಾಳನಿಚಯಂತ
ಥಾ । ಕಾಂಚನಾನಿಚಶೈಲಾನಿರಾಜತಾನಿಚಸರ್ವಶಃ । ಪ್ರಸ್ರವಾಣಿಮನೋಜ್ಞಾನಿಪ್ರಸನ್ನಾನಿಹ್ರದಾನಿಚ । ಧನಧಾನ್ಯೋ
ಪಪನ್ನಾನಿಸ್ತ್ರೀರತ್ನೈಶ್ಶೋಭಿತಾನಿಚ । ಹಸ್ತ್ಯಶ್ವರಥಗಾಢಾನಿನಗರಾಣ್ಯವಲೋಕಯನ್ । ತಂಸಮಂಸರ್ವತಸ್ಸ್ನಿ
ಗ್ಧಂಮೃದುಸಂಸ್ಪರ್ಶಮಾರುತಂ । ಅನೂಪಂಸಿಂಧುರಾಜಸ್ಯದದರ್ಶತ್ರಿದಿವೋಪಮಂ ।೨೬। ತತ್ರಾಪಶ್ಯತ್ಸಮೇ
ಘಾಭಂನ್ಯಗ್ರೋಧಮೃಷಿಭಿರ್ವೃತಂ । ಸಮಂತಾದ್ಯಸ್ಯತಾಶ್ಶಾಖಾಶ್ಶತಯೋಜನಮಾಯತಾಃ ।೨೭। ಯಸ್ಯಹಸ್ತಿ
ನಮಾದಾಯಮಹಾಕಾಯಂಚಕಚ್ಛಪಂ । ಭಕ್ಷಾರ್ಥಂಗರುಡಶ್ಶಾಖಾಮಾಜಗಾಮಮಹಾಬಲಃ । ತಸ್ಯತಾಂಸಹಸಾ
ಶಾಖಾಂಭಾರೇಣಪತಗೋತ್ತಮಃ । ಸುಪರ್ಣಃಪರ್ಣಬಹುಳಾಂಬಭಂಜಚಮಹಾಬಲಃ ।೨೮। ತತ್ರವೈಖಾನಸಾಮಾಷಾ

---

ನಾಂ-ಶ್ರೇಷ್ಠಗಳಾದ, ಅಗರೂಣಾಂಚ-ಕೃಷ್ಣಾಗರುಗಿಡಗಳ, ವನಾನಿ-ವನಗಳನ್ನೂ, ಉಪವನಾನಿ-ಉದ್ಯಾನವನಗಳನ್ನೂ, ಪಶ್ಯನ್-ನೋಡುತ್ತಿರುವವನಾಗಿ, ಜಾತ್ಯಾನಾಂ-ಒಳ್ಳೇಜಾತಿಯುಳ್ಳ, ತಕ್ಕೋಲಾನಾಂ-ಗಂಧದ್ರವ್ಯದ ವೃಕ್ಷಗಳ, ಸುಗಂಧಿನಾಂ-ಒಳ್ಳೇವಾಸನೆಯುಳ್ಳ, ಫಲಾನಾಂಚ-ಫಲಗಳ, ಉಪವನಾನಿಚ-ತೋಟಗಳನ್ನೂ, ತಮಾಲಸ್ಯ-ಹೊಂಗೇಗಿಡಗಳ, ಪುಷ್ಪಾಣಿಚ-ಪುಷ್ಪಗಳನ್ನೂ, ಮರಿಚಸ್ಯ-ಶೊಂಠಿಯ, ಗುಲ್ಮಾನಿ-ಪೊದೆಗಳನ್ನೂ, ತೀರತಃ-ದಡದಲ್ಲಿ, ಶುಷ್ಯಮಾಣಾನಿ-ಒಣಗಿಹೋಗುತ್ತಿರುವ, ಮುಕ್ತಾನಾಂ-ಮುತ್ತುಗಳ, ಸಮೂಹಾನಿ-ಗುಂಪುಗಳನ್ನೂ, ಶಂಖಾನಾಂ-ಶಂಖಗಳ, ಪ್ರಸ್ತರಂಚೈವ-ಸಮೂಹವನ್ನೂ, ತಥಾ-ಹಾಗೆಯೇ, ಪ್ರವಾಳನಿಚಯಂ-ಹವಳಗಳ ಸಮೂಹವನ್ನೂ, ಕಾಂಚನಾನಿ-ಸುವರ್ಣವಿಕಾರವಾದ, ಶೈಲಾನಿ-ಬೆಟ್ಟಗಳನ್ನೂ, ಸರ್ವಶಃ-ಸಮಸ್ತವಾದ, ರಾಜತಾನಿ-ಬೆಳ್ಳಿವಿಕಾರವಾದ ಬೆಟ್ಟಗಳನ್ನೂ, ಮನೋಜ್ಞಾನಿ-ಮನೋಹರಗಳಾದ, ಪ್ರಸ್ರವಾಣಿ-ಪ್ರವಾಹಗಳನ್ನೂ, ಪ್ರಸನ್ನಾನಿ-ನಿರ್ಮಲಗಳಾದ, ಹ್ರದಾನಿಚ-ಸರೋವರಗಳನ್ನೂ, ಧನಧಾನ್ಯೋಪಪನ್ನಾನಿ-ಧನದಿಂ ಧಾನ್ಯದಿಂ ತುಂಬಿರುವ, ಸ್ತ್ರೀರತ್ನೈಃ-ಶ್ರೇಷ್ಠರಾದ ಸ್ತ್ರೀಯರುಗಳಿಂದ, ಶೋಭಿತಾನಿಚ-ಹೊಳೆಯುತ್ತಿರುವ, ಹಸ್ತ್ಯಶ್ವರಥಗಾಢಾನಿ-ಆನೆಗಳಿಂದ ಕುದುರೆಗಳಿಂದಲೂ ರಥಗಳಿಂದಲೂ ತುಂಬಿರುವ, ನಗರಾಣಿ-ಪುರಗಳನ್ನೂ, ಅವಲೋಕಯನ್-ನೋಡುತ್ತಿರುವವನಾಗಿ, ಸರ್ವತಃ-ಸರ್ವಪ್ರದೇಶಗಳಲ್ಲಿಯೂ, ಸ್ನಿಗ್ಧಂ-ತಂಪಿರುವ, ಮೃದುಸಂಸ್ಪರ್ಶಮಾರುತಂ-ಮೆಲ್ಲನೆ ಮೃದುವಾದ ಸ್ಪರ್ಶವುಳ್ಳ ಗಾಳಿಯುಳ್ಳ, ಸಮಂ-ನಿಮ್ನೋನ್ನತಗಳಿಲ್ಲದಿರುವ, ತ್ರಿದಿವೋಪಮಂ-ಸ್ವರ್ಗಕ್ಕೆ ಸಮಾನವಾದ, ಸಿಂಧುರಾಜಸ್ಯ-ಸಮುದ್ರನ, ತಮನೂಪಂ-ಆ ಜಲಸಮೃದ್ಧಿ ಪ್ರದೇಶವನ್ನೂ, ದದರ್ಶ-ಕಂಡನು ॥೨೬॥ ತತ್ರ-ಆ ಸಮುದ್ರದ ಜಲಪ್ರಾಯಭೂಮಿಯಲ್ಲಿ ಸಃ-ಆ ರಾವಣಾಸುರನು, ಮೇಘಾಭಂ-ಮೇಘದಂತೆ ಕಾಂತಿಯುಳ್ಳ, ಋಷಿಭಿಃ-ಋಷಿಗಳಿಂದ, ವೃತಂ-ಸುತ್ತಿಕೊಳ್ಳಲ್ಪಟ್ಟ, ನ್ಯಗ್ರೋಧಂ-ವಟವೃಕ್ಷವನ್ನೂ, ಅಪಶ್ಯತ್-ಕಂಡನು, ಯಸ್ಯ-ಯಾವ ವಟವೃಕ್ಷದ, ತಾಶ್ಶಾಖಾಃ-ಆ ಕೊಂಬೆಗಳು, ಸಮಂತಾತ್-ಎಲ್ಲಾ ಕಡೆಯಲ್ಲಿಯೂ, ಶತಯೋಜನಮಾಯತಾಃ-ನೂರುಯೋಜನಗಳು ವಿಸ್ತಾರವಾದವುಗಳೋ ॥೨೭॥ ಮಹಾಬಲಃ-ಮಹಾಬಲಿಷ್ಠನಾದ, ಗರುಡಃ-ಗರುತ್ಮಂತನು, ಮಹಾಕಾಯಂ-ದೊಡ್ಡಶರೀರವುಳ್ಳ, ಹಸ್ತಿನಂ-ಆನೆಯನ್ನೂ, ಆದಾಯ-ತೆಗೆದುಕೊಂಡು, ಕಚ್ಛಪಂಚ-ಆಮೆಯನ್ನೂ, ಭಕ್ಷಾರ್ಥಂ-ಭಕ್ಷಣಾರ್ಥವಾಗಿ, ಆದಾಯ-ತೆಗೆದುಕೊಂಡು, ಯಸ್ಯ-ಯಾವ ವಟವೃಕ್ಷದ ಶಾಖಾಂ-ಕೊಂಬೆಯನ್ನು ಕುರಿತು, ಆಜಗಾಮ-ಬಂದನೋ. ಮಹಾಬಲಃ-ಮಹಾಸಾಮರ್ಥ್ಯವಂತನಾದ, ಪತಗೋತ್ತಮಃ-ಪಕ್ಷಿಶ್ರೇಷ್ಠನಾದ, ಸುಪರ್ಣಃ-ಗರುಡನು, ಪರ್ಣಬಹುಳಾಂ-ಎಲೆಗಳಿಂ ತುಂಬಿರುವ, ತಸ್ಯ-ಆ ವಟವೃಕ್ಷದ, ತಾಂಶಾಖಾಂ-ಆ ಕೊಂಬೆಯನ್ನು ಭಾರೇಣ-ಭಾರದಿಂದ, ಸಹಸಾ-ಜಾಗ್ರತೆಯಾಗಿ, ಬಭಂಜ-ಮುರಿದನು ॥೨೮॥ ತತ್ರ-ಆ ಕೊಂಬೆಯಲ್ಲಿ ವೈಖಾನಸಾಃ-

---

ಅನಂತರದಲ್ಲಿ ಆ ರಾವಣಾಸುರನು ಹಿಂಗುವಿನ ರಸದಿಂದ ಯುಕ್ತವಾದ ಲತೆಗಳಿಂದ, ಶ್ರೀಗಂಧ ವೃಕ್ಷಂಗಳಿಂದಲೂ, ಸಹ ಸುವಾಸನೆಯಾಗಿರುವ ವನಂಗಳನ್ನು ನೋಡುತ್ತಾ ಅಗರು ವೃಕ್ಷಂಗಳ ವನಗಳನ್ನೂ, ಫಲಭರಿತವಾದ ವೃಕ್ಷಂಗಳುಳ್ಳ ತೋಟಗಳನ್ನೂ, ತಮಾಲವೃಕ್ಷಂಗಳನ್ನೂ, ಶೊಂಠಿಯ ಪೊದೆಗಳನ್ನೂ, ಮುತ್ತುಗಳ ಗುಂಪು ಗುಂಪುಗಳನ್ನೂ, ಶಂಖಗಳ ತಂಡಗಳನ್ನೂ, ಸುವರ್ಣ ವಿಕಾರವಾದ ಪರ್ವತಂಗಳನ್ನೂ, ರಜತದ ಗಿರಿಗಳನ್ನೂ, ಮನೋಹರವಾದ ಪ್ರವಾಹಗಳನ್ನೂ, ನಿರ್ಮಲವಾದ ಸರೋವರಂಗಳನ್ನೂ, ಧನಧಾನ್ಯ ಸಮೃದ್ಧವಾಗಿಯೂ ಉತ್ತಮಸ್ತ್ರೀಯರಿಂದ ಹೊಳೆವುದಾಗಿಯೂ, ಚತುರಂಗ ಬಲಸಮೇತವಾಗಿಯೂ, ಇರುವ ಅನೇಕಪಟ್ಟಣಗಳಂ ನೋಡುತ್ತಾ ಮನೋಹರವಾದ ಸಮುದ್ರದಲ್ಲಿ ಆ ಜಲಸಮೃದ್ಧ ಪ್ರದೇಶವಂ ಕಂಡನು।೨೬। ಆ ಪ್ರದೇಶದಲ್ಲಿ ರಾವಣಾಸುರನು, ಮೇಘಸದೃಶವಾದ ಮಹಾ ಮುನಿಗಳಿಂದ ಯುಕ್ತವಾದ, ಮತ್ತು ನೂರು ಯೋಜನಗಳವರಿಗೂ ವ್ಯಾಪಿಸಿದ ಕೊಂಬೆಗಳುಳ್ಳ ವಟವೃಕ್ಷವಂ ಕಂಡನದೆಂತೆನೆ,— ।೨೭। ಪೂರ್ವಕಾಲದಲ್ಲಿ ಬಲಿಷ್ಠನಾದ ಗರುಡನು ಮಹಾ ಶರೀರವುಳ್ಳ ಆನೆಯನ್ನೂ ಆಮೆಯನ್ನೂ ಸಹ ಭಕ್ಷಣಾರ್ಥವಾಗಿ ತೆಗೆದುಕೊಂಡು, ಯಾವಶಾಖೆಯಂ ಕುರಿತು ಬಂದವನಾದನೋ, ಎಲೆಗಳಿಂದ ತುಂಬಿರುವ ಆ ಶಾಖೆಯು ಮುರಿದುಹೋಯಿತು ।೨೮। ಆ ಶಾಖೆಯಲ್ಲಿ

ಷಾವಾಲಖಿಲ್ಯಾಮರೀಚಿಪಾಃ । ಅಜಾಬಭೂವುರ್ಧೂಮ್ರಾಶ್ಚಸಂಗತಾಃಪರಮರ್ಷಯಃ । ತೇಷಾಂದಯಾರ್ಥಂಗರುಡ
ಸ್ತಾಂಶಾಖಾಂಶತಯೋಜನಾಂ । ಜಗಾಮಾದಾಯವೇಗೇನತೌಚೋಭೌಗಜಕಚ್ಛಪೌ ॥೩೧॥ ಏಕಪಾದೇನಧರ್ಮಾತ್ಮಾ
ಭಕ್ಷಯಿತ್ವಾತದಾಮಿಷಂ । ನಿಷಾದವಿಷಯಂಹತ್ವಾಶಾಖಯಾಪತಗೋತ್ತಮಃ । ಪ್ರಹರ್ಷಮತುಲಂಲೇಭೇಮೋಕ್ಷಯಿ
ತ್ವಾಮುನೀನ್ ॥೩೩॥ ಸತೇನೈವಪ್ರಹರ್ಷೇಣದ್ವಿಗುಣೀಕೃತವಿಕ್ರಮಃ । ಅಮೃತಾನಯನಾರ್ಥಂವೈಚಕಾರ
ಮತಿಮಾನ್ಮತಿಂ । ಅಯೋಜಾಲಾನಿನಿರ್ಮಥ್ಯಭಿತ್ವಾರತ್ನಮಯಂಗೃಹಂ । ಮಹೇಂದ್ರಭವನಾದ್ಗುಪ್ತಮಾಜಹಾರಾ
ಮೃತಂತತಃ ॥೩೫॥ ತಂಮಹರ್ಷಿಗಣೈರ್ಜುಷ್ಟಂಸುಪರ್ಣಕೃತಲಕ್ಷಣಂ । ನಾಮ್ನಾಸುಭದ್ರಂನ್ಯಗ್ರೋಧಂದದರ್ಶ
ಧನದಾನುಜಃ ॥೩೬॥ ತಂತುಗತ್ವಾಪರಂಪಾರಂಸಮುದ್ರಸ್ಯನದೀಪತೇಃ । ದದರ್ಶಾಶ್ರಮಮೇಕಾಂತೇರಮ್ಯೇಪುಣ್ಯೇವ
ನಾಂತರೇ ॥೩೭॥ ತತ್ರಕೃಷ್ಣಾಜಿನಧರಂಜಟಾವಲ್ಕಲಧಾರಿಣಂ । ದದರ್ಶನಿಯತಾಹಾರಂಮಾರೀಚಂನಾಮರಾಕ್ಷಸಂ ।

---

ವೈಖಾನಸರೆಂಬ. ಮಾಷಾಃ-ಪೂತಿಮಾಷಗೋತ್ರೋತ್ಪನ್ನರಾದ, ಯದ್ವಾ-ಮಾಷಾಃ-ಮಾಷಧಾನ್ಯಪ್ರಮಾಣವುಳ್ಳ, ವಾಲಖಿಲ್ಯಾಃ-ವಾಲಖಿಲ್ಯರು,
ಮರೀಚಿಪಾಃ-ಸೂರ್ಯನಕಿರಣವನ್ನು ಪಾನಮಾಡುವವರೂ, ಅಜಾಃ-ಅಯೋನಿಜರಾದ, ಧೂಮ್ರಾಃ-ಧೂಮಪಾನಮಾಡುವವರೂ ಎಂಬ, ಪರಮರ್ಷ
ಯಃ-ಎಲ್ಲಾ ಋಷಿಗಳೂ ಸಂಗತಾಃ-ಸೇರಿರುವವರು ಬಭೂವುಃ-ಆದರು ॥೩೦॥ ಗರುಡಃ-ಗರುಡನು, ತೇಷಾಂ-ಆ ಋಷಿಗಳಿಗೆ, ದಯಾರ್ಥಂ-
ದ ನುವಾಗುವ ನಿಮಿತ್ತವಾಗಿ, ತೌ-ಆ, ಉಭೌ ಗಜಕಚ್ಛಪೌ-ಗಜಕೂರ್ಮಗಳೆರಡನ್ನೂ, ಶತಯೋಜನಾಂ-ನೂರು ಯೋಜನಗಳುಳ್ಳ, ಶಾ
ಖಾಂ-ಆ ಕೊಂಬೆಯನ್ನೂ, ಆದಾಯ-ತೆಗೆದುಕೊಂಡು. ಜವೇನ-ವೇಗದಿಂದ, ಜಗಾಮ-ತೆರಳಿದನು ॥೩೧॥ ಧರ್ಮಾತ್ಮಾ-ಧರ್ಮಿಷ್ಠನಾದ, ಪತ
ಗೋತ್ತಮಃ-ಗರುಡನು, ಏಕಪಾದೇನ-ಒಂದು ಪಾದದಿಂದ, ತದಾಮಿಷಂ-ಆ ಗಜಕೂರ್ಮಗಳ ಮಾಂಸವನ್ನು ಭಕ್ಷಯಿತ್ವಾ-ಭಕ್ಷಣೆಮಾಡಿ, ಶಾಖಯಾ-
ಕೊಂಬೆಯಿಂದ. ನಿಷಾದವಿಷಯಂ-ಬ್ಯಾಡರಪ್ರದೇಶವನ್ನು, ಹತ್ವಾ-ಕೊಂದು, ಮಹಾಮುನೀನ್-ಋಷಿಗಳನ್ನು, ಮೋಕ್ಷಯಿತ್ವಾ-ಬಿಡಿಸಿ, ಅತುಲಂ-
ಸಮಾನವಿಲ್ಲದ- ಪ್ರಹರ್ಷಂ-ಸಂತೋಷವನ್ನು ಲೇಭೆ-ಪಡೆದನು ॥೩೩॥ ಮತಿಮಾನ್-ಬುದ್ಧಿವಂತನಾದ, ಸಃ-ಆ ಗರುಡನು, ತೇನಪ್ರಹರ್ಷೇಣೈವ-ಆ
ಸಂತೋಷದಿಂದಲೇ, ದ್ವಿಗುಣೀಕೃತವಿಕ್ರಮಃ-ಎರಡರಷ್ಟು ಮಾಡಲ್ಪಟ್ಟ ಪರಾಕ್ರಮವುಳ್ಳವನಾಗಿ, ಅಮೃತಾನಯನಾರ್ಥಂ-ಅಮೃತಕಲಶವಂತ
ರುವ ನಿಮಿತ್ತವಾಗಿ, ಮತಿಂ-ಬುದ್ಧಿಯನ್ನು, ಚಕಾರ-ಮಾಡಿದನು ॥೩೪॥ ಅಯೋಜಾಲಾನಿ-ಕಬ್ಬಿಣದ ವಿಕಾರವಾದ ಬಲೆಗಳನ್ನು, ನಿರ್ಮಥ್ಯ-ಒಡದು,
ರತ್ನಮಯಂ-ರತ್ನವಿಕಾರವಾದ, ಗೃಹಂ-ಮನೆಯನ್ನು, ಭಿತ್ವಾ-ಭೇದಿಸಿ, ಗುಪ್ತಂ-ಸಂರಕ್ಷಣೆಮಾಡಲ್ಪಟ್ಟ, ಅಮೃತಂ-ಅಮೃತವನ್ನು, ತತಃ-
ಬಳಿಕ, ಮಹೇಂದ್ರಭವನಾತ್-ದೇವೇಂದ್ರನ ಮನೆಯದೆಸೆಯಿಂದ, ಆಜಹಾರ-ತೆಗೆದುಕೊಂಡುಬಂದನು ॥೩೫॥ ಮಹರ್ಷಿಗಣೈಃ-ಮಹಾಋಷಿಗಳತಂಡ
ಗಳಿಂದ ಜುಷ್ಟಂ-ತುಂಬಿರುವ. ಸುಪರ್ಣಕೃತಲಕ್ಷಣಂ-ಸುಪರ್ಣ-ಗರುಡನಿಂದ, ಕೃತ-ಮಾಡಲ್ಪಟ್ಟ, ಲಕ್ಷಣಂ-ಶಾಖಾಭಂಗರೂಪ ಗುರುತುಳ್ಳ
ನಾಮ್ನಾ-ಹೆಸರಿನಿಂದ, ಸುಭದ್ರಂ-ಸುಭದ್ರವೆಂಬ, ನ್ಯಗ್ರೋಧಂ-ಆಲದಮರವನ್ನು, ಧನದಾನುಜಃ-ರಾವಣಾಸುರನು, ದದರ್ಶ-ಕಂಡನು ॥೩೬॥
ತಂ-ಆ ಈ, ನದೀಪತೇಃ-ನದಿಗಳಿಗೆಲ್ಲಾ ಪತಿಯಾದ, ಸಮುದ್ರಸ್ಯ-ಕಡಲಿನ, ತಂ-ಆ, ಪರಂಪಾರಂ-ಪರತೀರವನ್ನು, ಗತ್ವಾ-ಹೊಂದಿ, ರಮ್ಯೇ-ಮನೋ
ಹರವಾದ, ಪುಣ್ಯೇ-ಪುಣ್ಯಕರವಾದ, ವನಾಂತರೇ-ವನಮಧ್ಯದಲ್ಲಿ, ಏಕಾಂತೇ-ರಹಸ್ಯದಲ್ಲಿ. ಆಶ್ರಮಂ-ಆಶ್ರಮವನ್ನು ದದರ್ಶ-ಕಂಡನು ॥೩೭॥

---

ವೈಖಾನಸರೂ, ವಾಲಖಿಲ್ಯರು ಪೂತಿಮಾಷಗೋತ್ರೋತ್ಪನ್ನರು, ಮರೀಚಿಪರು ಎಂಬ ಋಷಿಗಳು ಸೇರಿದ್ದ
ರು ॥೩೦॥ ಆಗ ಗರುಡನು ಆ ಮುನಿಗಳಿಗೆ ದಯೆಯಂ ಗೈಯ್ಯಲಿಚ್ಛೈಸಿದವನಾಗಿ ಆಹಾರಾರ್ಥವಾಗಿ ತಾನು
ತಂದಿದ್ದ ಆ ಗಜಕೂರ್ಮಂಗಳಂ,ನೂರು ಗಾವುದಉದ್ದವಾಗಿರುವ ಆ ಕೊಂಬೆಯನ್ನೂ ಸಹ ತೆಗೆದುಕೊಂಡು ವೇಗದಿಂ
ಸಾರಿದನದೆಂತೆನೆ,—॥೩೧॥ ಧರ್ಮಾತ್ಮನಾದ ಗರುಡನು ಒಂದು ಪಾದದಿಂದ ಆ ಗಜಕೂರ್ಮಂಗಳ ಮಾಂ
ಸವನ್ನು ಗ್ರಾಸಂಗಯ್ದು, ಬೇಡರ ಪಾಳ್ಯವಂ ಕುಟ್ಟಿಕೆಡವಿ, ಆ ಮಹರ್ಷಿಗಳಂ ಬಿಡಿಸಿ ಅಸದೃಶವಾದ ಸಂತಸವನ್ನೈ
ದಿದನು ॥೩೩॥ ಮಹಾ ತಿಳುವಳಿಕೆಯುಳ್ಳ ಆ ಗರುಡನು ಆ ಸಂತೋಷದಿಂದ ದ್ವಿಗುಣೀಕೃತವಾದ ಪರಾಕ್ರ
ಮವುಳ್ಳವನಾಗಿ, ಅಮೃತ ಕಲಶವಂ ತರುವದಕ್ಕಾಗಿ ಬುದ್ಧಿಯಂ ಗೈದು, ಕಬ್ಬಿಣದ ವಿಕಾರವಾದ ಬಲೆಗಳಂ
ಹೊಡದು, ರತ್ನವಿಕಾರವಾದ ಮಂದಿರವಂ ಭಂಜನೆಯಂ ಗೈದು, ಆ ಅಮೃತವಿಕಾರವಾದ ಕಲಶವನ್ನು, ಇಂ
ದ್ರನ ಭವನದಿಂದ ತೆಗೆದುಕ್ಕೊಂಡು ಬಂದನು ॥೩೫॥ ಮಹಾ ಮುನಿಗಳಿಂದ ತುಂಬಿರುವ ಮತ್ತು ಗರುಡ
ನಿಂದ ಮಾಡಲ್ಪಟ್ಟ ಶಾಖಾಭಂಗರೂಪವಾದ ಗುರ್ತುಳ್ಳ, ಸುಭದ್ರವೆಂದು ಪ್ರಖ್ಯಾತವಾದ ಆ ಆಲದ ಮರವನ್ನು
ದಶಕಂಠನು ಕಂಡವನಾದನು ॥೩೬॥ ಅನಂತರದಲ್ಲಿ ರಾವಣಾಸುರನು ನದೀ ಪತಿಯಾದ ಸಮುದ್ರನ ಪರತೀರ
ವನ್ನೈದಿ, ಮನೋಹರವಾದ ಪುಣ್ಯಕರವಾಗಿರುವ ವನಮಧ್ಯದಲ್ಲಿ ಏಕಾಂತಸ್ಥಳದಿ ಆಶ್ರಮವಂ ಕಂಡನು ॥೩೭॥

ಸರಾವಣಸ್ಸಮಾಗಮ್ಯವಿಧಿವತ್ತೇನರಕ್ಷಸಾ । ಮಾರೀಚೇನಾರ್ಚಿತೋರಾಜಾಸರ್ವಕಾಮೈರಮಾನುಷೈಃ ॥೩೯॥
ತಂಸ್ವಯಂಪೂಜಯಿತ್ವಾತುಭೋಜನೇನೋದಕೇನಚ । ಅರ್ಥೋಪಹಿತಯಾವಾಚಾಮಾರೀಚೋವಾಕ್ಯಮಬ್ರವೀತ್॥೪೦॥
ಕಚ್ಚಿತ್ಸುಕುಶಲಂರಾಜಲ್ಲಂಕಾಯಾಂರಾಕ್ಷಸೇಶ್ವರ । ಕೇನಾರ್ಥೇನಪುನಸ್ತ್ವಂವೈತೂರ್ಣಮೇವಮಿಹಾಗತಃ ॥೪೧॥
ಏವಮುಕ್ತೋಮಹಾತೇಜಾಮಾರೀಚೇನಸರಾವಣಃ । ತತಃಪಶ್ಚಾದಿದಂವಾಕ್ಯಮಬ್ರವೀದ್ವಾಕ್ಯಕೋವಿದಃ ॥೪೨॥

—**ಇತಿಶ್ರೀಮದಾರಣ್ಯಕಾಂಡೆ-ಪಂಚತ್ರಿಂಶಸ್ಸರ್ಗಃ॥ **—

ಮಾರೀಚಶ್ರೂಯತಾಂತಾತವಚನಂಮಮಭಾಷತಃ।ಆರ್ತೋಸ್ಮಿಮಮಚಾರ್ತಸ್ಯಭವಾನ್ಹಿಪರಮಾಗತಿಃ ॥೧॥
ಜಾನೀಷೇತ್ವಂಜನಸ್ಥಾನೆಯಥಾಭ್ರಾತಾಖರೋಮಮ । ದೂಷಣಶ್ಚಮಹಾಬಾಹುಸ್ಸ್ವಸಾಶೂರ್ಪಣಖಾಚಮೇ । ತ್ರಿಶಿ
ರಾಶ್ಚಮಹಾತೇಜಾರಾಕ್ಷಸಃಪಿಶಿತಾಶನಃ । ಅನ್ಯೇಚಬಹವಶ್ಶೂರಾಲಬ್ಧಲಕ್ಷಾನಿಶಾಚರಾಃ । ವಸಂತಿಮನ್ನಿಯೋಗೇನಅಧಿ

ತತ್ರ-ಆ ಪರ್ಣಶಾಲೆಯಲ್ಲಿ.ಕೃಷ್ಣಾಜಿನಧರಂ-ಜಿಂಕೆಯ ಚರ್ಮವಂಧರಿಸಿರುವ. ಜಟಾವಲ್ಕಲಧಾರಿಣಂ-ಜಡೆಗಳಂ ನಾರುಮಡಿಯನ್ನುಧರಿಸಿರುವ, ನಿಯ
ತಾಹಾರಂ-ಕ್ಲುಪ್ತವಾದ ಆಹಾರವುಳ್ಳ, ಮಾರೀಚಂನಾಮ-ಮಾರೀಚನೆಂದು ಪ್ರಸಿದ್ಧನಾದ, ರಾಕ್ಷಸಂ-ರಕ್ಕಸನನ್ನು, ದದರ್ಶ-ಕಂಡನು ॥೩೮॥ ಸರಾ
ವಣಃ-ಆ ರಾವಣನೆಂಬ, ರಾಜಾ-ಅರಸು, ತೇನರಾಕ್ಷಸಾ-ಆ ಮಾರೀಚನೊಡನೆ. ಸಮಾಗಮ್ಯ-ಸೇರಿ, ವಿಧಿವತ್-ಯಥಾಶಾಸ್ತ್ರವಾಗಿ, ಅಮಾನುಷೈಃ
ಮನುಷ್ಯರಿಗೆ ಅಸಾಧ್ಯವಾದ, ಸರ್ವಕಾಮೈಃ-ಸಮಸ್ತಕೋರಿಕೆಗಳಿಂದಲೂ. ಅರ್ಚಿತಃ-ಪೂಜೆಮಾಡಲ್ಪಟ್ಟನು ॥೩೯॥ ಮಾರೀಚಃ-ಮಾರೀಚನು
ತಂ-ಆ ರಾವಣಾಸುರನನ್ನು, ಸ್ವಯಂ-ತಾನು, ಭೋಜನೇನ-ಭೋಜನದಿಂದ, ಉದಕೇನ-ಉದಕದಿಂದ, ಪೂಜಯಿತ್ವಾ-ಪೂಜೆಮಾಡಿ,ಅರ್ಥೋಪಹಿತಯಾ
ಅರ್ಥದಿಂಗಂಭೀರವಾದ, ವಾಚಾ-ಮಾತಿನಿಂದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೪೦॥ ಹೇರಾಜನ್-ಎಲೈ ರಾಜನೇ, ಲಂಕಾಯಾಂ-ಲಂಕಾ
ಪುರದಲ್ಲಿ, ಸುಕುಶಲಂಕಚ್ಚಿತ್-ಒಳ್ಳೇಕ್ಷೇಮವೇಯೇನು, ಹೇರಾಕ್ಷಸೇಶ್ವರ-ಎಲೈ ರಕ್ಕಸಾಧಿಪತಿಯೇ, ಕೇನಾರ್ಥೇನ-ಯಾವಕಾರ್ಯಪ್ರಯೋಜನದಿಂದ. ಪುನಃ-
ಮತ್ತು, ತ್ವಂ-ನೀನು, ತೂರ್ಣಮೇವ-ತ್ವರೆಯಾಗಿಯೇ. ಆಗತಃ-ಬಂದವನಾದೆ. ॥೪೧॥ ಮಾರೀಚೇನ-ಮಾರೀಚನಿಂದ. ಏವಂ-ಈಪರಿಯಾಗಿ, ಉಕ್ತಃ-
ಹೇಳಲ್ಪಟ್ಟ. ಮಹಾತೇಜಾಃ-ಮಹಾ ಪರಾಕ್ರಮಶಾಲಿಯಾದ,ವಾಕ್ಯಕೋವಿದಃ-ವಾಕ್ಯಾರ್ಥದಲ್ಲಿ ಬುದ್ಧಿವಂತನಾದ,ಸರಾವಣಃ-ಆ ರಾವಣನು,ತತಃಪಶ್ಚಾತ್-
ಆ ಬಳಿಕ, ಇದಂವಾಕ್ಯಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು॥೪೨॥ —**ಇತಿಶ್ರೀಮದಾರಣ್ಯಕಾಂಡೆ-ಪಂಚತ್ರಿಂಶಸ್ಸರ್ಗಃ **—
ಹೇಮಾರೀಚ-ಎಲೈ ಮಾರೀಚನೇ, ಹೇತಾತ-ಎಲೈ ಅಪ್ಪನೇ. ಭಾಷತಃ-ಮಾತನಾಡುತ್ತಿರುವ, ಮಮ-ನನ್ನ, ವಚನಂ-ಮಾತು, ಶ್ರೂ
ಯತಾಂ-ಕೇಳಲ್ಪಡಲಿ. ಆರ್ತಃ-ದೀನನಾದವನು. ಅಸ್ಮಿ-ಆಗಿದ್ದೇನೆ, ಆರ್ತಸ್ಯ-ಪರಿತಪ್ತನಾದ, ಮಮ-ನನಿಗೆ, ಭವಾನ್-ನೀನೇ, ಪರಮಾಗತಿಃಹಿ-ಪರ
ಮ ಶರಣವಷ್ಟೆ ॥೧॥ ಮಮ-ನನ್ನ, ಭ್ರಾತಾ-ತಮ್ಮನಾದ, ಖರಃ-ಖರನು, ಯಥಾ-ಹ್ಯಾಗೆ, ಹತಃ-ಹತನಾದನೋ, ಯಥಾ-ಹ್ಯಾಗೆ, ಆಸೀತ್-ಆ
ಗಿದ್ದನೋ. ಮಹಾಬಾಹುಃ-ಮಹಾಭುಜ ಪರಾಕ್ರಮಶಾಲಿಯಾದ, ದೂಷಣಶ್ಚ-ದೂಷಣನೂ, ಮೇ-ನನ್ನ. ಸ್ವಸಾ-ತಂಗಿಯಾದ, ಶೂರ್ಪನಖಾಚ-
ಶೂರ್ಪನಖಿಯೂ, ಮಹಾತೇಜಾಃ-ಮಹಾಸಾಮರ್ಥ್ಯವಂತನಾದ, ತ್ರಿಶಿರಾಶ್ಚರಾಕ್ಷಸಃ-ತ್ರಿಶಿರಸ್ಸನೆಂಬ ರಕ್ಕಸನು, ಅನ್ಯೇಚ-ಮತ್ತು ಕೆಲಬರಾದ. ಬಹವಃ-
ಬಹಳ್ಳಮಂದಿಯಾದ, ಶೂರಾಃ-ಶೂರರಾದ. ಲಬ್ಧಲಕ್ಷಾಃ-ಹೊಂದಲ್ಪಟ್ಟ ಲಕ್ಷಭೂಶಶಸ್ತ್ರಗಳುಳ್ಳವರಾದ, ನಿಶಾಚರಾಃ-ರಾತ್ರಿ ಸಂಚಾರಶೀಲರಾದ ರಾಕ್ಷ
ಸಾಃ-ರಕ್ಕಸರು. ಮನ್ನಿಯೋಗೇನ-ನನ್ನಾಜ್ಞೆಯಿಂದ, ಧರ್ಮಚಾರಿಣಃ-ಧರ್ಮವಂಮಾಡುವ, ಮುನೀನ್-ಋಷಿಗಳನ್ನು, ಮಹಾರಣ್ಯೇ-ದಂಡಕಾರಣ್ಯ
ದಲ್ಲಿ. ಬಾಧಮಾನಾಃ-ಹಿಂಸೆಗೊಳಿಸುತ್ತಿರುವವರಾಗಿ, ರತಿವಾಸಂ-ಸಂತೋಷವಾದ ನಿವಾಸವುಳ್ಳದಂತೆ, ಯಥಾ-ಹ್ಯಾಗೆ ಜನಸ್ಥಾನೆ-ಜನಸ್ಥಾನದಲ್ಲಿ, ವಸಂ

ಆ ಆಶ್ರಮದಲ್ಲಿ ಕೃಷ್ಣಾಜಿನವನ್ನೂ ಜಡೆಗಳನ್ನೂ, ನಾರುಮಡಿಗಳನ್ನೂ, ಸಹ ಧರಿಸಿದವನಾಗಿಯೂ,ಕ್ಲುಪ್ತವಾದ
ಆಹಾರವುಳ್ಳವನಾಗಿಯೂ ಇರುವ ಆ ಮಾರೀಚನಂ ಕಂಡು; ರಾವಣನು ಆತನಿಂದ ವಿಧಿವತ್ತಾಗಿ ಪೂಜಿಸಲ್ಪಟ್ಟವ
ನಾದನು ।೩೯। ಅನಂತರದಲ್ಲಿ ಮಾರೀಚನು ಸ್ವಯಮೇವ ಆ ರಾವಣಾಸುರನಿಗೆ ಭೋಜನಾದಿಗಳಿಂದ ಉಪಚರಿ
ಸಿ ಗಂಭೀರವಾದ ವಾಕ್ಕಿನಿಂದ ನುಡಿವನದೆಂತೆನೆ,—।೪೦। ಎಲೈ ರಾಜನೇ! ಲಂಕಾಪುರದಲ್ಲಿ ಯಲ್ಲರು ಕ್ಷೇಮವಾ
ಗಿರುವರೇ ಯೇನು? ಎಲೈ ರಾಕ್ಷಸಾಧಿಪತಿಯೇ! ಯಾತಕ್ಕಾಗಿ ಪುನಃ ತ್ವರೆಯಿಂದ ಬಂದವನಾದೆ? ಯೆಂಬ
ದಾಗಿಮಾರೀಚನಿಂದ ಹೇಳಲ್ಪಟ್ಟವನಾಗಿ ಆ ರಾವಣಾಸುರನು ಅನಂತರದಲ್ಲಿ ಈ ಮಾತಂ ಹೇಳಿದನು ।೪೨।

—* ಅರಣ್ಯಕಾಂಡದಲ್ಲಿನ ೩೫ನೆಯಸರ್ಗಂ ಮುಗಿದುದು *—

ಎಲೋ ಎಲೋ ಅಪ್ಪ, ಮಾರೀಚನೇ! ನನ್ನ ಮಾತನ್ನು ಕೇಳುವವನಾಗು, ನಾನು ಬಹು ದೀನನಾಗಿದ್ದೇನೆ;
ಆರ್ತನಾಗಿರುವ ನನಿಗೆ ನೀನೇಗತಿಯು, ನನ್ನ ತಮ್ಮನಾದ ಖರನು ಹತನಾದದ್ದೂ, ಮತ್ತೂ ಮಹಾ ಭುಜಪರಾ
ಕ್ರಮಶಾಲಿಯಾದ ದೂಷಣನೂ, ಶೂರ್ಪನಖಿಯೂ, ತ್ರಿಸಿರಸ್ಕನೂ, ಮತ್ತೂ ಅನೇಕರಾದ ಶೂರರಾದ ರಾತ್ರಿ
ಸಂಚಾರಶೀಲರಾದ, ರಾಕ್ಷಸರು, ದಂಡಕಾರಣ್ಯದಲ್ಲಿ ಧರ್ಮಾಚರಣವಂ ಗೈಯ್ಯುವ ಮುನಿಗಳನ್ನು ನನ್ನಾಜ್ಞೆ

ವಾ ಪಂಚರಾಕ್ಷಸಾಃ । ಬಾಧಮಾನಾಮಹಾರಣ್ಯೇಮುನೀನ್ವೈಧರ್ಮಚಾರಿಣಃ ॥ ಚತುರ್ದಶಸಹಸ್ರಾಣಿರಕ್ಷಸಾಂ ಭೀಮಕರ್ಮಣಾಂ । ಶೂರಾಣಾಂಲಬ್ಧಲಕ್ಷಾಣಾಂಖರಚಿತ್ತಾನುವರ್ತಿನಾಂ ।೫॥ ತೇತ್ವಿದಾನೀಂಜನಸ್ಥಾನೇವಸಮಾನಾಮಹಾಬಲಾಃ । ಸಂಗತಾಃಪರಮಾಯತ್ತಾರಾಮೇಣಸಹಸಂಯುಗೇ ॥ ನಾನಾಪ್ರಹರಣೋಪೇತಾಃಖರಪ್ರಮುಖರಾಕ್ಷಸಾಃ ।೬॥ ತೇನಸಂಜಾತರೋಷೇಣರಾಮೇಣರಣಮೂರ್ಧನಿ॥ ಅನುಕ್ತ್ವಾಪರುಷಂಕಿಂಚಿಚ್ಛರೈರ್ವ್ಯಾಪಾರಿತಂಧನುಃ। ಚತುರ್ದಶಸಹಸ್ರಾಣಿರಕ್ಷಸಾಮುಗ್ರತೇಜಸಾಂ ॥ ನಿಹತಾನಿಶರೈಸ್ತೀಕ್ಷ್ಣೈರ್ಮಾನುಷೇಣಪದಾತಿನಾ । ಖರಶ್ಚನಿಹತಸ್ಸಂಖ್ಯೇದೂಷಣಶ್ಚನಿಪಾತಿತಃ । ಹತಶ್ಚತ್ರಿಶಿರಾಶ್ಚಾಪಿನಿರ್ಭಯಾದಂಡಕಾಃಕೃತಾಃ ।೯॥ ಪಿತ್ರಾನಿರಸ್ತಃಕ್ರುದ್ಧೇನ ಸ ಭಾರ್ಯಃಕ್ಷೀಣಜೀವಿತಃ ॥ ಸಹಂತಾತಸ್ಯಸೈನ್ಯಸ್ಯರಾಮಃಕ್ಷತ್ರಿಯಪಾಂಸನಃ॥ ದುಶ್ಶೀಲಃಕರ್ಕಶಸ್ತೀಕ್ಷ್ಣೋಮೂರ್ಖೋ

---

ತಿ-ಯಿದ್ದರೋ. ತಥಾ-ಹಾಗೆ, ತ್ವಂ-ನೀನು, ಜಾನೀಷೆ-ತಿಳಿದೇಯಿದ್ದೀಯಿ, ಭೀಮಕರ್ಮಣಾಂ-ರೌದ್ರವ್ಯಾಪಾರವಂತರಾದ ಶೂರಾಣಾಂ-ಶೂರರಾದ ಲಬ್ಧಲಕ್ಷಾಣಾಂ-ಹೊಂದಲ್ಪಟ್ಟ ಲಕ್ಷಗಳುಳ್ಳ, ಖರಚಿತ್ತಾನುವರ್ತಿನಾಂ-ಖರನ ಮನದಂತೆ ಅನುಸರಿಸಿರುವ, ರಕ್ಷಸಾಂ-ರಕ್ಕಸರ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳು. ವಸಂತಿ-ಇದ್ದರು ॥೫॥ ಜನಸ್ಥಾನೇ-ಯಲೆಕಟ್ಟುಭೂಮಿಯಲ್ಲಿ. ವಸಮಾನಾಃ-ಇರುತ್ತಿರುವ, ಮಹಾಬಲಾಃ-ಬಲವಂತರಾದ. ನಾನಾಪ್ರಹರಣೋಪೇತಾಃ-ನಾನಾಬಗೆ ಆಯುಧಗಳಿಂ ಕೂಡಿದ, ಖರಪ್ರಮುಖರಾಕ್ಷಸಾಃ-ಖರನೇ ಮೊದಲಾಗುಳ್ಳ ಆ ರಾಕ್ಷಸರು, ಇದಾನೀಂ-ಈಗ, ರಾಮೇಣಸಹ-ಶ್ರೀರಾಮನೊಡಗೂಡ. ಸಂಗತಾಃ-ಸೇರಿದಪರಾದವರಾದರು ॥೬॥ ರಣಮೂರ್ಧನಿ-ರಣಾಗ್ರದಲ್ಲಿ, ಸಂಜಾತರೋಷೇಣ-ಹುಟ್ಟಿದರೋಷವುಳ್ಳ. ತೇನರಾಮೇಣ-ಆ ಶ್ರೀರಾಮನಿಂದ, ಕಿಂಚಿತ್-ಕೊಂಚವಾದರೂ, ಪರುಷಂ-ಕಠಿನೋಕ್ತಿಯನ್ನು, ಅನುಕ್ತ್ವಾ-ಪೇಳದೇ, ಶರೈಃ-ಬಾಣಗಳಿಂದ. ಧನುಃ-ಧನುಸ್ಸು, ವ್ಯಾಪಾರಿತಂ-ಸಂಧಾನಮೋಕ್ಷಣವ್ಯಾಪಾರವುಳ್ಳದ್ದಾಗಿ ಮಾಡಲ್ಪಟ್ಟಿತು ॥೭॥ ಪದಾತಿನಾ-ಕಾಲುನಡೆಯುಳ್ಳ, ಮಾನುಷೇಣ-ಮನುಷ್ಯನಾದ, ರಾಮೇಣ-ಶ್ರೀರಾಮನಿಂದ, ಉಗ್ರತೇಜಸಾಂ-ಭಯಂಕರಮಾದ ಪರಾಕ್ರಮವುಳ್ಳ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳು, ತೀಕ್ಷ್ಣೈಃ-ಹದವುಳ್ಳ, ಶರೈಃ-ಬಾಣಗಳಿಂದ. ನಿಹತಾನಿ-ಹೆವಡೆಯಲ್ಪಟ್ಟವು ॥೮॥ ಸಂಖ್ಯೇ-ಕಾಳಗದಲ್ಲಿ, ಖರಶ್ಚ-ಖರಾಸುರನು, ನಿಹತಃ-ಸಂಹರಿಸಲ್ಪಟ್ಟನು, ದೂಷಣಶ್ಚ-ದೂಷಣನು, ನಿಪಾತಿತಃ-ಬೀಳಿಸಲ್ಪಟ್ಟನು, ತ್ರಿಶಿರಾಶ್ಚಾಪಿ-ತ್ರಿಶಿರಸ್ಕನೂ ಕೂಡ, ಹತಃ-ಹೊಡೆಯಲ್ಪಟ್ಟನು, ದಂಡಕಾಃ-ದಂಡಕಾವನಗಳು, ನಿರ್ಭಯಾಃ-ಭಯವಿಲ್ಲದವುಗಳಾಗಿ, ಕೃತಾಃ-ಮಾಡಲ್ಪಟ್ಟವು ॥೯॥ ಕ್ರುದ್ಧೇನ-ಕೋಪಿಷ್ಠನಾದ, ಪಿತ್ರಾ-ತಂದೆಯಿಂದ, ನಿರಸ್ತಃ-ಹೊರಡಿಸಲ್ಪಟ್ಟ, ಸಭಾರ್ಯಃ-ಹೆಂಡತಿಯಿಂದೊಡಗೂಡಿದ, ಕ್ಷೀಣಜೀವಿತಃ-ಒಂದು ಕ್ಷಣಕಾಲವು ಬದುಕಿರುವ ಕ್ಷತ್ರಿಯಪಾಂಸನಃ-ನೀಚಕ್ಷತ್ರಿಯನಾದ, ದುಃಶೀಲಃ-ದುಷ್ಟಸ್ವಭಾವವುಳ್ಳ, ಕರ್ಕಶಃ-ಕಠಿನನಾದ, ತೀಕ್ಷ್ಣಃ-ತೀಕ್ಷ್ಣಬುದ್ಧಿಯುಳ್ಳ, ಮೂರ್ಖಃ-ಮೂರ್ಖನಾದ, ಲುಬ್ಧಃ-ಅರ್ಥಲೋಭವುಳ್ಳ, ಅಜಿತೇಂದ್ರಿಯಃ-ಜಿತೇಂದ್ರಿಯನಲ್ಲದಿರುವ, ತ್ಯಕ್ತಧರ್ಮಾ-ಬಿಡಲ್ಪಟ್ಟ ಧರ್ಮಕಾರ್ಯವುಳ್ಳ, ಅಧರ್ಮಾತ್ಮಾ-ಅಧರ್ಮದಲ್ಲೇ ಮನಸ್ಸುಳ್ಳ, ಭೂತಾನಾಂ-ಪ್ರಾಣಿಗಳಿಗೆ, ಅಹಿತೇ-ಅನಿಷ್ಟದಲ್ಲಿ, ರತಃ-ಆಸಕ್ತನಾದ, ಸರಾಮಃ-ಆ ಶ್ರೀರಾಮನು, ತಸ್ಯಸೈನ್ಯಸ್ಯ-ಆಖರಾಸುರನ

---

ಯಂತೆ ಬಾಧಿಸುವವರಾಗಿ, ಸಂತಸದಿಂದ ಜನಸ್ಥಾನದಲ್ಲಿ ವಾಸವಂ ಗೈಯ್ಯುತಲಿದ್ದದ್ದೂ ಸಹ ನಿನಗೆ ತಿಳಿದಿದೆಯಷ್ಟೆ? ಮಹಾ ಭಯಂಕರರಾಗಿರುವ ಮತ್ತು ಖರನ ಇಷ್ಟಾನುಸಾರವಾಗಿ ನಡೆಯುವ ಆ ಹದಿನಾಲ್ಕು ಸಾವಿರ ರಾಕ್ಷಸರು ಜನಸ್ಥಾನದಲ್ಲಿ ಇದ್ದರಲ್ಲವೆ? ಅಂಥಾ ರಾಕ್ಷಸರೆಲ್ಲರು ಶ್ರೀರಾಮನ ಸಂಗಡಸೇರಿ, ಆತನಿಂದ ರಣರಂಗದಲ್ಲಿ ಶರಸಂಧಾನವಂ ಗೈಯ್ಯಲ್ಪಟ್ಟು ಹೊಡೆಯಲ್ಪಟ್ಟರು ॥೮। ಎಲೈ ಮಾರೀಚನೇ! ರಣರಂಗದಲ್ಲಿ ಶೂರನಾದ ಖರಾಸುರನೂ, ದೂಷಣನೂ, ತ್ರಿಶಿರಸ್ಕನೂ ಸಹಾ ಹೊಡೆಯಲ್ಪಟ್ಟರು. ದಂಡಕಾರಣ್ಯವು ನಿರ್ಭಯವಾಗಿ ಮಾಡಲ್ಪಟ್ಟಿತು ।೯॥ ಕುಪಿತನಾದ ತಂದೆಯಿಂದ ಹೊರಡಿಸಲ್ಪಟ್ಟವನಾಗಿಯೂ, ಕ್ಷಣಮಾತ್ರವು ಬದುಕುವವನಾಗಿಯೂ, ಕ್ಷತ್ರಿಯರಲ್ಲಿ ನೀಚನಾಗಿಯೂ, ದುಷ್ಟಸ್ವಭಾವವುಳ್ಳವನಾಗಿಯೂ, ಕಠಿನನಾಗಿಯೂ, ಮೂರ್ಖನಾಗಿಯೂ, ಲುಬ್ಧನಾಗಿಯೂ, ಜಿತೇಂದ್ರಿಯನಲ್ಲದವನಾಗಿಯೂ, ಧರ್ಮವಂ ಬಿಟ್ಟವನಾಗಿಯೂ, ಅಧರ್ಮದಲ್ಲೇ ಮನವುಳ್ಳವನಾಗಿಯೂ, ಪ್ರಾಣಿಗಳಿಗೆ ಅನಿಷ್ಟವಂ ಮಾಡುವವನಾಗಿಯೂ ಇರುವ ಆ ಶ್ರೀರಾಮನು ಆ ನಮ್ಮ ಸೈನ್ಯವನ್ನು ಕೊಂದವನಾದನು, [ವಾಸ್ತವಿಕಾಭಿಪ್ರಾಯವೇನಂದರೆ,— ದಶರಥಪುತ್ರನಾದ ಶ್ರೀರಾಮನು ಕೋಪಿಷ್ಠನಾದ ತಂದೆಯಿಂದ ಹೊರಡಿಸಲ್ಪಟ್ಟನೇ ಏನು? ಅಲ್ಲ; ಆದರೆ, ದಶರಥರಾಯನು ಪೂರ್ವದಲ್ಲಿ ಕೈಕೇಯಿಗೆ ವರಗಳಂ ಕೊಟ್ಟಿದ್ದನಾದಕಾರಣ ಮೋಹಿತನಾಗಿ, ರಾಮನಂ ಪ್ರಾರ್ಥಿಸಿ, ಅರಣ್ಯಕ್ಕೆ ಕಳುಹಿಸಿದನು. ಮತ್ತು ಆ ಶ್ರೀರಾಮನು ಸಭೆಯಲ್ಲಿ ಪೂಜ್ಯನು, ಸದಾ ಸಂತೋಷಚಿತ್ತನು, ಖರಸೈನ್ಯವಂ ಸಂಹರಿಸಿದವನು, ಕ್ಷತ್ರಿಯರನ್ನು ಪಾಲಿಸುವವನು, ಶತ್ರುಘಾತುಕನು, ಇಂಥಾ ಆತನು ದುಷ್ಟಸ್ವಭಾವವುಳ್ಳವನೇ? ಅಲ್ಲ; ಮತ್ತು ಶತ್ರುಗಳ ವಿಷ

ಲುಬ್ಧೋ ಜಿತೇಂದ್ರಿಯಃ । ತ್ಯಕ್ತಧರ್ಮೋ ಹ್ಯಧರ್ಮಾತ್ಮಾ ಭೂತಾನಾಮಹಿತೇರತಃ ॥೧೫॥ ಯೇನವೈರಂವಿನಾರಣ್ಯೇಸತ್ತ್ವಮಾಶ್ರಿತ್ಯಕೇವಲಂ । ಕರ್ಣನಾಸಾಪಹರಣಾದ್ಭಗಿನೀಮೇವಿರೂಪಿತಾ । ತಸ್ಯಭಾರ್ಯಾಂಜನಸ್ಥಾನಾತ್ಸೀತಾಂಸುರಸುತೋಪಮಾಂ । ಆನಯಿಷ್ಯಾಮಿವಿಕ್ರಮ್ಯಸಹಾಯಸ್ತತ್ರಮೇಭವ।ತ್ವಯಾಹ್ಯಹಂಸಹಾಯೇನಪಾರ್ಶ್ವಸ್ಥೇನಮಹಾಬಲ॥

---

ನ ಸೈನ್ಯಸ್ಯ, ಹಂತಾ-ನಾಶಕನು ॥೧೧॥ ॥ (ಕ್ರುದ್ಧೇನೇತ್ಯಾದಿ ಯೆರಡುಶ್ಲೋಕಕ್ಕೂ ವಾಸ್ತವಿಕಾರ್ಥವಾದರೆ. ಕ್ರುದ್ಧೇನ-ಕೋಪಿಷ್ಟನಾದ. ಪಿತ್ರಾ-ತಂದೆಯಿಂದ, ನಿರಸ್ತಃಕಿಂ-ಹೊರಡಿಸಲ್ಪಟ್ಟನೋ ಏನು, ಕಿಂತು-ಮತ್ತೇನಂದರೆ, ಕೈಕೆಯಿಗೆ ವರಪ್ರದಾನಮಾಡಿದ್ದರಿಂದ. ಮೋಹಿತನಾದ ತಂದೆಯಿಂ ಪ್ರಾರ್ಥಿತನಾಗಿ. ವನಂ-ಅರಣ್ಯವಂಕು. ಆಗತಃ-ಬಂದನು, ಸಭಾರ್ಯಃ-ಗಭೆಯಲ್ಲಿ ಪೂಜ್ಯನು. ಕ್ಷೀಣಜೀವಿತಃ-ಉತ್ತಮ ಲೋಕ ಬದುಕಿರುವನು. ತಸ್ಯ ಸೈನ್ಯಸ್ಯ-ಆ ಖರಾಸುರನ ಸೈನ್ಯಕ್ಕೆ, ಹಂತಾ-ಸಂಹಾರಕನು, ಕ್ಷತ್ರಿಯಪಾಂಸನಃ-ಕ್ಷತ್ರಿಯರನ್ನು ಪರಿಪಾಲನೆಮಾಡುವವನು,ಅಂಸಸ್ಥ-ಶತ್ರುಘಾತಕನು, ದುಃಶ್ಶೀಲಃಕಿಂ-ದುಶ್ಶೀಲನಲ್ಲ. ಕರ್ಕಶಃ-ಶತ್ರುಗಳ ವಿಷಯದಲ್ಲಿ ಕಠಿನನು, ತೀಕ್ಷ್ಣಃ-ಜಾಗರೂಕನು, ಅಮೂರ್ಖಃ-ಮೂಢನಲ್ಲ. ಅಲುಬ್ಧಃ-ಲೋಭವಿಲ್ಲದವನು. ಜಿತೇಂದ್ರಿಯಃ-ಜಯಿಸಲ್ಪಟ್ಟ ಇಂದ್ರಿಯವ್ಯಾಪಾರ ವುಳ್ಳವನು. ತ್ಯಕ್ತಧರ್ಮಃ-ಬಿಸಲ್ಪಟ್ಟ ವಿರುದ್ಧ ಧರ್ಮಗಳುಳ್ಳವನು, ಅಧರ್ಮಾತ್ಮಾ-ಅಧರ್ಮಿಷ್ಠನೇ ಅಲ್ಲ, ಕಿಂತು-ಧಾರ್ಮಿಕನೇಹೌದು, ಭೂತಾನಾಂ-ಪ್ರಾಣಿಗಳಿಗೆ. ಅಹಿತೆ-ಅರಿಷ್ಟದಲ್ಲಿ ಅರತಃ-ಆಸಕ್ತನಲ್ಲಾ ॥೧೧॥ ॥ ಯೇನ-ಯಾವ-ಶ್ರೀರಾಮನಿಂದ. ವೈರಂವಿನಾ-ಕೋಪವನ್ನು ವಿನಾಸಿಯಿಸಿ, ಅರಣ್ಯೇ-ಅರಣ್ಯದಲ್ಲಿ, ಕೇವಲಂ-ಮುಖ್ಯವಾಗಿ, ಸತ್ವಂ-ಸಾಮರ್ಥ್ಯವನ್ನು. ಆಶ್ರಿತ್ಯ-ಆಶ್ರಯಿಸಿ ಮೇ-ನನ್ನ, ಭಗಿನೀ-ತಂಗಿಯಾದ ಶೂರ್ಪನಖೆಯು, ಕರ್ಣನಾಸಾಪಹರಣಾತ್-ಕಿವಿ ಮೂಗು ಕತ್ತರಿಸುವಿಕೆಯ ದೆಸೆಯಿಂದ, ವಿರೂಪಿತಾ-ರೂಪರಹಿತಳನ್ನಾಗಿ ಮಾಡಲ್ಪಟ್ಟಳೋ. ತಸ್ಯ-ಆ ಶ್ರೀರಾಮನ, ಭಾರ್ಯಾಂ-ಹೆಂಡತಿಯಾದ, ಸುರಸುತೋಪಮಾಂ-ದೇವಕನ್ಯೆಕೆಗೆ ಸಮಾನಳಾದ. ಸೀತಾಂ-ಸೀತಾದೇವಿಯನ್ನು, ವಿಕ್ರಮ್ಯ-ಬಲಾತ್ಕರಿಸಿ. ಜನಸ್ಥಾನಾತ್-ಸರಹದ್ದಿನಿಂದ, ಆನಯಿಷ್ಯಾಮಿ-ತೆಗದುಕೊಂಡುಬರುವೆನು ತತ್ರ-ಆವಿಷಯದಲ್ಲಿ. ತ್ವಂ-ನೀನು, ಮೇ-ಯನಗೆ. ಸಹಾಯಃ-ಸಹಾಯಭೂತನು, ಭವ-ಆಗು, ತಸ ಭಾರ್ಯಾಂ-ಎಂಬಶ್ಲೋಕಕ್ಕೆ ಯಥಾಶ್ರುತ ಸ್ಪಷ್ಟವಾಯಿತು) (ತಾತ್ವಿಕಾರ್ಥವಾದರೆ-ಉತ್ತರಕಾಂಡದಲ್ಲಿ ಶ್ರೀರಾಮನಿಗೆ ಅಗಸ್ತ್ಯರು ಹೇಳುತ್ತಾರೆ, ಪೂರ್ವದಲ್ಲಿ ಕೃತಯುಗದಲ್ಲಿ ಸನತ್ಕುಮಾರನು ತಪಸ್ಸುಮಾಡುತ್ತಿರಲೂ, ರಾವಣಾಸುರನು ಅಲ್ಲಿ ಬಂದವನಾಗಿ ಸ್ವಾಮಿ ಸನತ್ಕುಮಾರಋಷಿಯೇ! ದೈತ್ಯರೂ ದಾನವರೂ ರಾಕ್ಷಸರೂ ಇತ್ಯಾದಿ ಶತ್ರುಗಳು ಶ್ರೀಮಹಾವಿಷ್ಣುವಿನಿಂ ಸಂಹೃತರಾಗಿ ಯಾವಗತಿಯನ್ನು ಹೊಂದುವರೆಂದು ಪ್ರಶ್ನೆಯಂಗೈದವನಾಗಲೂ, ಆ ಸನತ್ಕುಮಾರಋಷಿಯು ಹೇಳುತ್ತಾನೆ,-ಯಾರು ಯಾತು ಚಕ್ರಹಸ್ತನಾದ ಮಹಾವಿಷ್ಣುವಿನಿಂದಸಂಹೃತರಾಗುವರೋ ಅವರೆಲ್ಲರು ವೈಕುಂಠವನ್ನೇ ಪಡೆಯುವರು. ಶ್ರೀಮಹಾವಿಷ್ಣುವಿನ ಕೋಪಕ್ಕೆಪಾತ್ರನಾದರೂ ಅವನ ವರಕ್ಕೆ ಪಾತ್ರನಾದವನಿಗೆ ಸಮಾನನೇ ಸರಿಎಂದು ಸನತ್ಕುಮಾರರು ಹೇಳಿದರು, ಆ ಮಾತಂಕೇಳಿ ಸಂತೋಷಗೊಂಡವನಾಗಿ, ನಾನು ಶ್ರೀಮನ್ನಾರಾಯಣನಿಂದ ಸಂಹರಿಸಲ್ಪಟ್ಟವನಾಗಿ, ಯೆಂದಿಗೆ ವೈಕುಂಠವನ್ನು ಹೊಂದುವೆನೋ ಎಂದಿಗೆ ಕೃತಾರ್ಥನಾಗುವೆನು ಎಂದು ಕೇಳಿದಬಳಿಕ, ನಿನ್ನಮನಸಾಭೀಷ್ಟ ಸ್ವಲ್ಪಸಾವಕಾಶವಾಗಿ ಕೃತಯುಗ ಕಳೆದಬಳಿಕ, ತ್ರೇತಾಯುಗ ಹುಟ್ಟಲೂ. ಇಕ್ಷ್ವಾಕುವಂಶದಲ್ಲಿ ದಶರಥರಾಯನೂ ಎಂಬರಸು ಹುಟ್ಟುತ್ತಾನೆ, ಅವನಿಗೆ ಶ್ರೀ ಮಹಾವಿಷ್ಣುವು ಶ್ರೀರಾಮನಾಗಿ ಹುಟ್ಟುತ್ತಾನೆ, ಅವನಿಂದ ನಿನಗೆ. ಮುಕ್ತಿಯಾಗುವದು. ಎಂದು ಸನತ್ಕುಮಾರನು ಹೇಳುತ್ತಿರಲಾಗಿ. ರಾವಣಾಸುರನು ಸಂತೋಷಚಿತ್ತನಾಗಿ, ರಾಮನ ಸಂಗಡ ಯುದ್ಧಮಾಡುವ ನಿಮಿತ್ತವಾಗಿ. ಯುದ್ಧಕ್ಕೆ ಹೇತುಭೂತವಾದ ಸೀತಾಪಹರಣವನ್ನುಮಾಡಿ, ಸೀತಾಪಹಾರ ರೂಪದ್ರೋಹದಿಂ ಶ್ರೀರಾಮನಿಗೆ ಕೋಪಬಂದು ಅವನಿಂದ ಸಂಹೃತನಾಗಬೇಕೆಂ ಅಭಿಪ್ರಾಯದಿಂ ಜಗನ್ಮಾತೆಯಾದ ಸೀತಾದೇವಿಯನ್ನು. ಲಂಕಾಪಟ್ಟಣಕ್ಕೆ ತೆಗದುಕೊಂಡು ಹೋಗುವದಕ್ಕೆ ಪ್ರಯತ್ನಪಟ್ಟನೆಂದು ವಾಸ್ತವಿಕಾರ್ಥವು ) ॥೧೩॥ ಹೇಮಹಾಬಲ-ಎಲೈ ಮಹಾ ಬಲಶಾಲಿಯೇ, ಪಾರ್ಶ್ವಸ್ಥೇನ-ಪಾರ್ಶ್ವವರ್ತಿಯಾದ, ಸಹಾಯೇನ-ಸಹಾಯಭೂತನಾದ. ತ್ವಯಾ-ನಿನ್ನೊಡನೇ. ಭ್ರಾತೃಭಿಶ್ಚ-ತಮ್ಮಂದರೊಡನೆ ಕೂಡಿದವನಾಗಿ ಯುದ್ಧ-ಕಾಳಗದಲ್ಲಿ, ಸಮಗ್ರಾನ್-ಸಮಸ್ತರಾದ, ಸುರಾನ್-ದೇವತೆಗಳನ್ನು, ನಾಭಿಚಿಂತಯೇ-ಆಲೋಚಿಸುವದಿಲ್ಲ ॥೧೪॥ ॥ ಹೇರಾಕ್ಷಸ-ಎಲೈ ರಾಕ್ಷಸನೇ, ಹಿ-ಯಾವಕಾರಣದ ದೆಸೆಯಿಂದ, ಸಮರ್ಥಃ-ಸಮರ್ಥನು, ಅಸಿ-ಆಗಿದ್ದೀಯೋ, ತತ್-ಆಕಾರಣದ

---

ಯದಲ್ಲಿ ಮಹಾ ಕಠಿಣನೂ, ಜಾಗರೂಕನೂ, ಮೂರ್ಖನಲ್ಲ, ಲೋಭಿಯೂ ಅಲ್ಲ; ಜಿತೇಂದ್ರಿಯನು, ವಿರುದ್ಧಧರ್ಮಗಳು ಬಿಟ್ಟವನು, ಇಂಥಾ ಆತನು ಅಧರ್ಮಿಷ್ಠನೇ? ಮಹಾ ಧರ್ಮವಂತನೇ ಸರಿ, ಪ್ರಾಣಿಗಳಿಗೆ ಇಷ್ಟವಂಮಾಡುವದರಲ್ಲಿಯೇ ಆಸಕ್ತಿಯುಳ್ಳವನೆಂದು ಭಾವವು ॥೧೫॥ ಯಾವ ರಾಮನು ವೈ ವಿನಹಾ ದಂಡಕಾರಣ್ಯದಲ್ಲಿ ಕೇವಲವಾಗಿ ಸಾಮರ್ಥ್ಯವನ್ನಾಶ್ರಯಿಸಿ, ಯೆನ್ನ ಒಡಹುಟ್ಟಿದವಳಾದ ಶೂರ್ಪನಖಿಯ ಕರ್ಣನಾಸಾಚ್ಛೇದನಮಂಗೈದು ಆಕೆಯನ್ನು ವಿರೂಪಳನ್ನಾಗಿ ಮಾಡಿದನೋ, ಅಂಥವನ ಮಡದಿಯಾದ, ಮತ್ತು ದೇವಕನ್ಯೆಗೆ ಸಮಾನಳಾದ ಆ ಸೀತಾ ದೇವಿಯನ್ನು ಬಲಾತ್ಕರಿಸಿ ಜನಸ್ಥಾನದಿಂಧ ಕರತರುವೆನು. ಈ ವಿಷಯದಲ್ಲಿ ನೀನೆನಗೆ ಸಹಾಯಭೂತನಾಗಿರುವವನಾಗು, [ತತ್ವಾಭಿಪ್ರಾಯವು ಪ್ರತಿಪದ ಟೀಕಿನಲ್ಲಿ ನೋಡಿಕೊಳ್ಳಬಹುದು] ॥೧೬॥

ಎಲೈ ಮಹಾ ಪರಾಕ್ರಮಶಾಲಿಯಾದ ತಾಟಕೇಯನೇ! ಸಹಾಯ ಭೂತನಾಗಿ ಸುಮ್ಮನೇ ಪಾರ್ಶ್ವದಲ್ಲಿ ನಿಂತಿರುವ ನಿನ್ನಿಂದಲೂ, ಒಡಹುಟ್ಟಿದವರಿಂದಲೂ ಸಹಾ ಪಡಗೂಡಿ, ರಣರಂಗದಲ್ಲಿ ಸುರಾ

ಭ್ರಾತೃಭಿಶ್ಚಸುರೈರ್ಯುದ್ಧೇಸಮಗ್ರೈರ್ನಾಭಿಚಿಂತಯೇ । ತತ್ಸಹಾಯೋಭವತ್ವಂಮೇಸಮರ್ಥೋಹ್ಯಸಿರಾಕ್ಷಸ ।
ವೀರ್ಯೇಯುದ್ಧೇಚದರ್ಪೇಚನಹ್ಯಸ್ತಿಸದೃಶಸ್ತವ । ಉಪಾಯಜ್ಞೋಮಹಾಶೂರಸ್ಸರ್ವಮಾಯಾವಿಶಾರದಃ । ಏತದ
ರ್ಥಮಹಂಪ್ರಾಪ್ತಸ್ತ್ವತ್ಸಮೀಪಂನಿಶಾಚರ । ಶೃಣುತತ್ಕರ್ಮಸಾಹಾಯ್ಯೇಯತ್ಕಾರ್ಯಂವಚನಾನ್ಮಮ ।೧೭। ಸೌ
ವರ್ಣಸ್ತ್ವಂಮೃಗೋಭೂತ್ವಾಚಿತ್ರೋರಜತಬಿಂದುಭಿಃ । ಆಶ್ರಮೇತಸ್ಯರಾಮಸ್ಯಸೀತಾಯಾಃಪ್ರಮುಖೇಚರ ।೧೮।
ತ್ವಾಂತುನಿಸ್ಸಂಶಯಂಸೀತಾದೃಷ್ಟ್ವಾತುಮೃಗರೂಪಿಣಂ । ಗೃಹ್ಯತಾಮಿತಿಭರ್ತಾರಂಲಕ್ಷ್ಮಣಂಚಾಭಿಧಾಸ್ಯತಿ ।೧೯
ತತಸ್ತಯೋರಪಾಯೇತುಶೂನ್ಯೇಸೀತಾಂಯಥಾಸುಖಂ । ನಿರಾಬಾಧೋಹರಿಷ್ಯಾಮಿರಾಹುಶ್ಚಂದ್ರಪ್ರಭಾಮಿವ ।೨೦।

---

ಪೆಶೆಯಿಂದ, ತ್ವಂ–ನೀನು, ಮೇ–ಯೆನಗೆ, ಸಹಾಯೋಭವ–ಸಹಾಯನಾಗು, ವೀರ್ಯೇ–ಸಾಮರ್ಥ್ಯದಲ್ಲಿಯೂ, ಯುದ್ಧೇಚ–ಕಾಳಗದಲ್ಲಿಯೂ, ದರ್ಪೇಚ–ಗರ್ವದಲ್ಲಿಯೂ, ತವ–ನಿನಗೆ. ಸದೃಶಃ–ಸಮಾನನು, ನಾಸ್ತಿಹಿ–ಇಲ್ಲವಷ್ಟೆ ॥ ಉಪಾಯಜ್ಞಃ–ಕಾರ್ಯಸಾಧನೋಪಾಯವಂ ತಿಳಿದವನು. ಮಹಾ–ದೊಡ್ಡವನು, ಶೂರಃ–ಶೂರನು, ಸರ್ವಮಾಯಾವಿಶಾರದಃ–ಸಮಸ್ತವಾದ ಮಾಯಾಕಾರ್ಯಗಳಲ್ಲಿ ಪಂಡಿತನು, ಹೆ ನಿಶಾಚರ–ಎಲೈ ರಾಕ್ಷಸನೇ, ಏತದರ್ಥಂ–ಈ ನಿಮಿತ್ತವಾಗಿ. ಅಹಂ–ನಾನು, ತ್ವತ್ಸಮೀಪಂ–ನಿನ್ನ ಸಮೀಪವಂಕುರಿತು. ಪ್ರಾಪ್ತಃ–ಬಂದೆನು, ಮಮ–ನನ್ನ, ವಚನಾತ್–ಮಾತಿನದೆಶೆಯಿಂದ, ಯತ್–ಯಾವದು, ಕಾರ್ಯಂ–ಮಾಡತಕ್ಕದ್ದೋ. ಸಹಾಯ್ಯೇ–ಸಹಾಯವಿಷಯದಲ್ಲಿ, ತತ್ಕರ್ಮ–ಆ ಕೃತ್ಯವನ್ನು, ಶೃಣು–ಕೇಳು, ॥೧೭॥ ತ್ವಂ–ನೀನು, ಸೌವರ್ಣಃ–ಸುವರ್ಣವಿಕಾರವಾದ, ರಜತಬಿಂದುಭಿಃ–ಬೆಳ್ಳೀ ಚುಕ್ಕೆಗಳಿಂದ, ಚಿತ್ರಃ–ಚಿತ್ರಬಣ್ಣವುಳ್ಳ, ಮೃಗಃ–ಜಿಂಕೆಯು. ಭೂತ್ವಾ–ಆಗಿ, ತಸ್ಯರಾಮಸ್ಯ–ಆ ಶ್ರೀರಾಮನ, ಆಶ್ರಮೇ–ಪರ್ಣಶಾಲೆಯಲ್ಲಿ. ಸೀತಾಯಾಃ–ಸೀತಾದೇವಿಗೆ, ಪ್ರಮುಖೇ–ಯೆದುರಾಗಿ, ಚರ–ಸಂಚರಿಸು ॥೧೮॥ ಸೀತಾತು–ಸೀತಾದೇವಿಯಾದರೆ, ಮೃಗರೂಪಿಣಂ–ಮೃಗಧಾರಿಯಾದ, ತ್ವಾಂತು–ನಿನ್ನನ್ನಾದರೋ ದೃಷ್ಟ್ವಾ–ಕಂಡು, ಗೃಹ್ಯತಾಮಿತಿ–ಗ್ರಹಿಸಲ್ಪಡಲೆಂದು, ಭರ್ತಾರಂ–ಗಂಡನಾದ ಶ್ರೀರಾಮನನ್ನೂ, ಲಕ್ಷ್ಮಣಂಚ–ಲಕ್ಷ್ಮಣನನ್ನೂ ಕುರಿತು, ಅಭಿಧಾಸ್ಯತಿ–ಹೇಳುತ್ತಾಳೆ. ನಿಸ್ಸಂಶಯಂ–ಸಂಶಯವಿಲ್ಲದೆ ಹೇಳುವಳು ॥೧೯॥ ತತಃ–ಬಳಿಕ, ತಯೋಃ–ಆ ರಾಮಲಕ್ಷ್ಮಣರ. ಅಪಾಯೇ–ಅಪಗಮನವಾಗುತ್ತಿರಲಾಗಿ. ಶೂನ್ಯೇ–ಜನರಹಿತವಾದಾಶ್ರಮದಲ್ಲಿ, ಸೀತಾಂ–ಸೀತಾದೇವಿಯನ್ನು. ಯಥಾಸುಖಂ–ಸುಖವಾಗಿ. ನಿರಾಬಾಧಃ–ಆತಂಕವಿಲ್ಲದವನಾಗಿ, ರಾಹುಃ–ರಾಹುಗ್ರಹವು, ಚಂದ್ರಪ್ರಭಾಮಿವ–ಚಂದ್ರಕಾಂತಿಯನ್ನಂತೆ, ಹರಿಷ್ಯಾಮಿ–ಅಪಹರಿಸುವೆನು ॥೨೦॥ ತತಃಪಶ್ಚಾತ್–ಆ ಬಳಿಕ, ರಾಮೇ–ಶ್ರೀರಾಮನು, ಭಾರ್ಯಾಹರಣಕರ್ಶಿತೇಸತಿ–ಭಾರ್ಯಾಪಹಾರದಿಂ ಕೃಶೀಭೂತನಾಗುತ್ತಿರಲಾಗಿ, ವಿಸ್ರಬ್ಧಂ–ವಿಶ್ವಾಸದಿಂ ಕೂಡಿದಂತೆ, ಕೃತಾರ್ಥೇನ–ಕೃತಪ್ರಯೋಜನವುಳ್ಳ, ಅಂತರಾತ್ಮನಾ–ಮನಸ್ಥೈರ್ಯದಿಂದ, ಸುಖಂ–ಸುಖವಾಗಿ, ಪ್ರಹರಿಷ್ಯಾಮಿ–ಹೊಡೆಯುತ್ತೇನೆ, ( ಈಶ್ಲೋಕಕ್ಕೆ ವಾಸ್ತವಿಕಾರ್ಥವಾದರೋ–ರಾಮೇಭಾರ್ಯಾಹರಣಕರ್ಶಿತೇ–ಶ್ರೀರಾಮನೆಂಬ ಆನೆಗೆ ಸಂಬಂಧಮಾದ ಪೂಜ್ಯಳಾದ ಸೀತಾದೇವಿಯ ಅಪಹಾರದಿಂ ನನ್ನಶರೀರವು ಕೃಶೀಭಾವವಂ ಹೊಂದುತ್ತಿರಲಾಗಿ.

---

ಸುರರನನ್ನು ಕೂಡಾ ನಾನು ಲಕ್ಷ್ಯವನ್ನಿಡುವದಿಲ್ಲ, ನೀನು ಮಹಾ ಸಮರ್ಥನು, ನನಗೆ ಸಹಾಯಕನಾಗಿರು, ಯಾಕಂದರೆ,—ವೀರ್ಯದಲ್ಲಿಯೂ, ಯುದ್ಧದಲ್ಲಿಯೂ, ಗರ್ವದಲ್ಲಿಯೂ ನಿನಗೆ ಸಮಾನನಾದವನ್ಯಾರೂಇಲ್ಲ, ಕಾರ್ಯಸಾಧನದ ಉಪಾಯಂಗಳಂ ಬಲ್ಲವನು, ದೊಡ್ಡವನು, ಶೂರನು, ಸಮಸ್ತವಾದ ಮಾಯಗಳನ್ನರಿತವನು. ಆದಕಾರಣ ನಾನು ನಿನ್ನ ಸಮೀಪಕ್ಕೆ ಬಂದವನಾದೆ, ನೀನು ನನಗೆ ಸಹಾಯಕನಾಗಿ ಯಾವ ಕಾರ್ಯವನ್ನು ಮಾಡಬೇಕಾಗಿರುವದೋ ಅದಂ ಪೇಳುವೆನು ಕೇಳುವವನಾಗು ।೧೭। ಎಲೈ ಮಾರೀಚನೇ! ನೀನು ಸುವರ್ಣವಿಕಾರವಾದ ಶರೀರ ವುಳ್ಳದ್ದಾಗಿಯೂ, ಬೆಳ್ಳಿಚುಕ್ಕೆಗಳುಳ್ಳದ್ದಾಗಿಯೂ, ಚಿತ್ರಬಣ್ಣ ವುಳ್ಳದ್ದಾಗಿಯೂ ಇರುವ ಮೃಗರೂಪವಂ ತಾಳಿ, ಆ ಶ್ರೀರಾಮನ ಪರ್ಣಶಾಲೆಯ ಸಮೀಪದಲ್ಲಿ ಆಕೆಗೆದುರಾಗಿಸಂಚಾರವಂ ಗೈಯ್ಯುವವನಾಗು ।೧೮। ಆ ಸೀತಾದೇವಿಯಾದರೆ ಮೃಗರೂಪಧಾರಿಯಾದ ನಿನ್ನಂ ಕಾಣುತ್ತಲೇ ತನ್ನಪತಿಯಾದ ಶ್ರೀರಾಮನನ್ನೂ, ಲಕ್ಷ್ಮಣನನ್ನೂ ಸಹಾ ಕುರಿತು, ಎಲೈ ರಾಮಲಕ್ಷ್ಮಣರೇ! ಈ ಮೃಗವನ್ನು ಹಿಡಿದುಕೊಂಡು ಬರುವವರಾಗಿರೆಂದು ನಿಸ್ಸಂದೇಹವಾಗಿ ಹೇಳುವಳು, ಅನಂತರದಲ್ಲಿ ಅವರೀರ್ವರೂ ಸಾರಿದವರಾಗಲು, ನಿರ್ಜನನಾಗಿರುವ ಆ ಆಶ್ರಮದಲ್ಲಿ ಸುಖವಾಗಿ ನಾನು ರಾಹುವು ಚಂದ್ರನಕಾಂತಿಯನ್ನಪಹರಿಸುವಂತೆ, ಆ ಸೀತಾದೇವಿಯನ್ನಪಹರಿಸುವೆನು ।೨೦। ಅನಂತರದಲ್ಲಿ ಶ್ರೀರಾಮನು ಭಾರ್ಯಾಪಹಾರದಿಂದ ಕೃಶಭೂತನಾಗಲು, ಆಗ ನಾನು ಸ್ಥೈರ್ಯದಿಂದ ಸುಖವಾಗಿ ಆತನಂ ಹೊಡೆಯುವೆನು. [ವಾಸ್ತವಿಕಾಭಿಪ್ರಾಯವೇನಂದರೆ,—ಶ್ರೀರಾಮನೆಂಬ ಆನೆಗೆ ಸಂಬಂಧಪಟ್ಟ ಸೀತಾದೇವಿಯನ್ನು ಅಪಹಾರವಂ ಗೈದು ನನ್ನ ಶರೀರವು, ಕೃಶಭಾವವನ್ನು ಹೊಂದಲು, ಅಂದರೆ,—ರಾಮಬಾಣಂಗಳಿಂದ ಹತವಾಗಲು, ಸಫಲವಾದಮನೋರಥವುಳ್ಳವನಾಗಿ, ನಿಷ್ಕಳಂಕವಾಗಿಸುಖವಂ ಪೊಂದುವೆನು, ಅಂದರೆ ಮೋಕ್ಷವಂ

ತತಃಪಶ್ಚಾತ್ಸುಖಂರಾಮೇಭೀರ್ಭಾರ್ಯಾಹರಣಕರ್ಶಿತೇ। ವಿಸ್ರಬ್ಧಂಪ್ರಹರಿಷ್ಯಾಮಿಕೃತಾರ್ಥೇನಾಂತರಾತ್ಮನಾ ॥೧೧॥ ತಾಂತು ರಾಮಕಥಾಂಶ್ರುತ್ವಾಮಾರೀಚಸ್ಯಮಹಾತ್ಮನಃ । ಶುಷ್ಕಂಸಮಭವದ್ವಕ್ತ್ರಂಪರಿತ್ರಸ್ತೋಬಭೂವಹ॥೧೨॥ಓಷ್ಠೌ ಪರಿಲಿಹನ್ಶುಷ್ಕೌನೇತ್ರೈರನಿಮಿಷೈರಿವ। ಮೃತಭೂತಇವಾರ್ತಸ್ತುರಾವಣಂಸಮುದೈಕ್ಷತ ॥೧೩॥ ಸರಾವಣಂತ್ರ ಸ್ತವಿಷಣ್ಣಚೇತಾಮಹಾವನೇರಾಮಪರಾಕ್ರಮಜ್ಞಃ । ಕೃತಾಂಜಲಿಸ್ತತ್ವಮುವಾಚವಾಕ್ಯಂಹಿತಂಚತಸ್ಮೈಹಿತಮಾ ತ್ಮನಶ್ಚ ॥೧೪॥ ---*ಇತಿಶ್ರೀಮದಾರಣ್ಯಕಾಂಡೇ-ಷಟ್ತ್ರಿಂಶಸ್ಸರ್ಗಃ॥*----

ತಚ್ಛ್ರುತ್ವಾರಾಕ್ಷಸೇಂದ್ರಸ್ಯವಾಕ್ಯಂವಾಕ್ಯವಿಶಾರದಃ । ಪ್ರತ್ಯುವಾಚಮಹಾಪ್ರಾಜ್ಞೋಮಾರೀಚೋರಾಕ್ಷಸೇ ಶ್ವರಂ ॥೧॥ ಸುಲಭಾಃಪುರುಷಾರಾಜನ್ಸತತಂಪ್ರಿಯವಾದಿನಃ । ಅಪ್ರಿಯಸ್ಯತುಪಥ್ಯಸ್ಯವಕ್ತಾಶ್ರೋತಾಚದುರ್ಲಭಃ॥೨॥ ನನೂನಂಬುಧ್ಯಸೇರಾಮಂಮಹಾವೀರ್ಯಗುಣೋನ್ನತಂ । ಅಯುಕ್ತಚಾರಶ್ಚಪಲೋಮಹೇಂದ್ರವರುಣೋಪಮಂ ॥೩॥

---

ಕೃತಾರ್ಥೇನಾಂತರಾತ್ಮನಾ-ಸಫಲವಾದಮನೋರಥದಿಂಕೂಡಿದವನಾಗಿ ನಿಷ್ಕಳಂಕವಾಗಿ, ಸುಖಂ-ಮೋಕ್ಷಸುಖವನ್ನು ಪ್ರಹರಿಷ್ಯಾಮಿ-ಹೊಂದುವೆನು ॥೧೧॥ ರಾಮಕಥಾಂ-ಶ್ರೀರಾಮನ ವೃತ್ತಾಂತವನ್ನು, ಶ್ರುತ್ವಾ-ಕೇಳಿ, ಮಹಾತ್ಮನಃ-ಮಹಾಮನವುಳ್ಳ, ತಸ್ಯಮಾರೀಚಸ್ಯ-ಆ ಮಾರೀಚನ, ವಕ್ತ್ರಂ-ಮುಖ ವು, ಶುಷ್ಕಂ-ಬಣಗಿದ್ದು, ಸಮಭವತ್-ಆಯಿತು, ಪರಿತ್ರಸ್ತಃ-ಭೀತನು, ಬಭೂವಹ-ಆದನಷ್ಟೆ ॥೧೨॥ ಶುಷ್ಕೌ-ಬಣಗಿರುವ, ಓಷ್ಠೌ-ತುಟಿಗ ಳನ್ನು, ಪರಿಲಿಹನ್-ನಾಲಿಗೆಯಿಂ ನೆಕ್ಕುತ್ತಿರುವವನಾಗಿ, ಅನಿಮಿಷೈರಿವ-ರೆಪ್ಪೆಗಳಿಲ್ಲದಂತಿರುವ, ನೇತ್ರೈಃ-ಕಣ್ಣುಗಳಿಂದ, ಮೃತಭೂತಇವ-ಸತ್ತವನಂತೆ, ಆರ್ತಸ್ತು-ದೀನನಾಗಿ. ರಾವಣಂ-ರಾವಣಾಸುರನನ್ನು. ಸಮುದೈಕ್ಷತ-ನಿಕ್ಕಿನಿಕ್ಕಿ ನೋಡಿದನು ॥೧೩॥ ಮಹಾವನೇ-ದೊಡ್ಡ ಅರಣ್ಯದಲ್ಲಿ, ರಾಮಪರಾಕ್ರ ಮಜ್ಞಃ-ಶ್ರೀರಾಮನ ಪರಾಕ್ರಮಂ ತಿಳಿದಿರುವನಾದಕಾರಣ, ತ್ರಸ್ತವಿಷಣ್ಣಚೇತಾಃ-ಭಯಗೊಂಡದೀನವಾದ ಮನವುಳ್ಳ, ಸಃ-ಆ ಮಾರೀಚನು, ಕೃ ತಾಂಜಲಿಃ-ಅಂಜಲಿಬದ್ಧನಾಗಿ. ಆತ್ಮನಶ್ಚ-ತನಗೂ, ಹಿತಂ-ಹಿತಮಾದ, ತಸ್ಮೈಚ-ಆ ರಾವಣನಿಗೂ, ಹಿತಂ-ಅಪಾಯವಿಲ್ಲದಿರುವ, ತತ್ವಂ-ಯಥಾರ್ಥ ಮಾದ, ವಾಕ್ಯಂ-ಮಾತನ್ನು, ಉವಾಚ-ಪೇಳಿದನು॥ —**ಇತಿಶ್ರೀಮದಾರಣ್ಯಕಾಂಡೇ-ಷಟ್ತ್ರಿಂಶಸ್ಸರ್ಗಃ**—

ವಾಕ್ಯವಿಶಾರದಃ-ಮಾತುಗಾರರಲ್ಲಿ ಪಂಡಿತನಾದ. ಮಹಾಪ್ರಾಜ್ಞಃ-ಮಹಾಬುದ್ಧಿಶಾಲಿಯಾದ, ಮಾರೀಚಃ-ಮಾರೀಚನು, ರಾಕ್ಷಸೇಂದ್ರಸ್ಯ-ರಾ ಕ್ಷಸಾಧಿಪತಿಯಾದ ರಾವಣನ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ. ರಾಕ್ಷಸೇಶ್ವರಂ-ರಾವಣನಂಕುರಿತು, ಪ್ರತ್ಯುವಾಚ-ಪೇಳಿದನು ॥೧॥ ಹೇರಾ ಜನ್-ಎಲೈ ರಾಕ್ಷಸರಾಜನೇ. ಸತತಂ-ನಿರಂತರವೂ, ಪ್ರಿಯವಾದಿನಃ-ತಾತ್ಕಾಲಿಕಹಿತವಾಗಿ ಪೇಳುವ. ಪುರುಷಾಃ-ಪುರುಷರು, ಸುಲಭಾಃ-ಸರ್ವತ್ರದೊ ರೆಯುತ್ತಿತ್ತಾರೆ, ಕಿಂತು-ಮತ್ತೇನಂದರೆ. ಅಪ್ರಿಯಸ್ಯ-ತತ್ಕಾಲದಲ್ಲಿ ಕಠೋರವಾಗಿದ್ದರೂ, ಪಥ್ಯಸ್ಯ-ಪರಿಣಾಮಕಾಲದಲ್ಲಿ ಶುಭಫಲವಂ ಕೊಡತಕ್ಕ ವಚನ ವನ್ನು, ವಕ್ತಾ-ಹೇಳತಕ್ಕ ಪುರುಷನು, ಶ್ರೋತಾಚ-ಅದರಪರಿಣಾಮವಂ ತಿಳಿದು ನಡೆದುಕೊಳ್ಳತಕ್ಕ ಪುರುಷನು, ದುರ್ಲಭಃ-ದೊರೆಯಲಾರನು॥೨॥ ಅಯುಕ್ತಚಾರಃ-ನಿಯೋಜಿಸಲ್ಪಡದಿರುವ ಗೂಢಚಾರರುಳ್ಳ, ಚಪಲಃ-ಚಪಲಚಿತ್ತನಾದ ನೀನು, ಮಹೇಂದ್ರವರುಣೋಪಮಂ-ದೇವೇಂದ್ರನಿಗೂ ವರು ಣನಿಗೂ ಸಮಾನನಾದ, ಮಹಾವೀರ್ಯಂ-ಬಹಳ ಸಾಮರ್ಥ್ಯವಂತನಾದ, ಗುಣೋನ್ನತಂ-ಶೌರ್ಯೌದಾರ್ಯಾದಿ ಗುಣಗಳಿಂದ ಸರ್ವೋತ್ತಮನಾದ, ರಾಮಂ-ಶ್ರೀರಾಮನನ್ನು. ನಬುಧ್ಯಸೇ-ತಿಳಿಯದೇಹೋದೆ. ನೂನಂ-ನಿಶ್ಚಯವು ॥೩॥ ಹೇತಾತ-ಎಲೈ ಅಪ್ಪನೇ, ಭುವಿ-ನೆಲದಲ್ಲಿ, ಸರ್ವೇಷಾಂ-ಸವು

---

ಪಡೆಯುವೆನೆಂದು ಮನೋಭಿಪ್ರಾಯವು] ॥೧೧॥ ಈ ಪ್ರಕಾರವಾಗಿ ರಾವಣನು ನುಡಿದವನಾಗಲು ಆ ವಾ ಕ್ಯವಂ ಕೇಳಿ ಮಾರೀಚನ ಮುಖವು ಕಂಗೆಟ್ಟಿತು, ಅವನು ಬಹು ಭೀತನಾದನು, ತುಟಿಗಳು ಬಣಗಿದವು, ಮೃತ ಪ್ರಾಯನಾಗಿಯೂ, ನಿರ್ವಿಣ್ಣನಾಗಿಯೂ, ದೀನನಾಗಿಯೂ ಇರುವವನಾಗಿ ರಾವಣನಂ ನೋಡುತ್ತಿದ್ದನು ॥೧೩॥ ಆ ಮಹಾರಣ್ಯದಲ್ಲಿ ರಾಮನ ಪರಾಕ್ರಮವಂ ಬಲ್ಲವನಾದಕಾರಣ ಭೀತಿಗೊಂಡ ಮನವುಳ್ಳವನಾಗಿ, ಅಂಜಲಿಬಂಧವಂ ಗೈದು ತನಗೂ, ರಾವಣನಿಗೂ, ಸಹಾ ಹಿತವಾದ ವಾಕ್ಯವಂ ಪೇಳಿದನು ॥೧೪॥-*೩೬ನೆಯಸರ್ಗಂಮುಗಿದುದು*-

ಮಾತಾಡುವದರಲ್ಲಿ ನಿಪುಣನಾದ, ಮಹಾ ಬುದ್ಧಿಶಾಲಿಯಾದ ಮಾರೀಚನು ರಾಕ್ಷಸಾಧಿಪತಿಯಾದ ರಾವಣ ನ ವಾಕ್ಯವಂ ಕೇಳಿ, ಆತನಂ ಕುರಿತು, ನುಡಿವನದೆಂತೆನೆ,—ಎಲೈ ರಾಕ್ಷಸನಾಥನೇ! ಯಾವಾಗಲೂ ಆಯಾಯ ಕಾಲಕ್ಕೆ ತಕ್ಕಹಾಗೆ ಹಿತವಾಗಿ ಪೇಳುವ ಪುರುಷರು ಯೆಲ್ಲೆಲ್ಲಿಯೂ ದೊರಿಯುವರು. ಆದರೆ ತತ್ಕಾಲದಲ್ಲಿ ಕಠಿಣ ವಾಗಿ ತೋರಿದರೂ ಪರಿಣಾಮಕಾಲದಲ್ಲಿ ಶುಭವನ್ನೀಯುವ ವಚನವಂ ಪೇಳುವ ಪುರುಷರೂ, ಆ ಅಭಿಪ್ರಾಯ ವನ್ನರಿತು ನಡಿಯುವ ಪುರುಷರೂ ಸಹಾ ದೊರಿಯಲಾರರು ॥೨॥ ಚೆನ್ನಾಗಿ ನಿಯಮಿಸಲ್ಪಡದಿರುವ, ಮತ್ತು, ಚ ಪಲಚಿತ್ತನಾದ ನೀನು ಇಂದ್ರ ವರುಣರ ಸಾಮರ್ಥ್ಯದಂತೆ ಮಹಾ ಸಾಮರ್ಥ್ಯವಂತನಾದ, ಶೌರ್ಯಾದಿಗುಣಗ ಳಿಂದುತ್ತಮನಾದ ಶ್ರೀರಾಮನನ್ನು ನಿಶ್ಚಯವಾಗಿ ಅರಿಯದವನು. ಎಲೋ ಎಲೋ, ಅಪ್ಪ ರಾವಣನೇ! ಭೂಮಂ

೪೧

ಅಪಿಸ್ವಸ್ತಿಭವೇತ್ತಾತಸರ್ವೇಷಾಂಭುವಿರಕ್ಷಸಾಂ । ಅಪಿರಾಮೋನಸಂಕ್ರುದ್ಧಃಕುರ್ಯಾಲ್ಲೋಕಮರಾಕ್ಷಸಂ ।೪। ಅಪಿತೇಜೀವಿತಾಂತಾಯನೋತ್ಪನ್ನಾ ಜನಕಾತ್ಮಜಾ । ಅಪಿಸೀತಾನಿಮಿತ್ತಂಚನಭವೇದ್ವ್ಯಸನಂಮಮ ॥೫। ಅಪಿತ್ವಾಮೀಶ್ವರಂಪ್ರಾಪ್ಯಕಾಮವೃತ್ತಂನಿರಂಕುಶಂ ।ನವಿನಶ್ಯೇತ್ಪುರೀಲಂಕಾತ್ವಯಾಸಹಸರಾಕ್ಷಸಾ ॥೬॥ ತ್ವದ್ವಿಧಃಕಾಮವೃತ್ತೋಹಿದುಶ್ಶೀಲಃಪಾಪಮಂತ್ರಿತಃ । ಆತ್ಮಾನಂಸ್ವಜನಂರಾಷ್ಟ್ರಂಸರಾಜಾಹಂತಿದುರ್ಮತಿಃ ॥೭॥ ನಚಪಿತ್ರಾಪರಿತ್ಯಕ್ತೋನಾಮರ್ಯಾದಃಕಥಂಚನ । ನಲುಬ್ಧೋನಚದುಶ್ಶೀಲೋನಚಕ್ಷತ್ರಿಯಪಾಂಸನಃ । ನಚಧರ್ಮಗುಣೈರ್ಹೀನಃಕೌಸಲ್ಯಾನಂದವರ್ಧನಃ । ನತೀಕ್ಷ್ಣೋನಚಭೂತಾನಾಂಸರ್ವೇಷಾಮಹಿತೇರತಃ ।೯। ವಂಚಿತಂಪಿತರಂದೃಷ್ಟ್ವಾಕೈಕೇಯ್ಯಾಸತ್ಯವಾದಿನಂ । ಕರಿಷ್ಯಾಮೀತಿಧರ್ಮಾತ್ಮಾತಾತಪ್ರವ್ರಜಿತೋವನಂ ॥೧೦। ಕೈಕೇಯ್ಯಾಃಪ್ರಿಯಕಾಮಾರ್ಥಂಪಿತುರ್ದಶರಥಸ್ಯಚ । ಹಿತ್ವಾರಾಜ್ಯಂಚಭೋಗಾಂಶ್ಚಪ್ರವಿಷ್ಟೋದಂಡಕಾವನಂ ॥ ನರಾಮಃಕರ್ಕಶಸ್ತಾತನಾವಿದ್ವಾನ್ನಾಜಿತೇಂದ್ರಿ

---

ಸ್ತರಾದ, ರಕ್ಷಸಾಂ-ರಕ್ಕಸರಿಗೆ, ಸ್ವಸ್ತಿ-ಕ್ಷೇಮವು, ಅಪಿಭವೇತ್-ಆಗುವದೋ ಏನು, (ಆಗಲಾರದು) ರಾಮಃ-ಶ್ರೀರಾಮನು, ನಸಂಕ್ರುದ್ಧಃ-ಕೋಪವಮಾಡದೆ ಇರುವನೋ ಏನು, ಲೋಕಂ-ಲೋಕವನ್ನು, ಅರಾಕ್ಷಸಂ-ರಾಕ್ಷಸರಿಲ್ಲದ್ದಂತೆ, ನಕುರ್ಯಾದಪಿ-ಮಾಡದಿರುವನೋ ಏನು ॥೪॥ ಜನಕಾತ್ಮಜಾ-ಸೀತಾದೇವಿಯು, ತೇ-ನಿನ್ನ, ಜೀವಿತಾಂತಾಯ-ಪ್ರಾಣಾಂತಕ್ಕಾಗಿ, ಅಪಿನೋತ್ಪನ್ನಾ-ಹುಟ್ಟಿದವಳಾಗಲಿಲ್ಲವೇ ಏನು, ಸೀತಾನಿಮಿತ್ತಂ-ಸೀತಾದೇವಿಯ ಹೇತುವಾಗಿ, ಮಮ-ನನಿಗೆ. ವ್ಯಸನಂ-ಮರಣಜನ್ಯವ್ಯಥೆಯು, ಅಪಿನಭವೇತ್-ಆಗದೇ ಯಿರುವದೆ ಏನು ಆಗುತ್ತದೆ ॥೫॥ ಕಾಮವೃತ್ತಂ-ಸ್ವೇಚ್ಛಾವಿಹಾರಿಯಾದ, ನಿರಂಕುಶಂ-ತಡೆಯಿಲ್ಲದಿರುವ, ಈಶ್ವರಂ-ಧೊರೆಯಾದ, ತ್ವಾಂ-ನಿನ್ನನ್ನು. ಪ್ರಾಪ್ಯ-ಪಡೆದು, ತ್ವಯಾಸಹ-ನಿನ್ನೊಡನೆ, ಸರಾಕ್ಷಸಾ-ರಾಕ್ಷಸರಿಂದೊಡಗೂಡಿದ,ಲಂಕಾಪುರೀ-ಲಂಕಾಪಟ್ಟಣವು,ಅಪಿನವಿನಶ್ಯೇತ್-ನಶಿಸಿಹೋಗದೇ ಯಿರುವದೇ ಏನು,(ವಿನಾಶವಂ ಹೊಂದಲೇಹೊಂದುವದು) ॥೬॥ ಕಾಮವೃತ್ತಃ-ಕಾಮಚಾರಿಯಾದ. ದುಃಶೀಲಃ-ದುಷ್ಟವೃತ್ತಿಯುಳ್ಳ. ಪಾಪಮಂತ್ರಿತಃ-ಪಾಪಿಮಂತ್ರಿಗಳಿಂದ ಆಲೋಚನೆಮಾಡಲ್ಪಟ್ಟ,ತ್ವದ್ವಿಧಃ-ನಿನ್ನಂಥಾವನು, ಯಃ-ಯಾವನು, ರಾಜಾ-ಅರಸಾಗುವನೋ. ದುರ್ಮತಿಃ-ದುಷ್ಟಬುದ್ಧಿಯುಳ್ಳ. ಸರಾಜಾ-ಆ ಅರಸು, ಆತ್ಮಾನಂ-ತನ್ನನ್ನು, ಸ್ವಜನಂ-ಸ್ವಕೀಯಜನವನ್ನು, ರಾಷ್ಟ್ರಂ-ರಾಜ್ಯವನ್ನು, ಹಂತಿ-ಹೊಡಸಿಕೊಳ್ಳುತ್ತಾನೆ ॥೭॥ ಕೌಸಲ್ಯಾನಂದವರ್ಧನಃ-ಕೌಸಲ್ಯಾದೇವಿಗೆ ಆನಂದಕರನಾದ ಶ್ರೀರಾಮನು, ಪಿತ್ರಾ-ತಂದೆಯಿಂದ, ಪರಿತ್ಯಕ್ತೋನ-ಪರಿತ್ಯಾಗಮಾಡಲ್ಪಡಲಿಲ್ಲ. ಕಥಂಚನ-ಹ್ಯಾಗಾದರೂ, ನಾಮರ್ಯಾದಃ-ಮರ್ಯಾದೆಯಂ ತಪ್ಪಿದವನಲ್ಲ. ನಲುಬ್ಧಃ-ಲೋಭಿಯೂ ಅಲ್ಲ. ನಚದುಃಶೀಲಃ-ದುಷ್ಟಸ್ವಭಾವವುಳ್ಳವನೂ ಅಲ್ಲ. ನಚಕ್ಷತ್ರಿಯಪಾಂಸನಃ-ದುಷ್ಟಕ್ಷತ್ರಿಯನೂ ಅಲ್ಲ,ಧರ್ಮಗುಣೈಃ-ಧರ್ಮಸಂಪಾದಕಗುಣಗಳಿಂದ, ಹೀನಃ-ಶೂನ್ಯನು, ನಚ-ಅಲ್ಲ, ನತೀಕ್ಷ್ಣಃ-ಕ್ರೂರನಲ್ಲ. ಸರ್ವೇಷಾಂಭೂತಾನಾಂ-ಸಮಸ್ತಪ್ರಾಣಿಗಳಿಗೂ ಅಹಿತೇ-ಅನಿಷ್ಟದಲ್ಲಿ, ನರತಃ-ಆಸಕ್ತನಲ್ಲ ॥೯॥ ಹೇತಾತ-ಎಲೈ ಅಪ್ಪನೇ, ಕೈಕೇಯ್ಯಾ-ಕೈಕೇಯೀದೇವಿಯಿಂದ, ವಂಚಿತಂ-ವಂಚಿಸಲ್ಪಟ್ಟ. ಪಿತರಂ-ತಂದೆಯನ್ನು ದೃಷ್ಟ್ವಾ-ಕಂಡು. ಸತ್ಯವಾದಿನಂ-ಸತ್ಯವಚನವುಳ್ಳವನನ್ನಾಗಿ, ಕರಿಷ್ಯಾಮೀತಿ-ಮಾಡುವೆನೆಂದು, ಧರ್ಮಾತ್ಮಾ-ಧರ್ಮದಲ್ಲಿಮನಸ್ಸುಳ್ಳ ಶ್ರೀರಾಮನು. ವನಂ-ಅರಣ್ಯವನ್ನುಕುರಿತು, ಪ್ರವ್ರಜಿತಃ-ಹೊರಟುಬಂದನು॥ ... ... ... ॥೧೦॥ ಕೈಕೇಯ್ಯಾಃ-ಕೈಕೇಯೀದೇವಿಗೂ, ಪಿತುಃ-ತಂದೆಯಾದ, ದಶರಥಸ್ಯಚ-ದಶರಥರಾಯನಿಗೂ, ಪ್ರಿಯಕಾಮಾರ್ಥಂ-ಇಷ್ಟವಾದ ಮನೋರಥ ಪೂರಣಾರ್ಥವಾಗಿ, ರಾಜ್ಯಂ-ಕೈಗೆಬಂದರಾಜ್ಯವನ್ನು, ಭೋಗಾಂಶ್ಚ-ಸ್ವಾಧೀನವಾದ ರಾಜ್ಯಸೌಖ್ಯಗಳನ್ನು, ಹಿತ್ವಾ-ಬಿಟ್ಟು, ದಂಡಕಾವನಂ-ದಂಡಕಾರಣ್ಯವನ್ನು, ಪ್ರವಿಷ್ಟಃ-ಹೊಕ್ಕನು ॥೧೧॥ ಹೇತಾತ-ಎಲೈ ಅಪ್ಪನೇ, ರಾಮಃ-ಶ್ರೀರಾಮನು, ನಕರ್ಕಶಃ-ಕಠಿಣನೂ ಅಲ್ಲ, ನಾವಿದ್ವಾನ್-ತಿಳುವಳಿಕೆಯಿಲ್ಲದವನೂ

---

ಡಲದಲ್ಲಿರುವ ಸಮಸ್ತರಾದ ರಾಕ್ಷಸರಿಗೆ ಕ್ಷೇಮವುಂಟಾಗುವದೋ ಏನು? ಶ್ರೀರಾಮನು ಕುಪಿತನಾಗುವನೋ? ಲೋಕವನ್ನು ರಾಕ್ಷಸ ರಹಿತವನ್ನಾಗಿ ಮಾಡುವನೋ ಏನು? ಜನಕನಂದಿನಿಯಾದ ಸೀತಾದೇವಿಯು ನಿನ್ನ ಪ್ರಾಣನಾಶಕ್ಕಾಗಿ ಹುಟ್ಟಿದವಳಲ್ಲವೇ ಏನು? ಸೀತಾನಿಮಿತ್ತವಾಗಿ ನನಗೆ ವ್ಯಸನವಿಲ್ಲದಿರುವದೇ? ಕಾಮವೃತ್ತನಾದ, ತಡೆಯಿಲ್ಲದಿರುವ, ಧೊರೆಯಾದ ನಿನ್ನೊಡನೆ ಲಂಕಾಪಟ್ಟಣವು ನಶಿಸದೇ ಇರುವದೇ? (ಅಂದರೆ ವಿನಾಶವನ್ನು ಹೊಂದುವದೆಂದು ಭಾವವು) ॥೬। ಕಾಮಚಾರಿಯಾದ, ದುಷ್ಟವೃತ್ತಿಯುಳ್ಳ, ಮತ್ತು ಪಾಪಿಮಂತ್ರಿಗಳಿಂದಾಲೋಚಿಸಲ್ಪಟ್ಟ ನಿನ್ನಂಥಾವನು ಯಾವನು ಅರಸಾಗುವನೋ ಅವನು ತನ್ನನ್ನೂ, ಸ್ವಜನರನ್ನೂ, ರಾಜ್ಯವನ್ನು ಸಹಾ ಕಳೆದುಕೊಳ್ಳುತ್ತಾನೆ ॥೭। ಕೌಸಲ್ಯಾನಂದಕರನಾದ ಶ್ರೀರಾಮನು ತಂದೆಯಿಂದ ಬಿಡಲ್ಪಟ್ಟವನಲ್ಲ, ಮರ್ಯಾದೆಬಿಟ್ಟವನಲ್ಲ, ಲುಬ್ಧನಲ್ಲ, ದುಶ್ಶೀಲನಲ್ಲ, ದುಷ್ಟಕ್ಷತ್ರಿಯನೂ ಅಲ್ಲ. ಧರ್ಮಗುಣಹೀನನಲ್ಲ; ಕ್ರೂರನಲ್ಲ, ಸಮಸ್ತ ಭೂತಂಗಳಿಗೂ ಅನಿಷ್ಟವಂ ಬಯಸುವವನಲ್ಲ ।೯॥ ಎಲೋ ಅಪ್ಪ! ಕೈಕೇಯೀ ದೇವಿಯಿಂದ ವಂಚಿಸಲ್ಪಟ್ಟ ತಂದೆಯಂ ಕಂಡು, ಸತ್ಯವಚನವುಳ್ಳವನನ್ನಾಗಿ ಮಾಡುವೆನೆಂದು ಧರ್ಮಾತ್ಮನಾದ ಶ್ರೀರಾಮನು ಅರಣ್ಯಕ್ಕೆ ಬಂದನು।೧೦।ಆ ಕೈಕೇಯೀದೇವಿಗೂ,ದಶರಥರಾಯನಿಗೂಇಷ್ಟವಾದಮನೋರಥವಂಪೂರೈಸಲೋಸುಗ ಕೈವಶವಾದಾ

ಯಃ । ಅನೃತಂದುಶ್ಶ್ರುತಂಚೈವನೈವತ್ವಂವಕ್ತುಮರ್ಹಸಿ ॥೧೨॥ ರಾಮೋವಿಗ್ರಹವಾನ್ಧರ್ಮಸ್ಸಾಧುಸ್ಸತ್ಯಪರಾಕ್ರಮಃ । ರಾಜಾಸರ್ವಸ್ಯಲೋಕಸ್ಯದೇವಾನಾಂಮಘವಾನಿವ ॥೧೩॥ ಕಥಂತ್ವಂತಸ್ಯವೈದೇಹೀಂರಕ್ಷಿತಾಂಸ್ವೇನತೇಜಸಾ। ಇಚ್ಛಸಿಪ್ರಸಭಂಹರ್ತುಂಪ್ರಭಾಮಿವವಿವಸ್ವತಃ ॥೧೪॥ ಶರಾರ್ಚಿಷಮನಾಧೃಷ್ಯಂಚಾಪಖಡ್ಗೇಂಧನಂರಣೇ । ರಾಮಾಗ್ನಿಂಸಹಸಾದೀಪ್ತಂನಪ್ರವೇಷ್ಟುಂತ್ವಮರ್ಹಸಿ ॥೧೫॥ ಧನುರ್ವ್ಯಾದಿತದೀಪ್ತಾಸ್ಯಂಶರಾರ್ಚಿಷಮಮರ್ಷಣಂ। ಚಾಪಪಾಶಧರಂವೀರಂಶತ್ರುಸೈನ್ಯಪ್ರಹಾರಿಣಂ । ರಾಜ್ಯಂಸುಖಂಚಸಂತ್ಯಜ್ಯಜೀವಿತಂಚೇಷ್ಟಮಾತ್ಮನಃ । ನಾತ್ಯಾಸಾದಯಿತುಂತಾತರಾಮಾಂತಕಮಿಹಾರ್ಹಸಿ ॥೧೭॥ ಅಪ್ರಮೇಯಂಹಿತತ್ತೇಜೋಯಸ್ಯಸಾಜನಕಾತ್ಮಜಾ । ನತ್ವಂಸಮರ್ಥಸ್ತಾಂಹರ್ತುಂರಾಮಚಾಪಾಶ್ರಯಾಂವನೇ ॥೧೮॥ ತಸ್ಯಸಾನರಸಿಂಹಸ್ಯಸಿಂಹೋರಸ್ಕಸ್ಯಭಾಮಿನಿ । ಪ್ರಾಣೇಭ್ಯೋಪಿ

ಯಿಲ್ಲದವನಲ್ಲಾ, ನಾಜಿತೇಂದ್ರಿಯಃ-ಕಾಮಾಸಕ್ತನಲ್ಲ, ಅನೃತಂ-ಅಸತ್ಯವಚನವನ್ನು, ದುಶ್ಶ್ರುತಂಚ-ವ್ಯತ್ಯಸ್ತವಾಗಿ ಕೇಳುವ ಮಾತನ್ನು, ವಕ್ತುಂ-ಹೇಳುವದಕ್ಕಾಗಿ, ತ್ವಂ-ನೀನು. ನಾರ್ಹಸಿ-ಯೋಗ್ಯನಾಗಬ್ಯಾಡ ॥೧೨॥ ರಾಮಃ-ಶ್ರೀಮನು, ವಿಗ್ರಹವಾನ್-ಶರೀರಧಾರಿಯಾದ, ಧರ್ಮಃ-ಧರ್ಮಸ್ವರೂಪನು, ಸಾಧುಃ-ಸತ್ಪುರುಷನು, ಸತ್ಯಪರಾಕ್ರಮಃ-ಸಫಲವಾದ ಪರಾಕ್ರಮವುಳ್ಳವನು. ದೇವಾನಾಂ-ದೇವತೆಗಳಿಗೆ, ಮಘವಾನಿವ-ದೇವೇಂದ್ರನಂತೆ. ಸರ್ವಸ್ಯ-ಸಮಸ್ತವಾದ, ಲೋಕಸ್ಯ-ಜನಗಳಿಗೆ, ರಾಜಾ-ದೊರೆಯು ॥೧೩॥ ತ್ವಂ-ನೀನು, ತಸ್ಯ-ಅಂಥಾ ಶ್ರೀರಾಮನ, ಸ್ವೇನತೇಜಸಾ-ಸ್ವಪ್ರಭಾವದಿಂದ, ಯದ್ವಾ-ಸ್ವೇನತೇಜಸಾ-ಸ್ವಕೀಯವಾದ ಪಾತಿವ್ರತ್ಯಪ್ರಭಾವದಿಂದ, ರಕ್ಷಿತಾಂ-ಸಂರಕ್ಷಿಸಲ್ಪಟ್ಟ, ವೈದೇಹೀಂ-ಸೀತಾದೇವಿಯನ್ನು ವಿವಸ್ವತಃ-ಸೂರ್ಯನ ಪ್ರಭಾಮಿವ-ತೇಜಸ್ಸಿನಂತೆ, ಪ್ರಸಭಂ-ಬಲಾತ್ಕಾರಿಸಿ, ಹರ್ತುಂ-ಅಪಹರಿಸಿಕೊಂಡು ಬರುವದಕ್ಕಾಗಿ, ಕಥಮಿಚ್ಛಸಿ-ಹ್ಯಾಗೆ ಇಚ್ಛಿಸುವಿ ॥೧೪॥ ಶರಾರ್ಚಿಷಂ-ಬಾಣಗಳೇ ಜ್ವಾಲೆಗಳುಳ್ಳ, ಅನಾಧೃಷ್ಯಂ-ತಿರಸ್ಕರಿಸಲಸಾಧ್ಯನಾದ, ಚಾಪಖಡ್ಗೇಂಧನಂ-ಬಿಲ್ಲುಗಳನ್ನು ಖಡ್ಗಗಳೇ ಕಟ್ಟಿಗೆಯಾಗುಳ್ಳ, ( ಅಥವಾ-ಚಾಪಖಡ್ಗೇಂಧನಂ-ಧನುರ್ಧಾರಿಗಳೂ ಖಡ್ಗಧಾರಿಗಳೇ ಇಂಧನವಾಗುಳ್ಳವನು, ) ರಣೇ-ಕಾಳಗದಲ್ಲಿ, ದೀಪ್ತಂ-ಪ್ರಜ್ವಲಿಸುತ್ತಿರುವ. ರಾಮಾಗ್ನಿಂ-ಶ್ರೀರಾಮನೆಂಬ ಬೆಂಕಿಯನ್ನು, ತ್ವಂ-ನೀನು, ಸಹಸಾ-ಜಾಗ್ರತೆಯಾಗಿಆಲೋಚಿಸದೇಪ್ರವೇಷ್ಟುಂ-ಪ್ರವೇಶಿಸುವದಕ್ಕಾಗಿ, ನಾರ್ಹಸಿ-ಯೋಗ್ಯನಾಬ್ಯಾಡ॥೧೫॥ ಹೇತಾತ-ಎಲೈ ಅಪ್ಪನೇ, ಧನುರ್ವ್ಯಾದಿತದೀಪ್ತಾಸ್ಯಂ-ಬಿಲ್ಲುಗಳೆಂಬ ತೆರೆಕೊಳ್ಳಲ್ಪಟ್ಟ ಪ್ರಜ್ವಲಿಸುತಿರುವ ಮುಖವುಳ್ಳ, ಶರಾರ್ಚಿಷಂ-ಬಾಣಗಳೇವೆ ಜ್ವಾಲೆಗಳುಳ್ಳ. ಅಮರ್ಷಣಂ-ಕ್ರುದ್ಧನಾದ, ಚಾಪಪಾಶಧರಂ-ಬಿಲ್ಲೇವೆ ಪಾಶವನ್ನು ಧರಿಸಿರುವ,. ವೀರಂ-ಶೂರನಾದ. ಶತ್ರುಸೈನ್ಯಪ್ರಹಾರಿಣಂ-ಶತ್ರುಗಳಸೈನ್ಯವನ್ನು ನಾಶಗೊಳಿಸುತ್ತಿರುವ. ರಾಮಾಂತಕಂ-ಶ್ರೀರಾಮನೆಂಬ ಯಮನನ್ನು, ಆಸಾದಯಿತುಂ-ಹೊಂದುವದಕ್ಕಾಗಿ, ರಾಜ್ಯಂ-ರಾಜ್ಯವನ್ನು. ಆತ್ಮನಃ-ತನ್ನ, ಸುಖಂ-ಸುಖವನ್ನು, ಜೀವಿತಂಚ-ಪ್ರಾಣವನ್ನೂ, ಇಷ್ಟಂ-ಇಷ್ಟವಾದ ಪದಾರ್ಥವನ್ನು, ಸಂತ್ಯಜ್ಯ-ಬಿಟ್ಟು, ಇಹ-ಈಗ, ಅತಿ-ಬಹಳವಾಗಿ, ನಾರ್ಹಸಿ-ಯೋಗ್ಯನಾಗಬ್ಯಾಡ ॥೧೭॥ ಸಾಜನಕಾತ್ಮಜಾ-ಆ ಸೀತಾದೇವಿಯು, ಯಸ್ಯ-ಯಾವಶ್ರೀರಾಮನ ಸಂಬಂಧಿಯೋ, ತತ್ತೇಜಃ-ಅಂಥಾ ಶ್ರೀರಾಮನ ಪರಾಕ್ರಮವು, ಅಪ್ರಮೇಯಂ-ಹಿ-ಅಪರಿಮಿತವಾದದ್ದಲ್ಲವೆ. ವನೇ-ಅರಣ್ಯದಲ್ಲಿ, ರಾಮಚಾಪಾಶ್ರಯಾಂ-ಶ್ರೀರಾಮನ ಕೋದಂಡವೇ ಆಶ್ರಯವಾಗುಳ್ಳ, ತಾಂ-ಆ ಸೀತಾದೇವಿಯನ್ನು, ಹರ್ತುಂ-ಅಪಹರಿಸಿಕೊಂಡು ಬರುವದಕ್ಕಾಗಿ. ತ್ವಂ-ನೀನು, ನಸಮರ್ಥಃ-ಸಮರ್ಥನಲ್ಲಾ ॥೧೮॥ ನಾಭಾ

ಜ್ಯವನ್ನೂ, ಭೋಗಂಗಳನ್ನೂ ಸಹಾ ಬಿಟ್ಟು ದಂಡಕಾರಣ್ಯವನ್ನು ಹೊಕ್ಕನು ।೧೧। ಎಲೋ ಅಪ್ಪ! ಆ ಶ್ರೀರಾಮನು ಕಠಿಣನೂ, ತಿಳಿಯದಿರುವವನೂ, ಇಂದ್ರಿಯನಿಗ್ರಹವಂ ಗೈಯ್ಯದವನೂ ಸಹಾ ಅಲ್ಲ,. ನೀನು ಸುಳ್ಳು ಮಾತನ್ನು ನುಡಿಯಬ್ಯಾಡ, ಆತನು ದೇಹಧಾರಿಯಾದ ಧರ್ಮಸ್ವರೂಪನು, ಸತ್ಪುರುಷನು, ಸತ್ಯವಾದ ಪರಾಕ್ರಮವುಳ್ಳವನು, ದೇವತೆಗಳಿಗೆ ದೇವೇಂದ್ರನಂತೆ ಸಮಸ್ತ ಲೋಕಂಗಳಿಗೂ ಅರಸು ।೧೩। ಶ್ರೀರಾಮನ ಸ್ವಪ್ರಭಾವದಿಂದ (ಅಥವಾ ಸ್ವಕೀಯವಾದ ಪಾತಿವ್ರತ್ಯ ಪ್ರಭಾವದಿಂದ) ಪಾಲಿಸಲ್ಪಟ್ಟ ಸೀತಾದೇವಿಯನ್ನು ಸೂರ್ಯನ ತೇಜಸ್ಸಿನಂದದಿ ಅಪಹರಿಸಿಕ್ಕೊಂಡು ಬರಲು ನೀನು ಹ್ಯಾಗೆ ಇಚ್ಛೈಸುತ್ತೀ? ಬಾಣಗಳೇ ಜ್ವಾಲೆಗಳಾಗಿ ವುಳ್ಳವನಾಗಿಯೂ ತಿರಸ್ಕರಿಸಲಸಾಧ್ಯನಾಗಿಯೂ, ಬಿಲ್ಲುಗಳೂ. ಖಡ್ಗಗಳೇ ದಂಡವಾಗುಳ್ಳವನಾಗಿಯೂ (ಅಥವಾ ಧನುರ್ಧಾರಿಗಳೂ ಖಡ್ಗಧಾರಿಲೇ ಇಂಧನವಾಗುಳ್ಳವನಾಗಿಯೂ) ಕಾಳಗದಲ್ಲಿ ಪ್ರಜ್ವಲಿಸುವವನಾಗಿಯೂ ಇರುವ ಶ್ರೀರಾಮನೆಂಬ ಅಗ್ನಿಯನ್ನು ಆಲೋಚಿಸದೆ ಆತುರದಿಂ ಹೋಗಬ್ಯಾಡ ।೧೫। ಎಲೋ ಅಪ್ಪ, ರಾವಣನೇ! ಧನುಸ್ಸೆಂಬ, ಸಮಸ್ತರ ಸಂಹಾರಾರ್ಥವಾಗಿ ತೆರೆಯಲ್ಪಟ್ಟ, ಮತ್ತು ಹೊಳೆಯುತ್ತಿರುವ ಮುಖವುಳ್ಳವನಾಗಿಯೂ, ಬಾಣಂಗಳೆಂಬ ಜ್ವಾಲೆಗಳುಳ್ಳವನಾಗಿಯೂ, ಕುಪಿತನಾಗಿಯೂ, ಕೋದಂಡವೆಂಬ ಪಾಶವಂ ಧರಿಸಿದವನಾಗಿಯೂ, ಶೂರನಾಗಿಯೂ, ಶತೃಗಳ ಸೈನ್ಯವಂ ಹೊಡೆಯುವವನಾಗಿಯೂ ಇರುವ ಶ್ರೀರಾಮನೆಂಬ ಯಮನನ್ನೂ ಹೊಂದಿ, ರಾಜ್ಯವನ್ನೂ ಸುಖವನ್ನೂ, ಪ್ರಾಣವನ್ನೂ, ಇಷ್ಟವನ್ನೂ ಸಹಾ ನೀಗಿಕೊಳ್ಳುವನಾಗಬ್ಯಾಡ ।೧೭। ಆ ಜನಕನಂದಿನಿಯಾದ ಸೀತಾದೇವಿಯು ಯಾವ ರಾಮನನ್ನಾಶ್ರಯಿಸಿ ಯಿರುವಳೋ, ಆತನ ಪರಾಕ್ರಮವು ಅಸದೃಶವಾಗಿ ರುವದು. ರಾ

ಪ್ರಿಯತರಾಭಾರ್ಯಾನಿತ್ಯಮನುವ್ರತಾ ॥೧೯॥ ನಸಾಧರ್ಷಯಿತುಂಶಕ್ಯಾಮೈಥಿಲ್ಯೋಜಸ್ವಿನಃಪ್ರಿಯಾ। ದೀಪ್ತಸ್ಯೇವ ಹುತಾಶಸ್ಯಶಿಖಾಸೀತಾಸುಮಧ್ಯಮಾ ॥೨೦॥ ಕಿಮುದ್ಯಮಮಿಮಂವ್ಯರ್ಥಂಕೃತ್ವಾತೇರಾಕ್ಷಸಾಧಿಪ।ದೃಷ್ಟಶ್ಚೇತ್ತ್ವಂ ರಣೇತೇನತದಂತಂತವಜೀವಿತಂ ॥೨೧॥ ಜೀವಿತಂಚಸುಖಂಚೈವರಾಜ್ಯಂಚೈವಸುದುರ್ಲಭಂ । ಯದೀಚ್ಛಸಿಚಿರಂ ಭೋಕ್ತುಂಮಾಕೃಥಾರಾಮವಿಪ್ರಿಯಂ ॥೨೨॥ ಸಸರ್ವೈಸ್ಸಚಿವೈಸ್ಸಾರ್ಧಂವಿಭೀಷಣಪುರೋಗಮೈಃ ॥ ಮಂತ್ರಯಿತ್ವಾತುಧರ್ಮಿಷ್ಠೈಃಕೃತ್ವಾನಿಶ್ಚಯಮಾತ್ಮನಃ । ದೋಷಾಣಾಂಚಗುಣಾನಾಂಚಸಂಪ್ರಧಾರ್ಯಬಲಾಬಲಂ । ಆತ್ಮನಶ್ಚ ಬಲಂಜ್ಞಾತ್ವಾರಾಘವಸ್ಯಚತತ್ತ್ವತಃ ॥ ಹಿತಾಹಿತಂವಿನಿಶ್ಚಿತ್ಯಕ್ಷಮಂತ್ವಂಕರ್ತುಮರ್ಹಸಿ ॥೨೪॥ ಅಹಂತುಮನ್ಯೇ ತವನಕ್ಷಮಂರಣೇಸಮಾಗಮಂಕೋಸಲರಾಜಸೂನುನಾ। ಇದಂಹಿಭೂಯಶ್ಶೃಣುವಾಕ್ಯಮುತ್ತಮಂಕ್ಷಮಂಚಯುಕ್ತಂಚನಿಶಾಚರೇಶ್ವರ ॥೨೫॥ ಇತಿಶ್ರೀಮದಾರಣ್ಯಕಾಂಡೇ ಸಪ್ತತ್ರಿಂಶಸ್ಸರ್ಗಃ॥

---

ನರಸಿಂಹಸ್ಯ–ಪುರುಷಸಿಂಹಸ್ಯರೋಷಣಾದಃ ತಸ್ಯ–ಆ ಶ್ರೀರಾಮನಿಗೆ, ಪ್ರಾಣೇಭ್ಯೋಪಿ–ಪ್ರಾಣಗಳಿಗಿಂತಲೂ, ಪ್ರಿಯತರಾ–ಅತಿಶಯವಾಗಿ ಪ್ರೀತಿಗೆ ಪಾತ್ರಳಾದ, ಭಾರ್ಯಾ–ಹೆಂಡತಿಯು, ನಿತ್ಯಂ–ನಿರಂತರವೂ, ಅನುವ್ರತಾ–ಅನುಸರಿಸಿರುವವಳು ॥೧೯॥ ತೇಜಸ್ವಿನಃ–ತೇಜಸ್ವಿಯಾದ ಶ್ರೀರಾಮನಿಗೆ, ಪ್ರಿಯಾ–ಹೆಂಡತಿಯಾದ, ಮೈಥಿಲೀ–ಜನಕರಾಯನಮಗಳಾದ, ಸುಮಧ್ಯಮಾ–ಒಳ್ಳೇ ಮಧ್ಯಪ್ರದೇಶವುಳ್ಳ, ಸಾ ಸೀತಾ–ಆ ಸೀತಾದೇವಿಯು, ದೀಪ್ತಸ್ಯ–ಪ್ರಜ್ವಲಿಸುತ್ತಿರುವ, ಹುತಾಶಸ್ಯ–ಅಗ್ನಿಯ, ಶಿಖೇವ–ಜ್ವಾಲೆಯಂತೆ, ಧರ್ಷಯಿತುಂ–ತಿರಸ್ಕರಿಸುವದಕ್ಕೆ, ನಶಕ್ಯಾ–ಅರ್ಹಳಲ್ಲ ॥೨೦॥ ಹೇರಾಕ್ಷಸಾಧಿಪ–ಎಲೈ ರಾಕ್ಷಸರಾಜನೇ, ವ್ಯರ್ಥಂ–ವ್ಯರ್ಥವಾದ, ಇಮಮುದ್ಯಮಂ–ಈ ಉದ್ಯೋಗವನ್ನು, ಕೃತ್ವಾ–ಮಾಡಿ, ತೇ–ನಿನಗೆ, ಕಿಂ–ಏನು ಫಲವು. ರಣೇ–ಕಾಳಗದಲ್ಲಿ, ತ್ವಂ–ನೀನು, ತೇನ–ಆ ಶ್ರೀರಾಮನಿಂದ, ದೃಷ್ಟಶ್ಚೇತ್–ನೋಡಲ್ಪಟ್ಟವನೇ ಆದರೆ, ತವ–ನಿನ್ನ, ಜೀವಿತಂ–ಪ್ರಾಣವು, ತದಂತಂ–ಆ ಶ್ರೀರಾಮದರ್ಶನವೇ ಅವಧಿಯಾಗುಳ್ಳದ್ದು ॥೨೧॥ ಜೀವಿತಂಚ–ಪ್ರಾಣವನ್ನೂ, ಸುಖಂಚೈವ–ಸುಖವನ್ನೂ, ಸುದುರ್ಲಭಂ–ದುರ್ಲಭವಾದ, ರಾಜ್ಯಂಚೈವ–ರಾಜ್ಯವನ್ನೂ, ಚಿರಂ–ಬಹಳಕಾಲವು. ಭೋಕ್ತುಂ–ಅನುಭವಿಸುವದಕ್ಕಾಗಿ, ಇಚ್ಛಸಿಯದಿ–ಅಪೇಕ್ಷಿಸಿದವನೇ ಆದರೇ, ರಾಮವಿಪ್ರಿಯಂ–ಶ್ರೀರಾಮನಿಗೆ ದ್ರೋಹವನ್ನು, ಮಾಕೃಥಾಃ–ಮಾಡಬ್ಯಾಡ, ॥೨೨॥ ಸತ್ವಂ–ಆ ಈ ನೀನು, ಧರ್ಮಿಷ್ಠೈಃ–ಧರ್ಮದಲ್ಲಿ ಆಸಕ್ತಿಯುಳ್ಳ, ವಿಭೀಷಣಪುರೋಗಮೈಃ–ವಿಭೀಷಣನೇ ಮೊದಲಾಗುಳ್ಳ, ಸರ್ವೈಃ–ಸಮಸ್ತರಾದ, ಸಚಿವೈಸ್ಸಾರ್ಧಂ ಮಂತ್ರಿಗಳೊಡಗೂಡ, ಮಂತ್ರಯಿತ್ವಾ–ಆಲೋಚಿಸಿ, ಆತ್ಮನಃ–ನಿನ್ನ. ನಿಶ್ಚಯಂತು–ನಿಶ್ಚಯವನ್ನಾದರೆ, ಕೃತ್ವಾ–ಮಾಡಿ, ದೋಷಾಣಾಂಚ–ದೋಷಗಳ, ಗುಣಾನಾಂಚ–ಗುಣಗಳ, ಬಲಾಬಲಂ–ಪ್ರಾಬಲ್ಯದೌರ್ಬಲ್ಯಗಳನ್ನು, ಸಂಪ್ರಧಾರ್ಯ–ತಿಳಿದು, ತತ್ವತಃ–ಯಥಾರ್ಥವಾಗಿ, ಆತ್ಮನಃ–ತನ್ನ. ರಾಘವಸ್ಯಚ–ಶ್ರೀರಾಮನ, ಬಲಂಚ–ಶಕ್ತಿಯನ್ನೂ, ಜ್ಞಾತ್ವಾ–ತಿಳಿದು, ಹಿತಾಹಿತಂ–ಇಷ್ಟವನ್ನೂ ಅನಿಷ್ಟವನ್ನೂ, ವಿನಿಶ್ಚಿತ್ಯ–ನಿಶ್ಚೈಸಿ, ತ್ವಂ–ನೀನು ಕ್ಷಮಂ–ಯೋಗ್ಯವಾದ ಕಾರ್ಯವನ್ನು, ಕರ್ತುಂ–ಮಾಡುವದಕ್ಕಾಗಿ, ಅರ್ಹಸಿ–ಯೋಗ್ಯನಾಗು ॥೨೪॥ ಹೇನಿಶಾಚರೇಶ್ವರ–ಎಲೈ ರಾಕ್ಷಸಾಧಿಪತಿಯೇ, ಅಹಂತು–ನಾನಾದರೇ, ತವ–ನಿನಗೆ, ರಣೇ–ಕಾಳಗದಲ್ಲಿ, ಕೋಸಲರಾಜಸೂನುನಾ–ಕೋಸಲದೇಶಾಧಿಪತಿಯಾದ ದಶರಥರಾಜನ ಕುವರನೊಡನೆ. ಸಮಾಗಮಂ–ಪ್ರತಿಭಟವಾಗಿ ಸೇರುವಿಕೆಯನ್ನು, ಕ್ಷಮಂ–ಯೋಗ್ಯವನ್ನಾಗಿ, ನಮನ್ಯೇ–ತಿಳಿಯಲಾರೆನು, ಭೂಯಃ–ಮತ್ತು, ಇದಂ–ಈ ಮುಂದೆ ಹೇಳತಕ್ಕ ಕ್ಷಮಂ–ಯೋಗ್ಯವಾದ, ಯುಕ್ತಂ–ಅರ್ಥಕಾರಿಯಾದ, ವಾಕ್ಯಂ–ಮಾತನ್ನು, ಶೃಣು–ಕೇಳು ॥೨೫॥ —**ಸಪ್ತತ್ರಿಂಶಸ್ಸರ್ಗಃ**—

---

ಮನ ಕೋದಂಡವನ್ನಾಶ್ರಯಿಸಿರುವ ಆಕೆಯಂ ತರುವದಕ್ಕೆ ನೀನು ಸಮರ್ಥನಲ್ಲ ॥೧೮॥ ಸಿಂಹದ ವಕ್ಷಸ್ಥಳದಂತೆ ವಿಸ್ತಾರವಾದ ವಕ್ಷಸ್ಥಳವುಳ್ಳ ನರಶ್ರೇಷ್ಠನಾದ ಆ ಶ್ರೀರಾಮನಿಗೆ ಆ ಸೀತಾದೇವಿಯು ಪ್ರಾಣಗಳಿಗಿಂತಲೂ ಶ್ರೇಷ್ಠಳಾದವಳು, ಇಷ್ಟಭಾರ್ಯಳು, ನಿರಂತರವೂ ಆತನನ್ನೇ ಅನುಸರಿಸುವಳು ।೧೯॥ ಸಮೀಚೀನವಾದ ಮಧ್ಯಪ್ರದೇಶವುಳ್ಳ ಆ ಸೀತಾದೇವಿಯು ಅಗ್ನಿಜ್ವಾಲೆಯಂತೆ ತಿರಸ್ಕರಿಸಲಸಾಧ್ಯಳು ।೨೦। ಎಲೈ ರಾಕ್ಷಸಾಧಿಪತಿಯೇ! ಈ ಪ್ರಯತ್ನವು ವ್ಯರ್ಥವು, ಇದಂ ಮಾಡಿದರೂ ಪ್ರಯೋಜನವಿಲ್ಲ. ಆತನನ್ನು ನೀನು ಯಾವಾಗ ಕಾಣುವಿಯೋ ಅದೇ ನಿನಗೆ ಅಂತವು. ನೀನು ಪ್ರಾಣಾದಿಗಳಂ ಅನುಭವಿಸಬೇಕೆಂದು ನಿನಗೆ ಇಷ್ಟವಿದ್ದರೆ ರಾಮನಿಗೆ ಅಪಕಾರವಂ ಗೈಯ್ಯಬ್ಯಾಡ. ಆದ್ದರಿಂದ ನೀನು ಧರ್ಮಿಷ್ಠರಾದ ವಿಭೀಷಣನು ಮೊದಲಾದ ಮಂತ್ರಿಗಳಿಂ ದೊಡಗೂಡಿ ಆಲೋಚನೆಯಂ ಗೈದು ಗುಣದೋಷಂಗಳನ್ನೂ, ಬಲಾ ಬಲಂಗಳನ್ನೂ ತಿಳಿದು ನಿನ್ನ ಬಲವನ್ನೂ. ಶ್ರೀರಾಮನ ಬಲವನ್ನು ಸಹಾ ತತ್ವದಿಂದರಿತು, ಹಿತಾಹಿತಂಗಳಂ ನಿಶ್ಚಯಿಸಿ ಸಮ್ಮತವಾಗಿರುವದಂ ಮಾಡುವವನಾಗು. ಕೋಸಲದೇಶಾಧೀಶ್ವರನಾದ, ದಶರಥರಾಜನಿಗೆ ಪುತ್ರನಾದ ಶ್ರೀರಾಮನೊಡನೆ ರಣರಂಗದಲ್ಲಿ ನಿಲ್ಲುವದು ಯುಕ್ತವೆಂದು, ನನಗೆ ತೋರುವದಿಲ್ಲ. ಈ ವಿಷಯದಲ್ಲಿ ಮತ್ತೊಂದನ್ನು ಹೇಳುವೆನು ಅದಂ ಕೇಳುವವನಾಗು ।೨೫॥

—* ಅರಣ್ಯಕಾಂಡದಲ್ಲಿನ ೩೭ನೆಯ ಸರ್ಗಂಮುಗಿದುದು *—

ಕದಾಚಿದಪ್ಯಹಂವೀರ್ಯಾತ್ಪರ್ಯಟನ್ಪೃಥಿವೀಮಿಮಾಂ । ಬಲಂನಾಗಸಹಸ್ರಸ್ಯಧಾರಯನ್ಪರ್ವತೋಪಮಃ ॥ನೀಲಜೀಮೂತಸಂಕಾಶಸ್ತಪ್ತಕಾಂಚನಕುಂಡಲಃ । ಭಯಂಲೋಕಸ್ಯಜನಯನ್ಕಿರೀಟೀಪರಿಘಾಯುಧಃ । ವ್ಯಚರಂದಂಡಕಾರಣ್ಯಮೃಷಿಮಾಂಸಾನಿಭಕ್ಷಯನ್ ॥೨॥ ವಿಶ್ವಾಮಿತ್ರೋಽಥಧರ್ಮಾತ್ಮಾ ಮದ್ವಿತ್ರಸ್ತೋಮಹಾಮುನಿಃ॥ ಸ್ವಯಂಗತ್ವಾದಶರಥಂನರೇಂದ್ರಮಿದಮಬ್ರವೀತ್ ॥೩॥ ಅಯಂರಕ್ಷತುಮಾಂರಾಮಃಪರ್ವಕಾಲೇಸಮಾಹಿತಃ । ಮಾರೀಚಾನ್ಮೇಭಯಂಘೋರಂಸಮುತ್ಪನ್ನಂನರೇಶ್ವರ ॥೪॥ ಇತ್ಯೇವಮುಕ್ತೋಧರ್ಮಾತ್ಮಾ ರಾಜಾದಶರಥಸ್ತದಾ । ಪ್ರತ್ಯುವಾಚಮಹಾಭಾಗಂವಿಶ್ವಾಮಿತ್ರಂಮಹಾಮುನಿಂ ॥೫॥ ಬಾಲೋದ್ವಾದಶವರ್ಷೋಽಯಮಕೃತಾಸ್ತ್ರಶ್ಚ ರಾಘವಃ । ಕಾಮಂತುಮಮಯತ್ಸೈನ್ಯಂಮಯಾಸಹಗಮಿಷ್ಯತಿ । ಬಲೇನಚತುರಂಗೇಣಸ್ವಯಮೇತ್ಯನಿಶಾಚರಾನ್ । ವಧಿಷ್ಯಾಮಿಮುನಿಶ್ರೇಷ್ಠಶತ್ರೂಂಸ್ತೇಮನಸೇಪ್ಸಿತಾನ್ ॥೭॥ ಇತ್ಯೇವಮುಕ್ತಸ್ಸಮುನೀರಾಜಾನಮಿದಮಬ್ರವೀತ್ । ರಾಮಾನ್ನಾನ್ಯದ್ಬ

---

ಕದಾಚಿದಪಿ-ಒಂದಾನೊಂದುಕಾಲದಲ್ಲಾದರೆ, ನಾಗಸಹಸ್ರಸ್ಯ-ಸಾವಿರಾನೆಗಳ, ಬಲಂ-ಶಕ್ತಿಯನ್ನು, ಧಾರಯನ್-ಧರಿಸುವ, ಪರ್ವತೋಪಮಃ-ಬೆಟ್ಟಕ್ಕೆ ಸಮಾನನಾದ, ನೀಲಜೀಮೂತಸಂಕಾಶಃ-ಕಪ್ಪಾದ ಮೇಘಕ್ಕೆ ಸಮಾನನಾದ, ತಪ್ತಕಾಂಚನಭೂಷಣಃ-ಕಾಸಲ್ಪಟ್ಟ ಚಿಂಗಾರದ ಕುಂಡಲಗಳುಳ್ಳ, ಅಹಂ-ನಾನು, ವೀರ್ಯಾತ್-ಪರಾಕ್ರಮದ ದೆಸೆಯಿಂದ, ಇಮಾಂಪೃಥಿವೀಂ-ಈ ಭೂಮಂಡಲದಲ್ಲಿ, ಪರ್ಯಟನ್-ಸಂಚರಿಸುತ್ತಿರುವವನಾಗಿ, ಕಿರೀಟೀ-ಕಿರೀಟವನ್ನು ಧರಿಸಿದವನಾಗಿ, ಪರಿಘಾಯುಧಃ-ಕಬ್ಬಿಣದ ಹಾರೆಯುಳ್ಳ ಕೋಲೇ ಆಯುಧವಾಗುಳ್ಳವನಾಗಿ, ಲೋಕಸ್ಯ-ಜನಕ್ಕೆ, ಭಯಂ-ಭಯವನ್ನು, ಜನಯನ್-ಹುಟ್ಟಿಸುತ್ತಿರುವವನಾಗಿ, ದಂಡಕಾರಣ್ಯೇ-ದಂಡಕಾವನದಲ್ಲಿ, ಋಷಿಮಾಂಸಾನಿ-ಋಷಿಗಳನ್ನು, ಭಕ್ಷಯನ್-ತಿನ್ನುತ್ತಿರುವನಾಗಿ, ವ್ಯಚರಂ-ಸಂಚರಿಸಿದೆನು ॥೨॥ ಅಥ-ಬಳಿಕ, ಧರ್ಮಾತ್ಮಾ-ಧರ್ಮಿಷ್ಠನಾದ, ಮಹಾಮುನಿಃ-ಮಹರ್ಷಿಯಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಮತ್-ನನ್ನದೆಸೆಯಿಂದ. ವಿತ್ರಸ್ತಃ-ಭಯಗೊಂಡವನಾಗಿ, ಸ್ವಯಂ-ತಾನು, ದಶರಥಂನರೇಂದ್ರಂ-ದಶರಥರಾಜನಂ ಕುರಿತು, ಗತ್ವಾ-ಹೋಗಿ, ಇದಂ-ಈಮಾತನ್ನು, ಅಬ್ರವೀತ್-ನುಡಿದನು ॥3॥ ಹೇನರೇಶ್ವರ-ಎಲೈ ಮನುಷ್ಯರಾಜನೇ. ಮೇ-ನನಿಗೆ. ಮಾರೀಚಾತ್-ಮಾರೀಚನದೆಸೆಯಿಂದ ಘೋರಂ-ಭಯಂಕರವಾದ. ಭಯಂ-ಭಯವು, ಸಮುತ್ಪನ್ನಂ-ಹುಟ್ಟಿಧೆ, ಅದ್ಯ-ಈಗ; ಪರ್ವಕಾಲೇ-ಅಮಾವಾಸ್ಯ ಪೌರ್ಣಮಾಸ್ಯಾದಿ ಪರ್ವಕಾಲಗಳಲ್ಲಿ, ರಾಮಃ-ಶ್ರೀರಾಮನು, ಸಮಾಹಿತಃ-ಜಾಗರೂಕನಾಗಿ, ಮಾಂ-ನನ್ನನ್ನು, ರಕ್ಷತು-ಸಂರಕ್ಷಿಸಲೀ ॥೪॥ ಇತ್ಯೇವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಧರ್ಮಾತ್ಮಾ-ಧರ್ಮಿಷ್ಠನಾದ, ದಶರಥೋರಾಜಾ-ದಶರಥರಾಯನು. ತದಾ-ಆ ಕಾಲದಲ್ಲಿ, ಮಹಾಭಾಗಂ-ಪುಣ್ಯವಂತನಾದ, ಮಹಾಮುನಿಂ-ಮಹರ್ಷಿಯಾದ, ವಿಶ್ವಾಮಿತ್ರಋಷಿಯಂ ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೫॥ ಅಯಂರಾಘವಃ-ಈ ಶ್ರೀರಾಮನು, ಬಾಲಃ-ಹುಡುಗನು, ದ್ವಾದಶವರ್ಷಃ-ಹನ್ನೆರಡುವರುಷ ವಯಸ್ಸುಳ್ಳವನು, ಅಕೃತಾಸ್ತ್ರಶ್ಚ-ಅಸ್ತ್ರಾಭ್ಯಾಸವುಳ್ಳವನಲ್ಲಾ, ಮಮ-ನನ್ನ, ಸೈನ್ಯಂ-ಸೈನ್ಯವು, ಯತ್-ಯಾವದೋ ಅದು. ಕಾಮಂ-ಯಥೇಷ್ಟವಾಗಿ, ಮಯಾಸಹ-ನನ್ನೊಡಗೂಡಿ, ಗಮಿಷ್ಯತಿ-ಬರುವದು ॥೬॥ ಹೇ ಮುನಿಶ್ರೇಷ್ಠ-ಎಲೈಋಷಿಶ್ರೇಷ್ಠನೇ. ಸ್ವಯಮೇವ-ನಾನೇ; ಚತುರಂಗೇಣ-ಆನೆ ಕುದುರೆ ರಥ ಕಾಲುನಡೆ ಎಂಬ ನಾಲ್ಕು ಅಂಗಗಳುಳ್ಳ, ಬಲೇನಸಹ-ಸೈನ್ಯದೊಡಗೂಡಿ, ಏತ್ಯ-ಬಂದು. ತೇ-ನಿನಗೆ, ಮನಸಾ-ಮನದಲ್ಲಿ. ಈಪ್ಸಿತಾಂ-ಕೋರಲ್ಪಟ್ಟ, ಶತ್ರೂನ್-ಶತ್ರುಗಳಾದ, ನಿಶಾಚರಾನ್-ರಕ್ಕಸರನ್ನು; ವಧಿಷ್ಯಾಮಿ-ಸಂಹಾರಮಾಡುವೆನು. ॥೭॥ ಇತ್ಯೇವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸಮುನಿಃ-ಆ ವಿಶ್ವಾಮಿತ್ರಋಷಿಯು, ರಾಜಾನಂ-ದಶರಥರಾಯನಂ ಕುರಿತು, ಇದಂ-ಈ ಮಾತನ್ನು; ಅಬ್ರವೀತ್-ನುಡಿದನು, ತಸ್ಯರಕ್ಷಸಃ-ಆ ರಾಕ್ಷಸನಿಗೆ ರಾಮಾತ್-ಶ್ರೀರಾಮನಂ ಹೊರ್ತು, ಅನ್ಯದ್ಬಲಂ-ಮತ್ತೊಂದು ಸೈನ್ಯವು, ಲೋಕೇ-ಲೋಕದಲ್ಲಿ,

---

ಒಂದಾನೊಂದು ಕಾಲದಲ್ಲಿ ಸಾವಿರ ಆನೆಗಳ ಬಲವುಳ್ಳವನಾಗಿಯೂ, ಪರ್ವತಕ್ಕೆ ಸಮಾನನಾಗಿಯೂ, ಕಪ್ಪಾದ ಮೇಘಕ್ಕೆ ಸಮಾನನಾಗಿಯೂ, ಕಾಸಲ್ಪಟ್ಟ ಚಿನ್ನದ ಕುಂಡಲಂಗಳುಳ್ಳವನಾಗಿಯೂ ಇರುವವನಾಗಿ ನಾನು ಪರಾಕ್ರಮದಿಂದ ಈ ಭೂಮಂಡಲದಲ್ಲಿ ಸಂಚರಿಸುವವನಾಗಿ, ಕಿರೀಟವನ್ನೂ, ಪರಿಘಾಯುಧವನ್ನೂ ಧರಿಸಿ ಲೋಕಕ್ಕೆ ಭಯವನ್ನುಂಟುಮಾಡುತ್ತಾ, ದಂಡಕಾರಣ್ಯದಲ್ಲಿ ಋಷಿಮಾಂಸಂಗಳಂ ಭುಜಿಸುತ್ತಾ ತಿರುಗುತ್ತಿದ್ದನು।೨। ಬಳಿಕ ಧರ್ಮಿಷ್ಠನಾದ ವಿಶ್ವಾಮಿತ್ರ ಋಷಿಯು ನನ್ನಿಂದ ಭಯಪಟ್ಟು ದಶರಥ ರಾಯನಲ್ಲಿಗೆ ಪೋಗಿ ನುಡಿವನದೆಂತೆನೆ,—ಎಲೈ ನರಾಧಿಪನೇ! ನನಿಗೆ ಮಾರೀಚನಿಂದ ಮಹತ್ತರವಾದ ಭಯವುಂಟಾಗಿಧೆ. ಈಗ ಪರ್ವಕಾಲಗಳಲ್ಲಿ ಶ್ರೀರಾಮನು ಜಾಗರೂಕನಾಗಿ ನನ್ನಂ ಸಲಹಲೆನ್ನಲೂ, ಧರ್ಮಾತ್ಮನಾದ ದಶರಥರಾಯನು ವಿಶ್ವಾಮಿತ್ರ ಮಹರ್ಷಿಗೆ ಉತ್ತರವಂ ಕೊಟ್ಟನದೆಂತೆನೆ,—।೫। ಎಲೈ ಮುನಿವರ್ಯನೇ! ಈ ಶ್ರೀರಾಮನು ಬಾಲನು, ಹನ್ನೆರಡುವರುಷಗಳ ವಯಸ್ಸುಳ್ಳವನು, ಅಸ್ತ್ರವಿದ್ಯೆಗಳಂ ಬಲ್ಲವನಲ್ಲ. ನಾನು ನನ್ನ ಚತುರಂಗ ಬಲದಿಂದೊಡಗೂಡಿ ನಿನ್ನ ಮನಸ್ಸಿನಲ್ಲಿ ಕೋರುವ ರಕ್ಕಸರಂ ಜಯಿಸುವೆನೆಂದು ಪೇಳಲು, ವಿಶ್ವಾಮಿತ್ರನು ದಶರಥನಂ ಕುರಿತು ಇಂತೆಂದನು,—ಆ ರಕ್ಕಸನಿಗೆ ಶ್ರೀರಾಮನ ವಿನಹಾ ಮತ್ತೊಂದು ಸೈನ್ಯವು ಲೋಕದಲ್ಲಿ ಸಾಲದು. ದೇವತೆಗಳ ಯುದ್ಧದಲ್ಲಿಯೂ

ಲಂಲೋಕೇಪರ್ಯಾಪ್ತಂತಸ್ಯರಕ್ಷಸಃ । ದೇವತಾನಾಮಪಿಭವಾನ್ಸಮರೇಷ್ವಭಿಪಾಲಕಃ ॥ ಆಸೀತ್ತ್ವತ್ಕೃತಂಕರ್ಮತ್ರಿಲೋಕೇ
ವಿಶ್ರುತಂನೃಪ ॥ ಕಾಮಮಸ್ತುಮಹತ್ಸೈನ್ಯಂತಿಷ್ಠತ್ವಿಹಪರಂತಪ । ಬಾಲೋಪ್ಯೇಷಮಹಾತೇಜಾಸ್ಸಮರ್ಥಸ್ತಸ್ಯನಿ
ಗ್ರಹೇ । ಗಮಿಷ್ಯೇರಾಮಮಾದಾಯಸ್ವಸ್ತಿತೇಸ್ತುಪರಂತಪ ॥೧೧॥ ಏವಮುಕ್ತ್ವಾತುಸಮುನಿಸ್ತಮಾದಾಯನೃಪಾ
ತ್ಮಜಂ । ಜಗಾಮಪರಮಪ್ರೀತೋವಿಶ್ವಾಮಿತ್ರಸ್ಸ್ವಮಾಶ್ರಮಂ ॥೧೨॥ ತಂತದಾದಂಡಕಾರಣ್ಯೇಯಜ್ಞಮುದ್ದಿಶ್ಯ
ದೀಕ್ಷಿತಂ । ಬಭೂವೋಪಸ್ಥಿತೋರಾಮಶ್ಚಿತ್ರಂವಿಸ್ಫಾರಯನ್ಧನುಃ ॥೧೩॥ ಅಜಾತವ್ಯಂಜನಶ್ಶ್ರೀಮಾನ್ಪದ್ಮಪತ್ರ
ನಿಭೇಕ್ಷಣಃ । ಏಕವಸ್ತ್ರಧರೋಧನ್ವೀಶಿಖೀಕನಕಮಾಲಯಾ ॥ ಶೋಭಯನ್ದಂಡಕಾರಣ್ಯಂದೀಪ್ತೇನಸ್ವೇನತೇಜಸಾ ।
ಅದೃಶ್ಯತತತೋರಾಮೋಬಾಲಚಂದ್ರಇವೋದಿತಃ ॥೧೪॥ ತತೋಹಂಮೇಘಸಂಕಾಶಸ್ತಪ್ತಕಾಂಚನಕುಂಡಲಃ । ಬಲೀದ
ತ್ತವರೋದರ್ಪಾದಾಜಗಾಮತದಾಶ್ರಮಂ ॥೧೫॥ ತೇನದೃಷ್ಟಃಪ್ರವಿಷ್ಟೋಹಂಸಹಸೈವೋದ್ಯತಾಯುಧಃ । ಮಾಂತು

---

ನಪರ್ಯಾಪ್ತಂ-ಸಾಲದು, ದೇವತಾನಾಂ-ದೇವತೆಗಳ, ಸಮರೇಷ್ವಪಿ-ಕಾಳಗದಲ್ಲಿಯೂ, ಭವಾನ್-ನೀನು, ಅಭಿಪಾಲಕಃ-ಸಂರಕ್ಷಿಸಿದವನು ॥೯॥ ಹೇನೃಪ-ಎಲೈ ಅರಸೇ, ತವ-ನಿನ್ನ, ಕೃತಂಕರ್ಮ-ಮಾಡಲ್ಪಟ್ಟಕಾರ್ಯವು, ತ್ರಿಲೋಕೇ-ಲೋಕತ್ರಯದಲ್ಲಿಯೂ, ವಿಶ್ರುತಂ-ತಿಳಿಯಲ್ಪಟ್ಟದ್ದು, ಆಸೀತ್-ಆಗಿಯೇ ಯಿದೆ, ಹೇಪರಂತಪ-ಎಲೈ ಶತ್ರುಸಂಹಾರಕನೇ, ಮಹತ್-ದೊಡ್ಡದಾದ ಸೈನ್ಯಂ-ಸೈನ್ಯವು, ಕಾಮಂ-ಯಥೇಷ್ಟವಾಗಿ, ಅಸ್ತು-ಇರಲೀ. ತತ್ಸೈನ್ಯಂ-ಆ ಸೈನ್ಯವು, ಇಹ-ಇಲ್ಲಿಯೇ, ತಿಷ್ಠತು-ಇರಲೀ ॥೧೦॥ ಹೇಪರಂತಪ-ಎಲೋ ಶತ್ರುಸಂಹಾರಕನೇ, ತೇ-ನಿನಗೆ, ಸ್ವಸ್ತಿ-ಕ್ಷೇಮವು, ಅಸ್ತು-ಆಗಲಿ ಏಷಃ ಈ ಶ್ರೀರಾಮನು, ಬಾಲೋಪಿ-ಬಾಲನಾದರೂ. ಮಹಾತೇಜಾಃ-ಮಹಾಪರಾಕ್ರಮವಂತನು, ತಸ್ಯ-ಆ ಮಾರೀಚನ ನಿಗ್ರಹೇ-ನಿಗ್ರಹಿಸುವಿಕೆಯಲ್ಲಿ ಸಮರ್ಥಃ-ಅರ್ಹನಾಗಿಧಾನೆ, ರಾಮಂ-ಶ್ರೀರಾಮನನ್ನು, ಆದಾಯ-ಕರೆದುಕೊಂಡು, ಗಮಿಷ್ಯೇ-ಹೋಗುವೆನು, ॥೧೧॥ ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಸವಿಶ್ವಾಮಿತ್ರೋಮುನಿಃ-ಆ ವಿಶ್ವಾಮಿತ್ರಮುನಿಯು, ತಂನೃಪಾತ್ಮಜಂ-ಆ ರಾಜಕುಮಾರನನ್ನು ಆದಾಯ-ಕರೆದುಕೊಂಡು, ಪರಮಪ್ರೀತಃ-ಬಹಳ ಸಂತೋಷಗೊಂಡವನಾಗಿ, ಸ್ವಮಾಶ್ರಮಂ-ತನ್ನ ಆಶ್ರಮವನ್ನುಕುರಿತು, ಜಗಾಮ-ತೆರಳಿದನು ॥೧೨॥ ತದಾ-ಆ ಕಾಲದಲ್ಲಿ, ದಂಡಕಾರಣ್ಯೇ-ದಂಡಕಾವನದಲ್ಲಿ, ಯಜ್ಞಂ-ಯಾಗವನ್ನು, ಉದ್ದಿಶ್ಯ-ಉದ್ದೇಶಮಾಡಿ, ದೀಕ್ಷಿತಂ-ದೀಕ್ಷಾಬದ್ಧನಾದ. ತಂ-ಆ ವಿಶ್ವಾಮಿತ್ರನನ್ನುಕುರಿತು, ರಾಮಃ-ಶ್ರೀರಾಮನು, ಚಿತ್ರಂ-ಆಶ್ಚರ್ಯಕರವಾದ, ಧನುಃ-ಕೋದಂಡವನ್ನು ವಿಸ್ಫಾರಯನ್-ಟಂಕಾರಮಾಡಿಸುತ್ತಿರುವನಾಗಿ. ಉಪಸ್ಥಿತಃ-ಸಮೀಪವರ್ತಿಯು, ಬಭೂವ-ಆದನು ॥ ಅಜಾತವ್ಯಂಜನಃ-ಹುಟ್ಟದಿರುವ ಯೌವನಕ್ಕೆ ಸೂಚಕಗಳಾದ ಮೀಸೆಗಳೇ ಮುಂತಾದ ಚಿಹ್ನೆಗಳುಳ್ಳವನಾಗಿರುವ, ಶ್ರೀಮಾನ್-ಸಂಪದ್ಯುಕ್ತನಾದ ಪದ್ಮಪತ್ರನಿಭೇಕ್ಷಣಃ-ಕಮಲದಪತ್ರಗಳಿಗೆ ಸಮಾನವಾದ ನೇತ್ರಗಳುಳ್ಳ, (ಯದ್ವಾ-ಶ್ರೀಮಾನ್-ಅಪಾಯವಿಲ್ಲದಿರುವ ನಿತ್ಯಲಕ್ಷ್ಮಿಯುಳ್ಳ. ಪದ್ಮಪತ್ರನಿಭೇಕ್ಷಣಃ-ಸೂರ್ಯಕಿರಣಗಳಿಂದರಳಿದ ಕಮಲದಳಗಳಂತಗಲವಾದ ನೇತ್ರಗಳುಳ್ಳ,) ಏಕವಸ್ತ್ರಧರಃ-ಬ್ರಹ್ಮಚರ್ಯಕ್ಕೆ ಯೋಗ್ಯವಾದ ಒಂದೇ ವಸ್ತ್ರವಂ ಧರಿಸಿರುವ, ಧನ್ವೀ-ಧನುರ್ಧಾರಿಯಾದ, ಶಿಖೀ-ಸ್ವಕುಲೋಚಿತವಾದ ಪನೆವಿಗಳೇ ಮುಂತಾದ ಚಂಡಿಕೆಗಳುಳ್ಳ, ಕನಕಮಾಲಯಾ-ಬಂಗಾರದ ಬಣ್ಣವಾದಸರದಿಂದ. ದೀಪ್ತೇನ-ಹೊಳೆಯುತ್ತಿರುವ, ಸ್ವೇನ-ಸ್ವಕೀಯವಾದ ತೇಜಸಾ-ತೇಜಸ್ಸಿನಿಂದ, ದಂಡಕಾರಣ್ಯಂ-ದಂಡಕಾರಣ್ಯವನ್ನು, ಶೋಭಯನ್-ಕಂಗೊಳಿಸುತ್ತಿರುವ, ರಾಮಃ-ಶ್ರೀರಾಮನು. ತತಃ-ಬಳಿಕ, ಉದಿತಃ-ಉದಯವಾದ. ಬಾಲಚಂದ್ರಇವ-ಆಗ ಹುಟ್ಟಿದ ಚಂದ್ರನಂತೆ, ಅದೃಶ್ಯತ-ಕಾಣಲ್ಪಟ್ಟನು ॥೧೪॥ ತತಃ-ಬಳಿಕ, ಮೇಘಸಂಕಾಶಃ-ಮೇಘಕ್ಕೆ ಸಮಾನನಾದ. ತಪ್ತಕಾಂಚನಕುಂಡಲಃ ಶೋಧಿತವಾದ ಚಿನ್ನದಕರ್ಣಭೂಷಣಗಳುಳ್ಳ, ಬಲೀ-ಬಲಾಢ್ಯನಾದ, ದತ್ತವರಃ-ಕೊಡಲ್ಪಟ್ಟ ವರವುಳ್ಳ, ಅಹಂ-ನಾನು, ದರ್ಪಾತ್-ಗರ್ವದದೆಸೆಯಿಂದ, ತದಾಶ್ರಮಂ-ಆ ವಿಶ್ವಾಮಿತ್ರಾಶ್ರ

---

ನೀನು ಪಾಲಿಸಿದವನು ॥೯॥ ಎಲೈ ರಾಜನೇ! ನಿನ್ನಿಂದ ಮಾಡಲ್ಪಟ್ಟ ಕಾರ್ಯವು ಮೂಲೋಕಗಳಲ್ಲಿಯೂ ಪ್ರಚುರಕೊಂಡೇ ಇದೆ. ಅದು ಹಾಗಿರಲಿ, ನಿನಗೆ ಬೇಕಾದಷ್ಟು ಸೈನ್ಯವಿರಲಿ, ಆ ಸೈನ್ಯವು ಇಲ್ಲಿಯೇ ಇರಲಿ ॥೧೦॥ ಎಲೈ ಶತ್ರುಸಂಹಾರಕನೇ! ನಿನಗೆ ಶುಭವುಂಟಾಗಲಿ. ಈ ಶ್ರೀರಾಮನು ಬಾಲಕನಾದರೂ ಮಹಾ ಪರಾಕ್ರಮವಂತನು, ಆ ಮಾರೀಚನಂ ನಿಗ್ರಹಿಸುವದರಲ್ಲಿ ಸಮರ್ಥನು. ರಾಮನಂ ಕರೆದುಕೊಂಡು ನಾಂ ತೆರಳುವೆನೆಂದು ವಿಶ್ವಾಮಿತ್ರಮುನಿಯು ನುಡಿದವನಾಗಿ, ಆ ರಾಜಪುತ್ರನಾದ ಶ್ರೀರಾಮನಂ ಕರೆದುಕೊಂಡು ತನ್ನಾಶ್ರಮಕ್ಕೆ ಸಾರಿ, ಅಲ್ಲಿ ದಂಡಕಾರಣ್ಯದಲ್ಲಿ ಯಜ್ಞದೀಕ್ಷೆಯಂ ಗೈದವನಾಗಲೂ, ಬಾಲಕನಾದ ಶ್ರೀರಾಮನು ವಿಚಿತ್ರವಾಗಿರುವ ಧನುಷ್ಟಂಕಾರವಂ ಗೈಯುತ್ತಾ ಆತನ ಸಮೀಪದಲ್ಲಿ ನಿಂತನದೆಂತೆನೆ,—ಯೌವನ ಪ್ರಾದುರ್ಭಾವವಿಲ್ಲದವನಾಗಿಯೂ, ಸಂಪದ್ಯುಕ್ತನಾಗಿಯೂ, ತಾವರೇ ಯೆಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವನಾಗಿಯೂ, ಬ್ರಹ್ಮಚರ್ಯಾಶ್ರಮಕ್ಕೆ ಯೋಗ್ಯವಾದ ಏಕ ವಸ್ತ್ರವಂ ಧರಿಸಿದವನಾಗಿಯೂ ಧನುರ್ಧಾರಿಯಾಗಿಯೂ, ತನ್ನ ಕುಲೋಚಿತವಾದ ಚಂಡಿಕೆಯುಳ್ಳವನಾಗಿಯೂ, ಸುವರ್ಣಮಾಲಿಕೆಗಳಿಂದಲೂ ಸ್ವಕೀಯವಾದ ತೇಜಸ್ಸಿನಿಂದಲೂ ಸಹಾ ಆ ದಂಡಕಾರಣ್ಯವಂ ಕಂಗೊಳಿಸುವಂತೆ ಗೈಯುತ್ತಿರುವವನಾಗಿ, ಬಾಲಚಂದ್ರನಂತೆ ಕಾಣಲ್ಪಟ್ಟನು ॥೧೪॥ ಅನಂತರದಲ್ಲಿ ಮೇ

ದೃಷ್ಟ್ವಾ ಧನುಸ್ಸಜ್ಯಮಸಂಭ್ರಾಂತಶ್ಚಕಾರಸಃ ॥೧೭॥ ಅವಜಾನನ್ನಹಂ ಮೋಹಾದ್ಬಾಲೋಯಮಿತಿ ರಾಘವಂ । ವಿಶ್ವಾ
ಮಿತ್ರಸ್ಯ ತಾಂ ವೇದಿಮಭ್ಯಧಾವಂ ಕೃತತ್ವರಃ ॥೧೮॥ ತೇನ ಮುಕ್ತಸ್ತತೋ ಬಾಣಶ್ಶಿತಶ್ಶತ್ರುನಿಬರ್ಹಣಃ । ತೇನಾಹಂ ತ್ವಾ
ಹತಃ ಕ್ಷಿಪ್ತಸ್ಸಮುದ್ರೇ ಶತಯೋಜನೇ ॥೧೯॥ ನೇಚ್ಛತಾ ತಾತ ಮಾಂ ಹಂತುಂ ತದಾ ವೀರೇಣ ರಕ್ಷಿತಃ । ರಾಮಸ್ಯ ಶರವೇಗೇನ ನಿರ
ಸ್ತೋಹಮಚೇತನಃ ॥೨೦॥ ಪಾತಿತೋಹಂ ತದಾ ತೇನ ಗಂಭೀರೇ ಸಾಗರಾಂಭಸಿ । ಪ್ರಾಪ್ಯ ಸಂಜ್ಞಾಂ ಚಿರಾತ್ತಾತ ಲಂಕಾಂ ಪ್ರ
ತಿಗತಃ ಪುರೀಂ ॥೨೧॥ ಏವಮಸ್ಮಿ ತದಾ ಮುಕ್ತಸ್ಸಹಾಯಾಸ್ತು ನಿಪಾತಿತಾಃ । ಅಕೃತಾಸ್ತ್ರೇಣ ಬಾಲೇನ ರಾಮೇಣಾಕ್ಲಿಷ್ಟ
ಕರ್ಮಣಾ ॥೨೨॥ ತನ್ಮಯಾ ವಾರ್ಯಮಾಣಸ್ತ್ವಂ ಯದಿ ರಾಮೇಣ ವಿಗ್ರಹಂ । ಕರಿಷ್ಯಸ್ಯಾಪದಂ ಘೋರಾಂ ಕ್ಷಿಪ್ರಂ ಪ್ರಾಪ್ಸ್ಯ
ಸಿ ರಾವಣ ॥೨೩॥ ಕ್ರೀಡಾರತಿವಿಧಿಜ್ಞಾನಾಂ ಸಮಾಜೋತ್ಸವಶಾಲಿನಾಂ । ರಕ್ಷಸಾಂ ಚೈವ ಸಂತಾಪಮನರ್ಥಂ ಚಾಹರಿಷ್ಯ

---

ಮುಪಂಕುರಿತು, ಆಜಗಾಮ-ಬಂದೆನು ॥೧೬॥ ಸಹಸಾ-ಜಾಗ್ರತೆಯಾಗಿ, ಪ್ರವಿಷ್ಟಃ-ಹೊಕ್ಕಿರುವ, ಉದ್ಯತಾಯುಧಃ-ಎತ್ತಲ್ಪಟ್ಟ ಪರಿಘಾಯುಧವುಳ್ಳ, ಅಹಂ-ನಾನು, ತೇನ-ಆ ಶ್ರೀರಾಮನಿಂದ ದೃಷ್ಟಃ-ನೋಡಲ್ಪಟ್ಟೆನು, ಸಃ-ಆ ಶ್ರೀರಾಮನು, ಮಾಂತು-ನನ್ನನ್ನಾದರೆ, ದೃಷ್ಟ್ವಾ-ಕಂಡು, ಅಸಂಭ್ರಾಂತಃ-ಗಾಬರಿಯಿಲ್ಲದವನಾಗಿ, ಧನುಃ-ಬಿಲ್ಲನ್ನು, ಸಜ್ಯಂ-ಹೆದೆಯಿಂದಕೂಡಿದ್ದನ್ನಾಗಿ. ಚಕಾರ-ಮಾಡಿದನು ॥೧೭॥ ಅಹಂ-ನಾನು, ಮೋಹಾತ್-ಅಜ್ಞಾನದದೆಸೆಯಿಂದ, ರಾಘವಂ-ಶ್ರೀರಾಮನನ್ನು, ಅಯಂಬಾಲಇತಿ-ಇವನು ಹುಡುಗನೆಂದು, ಅವಜಾನನ್-ತಿರಸ್ಕರಿಸಿದವನಾಗಿ, ಕೃತತ್ವರಃ-ಮಾಡಲ್ಪಟ್ಟ ಜಾಗ್ರತೆಯುಳ್ಳವನಾಗಿ, ವಿಶ್ವಾಮಿತ್ರಸ್ಯ-ವಿಶ್ವಾಮಿತ್ರನ. ತಾಂವೇದಿಂ-ಆ ಯಜ್ಞವೇದಿಯಂಕುರಿತು. ಅಭ್ಯಧಾವಂ-ಓಡಿಬಂದೆನು ॥೧೮॥ ತತಃ-ಬಳಿಕ, ತೇನ-ಆ ಶ್ರೀರಾಮನಿಂದ, ಶತ್ರುನಿಬರ್ಹಣಃ-ಶತ್ರುಗಳ ಸಂಹಾರಕವಾದ. ಶಿತಃ-ಸಾಣೆಹಿಡಿಯಲ್ಪಟ್ಟ, ಬಾಣಃ-ಬಾಣವು. ಮುಕ್ತಃ-ಬಿಡಲ್ಪಟ್ಟಿತು ತೇನ-ಆ ಬಾಣದಿಂದ ಅಹಂತು-ನಾನಾದರೆ. ಆಹತಃ-ಹೊಡೆಯಲ್ಪಟ್ಟವನಾಗಿ, ಶತಯೋಜನೇ-ನೂರು ಯೋಜನ ಉದ್ದವಾದ ಸಾಗರವುಳ್ಳ, ಸಮುದ್ರೇ-ಕಡಲಿನಲ್ಲಿ, ಕ್ಷಿಪ್ತಃ-ಹಾಕಲ್ಪಟ್ಟೆನು ॥೧೯॥ ಹೇತಾತ-ಎಲೈ ಅಪ್ಪನೇ. ತದಾ-ಆಕಾಲದಲ್ಲಿ, ಮಾಂ-ನನ್ನನ್ನು, ಹಂತುಂ-ಹೊಡೆಯುವುದಕ್ಕಾಗಿ. ನೇಚ್ಛತಾ-ಇಚ್ಛಿಸದಿರುವ, ವೀರೇಣ-ಶೂರನಾದ ಶ್ರೀರಾಮನಿಂದ. ರಕ್ಷಿತಃ-ಉಳಿದೆನು, ರಾಮಸ್ಯ-ಶ್ರೀರಾಮನ, ಶರವೇಗೇನ-ಬಾಣವೇಗದಿಂದ, ನಿರಸ್ತಃ-ತಳ್ಳಲ್ಪಟ್ಟವನಾಗಿ, ಅಹಂ-ನಾನು, ಅಚೇತನಃ-ಪ್ರಜ್ಞೆತಪ್ಪಿದವನಾದೆ ॥೨೦॥ ಅಹಂ-ನಾನು, ತೇನ-ಆ ಬಾಣದಿಂದ, ತದಾ-ಆಕಾಲದಲ್ಲಿ, ಗಂಭೀರೇ-ತುಂಬಿರುವ, ಸಾಗರಾಂಭಸಿ-ಕಡಲಿನ ಜಲದಲ್ಲಿ, ಪಾತಿತಃ-ಕೆಡಹಲ್ಪಟ್ಟೆನು, ಹೇತಾತ-ಎಲೋ ಅಪ್ಪನೇ, ಚಿರಾತ್-ಬಹುಕಾಲಕ್ಕೆ, ಸಂಜ್ಞಾಂ-ಪ್ರಜ್ಞೆಯನ್ನು, ಪ್ರಾಪ್ಯ-ಹೊಂದಿ, ಲಂಕಾಪುರೀಂಪ್ರತಿ-ಲಂಕಾಪಟ್ಟಣವಂಕುರಿತು, ಗತಃ-ಬಂದೆನು ॥೨೧॥ ಏವಂ-ಈಪರಿಯಾಗಿ, ತದಾ-ಆಕಾಲದಲ್ಲಿ, ಅಕೃತಾಸ್ತ್ರೇಣ-ಅಸ್ತ್ರವಿದ್ಯಾಭ್ಯಾಸವಿಲ್ಲದಿರುವ, ಬಾಲೇನ-ಹುಡುಗನಾದ, ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದೆ ಕಾರ್ಯಕಾರಿಯಾದ, ರಾಮೇಣ-ಶ್ರೀರಾಮನಿಂದ. ಮುಕ್ತಃ-ಬಿಡಲ್ಪಟ್ಟವನು, ಅಸ್ಮಿ-ಆದೆನು. ಸಹಾಯಾಸ್ತು-ಹಿಂದೆಬಂದವರಾದರೆ, ನಿಪಾತಿತಾಃ-ಧ್ವಂಸಮಾಡಲ್ಪಟ್ಟರು ॥೨೨॥ ಹೇರಾವಣ-ಎಲೋ ರಾವಣನೇ. ತತ್-ಆಕಾರಣದದೆಸೆಯಿಂದ. ಮಯಾ-ನನ್ನಿಂದ, ವಾರ್ಯಮಾಣಃ-ತಡೆಮಾಡಲ್ಪಟ್ಟ, ತ್ವಂ-ನೀನು, ರಾಮೇಣ-ಶ್ರೀರಾಮನೊಡನೆ, ವಿಗ್ರಹಂ-ಕಾಳಗವನ್ನು, ಕರಿಷ್ಯಸಿಯದಿ-ಮಾಡುವನೇ ಆದರೆ, ಘೋರಾಂ-ಕ್ರೂರವಾದ, ಆಪದಂ-ವಿಪತ್ತನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ಪ್ರಾಪ್ಸ್ಯಸಿ-ಹೊಂದುತ್ತೀಯೆ ॥೨೩॥ ಕ್ರೀಡಾರತಿವಿಧಿಜ್ಞಾನಾಂ-ವಿಲಾಸದಿಂ ಭೋಗಗಳ ಅನುಭವವನ್ನು ತಿಳಿದಿರುವ, ಸಮಾಜೋತ್ಸವಶಾಲಿನಾಂ-ಸಭಸೇರಿ

---

ಘಸದೃಶನಾಗಿಯೂ, ಅಪರಂಜಿವಿಕಾರವಾದ ಕುಂಡಲಂಗಳುಳ್ಳವನಾಗಿಯೂ, ಬಲವಂತನಾಗಿಯೂ, ವರಗಳಂ ಪಡೆದವನಾಗಿಯೂ. ಇರುವನಾನು ಬಹು ಗರ್ವದಿಂದ ಆ ಮುನಿಯ ಆಶ್ರಮವನ್ನೈದಿ ಪರಿಘಾಯುಧವಂ ಪಿಡಿದುಕೊಂಡು ತ್ವರೆಯಾಗಿ ಹೊಕ್ಕವನಾಗಿಯೂ ಆ ಶ್ರೀರಾಮನಿಂದ ನೋಡಲ್ಪಟ್ಟವನಾದೆನು, ಆಗ ಆ ಶ್ರೀರಾಮನು ನನ್ನಂ ಕಂಡು ಗಾಬರಿಬೀಳದಿರುವವನಾಗಿ, ಕೋದಂಡವನ್ನು ಜ್ಯಾಸಹಿತವನ್ನಾಗಿ ಮಾಡಿದನು ॥೧೭॥ ಎಲೈ ರಾವಣನೆ, ಕೇಳುವವನಾಗು; ನಾನು ಅಜ್ಞಾನದಿಂದ ಆ ಶ್ರೀರಾಮನನ್ನು ಬಾಲಕನೆಂದರಿತು ಆ ತನಂ ತಿರಸ್ಕರಿಸಿ ತ್ವರೆಯಾಗಿ ಆ ವೇದಿಕೆಯಂಕುರಿತು ಓಡಿಬರಲು, ಶ್ರೀರಾಮನು ತೀಕ್ಷ್ಣವಾದ ಬಾಣವಂಬಿಟ್ಟನು. ಆ ಬಾಣದಿಂದ ನಾನು ಶತಯೋಜನ ಪರಿಯಂತವೂ ತಳ್ಳಲ್ಪಟ್ಟು ಸಮುದ್ರದಲ್ಲಿ ಬೀಳಿಸಲ್ಪಟ್ಟೆನು. ಆ ಸಮಯದಲ್ಲಿ ನನ್ನಂ ಕೊಲ್ಲಬೇಕೆಂದು ಇಚ್ಛಿಸದೇ ಇರುವ ಶ್ರೀರಾಮನಿಂದ ರಕ್ಷಿಸಲ್ಪಟ್ಟೆನು. ಆ ದಶೆ ಆ ತನ ಬಾಣವೇಗದಿಂದ ಮೂರ್ಛಿತನಾಗಿ ಬಹುಕಾಲವು ಸಮುದ್ರದಲ್ಲಿಬಿದ್ದು ಪುನಃ ಯೆಚ್ಚೆತ್ತು ಲಂಕಾಪಟ್ಟಣಕ್ಕೆಬಂದೆನು ॥೨೧॥ ಎಲೊ ಅಪ್ಪ, ರಾವಣನೇ, ಅಸ್ತ್ರಾಭ್ಯಾಸವಿಲ್ಲದಿರುವ ಕಾಲದಲ್ಲಿಯೇ ಆ ಶ್ರೀರಾಮನಿಂದ ನಾನುಮುಕ್ತನಾದೆನು. ನನಿಗೆಸಹಾಯವಾಗಿ ಬಂದವರೆಲ್ಲರೂ ಹತವಾದರು. ಆ ದಕಾರಣ ನಾನೆಷ್ಟು ತಡೆಮಾಡಿದರೂ ನಿಲ್ಲದೇ ನೀನು ಶ್ರೀರಾಮನೊಡನೆ; ಕಾಳಗವಂ ಗೈಯ್ಯುವವನೇ ಆದರೆ ಮಹಾವಿಪತ್ತನ್ನು ಪೊಂದುವವನಾಗುವೆ ॥೨೩॥ ವಿಲಾಸದಿಂದ

ಸಿ ।೨೪। ಹರ್ಮ್ಯಪ್ರಾಸಾದಸಂಬಾಧಾಂ ನಾನಾರತ್ನವಿಭೂಷಿತಾಂ । ದ್ರಕ್ಷ್ಯಸಿ ತ್ವಂ ಪುರೀಂ ಲಂಕಾಂ ವಿನಷ್ಟಾಂ ಮೈಥಿಲೀಕೃತೇ ।೨೫। ಅಕುರ್ವಂತೋಽಪಿ ಪಾಪಾನಿ ಶುಚಯಃ ಪಾಪಸಂಶ್ರಯಾತ್ । ಪರಪಾಪೈರ್ವಿನಶ್ಯಂತಿ ಮತ್ಸ್ಯಾ ನಾಗಹ್ರದೇ ಯಥಾ ।೨೬। ದಿವ್ಯಚಂದನದಿಗ್ಧಾಂಗಾನ್ ದಿವ್ಯಾಭರಣಭೂಷಿತಾನ್ । ದ್ರಕ್ಷ್ಯಸ್ಯಭಿಹತಾನ್ ಭೂಮೌ ತವ ದೋಷಾತ್ತು ರಾಕ್ಷಸಾನ್ ।೨೭। ಹೃತದಾರಾನ್ ಸದಾರಾಂಶ್ಚ ದಶ ವಿದ್ರವತೋ ದಿಶಃ । ಹತಶೇಷಾನಶರಣಾನ್ ದ್ರಕ್ಷ್ಯಸಿ ತ್ವಂ ನಿಶಾಚರಾನ್ ।೨೮। ಶರಜಾಲಪರಿಕ್ಷಿಪ್ತಾಮಗ್ನಿಜ್ವಾಲಾಸಮಾವೃತಾಂ । ಪ್ರದಗ್ಧಭವನಾಂ ಲಂಕಾಂ ದ್ರಕ್ಷ್ಯಸಿ ತ್ವಂ ನ ಸಂಶಯಃ ।೨೯। ಪರದಾರಾಭಿಮರ್ಶಾತ್ತು ನಾನ್ಯತ್ಪಾಪತರಂ ಮಹತ್ । ಪ್ರಮದಾನಾಂ ಸಹಸ್ರಾಣಿ ತವ ರಾಜನ್ ಪರಿಗ್ರಹಃ ॥ ಭವ ಸ್ವದಾರನಿರತಃ ಸ್ವಕುಲಂ ರಕ್ಷ ರಾಕ್ಷಸ । ಮಾನಮೃದ್ಧಿಂ ಚ ರಾಜ್ಯಂ ಚ ಜೀವಿತಂ ಚೇಷ್ಟಮಾತ್ಮನಃ ॥ ಕಳತ್ರಾಣಿ ಚ

---

ಸಂತೋಷಕಾರ್ಯಳಿಂ ಒಪ್ಪುತ್ತಿರುವ, ರಕ್ಷಸಾಂ ಚೈವ–ರಾಕ್ಷಸರಿಗೂ. ಅನರ್ಥಂ–ಮಹಾಪತ್ತನ್ನು, ಸಂಕಾಪಂಚ–ಸಂಕಟವನ್ನು. ಆಧಾಸ್ಯಸಿ–ತರಿಸುವಿ ॥೨೪॥ ತ್ವಂ–ನೀನು, ಹರ್ಮ್ಯಪ್ರಾಸಾದಸಂಬಾಧಾಂ–ಉಪ್ಪರಿಗೆಗಳಿಂದಲೂ ಅರಮನೆಗಳಿಂದಲೂ, ಅಥವಾ–ದೇವತಾಯತನಗಳಿಂದಲೂ ತುಂಬಿರುವ, ನಾನಾರತ್ನವಿಭೂಷಿತಾಂ–ಅನೇಕ ರತ್ನಗಳಿಂದಲಂಕರಿಸಲ್ಪಟ್ಟ, ಲಂಕಾಪುರೀಂ–ಲಂಕಾಪಟ್ಟಣವನ್ನು, ಮೈಥಿಲೀಕೃತೇ–ಸೀತಾದೇವಿಯ ನಿಮಿತ್ತವಾಗಿ, ವಿನಷ್ಟಾಂ–ನಷ್ಟವಾದದ್ದನ್ನಾಗಿ, ದ್ರಕ್ಷ್ಯಸಿ–ನೋಡುವಿ ॥೨೫॥ ಪಾಪಾನಿ–ಪಾಪಗಳನ್ನು ಅಕುರ್ವಂತಃ–ಮಾಡದಿರುವವನಾದರೂ, ಶುಚಯಃ–ಪರಿಶುದ್ಧರಾದವರೂ, ಪಾಪಸಂಶ್ರಯಾತ್–ಪಾಪಪುರುಷನ ಸಂಸರ್ಗದದೆಸೆಯಿಂದ, ಪರಪಾಪೈಃ–ಇತರರ ಪಾಪಗಳಿಂದ, ನಾಗಹ್ರದೇ–ಸರ್ಪಯುಕ್ತವಾದ ಮಡುವಿನಲ್ಲಿ, ಮತ್ಸ್ಯಾಃ ಯಥಾ–ಮೀನುಗಳಂತೆ, ವಿನಶ್ಯಂತಿ–ನಶಿಸಿಹೋಗುತ್ತಾರೆ ॥೨೬॥ ದಿವ್ಯಚಂದನದಿಗ್ಧಾಂಗಾನ್–ಮನೋಹರವಾದ ಶ್ರೀಗಂಧದಿಂ ಲೇಪನಮಾಡಲ್ಪಟ್ಟ ಶರೀರವುಳ್ಳ, ದಿವ್ಯಾಭರಣಭೂಷಿತಾನ್–ಮನೋಹರವಾದ ಒಡವೆಗಳಿಂದಲಂಕರಿಸಲ್ಪಟ್ಟ, ರಾಕ್ಷಸಾನ್–ರಕ್ಕಸರನ್ನು, ಭೂಮೌ–ನೆಲದಲ್ಲಿ, ತವದೋಷಾತ್ತು–ನಿನ್ನ ದೋಷದದೆಸೆಯಿಂದ, ಅಭಿಹತಾನ್–ಸಂಹೃತರಾದವರನ್ನಾಗಿ, ದ್ರಕ್ಷ್ಯಸಿ–ಕಾಣುವಿ ॥೨೭॥ ಹತಶೇಷಾನ್–ಹತರಾದವರೊಳಗೆ ಮಿಕ್ಕವರನ್ನು, ದಶದಿಶಃ–ಹತ್ತು ದಿಕ್ಕುಗಳಲ್ಲಿ, ವಿದ್ರವತಃ–ಓಡಿಹೋಗುತ್ತಿರುವವರನ್ನಾಗಿಯೂ, ಸದಾರಾನ್–ಹೆಂಡತಿಯಿಂದೊಡಗೂಡಿದವರನ್ನು, ಹೃತದಾರಾನ್–ಅಪಹರಿಸಲ್ಪಟ್ಟ ಹೆಂಡತಿಗಳುಳ್ಳವರನ್ನಾಗಿಯೂ, ನಿಶಾಚರಾನ್–ರಕ್ಕಸರನ್ನು, ಅಶರಣಾನ್–ರಕ್ಷಕನಿಲ್ಲದವರನ್ನಾಗಿ, ತ್ವಂ–ನೀನು, ದ್ರಕ್ಷ್ಯಸಿ–ನೋಡುವಿ ॥೨೮॥ ಶರಜಾಲಪರಿಕ್ಷಿಪ್ತಾಂ–ಬಾಣಗಳ ತಂಡಗಳಿಂದ ತುಂಬಿರುವಂಥಾ, ಅಗ್ನಿಜ್ವಾಲಾಸಮಾವೃತಾಂ–ಬೆಂಕಿಯ ಜ್ವಾಲೆಗಳಿಂ ಸುತ್ತಲ್ಪಟ್ಟ, ಲಂಕಾಂ–ಲಂಕಾಪಟ್ಟಣವನ್ನು, ತ್ವಂ–ನೀನು. ಪ್ರದಗ್ಧಭವನಾಂ–ದಹಿಸಲ್ಪಟ್ಟ ಮನೆಗಳುಳ್ಳದ್ದನ್ನಾಗಿ, ದ್ರಕ್ಷ್ಯಸಿ–ನೋಡುವಿ. ನಸಂಶಯಃ–ಸಂಶಯವಿಲ್ಲ ॥೨೯॥ ಪರದಾರಾಭಿಮರ್ಶಾತ್–ಪರಸ್ತ್ರೀಗಮನಕ್ಕಿಂತಲೂ, ಅನ್ಯತ್–ಮತ್ತೊಂದಾದ, ಮಹತ್–ದೊಡ್ಡದಾದ, ಪಾಪತರಂ–ಅತಿಶಯವಾದ ಪಾಪವು, ನ–ಇಲ್ಲ. ಹೇರಾಜನ್–ಎಲೈ ಅರಸೇ. ತವ–ನಿನಗೆ, ಪ್ರಮದಾನಾಂ ಸಹಸ್ರಾಣಿ–ಸ್ತ್ರೀಯರುಗಳ ಸಹಸ್ರಗಳು. ಪರಿಗ್ರಹಃ–ಹೆಂಡತಿಗಳು, ಹೇರಾಕ್ಷಸ–ಎಲೈ ರಾಕ್ಷಸನೇ, ಸ್ವದಾರನಿರತಃ–ತನ್ನ ಹೆಂಡತಿಯಲ್ಲೇ ಆಸಕ್ತನಾದವನು, ಭವ–ಆಗು, ಸ್ವಕುಲಂ–ನಿನ್ನ ಕುಲವನ್ನು, ರಕ್ಷ–ಸಂರಕ್ಷಿಸು ॥೩೦॥ ಮಾನಂ–ಬಹುಮತಿಯನ್ನು. ಋದ್ಧಿಂಚ–ಐಶ್ವರ್ಯವನ್ನು, ಆತ್ಮನಃ–ತನಗೆ. ಇಷ್ಟಂ–ಅಪೇಕ್ಷೆಯಾದ. ರಾಜ್ಯಂಚ–ರಾಜ್ಯವನ್ನು. ಜೀವಿತಂಚ–ಪ್ರಾಣವನ್ನು. ಸೌಮ್ಯಾನಿ–ಒಳ್ಳೇದಾದ, ಕಳತ್ರಾಣಿಚ–ಹೆಂಡತಿಯರನ್ನು. ತಥೈವ–ಹಾಗೆಯೇ, ಮಿತ್ರವರ್ಗಂಚ–ಸ್ನೇಹಿತರಗುಂಪನ್ನು, ಚಿರಂ–ಬಹುಕಾಲವು, ಭೋಕ್ತುಂ–ಅನುಭವಿಸುವದಕ್ಕೆ, ಇಚ್ಛಸಿಯದಿ–ಅಭಿಲಷಿಸುವವನಾದರೆ. ರಾಮವಿಪ್ರಿಯಂ–ಶ್ರೀರಾಮನಿಗೆ ದ್ರೋಹವನ್ನು, ಮಾಕಾ

---

ಭೋಗಂಗಳನ್ನನುಭವಿಸುವ, ಮತ್ತು ಸಭೆಶೀರಿ, ಸಂತೋಷಕಾರ್ಯವಂ ಗೈಯ್ಯುವ ರಾಕ್ಷಸರಿಗೆ ಅನರ್ಥವನ್ನೂ ಸಂಕಟವನ್ನೂ ತರುವವನಾಗುವೆ ।೨೪। ಉಪ್ಪರಿಗೆಗಳಿಂದಲೂ, ಅರಮನೆಗಳಿಂದಲೂ ತುಂಬಿರುವ ಮತ್ತು ರತ್ನಗಳಿಂದೆಸೆವ ಲಂಕಾಪಟ್ಟಣವನ್ನು ಸೀತಾದೇವಿಗಾಗಿ ನಾಶವಾದದ್ದನ್ನಾಗಿ ನೋಡುವೆ ।೨೫। ಪಾಪಂಗಳನ್ನು ಸ್ವತಃ ಮಾಡದಿದ್ದರೂ, ಪರಿಶುದ್ಧರಾಗಿದ್ದರೂ ಪಾಪಿಯಾದವನ ಸಹ ವಾಸದಿಂದ ಜನಗಳು, ಮತ್ಸ್ಯಗಳು ಸರ್ಪವಿರುವ ಮಡುವಿನಲ್ಲಿ ನಶಿಸುವಂತೆ ನಶಿಸುವರು ।೨೬। ದಿವ್ಯವಾದ ಶ್ರೀಗಂಧ ಲೇಪನವುಳ್ಳವರಾಗಿಯೂ, ದಿವ್ಯವಾದ ವೊಡವೆಗಳಿಂದ ಅಲಂಕೃತರಾಗಿಯೂ, ಇರುವ ರಾಕ್ಷಸರೆಲ್ಲರೂ ನಿನ್ನ ದೋಷದಿಂದ ಮರಣವನ್ನೈದುವರು, ಇದಲ್ಲದೆ ಹತಶೇಷರಾದವರು ದಿಕ್ಕು ದಿಕ್ಕುಗಳಲ್ಲಿಯೂ ಓಡುವರು ಆಗ ಅವರಿಗೆ ರಕ್ಷಕನ್ಯಾರೂ ಇಲ್ಲದಿರುವರು. ಇದಲ್ಲದೆ ಲಂಕಾಪಟ್ಟಣವು ಬಾಣತಂಡಂಗಳಿಂದ ತುಂಬಿರುವದಾಗಿಯೂ, ಅಗ್ನಿಜ್ವಾಲೆಗಳಿಂದ ವ್ಯಾಪ್ತವಾಗಿ ದಹಿಸಲ್ಪಟ್ಟ ಮಂದಿರಂಗಳುಳ್ಳದ್ದಾಗುವದು. ಈ ವಿಷಯದಲ್ಲಿ ಸಂದೇಹವೇ ಯಿಲ್ಲ ।೨೯। ಎಲೈ ರಾಕ್ಷಸರಾಜನೇ! ಲೋಕದಲ್ಲಿ ಪರಸ್ತ್ರೀಗಮನಕ್ಕಿಂತಲೂ ಮತ್ತಾವ ದೋಷವೂ ಇಲ್ಲ. ನಿನಗೆ ಅನೇಕ ಸ್ತ್ರೀಯರುಗಳಿರುವರು, ನೀನವರಲ್ಲಿ ಅನುರಕ್ತನಾಗಿ ನಿನ್ನ ಕುಲವನ್ನು ರಕ್ಷಿಸಿಕೊಳ್ಳುವವನಾಗು. ಎಲೈ ರಾವಣನೇ! ನೀನು ಐಶ್ವರ್ಯವನ್ನೂ, ಇಷ್ಟವನ್ನೂ, ಮಾನವನ್ನೂ, ಪ್ರಾಣವನ್ನೂ, ಮಿತ್ರವರ್ಗವನ್ನೂ, ಹೆಂಡತಿಯರನ್ನೂ, ಸಹ

ಸೌವರ್ಣ್ಯಾನಿಮಿತ್ತಂವರ್ಗಂತಥ್ಯೈವಚ । ಯದೀಚ್ಛಸಿಚಿರಂಭೋಕ್ತುಂವಾಕ್ಯಂಥಾರಾಮವಿಪ್ರಿಯಂ ॥೩೦॥ ನಿವಾರ್ಯಮಾಣ
ಸ್ಸುಹೃದಾಮಯಾಭೃಶಂಪ್ರಸಹ್ಯಸೀತಾಂಯದಿಧರ್ಷಯಿಷ್ಯಸಿ । ಗಮಿಷ್ಯಸಿಕ್ಷೀಣಬಲಸ್ಸಬಾಂಧವೋಯಮಕ್ಷ
ಯಂರಾಮಶರಾತ್ತಜೀವಿತಂ ॥೩೩॥ ಇತಿಶ್ರೀಮದಾರಣ್ಯಕಾಂಡೇ-ಅಷ್ಟತ್ರಿಂಶಸ್ಸರ್ಗಃ॥

ಏವಮಸ್ಮಿತದಾಮುಕ್ತಃಕಥಂಚಿತ್ತೇನಸಂಯುಗೇ। ಇದಾನೀಮಪಿಯದ್ವೃತ್ತಂತಚ್ಛೃಣುಷ್ವನಿರುತ್ತರಂ ॥೧॥
ರಾಕ್ಷಸಾಭ್ಯಾಮಹಂದ್ವಾಭ್ಯಾಮನಿರ್ವಿಣ್ಣಸ್ತಥಾಕೃತಃ । ಸಹಿತೋಮೃಗರೂಪಾಭ್ಯಾಂಪ್ರವಿಷ್ಟೋದಂಡಕಾವನಂ ॥೨॥
ದೀಪ್ತಜಿಹ್ವೋಮಹಾಕಾಯಸ್ತೀಕ್ಷ್ಣದಂಷ್ಟ್ರೋಮಹಾಬಲಃ । ವ್ಯಚರಂದಂಡಕಾರಣ್ಯಂಮಾಂಸಭಕ್ಷೋಮಹಾಮೃ
ಗಃ ॥೩॥ ಅಗ್ನಿಹೋತ್ರೇಷುತೀರ್ಥೇಷುಚೈತ್ಯವೃಕ್ಷೇಷುರಾವಣ । ಅತ್ಯಂತಘೋರೋವ್ಯಚರಂತಾಪಸಾನ್ಸಂಪ್ರಧರ್ಷ
ಯನ್ ॥೪॥ ನಿಹತ್ಯದಂಡಕಾರಣ್ಯೇತಾಪಸಾನ್ಧರ್ಮಚಾರಿಣಃ । ರುಧಿರಾಣಿಪಿಬಂಸ್ತೇಷಾಂತಥಾಮಾಂಸಾನಿಭಕ್ಷಯನ್॥

---

ಥಾಃ-ಮಾತಬ್ಯಾಡ ॥೩೦॥ ಸುಹೃದಾ-ಸ್ನೇಹಿತನಾದ, ಮಯಾ-ನನ್ನಿಂದ, ಭೃಶಂ-ಬಹಳವಾಗಿ. ನಿವಾರ್ಯಮಾಣಃ-ನಿರೋಧಿಸಲ್ಪಟ್ಟವನಾಗಲಾ
ಗಿ, ಸೀತಾಂ ಸೀತಾದೇವಿಯನ್ನು, ಪ್ರಸಹ್ಯ-ಬಲಾತ್ಕರಿಸಿ, ಧರ್ಷಯಿಷ್ಯಸಿಯದಿ-ತಿರಸ್ಕಾರಮಾಡಿದವನಾದರೆ, ರಾಮಶರಾತ್ತಜೀವಿತಃ-ಶ್ರೀರಾಮ
ನ ಬಾಣಗಳಿಂ ಬಾಧೆಗೊಂಡವನಾಗಿ, ಸಬಾಂಧವಾಃ-ಬಂಧುಗಳೊಡಗೂಡಿದವನಾಗಿ, ಕ್ಷೀಣಬಲಃ-ಬಲನಾಶಕನಾಗಿ. ಯಮಕ್ಷಯಂ-ಯಮಮನೆಯಂ
ಕುರಿತು, ಗಮಿಷ್ಯಸಿ-ಹೋಗುವಿ॥ ೩೩॥ —**ಇತಿಶ್ರೀಮದಾರಣ್ಯಕಾಂಡೇ-ಷಟ್ತ್ರಿಂಶಸ್ಸರ್ಗಃ**—

ಏವಂ-ಈಪರಿಯಾಗಿ, ತದಾ-ಆಕಾಲದಲ್ಲಿ, ತೇನ-ಆ ಶ್ರೀರಾಮನಿಂದ, ಸಂಯುಗೇ-ಕಾಳಗದಲ್ಲಿ, ಕಥಂಚಿತ್-ಅತಿಪ್ರಯಾಸದಿಂದ, ಮುಕ್ತಃ-ಬಿಡ
ಲ್ಪಟ್ಟವನು. ಅಸ್ಮಿ-ಆದೆನು, ಇದಾನೀಮಪಿ-ಈಗಲೂ. ಯದ್ವೃತ್ತಂ-ಯಾವದು ನಡಿಯಿತೋ, ತತ್-ಅದನ್ನು. ನಿರುತ್ತರಂ-ಉತ್ತರವಿಲ್ಲದಂತೆ,
(ಯದ್ವಾ-ಯದುತ್ತರಂ-ಇತಿಪಾಠೇ-ಯತ್-ಯಾವದು, ಉತ್ತರಂ-ಸರ್ವನಾಶಕ್ಕೂ ಉತ್ಕೃಷ್ಟವಾದ್ದೋ. ತದಪಿ-ಅದನ್ನೂ ಕೂಡ.) ನಿರಂತರಮಿತಿ
ಪಾಠಾಂತರಂ-ಆ ಪಾಠದಲ್ಲಿ, ನಿರಂತರಂ-ಮಧ್ಯೆ ವಾಕ್ಯಾನುಪೂರ್ವಿಗೆ ವಿಚ್ಛಿತ್ತಿಯಿಲ್ಲದಂತೆ ಕೇಳೆಂಬ ತಾತ್ಪರ್ಯವು)॥೧॥ ಅಹಂ-ನಾನು, ತಥಾ-ಹಾಗೆಯೇ,
ಅನಿರ್ವಿಣ್ಣಃ-ನಿರ್ವೇದರಹಿತನಾಗಿ, ಕೃತಃ-ಮಾಡಲ್ಪಟ್ಟವನಾಗಿ, ಮೃಗರೂಪಾಭ್ಯಾಂ-ಮೃಗರೂಪಧರಿಸಿರುವ, ದ್ವಾಭ್ಯಾಂರಾಕ್ಷಸಾಭ್ಯಾಂ-ಇಬ್ಬ
ರು ರಕ್ಕಸರೊಡನೆ, ದಂಡಕಾವನಂ-ದಂಡಕಾರಣ್ಯವನ್ನು. ಪ್ರವಿಷ್ಟಃ-ಹೊಕ್ಕವನಾದೆನು ॥೨॥ ದೀಪ್ತಜಿಹ್ವಃ-ಹೊಳೆಯುತ್ತಿರುವ ನಾಲಿಗೆಉಳ್ಳ, ಮಹಾ
ಕಾಯಃ-ದೊಡ್ಡಶರೀರವುಳ್ಳ, ತೀಕ್ಷ್ಣದಂಷ್ಟ್ರಃ-ಹದವಾಗಿರುವ ಕೋರೆಹಲ್ಲುಗಳುಳ್ಳ, ಮಹಾಬಲಃ-ಬಹಳ ದೇಹತ್ರಾಣೆಯುಳ್ಳ, ಮಹಾಮೃಗಃ-
ದೊಡ್ಡಮೃಗವಾಗಿ. ದಂಡಕಾರಣ್ಯಂ-ದಂಡಕಾರಣ್ಯವನ್ನು ಕುರಿತು, ವ್ಯಚರಂ-ಸಂಚಾರಾರ್ಥವಾಗಿ ಬಂದೆನು ॥೩॥ ಹೇರಾವಣ-ಎಲೈ ರಾವಣನೇ, ಅಗ್ನಿಹೊ
ತ್ರೇಷು-ಅಗ್ನಿಹೋತ್ರಗಳಲ್ಲಿಯೂ, ತೀರ್ಥೇಷು-ತೀರ್ಥಗಳಲ್ಲಿಯೂ, ಚೈತ್ಯವೃಕ್ಷೇಷು-ನಾಲ್ಕುದಾರಿಗಳು ಕೂಡಿದ ಗಿಡಗಳಲ್ಲಿಯೂ, ಅತ್ಯಂತಘೋರಃ-
ಬಹಳ ಭಯಂಕರನಾಗಿಯೂ, ತಾಪಸಾನ್-ಋಷಿಗಳನ್ನು, ಸಂಪ್ರಧರ್ಷಯನ್-ತಿರಸ್ಕರಿಸಿದವನಾಗಿ. ವ್ಯಚರಂ-ಸಂಚರಿಸಿದೆನು, ದಂಡಕಾರಣ್ಯೇ-ದಂಡಕಾ
ವನದಲ್ಲಿ. ಧರ್ಮಚಾರಿಣಃ-ಸ್ವಧರ್ಮಗಳನ್ನಾಚರಿಸುತ್ತಿರುವ, ತಾಪಸಾನ್-ಋಷಿಗಳನ್ನು, ನಿಹತ್ಯ-ಕೊಂದು, ತೇಷಾಂ-ಆ ಋಷಿಗಳ, ರುಧಿರಾಣಿ-ರಕ್ತ
ಗಳನ್ನು, ಪಿಬನ್-ಪಾನಮಾಡುತ್ತಿರುವವನಾಗಿ, ತಥಾ-ಹಾಗೆಯೇ, ಮಾಂಸಾನಿ-ಮಾಂಸಗಳನ್ನು, ಭಕ್ಷಯನ್-ಭಕ್ಷಿಸುವವನಾಗಿ, ವ್ಯಚರಂ-ಸಂಚರಿಸಿದೆ
ನು ॥೪॥ ಋಷಿಮಾಂಸಾಶನಃ-ಋಷಿಗಳ ಮಾಂಸವೇ ಆಹಾರವಾಗುಳ್ಳವನಾಗಿ. ಕ್ರೂರಃ-ಭಯಂಕರನಾಗಿ, ವನಗೋಚರಾನ್-ವನದಲ್ಲಿ ವಾಸಮಾಡು
ತ್ತಿರುವವರನ್ನು, ತ್ರಾಸಯನ್-ಹೆದರಿಸುತ್ತಿರುವವನಾಗಿ, ತಥಾ-ಹಾಗೆಯೇ, ರುಧಿರಮತ್ತಃ-ರಕ್ತಪಾನದಿಂ ಮದವೇರಿದವನಾಗಿ. ಧರ್ಮದೂಷಕಃ-ಧ

---

ಇಚ್ಛಿಸುವವನಾದರೆ ರಾಮನಿಗಪಕೃತಿಯಂ ಗೈಯ್ಯಬ್ಯಾಡ ॥೩೨॥ ಸ್ನೇಹಿತನಾದ ನನ್ನಿಂದ ಯೆಷ್ಟುತಡೆಯಲ್ಪ
ಟ್ಟರೂ ನೀನು ನಿಲ್ಲದೆ ಬಲಾತ್ಕಾರದಿಂದ ಸೀತಾದೇವಿಯನ್ನು ತಿರಸ್ಕರಿಸುವವನೇ ಆದರೆ ರಾಮಬಾಣಂಗಳಿಂದ ಪೀ
ಡಿತನಾಗಿ, ಬಂಧುಗಳಿಂ ದೊಡಗೂಡಿಯಮಮಂದಿರವಂಸೇರುವವನಾಗುವೆ ॥೩೩॥ -*೩೮ನೆಯಸರ್ಗಂಮುಗಿದುದು*-

ಎಲೈ ದಶಕಂಠನೇ! ಈ ರೀತಿಯಾಗಿ ನಾನು ಒಂದಾನೊಂದು ಕಾಲದಲ್ಲಿ ಆ ಶ್ರೀರಾಮನಿಂದ ರಣರಂಗದಲ್ಲಿ
ಅತಿಪ್ರಯಾಸದಿಂದ ಬಿಡಲ್ಪಟ್ಟವನಾದೆನು ಈಗ ಕೆಲಕಾಲಕ್ಕೆ ಮುಂಚೆ ಯಾವದು ನಡೆದದ್ದಾಯಿತೋ ಅದಂ
ಪೇಳುವೆನು, ಕೇಳುವವನಾಗು. ಅದೇನೆಂದರೆ,—ನಾನು ವೇದನೆಯಿಲ್ಲದೆ ಮೃಗರೂಪಿಗಳಾದ ಇಬ್ಬರಾದ ರಾಕ್ಷಸ
ರಿಂ ಪೊಡಗೂಡಿ ದಂಡಕಾರಣ್ಯಪ್ರವೇಶವಂ ಮಾಡಿದೆನದೆಂತೆನೆ,—ಹೊಳೆಯುತ್ತಿರುವ ನಾಲಿಗೆಯುಳ್ಳ, ದೊಡ್ಡಶರೀ
ರಮುಳ್ಳ, ಹದವಾದ ಕೋರೆದಾಡೆಗಳುಳ್ಳ ಮಹಾ ಮೃಗವಾಗಿ ದಂಡಕಾರಣ್ಯದಲ್ಲಿ ಸಂಚಾರವಂ ಗೈಯ್ಯುತ್ತಾ, ಅಗ್ನಿ
ಹೋತ್ರಂಗಳಲ್ಲಿಯೂ, ತೀರ್ಥಂಗಳಲ್ಲಿಯೂ, ಚೈತ್ಯವೃಕ್ಷಂಗಳಲ್ಲಿಯೂ ಸಹ ಬಹು ಭಯಂಕರನಾಗಿ ಮುನಿಗಳ
ನ್ನು ತಿರಸ್ಕಾರವಂ ಗೈಯುತ್ತಾ ಸಂಚರಿಸುತ್ತಿದ್ದೆನು. ಆ ವನದಲ್ಲಿ ಧರ್ಮಾಚರಣವಂ ಗೈಯ್ಯುವ ತಾಪಸರಂ
ಕೊಂದು ಅವರುಗಳ ರಕ್ತಪಾನವನ್ನು ಮಾಡುತ್ತಲೂ, ಮಾಂಸವಂ ಮೇಯುತ್ತಲೂ, ಸಂಚರಿಸುತ್ತಿದ್ದೆನು ॥೪॥

ಋಷಿಮಾಂಸಾಶನಃ ಕ್ರೂರಸ್ತ್ರಾಸಯನ್ವನಗೋಚರಾನ್ । ತಥಾ ರುಧಿರಮತ್ತೋಽಹಂ ವಿಚರನ್ ಧರ್ಮದೂಷಕಃ॥
ಆಸಾದಯಂ ತದಾ ರಾಮಂ ತಾಪಸಂ ಧರ್ಮಚಾರಿಣಂ । ವೈದೇಹೀಂ ಚ ಮಹಾಭಾಗಾಂ ಲಕ್ಷ್ಮಣಂ ಚ ಮಹಾರಥಂ ।೮।
ತಾಪಸಂ ನಿಯತಾಹಾರಂ ಸರ್ವಭೂತಹಿತೇ ರತಂ । ಸೋಽಹಂ ವನಗತಂ ರಾಮಂ ಪರಿಭೂಯ ಮಹಾಬಲಂ ॥ ತಾಪಸೋಽಯ ಮಿ
ತಿ ಜ್ಞಾತ್ವಾ ಪೂರ್ವವೈರಮನುಸ್ಮರನ್ । ಅಭ್ಯಧಾವಂ ಹಿ ಸಂಕ್ರುದ್ಧಸ್ತೀಕ್ಷ್ಣಶೃಂಗೋ ಮೃಗಾಕೃತಿಃ । ಜಿಘಾಂಸುರಕೃತ
ಪ್ರಜ್ಞಸ್ತಂ ಪ್ರಹಾರಮನುಸ್ಮರನ್ । ತೇನ ಮುಕ್ತಾಸ್ತ್ರಯೋ ಬಾಣಾಶ್ಶಿತಾಶ್ಶತ್ರುನಿಬರ್ಹಣಾಃ ॥ ವಿಕೃಷ್ಯ ಬಲವ
ಚ್ಚಾಪಂ ಸುಪರ್ಣಾನಿಲನಿಸ್ವನಾಃ ।೧೦॥ ತೇ ಬಾಣಾ ವಜ್ರಸಂಕಾಶಾಸ್ಸುಮುಕ್ತಾ ರಕ್ತಭೋಜನಾಃ ॥ ಆಜಗ್ಮುಸ್ಸಹಿತಾ
ಸ್ಸರ್ವೇ ತ್ರಯಸ್ಸನ್ನತಪರ್ವಣಃ ॥೧೧॥ ಪರಾಕ್ರಮಜ್ಞೋ ರಾಮಸ್ಯ ಶಠೋ ದೃಷ್ಟಭಯಃ ಪುರಾ । ಸಮುದ್ಭ್ರಾಂತಸ್ತ
ತೋ ಮುಕ್ತಸ್ತಾವುಭೌ ರಾಕ್ಷಸೌ ಹತೌ ॥೧೨॥ ಶರೇಣ ಮುಕ್ತೋ ರಾಮಸ್ಯ ಕಥಂಚಿತ್ಪ್ರಾಪ್ಯ ಜೀವಿತಂ । ಇಹ ಪ್ರ

ಮಾಂಸಾನ್ನಗಳಂ ಮಾಡುತ್ತಿರುವವನಾಗಿ, ವಿಚರನ್-ಸಂಚಾರಮಾಡುತ್ತಿರುವವನಾಗಿ ತದಾ-ಆಕಾಲದಲ್ಲಿ ಧರ್ಮಚಾರಿಣಂ-ಧರ್ಮಾನುಷ್ಠಾನತತ್ಪರನಾದ ತಾಪಸಂ-ಋಷಿವೃತ್ತಿಯಿಂದಿರುವ, ರಾಮಂ-ಶ್ರೀರಾಮನನ್ನು, ತದಾ-ಆಕಾಲದಲ್ಲಿ, ಆಸಾದಯಂ-ಹೊಂದಿದೆನು. ಮಹಾಭಾಗಾಂ-ಮಹಾಪುಣ್ಯವತಿಯಾದ, ವೈದೇಹೀಂ ಚ-ಸೀತಾದೇವಿಯನ್ನು, ಮಹಾರಥಂ-ಮಹಾರಥಿಕನಾದ ಲಕ್ಷ್ಮಣಂ ಚ-ಲಕ್ಷ್ಮಣನನ್ನು, ಆಸಾದಯಂ-ಹೊಂದಿದೆನು ||೮|| ಸೋಽಹಂ-ಆ ಈ ನಾನು, ತಾಪಸಂ-ಋಷಿವೃತ್ತಿಯಲ್ಲಿರುವ, ನಿಯತಾಹಾರಂ-ಮಿತವಾದಾಹಾರವುಳ್ಳ, ಸರ್ವಭೂತಹಿತೇ-ಸಮಸ್ತಪ್ರಾಣಿಗಳ ಪ್ರಿಯದಲ್ಲಿಯೇ, ರತಂ-ಆಸಕ್ತನಾದ, ವನಗತಂ-ವನವಾಸಿಯಾದ ಮಹಾಬಲಂ-ಮಹಾಶಕ್ತಿಯುಳ್ಳ, ರಾಮಂ-ಶ್ರೀರಾಮನನ್ನು, ಪರಿಭೂಯ-ಧಿಕ್ಕರಿಸಿ, ಅಯಂ-ಈ ಶ್ರೀರಾಮನು, ತಾಪಸಃ ಇತಿ-ಋಷಿವೇಷಧಾರಿಯೆಂದು, ಜ್ಞಾತ್ವಾ-ತಿಳಿದು, ಪೂರ್ವವೈರಂ-ಪೂರ್ವದ್ವೇಷವನ್ನು, ಅನುಸ್ಮರನ್-ಜ್ಞಾಪಕಕ್ಕೆ ತೆಗೆದುಕೊಳ್ಳುತ್ತ ಇರುವವನಾಗಿ, ಸಂಕ್ರುದ್ಧಃ-ಕೋಪಿಷ್ಠನಾಗಿ. ತೀಕ್ಷ್ಣಶೃಂಗಃ-ಹದವಾಗಿರುವ ಕೊಂಬುಗಳುಳ್ಳವನಾಗಿ. ಮೃಗಾಕೃತಿಃ-ಮೃಗವೇಷಧಾರಿಯಾಗಿ, ಜಿಘಾಂಸುಃ-ಹೊಡೆಯಲಿಚ್ಛೆಯುಳ್ಳವನಾಗಿ, ಅಕೃತಪ್ರಜ್ಞಃ-ತೋರದಿರುವ ಪ್ರಜ್ಞೆಯುಳ್ಳವನಾಗಿ, ತಂ ಪ್ರಹಾರಂ-ಆ ಪೂರ್ವದಬಾಣ ಹೊಡತವನ್ನು. ಅನುಸ್ಮರನ್-ಸ್ಮರಿಸುತ್ತಿರುವನಾಗಿ, ಅಭ್ಯಧಾವಂ-ಅಟ್ಟಿಕೊಂಡು ಬಂದೆನು ||೯|| ತೇನ-ಆ ಶ್ರೀರಾಮನಿಂದ. ಚಾಪಂ-ಕೋದಂಡವನ್ನು, ಬಲವತ್-ದೃಢವಾಗಿ, ವಿಕೃಷ್ಯ-ಸೆಳೆದು, ಸುಪರ್ಣಾನಿಲನಿಸ್ವನಾಃ-ಗರುಡವಾಯುವುಗಳ ಧ್ವನಿಯಂತೆ ಧ್ವನಿಯುಳ್ಳ, ಶತ್ರುನಿಬರ್ಹಣಾಃ-ಶತ್ರುಗಳನ್ನು ಕೊಲ್ಲುತ್ತಿರುವ, ಶಿತಾಃ-ಹದವುಳ್ಳ, ತ್ರಯೋ ಬಾಣಾಃ-ಮೂರು ಬಾಣಗಳು, ಮುಕ್ತಾಃ-ಬಿಡಲ್ಪಟ್ಟವು ||೧೦|| ವಜ್ರಸಂಕಾಶಾಃ-ವಜ್ರಾಯುಧಕ್ಕೆ ಸಮಾನಗಳಾದ, ಸುಮುಕ್ತಾಃ-ಚನ್ನಾಗಿ ಬಿಡಲ್ಪಟ್ಟ, ರಕ್ತಭೋಜನಾಃ-ರಕುತವನ್ನು ಹೀರುತ್ತಿರುವ. ಸನ್ನತಪರ್ವಾಣಃ-ಬೊಗ್ಗಿರುವ ಕೊಂಕಿಗಳುಳ್ಳ, ಸರ್ವೇ-ಸಮಸ್ತಗಳಾದ, ತ್ರಯಃ-ಮೂರಾದ, ತೇ ಬಾಣಾಃ-ಆ ಬಾಣಗಳು, ಸಹಿತಾಃ-ಒಂದಕ್ಕೊಂದು ಸೇರಿದವುಗಳಾಗಿ, ಆಜಗ್ಮುಃ-ಬಂದವು ||೧೧|| ಪುರಾ-ಪೂರ್ವದಲ್ಲಿ, ರಾಮಸ್ಯ-ಶ್ರೀರಾಮನ, ಶರಃ-ಬಾಣವು, ದೃಷ್ಟಭಯಃ-ಕಾಣಲ್ಪಟ್ಟ ಭಯವುಳ್ಳದ್ದಾಗಿದೆ. ಪರಾಕ್ರಮಜ್ಞಃ-ರಾಮನ ಪರಾಕ್ರಮವನ್ನು ತಿಳಿದಿರುವ. ಅಹಂ-ನಾನು, ಸಮುದ್ಭ್ರಾಂತಸ್ಸನ್-ಭ್ರಾಂತಿಯಿಂದ ತಿರಗಿದವನಾಗಿ, ತತಃ-ಆ ಬಾಣದಿಂದ, ಮುಕ್ತಃ-ಬಿಡಲ್ಪಟ್ಟೆನು, ತಾವುಭೌ-ಆ ಇಬ್ಬರಾದ, ರಾಕ್ಷಸೌ-ರಾಕ್ಷಸರು, ಹತೌ-ಮೃತರಾದರು ||೧೨|| ರಾಮಸ್ಯ-ಶ್ರೀರಾಮನ. ಶರೇಣ-ಬಾಣದಿಂದ. ಮುಕ್ತಃ-ಬಿಡಲ್ಪಟ್ಟವನಾಗಿ, ಕ

ಈ ಪ್ರಕಾರವಾಗಿ ಋಷಿಮಾಂಸಗಳಂ ಭಕ್ಷಿಸುತ್ತಾ, ವನವಾಸಿಗಳೆಲ್ಲರಂ ಹೆದರಿಸುತ್ತಲೂ ರಕ್ತಪಾನದಿಂದ ಮದವೇರಿ, ಧರ್ಮನಾಶವಂ ಮಾಡುತ್ತಾ ಸಂಚಾರವಂ ಗೈಯ್ಯುವ ಕಾಲದಲ್ಲಿ ಧರ್ಮಾನುಷ್ಠಾನ ತತ್ಪರನಾದ, ಋಷಿವೃತ್ತಿಯಿಂದ ಜೀವಿಸುವ ಶ್ರೀರಾಮನನ್ನೂ, ಮಹಾ ಪುಣ್ಯವತಿಯಾದ ಸೀತಾದೇವಿಯನ್ನೂ, ಮಹಾ ರಥಿಕನಾದ ಲಕ್ಷ್ಮಣನನ್ನೂ, ಸಹಾ ಹೊಂದಿ, ಅಂಥಾ ನಾನು ಋಷಿವೃತ್ತಿಯಲ್ಲಿರುವವನಾಗಿ ಮಿತವಾದ ಆಹಾರವುಳ್ಳ ಮತ್ತು ಸರ್ವ ಭೂತಂಗಳಿಗೂ ಹಿತವಂ ಗೈಯ್ಯುವದರಲ್ಲಿ ಆಸಕ್ತಿಯುಳ್ಳ, ಮಹಾ ಭಯಂಕವಾದ ಆ ಶ್ರೀರಾಮನಂ ಧಿಕ್ಕರಿಸಿ ಇವನು ತಾಪಸವೃತ್ತಿಯಲ್ಲಿರುವವನೆಂದು ತಿಳಿದು ಪೂರ್ವ ವೈರವಂ ಸ್ಮರಿಸುತ್ತಾ, ಬಹು ಕೋಪವನ್ನೈದಿ ಆತನಂ ಹೊಡೆಯಲಿಚ್ಛೈಸಿದವನಾಗಿ, ಆ ಪ್ರಹಾರವನ್ನು ಸ್ಮರಿಸಿಕೊಂಡು ಮೇಲ್ಬಾಯ್ದು ಹೋದವನಾಗಲೂ, ಆ ಶ್ರೀರಾಮನಿಂದ ಬಲವಾಗಿ ಕೋದಂಡವನ್ನು ಸೆಳದು ಗರುಡವಾಯುವುಗಳ ಧ್ವನಿಯಂತೆ ಧ್ವನಿಯುಳ್ಳ, ಶತೃಗಳಂ ಕೊಲ್ಲುವ, ಹದವಾದ ಮೂರು ಬಾಣಂಗಳು ಬಿಡಲ್ಪಟ್ಟವು ।೧೦। ವಜ್ರಾಯುಧಕ್ಕೆ ಸಮಾನವಾಗಿಯೂ, ಚೆನ್ನಾಗಿ ಬಿಡಲ್ಪಟ್ಟವುಗಳಾಗಿಯೂ, ರಕುತವಂ ಹೀರುವವಾಗಿಯೂ, ಬೊಗ್ಗಿದ ಕೊಂಕಿಗಳುಳ್ಳವಾಗಿಯೂ, ಇರುವ ಆ ಮೂರು ಬಾಣಂಗಳು ಒಂದಕ್ಕೊಂದು ಸೇರಿ ಬಂದವು ।೧೧। ಪೂರ್ವದಲ್ಲಿ ಆ ಶ್ರೀರಾಮನ ಬಾಣವು ನೋಡಲ್ಪಟ್ಟಿರುವದ್ದರಿಂದ ಬಹು ಭಯವಾಗಿದೆ. ಆತನ ಪರಾಕ್ರಮವನ್ನರಿತಿರುವ ನಾನು ಭ್ರಾಂತಿಯಿಂದ ತಿರಿಗಿದವನಾಗಿ ಆ ಬಾಣದಿಂದ ಬಿಡಲ್ಪಟ್ಟೆನು, ಆ ರಾಕ್ಷಸರು ಹತರಾದರು ।೧೨। ನಾನು ಶ್ರೀರಾಮನ ಬಾಣದಿಂದ ತಪ್ಪಿಸಿಕೊಂಡು ಇ

ವ್ರಾಜಿತೋ ಯುಕ್ತಸ್ತಾಪಸೋಹಂ ಸಮಾಹಿತಃ ॥೧೩॥ ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರಕೃಷ್ಣಾಜಿನಾಂಬರಂ । ಗೃಹೀತ
ಧನುಷಂ ರಾಮಂ ಪಾಶಹಸ್ತಮಿವಾಂತಕಂ ॥೧೪॥ ಅಪಿ ರಾಮಸಹಸ್ರಾಣಿ ಭೀತಃ ಪಶ್ಯಾಮಿ ರಾವಣ । ರಾಮಭೂತಮಿ
ದಂ ಸರ್ವಮರಣ್ಯಂ ಪ್ರತಿಭಾತಿ ಮೇ ॥೧೫॥ ರಾಮಮೇವ ಹಿ ಪಶ್ಯಾಮಿ ರಹಿತೇ ರಾಕ್ಷಸಾಧಿಪ । ದೃಷ್ಟ್ವಾ ಸ್ವಪ್ನಗತಂ
ರಾಮಮುದ್ಭ್ರಮಾಮಿ ವಿಚೇತನಃ ॥೧೬॥ ರಕಾರಾದೀನಿ ನಾಮಾನಿ ರಾಮತ್ರಸ್ತಸ್ಯ ರಾವಣ । ರತ್ನಾನಿ ಚ ರಥಾಶ್ಚೈ
ವ ತ್ರಾಸಂ ಸಂಜನಯಂತಿ ಮೇ ॥೧೭॥ ಅಹಂ ತಸ್ಯ ಪ್ರಭಾವಜ್ಞೋ ನ ಯುದ್ಧಂ ತೇನ ತೇ ಕ್ಷಮಂ । ಬಲಿಂ ವಾ ನಮುಚಿಂ ವಾ
ಪಿ ಹನ್ಯಾದ್ಧಿ ರಘುನಂದನಃ ॥೧೮॥ ರಣೇ ರಾಮೇಣ ಯುಧ್ಯಸ್ವ ಕ್ಷಮಾಂ ವಾ ಕುರು ರಾಕ್ಷಸ । ನ ತೇ ರಾಮಕಥಾ ಕಾರ್ಯಾ
ಯದಿ ಮಾಂ ದ್ರಷ್ಟುಮಿಚ್ಛಸಿ ॥೧೯॥ ಬಹವಸ್ಸಾಧವೋ ಲೋಕೇ ಯುಕ್ತಾ ಧರ್ಮಮನುಷ್ಠಿತಾಃ । ಪರೇಷಾಮಪರಾಧೇನ
ವಿನಷ್ಟಾಸ್ಸಪರಿಚ್ಛದಾಃ ॥೨೦॥ ಸೋಹಂ ತವಾಪರಾಧೇನ ವಿನಶ್ಯೇಯಂ ನಿಶಾಚರ । ಕುರು ಯತ್ತೇ ಕ್ಷಮಂ ತತ್ತ್ವಂ ಮಹಂ

---

ಧೀತೇಃ-ಅತಿಪ್ರಯಾಸದಿಂದ, ಜೀವಿತಂ-ಪ್ರಾಣವನ್ನು ಪ್ರಾಪ್ಯ-ಉಳಿಸಿಕೊಂಡು, ಇಹ-ಇಲ್ಲಿ. ಯುಕ್ತಃ-ಯೋಗಯುಕ್ತನಾದ, ತಾಪಸಃ-ಋಷಿ
ಯಾಗಿ, ಸಮಾಹಿತಃ-ಸಮಾಧಾನಚಿತ್ತನಾಗಿ. ಇಹ-ಈ ವನದಲ್ಲಿ, ಪ್ರವ್ರಾಜಿತಃ-ಸಕಲದುರಿತಪರಿತ್ಯಾಗಮಾಡಿದವನಾಗಿದ್ದೇನೆ ॥೧೩॥ ವೃಕ್ಷೇವೃಕ್ಷೇ
ಚ-ಗಿಡಗಿಡದಲ್ಲಿಯೂ, ಚೀರಕೃಷ್ಣಾಜಿನಾಂಬರಂ-ನಾರುಮಡಿ ಕೃಷ್ಣಾಜಿನಗಳೇ ವಸ್ತ್ರವಾಗುಳ್ಳ, ಗೃಹೀತಧನುಷಂ-ಗ್ರಹಿಸಲ್ಪಟ್ಟ ಧನುಸ್ಸು
ಳ್ಳ, ಪಾಶಹಸ್ತಂ-ಪಾಶಾಯುಧವೇ ಹಸ್ತದಲ್ಲುಳ್ಳ, ಅಂತಕಮಿವ-ಯಮನಂತಿರುವ, ರಾಮಂ-ಶ್ರೀರಾಮನನ್ನು. ಪಶ್ಯಾಮಿ-ಕಾಣುತ್ತಲಿದ್ದೇನೆ ॥೧೪॥
ಹೇರಾವಣ-ಎಲೈ ರಾವಣನೇ, ಭೀತಃ-ಭಯಗೊಂಡವನಾಗಿ. ರಾಮಸಹಸ್ರಾಣಿ-ಸಾವಿರ ಶ್ರೀರಾಮರನ್ನು. ಪಶ್ಯಾಮಿ-ಕಾಣುತ್ತೇನೆ, ಇದಂ-ಈ. ಸರ್ವಂ-
ಸವಸ್ತವಾದ. ಅರಣ್ಯಂ-ದಂಡಕಾರಣ್ಯವು. ಮೇ-ನನಗೆ, ರಾಮಭೂತಂ-ರಾಮಸ್ವರೂಪವಾಗಿ, ಪ್ರತಿಭಾತಿ-ಕಾಣುತ್ತದೆ ॥೧೫॥ ಹೇರಾಕ್ಷಸಾಧಿಪ-
ಎಲೈ ರಾಕ್ಷಸರಾಜನೇ, ರಹಿತೇ-ಜನರಹಿತವಾದ ಏಕಾಂತಪ್ರದೇಶದಲ್ಲಿ, ರಾಮಮೇವ-ಶ್ರೀರಾಮನನ್ನೇ, ಪಶ್ಯಾಮಿ-ಕಾಣುವೆನು, ರಾಮಂ-ಶ್ರೀರಾಮನನ್ನು
ಸ್ವಪ್ನಗತಂ-ಸ್ವಪ್ನಾವಸ್ಥೆಯಲ್ಲಿ ಬಂದವನನ್ನಾಗಿ, ದೃಷ್ಟ್ವಾ-ಕಂಡು, ವಿಚೇತನಃ-ಪ್ರಜ್ಞೆತಪ್ಪಿದವನಾಗಿ, ಉದ್ಭ್ರಮಾಮಿ-ಹುಚ್ಚನಂತೆ ಎಚ್ಚರಗೊ
ಳ್ಳುತ್ತೇನೆ ॥೧೬॥ ಹೇರಾವಣ-ಎಲೈ ರಾವಣನೇ, ರಾಮತ್ರಸ್ತಸ್ಯ-ಶ್ರೀರಾಮನಿಂದ ಹೆದರಿಕೊಂಡಿರುವ, ಮೇ-ನನಗೆ, ರಕಾರಾದೀನಿ-ರೇಫವೇ ಮೊದಲಾ
ಗುಳ್ಳ, ರತ್ನಾನಿ-ರತ್ನಗಳೂ, ರಥಾಶ್ಚೈವ-ರಥಗಳೂ ಎಂಬ. ನಾಮಾನಿ-ಹೆಸರುಗಳು. ತ್ರಾಸಂ-ಭಯವನ್ನು, ಸಂಜನಯಂತಿ-ಹುಟ್ಟಿಸುತ್ತವೆ॥
೧೭॥ ಅಹಂ-ನಾನು, ತಸ್ಯ-ಆ ಶ್ರೀರಾಮನ, ಪ್ರಭಾವಜ್ಞಃ-ಪರಾಕ್ರಮವನ್ನು ತಿಳಿದವನು, ತೇನ-ಆ ಶ್ರೀರಾಮನೊಡಗೂಡ, ತೇ-ನಿನಗೆ, ಯುದ್ಧಂ-
ಕಾಳಗವು, ನಕ್ಷಮಂ-ಯೋಗ್ಯವಾದದ್ದಲ್ಲ ಹಿ-ಯಾವಕಾರಣದದೆಸೆಯಿಂದ, ರಘುನಂದನಃ-ಶ್ರೀರಾಮನು, ಬಲಿಂವಾ-ಬಲಿಚಕ್ರವರ್ತಿಯನ್ನಾಗಲಿ, ನಮು
ಚಿಂವಾಪಿ-ನಮುಚಿಯೆಂಬ ರಕ್ಕಸನನ್ನಾಗಲಿ, ಹನ್ಯಾತ್-ಹೊಡೆಯುವನು ॥೧೮॥ ಹೇರಾಕ್ಷಸ-ಎಲೈ ರಾಕ್ಷಸನೇ, ರಣೇ-ಕಾಳಗದಲ್ಲಿ, ರಾಮೇಣ-ಶ್ರೀ
ರಾಮನೊಡಗೂಡ, ಯುಧ್ಯಸ್ವ-ಯುದ್ಧಮಾಡು, ಕ್ಷಮಾಂವಾ-ಉಪಶಾಂತಿಯನ್ನಾದರೂ, ಕುರು-ವಹಿಸು, ಮಾಂ-ನನ್ನನ್ನು ದ್ರಷ್ಟುಂ-ನೋಡು
ವದಕ್ಕಾಗಿ, ಇಚ್ಛಸಿಯದಿ-ಅಪೇಕ್ಷಿಸಿದವನೇ ಆದರೆ, ತೇ-ನಿನ್ನಿಂದ, ರಾಮಕಥಾ-ಶ್ರೀರಾಮನ ಪ್ರಸ್ತಾಪವು, ನಕಾರ್ಯಾ-ಮಾಡತಕ್ಕದ್ದಲ್ಲ ॥೧೯॥ ಲೋಕೇ-
ಲೋಕದಲ್ಲಿ, ಯುಕ್ತಾಃ-ವಿಹಿತಮಾರ್ಗದಲ್ಲಿರುವ, ಧರ್ಮಂ-ಧರ್ಮವನ್ನು, ಅನುಷ್ಠಿತಾಃ-ಆಚರಿಸುತ್ತಿರುವ, ಸಾಧವಃ-ಸತ್ಪುರುಷರು, ಬಹವಃ-
ಬಹಳ ಮಂದಿ ಯು. ಪರೇಷಾಂ-ಇತರರ. ಅಪರಾಧೇನ-ದ್ರೋಹದಿಂದ. ಸಪರಿಚ್ಛದಾಃ-ಪರಿವಾರಸಹಿತರಾಗಿ, ವಿನಷ್ಟಾಃ-ನಾಶವಂ ಹೊಂದಿದರು ॥೨೦॥

---

ಲ್ಲಿ ಯೋಗಾರೂಢನಾಗಿ ಸಾವಧಾನ ಚಿತ್ತದಿಂ ಪಾಪ ಪರಿಹಾರವಂ ಮಾಡಿಕೊಂಡಿದ್ದೇನೆ. ಆದರೆ ಈಗಲೂ ಕಾಡಾ
ನಾರುವಸ್ತ್ರಗಳನ್ನೂ ಕೃಷ್ಣಾಜಿನವನ್ನೂ ಸಹ ಧರಿಸಿರುವ, ಧನುರ್ಧಾರಿಯಾದ, ಪಾಶಹಸ್ತನಾದ ಯಮನಂ
ತಿರುವ ಶ್ರೀರಾಮನನ್ನು ವೃಕ್ಷ ವೃಕ್ಷದಲ್ಲಿಯೂ ಕಾಣುತ್ತಲಿದ್ದೇನೆ।೧೪। ಎಲೈ ರಾವಣನೇ; ಈ ರೀತಿಯಾಗಿ ಭೀತ
ನಾಗಿ ಅನೇಕ ಶ್ರೀರಾಮರಂ ನೋಡುತಲಿದ್ದೇನೆ ಆದಕಾರಣ ದಂಡಕಾರಣ್ಯವೆಲ್ಲ ರಾಮಭೂತವಾಗಿಯೆ ನನಗೆ ಕಾ
ಣುವದು, ಮತ್ತು ನಿರ್ಜನವಾದ ಪ್ರದೇಶದಲ್ಲಿಯೂ ಸ್ವಪ್ನದಲ್ಲಿಯೂ ಶ್ರೀರಾಮನನ್ನೇ ನೋಡಿ ಪ್ರಜ್ಞೆತಪ್ಪಿ ಹು
ಚ್ಚನಂತೆ ತಿರುಗುತ್ತೇನೆ ।೧೬॥ ಇದಲ್ಲದೆ ರಾಮನಿಗೆ ಹೆದರಿದವನಾದ ನನಗೆ ರಕಾರವೇ ಆದ್ಯಕ್ಷರವಾಗುಳ್ಳ
“ರತ್ನ, ರಥ” ವೆಂಬಿವುಗಳು ಮೊದಲಾದ ಹೆಸರುಗಳೂ ಸಹ ಭೀತಿಯನ್ನುಂಟುಮಾಡುತವೆ, ನಾನು ಶ್ರೀರಾಮನ
ಪರಾಕ್ರಮವನ್ನು ಚೆನ್ನಾಗಿ ತಿಳಿದವನು, ಆತನ ಸಂಗಡ ನೀನು ಕಾಳಗವಂ ಗೈಯ್ಯುವದು ಯುಕ್ತವಲ್ಲ, ಯಾ
ಕಂದರೆ ಆತನು ಬಲಿಚಕ್ರವರ್ತಿಯನ್ನಾಗಲೀ ನಮುಚಿಯನ್ನಾಗಲೀ ಲಕ್ಷ್ಯವಿಲ್ಲದೆ ಹೊಡೆವನು॥೧೮॥ ಎಲೈ ರಾಕ್ಷ
ಸನೇ! ನೀನು ರಣರಂಗದಲ್ಲಿ ಶ್ರೀರಾಮನೊಡನೆ ಯುದ್ಧವನ್ನಾದರೂ ಮಾಡು, ಅಥವಾ ಉಪಶಾಂತನಾಗಿ ಆದರೂ
ಇರುವವನಾಗು, ಆದರೆ ನನ್ನನ್ನು ನೀನು ನೋಡಲಿಚ್ಛೆಯುಳ್ಳವನಾಗಿದ್ದಲ್ಲಿ ಆತನ ಪ್ರಸ್ತಾಪವನ್ನು ನನ್ನ ಸಂಗಡ
ಮಾಡಬೇಡ ।೧೯। ಲೋಕದಲ್ಲಿ ವಿಹಿತವಾದ ಮಾರ್ಗದಲ್ಲಿರುವ ಪುರುಷರು ಅನೇಕ ರಿರುವರು, ಪರದ್ರೋಹವಂ

ತ್ವಾನಾನುಯಾಮಿಹ ||೨೧|| ರಾಮಶ್ಚ ಹಿಮಹಾತೇಜಾಮಹಸತ್ವೋಮಹಾಬಲಃ | ಅಪಿರಾಕ್ಷಸಲೋಕಸ್ಯನಭವೇದಂತಕೋಪಿಸಃ ||೨೨|| ಯದಿಶೂರ್ಪಣಖಾಹೇತೋರ್ಜನಸ್ಥಾನಗತಃಖರಃ | ಅತಿವೃತ್ತೋಹತಃಪೂರ್ವಂರಾಮೇಣಾಕ್ಲಿಷ್ಟಕರ್ಮಣಾ | ಅತ್ರಬ್ರೂಹಿಯಥಾತತ್ವಂಕೋರಾಮಸ್ಯವ್ಯತಿಕ್ರಮಃ |೨೪| ಹಿತಂವಚೋಬಂಧುಹಿತಾರ್ಥಿನಾಮಯಾಯುಚ್ಯಮಾನಂಯದಿನಾಭಿಪತ್ಸ್ಯಸೇ | ಸಬಾಂಧವಸ್ತ್ಯಕ್ಷ್ಯಸಿಜೀವಿತಂರಣೇಹತೋದ್ಯರಾಮೇಣಶರೈರಜಿಹ್ಮಗೈಃ |೨೫| **— ಇತಿಶ್ರೀಮದಾರಣ್ಯಕಾಂಡೇ-ಏಕೋನಚತ್ವಾರಿಂಶಸ್ಸರ್ಗಃ | **—

ಮಾರೀಚೇನತುತದ್ವಾಕ್ಯಂಕ್ಷಮಂಯುಕ್ತಂನಿಶಾಚರಃ|ಉಕ್ತೋನಪ್ರತಿಜಗ್ರಾಹಮರ್ತುಕಾಮಇವೌಷಧಂ ||೧|| ತಂಪಥ್ಯಹಿತವಕ್ತಾರಂಮಾರೀಚಂರಾಕ್ಷಸಾಧಿಪಃ | ಅಬ್ರವೀತ್ಪರುಷಂವಾಕ್ಯಮಯುಕ್ತಂಕಾಲಚೋದಿತಃ |೨| ಯತ್ಕಿಲೈತದಯುಕ್ತಾರ್ಥಂಮಾರೀಚಮಯಿಕಥ್ಯತೇ | ವಾಕ್ಯಂನಿಷ್ಫಲಮತ್ಯರ್ಥಮುಪ್ತಂಬೀಜಮಿವೌಷಧೇ|ಷಿ'ತ್ವದ್ವಾಕ್ಯೈ

ಹೇನಿಶಾಚರ–ಎಲೈ ರಾಕ್ಷಸನೇ, ತವ-ನಿನ್ನ, ಅಪರಾಧೇನ–ದ್ರೋಹದಿಂದ, ಸೋಹಂ–ಆ ಈ ನಾನು, ವಿನಶ್ಯೇಯಂ–ನಾಶವನ್ನು ಹೊಂದುವೆನು, ಅಹಂ-ನಾನು, ತ್ವಾಂ–ನಿನ್ನನ್ನು ಕುರಿತು, ನಾನುಯಾಮಿ–ಬರಲಾರೆನು, ತ್ವಂ–ನೀನು, ತೇ–ನಿನಗೆ, ಯತ್–ಯಾವದು. ಕ್ಷಮಂ–ಯುಕ್ತವೋ, ತತ್–ಅದನ್ನು, ಕುರು–ಮಾಡಿಕೋ ||೨೧|| ರಾಮಸ್ಯಹಿ–ಶ್ರೀರಾಮನಾದರೆ, ಮಹಾತೇಜಾಃ–ಮಹಾತೇಜಸ್ಸುಳ್ಳವನು, ಮಹಾಸತ್ವಃ–ಬಹಳವಾದ ಸತ್ವಗುಣಪ್ರಧಾನನು, ಮಹಾಬಲಃ–ಬಹಳವಾದ ದೇಹಶಕ್ತಿಯುಳ್ಳವನು, ಸಃ–ಆ ಶ್ರೀರಾಮನು. ರಾಕ್ಷಸಲೋಕಸ್ಯಾಪಿ-ವಿಶಿಷ್ಟರಾಕ್ಷಸರ ಸಮುದಾಯಕ್ಕೂ, ಅಂತಕಃ–ನಾಶಕನು. ನಭವೇತ್ಪಿಹಿ–ಆಗದೇಹೋಗುವನೋ ಏನು ||೨೨|| ಜನಸ್ಥಾನಗತಃ–ಉಳ್ಕ್ಯವನ್ನು ಹೊಂದಿದ, ಅತಿವೃತ್ತಃ–ದುರ್ವೃತ್ತನಾದ ಖರಃ–ಖರಾಸುರನು, ಶೂರ್ಪಣಖಾಹೇತೋಃ–ತಂಗಿಯಾದ ಶೂರ್ಪಣಖೆಯೆಂಬವಳ ನಿಮಿತ್ತದಿಂದ, ಪೂರ್ವಂ–ಮೊದಲು. ಅಕ್ಲಿಷ್ಟಕರ್ಮಣಾ–ಕ್ಲೇಶವಿಲ್ಲದ ಕಾರ್ಯವನ್ನು ಮಾಡುತ್ತಿರುವ. ರಾಮೇಣ–ಶ್ರೀರಾಮನಿಂದ, ಹತೋಯದಿ–ಹೊಡೆಯಲ್ಪಟ್ಟವನಾದರೆ, ಅತ್ರ–ಈ ವಿಷಯದಲ್ಲಿ. ಯಥಾತತ್ವಂ–ಯಥಾರ್ಥವಾಗಿ. ಬ್ರೂಹಿ–ಹೇಳು, ರಾಮಸ್ಯ–ಶ್ರೀರಾಮನ, ವ್ಯತಿಕ್ರಮಃ–ಅಪರಾಧವು, ಕಃ–ಯೇನು ||೨೪|| ಬಂಧುಹಿತಾರ್ಥಿನಾ–ಬಂಧುಗಳಿಗೆ ಹಿತವನ್ನು ಕೋರುತ್ತಿರುವ, ಮಯಾ–ನನ್ನಿಂದ, ಯಥಾ–ಹ್ಯಾಗೆ, ಉಚ್ಯಮಾನಂ–ಹೇಳಲ್ಪಟ್ಟಿತೋ, ತಥಾ–ಹಾಗೆ, ಹಿತಂ–ಹಿತಕರವಾದ, ತದ್ವಚಃ–ಆ ಮಾತನ್ನು. ನಾಭಿಪತ್ಸ್ಯಸೆಯದಿ–ಅಂಗೀಕಾರವನ್ನು ಮಾಡದೇಹೋದರೆ, ಅದ್ಯ–ಈಗಲೇ, ರಾಮೇಣ–ರಾಮನಿಂದ, ಅಜಿಹ್ಮಗೈಃ–ಗುರಿಗೆ ಸರಿಯಾಗಿ ಹೋಗುತ್ತಿರುವ, ಶರೈಃ–ಬಾಣಗಳಿಂದ, ರಣೇ–ಕಾಳಗದಲ್ಲಿ, ಹತಃ–ಹೊಡೆಯಲ್ಪಟ್ಟವನಾಗಿ, ಸಬಾಂಧವಃ–ಬಂಧುಗಳಿಂದ ಒಡಗೂಡಿದವನಾಗಿ, ಜೀವಿತಂ–ಪ್ರಾಣವನ್ನು ತ್ಯಕ್ಷ್ಯಸಿ–ಬಿಡುವಿ|| —**ಇತಿಶ್ರೀಮದಾರಣ್ಯಕಾಂಡೇ-ಏಕೋನಚತ್ವಾರಿಂಶಸ್ಸರ್ಗಃ**—

ನಿಶಾಚರಃ–ರಾವಣಾಸುರನು, ಮಾರೀಚೇನ–ಮಾರೀಚನಿಂದ. ಕ್ಷಮಂ–ಯೋಗ್ಯವಾದ, ಯುಕ್ತಂ–ಯುಕ್ತಿಯಿಂದ ಕೂಡಿಕೊಂಡಿರುವ, ತದ್ವಾಕ್ಯಂ–ಆ ಮಾತನ್ನು- ಉಕ್ತಃ–ಹೇಳಲ್ಪಟ್ಟವನಾಗಿ, ಮರ್ತುಕಾಮಃ–ಸಾಯಬೇಕೆಂದು ಕೋರಿಕೆಯುಳ್ಳ ಪುರುಷನು, ಔಷಧಮಿವ–ಔಷಧವನ್ನೋತೆ, ನಪ್ರತಿಜಗ್ರಾಹ–ಗ್ರಹಿಸಲಿಲ್ಲ||೧||ರಾಕ್ಷಸಾಧಿಪಃ–ರಾವಣಾಸುರನು, ಪಥ್ಯಹಿತವಕ್ತಾರಂ–ಅಪಾಯವಿಲ್ಲದಿರುವ ಸುಖಕರವಾದ ಮಾತನ್ನು ಹೇಳುತ್ತಿರುವ, ತಂಮಾರೀಚಂ–ಆ ಮಾರೀಚನನ್ನು ಕುರಿತು, ಕಾಲಚೋದಿತಃ–ಯಮನಿಂ ಪ್ರೇರೇಪಿತನಾಗಿ, ಪರುಷಂ–ಕಠಿನವಾದ, ಅಯುಕ್ತಂ–ಅನುಚಿತವಾದ ಅರ್ಥವುಳ್ಳ, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು ||೨|| ಹೇಮಾರೀಚ–ಎಲೈ ಮಾರೀಚನೇ, ಮಯಿ–ನನ್ನ ವಿಷಯದಲ್ಲಿ, ತ್ವಯಾ–ನಿನ್ನಿಂದ, ಅಯುಕ್ತಾರ್ಥಂ–ರಾಜನಿಗೆ ಪ್ರತಿಕೂಲವಾದ್ದರಿಂದ ಅನುಚಿತವಾದ ಅರ್ಥವುಳ್ಳ, ಯತ್–ಯಾವ ಮಾತು, ಕಥ್ಯತೇ–ಹೇಳಲ್ಪಡುತ್ತದೋ,

ಮಾಡುವದರಿಂದ ಬಹು ಮಂದಿ ಕೆಟ್ಟರು, ನಿನ್ನಪರಾಧದಿಂದ ಸತ್ಪುರುಷನಾದ ನಾನೂ ಸಹ ಕೆಡುವೆನು, ಆದ್ದರಿಂದ ನಾನು ನಿನ್ನ ಸಂಗಡ ಬರಲಾರೆನು, ನಿನಗೆ ಯೆಂತು ಯುಕ್ತವಾಗಿ ತೋರಿದರೆ ಅಂತು ಮಾಡುವವನಾಗು, ನೀನಪರಾಧವಂ ಮಾಡಿದವನಾದರೆ ಬಹು ಪರಾಕ್ರಮಿ ಯಾಗಿಯೂ ಅಧಿಕವಾದ ದೇಹ ಶಕ್ತಿಯುಳ್ಳವನಾಗಿಯೂ, ಇರುವ ರಾಕ್ಷಸರನ್ನೆಲ್ಲ ಕೊಲ್ಲದೆ ಬಿಡುವನೆ? ಜನಸ್ಥಾನದಲ್ಲಿರುವ ದುರ್ವೃತ್ತನಾದ ಖರಾಸುರನು, ಪೊಡಹುಟ್ಟಿದವಳಾದ ಶೂರ್ಪನಖಿಯನಿಮಿತ್ತವಾಗಿ ಪ್ರಥಮತಃ-ಶ್ರೀರಾಮನಿಂದ ಹತನಾದನು, ಆದ್ದರಿಂದ ರಾಮನಿಗೆ ಅಪರಾಧವಂ ಮಾಡುವದೆಂಥಾದ್ದೋ ಈಗ ನೀನೇ ಹೇಳು, ಬಂಧುಗಳಿಗೆಲ್ಲ ಹಿತವಂ ಬಯಸುವ ನನ್ನಿಂದ ಯಾವ ಮಾತು ಹೇಳಲ್ಪಟ್ಟಿತೋ, ಆ ಮಾತು ನಿನಗೆ ಇಷ್ಟವಿಲ್ಲದಿದ್ದರೆ, ಈಗಲೆ ರಾಮಬಾಣಂಗಳಿಂದ ಹತನಾಗಿ, ಬಂಧುಜನಗಳೊಡನೆ ಪ್ರಾಣವಂ ಬಿಡುವವನಾಗುವಿ ||೨೫|| —*ಆರಣ್ಯಕಾಂಡದಲ್ಲಿನ ೩೯ನೆಯ ಸರ್ಗಂಮುಗಿದುದು *—

ಈ ರೀತಿಯಲ್ಲಿ ರಾವಣಾಸುರನು ಯುಕ್ತವಾಗಿ ಮಾರೀಚನಿಂದ ಹೇಳಲ್ಪಟ್ಟವನಾದರೂ,ಸಾಯಲಿಚ್ಛೆಯುಳ್ಳ ಪುರುಷನು ಔಷಧವಂ ತೆಗದುಕೊಳ್ಳದೆ ಮೃತಿಪಡುವಂತೆ, ಆ ಮಾತನ್ನು ಅಂಗೀಕರಿಸಲಿಲ್ಲ |೧| ಅನಂತರದಲ್ಲಿ ರಾಕ್ಷಸನಾಥನಾದ ಆ ದಶಕಂಠನು, ಅಪಾಯವಿಲ್ಲದೆ ಸುಖವನ್ನುಂಟುಮಾಡುವ ವಾಕ್ಯವಂ ಹೇಳುತಿರುವ

ರ್ನೈತುಮಾಂಶಕ್ಯಂಭೇತ್ತುಂರಾಮಸ್ಯಸಂಯುಗೇ । ಪಾಪಶೀಲಸ್ಯಮೂರ್ಖಸ್ಯಮಾನುಷಸ್ಯವಿಶೇಷತಃ ॥೪॥ ಯ
ಸ್ತ್ಯಕ್ತ್ವಾಸುಹೃದೋರಾಜ್ಯಂಮಾತರಂಪಿತರಂತಥಾ । ಸ್ತ್ರೀವಾಕ್ಯಂಪ್ರಾಕೃತಂಶ್ರುತ್ವಾ ವನಮೇಕಪದೇಗತಃ ।
ಅವಶ್ಯಂತುಮಯಾತಸ್ಯಸಂಯುಗೇಖರಘಾತಿನಃ । ಪ್ರಾಣೈಃಪ್ರಿಯತರಾಸೀತಾಹರ್ತವ್ಯಾತವಸನ್ನಿಧೌ ॥೬॥ ಏವಂಮೇ
ನಿಶ್ಚಿತಾಬುದ್ಧಿರ್ಹೃದಿಮಾರೀಚವರ್ತತೇ । ನವ್ಯಾವರ್ತಯಿತುಂಶಕ್ಯಾಸೇಂದ್ರೈರಪಿಸುರಾಸುರೈಃ ॥೭॥ ದೋಷಂಗುಣಂ
ವಾಸಂಪೃಷ್ಟಸ್ತ್ವಮೇವಂವಕ್ತುಮರ್ಹಸಿ । ಅಪಾಯಂವಾಪ್ಯುಪಾಯಂವಾಕಾರ್ಯಸ್ಯಾಸ್ಯವಿನಿಶ್ಚಯೇ ॥೮॥ ಸಂಪೃ
ಷ್ಟೇನತುವಕ್ತವ್ಯಂಸಚಿವೇನವಿಪಶ್ಚಿತಾ । ಉದ್ಯತಾಂಜಲಿನಾರಾಜ್ಞೋಯಇಚ್ಛೇದ್ಭೂತಿಮಾತ್ಮನಃ ॥೯॥ ವಾಕ್ಯಮಪ್ರತಿ
ಕೂಲಂತುಮೃದುಪೂರ್ವಂಹಿತಂಶುಭಂ । ಉಪಚಾರೇಣಯುಕ್ತಂಚವಕ್ತವ್ಯೋವಸುಧಾಧಿಪಃ ॥೧೦॥ ಸಾವಮರ್ದಂತು
ಯದ್ವಾಕ್ಯಂಮಾರೀಚಹಿತಮುಚ್ಯತೇ । ನಾಭಿನಂದತಿತದ್ರಾಜಾಮಾನಾರ್ಹೋಮಾನವರ್ಜಿತಂ ॥೧೧॥ ಪಂಚರೂಪಾಣಿ

---

ದ್ವಾಕ್ಯಂ-ಈ ಮಾತು. ಅತ್ಯರ್ಥಂ-ಬಹಳವಾಗಿ. ಊಷರೇ-ಊಷರಕ್ಷೇತ್ರದಲ್ಲಿ. ಉಪ್ತಂ-ನಾಟಹಾಕಲ್ಪಟ್ಟ, ಬೀಜಮಿವ-ಧಾನ್ಯದಂತೆ, ನಿಷ್ಫಲಂ-ನಿಷ್ಪ್ರಯೋಜನವಾದದ್ದು ||೩|| ಪಾಪಶೀಲಸ್ಯ-ಪಾಪದಲ್ಲೇ ಸ್ವಭಾವವುಳ್ಳ. ಮೂರ್ಖಸ್ಯ-ಮೂರ್ಖನಾದ. ವಿಶೇಷತಃ-ವಿಶೇಷವಾಗಿ, ಮಾನುಷಸ್ಯ-ಮನುಷ್ಯನಾದ, ರಾಮಸ್ಯ-ಶ್ರೀರಾಮನ ವಿಷಯದಲ್ಲಿ. ಮಾಂ-ನನ್ನನ್ನು, ಭೇತ್ತುಂ-ಬೆದರಿಸುವದಕ್ಕಾಗಿ. ತ್ವದ್ವಾಕ್ಯೈಃ-ನಿನ್ನ ಮಾತುಗಳಿಂದ, ನಶಕ್ಯಂ-ಸಾಧ್ಯವಲ್ಲ|| ಯಃ-ಯಾವ ಶ್ರೀರಾಮನು, ಪ್ರಾಕೃತಂ-ನಿಸ್ಸಾರವಾದ, ಸ್ತ್ರೀವಾಕ್ಯಂ-ಕೈಕೇಯಿ ಯೆಂಬ ಹೆಂಗಸಿನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಸುಹೃದಃ-ಬಂಧುಗಳನ್ನು, ರಾಜ್ಯಂಚ-ರಾಜ್ಯವನ್ನು, ಮಾತರಂ-ತಾಯಿಯನ್ನು, ತಥಾ-ಹಾಗೆ, ಪಿತರಂ-ತಂದೆಯನ್ನು, ತ್ಯಕ್ತ್ವಾ-ಬಿಟ್ಟು, ಏಕಪದೇ-ಒಂದೇಹೆಜ್ಜೆಯಲ್ಲಿ. ಗತಃ-ಹೋದನೋ. ತಸ್ಯ-ಅಂಥಾ, ಸಂಯುಗೇ-ಕಾಳಗದಲ್ಲಿ, ಖರಘಾತಿನಃ-ಖರನನ್ನು ಸಂಹರಿಸಿದನಾದ, ತಸ್ಯ-ಆ ಶ್ರೀರಾಮನ, ಪ್ರಾಣೈಃ-ಪ್ರಾಣಗಳಿಗಿಂತಲೂ, ಪ್ರಿಯತರಾ-ಅತಿಶಯವಾಗಿ ಪ್ರೀತಳಾದ, ಸೀತಾ-ಸೀತಾದೇವಿಯು. ತವ-ನಿನ್ನ, ಸನ್ನಿಧೌ-ಸಮೀಪದಲ್ಲಿ, ಮಯಾ-ನನ್ನಿಂದ ಅವಶ್ಯಂ-ನಿಶ್ಚಯವಾಗಿ, ಹರ್ತವ್ಯಾ-ಹರತಕ್ಕವಳು, ||೬|| ಹೇಮಾರೀಚ-ಎಲೈ ಮಾರೀಚನೇ, ಏವಂ-ಈಪರಿಯಾಗಿ, ಮೇ-ನನ್ನ, ಹೃದಿ-ಮನಸ್ಸಿನಲ್ಲಿ. ನಿಶ್ಚಿತಾ-ನಿಶ್ಚಯಿಸಲ್ಪಟ್ಟ, ಬುದ್ಧಿಃ-ಬುದ್ಧಿಯು. ವರ್ತತೇ-ಯಿದೆ, ಸೇಂದ್ರೈಃ-ಇಂದ್ರನಿಂದೊಡಗೂಡಿದ, ಸುರಾಸುರೈರಪಿ-ದೇವರಾಕ್ಷಸರಿಂದಲೂ, ವ್ಯಾವರ್ತಯಿತುಂ-ಹಿಂತಿರಿಗಿಸುವದಕ್ಕಾಗಿ, ನಶಕ್ಯಾ-ಸಾಧ್ಯವಲ್ಲ ||೭|| ಅಸ್ಯಕಾರ್ಯಸ್ಯ-ಈಕಾರ್ಯದ. ನಿಶ್ಚಯೇ-ನಿಶ್ಚಯವಿಷಯದಲ್ಲಿ, ದೋಷಂವಾ-ದೋಷವನ್ನಾಗಲೀ, ಗುಣಂವಾ-ಗುಣವನ್ನಾಗಲೀ, ಅಪಾಯಂವಾ-ನಾಶವನ್ನಾಗಲಿ, ಉಪಾಯಂವಾ-ಸಾಧನವನ್ನಾಗಲಿ, ಸಂಪೃಷ್ಟಃ-ಕೇಳಲ್ಪಟ್ಟವನಾದರೆ, ಏವಂ-ಈ ಪರಿಯಾಗಿ, ವಕ್ತುಂ-ಹೇಳುವದಕ್ಕಾಗಿ, ಅರ್ಹಸಿ-ಯೋಗ್ಯನಾಗು. ||೮|| ಯಃ-ಯಾವಪುರುಷನು. ಆತ್ಮನಃ-ತನಗೆ, ಭೂತಿಂ-ಅಭಿವೃದ್ಧಿಯನ್ನು, ಇಚ್ಛೇತ್-ಯಿಚ್ಛೈಸುವನೋ. ಸಂಪೃಷ್ಟೇನ-ಪ್ರಶ್ನೆಮಾಡಲ್ಪಟ್ಟ. ರಾಜ್ಞಃ-ಅರಸಿಗೆ, ಉದ್ಯತಾಂಜಲಿನಾ-ಅಂಜಲಿಬದ್ಧನಾದ. ವಿಪಶ್ಚಿತಾ-ವಿದ್ವಾಂಸನಾದ, ತೇನಸಚಿವೇನ-ಆ ಮಂತ್ರಿಯಿಂದ, ವಕ್ತವ್ಯಂ-ಹೇಳತಕ್ಕದ್ದು ||೯|| ವಸುಧಾಧಿಪಃ-ಅರಸು, ಅಪ್ರತಿಕೂಲಂ-ಪ್ರತಿಕೂಲವಾಗದಿರುವ, ಮೃದುಪೂರ್ವಂ-ಮೃದುವಾದ ಶಬ್ದಾನುಪೂರ್ವಿಯುಳ್ಳ, ಹಿತಂ-ಯಿಂಪಾಗಿರುವ. ಶುಭಂ-ಶುಭಕರವಾದ, ವಾಕ್ಯಂ-ಮಾತು, ಉಪಚಾರೇಣ-ಬಹುಮಾನದಿಂದ. ಯುಕ್ತಂಚ-ಯುಕ್ತವಾದದ್ದು ವಕ್ತವ್ಯಃ-ಹೇಳತಕ್ಕವನು ||೧೦|| ಹೆ ಮಾರೀಚ-ಎಲೈ ಮಾರೀಚನೇ, ಯದ್ವಾಕ್ಯಂತು-ಯಾವಮಾತುಆದ ಹಿತಂ-ಹಿತಕರವಾದರೂ, ಸಾವಮರ್ದಂ-ತಿರಸ್ಕಾರದಿಂದೊಡಗೂಡಿದಂತೆ. ಉಚ್ಯತೇ-ಹೇಳಲ್ಪಡುತ್ತದೋ, ತತ್-ಆ ಮಾತನ್ನು, ಮಾನಾರ್ಹಃ-ಪೂಜಾ

---

ಆ ಮಾರೀಚನಂ ಕುರಿತು, ಕಾಲಪುರುಷನಿಂದಪ್ರೇರಿಸಲ್ಪಟ್ಟವನಾಗಿಅಯುಕ್ತವಾಗಿನುಡಿವನದೆಂತೆನೆ,—।೨। ಎಲೈಮಾರೀಚನೆ! ರಾಜನಿಗೆ ಪ್ರತಿಕೂಲವಾದ್ದರಿಂದ ಅನುಚಿತವಾದ ಅರ್ಥವುಳ್ಳ ಯಾವ ವಾಕ್ಯವು ನಿನ್ನಿಂದ ನುಡಿಯಲ್ಪಟ್ಟತೋ, ಈ ಮಾತು ಊಷರಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಬೀಜದಂತೆ ನಿಷ್ಪ್ರಯೋಜನವಾದದ್ದು ।೩। ಪಾಪಸ್ವಭಾವವುಳ್ಳ ಮೂರ್ಖನಾದ ಮನುಷ್ಯಮಾತ್ರನಾದ ರಾಮನ ವಿಷಯದಲ್ಲಿ ನನ್ನನ್ನು ಭೇದಿಸುವದಕ್ಕೆ ನಿನ್ನ ಮಾತುಗಳಿಂದಾಗಲಾರದು, ಯಾವ ರಾಮನು ಸಾಧಾರಣಳಾದ ಹೆಂಗಸಿನ ಮಾತಂಕೇಳಿ, ತಂದೆತಾಯಿಗಳಂ ಬಿಟ್ಟು ನಿಂತ್ರಹಾಗೆಯೇ ಹೊರಟನೋ, ಅಂಥಾ ಸ್ತ್ರೀಜಿತನಾದ ಮತ್ತು ಖರಸಂಹಾರವಂ ಗೈದ ಆತನ ಪ್ರಾಣಪ್ರಿಯಳಾದ ಸೀತಾದೇವಿಯು ನಿನ್ನ ಸಮೀಪದಲ್ಲಿಯೇ ಅಪಹರಿಸಲ್ಪಡಬೇಕು ।೬। ಎಂಬದಾಗಿ ನನ್ನ ಮನದಲ್ಲಿ ನಿಶ್ಚಯಿಸಲ್ಪಟ್ಟದೆ, ಇದನ್ನು ಹಿಂತಿರುಗಿಸುವದಕ್ಕೆ ಇಂದ್ರಾದಿಗಳಿಂದಲೂ ಕೂಡಾಆಗಲಾರದು,ಈಕಾರ್ಯದಲ್ಲಿ ಗುಣದೋಷಂಗಳನ್ನಾಗಲೀ. ಅಪಾಯ ಉಪಾಯಗಳನ್ನಾಗಲೀ ಪೇಳುವವನಾಗೆಂದು, ನೀನು ಕೇಳಲ್ಪಟ್ಟವನಾದರೆಈ ರೀತಿಯಲ್ಲಿ ಹೇಳಬಹುದು. [ಇಲ್ಲವಾದರೆ ಇಂತು ಪೇಳಬಾರದು] ॥೮। ಲೋಕದಲ್ಲಿ ಯಾವ ಪುರುಷನು ತನಗೆ ಅಭಿವೃದ್ಧಿಯನ್ನಿಚ್ಛೈಸುವನೋ ಅವನು ಮಂತ್ರಿಯಾಗಿದ್ದರೂ ರಾಜನಿಂದ ಪ್ರಶ್ನೆಗೆಯ್ಯಲ್ಪಟ್ಟವನಾಗಿ, ಕೈಮುಗಿದು ಹೇಳಬೇಕೇ ಹೊರತು ರಾಜನಿಗೆ ಪ್ರತಿಕೂಲವಾಗಿಯೂ, ಅಶುಭವಾಗಿಯೂ, ಅಹಿತವಾಗಿಯೂ ಇರುವಂತೆ ನುಡಿಯಬಾರದು ।೧೦॥ ಎಲೈ ಮಾ

ರಾಜಾನೋಧಾರಯಂತ್ಯಮಿತೌಜಸಃ । ಅಗ್ನೇರಿಂದ್ರಸ್ಯಸೋಮಸ್ಯವರುಣಸ್ಯಯಮಸ್ಯಚ ।೧೨॥ ಔಷ್ಣ್ಯಂತಥಾವಿಕ್ರಮಂಚಸೌಮ್ಯಂದಂಡಪ್ರಸನ್ನತಾಂ । ಧಾರಯಂತಿಮಹಾತ್ಮಾನೋರಾಜಾನಃಕ್ಷಣದಾಚರ ॥ ತಸ್ಮಾತ್ಸರ್ವಾಸ್ವವಸ್ಥಾಸುಮಾನ್ಯಾಃಪೂಜ್ಯಾಶ್ಚಪಾರ್ಥಿವಾಃ ।೧೩॥ ತ್ವಂತುಧರ್ಮಮವಿಜ್ಞಾಯಕೇವಲಂಮೋಹಮಾಸ್ಥಿತಃ । ಅಭ್ಯಾಗತಂಮಾಂದೌರಾತ್ಮ್ಯಾತ್ಪರುಷಂವಕ್ತುಮಿಚ್ಛಸಿ ॥೧೪॥ ಗುಣದೋಷೌನಪೃಚ್ಛಾಮಿಕ್ಷಮಂಚಾತ್ಮನಿರಾಕ್ಷಸ ॥ ಮಯೋಕ್ತಂತವಚೈತಾವತ್ಸಂಪ್ರತ್ಯಮಿತವಿಕ್ರಮ ॥೧೫॥ ಅಸ್ಮಿಂಸ್ತುತ್ವಂಮಹಾಕೃತ್ಯೇಸಾಹಾಯ್ಯಂಕರ್ತುಮರ್ಹಸಿ । ಶೃಣುತತ್ಕರ್ಮಸಾಹಾಯ್ಯೇಯತ್ಕಾರ್ಯಂವಚನಾನ್ಮಮ ।೧೬॥ ಸೌವರ್ಣಸ್ತ್ವಂಮೃಗೋಭೂತ್ವಾಚಿತ್ರೋರಜತಬಿಂದುಭಿಃ ॥ ಆಶ್ರಮೇತಸ್ಯರಾಮಸ್ಯಸೀತಾಯಾಃಪ್ರಮುಖೇಚರ । ಪ್ರಲೋಭಯಿತ್ವಾವೈದೇಹೀಂಯಥೇಷ್ಟಂಗಂತುಮ

ಯೋಗ್ಯನಾದ, ರಾಜಾ-ಅರಸು, ನಾಭಿನಂದತಿ-ಸಂತೋಷಿಸುವದಿಲ್ಲ ||೧೧|| ಅಮಿತೌಜಸಃ-ಅಪಾರವಾದ ಸಾಮರ್ಥ್ಯವುಳ್ಳ, ರಾಜಾನಃ-ಅರಸುಗಳು ಅಗ್ನೇಃ-ಯಜ್ಞೇಶ್ವರನ, ಇಂದ್ರಸ್ಯ-ಇಂದ್ರನ, ಸೋಮಸ್ಯ-ಚಂದ್ರನ, ವರುಣಸ್ಯ-ವರುಣನ, ಯಮಸ್ಯ-ಯಮನ, ಪಂಚ-ಐದು ಸಂಖ್ಯೆಯುಳ್ಳ ರೂಪಾಣಿ-ಅಂಶಗಳನ್ನು ಧಾರಯಂತಿ-ಧರಿಸುತ್ತಾರೆ ||೧೨|| ಹೇಕ್ಷಣದಾಚರ-ಎಲೈ ರಕ್ಕಸನೇ, ಮಹಾತ್ಮಾನಃ-ಮಹಾತ್ಮರಾದ, ರಾಜಾನಃ-ಅರಸುಗಳು, ಅಗ್ನೇಃ-ಅಗ್ನಿಯ, ಔಷ್ಣ್ಯಂ-ಉಷ್ಣತ್ವವನ್ನು, ತಥಾ-ಹಾಗೆಯೇ, ಇಂದ್ರಸ್ಯ-ದೇವೇಂದ್ರನ, ವಿಕ್ರಮಂಚ-ಪರಾಕ್ರಮವನ್ನು, ಸೋಮಸ್ಯ-ಚಂದ್ರನ, ಸೌಮ್ಯಂ-ಮೃದುತ್ವವನ್ನು, (ಅಂದರೆ-ದಯಾರ್ದ್ರಭಾವವನ್ನು.) ದಂಡಂ-ಯಮಧರ್ಮರಾಯನ ದುಷ್ಟನಿಗ್ರಹಕಾರಿತ್ವವನ್ನು ವರುಣಸ್ಯ-ವರುಣನ, ಪ್ರಸನ್ನತಾಂಚ-ಪ್ರಸನ್ನತ್ವವನ್ನು, (ಅನುಗ್ರಹರೂಪವಾದ ಪ್ರಸಾದವನ್ನು,) ಧಾರಯಂತಿ-ಧರಿಸಿದರು ||೧೩|| ತಸ್ಮಾತ್-ಆಕಾರಣದದೆಸೆಯಿಂದ, ಸರ್ವಾಸು-ಸಮಸ್ತಗಳಾದ, ಅವಸ್ಥಾಸು-ಕಾಲಗತಿವಿಶೇಷದಲ್ಲಿ, ಪಾರ್ಥಿವಾಃ-ಅರಸುಗಳು, ಮಾನ್ಯಾಃ-ಬಹುಮಾನಿಸಕ್ಕವರು, ಪೂಜ್ಯಾಃ-ಮರ್ಯಾದೆ ಮಾಡತಕ್ಕವರು ||೧೩|| ತ್ವಂತು-ನೀನಾದರೆ, ಧರ್ಮಂ-ರಾಜಧರ್ಮವನ್ನು, ಅವಿಜ್ಞಾಯ-ತಿಳಿಯದೇ, ಕೇವಲಂ-ಮುಖ್ಯವಾಗಿ, ಮೋಹಂ-ಅಜ್ಞಾನವನ್ನು ಆಸ್ಥಿತಃ-ಹೊಂದಿದವನಾಗಿ, ಅಭ್ಯಾಗತಂ-ಅತಿಥಿಯಾಗಿ ಬಂದ, ಮಾಂ-ನನ್ನನ್ನು ಕುರಿತು, ದೌರಾತ್ಮ್ಯಾತ್-ದೌರ್ಜನ್ಯದ ದೆಸೆಯಿಂದ, ಪರುಷಂ-ಕಠಿನೋಕ್ತಿಯನ್ನು, ವಕ್ತುಂ-ಹೇಳುವದಕ್ಕಾಗಿ, ಇಚ್ಛಸಿ-ಅಪೇಕ್ಷಿಸುತ್ತೀಯೆ ||೧೪|| ಹೇರಾಕ್ಷಸ-ಎಲೈ ರಕ್ಕಸನೇ, ಗುಣದೋಷೌ-ಗುಣದೋಷಗಳನ್ನು ಆತ್ಮನಿ-ನನ್ನಲ್ಲಿ ಕ್ಷೇಮಂಚ-ಕುಶಲವನ್ನು, ನಪೃಚ್ಛಾಮಿ-ಕೇಳಿದವನಲ್ಲ, ಹೇಅಮಿತವಿಕ್ರಮ-ಎಲೋ ಅಪಾರ ಪರಾಕ್ರಮವುಳ್ಳವನೇ ತವ-ನಿನಗೆ, ಸಂಪ್ರತಿ-ಈಗ, ಮಯಾ-ನನ್ನಿಂದ ಏತಾವತ್-ಇಷ್ಟೇಮಾತು, ಉಕ್ತಂ-ಹೇಳಲ್ಪಟ್ಟಿತು, ||೧೫|| ಅಸ್ಮಿನ್ಮಹಾಕೃತ್ಯೇ-ಈ ದೊಡ್ಡ ಕಾರ್ಯದ ವಿಷಯದಲ್ಲಿ, ತ್ವಂ-ನೀನು, ಸಹಾಯ್ಯಂ-ಸಹಾಯಕೃತ್ಯವನ್ನು, ಕರ್ತುಂ-ಮಾಡುವದಕ್ಕಾಗಿ, ಅರ್ಹಸಿ-ಯೋಗ್ಯನಾಗು. ಮಮ-ನನ್ನ, ವಚನಾತ್-ಮಾತಿನದೆಸೆಯಿಂದ, ಸಾಹಾಯ್ಯೇ-ಸಹಾಯಕರ್ಮವಿಷಯದಲ್ಲಿ, ಯತ್-ಯಾವದು, ಕಾರ್ಯಂ-ಮಾಡತಕ್ಕದ್ದೋ, ತತ್ಕರ್ಮ-ಆ ಕೃತ್ಯವನ್ನು, ಶೃಣು-ಕೇಳು ||೧೬|| ತ್ವಂ-ನೀನು, ಸೌವರ್ಣಃ-ಸುವರ್ಣವಿಕಾರವಾದ, ಮೃಗಃ-ಜಿಂಕೆಯು, ಭೂತ್ವಾ-ಆಗಿ, ರಜತಬಿಂದುಭಿಃ-ಬೆಳ್ಳಿಚುಕ್ಕೆಗಳಿಂದ, ಚಿತ್ರಃ-ಆಶ್ಚರ್ಯಕರವಾದ್ದಾಗಿ, ತಸ್ಯರಾಮಸ್ಯ-ಆ ಶ್ರೀರಾಮನ, ಆಶ್ರಮೇ-ಪರ್ಣಶಾಲೆಯಲ್ಲಿ, ಸೀತಾಯಾಃ-ಸೀತಾದೇವಿಯ, ಪ್ರಮುಖೇ-ಮುಂದುಗಡೆ, ಚರ-ಸಂಚರಿಸು ||೧೭|| ವೈದೇಹೀಂ-ಸೀತಾದೇವಿಯನ್ನು, ಪ್ರಲೋಭಯಿತ್ವಾ-ಮೋಸಗೊಳಿಸಿ, ಯಥೇಷ್ಟಂ-ಇಷ್ಟಾನುಸಾರವಾಗಿ, ಗಂತುಂ-ಹೋಗುವದಕ್ಕೆ, ಅರ್ಹಸಿ-ಯೋಗ್ಯನಾಗು ||೧೮|| ಕಾಂಚನಂ-ಚಿನ್ನದವಿಕಾರವಾದ, ಮಾಯಾಮೃಗಂ-ಕಪಟಮೃ

[ಮಾ]ರೀಚನೇ! ನೀನು ನುಡಿದವಾಕ್ಯವು ಹಿತಕರವಾದದಾಗ್ಯೂ, ತಿರಸ್ಕಾರಯುಕ್ತವಾಗಿಯೂ ಮಾನಹೀನವಾಗಿಯೂ ಇರುವದರಿಂದ ಅರಸಾದವನು ಅದನ್ನು ಕುರಿತು ಸಂತೋಷಿಸುವದಿಲ್ಲ. ಮಹಾ ತೇಜೋವಂತರಾದ ಅರಸುಗಳು " ಅಗ್ನಿ, ಇಂದ್ರ, ಚಂದ್ರ, ವರುಣ, ಯಮ, ಎಂಬೀ ಐದುಮಂದಿಯ ರೂಪಂಗಳಂ ಧರಿಸುವರು॥೧೨॥ ಅದು ಹ್ಯಾಗಂದರೆ,—ಅಗ್ನಿಯ ಉಷ್ಣತ್ವವನ್ನು, ಇಂದ್ರನ ಪರಾಕ್ರಮವನ್ನು, ಚಂದ್ರನ ಸೌಮ್ಯತ್ವವನ್ನು, ಯಮದಂಡನೆಯನ್ನು ವರುಣನಪ್ರಸಾದವನ್ನು, ಧರಿಸುವರಾದಕಾರಣ, ಯಾವಾಗಲೂ ರಾಜರುಗಳು ಮರ್ಯಾದೆಗೆ ಅರ್ಹರಾದವರು, ನೀನಾದರೇ ರಾಜಧರ್ಮಂಗಳನ್ನರಿಯದೆ ಕೇವಲವಾಗಿ ಮೋಹವನ್ನೈದಿ, ಅಭ್ಯಾಗತನಾದ ನನ್ನನ್ನು, ದೌರ್ಜನ್ಯದಿಂದ ಅತಿಕಠಿಣವಾಗಿ ಹೇಳಲಿಚ್ಛಿಸುತ್ತೀ ।೧೪॥ ಎಲೈ ರಾಕ್ಷಸನೇ! ನಿನ್ನನ್ನು ನನ್ನಲ್ಲಿರುವ ಗುಣದೋಷಂಗಳಂ ಹೇಳೆಂದು ನಾನು ಕೇಳಲಿಲ್ಲ; ನಾನು ಕೇಳಿದ್ದು ಇಷ್ಟುಮಾತ್ರವಲ್ಲವೆ? ಯೇನಂದರೆ;— ಈ ಮಹಾಕಾರ್ಯದಲ್ಲಿ ನೀನು ಸಹಾಯವಂ ಗೈಯ್ಯುವವನಾಗು, ಆ ಕಾರ್ಯವು ಯಾವದೋ ಅದಂ ಹೇಳುವೆನು ಕೇಳು; ಎಲೈ ಮಾರೀಚನೇ! ನೀನು ಸುವರ್ಣವಿಕಾರವಾದ ಮೃಗವಾಗಿ, ಬೆಳ್ಳಿಚುಕ್ಕೆಗಳಿಂದ ಆಶ್ಚರ್ಯಕರವಾದದ್ದಾಗಿ, ಆ ಶ್ರೀರಾಮನ ಪರ್ಣಶಾಲೆಯಲ್ಲಿ ಸೀತಾದೇವಿಯ ಮುಂದುಗಡೆಯಲ್ಲಿ ಸಂಚರಿಸುತ್ತಾ ಆ ಸೀತಾದೇವಿಯಂ ಮೋಹಗೊಳಿಸಿ ಹೋಗುವವನಾಗು, ಸುವರ್ಣವಿಕಾರವಾದ ಮೃಗರೂಪವಂ ತಾಳಿದ ನಿನ್ನನ್ನು ಕಂಡು ಆ ಸೀತೆಯು ಆಶ್ಚರ್ಯ

ರ್ಹಸಿ ॥ ೧೮ ॥ ತ್ವಾಂ ತು ಮಾಯಾಮೃಗಂ ದೃಷ್ಟ್ವಾ ಕಾಂಚನಂ ಜಾತವಿಸ್ಮಯಾ । ಆನಯೈನಮಿತಿ ಕ್ಷಿಪ್ರಂ ರಾಮಂ ವ
ಕ್ಷ್ಯತಿ ಮೈಥಿಲೀ ॥ ೧೯ ॥ ಅಪಕ್ರಾಂತೇ ತು ಕಾಕುತ್ಸ್ಥೇ ದೂರಂ ಯಾತ್ವಾ ವ್ಯುದಾಹರ । ಹಾ ಸೀತೇ ಲಕ್ಷ್ಮಣೇತ್ಯೇವಂ ರಾಮವಾ
ಕ್ಯಾನುರೂಪಕಂ ॥ ೨೦ ॥ ತಚ್ಛ್ರುತ್ವಾ ರಾಮಪದವೀಂ ಸೀತಯಾ ಚ ಪ್ರಚೋದಿತಃ । ಅನುಗಚ್ಛತಿ ಸಂಭ್ರಾಂತಸ್ಸೌಮಿ
ತ್ರಿರಪಿ ಸೌಹೃದಾತ್ ॥ ೨೧ ॥ ಅಪಕ್ರಾಂತೇ ಚ ಕಾಕುತ್ಸ್ಥೇ ಲಕ್ಷ್ಮಣೇ ಚ ಯಥಾಸುಖಂ । ಆನಯಿಷ್ಯಾಮಿ ವೈದೇಹೀಂ ಸಹ
ಸ್ರಾಕ್ಷಶ್ಶಚೀಮಿವ ॥ ೨೨ ॥ ಏವಂ ಕೃತ್ವಾ ತ್ವಿದಂ ಕಾರ್ಯಂ ಯಥೇಷ್ಟಂ ಗಚ್ಛ ರಾಕ್ಷಸ । ರಾಜ್ಯಸ್ಯಾರ್ಧಂ ಪ್ರಯಚ್ಛಾಮಿ ಮಾ
ರೀಚ ತವ ಸುವ್ರತ ॥ ೨೩ ॥ ಗಚ್ಛ ಸೌಮ್ಯ ಶಿವಂ ಮಾರ್ಗಂ ಕಾರ್ಯಸ್ಯಾಸ್ಯ ವಿವೃದ್ಧಯೇ । ಅಹಂ ತ್ವಾನುಗಮಿಷ್ಯಾಮಿ
ಸರಥೋ ದಂಡಕಾವನಂ ॥ ೨೪ ॥ ಪ್ರಾಪ್ಯ ಸೀತಾಮಯುದ್ಧೇನ ವಂಚಯಿತ್ವಾ ತು ರಾಘವಂ । ಲಂಕಾಂ ಪ್ರತಿಗಮಿಷ್ಯಾಮಿ
ಕೃತಕಾರ್ಯಸ್ಸಹ ತ್ವಯಾ ॥ ೨೫ ॥ ನ ತತ್ಕರೋಷಿ ಮಾರೀಚ ಹನ್ಮಿ ತ್ವಾಮಹಮದ್ಯ ವೈ । ಏತತ್ಕಾರ್ಯಮವಶ್ಯಂ ಮೇ ಬಲಾ

---

ಗಸ್ವರೂಪನಾದ, ತ್ವಾಂತು-ನಿನ್ನನ್ನು ದೃಷ್ಟ್ವಾ-ಕಂಡು, ಜಾತವಿಸ್ಮಯಾ-ಹುಟ್ಟತಕ್ಕ ಆಶ್ಚರ್ಯವುಳ್ಳ, ಮೈಥಿಲೀ-ಸೀತಾದೇವಿಯು, ಏನಂ-ಈ ಮೃ
ಗವನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ಆನಯ-ತೆಗೆದುಕೊಂಡುಬಾ ಎಂದು, ರಾಮಂ-ಶ್ರೀರಾಮನಂ ಕುರಿತು, ವಕ್ಷ್ಯತಿ-ಹೇಳುವಳು ॥ ೧೯ ॥ ಕಾಕುತ್ಸ್ಥೇ-
ಶ್ರೀರಾಮನು, ಅಪಕ್ರಾಂತೇಸತಿ-ಆಶ್ರಮದಿಂ ಹೊರಗೆ ಬಂದವನಾಗಲಾಗಿ, ದೂರಂ-ದೂರವಾಗಿ, ಯಾತ್ವಾ-ಹೋಗಿ, ಹಾ-ಕಷ್ಟವು, ಹೇಸೀತೇ-ಎಲೈ ಸೀ
ತೆಯೇ, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಇತ್ಯೇವಂ-ಈ ಪರಿಯಾಗಿ. ರಾಮವಾಕ್ಯಾನುರೂಪಕಂ-ಶ್ರೀರಾಮನ ವಚನಕ್ಕೆ ಅನುರೂಪವಾದ್ದಾಗಿಯೆ, ಉದಾ
ಹರ-ಹೇಳು ॥ ೨೦ ॥ ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಸೀತಯಾಚ-ಸೀತಾದೇವಿಯಿಂದಲೂ, ಸೌಹೃದಾತ್-ಅಣ್ಣನಲ್ಲಿ ಸ್ನೇಹದಿಂದಲೂ, ಪ್ರ
ಚೋದಿತಃ-ಪ್ರೇರಿಸಲ್ಪಟ್ಟ, ಸೌಮಿತ್ರಿರಪಿ-ಲಕ್ಷ್ಮಣನೂ, ಸಂಭ್ರಾಂತಃ-ಭ್ರಾಂತಿಗೊಂಡವನಾಗಿ, ರಾಮಪದವೀಂ-ಶ್ರೀರಾಮನ ಮಾರ್ಗವನ್ನೇ ಕುರಿತು,
ಅನುಗಚ್ಛತಿ-ಅನುಸರಿಸಿ ಹೋಗುತ್ತಾನೆ, ॥ ೨೧ ॥ ಕಾಕುತ್ಸ್ಥೇ-ಶ್ರೀರಾಮನು, ಲಕ್ಷ್ಮಣೇಚ-ಲಕ್ಷ್ಮಣನೂ. ಅಪಕ್ರಾಂತೇಚಸತಿ-ಆಶ್ರಮದಿಂ ಹೊರಟ
ಹೋದವನಾಗಲಾಗಿ, ಸಹಸ್ರಾಕ್ಷಃ-ದೇವೇಂದ್ರನು, ಶಚೀಮಿವ-ಶಚೀದೇವಿಯನ್ನು, ವೈದೇಹೀಂ-ಆ ಸೀತಾದೇವಿಯನ್ನು, ಯಥಾಸುಖಂ-ಸುಖವಾಗಿ
ಆನಯಿಷ್ಯಾಮಿ-ತರುವೆನು ॥ ೨೨ ॥ ಹೇರಾಕ್ಷಸ-ಎಲೈ ರಾಕ್ಷಸನೇ, ಏವಂ-ಈ ಪರಿಯಾಗಿ, ಇದಂಕಾರ್ಯಂ-ಈ ಕಾರ್ಯವನ್ನು, ಕೃತ್ವಾ-ಮಾಡಿ, ಯಥೇ
ಷ್ಟಂ-ಇಚ್ಛಾನುಸಾರವಾಗಿ, ಗಚ್ಛ-ಹೋಗು, ಹೇಮಾರೀಚ-ಎಲೈ ಮಾರೀಚನೇ, ಹೇಸುವ್ರತ-ಎಲೆ ನಿಯಮವುಳ್ಳವನೇ, ತವ-ನಿನಗೆ, ರಾಜ್ಯಸ್ಯ-ರಾ
ಜ್ಯದ, ಅರ್ಧಂ-ಅರ್ಧಾಂಶವನ್ನು, ಪ್ರಯಚ್ಛಾಮಿ-ಕೊಡುತ್ತೇನೆ ॥ ೨೩ ॥ ಹೇಸೌಮ್ಯ-ಎಲೈ ಸೌಮ್ಯನೇ, ಅಸ್ಯಕಾರ್ಯಸ್ಯ-ಈ ಕಾರ್ಯದ, ವಿವೃದ್ಧ
ಯೇ-ಅಭಿವೃದ್ಧಿಗಾಗಿ, ಶಿವಂ-ಶುಭಕರವಾದ, ಮಾರ್ಗಂ-ಮೃಗಸಂಬಂಧಿಯಾದ ರೂಪವನ್ನು, ಗಚ್ಛ-ಹೊಂದು. ಅಹಂ-ನಾನು, ಸರಥಃ-ರಥಾರೂ
ಢನಾಗಿ, ತ್ವಾಂ-ನಿನ್ನನ್ನು ಅನುಸರಿಸಿ, ದಂಡಕಾವನಂ-ದಂಡಕಾರಣ್ಯವನ್ನು ಕುರಿತು, ಅನುಗಮಿಷ್ಯಾಮಿ-ಹಿಂದೇಲೇ ಬರುತ್ತೇನೆ ॥ ೨೪ ॥ ಸೀತಾಂ-ಸೀ
ತಾದೇವಿಯನ್ನು, ಪ್ರಾಪ್ಯ-ಹೊಂದಿ, ಅಯುದ್ಧೇನ-ಯುದ್ಧವಿಲ್ಲದ ಉಪಾಯದಿಂದಲೇ, ರಾಘವಂ-ಶ್ರೀರಾಮನನ್ನು ವಂಚಯಿತ್ವಾ-ಮೋಸಮಾಡಿ
ಕೃತಕಾರ್ಯಃ-ಮಾಡಲ್ಪಟ್ಟ ಕಾರ್ಯವುಳ್ಳವನಾಗಿ, ತ್ವಯಾಸಹ-ನಿನ್ನೊಡಗೂಡ, ಲಂಕಾಂ-ಲಂಕಾಪುರವಂ ಕುರಿತು, ಪ್ರತಿಗಮಿಷ್ಯಾಮಿ-ತಿರಿಗಿ ಬರುವೆನು ॥ ೨೫ ॥
ಹೇಮಾರೀಚ-ಎಲೋ ಮಾರೀಚನೇ. ಏತತ್ಕಾರ್ಯಂ-ಈ ಕಾರ್ಯವನ್ನು. ನಕರೋಷಿಚೇತ್-ಮಾಡದೇ ಹೋದರೆ, ಅಹಂ-ನಾನು, ಅದ್ಯವೈ-ಈಗಲೇ, ತ್ವಾಂ-
ನಿನ್ನನ್ನು, ಹನ್ಮಿ-ಹೊಡೆಯುವೆನು, ಮೇ-ನನಗೆ, ಏತತ್ಕಾರ್ಯಂ-ಈ ಕಾರ್ಯವು, ಅವಶ್ಯಂ-ನಿಶ್ಚಯವಾಗಿ. ಬಲಾದಪಿ-ನನ್ನ ಬಲಾತ್ಕಾರದಿಂದಲಾದರೂ, ಕ

---

ಗೊಂಡವಳಾಗಿ, ಈ ಮೃಗವಂ ನನಗೆ ತಂದು ಕೊಡೆಂದು ರಾಮನಿಗೆ ಹೇಳುವಳು ॥ ೧೯ ॥ ಈ ರೀತಿಯಾಗಿ ಹೇಳಲ್ಪ
ಟ್ಟವನಾಗಿ ಶ್ರೀರಾಮನು ತೆರಳಲೂ, ಬಹು ದೂರಹೋಗಿ, ನೀನು, ಅಯ್ಯೋ, ಜನಕ ನಂದಿನಿಯಾದ ಸೀತಾ ದೇವಿ
ಯೇ! ಎಲೈ ಲಕ್ಷ್ಮಣನೇ! ಎಂದು ಈ ರೀತಿಯಲ್ಲಿ ರಾಮವಾಕ್ಯಾನು ರೂಪವಾಗಿ ಕೂಗುವವನಾಗು, ಅನಂತರದಲ್ಲಿ
ಸೀತಾದೇವಿಯು ಆ ವಾಕ್ಯವಂ ಕೇಳಿ, ಆಕೆಯಿಂದಲೂ ಭ್ರಾತೃಸೌಹಾರ್ದದಿಂದಲೂ ಪ್ರೇರಿಸಲ್ಪಟ್ಟವನಾಗಿ, ಲ
ಕ್ಷ್ಮಣನೂ ಸಹ ಸಂಭ್ರಾಂತನಾಗಿ, ರಾಮನ ಮಾರ್ಗವಂ ಹುಡುಕುವದಕ್ಕಾಗಿ ಹೋಗುವನು, ರಾಮಲಕ್ಷ್ಮಣರೀ
ರ್ವರು ಈ ರೀತಿಯಲ್ಲಿ ನಾರಿದವರಾಗಲೂ, ಇಂದ್ರನು ಶಚೀದೇವಿಯನ್ನು ಕರೆದುಕೊಂಡು ಹೋಗುವಂತೆ ನಾನು
ಆ ಸೀತಾದೇವಿಯಂ ಕರೆತರುವೆನು ॥ ೨೨ ॥ ಎಲೈ ರಾಕ್ಷಸನೇ! ನೀನೀ ಕಾರ್ಯವಂಮಾಡಿ ನಿನ್ನಿಷ್ಟವಿದ್ದಂತೆ ಹೋಗು,
ಯೆನ್ನ ರಾಜ್ಯದಲ್ಲಿ ನಿನಗೆ ಅರ್ಧರಾಜ್ಯವಂ ಕೊಡುವೆನು, ಆದಕಾರಣ ಈ ಕಾರ್ಯಾಭಿವೃದ್ಧಿಗಾಗಿ, ನೀನು ಮೃಗರೂ
ಪವಂ ತಾಳುವವನಾಗು, ನಾನು ರಥಾರೂಢನಾಗಿ ನಿನ್ನನುಸರಿಸಿ ದಂಡಕಾರಣ್ಯಕ್ಕೆ ಬರುವೆನು, ಯುದ್ಧವಿಲ್ಲದೆ ಸೀ
ತಾದೇವಿಯಂ ಪಡೆದು, ರಾಮನಂ ವಂಚಿಸಿ, ಕೃತಕೃತ್ಯನಾಗಿ ನಿನ್ನೊಡನೆ ಲಂಕಾಪುರಿಯಂ ಸೇರುವೆನು ॥ ೨೫ ॥
ಎಲೈ ಮಾರೀಚನೇ! ಪ್ರಪಂಚ ಈ ಕೃತ್ಯವನ್ನು ನೀನು ಮಾಡಲೇ ಬೇಕು, ಇಲ್ಲದಿದ್ದರೆ, ನಾನೀಗಲೇ ನಿನ್ನನ್ನು
ಕೊಲ್ಲುವೆನು ಹ್ಯಾಗಾದರೂ ಈ ಕಾರ್ಯವು ನಿಶ್ಚಯವಾಗಿ ಬಲಾತ್ಕಾರದಿಂದ ಲಾದರೂ ನಿನ್ನಿಂದಲೇ ಮಾಡಿಸು

ದಪಕರಿಷ್ಯಸಿ । ರಾಜ್ಞೋಹಿಪ್ರತಿಕೂಲಸ್ಥೋನಜಾತುಸುಖಮೇಧತೇ ॥೨೮॥ ಆಸಾದ್ಯತಂಜೀವಿತಸಂಶಯಸ್ತೇಮೃ
ತ್ಯುರ್ಧ್ರುವೋಹ್ಯದ್ಯಮಯಾವಿರುಧ್ಯ। ಏತದ್ಯಥಾವತ್ಪ್ರತಿಗೃಹ್ಯಬುಧ್ಯಾಯದತ್ರಪಥ್ಯಂಕುರುತತ್ತಥಾತ್ವಂ।೨೭॥

—*ಇತಿಶ್ರೀಮದಾರಣ್ಯಕಾಂಡೆ ಚತ್ವಾರಿಂಶಸ್ಸರ್ಗಃ॥*—

ಆಜ್ಞಪ್ತೋರಾಜವದ್ವಾಕ್ಯಂಪ್ರತಿಕೂಲಂನಿಶಾಚರಃ । ಅಬ್ರವೀತ್ಪರುಷಂವಾಕ್ಯಂಮಾರೀಚೋರಾಕ್ಷಸಾಧಿಪಂ।೧
ಕೇನಾಯಮುಪದಿಷ್ಟಸ್ತೇವಿನಾಶಃಪಾಪಕರ್ಮಣಾ । ಸಪುತ್ರಸ್ಯಸರಾಷ್ಟ್ರಸ್ಯಸಾಮಾತ್ಯಸ್ಯನಿಶಾಚರ ॥೨॥ ಕಸ್ತ್ವಯಾ
ಸುಖಿನಾರಾಜನ್ನಾಭಿನಂದತಿಪಾಪಕೃತ್ । ಕೇನಾಯಮುಪದಿಷ್ಟಸ್ತೇಮೃತ್ಯುದ್ವಾರಮುಪಾಯತಃ ॥೩॥ ಶತ್ರವಸ್ತವ
ಸುವ್ಯಕ್ತಂಹೀನವೀರ್ಯಾನಿಶಾಚರಾಃ । ಇಚ್ಛಂತಿತ್ವಾಂವಿನಶ್ಯಂತಮುಪರುದ್ಧಂಬಲೀಯಸಾ ॥೪॥ ಕೇನೇದಮುಪದಿಷ್ಟಂ
ತೇಕ್ಷುದ್ರೇಣಾಹಿತವಾದಿನಾ । ಯಸ್ತ್ವಾಮಿಚ್ಛತಿನಶ್ಯಂತಂ ಸ್ವಕೃತೇನನಿಶಾಚರ ।೫॥ ವಧ್ಯಾಃಖಲುನಹನ್ಯಂತೆಸಚಿವಾ

---

ರಿಷ್ಯಸಿ-ಮಾಡುವಿ, ಹಿಯಸ್ಮಾತ್-ಯಾವಕಾರಣದ ದೆಶೆಯಿಂದ, ರಾಜ್ಞಃ-ಅರಸಿಗೆ, ಪ್ರತಿಕೂಲಸ್ಥಃ-ಪ್ರತಿಕೂಲನಾದ ಪುರುಷನು, ಜಾತು-ಒಂದಾನೊಂದು ಕಾಲದಲ್ಲಿಯೂ, ಸುಖಂ-ಸುಖವನ್ನು, ನೈಧತೆ-ಹೊಂದುವದಿಲ್ಲ ॥೨೮॥ ತಸ್ಮಾತ್ಕಾರಣಾತ್-ಆ ಕಾರಣದ ದೆಶೆಯಿಂದ, ತೆ-ನಿನಗೆ, ತಂ-ಆ ಶ್ರೀರಾಮನನ್ನು, ಆಸಾದ್ಯ-ಹೊಂದಿ, ಜೀವಿತಸಂಶಯಃ-ಪ್ರಾಣಕ್ಕೆ ಸಂಶಯವು, ಮಯಾ-ನನ್ನೊಡನೆ, ವಿರುಧ್ಯ-ವಿರೋಧವಾಡಿಕೊಂಡವನಾದರೆ, ಅದ್ಯ-ಈಗಲೇ, ಮೃತ್ಯುಃ-ಮರಣವು, ಧ್ರುವಃ-ನಿಶ್ಚಯವು, ಏತತ್-ಈ ವಿಚಾರವನ್ನು, ಯಥಾವತ್-ಯಥಾವಸ್ಥಿತವಾಗಿ, ಬುಧ್ಯಾ-ಬುದ್ಧಿಯಿಂದ, ಪ್ರತಿಗೃಹ್ಯ-ನಿಶ್ಚೈಸಿ, ಅತ್ರ-ಈ ವಿಷಯದಲ್ಲಿ, ಯತ್-ಯಾವದು ಪಥ್ಯಂ-ಅಪಾಯವಿಲ್ಲದ್ದೋ, ತತ್-ಆ ಕಾರ್ಯವನ್ನು, ತ್ವಂ-ನೀನು, ತಥಾ-ಹಾಗೆಯೇ, ಕುರು-ಮಾಡು ॥೨೯॥ ॥

—*** ಇತಿಶ್ರೀಮದಾರಣ್ಯಕಾಂಡೆ-ಚತ್ವಾರಿಂಶಸ್ಸರ್ಗಃ ***—

ನಿಶಾಚರಃ-ರಾಕ್ಷಸನಾದ, ಮಾರೀಚಃ-ಮಾರೀಚನು, ರಾಜವತ್-ರಾಜನಿಗೆ ಅರ್ಹವಾದ, ಪ್ರತಿಕೂಲಂ-ಪ್ರತಿಕೂಲವಾದ, ವಾಕ್ಯಂ-ಮಾತನ್ನು, (ಯದ್ವಾ-ಅರಾಜವತ್-ರಾಜನಲ್ಲದವನಂತೆ, ಪ್ರತಿಕೂಲಂಪ್ರತಿಕೂಲವಾದ, (ಯದ್ವಾ-ರಾಜವತ್-ರಾಜನಂತೆ ಉದ್ಧತನಾಗಿ, ಪ್ರತಿಕೂಲಂ-ಪ್ರತಿಕೂಲವಾದ, ವಾಕ್ಯಂ-ಮಾತನ್ನು, ಆಜ್ಞಪ್ತಃ-ರಾವಣನಿಂದಾಜ್ಞಾಪಿಸಲ್ಪಟ್ಟವನಾಗಿ, ರಾಕ್ಷಸಾಧಿಪಂ-ರಕ್ಕಸರಧಿಪತಿಯಾದ ರಾವಣನಂಕುರಿತು, ಪರುಷಂ-ಕಠಿಣವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧॥ ॥ ಹೆನಿಶಾಚರ-ಎಲೋರಾಕ್ಷಸನೇ, ಸಪುತ್ರಸ್ಯ-ಪುತ್ರರಿಂದೊಡಗೂಡಿದ, ಸರಾಷ್ಟ್ರಸ್ಯ-ರಾಜ್ಯದಿಂದೊಡಗೂಡಿದ, ತೆ-ನಿನಗೆ, ಪಾಪಕರ್ಮಣಾ-ಪಾಪಕರವಾದ ವ್ಯಾಪಾರವುಳ್ಳ, ಕೆನ-ಯಾವವನಿಂದ, ವಿನಾಶಃ-ನಾಶಕರವಾದ, ಅಯಂ-ಈ ಉಪಾಯವು, ಉಪದಿಷ್ಟಃ-ಉಪದೇಶಮಾಡಲ್ಪಟ್ಟಿತೊ ॥೨॥ ಹೆರಾಜನ್-ಎಲೈ ಅರಸೇ, ಸುಖಿನಾ-ಸುಖವಂತನಾದ, ತ್ವಯಾ-ನಿನ್ನಿಂದ, ಪಾಪಕೃತ್-ಪಾಪವಂ ಮಾಡಿದ, ಕಃ-ಯಾವೋನು, ನಾಭಿನಂದತಿ-ಸಂತೋಷಗೊಳ್ಳದಿರುವನು, ತೆ-ನಿನಗೆ, ಉಪಾಯತಃ-ಸುಲಭೋಪಾಯದ ದೆಶೆಯಿಂದ ಮೃತ್ಯುದ್ವಾರಂ-ಯಮದ್ವಾರಕ್ಕೆ ಸಮಾನವಾದ, ಅಯಂ-ಈ ಉಪಾಯವು, ಉಪದಿಷ್ಟಃ-ಉಪದೇಶಮಾಡಲ್ಪಟ್ಟಿತು ॥೩॥ ಹೀನವೀರ್ಯಾಃ-ಕಮ್ಮಿಯಾದ ಸಾಮರ್ಥ್ಯವುಳ್ಳ, ನಿಶಾಚರಾಃ-ರಕ್ಕಸರ, ತವ-ನಿನಗೆ, ಶತ್ರವಃ-ಶತ್ರುಗಳು, ಸುವ್ಯಕ್ತಂ-ಸ್ಪಷ್ಟವಾಯಿತು, ಬಲೀಯಸಾ-ಬಲಿಷ್ಠನಿಂದ ಉಪರುದ್ಧಂ-ಆಕ್ರಮಿಸಲ್ಪಟ್ಟ, ತ್ವಾಂ-ನಿನ್ನನ್ನು, ವಿನಶ್ಯಂತಂ-ನಾಶಗೊಂಡವನನ್ನಾಗಿ, ಇಚ್ಛಂತಿ-ಅಪೇಕ್ಷಿಸುತ್ತಾರೆ ॥೪॥ ಹೆನಿಶಾಚರ-ಎಲೈ ರಾಕ್ಷಸನೇ, ಯಃ-ಯಾವ ಪುರುಷನು, ತ್ವಾಂ-ನಿನ್ನನ್ನು, ಸ್ವಕೃತೇನ-ನಿನ್ನ ಕರ್ಮದಿಂದಲೇ, ನಶ್ಯಂತಂ-ನಶಿಸಿದಂಥಾವನನ್ನಾಗಿ, ಇಚ್ಛತಿ-ಅಪೇಕ್ಷಿಸುತ್ತಾ

---

ವೆನು; ನನಗೆ ಪ್ರತಿಕೂಲನಾದವನು ಯಾವಾಗಲೂ ಸುಖವಂ ಪೊಂದುವದಿಲ್ಲ,ಆದುದರಿಂದ ನಿನಗೆ ರಾಮನಂ ಹೊಂದಿದರೆ ಮರಣ ಸಂದೇಹವಲ್ಲವೆ, ನನ್ನೊಡನೆ ವೈರವಂ ಬೆಳೆಯಿಸಿದವನಾದರೆ ಈಗಲೇ ನಿನಗೆ ನಿಶ್ಚಯವಾಗಿ ಮೃತ್ಯುಸಂಭವಿಸುವದು, ಈ ಕಾರ್ಯದಲ್ಲಿ ಯಾವದು ಯುಕ್ತವೋ, ಯಾವದು ಪಥ್ಯವೋ, ನಿನ್ನ ಬುದ್ಧಿಯಿಂದ ನಿಶ್ಚಯಿಸಿ ನೀನು ಮಾಡುವವನಾಗೆಂದು ರಾವಣನು ನುಡಿದನು।೨೯॥ -* ೪೦ನೆಯ ಸರ್ಗಂ ಮುಗಿದುದು *-

ಈ ರೀತಿಯಲ್ಲಿ ರಾವಣನಿಂದ ತನಗಿಷ್ಟವಿಲ್ಲದ ವಿಷಯದಲ್ಲಿ ಆಜ್ಞಾಪಿಸಲ್ಪಟ್ಟಮಾರೀಚನು ರಾಜನಂತೆಉದ್ಧತನಾಗಿ ರಾಕ್ಷಸಾಧಿಪತಿಯಾದ ರಾವಣನನ್ನುದ್ದೇಶಿಸಿ, ಅತಿಕಠಿಣವಾಗಿ ನುಡಿವನದೆಂತೆನೆ,—ಎಲೈ ರಾಕ್ಷಸನೇ! ಪುತ್ರ, ಮಿತ್ರ, ಕಳತ್ರ, ಮಂತ್ರ್ಯಾದಿಗಳಿಂ ದೊಡಗೂಡಿದ ನಿನಗೆ ವಿನಾಶಕರವಾದ ಈ ಉಪಾಯವು, ಪಾಪಿಯಾದ ಯಾವನಿಂದ ಉಪದೇಶಮಾಡಲ್ಪಟ್ಟಿತು ।೨॥ ಎಲೈ ಅರಸೇ, ಸುಖವಂತನಾದ ನಿನ್ನಿಂದ ಯಾವ ಪುರುಷನು ಸುಖವಂ ಪಡೆಯದಿರುವನೋ, ಅವನು ಉಪಾಯವಾಗಿ ಮೃತ್ಯುದ್ವಾರಕ್ಕೆ ಸಮಾನವಾದ ಈ ಉಪಾಯವನ್ನು ಪೇಳಿರಬಹುದು।೩॥ಅಲ್ಪವೀರ್ಯರಾದ ರಾಕ್ಷಸರು ನಿನಗೆ ಹಗೆಯರಾಗಿರುವರಾದಕಾರಣ, ಅವರುಗಳು ಬಲವಂತನಸಂಗಡ ನಿನಗೆ ವೈರವನ್ನುಂಟುಮಾಡಿ, ನಶಿಸಿ ಹೋಗುವ ನಿನ್ನನ್ನು ನೋಡಲಪೇಕ್ಷಿಸುತ್ತಾರೆ।೪।ಎಲೈ ರಾವಣನೇ; ಯಾವ ಪುರುಷನು ಹೀಗೆ ಅಪೇಕ್ಷಿಸುವನೋ, ಅಂಥಾವನಿಂದ ಈ ಮಾತು ಉಪದೇಶಮಾಡಲ್ಪಟ್ಟಿರಬಹುದು॥೫॥ಇದಲ್ಲದೆ ದುರ್ಮಾರ್ಗ

ಸ್ತವರಾವಣ। ಯೇತ್ವಾಮುತ್ಪಥಮಾರೂಢಂನನಿಗೃಹ್ಣಂತಿಸರ್ವಶಃ॥ ೬। ಅಮಾತ್ಯೈಃಕಾಮವೃತ್ತೋಹಿರಾಜಾಕಾಪಥಮಾಶ್ರಿತಃ। ನಿಗ್ರಾಹ್ಯಸ್ಸರ್ವಥಾಸದ್ಭಿಸ್ಸನಿಗ್ರಾಹ್ಯೋನನಿಗೃಹ್ಯಸೇ ॥೭॥ ಧರ್ಮಮರ್ಥಂಚಕಾಮಂಚಯಶಶ್ಚಜಯತಾಂವರ । ಸ್ವಾಮಿಪ್ರಸಾದಾತ್ಸಚಿವಾಃಪ್ರಾಪ್ನುವಂತಿನಿಶಾಚರ॥೮॥ ವಿಪರ್ಯಯೇತುತತ್ಸರ್ವಂವ್ಯರ್ಥಂಭವತಿರಾವಣ। ವ್ಯಸನಂಸ್ವಾಮಿವೈಗುಣ್ಯಾತ್ಪ್ರಾಪ್ನುವಂತೀತರೇಜನಾಃ ॥೯॥ ರಾಜಮೂಲೋಹಿಧರ್ಮಶ್ಚಜಯಶ್ಚಜಯತಾಂವರ। ತಸ್ಮಾತ್ಸರ್ವಾಸ್ವವಸ್ಥಾಸುರಕ್ಷಿತವ್ಯೋನರಾಧಿಪಃ ॥೧೦। ರಾಜ್ಯಂಪಾಲಯಿತುಂಶಕ್ಯಂನತೀಕ್ಷ್ಣೇನನಿಶಾಚರ। ನಚಾಪಿಪ್ರತಿಕೂಲೇನನಾವಿನೀತೇನರಾಕ್ಷಸ ॥೧೧॥ ಯೇತೀಕ್ಷ್ಣಮಂತ್ರಾಸ್ಸಚಿವಾಭಜ್ಯಂತೇಸಹತೇನವೈ। ವಿಷಮೇತುರಗಾಶ್ಶೀಘ್ರಾಮಂದಸಾರಥಯೋಯಥಾ ।೧೨॥ ಬಹವಸ್ಸಾಧವೋಲೋಕೇಯುಕ್ತಾಧರ್ಮಮನುಷ್ಠಿತಾಃ ॥ ಪರೇಷಾಮಪರಾಧೇನವಿನಷ್ಟಾಸ್ಸಪರಿಚ್ಛದಾಃ ॥೧೩। ಸ್ವಾಮಿನಾಪ್ರತಿಕೂಲೇನಪ್ರಜಾಸ್ತೀಕ್ಷ್ಣೇನರಾವಣ ।ರಕ್ಷ್ಯಮಾಣಾನವರ್ಧಂತೇಮೇಷಾ

---

ನೋ। ತೇನ-ಅಂಥಾ. ಅಹಿತವಾದಿನಾ-ಅನಿಷ್ಟವಾತಂ ಹೇಳುತ್ತಿರುವ ಕ್ಷುದ್ರೇಣ-ನೀಚನಾದ, ಕೇನ-ಯಾವವನಿಂದ. ತೇ-ನಿನಗೆ, ಇದಂ-ಈ ಕಾರ್ಯವು, ಉಪದಿಷ್ಟಂ-ಉಪದೇಶವಾಗಲ್ಪಟ್ಟಿತು ॥೫॥ ಹೇರಾವಣ-ಎಲೈ ರಾವಣನೇ, ಯೇ-ಯಾವ ಮಂತ್ರಿಗಳು. ಉತ್ಪಥಂ-ದುರ್ಮಾರ್ಗವನ್ನು, ಆರೂಢಂ-ಏರಿದ ತ್ವಾಂ-ನಿನ್ನನ್ನು. ಸರ್ವಶಃ-ಎಲ್ಲಾ ವಿಷಯಗಳಲ್ಲಿ. ನನಿಗೃಹ್ಣಂತಿ-ನಿರಾಕರಿಸುವದಿಲ್ಲವೋ, ತೇಸಚಿವಾಃ-ಆ ನಿನ್ನ ಮಂತ್ರಿಗಳು ವಧ್ಯಾಃ-ವಧಾರ್ಹರು. ನಹನ್ಯಂತೇಖಲು-ಹೊಡೆಯಲ್ಪಡುವದಿಲ್ಲವಷ್ಟೆ ॥೬॥ ಕಾಪಥಂ-ಕುತ್ಸಿತಮಾರ್ಗವನ್ನು, ಆಶ್ರಿತಃ-ಆಶ್ರಯಿಸಿದ, ಕಾಮವೃತ್ತಃ-ಸ್ವೇಚ್ಛೆಯಾಗಿ ಪ್ರವರ್ತಿಸಿದ, ರಾಜಾ-ಅರಸು, ಸದ್ಭಿಃ-ಸತ್ಪುರುಷರಾದ. ಅಮಾತ್ಯೈಃ-ಮಂತ್ರಿಗಳಿಂದ, ನಿಗ್ರಾಹ್ಯೋಹಿ-ನಿಗ್ರಹಿಸತಕ್ಕವನಷ್ಟೆ, ತತ್-ಆಕಾರಣದಿಂದ ನಿಗ್ರಾಹ್ಯಃ-ನಿಗ್ರಹಿಸತಕ್ಕ ನೀನು, ನನಿಗೃಹ್ಯಸೇ-ನಿಗ್ರಹಿಸಲ್ಪಡಲಿಲ್ಲ ॥೭॥ ಹೇಜಯತಾಂವರ-ಎಲೈ ಜಯಶೀಲರಲ್ಲಿ ಶ್ರೇಷ್ಠನೇ, ಹೇನಿಶಾಚರ-ಎಲೈ ರಕ್ಕಸನೇ, ಸಚಿವಾಃ-ಮಂತ್ರಿಗಳು, ಸ್ವಾಮಿಪ್ರಸಾದಾತ್-ಅರಸಿನ ಅನುಗ್ರಹದದೆಶೆಯಿಂದ, ಧರ್ಮಂ-ಧರ್ಮವನ್ನು, ಅರ್ಥಂಚ-ಅರ್ಥವನ್ನು. ಕಾಮಂಚ-ಕಾಮಗುಣವನ್ನು. ಯಶಶ್ಚ-ಕೀರ್ತಿಯನ್ನು ಪ್ರಾಪ್ನುವಂತಿ-ಪಡೆಯುತ್ತಾರೆ ॥೮॥ ಹೇರಾವಣ-ಎಲೈ ರಾವಣನೇ. ವಿಪರ್ಯಯೇತು-ವ್ಯತ್ಯಸ್ತವಾದರೆ, ತತ್ಸರ್ವಂ-ಆ ಸಮಸ್ತ ಮಂತ್ರಿಗಳ ಗುಣಗಳೆಲ್ಲವೂ. ವ್ಯರ್ಥಂ-ನಿಷ್ಪ್ರಯೋಜನವು, ಭವತಿ-ಆಗುತ್ತದೆ, ಸ್ವಾಮಿವೈಗುಣ್ಯಾತ್-ಅರಸಿನ ದುರ್ಗುಣದದೆಶೆಯಿಂದ, ಇತರೇಜನಾಃ-ಇತರರ ಪ್ರಜೆಗಳೆಲ್ಲಾ, ವ್ಯಸನಂ-ದುಃಖವನ್ನು, ಪ್ರಾಪ್ನುವಂತಿ-ಹೊಂದುತ್ತಾರೆ ॥೯॥ ಹೇಜಯತಾಂವ-ಎಲೈ ಜಯಿಸುವವರೊಳಗೆ ಶ್ರೇಷ್ಠನೇ. ಧರ್ಮಶ್ಚ-ಧರ್ಮವೂ, ಜಯಶ್ಚ-ಜಯವೂ, ಹಿ-ಯಾವಕಾರಣದದೆಶೆಯಿಂದ, ರಾಜಮೂಲಃ-ಅರಸನೇ ಮೂಲವಾಗುಳ್ಳದ್ದೋ. ತಸ್ಮಾತ್-ಆಕಾರಣದದೆಶೆಯಿಂದ, ಸರ್ವಾಸು-ಸಮಸ್ತಗಳಾದ, ಅವಸ್ಥಾಸು-ಕಾಲಗಳಲ್ಲಿ, ನರಾಧಿಪಾಃ-ಅರಸುಗಳು, ರಕ್ಷಿತವ್ಯಾಃ-ಸಂರಕ್ಷಿಸತಕ್ಕವರು ॥೧೦॥ ಹೇನಿಶಾಚರ-ಎಲೆ ರಾಕ್ಷಸನೇ, ರಾಜ್ಯಂ-ರಾಜ್ಯವು, ತೀಕ್ಷ್ಣೇನ-ಕ್ರೂರದಂಡನೆಯುಳ್ಳ ರಾಜನಿಂದ ಪಾಲಯಿತುಂ-ಪರಿಪಾಲನೆ ಮಾಡುವದಕ್ಕೆ. ನಶಕ್ಯಂ-ಸಮರ್ಥವಲ್ಲ. ಹೇರಾಕ್ಷಸ-ಎಲೈ ರಾಕ್ಷಸನೇ, ಪ್ರತಿಕೂಲೇನ-ಪ್ರಜಗಳಿಗೆ ವಿರುದ್ಧನಾದವನಿಂದಲೂ, ನಶಕ್ಯಂ-ಸಾಧ್ಯವಲ್ಲ ॥೧೧॥ ಯೇ-ಯಾರು, ಸಚಿವಾಃ-ಮಂತ್ರಿಗಳು. ತೀಕ್ಷ್ಣಮಂತ್ರಾಃ-ತೀಕ್ಷ್ಣವಾಗಿರುವ ಉಪಾಯವುಳ್ಳವರೋ. ತೇ-ಆ ಮಂತ್ರಿಗಳು, ತೇನಸಹವೈ-ಅಂಥಾ ಕ್ರೂರದಂಡವುಳ್ಳ ರಾಜನೊಡನೆ, ವಿಷಮೇ-ನಿಮ್ನೋನ್ನತಪ್ರದೇಶದಲ್ಲಿ. ಶೀಘ್ರಾಃ-ವೇಗವತ್ತಾದ, ಮಂದಸಾರಥಯಃ-ಬುದ್ಧಿವಂತನಲ್ಲದಿರುವ ಸಾರಥಿಯುಳ್ಳ, ತುರಗಾಯಥಾ-ಕುದುರೆಗಳಂತೆ, ಭಜ್ಯಂತೇ-ಮುರಿಯಲ್ಪಡುತ್ತಾರೆ ॥೧೨॥ ಲೋಕೇ-ಲೋಕದಲ್ಲಿ, ಧರ್ಮಂ-ಧರ್ಮವನ್ನು. ಅನುಷ್ಠಿತಾಃ-ಆಚರಿಸುತ್ತಿರುವ, ಯುಕ್ತಾಃ-ಶಾಸ್ತ್ರೋಕ್ತಮಾರ್ಗಾನುಸಾರಿಗಳಾದ, ಬಹವಃ-ಬಹಳಮಂದಿಯಾದ, ಸಾಧವಃ-ಸಜ್ಜನರು. ಪರೇಷಾಂ-ಇತರರ. ಅಪರಾಧೇನ-ದ್ರೋಹದಿಂದ, ಸಪರಿಚ್ಛದಾಃ-ಪರಿಜನರಿಂದೊಡಗೂಡಿದವರಾಗಿ, ವಿನಷ್ಟಾಃ-ನಾಶಗೊಂಡರು ॥೧೩॥ ಹೇರಾವಣ-ಎಲೆಯೋ ರಾವಣನೇ. ಪ್ರತಿಕೂಲೇನ-ಪ್ರಜೆಗ

---

ಪ್ರವಿಷ್ಟರಾದ ನಿನ್ನನ್ನು ಯಾವ ಮಂತ್ರಿಗಳು ನಿರಾಕರಿಸುವದಿಲ್ಲವೋ, ಅಂಥಾ ಮಂತ್ರಿಗಳನ್ನು ಕೊಲ್ಲಬೇಕು. ಯಾಕಂದರೆ,—ದುರ್ಮಾರ್ಗವನ್ನೈದಿದವನಾಗಿ ಸ್ವೇಚ್ಛೆಯಾಗಿ ಪ್ರವರ್ತಿಸುವ ನೀನು ಮಂತ್ರಿಗಳಿಂದ ನಿಗ್ರಹಿಸಲ್ಪಡತಕ್ಕವನು, ಆದರೂ ಇಂಥಾ ನನ್ನನ್ನು ಅವರು ನಿಗ್ರಹಿಸಲಿಲ್ಲ ।೭। ಎಲೈ ಜಯಶೀಲನಾದ ರಾವಣನೇ! ಮಂತ್ರಿಗಳು ರಾಜಾನುಗ್ರಹದಿಂದ ಧರ್ಮಾದಿಗಳಂ ಪಡೆಯುತ್ತಾರೆ, ಅದುವ್ಯತ್ಯಸ್ತವಾದರೆ ಮಂತ್ರಿಗಳಿದ್ದರೂ ನಿಷ್ಪ್ರಯೋಜನವು ।೯। ಎಲೈ ಜಯಶಾಲಿಗಳಲ್ಲಿ ಉತ್ತಮನಾದವನೇ! ಧರ್ಮವು ಜಯವೂ ಸಹ ರಾಜಮೂಲಕದಿಂದಲೇ ನಡೆವವಾದಕಾರಣ ಸರ್ವಾಂಶಗಳಲ್ಲಿಯೂ, ಅರಸರು ಸಂರಕ್ಷಿಸತಕ್ಕವರು? ರಾಜ್ಯವನ್ನು ತೈಕ್ಷ್ಣ್ಯದಿಂದ ಪಾಲಿಸಬಾರದು, ಪ್ರತಿಕೂಲನಾದವನಿಂದಲೂ ಜಿತೇಂದ್ರಿಯನಲ್ಲದವನಿಂದಲೂ ರಾಜ್ಯಪರಿಪಾಲನವಂ ಮಾಡಲಾಗದು ।೧೧। ಯಾವ ಮಂತ್ರಿಗಳು ಕಾರ್ಯಸಾಧನವಾದ ಉಪಾಯಂಗಳುಳ್ಳವರೋ. ಅವರು ರಾಜನೊಡನೆ, ನಿಮ್ನೋನ್ನತಪ್ರದೇಶದಲ್ಲಿ ಮಂದಮತಿಯಾದ ಸಾರಥಿಯುಳ್ಳ ರಥವು ಮುರಿಯುವಂತೆ ಭಗ್ನರಾಗುವರು ।೧೨। ಲೋಕದಲ್ಲಿ ಧರ್ಮಾನುಷ್ಠಾನವಂ ಗೈಯ್ಯುವ ಸಾಧುಗಳು ಬಹು ಮಂದಿ ಇರುವರು, ಪರದ್ರೋಹಿಗಳಾದವರು ನಾಶವನ್ನೈದಿದರು ।೧೩।

೪೪

ಗೋಮಾಯುನಾಯಥಾ ।೧೪। ಅವಶ್ಯಂವಿನಶಿಷ್ಯಂತಿಸರ್ವೇರಾವಣರಾಕ್ಷಸಾಃ। ಯೇಷಾಂತ್ವಂಕರ್ಕಶೋರಾಜಾದುರ್ಬುದ್ಧಿರ
ಜಿತೇಂದ್ರಿಯಃ ॥೧೫॥ ತದಿದಂಕಾಕತಾಲೀಯಂಘೋರಮಾಸಾದಿತಂಮಯಾ । ಅತ್ರಕಿಂಶೋಚನೀಯಸ್ತ್ವಂಸಸೈನ್ಯೋ
ವಿನಶಿಷ್ಯಸಿ ॥೧೬॥ ಮಾಂನಿಹತ್ಯತುರಾಮಸ್ತುನಚಿರಾತ್ತ್ವಾಂವಧಿಷ್ಯತಿ। ಅನೇನಕೃತಕೃತ್ಯೋಸ್ಮಿಮ್ರಿಯೇಯಾಪ್ಯರಿಣಾ
ಹತಃ ॥೧೭॥ ದರ್ಶನಾದೇವರಾಮಸ್ಯಹತಂಮಾಮವಧಾರಯ । ಆತ್ಮಾನಂಚಹತಂವಿದ್ಧಿಹೃತ್ವಾಸೀತಾಂಸಬಾಂಧ
ವಂ ।೧೮। ಆನಯಿಷ್ಯಸಿಚೇತ್ಸೀತಾಮಾಶ್ರಮಾತ್ಸಹಿತೋಮಯಾ ॥ ನೈವತ್ವಮಸಿನಾಹಂಚನೈವಲಂಕಾನರಾಕ್ಷಸಾಃ॥
೧೯। ನಿವಾರ್ಯಮಾಣಸ್ತುಮಯಾಹಿತೈಷಿಣಾನಮೃಷ್ಯಸೇವಾಕ್ಯಮಿದಂನಿಶಾಚರ।ಪರೇತಕಲ್ಪಾಹಿಗತಾಯುಷೋನರಾಃ ದ
ಹಿತಂನಗೃಹ್ಣಂತಿಸುಹೃದ್ಭಿರೀರಿತಂ ॥೨೦। ಇತಿಶ್ರೀಮದಾರಣ್ಯಕಾಂಡೇ-ಏಕಚತ್ವಾರಿಂಶಸ್ಸರ್ಗಃ॥ *.*—

---

ಳಿಗೆ ವಿರೋಧಿಯಾದ. ತೀಕ್ಷ್ಣೇನ-ಕ್ರೂರಶಿಕ್ಷೆಯುಳ್ಳ, ಸ್ವಾಮಿನಾ-ಪ್ರಭುವಿನಿಂದ. ರಕ್ಷ್ಯಮಾಣಾಃ-ರಕ್ಷಿಸಲ್ಪಟ್ಟ ಪ್ರಜಾಃ-ಪ್ರಜೆಗಳು ಗೋಮಾಯುನಾ-ದೊಡ್ಡನರಿಯಿಂದ, ಮೃಗಾಯಥಾ-ಕುರಿಗಳಂತೆ. ನವರ್ಧಂತೆ-ವೃದ್ಧಿಹೊಂದುವದಿಲ್ಲ ॥೧೪॥ ಹೇರಾವಣ-ಎಲೈ ರಾವಣನೇ ಯೇಷಾಂ-ಯಾವ ರಾಕ್ಷಸರಿಗೆ, ದುರ್ಬುದ್ಧಿಃ-ದುಷ್ಟಬುದ್ಧಿಯುಳ್ಳ, ಅಜಿತೇಂದ್ರಿಯಃ-ಜಿತೇಂದ್ರಿಯನಲ್ಲದಿರುವ, ಕರ್ಕಶಃ-ಕ್ರೂರನಾದ. ತ್ವಂ-ನೀನು. ರಾಜಾ-ಅರಸಾಗಿದ್ದೀಯೋ, ತೇ-ಅಂಥಾ, ಸರ್ವೇ-ಸಮಸ್ತರಾದ, ರಾಕ್ಷಸಾಃ-ರಕ್ಕಸರು, ಅವಶ್ಯಂ-ನಿಶ್ಚಯವಾಗಿ, ವಿನಶಿಷ್ಯಂತಿ-ನಶಿಸಿಹೋಗುತ್ತಾರೆ. ಮಯಾ-ನನ್ನಿಂದ, ತದಿದಂ-ಆ ಈ, ಘೋರಂ-ಭಯಂಕರವಾದ ಆಪತ್ತು, ರಾಮಕರ್ತೃಕ-ಸಂಹಾರರೂಪವಾದದ್ದು, ಕಾಕತಾಲೀಯಂ-ಕಾಕತಾಲನ್ಯಾಯಕ್ಕೆ ಸಂಬಂಧವಾದ್ದಂತೆ, ಆಸಾದಿತಂ-ಹೊಂದಲ್ಪಟ್ಟಿತು, ಕಿಂತು-ಮತ್ತೇನೆಂದರೆ, ಅತ್ರ ಈ ವಿಷಯದಲ್ಲಿ, ತ್ವಂ-ನೀನು, ಶೋಚನೀಯಃ ದುಃಖಿಸತಕ್ಕವನು, ಯತಃ-ಯಾವಕಾರಣದದೆಸೆಯಿಂದ, ತ್ವಂ-ನೀನು, ಸಸೈನ್ಯಃ-ಸೈನ್ಯದಿಂದೊಡಗೂಡಿದವನಾಗಿ, ವಿನಶಿಷ್ಯಸಿ-ನಶಿಸಿಹೋಗುತ್ತೀಯೋ ॥೧೫॥ ರಾಮಸ್ತು-ಶ್ರೀರಾಮನಾದರೆ, ಮಾಂ-ನನ್ನನ್ನು, ನಿಹತ್ಯ-ಕೊಂದು. ನಚಿರಾತ್-ಜಾಗ್ರತೆಯಾಗಿ, ತ್ವಾಂ-ನಿನ್ನನ್ನು, ವಧಿಷ್ಯತಿ-ಕೊಲ್ಲುವನು, ಅರಿಣಾ-ನಿನಗೆ ಶತ್ರುವಾದ ಶ್ರೀರಾಮನಿಂದ, ಹತಃ-ಹೊಡೆಯಲ್ಪಟ್ಟವನಾಗಿ, ಮ್ರಿಯೇಯಾಪಿ-ಸತ್ತುಹೋಗುತ್ತೇನೆಂಬುದು ಯಾವದುಂಟೋ. ಅನೇನ-ಇದರಿಂದ, ಕೃತಕೃತ್ಯಃ-ಕೃತಾರ್ಥನು. ಅಸ್ಮಿ-ಆದೆನು ॥೧೬॥ ಮಾಂ-ನನ್ನನ್ನು, ರಾಮಸ್ಯ-ಶ್ರೀರಾಮನ, ದರ್ಶನಾದೇವ-ನೋಡಿದಮಾತ್ರದಿಂದಲೇ. ಹತಂ-ಮೃತನನ್ನಾಗಿ, ಅವಧಾರಯ-ನಿಶ್ಚೈಸು, ಸೀತಾಂ-ಸೀತಾದೇವಿಯನ್ನು, ಹೃತ್ವಾ-ಅಪಹರಿಸಿ. ಸಬಾಂಧವಂ-ಬಂಧುಗಳಿಂದೊಡಗೂಡಿದ. ಆತ್ಮಾನಂ-ನಿನ್ನನ್ನು, ಹತಂ-ಮೃತನನ್ನಾಗಿ, ವಿದ್ಧಿ-ತಿಳಿದುಕೊ॥೧೭॥ಮಯಾ-ನನ್ನಿಂದ ಸಹಿತಃ-ಕೂಡಿದವನಾಗಿ, ಆಶ್ರಮಾತ್-ಪರ್ಣಶಾಲೆಯಿಂದ, ಸೀತಾಂ-ಸೀತಾದೇವಿಯನ್ನು, ಆನಯಿಷ್ಯಸಿಚೇತ್-ತರುವವನೇ ಆದರೆ. ತ್ವಂ-ನೀನು, ನೈವಾಸಿ-ಇಲ್ಲದಹಾಗೇ ಆಗುತ್ತಿ, ಅಹಂಚ-ನಾನೂ, ನೈವಾಸ್ಮಿ-ಇರುವನಾಗುವದಿಲ್ಲ, ಲಂಕಾಂ-ಲಂಕಾಪುರಿಯು, ನೈವಾಸ್ತಿ-ಇಲ್ಲವೇಯಿಲ್ಲ, ರಾಕ್ಷಸಾಃ-ರಕ್ಕಸರು. ನೈವಸಂತಿ-ಇರುವವರಾಗುವದಿಲ್ಲ ॥೧೮॥ ಹೇನಿಶಾಚರ-ಎಲೈ ರಾಕ್ಷಸನೇ, ಹಿತೈಷಿಣಾ-ಹಿತವನ್ನೇ ಕೋರುತ್ತಿರುವ, ಮಯಾ-ನನ್ನಿಂದ, ನಿವಾರ್ಯಮಾಣಃ-ತಡೆಯಲ್ಪಟ್ಟವನಾಗಿ, ಇದಂವಾಕ್ಯಂ-ಈ ಮಾತನ್ನು, ನಮೃಷ್ಯಸೇ-ಸಹಿಸಲಾರದೇಹೋದೆ. ಗತಾಯುಷಃ-ಕಳೆದ ಆಯುಸ್ಸುಳ್ಳ, ಪರೇತಕಲ್ಪಾಃ-ಸತ್ತವನಿಗೆ ಸಮಾನರಾದ, ನರಾಃ-ಮನುಷ್ಯರು, ಸು

---

ಎಲೈ ರಾವಣನೇ! ಲೋಕದಲ್ಲಿ ಜನವಿರೋಧಿಯಾದ ಮತ್ತು ಕ್ರೂರವಾಗಿ ದಂಡನೆಯಂ ಗೈಯ್ಯುವ ಪ್ರಭುವಿನಿಂದ ರಕ್ಷಿಸಲ್ಪಡುವ ಪ್ರಜೆಗಳು, ದೊಡ್ಡದಾಗಿರುವ ನರಿಯಿಂದ ಕುರಿಗಳು ಯಾತು ವೃದ್ಧಿಯನ್ನೈದುವದಿಲ್ಲವೋ ಅಂತು ವೃದ್ಧಿಯನ್ನೈದುವದಿಲ್ಲ ।೧೪। ದುರ್ಬುದ್ಧಿಯುಳ್ಳ ಮತ್ತು ಜಿತೇಂದ್ರಿಯನಲ್ಲದ ನೀನು ರಾಕ್ಷಸರಿಗೆಲ್ಲ ಪ್ರಭುವಾಗಿದ್ದೀಯಾದಕಾರಣ ರಾಕ್ಷಸರೆಲ್ಲರು ನಿಶ್ಚಯವಾಗಿ ನಾಶವನ್ನೈದುವರು, ಈ ವಿಪತ್ತು ''ಕಾಕತಾಳೀಯ''ವೆಂಬನ್ಯಾಯವಾಗಿ ಶ್ರೀರಾಮ ಕರ್ತೃಕವಾಗಿ ನನಗೆ ಸಂಭವಿಸಿತು, ಈ ವಿಷಯದಲ್ಲಿ ನೀನೇ ದುಃಖಿಸತಕ್ಕವನು, ಯಾಕಂದರೆ,—ನೀನು ಸೈನ್ಯ ಸಮೇತವಾಗಿ ನಾಶವಾಗುವಿ; ಮಹಾ ಪರಾಕ್ರಮಶಾಲಿಯಾದ ಆ ಶ್ರೀರಾಮನಾದರೆ ನನ್ನಂ ಕೊಂದು ತಕ್ಷಣದಲ್ಲಿಯೇ ನಿನ್ನಂ ವಧಿಸುವನು,! ಶತ್ರುವಿನಿಂದ ಸಂಹಾರವನ್ನೈದಿದರೆ ಕೃತಾರ್ಥನಾಗುವೆನು ।೧೭। ಎಲೈ ರಾವಣನೇ! ಶ್ರೀರಾಮನ ದರ್ಶನಮಾತ್ರದಿಂದಲೆ ನಾನು ಮೃತನಾದೆನೆಂದು ತಿಳಿಯುವವನಾಗು, ಸೀತಾಪಹಾರವಂ ಗೈದು ಬಂಧುಗಳೊಡನೆ ನೀನು ಸಹಾ ಮೃತನಾಗುವೆನೆಂದು ಅರಿತುಕೊಳ್ಳುವವನಾಗು ।೧೮। ನನ್ನೊಡಗೂಡಿ ನೀನು ಸೀತಾಪಹಾರವಂ ಗೈದವನಾದರೆ, ನೀನಿಲ್ಲದಂತೆ ಆಗುವದು, ನಾನೂ ಇರುವದಿಲ್ಲ, ಮತ್ತು ಲಂಕಾ ಪಟ್ಟಣವನ್ನಾಗಲೀ, ರಾಕ್ಷಸರಾಗಲೀ, ಯಾರೂ ಇರಲಾರರು ।೧೯। ಎಲೋ ರಾವಣನೇ! ಹಿತವಂ ಬಯಸುವ ನನ್ನಿಂದ ಯೆಷ್ಟು ಅಡ್ಡಗೈಯ್ಯಲ್ಪಟ್ಟರೂ ನೀನೆನ್ನ ಮಾತಂ ಸೈರಿಸಲಾರೆ, ಅನುಕೂಲವಾಗಿರುವ ನನ್ನ ಮಾತು ನಿನಗೆ ರುಚಿಯಿಲ್ಲದ್ದಾಯಿತು, ಇದು ಹೀಗೆ ಸರಿ, ಯಾಕಂದರೆ,—ಲೋಕದಲ್ಲಿ ಆಯುಃ ಪೂರ್ತಿಯಾ

ಏವಮುಕ್ತ್ವಾತುವಚನಂಮಾರೀಚೋರಾವಣಂತತಃ । ಗಚ್ಛಾಮೀತ್ಯಬ್ರವೀದ್ದೀನೋಭಯಾದ್ರಾತ್ರಿಂಚರಪ್ರಭೋಃ ॥೧॥ ದೃಷ್ಟಶ್ಚಾಹಂಪುನಸ್ತೇನಶರಚಾಪಾಸಿಧಾರಿಣಾ । ಮದ್ವಧೋದ್ಯತಶಸ್ತ್ರೇಣವಿನಷ್ಟಂಜೀವಿತಂಚಮೇ ॥೨॥ ನಹಿರಾಮಂಪರಾಕ್ರಮ್ಯಜೀವನ್ಪ್ರತಿನಿವರ್ತತೇ । ವರ್ತತೇಪ್ರತಿರೂಪೋಸೌಯಮದಂಡಹತಸ್ಯತೇ ॥೩॥ ಕಿಂನುಶಕ್ಯಂಮಯಾಕರ್ತುಮೇವಂತ್ವಯಿದುರಾತ್ಮನಿ । ಏಷಗಚ್ಛಾಮ್ಯಹಂತಾತಸ್ವಸ್ತಿತೇಸ್ತುನಿಶಾಚರ ॥೪॥ ಪ್ರಹೃಷ್ಟಸ್ತ್ವಭವತ್ತೇನವಚನೇನಸರಾವಣಃ । ಪರಿಷ್ವಜ್ಯಸುಸಂಶ್ಲಿಷ್ಟಮಿದಂವಚನಮಬ್ರವೀತ್ ॥೫॥ ಏತಚ್ಛೌಂಡೀರ್ಯಯುಕ್ತಂತೇಮಚ್ಛಂದಾದಿವಭಾಷಿತಂ । ಇದಾನೀಮಸಿಮಾರೀಚಃಪೂರ್ವಮನ್ಯೋನಿಶಾಚರಃ ॥೬॥ ಆರುಹ್ಯತಾಮಯಂಶೀಘ್ರಂರಥೋರತ್ನವಿಭೂಷಿತಃ।

---

ಹೃದ್ಭಿಃ-ಸ್ನೇಹಿತರಿಂದ, ಈರಿತಂ-ಹೇಳಲ್ಪಟ್ಟ, ಹಿತಂ-ಪಥ್ಯವಾದ ಮಾತನ್ನು, ನಗೃಹ್ಣಂತಿ-ತೆಗೆದುಕೊಳ್ಳುವದಿಲ್ಲ॥ ... ... ... ॥೨೦॥

—**ಇತಿಶ್ರೀಮದಾರಣ್ಯಕಾಂಡೇ-ಏಕಚತ್ವಾರಿಂಶಸ್ಸರ್ಗಃ**—

ಏವಂ-ಈಪರಿಯಾಗಿ, ಮಾರೀಚಃ-ಮಾರೀಚನು, ವಚನಂ-ಮಾತನ್ನು, ಬ್ರುವತಿ-ಹೇಳಿದವನಾದರೂ, ರಾತ್ರಿಂಚರಪ್ರಭೋಃ-ರಾಕ್ಷಸರಿಗೆ ಅಧಿಪತಿಯಾದ ರಾವಣಾಸುರನ, ಭಯಾತ್-ಭಯದದೆಸೆಯಿಂದ, ದೀನಃ-ಶಿಥಿಲನಾಗಿ, ರಾವಣಂ-ರಾವಣನಂಕುರಿತು, ಗಚ್ಛಾಮೀತಿ-ಹೋಗೋಣೆಂದು, ಅಬ್ರವೀತ್-ನುಡಿದನು ॥೧॥ ಶರಚಾಪಾಸಿಧಾರಿಣಾ-ಧನುರ್ಬಾಣಗಳನ್ನೂ ಕತ್ತಿಯನ್ನೂ ಧರಿಸಿರುವ, ಮದ್ವಧೋದ್ಯತಶಸ್ತ್ರೇಣ-ನನ್ನ ಸಂಹಾರಾರ್ಥವಾಗಿ ಎತ್ತಲ್ಪಟ್ಟ ಶಸ್ತ್ರವುಳ್ಳ, ತೇನ-ಆ ಶ್ರೀರಾಮನಿಂದ, ಅಹಂ-ನಾನು, ಪುನಃ-ಮತ್ತು, ದೃಷ್ಟಶ್ಚ-ಯದಿ-ನೋಡಲ್ಪಟ್ಟವನೇ ಆದರೆ, ಮೇ-ನನ್ನ, ಜೀವಿತಂ-ಪ್ರಾಣವು ವಿನಷ್ಟಂ-ನಷ್ಟವಾಯಿತು, ಹಿ-ಯಾವಕಾರಣದದೆಸೆಯಿಂದ, ರಾಮಂ-ಶ್ರೀರಾಮನನ್ನುಕುರಿತು ಪರಾಕ್ರಮವನ್ನು ಮಾಡಿ, ಜೀವನ್-ಬದುಕಿರುವವನಾಗಿ, ನಪ್ರತಿನಿವರ್ತತೇ-ಹಿಂತಿರುಗಿಬರುವದಿಲ್ಲ ಯಮದಂಡಹತಸ್ಯ-ಯಮದಂಡದಿಂದ ಕೊಲ್ಲಲ್ಪಟ್ಟ, ತೇ-ನಿನಗೆ, ಪ್ರತಿರೂಪಃ-ಸದೃಶನಾದ, ಅಸೌ-ಈ ಜನವು, ವರ್ತತೇ-ಇರುತ್ತದೆ, ಹೇತಾತ-ಎಲೋ ಅಪ್ಪನೇ, ದುರಾತ್ಮನಿ-ದುಷ್ಟಬುದ್ಧಿಯುಳ್ಳ, ತ್ವಯಿ-ನಿನ್ನ ವಿಷಯದಲ್ಲಿ ಮಯಾ-ನನ್ನಿಂದ ಕಿಂ-ಯೇನು ಏವಂ-ಈಪರಿಯಾಗಿ, ಕರ್ತುಂ-ಮಾಡುವದಕ್ಕಾಗಿ, ಶಕ್ಯಂ-ಸಾಧ್ಯವು ಏಷೋಹಂ-ಆ ಈ ನಾನು, ಗಚ್ಛಾಮಿ-ಹೋಗುವೆನು, ಹೇನಿಶಾಚರ-ಎಲೋ ರಕ್ಕಸನೇ, ತೇ-ನಿನಗೆ, ಸ್ವಸ್ತಿ-ಶುಭವು ಅಸ್ತು-ಆಗಲಿ ॥೪॥ ತೇನವಚನೇನ ಆ ಮಾತಿನಿಂದ, ಸರಾವಣಃ-ಆ ರಾವಣನು, ಪ್ರಹೃಷ್ಟಃ-ಸಂತೋಷಗೊಂಡವನು, ಅಭವತ್-ಆದನು, ಸಂಶ್ಲಿಷ್ಟಂಯಥಾತಥಾ-ದೃಢವಾಗೋಣಹ್ಯಾಗೋ ಹಾಗೆ, ಪರಿಷ್ವಜ್ಯ-ಅಪ್ಪಿಕೊಂಡು, ಇದಂವಚನಂ ಈ ಮಾತನ್ನು, ಅಬ್ರವೀತ್-ನುಡಿದನು ॥೫॥ ಶೌಂಡೀರ್ಯಯುಕ್ತಂ-ಶೂರತ್ವದಿಂ ಕೂಡಿಕೊಂಡಿರುವ, ಏತತ್-ಈ ಮಾತು, ತೇ-ನಿನ್ನೊಡನೆ, ಮಚ್ಛಂದಾದಿವ-ನನ್ನ ಅಭಿಪ್ರಾಯದಂತೆ, ಭಾಷಿತಂ-ಹೇಳಲ್ಪಟ್ಟಿತು, ಪೂರ್ವಂ-ಮೊದಲು ಅನ್ಯಃ-ಮತ್ತೊಬ್ಬನಾದ, ರಾಕ್ಷಸಃ-ನಿಶಾಚರನು, ಇದಾನೀಂ-ಈಗ, ಮಾರೀಚಃ-ಮಾರೀಚನು, ಅಸಿ-ಆದೆ ॥೬॥ ರತ್ನವಿಭೂಷಿತಃ-ರತ್ನಗಳಿಂದಲಂಕರಿಸಲ್ಪಟ್ಟ, ಪಿಶಾಚ

---

ಗಿ ಮೃತಪ್ರಾಯರಾದ ಪುರುಷರು, ಸ್ನೇಹಿತರಿಂದ ಹೇಳಲ್ಪಟ್ಟ ಹಿತವಚನವಂ ಗ್ರಹಿಸುವದಿಲ್ಲ ॥೨೦॥

—* ಅರಣ್ಯಕಾಂಡದಲ್ಲಿನ ೪೧ನೆಯಸರ್ಗಂ ಮುಗಿದುದು *—

ಈ ರೀತಿಯಲ್ಲಿ ಮಾರೀಚನು ರಾವಣನಂ ಕುರಿತು ಅತಿತುಚ್ಛವಾಗಿ ನುಡಿದು ಹಾಹಾ!! ಈತನು ಪ್ರಭುವಾದವನು. ನಾನೀರೀತಿಯಾಗಿ ನುಡಿದೆನಲ್ಲವೇ ಈತನಿಗೆ ಕೋಪವುಂಟಾಗಿ ನನ್ನನ್ನು ಯೇನು ಮಾಡುವನೋ ಯೇನೋ ಯೆಂದು ದೀನನಾಗಿ, ರಾವಣನಂ ಕುರಿತು, ಎಲೈ ರಾವಣನೇ! ತೆರಳುವೆಃ ॥೧॥ ಧನುರ್ಬಾಣಂಗಳನ್ನೂ ಖಡ್ಗವನ್ನೂ ಸಹ ಧರಿಸಿರುವ ಆ ಶ್ರೀರಾಮನು ನನ್ನ ಸಂಹಾರಾರ್ಥವಾಗಿ ಶಸ್ತ್ರವನ್ನೆತ್ತಿಕೊಂಡಿರುವನು, ಹೀಗಿರುವಲ್ಲಿ ಅವನಿಂದ ನಾನು ನೋಡಲ್ಪಟ್ಟವನೇ ಆದರೆ, ನನ್ನ ಪ್ರಾಣವು ನಾಶವಾಗುವದು, ಆತನಂ ಕುರಿತು ಪರಾಕ್ರಮವಂ ಗೈದವನು ಹಿಂತಿರುಗುವದಿಲ್ಲ, ಕಾಲದಂಡದಿಂದ ಹತನಾದ ನಿನಗೆ ಈ ನಾನು ಅನುಕೂಲವಾದವನೇ ಹೊರತು ಪ್ರತಿಕೂಲನಲ್ಲ; ದುರ್ಬುದ್ಧಿಯುಳ್ಳ ನಿನ್ನ ವಿಷಯದಲ್ಲಿ ನನ್ನಿಂದೇನು ಮಾಡಲಾಗುವದು, ಎಲೈ ರಾಕ್ಷಸನೇ! ನಾನು ಹೋಗುವೆನು, ನಿನಗೆ ಶುಭವಾಗಲೆಂದು ನುಡಿದವನಾಗಲು. ದಶಕಂಠನು ಆ ವಾಕ್ಯದಿಂದ ಸಂತುಷ್ಟನಾಗಿ ದೃಢವಾಗಿ ಆಲಿಂಗನಂಗೈದು,ನುಡಿವನದೆಂತೆನೆ,—॥೫॥ ಎಲೈ ಮಾರೀಚನೇ! ಶೌರ್ಯಯುಕ್ತವಾದ ಈ ಮಾತ , ನನ್ನಭಿಪ್ರಾಯದಂತೆ ನಿನ್ನಿಂದ ಹೇಳಲ್ಪಟ್ಟಿತು,ಮೊದಲು ನುಡಿಯುವಾಗ ನೀನು ಮಾರೀಚನಲ್ಲ,ಮತ್ತೊಬ್ಬರಾಕ್ಷಸನಾಗಿರಬಹುದು, ಅದಕ್ಕಾಗಿಯೇ ಅಂಥಾ ಮಾತನ್ನು ಹೇಳಿದವನಾದೆ, ಈಗ ಇಂಥಾ ಶೌರ್ಯದಮಾತು ನುಡಿದದ್ದರಿಂದ ಈಗ ನೀನು ಮಾರೀಚನೇ ಸರಿ, ರತ್ನಂಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಪಿಶಾಚದ ಮುಖದಂತೆ ಮುಖವುಳ್ಳ ಹಾಸರಕತ್ತೆಗಳಿಂದ ಯುಕ್ತವಾಗಿಯೂ ಇರುವ ರಥವು ಸಿದ್ಧವಾಗಿಧೆ, ನನ್ನ ಸಂಗಡ ತ್ವರೆಯಿಂದ ರಥದಲ್ಲಿ

ಮಾಯಾಸಹತಥಾಯುಕ್ತಃ ಪಿಶಾಚವದನೈಃ ಖರೈಃ ॥೭॥ ಪ್ರಲೋಭಯಿತ್ವಾ ವೈದೇಹೀಂ ಯಥೇಷ್ಟಂ ಗಂತುಮರ್ಹಸಿ । ತಾಂ ಶೂನ್ಯೇ ಪ್ರಸಭಂ ಸೀತಾಮಾನಯಿಷ್ಯಾಮಿ ಮೈಥಿಲೀಂ ॥೮॥ ತತೋ ರಾವಣಮಾರೀಚೌ ವಿಮಾನಮಿವ ತಂ ರಥಂ । ಆರುಹ್ಯ ಯಯತುಃ ಶೀಘ್ರಂ ತಸ್ಮಾದಾಶ್ರಮಮಂಡಲಾತ್ ॥೯॥ ತಥೈವ ತತ್ರ ಪಶ್ಯಂತೌ ಪತ್ತನಾನಿ ವನಾನಿ ಚ । ಗಿರೀಂಶ್ಚ ಸರಿತಸ್ಸರ್ವಾ ರಾಷ್ಟ್ರಾಣಿ ನಗರಾಣಿ ಚ ॥೧೦॥ ಸಮೇತ್ಯ ದಂಡಕಾರಣ್ಯಂ ರಾಘವಸ್ಯಾಶ್ರಮಂ ತತಃ । ದದರ್ಶ ಸಹಮಾರೀಚೋ ರಾವಣೋ ರಾಕ್ಷಸಾಧಿಪಃ ॥೧೧॥ ಅವತೀರ್ಯ ರಥಾತ್ತಸ್ಮಾತ್ತತಃ ಕಾಂಚನಭೂಷಣಾತ್ । ಹಸ್ತೇ ಗೃಹೀತ್ವಾ ಮಾರೀಚಂ ರಾವಣೋ ವಾಕ್ಯಮಬ್ರವೀತ್ ॥೧೨॥ ಏತದ್ರಾಮಾಶ್ರಮಪದಂ ದೃಶ್ಯತೇ ಕದಲೀವೃತಂ । ಕ್ರಿಯತಾಂ ತತ್ಸಖೇ ಶೀಘ್ರಂ ಯದರ್ಥಂ ವಯಮಾಗತಾಃ ॥೧೩॥ ಸ ರಾವಣವಚಶ್ಶ್ರುತ್ವಾ ಮಾರೀಚೋ ರಾಕ್ಷಸಸ್ತದಾ । ಮೃಗೋ ಭೂತ್ವಾಶ್ರಮದ್ವಾರೇ ರಾಮಸ್ಯ ವಿಚಚಾರ ಹ ॥೧೪॥ ಸ ತು ರೂಪಂ ಸಮಾಸ್ಥಾಯ ಮಹದದ್ಭುತದರ್ಶನಂ । ಮಣಿಪ್ರವರಶೃಂಗಾಗ್ರಸ್ಸಿತಾಸಿತ

---

ವದನೈಃ-ಪಿಶಾಚಮುಖದಂತೆ ಮುಖವುಳ್ಳ. ಖರೈಃ-ಕತ್ತೆಗಳಿಂದ, ಯುಕ್ತಃ-ಕೂಡಿಕೊಂಡಿರುವ, ಅಯಂರಥಃ-ಈ ರಥವು, ತಥಾ-ಹಾಗೆಯೇ, ಮಯಾಸಹ-ನನ್ನೊಡಗೂಡ. ಶೀಘ್ರಂ-ಜಾಗ್ರತೆಯಾಗಿ, ಆರುಹ್ಯತಾಂ-ಏರಲ್ಪಡಲೀ ॥೭॥ ವೈದೇಹೀಂ-ಸೀತಾದೇವಿಯನ್ನು, ಪ್ರಲೋಭಯಿತ್ವಾ-ಮೋಸಗೊಳಿಸಿ, ಯಥೇಷ್ಟಂ-ಇಚ್ಛಾನುಸಾರವಾಗಿ, ಗಂತುಂ-ಹೋಗುವದಕ್ಕಾಗಿ, ಅರ್ಹಸಿ-ಯೋಗ್ಯನಾಗು, ಶೂನ್ಯೇ-ರಾಮಲಕ್ಷ್ಮಣರಿಂ ಶೂನ್ಯವಾದ ಆಶ್ರಮದಲ್ಲಿ, ಮೈಥಿಲೀಂ-ಜನಕರಾಯನ ಮಗಳಾದ, ತಾಂಸೀತಾಂ-ಆ ಸೀತಾದೇವಿಯನ್ನು, ಪ್ರಸಭಂ-ಬಲಾತ್ಕರಿಸಿ. ಆನಯಿಷ್ಯಾಮಿ-ತರುವೆನು ॥೮॥ ತತಃ-ಅನಂತರದಲ್ಲಿ, ರಾವಣಮಾರೀಚೌ-ಮಾರೀಚ ರಾವಣರಿಬ್ಬರು, ವಿಮಾನಮಿವ-ವಿಮಾನದಂತಿರುವ, ತಂರಥಂ-ಆ ತೇರನ್ನು, ಆರುಹ್ಯ-ಏರಿ, ತಸ್ಮಾದಾಶ್ರಮಮಂಡಲಾತ್-ಆ ಮಾರೀಚಾಶ್ರಮಪ್ರದೇಶದದೆಶೆಯಿಂದ. ಶೀಘ್ರಂ-ಜಾಗ್ರತೆಯಾಗಿ, ಯಯತುಃ-ತೆರಳಿದರು ॥೯॥ ತಥೈವ-ಹಾಗೆಯೇ, ತತ್ರ-ಆ ಸಮುದ್ರದಡಿದಲ್ಲಿ. ಪತ್ತನಾನಿ-ಪಟ್ಟಣಾವನ್ನು, ವನಾನಿಚ-ವನಗಳನ್ನು ಗಿರೀಂಶ್ಚ-ಬೆಟ್ಟಗಳನ್ನು, ಸರ್ವಾಃ-ಸಮಸ್ತಗಳಾದ, ಸರಿತಶ್ಚ-ನದಿಗಳನ್ನು ರಾಷ್ಟ್ರಾಣಿ-ದೇಶಗಳನ್ನೂ, ನಗರಾಣಿಚ-ದೊಡ್ಡಪಟ್ಟಣಗಳನ್ನೂ, ಪಶ್ಯಂತೌ-ನೋಡುತ್ತಿರುವವರಾದರು, ದಂಡಕಾರಣ್ಯಂ-ದಂಡಕಾರಣ್ಯವಂ ಕುರಿತು, ಸಮೇತ್ಯ-ಬಂದು. ತತಃ-ಬಳಿಕ, ರಾಘವಸ್ಯ-ಶ್ರೀರಾಮನ. ಆಶ್ರಮಂ-ಆಶ್ರಮವನ್ನು. ಸಹಮಾರೀಚಃ-ಮಾರೀಚನಿಂದೊಡಗೂಡಿದ. ರಾಕ್ಷಸಾಧಿಪಃ-ರಾಕ್ಷಸರಿಗೆ ದೊರೆಯಾದ, ರಾವಣಃ-ರಾವಣನು, ದದರ್ಶ-ಕಂಡನು ॥೧೧॥ ತತಃ-ಬಳಿಕ, ಕಾಂಚನಭೂಷಣಾತ್-ಭಂಗಾರದವಿಕಾರವಾದ ಅಲಂಕಾರಗಳುಳ್ಳ, ತಸ್ಮಾತ್ರಥಾತ್-ಆ ರಥದದೆಶೆಯಿಂದ, ಅವತೀರ್ಯ-ಇಳಿದು, ತತಃ-ಬಳಿಕ, ರಾವಣಃ-ರಾವಣನು, ಮಾರೀಚಂ-ಮಾರೀಚನನ್ನು, ಹಸ್ತೇ-ಕೈಯಲ್ಲಿ, ಗೃಹೀತ್ವಾ-ಹಿಡಿದುಕೊಂಡು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೨॥ ಕದಳೀವೃತಂ-ಕದಳೀವೃಕ್ಷಗಳಿಂ ಸುತ್ತಿಕೊಳ್ಳಲ್ಪಟ್ಟ, ಏತತ್-ಇದೇ, ರಾಮಾಶ್ರಮಂ-ಶ್ರೀರಾಮನ ಆಶ್ರಮಸ್ಥಲವು. ದೃಶ್ಯತೇ-ಕಾಣಲ್ಪಡುತ್ತದೆ. ಹೇಸಖೇ-ಎಲೈ ಸ್ನೇಹಿತನೇ, ಯದರ್ಥಂ-ಯಾವ ಕಾರ್ಯನಿಮಿತ್ತವಾಗಿ, ವಯಂ-ನಾವುಗಳು, ಆಗತಾಃ-ಬಂದೆವೋ, ತತ್-ಆ ಕಾರ್ಯವು. ಶೀಘ್ರಂ-ಜಾಗ್ರತೆಯಾಗಿ, ಕ್ರಿಯತಾಂ-ಮಾಡಲ್ಪಡಲೀ ॥೧೩॥ ರಾಕ್ಷಸಃ-ರಕ್ಕಸನಾದ, ಸಮಾರೀಚಃ-ಆ ಮಾರೀಚನು. ರಾವಣವಚಃ-ರಾವಣನಮಾತನ್ನು, ಶ್ರುತ್ವಾ-ಕೇಳಿ, ತದಾ-ತತ್ಕ್ಷಣದಲ್ಲಿ, ಮೃಗೋಭೂತ್ವಾ-ಮೃಗವಾಗಿ. ರಾಮಸ್ಯ-ಶ್ರೀರಾಮನ, ಆಶ್ರಮದ್ವಾರೇ-ಪರ್ಣಶಾಲೆಯ ಬಾಗಿಲಲ್ಲಿ, ವಿಚಚಾರ-ಸಂಚರಿಸಿದನು॥ ... ... ॥೧೪॥

---

ಕಳಿತು ಕೊಳ್ಳುವವನಾಗು, ಸೀತಾದೇವಿಯನ್ನು ಮೋಹವನ್ನೈದಿಸಿ ನಿನ್ನಿಷ್ಟವಿದ್ದಂತೆ ತೆರಳುವವನಾಗು, ರಾಮಲಕ್ಷ್ಮಣರಿಂದ ಶೂನ್ಯನಾದ ಆಶ್ರಮದಲ್ಲಿ ಆ ಸೀತಾದೇವಿಯಂ ಬಲಾತ್ಕಾರದಿಂದ ನಾನು ತರುವೆನೆಂದು ನುಡಿದನು ।೮। ಅನಂತರದಲ್ಲಿ ಆ ಮಾರೀಚ ರಾವಣರೀರ್ವರು, ಆ ಉತ್ತಮವಾದ ರಥವನ್ನೇರಿ ಆ ಆಶ್ರಮದಿಂದ ತೆರಳಿ, ಸಮುದ್ರತೀರದಲ್ಲಿರುವ ಚಿಕ್ಕಪಟ್ಟಣಗಳನ್ನೂ ವನಂಗಳನ್ನೂ ಪರ್ವತಂಗಳನ್ನೂ, ಸರ್ವನದಿಗಳನ್ನೂ, ರಾಷ್ಟ್ರಂಗಳನ್ನೂ. ದೊಡ್ಡ ದೊಡ್ಡ ಪಟ್ಟಣಗಳನ್ನೂ ಸಹಾ ನೋಡುವವರಾಗಿ, ದಂಡಕಾರಣ್ಯವನ್ನೈದಿದ ಬಳಿಕ, ರಾವಣಾಸುರನು ರಾಮಾಶ್ರಮವಂ ಕಂಡನು ।೧೧। ಅನಂತರದಲ್ಲಿ ದಶಕಂಠನು ಸುವರ್ಣವಿಕಾರವಾದ ಆ ರಥದಿಂದಿಳಿದು, ಮಾರೀಚನಂ ಹಸ್ತದಿಂ ಪಿಡಿದು, ನುಡಿವನದೆಂತೆನೆ,—॥೧೨॥ ಎಲೈ ಸಖನೇ! ಕದಳೀವೃಕ್ಷಂಗಳಿಂದ ಯುಕ್ತವಾದ ರಾಮಾಶ್ರಮವಿಲ್ಲಿಗೆ ಕಾಣಬರುವದು, ನಾವು ಯಾವ ಕಾರ್ಯಕ್ಕಾಗಿ ಬಂದವರಾದೆವೋ, ಆ ಕಾರ್ಯವು ತ್ವರೆಯಾಗಿ ಮಾಡಲ್ಪಡಲೆಂದು ನುಡಿದವನಾದನು ।೧೩॥ ಅನಂತರದಲ್ಲಿ ಮಾರೀಚನು ರಾವಣಾಸುರನ ವಾಕ್ಯವಂ ಕೇಳಿ, ತತ್ಕ್ಷಣದಲ್ಲಿಯೆ ಮೃಗರೂಪವಂತಾಳಿ ಶ್ರೀರಾಮನ ಆಶ್ರಮದ ದ್ವಾರದಲ್ಲಿ ಸಂಚರಿಸುತ್ತಿದ್ದನದೆಂತೆನೆ,—ಆ ಮಾರೀಚನು ಅತ್ಯಾಶ್ಚರ್ಯಕರವಾದ ಮಹದಾಕಾರವನ್ನೈದಿ, ರತ್ನವಿಕಾರವಾದ ಕೊಂಬುಗಳುಳ್ಳವನಾಗಿಯೂ,ಬಿಳುಪು ಕಪ್ಪು ಬೆರತ ಮುಖದಆಕಾರವುಳ್ಳವನಾಗಿಯೂ, ಕೆಂದಾವರೆಯಂತಿರುವ ಮೊಗವುಳ್ಳವನಾಗಿಯೂ,ಇಂದ್ರನೀಲಮಾಣಿಕ್ಯದಂತೆಯೂ ಕನ್ನೈದಿಲೆಯಂತೆಯೂ ಇರುವ ಕಿವಿಗಳುಳ್ಳವನಾಗಿಯೂ, ಸ್ವಲ್ಪ ಯೆತ್ತಲ್ಪಟ್ಟ ಕುತ್ತಿಗೆಯು

ಮುಖಾಕೃತಿಃ ॥ ರಕ್ತಪದ್ಮೋತ್ಪಲಮುಖ ಇಂದ್ರನೀಲೋತ್ಪಲಶ್ರವಾಃ । ಕಿಂಚಿದಭ್ಯುನ್ನತಗ್ರೀವ ಇಂದ್ರನೀಲದಳಾಧ
ರಃ ॥ ಕುಂದೇಂದುವಜ್ರಸಂಕಾಶಮುದರಂ ಚಾಸ್ಯ ಭಾಸ್ವರಂ । ಮಧೂಕನಿಭಪಾರ್ಶ್ವಶ್ಚ ಪದ್ಮಕಿಂಜಲ್ಕಸನ್ನಿಭಃ ॥ ವೈ
ಡೂರ್ಯಸಂಕಾಶಖುರಸ್ತನುಜಂಘಸ್ಸುಸಂಹತಃ । ಇಂದ್ರಾಯುಧಸವರ್ಣೇನ ಪುಚ್ಛೇನೋರ್ಧ್ವಂ ವಿರಾಜತಾ ॥ ಮನೋಹರ
ಸ್ನಿಗ್ಧವರ್ಣೋ ರತ್ನೈರ್ನಾನಾವಿಧೈರ್ವೃತಃ । ಕ್ಷಣೇನ ರಾಕ್ಷಸೋ ಜಾತೋ ಮೃಗಃ ಪರಮಶೋಭನಃ । ವನಂ ಪ್ರಜ್ವಲಯನ್
ರಮ್ಯಂ ರಾಮಾಶ್ರಮಪದಂ ಚ ತತ್ ॥೧೯॥ ಮನೋಹರಂ ದರ್ಶನೀಯಂ ರೂಪಂ ಕೃತ್ವಾ ಸ ರಾಕ್ಷಸಃ । ಪ್ರಲೋಭನಾರ್ಥಂ
ವೈದೇಹ್ಯಾ ನಾನಾಧಾತುವಿಚಿತ್ರಿತಂ । ವಿಚರನ್ ಗಚ್ಛತೇ ತಸ್ಮಾಚ್ಛಾದ್ವಲಾನಿ ಸಮಂತತಃ ॥೨೧॥ ರೂಪ್ಯೈರ್ಬಿಂದುಶತೈ
ಶ್ಚಿತ್ರೋ ಭೂತ್ವಾ ಸ ಪ್ರಿಯದರ್ಶನಃ । ವಿಟಪೀನಾಂ ಕಿಸಲಯಾನ್ ಭಜ್ಞ್ವಾದನ್ ವಿಚಚಾರ ಹ ॥೨೨॥ ಕದಲೀಗೃಹಕಂ

ಸಃ–ಆ ಮಾರೀಚನು, ಅದ್ಭುತದರ್ಶನಂ–ಆಶ್ಚರ್ಯಕರವಾದ ನೋಟವುಳ್ಳ, ಮಹತ್–ದೊಡ್ಡದಾದ, ರೂಪಂ–ಆಕಾರವನ್ನು, ಸಮಾಸ್ಥಾಯ–ಧರಿಸಿ ಮಣಿಪ್ರವರಶೃಂಗಾಗ್ರಃ–ರತ್ನವಿಕಾರವಾದ ಕೊಂಬುಗಳ ತುದಿಗಳುಳ್ಳವನಾಗಿ, ಸಿತಾಸಿತಮುಖಾಕೃತಿಃ–ಬಿಳುಪು ಕಪ್ಪಾದ ಮುಖಾಕಾರವುಳ್ಳವನಾಗಿ, ರಕ್ತಪದ್ಮೋತ್ಪಲಮುಖಃ–ಕೆಂದಾವರೆಯಂತೆ ಮುಖಕಾಂತಿಯುಳ್ಳವನಾಗಿ, ಇಂದ್ರನೀಲೋತ್ಪಲಶ್ರವಾಃ–ಇಂದ್ರನೀಲ ಮಾಣಿಕ್ಯಗಳಂತೆ ಕಪ್ಪಾದ ನೈದಲೆಹುವ್ವಿನಂತೆ ಕಿವಿಗಳುಳ್ಳವನಾಗಿ. ಕಿಂಚಿತ್–ಕೊಂಚವಾಗಿ. ಅಭ್ಯುನ್ನತಗ್ರೀವಃ–ಊರ್ಧ್ವವಾಗಿ ಎತ್ತಿಕೊಳ್ಳಲ್ಪಟ್ಟ ಕಂಠವುಳ್ಳವನಾಗಿ, ಇಂದ್ರನೀಲದಳಾಧರಃ–ಇಂದ್ರನೀಲಮಣಿಗಳ ರವೆಯಂತೆ ಅಧರೋಷ್ಠಗಳುಳ್ಳವನಾಗಿ ಇದ್ದನು, ಅಸ್ಯ–ಈ ಮೃಗದ, ಭಾಸ್ವರಂ–ಹೊಳೆಯುತ್ತಿರುವ, ಉದರಂ–ಹೊಟ್ಟೆಯು. ಕುಂದೇಂದುವಜ್ರಸಂಕಾಶಂ–ದುಂಡುಮಲ್ಲಿಗೆ ಹೂವುಗಳಿಗೂ ಚಂದ್ರನಿಗೂ ವಜ್ರಗಳಿಗೂ ಸಮಾನವಾದ ಕಾಂತಿಯುಳ್ಳದ್ದು. ಮಧೂಕನಿಭಪಾರ್ಶ್ವಶ್ಚ–ಇಪ್ಪೇಹುವ್ವಿಗೆ ಸಮಾನವಾದ ಪಾರ್ಶ್ವಭಾಗವುಳ್ಳ, ಪದ್ಮಕಿಂಜಲ್ಕಸನ್ನಿಭಃ–ಪದ್ಮಗಳ ಕೇಸರಗಳಿಗೆ ಸಮಾನವಾದ ಕಾಂತಿಯುಳ್ಳ, ವೈಡೂರ್ಯಸಂಕಾಶಖುರಃ–ವೈಡೂರ್ಯ ಮಣಿಗಳಿಗೆ ಸಮಾನವಾದ ಉಗುರುಗಳುಳ್ಳ, ತನುಜಂಘಃ–ಸೂಕ್ಷ್ಮವಾದ ಜಂಘಾಪ್ರದೇಶಗಳುಳ್ಳ, ಸುಸಂಹತಃ–ಒಂದಕ್ಕೊಂದು ಸೇರಿರುವ ಸಂಧಿಬಂಧಗಳುಳ್ಳ. ಇಂದ್ರಾಯುಧಸವರ್ಣೇನ–ಇಂದ್ರನ ಆಯುಧಕ್ಕೆ ಸಮಾನವಾದ ಕಾಂತಿಯುಳ್ಳ, ಊರ್ಧ್ವಂ–ಮೇಲ್ಭಾಗದಲ್ಲಿ, ವಿರಾಜತಾ–ಹೊಳೆಯುತ್ತಿರುವ, ಪುಚ್ಛೇನ–ಬಾಲದಿಂದ, ಮನೋಹರಃ–ರಮ್ಯವಾಗಿರುವ. ಸ್ನಿಗ್ಧವರ್ಣಃ–ಮಿಂಚುತ್ತಿರುವ ವರ್ಣವುಳ್ಳ ನಾನಾವಿಧೈಃ–ನಾನಾಬಗೆಗಳಾದ, ರತ್ನೈಃ–ರತ್ನಗಳಿಂದ, ವೃತಃ–ಕೆತ್ತಲ್ಪಟ್ಟ, ಪರಮಶೋಭನಃ–ಶ್ರೇಷ್ಠವಾಗಿ ಶುಭಕರವಾದ, ಮೃಗಃ–ಮೃಗರೂಪವಾಗಿ. ಜಾತಃ–ಆದವನಾಗಿ, ರಾಕ್ಷಸಃ–ಮಾರೀಚನು. ಕ್ಷಣಂ–ಒಂದುಕ್ಷಣಮಾತ್ರದಲ್ಲಿ, ವನಂ–ಅರಣ್ಯವನ್ನು, ಪ್ರಜ್ವಲಯನ್–ಕಂಗೊಳಿಸುವಂತೆ ಮಾಡುತ್ತಿರುವನಾಗಿ, ರಮ್ಯಂ–ಇಂಪಾಗಿರುವ, ತದ್ರಾಮಾಶ್ರಮಪದಂ–ಆ ಶ್ರೀರಾಮನ ಪರ್ಣಶಾಲೆಯ ಪ್ರದೇಶವಂ ಕುರಿತು, ಆಜಗಾಮ–ಬಂದನು, ॥೧೯॥ ಸರಾಕ್ಷಸಃ–ಆ ರಾಕ್ಷಸನು, ವೈದೇಹ್ಯಾಃ–ಸೀತಾದೇವಿಯ, ಪ್ರಲೋಭನಾರ್ಥಂ–ಮೋಹಿಸುವದಕ್ಕಾಗಿ, ನಾನಾಧಾತುವಿಚಿತ್ರಿತಂ–ಅನೇಕಬಗೆಯಾದ ಗೈರಿಕಾದಿ ಧಾತುಗಳಿಂದಾಶ್ಚರ್ಯಕರವಾದ, ಮನೋಹರಂ–ಮನಸ್ಸನ್ನು ಸೆಳೆಯುತ್ತಿರುವ, ದರ್ಶನೀಯಂ–ನೋಡತಕ್ಕ, ರೂಪಂ–ಮೃಗರೂಪವನ್ನು, ಕೃತ್ವಾ–ಮಾಡಿ, ವಿಚರನ್–ಸಂಚರಿಸುತ್ತಿರುವವನಾಗಿ, ತಸ್ಮಾತ್–ಆ ವನಪ್ರದೇಶದಿಂದ, ಸಮಂತತಃ–ಎಲ್ಲಾ ಕಡೆಯಲ್ಲಿ, ಶಾದ್ವಲಾನಿ–ಹಸಿಹುಲ್ಲುಗಳನ್ನು ವಿಚರನ್–ಭಕ್ಷಿಸುತ್ತಿರುವವನಾಗಿ, ಗಚ್ಛತೇ–ಹೊರಟನು. ॥೨೧॥ ರೂಪ್ಯೈಃ–ಬೆಳ್ಳಿವಿಕಾರವಾದ. ಬಿಂದುಶತೈಃ–ನೂರುಚುಕ್ಕೆಗಳಿಂದ, ಚಿತ್ರಃ–ವಿಚಿತ್ರಬಣ್ಣವುಳ್ಳ, ಪ್ರಿಯದರ್ಶನಃ–ಇಂಪಾದ ನೋಟವಿಕೆಯುಳ್ಳದ್ದಾಗಿ, ಭೂತ್ವಾ–ಆಗಿ, ಸಃ–ಆ ಮೃಗವು, ವಿಟಪೀನಾಂ–ವೃಕ್ಷಗಳ, ಕಿಸಲಯಾನ್–ಚಿಗುರುಗಳನ್ನು, ಭಜ್ಞ್ವಾ–ಮುರಿದು. ಅದನ್–ತಿನ್ನುತ್ತಿರುವದಾಗಿ. ಚಚಾರ–ಸಂಚರಿಸಿತಷ್ಟೆ ॥೨೨॥ ಕದಲೀಗೃಹಕಂ–ಮನೇಲಿಕಾಪವಾಗಿ ನಿರ್ಮಿ

ಳ್ಳವನಾಗಿಯೂ, ಇಂದ್ರನೀಲಮಾಣಿಕ್ಯಗಳ ರವೆಗಳಂತಿರುವ ಅಧರೋಷ್ಠವುಳ್ಳವನಾಗಿಯೂ, ದುಂಡುಮಲ್ಲಿಗೆ ಹು ವ್ವುಗಳಿಗೂ ಚಂದ್ರನಿಗೂ ವಜ್ರಗಳಿಗೂ ಸದೃಶವಾಗಿ ಬೆಳಗುವ ಹೊಟ್ಟೆಯುಳ್ಳವನಾಗಿಯೂ, ಇಪ್ಪೇ ಹುವ್ವುಗಳಿಗೆ ಸಮಾನವಾದ ಪಾರ್ಶ್ವಂಗಳುಳ್ಳವನಾಗಿಯೂ, ತಾವರೆಯ ಕಿಂಜಲ್ಕಂಗಳಂತೆ ಹೊಳೆವನಾಗಿಯೂ, ವೈಡೂರ್ಯಮಣಿಗಳಂದದಿ ಬೆಳಗುವ ಉಗುರುಗಳುಳ್ಳವನಾಗಿಯೂ, ಸೂಕ್ಷ್ಮವಾದ ಜಂಘೆಂಗಳುಳ್ಳವನಾಗಿಯೂ, ಒಂದಕ್ಕೊಂದು ಸೇರಿರುವ ಸಂಧಿಸಂಬಂಧಂಗಳುಳ್ಳವನಾಗಿಯೂ, ವಜ್ರಾಯುಧದತೆರದಿ ಹೊಳೆವ ಮತ್ತು ಮೇಲ್ಭಾಗದಲ್ಲಿ ಎತ್ತಲ್ಪಟ್ಟ ಪುಚ್ಛವನ್ನಾಗಿಯೂ, ಮಿಂಚುಗಳಂತೆ ನಾನಾ ವಿಧವಾದ ರತ್ನಗಳಿಂದ ಕೆತ್ತಲ್ಪಟ್ಟ ಶರೀರವುಳ್ಳವನಾಗಿಯೂ ಇರುವವನಾಗಿ, ಆ ಮಾರೀಚನು ಕ್ಷಣಮಾತ್ರದಲ್ಲಿ ಆ ಅರಣ್ಯವನ್ನೆಲ್ಲ ಕಂಗೊಳಿಸುವಂತೆ ಮಾಡುತ್ತಾ, ಶ್ರೀರಾಮನ ಆಶ್ರಮ ಪ್ರದೇಶಕ್ಕೆ ಬಂದನು ॥೧೯॥ ಈ ರೀತಿಯಲ್ಲಿ ಆ ಮಾರೀಚನು ಸೀತಾದೇವಿಗೆ ಮೋಹವನ್ನುಂಟುಮಾಡುವದಕ್ಕಾಗಿ, ನಾನಾವಿಧವಾದ ಗೈರಿಕಾದಿಧಾತುಗಳಿಂದಾಶ್ಚರ್ಯಕರವಾದ ಮತ್ತು ನೋಡುವವರಿಗೆ ಇಂಪಾಗಿರುವ ರೂಪವನ್ನೈದಿ, ಸಂಚಾರವಂ ಗೈಯ್ಯುತ್ತಾ, ಸುತ್ತು ಮುತ್ತಲೂ ಹುಲ್ಲಂ ಮೇಯುತ್ತಾ, ಆ ವನದೊಳಗೆ ಹೋದನು, ಮತ್ತು ಬೆಳ್ಳಿವಿಕಾರವಾದ ಚುಕ್ಕೆಗಳಿಂದ ವಿಚಿತ್ರವಾದ ಬಣ್ಣವುಳ್ಳವನಾಗಿ, ವೃಕ್ಷಗಳ ಚಿಗುರುಗಳಂ ಮುರಿ

ಗತ್ವಾಕರ್ಣಿಕಾರಾನಿತಸ್ತತಃ । ಸಮಾಶ್ರಯನ್ಮಂದಗತಿಸ್ಸೀತಾಸಂದರ್ಶನಂತಥಾ ॥೧೩॥ ರಾಜೀವಚಿತ್ರಪೃಷ್ಠಸ್ಸವಿರರಾಜಮಹಾಮೃಗಃ । ರಾಮಾಶ್ರಮಪದಾಭ್ಯಾಶೆವಿಚಚಾರಯಥಾಸುಖಂ॥೧೪॥ ಪುನರ್ಗತ್ವಾನಿವೃತ್ತಶ್ಚವಿಚಚಾರಮೃಗೋತ್ತಮಃ । ಗತ್ವಾಮುಹೂರ್ತಂತ್ವರಯಾಪುನಃಪ್ರತಿನಿವರ್ತತೆ॥೧೫॥ ವಿಕ್ರೀಡಂಶ್ಚಕ್ವಚಿದ್ಭೂಮೌಪುನರೆವನಿಷೀದತಿ। ಆಶ್ರಮದ್ವಾರಮಾಗಮ್ಯಮೃಗಯೂಥಾನಿಗಚ್ಛತಿ ॥೧೬॥ ಮೃಗಯೂಥೈರನುಗತಃಪುನರೆವನಿವರ್ತತೆ । ಸೀತಾದರ್ಶನಮಾಕಾಂಕ್ಷನ್‌ರಾಕ್ಷಸೋಮೃಗತಾಂಗತಃ । ಪರಿಭ್ರಮತಿಚಿತ್ರಾಣಿಮಂಡಲಾನಿವಿನಿಷ್ಪತನ್ ॥೧೭॥ ಸಮುದ್ವೀಕ್ಷ್ಯಚತಂಸರ್ವೆಮೃಗಾಹ್ಯನ್ಯೆವನೆಚರಾಃ । ಉಪಾಗಮ್ಯಸಮಾಘ್ರಾಯವಿದ್ರವಂತಿದಿಶೊದಶ ॥೧೮॥ ರಾಕ್ಷಸಸ್ಸೋಪಿತಾನ್ವನ್ಯಾನ್‌ಮೃಗಾನ್‌ಮೃಗವಧೆರತಃ । ಪ್ರಚ್ಛಾದನಾರ್ಥಂಭಾವಸ್ಯನಭಕ್ಷಯತಿಸಂಸ್ಪೃಶನ್ ॥೧೯॥ ತಸ್ಮಿನ್ನೆವತತಃಕಾಲೆವೈದೆಹೀಶುಭಲೋಚನಾ । ಕುಸುಮಾಪಚಯವ್ಯಗ್ರಾಪಾದಪಾನಭ್ಯವರ್ತತ ॥೨೦॥ ಕರ್ಣಿಕಾರಾನಶೊಕಾಂಶ್ಚಚೂ

ಸಲ್ಪಟ್ಟ ಬಾಳೆಗಿಡಗಳ ಮೂಲಪ್ರದೇಶವಂಕುರಿತು, ಗತ್ವಾ-ಹೋಗಿ, ಯಿತಸ್ತತಃ-ಅಲ್ಲಿಯಿಲ್ಲಿ, ಕರ್ಣಿಕಾರಾನ್-ಬೆಟ್ಟದಾವರೆಗಿಡಗಳನ್ನು ಗತ್ವಾ-ಹೊಂದಿ, ಇತಸ್ತತಃ-ಇಲ್ಲಿ ಅಲ್ಲಿ, ಮಂದಗತಿಃ-ಮಂದಗಮನವುಳ್ಳದ್ದಾಗಿ, ತಥಾ-ಹಾಗೆಯೇ, ರಾಜೀವಚಿತ್ರಪೃಷ್ಠಃ-ಕಮಲಗಳಂತೆ ವಿಚಿತ್ರವಾದಹಿಂಭಾಗವುಳ್ಳ. ಸಮಹಾಮೃಗಃ-ಆ ದೊಡ್ಡಮೃಗವು, ರರಾಜ-ಹೊಳೆಯುತ್ತಿತ್ತು ॥ ರಾಮಾಶ್ರಮಪದಾಭ್ಯಾಶೆ-ಶ್ರೀರಾಮನಾಶ್ರಮ ಪ್ರದೇಶದಲ್ಲಿ, ಯಥಾಸುಖಂ-ಸುಖವಾಗಿ, ವಿಚಚಾರ-ಸಂಚರಿಸುತಿತ್ತು ॥೧೪॥ ಮೃಗೋತ್ತಮಃ-ಉತ್ತಮವಾದಮೃಗವು, ಗತ್ವಾ-ಹೋಗಿ, ಪುನಃ-ಮತ್ತು, ನಿವೃತ್ತಶ್ಚ-ಹಿಂತಿರುಗಿ ಬಂದದ್ದಾಗಿ. ವಿಚಚಾರ-ಸಂಚರಿಸಿತು, ಮುಹೂರ್ತಂ-ಮುಹೂರ್ತಕಾಲವು. ತ್ವರಯಾ-ಜಾಗ್ರತೆಯಿಂದ, ಗತ್ವಾ-ಓಡಿಹೋಗಿ, ಪುನಃ-ಮತ್ತು, ಪ್ರತಿನಿವರ್ತತೆ-ಹಿಂತಿರುಗಿಬಂತು ॥೧೫॥ ಕ್ವಚಿತ್-ಬಂದಾನೊಂದು ಸ್ಥಳದಲ್ಲಿ, ವಿಕ್ರೀಡನ್-ಆಡುತ್ತಿರುವದಾಗಿ, ಪುನಃ-ಮತ್ತು, ಭೂಮಾವೆವ-ನೆಲದಲ್ಲಿಯೇ. ನಿಷೀದತಿ-ಕೂತುಕೊಳ್ಳುತ್ತದೆ, ಆಶ್ರಮದ್ವಾರಂ-ಆಶ್ರಮದ ಬಾಗಿಲಂಕುರಿತು. ಆಗಮ್ಯ-ಬಂದು, ಮೃಗಯೂಥಾನಿ-ಜಿಂಕೆಗಳ ಗುಂಪುಗಳಂಕುರಿತು. ಗಚ್ಛತಿ-ಹೋಗುತ್ತದೆ ॥೧೬॥ ಮೃಗಯೂಥೈಃ-ಮೃಗಗಳ ತಂಡಗಳಿಂದ, ಅನುಗತಃ-ಅನುಸರಿಸಲ್ಪಟ್ಟದ್ದಾಗಿ, ಪುನರೆವ-ಮತ್ತೂನೆ. ನಿವರ್ತತೆ-ಬರುತ್ತದೇ, ರಾಕ್ಷಸಃ-ಮಾರೀಚನು, ಮೃಗತಾಂ-ಮೃಗರೂಪವನ್ನು, ಗತಃ-ಹೊಂದಿದವನಾಗಿ, ಸೀತಾದರ್ಶನಂ-ಸೀತಾದೇವಿಯ ದರುಶನವನ್ನು, ಆಕಾಂಕ್ಷನ್-ಅಪೇಕ್ಷಿಸುತ್ತಿರುವವನಾಗಿ. ವಿನಿಷ್ಪತನ್-ಹಾರುತ್ತಿರುವನಾಗಿ, ಚಿತ್ರಾಣಿ-ಆಶ್ಚರ್ಯಕರವಾದ. ಮಂಡಲಾನಿ-ಮಂಡಲಾಕಾರವಾದ ಗಮನಗಳನ್ನು. ಪರಿಭ್ರಮತಿ-ತಿರುಗುತ್ತದೆ, ॥೧೭॥ ಸರ್ವೆ-ಸಮಸ್ತವಾದ, ವನೆಚರಾಃ-ವನವಾಸಿಗಳಾದ. ಅನ್ಯೆಮೃಗಾಃ-ಮತ್ತೆ ಕೆಲ ಮೃಗಗಳು, ತಂ-ಆಮೃಗವನ್ನು, ಸಮುದೀಕ್ಷ್ಯ-ಕಂಡು, ಉಪಾಗಮ್ಯ-ಬಂದು, ಸಮಾಘ್ರಾಯ-ಆಘ್ರಾಣಿಸಿ. ದಶದಿಶಃ-ಹತ್ತು ದಿಕ್ಕುಗಳಲ್ಲಿಯೂ, ವಿದ್ರವಂತಿ-ಓಡಿಹೋಗುತವೆ ॥೧೮॥ ಸರಾಕ್ಷಸಃ-ಆ ರಾಕ್ಷಸನು, ವನ್ಯಾನ್-ವನದಲ್ಲಿಹುಟ್ಟಿದ, ತಾನ್‌ಮೃಗಾನ್-ಆ ಮೃಗಗಳನ್ನು, ಸಂಸ್ಪೃಶನ್-ಮೂಸಿನೋಡಿದವನಾಗಿ, ಮೃಗವಧೆ-ಮೃಗಗಳ ಸಂಹಾರದಲ್ಲಿ, ರತೋಪಿ-ಆಸಕ್ತನಾದರೂ, ಭಾವಸ್ಯ-ರಾಕ್ಷಸತ್ವವನ್ನು, ಪ್ರಚ್ಛಾದನಾರ್ಥಂ-ಮುಚ್ಚಿಕೊಳ್ಳುವನಿಮಿತ್ತವಾಗಿ, ನ ಭಕ್ಷಯತಿ-ಭಕ್ಷಣೆಮಾಡಲಿಲ್ಲ ॥೧೯॥ ತತಃ-ಬಳಿಕ. ತಸ್ಮಿನ್ನೆವಕಾಲೆ-ಆ ಕಾಲದಲ್ಲಿ, ಶುಭಲೋಚನಾ-ಶುಭಕರಗಳಾದ ನೇತ್ರಗಳುಳ್ಳ, ವೈದೆಹೀ-ಸೀತಾದೇವಿಯು, ಕುಸುಮಾಪಚಯವ್ಯಗ್ರಾ-ಹುವ್ವಗಳು ಕೊಯ್ಯುವದರಲ್ಲಾಸಕ್ತಳಾಗಿ. ಪಾದಪಾನ್-ಗಿಡಗಳನ್ನುಕುರಿತು, ಅಭ್ಯವರ್ತತ-ಎದುರಾಗಿ ಹೊರಟುಬಂದಳು ॥೨೦॥ ॥ ರುಚಿರಾನನಾ-ಮನೋಹರವಾದ ಮುಖವುಳ್ಳ, ಮದಿರೆಕ್ಷಣಾ-ಮದಕರವಾದ ನೇತ್ರಗಳುಳ್ಳ. ಸೀತಾದೇವಿಯು ಕರ್ಣಿಕಾ

ದು ಮೇಯುತ್ತಾ ಸಂಚರಿಸುತ್ತಿದ್ದನು ॥೧೩॥ ಅನಂತರದಲ್ಲಿ ಮನೆಯ ಆಕಾರವಾಗಿ ನಿರ್ಮಿಸಲ್ಪಟ್ಟ ಬಾಳೇ ಗಿಡಗಳ ಮೂಲಪ್ರದೇಶಕ್ಕೆ ಸಾರಿ, ಮತ್ತು ಅಲ್ಲಲ್ಲಿ ಬೆಟ್ಟದಾವರೆಯ ಗಿಡಗಳನ್ನೈದಿ, ಮತ್ತು ಕೆಲಗಡೆಯಲ್ಲಿ ಮೆಲ್ಲಮೆಲ್ಲನೆ ಸಂಚಾರವಂ ಗೈಯುತ್ತಾ, ಸೀತಾದೇವಿಯ ಸಂದರುಶನವನ್ನಿಚ್ಛಿಸಿ, ಕಮಲದಂತೆ ವಿಚಿತ್ರವಾದ ಹಿಂಭಾಗವುಳ್ಳ ಆ ಮೃಗವು ಶ್ರೀರಾಮನ ಪರ್ಣಶಾಲೆಯ ಸಮೀಪದಲ್ಲಿ ತಿರುಗುತ್ತಿತ್ತು ॥೧೪॥ ಅನಂತರದಲ್ಲಿ ಆ ಉತ್ತಮವಾದ ಮೃಗವು ಮುಂದು ಪೋಗುತ್ತಲೂ ಪುನಃ ಹಿಂತಿರುಗಿ ಬರುತ್ತಲೂ, ಆಶ್ರಮದ ಬಾಗಿಲಿನ ಸಮೀಪವನ್ನೈದಿ ಮೃಗಯೂಥಂಗಳನ್ನನುಸರಿಸಿ ಪೋಗುತ್ತಲೂ, ಮತ್ತು ಆ ಮೃಗಂಗಳ ಸಂಗಡ ಪುನಃ ಬರುತ್ತಲೂ, ಅವುಗಳೊಡನೆ ಮತ್ತು ಹಿಂತಿರುಗುತ್ತಲೂ, ಈ ರೀತಿಯಲ್ಲಿ ಆ ಮೃಗವು ಸೀತಾದೇವಿಯ ಆಗಮನವಂ ನಿರೀಕ್ಷಿಸುತ್ತಿತ್ತು ॥೧೭॥ ಈ ಪ್ರಕಾರವಾಗಿ ಆ ಮೃಗವು ಚಕ್ರಾಕಾರವಾಗಿ ಸಂಚರಿಸುತ್ತಿರಲೂ, ಆ ಅರಣ್ಯದಲ್ಲಿರುವ ಇತರ ಮೃಗಂಗಳೂ, ಆ ವನವಾಸಿಗಳೂ ಸಹಾ, ಆ ಮಾಯಾಮೃಗದ ಸಮೀಪವನ್ನೈದಿ ಆಘ್ರಾಣವಂ ಗೈದು ಪೋದಿಹೋಗುತ್ತಿದ್ದವು, ಆ ಮೃಗರೂಪವಂ ತಾಳಿದ ಮಾರೀಚನಾದರೆ, ಆ ವನಸಂಚಾರ ಶೀಲವಾದ ಮೃಗಂಗಳಂ ಕೊಲ್ಲುವದರಲ್ಲಿ ಆಸಕ್ತಿಯುಳ್ಳವನಾದರೂ, ತನ್ನ ರಾಕ್ಷಸತ್ವವಂ ಪ್ರಚ್ಛಾದನೆಯಂ ಗೈಯ್ಯಲಿಚ್ಛಿಸಿ, ಅವುಗಳಂ ಸ್ಪರ್ಶಯಿಂದು ಗ್ರಾಸಂಗೈಯ್ಯದಿದ್ದನು. ಆ ಸಮಯದಲ್ಲಿ ಸೀತಾದೇವಿಯು, ಪುಷ್ಪಂಗಳಂ ತರುವದಕ್ಕಾಗಿ, ವೃಕ್ಷಂಗಳಂ ಹುಡುಕಿ

ತಾಂಶ್ಚಮದಿರೆಕ್ಷಣಾ । ಕುಸುಮಾನ್ಯಪಚಿನ್ವಂತೀಚಚಾರರುಚಿರಾನನಾ ॥೩೦॥ ಅನರ್ಹಾರಣ್ಯವಾಸಸ್ಯಸಾತಂರತ್ನ ಮಯಂಮೃಗಂ । ಮುಕ್ತಾಮಣಿವಿಚಿತ್ರಾಂಗಂದದರ್ಶಪರಮಾಂಗನಾ ॥೩೧॥ ಸಾತಂರುಚಿರದಂತೋಷ್ಠಂರೂಪ್ಯಧಾತುತನೂರುಹಂ । ವಿಸ್ಮಯೋತ್ಫುಲ್ಲನಯನಾಸಸ್ನೇಹಂಸಮುದೈಕ್ಷತ ॥೩೨॥ ಸಚತಾಂರಾಮದಯಿತಾಂಪಶ್ಯನ್ ಮಾಯಾಮಯೋಮೃಗಃ । ವಿಚಚಾರಪುನಶ್ಚಿತ್ರಂದೀಪಯನ್ನಿವತದ್ವನಂ ॥೩೪॥ ಅದೃಷ್ಟಪೂರ್ವಂತಂದೃಷ್ಟ್ವಾ ನಾನಾರತ್ನಮಯಂಮೃಗಂ । ವಿಸ್ಮಯಂಪರಮಂಸೀತಾಜಗಾಮಜನಕಾತ್ಮಜಾ ---* ದ್ವಿಚತ್ವಾರಿಂಶಸ್ಸರ್ಗಃ. *—

ಸಾತಂಸಂಪ್ರೇಕ್ಷ್ಯಸುಶ್ರೋಣೀಕುಸುಮಾನ್ಯಪಚಿನ್ವತೀ।ಹೈಮರಾಜತವರ್ಣಾಭ್ಯಾಂಪಾರ್ಶ್ವಾಭ್ಯಾಮುಪಶೋಭಿತಂ । ಪ್ರಹೃಷ್ಟಾಚಾನವದ್ಯಾಂಗೀಮೃಷ್ಟಹಾಟಕವರ್ಣಿನೀ । ಭರ್ತಾರಮಭಿಚಕ್ರಂದಲಕ್ಷ್ಮಣಂಚಾಪಿಸಾಯುಧಂ । ತಯಾಹೂತೌನರವ್ಯಾಘ್ರೌವೈದೇಹ್ಯಾರಾಮಲಕ್ಷ್ಮಣೌ । ವೀಕ್ಷಮಾಣೌತುತಂದೇಶಂತದಾದದೃಶತುರ್ಮೃಗಂ ॥೩॥ ಶಂ

---

ರ್ಣ-ಬೆಟ್ಟದಾವರೆಗಳನ್ನು, ಅಶೋಕಾಂಶ್ಚ-ಅಶೋಕವೃಕ್ಷಗಳನ್ನು, ಚೂತಾಂಶ್ಚ-ಮಾವಿನಗಿಡಗಳನ್ನುಕುರಿತು, ಕುಸುಮಾನಿ-ಹುವುಗಳನ್ನು, ಅಪಚಿನ್ವತೀ-ಕೊಯ್ಯುತ್ತಿರುವಳಾಗಿ, ಚಚಾರ-ಸಂಚರಿಸಿದಳು ||30|| ಅರಣ್ಯವಾಸಸ್ಯ-ವನವಾಸಕ್ಕೆ, ಅನರ್ಹಾ-ಅಯೋಗ್ಯವಾದಪರಮಾಂಗನಾ-ಉತ್ತಮಸ್ತ್ರೀಯಾದ, ಸಾ-ಆ ಸೀತಾದೇವಿಯು, ಮುಕ್ತಾಮಣಿವಿಚಿತ್ರಾಂಗಂ-ಮುತ್ತುಗಳಿಂದ ಚಿತ್ರವರ್ಣವುಳ್ಳ ಅವಯವಗಳುಳ್ಳ, ರತ್ನಮಯಂ-ಕೆಂಪುಗಳ ವಿಕಾರವಾದ. ತಂಮೃಗಂ-ಆ ಮೃಗವನ್ನು, ದದರ್ಶ-ಕಂಡಳು ||3೧|| ರುಚಿರದಂತೋಷ್ಠಂ-ಮನೋಹರವಾದ ದಂತಗಳೂ ತುಟಿಗಳೂ ಉಳ್ಳ, ವಿಸ್ಮಯೋತ್ಫುಲ್ಲನಯನಾ-ಆಶ್ಚರ್ಯದಿಂದ ಅರಳಿದ ನೇತ್ರಗಳುಳ್ಳ, ಸಾ-ಆ ಸೀತಾದೇವಿಯು. ರೂಪ್ಯಧಾತುತನೂರುಹಂ-ಬಿಳೀ ಕೆಂಪು ಹಚ್ಚಗಿರುವ ಧಾತುಗಳೆಂಬ ಕೆಂಪುಗಳ ಕಾಂತಿಯುಕ್ತವಾದ ರೋಮಗಳುಳ್ಳ. ತಂ-ಆ ಮೃಗವನ್ನು-ಸಸ್ನೇಹಂ-ಪ್ರೀತಿಯಿಂದೊಡಗೂಡಿದಂತೆ, ಸಮುದೈಕ್ಷತ-ಚನ್ನಾಗಿ ನೋಡಿದಳು ||33|| ಮಾಯಾಮಯಃ-ಮಾಯಾವಿಕಾರವಾದ, ಸಃಮೃಗಃ-ಆ ಮೃಗವು, ತಾಂರಾಮದಯಿತಾಂ-ಆ ಸೀತಾದೇವಿಯನ್ನು. ಪಶ್ಯನ್-ನೋಡುತ್ತಿರುವದಾಗಿ, ಪುನಃ-ಮತ್ತು, ಚಿತ್ರಂ-ಆಶ್ಚರ್ಯಕರವಾಗಿ, ತದ್ವನಂ-ಆ ವನವನ್ನು. ದೀಪಯನ್ನಿವ-ಕಂಗೊಳ್ಳುವಂತೆ ಮಾಡುತ್ತಿರುವದಾಗಿ, ಚಚಾರ-ಸಂಚಾರಮಾಡಿತು ||34|| ಜನಕಾತ್ಮಜಾ-ಜನಕರಾಯನಮಗಳಾದ, ಸೀತಾ-ಸೀತಾದೇವಿಯು ಅದೃಷ್ಟಪೂರ್ವಂ-ಪೂರ್ವದಲ್ಲಿ ಎಂದಿಗೂ ನೋಡಲ್ಪಡದಿರುವ, ನಾನಾರತ್ನಮಯಂ-ಅನೇಕಬಗೆ ರತ್ನಗಳ ವಿಕಾರವಾದ, ತಂಮೃಗಂ-ಆ ಮೃಗವನ್ನು, ದೃಷ್ಟ್ವಾ-ಕಂಡು, ಪರಮಂ-ಬಹಳವಾದ, ವಿಸ್ಮಯಂ-ಆಶ್ಚರ್ಯವನ್ನು, ಜಗಾಮ-ಹೊಂದಿದಳು, ||35|| —*ದ್ವಿಚತ್ವಾರಿಂಶಸ್ಸರ್ಗಃ*—

ಸುಶ್ರೋಣೀ-ಚಲ್ಲೇಶ್ರೋಣೀಪ್ರದೇಶವುಳ್ಳ, ಅನವದ್ಯಾಂಗೀ-ನಿರ್ದೋಷವಾದ ಶರೀರವುಳ್ಳ, ಮೃಷ್ಟಹಾಟಕವರ್ಣಿನೀ-ಶೋಧಿಸಲ್ಪಟ್ಟ ಚಿನ್ನದ ಕಾಂತಿಯಂತೆ ಕಾಂತಿಯುಳ್ಳ, ಸಾ-ಆ ಸೀತಾದೇವಿಯು. ಕುಸುಮಾನಿ-ಹುವುಗಳನ್ನು, ಅಪಚಿನ್ವತೀ-ಕೊಯ್ಯುತ್ತಿರುವಳಾಗಿ, ಹೈಮರಾಜತವರ್ಣಾಭ್ಯಾಂ-ಚಿನ್ನ ಬೆಳ್ಳಿಗಳಂತೆ ಕಾಂತಿಯುಳ್ಳ, ಪಾರ್ಶ್ವಾಭ್ಯಾಂ-ಪಾರ್ಶ್ವಗಳಿಂದ, ಉಪಶೋಭಿತಂ-ಹೊಳೆಯುತ್ತಿರುವ, ತಂ-ಆ ಮೃಗವನ್ನು, ಸಂಪ್ರೇಕ್ಷ್ಯ-ಕಂಡು, ಪ್ರಹೃಷ್ಟಾ-ಸಂತೋಷಗೊಂಡವಳಾಗಿ. ಭರ್ತಾರಂ-ಶ್ರೀರಾಮನನ್ನೂ ಸಾಯುಧಂಚಾಪಿ-ಆಯುಧದಿಂದೊಡಗೂಡಿದ, ಲಕ್ಷ್ಮಣಂ ಚ-ಲಕ್ಷ್ಮಣನನ್ನೂ, ಅಭಿಚಕ್ರಂದ-ಕೂಗಿದಳು ||೧|| ತಯಾವೈದೇಹ್ಯಾ-ಆ ಸೀತಾದೇವಿಯಿಂದ. ಆಹೂತೌ-ಕರೆಯಲ್ಪಟ್ಟ, ನರವ್ಯಾಘ್ರೌ-ಪುರು

---

ಕೊಂಡು ಬಂದಳದೆಂತೆನೆ,—ಮನೋಹರವಾದ ಮುಖವುಳ್ಳ. ಜನಕನಂದಿನಿಯಾದ ಮತ್ತು ವನವಾಸವಂ ಮಾಡುವದಕ್ಕೆ ಅರ್ಹಳಾಗದ ಸೀತಾದೇವಿಯು "ಕರ್ಣಿಕ, ಅಶೋಕ, ಚಂಪಕ, ಚೂತ," ಎಂಬಿವುಗಳೆ ಮೊದಲಾದ ವೃಕ್ಷಂಗಳಲ್ಲಿ, ಪುಷ್ಪಂಗಳಂ ಕೊಯ್ಯುತ್ತಾ, ರತ್ನವಿಕಾರವಾಗಿಯೂ, ಮುತ್ತಿನ ಮಣಿಗಳಂತೆ ವಿಚಿತ್ರವಾದ ಅವಯವಂಗಳುಳ್ಳದ್ದಾಗಿಯೂ,ಮನೋಹರವಾದ ದಂತಂಗಳೂ ತುಟಿಗಳೂಸಹ ಉಳ್ಳದ್ದಾಗಿಯೂ,ರಜತವಿಕಾರವಾದ ರೋಮಂಗಳುಳ್ಳದ್ದಾಗಿಯೂ, ಇರುವ ಆ ಮಾಯಾ ಮೃಗವಂ ಕಂಡು, ವಿಸ್ಮಯದಿಂದ ವಿಕಸಿತವಾದ ನೇತ್ರಂಗಳುಳ್ಳವಳಾದ ಆ ಮೃಗವು ಶ್ರೀರಾಮನ ಪ್ರಾಣಕಾಂತೆಯಾದ ಸೀತಾದೇವಿಯಂ ಕಂಡು, ಆ ವನವನ್ನೆಲ್ಲ ಬೆಳಗುವಂತೆ ಗೈಯ್ಯುವದಾಗಿ, ಮತ್ತು ವಿಚಿತ್ರವಾಗಿ ಸಂಚಾರವಂ ಗೈಯ್ಯುತ್ತಿತ್ತು, ಅನಂತರದಲ್ಲಿ ಸೀತಾದೇವಿಯು ನಾನಾ ರತ್ನ ವಿಕಾರವಾದ ಯೆಂದಿಗೂ ನೋಡದಿರುವ ಆ ಮಾಯಾ ಮೃಗವಂ ನಿರೀಕ್ಷಿಸಿ, ಪರಮಾನಂದವನ್ನೈದಿದಳು ।

—* ಆರಣ್ಯಕಾಂಡದಲ್ಲಿನ ೪೨ನೆಯಸರ್ಗಂ ಮುಗಿದುದು *—

ಸಮೀಚೀನವಾದ ಮಧ್ಯಪ್ರದೇಶವುಳ್ಳ ಆ ಸೀತಾದೇವಿಯು ಪುಷ್ಪಂಗಳಂ ಹುಡುಕುವವಳಾಗಿ, ಸುವರ್ಣದಂತೆಯೂ ರಜತದಂತೆ ಹೊಳೆಯುವ ಪಾರ್ಶ್ವಂಗಳಿಂದ ಶೋಭಿಸುವ ಆ ಮಾಯಾ ಮೃಗವಂ ಕಂಡು ಸಂತೋಷವುಳ್ಳವಳಾಗಿ, ಪತಿಯಾದ ಶ್ರೀರಾಮನನ್ನೂ, ಆಯುಧಪಾಣಿಯಾದ ಲಕ್ಷ್ಮಣನನ್ನೂ ಸಹ ಕರೆದವಳಾಗಲೂ, ಆ

ಕವಮಾನಸ್ತು ತಂದೃಷ್ಟ್ವಾಲಕ್ಷ್ಮಣೋರಾಮಮಬ್ರವೀತ್ । ತಮೇವೈನಮಹಂಮನ್ಯೇಮಾರೀಚಂರಾಕ್ಷಸಂಮೃಗಂ ।೪। ಚರಂತೋಮೃಗಯಾಂಹೃಷ್ಟಾಃಪಾಪೇನೋಪಾಧಿನಾವನೇ । ಅನೇನನಿಹತಾರಾಜನ್ರಾಜಾನಃಕಾಮರೂಪಿಣಾ ।೫। ಅಸ್ಯ ಮಾಯಾವಿದೋಮಾಯಾಮೃಗರೂಪಮಿದಂಕೃತಂ। ಭಾನುಮತ್ಪುರುಷವ್ಯಾಘ್ರಗಂಧರ್ವಪುರಸನ್ನಿಭಂ । ಮೃಗೋಹ್ಯೇವಂವಿಧೋರತ್ನವಿಚಿತ್ರೋನಾಸ್ತಿರಾಘವ। ಜಗತ್ಯಾಂಜಗತೀನಾಥಮಾಯೈಷಾಹಿನಸಂಶಯಃ ।೭। ಏವಂಬ್ರುವಾಣಂಕಾಕುತ್ಸ್ಥಂಪ್ರತಿವಾರ್ಯಶುಚಿಸ್ಮಿತಾ । ಉವಾಚಸೀತಾಸಂಹೃಷ್ಟಾಚರ್ಮಣಾಹೃತಚೇತನಾ ।೮। ಆರ್ಯಪುತ್ರಾಭಿರಾಮೋಽಸೌಮೃಗೋಹರತಿಮೇಮನಃ । ಆನಯೈನಂಮಹಾಬಾಹೋಕ್ರೀಡಾರ್ಥಂನೋಭವಿಷ್ಯತಿ ।೯। ಇಹಾಶ್ರಮಪದೇಸ್ಮಾಕಂಬಹವಃಪುಣ್ಯದರ್ಶನಾಃ। ಮೃಗಾಶ್ಚರಂತಿಸಹಿತಾಸ್ಸೃಮರಾಶ್ಚಮರಾಸ್ತಥಾ। ಋಕ್ಷಾಃಪೃಷತಸಂಘಾಶ್ಚವಾನರಾಃಕಿನ್ನರಾ

ಷಶ್ರೇಷ್ಠರಾದ, ರಾಮಲಕ್ಷ್ಮಣೌ-ರಾಮಲಕ್ಷ್ಮಣರಿಬ್ಬರೂ, ತದಾ-ತತ್ಕ್ಷಣದಲ್ಲಿ, ತಂದೇಶಂತು-ಆ ಪ್ರದೇಶವನ್ನು, ವೀಕ್ಷಮಾಣೌ-ನೋಡುತ್ತಿರುವರಾಗಿ, ಮೃಗಂ-ಮೃಗವನ್ನು, ದದೃಶತುಃ-ಕಂಡರು. ॥೩॥ ಲಕ್ಷ್ಮಣಃ-ಲಕ್ಷ್ಮಣನು, ತಂ-ಆ ಮೃಗವನ್ನು, ದೃಷ್ಟ್ವಾ-ಕಂಡು. ಶಂಕಮಾನಃ-ಸಂದೇಹಗೊಂಡವನಾಗಿ, ರಾಮಂ-ಶ್ರೀರಾಮನಂ ಕುರಿತು ಅಬ್ರವೀತ್-ನುಡಿದನು, ಅಹಂ-ನಾನು. ಏನಂ-ಈ, ಮೃಗಂ-ಮೃಗವನ್ನು, ರಾಕ್ಷಸಂ-ರಾಕ್ಷಸನಾದ, ತಮೇವಮಾರೀಚಮೇವ-ಆ ಮಾರೀಚನನ್ನಾಗಿಯೇ, ಮನ್ಯೇ-ತಿಳಿದಿದ್ದೇನೆ ॥೪॥ ಹೇರಾಜನ್-ಎಲೈ ಅರಸನೇ, ವನೇ-ಅರಣ್ಯದಲ್ಲಿ, ಮೃಗಯಾಂ-ಬ್ಯಾಟೆಯಂಕುರಿತು, ಚರಂತಃ-ಸಂಚರಿಸುತ್ತಿರುವ, ಹೃಷ್ಟಾಃ-ಸಂತೋಷಗೊಂಡ, ರಾಜಾನಃ-ಅರಸರು. ಪಾಪೇನ-ಪಾಪಿಷ್ಠನಾದ, ಕಾಮರೂಪಿಣಾ-ಯಿಚ್ಛಾರೂಪಿಯಾದ, ಅನೇನ-ಈ ಮಾರೀಚನಿಂದ, ಉಪಾಧಿನಾ-ಮೃಗರೂಪ ನಿಮಿತ್ತದಿಂದ, ನಿಹತಾಃ-ಹೊಡೆಯಲ್ಪಟ್ಟರು ॥೫॥ ಹೇಪುರುಷವ್ಯಾಘ್ರ-ಎಲೋಪುರುಷಶ್ರೇಷ್ಠನೇ, ಮಾಯಾವಿದಃ-ಮಾಯೆಗಳಂ ತಿಳಿದಿರುವ, ಅಸ್ಯ-ಈ ಮಾರೀಚನ, ಮಾಯಾ-ಮಾಯೆಯೇ, ಭಾನುಮತ್-ಹೊಳೆಯುತ್ತಿರುವ, ಇದಂಮೃಗರೂಪಂ-ಈ ಮೃಗರೂಪವಾಗಿ, ಕೃತಂ-ಮಾಡಲ್ಪಟ್ಟದ್ದಾಗಿ, ಗಂಧರ್ವಪುರಸನ್ನಿಭಂ-ನಾನಾವಿಧ ವಿಸ್ಮಯನೀಯಾಕಾರವುಳ್ಳದ್ದಾಗಿ ಸುಳ್ಳಾಗಿದೆ ॥೬॥ ಹೇರಾಘವ-ಎಲೈಶ್ರೀರಾಮನೇ, ಹಿ-ಯಾವಕಾರಣದ ಪೆಶೆಯಿಂದ, ಜಗತ್ಯಾಂ-ಭೂಮಿಯೊಳಗೆ ಏವಂವಿಧಃ-ಈಬಗೆಯಾಗಿರುವ, ರತ್ನವಿಚಿತ್ರಃ-ರತ್ನಗಳಿಂ ಆಶ್ಚರ್ಯಕರಮಾದ, ಮೃಗಃ-ಮೃಗವು, ನಾಸ್ತಿ-ಇಲ್ಲವೋ, ತಸ್ಮಾತ್-ಆ ಕಾರಣದಪೆಶೆಯಿಂದ, ಹೇಜಗತೀನಾಥ-ಎಲೈ ಲೋಕಪಾಲಕನೇ, ಏಷಾ-ಇದು, ಮಾಯಾಹಿ-ಮಾಯೆಯುಮಷ್ಟೆ. ನಸಂಶಯಃ-ಸಂಶಯವಿಲ್ಲ ॥೭॥ ಏವಂ-ಈ ಪರಿಯಾಗಿ, ಬ್ರುವಾಣಂ-ಮಾತನಾಡುತ್ತಿರುವ, ಕಾಕುತ್ಸ್ಥಂ-ಕಕುತ್ಸ್ಥವಂಶೋತ್ಪನ್ನನಾದ ಲಕ್ಷ್ಮಣನನ್ನು, ಪ್ರತಿವಾರ್ಯ-ಅಡ್ಡಗಿಸಿ, ಶುಚಿಸ್ಮಿತಾ-ಆಶ್ಚರ್ಯವಾದ ಮುಗುಳುನಗೆಯುಳ್ಳ, ಸಂಹೃಷ್ಟಾ-ಸಂತೋಷಗೊಂಡ, ಸೀತಾ-ಸೀತಾದೇವಿಯು, ಚರ್ಮಣಾ-ಚರ್ಮದಿಂದ, ಹೃತಚೇತನಾ-ಅಪಹರಿಸಲ್ಪಟ್ಟ ಪ್ರಜ್ಞೆಯುಳ್ಳವಳಾಗಿ. ಉವಾಚ-ಹೇಳಿದಳು ॥೮॥ ಹೇಆರ್ಯಪುತ್ರ-ಎಲೈ ರಾಜಪುತ್ರನೇ, ಅಭಿರಾಮಃ-ಸುಂದರವಾದ, ಅಸೌಮೃಗಃ-ಈ ಮೃಗವು. ಮೇಮನಃ-ನನ್ನ ಮನವನ್ನು, ಹರತಿ-ಅಪಹರಿಸುತ್ತದೆ, ಹೇ ಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೇ ಏನಂ-ಈ ಮೃಗವನ್ನು, ಆನಯ-ತೆಗೆದುಕೊಂಡುಬಾ ನಃ-ನಮಗೆ. ಕ್ರೀಡಾರ್ಥಂ-ವಿಹಾರಾರ್ಥವು, ಭವಿಷ್ಯತಿ-ಆಗುತ್ತದೆ ॥೯॥ ಇಹ-ಈ ವನದಲ್ಲಿ, ಅಸ್ಮಾಕಂ-ನಮ್ಮ; ಆಶ್ರಮಪದೇ-ಆಶ್ರಮಪ್ರದೇಶದಲ್ಲಿ, ಬಹವಃ-ಅನೇಕಗಳಾದ ಪುಣ್ಯದರ್ಶನಾಃ-ಪುಣ್ಯಾಕರವಾದ ನೋಟವುಳ್ಳ, ಮೃಗಾಃ-ಮೃಗಗಳು, ಸಹಿತಾಃಚರಂತಿ-ಗುಂಪುಸೇರಿದವುಗಳಾಗಿ

ರಾಮಲಕ್ಷ್ಮಣರೀರ್ವರು ಆ ಪ್ರದೇಶಕ್ಕೆ ಸಾರಿ ಆ ಮಾಯಾಮೃಗವಂ ಕಂಡವರಾದರು ।೩। ಆ ಸಮಯದಲ್ಲಿ ಲಕ್ಷ್ಮಣನು ಆ ಮೃಗವಂ ಕಂಡು, ಸಂಶಯವನ್ನೈದಿದವನಾಗಿ, ಶ್ರೀರಾಮನಂ ಕುರಿತು, ಎಲೈ ಅಗ್ರಜನೆ! ಇದು ಮೃಗವಾಗಿ ನನಿಗೆ ತೋರುತದಿಲ್ಲ, ಬಹುತರವಾಗಿ ಮಾರೀಚನು ಈ ಮೃಗರೂಪವಂ ತಾಳಿರುವನೆಂದು ನಾನೆಣಿಸುತ್ತೇನೆ, ಕಾಮರೂಪನಾದ ಮತ್ತು ಪಾಪಿಯಾದ ಈ ರಾಕ್ಷಸನಿಂದ, ಅನೇಕರಾಜರುಗಳು ಬ್ಯಾಂಟೆಯಾಡುವ ಕಾಲದಲ್ಲಿ ನಿಹತರಾದರು, ಮಹಾ ಮಾಯಾದಿಯಾದ ಮಾರೀಚನಿಂದ ಮಾಯೆಕವಾಗಿ ಈ ಮೃಗರೂಪವು ಮಾಡಲ್ಪಟ್ಟಿದೆ. ಇದು ಇಂದ್ರಜಾಲವಿದ್ಯೆಯಂತೆ ಬೆಳಗುವದು ।೬। ಎಲೈ ರಘುಕುಲೋತ್ಪನ್ನನಾದ ಶ್ರೀರಾಮನೇ! ಇಂಥಾ ವಿಚಿತ್ರವಾದ ಮೃಗವು ಜಗದಲ್ಲಿ ಯೆಲ್ಲಿಯೂ ಇಲ್ಲ, ಆದ್ದರಿಂದ ಇದು ಮಾಯಾ ಮೃಗವೇಸರಿ ಯೆಂದು ಲಕ್ಷ್ಮಣನು ನುಡಿಯುತ್ತಿರಲೂ, ಆ ಮಾತಂ ನಿರಾಕರಿಸಿ, ಸೀತಾದೇವಿಯು ಶುಭ್ರವಾದ ಮುಗುಳುನಗೆಯುಳ್ಳವಳಾಗಿ, ಆ ಮೃಗದ ಚರ್ಮದಲ್ಲಿಯೇ ಆಸಕ್ತಿಯುಳ್ಳವಳಾಗಿಯೂ, ಶ್ರೀರಾಮನಂ ಕುರಿತು ನುಡಿವಳದೆಂತೆನೆ,—।೮। ಎಲೈ ಆರ್ಯಪುತ್ರನೇ! ಮನೋಹರವಾದ ಈ ಮೃಗವು ನನ್ನ ಮನವನ್ನಪಹರಿಸುವದು; ಎಲೈ ಮಹಾ ಭುಜಪರಾಕ್ರಮಿಯೇ! ಈ ಮೃಗವನ್ನು ತೆಗದುಕೊಂಡು ಬರುವನಾಗು, ನಮಗೆ ವಿಹಾರಾರ್ಥವಾಗಿರುವದು ।೯। ಈ ನಮ್ಮ ಆಶ್ರಮದ ಸಮೀಪದಲ್ಲಿ ಅನೇಕಮೃಗಗಳೂ, ಚಾಮರಮೃಗಂಗಳೂ, ಕರಡಿಗಳೂ, ನರಿಗಳೂ, ವಾನರರೂ,

ಸ್ಥಾ। ವಿಚರಂತಿಮಹಾಬಾಹೋರೂಪಶ್ರೇಷ್ಠಾಮನೋಹರಾಃ।ನಚಾಸ್ಯಸದೃಶೋರಾಜನ್ದೃಷ್ಟಪೂರ್ವೋಮೃಗಃಪುರಾ। ತೇಜಸಾಕ್ಷಮಯಾದೀಪ್ತ್ಯಾಯಥಾಯಂಮೃಗಸತ್ತಮಃ ।೧೨। ನಾನಾವರ್ಣವಿಚಿತ್ರಾಂಗೋರತ್ನಬಿಂದುಸಮಾಚಿತಃ। ದ್ಯೋತಯನ್ವನಮವ್ಯಗ್ರಂಶೋಭತೇಶಶಿಸನ್ನಿಭಃ ।೧೩। ಅಹೋರೂಪಮಹೋಲಕ್ಷ್ಮೀಸ್ಸ್ವರಸಂಪಚ್ಚಶೋಭನಾ। ಮೃಗೋಽದ್ಭುತೋವಿಚಿತ್ರಾಂಗೋಹೃದಯಂಹರತೀವಮೆ ।೧೪। ಯದಿಗ್ರಹಣಮಭ್ಯೇತಿಜೀವನ್ನೇವಮೃಗಸ್ತವ ।ಆಶ್ಚರ್ಯಭೂತಂಭವತಿವಿಸ್ಮಯಂಜನಯಿಷ್ಯತಿ । ಸಮಾಪ್ತವನವಾಸಾನಾಂರಾಜ್ಯಸ್ಥಾನಾಂಚನಃಪುನಃ । ಅಂತಃಪುರವಿಭೂಷಾರ್ಥೋಮೃಗಏಷಭವಿಷ್ಯತಿ ।೧೬। ಭರತಸ್ಯಾರ್ಯಪುತ್ರಸ್ಯಶ್ವಶ್ರೂಣಾಂಮಮಚಪ್ರಭೋ । ಮೃಗರೂಪಮಿದಂವ್ಯಕ್ತಂವಿಸ್ಮಯಂಜನಯಿಷ್ಯತಿ ।೧೭। ಜೀವನ್ನಯದಿತೇಽಭ್ಯೇತಿಗ್ರಹಣಂಮೃಗಸತ್ತಮಃ । ಅಜಿನಂನರಶಾರ್ದೂಲರುಚಿರಂಮೇಭವಿಷ್ಯತಿ ।೧೮। ನಿಹತಸ್ಯಾಸ್ಯಸತ್ವಸ್ಯಜಾಂಬೂನದಮಯತ್ವಚಿ । ಶಷ್ಪಬೃಸ್ಯಾಂವಿನೀತಾಯಾಮಿಚ್ಛಾ

---

ಸಂಚರಿಸುತ್ತವೆ. ತಥಾ-ಹಾಗೆಯೇ, ಸೃಮರಾಃ-ಕಪ್ಪುಬಣ್ಣವುಳ್ಳ ಚಮರೀಮೃಗಗಳು, ಚಮರಾಃ-ಬಿಳೀಬಣ್ಣವುಳ್ಳ ಚಮರೀಮೃಗಗಳು, ಋಕ್ಷಾಃ-ಕರಡಿಗಳು, ಪೃಷತಸಂಘಾಶ್ಚ-ಚುಕ್ಕೆಗಳ ಹಿಂಡುಗಳು. ವಾನರಾಃ-ಕೋತಿಗಳು, ತಥಾ-ಹಾಗೆಯೇ. ಹೇಮಹಾಬಾಹೋ-ಎಲೈ ಮಹಾಭುಜಶಾಲಿಯೇ, ಕಿನ್ನರಾಃ-ಕಿನ್ನರರು. ರೂಪಶ್ರೇಷ್ಠಾಃ-ಸೌಂದರ್ಯದಿಂ ಶ್ರೇಷ್ಠವಾದ, ಮನೋಹರಾಃ-ಮನಸ್ಸಿಗೆ ಇಂಪಾಗಿರುವ ಮೃಗಗಳು, ವಿಚರಂತಿ-ಸಂಚರಿಸುತ್ತವೆ. ಹೇರಾಜನ್-ಎಲೈ ಅರಸೇ. ಪುರಾ-ಪೂರ್ವದಲ್ಲಿ ಅಸ್ಯ-ಈ ಮೃಗಕ್ಕೆ, ಸದೃಶಃ-ಸಮಾನವಾದ. ಮೃಗಃ-ಮೃಗವು, ನದೃಷ್ಟಪೂರ್ವಃ-ಪೂರ್ವದಲ್ಲಿ ನೋಡಿದ್ದಿಲ್ಲ ತೇಜಸಾ-ತೇಜಸ್ಸಿನಿಂದಲೂ, ಕ್ಷಮಯಾ-ಉಪಶಾಂತಿಯಿಂದಲೂ, ದೀಪ್ತ್ಯಾ-ಬೆಳಕಿನಿಂದಲೂ, ಮೃಗಸತ್ತಮಃ-ಮೃಗಶ್ರೇಷ್ಠವಾದ ಅಯಂಯಥಾ-ಈ ಮೃಗದಂತೆ ಯಾವ ಮೃಗವೂ ಕಾಣಲ್ಪಡಲಿಲ್ಲ ||೧೨|| ನಾನಾವರ್ಣವಿಚಿತ್ರಾಂಗಃ-ಅನೇಕ ಬಣ್ಣಗಳಿಂ ವಿಚಿತ್ರವಾದ ಅವಯವಗಳುಳ್ಳ, ರತ್ನಬಿಂದುಸಮಾಚಿತಃ-ರತ್ನಗಳ ಚುಕ್ಕೆಗಳಿಂದ ತುಂಬಿರುವ, ಶಶಿಸನ್ನಿಭಃ-ಚಂದ್ರನಿಗೆ ಸಮಾನವಾದ ಮೃಗಶ್ರೇಷ್ಠ, ವನಂ-ವನವನ್ನು, ಅವ್ಯಗ್ರಂ-ಸಮಗ್ರವಾಗಿ, ದ್ಯೋತಯನ್-ಕಂಗೊಳಿಸುವಂಥಾದ್ದಾಗಿ. ಶೋಭತೇ-ಪ್ರಕಾಶಿಸುತ್ತಿದೆ ||೧೩|| ರೂಪಂ-ಸೌಂದರ್ಯವು, ಅಹೋ-ಆಶ್ಚರ್ಯಕರವು, ಸ್ವರಸಂಪಚ್ಚ-ಸಮಸ್ತ ಸಂಪತ್ತಿಯು ಶೋಭನಾ-ಶುಭಕರವಾದದ್ದು. ಅದ್ಭುತಃ-ಆಶ್ಚರ್ಯಕರವಾದ, ವಿಚಿತ್ರಾಂಗಃ-ವಿಚಿತ್ರವಾದ ಅವಯವಗಳುಳ್ಳ, ಮೃಗಃ-ಮೃಗವು, ಮೇ-ನನ್ನ ಹೃದಯಂ-ಮನಸ್ಸನ್ನು. ಹರತೀವ-ಸೆಳೆಯುತ್ತಲೇ ಎಂಬಂತಿದೆ ||೧೪|| ಮೃಗಃ-ಮೃಗವು, ಜೀವನ್ನೇವ-ಬದುಕಿರುವದಾಗಿಯೇ ಆದರೆ. ತದಾ-ಆ ಕಾಲದಲ್ಲಿ, ಸಮಾಪ್ತವನವಾಸಾನಾಂ-ಸಂಪೂರ್ತಿಯಾದ ವನವಾಸವುಳ್ಳ, ರಾಜ್ಯಸ್ಥಾನಾಂ-ರಾಜ್ಯವನ್ನಾಳುತ್ತಿರುವ ನಃ-ನಮ್ಮುಗಳಿಗೆ, ಆಶ್ಚರ್ಯಭೂತಂ-ಆಶ್ಚರ್ಯಕರವಾದ್ದು, ಭವತಿ-ಆಗುತ್ತದೆ ವಿಸ್ಮಯಂ-ಅಚ್ಚರಿಯನ್ನು. ಜನಯಿಷ್ಯತಿ-ಹುಟ್ಟಿಸುವದು. ಏಷಮೃಗಃ-ಈ ಮೃಗವು, ಪುನಃ-ಮತ್ತು, ಅಂತಃಪುರವಿಭೂಷಾರ್ಥಃ-ಅಂತಃಪುರದ ಅಲಂಕಾರಾರ್ಥವಾಗಿ. ಭವಿಷ್ಯತಿ-ಆಗುವದು ||೧೬|| ಆರ್ಯಪುತ್ರಸ್ಯ-ರಾಜಕುವರನಾದ ನಿನಗೂ, ಭರತಸ್ಯ-ಭರತನಿಗೂ, ಶ್ವಶ್ರೂಣಾಂಚ-ಅತ್ತೆಯರುಗಳಿಗೂ, ಮಮಚ-ನನಗೂ, ಹೇಪ್ರಭೋ-ಎಲೈ ಸ್ವಾಮಿಯೇ, ಇದಂ-ಈ, ಮೃಗರೂಪಂ-ಮೃಗದರೂಪವು ವಿಸ್ಮಯಂ-ನಮ್ಮೆಲ್ಲರಿಗೂ ಆಶ್ಚರ್ಯವನ್ನು, ಜನಯಿಷ್ಯತಿ-ಹುಟ್ಟಿಸುವದು, (ಯದ್ವಾ-ಮೃಗರೂಪಂ-ಪ್ರಶಸ್ತವಾದ ರೂಪವುಳ್ಳ, ಈ ಮೃಗವು, ವಿಸ್ಮಯಂ-ಆಶ್ಚರ್ಯವನ್ನು, ಜನಯಿಷ್ಯತಿ-ಹುಟ್ಟಿಸುತ್ತದೆ) ||೧೭|| ನಜೀವನ್-ಬದುಕದಿರುವದಾಗಿ, ಮೃಗಸತ್ತಮಃ-ಮೃಗಶ್ರೇಷ್ಠವು. ತೇ-ನಿನಗೆ, ಗ್ರಹಣಂ-ಕೈಗೆ ಸಿಕ್ಕುವಿಕೆಯನ್ನು, ಅಭ್ಯೇತಿಯದಿ-ಹೊಂದಿದ್ದೇ ಆದರೆ. ಹೇನರಶಾರ್ದೂಲ-ಎಲೈ ಪು

---

ಕಿನ್ನರರೂ, ಇನ್ನೂ ರೂಪವುಳ್ಳ ರೂಪವುಳ್ಳ ಮನೋಹರವಾದ ಮೃಗವಿಶೇಷಂಗಳೂ ಇವೆಲ್ಲ ಸಂಚಾರವಂ ಗೈಯುತ್ತಲೇ ಇವೆ, ಆದರೆ ತೇಜಸ್ಸಿನಿಂದಲೂ, ಬೆಳಕಿನಿಂದಲೂ ಹೊಳೆವ ಇಂಥಾ ಮೃಗವನ್ನು ನಾನೆಂದಿಗೂ ನೋಡಲಿಲ್ಲ।೧೨। ಎಲೈ ಶ್ರೀರಾಮನೇ! ನಾನಾವರ್ಣಂಗಳಿಂದ ವಿಚಿತ್ರವಾದ ಶರೀರವುಳ್ಳದ್ದಾಗಿಯೂ, ರತ್ನವಿಕಾರವಾದ ಬಿಂದುಗಳಿಂದ ವ್ಯಾಪ್ತವಾಗಿಯೂ ಇರುವ ಈ ಮೃಗವು ಈ ವನವನ್ನೆಲ್ಲ ಕಂಗೊಳಿಸುವಂತೆ ಮಾಡುವದಾಗಿ ಚಂದಿರನಂತಿರದಿ ಹೊಳೆವದು ।೧೩। ಹಾಹಾ!! ಯೆಂಥಾ ರೂಪವುಳ್ಳದ್ದಾಗಿಧೆ, ಯೇನು ಕಾಂತಿಯು, ಸ್ವರಸಂಪತ್ತು ಯೇನು ಸೊಗಸಾಗಿಧೆ. ಈ ಮೃಗವು ನನ್ನ ಮನವನ್ನು ಅಪಹರಿಸುವಂತೆ ತೋರುವದು, ಬಹು ಅದ್ಭುತಕರವಾಗಿಧೆ. ಈ ಮೃಗವು ಜೀವದಿಂದಿರುವಂತೆಯೆ ನಿನಗೆ ದೊರಿತದ್ದಾದರೆ ಆಶ್ಚರ್ಯಭೂತವಾಗಿರುವದು, ಆನಂದವನ್ನುಂಟುಮಾಡುವದು, ನಾವುಗಳು ಈ ವನವಾಸವಂ ಪೂರೈಸಿಕೊಂಡು ಅಯೋಧ್ಯಾಪಟ್ಟಣವಂ ಸೇರಿದಾಗ, ಅಂತಃಪುರದಲ್ಲಿ ವಿಶ್ರಾಂತ್ಯರ್ಥವಾಗಿರುವದು, ಮತ್ತು ರಾಜಪುತ್ರನಾದ ಭರತನಿಗೂ ಅತ್ತೆಯರಿಗೂ ನನಗೂ ಸಹ ಈ ಮೃಗದ ರೂಪವು ನಿಶ್ಚಯವಾಗಿ ಆಶ್ಚರ್ಯವನ್ನುಂಟುಮಾಡುವದು, ಬೊಂಡುವೇಳೆ ಒದುಕಿರುವಾಗಲೆ ಇದು ನಿನಗೆ ದೊರೆಯದಿದ್ದರೆ ಇದರ ಚರ್ಮವು ನನಗೆ ಚಿತ್ರಾಸನವಾಗಿರುವದು ।೧೭।

ಎಲೈ ಪ್ರಭುವೇ! ಕೊಲ್ಲಲ್ಪಟ್ಟ ಈ ಮೃಗದ ಸುವರ್ಣವಿಕಾರವಾದ ಚರ್ಮವನ್ನು ದರ್ಭಾಸನದಮೇಲೆ ಹಾಸಿ

ವ್ಯಾಹೃತಮುಪಾಸಿತುಂ ।೧೯। ಕಾಮವೃತ್ತಮಿದಂರೌದ್ರಂಸ್ತ್ರೀಣಾಮಸದೃಶಂಮತಂ । ವಪುಷಾತ್ವಸ್ಯಸತ್ವಸ್ಯವಿ
ಸ್ಮಯೋಜನಿತೋಮಮ ।೨೦। ತೇನಕಾಂಚನರೋಮ್ಣಾಮಣಿಪ್ರವರಶೃಂಗಿಣಾ । ತರುಣಾದಿತ್ಯವರ್ಣ್ಣೇನನಕ್ಷತ್ರಪಥವರ್ಚ
ಸಾ ।ಬಭೂವರಾಘವಸ್ಯಾಪಿಮನೋವಿಸ್ಮಯಮಾಗತಂ ।೨೧। ಏವಂಸೀತಾವಚಶ್ಶ್ರುತ್ವಾದೃಷ್ಟ್ವಾಮೃಗಮದ್ಭು
ತಂ । ಲೋಭಿತಸ್ತೇನರೂಪೇಣಸೀತಯಾಚಪ್ರಚೋದಿತಃ । ಉವಾಚರಾಘವೋಹೃಷ್ಟೋಭ್ರಾತರಂಲಕ್ಷ್ಮಣಂವಚಃ ।೨೨।
ಪಶ್ಯಲಕ್ಷ್ಮಣವೈದೇಹ್ಯಾಸ್ಸ್ಪೃಹಾಂಮೃಗಗತಾಮಿಮಾಂ । ರೂಪಶ್ರೇಷ್ಠತಯಾಹ್ಯೇಷಮೃಗೋದ್ಯನಭವಿಷ್ಯತಿ ।೨೩।
ನವನೇನಂದನೋದ್ದೇಶೇನಚೈತ್ರರಥಸಂಶ್ರಯೇ । ಕುತಃಪೃಥಿವ್ಯಾಂಸೌಮಿತ್ರೇಯೋಸ್ಯಕಶ್ಚಿತ್ಸಮೋಮೃಗಃ ।೨೪। ಪ್ರತಿಲೋ

---

ರುಷವ್ಯಾಘ್ರನೇ, ಮೇ-ನನಗೆ. ರುಚಿರಂ-ಮನೋಹರವಾದ, ಅಜಿನಂ-ಚರ್ಮವು ಭವಿತ-ಆಗುವದು ॥೧೮॥ ನಿಹತಸ್ಯ-ಕೊಲೆಯಲ್ಪಟ್ಟ, ಅಸ್ಯ ಸತ್ವಸ್ಯ-ಈ ಮೃಗದ ಸಂಬಂಧವಾದ, ಶಷ್ಪಬೃಸ್ಯಾಂ-ತೃಣಸಂಬಂಧವಾದ ಆಸನದಲ್ಲಿ, ವಿನೀತಾಯಾಂ-ಹಾಸಲ್ಪಟ್ಟ. ಜಾಂಬೂನದಮಯತ್ವಚಿ-ವರ್ಣವಿಕಾರವಾದ ಚರ್ಮದಲ್ಲಿ, ಅಹಂ-ನಾನು, ಉಪಾಸಿತುಂ-ನಿನ್ನೊಡನೆಕೂಡ ಕೂತುಕೊಳ್ಳುವದಕ್ಕಾಗಿ, ಇಚ್ಛಾಮಿ-ಇಚ್ಛೆಸುತ್ತೇನೆ ॥೧೯॥ ಸ್ತ್ರೀಣಾಂ-ಹೆಂಗಸರಿಗೆ, ರೌದ್ರಂ-ಘೋರವಾದ, ಇದಂಕಾಮವೃತ್ತಂ-ಈ ಗಂಡನಿಗೆ ಪ್ರೇರಣರೂಪವಾದ ಸ್ವೇಚ್ಛಾವ್ಯಾಪಾರವು. ಅಸದೃಶಂಮತಂ-ಯೋಗ್ಯವಲ್ಲವೆಂದು ಪ್ರಸಿದ್ಧವಾಗಿದೆ. ಕಿಂತು-ಮತ್ತೇನೆಂದರೆ ಅಸ್ಯಸತ್ವಸ್ಯ-ಈ ಮೃಗದ, ವಪುಷಾ-ಶರೀರದಿಂದ. ಮಮ-ನನಗೆ, ವಿಸ್ಮಯಃ-ಆಶ್ಚರ್ಯವು, ಜನಿತಃ-ಹುಟ್ಟಿತು ಆಕಾರಣದೆಸೆಯಿಂದ ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೨೦॥ ಕಾಂಚನರೋಮ್ಣಾ-ಚಿನ್ನದವಿಕಾರವಾದ ರೋಮವುಳ್ಳ, ಮಣಿಪ್ರವರಶೃಂಗಿಣಾ-ರತ್ನಮಯವಾದ ಕೊಂಬುಗಳುಳ್ಳ, ತರುಣಾದಿತ್ಯವರ್ಣೇನ-ಬಾಲಸೂರ್ಯನಿಗೆ ಸಮಾನವಾದ ಬಣ್ಣವುಳ್ಳ, ನಕ್ಷತ್ರಪಥವರ್ಚಸಾ-ನಕ್ಷತ್ರಮಾರ್ಗದೋಪಾದಿಯಲ್ಲಿ ತೇಜಸ್ಸುಳ್ಳ, ತೇನ-ಆ ಮೃಗದಿಂದ. ರಾಘವಸ್ಯ-ಶ್ರೀರಾಮನ. ಮನೋಪಿ-ಮನವು ಕೂಡ, ವಿಸ್ಮಯಂ-ಆಶ್ಚರ್ಯವನ್ನು, ಆಗತಂ-ಪಡೆದದ್ದು, ಬಭೂವ-ಆಯಿತು ॥೨೧॥ ಏವಂ ಈಪರಿಯಾಗಿ. ಸೀತಾವಚಃ-ಸೀತಾದೇವಿಯ ಮಾತನ್ನು, ಶ್ರುತ್ವಾ-ಕೇಳಿ, ಅದ್ಭುತಂ-ಆಶ್ಚರ್ಯಕರವಾದ, ತಂಮೃಗಂ-ಆ ಮೃಗವನ್ನು, ದೃಷ್ಟ್ವಾ-ಕಂಡು, ತೇನರೂಪೇಣ-ಆ ಮೃಗದ ಸೌಂದರ್ಯದಿಂದ. ಲೋಭಿತಃ-ಮೋಹಿಸಲ್ಪಟ್ಟ, ಸೀತಯಾಚ-ಸೀತಾದೇವಿಯಿಂದಲೂ. ಪ್ರಚೋದಿತಃ-ಪ್ರೇರೇಪಿಸಲ್ಪಟ್ಟ. ರಾಘವಃ-ಶ್ರೀರಾಮನು. ಹೃಷ್ಟಃ-ಸಂತೋಷಗೊಂಡವನಾಗಿ ಭ್ರಾತರಂ-ತಮ್ಮನಾದ ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು. ವಚಃ-ಮಾತನ್ನು. ಉವಾಚ-ಹೇಳಿದನು ॥೨೨॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ವೈದೇಹ್ಯಾಃ-ಸೀತಾದೇವಿಗೆ ಮೃಗಗತಾಂ-ಮೃಗವನ್ನು ಹೊಂದಿದ, ಇಮಾಂಸ್ಪೃಹಾಂ-ಈಯಿಚ್ಛೆಯನ್ನು, ಪಶ್ಯ-ನೋಡು, ಏಷಮೃಗಃ-ಈ ಮೃಗವು, ರೂಪಶ್ರೇಷ್ಠತಯಾ-ಮೃಗಗಳಲ್ಲಿ ಶ್ರೇಷ್ಠವಾಗಿರೋಣದರಿಂದ. ಅದ್ಯ-ಈ ವನವಾಸದಲ್ಲಿ. ನಭವಿಷ್ಯತಿ-ಆಗಲಾರದು, (ಆದರೆ-ಇಂಥಾ ಮೃಗವುದುರ್ಲಭವೆಂದು ತಾತ್ಪರ್ಯವು) ॥೨೩॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ಅಸ್ಯ-ಈ ಮೃಗಕ್ಕೆ, ಸಮಃ-ಸಮಾನವಾದದ್ದು ಯಃ-ಯಾವದೋ, ಸಮೃಗಃ-ಅಂಥಾ ಮೃಗವು. ಕಶ್ಚಿತ್-ಒಂದೂ, ವನೇ-ಅರಣ್ಯದಲ್ಲಿ, ನ-ಇಲ್ಲ. ನಂದನೋದ್ದೇಶೇ-ದೇವೇಂದ್ರನ ದೇಶದಲ್ಲಿ. ನ-ಇಲ್ಲ ಚೈತ್ರರಥಸಂಶ್ರಯೇ-ಚೈತ್ರರಥವೆಂಬ ಕುಬೇರನ ಉದ್ಯಾನವನದಲ್ಲಿಯೂ ನ-ಇಲ್ಲ. ಪೃಥಿವ್ಯಾಂ-ಭೂಮಿಯಲ್ಲಿ. ಕುತಃ-ಎಲ್ಲಿಂದಬರಬೇಕು ॥೨೪॥ ಪ್ರತಿಲೋಮಾನುಲೋಮಾ

---

ಕೊಂಡುಳೆಂಬಡಭಾಸನದಲ್ಲಿನಾನು ಕುಳಿತುಕೊಳ್ಳಬೇಕೆಂದಿಚ್ಛೈಸುತ್ತೇನೆಎಲೈ ಆರ್ಯಪುತ್ರನೇ! ಕೇಳುವವನಾಗು
ಲೋಕದಲ್ಲಿ ಹೆಂಗಳಿಗೆ ಮಹಾ ಭಯಂಕರವಾದ ಮತ್ತು ಪತಿಪ್ರೇರಣಾ ರೂಪವಾದ ಈ ಸ್ವೇಚ್ಛಾವ್ಯಾಪಾರವು,
ಅಸದೃಶವಾದದ್ದು, ಆದರೆ ನನಗೆ ಈ ಮೃಗದ ಶರೀರದಿಂದ ಒಹಳ ಆಶ್ಚರ್ಯವು ಉಂಟಾಗಿರುವದಾದಕಾರಣ ಇದ
ನ್ನು ನಾನು ಇಚ್ಛೈಸುತ್ತೇನೆ,ಇಷ್ಟು ರಮಣೀಯವಾಗಿಲ್ಲದಿದ್ದರೆನಾನು ಅಪೇಕ್ಷಿಸುತ್ತಿರಲಿಲ್ಲವೆಂದು ಸೀತಾದೇವಿಯು
ನುಡಿದಳು ।೨೦। ಅನಂತರದಲ್ಲಿ ಶ್ರೀರಾಮನೂ ಸಹ, ಸುವರ್ಣವಿಕಾರವಾದ ರೋಮವುಳ್ಳದ್ದಾಗಿಯೂ, ರತ್ನವಿಕಾರ
ವಾದ ಕೊಂಬುಗಳುಳ್ಳದ್ದಾಗಿಯೂ, ಬಾಲಸೂರ್ಯನಿಗೆ ಸಮಾನವಾದ ವರ್ಣವುಳ್ಳದ್ದಾಗಿಯೂ ನಕ್ಷತ್ರಮಾರ್ಗದಂ
ತೆ ಬೆಳಗುವದಾಗಿಯೂ ಇರುವ ಆ ಮೃಗದಿಂದ ಆಶ್ಚರ್ಯವನ್ನೈದಿ, ಮತ್ತು ಈ ರೀತಿಯಾಗಿ ಸೀತಾದೇವಿಯ
ವಾಕ್ಯವಂ ಕೇಳಿ, ಆಶ್ಚರ್ಯಕರವಾದ ಆ ಮೃಗವನ್ನೂ ಸಹ ಕಂಡು, ಆ ರೂಪದಿಂದ ಮೋಹಿಸಲ್ಪಟ್ಟವನಾಗಿ, ಮ
ತ್ತು ಸೀತಾದೇವಿಯಿಂದಲೂ, ಪ್ರೇರಿಸಲ್ಪಟ್ಟವನಾಗಿ, ಶ್ರೀರಾಮನು ಸಂತಸವನ್ನೈದಿ, ಲಕ್ಷ್ಮಣನಂ ಕುರಿತು, ನು
ಡಿದನದೆಂತೆನೆ,—।೨೨। ಎಲೈ ಲಕ್ಷ್ಮಣನೇ! ಸೀತಾದೇವಿಗೆ ಈ ಮೃಗದಲ್ಲಿ ಉಂಟಾಗಿರುವ ಇಚ್ಛೆಯಂ ನೋಡುವ
ವನಾಗು, ಇಂಥಾ ಮೃಗವು ಯೆಲ್ಲಿಯೂ ದೊರಿಯಲಾರದು, ಇದಕ್ಕೆ ಸಮಾನವಾದ ಮೃಗವು ಈ ವನದಲ್ಲಿಯೇ ಆಗ
ಲೀ, ನಂದನ ವನದಲ್ಲಿಯೇ ಆಗಲೀ, ಕುಬೇರನ ವನದಲ್ಲಿಯೇ ಆಗಲೀ, ಯೆಲ್ಲಿಯೂ ಇಲ್ಲ, ಭೂಮಿಯಲ್ಲಿ ಯೆಲ್ಲಿಬಂ
ತು; ಉದ್ದವಾಗಿಯೂ ಅಡ್ಡವಾಗಿಯೂ ಬೆಳದಿರುವ ಮನೋಹರವಾದ ರೋಮಪಙ್ತಿಗಳು ಚನ್ನದ ಚುಕ್ಕೆಗಳಿಂದ

ಮಾನುಲೋಮಾಶ್ಚ ರುಚಿರಾಃ ರೋಮರಾಜಯಃ । ಶೋಭಂತೇ ಮೃಗಮಾಶ್ರಿತ್ಯ ಚಿತ್ರಾಃ ಕನಕಬಿಂದುಭಿಃ ॥೧೬॥ ಪಶ್ಯಾಸ್ಯ ಜೃಂಭಮಾಣಸ್ಯ ದೀಪ್ತಾಮಗ್ನಿಶಿಖೋಪಮಾಂ । ಜಿಹ್ವಾಂ ಮುಖಾನ್ನಿಸ್ಸರಂತೀಂ ಮೇಘಾದಿವ ಶತಹ್ರದಾಂ ॥೧೭॥ ಮಸಾರಗಲ್ಲರ್ಕಮುಖಃ ಶಂಖಮುಕ್ತಾನಿಭೋದರಃ । ಕಸ್ಯ ನಾಮಾನಿರೂಪ್ಯೋಽಸೌ ನ ಮನೋ ಲೋಭಯೇನ್ಮೃಗಃ ॥೧೮॥ ಕಸ್ಯ ರೂಪಮಿದಂ ದೃಷ್ಟ್ವಾ ಜಾಂಬೂನದಮಯಂ ಪ್ರಭೋ । ನಾನಾರತ್ನಮಯಂ ದಿವ್ಯಂ ನ ಮನೋ ವಿಸ್ಮಯಂ ವ್ರಜೇತ್ । (ಕಿಂ ಪುನರ್ಮೈಥಿಲೀ ಸೀತಾ ಬಾಲಾ ನಾರೀ ನ ವಿಸ್ಮಯೇತ್) ॥೧೯॥ ಮಾಂಸಹೇತೋರಪಿ ಮೃಗಾನ್ ವಿಹಾರಾರ್ಥಂ ಚ ಧನ್ವಿನಃ । ಘ್ನಂತಿ ಲಕ್ಷ್ಮಣ ರಾಜಾನೋ ಮೃಗಯಾಯಾಂ ಮಹಾವನೇ ॥೨೦॥ ಧನಾನಿ ವ್ಯವಸಾಯೇನ ವಿಚೀಯಂತೇ ಮಹಾವನೇ । ಧಾತವೋ ವಿವಿಧಾಶ್ಚಾಪಿ ಮಣಿರತ್ನಸುವರ್ಣಿನಃ ॥೨೧॥ ತತ್ಸಾರಮಖಿಲಂ ನೄಣಾಂ ಧನಂ ನಿಚಯವರ್ಧನಂ । ಮನಸಾ ಚಿಂತಿತಂ ಸರ್ವಂ ಯಥಾ ಶುಕ್ರಸ್ಯ ಲಕ್ಷ್ಮಣ ॥೨೨॥ ಅರ್ಥೀ ಯೇನಾರ್ಥಕೃತ್ಯೇನ ಸಂವ್ರಜತ್ಯವಿಚಾರಯನ್ । ತಮರ್ಥಮರ್ಥಶಾ

---

ಶ್ಚ-ಊರ್ಧ್ವವಾಗಿಯೂ ಅಧ್ವವಾಗಿಯೂ ಬೆಳೆದಿರುವ, ರುಚಿರಾಃ-ಮನೋಹರಂಗಳಾದ, ರೋಮರಾಜಯಃ-ಕೂದಲುಗಳ ಸಾಲುಗಳು, ಕನಕಬಿಂದುಭಿಃ-ಚಿನ್ನದ ಚುಕ್ಕೆಗಳಿಂದ, ಚಿತ್ರಾಃ-ಆಶ್ಚರ್ಯಕರಂಗಳಾಗಿ, (ಅಥವಾ-ವಿಚಿತ್ರಬಣ್ಣವುಳ್ಳವುಗಳಾಗಿ) ಮೃಗಂ-ಮೃಗವನ್ನು ಆಶ್ರಿತ್ಯ-ಹೊಂದಿ, ಶೋಭಂತೇ-ಶೋಭಿಸುತ್ತವೆ ॥೧೬॥ ಜೃಂಭಮಾಣಸ್ಯ-ಆಕಳಿಸುತ್ತಿರುವ, ಅಸ್ಯ-ಈ ಮೃಗಸಂಬಂಧಿಯಾದ, ಮುಖಾತ್-ಬಾಯಿಯಿಂದ, ಮೇಘಾತ್-ಮೋಡದಿಂದ, ನಿಸ್ಸರಂತೀಂ-ಹೊರಡುತ್ತಿರುವ, ಶತಹ್ರದಾಮಿವ-ಮಿಂಚಿನಂತಿರುವ, ಅಗ್ನಿಶಿಖೋಪಮಾಂ-ಬೆಂಕಿಯ ಜ್ವಾಲೆಗೆ ಸಮಾನವಾದ, ದೀಪ್ತಾಂ-ಹೊಳೆಯುತ್ತಿರುವ, ಜಿಹ್ವಾಂ-ನಾಲಿಗೆಯನ್ನು, ಪಶ್ಯ-ನೋಡು ॥೧೭॥ ಮಸಾರಗಲ್ಲರ್ಕಮುಖಃ-ಇಂದ್ರನೀಲಮಾಣಿಕ್ಯವಿಕಾರವಾದ ಪಾನಪಾತ್ರದಂತೆ ಇರುವ ಮುಖವುಳ್ಳ, ಶಂಖಮುಕ್ತಾನಿಭೋದರಃ-ಶಂಖಾಕಾರವುಳ್ಳದ್ದಾಗಿಯೂ ಮುತ್ತುಗಳಿಗೂ ಸದೃಶವಾದ ಹೊಟ್ಟೆಯುಳ್ಳ, ಅನಿರೂಪ್ಯಃ-ಇದು ಹೀಗಿದೆಯೆಂದು ನಿರೂಪಿಸಲಸಾಧ್ಯವಾದ, ಅಸೌ ಮೃಗಃ-ಈ ಜಿಂಕೆಯು, ಕಸ್ಯನಾಮ-ಯಾವ ಪುರುಷನಿಗೆ ತಾನೆ, ಮನಃ-ಮನವನ್ನು, ನಲೋಭಯೇತ್-ಮೋಹವಹೊಂದಿಸದಿರುವದು ॥೧೮॥ ಹೇ ಪ್ರಭೋ-ಎಲೈ ಸಮರ್ಥನೇ, ನಾನಾರತ್ನಮಯಂ-ಅನೇಕ ರತ್ನಗಳ ವಿಕಾರವಾದ, ಜಾಂಬೂನದಮಯಂ-ಬಂಗಾರದ ವಿಕಾರವಾದ, ದಿವ್ಯಂ-ಮನೋಹರವಾದ, ಇದಂ ರೂಪಂ-ಈ ಮೃಗದ ಸೌಂದರ್ಯವನ್ನು ದೃಷ್ಟ್ವಾ-ಕಂಡು, ಕಸ್ಯ-ಯಾರ, ಮನಃ-ಮನವು, ವಿಸ್ಮಯಂ-ಆಶ್ಚರ್ಯವನ್ನು, ನವ್ರಜೇತ್-ಹೊಂದದಿರುವದು ॥೧೯॥ ಬಾಲಾ-ಹುಡುಗಿಯಾದ, ಮೈಥಿಲೀ-ಜನಕರಾಯನ ಮಗಳಾದ, ನಾರೀ-ಹೆಂಗಸಾದ, ಸೀತಾ-ಸೀತಾದೇವಿಯು, ಕಿಂಪುನಃ-ಏನು ಹೇಳತಕ್ಕದ್ದು, ನವಿಸ್ಮಯೇತ್-ಆಶ್ಚರ್ಯಪಡದಿರುವಳೇ ॥೧೯॥ ಹೇ ಲಕ್ಷ್ಮಣ-ಎಲೈ ಲಕ್ಷ್ಮಣನೇ, ಧನ್ವಿನಃ-ಧನುರ್ಧಾರಿಗಳಾದ ರಾಜಾನಃ-ಅರಸುಗಳು, ಮೃಗಯಾಯಾಂ-ಬ್ಯಾಂಟೆಯಲ್ಲಿ, ಮಹಾವನೇ-ದೊಡ್ಡ ಅರಣ್ಯದಲ್ಲಿ, ಮೃಗಾನ್-ಮೃಗಗಳನ್ನು, ಮಾಂಸಹೇತೋಃ-ಮಾಂಸನಿಮಿತ್ತವಾಗಿಯೂ, ವಿಹಾರಾರ್ಥಂ-ವಿಹಾರಾರ್ಥವಾಗಿಯೂ, ಘ್ನಂತಿ-ಕೊಲ್ಲುತ್ತಾರೆ ॥೨೦॥ ಮಹಾವನೇ-ದೊಡ್ಡ ಅರಣ್ಯದಲ್ಲಿ, ವ್ಯವಸಾಯೇನ-ಉದ್ಯೋಗದಿಂದ, ಮಣಿರತ್ನಸುವರ್ಣಿನಃ-ಇಂದ್ರನೀಲಮಣಿಗಳೂ ರತ್ನಗಳೂ ಸುವರ್ಣಗಳಾಕಾರವುಳ್ಳ, ವಿವಿಧಾಃ-ನಾನಾಬಗೆಗಳಾದ, ಧಾತವಃ-ಗೈರಿಕಾದಿ ಧಾತುಗಳು, (ಅಂದರೆ-ಇಂಗಲೀಕ ಹರದಳ ಮುಂತಾದದ್ದು) ಧನಾನಿ-ಮೃಗರೂಪಸಂಪತ್ತುಗಳು, ವಿಚೀಯಂತೇ-ಹುಡುಕಿ ಸಂಪಾದಿಸಲ್ಪಡುತ್ತವೆ ॥೨೧॥ ತತ್ಸಾರಂ-ಆ ಧನಗಳ ಸಾರವಾದ ಶ್ರೇಷ್ಠವಾದ, ಅಖಿಲಂ-ಸಮಸ್ತವಾದ, ಧನಂ-ಶ್ರೇಷ್ಠವಾದ ಸ್ವತ್ತುಗಳು, ಹೇ ಲಕ್ಷ್ಮಣ-ಎಲೈ ಲಕ್ಷ್ಮಣನೇ, ನೄಣಾಂ-ಮನುಜರ, ಮನಸಾ-ಮನಸ್ಸಿನಿಂದ, ಚಿಂತಿತಂ-ಆಲೋಚಿಸಲ್ಪಟ್ಟ,

---

ವಿಚಿತ್ರವಾದ ಬಣ್ಣವುಳ್ಳವುಗಳಾಗಿ ಈ ಮೃಗವನ್ನೈದಿ ಹೊಳೆಯುತ್ತಿರುವವು, ಇದು ಆಕಳಿಸುವ ಕಾಲದಲ್ಲಿ ಇದರ ಬಾಯಿಯಿಂದ ಮೇಘದಿಂದ ಹೊರಡುವ ಮಿಂಚಿನಂತೆ, ಅಗ್ನಿಜ್ವಾಲಾಸದೃಶವಾದ ಮತ್ತು ಬಹುಹೊಳೆವ ನಾಲಿಗೆಯಂ ನೋಡು ॥೧೭॥ ಎಲೈ ಅನುಜನೇ! ಇಂದ್ರನೀಲಮಾಣಿಕ್ಯದ ವಿಕಾರವಾದ ಪಾನಪಾತ್ರೆಯಂತೆ ಮುಖವುಳ್ಳದ್ದಾಗಿಯೂ, ಶಂಖಾಕಾರವಾಗಿಯೂ ಮುತ್ತುಗಳಿಗೆ ಸಮಾನವಾಗಿಯೂ ಇರುವ ಉದರವುಳ್ಳದ್ದಾಗಿಯೂ, ಇದು ಹೀಗೆ ಇರುವದೆಂದು ಹೇಳಲಸಾಧ್ಯವಾದ ಈ ಮೃಗವು ಯಾವ ಪುರುಷನ ಮನವನ್ನು ತಾನೇ ಅಪಹರಿಸಲಾರದು, ಮತ್ತು ನಾನಾರತ್ನವಿಕಾರವಾದ ಸುವರ್ಣಮಯವಾದ ಮತ್ತು ಮನೋಹರವಾದ ಈ ಸೌಂದರ್ಯವಂ ಕಂಡು, ಯಾವ ಪುರುಷನ ಮನಸ್ಸು ತಾನೆ ಆಶ್ಚರ್ಯವನ್ನೈದುವದಿಲ್ಲ (ಅಂದರೆ ಯೆಲ್ಲರಿಗೂ ಆಶ್ಚರ್ಯವುಂಟಾಗುವದೆಂದು ಭಾವವು) ॥೧೯॥ ಎಲೈ ಲಕ್ಷ್ಮಣನೇ! ಕೋದಂಡಂಗಳಂ ಪಿಡಿದಿರುವ ಅರಸರು ಬ್ಯಾಂಟೆಯಾಡುವಾಗ ಅರಣ್ಯದಲ್ಲಿ ವಿಹಾರಾರ್ಥವಾಗಿ ಮೃಗಂಗಳಂ ಕೊಲ್ಲುವರು, ಮತ್ತು ಉದ್ಯೋಗಂಗಳಿಂದ, ಇಂದ್ರನೀಲಮಣಿಗಳಂತೆಯೂ ಸುವರ್ಣದಂತೆಯೂ ಇರುವ ನಾನಾವಿಧವಾದ ಗೈರಿಕಾದಿ ಧಾತುಗಳಂ ಸಂಪಾದಿಸುವರು, ಅವುಗಳು ಮನುಜರ ಮನಸ್ಸಿಗೆ, ಮಹತ್ತರವಾದ ದ್ರವ್ಯದಂತೆಯೂ, ಭಂಡಾರದಂತೆಯೂ ಇರುವವು ॥೨೧॥ ಎಲೈ ಲಕ್ಷ್ಮಣನೇ

ಸ್ತ್ರಜ್ಞಾಃಪ್ರಾಹುರರ್ಥ್ಯಾಶ್ಚಲಕ್ಷ್ಮಣ ॥೩೩॥ ಏತಸ್ಯಮೃಗರತ್ನಸ್ಯಪರಾರ್ಧ್ಯೇಕಾಂಚನತ್ವಚಿ । ಉಪವೇಕ್ಷ್ಯತಿವೈದೆ
ಹೀಮಯಾಸಹಸುಮಧ್ಯಮಾ ॥೩೪॥ ನಕಾದಲೀನಪ್ರಿಯಕೀನಪ್ರವೇಣೀನಚಾವಿಕೀ । ಭವೇದೇತಸ್ಯಸದೃಶೀಸ್ಪರ್ಶನೆ
ನೇತಿಮೇಮತಿಃ ॥೩೫॥ ಏಷಚೈವಮೃಗಶ್ಶ್ರೀಮಾನ್ಯಶ್ಚದಿವ್ಯೋನಭಶ್ಚರಃ । ಉಭಾವೇತೌಮೃಗೌದಿವ್ಯಾತಾರಾಮೃ
ಗಮಹೀಮೃಗೌ ॥೩೬॥ ಯದಿವಾಯಂತಥಾಯನ್ಮಾಂಭವೇದ್ವದಸಿಲಕ್ಷ್ಮಣ । ಮಾಯೈಷಾರಾಕ್ಷಸಸ್ಯೇತಿಕರ್ತವ್ಯೋಸ್ಯ
ವಧೋಮಯಾ ॥೩೭॥ ಏತೇನಹಿನೃಶಂಸೇನಮಾರೀಚೇನಾಕೃತಾತ್ಮನಾ । ವನೇವಿಚರತಾಪೂರ್ವಂಹಿಂಸಿತಾಮುನಿಪುಂಗ
ವಾಃ ॥೩೮॥ ಉತ್ಥಾಯಬಹವೋಯೇನಮೃಗಯಾಯಾಂಜನಾಧಿಪಾಃ । ನಿಹತಾಃಪರಮೇಷ್ವಾಸಾಸ್ತಸ್ಮಾದ್ವಧ್ಯ

---

ಸರ್ವಂ-ಸಮಸ್ತವಾದ ದ್ರವ್ಯಗಳ, ಯಥಾ-ಹ್ಯಾಗೆ, ಶುಕ್ರಸ್ಯ-ಶುಕ್ರನ, ನಿಚಯಂವರ್ಧನಂ-ಕೋಶಗೃಹವನ್ನು ವೃದ್ಧಿಗೊಳಿಸುವದೋ, ತಥಾ-ಹಾ
ಗೆಯೇ, ನಿಚಯವರ್ಧನಂ-ಕೋಶಗೃಹವನ್ನು ವೃದ್ಧಿಗೊಳಿಸುವದು. (ಯದ್ವಾ-ಶುಕ್ರಸ್ಯ-ಶುಕ್ರನ, ಮನಸಾ-ಮನಸಿನಿಂದ, ಚಿಂತಿತಂ-ಆಲೋಚಿ
ಸಲ್ಪಟ್ಟ, ಸರ್ವಂ-ಸಮಸ್ತವಸ್ತುಗಳು ಯಥಾ-ಹ್ಯಾಗೆ, ನಿಚಯ ವರ್ಧನಂ-ಶುಕ್ರನಕೋಶವನ್ನು ವೃದ್ಧಿಗೊಳಿಸುವದೋ, ತಥಾ-ಹಾಗೆಯೇ
ಮನದ ರಿಗೂ ಬಕ್ಕಸವನ್ನು ವೃದ್ಧಿಗೊಳಿಸುವದಾಗುವದೆಂದು ತಾತ್ಪರ್ಯವು) ॥೩೨॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಅರ್ಥೀ-ಅಪೂರ್ವವಸ್ತು
ಕಾಮುಕನಾದ ಪುರುಷನು ಅವಿಚಾರಯನ್-ಆಲೋಚನೆಮಾಡದಿರುವನಾಗಿ, ಯೇನ-ಯಾವ. ಅರ್ಥಕೃತ್ಯೇನ-ಸಾಧಕವಾದ ಪ್ರಯತ್ನದಿಂದ, ಸಂವ್ರ
ಜತಿ-ಪ್ರವರ್ತಿಸುವನೋ, ಅರ್ಥ್ಯಾಃ-ಅರ್ಥಸಂಪಾದನೆಯಲ್ಲಿ ನಿಪುಣರಾದ, ಅರ್ಥಶಾಸ್ತ್ರಜ್ಞಾಃ-ನೀತಿಶಾಸ್ತ್ರಜ್ಞರು, ತಂ ಅರ್ಥಂ-ಅದನ್ನೇ ಅರ್ಥ
ವನ್ನಾಗಿ. ಪ್ರಾಹುಃ-ಹೇಳುತ್ತಾರೆ ॥೩೩॥ ಏತಸ್ಯ-ಈಪರಿದೃಶ್ಯಮಾನವಾದ, ಮೃಗರತ್ನಸ್ಯ-ಶ್ರೇಷ್ಠವಾದ ಮೃಗದಸಂಬಂಧವಾದ, ಪರಾರ್ಧ್ಯೇ-
ಶ್ರೇಷ್ಠವಾದ, ಕಾಂಚನತ್ವಚಿ-ಭಂಗಾರದ ಚರ್ಮದಲ್ಲಿ, ಸುಮಧ್ಯಮಾ-ಬಳ್ಳೀಮಧ್ಯಪ್ರದೇಶವುಳ್ಳ, ವೈದೇಹೀ-ಸೀತಾದೇವಿಯು, ಮಯಾಸಹ-
ನನ್ನೊಡಗೂಡ, ಉಪವೇಕ್ಷ್ಯತಿ-ಕೂತುಕೊಳ್ಳುತ್ತಾಳೆ ॥೩೪॥ ಏತಸ್ಯ-ಈ ಮೃಗಚರ್ಮಕ್ಕೆ. ಸ್ಪರ್ಶನೇನ-ಸ್ಪರ್ಶದಿಂದ, ಸದೃಶೀ-ಸಮಾನವಾದ ಚ
ರ್ಮವು, ಕಾದಲೀ-ಕರ್ಬುರಬಣ್ಣವುಳ್ಳ, ಕಪ್ಪಾದ ರೋಮಾಗ್ರಗಳುಳ್ಳ ಕದಲೀಎಂಬ ಚಿಗರೀಚರ್ಮವು, ನ-ಅಲ್ಲ. ಪ್ರಿಯಕೀ-ಮೃದುವಾಗಿರುವ ಕ
ಪ್ಪು ಬಿಳುಪು ಎರಡು ಬಣ್ಣವುಳ್ಳ ನಿಬಿಡವಾದ ರೋಮಗಳುಳ್ಳ ಮೃಗವಿಶೇಷದ ಸಂಬಂಧವಾದ ಚರ್ಮವೂ, ಅಥವಾ-ಮೃದುಸ್ಪರ್ಶಯುಳ್ಳ
ವ್ಯಾಘ್ರಚರ್ಮವೂ. ನ-ಇದಕ್ಕೆ ಸಮವಾದದ್ದಲ್ಲ. ಪ್ರವೇಣೀ-ಪ್ರವೇಣೀಎಂಬ ಮೃಗವಿಶೇಷದ ಚರ್ಮವು, ನ-ಅಲ್ಲ, ಆವಿಕೀ-ಮೇಕೆಯಸಂಬಂಧವಾದ
ಚರ್ಮವೂ. ನ-ಇದಕ್ಕೆ ಸಮವಲ್ಲ, ಇತಿ-ಇಂತೆಂದು, ಮೇ-ನನ್ನ, ಮತಿಃ-ಬುದ್ಧಿಯು ॥೩೫॥ ಶ್ರೀಮಾನ್-ಕಾಂತಿಯುಕ್ತವಾದ, ಏಷಮೃಗಸ್ತು-
ಈ ಮೃಗವಾದರೆ, ದಿವ್ಯಃ-ದೇವತಾಸಂಬಂಧವಾದ. ನಭಶ್ಚರಃ-ಅಂತರಿಕ್ಷಮಾರ್ಗದೊಳ್ ಸಂಚಾರಶೀಲವಾದ, ಮೃಗಃ-ಮೃಗವು, ಯಃ-ಯಾವ
ದೋ. ಸಃ-ಅವೂ. ಏತೌ-ಈ. ತಾರಾಮೃಗಮಹೀಮೃಗೌ-ನಕ್ಷತ್ರರೂಪವಾದ ಮೃಗಶೀರ್ಷವೆಂಬ ಮೃಗವೂ ನೆಲದಲ್ಲಿರುವ ಈ ಮೃಗವೂ,
ಉಭೌ-ಈ ಎರಡೂ, ದಿವ್ಯೌ-ಮನಸ್ಸಿಗಿಂಪಾಗಿರುವ, ಮೃಗೌ-ಮೃಗಗಳು ॥೩೬॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಏಷಃ-ಇದು, ರಾಕ್ಷಸಸ್ಯ-
ಮಾರೀಚನೆಂಬ ರಕ್ಕಸನ. ಮಾಯಇತಿ-ಮಾಯೆಯೂ, ಭವತಿ-ಆಗಿರುತ್ತದೆ. ಯತ್-ಯಾವ ಮಾತನ್ನು, ವದಸಿ-ಹೇಳುತ್ತೀಯೋ. ತಥಾ-
ಹಾಗೆಯೇ ಅಯಂ-ಈ ಮೃಗವು, ಭವೇದ್ಯದಿ-ಆಗಿದ್ದೇ ಆದರೆ. ಅಸ್ಯ-ಈ ಮೃಗದ, ವಧಃ-ಸಂಹಾರವು, ಮಯಾ-ನನ್ನಿಂದ, ಕರ್ತವ್ಯಃ-ಮಾಡತ
ಕ್ಕದ್ದು ॥೩೭॥ ನೃಶಂಸೇನ-ಘಾತುಕನಾದ, ಅಕೃತಾತ್ಮನಾ-ದುಷ್ಟಸ್ವಭಾವವುಳ್ಳ, ವನೇ-ಅರಣ್ಯದಲ್ಲಿ, ವಿಚರತಾ-ಸಂಚರಿಸುತ್ತಿರುವ, ಏತೇನಮಾರೀ
ಚೇನ-ಈ ಮಾರೀಚನಿಂದ, ಪೂರ್ವಂ-ಪೂರ್ವದಲ್ಲಿ, ಮುನಿಪುಂಗವಾಃ-ಶ್ರೇಷ್ಠರಾದ ಋಷಿಗಳು, ನಿಹಿಂಸಿತಾಃಹಿ-ಕೊಲ್ಲಲ್ಪಟ್ಟರಷ್ಟೇ ॥೩೮॥

---

ಅಪೂರ್ವವಾದ ವಸ್ತುವನ್ನಿಚ್ಛಿಸುವ ಪುರುಷನು ಆಲೋಚನೆಯಂ ಗೈಯ್ಯದಿರುವವನಾಗಿ, ಯಾವ ಅರ್ಥಸಾಧಕ
ದ ಪ್ರಯತ್ನದಿಂದ ಪ್ರವರ್ತಿಸುವನೋ, ಅಂಥಾ ಅರ್ಥವಾದ ಚರ್ಮದಲ್ಲಿ, ಜನಕನಂದಿನಿಯಾದ ಸೀತಾದೇವಿ
ಯು ನನ್ನೊಡನೆ ಕುಳಿತುಕೊಳ್ಳುವಳು, ಈ ಚರ್ಮದ ಸ್ಪರ್ಶದಂತೆ ಮೃದುವಾಗಿ, "ಕದಳೀ," ಎಂಬ ಚಿಗ
ರಿಯ ಚರ್ಮವಾಗಲೀ, "ಪ್ರವೇಣಿ" ಎಂಬ ಮೃಗವಿಶೇಷದ ಚರ್ಮವಾಗಲೀ, ಯಾವದೂ ಇಲ್ಲ ॥೩೫॥ ಎಲೈ ಲ
ಕ್ಷ್ಮಣನೇ! ಬೆಳಗುತ್ತಿರುವ ಈ ಮೃಗವೂ ದೇವತಾಸಂಬಂಧವಾಗಿಯೂ ಗಗನದಲ್ಲಿ ಸಂಚರಿಸುವ ಮೃಗವೂ ಸಹ
ಯಾವದೋ, ಅಂಥಾ ಈ ಭೂಲೋಕದ ಮೃಗವು ಗಗನದಲ್ಲಿರುವ ಮೃಗಶಿರಾ ನಕ್ಷತ್ರವೂ ಸಹಾ ಮನಸ್ಸಿಗೆ ಬಹು
ಆನಂದವಂ ಗೈಯ್ಯುವವು ॥೩೬॥ ಎಲೈ ಲಕ್ಷ್ಮಣನೇ! ಪೊಂದುವೇಳೆ ಇದು ಮಾರೀಚನ ಮಾಯೆ ಯೆಂದು ನೀ
ನು ನುಡಿದಂತೆಯೇ ಆದರೆ, ಇದು ಮೃಗವಲ್ಲದಿದ್ದರೆ, ಇದರ ಸಂಹಾರವೇ ಅವಶ್ಯಕವಾಗಿ ಮಾಡತಕ್ಕದ್ದು ॥೩೭॥
ಘಾತಕನಾಗಿಯೂ ದುರ್ಬುದ್ಧಿಯುಳ್ಳವನಾಗಿಯೂ ಇರುವ ಈ ಮಾರೀಚನಿಂದ ಪೂರ್ವದಲ್ಲಿ ಅನೇಕ ಮುನಿಗಳು
ಸಂಹರಿಸಲ್ಪಟ್ಟರಲ್ಲವೆ, ಮತ್ತು ಇವನ ಸಂಗಡ ಶೇರಿ ಮಹಾ ಧನುರ್ಧಾರಿಗಳಾದ ಯಾವಯಾವ ರಾಜರು ಹತರಾದ
ರೋ, ಆದ್ದರಿಂದ ಈ ಮೃಗವು ಸಂಹಾರಕ್ಕೆ ಯೋಗ್ಯವಾದದ್ದೇ ಸರಿ ॥೩೮॥ ಪೂರ್ವದಲ್ಲಿ ಈ ವನದಲ್ಲಿ ವಾತಾಪಿ

ಸ್ತ್ವಯಾಯಂ ಮೃಗಃ ।೩೯। ಪುರಸ್ತಾದಿಹ ವಾತಾಪಿಃ ಪರಿಭೂಯ ತಪಸ್ವಿನಃ । ಉದರಸ್ಥೋ ದ್ವಿಜಾನ್ ಹಂತಿ ಸ್ವಗರ್ಭೋಶ್ವತರೀ
ಮಿವ ।೪೦। ಸ ಕದಾಚಿಚ್ಚಿರಾಲ್ಲೋಭಾದಾಸಸಾದ ಮಹಾಮುನಿಂ । ಅಗಸ್ತ್ಯಂ ತೇಜಸಾಯುಕ್ತಂ ಭಕ್ಷಸ್ತಸ್ಯ ಬಭೂ
ವಹ ।೪೧॥ ಸಮುತ್ಥಾನೇ ಚ ತದ್ರೂಪಂ ಕರ್ತುಕಾಮಂ ಸಮೀಕ್ಷ್ಯ ತಂ । ಉತ್ಸ್ಮಯಿತ್ವಾ ತು ಭಗವಾನ್ ವಾತಾಪಿಮಿದ
ಮಬ್ರವೀತ್ ।೪೨। ತ್ವಯಾವಿಗಣ್ಯ ವಾತಾಪೇ ಪರಿಭೂತಾಸ್ಸ್ವತೇಜಸಾ । ಜೀವಲೋಕೇ ದ್ವಿಜಶ್ರೇಷ್ಠಾಸ್ತಸ್ಮಾದಸಿ ಜರಾಂಗ
ತಃ ॥೪೩॥ ಏವಂ ತನ್ನ ಭವೇದ್ರಕ್ಷೋ ವಾತಾಪಿರಿವ ಲಕ್ಷ್ಮಣ । ಮದ್ವಿಧಂ ಯೋತಿಮನ್ಯೇತ ಧರ್ಮನಿತ್ಯಂ ಜಿತೇಂದ್ರಿಯಂ ।೪೪॥
ಭವೇದ್ಧತೋಯಂ ವಾತಾಪಿರಗಸ್ತ್ಯೇನೇವ ಮಾಂಗತಃ ।೪೫॥ ಇಹ ತ್ವಂ ಭವ ಸನ್ನದ್ಧೋ ಯಂತ್ರಿತೋ ರಕ್ಷ ಮೈಥಿಲೀಂ ।
ಅಸ್ಯಾಂ ಪತಾಯತ್ತಮಸ್ಮಾಕಂ ಯತ್ಕೃತ್ಯಂ ರಘುನಂದನ ।೪೬॥ ಅಹಮೇನಂ ವಧಿಷ್ಯಾಮಿ ಗ್ರಹೀಷ್ಯಾಮ್ಯಪಿ ವಾ ಮೃ

---

ಪರಮೇಷ್ವಾಸಾಃ-ಶ್ರೇಷ್ಠವಾದ ಧನುರ್ಧಾರಿಗಳಾದ, ಬಹವಃ-ಅನೇಕರಾದ, ಜನಾಧಿಪಾಃ-ಅರಸುಗಳು. ಮೃಗಯಾಯಾಂ-ಬ್ಯಾಟೆಯಲ್ಲಿ, ಉದ್ಯು-
ಕ್ತಾಃ. ಯೇನ-ಯಾವ ಮಾರೀಚನಿಂದ ನಿಹತಾಃ-ಹೊಡೆಯಲ್ಪಟ್ಟರೋ, ತಸ್ಮಾತ್-ಆಕಾರಣದದೆಸೆಯಿಂದ, ಅಯಂ ಮೃಗಃ-ಈ ಮೃಗವು, ವಧ್ಯಃ-
ಸಂಹಾರಯೋಗ್ಯವಾಗಿರು ॥೩೯॥ ಪುರಸ್ತಾತ್- ಪೂರ್ವದಲ್ಲಿ ಇಹ-ಈ ವನದಲ್ಲಿ, ವಾತಾಪಿಃ-ವಾತಾಪಿ ಎಂಬ ರಕ್ಕಸನು, ಉದರಸ್ಥಃ-ಹೊಟ್ಟೆಯಲ್ಲಿದ್ದವ
ನಾಗಿ, ತಪಸ್ವಿನಃ-ತಪೋವಂತರಾದ ಋಷಿಗಳನ್ನು. ಸ್ವಗರ್ಭಃ-ತನ್ನ ಗರ್ಭವು, ಅಶ್ವತರೀಮಿವ-ಹೇಸರಕತ್ತೆಯನ್ನು ಹಾಗೆ, ಪರಿಭೂಯ-ತಿರಸ್ಕರಿಸಿ, ದ್ವಿಜಾನ್-
ಬ್ರಾಹ್ಮಣರನ್ನು. ಹಂತಿ-ಹೊಡೆದನು ॥೪೦॥ ಸಃ-ಆ ವಾತಾಪಿಯು, ಕದಾಚಿತ್-ಒಂದಾನೊಂದು ವ್ಯಾಳ್ಯೆಯಲ್ಲಿ, ಚಿರಾತ್-ಬಹುಕಾಲಕ್ಕೆ, ಲೋಭಾತ್-ಆಸ
ಕ್ತಿಯದೆಸೆಯಿಂದ, ಮಹಾಮುನಿಂ-ಮಹರ್ಷಿಯಾದ, ತೇಜಸಾ-ತಪಃಪ್ರಭಾವದಿಂದ, ಯುಕ್ತಂ-ಕೂಡಿಕೊಂಡಿರುವ, ಅಗಸ್ತ್ಯಂ-ಅಗಸ್ತ್ಯಮಹಾ
ಮುನಿಯನ್ನು, ಆಸಸಾದ-ಹೊಂದಿದನು, ತಸ್ಯ-ಆ ಅಗಸ್ತ್ಯಮಹಾಮುನಿಗೆ, ಭಕ್ಷಃ-ಭಕ್ಷ್ಯವಾದ ಆಹಾರವು, ಬಭೂವಹ-ಆದನಷ್ಟೆ ॥೪೧॥
ಸಮುತ್ಥಾನೇ-ಶ್ರಾದ್ಧಾಂತ್ಯದಲ್ಲಿ. ತದ್ರೂಪಂ-ಆ ರಕ್ಕಸರೂಪವನ್ನು. ಕರ್ತುಕಾಮಂ-ಮಾಡಲಿಚ್ಛೆಯುಳ್ಳ. ತಂ-ಆ ವಾತಾಪಿಯನ್ನು. ಸಮೀಕ್ಷ್ಯ-ಕಂ
ಡು. ಭಗವಾನ್-ಪೂಜ್ಯನಾದ ಅಗಸ್ತ್ಯಋಷಿಯು, ಉತ್ಸ್ಮಯಿತ್ವಾ-ನಕ್ಕು, ವಾತಾಪೇ-ಎಲೈ ವಾತಾಪಿಯೇ, ಯಸ್ಮಾತ್-ಯಾವ ಕಾರಣದದೆಸೆಯಿಂದ,
ಅವಿಗಣ್ಯ-ಲಕ್ಷ್ಯಮಾಡದೆ, ತ್ವಯಾ-ನಿನ್ನಿಂದ, ಜೀವಲೋಕೇ-ಪ್ರಾಣಿಲೋಕದಲ್ಲಿ, ಸ್ವತೇಜಸಾ-ನಿನ್ನ ಸಾಮರ್ಥ್ಯದಿಂದ, ದ್ವಿಜಶ್ರೇಷ್ಠಾಃ-ಶ್ರೇಷ್ಠರಾದ
ಬ್ರಾಹ್ಮಣರು, ಪರಿಭೂತಾಃ-ತಿರಸ್ಕರಿಸಲ್ಪಟ್ಟರೋ. ತಸ್ಮಾತ್-ಆಕಾರಣದದೆಸೆಯಿಂದ, ಜರಾಂ-ಜೀರ್ಣಾವಸ್ಥೆಯನ್ನು, ಗತಃ-ಹೊಂದಿದವು, ಅಸಿ-
ಆದೆ. ಇದಂ-ಈ ಮಾತನ್ನು, ಅಬ್ರವೀತ್-ನುಡಿದನು ॥೪೩॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ತದ್ರಕ್ಷಃ-ಆ ರಕ್ಕಸನು, ಏವಂ-
ಈಪರಿಯಾಗಿ, ನಭವೇತ್-ಆಗದಿರುವನೇ, ಯಃ-ಯಾವ ರಕ್ಕಸನು, ಧರ್ಮನಿತ್ಯಂ-ಧರ್ಮದಲ್ಲೇ ನಿತ್ಯಬುದ್ಧಿಯುಳ್ಳ, ಜಿತೇಂದ್ರಿಯಂ-ಜಯಿ
ಸಲ್ಪಟ್ಟ ಇಂದ್ರಿಯವ್ಯಾಪಾರವುಳ್ಳ, ಮದ್ವಿಧಂ-ನನ್ನಂಥಾವನನ್ನು. ಅತಿಮನ್ಯೇತ-ಅತಿಕ್ರಮಿಸುವನೋ, ಅಯಂ-ಈ ರಕ್ಕಸನು, ಮಾಂ-ನನ್ನನ್ನು.
ಗತಃ-ಹೊಂದಿದವನಾಗಿ. ಅಗಸ್ತ್ಯೇನ-ಅಗಸ್ತ್ಯಋಷಿಯಿಂದ, ವಾತಾಪಿರ್ವಾ-ವಾತಾಪಿಯಂತೆ. ಹತಃ-ಹೊಡೆಯಲ್ಪಟ್ಟವನು, ಭವೇತ್-ಆಗುವನು ॥೪೪॥
ಹೇರಘುನಂದನ-ಎಲೈ ರಘುಕುಲಾನಂದಕರನೇ, ತ್ವಂ-ನೀನು, ಸನ್ನದ್ಧಃ-ಧನುಸ್ಸು ಕವಚವೇ ಮೊದಲಾದುಳ್ಳ ಸಾಮಗ್ರಿಗಳಿಂದ ಯುಕ್ತನಾಗಿ, ಭವ-ಇರು,
ಯಂತ್ರಿತಃ-ಆಕ್ಷೇಪವಿಲ್ಲದೆ ಆಜ್ಞಾಬದ್ಧನಾಗಿ. ಮೈಥಿಲೀಂ-ಸೀತಾದೇವಿಯನ್ನು, ರಕ್ಷ-ಸಂರಕ್ಷಿಸು, ಅಸ್ಮಾಕಂ-ನಮ್ಮಗಳ, ಕೃತ್ಯಂ-ಕಾರ್ಯವು, ಯತ್-
ಯಾವುದೋ. ತತ್-ಆ ಕಾರ್ಯವು, ಅಸ್ಯಾಂ-ಈ ಸೀತಾದೇವಿಯ ರಕ್ಷಣೆಯವಿಷಯದಲ್ಲಿ. ಆಯತ್ತಂ-ಅಧೀನವಾಗಿದೆ ॥೪೫॥ ಏನಂ-ಈ ಮೃಗವನ್ನು,
ಅಹಂ-ನಾನು, ವಧಿಷ್ಯಾಮಿ-ಸಂಹರಿಸುವೆನು, ಅಥವಾ-ಹಾಗಲ್ಲದಿದ್ದರೋ ಆಗ. ಮೃಗಂ-ಮೃಗವನ್ನು, ಗ್ರಹೀಷ್ಯಾಮ್ಯಪಿ-ಹಿಡಿದುಕೊಂಡಾದರೂ ಹಿ

---

ಯೆಂಬವನು, ಚೇಳಿನಮೊಟ್ಟೆಗಳು ವೃಶ್ಚಿಕದೊಡ್ಡ ಚೇಳನ್ನು ಕೊಲ್ಲುವಂತೆ ಹೊಟ್ಟೆಯಲ್ಲಿರುವವನಾಗಿ ಋಷಿಗಳನ್ನೂ ಬ್ರಾ
ಹ್ಮಣಶ್ರೇಷ್ಠರನ್ನೂ ಸಹ ಕೊಂದನು ಆ ವಾತಾಪಿಯು ಈ ಪ್ರಕಾರ ಬಹುಕಾಲದವರಿಗೂ ಮಾಡುತ್ತಾ ಒಂದಾನೊಂದು ಕಾ
ಲದಲ್ಲಿ ಆಶೆಯಿಂದಾ ಮಹರ್ಷಿಯಾದ ಅಗಸ್ತ್ಯಮುನಿಯನ್ನೈದಿದ ಮತ್ತು ಅಗಸ್ತ್ಯಮುನಿಯಿಂದ ಗ್ರಾಸಂ ಗೈಯ್ಯ
ಲ್ಪಟ್ಟ ಇಲ್ವಲನನ್ನು] ಪುನಃ ರಾಕ್ಷಸನಂ ಗೈಯ್ಯಲಿಚ್ಛೆಯುಳ್ಳವನಾಗಲೂ, ಆಗ ಆ ಮಹಾಮುನಿಯು ಆ ವಾತಾ
ಪಿಯನ್ನು ಕಂಡು ನಸುನಗೆಯುಳ್ಳವನಾಗಿ, ಎಲೈ ವಾತಾಪಿಯೇ! ಯಾವ ಕಾರಣ ನೀನು ನಿನ್ನ ಸಾಮರ್ಥ್ಯದಿಂದ
ಬ್ರಾಹ್ಮಣರಂ ಲಕ್ಷ್ಯಂಗೈಯ್ಯದೆ ತಿರಸ್ಕಾರವಂ ಮಾಡಿದವನಾದೆಯೋ, ಆದ್ದರಿಂದ ಜೀರ್ಣಾವಸ್ಥೆಯನ್ನೈದಿದವನಾದೆ
ನೆಂದು ಪೇಳಿದನು ॥೪೩॥ ಎಲೈ ಲಕ್ಷ್ಮಣನೇ! ವಾತಾಪಿಯಂತೆ ಆ ಮಾರೀಚನು ಆಗದಿರುವನೇ ಯೇನು, ಧರ್ಮಬುದ್ಧಿ
ಯುಳ್ಳ, ಜಿತೇಂದ್ರಿಯನಾದ ನನ್ನಂಥಾವನನ್ನು ಯಾವನು ಮೀರುವನೋ, ಅಂಥಾ ಇವನು ನನ್ನನ್ನೈದಿದವನೇ
ಆದರೇ, ಅಗಸ್ತ್ಯಮುನಿಯಿಂದ ವಾತಾಪಿಯು ವಧೆಯನ್ನೈದಿದಂತೆ ಇವನೂ ಸಹ ಮರಣವನ್ನೈದುವನು ॥೪೪॥
ಎಲೈ ಅನುಜನೇ! ನೀನು ಸನ್ನದ್ಧನಾಗಿ ನನ್ನ ಆಜ್ಞಾಬದ್ಧನಾಗಿಯೂ ಸೀತಾದೇವಿಯಂ ರಕ್ಷಿಸುತ್ತಿರು, ಈಕೆಯ ಸಂ
ರಕ್ಷಣೆಯೇ ನಮ್ಮ ಕಾರ್ಯವಾಗಿರುವದು, ಇದು ಮೃಗವಾದರೆ, ಇದಂ ತೆಗೆದುಕೊಂಡು ಬರುವೆನು, ಅಲ್ಲದಿದ್ದರೆ

ಗಂ । ಯಾವದ್ಗಚ್ಛಾಮಿ ಸೌಮಿತ್ರೇ ಮೃಗಮಾನಯಿತುಂ ದ್ರುತಂ ॥೪೬॥ ಪಶ್ಯ ಲಕ್ಷ್ಮಣ ವೈದೇಹೀಂ ಮೃಗತ್ವಚಿ ಗತಸ್ಪೃಹಂ । ತ್ವಚಾ ಪ್ರಧಾನಯಾ ಹ್ಯೇಷ ಮೃಗೋಽದ್ಯ ನ ಭವಿಷ್ಯತಿ ॥೪೭॥ ಅಪ್ರಮತ್ತೇನ ತೇ ಭಾವ್ಯಮಾಶ್ರಮಸ್ಥೇನ ಸೀತಯಾ । ಯಾವತ್ಪೃಷತಮೇಕೇನ ಸಾಯಕೇನ ನಿಹನ್ಮ್ಯಹಂ । ಹತ್ವೈತಚ್ಚರ್ಮ ಆದಾಯ ಶೀಘ್ರಮೇಷ್ಯಾಮಿ ಲಕ್ಷ್ಮಣ ॥೪೮॥ ಪ್ರದಕ್ಷಿಣೇನಾತಿಬಲೇನ ಪಕ್ಷಿಣಾ ಜಟಾಯುಷಾ ಬುದ್ಧಿಮತಾ ಚ ಲಕ್ಷ್ಮಣ । ಭವಾಪ್ರಮತ್ತಃ ಪರಿಗೃಹ್ಯ ಮೈಥಿಲೀಂ ಪ್ರತಿಕ್ಷಣಂ ಸರ್ವತ ಏವ ಶಂಕಿತಃ ॥೪೯॥

—*** ಇತಿ ಶ್ರೀಮದಾರಣ್ಯಕಾಂಡೇ ತ್ರಿಚತ್ವಾರಿಂಶಸ್ಸರ್ಗಃ. ***—

ತಥಾ ತು ತಂ ಸಮಾದಿಶ್ಯ ಭ್ರಾತರಂ ರಘುನಂದನಃ । ಬಬಂಧಾಸಿಂ ಮಹಾತೇಜಾ ಜಾಂಬೂನದಮಯತ್ಸರುಂ ॥೧॥ ತತಸ್ತ್ರ್ಯವನತಂ ಚಾಪಮಾದಾಯಾತ್ಮವಿಭೂಷಣಂ । ಆಬಧ್ಯ ಚ ಕಲಾಪೌ ದ್ವೌ ಜಗಾಮೋದಗ್ರವಿಕ್ರಮಃ ॥೨॥ ತಂ ವಂಚಯಾನೋ ರಾಜೇಂದ್ರಮಾಪತಂತಂ ನಿರೀಕ್ಷ್ಯ ವೈ । ಬಭೂವಾಂತರ್ಹಿತಸ್ತ್ರಾಸಾತ್ಪುನಸ್ಸಂದರ್ಶನೇಽಭವತ್ । ಬದ್ಧಾಸಿರ್ಧನುರಾದಾಯ ಪ್ರದುದ್ರಾವ ಯತೋ ಮೃಗಃ ॥೩॥ ತಂ ಸ್ಮ ಪಶ್ಯತಿ ರೂಪೇಣ ದ್ಯೋತಮಾನಮಿವಾಗ್ರತಃ । ಅ

---

ಆನಯಿತುಂ–ತರುವದಕ್ಕಾಗಿ, ದ್ರುತಂ–ಜಾಗ್ರತೆಯಾಗಿ. ಯಾವತ್–ಎದುಕೊಳ್ಳುತ್ತೇನೆ, ಹೇಸೌಮಿತ್ರೇ–ಎಲೈ ಲಕ್ಷ್ಮಣನೇ. ಮೃಗಂ–ಮೃಗವನ್ನು ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಮೃಗತ್ವಚಿ–ಮೃಗಚರ್ಮದಲ್ಲಿ ಗತಸ್ಪೃಹಾಂ–ಹೊಂದಿದ ಆಶೆಯುಳ್ಳ, ವೈದೇಹೀಂ–ಸೀತಾದೇವಿಯನ್ನು. ಪಶ್ಯ–ನೋಡು. ಎಷ್ಟರೊಳಗಾಗಿ, ಗಚ್ಛಾಮಿ–ಹೋಗುವೆನೋ ॥೪೬॥ ಏಷಮೃಗಃ–ಈ ಮೃಗವು, ಅದ್ಯ–ಈಗ, ಪ್ರಧಾನಯಾ–ಮುಖ್ಯವಾದ, ತ್ವಚಾ–ಚರ್ಮದಿಂದ. ನಭವಿಷ್ಯತಿ–ಇರಲಾರದು ॥೪೭॥ ಸೀತಯಾ–ಸೀತಾದೇವಿಯ ನಿಮಿತ್ತವಾಗಿ, ಆಶ್ರಮಸ್ಥೇನ–ಆಶ್ರಮದಲ್ಲಿರುವ, ತೇ–ನಿನ್ನಿಂದ, ಅಪ್ರಮತ್ತೇನ–ಪ್ರಮಾದವಂ ಹೊಂದದಿರುವನಿಂದ, ಭಾವ್ಯಂ–ಇರತಕ್ಕದ್ದು, ಹೇಲಕ್ಷ್ಮಣ–ಎಲೋ ಲಕ್ಷ್ಮಣನೇ, ಪೃಷತಂ–ಜಿಂಕೆಯನ್ನು, ಏಕೇನ ಸಾಯಕೇನ–ಒಂದೇಬಾಣದಿಂದ, ಅಹಂ–ನಾನು, ಯಾವನ್ನಿಹನ್ಮಿ–ಎಷ್ಟರೊಳಗೆ ಹೊಡೆಯುವೆನೋ, ಪೃಷತಂ–ಜಿಂಕೆಯ ಸಂಬಂಧವಾದ, ಚರ್ಮವನ್ನು, ಆದಾಯ–ತೆಗೆದುಕೊಂಡು, ಶೀಘ್ರಂ–ಜಾಗ್ರತೆಯಾಗಿ, ಏಷ್ಯಾಮಿ–ಬರುತ್ತೇನೆ ॥೪೮॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಪ್ರದಕ್ಷಿಣೇನ–ಬಹಳ ಸಮರ್ಥನಾದ, ಅತಿಬಲೇನ–ಬಹಳ ಬಲಾಢ್ಯನಾದ, ಬುದ್ಧಿಮತಾ–ಪ್ರಜ್ಞಾವಂತನಾದ, ಜಟಾಯುಷಾ–ಜಟಾಯುವೆಂಬ, ಪಕ್ಷಿಣಾಸಹ–ಗೃಧ್ರದೊಡಗೂಡ, ಮೈಥಿಲೀಂ–ಸೀತಾದೇವಿಯನ್ನು, ಪರಿಗೃಹ್ಯ–ಸಂರಕ್ಷಣೆಮಾಡಿಕೊಂಡು, ಪ್ರತಿಕ್ಷಣಂ–ಪ್ರತಿಕ್ಷಣದಲ್ಲಿಯೂ, ಸರ್ವತ ಏವ–ಸರ್ವದಿಕ್ಕುಗಳಲ್ಲಿ, ಶಂಕಿತಃ–ಭಯಗೊಂಡವನಾಗಿ, ಅಪ್ರಮತ್ತಃ–ಮೋಸಹೋಗದಿರುವನಾಗಿ, ಭವ–ಇರು॥ —**ತ್ರಿಚತ್ವಾರಿಂಶಸ್ಸರ್ಗಃ**—

ರಘುನಂದನಃ–ಶ್ರೀರಾಮನು, ಭ್ರಾತರಂ–ತಮ್ಮನಾದ, ತಂ–ಆ ಲಕ್ಷ್ಮಣನನ್ನು ಕುರಿತು. ತಥಾ ಸಮಾದಿಶ್ಯ–ಆಪರಿಯಾಗಿ ಯಾಜ್ಞಾಪಿಸಿ. ಮಹಾತೇಜಾಃ–ಮಹಾಪರಾಕ್ರಮವಂತನಾದ. ಜಾಂಬೂನದಮಯತ್ಸರುಂ–ಭಂಗಾರವಿಕಾರವಾದ ಪಿಡಿಯುಳ್ಳ, ಅಸಿಂ–ಖಡ್ಗವನ್ನು, ಬಬಂಧ–ಕಟ್ಟಿದನು ॥೧॥ ತತಃ–ಬಳಿಕ. ಉದಗ್ರವಿಕ್ರಮಃ–ಉತ್ಕೃಷ್ಟವಾದ ಪರಾಕ್ರಮವುಳ್ಳ ಶ್ರೀರಾಮನು. ಆತ್ಮವಿಭೂಷಣಂ–ತನಿಗೆ ಅಲಂಕಾರಪ್ರಾಯವಾದ, ತ್ರ್ಯವನತಂ–ಮೂರುಬಗೆ ಕೊಂಕಿಗಳುಳ್ಳ, ಚಾಪಂ–ಬಿಲ್ಲಿನನ್ನು, ಆದಾಯ–ತೆಗೆದುಕೊಂಡು, ದ್ವೌಕಲಾಪೌ–ಎರಡು ಬತ್ತಳಿಕೆಗಳನ್ನು, ಆಬಧ್ಯ–ಕಟ್ಟಿಕೊಂಡು, ಜಗಾಮ–ತೆರಳಿದನು ॥೨॥ ಆಪತಂತಂ–ಬರುತ್ತಿರುವ, ರಾಜೇಂದ್ರಂ–ರಾಜರಿಗೆ ಇಂದ್ರಪ್ರಾಯನಾದ, ತಂ–ಆ ಶ್ರೀರಾಮನನ್ನು, ವಂಚಯಾನಃ–ವಂಚಿಸುತ್ತಿರುವನಾಗಿ, ತ್ರಾಸಾತ್–ಭಯಪಡಡೆಶೆಯಿಂದ, ಅಂತರ್ಹಿತಃ–ಅಂತರ್ಧಾನವನ್ನು ಹೊಂದಿದವನು, ಬಭೂವ–ಆದನು. ಪುನಃ ಸಂದರ್ಶನೇ–ದೃಷ್ಟಿಯಲ್ಲಿ. ಅಭವತ್–ಆದನು, ಮೃಗಃ–ಮೃಗವು, ಯತಃ–ಎಲ್ಲಿ, ಅಸ್ತಿ–ಇಥೆಯೋ, ತತ್ರ–ಅಲ್ಲಿ. ಬದ್ಧಾಸಿಃ–ಕಟ್ಟಿದ ಮತ್ತು.

---

ಸಂಹಾರವಂ ಗೈಯ್ಯುವೆನು, ನಾನೀ ಕಾರ್ಯಕ್ಕೆ ಪೋಗಿಬರುವವರಿಗೂ ನೀನೆಲ್ಲಿಯೂ ಪೋಗಬೇಡ ಸೀತೆಯಂ ಕಾದು ಕೊಂಡಿರು, ಈ ಮೃಗದಲ್ಲಿ ಈಕೆಗಿರುವ ಇಚ್ಛೆಯಂ ನೋಡಿದೆಯೋ, ಬಹು ತರವಾಗಿ ಈ ಮೃಗವು ಚರ್ಮದಿಂದಿಲಾರದು, ಆದ್ದರಿಂದ ಇದಂ ಪೊಂದು ಬಾಣದಿಂದ ನಾನು ಕೊಂದು ತರುವ ವರಿಗೂ ನೀನು ಬಹು ಜಾಗರೂಕನಾಗಿ ಆಶ್ರಮದಲ್ಲಿಯೇ ಇರಬೇಕು ।೪೮। ಎಲೈ ಲಕ್ಷ್ಮಣನೇ! ಮಹಾಸಮರ್ಥನಾದ ಬಹು ಬುದ್ಧಿಮಂತನಾದ ಜಟಾಯುವಿನಿಂದೊಡಗೂಡಿದ ಈ ಸೀತಾದೇವಿಯು ಸುತ್ತುಮುತ್ತಲೂ ಸಂಚಾರವಂ ಗೈಯ್ಯುತ್ತಾ ಜಾಗರೂಕನಾಗಿ ಎಂದು ನುಡಿದನು ॥೪೯॥

—*ಆರಣ್ಯಕಾಂಡದಲ್ಲಿನ ೪೩ ನೆಯ ಸರ್ಗಂ ಮುಗಿದುದು*—

ಅನಂತರದಲ್ಲಿ ಮಹಾ ತೇಜೋವಂತನಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನಂ ಕುರಿತು ಈ ರೀತಿಯಾಗಿ ಆ ಜ್ಞಾಪನೆಯಂ ಗೈದು ತಾನು ಸುವರ್ಣವಿಕಾರವಾದ ಪಿಡಿಯುಳ್ಳ ಖಡ್ಗವಂ ಸೊಂಟದಲ್ಲಿ ಕಟ್ಟಿಕೊಂಡು ತನಗೆ ಅಲಂಕಾರ ಪ್ರಾಯವಾಗಿರುವ ಮತ್ತು ಮೂರು ಕೊಂಕಿಗಳುಳ್ಳ ಧನುರ್ದಂಡವನ್ನು ಯೆರಡು ಬತ್ತಳಿಕೆಗಳನ್ನು, ಸಹ ತೆಗದುಕೊಂಡು ಸಾರಿದವನಾಗಲೂ, ಆ ಮಾಯಾಮೃಗವು ತನ್ನನ್ನಟ್ಟಬರುತಿರುವ ಆ ಶ್ರೀರಾಮನಂ ಕಂಡು ಭೀತಿಯಿಂದ ತಾನು ಬಿತುಕೊಂಡದ್ದಾಗಿ, ಪುನಃ ದೃಷ್ಟಿಗೆ ಕಾಣಲ್ಪಟ್ಟಿತು. ಅನಂತರದಲ್ಲಿ ಶ್ರೀರಾಮನು ಓಡಿಪೋಗ

ವೇಕ್ಷ್ಯಾವೇಕ್ಷ್ಯ ಧಾವಂತಂಧನುಷ್ಪಾಣಿಂಮಹಾವನೇ । ಅತಿವೃತ್ತಮಿಷೋಃಪಾತಾಲ್ಲೋಭಯಾನಂಕದಾಚನ । ಶಂಕಿತಂತುಸಮುದ್ಭ್ರಾಂತಮುತ್ಪತಂತಮಿವಾಂಬರೇ । ದೃಶ್ಯಮಾನಮದೃಶ್ಯಂಚವನೋದ್ದೇಶೇಷುಕೇಷುಚಿತ್ । ಛಿನ್ನಾಭ್ರೈರಿವಸಂವೀತಂಶಾರದಂಚಂದ್ರಮಂಡಲಂ ॥೬॥ ಮುಹೂರ್ತಾದೇವದದೃಶೇಮುಹುರ್ದೂರಾತ್ಪ್ರಕಾಶತೇ । ದರ್ಶನಾದರ್ಶನಾದೇವಂಸೋಪಾಕರ್ಷತರಾಘವಂ । ಸುದೂರಮಾಶ್ರಮಸ್ಯಾಸ್ಯಮಾರೀಚೋಮೃಗತಾಂಗತಃ ॥೮॥ ಆಸೀತ್ಕ್ರುದ್ಧಸ್ತುಕಾಕುತ್ಸ್ಥೋವಿವಶಸ್ತೇನಮೋಹಿತಃ । ಅಥಾವತಸ್ಥೇಸಂಭ್ರಾಂತಶ್ಛಾಯಾಮಾಶ್ರಿತ್ಯಶಾದ್ವಲೇ ॥೯॥ ಸತಮುನ್ಮಾದಯಾಮಾಸಮೃಗರೂಪೋನಿಶಾಚರಃ । ಮೃಗೈಃಪರಿವೃತೋವನ್ಯೈರದೂರಾತ್ಪ್ರತ್ಯದೃಶ್ಯತ ॥೧೦॥ ಗ್ರಹೀತುಕಾಮಂದೃಷ್ಟ್ವೈನಂಪುನರೇವಾಭ್ಯಧಾವತ । ತತ್ಕ್ಷಣಾದೇವಸಂತ್ರಾಸಾತ್ಪುನರಂತರ್ಹಿತೋಽಭವತ್ ॥೧೧॥ ಪುನರೇವತತೋದೂರಾ

---

ಟ್ಟ ಪಟ್ಟಾಕತ್ತಿಯುಳ್ಳವನಾಗಿ, ಧನುಃ-ಬಿಲ್ಲಿನನ್ನು, ಆದಾಯ-ತೆಗದುಕೊಂಡು, ಪರಿದುದ್ರಾವ-ಓಡಿಹೋದನು ॥೪॥ ರೂಪೇಣ-ಕಾಂತಿಯಿಂದ ಅಗ್ರತಃ-ಮುಂದುಗಡೆ, ಜ್ಯೋತಮಾನಮಿವ-ಪ್ರಕಾಶಿಸುವಂತಿರುವ, ತಂ-ಆ ಮೃಗವನ್ನು, ಪಶ್ಯತಿಸ್ಮ-ನೋಡಿದನಷ್ಟೆ, ಮಹಾವನೇ-ದೊಡ್ಡಅರಣ್ಯದಲ್ಲಿ, ಧನುಷ್ಪಾಣಿಂ-ಧನುರ್ಧಾರಿಯಾದ ಶ್ರೀರಾಮನನ್ನು, ಅವೇಕ್ಷ್ಯಾವೇಕ್ಷ್ಯ-ನೋಡಿನೋಡಿ, ಧಾವಂತಂ-ಓಡಿಹೋಗುತ್ತಿರುವ, ಇಷೋಃ-ಬಾಣದ, ಪಾತಾತ್-ಬೀಳುವಿಕೆಯದೆಸೆಯಿಂದ, ಅತಿವೃತ್ತಂ-ಅತಿಕ್ರಮಿಸಿ, ಕದಾಚನ-ಒಂದಾನೊಂದುಕಡೆ, ಲೋಭಯಾನಂ-ಆಸಕ್ತನನ್ನಾಗಿ ಮಾಡುತ್ತಿರುವ, ಅಂಬರೇ-ಅಂತರಿಕ್ಷದಲ್ಲಿ, ಶಂಕಿತಂ-ಭಯಗೊಂಡದ್ದಾಗಿ, ಸಮುದ್ಭ್ರಾಂತಂ-ತಿರುಗುತ್ತಿರುವ, ಸಮುತ್ಪತಂತಮಿವ-ನೆಗೆದು ಕುಣಿದಾಡುತ್ತದೋ ಎಂಬಂತೆ, ಕೇಷುಚಿದ್ವನೋದ್ದೇಶೇಷು-ಕೆಲವನಪ್ರದೇಶಗಳಲ್ಲಿ, ದೃಶ್ಯಮಾನಂ-ಕಾಣಿಸುತ್ತಿರುವ, ಅದೃಶ್ಯಂಚ-ಕಾಣಿಸದಿರುವ, ಛಿನ್ನಾಭ್ರೈಃ-ಪ್ರತ್ಯೇಕ ಪ್ರತ್ಯೇಕಿಸಿದ ಮೇಘಗಳಿಂದ, ಸಂವೀತಂ-ಸುತ್ತಿಕೊಳ್ಳಲ್ಪಟ್ಟ, ಶಾರದಂ-ಶರತ್ಕಾಲದಲ್ಲಿ ಹುಟ್ಟಿದ, ಚಂದ್ರಮಂಡಲಮಿವ-ಚಂದ್ರಮಂಡಲವನ್ನಂತೆ, ಪಶ್ಯತಿ-ನೋಡಿದನಷ್ಟೆ ॥೬॥ ಸಃ-ಆ ಮೃಗವು, ಮುಹೂರ್ತಾದೇವ-ಒಂದು ಮುಹೂರ್ತಕಾಲದಲ್ಲಿಯೇ, ದದೃಶೇ-ಕಾಣಲ್ಪಟ್ಟಿತು, ಮುಹುಃ-ಬಾರಿಬಾರಿಗೂ, ದೂರಾತ್-ದೂರದಲ್ಲಿ, ಪ್ರಕಾಶತೇ-ಹೊಳೆಯುತ್ತಲಿದೆ, ದರ್ಶನಾದರ್ಶನಾದೇವ-ಕಂಡೂ ಕಾಣದಿರೋಣದರಿಂದ, ರಾಮಂ-ಶ್ರೀರಾಮನನ್ನು, ಅಪಾಕರ್ಷತ-ಯೆಳೆಯಿತು ॥೭॥ ಮಾರೀಚಃ-ಮಾರೀಚನು, ಅಸ್ಯಾಶ್ರಮಸ್ಯ-ಈ ಆಶ್ರಮಕ್ಕೆ, ಸುದೂರಂ-ಬಹಳ ದೂರದಲ್ಲಿ, ಮೃಗತಾಂ-ಮೃಗಭಾವವನ್ನು, ಗತಃ-ಹೊಂದಿದವನಾಗಿ, ರಾಘವಂ-ಶ್ರೀರಾಮನನ್ನು, ದೂರಾತ್-ಬಹುದೂರವಾಗಿ, ಅಪಕರ್ಷತ-ಎಳೆದನು ॥೮॥ ಕಾಕುತ್ಸ್ಥಃ-ಶ್ರೀರಾಮನು, ವಿವಶಃ-ಪರಾಧೀನನಾಗಿ, ತೇನ-ಆ ಮೃಗದಿಂದ, ಮೋಹಿತಃ-ಮೋಹಿಸಲ್ಪಟ್ಟವನಾಗಿ, ಕ್ರುದ್ಧಃ-ಕೋಪಿಷ್ಠನು, ಆಸೀತ್-ಆದನು, ಅಥ-ಬಳಿಕ, ಸಂಭ್ರಾಂತಃ-ಭ್ರಾಂತನಾಗಿ, ಛಾಯಾಂ-ನೆರಳನ್ನು, ಆಶ್ರಿತ್ಯ-ಆಶ್ರಯಿಸಿ, ಶಾದ್ವಲೇ-ಹುಲ್ಲಿನಲ್ಲಿ, ಅವತಸ್ಥೇ-ನಿಂತನು ॥೯॥ ಸಃ-ಆ, ಮೃಗರೂಪಃ-ಮೃಗರೂಪಧಾರಿಯಾದ, ನಿಶಾಚರಃ-ರಕ್ಕಸನು; ತಂ-ಆ ಶ್ರೀರಾಮನನ್ನು, ಉನ್ಮಾದಯಾಮಾಸ-ಉನ್ಮತ್ತನನ್ನಾಗಿ ಮಾಡಿದನು, ವನ್ಯೈಃ-ವನಸಂಬಂಧವಾದ, ಮೃಗೈಃ-ಮೃಗಗಳಿಂದ, ಪರಿವೃತಃ-ಸುತ್ತಲ್ಪಟ್ಟವನಾಗಿ, ಅದೂರಾತ್-ಸಮೀಪದಲ್ಲಿ, ಪ್ರತ್ಯದೃಶ್ಯತ-ಕಾಣಲ್ಪಟ್ಟನು ॥೧೦॥ ಗ್ರಹೀತುಕಾಮಂ-ಹಿಡಿದುಕೊಳ್ಳಲಿಚ್ಛೆಯುಳ್ಳ, ಏನಂ-ಈ ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಪುನರೇವ-ಮತ್ತೂ, ಅಭ್ಯಧಾವತ-ಓಡಿಹೋದನು, ತತ್ಕ್ಷಣಾದೇವ-ಆ ಕಾಲದಲ್ಲಿಯೇ, ಸಂತ್ರಾಸಾತ್-ಭಯದದೆಸೆಯಿಂದ, ಪುನಃ-ಮತ್ತು, ಅಂತರ್ಹಿತಃ-ಅಂತರ್ಧಾನವಂ ಹೊಂದಿದವನು, ಆಭವ

---

ದವನಾಗಲೂ, ಅದು ಅಲ್ಲಿಂದ ಮುಂದಕ್ಕೆ ಓಡಿತು ಅಲ್ಲಿಯೂ, ಸಹ ಒಂದವನಾಗಿ, ಕಡುರೂಪದಿಂದ ಕಂಗೊಳಿಸುವ ಆ ಮೃಗವನ್ನು ಕಂಡನು; ಈ ಪ್ರಕಾರವಾಗಿ ತನ್ನನ್ನಟ್ಟುಬರುವ ಶ್ರೀರಾಮನಂ ಕಂಡು ಬಾಣದಿಂದ ಹೊಡೆವನೋಯೇನೋ ಯೆಂದು, ಮುಂದು ಮುಂದು ಓಡುತ್ತಲೂ, ಭಯಬಿದ್ದು ಹಾರಿಹೋಗುತ್ತಲೂ, ಕುಣಿದಾಡುತ್ತಲೂ, ಕೆಲಸ್ಥಲದಲ್ಲಿ ಕಣ್ಣಿಗೆಕಾಣುತ್ತಲೂ, ಮತ್ತು ಕೆಲವುಕಡೆಯಲ್ಲಿ ಕಾಣದಂತೆಯೂ, ಇರುವದಾಗಿ, ಮೇಘಗಳಿಂದ ಆಚ್ಛಾದಿತವಾಗಿ, ಸ್ವಲ್ಪಹೊತ್ತು ಕಾಣುತ್ತಲೂ, ಮತ್ತು ಸ್ವಲ್ಪಹೊತ್ತು ಕಾಣದೆಯೂ, ಇರುವ ಚಂದ್ರಮಂಡಲವಂನೋಡಿದಂತೆ ಕಾಣುತ್ತಿತ್ತು ॥೬॥ ಈ ರೀತಿಯಾಗಿ, ಆ ಮಾಯಾಮೃಗವು ಸ್ವಲ್ಪಕಾಲ ಸುದೂರದಲ್ಲಿಕಾಣುತ್ತಲೂ, ಸ್ವಲ್ಪಹೊತ್ತು ಕಾಣದೆಯೂ, ಶ್ರೀರಾಮನನ್ನು, ಬಹುದೂರವು ಕಳೆದುಕೊಂಡುಹೋದಂಥಾದ್ದಾಯಿತು ॥೮॥ ಅನಂತರದಲ್ಲಿ ಶ್ರೀರಾಮನು ಈ ರೀತಿ ಆ ಮೃಗದಿಂದ ಮೋಹಿಸಲ್ಪಟ್ಟವನಾಗಿ, ಬಹು ದೂರತಿರುಗಿದಬಳಿಕ ಅತಿ ಕೋಪವನ್ನೈದಿ ತೃಣಸಮೃದ್ಧವಾದ ಒಂದಾನೊಂದು ಪ್ರದೇಶದಲ್ಲಿ ನಿಂತುಕೊಂಡನು, ॥೯॥ ಅನಂತರದಲ್ಲಿ ಮೃಗರೂಪವನ್ನೈದಿದ ಆ ಮಾರೀಚನು. ಶ್ರೀರಾಮನನ್ನು, ಉನ್ಮತ್ತನನ್ನಾಗಿ, ಮಾಡಿದನ ದೆಂತೆನೆ;— ಮಹಾಮಾಯಾವಿಯಾದ ಆ ಮಾರೀಚನು ಆ ವನದಲ್ಲಿರುವ ಮೃಗಂಗಳಿಂದ ಪರಿವೃತನಾಗಿ, ಸಮೀಪದಲ್ಲಿ ಕಾಣಲ್ಪಟ್ಟನು, ಅನಂತರದಲ್ಲಿ ಶ್ರೀರಾಮನು ಹಿಡಿದುಕೊಳ್ಳುವದಕ್ಕಾಗಿ, ಬಂದವನಾಗಲೂ, ಆ ತನಂಕಂಡು ಮತ್ತು ಓಡಿಹೋಗಿ, ತಕ್ಷ

ದೃಷ್ಟ್ವಾರಾಮೋಮಹಾತೇಜಾಸ್ತಂಹಂತುಂಕೃತನಿಶ್ಚಯಃ । ಭೂಯಸ್ತುಶರವತ್ತು
ದ್ವ್ಯಕ್ಷಷಂಡಾದ್ವಿನಿಸ್ಸೃತಂ । ದೃಷ್ಟ್ವಾರಾಮೋಮಹಾತೇಜಾಸ್ತಂಹಂತುಂಕೃತನಿಶ್ಚಯಃ । ಸಂಧಾಯಸುದೃಢೇಚಾಪೆ
ಸ್ಫುರ್ಕಂಪಿತಸ್ತತ್ರರಾಘವಃ ।೧೨। ಸೂರ್ಯರಶ್ಮಿಪ್ರತೀಕಾಶಂಜ್ವಲಂತಮರಿಮರ್ದನಃ । ಸಂಧಾಯಸುದೃಢೇಚಾಪೆ
ವಿಕೃಷ್ಯಬಲವದ್ಬಲೀ । ತಮೇವಮೃಗಮುದ್ದಿಶ್ಯಶ್ವಸಂತಮಿವಪನ್ನಗಂ । ಮುಮೋಚಜ್ವಲಿತಂದೀಪ್ತಮಸ್ತ್ರಂಬ್ರ
ಹ್ಮವಿನಿರ್ಮಿತಂ ।೧೪। ಶರೀರಂಮೃಗರೂಪಸ್ಯವಿನಿರ್ಭಿದ್ಯಶರೋತ್ತಮಃ । ಮಾರೀಚಸ್ಯೈವಹೃದಯಂಬಿಭೇದಾಶನಿಸನ್ನಿ
ಭಃ ।೧೫। ತಾಳಮಾತ್ರಮಥೋತ್ಪ್ಲುತ್ಯನ್ಯಪತತ್ಸಶರಾತುರಃ । ವಿನರ್ದಭೈರವಂನಾದಂಧರಣ್ಯಾಮಲ್ಪಜೀವಿತಃ ।೧೬।
ಮ್ರಿಯಮಾಣಸ್ತುಮಾರೀಚೋಜಹೌತಾಂಕೃತ್ರಿಮಾಂತನುಂ । ಸ್ಮೃತ್ವಾತದ್ವಚನಂರಕ್ಷೋದಧ್ಯೌಕೇನತುಲಕ್ಷ್ಮ
ಣಂ ।ಇಹಪ್ರಸ್ಥಾಪಯೇತ್ಸೀತಾಶೂನ್ಯೇತಾಂರಾವಣೋಹರೇತ್ ।೧೭। ಸಪ್ರಾಪ್ತಕಾಲಮಾಜ್ಞಾಯಚಕಾರಚತತಸ್ಸ್ವರಂ ।
ಸದೃಶಂರಾಘವಸ್ಯೈವಹಾಸೀತೇಲಕ್ಷ್ಮಣೇತಿಚ ।೧೮। ತೇನಮರ್ಮಣಿನಿರ್ವಿದ್ಧಃಶರೇಣಾನುಪಮೇನಚ । ಮೃಗರೂಪಂತು

ಕಂಡ-ಲಿದನು ॥೧೧॥ ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ದೂರಾತ್-ದೂರದಲ್ಲಿ, ಪುನರೇವ-ಮತ್ತೂ, ವೃಕ್ಷಷಂಡಾ
ತ್-ಗಿಡಗಳ ತಂಡಗಳಿಂದ, ವಿನಿಸ್ಸೃತಂ-ಹೊರಟುಬರುತ್ತಿರುವ, ತಂ-ಆ ಮೃಗವನ್ನು, ದೃಷ್ಟ್ವಾ-ಕಂಡು, ಹಂತುಂ-ಹೊಡೆಯುವದಕ್ಕಾಗಿ, ಕೃತ
ನಿಶ್ಚಯಃ-ಮಾಡಲ್ಪಟ್ಟ ನಿಶ್ಚಯವುಳ್ಳವನಾದನು ॥೧೨॥ ರಾಘವಃ-ಶ್ರೀರಾಮನು, ತತ್ರ-ಆ ವನದಲ್ಲಿ, ಕುಪಿತಃ-ಕೋಪಿಷ್ಠನಾಗಿ, ಸೂರ್ಯರಶ್ಮಿಪ್ರ
ತೀಕಾಶಂ-ಸೂರ್ಯಕಿರಣಕ್ಕೆ ಸಮಾನವಾದ, ಜ್ವಲಂತಂ-ಹೊಳೆಯುತ್ತಿರುವ, ಶರಂ-ಬಾಣವನ್ನು, ಭೂಯಃ-ಮತ್ತು, ಉದ್ಧೃತ್ಯ-ಎತ್ತಿ ॥೧೩॥
ಬಲೀ-ಬಲವಂತನಾದ ಶ್ರೀರಾಮನು, ದೃಢೇ-ದೃಢವಾದ, ಚಾಪೆ-ಬಿಲ್ಲಿನಲ್ಲಿ, ಸಂಧಾಯ-ಸೇರಿಸಿ, ಬಲವತ್-ಬಲವಾಗಿ, ವಿಕೃಷ್ಯ-ಶೆಳೆದು, ತಮೇವಮೃ
ಗಂ-ಆ ಮೃಗವನ್ನೇ ಉದ್ದಿಶ್ಯ-ಉದ್ದೇಶಮಾಡಿ, ಶ್ವಸಂತಂ-ನಿಟ್ಟುಸುರಂಬಿಡುತ್ತಿರು, ಪನ್ನಗಮಿವ-ಹಾವಿನಂತಿರುವ, ಬ್ರಹ್ಮವಿನಿರ್ಮಿತಂ-ಬ್ರಹ್ಮದೇವ
ರಿಂದ ನಿರ್ಮಿತವಾದ, ದೀಪ್ತಂ-ಹೊಳೆಯುತ್ತಿರುವ, ಜ್ವಲಿತಂ-ಉರಿಯುತ್ತಿರುವ, ಅಸ್ತ್ರಂ-ಅಸ್ತ್ರವನ್ನು, ಮುಮೋಚ-ಬಿಟ್ಟನು ॥೧೪॥
ಅಶನಿಸನ್ನಿಭಃ-ಸಿಡಿಲಿಗೆ ಸಮಾನವಾದ, ಶರೋತ್ತಮಃ-ಉತ್ತಮವಾದ ಬಾಣವು, ಮೃಗರೂಪಸ್ಯ-ಮೃಗರೂಪಧಾರಿಯಾದ, ಮಾರೀಚಸ್ಯ-ಮಾ
ರೀಚನ, ಶರೀರಂ-ದೇಹವನ್ನು, ವಿನಿರ್ಭಿದ್ಯ-ಭೇದಿಸಿ, ಹೃದಯಮೇವ-ಎದೆಯನ್ನೇ, ಬಿಭೇದ-ಭೇದಿಸಿದನು ॥೧೫॥ ಅಲ್ಪಜೀವಿತಃ-ಅಲ್ಪಪ್ರಾಣವು
ಳ್ಳ, ಶರಾತುರಃ-ಬಾಣದಿಂ ಪೀಡಿತನಾದ, ಸಃ-ಆ ಮಾರೀಚನು, ಅಥ-ಬಳಿಕ, ತಾಳಮಾತ್ರಂ-ತಾಳೆಗಿಡದಪ್ರಮಾಣವು, ಉತ್ಪ್ಲುತ್ಯ-ಹಾರಿ, ಧರ
ಣ್ಯಾಂ-ನೆಲದಲ್ಲಿ, ನ್ಯಪತತ್-ಬಿದ್ದನು, ಭೈರವಂ-ಭಯಂಕರವಾದ, ನಾದಂ-ಧ್ವನಿಯನ್ನು, ವಿನರ್ದ-ಕೂಗಿದನು ॥೧೬॥ ಮ್ರಿಯಮಾಣಃ-ಸಾ
ಯುತ್ತಿರುವ, ಮಾರೀಚಃ-ಮಾರೀಚನು, ಕೃತ್ರಿಮಾಂ-ಮಾಯಾಕಲ್ಪಿತವಾದ, ತಾಂತನುಂ-ಆ ಶರೀರವನ್ನು, ಜಹೌ-ಬಿಟ್ಟನು, ರಕ್ಷಃ-ರಕ್ಕಸನು,
ತದ್ವಚನಂ-ಆ ರಾವಣಾಸುರನ ಮಾತನ್ನು, ಸ್ಮೃತ್ವಾ-ಸ್ಮರಣೆಗೆ ತೆಗದುಕೊಂಡು, ಕೇನ-ಯಾವ ಉಪಾಯದಿಂದ, ಸೀತಾ-ಸೀತಾದೇವಿಯು, ಲಕ್ಷ್ಮ
ಣಂ-ಲಕ್ಷ್ಮಣನನ್ನು, ಇಹ-ಇಲ್ಲಿಗೆ, ಪ್ರಸ್ಥಾಪಯೇತ್-ಕಳುಹಿಸುವಳು, ರಾವಣಃ-ರಾವಣನು, ಶೂನ್ಯೇ-ಜನರಹಿತವಾದಾಶ್ರಮದಲ್ಲಿ, ತಾಂ-ಆ ಸೀತಾ
ದೇವಿಯನ್ನು, ಕೇನ-ಯಾವ ಉಪಾಯದಿಂದ, ಹರೇತ್-ಅಪಹರಿಸುವನು, ಇತಿ-ಇಂತೆಂದು, ದಧ್ಯೌ-ಧ್ಯಾನಿಸಿದನು ॥೧೭॥ ಸಃ-ಆ ಮಾರೀಚನು
ಪ್ರಾಪ್ತಕಾಲಂ-ಕಾಲಪ್ರಾಪ್ತವಾದ, ಅರ್ಥಂ-ಕಾರ್ಯವನ್ನು, ಆಜ್ಞಾಯ-ತಿಳಿದು, ತತಃ-ಬಳಿಕ, ರಾಘವಸ್ಯೈವ-ಶ್ರೀರಾಮನಿಗೇನೆ, ಸದೃಶಂ-ಸಮಾನ
ವಾದ ಹಾ-ಕಷ್ಟವು, ಹೇಸೀತೆ-ಎಲೈ ಸೀತಾದೇವಿಯೇ, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಇತಿಚ-ಈಪರಿಯಾಗಿ, ಸ್ವರಂ-ಧ್ವನಿಯನ್ನು, ಚಕಾ
ರ-ಮಾಡಿದನು ॥೧೮॥ ಅನುಪಮೇನ-ಸಮಾನರಹಿತವಾದ, ತೇನಶರೇಣ-ಆ ಬಾಣದಿಂದ, ನಿರ್ವಿದ್ಧಃ-ಹೊಡೆಯಲ್ಪಟ್ಟ, ಸಮುಹಾಕಾಯಃ-

ಣದಲ್ಲಿಯೆ ಬಿತುಕೊಂಡಿತು. ।೧೧। ಅನಂತರದಲ್ಲಿ ಮಹಾ ಪರಾಕ್ರಮಶಾಲಿಯಾದ, ಶ್ರೀರಾಮನು ದೂರವಾಗಿ ಗಿ
ಡಗಳಲ್ಲಿ ನುಗ್ಗಿಬರುವ ಆ ಮೃಗವಂಕಂಡು ಹೊಡಿಯುವದೇಸರಿ ಯೆಂದು ನಿಶ್ಚಯಿಸಿಕೊಂಡು ಸೂರ್ಯಕಿರಣಂಗ
ಳಂತೆ ಕಂಗೊಳಿಸುವ ಬಾಣವನ್ನು ಸಂಧಾನವಂಗೈದು ಕೊದಂಡವನ್ನು ಬಲವಾಗಿಶೆಳೆದು ಆ ಮೃಗವನ್ನುದ್ದೇದಿಸಿ
ಬ್ರಹ್ಮನಿಂದ ನಿರ್ಮಿಸಲ್ಪಟ್ಟ ಮತ್ತು ಹೊಳೆಯುತ್ತಲೂ, ಉರಿಯುತ್ತಲೂ, ಇರುವ ಅಸ್ತ್ರವಂಬಿಟ್ಟನು. ।೧೪।
ಬಳಿಕ ಶಿಡಿಲಿಗೆ ಸಮಾನವಾದ ಆ ಉತ್ತಮವಾದ ಬಾಣವು, ಆ ಮಾರೀಚನಶರೀರವಂ ಭೇದಿಸಿದಂಥಾದ್ದಾಗಲೂ,
ಮೃಗರೂಪವನ್ನೈದಿದ ಆಮಾರೀಚನು ಸ್ವಲ್ಪಪ್ರಾಣವುಳ್ಳವನಾಗಿ, ತಾಳವೃಕ್ಷದ ಯೆತ್ತರವಾಗಿ, ಮೇಲಕ್ಕೆಹಾರಿ
ನೆಲದಲ್ಲಿಬಿದ್ದು ಸಾಯುವಾಗ ಮಹಾ ಭಯಂಕರವಾಗಿ, ಕೂಗುತ್ತಾ, ಆ ಕಲ್ಪಿತವಾದ ಶರೀರವಂಬಿಟ್ಟನ ದಂತೆನೆ;-
ಮರಣವನ್ನೈದುವ ಮಾರೀಚನು ಆ ಕೃತ್ರಿಮವಾದ ದೇಹವನ್ನು ಬಿಡುವಕಾಲದಲ್ಲಿ, ರಾವಣಾಸುರನು ತನಗೆ ಪೂ
ರ್ವದಲ್ಲಿ ಪೇಳಿದ್ದ ವಾಕ್ಯವಂ ಸ್ಮರಿಸಿಕೊಂಡು, ಯೋಚಿಸಿದನು, ಯೆನಂದರೆ;—ಸೀತಾದೇವಿಯು ಲಕ್ಷ್ಮಣನನ್ನಿಲ್ಲಿ
ಗೆ ಯೆಂತು ಕಳುಹಿಸುವಳು, ಸೀತೆಯು ಇನ್ನುಯಾರೂ, ಯಿಲ್ಲದಿರುವ ಆ ಶ್ರಮದಲ್ಲಿ ಆ ಕೆಯನ್ನು, ಯಾವ ಉ
ಪಾಯದಿಂದ ಅಪಹರಿಸುವನು ಎಂದು ಯೋಚನೆಯಂಗೈದು, ಹೀಗೆಯೇ ಮಾಡಬೇಕೆಂದುನಿಶ್ಚಯಿಸಿಕೊಂಡಬಳಿಕ

ಪಂತುತಂತ್ಯಕ್ತ್ವಾ ರಾಕ್ಷಸಂರೂಪಮಾತ್ಮನಃ । ಚಕ್ರೇಸಸುಮಹಾಕಾಯೋಮಾರೀಚೋಜೀವಿತಂತ್ಯಜನ್ ॥೨೦॥ ತತೋವಿಚಿತ್ರಕೇಯೂರಸ್ಸರ್ವಾಭರಣಭೂಷಿತಃ । ಹೇಮಮಾಲೀಮಹಾದಂಷ್ಟ್ರೋ ರಾಕ್ಷಸೋಭೂಚ್ಛರಾಹತಃ ॥೨೧॥ ತಂದೃಷ್ಟ್ವಾಪತಿತಂಭೂಮೌರಾಕ್ಷಸಂಘೋರದರ್ಶನಂ । ರಾಮೋರುಧಿರಸಿಕ್ತಾಂಗಂವೇಷ್ಟಮಾನಂಮಹೀತಲೇ । ಜಗಾಮಮನಸಾಸೀತಾಂಲಕ್ಷ್ಮಣಸ್ಯವಚಃಸ್ಮರನ್ ॥೨೨-೨೩॥ ಮಾರೀಚಸ್ಯೈವಮಾಯೈಷಾಪೂರ್ವೋಕ್ತಂಲಕ್ಷ್ಮಣೇನತು । ತತ್ತಥಾಹ್ಯಭವಚ್ಚಾದ್ಯಮಾರೀಚೋಯಂಮಯಾಹತಃ ।೨೪॥ ಹಾಸೀತೇಲಕ್ಷ್ಮಣೇತ್ಯೇವಮಾಕ್ರುಶ್ಯಚಮಹಾಸ್ವರಂ । ಮಮಾರರಾಕ್ಷಸಸ್ಸೋಯಂಶ್ರುತ್ವಾಸೀತಾಕಥಂಭವೇತ್ । ಲಕ್ಷ್ಮಣಶ್ಚಮಹಾಬಾಹುಃಕಾಮವಸ್ಥಾಂಗಮಿಷ್ಯತಿ । ಇತಿಸಂಚಿಂತ್ಯಧರ್ಮಾತ್ಮಾರಾಮೋಹೃಷ್ಟತನೂರುಹಃ ॥೨೫-೨೬॥ ತತ್ರರಾಮಂಭಯಂತೀವ್ರಮಾವಿವೇಶವಿಷಾದಜಂ ।೨೭। ರಾಕ್ಷಸಂಮೃಗರೂಪಂತುಹತ್ವಾಶ್ರುತ್ವಾಚತತ್ಸ್ವರಂ । ನಿಹತ್ಯಪೃಷತಂಚಾನ್ಯಂಮಾಂಸಮಾದಾಯ

---

ಪೊತ್ತಪರಿತಕ್ಕೆಲ್ಲ. ಮಾರೀಚಃ-ಮಾರೀಚನು, ಜೀವಿತಂ-ಪ್ರಾಣವನ್ನು, ತ್ಯಜನ್-ಬಿಡುತ್ತಿರುವವನಾಗಿ, ತಂಮೃಗರೂಪಂ-ಆ ಮೃಗರೂಪವನ್ನು, ತ್ಯಕ್ತ್ವಾ-ಬಿಟ್ಟು, ಆತ್ಮನಃ-ತನ್ನ, ರಾಕ್ಷಸಂರೂಪಂ-ರಕ್ಕಸರೂಪವನ್ನು, ಚಕ್ರೇ-ಮಾಡಿದನು ॥೨೦॥ ತತಃ-ಬಳಿಕ, ಶರಾಹತಃ-ಬಾಣದಿಂ ಹೊಡೆಯಲ್ಪಟ್ಟ ಮೃಗವು, ವಿಚಿತ್ರಕೇಯೂರಃ-ಆಶ್ಚರ್ಯಕರವಾದ ಬಾಹುಪುರಿಗಳುಳ್ಳ, ಸರ್ವಾಭರಣಭೂಷಿತಃ-ಸಮಸ್ತ ಒಡವೆಗಳಿಂದಲಂಕಾರ ಮಾಡಲ್ಪಟ್ಟ, ಹೇಮಮಾಲೀ-ಬಂಗಾರಿನ ಕಂಠೀಸರವುಳ್ಳ, ಮಹಾದಂಷ್ಟ್ರಃ-ದೊಡ್ಡದಾದ ಕೋರೆಹಲ್ಲುಗಳುಳ್ಳ, ರಾಕ್ಷಸಃ-ರಕ್ಕಸನು. ಅಭೂತ್-ಆದನು ॥೨೧॥ ರಾಮಃ-ಶ್ರೀರಾಮನು ಘೋರದರ್ಶನಂ ಭಯಂಕರವಾದ ನೋಟವುಳ್ಳ, ಭೂಮೌ-ನೆಲದಲ್ಲಿ, ಪತಿತಂ-ಬಿದ್ದಿರುವ, ರುಧಿರಸಿಕ್ತಾಂಗಂ-ರಕುತದಿಂ ನೆನೆಯಲ್ಪಟ್ಟ ಶರೀರವುಳ್ಳ, ಮಹೀತಲೇ-ಭೂಪ್ರದೇಶದಲ್ಲಿ. ವೇಷ್ಟಮಾನಂ-ಹೊರಳಾಡುತ್ತಿರುವ, ತಂರಾಕ್ಷಸಂ-ಆ ಮಾರೀಚನನ್ನು, ದೃಷ್ಟ್ವಾ-ಕಂಡು, ಲಕ್ಷ್ಮಣಸ್ಯ-ಲಕ್ಷ್ಮಣನ, ವಚಃ-ಮಾತನ್ನು, ಸ್ಮರನ್-ಜ್ಞಾಪಿಸಿಕೊಂಡವನಾಗಿ, ಮನಸಾ-ಮನಸ್ಸಿನಿಂದ, ಸೀತಾಂ-ಸೀತಾದೇವಿಯನ್ನು. ಮನಸಾ-ಮನಸ್ಸಿನಿಂದ ಜಗಾಮ-ಹೊಂದಿದನು ॥೨೨-೨೩॥ ಏಷಃ-ಇದು, ಮಾರೀಚಸ್ಯ-ಮಾರೀಚನ, ಮಾಯೈವ-ಮಾಯೆ ಎಂತಲೇ, ಲಕ್ಷ್ಮಣೇನ-ಲಕ್ಷ್ಮಣನಿಂದ, ವಚಃ-ಮಾತು. ಪೂರ್ವೋಕ್ತಂ-ಮೊದಲೇ ಹೇಳಲ್ಪಟ್ಟಿತು, ತತ್-ಅದು, ಅದ್ಯ-ಈಗ, ತಥಾ-ಹಾಗೆಯೇ, ಅಭವದ್ಧಿ ಚ-ಆಯಿತಷ್ಟೆ, ಅಯಂ ಮಾರೀಚಃ-ಈ ಮಾರೀಚನು, ಮಯಾ-ನನ್ನಿಂದ, ಹತಃ-ಸಂಹೃತನಾದನು ॥೨೪॥ ಹಾ-ಕಷ್ಟವು. ಹೇಸೀತೇ-ಎಲೌ ಸೀತಾದೇವಿಯೇ. ಹೇಲಕ್ಷ್ಮಣೇತಿ-ಎಲೋ ಲಕ್ಷ್ಮಣನೇ ಎಂದು, ಏವಂ-ಈ ಪರಿಯಾಗಿ. ಮಹಾಸ್ವರಂ-ದೊಡ್ಡಧ್ವನಿಯನ್ನು, ಆಕ್ರುಶ್ಯ-ಕೂಗಿ, ಸೋಯಂರಾಕ್ಷಸಃ-ಆ ರಾಕ್ಷಸನು, ಮಮಾರ-ಮೃತನಾದನು. ಸೀತಾ-ಸೀತಾದೇವಿಯು. ಶ್ರುತ್ವಾ-ಕೇಳಿ, ಕಥಂಭವೇತ್-ಹ್ಯಾಗೆ ಇರುವಳು, ಮಹಾಬಾಹುಃ-ಮಹಾಭುಜಶಾಲಿಯಾದ, ಲಕ್ಷ್ಮಣಶ್ಚ-ಲಕ್ಷ್ಮಣನು, ಕಾಮವಸ್ಥಾಂ-ಯಾವ ಅವಸ್ಥೆಯನ್ನು, ಗಮಿಷ್ಯತಿ-ಹೊಂದುವನೋ. ಇತಿ-ಇಂತೆಂದು, ಸಂಚಿಂತ್ಯ-ಆಲೋಚಿಸಿ, ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಶ್ರೀರಾಮನು. ಹೃಷ್ಟತನೂರುಹಃ-ಸಂತೋಷಗೊಂಡ ರೋಮಾಂಚವುಳ್ಳವನಾಗಿ ॥೨೫-೨೬॥ ॥ತತ್ರ-ಆ ಸಮಯದಲ್ಲಿ ರಾಮಂ-ಶ್ರೀರಾಮನಂ ಕುರಿತು, ತೀವ್ರಂ-ತೀಕ್ಷ್ಣವಾದ, ವಿಷಾದಜಂ-ವ್ಯಸನದಿಂ ಪುಟ್ಟಿದ, ಭಯಂ-ಭೀತಿಯು, ಆವಿವೇಶ-ಹೊಕ್ಕಿತು ॥೨೭॥ ಮೃಗರೂಪಂ-ಮೃಗಸ್ವರೂಪನಾದ, ತಂರಾಕ್ಷಸಂ-ಆ ರಾಕ್ಷಸನನ್ನು, ಹತ್ವಾ-ಕೊಂದು, ತತ್ಸ್ವರಂ-ಆ ಮೃಗಸ್ವರವನ್ನು, ಶ್ರುತ್ವಾ-ಕೇಳಿ, ಅ

---

ಶ್ರೀರಾಮನ ಸ್ವರದಂತೆ ಸ್ವರವುಳ್ಳವನಾಗಿ, ಹಾ!! ಸೀತೆಯೆ! ಅಯ್ಯೋ! ಲಕ್ಷ್ಮಣನೆ! ಎಂಬದಾಗಿ ಕೂಗಿ, ಆ ಶ್ರೀರಾಮನಬಾಣದಿಂದ ದಹಿಸಲ್ಪಟ್ಟ ಶರೀರವುಳ್ಳವನಾಗಿ, ಪ್ರಾಣವನ್ನು ಬಿಡುವಕಾಲದಲ್ಲಿ ಆ ಮೃಗರೂಪವಂಬಿಟ್ಟು ರಾಕ್ಷಸರೂಪದಿಂದ ಮರಣವನ್ನೈದಿದನು. ॥೨೦॥ ಅನಂತರದಲ್ಲಿ ವಿಚಿತ್ರವಾದ ತೋಳುಬಂದಿಗಳುಳ್ಳವನಾಗಿಯೂ, ಸಮಸ್ತವಾದ ಒಡವೆಗಳಿಂದಲಂಕರಿಸಲ್ಪಟ್ಟವನಾಗಿಯೂ, ಸುವರ್ಣ ಮಾಲಿಕೆಗಳುಳ್ಳವನಾಗಿಯೂ, ಮಹತ್ತರವಾದ ಕೋರೆದಾಡೆಗಳುಳ್ಳವನಾಗಿಯೂ ಇರುವ ಆ ರಾಕ್ಷಸನು ಬಾಣದಿಂದ ಹೊಡೆಯಲ್ಪಟ್ಟವನಾಗಲು,ಮಹಾ ಭಯಂಕರನಾಗಿರುವ ಆ ರಾಕ್ಷಸನಂ ಕಂಡು, ಶ್ರೀರಾಮನು ಲಕ್ಷ್ಮಣನು ಪೂರ್ವದಲ್ಲಿ ಪೇಳಿದ ವಾಕ್ಯವಂ ಸ್ಮರಿಸುತ್ತಾ ಮನದಿಂದ ಸೀತಾದೇವಿಯನ್ನೈದಿದನು ॥೨೩॥ ಹಾಹಾ!! ಇದು ಮಾರೀಚನ ಮಾಯೆಯೇ ಸರಿಯೇ ಹೊರ್ತು ಸಾಧಾರಣವಾದ ಮೃಗವಲ್ಲವೆಂದು ಲಕ್ಷ್ಮಣನು ಮೊದಲೇ ನುಡಿದನಲ್ಲವೆ? ಇದು ಹಾಗೆಯೇ ಆಯಿತು ಮಾರೀಚನೆ ನನ್ನಿಂದ ಹತನಾದನು ।೨೪॥ ಆದರೆ ಇವನು ಮರಣವನ್ನೈದುವಕಾಲದಲ್ಲಿ, ಅಯ್ಯೋ ಸೀತೆಯೇ! ಹಾ ಲಕ್ಷ್ಮಣನೇ! ಎಂದು ನನ್ನ ಸ್ವರದಂತೆಕೂಗಿ ಮೃತಿಯನ್ನೈದಿದನು,ಈ ವಾಕ್ಯವಂಕೇಳಿ ಸೀತಾದೇವಿಯು ಹ್ಯಾಗಿರುವಳೋ? ಮಹಾ ಭುಜಪರಾಕ್ರಮಿಯಾದ ಲಕ್ಷ್ಮಣನು ಯೇನು ಗತಿಯನ್ನೈದುವನೋ, ಎಂದು ಯೋಚಿಸುತ್ತಾ ಮಹಾ ಭೀತಿಯನ್ನೈದಿದನು ॥೨೬॥ ಈ ರೀತಿಯಾಗಿ ಶ್ರೀರಾಮನು ಮೃಗರೂಪಧಾರಿಯಾದ ಆ ಮಾರೀಚನಂ

ರಾಘವಃ । ತ್ವರಮಾಣೋಜನಸ್ಥಾನಂಸಸಾರಾಭಿಮುಖಸ್ತದಾ ।೨೭॥ —* ಚತುಶ್ಚತ್ವಾರಿಂಶಸ್ಸರ್ಗಃ. *—

ಆರ್ತಸ್ವರಂತುತಂಭರ್ತುರ್ವಿಜ್ಞಾಯಸದೃಶಂವನೆ । ಉವಾಚಲಕ್ಷ್ಮಣಂಸೀತಾಗಚ್ಛಜಾನೀಹಿರಾಘವಂ । ನಹಿಮೆಹೃದಯಂಸ್ಥಾನೆಜೀವಿತಂವಾವತಿಷ್ಠತಿ । ಕ್ರೋಶತಃಪರಮಾರ್ತಸ್ಯಶ್ರುತಶ್ಶಬ್ದೋಮಯಾಭೃಶಂ। ಆಕ್ರಂದಮಾನಂತುವನೆಭ್ರಾತರಂತ್ರಾತುಮರ್ಹಸಿ। ತಂಕ್ಷಿಪ್ರಮಭಿಧಾವತ್ವಂಭ್ರಾತರಂಶರಣೈಷಿಣಂ। ರಕ್ಷಸಾಂವಶಮಾಪನ್ನಂಸಿಂಹಾನಾಮಿವಗೋವೃಷಂ।೩॥ನಜಗಾಮತಥೋಕ್ತಸ್ತುಭ್ರಾತುರಾಜ್ಞಾಯಶಾಸನಂ। ತಮುವಾಚತತಸ್ತತ್ರಕುಪಿತಾಜನಕಾತ್ಮಜಾ ।ಸೌಮಿತ್ರೆಮಿತ್ರರೂಪೇಣಭ್ರಾತುಸ್ತ್ವಮಸಿಶತ್ರುವತ್ ಯಸ್ತ್ವಮಸ್ಯಾಮವಸ್ಥಾಯಾಂಭ್ರಾತರಂನಾಭಿಪತ್ಸ್ಯಸೆ ।೫॥ ಇಚ್ಛಸಿತ್ವಂವಿನಶ್ಯಂತಂರಾಮಂಲಕ್ಷ್ಮಣಮತ್ಕೃತೆ । ಲೋಭಾತ್ತ್ವಂಮತ್ಕೃತೇನೂನಂನಾನುಗಚ್ಛಸಿರಾ

ಸ್ಥಂಪೃಷತಂ-ಮತ್ತೊಂದು ಜಿಂಕೆಯನ್ನು ನಿಹತ್ಯ-ಹೊಡೆದು, ಮಾಂಸಂ-ಮಾಂಸವನ್ನು ಆದಾಯ-ತೆಗೆದುಕೊಂಡು, ರಾಘವಃ-ಶ್ರೀರಾಮನು. ಜನಸ್ಥಾನಂ-ಉಕ್ತಸ್ಥಳವಂಕುರಿತು. ಅಭಿಮುಖಃ-ಎದುರಿಗೆ ಬರುವವನಾಗಿ ತದಾ-ಆಕಾಲದಲ್ಲಿ, ಸಸಾರ-ಬಂದನ ॥ —*ಚತುಶ್ಚತ್ವಾರಿಂಶಸ್ಸರ್ಗಃ*— ವನೆ-ಅರಣ್ಯದಲ್ಲಿ, ಸೀತಾ-ಸೀತಾದೇವಿಯು, ಭರ್ತುಃ-ಗಂಡನಿಗೆ, ಸದೃಶಂ-ಸಮಾನವಾದ, ತಂಆರ್ತಸ್ವರಂತು-ಆ ದೀನಧ್ವನಿಯನ್ನಾದರೆ, ವಿಜ್ಞಾಯ-ತಿಳಿದು, ಲಕ್ಷ್ಮಣಂ-ಲಕ್ಷ್ಮಣನಂಕುರಿತು. ಗಚ್ಛ-ಹೋಗು, ರಾಘವಂ-ಶ್ರೀರಾಮನನ್ನು, ಜಾನೀಹಿ-ತಿಳಿದುಕೋ. ಇತಿ-ಇಂತೆಂದು ಉವಾಚ-ಹೇಳಿದಳು ॥೧॥ ಪರಮಾರ್ತಸ್ಯ-ಪರಮದೀನನಾದ, ಕ್ರೋಶತಃ-ಕೂಗುತ್ತಿರುವ ಶ್ರೀರಾಮನ. ಶಬ್ದಃ-ಧ್ವನಿಯು, ಮಯಾ-ಎನ್ನಿಂದ. ಭೃಶಂ-ಅತ್ಯಂತವಾಗಿ, ಶ್ರುತಃ-ಕೇಳಲ್ಪಟ್ಟಿತು, ಮೆ-ನನ್ನ, ಹೃದಯಂ-ಮನವು, ಜೀವಿತಂವಾ-ಪ್ರಾಣವಾದರೂ, ಸ್ಥಾನೆ-ಸ್ವಸ್ಥಾನದಲ್ಲಿ, ನತಿಷ್ಠತಿ-ಇರುವದಿಲ್ಲ ವನೆ-ವನದಲ್ಲಿ, ಆಕ್ರಂದಮಾನಂ-ಕೂಗುತ್ತಿರುವ. ಭ್ರಾತರಂ-ಅಣ್ಣನಾದ ಶ್ರೀರಾಮನನ್ನು, ತ್ರಾತುಂ-ಸಂರಕ್ಷಿಸುವದಕ್ಕಾಗಿ. ಅರ್ಹಸಿ-ಯೋಗ್ಯನಾಗು. ತ್ವಂ-ನೀನು, ಶರಣೈಷಿಣಂ-ರಕ್ಷಕನನ್ನಪೇಕ್ಷಿಸುತ್ತಿರುವ, ರಕ್ಷಸಾಂ-ರಾಕ್ಷಸರಿಗೆ. ವಶಂ-ಸ್ವಾಧೀನತೆಯನ್ನು, ಆಪನ್ನಂ-ಹೊಂದಿರುವ, ಸಿಂಹಾನಾಂ-ಸಿಂಹಗಳಿಗೆ, ವಶಂ-ಸ್ವಾಧೀನವಾದ, ಗೋವೃಷಮಿವ-ಮದಬಿದ ಎತ್ತಿನಂತೆ, ತಂಭ್ರಾತರಂ-ಆ ಅಣ್ಣನಾದ ಶ್ರೀರಾಮನಂಕುರಿತು, ಕ್ಷಿಪ್ರಂ-ಜಾಗ್ರತೆಯಾಗಿ, ಅಭಿಧಾವ-ಓಡಿಹೋಗು ॥೩॥ ತಥಾ-ಆಪರಿಯಾಗಿ, ಉಕ್ತಃ-ಹೇಳಲ್ಪಟ್ಟ ಲಕ್ಷ್ಮಣನಾದರೆ, ಭ್ರಾತುಃ-ಅಣ್ಣನಾದ ಶ್ರೀರಾಮನ, ಶಾಸನಂ-ಆಜ್ಞೆಯನ್ನು, ಆಜ್ಞಾಯ-ತಿಳಿದು, ನಜಗಾಮ-ಹೋಗಲಿಲ್ಲ. ತತ್ರ-ಆ ಆಶ್ರಮದಲ್ಲಿ, ತತಃ-ಬಳಿಕ, ಕುಪಿತಾ-ಕೋಪಿಸಿದ್ದವಳಾಗಿ, ಜನಕಾತ್ಮಜಾ-ಸೀತಾದೇವಿಯು, ತಂ-ಆ ಲಕ್ಷ್ಮಣನಂಕುರಿತು, ಉವಾಚ-ಹೇಳಿದನು ॥೪॥ ಹೇಸೌಮಿತ್ರೆ-ಎಲೈ ಲಕ್ಷ್ಮಣನೇ. ಯಃತ್ವಂ-ಯಾವ ನೀನು. ಅಸ್ಯಾಮವಸ್ಥಾಯಾಂ-ಇಂಥಾ ಕಷ್ಟಾವಸ್ಥೆಯಲ್ಲಿ, ಭ್ರಾತರಂ-ಅಣ್ಣನನ್ನುಕುರಿತು, ನಾಭಿಪತ್ಸ್ಯಸೆ-ಎದುರಾಗಿ ಹೋಗದಿದ್ದೀಯೋ, ಸತ್ವಂ-ಆ ಈ ನೀನು. ಭ್ರಾತುಃ-ಅಣ್ಣನಿಗೆ. ಮಿತ್ರರೂಪೇಣ-ಸ್ನೇಹಸ್ವರೂಪದಿಂದ, ಶತ್ರುವತ್-ಶತ್ರುವಾಗಿಯೇ. ಅಸಿ-ಆಗಿದ್ದೀ॥೫॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ತ್ವಂ-ನೀನು, ಮತ್ಕೃತೆ-ನನ್ನನಿಮಿತ್ತವಾಗಿ, ರಾಮಂ-ಶ್ರೀರಾಮನನ್ನು, ವಿನಶ್ಯಂತಂ-ನಶಿಸಿಹೋಗುವವನನ್ನಾಗಿ, ಇಚ್ಛಸಿ-ಅಪೇಕ್ಷಿಸುತ್ತಿ. ತ್ವಂ-ನೀನು

ಸಂಹರಿಸಿ, ಆ ಸ್ವರವನ್ನು ಕೇಳಿ, ಮತ್ತೊಂದು ಜಿಂಕೆಯಂ ಹೊಡೆದು ಅದರ ಮಾಂಸವಂ ತೆಗದುಕೊಂಡು ಜನಸ್ಥಾನವಂ ಕುರಿತು ಅತಿತ್ವರೆಯಾಗಿತೆರಳಿದನು॥೨೭॥ —*ಅರಣ್ಯಕಾಂಡದಲ್ಲಿನಲವತ್ತಮೂರನೆಯಸರ್ಗಂಮುಗಿದುದು*—

ಅನಂತರದಲ್ಲಿ ಸೀತಾದೇವಿಯು, ತನ್ನ ಪತಿಯಾದ ಶ್ರೀರಾಮನ ಸ್ವರಕ್ಕೆ ಸಮಾನವಾದ ಆ ದೀನಸ್ವರವಂ ಕೇಳಿ, ಲಕ್ಷ್ಮಣನಂ ಕುರಿತು, ಎಲೈ ಲಕ್ಷ್ಮಣನೇ! ಶ್ರೀರಾಮನು ಕೂಗಿದಂತೆ ಧ್ವನಿಯುಆಗುತಲಿದೆ, ತಿಳಿದುಕೊಂಡು ಬರುವವನಾಗು, ಪರಮದೀನನಾಗಿ ಕೂಗುತ್ತಿರುವ ಆತನ ಶಬ್ದವು ಈಗ ನನ್ನಿಂದ ಕೇಳಲ್ಪಟ್ಟಿತು, ನನ್ನ ಹೃದಯವೂ ಪ್ರಾಣವೂ ಸಹ ಸ್ವಸ್ಥಾನದಲ್ಲಿ ನಿಲ್ಲಲಾರದು, ಸಿಂಹಗಳ ಕೈಗೆ ಶಿಲುಕಿದ ವೃಷಭದಂತೆ ರಾಕ್ಷಸರ ಕೈಗೆ ಶಿಲುಕಿ ರಕ್ಷಕನನ್ನಪೇಕ್ಷಿಸುವ ಮತ್ತು ಬಹು ದೀನನಾಗಿ ಕೂಗುತಿರುವ ಆ ಅಣ್ಣನನ್ನು ಸಂರಕ್ಷಿಸುವದಕ್ಕೆ ತ್ವರೆಯಿಂದ ಓಡುವವನಾಗೆಂದು ನುಡಿದಳು, ಈರೀತಿ ಸೀತಾದೇವಿಯಿಂದ ಲಕ್ಷ್ಮಣನು ಹೇಳಲ್ಪಟ್ಟವನಾದರೂ ಆ ಶ್ರೀರಾಮನ ಆಜ್ಞೆಯು ಯೆಂತಾಗಿರುವದೋ ಅಂತು ನಡೆಯಬೇಕೆಂದು ಇಚ್ಛಿಸಿ, ಸೀತಾದೇವಿಯು ನುಡಿದಂತೆ ತೆರಳಲಿಲ್ಲ, ಅನಂತರದಲ್ಲಿ ಆ ಜನಕನಂದಿನಿಯಾದ ಸೀತಾದೇವಿಯು ಬಹು ಕೋಪವನ್ನೈದಿ, ಲಕ್ಷ್ಮಣನಂ ಕುರಿತು ನುಡಿವಳದೆಂತೆನೆ,—॥೫॥ ಎಲೈ ಸುಮಿತ್ರಾಪುತ್ರನಾದ ಲಕ್ಷ್ಮಣನೇ! ಯಾವ ನೀನು ಅಣ್ಣನಾದವನಿಗೆ ಇಂಥಾ ಕಷ್ಟದ ದೆಶೆಯು ಪ್ರಾಪ್ತವಾದರೂ ಕೂಡಾ ಯೆದುರಾಗಿ ಪೋಗದೇ ಇರುವವನಾಗಿದ್ದೀಯೋ, ಅಂಥಾ ನೀನು ಆತನಿಗೆ ಮಿತ್ರರೂಪದಿಂದ ಶತ್ರುವಾಗಿ ಹುಟ್ಟಿದವನಾಗಿದ್ದೀ ॥೫॥ ಎಲೋ ಲಕ್ಷ್ಮಣನೇ! ನೀನು ನನ್ನಲ್ಲಿ ಆಸಕ್ತಿಯಿಂದ ಆ ಅಗ್ರಜನಂ ಅನುಸರಿಸಿ ಬಂದವನಾದೆಯೇ ಹೊರ್ತು ಮತ್ತು ಬೇರೆಯಾವದು ಇಲ್ಲ, ಆದ್ದರಿಂದಲೇ

ಘವಂ ॥೬॥ ವ್ಯಸನಂತೇಪ್ರಿಯಂಮನ್ಯೇಸ್ನೇಹೋಭ್ರಾತರಿನಾಸ್ತಿತೇ। ತೇನತಿಷ್ಠಸಿವಿಸ್ರಬ್ಧಸ್ತಮಪಶ್ಯನ್ಮಹಾದ್ಯುತಿಂ ॥೭॥
ಕಿಂಹಿಸಂಶಯಮಾಪನ್ನೇ ತಸ್ಮಿನ್ನಿಹಮಯಾಭವೇತ್ । ಕರ್ತವ್ಯಮಿಹತಿಷ್ಠಂತ್ಯಾಯಃಪ್ರಧಾನಸ್ತ್ವಮಾಗತಃ ॥೮॥
ಇತಿಬ್ರುವಾಣಾಂವೈದೇಹೀಂಬಾಷ್ಪಶೋಕಪರಿಪ್ಲುತಾಂ। ಅಬ್ರವೀಲ್ಲಕ್ಷ್ಮಣಸ್ತ್ರಸ್ತಾಂಸೀತಾಂಮೃಗವಧೂಮಿವ ॥೯॥
ಪನ್ನಗಾಸುರಗಂಧರ್ವದೇವಮಾನುಷರಾಕ್ಷಸೈಃ । ಅಶಕ್ಯಸ್ತವವೈದೇಹಿಭರ್ತಾಜೇತುಂನಸಂಶಯಃ ॥೧೦॥ ದೇವಿದೇವಮ
ನುಷ್ಯೇಷುಗಂಧರ್ವೇಷುಪತತ್ರಿಷು । ರಾಕ್ಷಸೇಷುಪಿಶಾಚೇಷುಕಿನ್ನರೇಷುಮೃಗೇಷುಚ । ದಾನವೇಷುಚಘೋರೇಷುನಸವಿ
ದ್ಯೇತಶೋಭನೇ । ಯೋರಾಮಂಪ್ರತಿಯುಧ್ಯೇತಸಮರೇವಾಸವೋಪಮಂ ॥೧೧॥ ಅವಧ್ಯಸ್ಸಮರೇರಾಮೋನೈವಂತ್ವಂವಕ್ತು
ಮರ್ಹಸಿ । ನತ್ವಾಮಸ್ಮಿನ್ವನೇಹಾತುಮುತ್ಸಹೇರಾಘವಂವಿನಾ ॥೧೨॥ ಅನಿವಾರ್ಯಂಬಲಂತಸ್ಯಬಲೈರ್ಬಲವತಾಮಪಿ ।

---

ಮತ್ಪ್ರತೇ-ನನ್ನನಿಮಿತ್ತವಾಗಿ, ಲೋಭಾತ್-ಆಸಕ್ತಿಯಪಡೆಯಿಂದ ರಾಘವಂ-ಶ್ರೀರಾಮನನ್ನು. ನಾನುಗಚ್ಛಸಿ-ಅನುಸರಿಸಿಹೋಗಲಾರೆ. ನೂನಂ-ನಿಶ್ಚ
ಯವು ॥೬॥ ತೇ-ನಿನಗೆ ಭ್ರಾತರಿ-ಅಣ್ಣನಲ್ಲಿ, ಸ್ನೇಹಃ-ಪ್ರೇಮೆಯು ನಾಸ್ತಿ-ಇಲ್ಲ. ವ್ಯಸನಂ-ಅಣ್ಣನ ದುಃಖವೂ, ತೇ-ನಿನಗೆ ಪ್ರಿಯಂ-ಇಷ್ಟ,ನ
ನ್ನಾಗಿ. ಮನ್ಯೇ-ತಿಳಿದಿದ್ದೇನೆ, ತೇನ-ಆಕಾರಣದಿಂದ,ಮಹಾದ್ಯುತಿಂ-ಮಹಾಪ್ರಕಾಶವಂತನಾದ, ತಂ-ಆ ಶ್ರೀರಾಮನನ್ನು, ಅಪಶ್ಯನ್-ನೋಡುತ್ತಿರುವವನಾಗಿ,
ವಿಸ್ರಬ್ಧಃ-ವಿಶ್ವಾಸವಾಗಿ. (ಅಂದರೆ ನಿಶ್ಚಿಂತೆಯಾಗಿ) ತಿಷ್ಠಸಿ-ನಿಂತಿದ್ದೀ ॥೭॥ ತ್ವಂ-ನೀನು ಯತ್ಪ್ರಧಾನಃ-ಯಾವ ಶ್ರೀರಾಮನೇ ಮುಖ್ಯ
ನಾಗುಳ್ಳವನಾಗಿ. ಇಹ-ಇಲ್ಲಿ, ಆಗತಃ-ಬಂದೆಯೋ, ತಸ್ಮಿನ್-ಅಂಥಾ ಶ್ರೀರಾಮನು. ಸಂಶಯಂ-ಪ್ರಾಣಸಂಶಯವನ್ನು. ಆಪನ್ನೇಸತಿ-ಹೊಂದಿದವನಾ
ಗುತ್ತಿರಲೀಕಾಗಿ, ಇಹ-ಈ ವನದಲ್ಲಿ. ತಿಷ್ಠಂತ್ಯಾ-ಇರುತ್ತಿರುವ. ಮಯಾ-ನನ್ನಿಂದ. ಕಿಂಕರ್ತವ್ಯಂಹಿ-ಏನುಮಾಡತಕ್ಕದ್ದಿದೆ ॥೮॥ ಇತಿ-ಈಪರಿ
ಯಾಗಿ. ಬ್ರುವಾಣಾಂ-ಹೇಳುತ್ತಿರುವ. ಬಾಷ್ಪಶೋಕಪರಿಪ್ಲುತಾಂ-ಕಂಬನಿಗಳಿಂದಲೂ ವ್ಯಸನದಿಂದಲೂ ಮುಗ್ಗಿಹೋಗುತ್ತಿರುವ, ಮೃಗವಧೂಮಿವ-ಹೆ
ಣ್ಣುಚಿಗರಿಯಂತೆ. ತ್ರಸ್ತಾಂ-ಹೆದರಿಕೊಂಡ, ವೈದೇಹೀಂ-ಜನಕರಾಯನಕುವರಿಯಾದ, ಸೀತಾಂ-ಸೀತಾದೇವಿಯಂಕುರಿತು, ಲಕ್ಷ್ಮಣಃ-ಲಕ್ಷ್ಮಣನು
ಅಬ್ರವೀತ್-ನುಡಿದನು ॥೯॥ ಹೇವೈದೇಹಿ-ಎಲೌಸೀತಾದೇವಿಯೇ- ತೇ-ನಿನ್ನ, ಭರ್ತಾ-ಗಂಡನಾದ ಶ್ರೀರಾಮನು, ಪನ್ನಗಾಸುರಗಂಧರ್ವದೇವಮಾ
ನುಷರಾಕ್ಷಸೈಃ-ಸರ್ಪಗಳಿಂದಲೂ ಅಸುರರಿಂದಲೂ ಗಂಧರ್ವರಿಂದಲೂ ದೇವತೆಗಳಿಂದಲೂ ಮನುಷ್ಯರಿಂದಲೂ ರಾಕ್ಷಸರಿಂದಲೂ, ಜೇತುಂ-ಜಯಿಸುವುದ
ಕ್ಕೆ. ಅಶಕ್ಯಃ-ಸಾಧ್ಯನಲ್ಲ. ನಸಂಶಯಃ-ಸಂಶಯವಿಲ್ಲ ॥೧೦॥ ಹೇದೇವಿ-ಎಲೈ ದೇವಿಯೇ, ಹೇಶೋಭನೇ-ಎಲೌ ಶುಭಕರಳೇ, ಯಃ-ಯಾವ ಪು
ರುಷನು ಸಮರೇ-ಕಾಳಗದಲ್ಲಿ. ವಾಸವೋಪಮಂ-ದೇವೇಂದ್ರನಿಗೆ ಸಮಾನವಾದ, ರಾಮಂ-ಶ್ರೀರಾಮನಂಕುರಿತು, ಪ್ರತಿಯುಧ್ಯೇತ-ಪ್ರತಿಭಟಿಸಿ ಯುದ್ಧ
ವಂ ಮಾಡುವನೋ, ಸಃ-ಅಂಥಾ ಪುರುಷನು, ದೇವಮನುಷ್ಯೇಷು-ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ, ಗಂಧರ್ವೇಷು-ಗಂಧರ್ವರಲ್ಲಿಯೂ, ಪತ
ತ್ರಿಷು-ಪಕ್ಷಿಗಳಲ್ಲಿಯೂ. ರಾಕ್ಷಸೇಷು-ರಕ್ಕಸರಲ್ಲಿಯೂ. ಪಿಶಾಚೇಷು-ಪಿಶಾಚಗಳಲ್ಲಿಯೂ, ಕಿನ್ನರೇಷು-ಕಿನ್ನರರೆಂಬ ದೇವಯೋನಿವಿಶೇಷಗಳಲ್ಲಿಯೂ,
ಮೃಗೇಷು-ಮೃಗಗಳಲ್ಲಿಯೂ, ಘೋರೇಷು-ಭಯಂಕರರಾದ, ದಾನವೇಷು-ರಾಕ್ಷಸಭೇದಗಳಲ್ಲಿಯೂ, ನವಿದ್ಯೇತ-ಇರಲಾರನು ॥೧೧॥ ಅಸ್ಮಿನ್ವನೇ-ಈ
ವನದಲ್ಲಿ. ರಾಘವಂವಿನಾ-ಶ್ರೀರಾಮನಂ ವಿನಾಯಿಸಿ, ತ್ವಾಂ-ನಿನ್ನನ್ನು ಹಾತುಂ-ಬಿಟ್ಟುಹೋಗುವದಕ್ಕೆ, ನೋತ್ಸಹೇ-ಸಮರ್ಥನಾಗಲಾರೆನು, ಏವಂ-ಈ
ಪರಿಯಾಗಿ, ತ್ವಂ-ನೀನು ವಕ್ತುಂ-ಹೇಳುವದಕ್ಕೆ. ನಾರ್ಹಸಿ-ಯೋಗ್ಯಳಾಗಬ್ಯಾಡ, ರಾಮಃ-ಶ್ರೀರಾಮನು, ಸಮರೇ-ಕಾಳಗದಲ್ಲಿ, ಅವಧ್ಯಃ-ವಧಾರ್ಹನಲ್ಲ॥

---

ನೀನು ಆತನು ನಶಿಸಬೇಕೆಂದು ಇಚ್ಛಿಸುತ್ತೀ, ಆತನು ನಿನಗೆ ಒಡಹುಟ್ಟಿದವನಲ್ಲ, ಆತನಿಗೆ ವ್ಯಸನವು ಸಂಭವಿಸಿ
ದ್ದು ನಿನಗೆ ಇಷ್ಟವಾಗಿ ತೋರುವದಾದಕಾರಣ, ಚಿಂತೆಇಲ್ಲದೆ ನಿಂತವನಾಗಿದ್ದೀ ।೭॥ ನೀನು ಯಾವ ಶ್ರೀರಾಮ
ನೇ ಮುಖ್ಯನೆಂದು ತಿಳಿದು ಇಲ್ಲಿಗೆ ಬಂದವನಾದೆಯೋ, ಅಂಥಾ ಶ್ರೀರಾಮನು ಪ್ರಾಣಸಂಶವನ್ನೈದಿದವನಾದರೇ,
ನಿರ್ವಿಣ್ಣಳಾಗಿ ನಿಂತಿರುವ ಹೆಂಗಸಾದ ನನ್ನಿಂದ ಏನು ಮಾಡಲಾದೀತು, ಎಂಬದಾಗಿ ಸೀತಾದೇವಿಯು ಕಂಬನಿ
ಗಳಂ ಸುರಿಸುತ್ತಾ ಚಿಗರಿಯಂತೆ ಹೆದರಿದವಳಾಗಿ ನುಡಿದವಳಾಗಲೂ, ಮಹಾ ಭಯವನ್ನೈದಿದ ಆ ಸೀತಾದೇವಿ
ಯಂ ಕುರಿತು ಲಕ್ಷ್ಮಣನು ನುಡಿವನದೆಂತೆನೆ,—।೯॥ ಎಲೈ ವಿದೇಹರಾಜಪುತ್ರಿಯಾದ ಸೀತಾದೇವಿಯೇ! ನಿನ್ನ
ಪತಿಯಾದ ಶ್ರೀರಾಮನು, ಸರ್ಪಗಳಿಂದಲೂ, ರಾಕ್ಷಸರಿಂದಲೂ, ಗಂಧರ್ವರಿಂದಲೂ, ದೇವತೆಗಳಿಂದಲೂ,
ಯಾರಿಂದಲೂ ಸಹ ಜಯಿಸಲಸಾಧ್ಯನು ॥೧೦॥ ಎಲೈ ದೇವಿಯೇ! ಕೇಳುವವಳಾಗು, ಯಾವ ಪುರುಷ
ನು, ಕಾಳಗದಲ್ಲಿ ಇಂದ್ರಸದೃಶನಾದ ಆ ಶ್ರೀರಾಮನಂ ಕುರಿತು ಪ್ರತಿಭಟಿಸಿ ಯುದ್ಧವಂ ಮಾಡುವನೋ, ಅಂ
ಥಾ ಪುರುಷನು ದೇವತೆಗಳಲ್ಲಿಯೇ ಆಗಲೀ, ರಾಕ್ಷಸರಲ್ಲಿಯೇ ಆಗಲೀ, ಗಂಧರ್ವರಲ್ಲಿಯೇ ಆಗಲೀ, ಮನುಷ್ಯರಲ್ಲಿಯೇ
ಆಗಲೀ, ಮೃಗಗಳಲ್ಲಿಯೇ ಆಗಲೀ, ಭಯಂಕರರಾದ ದಾನವರಲ್ಲಿಯೇ ಆಗಲೀ, ಯಾರಲ್ಲಿಯೂ ಇಲ್ಲ ॥೧೧॥ ನೀ
ನು ಭಯವಂ ಹೊಂದುವಳಾಗಬೇಡ, ಈ ವನದಲ್ಲಿ ನಿನ್ನನ್ನು ಒಬ್ಬಳನ್ನೆ ಬಿಟ್ಟು ನಾನು ತೆರಳಲಾರೆನು, ಆ ಶ್ರೀರಾ
ಮನು ಯಾರಿಗೂ ಅವಧ್ಯನಾಗಿರುವನು ।೧೨॥ ಎಲೈ ದೇವಿಯೇ! ಬಲವಂತರಾದವರ ಸೇನೆಗಳಿಂದಲೂ, ಮ

ತ್ರಿಭಿರ್ಲೋಕೈಸ್ಸಮುದ್ಯುಕ್ತೈಸ್ಸೇಶ್ವರೈರಪಿಸಾಮರೈಃ ।೧೪॥ ಹೃದಯಂನಿರ್ವೃತಂತೇಸ್ತುಸಂತಾಪಸ್ತ್ಯಜ್ಯತಾಮ
ಯಂ । ಆಗಮಿಷ್ಯತಿತೇಭರ್ತಾಶೀಘ್ರಂಹತ್ವಾಮೃಗೋತ್ತಮಂ ॥೧೫॥ ನಚತಸ್ಯಸ್ವರೋವ್ಯಕ್ತಂಮಾಯಯಾಕೇನಚಿ
ತ್ಕೃತಃ । ಗಂಧರ್ವನಗರಪ್ರಖ್ಯಾಮಾಯಾಸಾತಸ್ಯರಕ್ಷಸಃ ॥೧೬॥ ನ್ಯಾಸಭೂತಾಸಿವೈದೇಹಿನ್ಯಸ್ತಾಮಯಿಮಹಾತ್ಮ
ನಾ । ರಾಮೇಣತ್ವಂವರಾರೋಹೇನತ್ವಾಂತ್ಯಕ್ತುಮಿಹೋತ್ಸಹೇ ॥೧೭॥ ಕೃತವೈರಾಶ್ಚವೈದೇಹಿವಯಮೇತೈರ್ನಿಶಾಚರೈಃ ।
ಖರಸ್ಯನಿಧನಾದೇವಜನಸ್ಥಾನವಧಂಪ್ರತಿ ॥೧೮॥ ರಾಕ್ಷಸಾವಿವಿಧಾವಾಚೋವಿಸೃಜಂತಿಮಹಾವನೇ । ಹಿಂಸಾವಿಹಾರಾ
ವೈದೇಹಿನಚಿಂತಯಿತುಮರ್ಹಸಿ ॥೧೯॥ ಲಕ್ಷ್ಮಣೇನೈವಮುಕ್ತಾಸಾಕ್ರುದ್ಧಾಸಂರಕ್ತಲೋಚನಾ । ಅಬ್ರವೀತ್ಪರುಷಂ
ವಾಕ್ಯಂಲಕ್ಷ್ಮಣಂಸತ್ಯವಾದಿನಂ ॥೨೦॥ ಅನಾರ್ಯಾಕರುಣಾರಂಭನೃಶಂಸಕುಲಪಾಂಸನ । ಅಹಂತವಪ್ರಿಯಂಮ
ನ್ಯೇರಾಮಸ್ಯವ್ಯಸನಂಮಹತ್ । ರಾಮಸ್ಯವ್ಯಸನಂದೃಷ್ಟ್ವಾತೇನೈತಾನಿಪ್ರಭಾಷಸೇ ॥೨೧॥ ನೈತಚ್ಚಿತ್ರಂಸಪತ್ನೇಷು

---

ಬಲವತಾಂ-ಬಲಿಷ್ಠರಿಗೆ, ಐಶ್ವರೈರಪಿ-ಸ್ವಾಮ್ಯಗಳಿಂದಲೂ, ಸಾಮರೈಃ-ದೇವತೆಗಳಿಂದೊಡಗೂಡಿದ, ಸೇಶ್ವರೈಃ-ಅಧಿಪತಿಗಳಿಂದೊಡಗೂಡಿದ, ಸಮುದ್ಯುಕ್ತೈಃ-ಯುದ್ಧಸನ್ನದ್ಧರಾದ, ತ್ರಿಭಿರ್ಲೋಕೈಃ-ಈ ಮೂರುಲೋಕಗಳಲ್ಲಿರುವ ಜನಗಳಿಂದಲೂ, ತಸ್ಯ-ಆ ಶ್ರೀರಾಮನ, ಬಲಂ-ಸಾಮರ್ಥ್ಯವು, ಅನಿವಾರ್ಯಂ-ನಿವಾರಿಸಲಸಾಧ್ಯವು ॥೧೪॥ ತೇ-ನಿನ್ನ, ಹೃದಯಂ-ಮನವು, ನಿರ್ವೃತಂ-ಸುಖಯುಕ್ತವಾದ್ದು, ಅಸ್ತು-ಆಗಲಿ, ಅಯಂಸಂತಾಪಃ-ಈ ಸಂಕಟವು, ತ್ಯಜ್ಯತಾಂ-ಬಿಡಲ್ಪಡಲೀ, ತೇ-ನಿನ್ನ, ಭರ್ತಾ-ಗಂಡನು, ಮೃಗೋತ್ತಮಂ-ಉತ್ತಮವಾದ ಜಿಂಕೆಯನ್ನು, ಹತ್ವಾ-ಕೊಂದು. ಶೀಘ್ರಂ-ಜಾಗ್ರತೆಯಾಗಿ, ಆಗಮಿಷ್ಯತಿ-ಬರುವನು. ॥೧೫॥ ತಸ್ಯ-ಆ ಶ್ರೀರಾಮನ, ಸ್ವರಶ್ಚ-ಸ್ವರವು, ನ-ಅಲ್ಲ, ವ್ಯಕ್ತಂ-ಸ್ಪಷ್ಟವು. ಮಾಯಯಾ-ಕಪಟದಿಂದ (ಅಥವಾ-ಮಾಯಯಾ-ಭ್ರಾಂತಿಜನಕವಾದ ಶಕ್ತಿವಿಶೇಷದಿಂದ.) ಕೇನಚಿತ್-ಒಬ್ಬಾನೊಬ್ಬನಿಂದ, ಕೃತಃ-ಮಾಡಲ್ಪಟ್ಟಿತು, ಸಾ-ಅದು, ತಸ್ಯರಕ್ಷಸಃ-ಆ ಮಾರೀಚನ, ಗಂಧರ್ವನಗರಪ್ರಖ್ಯಾ-ಇಂದ್ರಜಾಲವಿದ್ಯೆಕ್ಕೆ ಸಮಾನವಾದ, ಮಾಯಾ-ಸುಳ್ಳಾಗಿದೆ. ॥೧೬॥ ಹೇವೈದೇಹಿ-ಎಲೌ ಸೀತಾದೇವಿಯೇ, ಮಹಾತ್ಮನಾ-ಮಹಾಪ್ರಭಾವವಂತನಾದ, ರಾಮೇಣ-ಶ್ರೀರಾಮನಿಂದ, ತ್ವಂ-ನೀನು, ಮಯಿ-ನನ್ನೊಳಗೆ, ನ್ಯಾಸಭೂತಾ-ನಿಕ್ಷೇಪರೂಪದಂತೆ, ನ್ಯಸ್ತಾ-ಇರಿಸಲ್ಪಟ್ಟವಳು, ಅಸಿ-ಆಗಿದ್ದೀ. ಹೇವರಾರೋಹೇ-ಎಲೈ ಉತ್ತಮಸ್ತ್ರೀಯೆ, ತ್ವಾಂ-ನಿನ್ನನ್ನು, ಇಹ-ಇಲ್ಲಿ, ತ್ಯಕ್ತುಂ-ಬಿಡುವದಕ್ಕೆ, ನೋತ್ಸಹೇ-ಸಮರ್ಥನಾಗಲಾರೆ ॥೧೭॥ ಹೇವೈದೇಹಿ-ಎಲೈ ಸೀತಾದೇವಿಯೇ, ಖರಸ್ಯ-ಖರಾಸುರನ, ನಿಧನಾದೇವ-ಸಂಹಾರಮೊದಲ್ಗೊಂಡು, ಜನಸ್ಥಾನವಧಂಪ್ರತಿ-ಆ ಪುರದ ಉಕ್ತಪದರೂಪವಾದ ಜನಪದೀಕ್ಷದ ನಾಶವನ್ನುದ್ದೇಶಿಸಿ. ವಯಂ-ನಾವುಗಳು, ಏತೈರ್ನಿಶಾಚರೈಃ-ಈ ರಾಕ್ಷಸರಿಂದ, ಕೃತವೈರಾಃ-ಮಾಡಲ್ಪಟ್ಟ ದ್ವೇಷವುಳ್ಳವರಾಗಿದ್ದೇವೆ ॥೧೮॥ ಹೇವೈದೇಹಿ-ಎಲೈ ಸೀತಾದೇವಿಯೇ, ಹಿಂಸಾವಿಹಾರಾಃ-ಪರರಹಿಂಸೆಯೇ ವಿನೋದವಾಗುಳ್ಳ, ರಾಕ್ಷಸಾಃ-ರಕ್ಕಸರು, ಮಹಾವನೇ-ಮಹದರಣ್ಯದಲ್ಲಿ, ವಿವಿಧಾಃ-ನಾನಾಬಗೆಗಳಾದ. ವಾಚಃ-ಮಾತುಗಳನ್ನು. ವಿಸೃಜಂತಿ-ಬಿಡುತ್ತಾರೆ, ಚಿಂತಯಿತುಂ-ಆಲೋಚಿಸುವದಕ್ಕೋಸುಗ, ನಾರ್ಹಸಿ-ಯೋಗ್ಯಳಾಗಬ್ಯಾಡ, ॥೧೯॥ ಲಕ್ಷ್ಮಣೇನ-ಲಕ್ಷ್ಮಣನಿಂದ, ಏವಂ-ಈ ರೀತಿಯಾಗಿ, ಉಕ್ತಾ-ಹೇಳಲ್ಪಟ್ಟ, ಕ್ರುದ್ಧಾ-ಕೋಪಿಷ್ಠಳಾದ, ಸಾ-ಆ ಸೀತಾದೇವಿಯು, ಸಂರಕ್ತಲೋಚನಾ-ಕೆಂಗಣ್ಣುಗಳುಳ್ಳವಳಾಗಿ, ಸತ್ಯವಾದಿನಂ-ಯಥಾರ್ಥವಾದಿಯಾದ, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಪರುಷಂ-ಕ್ರೂರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದಳು, ॥೨೦॥ ಹೇಅನಾರ್ಯ-ಎಲೈ ಅಪೂಜ್ಯನೇ ಹೇಅಕರುಣಾರಂಭ-ಎಲೈ ದಯಾಪ್ರಸಕ್ತಿಯಿಲ್ಲದವನೇ. ಹೇನೃಶಂಸ-ಎಲೈ ಘಾತುಕನೇ, ಹೇಕುಲಪಾಂಸನ-ಎಲೈ ನೀಚನೇ, ರಾಮಸ್ಯ-ಶ್ರೀರಾಮನಿಗೆ, ಮಹತ್-ದೊಡ್ಡದಾದ, ವ್ಯಸನಂ-ದುಃಖವನ್ನು, ತವ-ನಿನಗೆ, ಪ್ರಿಯಂ-ಇಷ್ಟವನ್ನಾಗಿ. ಅಹಂ-ನಾನು, ಮನ್ಯೇ-ತಿಳಿದಿದ್ದೇನೆ. ರಾಮಸ್ಯ-ಶ್ರೀರಾಮನಿಗೆ, ವ್ಯಸನಂ-ದುಃಖವನ್ನು, ದೃಷ್ಟ್ವಾ-ಕಂಡು, ತೇನ-ಆ ಕರುಣಾರಾಹಿತ್ಯವಾದ ದುರ್ಗುಣದಿಂದ, ಏತಾನಿ-ಇಂಥಾಮಾತುಗಳನ್ನು, ಪ್ರಭಾಷಸೇ-ಮಾತನಾಡು

---

ತ್ತು ದೇವತೆಗಳಿಂದಲೂ ಅಧಿಪತಿಗಳಿಂದಲೂ ಸಹಯುಕ್ತವಾದ ಮೂಜಗಗಳಿಂದಲೂ ಆತನಬಲವನ್ನು ನಿವಾರಿಸಲಾಗಲಾರದು, ಆದ್ದರಿಂದ ನೀನು ಸ್ವಸ್ಥಚಿತ್ತಳಾಗಿರುವವಳಾಗು, ನಿನ್ನ ಪತಿಯಾದ ಶ್ರೀರಾಮನು ಆ ಉತ್ತಮವಾದ ಮೃಗವನ್ನು ಹೊಡದು, ಆದನ್ನಿಲ್ಲಿ ತ್ವರೆಯಾಗಿ ತರುವವನಾಗುವನು ।೧೫॥ ನಿಶ್ಚಯವಾಗಿ ಈಗ ನೀಕೇಳಿದ ಶಬ್ದವು ಆತನದಲ್ಲ, ಇದು ಕಪಟದಿಂದ, ಯಾವನೋ, ಒಬ್ಬ ರಾಕ್ಷಸನಿಂದ ಗೈಯಲ್ಪಟ್ಟಿತು. ಇದು ಇಂದ್ರಜಾಲವಿದ್ಯೆಗೆ ಸಮಾನವಾಗಿ ಯಾರಿಂದಲೋ ಪ್ರಯೋಗಿಸಲ್ಪಟ್ಟಿತು, ನೀನಿದಂ ನಂಬುವವಳಾಗಬೇಡ ।೧೬॥ ಶ್ರೀರಾಮನಿಲ್ಲದಿರುವ ಕಾಲದಲ್ಲಿ ನಿನ್ನನ್ನೊರ್ವಳನ್ನೆ ಬಿಟ್ಟು ನಾನು ಪೋಗಲಾರೆನು, ಎಲೈ ತಾಯಿಯೇ! ರಾಕ್ಷಸರೆಲ್ಲ ನಮ್ಮಲ್ಲಿ ವೈರವಂ ಗೈಯುತ್ತಿರುವರು, ಖರನ ಸಂಹಾರವಾದದ್ದು ಮೊದಲ್ಗೊಂಡು ಈ ವನದಲ್ಲಿ ರಾಕ್ಷಸರೆಲ್ಲರು ವಿಧವಿಧವಾಗಿ ಕೂಗುತಲಿರ್ಪರೆ, ನೀನು ಯೋಚಿಸಬೇಡ, ಎಂಬದಾಗಿ ಲಕ್ಷ್ಮಣನು ನುಡಿದವನಾಗಲೂ, ಆ ಮಾತಂಕೇಳಿ ಸೀತಾದೇವಿಯು ಬಹು ಕೋಪವನ್ನೈದಿ, ಕೆಂಗಣ್ಣುಗಳುಳ್ಳವಳಾಗಿ ಸತ್ಯವಾಗಿ ಪೇಳುವ ಆ ಲಕ್ಷ್ಮಣನಂಕುರಿತು ನುಡಿವಳದೆಂತೆನೆ;— ಎಲೋ ದುಷ್ಟನೇ! ನೀಚನೇ, ಘಾತುಕನೇ, ಕುಲದೂಷಕನೇ, ಶ್ರೀರಾಮನಿಗೆ ವ್ಯಸನವು

ಪಾಪಂಲಕ್ಷ್ಮಣಯದ್ಭವೇತ್ । ತ್ವದ್ವಿಧೇಷುನೃಶಂಸೇಷುನಿತ್ಯಂಪ್ರಚ್ಛನ್ನಚಾರಿಷು ।೧೩। ಸುದುಷ್ಟಸ್ತ್ವಂವನೇರಾಮ ಮೇಕಮೇಕೋನುಗಚ್ಛಸಿ । ಮಮಹೇತೋಃಪ್ರತಿಚ್ಛನ್ನಃಪ್ರಯುಕ್ತೋಭರತೇನವಾ ।೧೪। ತನ್ನಸಿದ್ಧ್ಯತಿಸೌಮಿತ್ರೇತವ ವಾಭರತಸ್ಯವಾ । ಕಥಮಿಂದೀವರಶ್ಯಾಮಂಪದ್ಮಪತ್ರನಿಭೇಕ್ಷಣಂ ॥ ಉಪಸಂಶ್ರಿತ್ಯಭರ್ತಾರಂಕಾಮಯೇಯಂಪೃಥಗ್ಜ ನಂ ॥೧೫॥ ಸಮಕ್ಷಂತವಸೌಮಿತ್ರೇಪ್ರಾಣಾಂಸ್ತ್ಯಕ್ಷ್ಯೇನಸಂಶಯಃ । ರಾಮಂವಿನಾಕ್ಷಣಮಪಿನಹಿಜೀವಾಮಿಭೂತ ಲೇ । ಇತ್ಯುಕ್ತಃಪರುಷಂವಾಕ್ಯಂಸೀತಯಾರೋಮಹರ್ಷಣಂ । ಅಬ್ರವೀಲ್ಲಕ್ಷ್ಮಣಸ್ಸೀತಾಂಪ್ರಾಂಜಲಿರ್ವಿಜಿತೇಂದ್ರಿ ಯಃ ॥೧೭॥ ಉತ್ತರಂನೋತ್ಸಹೇವಕ್ತುಂದೈವತಂಭವತೀಮಮ ॥ ವಾಕ್ಯಮಪ್ರತಿರೂಪಂತುನಚಿತ್ರಂಸ್ತ್ರೀಷು ಮೈಥಿಲಿ । ಸ್ವಭಾವಸ್ತ್ವೇಷನಾರೀಣಾಮೇವಂಲೋಕೇಷುದೃಶ್ಯತೇ ॥ವಿಮುಕ್ತಧರ್ಮಾಶ್ಚಪಲಾಸ್ತೀಕ್ಷ್ಣಾಭೇದಕರಾಸ್ತ್ರಿಯಃ॥

---

ತ್ರೀಯಿಃ ||೧೨|| ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ತ್ವದ್ವಿಧೇಷು-ನಿನ್ನಂಥಾವರಾದ, ನಿತ್ಯಂ-ನಿರಂತರವು. ಪ್ರಚ್ಛನ್ನಚಾರಿಷು-ಗೂಢವಾಗಿ ಸಂಚಾರ ಮಾಡುತ್ತಿರುವ ನಿತ್ಯಂ-ನಿರಂತರವೂ, ನೃಶಂಸೇಷು-ಘಾತುಕರಾದ, ಸಾತ್ರೈಷು-ಶತೃಗಳಲ್ಲಿ, ಪಾಪಂ-ಪಾಪಕೃತ್ಯವು. ಭವೇದಿತಿಯತ್-ಆಗುವದೆಂಬುದು ಯಾವದುಂಟೋ, ಏತತ್-ಈ ಪಾಪಕೃತ್ಯವು, ಚಿತ್ರಂ-ಆಶ್ಚರ್ಯಕರವು, ನ-ಅಲ್ಲಾ, ||೧೩|| ಸುದುಷ್ಟಃ-ದುಷ್ಟನಾದ, ತ್ವಂ-ನೀನು, ವನೇ-ಅರಣ್ಯ ದಲ್ಲಿ, ಏಕಂರಾಮಂ-ಒಬ್ಬರಾಮನಂಕುರಿತು, ಮಮಹೇತೋಃ-ನನ್ನ ನಿಮಿತ್ತವಾಗಿ, ಪ್ರತಿಚ್ಛನ್ನಃ-ಗೂಢಚಾರಿಯಾಗಿ, ಅಥವಾ-ಹಾಗಲ್ಲದಿದ್ದರೋಷಂ ಭರತೇನ-ಭರತನಿಂದ ಪ್ರಯುಕ್ತಃ-ಕಳುಹಿಸಲ್ಪಟ್ಟವನಾಗಿ, ಅನುಗಚ್ಛಸಿ-ಅನುಸರಿಸಿ ಬಂದಿದ್ದೀಯಿಃ ||೧೪|| ಹೇಸೌಮಿತ್ರೇ-ಎಲೈ ಲಕ್ಷ್ಮಣನೇ.ತತ್- ಅದು. ತವವಾ-ನಿನಿಗಾಗಲಿ, ಭರತಸ್ಯವಾ-ಭರತನಿಗೇ ಆಗಲಿ, ನಸಿದ್ಧ್ಯತಿ-ಸಿದ್ಧಿಸಲಾರದು, ಇಂದೀವರಶ್ಯಾಮಂ-ಕನ್ನೈದಿಲೆಹಾವು ಗಳಂತೆಬಣ್ಣವುಳ್ಳ, ಪದ್ಮಪತ್ರನಿಭೇಕ್ಷಣಂ-ಕಮಲದ್ಯಗಳಿಗೆ ಸದೃಶವಾದ ನೇತ್ರಗಳುಳ್ಳ. ಭರ್ತಾರಂ-ಗಂಡನನ್ನು. ಉಪಸಂಶ್ರಿತ್ಯ-ಆಶ್ರಯಿಸಿ, ಪೃಥಗ್ಜನಂ-ಕ್ಷುದ್ರಪುರು ಷನನ್ನು, ಕಥಂಕಾಮಯೇಯಂ-ಹ್ಯಾಗೆ ಕೋರುವೆನು ||೧೫|| ॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ತವ-ನಿನ್ನ, ಸಮಕ್ಷಂ-ಯೆದುರಾಗಿ, ಪ್ರಾಣಾನ್- ಪ್ರಾಣಗಳನ್ನು ತ್ಯಕ್ಷ್ಯೇ-ಬಿಡುವೆನು, ನಸಂಶಯಃ-ಸಂಶಯವಿಲ್ಲಾ, ರಾಮಂವಿನಾ-ಶ್ರೀರಾಮನಂಬಿಟ್ಟು, ಕ್ಷಣಮಪಿ-ಕ್ಷಣಕಾಲವಾದರೂ, ಭೂತಲೇ-ಭೂ ಪ್ರದೇಶದಲ್ಲಿ, ನಜೀವಾಮಿಹಿ-ಬದುಕಲಾರೆನು ||೧೬|| ॥ ಇತಿ-ಈಪರಿಯಾಗಿ, ಸೀತಯಾ-ಸೀತಾದೇವಿಯಿಂದ, ಪರುಷಂ-ಕಠಿನವಾದ, ರೋಮಹರ್ಷ ಣಂ-ರೋಮಾಂಚ ಜನಕವಾದ. ವಾಕ್ಯಂ-ಮಾತನ್ನು. ಉಕ್ತಃ-ಹೇಳಲ್ಪಟ್ಟ ಇಂದ್ರಿಯವ್ಯಾಪಾರವುಳ್ಳ, ಲಕ್ಷ್ಮಣಃ-ಲಕ್ಷ್ಮಣನು. ಪ್ರಾಂಜಲಿಃ-ಅಂ ಜಲಿಬದ್ಧನಾಗಿ, ಸೀತಾಂ-ಸೀತಾದೇವಿಯಂಕುರಿತು, ಅಬ್ರವೀತ್-ನುಡಿದನು ||೧೭|| ॥ ಹೆ ಮೈಥಿಲಿ-ಎಲೌಸೀತಾದೇವಿಯೇ. ಉತ್ತರಂ-ಪ್ರತ್ಯುತ್ತರವ ನ್ನು. ವಕ್ತುಂ-ಹೇಳುವದಕ್ಕಾಗಿ, ನೋತ್ಸಹೆ-ಉದ್ಯುಕ್ತನಾಗಲಾರೆನು, ಮಮ-ಯನಗೆ, ಭವತೀ-ನೀನು. ದೈವತಂ-ದೇವತಾಸ್ವರೂಪಳು, ಸ್ತ್ರೀಷು- ಹೆಂಗಳಲ್ಲಿ. ಅಪ್ರತಿರೂಪಂ-ಅತ್ಯಂತಅನುಚಿತವಾದ, ವಾಕ್ಯಂ-ಮಾತು, ನಚಿತ್ರಂ-ಆಶ್ಚರ್ಯಕರವಾದದ್ದಲ್ಲ||೧೮||ಏಷಃ-ಇದು,ನಾರೀಣಾಂ-ಹೆಂಗಸರಿಗೆ,ಸ್ವಭಾ ವಃ-ಸ್ವಭಾವವೇ, ಏವಂ-ಈಪರಿಯಾಗಿ, ಲೋಕೇಷು-ಲೋಕಗಳಲ್ಲಿ, ದೃಶ್ಯತೇ-ಕಾಣಲ್ಪಡುತ್ತದೆ,ಹೆವೈದೆಹಿ-ಎಲೌಸೀತಾದೇವಿಯೇ,ಹೆಜನಕಾತ್ಮಜೆ-ಎಲೈ ಜನಕರಾಯನಮಗಳೇ, ಸ್ತ್ರಿಯಃ-ಸ್ತ್ರೀರುಗಳು,ವಿಮುಕ್ತಧರ್ಮಾಃ-ಬಿಡಲ್ಪಟ್ಟ ಧರ್ಮವುಳ್ಳವರು. ಚಪಲಾಃ-ಚಂಚಲಚಿತ್ತರೂ, ತೀಕ್ಷ್ಣಾಃ-ಕ್ರೂ

---

ಸಂಭವಿಸಿದಂಥಾದ್ದಾದರೂ ಕೂಡಾ ನೀನೀಪರಿ ಮಾತಾಡುತ್ತಲಿರುವೆ ಯಾದಕಾರಣ ಅದು ನಿನಗೆ ಇಷ್ಟವಾದಂತೆ ತೋರುತ್ತದೆ ।೧೨। ಎಲೈ ಲಕ್ಷ್ಮಣನೇ, ಲೋಕದೊಳು ಸಪತ್ನೀಪುತ್ರರಲ್ಲಿ ಪಾಪವಂ ಗೈಯ್ಯುವದು ಯೇನೂ ಆ ಶ್ಚರ್ಯವಲ್ಲ, ಅದರಲ್ಲಿಯೂ ಮಹಾ ಘಾತುಕರಾದ ಮತ್ತು ನಿರಂತರವು ಪೊಳಗಡೆಯಲ್ಲಿಯೇ ವೈರಂ ಬೆಳೆಯಿಸುತಿ ರುವ ನಿನ್ನಂಥಾ ವರಲ್ಲಿ ಉಂಟಾಗುವದು ಯೇನಾಶ್ಚರ್ಯವು? ।೧೩। ಎಲೋ, ಎಲೋ, ದುಷ್ಟನೇ, ನನ್ನಲ್ಲಿ ಇಷ್ಟ ವುಳ್ಳವನಾಗಿ ನಿನ್ನ ಸ್ವಬುದ್ಧಿಯಿಂದಲೋ ಅಥವಾ ಭರತನಿಂದಲೋ ಪ್ರೇರಿಸಲ್ಪಟ್ಟವನಾಗಿ, ನೀನೊಬ್ಬನೇ ಏಕಾಂಗಿ ಯಾದ ಶ್ರೀರಾಮನನ್ನು ಅನುಸರಿಸಿ ಬಂದವನಾದೆ।೧೪।ನಿನ್ನ ಭಿಪ್ರಾಯವೇ ಆಗಲಿ ಅಥವಾ ಭರತನ ಇಷ್ಟವೇಆಗಲಿ, ಯೆಂದಿಗೂ ಸಿದ್ಧಿಸುವದಿಲ್ಲ, ಕನ್ನೈದಿಲೆಯಂತೆ ಕಪ್ಪಾದ ಬಣ್ಣವುಳ್ಳವನಾಗಿಯೂ, ಕಮಲಪತ್ರಗಳಂತೆ ವಿಸ್ತಾರ ವಾದ ನೇತ್ರಂಗಳುಳ್ಳವನಾಗಿಯೂ ಇರುವ ಅಂಥಾ ಪತಿಯ ಸಂಸರ್ಗವನ್ನೈದಿ ಅಂಥಾ ನೀಚಜನವನ್ನು ನಾಸಿಚ್ಛಿ ಸತಕ್ಕವಳೇ; ಯೆಂದಿಗೂ ಇಚ್ಛಿಸಲಾರೆನು, ಎಲೋ, ಎಲೋ, ಲಕ್ಷ್ಮಣನೇ, ನೀನು ನೋಡುತಿರುವಾಗಲೇ ನಾ ನು ಪ್ರಾಣಂಗಳಂ ಬಿಡುವೆನು ನೋಡು, ಈ ವಿಷಯದಲ್ಲಿ ಸಂದೇಹವಿಲ್ಲ; ಯೆನ್ನ ಪ್ರಾಣಕಾಂತನಾದ ಆ ಶ್ರೀರಾ ಮವಂ ಬಿಟ್ಟು ಪೊಂದು ಕ್ಷಣವಾದರೂ ನಾನಿರಲಾರೆನು, ಎಂದು ಅತಿಕಠಿಣವಾಗಿ ಸೀತಾದೇವಿಯು ನುಡಿದವಳಾಗ ಲೂ, ರೋಮಾಂಚವನ್ನುಂಟುಮಾಡುವ ಆ ವಾಕ್ಯವಂ ಕೇಳಿ, ಲಕ್ಷ್ಮಣನು ಜಿತೇಂದ್ರಿಯನಾಗಿಯೂ ಅಂಜಲಿಬದ್ಧ ವಂ ಗೈದವನಾಗಿಯೂ ಇರುವವನಾಗಿ, ಆಗ ಆಕೆಯಂ ಕುರಿತು, ಎಲೈ ದೇವಿಯೇ,ನೀನೆನಗೆ ಪರದೇವತಾ ಸ್ವರೂ ಪಳಾದಕಾರಣ ನಿನಗೆ ಪ್ರತಿಯಾಗಿ ನಾನು ಪೇಳಲಾರೆನು ।೧೮। ಎಲೈ ಮಿಥಿಲರಾಜಪುತ್ರಿಯೇ, ಲೋಕದೊಳು

ನಸಹೇಹೀದೃಶಂವಾಕ್ಯಂವೈದೇಹಿಜನಕಾತ್ಮಜೆ । ಶ್ರೋತ್ರಯೋರುಭಯೋರ್ಮಧ್ಯೇತಪ್ತನಾರಾಚಸನ್ನಿಭಂ ॥೩೦॥ ಉಪಶೃಣ್ವಂತುಮೇಸರ್ವೇಸಾಕ್ಷಿಭೂತಾವನೇಚರಾಃ ॥ ನ್ಯಾಯವಾದೀಯಥಾನ್ಯಾಯಮುಕ್ತೋಹಂಪರುಷಂತ್ವಯಾ ॥ ಧಿಕ್ತ್ವಾಮದ್ಯಪ್ರಣಶ್ಯತ್ವಂಯನ್ಮಾಮೇವಂವಿಶಂಕಸೇ।ಸ್ತ್ರೀತ್ವಂದುಷ್ಟಂಸ್ವಭಾವೇನಗುರುವಾಕ್ಯೇವ್ಯವಸ್ಥಿತಂ ॥೩೧॥ ಗಮಿಷ್ಯೇಯತ್ರಕಾಕುತ್ಸ್ಥಸ್ಸ್ವಸ್ತಿತೇಸ್ತುವರಾನನೆ । ರಕ್ಷಂತುತ್ವಾಂವಿಶಾಲಾಕ್ಷಿಸಮಗ್ರಾವನದೇವತಾಃ ॥೩೨॥ ನಿಮಿತ್ತಾನಿಹಿಘೋರಾಣಿಯಾನಿಪ್ರಾದುರ್ಭವಂತಿಮೇ । ಅಪಿತ್ವಾಂಸಹರಾಮೇಣಪಶ್ಯೇಯಂಪುನರಾಗತಃ ॥ ನವೇತ್ಯೇತನ್ನಜಾನಾಮಿವೈದೇಹಿಜನಕಾತ್ಮಜೆ ॥ ಲಕ್ಷ್ಮಣೇನೈವಮುಕ್ತಾಸಾರುದಂತೀಜನಕಾತ್ಮಜಾ । ಪ್ರತ್ಯುವಾಚತತೋವಾಕ್ಯಂತೀವ್ರಂಬಾಷ್ಪಪರಿಪ್ಲುತಾ ॥೩೫॥ ಗೋದಾವರೀಂಪ್ರವೇಕ್ಷ್ಯಾಮಿವಿನಾರಾಮೇಣಲಕ್ಷ್ಮಣ । ಆಬಂಧಿಷ್ಯೇಥವಾತ್ಯಕ್ಷ್ಯೇವಿಷಮೇ

ಹೃದಯವುಳ್ಳವರು, ಭೇದಕರಾಃ-ಪರಸ್ಪರ ಸ್ನೇಹವನ್ನು ಹೋಗಲಾಡಿಸುವರು, ಈದೃಶಂ-ಇಂಥಾದ್ದಾದ. ಮೇ-ನನ್ನ, ಉಭಯೋಃ-ಶ್ರೋತ್ರಯೋಃ-ಎರಡು ಕಿವಿಗಳಿಗೂ, ಅದ್ಯ-ಈಗ, ತಪ್ತನಾರಾಚಸನ್ನಿಭಂ-ಕಾಸಲ್ಪಟ್ಟ ಬಾಣಕ್ಕೆ ಸಮಾನವಾದ. ವಾಕ್ಯಂ-ಮಾತನ್ನು ನಸಹೇಹಿ-ಸಹಿಸಲಾರೆನಷ್ಟೆ ॥೩೦॥ ನ್ಯಾಯವಾದೀ-ಯುಕ್ತವಾಗಿಯೇ ಹೇಳುತ್ತಿರುವ, ಅಹಂ-ನಾನು, ತ್ವಯಾ-ನಿನ್ನಿಂದ, ಅನ್ಯಾಯಂ-ಅನುಚಿತವಾದಂತೆ, ಪರುಷಂ-ಕಠಿನವಾಗಿ, ಉಕ್ತಃ-ಹೇಳಲ್ಪಟ್ಟವನಾದೆನೋ, ತಥಾ-ಹಾಗೆಯೇ, ಸಾಕ್ಷಿಭೂತಾಃ-ಸಾಕ್ಷಿಗಳಾಗಿರುವ, ಸರ್ವೆ-ಸಮಸ್ತರಾದ, ವನೇಚರಾಃ-ವನಚರರೆಲ್ಲರೂಕೂಡ, ಉಪಶೃಣ್ವಂತು-ಕೇಳಲಿ ॥೩೧॥ ತ್ವಾಂ-ನಿನ್ನನ್ನು, ಧಿಕ್-ಛಿ ನಿಂದಿಸು, ತ್ವಂ-ನೀನು, ಅದ್ಯ-ಈಗಲೇ, ಪ್ರಣಶ್ಯ-ನಾಶವಾಗಿಹೋಗು. ಯಸ್ಮಾತ್-ಯಾವಕಾರಣದದೆಶೆಯಿಂದ. ಗುರುವಾಕ್ಯೇ-ಗುರುವಾದ ಅಣ್ಣನ ಮಾತಿನಲ್ಲಿ, ವ್ಯವಸ್ಥಿತಂ-ಕಟ್ಟುಬಿದ್ದಿರುವ, ಮಾಂ-ನನ್ನನ್ನು ಕುರಿತು. ಏವಂ-ಈಪರಿಯಾಗಿ, ವಿಶಂಕಸೇ-ಸಂಶಯಗೊಳ್ಳುತ್ತೀಯೋ, ತಸ್ಮಾತ್-ಆಕಾರಣದದೆಶೆಯಿಂದ, ಸ್ತ್ರೀತ್ವಂ-ಹೆಂಗಳ ಸ್ವಭಾವವು, ಸ್ವಭಾವೇನ-ಸ್ವರೂಪದಿಂದಲೇ, ದುಷ್ಟಂ-ದುಷ್ಟವಾದದ್ದು ॥೩೨॥ ಹೆವರಾನನೆ-ಎಲೈ ಶ್ರೇಷ್ಠವಾದ ಮುಖವುಳ್ಳವಳೇ, ತೇ-ನಿನಗೆ. ಸ್ವಸ್ತಿ-ಶುಭವು ಅಸ್ತು-ಆಗಲಿ, ಕಾಕುತ್ಸ್ಥಃ-ಶ್ರೀರಾಮನು. ಯತ್ರ-ಎಲ್ಲಿಯೋ, ತತ್ರ-ಅಲ್ಲಿ, ಗಮಿಷ್ಯೇ-ಹೋಗುವೆನು, ಹೆವಿಶಾಲಾಕ್ಷಿ-ಎಲೈ ವಿಸ್ತಾರವಾದ ನೇತ್ರಗಳುಳ್ಳವಳೇ, ತ್ವಾಂ-ನಿನ್ನನ್ನು, ಸಮಗ್ರಾಃ-ಸಮಸ್ತರಾದ, ವನದೇವತಾಃ-ವನಾಭಿಮಾನಿದೇವತೆಗಳು, ರಕ್ಷಂತು-ಸಂರಕ್ಷಿಸಲಿ ॥೩೩॥ ಮೇ-ನನಗೆ, ಘೋರಾಣಿ-ಕ್ರೂರಗಳಾದ, ಯಾನಿನಿಮಿತ್ತಾನಿ-ಯಾವ ದುರ್ನಿಮಿತ್ತಗಳು. ಪ್ರಾದುರ್ಭವಂತಿ-ಹುಟ್ಟುತ್ತವೋ, ಪುನರಾಗತಃ-ಮತ್ತು ತಿರುಗಿಬಂದವನಾಗಿ, ರಾಮೇಣಸಹ-ಶ್ರೀರಾಮನೊಡಗೂಡ, ತ್ವಾಂ-ನಿನ್ನನ್ನು, ಪಶ್ಯೇಯಮಪಿ-ನೋಡುವೆನೋ ಏನು, ನವಾ-ಇಲ್ಲವೇ ಇಲ್ಲವೋ, ಹೆವೈದೇಹಿ-ಎಲೈ ಸೀತಾದೇವಿಯೇ, ಹೆಜನಕಾತ್ಮಜೆ-ಎಲೌ ಜನಕರಾಯನ ಕುವರಿಯೇ. ಏತತ್-ಇದನ್ನು, ನಜಾನಾಮಿ-ಅರಿಯೆನು ॥೩೪॥ ಏವಂ-ಈಪರಿಯಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ, ಉಕ್ತಾ-ಹೇಳಲ್ಪಟ್ಟ, ಸಾಜನಕಾತ್ಮಜಾ-ಆ ಸೀತಾದೇವಿಯು, ರುದಂತೀ-ರೋದನಮಾಡುತ್ತಿರುವಳಾಗಿ, ತತಃ-ಬಳಿಕ. ಬಾಷ್ಪಪರಿಪ್ಲುತಾ-ಕಂಬನಿಯಿಂದ ತೊಯಿಸಲ್ಪಟ್ಟವಳಾಗಿ, ತೀವ್ರಂ-ತೀಕ್ಷ್ಣವಾದ, ವಾಕ್ಯಂ-ಮಾತನ್ನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟಳು ॥೩೫॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ರಾಮೇಣವಿನಾ-ಶ್ರೀರಾಮನಂ ವಿನಾಯಿಸಿ, ಗೋದಾವರೀಂ-ಗೋದಾವರೀನದಿಯನ್ನು, ಪ್ರವೇಕ್ಷ್ಯಾಮಿ-ಪ್ರವೇಶಿಸುವೆನು, ವಿಷಮೇವಾ-ಬೆಟ್ಟದಜರಿಯೇ ಮುಂತಾದ ವಿಷಮಪ್ರದೇಶದಲ್ಲಿ, ಆತ್ಮನಃ-ನನ್ನ, ದೇಹಂ-ಶರೀರವನ್ನು, ತ್ಯಕ್ಷ್ಯೇ-ಬಿಡುವೆನು, ಅಹಂ-ನಾನು, ತೀಕ್ಷ್ಣಂ-

ಸ್ತ್ರೀಯರಲ್ಲಿ ಅಸದೃಶವಾದ ಇಂಥಾ ಮಾತುಗಳಂ ಪೇಳುವದು ಯೇನಾಶ್ಚರ್ಯವಲ್ಲ, ಸ್ತ್ರೀಸ್ವಭಾವವೇ ಇಂಥಾದ್ದೆಂದು ಲೋಕದಲ್ಲಿ ಯೆಲ್ಲರಿಗೂ ತಿಳಿವದು, ಸಾಧಾರವಾಗಿ ಪೆಂಗಳು ಧರ್ಮರಹಿತರಾಗಿಯೂ, ಚಪಲಚಿತ್ತರಾಗಿಯೂ ಕ್ರೂರವಾಗಿ ಮಾತಾಡುವವರಾಗಿಯೂ, ಭೇದವನ್ನುಂಟುಮಾಡುವವರಾಗಿಯೂ ಇರುವರು, ಜನಕರಾಜಪುತ್ರಿಯಾದ ಸೀತಾದೇವಿಯೇ, ನಾನಿಂಥಾ ಮಾತುಗಳಂ ಸಹಿಸಲಾರೆನು, ಎಲೈ ವನದೇವತೆಗಳಿರಾ! ಈಗ ನನ್ನ ಶ್ರೋತ್ರವನ್ನೈದಿದ ಮತ್ತು ತಪಿಸಲ್ಪಟ್ಟ ಬಾಣದಂತೆ ಅತಿಕ್ರೂರವಾದ ಈ ಮಾತುಗಳನ್ನು ನೀವೆಲ್ಲರು ಕೇಳುವವರಾಗಿ, ನಾನು ನ್ಯಾಯವಾಗಿ ಪೇಳಿದರೂ ಕೂಡಾ, ಅನ್ಯಾಯದಿಂದ ಇಷ್ಟು ಕಠಿಣವಾಗಿ ಪೇಳಲ್ಪಟ್ಟವನಾದೆ, ಅಯ್ಯೋ ದೇವಿಯೇ! ನನ್ನಲ್ಲಿ ಈ ರೀತಿ ಶಂಕಿಸುವವಳಾದೆ ಯಾದಕಾರಣ, ನೀನೆಲ್ಲಿಯಾದರೂ ನಾಶವಾಗುವವಳಾಗು, ಸ್ತ್ರೀಸ್ವಭಾವವು ಈಗ ತಿಳಿದಂಥಾದ್ದಾಯಿತು, ಎಲೈ ಶುಭಕರವಾದ ಮುಖವುಳ್ಳವಳೇ! ಶ್ರೀರಾಮನೆಲ್ಲಿರುವನೋ, ಅಲ್ಲಿಗೆ ಹುಡುಕಿಕೊಂಡು ಪೋಗುವೆನು ನಿನಗೆ ಶುಭವಾಗಲಿ ॥೩೩॥ ಎಲೈ ದೇವಿಯೇ! ಈ ವನದೇವತೆಗಳೆಲ್ಲರು ನಿನ್ನನ್ನು ಪಾಲಿಸುತ್ತಿರಲಿ, ಹಾಹಾ! ನನಗೆ ಮಹಾ ಭಯಂಕರವಾದ ನಿಮಿತ್ತಂಗಳುಂಟಾಗುತಲಿವೆ, ಎಲೈ ದೇವಿಯೇ, ಪುನಃ ರಾಮನೊಂದಿಗೆ ಶೇರಿ ಬಂದವನಾಗಿ ನಿನ್ನನ್ನು ನೋಡುವೆನೋ ಇಲ್ಲವೋ, ಎಂದು ಲಕ್ಷ್ಮಣನಿಂದ ಪೇಳಲ್ಪಟ್ಟವಳಾಗಿ ಆ ಸೀತಾದೇವಿಯು ಘಟ್ಟಿಯಾಗಿ ಅಳುತ್ತಾ ಲಕ್ಷ್ಮಣನಂ ಕುರಿತಿಂತೆಂದಳು ॥೩೫॥ ಎಲೋ ಲಕ್ಷ್ಮಣನೇ! ನಾನಿ

ದೇಹಮಾತ್ಮನಃ । ಪಿಬಾಮ್ಯಹಂವಿಷಂತೀಕ್ಷ್ಣಂಪ್ರವೇಕ್ಷ್ಯಾಮಿಹುತಾಶನಂ । ನತ್ವಹಂರಾಘವಾದನ್ಯಂಪದಾಪಿಪುರು
ಷಂಸ್ಪೃಶೇ ॥೩೭॥ ಇತಿಲಕ್ಷ್ಮಣಮಾಕ್ರುಶ್ಯಸೀತಾದುಃಖಸಮನ್ವಿತಾ । ಪಾಣಿಭ್ಯಾಂರುದತೀದುಃಖಾದುದರಂಪ್ರ
ಜಘಾನಹ ॥೩೮॥ ತಾಮಾರ್ತರೂಪಾಂವಿಮನಾರುದಂತೀಂಸೌಮಿತ್ರಿರಾಲೋಕ್ಯವಿಶಾಲನೇತ್ರಾಂ । ಆಶ್ವಾಸಯಾಮಾ
ಸನಚೈವಭರ್ತುಸ್ತಂಭ್ರಾತರಂಕಿಂಚಿದುವಾಚಸೀತಾ ॥೩೯॥ ತತಸ್ತುಸೀತಾಮಭಿವಾದ್ಯಲಕ್ಷ್ಮಣಃಕೃತಾಂಜಲಿಃಕಿಂ
ಚಿದಭಿಪ್ರಣಮ್ಯಚ । ಅನ್ವೀಕ್ಷಮಾಣೋಬಹುಶಶ್ಚಮೈಥಿಲೀಂಜಗಾಮರಾಮಸ್ಯಸಮೀಪಮಾತ್ಮವಾನ್ ॥೪೦॥

—*** ಇತಿಶ್ರೀಮದಾರಣ್ಯಕಾಂಡೇ-ಪಂಚಚತ್ವಾರಿಂಶಸ್ಸರ್ಗಃ ***—

ತಯಾಪರುಷಮುಕ್ತಸ್ತುಕುಪಿತೋರಾಘವಾನುಜಃ । ಸವಿಕಾಂಕ್ಷನ್ಭೃಶಂರಾಮಂಪ್ರತಸ್ಥೇನಚಿರಾದಿವ ॥೧॥
ತದಾಸಾದ್ಯದಶಗ್ರೀವಃಕ್ಷಿಪ್ರಮಂತರಮಾಸ್ಥಿತಃ । ಅಭಿಚಕ್ರಾಮವೈದೇಹೀಂಪರಿವ್ರಾಜಕರೂಪಧೃತ್ ॥ ಶ್ಲಕ್ಷ್ಣಕಾಷಾ

---

ಕ್ರೂರವಾದ, ವಿಷಂ-ವಿಷವನ್ನು, ಪಿಬಾಮಿ-ಪಾನಮಾಡುತ್ತೇನೆ, ಹುತಾಶನಂ-ಅಗ್ನಿಯನ್ನಾದರೂ, ಪ್ರವೇಕ್ಷ್ಯಾಮಿ-ಪ್ರವೇಶಿಸುವೆನು, ರಾಘವಾತ್-ಶ್ರೀ ರಾಮನಿಗಿಂತಲೂ, ಅನ್ಯಂ-ಮತ್ತೊಬ್ಬನಾದ, ಪುರುಷಂತು-ಮನುಜನನ್ನಾದರೆ, ಪದಾಪಿ-ಕಾಲಿನಿಂದಲೂಕೂಡ, ಅಹಂ-ನಾನು, ನಸ್ಪೃಶೇ-ಸ್ಪರ್ಶಮಾಡ ಲಾರೆ ॥೩೭॥ ॥ ಇತಿ-ಈರೀತಿಯಾಗಿ, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಆಕ್ರುಶ್ಯ-ಕೋಪಗೊಂಡ, ಸೀತಾ-ಸೀತಾದೇವಿಯು. ದುಃಖಸಮನ್ವಿತಾ-ವ್ಯಸನಾಕ್ರಾಂತಳಾಗಿ, ರುದತೀ-ಅಳುತ್ತಿರುವವಳಾಗಿ. ದುಃಖಾತ್-ಶೋಕದಬೇಗೆಯಿಂದ, ಪಾಣಿಭ್ಯಾಂ-ಹಸ್ತಗಳಿಂದ, ಉದರಂ-ಎದೆಯನ್ನು. ಪ್ರಜಘಾನಹ-ಹೊಡೆದುಕೊಂಡಳಷ್ಟೆ ॥೩೮॥ ॥ ಸೌಮಿತ್ರಿಃ-ಲಕ್ಷ್ಮಣನು. ರುದಂತೀಂ-ಅಳುತ್ತಿರುವ, ಆರ್ತರೂಪಾಂ-ದೀನಸ್ವರೂಪಳಾದ, ವಿಶಾಲನೇತ್ರಾಂ-ವಿಸ್ತಾರವಾದ ನೇತ್ರಗಳುಳ್ಳ, ತಾಂ-ಆ ಸೀತಾದೇವಿಯನ್ನು. ಆಲೋಕ್ಯ-ಕಂಡು. ವಿಮನಾಃ-ವಿಷಾದಗೊಂಡ ಮನಸ್ಸುಳ್ಳವನಾಗಿ, ಆಶ್ವಾಸಯಾಮಾಸ-ಸಮಾಧಾನಗೊಳಿಸಿದನು, ಸೀತಾತು-ಸೀತಾದೇವಿಯಾದರೆ. ಭರ್ತುಃ-ಗಂಡನಿಗೆ, ಭ್ರಾತರಂ-ತಮ್ಮನಾದ, ತಂ-ಆ ಲಕ್ಷ್ಮಣನಂಕುರಿತು, ಕಿಂಚಿತ್-ಸ್ವಲ್ಪವಾದರೂ, ನೋವಾಚೈವ-ಮಾತನ್ನೇ ಆಡಲಿಲ್ಲ ॥೩೯॥ ॥ ತತಃ-ಬಳಿಕ, ಲಕ್ಷ್ಮಣಃ-ಲಕ್ಷ್ಮಣನು, ಆತ್ಮವಾನ್-ಧೈರ್ಯಗೊಂಡವನಾಗಿ, ಸೀತಾಂ-ಸೀತಾದೇವಿಯನ್ನು. ಅಭಿವಾದ್ಯ-ನಮಸ್ಕರಿಸಿ. ಕೃತಾಂಜಲಿಃ-ಕೈಮುಗಿದವನಾಗಿ, ಕಿಂಚಿತ್-ಸ್ವಲ್ಪವಾಗಿ, ಅಭಿಪ್ರಣಮ್ಯ-ನಮ್ರನಾಗಿ, ಮೈಥಿಲೀಂ-ಸೀತಾದೇವಿಯನ್ನು. ಬಹುಶಃ-ಅನೇಕಪ್ರಕಾರವಾಗಿ, ಅನ್ವೀಕ್ಷಮಾಣಃ-ನೋಡುತ್ತಿರುವನಾಗಿ. ರಾಮಸ್ಯ-ಶ್ರೀರಾಮನ. ಸಮೀಪಂ-ಸನ್ನಿಧಾನವಂಕುರಿತು, ಜಗಾಮ-ತೆರಳಿದನು ॥೪೦॥ ॥

—**ಇತಿಶ್ರೀಮದಾರಣ್ಯಕಾಂಡೇ-ಪಂಚಚತ್ವಾರಿಂಶಸ್ಸರ್ಗಃ**—

ತಯಾ-ಆ ಸೀತಾದೇವಿಯಿಂದ, ಪರುಷಂ-ಕಠಿನೋಕ್ತಿಯನ್ನು, ಉಕ್ತಃ-ಹೇಳಲ್ಪಟ್ಟವನಾದಕಾರಣ, ಕುಪಿತಃ-ಕೋಪಗೊಂಡ, ರಾಘವಾನುಜಃ-ಶ್ರೀರಾಮನ ತಮ್ಮನಾದ, ಸಃ-ಆ ಲಕ್ಷ್ಮಣನು, ಭೃಶಂ-ಬಹಳವಾಗಿ, ವಿಕಾಂಕ್ಷನ್-ಇಷ್ಟವಿಲ್ಲದವನಾಗಿಯೇ, ರಾಮಂ-ಶ್ರೀರಾಮನಂಕುರಿತು, ನಚಿರಾದಿವ-ಜಾಗ್ರತೆಯಾಗಿ ಇದ್ದಂತೆಯೇ, ಪ್ರತಸ್ಥೇ-ತೆರಳಿದನು ॥೧॥ ದಶಗ್ರೀವಃ-ಹತ್ತು ಕೊರಳುಗಳುಳ್ಳ ರಾವಣನು. ತದಂತರಂ-ಆ ಲಕ್ಷ್ಮಣ ಪ್ರಯಾಣರೂಪವಾದ ಅವಕಾಶವನ್ನು, ಆಸ್ಥಿತಃ-ಹೊಂದಿದವನಾಗಿ. ಆಸಾದ್ಯ-ಹೊಂದಿ, ಕ್ಷಿಪ್ರಂ-ಜಾಗ್ರತೆಯಾಗಿ, ಪರಿವ್ರಾಜಕರೂಪಧೃಕ್-ಸನ್ಯಾಸಿಯರೂಪವಂ ಧರಿಸಿದವನಾಗಿ, ವೈದೇಹೀಂ-ಸೀತಾದೇವಿಯನ್ನುಕುರಿತು, ಅಭಿಚಕ್ರಾಮ-ಬಂದನು ॥೨॥ ಶ್ಲಕ್ಷ್ಣಕಾಷಾಯಸಂವೀತಃ-ಮೃದುವಾದ ಕಾ

---

ದಂ ಸೈರಿಸಲಾರದೆ ಗೋದಾವರೀ ನದಿಯಲ್ಲಾದರೂ ಬೀಳುವೆನು, ಅಥವಾ ಯೋಣಿಯನ್ನಾದರೂ ಹಾಕಿಕೊಳ್ಳುವೆನು, ಇಲ್ಲದಿದ್ದರೆ ವಿಷಪಾನವನ್ನಾದರೂ ಮಾಡುವೆನು, ಅಥವಾ ಅಗ್ನಿಯಲ್ಲಿ ಯಾದರೂಪ್ರವೇಶಂಗೈಯ್ಯುವೆನು, ಈ ರೀತಿಯಲ್ಲಿ ಹ್ಯಾಗಾದರೂ ಪ್ರಾಣವಂ ಬಿಡುವೆನೇ ಹೊರತು ಪರಪುರುಷನನ್ನು ಸ್ಪರ್ಶಯಂ ಗೈಯ್ಯಲಾರೆನೆಂದು ಬಹು ಕೋಪವಂ ಗೈದು ಅತಿದುಃಖಿತಳಾಗಿ ಅಳುವವಳಾಗಿ ಲಕ್ಷ್ಮಣನಂ ಕುರಿತು ಯೆದೆಯಘಾತವಂ ಮಾಡಿಕೊಂಡಳು ॥೩೮॥ ಅನಂತರದಲ್ಲಿ ಲಕ್ಷ್ಮಣನು ಈ ರೀತಿ ಅಳುತ್ತಲೂ ಯೆದೆಯಂಚಚ್ಚಿಕ್ಕೊಳ್ಳುತ್ತಲೂ ಇರುವ ಆ ದೇವಿಯಂ ಕಂಡು ತಾನು ಮನಗೆಟ್ಟವನಾಗಿ, ಆಕೆಯಂ ಸಮಾಧಾನಗೊಳಿಸಿದನು, ಅನಂತರದಲ್ಲಿ ಸೀತಾದೇವಿಯು ಆ ಲಕ್ಷ್ಮಣನಂ ಕುರಿತು ಯೇನೂ ಹೇಳಲಿಲ್ಲ ॥೩೯॥ ಅನಂತರದಲ್ಲಿ ಲಕ್ಷ್ಮಣನು ಮನಸಾ ಧೈರ್ಯವಾಡಿಕ್ಕೊಂಡವನಾಗಿ, ಆ ಸೀತಾ ದೇವಿಗೆ ನಮಸ್ಕಾರವಂ ಗೈದು, ಅಂಜಲಿಬದ್ಧನಾಗಿ, ಸ್ವಲ್ಪ ನಮ್ರನಾಗಿ, ಆಕೆಯನ್ನು ಅನೇಕವಿಧವಾಗಿ ನೋಡುತ್ತಾ ಶ್ರೀರಾಮನಸಮೀಪವಂಕುರಿತುಸಾರಿದನು॥ —*೪೫ನೇಸರ್ಗಂಮುಗಿದುದು*—

ಈ ಪ್ರಕಾರವಾಗಿ ಸೀತಾದೇವಿಯಿಂದ ಅತಿಕಠಿಣವಾಗಿ ನುಡಿಯಲ್ಪಟ್ಟು ಲಕ್ಷ್ಮಣನು ತನಗೆ ಇಷ್ಟವಿಲ್ಲದಿದ್ದರೂ ಶ್ರೀರಾಮನಂ ಕುರಿತು ತೆರಳಿದವನಾದನು ॥೧॥ ಆ ಸಮಯದಲ್ಲಿ ದಶಕಂಠನು ಕಾದುಕೊಂಡಿದ್ದವನಾಗಿ ಸೀತಾದೇವಿಯ ಸಮೀಪಕ್ಕೆ ಬರುವವನದೆಂತೆನೆ,—॥೨॥ ಆ ವೇಳೆಯಲ್ಲಿ ರಾವಣನು ಮೆತ್ತಗಿರುವ ಕಾಷಾಯವಸ್ತ್ರಂ

ಯಸಂವೀತಃಶಿಖೀಛತ್ರೀಉಪಾನಹೀ । ವಾಮೇಚಾಂಸೇವಸಜ್ಯಾಥಶುಭೇಯಷ್ಟಿಕಮಂಡಲೂ । ಪರಿವ್ರಾಜಕರೂಪೇಣ
ವೈದೇಹೀಮನ್ವಪದ್ಯತ ॥೩॥ ತಾಮಾಸಸಾದಾತಿಬಲೋಭ್ರಾತೃಭ್ಯಾಂರಹಿತಾಂವನೇ । ರಹಿತಾಂಚಂದ್ರಸೂರ್ಯಾಭ್ಯಾಂ
ಸಂಧ್ಯಾಮಿವಮಹತ್ತಮಃ ॥೪॥ ತಾಮಪಶ್ಯತ್ತತೋಬಾಲಾಂರಾಮಪತ್ನೀಂಯಶಸ್ವಿನೀಂ । ರೋಹಿಣೀಂಶಶಿನಾಹೀ
ನಾಂಗ್ರಹವದ್ಭೃಶದಾರುಣಃ ॥೫॥ ತಮುಗ್ರತೇಜಃಕರ್ಮಾಣಂಜನಸ್ಥಾನರುಹಾದ್ರುಮಾಃ । ಸಮೀಕ್ಷ್ಯನಪ್ರಕಂಪಂ
ತೇನಪ್ರವಾತಿಚಮಾರುತಃ ॥೬॥ ಶೀಘ್ರಸ್ರೋತಾಶ್ಚತಂದೃಷ್ಟ್ವಾವೀಕ್ಷಂತಂರಕ್ತಲೋಚನಂ । ಸ್ತಿಮಿತಂಗಂತುಮಾ
ರೇಭೇಭಯಾದ್ಗೋದಾವರೀನದಿ ॥೭॥ ರಾಮಸ್ಯತ್ವಂತರಪ್ರೇಪ್ಸುರ್ದಶಗ್ರೀವಸ್ತದಂತರೇ । ಉಪತಸ್ಥೇಚವೈದೇಹೀಂಭಿಕ್ಷು
ರೂಪೇಣರಾವಣಃ ॥೮॥ ಅಭವ್ಯೋಭವ್ಯರೂಪೇಣಭರ್ತಾರಮನುಶೋಚತೀಂ । ಅಭ್ಯವರ್ತತವೈದೇಹೀಂಚಿತ್ರಾಮಿವಶನೈ
ಶ್ಚರಃ ॥೯॥ ಸಪಾಪೋಭವ್ಯರೂಪೇಣತೃಣೈಃಕೂಪಇವಾವೃತಃ । ಅತಿಷ್ಠತ್ಪ್ರೇಕ್ಷ್ಯವೈದೇಹೀಂರಾಮಪತ್ನೀಂಯಶಸ್ವಿನೀಂ ।

---

ಛತ್ರೀ-ಛತ್ರಧಾರಿಯಾಗಿ, ಉಪಾನಹೀ-ಪಾದುಕೆಗಳಂ ಧರಿಸಿದವನಾಗಿ, ಅಥ-ಬಳಿ
ಷಾಯವಸ್ತ್ರಗಳನ್ನುಟ್ಟಿರುವ, ಶಿಖೀ-ಜುಟ್ಟುಬೆಳಸಿದವನಾಗಿ. ವಾಮೇ ಅಂಸೇಚ-ಎಡಭುಜದಲ್ಲಿ, ಅವಸಜ್ಯ-ಇಟ್ಟುಕೊಂಡು, ಪರಿವ್ರಾಜ
ಕ. ಶುಭೇ-ಶುಭಕರವಾದ, ಯಷ್ಟಿಕಮಂಡಲೂ-ದಂಡಕಮಂಡಲುಗಳನ್ನೇ, ಅನ್ವಪದ್ಯತ-ಅನುಸರಿಸಿಬಂದನು ॥೩॥ ಅತಿಬಲಃ-ಬಹಳ ಬಲವಂತನಾದಾರಾವಣ
ಕರೂಪೇಣ-ಸನ್ಯಾಸಿಯವೇಷದಿಂದ, ವೈದೇಹೀಂ-ಸೀತಾದೇವಿಯನ್ನು. ಮಹತ್-ದೊಡ್ಡದಾದ, ತಮಃ ಇವ-ಅಂಧಕಾರದಂ
ನು, ಚಂದ್ರಸೂರ್ಯಾಭ್ಯಾಂ-ಚಂದ್ರಸೂರ್ಯರಿಂದ. ರಹಿತಾಂ-ಇಲ್ಲದಿರುವ, ಸಂಧ್ಯಾಂ-ಸಂಧ್ಯಾಕಾಲವನ್ನು, ಆಸಸಾದ-ಹೊಂದಿದ
ತೆ, ವನೇ-ಅರಣ್ಯದಲ್ಲಿ, ಭ್ರಾತೃಭ್ಯಾಂ-ಅಣ್ಣ ತಮ್ಮಂದಿರಿಬ್ಬರಿಂದಲೂ, ರಹಿತಾಂ-ಶೂನ್ಯಳಾದ, ತಾಂ-ಆ ಸೀತಾದೇವಿಯನ್ನು, ರೋಹಿಣೀಂ-ರೋಹಿಣೀ
ನು ॥೪॥ ತತಃ-ಬಳಿಕ, ಭೃಶದಾರುಣಃ-ಬಹಳ ಕ್ರೂರನಾದ ರಾವಣನು, ಶಶಿನಾ-ಚಂದ್ರನಿಂದ, ಹೀನಾಂ-ರಹಿತಳಾದ, ರಾಮಪತ್ನೀಂ-ಶ್ರೀರಾಮನ ಹೆಂಡತಿ
ನಕ್ಷತ್ರವನ್ನು, ಗ್ರಹವತ್-ಅಂಗಾರಕಗ್ರಹದಂತೆ, ಯಶಸ್ವಿನೀಂ-ಕೀರ್ತಿವಂತಳಾದ, ಬಾಲಾಂ-ಹುಡುಗಿಯಾದ, ... ... ... ... ... ... ॥೫॥
ಯಾದ, ತಾಂ-ಆ ಸೀತಾದೇವಿಯನ್ನು, ಅಪಶ್ಯತ್-ಕಂಡನು॥ ಜನಸ್ಥಾನರುಹಾಃ-ಜನಸ್ಥಾನದಲ್ಲಿ ಬೆಳೆದ
ಉಗ್ರತೇಜಃಕರ್ಮಾಣಂ-ಭಯಂಕರವಾದ ಸಾಮರ್ಥ್ಯವೂ ವ್ಯಾಪಾರವೂವುಳ್ಳ, ತಂ-ಆ ರಾವಣನನ್ನು, ನಪ್ರವಾತಿ-ಬೀ
ಲೆಕಟ್ಟುಭೂಮಿಯಲ್ಲಿ ಹುಟ್ಟಿರುವ ದ್ರುಮಾಃ-ಗಿಡಗಳು. ಸಮೀಕ್ಷ್ಯ-ಕಂಡು, ಸಪ್ರಕಂಪಂತೇ-ಚಲಿಸದಿದ್ದವು, ಮಾರುತಃ-ಗಾಳಿಯು, ರಕ್ತಲೋಚನಂ-ಕೆಂ
ಸಲಿಲ್ಲವಷ್ಟೆ ॥೬॥ ಶೀಘ್ರಸ್ರೋತಾಃ-ಶೀಘ್ರವಾಗಿ ಪ್ರವಾಹವುಳ್ಳ, ಗೋದಾವರೀ-ಗೋದಾವರೀ ಯೆಂಬ ನದೀ-ಹೊಳೆಯು, ಭಯಾತ್-ಭಯದಿಂದ, ಸ್ತಿಮಿತಂ-ನಿಶ್ಶಬ್ದವಾಗಿ, ಗಂ
ಗಣ್ಣುಗಳುಳ್ಳ, ವೀಕ್ಷಂತಂ-ನೋಡುತ್ತಿರುವ, ತಂ-ಆ ರಾವಣನನ್ನು, ದೃಷ್ಟ್ವಾ-ಕಂಡು. ಅಂತರಪ್ರೇಪ್ಸುಃ-ಹೊರಗೆಪ್ರಯಾಣರೂಪವಾದ ಅವಕಾಶವಂ ಕಂಡ
ತುಂ-ಹೋಗುವದಕ್ಕಾಗಿ, ಆರೇಭೇ-ಆರಂಭಿಸಿದಳು ॥೭॥ ರಾಮಸ್ಯ-ಶ್ರೀರಾಮನ, ಭಿಕ್ಷುರೂಪೇಣ-ಸನ್ಯಾಸಿಯರೂಪದಿಂದ, ವೈದೇಹೀಂ-
ವನಾಗಿ, ದಶಗ್ರೀವಃ-ಹತ್ತುಕಂಠಗಳುಳ್ಳ, ರಾವಣಃ-ರಾವಣನು, ತದಂತರೇ-ಆ ಮಧ್ಯಕಾಲದಲ್ಲಿ, ಭವ್ಯರೂಪೇಣ-ಸಜ್ಜನಸ್ವರೂಪನಾದ ಸನ್ಯಾ
ಸೀತಾದೇವಿಯಂಕುರಿತು, ಉಪತಸ್ಥೇ-ಸಮೀಪಕ್ಕೆ ಬಂದನು ॥೮॥ ಅಭವ್ಯಃ-ದುರ್ಜನನಾದ ರಾವಣನು, ಚಿತ್ರಾಂ-
ಸಿಯವೇಷದಿಂದ, ಭರ್ತಾರಂ-ಗಂಡನಾದ ಶ್ರೀರಾಮನಂಕುರಿತು, ಅನುಶೋಚತೀಂ-ದುಃಖಿಸುತ್ತಿರುವ, ವೈದೇಹೀಂ-ಸೀತಾದೇವಿಯನ್ನುಕುರಿತು, ಸಃ-ಆರಾವಣನು.
ಚಿತ್ರಾನಕ್ಷತ್ರವನ್ನು ಶನೈಶ್ಚರಃಇವ-ಶನಿಗ್ರಹದಂತೆ, ಅಭ್ಯವರ್ತತ-ಸಮೀಪವರ್ತಿಯಾಗಿ ಬಂದನು ॥೯॥ ಪಾಪಃ-ಪಾಪಿಷ್ಠನಾದ,

---

ಗಳಂ ಧರಿಸಿದವನಾಗಿಯೂ, ಜಡೆಗಳನ್ನು ಧರಿಸಿದವನಾಗಿಯೂ, ಛತ್ರವಂ ಪಿಡಿದವನಾಗಿಯೂ, ಪಾದುಕೆಗಳನ್ನು
ಇಟ್ಟುಕೊಂಡವನಾಗಿಯೂ, ದಂಡಕಮಂಡಲಂಗಳಂ ಧರಿಸಿದವನಾಗಿಯೂ ಇರುವ ಸನ್ಯಾಸಿಯ ರೂಪವನ್ನೈದಿ,
ಸೂರ್ಯಚಂದ್ರರಹಿತವಾದ ಸಂಧ್ಯಾಕಾಲವನ್ನು ಕುರಿತು ಅಂಧಕಾರವು ಬರುವ ಅಂದದಲ್ಲಿ, ರಾಮಲಕ್ಷ್ಮಣರಿಂದ
ರಹಿತಳಾಗಿರುವ ಆ ಸೀತಾದೇವಿಯ ಸಮೀಪವನ್ನೈದಿದನು ॥೪॥ ಅನಂತರವಲ್ಲಿ ಮಹಾ ದಾರುಣನಾದ ಆ ರಾವ
ಣನು ಚಂದ್ರರಹಿತವಾಗಿರುವ ರೋಹಿಣೀ ನಕ್ಷತ್ರವನ್ನು ಅಂಗಾರಕನು ನೋಡಿದಂತೆ, ರಾಮಲಕ್ಷ್ಮಣರಿಂದ ರಹಿತ
ಳಾಗಿರುವ ಆ ಸೀತಾದೇವಿಯಂ ಕಂಡನು ॥೫॥ ಆಗ ಮಹಾ ಭಯಂಕರವಾದ ಸಾಮರ್ಥ್ಯವೂ ವ್ಯಾಪಾರಂಗಳೂ ಸಹ
ಉಳ್ಳ ಆ ರಾವಣಾಸುರನಂ ಕಂಡು, ಜನಸ್ಥಾನದಲ್ಲಿರುವ ವೃಕ್ಷಂಗಳಲ್ಲಿ ಯಾವ ವೃಕ್ಷವೂ ಚಲಿಸಲಿಲ್ಲ, ಮತ್ತು ಗಾಳಿ
ಯೂ ಸಹಾ ಬೀಸಲಿಲ್ಲ ॥೬॥ ಆ ಸಮಯದಲ್ಲಿ ತ್ವರೆಯಾಗಿ ಪ್ರವಹಿಸುವ ಗೋದಾವರೀ ನದಿಯು, ಕೆಂಗ
ಣ್ಣುಗಳುಳ್ಳ ಆ ರಾವಣನಂ ಕಂಡು ಭಯದಿಂದ ನಿಶ್ಶಬ್ದವಾಗಿ ಪ್ರವಹಿಸುವದಕ್ಕೆ ಪ್ರಾರಂಭಿಸಿದಂಥಾದ್ದಾಯಿತು
॥೭॥ ಈ ರೀತಿಯಲ್ಲಿ ರಾವಣಾಸುರನು, ಶ್ರೀರಾಮನು ಯಾವಾಗ ಹೊರಗೆ ಸಾರುವನೋ ಯೇನೋ ಯೆಂದು
ಕಾದುಕೊಂಡಿದ್ದವನಾಗಿ, ಅವನು ಮಹಾ ದುರ್ಜನನಾದರೂ ಸಜ್ಜನರ ವೇಷವಂ ತಾಳಿ, ಆ ರಘುನಂದನನು ಬ
ರುವದರೊಳಗಾಗಿ ಸನ್ಯಾಸಿಯರೂಪದಿಂದ, ಸೀತಾದೇವಿಯ ಸಾನ್ನಿಧ್ಯವನ್ನೈದಿದನು ॥೮॥ ಕಡು ಪಾಪಿಯಾದ

ಶುಭಾಂ ರುಚಿರದಂತೋಷ್ಠೀಂ ಪೂರ್ಣಚಂದ್ರನಿಭಾನನಾಂ । ಆಸೀನಾಂ ಪರ್ಣಶಾಲಾಯಾಂ ಬಾಷ್ಪಶೋಕಾಭಿಪೀಡಿತಾಂ ।
ಸ ತಾಂ ಪದ್ಮಪಲಾಶಾಕ್ಷೀಂ ಪೀತಕೌಶೇಯವಾಸಿನೀಂ । ಅಭ್ಯಗಚ್ಛತ ವೈದೇಹೀಂ ದುಷ್ಟಚೇತಾ ನಿಶಾಚರಃ ॥೧೬॥
ಸ ಮನ್ಮಥಶರಾವಿಷ್ಟೋ ಬ್ರಹ್ಮಘೋಷಮುದೀರಯನ್ । ಅಬ್ರವೀತ್ಪ್ರಶ್ರಿತಂ ವಾಕ್ಯಂ ರಹಿತೇ ರಾಕ್ಷಸಾಧಿಪಃ ।
ತಾಮುತ್ತಮಾಂ ಸ್ತ್ರಿಯಂ ಲೋಕೇ ಪದ್ಮಹೀನಾಮಿವ ಶ್ರಿಯಂ । ವಿಭ್ರಾಜಮಾನಾಂ ವಪುಷಾ ರಾವಣಃ ಪ್ರಶಶಂಸ ಹ ॥೧೮॥
ಕಾ ತ್ವಂ ಕಾಂಚನವರ್ಣಾಭೇ ಪೀತಕೌಶೇಯವಾಸಿನಿ । ಕಮಲಾನಾಂ ಶುಭಾಂ ಮಾಲಾಂ ಪದ್ಮಿನೀವ ಹಿ ಬಿಭ್ರತೀ ॥೧೯॥ ಹ್ರೀಃ
ಕೀರ್ತಿಃ ಶ್ರೀಃ ಶುಭಾ ಲಕ್ಷ್ಮೀರಪ್ಸರಾ ವಾ ಶುಭಾನನೇ । ಭೂತಿರ್ವಾ ತ್ವಂ ವರಾರೋಹೇ ರತಿರ್ವಾ ಸ್ವೈರಚಾರಿಣೀ ॥೨೦॥ ಸ

---

ಭವ್ಯರೂಪೇಣ-ಶುಭಕರವಾದ ಸನ್ಯಾಸಿಯ ವೇಷದಿಂದ; ತೃಣೈಃ-ಹುಲ್ಲುಗಳಿಂದ, ಆವೃತಃ-ಮುಚ್ಚಲ್ಪಟ್ಟ, ಕೂಪಃಇವ-ಭಾವಿಯಂತೆ ಇರುವವನಾಗಿ, ಯಶಸ್ವಿನೀಂ-ಕೀರ್ತಿವಂತಳಾದ, ವೈದೇಹೀಂ-ಜನಕರಾಯನ ಮಗಳಾದ, ರಾಮಪತ್ನೀಂ-ಶ್ರೀರಾಮನ ಹೆಂಡತಿಯನ್ನು, ಪ್ರೇಕ್ಷ್ಯ-ಕಂಡು, ಅತಿಷ್ಠತ್-ನಿಂತನು ॥೧೫॥ ಶುಭಾಂ-ಶುಭಕರಳಾದ, ರುಚಿರದಂತೋಷ್ಠೀಂ-ಮನೋಹರಗಳಾದ ದಂತಗಳೂ ತುಟಿಗಳೂ ವುಳ್ಳ, ಪೂರ್ಣಚಂದ್ರನಿಭಾನನಾಂ-ಪೂರ್ಣವಾದ ಚಂದ್ರನಿಗೆ ಸಮಾನವಾದ ಮುಖವುಳ್ಳ, ಪರ್ಣಶಾಲಾಯಾಂ-ಆಶ್ರಮದಲ್ಲಿ, ಆಸೀನಾಂ-ಕುಳಿತುಕೊಂಡಿರುವ, ಬಾಷ್ಪಶೋಕಾಭಿಪೀಡಿತಾಂ-ಕಂಬನಿಯಿಂದಲೂ ವ್ಯಸನದಿಂದಲೂ ಬಾಧಿಸಲ್ಪಟ್ಟವಳಾದ, ಪದ್ಮಪಲಾಶಾಕ್ಷೀಂ-ಕಮಲದಳಗಳಿಗೆ ಸಮಾನವಾದ ನೇತ್ರಗಳುಳ್ಳ, ಪೀತಕೌಶೇಯವಾಸಿನೀಂ-ಹಚ್ಚಗಿರುವ ಪಟ್ಟೇಶೀರೆಯನ್ನುಟ್ಟಿರುವ, ತಾಂ ವೈದೇಹೀಂ-ಆ ಸೀತಾದೇವಿಯನ್ನು ಕುರಿತು, ದುಷ್ಟಚೇತಾಃ-ದುಷ್ಟವಾದ ಮನವುಳ್ಳ, ಸನಿಶಾಚರಃ-ಆ ರಾವಣನು, ಅಭ್ಯಗಚ್ಛತ-ಸಮೀಪಿಸಿಬಂದನು ॥೧೬॥ ಮನ್ಮಥಶರಾವಿಷ್ಟಃ-ಮನ್ಮಥನಬಾಣಗಳಿಂ ಬಾಧಿತನಾದ, ಸರಾಕ್ಷಸಾಧಿಪಃ-ಆ ರಾವಣನು; ಬ್ರಹ್ಮಘೋಷಂ-ವೇದಘೋಷವನ್ನು, ಉದೀರಯನ್-ಪಠಿಸುತ್ತಿರುವವನಾಗಿ, ರಹಿತೇ-ಜನಶೂನ್ಯವಾದಾಸ್ಥಳದಲ್ಲಿ, ಲೋಕೇ-ಲೋಕದಲ್ಲಿ, ಪದ್ಮಹೀನಾಂ-ಕಮಲಗಳನ್ನು ಬಿಟ್ಟಿರುವ, ಶ್ರೀಮಿವ-ಲಕ್ಷ್ಮೀದೇವಿಯಂತಿರುವ, ಉತ್ತಮಾಂ-ಉತ್ಕೃಷ್ಟಳಾದ, ಸ್ತ್ರಿಯಂ-ಹೆಂಗಸಾದ, ತಾಂ-ಆ ಸೀತಾದೇವಿಯಂ ಕುರಿತು, ಪ್ರಶ್ರಿತಂ-ನಮ್ರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೭॥ ರಾವಣಃ-ರಾವಣನು, ವಪುಷಾ-ಶರೀರದಿಂದ, ವಿಭ್ರಾಜಮಾನಾಂ-ಹೊಳೆಯುತ್ತಿರುವ ಸೀತಾದೇವಿಯನ್ನು, ಪ್ರಶಶಂಸಹ-ಶ್ಲಾಘಿಸಿದನಷ್ಟೆ ॥೧೮॥ ಹೇಕಾಂಚನವರ್ಣಾಭೇ-ಎಲೌ ಭಂಗಾರಿನ ಬಣ್ಣದಂತೆ ಬಣ್ಣವುಳ್ಳವಳೇ, ಹೇಪೀತಕೌಶೇಯವಾಸಿನಿ-ಎಲೌ-ಹರಿದ್ರಾಬಣ್ಣವುಳ್ಳ ಪಟ್ಟೇಶೀರೆಯನ್ನುಟ್ಟಿರುವಳೇ, ಕಮಲಾನಾಂ ತಾವರೇಹುವ್ವುಗಳ, ಶುಭಾಂ-ಮಂಗಳಕರವಾದ, ಮಾಲಾಂ-ತೋಮಾಲೆಯನ್ನು, ಬಿಭ್ರತೀ-ಧರಿಸಿರುವ, ಪದ್ಮಿನೀವ-ಲಕ್ಷ್ಮೀದೇವಿಯಂತೆ, ಸ್ಥಿತಾ-ಇರುತ್ತಿರುವ, ತ್ವಂ-ನೀನು, ಕಾ-ಯಾರು ॥೧೯॥ ಹೇಶುಭಾನನೇ-ಎಲೌ ಮಳ್ಳೇಮುಖವುಳ್ಳವಳೇ, ಹ್ರೀಃ-ಪಿತೃಪತ್ನಿಯಾದ ಭೂದೇವತೆಯೋ ಕೀರ್ತಿಃ-ಕೀರ್ತ್ಯಭಿಮಾನಿದೇವತೆಯೋ- ಶ್ರೀಃ-ಲಕ್ಷ್ಮೀದೇವಿಯೋ, ಶುಭಾ-ಶುಭಕರಳಾದ, ಲಕ್ಷ್ಮೀಃ-ಕಾಂತ್ಯಭಿಮಾನಿದೇವತೆಯೋ, ಅಪ್ಸರಾವಾ-ಅಪ್ಸರಸ್ತ್ರೀಯೋ ಯೇನು, ಹೇವರಾರೋಹೇ-ಎಲೌ ಶ್ರೇಷ್ಠಸ್ತ್ರೀಯೇ, ಅಥವಾ-ಹಾಗಲ್ಲದಿದ್ದರೆ, ತ್ವಂ-ನೀನು, ಭೂತಿಃ-ಐಶ್ವರ್ಯಾಭಿಮಾನಿದೇವತೆಯೋ, ಸ್ವೈರಚಾರಿಣೀ-ಸ್ವೇಚ್ಛೆಯಾಗಿಬಂದಿರುವ, ರತಿರ್ವಾ-ರತೀದೇವಿಯೋ ಯೇನು ॥೨೦॥ ತವ-ನಿನ್ನ ದಶನಾಃ-ಹಲ್ಲುಗಳು, ಸಮಾಃ-ಸ್ನ

---

ಆ ದಶಕಂಠನು, ಶುಭಕರವಾದ ಸನ್ಯಾಸಿಯ ವೇಷದಿಂದ, ಕೂಪವು ತೃಣಂಗಳಿಂದ ಆಚ್ಛಾದನಂ ಗೈಯಲ್ಪಡುವಂತೆ, ಆಚ್ಛಾದನಂ ಗೈಯ್ಯಲ್ಪಟ್ಟವನಾಗಿ, ಮಹಾ ಯಶೋವಂತಳಾದ ಮತ್ತು ಜನಕರಾಜನಂದಿನಿಯಾದ ಸೀತಾದೇವಿಯಂ ಕಂಡು ಅಲ್ಲಿಯೇ ನಿಂತುಕೊಂಡನು।೧೬॥ ಅನಂತರದಲ್ಲಿ ಆದಶಶಿರಸ್ಕನು, ಶುಭಕರಳಾಗಿಯೂ, ಪೂರ್ಣಿಮಾಚಂದ್ರನಿಗೆ ಸಮಾನವಾದ ಮುಖವುಳ್ಳವಳಾಗಿಯೂ, ಶುಭ್ರವಾದ ದಂಗಳುಳ್ಳವಳಾಗಿಯೂ, ಮನೋಹರವಾದ ಓಷ್ಠವುಳ್ಳವಳಾಗಿಯೂ, ಕಂಬನಿಗಳಿಂದಲೂ ಶೋಕದಿಂದಲೂ ಸಹ ಪೀಡಿಸಲ್ಪಟ್ಟವಳಾಗಿಯೂ, ತಾವರೇಯೆಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವಳಾಗಿಯೂ, ಹಸರುಬಣ್ಣವುಳ್ಳ ಪಟ್ಟೇ ಶೀರೆಯನ್ನುಟ್ಟವಳಾಗಿಯೂ ಇರುವ ಆ ಸೀತಾ ದೇವಿಯ ಸಮೀಪವನ್ನೈದಿ, ಮನ್ಮಥಬಾಣಂಗಳಿಂದ ನೊಂದವನಾದರೂ, ವೇದಘೋಷೆಯಂ ಗೈಯುತ್ತಾ ಜನರಹಿತವಾದ ಆ ಪ್ರದೇಶದಲ್ಲಿ, ಲೋಕದಲ್ಲಿ ಪದ್ಮರಹಿತಳಾದ ಸಾಕ್ಷಾಲ್ಲಕ್ಷ್ಮೀದೇವಿಯಂತಿರುವ, ಸರ್ವೋತ್ತಮಳಾದ ಆ ಸೀತಾದೇವಿಯಂ ಕುರಿತು, ವಿನಯವಾಗಿ ಆಕೆಯಂ ಶ್ಲಾಘಿಸುತ್ತಾ ನುಡಿವನದೆಂತೆನೆ;—।೧೭-೧೮॥ ಅಪರಂಜಿಯಂತೆ ಹೊಳೆವ ದೇಹಸೌಂದರ್ಯವುಳ್ಳವಳೇ! ಹರಿದ್ರಾವರ್ಣವಾದ ವಸ್ತ್ರವಂ ಧರಿಸಿದವಳೇ! ಹೂದಂಡೆಯಂ ಧರಿಸಿರುವ ಸಾಕ್ಷಾಲ್ಲಕ್ಷ್ಮೀದೇವಿಯಂತೆ ನಿಂತವಳಾಗಿದ್ದೀ, ನೀನ್ಯಾರು? ।೧೯॥ ಎಲೌ ಶುಭಕರವಾದ ಮುಖವುಳ್ಳವಳೇ! ನೀನು ವಿಷ್ಣುಪತ್ನಿಯಾದ ಭೂದೇವಿಯೋ, ಕೀರ್ತ್ಯಭಿಮಾನಿ ದೇವತೆಯೊ ವಿಷ್ಣುವಕ್ಷಸ್ಥಲದಲ್ಲಿರುವ ಸಾಕ್ಷಾಲ್ಲಕ್ಷ್ಮೀದೇವಿಯೋ, ಅಥವಾ ಕಾಂತ್ಯಾಭಿಮಾನಿಯಾದ ದೇವತೆಯೋ, ಅಪ್ಸರಸ್ತ್ರೀಯೋ, ಅಥವಾ ಐಶ್ವರ್ಯಾಭಿಮಾನಿ ದೇವತೆಯೋ, ಹಾಗಲ್ಲದಿದ್ದರೆ, ಸ್ವೇಚ್ಛೆಯಾಗಿ ಸಂಚರಿಸುವ ರತಿದೇವಿಯೋ, ಯಾರು? ಹೇಳುವವಳಾಗು ।೨೦॥

ಮಾಶ್ಶಿಖರಿಣಸ್ಸ್ನಿಗ್ಧಾಃಪಾಂಡುರಾದಶನಾಸ್ತವ। ವಿಶಾಲೇವಿಮಲೇನೇತ್ರೇರಕ್ತಾಂತೇಕೃಷ್ಣತಾರಕೇ। ವಿಶಾಲಂಜಘನಂಪೀ
ನಮೂರೂಕರಿಕರೋಪಮೌ। ಏತಾವುಪಚಿತೌವೃತ್ತೌಸಂಹತೌಸಂಪ್ರವಲ್ಗಿತೌ। ಪೀನೋನ್ನತಮುಖೌಕಾಂತೌಸ್ನಿಗ್ಧ
ತಾಲಫಲೋಪಮೌ। ಮಣಿಪ್ರವೇಕಾಭರಣೌರುಚಿರೌತೇಪಯೋಧರೌ।೧೯। ಚಾರುಸ್ಮಿತೇಚಾರುದತಿಚಾರುನೇತ್ರೇವಿಲಾ
ಸಿನಿ। ಮನೋಹರಸಿಮೇಕಾಂತೇನದೀಕೂಲಮಿವಾಂಭಸಾ ॥೨೦॥ ಕರಾಂತಮಿತಮಧ್ಯಾಸಿಸುಕೇಶೀಸಂಹತಸ್ತನೀ ॥
ನೈವದೇವೀನಗಂಧರ್ವೀನಯಕ್ಷೀನಚಕಿನ್ನರೀ। ನೈವಂರೂಪಾಮಯಾನಾರೀದೃಷ್ಟಪೂರ್ವಾಮಹೀತಲೇ ॥೨೨। ರೂಪ
ಮಗ್ರ್ಯಂಚಲೋಕೇಷುಸೌಕುಮಾರ್ಯಂವಯಶ್ಚತೇ। ಇಹವಾಸಶ್ಚಕಾಂತಾರೇಚಿತ್ತಮುನ್ಮಾದಯಂತಿವೈ।೨೩। ಸಾಪ್ರ

---

ತ್ಯಾಸವಿಲ್ಲದಂತೆ ಸಮವಾಗಿವೆ, ಶಿಖರಿಣಃ-ಪ್ರಶಸ್ತವಾದ ತುದಿಗಳುಳ್ಳವಾಗಿವೇ ಸ್ನಿಗ್ಧಾಃ-ಒಂದಕ್ಕೊಂದು ಸೇರಿದವಾಗಿವೆ, ಪಾಂಡುರಾಃ-ಬೆಳ್ಳಗಿವೆ. ತವ-ನಿನ್ನ, ನೇತ್ರೇ-ಕಣ್ಣುಗಳು, ವಿಶಾಲೇ-ವಿಸ್ತಾರಗಳಾಗಿವೆ, ವಿಮಲೇ-ನಿರ್ಮಲವಾಗಿವೆ, ರಕ್ತಾಂತೇ-ಕೆಂಪಾಗಿರುವ ಕೊನೆಗಳುಳ್ಳವುಗಳಾಗಿವೆ, ಕೃಷ್ಣತಾರಕೇ-ಕಪ್ಪಾಗಿರುವ ಕಣ್ಣು ಗುಡ್ಡುಗಳುಳ್ಳವುಗಳಾಗಿವೆ, ತವ-ನಿನ್ನ. ಜಘನಂ-ಕಟಿಪ್ರದೇಶವು, ವಿಶಾಲಂ-ವಿಸ್ತಾರವಾಗಿಯೂ. ಪೀನಂ-ಬಲಿತಿರುವದಾಗಿಯೂ ಇದೆ ಊರೂ-ತೊಡೆಗಳು, ಕರಿಕರೋಪಮೌ-ಆನೆಯ ಸೊಂಡಿಲಗಳಿಗೆ ಸಮಾನವಾಗಿವೆ, ಏತೌ-ಈ ದೃಶ್ಯಮಾನಗಳಾದ, ಉಪಚಿತೌ-ಚನ್ನಾಗಿ ವೃದ್ಧಿಗೊಂಡಿರುವ, ವೃತ್ತೌ-ಗುಂಡಾಗಿರುವ, ಸಂಹತೌ-ಒಂದಕ್ಕೊಂದು ಸೇರಿಕೊಂಡಿರುವ, ಸಂಪ್ರವಲ್ಗಿತೌ-ಭಾರದಿಂದಲೂ, ಔನ್ನತ್ಯದಿಂದಲೂ ಸ್ವಲ್ಪ ಚಲಿಸುತಲಿರುವ, ಪೀನೋನ್ನತಮುಖೌ-ಬಲಿತಿರುವಯುತ್ತರವಾಗಿರುವ ತುದಿಗಳುಳ್ಳ, ಕಾಂತೌ-ಕಣ್ಣಿಗೆ ಇಂಪಾಗಿರುವ, ಸ್ನಿಗ್ಧ ಮೃದುವಾಗಿರುವ, ತಾಳಫಲೋಪಮೌ-ತಾಳೇ ಫಲಗಳಿಗೆ ಸಮಾನವಾದ. ತೇ-ನಿನ್ನ. ಪಯೋಧರೌ-ಕುಚಗಳು. ಮಣಿಪ್ರವೇಕಾಭರಣೌ-ಶ್ರೇಷ್ಠವಾದ ರತ್ನಗಳ ವಿಕಾರವಾದ ತೊಡಿಗೆಗಳೂ ಉಳ್ಳವುಗಳಾಗಿಯೂ, ರುಚಿರೌ-ಮನೋಹರಗಳಾಗಿಯೂ ಇವೆ ॥೧೯॥ ಹೇಚಾರುಸ್ಮಿತೇ-ಮನೋಹರವಾದ ಮುಗುಳುನಗೆಯುಳ್ಳವಳೇ, ಹೇಚಾರುದತಿ-ಮನೋಹರವಾದ ದಂತಗಳುಳ್ಳವಳೇ, ಹೇಚಾರುನೇತ್ರೇ-ಎಲೈ ಮನೋಹರವಾದ ನೇತ್ರಗಳುಳ್ಳವಳೇ, ಹೇವಿಲಾಸಿನಿ-ಎಲೌ ಒಳ್ಳೇ ವಿಲಾಸವುಳ್ಳವಳೇ, ಹೇಕಾಂತೇ-ಎಲೈ ಮನೋಹರಳೇ, ಮೇ-ನನ್ನ, ಮನಃ-ಮನವನ್ನು ನದೀ-ನದಿಯು, ಅಂಭಸಾ-ಉದಕದಿಂದ. ಕೂಲಮಿವ-ದಡವನ್ನಂತೆ, ಹರಸಿ-ಅಪಹರಿಸುತ್ತೀಯೆ ॥೨೦॥ ತ್ವಂ-ನೀನು. ಕರಾಂತಮಿತಮಧ್ಯಾ-ಕೈಮುಷ್ಟಿ ಪ್ರಮಾಣವುಳ್ಳ ಮಧ್ಯಪ್ರದೇಶವುಳ್ಳವಳು, ಅಸಿ-ಆಗಿದ್ದೀಯೆ, ಸುಕೇಶೀ-ಒಳ್ಳೇ ಕೂದಲುಳ್ಳವಳು. ಸಂಹತಸ್ತನೀ-ಒಂದಕ್ಕೊಂದು ಸೇರಿರುವ ಸ್ತನಗಳುಳ್ಳವಳು, ಅಸಿ-ಆಗಿದ್ದೀಯೆ ॥೨೧॥ ಏವಂರೂಪಾ-ಇಂಥಾರೂಪವುಳ್ಳ, ನಾರೀ-ಹೆಂಗಸು, ದೇವೀ-ದೇವತಾಸ್ತ್ರೀಯು, ನೈವ-ಅಲ್ಲ, ಗಂಧರ್ವೀ-ಗಂಧರ್ವಸ್ತ್ರೀಯು, ನ-ಅಲ್ಲ, ಯಕ್ಷೀ-ಯಕ್ಷಸ್ತ್ರೀಯು. ನ-ಅಲ್ಲ, ಕಿನ್ನರೀಚ-ಕಿನ್ನರಸ್ತ್ರೀಯೂ, ನ-ಅಲ್ಲ. ಮಹೀತಲೇ-ಭೂಪ್ರದೇಶದಲ್ಲಿ ಮಯಾ-ನನ್ನಿಂದ, ನದೃಷ್ಟಪೂರ್ವಾ-ಪೂರ್ವದಲ್ಲಿ ಯಾರವನ್ನೂ ನೋಡಲಿಲ್ಲ ॥೨೨॥ ಲೋಕೇಷು-ಲೋಕಗಳಲ್ಲಿ, ಅಗ್ರ್ಯಂ-ಶ್ರೇಷ್ಠವಾದ, ತೇ-ನಿನ್ನ, ರೂಪಂ-ಆಕಾರವೂ, ಸೌಕುಮಾರ್ಯಂ-ಸೌಂದರ್ಯವೂ. ವಯಶ್ಚ-ಯೌವನ ವಯಸ್ಸು. ಇಹಕಾಂತಾರೇ-ಈ ಅರಣ್ಯದಲ್ಲಿ. ವಾಸಶ್ಚ-ನಿವಾಸವು, ಮೇ-ನನ್ನ, ಚಿತ್ತಂ-ಮನವನ್ನು, ಉನ್ಮಾದಯಂತಿ-ಮದೋದ್ರೇಕವನ್ನಾಗಿ ಮಾಡುತದೆ. ಅಂದರೆ_ಹುಚ್ಚು ಹಿಡಿಸುತ್ತದೆ ॥೨೩॥ ಸಾ-ಅಂಥಾ ನೀನು, ಪ್ರತಿಕ್ರಾಮ-ಮನೆಗೆ ಹೊರಟು ಹೋಗುವಳು, ತೇ-ನಿನಗೆ, ಭದ್ರಂ-ಮಂಗಳವು, ಅಸ್ತು-ಆಗಲಿ. ತ್ವಂ-ನೀನು, ಇಹ-ಈ ವನದಲ್ಲಿ, ವಸ್ತುಂ-ಇರುವದಕ್ಕೆ.

---

ನಿನ್ನ ದಂತಂಗಳು ಒಂದಕ್ಕೊಂದು ಸರಿಯಾಗಿಯೂ, ಪ್ರಶಸ್ತವಾದ ಕೊನೆಗಳುಳ್ಳವುಗಳಾಗಿಯೂ, ಒಂದರೊಡನೆ ಮತ್ತೊಂದು ಸೇರಿದವಾಗಿಯೂ ಶುಭ್ರವಾಗಿಯೂ ಇರುವವು, ನಿನ್ನ ನೇತ್ರಂಗಳು ವಿಸ್ತಾರವಾಗಿಯೂ ನಿರ್ಮಲವಾಗಿಯೂ, ಕೆಂಪಾಗಿರುವ ಕೊನೆಗಳುಳ್ಳವುಗಳಾಗಿಯೂ ಇರುವವು, ಮತ್ತು ನಿನ್ನ ಜಘನಪ್ರದೇಶವು ವಿಸ್ತಾರವಾಗಿಯೂ, ಬಲಿತಿರುವದಾಗಿಯೂ ಇದೆ, ತೊಡೆಗಳಾದರೆ, ಆನೆಗಳ ಸೊಂಡಿಲಗಳಂತೆ ಗುಂಡಾಗಿವೆ, ಮತ್ತು ಕುಚಂಗಳು ಒಂದಕ್ಕೊಂದು ಸೇರಿದವಾಗಿಯೂ, ವರ್ತುಲಾಕಾರವಾಗಿಯೂ, ದೃಢವಾದ ಉನ್ನತವಾದ ಮುಖವುಳ್ಳವುಗಳಾಗಿಯೂ, ಮನೋಹರವಾಗಿಯೂ ಇರುವವು ।೧೯। ಮನೋಹರವಾದ ಮಂದಹಾಸವುಳ್ಳವಳೇ! ಮನಸ್ಸಿಗಿಂಪಾಗಿರುವ ದಂತಗಳುಳ್ಳವಳೇ! ಸೊಬಗಾಗಿರುವ ಕಣ್ಣುಗಳುಳ್ಳವಳೇ! ನದಿಯು ಜಲದಿಂದ ಕೂಲಂಗಳನ್ನಪಹರಿಸುವತೆರದಿ, ನೀನೆನ್ನ ಮನವನ್ನಪಹರಿಸುತಲಿದ್ದೀ।೨೦। ನೀನು ಮುಷ್ಟಿಪ್ರಮಾಣವಾದ ಮಧ್ಯಪ್ರದೇಶವುಳ್ಳವಳಾಗಿಯೂ, ಶುಭಕರವಾದ ಕೇಶಂಗಳುಳ್ಳವಳಾಗಿಯೂ, ಪರಸ್ಪರವಾಗಿ ಸೇರಿರುವ ಪಯೋಧರಂಗಳುಳ್ಳವಳಾಗಿಯೂ ಇರುವವಳಾಗಿದ್ದೀ ।೨೧। ಇಂಥಾ ರೂಪವತಿಯಾದ ಅಂಗನಾಮಣಿಯು ದೇವತೆಗಳಲ್ಲಿಯೇ ಆಗಲೀ, ಗಂಧರ್ವಸ್ತ್ರೀಯರಲ್ಲಿಯೇ ಆಗಲೀ, ಯಕ್ಷಾಂಗನೆಯರಲ್ಲಿಯೇ ಆಗಲೀ, ಕಿನ್ನರಸ್ತ್ರೀಯರಲ್ಲಿಯೇ ಆಗಲೀ, ಯಲ್ಲಿಯೂ ಇಲ್ಲ ।೨೨। ಲೋಕದಲ್ಲಿ ಸರ್ವೋತ್ತಮವಾದ ಈ ರೂಪವು, ಸೌಂದರ್ಯವು, ವಯಸ್ಸು ಸಹ ಉಂಟಾಗಿರುವ ನೀನೀ ಅರಣ್ಯದಲ್ಲಿರುವದಂ ನೋಡಿದರೆ ನನಗೆ ಉನ್ಮಾದಾವಸ್ಥೆಯುಂಟಾಗುವದು, ನೀನಿಲ್ಲಿರುವದಕ್ಕೆ ಯೋಗ್ಯ

ತಿಕ್ರಾಮಮಭದ್ರಂತೇನತ್ವಂವಸ್ತುಮಿಹಾರ್ಹಸಿ । ರಾಕ್ಷಸಾನಾಮಯಂವಾಸೋಘೋರಾಣಾಂಕಾಮರೂಪಿಣಾಂ ॥೨೪॥ ಪ್ರಾಸಾದಾಗ್ರಾಣಿರಮ್ಯಾಣಿನಗರೋಪವನಾನಿಚ । ಸಂಪನ್ನಾನಿಸುಗಂಧೀನಿಯುಕ್ತಾನ್ಯಾಚರಿತುಂತ್ವಯಾ ॥೨೫॥ ವರಂಮಾಲ್ಯಂವರಂಭೋಜ್ಯಂವರಂವಸ್ತ್ರಂಚಶೋಭನೇ । ಭರ್ತಾರಂಚವರಂಮನ್ಯೇತ್ವದ್ಯುಕ್ತಮಸಿತೇಕ್ಷಣೇ ॥೨೬॥ ಕಾತ್ವಂಭವಸಿರುದ್ರಾಣಾಂಮರುತಾಂವಾವರಾನನೇ । ವಸೂನಾಂವಾವರಾರೋಹೇದೇವತಾಪ್ರತಿಭಾಸಿಮೇ ॥೨೭॥ ನೇಹಗಚ್ಛಂತಿಗಂಧರ್ವಾನದೇವಾನಚಕಿನ್ನರಾಃ । ರಾಕ್ಷಸಾನಾಮಯಂವಾಸಃಕಥಂನುತ್ವಮಿಹಾಗತಾ ॥೨೮॥ ಇಹಶಾಖಾಮೃಗಾಸ್ಸಿಂಹಾದ್ವೀಪಿವ್ಯಾಘ್ರಮೃಗಾಸ್ತಥಾ । ಋಕ್ಷಾಸ್ತರಕ್ಷವಃಕಂಕಾಃಕಥಂತೇಭ್ಯೋನಬಿಭ್ಯಸಿ ॥೨೯॥ ಮದಾನ್ವಿತಾನಾಂಘೋರಾಣಾಂಕುಂಜರಾಣಾಂತರಸ್ವಿನಾಂ । ಕಥಮೇಕಾಮಹಾರಣ್ಯೇನಬಿಭೇಷಿವರಾನನೇ ॥೩೦॥ ಕಾಸಿಕಸ್ಯಕುತಶ್ಚತ್ವಂಕಿಂನಿಮಿತ್ತಂಚದಂಡಕಾನ್ । ಏಕಾಚರಸಿಕಲ್ಯಾಣಿಘೋರಾನ್ರಾಕ್ಷಸಸೇವಿತಾನ್ ॥೩೧॥ ಇತಿಪ್ರಶಸ್ತಾವೈದೇಹೀರಾವಣೇ

---

ನಾರ್ಹಸಿ-ಯೋಗ್ಯಳಾಗಬ್ಯಾತ, ಅಯಂ-ಈ ಅರಣ್ಯವು, ಘೋರಾಣಾಂ-ಕ್ರೂರರಾದ, ಕಾಮರೂಪಿಣಾಂ-ಕಾಮರೂಪಿಗಳಾದ. ರಾಕ್ಷಸಾನಾಂ-ರಕ್ಕಸರಿಗೆ, ವಾಸಃ-ವಾಸಭೂಮಿಯು ॥೨೪॥ ತ್ವಯಾ-ನಿನ್ನಿಂದ, ರಮ್ಯಾಣಿ-ಮನೋಹರಗಳಾದ, ಸಂಪನ್ನಾನಿ-ರಾಜಭೋಗಗಳಿಂ ಕೂಡಿಕೊಂಡಿರುವ. ಸುಗಂಧೀನಿ-ಒಳ್ಳೇಸುವಾಸನೆಗಳುಳ್ಳ, ನಗರೋಪವಾನಿಚ-ಊರುಮುಂದಿರುವ ತೋಟಗಳೂ, ಪ್ರಾಸಾದಾಗ್ರಾಣಿ-ಉಪ್ಪರಿಗೆ ಕೊನೆಗಳೂ, ಚರಿತುಂ-ಸಂಚರಿಸವದಕ್ಕೆ ಯುಕ್ತಾನಿ-ಯೋಗ್ಯಗಳಾಗಿವೆ ॥೨೫॥ ಹೇಶೋಭನೇ-ಎಲೌ ಶುಭಕರಳೇ, ವರಂ-ಶ್ರೇಷ್ಠವಾದ ಮಾಲ್ಯಂಚ-ಹುವ್ವಿನಸರಗಳೂ, ವರಂ-ಶ್ರೇಷ್ಠವಾದ, ಭೋಜ್ಯಂ-ಭೋಜನವೂ, ವರಂ-ಶ್ರೇಷ್ಠವಾದ, ವಸ್ತ್ರಂ-ವಸ್ತ್ರವೂ, ಹೇಅಸಿತೇಕ್ಷಣೇ-ಎಲೌ ಕಪ್ಪಾಗಿರುವ ಕಣ್ಣುಗಳುಳ್ಳವಳೇ ತ್ವದ್ಯುಕ್ತಂ-ನಿನ್ನೊಡನೆಸೇರಿರುವ, ಭರ್ತಾರಂಚ-ಗಂಡನನ್ನು, ವರಂ-ಶ್ರೇಷ್ಠನನ್ನಾಗಿ, ಮನ್ಯೇ-ತಿಳಿದಿದ್ದೇನೆ ॥೨೬॥ ಹೇವರಾನನೇ-ಎಲೈ ಶ್ರೇಷ್ಠವಾದ ಮುಖವುಳ್ಳವಳೇ, ರುದ್ರಾಣಾಂ-ಏಕಾದಶರುದ್ರರೊಳಗೆ, ಮರುತಾಂ-ಸಪ್ತಮರುತ್ತುಗಳೊಳಗೆ, ವಸೂನಾಂವಾ-ಅಷ್ಟವಸುಗಳೊಳಗೆ, ತ್ವಂ-ನೀನು, ಕಾ-ಯಾರಸಂಬಂಧಿಯಾಗಿದ್ದೀ, ಹೇವರಾರೋಹೇ-ಎಲೌ ಶ್ರೇಷ್ಠಸ್ತ್ರೀಯೇ. ಮೇ-ಯೆನಗೆ. ದೇವತಾ-ದೇವತೆಯಾಗಿ, ಪ್ರತಿಭಾಸಿ-ತೋರುತ್ತೀಯಾ, ಅಯಂ-ಈಸ್ಥಳವು. ರಾಕ್ಷಸಾನಾಂ-ರಕ್ಕಸರಿಗೆ, ವಾಸಃ-ನಿವಾಸಭೂಮಿಯು, ಇಹ-ಇಲ್ಲಿ, ಗಂಧರ್ವಾಃ-ಗಂಧರ್ವರೂ, ನಗಚ್ಛಂತಿ-ಬರುವದಿಲ್ಲ, ದೇವಾಃ-ದೇವತೆಗಳು, ನಗಚ್ಛಂತಿ-ಬರುವದಿಲ್ಲ. ಕಿನ್ನರಾಶ್ಚ-ಕಿನ್ನರರೂ, ನಗಚ್ಛಂತಿ-ಬರುವದಿಲ್ಲ ತ್ವಂ-ನೀನು, ಇಹ-ಇಲ್ಲಿ, ಕಥಮಾಗತಾ-ಹ್ಯಾಗೆಬಂದೆ ॥೨೮॥ ಇಹ-ಇಲ್ಲಿ, ಶಾಖಾಮೃಗಾಃ-ಕಪಿಗಳೂ, ಸಿಂಹಾಃ-ಸಿಂಹಗಳು, ತಥಾ-ಹಾಗೆಯೇ, ದ್ವೀಪಿವ್ಯಾಘ್ರಮೃಗಾಃ-ದೊಡ್ಡಹುಲಿಗಳು ಚಿಕ್ಕಹುಲಿಗಳು ಮೃಗಗಳು, ಋಕ್ಷಾಃ-ಕರಡಿಗಳು, ತರಕ್ಷವಃ-ಘಾತುಕಮೃಗಗಳು, ಕಂಕಾಃ-ಗೃಧ್ರಗಳೂ. ಸಂತಿ-ಇವೇ. ತೇಭ್ಯಃ-ಅವುಗಳೊಡನೆ, ಕಥಂ-ಹ್ಯಾಗೆ ನಬಿಭ್ಯಸಿ-ಭಯಬೀಳದಿದ್ದೀಯಾ ॥೨೯॥ ಹೇವರಾನನೇ-ಎಲೈಶ್ರೇಷ್ಠವಾದ ಮುಖವುಳ್ಳವಳೇ, ಮದಾನ್ವಿತಾನಾಂ-ಮದದಿಂ ಕೂಡಿಕೊಂಡಿರುವ, ಘೋರಾಣಾಂ-ಭಯಂಕರಗಳಾದ. ತರಸ್ವಿನಾಂ-ಶಕ್ತಿಯುಳ್ಳ. ಕುಂಜರಾಣಾಂ-ಆನೆಗಳ, ಮಹಾರಣ್ಯೇ-ದೊಡ್ಡಅರಣ್ಯದಲ್ಲಿ, ಏಕಾ-ಒಬ್ಬಳೇ, ಕಥಂ-ಹ್ಯಾಗೆ ನಬಿಭೇಷಿ-ಭಯವಿಲ್ಲದವಳಾಗಿದ್ದೀ ॥೩೦॥ ಹೇಕಲ್ಯಾಣಿ-ಎಲೌ-ಶುಭಕರಳೇ, ತ್ವಂ-ನೀನು, ಕಾ-ಯಾವ ನಾಮಧೇಯವುಳ್ಳವಳು, ಅಸಿ-ಆಗಿದ್ದೀಯಾ. ಕಸ್ಯ-ಯಾರಸಂಬಂಧಳು, ಕುತಶ್ಚ-ಯಲ್ಲಿಂದಾಬಂದೆ, ಕಿಂನಿಮಿತ್ತಂ-ಯಾವ ನಿಮಿತ್ತವಾಗಿ, ಘೋರಾನ್-ಭಯಂಕರವಾದ. ರಾಕ್ಷಸಸೇವಿತಾನ್-ರಕ್ಕಸರಿಂದ ಸೇವಿಸಲ್ಪಟ್ಟ, ದಂಡಕಾನ್-ದಂಡಕಾರಣ್ಯದಲ್ಲಿ. ಏಕಾ-ಒಬ್ಬಳೇ, ಚರಸಿ-ಸಂಚರಿಸುತ್ತೀಯಾ ॥೩೧॥ ಇತಿ-ಈಪರಿಯಾಗಿ, ದುರಾತ್ಮನಾ-ದುಷ್ಟಬುದ್ಧಿಯುಳ್ಳ. ರಾವಣೇನ-ರಾವಣಾಸುರನಿಂದ. ಪ್ರಶಸ್ತಾ-ಪ್ರಶಂಸೆಮಾಡಲ್ಪಟ್ಟವಳಾಗಿ, ದ್ವಿಜಾತಿವೇಷೇಣ-ಬ್ರಾಹ್ಮಣವೇಷದಿಂದ. ಹಿತಂ-ಕೂಡಿ

---

ಳಲ್ಲ; ಮಂದಿರಕ್ಕೆ ಬರುವವಳಾಗು; ಇಲ್ಲಿ ಕಾಮರೂಪಿಗಳಾದ ಬಹು ಮಂದಿರಾಕ್ಷಸರಿರುವರು, ನೀನಾದರೆ ರಾಜಭೋಗಂಳಿಂದ ಯುಕ್ತವಾದ, ಉದ್ಯಾನವನಗಳಿಂದ ತುಂಬಿರುವ ಉಪ್ಪರಿಗೆಯಲ್ಲಿ ವಾಸವಂ ಗೈಯ್ಯುವದಕ್ಕೆ ಅರ್ಹಳಾದವಳು ॥೨೫॥ ಎಲೈ ಶುಭಕರಳೇ! ನೀನು ಉತ್ತಮವಾದ ಪುಷ್ಪಮಾಲಿಕೆಗಳನ್ನೂ, ಶ್ರೇಷ್ಠವಾದ ಆಹಾರವನ್ನೂ, ಬಹು ಬೆಲೆಯುಳ್ಳ ಶೀರೆಗಳನ್ನೂ, ಉತ್ತಮನಾದ ಪತಿಯನ್ನೂ ಸಹ ಪಡದವಳೆಂದೆಣಿಸುತ್ತೇನೆ ॥೨೬॥ ಮತ್ತು ನೀನು ಏಕಾಶದರುದ್ರರಲ್ಲಿ ಯಾಗಲೀ ಸಪ್ತಮರುತ್ತುಗಳಲ್ಲಿ ಯಾಗಲೀ, ಯಾರಾದರೂ ವೊಬ್ಬನ ಸಂಬಂಧಳಾದವಳೇ ಯೇನು? ದೇವತಾಸ್ತ್ರೀಯಂತೆ ನನಗೆ ತೋರುತಲಿದ್ದೀ, ಈ ವನದಲ್ಲಿ ರಾಕ್ಷಸರು ಸಂಚಾರವಂ ಗೈಯ್ಯುತಲಿರುವರು, ಇಲ್ಲಿ ದೇವತೆಗಳೂ ಸಹಾ ಬರುವದಿಲ್ಲ, ಹೀಗಿರುವಲ್ಲಿ ನೀನೋರ್ವಳೇ ಹ್ಯಾಗೆಬಂದವಳಾದೆ ॥೨೮॥ ಎಲೈ ಶುಭಕರಳೇ! ಈ ಅರಣ್ಯದಲ್ಲಿ ನಾನಾ ವಿಧವಾದ ಕಪಿಗಳು, ಸಿಂಹಂಗಳೂ, ದೊಡ್ಡ ಹುಲಿಗಳೂ, ಚಿರತೆಗಳೂ, ಕರಡಿಗಳೂ, ಮದದಾನೆಗಳೂ ಮತ್ತೂ ಇತರವಾದ ಘಾತಕಮೃಗಂಗಳೂ ಇವೆಲ್ಲ ಇರುವವು, ಅವುಗಳಿಂದ ಹ್ಯಾಗೆ ಹೆದರದೆ ಇದ್ದೀ? ನೀನ್ಯಾರು? ನಿನ್ನ ಬಂಧುಗಳ್ಯಾರಿರುವರು? ಯಾತಕ್ಕಾಗಿ ವೋರ್ವಳೇ ಇಲ್ಲಿ ಸಂಚಾರವಂಗೈಯ್ಯುತಲಿದ್ದೀ? ॥೩೧॥ ಎಂಬದಾಗಿ ದುರಾತ್ಮನಾದ ರಾವಣನಿಂದ ಶ್ಲಾಘಿಸಲ್ಪಟ್ಟವಳಾಗಿ, ಆ ಸೀತಾದೇವಿಯು ಬ್ರಾ

ನದುರಾತ್ಮನಾ । ದ್ವಿಜಾತಿವೇಷೇಣಹಿತಂದೃಷ್ಟ್ವಾರಾವಣಮಾಗತಂ । ಸರ್ವೈರತಿಥಿಸತ್ಕಾರೈಃಪೂಜಯಾಮಾಸಮೈಥಿಲೀ ॥೩೨॥ ಉಪನೀಯಾಸನಂಪೂರ್ವಂಪಾದ್ಯೇನಾಭಿನಿಮಂತ್ರ್ಯಚ । ಅಬ್ರವೀತ್ಸಿದ್ಧಮಿತ್ಯೇವತದಾತಂಸೌಮ್ಯದರ್ಶನಂ ॥೩೩॥ ದ್ವಿಜಾತಿವೇಷೇಣಸಮೀಕ್ಷ್ಯಮೈಥಿಲೀ ಸಮಾಗತಂಪಾತ್ರಕುಸುಂಭಧಾರಿಣಂ । ಅಶಕ್ಯಮುದ್ವೇಷ್ಟುಮುಪಾಯದರ್ಶನಂನ್ಯಮಂತ್ರಯದ್ಬ್ರಾಹ್ಮಣವತ್ತದಾಂಗನಾ ॥೩೪॥ ಇಯಂಬೃಸೀಬ್ರಾಹ್ಮಣಕಾಮಮಾಸ್ಯತಾಮಿದಂಚಪಾದ್ಯಂಪ್ರತಿಗೃಹ್ಯತಾಮಿತಿ । ಇದಂಚಸಿದ್ಧಂವನಜಾತಮುತ್ತಮಂತ್ವದರ್ಥಮವ್ಯಗ್ರಮಿಹೋಪಭುಜ್ಯತಾಂ । ನಿಮಂತ್ರ್ಯಮಾಣಃಪ್ರತಿಪೂರ್ಣಭಾಷಿಣೀಂನರೇಂದ್ರಪತ್ನೀಂಪ್ರಸಮೀಕ್ಷ್ಯಮೈಥಿಲೀಂ । ಪ್ರಸಹ್ಯತಸ್ಯಾಹರಣೇಧೃತಂಮನಸ್ಸಮರ್ಪಯತ್ಸ್ವಾತ್ಮವಧಾಯರಾವಣಃ ॥೩೬॥ ತತಸ್ಸುವೇಷಂಮೃಗಯಾಗತಂಪತಿಂಪ್ರತೀಕ್ಷಮಾಣಾಸಹಲಕ್ಷ್ಮಣಂತದಾ । ವಿವೀಕ್ಷಮಾಣಾಹರಿತಂದದರ್ಶತನ್ಮಹದ್ವನಂನೈವತುರಾಮಲಕ್ಷ್ಮಣೌ । *ಷಟ್ಚತ್ವಾರಿಂಶಸ್ಸರ್ಗಃ*

---

ಕೊಂಡಿರುವ, ಆಗತಂ–ಬಂದಿರುವ, ರಾವಣಂ–ರಾವಣನನ್ನು, ದೃಷ್ಟ್ವಾ–ಕಂಡು, ಮೈಥಿಲೀ–ಜನಕರಾಯನ ಮಗಳಾದ, ವೈದೇಹೀ–ಸೀತಾದೇವಿಯು, ಸರ್ವೈಃ–ಸಮಸ್ತಮಾದ, ಅತಿಥಿಸತ್ಕಾರೈಃ–ಅತಿಥಿಗಳಿಗೆ ಯೋಗ್ಯವಾದ ಪೂಜೆಗಳಿಂದ, ಪೂಜಯಾಮಾಸ–ಪೂಜೆಮಾಡಿದಳು ॥೩೨॥ ಪೂರ್ವಂ–ಮೊದಲು, ಆಸನಂ–ಪೀಠವನ್ನು, ಉಪನೀಯ–ಕೊಟ್ಟು, ಪಾದ್ಯೇನ–ಪಾದ್ಯದಿಂದ, ಅಭಿನಿಮಂತ್ರ್ಯಚ–ಸತ್ಕಾರವಮಾಡಿ, ಸೌಮ್ಯದರ್ಶನಂ–ಪ್ರಸನ್ನನಾದವನೆಂತಿರುವ, ತಂ–ಆ ರಾವಣನನ್ನು ಕುರಿತು, ತದಾ–ಆಕಾಲದಲ್ಲಿ, ಸಿದ್ಧಮಿತ್ಯೇವ–ಅನ್ನವು ಸಿದ್ಧವಾಗಿಹೆ ಯೆಂದು, ಅಬ್ರವೀತ್–ನುಡಿದಳು ॥೩೩॥ ಮೈಥಿಲೀ–ಮಿಥಿಲಾಧಿಪತಿಯ ಮಗಳಾದ, ಅಂಗನಾ–ಸೀತಾದೇವಿಯು, ದ್ವಿಜಾತಿವೇಷೇಣ–ಬ್ರಾಹ್ಮಣವೇಷದಿಂದ, ಸಮಾಗತಂ–ಬಂದಿರುವ, ಪಾತ್ರಕುಸುಂಭಧಾರಿಣಂ–ಸೋರೆಬುರುಡೆಯನ್ನು, ರಕ್ತವಸ್ತ್ರವನ್ನೂ ಧರಿಸಿರುವ, ಅಪಾಯದರ್ಶನಂ–ತನ್ನ ಅಪಹರಣದಲ್ಲೇ ದೃಷ್ಟಿಯುಳ್ಳವ. ಉದ್ವೇಷ್ಟುಂ–ಭೋಜನಮಾಡಿಸುವದಕ್ಕೆ ಅಶಕ್ಯಂ–ಅನರ್ಹನಾದ ತಂ–ಆ ರಾವಣನನ್ನು, ಸಮೀಕ್ಷ್ಯ–ಕಂಡು, ಮೈಥಿಲೀ–ಸೀತಾದೇವಿಯು, (ಪ.ಪಾ.–ಉದ್ವೇಷ್ಟುಂ ದ್ವೇಷಮಾಡುವದಕ್ಕೆ, ಅಶಕ್ಯಂ_ಅನರ್ಹನಾದ, ತಂ–ಆ ರಾವಣನನ್ನು) ಬ್ರಾಹ್ಮಣವತ್_ಬ್ರಾಹ್ಮಣನಂತೆ, ನ್ಯಮಂತ್ರಯತ್–ಭೋಜನ ಮಾಡೆಂದು ಹೇಳಿದಳು ॥೩೪॥ ಹೇಬ್ರಾಹ್ಮಣ_ಎಲೈ ಬ್ರಾಹ್ಮಣನೇ. ಇಯಂಬೃಸೀ–ಇದು ದರ್ಭಾಸನವು, ಕಾಮಂ–ಇಚ್ಛಾನುಸಾರವಾಗಿ, ಆಸ್ಯತಾಂ–ಕೂತಲ್ಪಡಲಿ ಇದಂಪಾದ್ಯಂಚ–ಈ ಪಾದ್ಯವು, ಪ್ರತಿಗೃಹ್ಯತಾಂ–ತೆಗೆದುಕೊಳ್ಳಲ್ಪಡಲಿ, ತ್ವದರ್ಥಂ–ನಿನಗೋಸ್ಕರ, ಸಿದ್ಧಂ–ಪಕ್ವವಾದ, ಉತ್ತಮಂ_ಉತ್ತಮವಾದ, ವನಜಾತಂ–ವನದಲ್ಲಿಹುಟ್ಟಿದ, ಇದಂ–ಈ ಕಂದಮೂಲ ಫಲಾದಿಗಳು. ಇಹ–ಈಸ್ಥಳದಲ್ಲಿ, ಅವ್ಯಗ್ರಂ–ತ್ವರೆಯಿಲ್ಲದೆ, ಉಪಭುಜ್ಯತಾಂ–ಭುಜಿಸಲ್ಪಡಲಿ ॥೩೫॥ ಇತಿ–ಈಪರಿಯಾಗಿ, ನಿಮಂತ್ರ್ಯಮಾಣಃ–ಪ್ರಾರ್ಥಿಸಲ್ಪಟ್ಟ, ರಾವಣಃ–ರಾವಣನು, ಪ್ರತಿಪೂರ್ಣಭಾಷಿಣೀಂ–ಸರ್ವವೂ ಸಿದ್ಧವಾಗಿಹೆ ಎಂಬದಾಗಿ ಮಾತನಾಡುತ್ತಿರುವ, ನರೇಂದ್ರಪತ್ನೀಂ–ರಾಜಶ್ರೇಷ್ಠನಾದ ಶ್ರೀರಾಮನ ಹೆಂಡತಿಯಾದ, ಮೈಥಿಲೀಂ–ಸೀತಾದೇವಿಯನ್ನು, ಪ್ರಸಮೀಕ್ಷ್ಯ–ಕಂಡು, ಪ್ರಸಹ್ಯ–ಬಲಾತ್ಕರಿಸಿ. ತಸ್ಯಾಃ–ಆ ಸೀತಾದೇವಿಯ. ಹರಣೇ–ಅಪಹಾರದಲ್ಲಿ, ಮನಃ–ಮನವನ್ನು, ಆತ್ಮವಧಾಯ–ತನ್ನಸಂಹಾರಕ್ಕೋಸುಗ ಧೃತಂ–ಧೈರ್ಯವುಳ್ಳವನಾಗಿ, ಸಮರ್ಪಯತ್_ಅಪಹಾರದಲ್ಲಿ ಇರಿಸಿದನು ॥೩೬॥ ತತಃ_ಬಳಿಕ–ಸುವೇಷಂ–ಒಳ್ಳೇ ಆಕಾರವುಳ್ಳ, ಮೃಗಯಾಗತಂ–ಬ್ಯಾಂಟೆಗೆಹೋದಂಥಾ, ಪತಿಂ–ಗಂಡನನ್ನು, ತದಾ–ಆಕಾಲದಲ್ಲಿ, ಸಲಕ್ಷ್ಮಣಂ–ಲಕ್ಷ್ಮಣನಿಂದೊಡಗೂಡಿದವನನ್ನಾಗಿ, ಪ್ರತೀಕ್ಷಮಾಣಾ–ಎದುರುನೋಡುತ್ತಿರುವಳಾಗಿ. ವಿವೀಕ್ಷಮಾಣಾ–ನಾನಾಬಗೆಯಾಗಿ ನೋಡುತ್ತಿರುವಳಾಗಿ. ಹರಿತಂ–ಶ್ಯಾಮವರ್ಣವುಳ್ಳ, ತನ್ಮಹದ್ವನಂ–ಆ ದೊಡ್ಡವನವನ್ನು ದದರ್ಶ–ಕಂಡಳು, ರಾಮಲಕ್ಷ್ಮಣೌತು–ರಾಮಲಕ್ಷ್ಮಣರನ್ನಾದರೇ, ನೈವದದರ್ಶ–ಕಾಣಲೇಇಲ್ಲ ॥೩೭॥ —*ಷಟ್ಚತ್ವಾರಿಂಶಸ್ಸರ್ಗಃ*—

---

ಹ್ಮಣವೇಷದಿಂದ ಬಂದಿರುವ ಆ ರಾವಣನಂ ಕಂಡು, ಅವನನ್ನು ಬ್ರಾಹ್ಮಣನೆಂದರಿತು ಅರ್ಘ್ಯಪಾದ್ಯಾದಿಗಳಿಂದ ಸತ್ಕಾರವಂ ಗೈದು, ಪೀಠದಮೇಲೆಕುಳ್ಳಿರಿಸಿ, ಅನ್ನವು ಸಿದ್ಧವಾಗಿಹೆಯೆಂದುನುಡಿದಳು ॥೩೩॥ ಮತ್ತೂ ಆ ಸೀತಾದೇವಿಯು ಬ್ರಾಹ್ಮಣವೇಷದಿಂದ ಬಂದಿರುವ, ಸೋರೆಬುರುಡೆಯನ್ನೂ ರಕ್ತವಸ್ತ್ರವನ್ನೂ ಸಹ ಧರಿಸಿರುವ,ಮತ್ತು ತನ್ನನ್ನಪಹರಿಸುವದರಲ್ಲಿ ದೃಷ್ಟಿಯುಳ್ಳ ಅಯೋಗ್ಯನಾದ ಆ ರಾವಣನಂ ಕಂಡು ಬ್ರಾಹ್ಮಣನಂ ಭೋಜನಕ್ಕೆ ಕರೆಯುವಂತೆ ಕರದವಳಾದಳದೆಂತೆನೆ,—॥೩೪॥ ಎಲೈ ಬ್ರಾಹ್ಮಣನೇ! ಇಲ್ಲಿ ದರ್ಭಾಸನವಿರುವದು, ಕುಳಿತು ಕೊಳ್ಳುವವನಾಗು; ಈ ಪಾದ್ಯವಂ ಸ್ವೀಕರಿಸು, ವನದಲ್ಲಿ ಪುಟ್ಟಿದ ಕಂದಮೂಲಾದಿಗಳು ಪಕ್ವವಾಗಿ ಸಿದ್ಧವಾಗಿವೆ; ಭೋಜನವಂ ಮಾಡುವವನಾಗು; ಎಂದು ರಾವಣಾಸುರನು ಪ್ರಾರ್ಥಿಸಲ್ಪಟ್ಟವನಾಗಿ, ಸರ್ವವು ಸಿದ್ಧವಾಗಿಹೆಯೆಂದು ಪೇಳುತಿರುವ ಆ ರಾಜಪತ್ನಿಯಂ ಕಂಡು, ತನ್ನ ಸಂಹಾರಕ್ಕಾಗಿ ಬಲಾತ್ಕರದಿಂದಾಕೆಯನ್ನಪಹರಿಸುವದರಲ್ಲಿ ಧೈರ್ಯದಿಂದ ಮನವಂ ಗೈದನು ॥೩೬॥ ಅನಂತರದಲ್ಲಿ ಸೀತಾದೇವಿಯು ಸುರೂಪನಾದ, ಮತ್ತೂ ಬ್ಯಾಂಟೆಗಾಗಿ ಸಾರಿದ ಪತಿಯನ್ನೂ ಲಕ್ಷ್ಮಣನನ್ನೂ ಸಹ ಯೆದುರುನೋಡುವವಳಾಗಿ ಆ ವನದಲ್ಲಿ ಸುತ್ತುಮುತ್ತಲೂ ನೋಡಿದರೂ ಅವರಂ ನೋಡಲಿಲ್ಲ ॥೩೭॥

—*ಆರಣ್ಯಕಾಂಡದಲ್ಲಿನ ೪೬ನೆಯ ಸರ್ಗಂ ಮುಗಿದುದು*—

ರಾವಣೇನತುವೈದೇಹೀತಥಾಪೃಷ್ಟಾಜಿಹೀರ್ಷತಾ । ಪರಿವ್ರಾಜಕಲಿಂಗೇನಶಶಂಸಾತ್ಮಾನಮಂಗನಾ ।೧। ಬ್ರಾಹ್ಮಣಶ್ಚಾತಿಥಿಶ್ಚಾಯಮನುಕ್ತೋಹಿಶಪೇತಮಾಂ । ಇತಿಧ್ಯಾತ್ವಾಮುಹೂರ್ತಂತುಸೀತಾವಚನಮಬ್ರವೀತ್ ।೨। ದುಹಿತಾಜನಕಸ್ಯಾಹಂಮೈಥಿಲಸ್ಯಮಹಾತ್ಮನಃ । ಸೀತಾನಾಮ್ನಾಸ್ಮಿಭದ್ರಂತೇರಾಮಭಾರ್ಯಾದ್ವಿಜೋತ್ತಮ ।೩। ಉಷಿತ್ವಾದ್ವಾದಶಸಮಾಇಕ್ಷ್ವಾಕೂಣಾಂನಿವೇಶನೇ । ಭುಂಜಾನಾಮಾನುಷಾನ್ಭೋಗಾನ್ಸರ್ವಕಾಮಸಮೃದ್ಧಿನೀ ।೪। ತತಸ್ತ್ರಯೋದಶೇವರ್ಷೇರಾಜಾಮಂತ್ರಯತಪ್ರಭುಃ । ಅಭಿಷೇಚಯಿತುಂರಾಮಂಸಮೇತೋರಾಜಮಂತ್ರಿಭಿಃ ।೫। ತಸ್ಮಿನ್ಸಂಭ್ರಿಯಮಾಣೇತುರಾಘವಸ್ಯಾಭಿಷೇಚನೇ । ಕೈಕೇಯೀನಾಮಭರ್ತಾರಮಾರ್ಯಾಸಾಯಾಚತೇವರಂ ।೬। ಪ್ರತಿಗೃಹ್ಯತುಕೈಕೇಯೀಶ್ವಶುರಂಸುಕೃತೇನಮೇ । ಮಮಪ್ರವ್ರಾಜನಂಭರ್ತುರ್ಭರತಸ್ಯಾಭಿಷೇಚನಂ । ದ್ವಾವಯಾಚತಭರ್ತಾರಂ

---

ಪರಿವ್ರಾಜಕಲಿಂಗೇನ-ಸನ್ಯಾಸಿವೇಷವುಳ್ಳ, ಜಿಹೀರ್ಷತಾ-ಅಪಹರಿಸಲಿಚ್ಛೆಯುಳ್ಳ, ರಾವಣೇನ-ರಾವಣಾಸುರನಿಂದ, ತಥಾ-ಆಪರಿಯಾಗಿ ಪೃಷ್ಟಾ-ಕೇಳಲ್ಪಟ್ಟ, ಅಂಗನಾ-ಹೆಂಗಸಾದ, ವೈದೇಹೀತು-ಸೀತಾದೇವಿಯಾದರೆ, ಆತ್ಮಾನಂ-ತನ್ನನ್ನು, ಶಶಂಸ-ಹೇಳಿದಳು ||೧|| ಅಯಂ-ಈ, ಅತಿಥಿಃ-ಅತಿಥಿಯೂ. ಬ್ರಾಹ್ಮಣಶ್ಚ-ಬ್ರಾಹ್ಮಣನು, ಅನುಕ್ತಃ-ಹೇಳಲ್ಪಡದೇಹೋದರೆ, ಮಾಂ-ನನ್ನನ್ನುಕುರಿತು, ಶಪೇತ-ಶಾಪಮಾಡುವನು, ಇತಿ-ಇಂತೆಂದು, ಸೀತಾ-ಸೀತಾದೇವಿಯು, ಮುಹೂರ್ತಂ-ಒಂದು ಮುಹೂರ್ತಕಾಲವು, ಧ್ಯಾತ್ವಾ-ಧ್ಯಾನಮಾಡಿ. ವಚನಂ-ಮಾತನ್ನು. ಅಬ್ರವೀತ್-ನುಡಿದಳು||೨|| ದ್ವಿಜೋತ್ತಮ-ಎಲೋ ಬ್ರಾಹ್ಮಣಶ್ರೇಷ್ಠನೇ. ಅಹಂ-ನಾನು, ಮಹಾತ್ಮನಃ-ಮಹಾಪ್ರಭಾವವಂತನಾದ. ಮೈಥಿಲಸ್ಯ-ಮಿಥಿಲಾಧಿಪತಿಯಾದ, ಜನಕಸ್ಯ-ಜನಕರಾಯನಿಗೆ, ದುಹಿತಾ-ಕುಮಾರಿಯು, ತೇ-ನಿನಗೆ, ಭದ್ರಂ-ಮಂಗಳವು, ಅಸ್ತು-ಆಗಲಿ, ರಾಮಭಾರ್ಯಾ-ಶ್ರೀರಾಮನಿಗೆ ಹೆಂಡತಿಯಾದ ನಾನು ನಾಮ್ನಾ-ಹೆಸರಿನಿಂದ, ಸೀತಾ-ಸೀತಾದೇವಿಯು, ಅಸ್ಮಿ-ಆಗಿದ್ದೇನೆ ||೩|| ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶರಾಜರ, ನಿವೇಶನೇ-ಮನೆಯಲ್ಲಿ, ಸರ್ವಕಾಮಸಮೃದ್ಧಿನೀ-ಸಮಸ್ತ ಕೋರಿಕೆಗಳಿಂದ ಸಂಪನ್ನಳಾಗಿ, ಅಮಾನುಷಾನ್-ಮನುಷ್ಯರಿಗೆ ಅಸಾಧ್ಯವಾದ, ಭೋಗಾನ್-ವಿಷಯಸುಖಗಳನ್ನು, ಭುಂಜನಾ-ಅನುಭವಿಸುತ್ತಿರುವಳಾಗಿ. ದ್ವಾದಶಸಮಾಃ-ಹನ್ನೆರಡುವರುಷಗಳು, ಉಷಿತ್ವಾ-ಇದ್ದು ||೪|| ತತಃ-ಒಳಿಕ, ತ್ರಯೋದಶೇವರ್ಷೇ-ಹದಿಮೂರನೇ ವರುಷದಲ್ಲಿ, ಪ್ರಭುಃ-ಧಣಿಯಾದ, ರಾಜಾ-ಅರಸಾದ ದಶರಥರಾಯನು, ರಾಜಮಂತ್ರಿಭಿಃ-ಶ್ರೇಷ್ಠರಾದ ಮಂತ್ರಿಗಳೊಡನೆ. ಸಮೇತಃ-ಕೂಡಿದವನಾಗಿ, ರಾಮಂ-ಶ್ರೀರಾಮನನ್ನು, ಅಭಿಷೇಚಯಿತುಂ-ಪಟ್ಟಾಭಿಷೇಕಮಾಡುವದಕ್ಕೆ. ಅಮಂತ್ರಯತ-ಆಲೋಚಿಸಿದನು ||೫|| ತಸ್ಮಿನ್-ಆ. ರಾಘವಸ್ಯ-ಶ್ರೀರಾಮನಿಗೆ, ಅಭಿಷೇಚನೇ-ಪಟ್ಟಾಭಿಷೇಕೋಪಕರಣಸಾಮಗ್ರಿಯು. ಸಂಭ್ರಿಯಮಾಣೇತು-ಸಂಪಾದಿಸಲ್ಪಡುತ್ತಿರುವಂಥಾದ್ದಾಗುತ್ತಿರಲೀಕಾಗಿ, ಕೈಕೇಯೀನಾಮ-ಕೈಕೇಯಿಯೆಂದು ಪ್ರಸಿದ್ಧಳಾದ, ಆರ್ಯಾ-ಪೂಜ್ಯಳಾದ. ಸಾ-ಆ ದೇವಿಯು, ಭರ್ತಾರಂ-ಗಂಡನಕುರಿತು, ವರಂ-ವರವನ್ನು, ಯಾಚತ-ಬೇಡಿದಳು ||೬|| ಕೈಕೇಯೀ-ಕೈಕೇಯಿಯು, ಮೇ-ನನ್ನ, ಶ್ವಶುರಂ-ಮಾವನಾದ ದಶರಥರಾಯನನ್ನು, ಸುಕೃತೇನ-ಧರ್ಮದಿಂದ, ಪ್ರತಿಗೃಹ್ಯ-ಸ್ವಾಧೀನಗೊಳಿಸಿಕೊಂಡು, ಮಮ-ನನ್ನ, ಭರ್ತುಃ-ಗಂಡನಿಗೋಸುಗ, ಪ್ರವ್ರಾಜನಂ-ವನವಾಸವನ್ನು. ಭರತಸ್ಯ-ಭರತನಿಗೆ, ಅಭಿಷೇಚನಂ-ಪಟ್ಟಾಭಿಷೇಕವನ್ನು, ದ್ವೌ-ಎರಡರನ್ನು, ನೃಪೋತ್ತಮಂ-ರಾಜಶ್ರೇಷ್ಠನಾದ, ಸತ್ಯಸಂಧಂ-ಸತ್ಯಪ್ರತಿಜ್ಞೆಯುಳ್ಳ, ಭರ್ತಾರಂ-ಗಂಡನಕುರಿತು. ಅಯಾಚತ-ಪ್ರಾರ್ಥಿಸಿದಳು ||೭|| ರಾಮಃ-ಶ್ರೀರಾಮನು, ಅಭಿಷಿಚ್ಯತೇಯದಿ-ಅಭಿಷೇಕಮಾಡಲ್ಪಟ್ಟವನೇಆದರೆ, ಏಷಃ-ಇದೇ, ಮೇ-ನನ್ನ. ಜೀವಿತಸ್ಯ-ಪ್ರಾಣ

---

ವಿದೇಹರಾಜಪುತ್ರಿಯಾದ ಆ ಸೀತಾದೇವಿಯು ಸನ್ಯಾಸಿಯ ವೇಷದಿಂದ ಅಪಹಾರವಂ ಗೈಯ್ಯಲಿಚ್ಛಿಸುವ ರಾವಣನಿಂದ ಆಪರಿಕೇಳಲ್ಪಟ್ಟವಳಾಗಿ, ತನ್ನ ವಂಶಾವಳಿಯಂ ಹೇಳಿದಳು. ಯಾಕೆಂದರೆ,—ಈತನು ಅತಿಥಿಯು ಬ್ರಾಹ್ಮಣನು, ನಾನು ಇಂಥಾವಳೆಂದು ಹೇಳದಿದ್ದರೆ ಶಾಪವನ್ನಿಯ್ಯುವನೋ ಯೇನೋ ಯೆಂದು ಸ್ವಲ್ಪಕಾಲವು ಯೋಚಿಸಿ ನುಡಿದಳು ।೨। ಏನೆಂದರೆ;—ಎಲೈ ಬ್ರಾಹ್ಮಣೋತ್ತಮನೇ! ನಾನು ಮಿಥಿಲಾಪುರಿಗೆ ಈಶ್ವರನಾದ ಜನಕಮಹಾರಾಜನಿಗೆ ಮಗಳು, ಶ್ರೀರಾಮನ ಭಾರ್ಯೆಯು, ಸೀತೆಯೆಂದು ಪ್ರಸಿದ್ಧಳಾದವಳು ।೩। ಇಕ್ಷ್ವಾಕುಮಹಾರಾಯನ ಮಂದಿರದಲ್ಲಿ ಸರ್ವೇಷ್ಟಾರ್ಥಂಗಳಿಂದ ಸಂಪನ್ನಳಾಗಿ, ಸಮಸ್ತ ಭೋಗಂಗಳನ್ನನುಭವಿಸುತ್ತಾ ಹನ್ನೆರಡು ವರುಷಗಳಿದ್ದೆನು ।೪। ಅನಂತರದಲ್ಲಿ ಹದಿಮೂರನೇ ವರುಷದಲ್ಲಿ ಮಹಾ ರಾಜನಾದ ದಶರಥರಾಯನು ಮಂತ್ರಿಗಳಿಂ ದೊಡಗೂಡಿ, ನನ್ನ ಪತಿಯಾದ ಶ್ರೀರಾಮನಿಗೆ ಯೌವರಾಜ್ಯ ಪಟ್ಟಾಭಿ ಷೇಕವಂ ಗೈಯ್ಯಬೇಕೆಂದು ಯೋಚನೆಯಂ ಗೈದನು, ಅನಂತರದಲ್ಲಿ ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ಪದಾರ್ಥಂಗಳು ಸಿದ್ಧಂಗೈಯ್ಯಲ್ಪಡುತಿರಲೂ, ಕೈಕೇಯಿಯೆಂದು ಪ್ರಸಿದ್ಧಳಾದ ನಮ್ಮ ಚಿಕ್ಕತ್ತೆಯು ಪತಿಯನ್ನಿಂತೆಂದು ಪ್ರಾರ್ಥಿಸಿದಳು। ಏನೆಂದರೆ,—ಆ ಕೈಕೇಯೀ ದೇವಿಯು ದಶರಥಮಹಾರಾಯನನ್ನು ಧರ್ಮದಿಂದ ಸ್ವಾಧೀನಮಾಡಿಕೊಂಡು, ನನ್ನ ಪತಿಯಾದ ಶ್ರೀರಾಮನಿಗೆ ವನವಾಸವೂ, ತನ್ನ ಮಗನಾದ ಭರತನಿಗೆ ಯೌವರಾಜ್ಯ ಪಟ್ಟಾಭಿಷೇಕವೂ ಸಹ ಉಂಟಾಗಬೇಕೆಂದು, ಈ ಯೆರಡು ವರಗಳನ್ನು ಬೇಡಿ ಮತ್ತಿಂತೆಂದಳು, ಎಲೈ ಪತಿಯೇ! ನಾನು ನುಡಿ

ಸತ್ಯಸಂಧಂನೃಪೋತ್ತಮಂ ||೭|| ನಾದ್ಯಭೋಕ್ಷ್ಯೇನಚಸ್ವಪ್ಸ್ಯೇನಪಾಸ್ಯೇಚಕಥಂಚನ ||ಏಷಮೇಜೀವಿತಸ್ಯಾಂತೋರಾ
ಮೋಯದ್ಯಭಿಷಿಚ್ಯತೇ||ಇತಿಬ್ರುವಾಣಾಂಕೈಕೇಯೀಂಶ್ವಶುರೋಮೇಸಮಾನದಃ ||ಅಯಾಚತಾರ್ಥೈರನ್ವರ್ಥೈರ್ನ ಚೆಯಾ
ಚ್ಞಾಂಚಕಾರಸಾ ||೯|| ಮಮಭರ್ತಾಮಹಾತೇಜಾವಯಸಾಪಂಚವಿಂಶಕಃ || ಅಷ್ಟಾದಶಹಿವರ್ಷಾಣಿಮಮಜನ್ಮನಿಗ
ಣ್ಯತೇ ||೧೦|| ರಾಮೇತಿಪ್ರಥಿತೋಲೋಕೇಗುಣವಾನ್ಸತ್ಯವಾನ್ಶುಚಿಃ | ವಿಶಾಲಾಕ್ಷೋಮಹಾಬಾಹುಸ್ಸರ್ವಭೂತಹಿತೇರ
ತಃ ||೧೧|| ಕಾಮಾತ್ಮಸ್ತುಮಹಾತೇಜಾಃಪಿತಾದಶರಥಸ್ಸ್ವಯಂ || ಕೈಕೇಯ್ಯಾಃಪ್ರಿಯಕಾಮಾರ್ಥಂತಂರಾಮಂನಾ
ಭ್ಯಷೇಚಯತ್ ||೧೨|| ಅಭಿಷೇಕಾಯತುಪಿತುಸ್ಸಮೀಪಂರಾಮಮಾಗತಂ || ಕೈಕೇಯೀಭರ್ತಾರಮಿತ್ಯುವಾಚ
ಧೃತಂವಚಃ ||೧೩|| ತವಪಿತ್ರಾಸಮಾಜ್ಞಪ್ತಂಮಮೇದಂಶೃಣುರಾಘವ | ಭರತಾಯಪ್ರದಾತವ್ಯಮಿದಂರಾಜ್ಯಮಕಂ
ಟಕಂ |ತ್ವಯಾಹಿಖಲುವಸ್ತವ್ಯಂನವಪಂಚವರ್ಷಾಣಿಪಂಚಚ|ವನೇಪ್ರವ್ರಜಕಾಕುತ್ಸ್ಥಪಿತರಂಮೋಚಯಾನೃತಾತ್ ||೧೪||

---

ಕ್ಕೆ. ಅಂತಃ-ನಾಶಕಾಲವು, ಅದ್ಯ-ಈಗ, ನಭೋಕ್ಷ್ಯೇ-ಭುಂಜಿಸುವದಿಲ್ಲ, ನಚಸ್ವಪ್ಸ್ಯೇ-ಮಲಗಿನಿದ್ರೆಹೋಗದಿರುವೆನು, ಕಥಂಚನ-ಅತಿಪ್ರಯಾಸದಿಂದ ಲೂ, ನಪಾಸ್ಯೇ-ಪಾನಮಾಡದಿರುವೆನು ||೮|| || ಇತಿ-ಈಪರಿಯಾಗಿ. ಬ್ರುವಾಣಾಂ-ಮಾತನಾಡುತ್ತಿರುವ. ಕೈಕೇಯೀಂ-ಕೈಕೇಯೀದೇವಿಯನ್ನು ಕುರಿತು, ಮಾನದಃ-ಬಹುಮಾನಪ್ರದಾಯಕನಾದ, ಮೇ-ನನಗೆ, ಶ್ವಶುರಃ-ಮಾವನಾದ. ಸಃ-ಆ ದಶರಥರಾಯನು, ಅನ್ವರ್ಥೈಃ-ಉಪಭೋಗಕ್ಷಮವಾದ ಅರ್ಥೈಃ-ಸುವರ್ಣರತ್ನಾದಿಗಳಿಂದ. ಅಯಾಚತ-ಬೇಡಿಕೊಂಡನು, ಸಾ-ಆ ಕೈಕೇಯೀದೇವಿಯು, ಯಾಚ್ಞಾಂ-ಗಂಡನಪ್ರಾರ್ಥನೆಯನ್ನು, ನಚ ಕಾರ-ಮಾಡದೇಹೋದಳು ||೯|| || ಮಹಾತೇಜಾಃ-ಬಹಳ ಸಾಮರ್ಥ್ಯವಂತನಾದ ಮಮ-ನನ್ನ, ಭರ್ತಾ-ಗಂಡನು, ವಯಸಾ-ವಯಸ್ಸಿನಿಂದ. ಪಂಚವಿಂಶಕಃ-ಇಪ್ಪತ್ತೈದುವರ್ಷ ವಯಸ್ಸುಳ್ಳವನು. ಮಮ-ನನಗೆ. ಜನ್ಮನಿ-ಉತ್ಪತ್ತಿಯಾಗುತ್ತಿರಲಾಗಿ, ಅಷ್ಟಾದಶ-ಹದಿನೆಂಟಾದ, ವರ್ಷಾಣಿ ಹೀತಿ-ವರುಷಗಳೂಎಂದು. ಗಣ್ಯತೇ-ಲೆಕ್ಕಮಾಡಲ್ಪಡುತ್ತದೆ ||೧೦|| || ರಾಮೇತಿ-ಶ್ರೀರಾಮನೆಂದು ಲೋಕೇ-ಲೋಕದಲ್ಲಿ, ಪ್ರಥಿತಃ-ಪ್ರಸಿದ್ಧನಾದವನು, ಗುಣವಾನ್-ಬಹಳ ಸುಗುಣವಂತನು, ಸತ್ಯವಾನ್-ಸತ್ಯವಂತನು, ಶುಚಿಃ-ಪರಿಶುದ್ಧನು, ವಿಶಾಲಾಕ್ಷಃ-ವಿಸ್ತಾರವಾದ ನೇತ್ರಗಳುಳ್ಳವನು. ಮಹಾಬಾಹುಃ-ಮಹಾಭುಜಪರಾಕ್ರಮಶಾಲಿಯೂ, ಸರ್ವಭೂತಹಿತೇ-ಸರ್ವಪ್ರಾಣಿಗಳಿಗೂ ಇಷ್ಟವಾಗುವದರಲ್ಲಿ, ರತಃ-ಆಸಕ್ತನು ||೧೧|| || ಮಹಾತೇಜಾಃ-ಮಹಾಸಾಮರ್ಥ್ಯವಂತನಾದ, ಪಿತಾ-ತಂದೆಯಾದ, ದಶರಥಃ-ದಶರಥರಾಯನು. ಸ್ವಯಂ-ತಾನು, ಕಾಮಾತ್ಮಃ-ಕಾಮಗುಣದಿಂ ದೀನನಾಗಿ, ಕೈಕೇಯ್ಯಾಃ-ಕೈಕೇಯೀದೇವಿಗೆ, ಪ್ರಿಯಕಾಮಾರ್ಥಂ-ಇಷ್ಟಾರ್ಥನಿಮಿತ್ತವಾಗಿ, ತಂರಾಮಂ-ಆ ಶ್ರೀರಾಮನನ್ನು, ನಾಭ್ಯಷೇಚಯತ್-ಅಭಿಷೇಕಮಾಡಲಿಲ್ಲ ||೧೨|| || ಅಭಿಷೇಕಾಯ-ಪಟ್ಟಾಭಿಷೇಕಕ್ಕೋಸುಗ, ಪಿತುಃ-ತಂದೆಯ, ಸಮೀಪಂ-ಸಮೀಪವಂಕುರಿತು, ಆಗತಂ-ಬಂದಿರುವ. ಮಮ-ನನಿಗೆ. ಭರ್ತಾರಂ-ಗಂಡನಾದ, ರಾಮಂ-ಶ್ರೀರಾಮನಂಕುರಿತು, ಕೈಕೇಯೀ-ಕೈಕೇಯೀದೇವಿಯು, ಧೃತಂ-ಧೈರ್ಯಯುಕ್ತವಾದ, ವಚಃ-ಮಾತನ್ನು, ಉವಾಚ-ಹೇಳಿದಳು ||೧೩|| || ಹೇರಾಘವ-ಎಲೈ ಶ್ರೀರಾಮನೇ, ತವ-ನಿನ್ನ, ಪಿತ್ರಾ-ತಂದೆಯಿಂದ, ಮಮ-ನನಿಗೆ, ಸಮಾಜ್ಞಪ್ತಂ-ಆಜ್ಞಾಪಿಸಲ್ಪಟ್ಟ, ಇದಂ-ಈ ವರವನ್ನು. ಶೃಣು-ಕೇಳು, ಇದಂರಾಜ್ಯಂ-ಈ ರಾಜ್ಯವು, ಅಕಂಟಕಂ-ನಿಷ್ಕಂಟಕವಾಗಿ, ಭರತಾಯ-ಭರತನಿಗೆ. ದಾತವ್ಯಂ-ಕೊಡತಕ್ಕದ್ದು, ತ್ವಯಾ-ನಿನ್ನಿಂದ, ನವಪಂಚಚವರ್ಷಾಣಿ-ಹದಿನಾಲ್ಕುವರುಷಗಳು, ವನೇ-ಅರಣ್ಯದಲ್ಲಿ, ವಸ್ತವ್ಯಂ-ಇರತಕ್ಕದ್ದು ||೧೪|| || ಹೇಕಾಕುತ್ಸ್ಥ-ಎಲೈ ಶ್ರೀರಾಮನೇ, ಪ್ರವ್ರಜ-ಹೊರಡು, ಪಿತರಂ-ತಂದೆಯನ್ನು. ಅನೃತಾತ್-ಅಸತ್ಯವಚನದೋಷದಿಂದ, ಮೋಚಯ-ಬಿಡಿಸು ||೧೫|| || ತಥೇತಿ-ಹಾಗೇ

---

ದಂತೆಯೇ ನಡೆಯಿಸಬೇಕು, ಇಲ್ಲದೆ ಪೋಂದುವೇಳೆ ಶ್ರೀರಾಮನಿಗೆ ಪಟ್ಟಾಭಿಷೇಕವಂ ಮಾಡಿಸಿದರೆ, ನಾನು ನಿದ್ರಾಹಾರಂಗಳಂ ನೀಗಿಕೊಳ್ಳುವೆನೆಂದು ನುಡಿದವಳಾಗಲೂ, ಬಹುಮಾನವಂತನಾದ ಆ ಮಹಾರಾಯನು, ನಿನಗೆ ಅನೇಕವಾದ ರತ್ನಾದಿ ಉತ್ತಮವಸ್ತುಗಳಂ ಕೊಡುವೆನು, ಈ ಮಾತಂ ಮಾತ್ರ ನಡಿಯಬೇಡೆಂದು ವಿಧವಿಧವಾಗಿ ಕೇಳಿಕೊಂಡನು, ಆಕೆಯಾದರೆ ಆ ಮುಷ್ಕರವನ್ನು ಬಿಡದೇ ತನ್ನಿಷ್ಟವಿದ್ದಂತೆ ಮಾಡಿಸಿದಳು. ಯೆನ್ನ ಪತಿಯಾದ ಶ್ರೀರಾಮನಿಗೆ ಇಪ್ಪತ್ತೈದು ವರುಷಗಳ ವಯಸ್ಸುಳ್ಳವನುನನಗೆ ಹದಿನೆಂಟು ವರುಷಗಳು ತುಂಬಿದವು||೧೦|| ನನ್ನ ಪತಿಯಾದ ಶ್ರೀರಾಮನು ಲೋಕದಲ್ಲಿ ಮಹಾ ಪ್ರಸಿದ್ಧನಾದವನು, ಬಹು ಗುಣವಂತನು, ಸತ್ಯವಾದ ಮಾತುಗಳಂ ನುಡಿವನು, ಮಹಾ ಪರಿಶುದ್ಧನು, ವಿಸ್ತಾರವಾದ ನೇತ್ರಂಗಳುಳ್ಳವನು, ಮಹಾ ಭುಜಪರಾಕ್ರಮಶಾಲಿಯು, ಸರ್ವಪ್ರಾಣಿಗಳಿಗೂ ಇಷ್ಟವಂ ಗೈಯ್ಯುತ್ತಲಿರುವನು, ಇಂಥಾವನಾಗಿದ್ದರೂ, ಮಹಾ ಸಾಮರ್ಥ್ಯವಂತನಾದ ದಶರಥಮಹಾರಾಯನು ಸ್ವಯಂ ಕಾಮಾತುರನಾಗಿ, ಕೈಕೇಯೀದೇವಿಗೆ ಪ್ರಿಯವಂ ಮಾಡಲಿಚ್ಛೆಯಿಂದ ಆತನಿಗೆ ಪಟ್ಟಾಭಿಷೇಕವು ಮಾಡಲ್ಪಡಲಿಲ್ಲ ||೧೨|| ಯಾಕಂದರೆ,—ಯುವರಾಜ್ಯಪಟ್ಟಾಭಿಷೇಕಕ್ಕಾಗಿ ಜನಕನ ಸಾಮೀಪ್ಯವನ್ನೈದಿದ ಶ್ರೀರಾಮನಂ ಕುರಿತು ಕೈಕೇಯೀದೇವಿಯು ಎಲೈ ಶ್ರೀರಾಮನೇ! ನಿಮ್ಮ ತಂದೆಯು ನನಗೆ ಪೇಳಿರುವ ವಾಕ್ಯವಂ ಕೇಳುವವನಾಗು, ಏನಂದರೆ,—ಈ ರಾಜ್ಯವಂ ನಿಷ್ಕಂಟಕವಾಗಿ ಹದಿನಾಲ್ಕುವರುಷಗಳು ಭರತ

ತಥೇತ್ಯುಕ್ತ್ವಾ ಚ ತಾಂ ರಾಮಃ ಕೈಕೇಯೀಮಕುತೋಭಯಃ ॥ ಚಕಾರ ತದ್ವಚಸ್ತಸ್ಯಾ ಮಮ ಭರ್ತಾ ದೃಢವ್ರತಃ ।೧೬॥
ದದ್ಯಾನ್ನ ಪ್ರತಿಗೃಹ್ಣೀಯಾತ್ಸತ್ಯಂ ಬ್ರೂಯಾನ್ನ ಚಾನೃತಂ । ಏತದ್ಬ್ರಾಹ್ಮಣ ರಾಮಸ್ಯ ಧ್ರುವಂ ವ್ರತಮನುತ್ತಮಂ॥
ತಸ್ಯ ಭ್ರಾತಾ ತು ದ್ವೈಮಾತ್ರೋ ಲಕ್ಷ್ಮಣೋ ನಾಮ ವೀರ್ಯವಾನ್॥ ರಾಮಸ್ಯ ಪುರುಷವ್ಯಾಘ್ರಸ್ಸಹಾಯಸ್ಸಮರೇರಿಹಾ॥೧೭॥
ಸ ಭ್ರಾತಾ ಲಕ್ಷ್ಮಣೋ ನಾಮ ಧರ್ಮಚಾರೀ ದೃಢವ್ರತಃ । ಅನ್ವಗಚ್ಛದ್ಧನುಷ್ಪಾಣಿಃ ಪ್ರವ್ರಜಂತಂ ಮಯಾ ಸಹ ।೧೮॥
ಜಟೀ ತಾಪಸರೂಪೇಣ ಮಯಾ ಸಹ ಸಹಾನುಜಃ। ಪ್ರವಿಷ್ಟೋ ದಂಡಕಾರಣ್ಯಂ ಧರ್ಮನಿತ್ಯೋ ಜಿತೇಂದ್ರಿಯಃ॥೧೯॥ ತೇ ವಯಂ
ಪ್ರಚ್ಯುತಾ ರಾಜ್ಯಾತ್ಕೈಕೇಯ್ಯಾಸ್ತು ಕೃತೇ ತ್ರಯಃ । ವಿಚರಾಮ ದ್ವಿಜಶ್ರೇಷ್ಠ ವನಂ ಗಂಭೀರಮೋಜಸಾ ।೨೦॥ ಸಮಾ
ಶ್ವಸ ಮುಹೂರ್ತಂ ತು ಶಕ್ಯಂ ವಸ್ತುಮಿಹ ತ್ವಯಾ ॥ ಆಗಮಿಷ್ಯತಿ ಮೇ ಭರ್ತಾ ವನ್ಯಮಾದಾಯ ಪುಷ್ಕಲಂ ॥ ರುರೂನ್

---

ಆಗಲೆಂದು, ತಾಂಕೈಕೇಯೀಂ-ಆ ಕೈಕೇಯೀದೇವಿಯನ್ನು ಕುರಿತು, ಉಕ್ತ್ವಾ-ಹೇಳಿ, ಅಕುತೋಭಯಃ-ಯಾತರಿಂದಲೂ ಭಯವಿಲ್ಲದಿರುವ, ಮಮ-ನನಗೆ, ಭರ್ತಾ-ಗಂಡನಾದ. ರಾಮಃ-ಶ್ರೀರಾಮನು, ದೃಢವ್ರತಃ-ನಿಶ್ಚಂಚಲವಾದ ವ್ರತವುಳ್ಳವನಾಗಿ, ತಸ್ಯಾಃ-ಆ ಕೈಕೇಯೀದೇವಿಯ, ತದ್ವಚಃ-ಆ ಮಾತನ್ನು, ಚಕಾರ-ಮಾಡಿದನು ||೧೬|| ಹೇಬ್ರಾಹ್ಮಣ-ಎಲೈ ಬ್ರಾಹ್ಮಣನೇ, ರಾಮಃ-ಶ್ರೀರಾಮನು. ದದ್ಯಾತ್-ಕೊಡುವನು. ನಪ್ರತಿಗೃಹ್ಣೀಯಾತ್-ಪ್ರತಿಗ್ರಹಿಸಲಾರನು, ಸತ್ಯಂ-ಯಥಾರ್ಥವನ್ನೇ, ಬ್ರೂಯಾತ್-ಹೇಳುವನು. ಅನೃತಂ-ಸುಳ್ಳುಮಾತನ್ನು. ನಬ್ರೂಯಾತ್-ಹೇಳಲಾರನು. ಏತತ್-ಇದು, ರಾಮಸ್ಯ-ಶ್ರೀರಾಮನ, ಅನುತ್ತಮಂ-ಸರ್ವೋತ್ತಮವಾದ ವ್ರತಂ-ನಿಯಮವು, ಧ್ರುವಂ-ಶಾಶ್ವತವಾದದ್ದು ||೧೭|| ತಸ್ಯ-ಆ ಶ್ರೀರಾಮನಿಗೆ, ಭ್ರಾತಾ-ತಮ್ಮನಾದ, ದ್ವೈಮಾತ್ರಃ-ಮಲತಾಯಿಯಮಗನಾದ, ವೀರ್ಯವಾನ್-ಪರಾಕ್ರಮಶಾಲಿಯಾದ. ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧನಾದ, ಪುರುಷವ್ಯಾಘ್ರಃ-ಪುರುಷಶ್ರೇಷ್ಠನು. ಸಮರೇ-ಕಾಳಗದಲ್ಲಿ. ರಾಮಸ್ಯ-ಶ್ರೀರಾಮನಿಗೆ, ಅರಿಹಾ-ಶತ್ರುಸಂಹಾರಕನಾದ, ಸಹಾಯಃ-ಸಹಾಯಭೂತನು ||೧೮|| ಲಕ್ಷ್ಮಣೋನಾಮ-ಲಕ್ಷ್ಮಣನೆಂದು ಪ್ರಸಿದ್ಧನಾದ, ಧರ್ಮಚಾರೀ-ಧರ್ಮವನ್ನೇ ನಡಿಸುತ್ತಿರುವ. ದೃಢವ್ರತಃ-ದೃಢವಾದ ನಿಯಮವುಳ್ಳ, ಸಭ್ರಾತಾ-ಆ ತಮ್ಮನು, ಧನುಷ್ಪಾಣಿಃ-ಬಿಲ್ಲೇ ಕೈಯಲ್ಲಿಉಳ್ಳವನಾಗಿ, ಪ್ರವ್ರಜಂತಂ-ಪ್ರಯಾಣ ಮಾಡುತ್ತಿರುವ ಶ್ರೀರಾಮನಂ ಕುರಿತು, ಮಯಾಸಹ-ನನ್ನೊಡಗೂಡ, ಅನ್ವಗಚ್ಛತ್-ಅನುಸರಿಸಿಬಂದನು ||೧೯|| ಧರ್ಮನಿತ್ಯಃ-ಧರ್ಮದಲ್ಲೇ ಶಾಶ್ವತಬುದ್ಧಿಯುಳ್ಳ, ಜಿತೇಂದ್ರಿಯಃ-ಇಂದ್ರಿಯಗಳಂ ಜೈಸಿರುವ ರಾಮನು, ಮಯಾಸಹ-ನನ್ನೊಡಗೂಡ, ಸಹಾನುಜಃ-ತಮ್ಮನಿಂದೊಡಗೂಡಿದವನಾಗಿ, ಜಟೀ-ಜಟಾಧಾರಿಯಾಗಿ, ತಾಪಸರೂಪೇಣ-ಋಷಿರೂಪದಿಂದ ದಂಡಕಾರಣ್ಯಂ-ದಂಡಕಾರಣ್ಯವನ್ನು, ಪ್ರವಿಷ್ಟಃ-ಹೊಕ್ಕನು ||೨೦|| ಹೇದ್ವಿಜಶ್ರೇಷ್ಠ-ಎಲೈ ಬ್ರಾಹ್ಮಣಶ್ರೇಷ್ಠನೇ, ತೇವಯಂ ತ್ರಯಃ-ಆ ನಾವುಗಳು ಮೂರ್ವರೂ, ಕೈಕೇಯ್ಯಾಃಕೃತೇ-ಕೈಕೇಯೀದೇವಿಯ ನಿಮಿತ್ತವಾಗಿ, ರಾಜ್ಯಾತ್-ರಾಜ್ಯದದೆಸೆಯಿಂದ, ಪ್ರಚ್ಯುತಾಃ-ಬಿಡಲ್ಪಟ್ಟವರಾಗಿ, ಓಜಸಾ-ಸ್ವಸಾಮರ್ಥ್ಯದಿಂದ, ಗಂಭೀರಂ-ಗಂಭೀರವಾದ, ವನಂ-ಅರಣ್ಯದಲ್ಲಿ, ವಿಚರಾಮ-ಸಂಚರಿಸುತ್ತೇವೆ ||೨೧|| ಮುಹೂರ್ತಂ-ಎರಡುಘಳಿಗೇಕಾಲವು, ಸಮಾಶ್ವಸ-ಸಮಾಧಾನವಾಗಿಕೋ, ತ್ವಯಾ-ನಿನ್ನಿಂದ, ಇಹ-ಇಲ್ಲಿ. ವಸ್ತುಂ-ಇರುವದಕ್ಕೆ, ಶಕ್ಯಂ-ಅರ್ಹವು, ಮೇ-ನನ್ನ, ಭರ್ತಾ-ಗಂಡನು, ವನ್ಯಂ-ಅರಣ್ಯದಲ್ಲಿ ಪುಟ್ಟಿದ, ಪುಷ್ಕಲಂ-ಸಮೃದ್ಧವಾದ ಆಹಾರವನ್ನು, ಆದಾಯ-ತೆಗೆದುಕೊಂಡು, ಆಗಮಿಷ್ಯತಿ-ಬರುವನು, (ಪ್ರಕ್ಷಿಪ್ತಪಾಠಸ್ತು-ಪ್ರಕ್ಷಿಪ್ತವಾದರೆ, ರುರೂನ್-ಕೃಷ್ಣಸಾರಮೃಗಗಳನ್ನೂ, ಗೋಧಾನ್-ಗೋಧಾಎಂಬ ಮೃಗವಿಶೇಷಗಳನ್ನೂ, ವರಾಹಾಂಶ್ಚ-ಕಾಡುಹಂದಿಗಳನ್ನೂ, ಬಹೂನ್-ಅನೇಕಗಳಾದ, ಆಮಿಷಾನ್-ಭೋಜನಮಾಡತಕ್ಕ ಮೃಗವಿಶೇಷಗಳನ್ನು ಹತ್ವಾ-ಕೊಂದು, ಆದಾ

---

ನಿಗೆ ಕೊಡಬೇಕು, ನೀನು ಅರಣ್ಯಕ್ಕೆ ತೆರಳಬೇಕು, ಎಂದು ನುಡಿದಿರುವನು, ಆತನ ಮಾತನ್ನು ಅಸತ್ಯವಂ ಗೈಯ್ಯಬೇಡ ಎಂಬದಾಗಿ ಪೇಳಲೂ, ಎನ್ನ ಪತಿಯಾದ ಶ್ರೀರಾಮನು ಆ ವಾಕ್ಯವಂ ಕೇಳಿ ಹಾಗೆಯೇ ಆಗಲೆಂದು ವೊಪ್ಪಿಕೊಂಡು ಅರಣ್ಯಕ್ಕೆ ಬಂದವನಾದನು ।೧೬॥ ಎಲೈ ಬ್ರಾಹ್ಮಣನೇ! ನನ್ನ ಪತಿಯಾದ ಶ್ರೀರಾಮನು ತಾನು ವೊಬ್ಬರಿಗೆ ಕೊಡತಕ್ಕವನೇ ಹೊರತು ಮತ್ತೊಬ್ಬರಿಂದ ತೆಗದುಕೊಳ್ಳತಕ್ಕವನಲ್ಲ; ಸಟೆಮಾತುಗಳಂ ನುಡಿವನಲ್ಲ; ಈ ಉತ್ತಮವಾದ ವ್ರತವಂ ಮಾಡಿಕೊಂಡಿರುವನು ।೧೭॥ ಆತನು ವೊಡಹುಟ್ಟಿದವನಾದ ಮಹಾಪರಾಕ್ರಮಶಾಲಿಯಾದ ಲಕ್ಷ್ಮಣನೆಂಬನನ್ನೋರ್ವನಿರುವನು, ಆತನು ನಮಗೆ ಸಹಾಯವಂ ಗೈಯ್ಯುವವನಾಗಿ ಸಂಗಡ ಬಂದಿಹನು, ಮಹಾ ಧರ್ಮವಂತನು, ದೃಢವಾದ ನಿಯಮವುಳ್ಳವನು, ಧರ್ಮದಲ್ಲಿಯೇ ಬುದ್ಧಿಯುಳ್ಳವನು ।೧೮॥ ಎಲೈಬ್ರಾಹ್ಮಣನೇ! ಮಹಾ ಜಿತೇಂದ್ರಿಯನಾದ ಶ್ರೀರಾಮನು ಸತಿಯಾದ ನನ್ನಿಂದಲೂ, ವೊಡಹುಟ್ಟಿದವನಾದ ಲಕ್ಷ್ಮಣನಿಂದಲೂ ಸಹ ವೊಡಗೂಡಿ, ಜಡೆಗಳಂ ಧರಿಸಿಕೊಂಡು, ಋಷಿವೃತ್ತಿಯಿಂದ ದಂಡಕಾರಣ್ಯ ಪ್ರವೇಶಂಗೈದನು ॥೨೦॥ ಎಲೈ ಬ್ರಾಹ್ಮಣೋತ್ತಮನೇ! ಈ ರೀತಿಯಾಗಿ ನಾವುಗಳು ಮೂರುಮಂದಿಯು, ಕೈಕೇಯಿದೇವಿಯ ನಿಮಿತ್ತವಾಗಿ ರಾಜ್ಯವಂ ಬಿಟ್ಟು ಸ್ವಸಾಮರ್ಥ್ಯದಿಂದ ಸಂಚಾರವಂ ಗೈಯ್ಯುತಲಿರ್ಧೇವೆ ।೨೧॥ ನೀನು ಸ್ವಲ್ಪ ಕಾಲವು ವಿಶ್ರಮಿಸಿಕೊಂಡವನಾಗಿದ್ದರೆ, ಯೆನ್ನ ಪತಿಯಾದ ಶ್ರೀರಾಮನು, ಅನೇಕವಾದ ಕೃಷ್ಣಸಾರಮೃಗಂಗಳ

ಗೋಧಾನ್ವರಾಹಾಂಶ್ಚಹತ್ವಾದಾಯಾಮಿಷಂಬಹೂನ್ ॥೨೨॥ ಸತ್ವಂನಾಮಚಗೋತ್ರಂಚಕುಲಂಚಾಚಕ್ಷ್ವತತ್ವ
ತಃ । ಏಕಶ್ಚದಂಡಕಾರಣ್ಯೇಕಿಮರ್ಥಂಚರಸಿದ್ವಿಜ ॥೨೩॥ ಏವಂಬ್ರುವಂತ್ಯಾಂಸೀತಾಯಾಂರಾಮಪತ್ನ್ಯಾಂಮಹಾ
ಬಲಃ । ಪ್ರತ್ಯುವಾಚೋತ್ತರಂತೀವ್ರಂರಾವಣೋರಾಕ್ಷಸಾಧಿಪಃ ॥೨೪॥ ಯೇನವಿತ್ರಾಸಿತಾಲೋಕಾಸ್ಸದೇವಾಸುರಪನ್ನ
ಗಾಃ । ಅಹಂತುರಾವಣೋನಾಮಸೀತೇರಕ್ಷೋಗಣೇಶ್ವರಃ ॥೨೫॥ ತ್ವಾಂತುಕಾಂಚನವರ್ಣಾಭಾಂದೃಷ್ಟ್ವಾಕೌಶೇಯ
ವಾಸಿನೀಂ । ರತಿಂಸ್ವಕೇಷುದಾರೇಷುನಾಧಿಗಚ್ಛಾಮ್ಯನಿಂದಿತೇ ॥೨೬॥ ಬಹ್ವೀನಾಮುತ್ತಮಸ್ತ್ರೀಣಾಮಾಹೃತಾನಾ
ಮಿತಸ್ತತಃ । ಸರ್ವಾಸಾಮೇವಭದ್ರಂತೇಮಮಾಗ್ರಮಹಿಷೀಭವ ॥೨೭॥ ಲಂಕಾನಾಮಸಮುದ್ರಸ್ಯಮಮಮಧ್ಯೇಮ
ಹಾಪುರೀ । ಸಾಗರೇಣಪರಿಕ್ಷಿಪ್ತಾನಿವಿಷ್ಟಾನಗಮೂರ್ಧನಿ ॥೨೮॥ ತತ್ರಸೀತೇಮಯಾಸಾರ್ಧಂವನೇಷುವಿಚರಿಷ್ಯಸಿ ।

---

ಯು-ತೆಗೆದುಕೊಂಡು, ಆಗಮಿಷ್ಯತಿ-ಬರುವನು) ॥೨೨॥ ಹೇದ್ವಿಜ-ಎಲೈ ಬ್ರಾಹ್ಮಣನೇ, ಸತ್ವಂ-ಆ ಈ ನೀನು, ನಾಮಚ-ಹೆಸರನ್ನೂ ಗೋತ್ರಂಚ-ಗೋತ್ರವನ್ನೂ, ಕುಲಂಚ-ಕುಲವನ್ನೂ, ತತ್ವತಃ-ಯಥಾರ್ಥವಾಗಿ, ಆಚಕ್ಷ್ವ-ಹೇಳು, ಏಕಃ-ಒಬ್ಬನೇ, ದಂಡಕಾರಣ್ಯೇ-ದಂಡಕಾರಣ್ಯದಲ್ಲಿ, ಕಿಮರ್ಥಂ-ಯಾತಕ್ಕೋಸ್ಕರ, ಚರಸಿ-ಸಂಚರಿಸುತ್ತೀಯೆ ॥೨೩॥ ಏವಂ-ಈಪರಿಯಾಗಿ, ರಾಮಪತ್ನ್ಯಾಂ-ಶ್ರೀರಾಮನ ಹೆಂಡತಿಯಾದ, ಸೀತಾಯಾಂ-ಸೀತಾದೇವಿಯು, ಬ್ರುವಂತ್ಯಾಂಸತ್ಯಾಂ-ಹೇಳುತ್ತಿರುವಳಾಗುತ್ತಿರಲಾಗಿ, ಮಹಾಬಲಃ-ಮಹಾಬಲಶಾಲಿಯಾದ, ರಾಕ್ಷಸಾಧಿಪಃ-ರಕ್ಕಸರಿಗೆ ಅಧಿಪತಿಯಾದ, ರಾವಣಃ-ರಾವಣನು, ತೀವ್ರಂ-ತೀಕ್ಷ್ಣವಾದ, ಉತ್ತರಂ-ಪ್ರತ್ಯುತ್ತರವನ್ನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೨೪॥ ಹೇಸೀತೆ-ಎಲೈ ಸೀತಾದೇವಿಯೇ, ಯೇನ-ಯಾವ ನನ್ನಿಂದ, ಸದೇವಾಸುರಪನ್ನಗಾಃ-ದೇವತೆಗಳೂ ರಾಕ್ಷಸರೂ ಸರ್ಪಗಳಿಂದೊಡಗೂಡಿದ. ಲೋಕಾಃ-ಲೋಕಗಳು, ವಿತ್ರಾಸಿತಾಃ-ಹೆದರಿಕೊಳ್ಳಲ್ಪಡುತ್ತವೋ, ಸೋಹಂ-ಆ ಈ ನಾನು. ರಾವಣೋನಾಮ-ರಾವಣನೆಂದು ಪ್ರಸಿದ್ಧನಾದ, ರಕ್ಷೋಗಣೇಶ್ವರಃ-ರಕ್ಕಸರ ಸಮೂಹಂಗಳಿಗೆ ರಾಜನು ॥೨೫॥ ಹೇಅನಿಂದಿತೇ-ಎಲಾ ದೋಷವಿಲ್ಲದವಳೇ, ಕಾಂಚನವರ್ಣಾಭಾಂ-ಭಂಗಾರದ ಬಣ್ಣದಂತೆ ಬಣ್ಣವುಳ್ಳ ಅವಯವಗಳುಳ್ಳವಳೇ, ಕೌಶೇಯವಾಸಿನೀಂ-ದಿವ್ಯ ಪಟ್ಟೆಮಡಿಯೇ ವಸ್ತ್ರವಾಗುಳ್ಳವಳೇ, ತ್ವಾಂತು-ನಿನ್ನನ್ನಾದರೆ, ದೃಷ್ಟ್ವಾ-ಕಂಡು, ಸ್ವಕೇಷು-ಸ್ವಕೀಯರಾದ, ದಾರೇಷು-ಹೆಂಡತಿಯರಲ್ಲಿ, ರತಿಂ-ವಿಲಾಸವನ್ನು, ನಾಧಿಗಚ್ಛಾಮಿ-ಹೊಂದುವನಾಗಲಿಲ್ಲ ॥೨೬॥ ತೇ-ನಿನಗೆ. ಭದ್ರಂ-ಮಂಗಳವು, ಅಸ್ತು-ಆಗಲೀ, ಇತಸ್ತತಃ-ಈದೇಶ ಆ ದೇಶದಿಂದಲೂ, ಆಹೃತಾನಾಂ-ತೆಗೆದುಕೊಂಡು ಬರಲ್ಪಟ್ಟ, ಸರ್ವಾಸಾಮೇವ-ಸಮಸ್ತರಾದ, ಬಹ್ವೀನಾಂ-ಅನೇಕರಾದ, ಉತ್ತಮಸ್ತ್ರೀಣಾಂ-ಉತ್ಕೃಷ್ಟವಾದ ಸ್ತ್ರೀರುಗಳೊಳಗೆ, ಮಮ-ನನಗೆ. ಅಗ್ರಮಹಿಷೀ-ದೊಡ್ಡಹೆಂಡತಿಯು, ಭವ-ಆಗು॥ (ಕಾಂಚನವರ್ಣಾಭಾಮಿತಿ-ಇದುಮೊದಲ್ಗೊಂಡು; ಅಗ್ರಮಹಿಷೀಭವ-ಎಂಬ ಎರಡು ಶ್ಲೋಕಕ್ಕೂ ವಾಸ್ತವಿಕಾರ್ಥವೇನೆಂದರೆ ನನ್ನ ಇಷ್ಟದೇವತಾಸ್ವರೂಪಳಾದ ನಿನ್ನನ್ನು. ದೃಷ್ಟ್ವಾ-ಕಂಡು. ಸ್ವಕೇಷು-ಸ್ವಕೀಯರಾದ, ದಾರೇಷು-ಪುತ್ರಮಿತ್ರಕಳತ್ರಾದಿಗಳಲ್ಲಿ, ರತಿಂ-ಇಚ್ಛೆಯನ್ನು, ನಾಧಿಗಚ್ಛಾಮಿ-ಹೊಂದಲಾರೆನು, ಮಮ-ನನಗೆ ಇಷ್ಟದೇವತಾಸ್ವರೂಪಳಾದ ನಿನ್ನ ದರುಶನದಿಂ ಆನಂದಭರಿತನಾದ ನಾನು ಸರ್ವಾಂಶದಲ್ಲಿ ನಿವೃತ್ತಿಮಾರ್ಗವಂಹೊಂದಿದೆ ಅನೇಕದೇಶಗಳಿಂ ತರಲ್ಪಟ್ಟ ನನ್ನ ಸ್ತ್ರೀರುಗಳಿಗೂ ನನ್ನ ದೊಡ್ಡಹೆಂಡತಿಗೂ ನೀನೇ ರಕ್ಷಕಳಾಗು ಎಂದು ತಾತ್ಪರ್ಯವು) ॥೨೭॥ ಮಮ-ನನ್ನ. ಲಂಕಾನಾಮ-ಲಂಕಾಎಂದು ಪ್ರಸಿದ್ಧವಾದ, ಮಹಾಪುರೀ-ದೊಡ್ಡಪಟ್ಟಣವೂ, ಸಮುದ್ರಸ್ಯ-ಸಮುದ್ರದ, ಮಧ್ಯೇ-ಮಧ್ಯದಲ್ಲಿ, ಸಾಗರೇಣ-ಕಡಲಿನಿಂದ, ಪರಿಕ್ಷಿಪ್ತಾ-ಸುತ್ತಲ್ಪಟ್ಟದ್ದಾಗಿ, ನಗಮೂರ್ಧನಿ-ತ್ರಿಕೂಟವೆಂಬ ಬೆಟ್ಟದತುದಿಯಲ್ಲಿ, ನಿವಿಷ್ಟಾ-ಇರಿಸಲ್ಪಟ್ಟಿದೆ ॥೨೮॥ ಹೇಸೀತೆ-ಎಲೆಸೆ

---

ನ್ನೂ, ಗೋಧಾಎಂಬ ಮೃಗವಿಶೇಷಂಗಳನ್ನೂ, ಕಾಡುಹಂದಿಗಳನ್ನೂ, ಮತ್ತೂ ಇತರವಾದ ಮೃಗವಿಶೇಷಂಗಳನ್ನೂ ಸಹ ತೆಗೆದುಕೊಂಡು ಬರುವನು ॥೨೨॥ ಎಲೈ ಬ್ರಾಹ್ಮಣೋತ್ತಮನೇ! ನೀನು ನಿನ್ನ ನಾಮಧೇಯವನ್ನೂ ಗೋತ್ರವನ್ನೂ ಕುಲವನ್ನೂ ಸಹ ತತ್ವದಿಂ ಪೇಳುವವನಾಗು, ಪೋರ್ವನೆ ಈ ದಂಡಕಾರಣ್ಯದಲ್ಲಿ ಯಾಕೆ ಸಂಚಾರವಂ ಗೈಯ್ಯುತಲಿರುವೆ? ಎಂದು ಸೀತಾದೇವಿಯು ನುಡಿಯಲೂ, ಮಹಾ ಬಲವಂತನಾದ ರಾಕ್ಷಸಾಧಿಪತಿಯಾದ ರಾವಣನು ಅತಿ ತೀವ್ರವಾಗಿ ಉತ್ತರವಂ ಕೊಡುವನದೆಂತೆನೆ;—ಎಲೈ ಸೀತಾದೇವಿಯೇ! ಯಾವನನ್ನಿಂದ, "ದೇವತೆಗಳು, ರಾಕ್ಷಸರು, ಸರ್ಪಂಗಳು, ಮತ್ತು ಮೂರುಲೋಕಂಗಳೂ ಸಹ ಹೆದರಿಸಲ್ಪಡುತಲಿರುವವೋ, ಅಂಥಾ ಈ ನಾನು ರಾವಣನೆಂದು ಪ್ರಸಿದ್ಧನಾದವನು, ರಾಕ್ಷಸರ ಗಣಂಗಳಿಗೆ ನಾಥನಾದವನು। ೨೫॥ ಎಲೌ ದೋಷರಹಿತಳೇ! ಅಪರಂಜಿಯ ಬಣ್ಣದಂತೆ ಬೆಳಗುವ ಶರೀರಕಾಂತಿಯುಳ್ಳವಳೇ! ದಿವ್ಯವಾದ ಪೀತಾಂಬರವನ್ನುಟ್ಟಿರುವ ನಿನ್ನಂ ವೀಕ್ಷಿಸಿ, ಸ್ವಕೀಯರಾದ ಪತ್ನಿಗಳಲ್ಲಿ ರತಿಯಂ ಬಿಟ್ಟಿಹೇನೆ; ನಿನಗೆ ಶುಭವಾಗಲಿ, ದೇಶದೇಶದಿಂದ ತರಲ್ಪಟ್ಟ ಅನೇಕರಾದ ನನ್ನ ಸ್ತ್ರೀಯರಲ್ಲಿ ನನಗೆ ಅಗ್ರಮಹಿಷಿಯಾಗಿ ಇರುವವಳಾಗು, [ತತ್ವಾಭಿಪ್ರಾಯವೇನೆಂದರೆ,—ನನ್ನ ಇಷ್ಟದೇವತಾ ಸ್ವರೂಪಳಾದ ನಿನ್ನಂ ಕಂಡು ಸ್ವಕೀಯರಾದ ಪತ್ನೀ ಪುತ್ರಾದಿಗಳಲ್ಲಿ ಇಚ್ಛೆಯಂ ಗೈಯ್ಯಲಾರೆನು ಪರದೇವತಾ ಸ್ವರೂಪಳಾದ ನಿನ್ನ ಸಂದರ್ಶನದಿಂದ ಆನಂದಭರಿತನಾದೆನು, ಸರ್ವಾಂಶಗಳಲ್ಲಿಯೂ ನಿವೃತ್ತಿ

ನಚಾರಣ್ಯೌಕಸಾಂವಾಸಸ್ಸ್ಪೃಹಯಿಷ್ಯಸಿಭಾಮಿನಿ ॥೨೯॥ ಪಂಚದಾಸ್ಯಸ್ಸಹಸ್ರಾಣಿಸರ್ವಾಭರಣಭೂಷಿತಾಃ ।
ಸೀತೇಪರಿಚರಿಷ್ಯಂತಿಭಾರ್ಯಾಭವಸಿಮೇಯದಿ ॥೩೦॥ ರಾವಣೇನೈವಮುಕ್ತಾತುಕುಪಿತಾಜನಕಾತ್ಮಜಾ । ಪ್ರತ್ಯುವಾ
ಚಾನವದ್ಯಾಂಗೀತಮನಾದೃತ್ಯರಾಕ್ಷಸಂ ॥೩೧॥ ಮಹಾಗಿರಿಮಿವಾಕಂಪ್ಯಂಮಹೇಂದ್ರಸದೃಶಂಪತಿಂ । ಮಹೋದಧಿ
ಮಿವಾಕ್ಷೋಭ್ಯಮಹಂರಾಮಮನುವ್ರತಾ ॥೩೨॥ ಸರ್ವಲಕ್ಷಣಸಂಪನ್ನಂನ್ಯಗ್ರೋಧಪರಿಮಂಡಲಂ । ಸತ್ಯಸಂಧಂಮ
ಹಾಭಾಗಮಹಂರಾಮಮನುವ್ರತಾ ॥೩೩॥ ಮಹಾಬಾಹುಂಮಹೋರಸ್ಕಂಸಿಂಹವಿಕ್ರಾಂತಗಾಮಿನಂ । ನೃಸಿಂಹಂಸಿಂ
ಹಸಂಕಾಶಮಹಂರಾಮಮನುವ್ರತಾ ॥೩೪॥ ಪೂರ್ಣಚಂದ್ರಾನನಂರಾಮಂರಾಜವತ್ಸಂಜಿತೇಂದ್ರಿಯಂ । ಪೃಥುಕೀರ್ತಿಂ

---

ಶಾವೇಃವಿಪೇಃ. ತತ್ರ-ಆ ಲಂಕಾಪುರದಲ್ಲಿ, ಮಯಾಸಾರ್ಧಂ-ನನ್ನೊಡಗೂಡ, ವನೇಷು-ವನಗಳಲ್ಲಿ, ವಿಹರಿಷ್ಯಸಿ-ವಿಹಾರಮಾಡುವಿ, ಹೇಭಾಮಿನಿ-ಎಲೈ ಸ್ತ್ರೀಯೇ-ಅರಣ್ಯೌಕಸಾಂ-ಅರಣ್ಯವಾಸಕ್ಕೆ, ನಸ್ಪೃಹಯಿಷ್ಯಸಿ-ಶೀಗ ಯಿಚ್ಛೆಸಲಾರೆ ||೨೯|| ಹೇಸೀತೆ-ಎಲೌ ಸೀತಾದೇವಿಯೇ, ಮೇ-ನನಗೆ, ಭಾರ್ಯಾ-ಹೆಂಡತಿ-ಭವಸಿಯದಿ-ಆದವಳೇ ಆದರೆ, ಸರ್ವಾಭರಣಭೂಷಿತಾಃ-ಸಮಸ್ತಾಭರಣಗಳಿಂದಲಂಕೃತರಾದ, ಪಂಚಸಹಸ್ರಾಣಿ-ಐದು ಸಾವಿರಸಂಖ್ಯೆಯುಳ್ಳ, ದಾಸ್ಯಃ-ದಾಸಿಯರು, ತ್ವಾಂ-ನಿನ್ನನ್ನು, ಪರಿಚರಿಷ್ಯಂತಿ-ಸೇವಿಸುವರು ||30|| ರಾವಣೇನ-ರಾವಣನಿಂದ, ಏವಂ-ಈಪರಿಯಾಗಿ. ಉಕ್ತಾ-ಹೇಳಲ್ಪಟ್ಟವಳಾದಕಾರಣ, ಕುಪಿತಾ-ಕೋಪಗೊಂಡ, ಅನವದ್ಯಾಂಗೀ-ದೋಷರಹಿತವಾದ ಶರೀರವುಳ್ಳ, ಜನಕಾತ್ಮಜಾ-ಸೀತಾದೇವಿಯು, ರಾಕ್ಷಸಂ-ರಕ್ಕಸನಾದ ತಂ-ಆ ರಾವಣನನ್ನು, ಅನಾದೃತ್ಯ-ಧಿಕ್ಕರಿಸಿ, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟಳು ||31|| ಅಹಂ-ನಾನು. ಮಹಾಗಿರಿಮಿವ-ಬೆಟ್ಟದಂತೆ. ಅಕಂಪ್ಯಂ-ಚಲಿಸಲಸಾಧ್ಯನಾದ, ಮಹೇಂದ್ರಸದೃಶಂ-ದೇವೇಂದ್ರನಿಗೆ ಸಮನಾದ, ಪತಿಂ-ಪತಿಯಾದ, ಮಹೋದಧಿಮಿವ-ದೊಡ್ಡಕಡಲಿನಂತೆ ಅಕ್ಷೋಭ್ಯಂ-ಕ್ಷೋಭಿಸಲಸಾಧ್ಯನಾದ, ರಾಮಂ-ಶ್ರೀರಾಮನನ್ನು ಅನುವ್ರತಾ-ಅನುಸರಿಸಿರುವಳು ||32|| ಸರ್ವಲಕ್ಷಣಸಂಪನ್ನಂ-ಸಮಸ್ತವಾದ ಲಕ್ಷಣಗಳಿಂ ಕೂಡಿಕೊಂಡಿರುವ. ನ್ಯಗ್ರೋಧಪರಿಮಂಡಲಂ-ಆಲದಮರದಂತೆ ಹರಳಿಕೊಂಡ ಆಕಾರವುಳ್ಳ, (ಯದ್ವಾನ್ಯಗ್ರೋಧಪರಿಮಂಡಲಂ. ವಟವೃಕ್ಷ ಶಾಖಾವಿಸ್ತಾರಗಳೋಪಾದಿಯಲ್ಲಿರುವ ಬಂಧುಸ್ತೋಮವುಳ್ಳ,) ಸತ್ಯಸಂಧಂ-ಸತ್ಯಪ್ರತಿಜ್ಞೆಯುಳ್ಳ, ಮಹಾಭಾಗಂ-ಮಹಾಪುಣ್ಯವಂತನಾದ ರಾಮಂ-ಶ್ರೀರಾಮನನ್ನು, ಅಹಂ-ನಾನು, ಅನುವ್ರತಾ-ಅನುಸರಿಸಿದ ವ್ರತವುಳ್ಳವಳು ||33|| ಅಹಂ-ನಾನು, ಮಹಾಬಾಹುಂ-ಮಹಾಭುಜಗಳುಳ್ಳ, ಮಹೋರಸ್ಕಂ-ದೊಡ್ಡದಾಗಿರುವ ಎದೆಯುಳ್ಳ, ಸಿಂಹವಿಕ್ರಾಂತಗಾಮಿನಂ-ಸಿಂಹಗಮನದಂತೆ ಗಮನವುಳ್ಳ, ಸಿಂಹಸಂಕಾಶಂ-ಸಿಂಹದಂತೆ ಪರಾಕ್ರಮವುಳ್ಳ, ನೃಸಿಂಹಂ-ಪುರುಷಶ್ರೇಷ್ಠನಾದ, ರಾಮಂ-ಶ್ರೀರಾಮನನ್ನು. ಅನುವ್ರತಾ-ಅನುಸರಿಸಿದ ವ್ರತವುಳ್ಳವಳು ||34|| ಅಹಂ-ನಾನು ಪೂರ್ಣಚಂದ್ರಾನನಂ-ಹಣ್ಣಿವೆ ಚಂದ್ರನಿಗೆ ಸಮಾನವಾದ ಮುಖವುಳ್ಳ, ರಾಮಂ-ಸಮಸ್ತಭಕ್ತಜನಹೃದಯದಲ್ಲಿ ವಿಲಾಸಶೀಲನಾದ ರಾಜವತ್ಸಂ-ರಾಜಪುತ್ರನಾದ. ಜಿತೇಂದ್ರಿಯಂ-ಜಯಿಸಲ್ಪಟ್ಟ ಇಂದ್ರಿಯವ್ಯಾಪಾರವುಳ್ಳ, ಪೃಥುಕೀರ್ತಿಂ-ವಿಸ್ತಾರವಾದ ಯಶಸ್ಸುಳ್ಳ, ಮಹಾತ್ಮಾನಂ-ಮಹಾಮನಸ್ವಿ

---

ರ್ಗವನ್ನೈದಿಧೇನೆ; ದೇಶದೇಶದಿಂದ ತರಲ್ಪಟ್ಟ ಸ್ತ್ರೀಯರುಗಳಿಗೂ ನನಗೂ, ನನ್ನ ಪಟ್ಟದರಸಿಯಾದ ಮಂಡೋದರಿಗೂ ಸಹ ನೀನು ರಕ್ಷಕಳಾಗಿರೆಂದು ಭಾವವು] ।೨೯। ಎಲೈ ದೇವಿಯೇ! ನನ್ನ ಪಟ್ಟಣವು ಲಂಕೆಯೆಂದು ಪ್ರಖ್ಯಾತವಾದದ್ದು, ಅದು ಸಮುದ್ರಮಧ್ಯದಲ್ಲಿ ಚಿತ್ರಕೂಟವೆಂಬ ಬೆಟ್ಟದ ಶಿಖರದಲ್ಲಿ ಸ್ಥಾಪಿಸಲ್ಪಟ್ಟಿಧೆ, ಆ ಪುರವರದಲ್ಲಿ ನನ್ನೊಡನೆ ವನಂಗಳಲ್ಲಿ ವಿಹಾರವಂ ಗೈಯ್ಯುತಲಿರುವವಳಾಗು, ನೀನೀವನದಲ್ಲಿ ವಾಸವಂ ಗೈಯ್ಯುವದು ಯುಕ್ತವಾಗಿ ತೋರುವದಿಲ್ಲ, ನೀನೆನಗೆ ಭಾರ್ಯೆಯಾದವಳಾದರೆ, ಸಮಸ್ತವಾದ ಆಭರಣಂಗಳಂ ಧರಿಸಿರುವ ಐದುಸಾವಿರ ಮಂದಿ ರಾಕ್ಷಸರು ನಿನ್ನ ಸೇವೆಯಂ ಗೈಯ್ಯುವರು, ಎಂದು ರಾವಣನಿಂದ ಪೇಳಲ್ಪಟ್ಟವಳಾದಕಾರಣ ಬಹು ಕೋಪವನ್ನೈದಿದವಳಾಗಿ, ಸೀತಾದೇವಿಯು ಆ ರಾವಣನಂ ಧಿಕ್ಕರಿಸಿ ಉತ್ತರವಂ ಕೊಡುವಳದೆಂತೆನೆ,—।೩೧। ಎಲೋ ರಾಕ್ಷಸನೇ! ಮಹಾ ಪರ್ವತದಂತೆ ಕಂಪಿಸಲಸಾಧ್ಯನಾಗಿಯೂ, ದೇವೇಂದ್ರನಿಗೆ ಸಮಾನನಾದವನಾಗಿಯೂ ಸಮುದ್ರದಂತೆ ಕ್ಷೋಭಿಸಲಸಾಧ್ಯನಾಗಿಯೂ, ಸಮಸ್ತವಾದ ಸಲ್ಲಕ್ಷಣಗಳಿಂದ ಸಂಪನ್ನನಾಗಿಯೂ, ವಟವೃಕ್ಷದಂದದಿ ಹರಳಿಕೊಂಡಿರುವ ಆಕಾರವುಳ್ಳವನಾಗಿಯೂ (ಅಥವಾ ಆಲದಮರದ ಕೊಂಬೆಗಳಂತೆ ವಿಸ್ತಾರವನ್ನೈದಿದ ನೆಂಟರ ಗುಂಪುಗಳುಳ್ಳವನಾಗಿಯೂ) ಸತ್ಯವಾದ ಪ್ರತಿಜ್ಞೆಯುಳ್ಳವನಾಗಿಯೂ, ಬಹು ಪುಣ್ಯವಂತನಾಗಿಯೂ, ಮಹಾ ಭುಜಪರಾಕ್ರಮವುಳ್ಳವನಾಗಿಯೂ, ಸಿಂಹದ ವಕ್ಷಸ್ಥಲದಂತೆ ವಿಸ್ತಾರವನ್ನೈದಿದ ವಕ್ಷಸ್ಥಲವುಳ್ಳವನಾಗಿಯೂ ಸಿಂಹದಂತೆ ಸಂಚಾರವಂ ಗೈಯ್ಯುತಲಿರುವವನಾಗಿಯೂ, ಪುರುಷೋತ್ತಮನಾಗಿಯೂ, ಸಂಪೂರ್ಣಚಂದ್ರನಂತೆ ಬೆಳಗುವ ಮುಖವುಳ್ಳವನಾಗಿಯೂ, ಸಮಸ್ತರಾದ ಭಕ್ತರ ಮನದಲ್ಲಿ ವಿಲಾಸವಂ ಮಾಡುತಿರುವವನಾಗಿಯೂ, ಜಿತೇಂದ್ರಿಯನಾಗಿಯೂ, ಬಹು ಯಶೋವಂತನಾಗಿಯೂ ಇರುವ ಶ್ರೀರಾಮನನ್ನು ಅನುಸರಿಸಿ ನಿಯಮವಂ ಮಾಡುತ್ತ-

ಮಹಾತ್ಮಾನಮಹಂರಾಮಮನುವ್ರತಾ ॥೩೫॥ ತ್ವಂಪುನರ್ಜಂಬುಕಸ್ಸಿಂಹೀಂಮಾಮಿಹೇಚ್ಛಸಿದುರ್ಲಭಾಂ । ನಾಹಂ ಶಕ್ಯಾತ್ವಯಾಸ್ಪ್ರಷ್ಟುಮಾದಿತ್ಯಸ್ಯಪ್ರಭಾಯಥಾ ॥೩೬॥ ಪಾದಪಾನ್ಕಾಂಚನಾನ್ನೂನಂಬಹೂನ್ಪಶ್ಯಸಿಮಂದಭಾಕ್ । ರಾಘವಸ್ಯಪ್ರಿಯಾಂಭಾರ್ಯಾಂಯಸ್ತ್ವಮಿಚ್ಛಸಿರಾವಣ ॥೩೭॥ ಕ್ಷುಧಿತಸ್ಯಹಿಸಿಂಹಸ್ಯಮೃಗಶತ್ರೋಸ್ತರಸ್ವಿನಃ । ಆಶೀವಿಷಸ್ಯವದನಾದ್ದಂಷ್ಟ್ರಾಮಾದಾತುಮಿಚ್ಛಸಿ ॥೩೮॥ ಮಂದರಂಪರ್ವತಶ್ರೇಷ್ಠಂಪಾಣಿನಾಹರ್ತುಮಿಚ್ಛಸಿ । ಕಾಲಕೂಟಂವಿಷಂಪೀತ್ವಾಸ್ವಸ್ತಿಮಾನ್ಗಂತುಮಿಚ್ಛಸಿ ॥೩೯॥ ಅಕ್ಷಿಸೂಚ್ಯಾಪ್ರಮೃಜಸಿಜಿಹ್ವಯಾಲೇಢಿಚಕ್ಷುರಂ । ರಾಘವಸ್ಯಪ್ರಿಯಾಂಭಾರ್ಯಾಮಧಿಗಂತುಂತ್ವಮಿಚ್ಛಸಿ ॥೪೦॥ ಅವಸಜ್ಯಶಿಲಾಂಕಂಠೇಸಮುದ್ರಂತರ್ತುಮಿಚ್ಛಸಿ । ಸೂರ್ಯಾಚಂದ್ರಮಸೌಚೋಭೌಪಾಣಿಭ್ಯಾಂಹರ್ತುಮಿಚ್ಛಸಿ । ಯೋರಾಮಸ್ಯಪ್ರಿಯಾಂಭಾರ್ಯಾಂಪ್ರಧರ್ಷಯಿತುಮಿಚ್ಛಸಿ ॥೪೧॥ ಅಗ್ನಿಂಪ್ರಜ್ವಲಿತಂದೃಷ್ಟ್ವಾವಸ್ತ್ರೇಣಾಹರ್ತುಮಿಚ್ಛಸಿ । ಕಲ್ಯಾಣವೃತ್ತಾಂರಾ

---

ಯಾದ್ದ ರಾಮಂ-ಶ್ರೀರಾಮನನ್ನುದ್ದೇಶಿಸಿ. ಅನುವ್ರತಾ-ಅನುಕೂಲವಾದ ನಿಯಮವುಳ್ಳವಳು ||೩೪|| ತ್ವಂಪುನಃ-ನೀನಾದರೆ, ಜಂಬುಕಃ-ನರಿಯು, ಸಿಂಹೀಂ-ಸಿಂಹಪ್ರಾಯನಾದ ಶ್ರೀರಾಮನಿಗೆ ಹೆಂಡತಿಯಾದ, ದುರ್ಲಭಾಂ-ಲಭ್ಯವಾಗದಿರುವ, ಮಾಂ-ನನ್ನನ್ನು ಇಚ್ಛಸಿ-ಅಪೇಕ್ಷಿಸುತ್ತಿ, ಅಹಂ-ನಾನು, ಆದಿತ್ಯಸ್ಯ-ಸೂರ್ಯನ, ಪ್ರಭಾಯಥಾ-ಕಾಂತಿಯಂತೆ, ತ್ವಯಾ-ನಿನ್ನಿಂದ, ಸ್ಪ್ರಷ್ಟುಂ-ಸ್ಪರ್ಶಿಸುವುದಕ್ಕೋಸುಗ. ನಶಕ್ಯಾ-ಸಾಧ್ಯಳಲ್ಲ ||೩೫|| ಹೇರಾವಣ-ಎಲೈ ರಾವಣನೇ, ಮಂದಭಾಕ್-ಕ್ಷೀಣವಾದ ಭಾಗ್ಯವುಳ್ಳ, ಯಃ-ಯಾವ. ತ್ವಂ-ನೀನು, ರಾಘವಸ್ಯ-ಶ್ರೀರಾಮನಿಗೆ, ಪ್ರಿಯಾಂ-ಇಷ್ಟಳಾದ, ಭಾರ್ಯಾಂ-ಹೆಂಡತಿಯನ್ನು, ಇಚ್ಛಸಿ-ಅಪೇಕ್ಷಿಸುತ್ತೀಯೋ. ಸಃ-ಅಂಥಾ ನೀನು. ಕಾಂಚನಾನ್-ಭಂಗಾರದ ವಿಕಾರವಾದ. ಬಹೂನ್-ಅನೇಕಗಳಾದ, ಪಾದಪಾನ್-ಗಿಡಗಳನ್ನು, ಪಶ್ಯಸಿ-ಕಾಣುವಿ. ನೂನಂ-ನಿಶ್ಚಯವು ||೩೬|| ಕ್ಷುಧಿತಸ್ಯ-ಹಸಿಗೊಂಡ. ಮೃಗಶತ್ರೋಃ-ಮೃಗಗಳಿಗೆ ಶತ್ರುವಾದ, ತರಸ್ವಿನಃ-ಬಲಿಷ್ಠವಾದ, ಸಿಂಹಸ್ಯ-ಸಿಂಹದ, ವದನಾತ್-ಮುಖದಕಡೆಯಿಂದಲೂ, ಆಶೀವಿಷಸ್ಯ-ಸರ್ಪದ, ವದನಾತ್-ಮುಖದಕಡೆಯಿಂದಲೂ, ದಂಷ್ಟ್ರಾಂ-ಕೋರೆಹಲ್ಲನ್ನು, ಆದಾತುಂ-ತೆಗೆದುಕೊಂಡು ಬರುವದಕ್ಕಾಗಿ, ಇಚ್ಛಸಿ-ಅಪೇಕ್ಷಿಸುತ್ತೀಯಿ ||೩೭|| ಪರ್ವತಶ್ರೇಷ್ಠಂ-ಪರ್ವತಗಳೊಳಗೆ ಶ್ರೇಷ್ಠವಾದ, ಮಂದರಂ-ಮಂದರಪರ್ವತವನ್ನು, ಪಾಣಿನಾ-ಕೈಯಿಂದ, ಹರ್ತುಂ-ಅಪಹರಿಸುವದಕ್ಕೆ, ಇಚ್ಛಸಿ-ಅಪೇಕ್ಷಿಸುತ್ತೀಯಿ, ಕಾಲಕೂಟಂ-ಕಾಲಕೂಟವೆಂಬ, ವಿಷಂ-ಮಹಾವಿಷವನ್ನು, ಪೀತ್ವಾ-ಪಾನಮಾಡಿ, ಸ್ವಸ್ತಿಮಾನ್-ಕ್ಷೇಮವಂತನಾಗಿ, ಗಂತುಂ-ಹೋಗುವದಕ್ಕೆ, ಇಚ್ಛಸಿ-ಅಪೇಕ್ಷಿಸುತ್ತಿ ||೩೮|| ಅಕ್ಷಿ-ಕಣ್ಣನ್ನು, ಸೂಚ್ಯಾ-ಸೂಜಿಯಿಂದ. ಪ್ರಮೃಜಸಿ-ಪರಿಸಿಕೊಳ್ಳುತ್ತಿ, ಜಿಹ್ವಯಾ-ನಾಲಿಗೆಯಿಂದ, ಕ್ಷುರಂ-ಕತ್ತಿಯನ್ನು, ಲೇಢಿ-ನೆಕ್ಕುತ್ತಿ, ಯಃ-ಯಾವ, ತ್ವಂ-ನೀನು, ರಾಘವಸ್ಯ-ಶ್ರೀರಾಮನಿಗೆ, ಪ್ರಿಯಾಂ-ಇಷ್ಟಳಾದ, ಭಾರ್ಯಾಂ-ಹೆಂಡತಿಯಾದ ನನ್ನನ್ನು. ಅಧಿಗಂತುಂ-ಹೊಂದುವದಕ್ಕಾಗಿ. ಇಚ್ಛಸಿ-ಇಚ್ಛೈಸುತ್ತೀಯೋ ||೩೯|| ಸಃ-ಅಂಥಾ ನೀನು, ಕಂಠೇ-ಕಂಠದಲ್ಲಿ, ಶಿಲಾಂ-ಪಾಷಾಣವನ್ನು. ಅವಸಜ್ಯ-ಕಟ್ಟಿಕೊಂಡು, ಸಮುದ್ರಂ-ಸಮುದ್ರವನ್ನು, ತರ್ತುಂ-ದಾಟಬೇಕೆಂಬ ಇಚ್ಛೆಯುಳ್ಳವನಾಗಿ. ಇಚ್ಛಸಿ-ಅಪೇಕ್ಷಿಸುತ್ತಿ, ಯಃ-ಯಾವ ನೀನು. ರಾಮಸ್ಯ-ಶ್ರೀರಾಮನಿಗೆ, ಪ್ರಿಯಾಂ-ಇಷ್ಟಳಾದ, ಭಾರ್ಯಾಂ-ಹೆಂಡತಿಯನ್ನು, ಪ್ರಧರ್ಷಯಿತುಂ-ತಿರಸ್ಕರಿಸುವದಕ್ಕೆ. ಇಚ್ಛಸಿ-ಅಪೇಕ್ಷಿಸುತ್ತೀಯೋ, ಸಃ-ಅಂಥಾ ನೀನು, ಉಭೌ-ಇಬ್ಬರಾದ, ಸೂರ್ಯಾಚಂದ್ರಮಸೌ-ಸೂರ್ಯಚಂದ್ರರನ್ನು, ಪಾಣಿಭ್ಯಾಂ-ಕೈಗಳಿಂದ, ಹರ್ತುಂ-ಹಿಡಿದುಕೊಳ್ಳುವದಕ್ಕಾಗಿ, ಇಚ್ಛಸಿ-ಅಪೇಕ್ಷಿಸುತ್ತಿ, ಸಃ-ಅಂಥಾ ನೀನು, ಅಗ್ನಿಂ-ಅಗ್ನಿಯನ್ನು, ಪ್ರಜ್ವಲಿತಂ-ಜ್ವಾಲೆಯುಳ್ಳದ್ದನ್ನಾಗಿ. ದೃಷ್ಟ್ವಾ-ಕಂಡು, ವಸ್ತ್ರೇಣ-ವಸ್ತ್ರದಿಂದ, ಆಹರ್ತುಂ-ಹಿಡಿದುಕೊಳ್ಳುವದಕ್ಕೆ, ಇಚ್ಛಸಿ-ಅಪೇಕ್ಷಿಸುತ್ತೀಯಿ. ಯಃ-ಯಾವ ನೀನು, ಕಲ್ಯಾಣವೃತ್ತಾಂ-ಮಂಗಳಕರ

---

ಳಿರುವಳು ॥೩೪॥ ನೀನಾದರೆ ನರಿಗೆ ಸಮಾನನಾದವನು, ಸಿಂಹಪ್ರಾಯನಾಗಿರುವ ಶ್ರೀರಾಮನಿಗೆ ಮಡದಿಯಾದ ನನ್ನನ್ನಪೇಕ್ಷಿಸುತಲಿದ್ದೀ, ಸೂರ್ಯನ ಪ್ರಭೆಯಂತೆ ನನ್ನನ್ನು ಸ್ಪರ್ಶಿಸಲಾಗದು ॥೩೫॥ ಎಲೋ ರಾವಣನೇ! ಮಂದಭಾಗ್ಯನಾದ ಯಾವ ನೀನು, ರಘುಕುಲೋತ್ಪನ್ನನಾದ ಶ್ರೀರಾಮನಿಗೆ ಪ್ರಾಣಪ್ರಿಯಳಾದ ನನ್ನನ್ನು ಅಪೇಕ್ಷಿಸುತ್ತೀಯೋ, ಅಂಥಾ ನೀನು ನಿಶ್ಚಯವಾಗಿ ಸುವರ್ಣವಿಕಾರವಾದ ವೃಕ್ಷಂಗಳಂ ನೋಡುವವನಾಗುವಿ ॥೩೬॥ ಹಸಿದು ಇರುವ ಸಿಂಹದ ಬಾಯಿಯಿಂದಲೂ, ಸರ್ಪದಮುಖದಿಂದಲೂ ಕೋರೆದಾಡೆಗಳನ್ನು ಕೀಳಲಿಚ್ಛಿಸುತ್ತೀ ॥೩೭॥ ಎಲೈ ರಾವಣನೇ! ಪರ್ವತೋತ್ತಮವಾದ ಮಂದರಗಿರಿಯನ್ನು ಒಂದು ಕೈಯಿಂದ ಕೊಂಡೊಯ್ಯುವದಕ್ಕೆ ಇಚ್ಛೈಸುತಲಿರುವೆ, ಕಾಲಕೂಟವೆಂಬ ವಿಷವನ್ನು ಪಾನಂಗೈದು ಕ್ಷೇಮವಾಗಿ ತೆರಳಲಿಚ್ಛಿಸುತ್ತೀ, ಮತ್ತು ಸೂಜಿಯಿಂದ ಕಣ್ಣುಗಳನ್ನು ಚುಚ್ಚಿಕೊಳ್ಳುತ್ತೀ, ನಾಲಿಗೆಯಿಂದ ಕ್ಷುರವನ್ನು ನೆಕ್ಕುತಲಿದ್ದೀ, ಇದಲ್ಲದೆ ಶ್ರೀರಾಮನ ಪತ್ನಿಯಾದ ನನ್ನನ್ನು ಧಿಕ್ಕರಿಸಬೇಕೆಂದು ಯಾವ ನೀನು ಇಚ್ಛಿಸುತಲಿದ್ದೀಯೋ, ಅಂಥಾ ನೀನು ಕಲ್ಲನ್ನು ಕೊರಳಿಗೆ ಕಟ್ಟಿಕೊಂಡು ಸಮುದ್ರವಂ ಲಂಘಿಸಲಿಚ್ಛಿಸುತ್ತೀ, ಎಲೈ ರಾವಣನೇ! ಚಂದ್ರಸೂರ್ಯರೀರ್ವರನ್ನು ಕೈಯಿಂದ ಹಿಡಿಯಲಿಚ್ಛಿಸುತ್ತೀ ॥೪೦॥ ಎಲೈ ದಶಕಂಠನೇ! ರಘುವೀರನಾದ ಶ್ರೀರಾಮನ ಭಾರ್ಯೆಯಾದ ನನ್ನನ್ನು ಯಾವ ನೀನು

ಮಸ್ಯಾಪಿ ಭಾರ್ಯಾಂ ಹರ್ತುಮಿಚ್ಛಸಿ ॥೪೩॥ ಅಯೋಮುಖಾನಾಂ ಶೂಲಾನಾಮಗ್ರೇ ಚರಿತುಮಿಚ್ಛಸಿ । ರಾಮಸ್ಯ ಸದೃ
ಶೀಂ ಭಾರ್ಯಾಂ ಯೋಽಧಿಗಂತುಂ ತ್ವಮಿಚ್ಛಸಿ ॥೪೪॥ ಯದಂತರಂ ಸಿಂಹಸೃಗಾಲಯೋರ್ವನೇ ಯದಂತರಂ ಸ್ಯಂದನಿಕಾಸಮು
ದ್ರಯೋಃ । ಸುರಾಗ್ರ್ಯಸೌವೀರಕಯೋರ್ಯದಂತರಂ ತದಂತರಂ ವೈ ತವ ರಾಘವಸ್ಯ ಚ ॥೪೫॥ ಯದಂತರಂ ಕಾಂಚನಸೀಸ
ಲೋಹಯೋರ್ಯದಂತರಂ ಚಂದನವಾರಿಪಂಕಯೋಃ । ಯದಂತರಂ ಹಸ್ತಿಬಿಡಾಲಯೋರ್ವನೇ ತದಂತರಂ ದಾಶರಥೇಸ್ತವೈವ ಚ ॥
ಯದಂತರಂ ವಾಯಸವೈನತೇಯಯೋರ್ಯದಂತರಂ ಮದ್ಗುಮಯೂರಯೋರಪಿ । ಯದಂತರಂ ಸಾರಸಗೃಧ್ರಯೋರ್ವನೇ ತ
ದಂತರಂ ದಾಶರಥೇಸ್ತವೈವ ಚ ॥೪೭॥ ತಸ್ಮಿಂತ್ಸಹಸ್ರಾಕ್ಷಸಮಪ್ರಭಾವೇ ರಾಮೇ ಸ್ಥಿತೇ ಕಾರ್ಮುಕಬಾಣಪಾಣೌ । ಹೃತಾಪಿ ತೇ
ಹಂ ನ ಜರಾಂ ಗಮಿಷ್ಯೇ ವಜ್ರಂ ಯಥಾ ಮಕ್ಷಿಕಯಾವಗೀರ್ಣಮ್ ॥೪೮॥ ಇತೀವ ತದ್ವಾಕ್ಯಮದುಷ್ಟಭಾವಾ ಸುಧೃಷ್ಟಮು
ಕ್ತ್ವಾ ರಜನೀಚರಂ ತಮ್ । ಗಾತ್ರಪ್ರಕಂಪವ್ಯಥಿತಾ ಬಭೂವ ವಾತೋದ್ಧತಾ ಸಾ ಕದಳೀವ ತನ್ವೀ ॥೪೯॥ ತಾಂ ವೇಪಮಾನಾ

---

ಮಾದ ಚರಿತ್ರೆಯುಳ್ಳ. ರಾಮಸ್ಯ-ಶ್ರೀರಾಮನ. ಭಾರ್ಯಾಂ-ಹೆಂಡತಿಯನ್ನು, ಹರ್ತುಂ-ಅಪಹರಿಸಲೋಸುಗ, ಇಚ್ಛಸಿ-ಅಪೇಕ್ಷಿಸುತ್ತೀಯೋ ॥೪೩॥ ಅಯೋಮುಖಾನಾಂ-ಕಬ್ಬಿಣದ ಮುಖಗಳುಳ್ಳ, ಶೂಲಾನಾಂ-ತ್ರಿಶೂಲಗಳ, ಅಗ್ರೇ-ಕೊನೆಯಲ್ಲಿ, ಚರಿತುಂ-ಸಂಚರಿಸುವದಕ್ಕೆ? ಇಚ್ಛಸಿ-ಇಚ್ಛಿಸುತ್ತೀ. ಯಸ್ತ್ವಂ-ಯಾವನೀನು, ರಾಮಸ್ಯ-ಶ್ರೀರಾಮನಿಗೆ, ಸದೃಶೀಂ-ಸಮಾನಳಾದ. ಭಾರ್ಯಾಂ-ಹೆಂಡತಿಯನ್ನು, ಅಧಿಗಂತುಂ-ಹೊಂದುವದಕ್ಕೆ, ಇಚ್ಛಸಿ-ಇಚ್ಛೆಸುತ್ತೀಯೋ ॥೪೪॥ ವನೇ-ಅರಣ್ಯದಲ್ಲಿ, ಸಿಂಹಸೃಗಾಲಯೋಃ-ಸಿಂಹಕ್ಕೂ ನರಿಗೂ ಎರಡಕ್ಕೂ, ಯದಂತರಂ-ಯೆಷ್ಟರ ತಾರತಮ್ಯವೋ ವನೇ-ನೀರಿನಲ್ಲಿ, ಸ್ಯಂದನಿಕಾಸಮುದ್ರಯೋಃ-ಕ್ಷುದ್ರನದಿಗೂ ಸಮುದ್ರಕ್ಕೂ, ಯದಂತರಂ-ಯೆಷ್ಟರ ತಾರತಮ್ಯವೋ, ಸುರಾಗ್ರ್ಯಸೌವೀರಕಯೋಃ-ಶ್ರೇಷ್ಠವಾದ ಮದ್ಯಕ್ಕೂ ನವಸೋಧಾನ್ನದ ಗಂಜಿಗೂ. ಯದಂತರಂ-ಯೆಷ್ಟರ ತಾರತಮ್ಯವೋ, ತವ-ನಿನಿಗೂ, ರಾಘವಸ್ಯಚ-ಶ್ರೀರಾಮನಿಗೂ, ತದಂತರಂ-ಅಷ್ಟು ತಾರತಮ್ಯವು ॥೪೫॥ ಕಾಂಚನಸೀಸಲೋಹಯೋಃ-ಸುವರ್ಣವೂ ಸೀಸವು ಎಂಬ ಲೋಹದ್ರವ್ಯಗಳಿಗೆ, ಯದಂತರಂ-ಯೆಷ್ಟರ ತಾರತಮ್ಯವೋ, ಚಂದನವಾರಿಪಂಕಯೋಃ-ಶ್ರೀಗಂಧದ ನೀರಿಗೂ ಕೆಸರಿಗೂ, ಯದಂತರಂ-ಯೆಷ್ಟರ ತಾರತಮ್ಯವೋ. ವನೇ-ಅರಣ್ಯದಲ್ಲಿ ಹಸ್ತಿಬಿಡಾಲಯೋಃ-ಆನೆಗೂ ಬೆಕ್ಕಿಗೂ, ಯದಂತರಂ-ಯೆಷ್ಟರ ತಾರತಮ್ಯವೋ, ದಾಶರಥೇಃ-ಶ್ರೀರಾಮನಿಗೂ, ತವಚ-ನಿನಿಗೂ, ತದಂತರಂ-ಅಷ್ಟರ ತಾರತಮ್ಯವು ॥೪೬॥ ವಾಯಸವೈನತೇಯಯೋಃ-ಕಾಗೆಗೂ ಗರುಡನಿಗೂ. ಯದಂತರಂ-ಯೆಷ್ಟು ತಾರತಮ್ಯವೋ, ಮದ್ಗುಮಯೂರಯೋರಪಿ-ನೀರುಕಾಗೆಗೂ ನವಿಲಿಗೂ ಯದಂತರಂ-ಯೆಷ್ಟು ತಾರತಮ್ಯವೋ, ವನೇ-ಅರಣ್ಯದಲ್ಲಿ. ಸಾರಸಗೃಧ್ರಯೋಃ-ಹಂಸಪಕ್ಷಿವಿಶೇಷಕ್ಕೂ ಹದ್ದಿಗೂ. ಯದಂತರಂ-ಯೆಷ್ಟು ಭೇದವೋ ದಾಶರಥೇಃ-ಶ್ರೀರಾಮನಿಗೂ, ತವೈವಚ-ನಿನಗೂ, ತದಂತರಂ-ಅಷ್ಟು ತಾರತಮ್ಯವು ॥೪೭॥ ಸಹಸ್ರಾಕ್ಷಸಮಪ್ರಭಾವೇ-ದೇವೇಂದ್ರನಿಗೆ ಸಮಾನವಾದ ಪ್ರಭಾವವುಳ್ಳ, ತಸ್ಮಿನ್ರಾಮೇ-ಆ ಶ್ರೀರಾಮನು, ಕಾರ್ಮುಕಬಾಣಪಾಣೌ-ಧನುರ್ಬಾಣಗಳೇ ಹಸ್ತದಲ್ಲುಳ್ಳವನಾಗಿ, ಸ್ಥಿತೇಸತಿ-ಇರುತ್ತಿರುವನಾಗಲಾಗಿ. ತೇ-ನಿನ್ನಿಂದ, ಹೃತಾಪಿ-ಅಪಹರಿಸಲ್ಪಟವಳಾದರೂ. ಮಕ್ಷಿಕಯಾ-ನೊಣದಿಂದ, ಅವಗೀರ್ಣಂ-ನುಂಗಲ್ಪಟ್ಟ ವಜ್ರಂಯಥಾ-ವಜ್ರಮಣಿಯಂತೆ ಅಹಂ-ನಾನು. ಜರಾಂ-ಜೀರ್ಣಾವಸ್ಥೆಯನ್ನು, ನಗಮಿಷ್ಯೇ-ಹೊಂದಲಾರೆನು ॥೪೮॥ ಇತೀವ-ಈಪರಿಯಾಗಿ, ಅದುಷ್ಟಭಾವಾ-ದುಷ್ಟಸ್ವಭಾವವಿಲ್ಲದಿರುವ, ಸಾ-ಆ ಸೀತಾದೇವಿಯು. ರಜನೀಚರಂ-ರಕ್ಕಸನಾದ, ತಂ-ಆ ರಾವಣನಂಕುರಿತು, ತದ್ವಾಕ್ಯಂ-ಆ ಮಾತನ್ನು, ಸುಧೃಷ್ಟಂ-ಧೈರ್ಯವಾಗಿ, ಉಕ್ತ್ವಾ-ಹೇಳಿ, ವಾತೋದ್ಧತಾ-ಗಾಳಿಯಿಂದ ಹೊಡೆಯಲ್ಪಟ್ಟ, ತನ್ವೀ-ಸುಕುಮಾರವಾದ, ಕದಳೀವ-ಬಾಳೇಗಿಡದಂತೆ. ಗಾತ್ರಪ್ರಕಂಪವ್ಯಥಿತಾ-ಮೈ ನಡುಗೋಣದರಿಂ ಭಯಪಟ್ಟವಳು, ಬಭೂವ-ಆದಳು ॥೪೯॥ ಮೃತ್ಯುಸಮಪ್ರಭಾವಃ-ಯಮನಿಗೆ ಸಮಾನವಾದ ಸಾಮರ್ಥ್ಯವುಳ್ಳ. ಸರಾವಣಃ-

---

ತಿರಸ್ಕಾರವಂ ಗೈಯ್ಯಲಿಚ್ಛಿಸುತ್ತೀಯೋ, ಅಂಥಾ ನೀನು, ಪ್ರಜ್ವಲಿಸುತಿರುವ ಅಗ್ನಿಯನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಸಾರಲಿಚ್ಛಿಸುತ್ತೀ ಮತ್ತು ಕಬ್ಬಿಣದ ಕೊನೆಗಳುಳ್ಳ ಶೂಲಂಗಳಲ್ಲಿ ಸಂಚರಿಸುವದಕ್ಕೆ ಬಯಸುವವನಾಗಿದ್ದೀ ॥೪೪॥ ಎಲೋ, ಎಲೋ, ರಾವಣನೇ! ಕೇಳುವವನಾಗು ಸಿಂಹಕ್ಕೂ ನರಿಗೂ ಯೆಷ್ಟು ತಾರತಮ್ಯವಿರುವದೋ, ಸರೋವರಕ್ಕೂ ಸಮುದ್ರಕ್ಕೂ ಸಹ ಯೆಷ್ಟು ವ್ಯತ್ಯಾಸವಿರುವದೋ, ಸುವರ್ಣಕ್ಕೂ ಸೀಸಕ್ಕೂ ಯೆಷ್ಟು ವ್ಯತ್ಯಾಸವಿರುವದೋ, ಮತ್ತು ಚಂದನಗಂಧಕ್ಕೂ ಕೇಸರಿಗೂ ಯೆಷ್ಟು ತರತಮ ಭಾವವಿರುವದೋ, ಆನೆಗೂ ಬೆಕ್ಕಿಗೂ ಯೆಷ್ಟು ವ್ಯತ್ಯಾಸವಿರುವದೋ, ಅಷ್ಟು ತಾರತಮ್ಯವು ಶ್ರೀರಾಮನಿಗೂ ನಿನಗೂ ಇರುವದು ॥೪೬॥ ಇದಲ್ಲದೆ ಕಾಗೆಗೂ ಗರುಡನಿಗೂ, ಗೂಬೆಗೂ ನವಿಲಿಗೂ, ಸಾರಸಪಕ್ಷಿಗೂ ರಣಹದ್ದಿಗೂ, ಯೆಷ್ಟು ವ್ಯತ್ಯಾಸವಿರುವದೋ ಅಷ್ಟು ತಾರತಮ್ಯವು ನಿನಗೂ ಶ್ರೀರಾಮನಿಗೂ ಇರುವದು ॥೪೭॥ ಇಂದ್ರನ ಸದೃಶನಾದ ಆ ರಘುನಂದನನು ಕೋದಂಡಪಾಣಿಯಾಗಿರುವಾಗ, ಒಂದುವೇಳೆ ನನಗೆ ನೀನು ಅಪಕಾರವಂಗೈದವನಾದರೂ, ನಾನು ಮಕ್ಷಿಕದಿಂದ ನುಂಗಲು ವಜ್ರಮಣಿಯಂತೆ ಜೀರ್ಣವಾಗುವದಿಲ್ಲವೆಂದು ಸೀತಾದೇವಿಯು ನುಡಿದವಳಾಗಿ ಜೋರುಮಾರುತದಿಂದ ಕದಳೀವೃಕ್ಷವು ಚಲಿಸುವಂತೆ ಮೈನಡುಗುವದರಿಂದ ಬಹು ದುಃಖಿತಳಾದಳು ॥೪೯॥ ಆನಂತರದಲ್ಲಿ ಮೃತ್ಯು

ಮುಪಲಕ್ಷ್ಯಸೀತಾಂಸರಾವಣೋಮೃತ್ಯುಸಮಪ್ರಭಾವಃ । ಕುಲಂಬಲಂನಾಮಚಕರ್ಮಚಸ್ವಂಸಮಾಚಚಕ್ಷೇಭಯಕಾರಣಾರ್ಥಂ ।೫೦। —*** ಇತಿಶ್ರೀಮದಾರಣ್ಯಕಾಂಡೆ-ಸಪ್ತಚತ್ವಾರಿಂಶಸ್ಸರ್ಗಃ ***— ಏವಂಬ್ರುವಂತ್ಯಾಂಸೀತಾಯಾಂಸಂರಬ್ಧಃಪರುಷಂವಚಃ।ಲಲಾಟೆಭ್ರುಕುಟೀಂಕೃತ್ವಾರಾವಣಃಪ್ರತ್ಯುವಾಚಹ॥೧॥ಭ್ರಾತಾವೈಶ್ರವಣಸ್ಯಾಹಂಸಾಪತ್ನ್ಯೋವರವರ್ಣಿನಿ।ರಾವಣೋನಾಮಭದ್ರಂತೆದಶಗ್ರೀವಃಪ್ರತಾಪವಾನ್॥೨॥ಯಸ್ಯದೇವಾಸ್ಸಗಂಧರ್ವಾಃಪಿಶಾಚಪತಗೋರಗಾಃ । ವಿದ್ರವಂತಿಭಯಾದ್ಭೀತಾಮೃತ್ಯೋರಿವಸದಾಪ್ರಜಾಃ। ಯೆನವೈಶ್ರವಣೋರಾಜಾದ್ವೈಮಾತ್ರಃಕಾರಣಾಂತರೆ। ದ್ವಂದ್ವಮಾಸಾದಿತಃಕ್ರೋಧಾದ್ರಣೆವಿಕ್ರಮ್ಯನಿರ್ಜಿತಃ । ಯದ್ಭಯಾರ್ತಃಪರಿತ್ಯಜ್ಯಸ್ವಮಧಿಷ್ಠಾನಮೃದ್ಧಿಮತ್ । ಕೈಲಾಸಂಪರ್ವತಶ್ರೇಷ್ಠಮಧ್ಯಾಸ್ತೆನರವಾಹನಃ ।ಯಸ್ಯತತ್ಪುಷ್ಪಕಂನಾಮವಿಮಾನಂಕಾಮಗಂಶುಭಂ । ವೀರ್ಯಾದೇವಾರ್ಜಿತಂಭದ್ರೆಯೆನಯಾಮಿವಿಹಾಯಸಂ ॥ ಮಮಸಂಜಾತರೋಷಸ್ಯಮುಖಂದೃಷ್ಟ್ವೈವ

ಲಿ ರಾವಣನು, ಪೆಸಮಾನಾಂ-ನಗುತ್ತಿರುವ ಸೀತಾಂ-ಸೀತಾದೇವಿಯನ್ನು, ಉಪಲಕ್ಷ್ಯ-ಕಂಡು, ಭಯಕಾರಣಾರ್ಥಂ-ಭಯಹಟ್ಟಿಸುವದಕ್ಕಾಗಿ, ಕುಲಂಚ-ತನ್ನವಂಶವು, ಬಲಂಚ-ಸಾಮರ್ಥ್ಯವು, ನಾಮಚ-ಹೆಸರಿನನ್ನು, ಸ್ವಂ-ಸ್ವಕೀಯವಾದ, ಕರ್ಮಚ-ಕೃತ್ಯವು ಎಂಬಿವುಗಳನ್ನು, ಸಮಾಚಚಕ್ಷೆ-ಹೇಳಿದನು ॥೫೦॥ —** ಇತಿಶ್ರೀಮದಾರಣ್ಯಕಾಂಡೆ-ಸಪ್ತಚತ್ವಾರಿಂಶಸ್ಸರ್ಗಃ **—

ಏವಂ-ಈರಿಯಾಗಿ, ಸೀತಾಯಾಂ-ಸೀತಾದೇವಿಯು, ಬ್ರುವಂತ್ಯಾಂಸತ್ಯಾಂ-ಮಾತನಾಡುತ್ತಿರುವಳಾಗುತ್ತಿರಲಾಗಿ, ಸಂರಬ್ಧ-ಕೋಪಿಷ್ಠನಾದ, ರಾವಣಃ-ರಾವಣನು, ಲಲಾಟೆ-ಫಾಲಪ್ರದೇಶದಲ್ಲಿ, ಭ್ರುಕುಟೀಂ-ಕಣ್ಣುಬ್ಬುಗಳ ಮುಡಿಯನ್ನು, ಕೃತ್ವಾ-ಮಾಡಿಕೊಂಡು, ಪರುಷಂ-ಕ್ರೂರವಾದ, ವಚಃ-ಮಾತನನ್ನು, ಪ್ರತ್ಯುವಾಚಹ-ಪ್ರತ್ಯುತ್ತರಕೊಟ್ಟನು ॥೧॥ ಹೆವರವರ್ಣಿನಿ-ಎಲೈಶ್ರೇಷ್ಠವಾದ ಬಣ್ಣವುಳ್ಳವಳೇ, ಅಹಂ-ನಾನು, ವೈಶ್ರವಣಸ್ಯ-ಕುಬೇರನಿಗೆ, ಸಾಪತ್ನ್ಯಃ-ಮಲತಾಯಿಮಗನಾದ, ಭ್ರಾತಾ-ತಮ್ಮನೂ, ತೆ-ನಿನಗೆ, ಭದ್ರಂ-ಮಂಗಳವು, ಅಸ್ತು-ಆಗಲಿ, ಪ್ರತಾಪವಾನ್-ಮಹಾಪರಾಕ್ರಮಶಾಲಿಯಾದ, ದಶಗ್ರೀವಃ-ಹತ್ತುಕೊರಳುಳ್ಳ, ರಾವಣೋನಾಮ-ರಾವಣನೆಂದು ಪ್ರಸಿದ್ಧನು, ಸಗಂಧರ್ವಾಃ-ಗಂಧರ್ವರಿಂದೊಡಗೂಡಿದ ದೇವಾಃ-ದೇವತೆಗಳು, ಪಿಶಾಚಪತಗೋರಗಾಃ-ಪಿಶಾಚಗಳೂ ಪಕ್ಷಿಗಳೂ ಸರ್ಪಗಳೂ, ಸದಾ-ನಿರಂತರವೂ, ಮೃತ್ಯೋಃ-ಯಮನ ದೆಸೆಯಿಂದ, ಪ್ರಜಾಃ-ಪ್ರಜೆಗಳಂತೆ, ಯಸ್ಯ-ಯಾವ ರಾವಣನ, ಭಯಾತ್-ಭಯದದೆಸೆಯಿಂದ, ಭೀತಾಃ-ಹೆದರಿಕೆಯುಳ್ಳವರಾಗಿ, ವಿದ್ರವಂತಿ-ಓಡಿಹೋಗುತ್ತಾರೋ ಕಾರಣಾಂತರೆ-ಮತ್ತೊಂದುನಿಮಿತ್ತವಾಗಿ, ದ್ವೈಮಾತ್ರಃ-ಸಪತ್ನೀಕುಮಾರನಾದ ವೈಶ್ರವಣೋರಾಜಾ-ಯಕ್ಷರಿಗೆ ಅಧಿಪತಿಯಾದ ಕುಬೇರನು, ಯೆನ-ಯಾವರಾವಣನಿಂದ, ರಣೆ-ಯುದ್ಧದಲ್ಲಿ, ಕ್ರೋಧಾತ್-ಆಗ್ರಹದದೆಸೆಯಿಂದ,ದ್ವಂದ್ವಂ-ದ್ವಂದ್ವಯುದ್ಧವನ್ನು ಆಸಾದಿತಃ-ಹೊಂದಲ್ಪಟ್ಟವನಾಗಿ ವಿಕ್ರಮ್ಯ-ಬಲಾತ್ಕಾರದಿಂ, ನಿರ್ಜಿತಃ-ಪರಾಜಿತನಾದನೋ, *ನರವಾಹನಃ-ಕುಬೇರನು, ಯದ್ಭಯಾರ್ತಃ-ಯಾವನಭಯದಿಂ ದೀನನಾಗಿ, ಋದ್ಧಿಮತ್-ಐಶ್ವರ್ಯಯುಕ್ತವಾದ, ಸ್ವಮಧಿಷ್ಠಾನಂ-ಸ್ವಕೀಯಾಲಯವನ್ನು, ಪರಿತ್ಯಜ್ಯ-ಬಿಟ್ಟು, ಕೈಲಾಸಂ-ಕೈಲಾಸವೆಂಬ,ಪರ್ವತಶ್ರೇಷ್ಠಂ-ಬೆಟ್ಟದಲ್ಲಿ, ಅಧ್ಯಾಸ್ತೆ-ಅಧಿಷ್ಠಾನಮಾಡಿಕೊಂಡಿರುವನೆಯೋ *ಹೆಭದ್ರೆ-ಎಲೈಶುಭಕರಳೇ,ಯಸ್ಯ-ಯಾವಕುಬೇರನ,ತತ್-ಆ ಪ್ರಸಿದ್ಧವಾದ ಪುಷ್ಪಕಂನಾಮ-ಪುಷ್ಪಕವೆಂದು ಪ್ರಸಿದ್ಧಿಯೆಂಪಡದಿರುವ, ಶುಭಂ-ಶುಭಕರವಾದ, ಕಾಮಗಂ-ಇಚ್ಛಾನುಸಾರವಾಗಿ ಹೋಗುತ್ತಿರುವ, ವಿಮಾನಂ-ವಿಮಾನವೋ, * ಯೆನಯಾವವಿಮಾನದಿಂದ ವಿಹಾಯಸಂ-ಗಗನಮಾರ್ಗದಲ್ಲಿ, ಯಾಮಿ-ಹೋಗುತ್ತೇನೆಯೋ, ತತ್-ಅಂಥಾ ವಿಮಾನವು, ವೀರ್ಯಾದೆವ-ಪರಾಕ್ರಮದಿಂದಲೇ ಅರ್ಜಿತಂ-ಸಂಪಾದಿಸಲ್ಪಟ್ಟಿತ ॥೬॥ ಹೆಮೈಥಿಲೀ-ಎಲೌ ಸೀತಾದೇವಿಯೇ, ಸಂಜಾತರೋಷಸ್ಯ-ಹುಟ್ಟಿದ ಕ್ರೋಧವುಳ್ಳ, ಮಮ-ನನ್ನ ಮುಖಂ-ಮಾರಿಯನ್ನು, ದೃಷ್ಟ್ವೈವ-ಕಾಣುತಲೇ, ಶಕ್ರಪುರೋಗಮಾಃ-ದೇವೇಂದ್ರನೇ ಮೊದಲಾಗುಳ್ಳ, ಸುರಾಃ-ದೇವತೆಗಳು, ಪರಿತ್ರಸ್ತಾಃ-ಭಯಗೊಂಡವರಾಗಿ, ವಿದ್ರವಂತಿ-ಓಡಿಹೋಗು

ಸದೃಶನಾದ ರಾವಣನು ಅಪ್ರಕಾರವಾಗಿ ಕಂಪಿಸುವ ಆ ಸೀತಾದೇವಿಯನ್ನೈದಿ, ಆಕೆಗೆ ಭೀತಿಯನ್ನುಂಟುಮಾಡುವದಕ್ಕಾಗಿ, ತನ್ನ ನಾಮಧೇಯವನ್ನೂ, ಕುಲವನ್ನೂ ಬಲವನ್ನೂ ಸಹ ಹೇಳಿದನು ॥೫೦॥

—*ಆರಣ್ಯಕಾಂಡದಲ್ಲಿನ ೪೭ನೆಯ ಸರ್ಗಂಮುಗಿದುದು*—

ಈ ರೀತಿಯಲ್ಲಿ ಸೀತಾದೇವಿಯು ನುಡಿದವಳಾಗಲೂ, ದಶಕಂಠನು ಕಣ್ಣುಹುಬ್ಬುಗಳಂ ಗಂಟಿಕ್ಕಿ ನುಡಿವನದೆಂತೆನೆ,—ಎಲೈ ಉತ್ತಮಾಂಗನೆಯೇ! ನಾನು ಕುಬೇರನಿಗೆ ಮಲತಾಯಿಯ ಮಗನಾದವನು, ನನ್ನ ಹೆಸರು ರಾವಣನೆಂದು ಪ್ರಸಿದ್ಧಿಯಾಗಿರುವದು, ನನ್ನಂ ನೋಡಿದರೆ ದೇವಾದಿಗಳೆಲ್ಲರು ಭೀತರಾಗಿ ಓಡಿಪೋಗುವರು ಮಹಾ ಪರಾಕ್ರಮಿಯಾದ ಆ ಕುಬೇರನೂ ಸಹ ರಣರಂಗದಲ್ಲಿ ಸೋತು ತನ್ನ ಪುರಿಯಂಬಿಟು ಕೈಲಾಸಗಿರಿಗೆ ಸಾರಿ ಈಗ ಅಲ್ಲಿ ವಾಸವಂ ಗೈಯ್ಯುತಲಿರುವನು, ನಾನು ಯಾವ ವಿಮಾನದಲ್ಲಿ ಕುಳಿತು ಸಂಚಾರವಂ ಗೈಯ್ಯುತಲಿಹೇನೋ, ಅಂಥಾ ಇದು ಆತನದು, ನಾನು ಜಯವನ್ನೈದಿ ಪಡದಿಹೇನೆ ॥೬॥ ಎಲೌ ಸೀತಾದೇವಿಯೇ! ಮಹಾ ರೋಷವುಳ್ಳ ನನ್ನ ಮುಖವಂ ನೋಡಿದಕೂಡ್ಲೆ ಇಂದ್ರಮೊದಲಾದ ದೇವತೆಗಳೆಲ್ಲರು ಹೆದರುವರು, ಮತ್ತು ನಾನು ಯಾವ

ಮೈಥಿಲಿ । ವಿದ್ರವಂತಿಪರಿತ್ರಸ್ತಾಸ್ಸುರಾಶ್ಶಕ್ರಪುರೋಗಮಾಃ ॥೭॥ ಯತ್ರತಿಷ್ಠಾಮ್ಯಹಂತತ್ರಮಾರುತೋವಾತಿಶಂಕಿತಃ। ತೀವ್ರಾಂಶುಶ್ಶಿಶಿರಾಂಶುಶ್ಚಭಯಾತ್ಸಂಪದ್ಯತೇರವಿಃ ।೮। ನಿಷ್ಕಂಪಪತ್ರಾಸ್ತರವೋನದ್ಯಶ್ಚಸ್ತಿಮಿತೋದಕಾಃ। ಭವಂತಿಯತ್ರಯತ್ರಾಹಂತಿಷ್ಠಾಮಿವಿಚರಾಮಿಚ ।೯॥ ಮಮಪಾರೇಸಮುದ್ರಸ್ಯಲಂಕಾನಾಮಪುರೀಶುಭಾ । ಸಂಪೂರ್ಣಾರಾಕ್ಷಸೈರ್ಘೋರೈರ್ಯಥೇಂದ್ರಸ್ಯಾಮರಾವತೀ ॥೧೦॥ ಪ್ರಾಕಾರೇಣಪರಿಕ್ಷಿಪ್ತಾಪಾಂಡುರೇಣವಿರಾಜತಾ । ಹೇಮಕಕ್ಷ್ಯಾಪುರೀರಮ್ಯಾವೈಡೂರ್ಯಮಯತೋರಣಾ॥ ಹಸ್ತ್ಯಶ್ವರಥಸಂಬಾಧಾತೂರ್ಯನಾದವಿನಾದಿತಾ। ಸರ್ವಕಾಲಫಲೈರ್ವೃಕ್ಷೈಸ್ಸಂಕುಲೋದ್ಯಾನಶೋಭಿತಾ॥೧೨। ತತ್ರತ್ವಂವಸತೀಸೀತೇರಾಜಪುತ್ರಿಮಯಾಸಹ। ನಸ್ಮರಿಷ್ಯಸಿನಾರೀಣಾಂಮಾನುಷೀಣಾಂಮನಸ್ವಿನೀ। ಭುಂಜಾನಾಮಾನುಷಾನ್ಭೋಗಾನ್ದಿವ್ಯಾಂಶ್ಚವರವರ್ಣಿನೀ । ನಸ್ಮರಿಷ್ಯಸಿರಾಮಸ್ಯಮಾನುಷಸ್ಯಗತಾಯುಷಃ ॥೧೪॥

---

ತ್ತಾರೆಯೋ ॥೭॥ ಅಹಂ–ನಾನು. ಯತ್ರ–ಯಾವ ಸ್ಥಳದಲ್ಲಿ, ತಿಷ್ಠಾಮಿ–ಇರುತ್ತೇನೆಯೋ, ತತ್ರ–ಅಲ್ಲಿ, ಮಾರುತಃ–ಗಾಳಿಯು, ಶಂಕಿತಃ–ಭಯಗೊಂಡದ್ದಾಗಿ, ವಾತಿ–ಬೀಸುತ್ತದೆ, ತೀವ್ರಾಂಶುಃ–ತೀಕ್ಷ್ಣವಾದ ಕಿರಣಗಳುಳ್ಳ, ರವಿಃ–ಸೂರ್ಯನು, ಭಯಾತ್–ಭಯದದೆಸೆಯಿಂದ. ಶಿಶಿರಾಂಶುಃ–ಥಣ್ಣಗಿರುವ ಕಿರಣಗಳುಳ್ಳವನು, ಸಂಪದ್ಯತೇ–ಆಗುವನೋ ॥೮॥ ಅಹಂ–ನಾನು, ಯತ್ರಯತ್ರ–ಯಾವ ಯಾವ ಸ್ಥಳದಲ್ಲಿ. ತಿಷ್ಠಾಮಿ–ಕುಳಿತಿರುತ್ತೇನೆಯೋ. ಚರಾಮಿಚ–ಸಂಚರಿಸುವೆನೆಯೋ, ತತ್ರತತ್ರ–ಅಲ್ಲಿ ಅಲ್ಲಿ, ತರವಃ–ಗಿಡಗಳು. ನಿಷ್ಕಂಪಪತ್ರಾಃ–ಚಲಿಸದ ಎಲೆಗಳುಳ್ಳವವು, ನದ್ಯಶ್ಚ–ನದಿಗಳೂ, ಸ್ತಿಮಿತೋದಕಾಃ–ನಿಶ್ಚಂಚಲವಾದ ನೀರುಳ್ಳವುಗಳು, ಭವಂತಿ–ಆಗುವವು ॥೯॥ ಸಮುದ್ರಸ್ಯ–ಕಡಲಿನ, ಪಾರೇ–ಪರತೀರದಲ್ಲಿ. ಮಮ–ನನ್ನ ಸಂಬಂಧವಾದ, ಶುಭಾ–ಶುಭಕರವಾದ, ಘೋರೈಃ–ಭಯಂಕರರಾದ. ರಾಕ್ಷಸೈಃ–ರಕ್ಕಸರಿಂದ, ಸಂಪೂರ್ಣಾ–ತುಂಬಿರುವ, ಇಂದ್ರಸ್ಯ–ದೇವೇಂದ್ರನಿಗೆ, ಅಮರಾವತೀಯಥಾ–ಅಮರಾವತೀಪಟ್ಟಣದಂತೆ, ಲಂಕಾನಾಮ–ಲಂಕೆಎಂದು ಪ್ರಸಿದ್ಧವಾದ, ಪುರೀ–ಪಟ್ಟಣವು, ಅಸ್ತಿ–ಇಧೆ ॥೧೦॥ ಪಾಂಡುರೇಣ–ಬೆಳ್ಳಗಿರುವ, ವಿರಾಜತಾ–ಹೊಳೆಯುತ್ತಿರುವ. ಪ್ರಾಕಾರೇಣ–ಕೋಟೆಯಿಂದ, ಪರಿಕ್ಷಿಪ್ತಾ–ಸುತ್ತುವರೆಯಲ್ಪಟ್ಟದ್ದಾಗಿಧೆ. ಹೇಮಕಕ್ಷ್ಯಾ–ಭಂಗಾರಿನ ಕೋಟೆಗಳುಳ್ಳ, ವೈಡೂರ್ಯಮಯತೋರಣಾ–ವೈಡೂರ್ಯಮಣಿವಿಕಾರವಾದ ಊರಬಾಗಿಲುಗಳುಳ್ಳ, ಹಸ್ತ್ಯಶ್ವರಥಸಂಬಾಧಾ–ಆನೆಗಳಿಂದಲೂ ರಥಗಳಿಂದಲೂ ಕುದುರೆಗಳಿಂದಲೂ ತುಂಬಿರುವ, ತೂರ್ಯನಾದವಿನಾದಿತಾ–ಭೇರೀವಾದ್ಯಗಳ ಧ್ವನಿಯಿಂ ಧ್ವನಿಗೊಳಿಸುತ್ತಿರುವ. ಸರ್ವಕಾಲಫಲೈಃ–ಸರ್ವಕಾಲದಲ್ಲೀ ಫಲಗಳುಳ್ಳ, ವೃಕ್ಷೈಃ–ಗಿಡಗಳಿಂದ, ಸಂಕುಲೋದ್ಯಾನಶೋಭಿತಾ–ಸಮ್ಮರ್ದವಾದ ಹುವ್ವಿನಬೋಳಗಳಿಂ ಹೊಳೆಯುತ್ತಿರುವ. ಪುರೀ–ಪಟ್ಟಣವು. ರಮ್ಯಾ–ಇಂಪಾಗಿಧೆ ॥೧೨॥ ಹೇಸೀತೇ–ಎಲೆ ಸೀತಾದೇವಿಯೇ. ಹೇರಾಜಪುತ್ರಿ–ಎಲೌ ಅರಸುಮಗಳೇ. ತ್ವಂ–ನೀನು, ತತ್ರ–ಆ ಪಟ್ಟಣದಲ್ಲಿ, ಮಯಾಸಹ–ನನ್ನೊಡನೆ, ಮನಸ್ವಿನೀ–ಮನಸ್ಸುಳ್ಳವಳಾಗಿ. ಮಾನುಷೀಣಾಂ–ಮನುಷ್ಯರ ಸಂಬಂಧವಾದ, ನಾರೀಣಾಂ–ಸ್ತ್ರೀಯರುಗಳನ್ನು, ನಸ್ಮರಿಷ್ಯಸಿ–ಸ್ಮರಿಸುವವಳಾಗಲಾರೆ, ಹೇವರವರ್ಣಿನಿ–ಎಲೈ ಒಳ್ಳೇ ಬಣ್ಣವುಳ್ಳವಳೇ. ದಿವ್ಯಾನ್–ದೇವತಾಸಂಬಂಧಿಗಳಾದ, ಮಾನುಷಾನ್–ಮನುಷ್ಯಸಂಬಂಧಿಗಳಾದ, ಭೋಗಾನ್–ಸುಖಗಳನ್ನು, ಭುಂಜಾನಾ–ಅನುಭವಿಸುತ್ತಿರುವವಳಾಗಿ, ಗತಾಯುಷಃ–ಗತವಾದ ಆಯುಸ್ಸುಳ್ಳ, ಮಾನುಷಸ್ಯ–ಮನುಷ್ಯನಾದ ರಾಮಸ್ಯ–ಶ್ರೀರಾಮನನ್ನು. ನಸ್ಮರಿಷ್ಯಸಿ–ಸ್ಮರಿಸದಿರುವಿ ॥೧೪॥ ದಶರಥೇನರಾಜ್ಞಾ–ದಶರಥರಾಯನಿಂದ, ಪ್ರಿಯಂ–ಇಷ್ಟನಾದ, ಪುತ್ರಂ–ಕುವರನನ್ನು

---

ಯಾವ ಸ್ಥಲದಲ್ಲಿ ನಿಲ್ಲುವೆನೋ, ಆಯಾ ಪ್ರದೇಶಂಗಳಲ್ಲಿ ವಾಯುವು ಭೀತನಾಗಿ ಬೀಸುವದಿಲ್ಲ; ಇದಲ್ಲದೆ ಸೂರ್ಯನು ತಣ್ಣಗಿರುವ ಕಿರಣಂಗಳುಳ್ಳವನಾಗುವನು; ಇಷ್ಟುಮಾತ್ರವಲ್ಲದೆ, ನಾನು ಯೆತ್ತ ಕಡೆಯಲ್ಲಿಹೋದರೂ, ಗಿಡಗಳು ನದಿಗಳೂ ಸಹ ನಿಶ್ಚಂಚಲವಾಗಿ ನಿಂತಿರುವವು ।೯। ಅಮರಾವತೀ ಪುರದಂತೆ ಸರ್ವ ಸಮೃದ್ಧವಾದ ನನ್ನ ರಾಜಧಾನಿಯು ಸಮುದ್ರತೀರದಲ್ಲಿರುವದು, ಅದರ ನಾಮಧೇಯವು ಲಂಕೆಯೆಂದು ಪ್ರಸಿದ್ಧವಾಗಿರುವದು, ಆ ಪ್ರಧಾನ ಪಟ್ಟಣವು ಶುಭ್ರವಾಗಿರುವ ಪ್ರಾಕಾರದಿಂದಲೂ, ವೈಡೂರ್ಯಮಣಿಗಳ ವಿಕಾರವಾದ ತೋರಣಂಗಳಿಂದಲೂ ಚತುರಂಗ ಸೇನೆಗಳಿಂದಲೂ, ಫಲಸಮೃದ್ಧವಾದ ವೃಕ್ಷಂಗಳಿಂದಲೂ, ತೋಪುಗಳಿಂದಲೂ, ಉದ್ಯಾನವನಂಗಳಿಂದಲೂ, ಪುಷ್ಪಂಗಳಂ ಬಿಡುವ ತೋಟಗಳಿಂದಲೂ, ಸಹ ಯುಕ್ತವಾಗಿರುವದು. ಎಲೈ ರಾಜಪುತ್ರಿಯೇ! ಆ ಪುರವರದಲ್ಲಿ ನನ್ನ ಸಂಗಡಇರುವವಳಾಗಿದ್ದರೆ ಮಾನುಷ ಭೋಗಂಗಳಂ ಸ್ಮರಿಸದಿರುವವಳಾಗುವೆ, ಎಲೌ ಉತ್ತಮಾಂಗನೆಯೇ! ನೀನಲ್ಲಿ ಮನುಷ್ಯಭೋಗಂಗಳನ್ನೇ ಅನುಭವಿಸುತಲಿರು, ಆಗ ಅಲ್ಪಾಯುಸ್ಸುಳ್ಳ ಶ್ರೀರಾಮನನ್ನು ಸ್ಮರಿಸುವದಿಲ್ಲ; ನಿನ್ನ ಪತಿಯಾದ ಈತನು ಅಲ್ಪವೀರ್ಯನಾದಕಾರಣ ದಶರಥನಿಂದ ಹೊರಡಿಸಲ್ಪಟ್ಟನಲ್ಲವೆ? ಎಲೌ ವಿಸ್ತಾರವಾದ ಕಣ್ಣುಗಳುಳ್ಳವಳೇ! ರಾಜ್ಯಭ್ರಷ್ಟನಾದ ಕಾರಣ ಮಹಾ ದೀನನಾದ ಅವನಿಂದ ಯೇನುಮಾಡುವಿ, [ವಿಶೇಷಾಭಿಪ್ರಾಯವೇನಂದರೆ,—ಎಲೌ ದೇವಿಯೇ! ನೀನು ನನ್ನಿಂದ ಸಮರ್ಪಿಸಲ್ಪಟ್ಟ ಮನುಷ್ಯಸಂಬಂಧವಾದ ದಿವ್ಯವಾದ ಭೋಗಂಗಳನ್ನು ಏಕಕಾಲದಲ್ಲಿಯೇ ಅನುಭವಿಸುವವಳಾಗಿ, ಮನುಷ್ಯಸ್ತ್ರೀಯರುಗಳಂ ಸ್ಮರಿಸುವದಿಲ್ಲ, ನಿನ್ನ ಪತಿಯಾದ ಶ್ರೀರಾಮನಿಗೆ ಆಯುಸ್ಸು ಹನ್ನೊಂದುಸಾವಿರ ವರುಷಗಳು ಗೊತ್ತಾಗಿರುವವು, ಇಂಥಾ ರಾಮಾವತಾರ

ಸ್ಥಾಪಯಿತ್ವಾಪ್ರಿಯಂಪುತ್ರಂರಾಜ್ಞಾದಶರಥೇನಯಃ । ಮಂದವೀರ್ಯಸ್ತತೋಜ್ಯೇಷ್ಠಸ್ಸುತಃಪ್ರಸ್ಥಾಪಿತೋಽರಣ್ಯಂ ॥೧೫॥
ತೇನಕಿಂಭ್ರಷ್ಟರಾಜ್ಯೇನರಾಮೇಣಗತಚೇತಸಾ । ಕರಿಷ್ಯಸಿವಿಶಾಲಾಕ್ಷಿತಾಪಸೇನತಪಸ್ವಿನಾ ॥೧೬॥ ಸರ್ವರಾಕ್ಷಸಭರ್ತಾ
ರಂಕಾಮಾತ್ಸ್ವಯಮಿಹಾಗತಂ । ನಮನ್ಮಥಶರಾವಿಷ್ಟಂಪ್ರತ್ಯಾಖ್ಯಾತುಂತ್ವಮರ್ಹಸಿ ॥೧೭॥ ಚರಣೇನಾಭಿಹತ್ಯೈವಪು
ರೂರವಸಮುರ್ವಶೀ ॥೧೮॥ ಅಂಗುಳ್ಯಾನಸಮೋರಾಮೋಮಮಯುದ್ಧೇಸಮಾನುಷಃ । ತವಭಾಗ್ಯೇನಸಂಪ್ರಾಪ್ತಂಭಜ

---

ಸ್ಥಾಪಯಿತ್ವಾ-ಪಟ್ಟಾಭಿಷೇಕಮಾಡಿ, ತತಃ-ಆ ರಾಜ್ಯದದೆಸೆಯಿಂದ. ಜ್ಯೇಷ್ಠಃ-ಹಿರಿಯನಾದ. ಮಂದವೀರ್ಯಃ-ಸಾಮರ್ಥ್ಯಹೀನನಾದ. ಅಯಂ-ಈ ಶ್ರೀರಾಮನು ಪ್ರಸ್ಥಾಪಿತಃ-ಹೊರಡಿಸಲ್ಪಟ್ಟವನು ॥೧೫॥ ಹೇವಿಶಾಲಾಕ್ಷಿ-ಎಲೌ ವಿಸ್ತಾರವಾದ ನೇತ್ರಗಳುಳ್ಳವಳೇ. ಭ್ರಷ್ಟರಾಜ್ಯೇನ-ರಾಜ್ಯಭ್ರಷ್ಟನಾದ. ಗತಚೇತಸಾ-ಹೋದಂಥಾ ಮನಸ್ಸುಳ್ಳ, ತಾಪಸೇನ-ಋಷಿಯಾದ. ತಪಸ್ವಿನಾ-ದೀನನಾದ ತೇನರಾಮೇಣ-ಆ ಶ್ರೀರಾಮನಿಂದ. ಕಿಂಕರಿಷ್ಯಸಿ-ಏನು ಮಾಡುವಿ, (ವಸ್ತುತಸ್ತು-ತತ್ರತ್ವಮಿತ್ಯಾದಿ ನಾಲ್ಕು ಶ್ಲೋಕಗಳಿಗೆ ವಾರ್ಥವಿಶೇಷವೇನೆಂದರೆ. ತತ್ರ-ಆ ಲಂಕಾಪಟ್ಟಣದಲ್ಲಿ. ವಸತೀ-ಇರುತ್ತಿರುವ, ತ್ವಂ-ನೀನು, ಮಯಾ-ಭೃತ್ಯನಾದ ನನ್ನಿಂದ ಸಮರ್ಪಿಸಲ್ಪಟ್ಟ. ಮಾನುಷಾ-ಮನುಷ್ಯಸಂಬಂಧವಾದ. ದಿವ್ಯಾಶ್ಚ-ದೇವತಾಸಂಬಂಧವಾದ ಭೋಗಾಶ್ಚ-ಭೋಗಗಳನ್ನು, ಏಕದೈವ-ಒಂದೇಕಾಲದಲ್ಲೇ, ಭುಂಜಾನಸತೀ-ಅನುಭವಿಸುತ್ತಿರುವಳಾಗಿ, ಮಾನುಷೀಣಾಂ-ಮನುಷ್ಯ ಸ್ತ್ರೀರುಗಳನ್ನು. ನಸ್ಮರಿಷ್ಯಸಿ-ಸ್ಮರಿಸಲಾರೆ, ಕಿಂಚ-ಇಷ್ಟುಮಾತ್ರವೇ ಅಲ್ಲ, ತವ-ನಿನ್ನ ಗಂಡನಾದ. ಧನಾಂದಸ್ಯ-ಮನುಷ್ಯಾವತಾರವನ್ನೆತ್ತಿದ. ಗತಾಯುಷಃ-ಪ್ರಾಪ್ತವಾದ ಏಕಾದಶಸಹಸ್ರಪರಿಮಿತವಾದ ವತ್ಸರಗಳು ಆಯುಸ್ಸುಳ್ಳ, ರಾಮಸ್ಯ-ಶ್ರೀಮನ್ನಾರಾಯಣಮೂರ್ತಿಯ ಸಂಬಂಧಿಗಳಾದ ನಃ-ನಮ್ಮುಗಳನ್ನು ಸ್ಮರಿಷ್ಯಸಿ-ಸ್ಮರಿಸುವಿ, ಯಃ-ಯಾವ ಪುರುಷನು. ಮಂದವೀರ್ಯಃ-ಸ್ವಲ್ಪವಾದ ಸಾಮರ್ಥ್ಯವುಳ್ಳವನೋ, ತಂಪುತ್ರಂ-ಅಂಥಾ ಮಗನನ್ನು. ಸ್ಥಾಪಯಿತ್ವಾ-ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿರಿಸಿ, ತೇನೈವ-ಅಂಥಾ ಅಂತರ್ಯಾಮಿಯಿಂದಲೇ ಪ್ರೇರಿತನಾದ, ರಾಜ್ಞಾ-ದಶರಥರಾಯನಿಂದ, ಜ್ಯೇಷ್ಠಃ-ಶ್ರೇಷ್ಠನಾದ ಪುತ್ರಃ-ಮಗನು ರಕ್ಕಸರಸಂಹಾರಕ್ಕಾಗಿ ವನವಂಕುರಿತು, ಪ್ರಸ್ಥಾಪಿತಃ-ಕಳುಹಿಸಲ್ಪಟ್ಟನು. ಭ್ರಷ್ಟರಾಜ್ಯೇನ-ಹೋಗಲಾಡಿಸಲ್ಪಟ್ಟ ಶತ್ರುಗಳ ರಾಜ್ಯವುಳ್ಳ, ತಾಪಸೇನ-ಋಷಿಗಳಿಗೆಲ್ಲಾ ಪ್ರಭುವಾದ, ತಪಸ್ವಿನಾ-ಸ್ವಯಂತಪಸ್ವಿಯಾದ. ಶ್ರೀರಾಮೇಣಸಹ-ಶ್ರೀರಾಮನೊಡಗೂಡಿ ಕರಿಷ್ಯಸಿಕಿಂ-ಅಸ್ಮದೀಯವಿಜ್ಞಾಪನೆಯನ್ನು ಮಾಡುವಿಯೋ ಏನು) ॥೧೬॥ ತ್ವಂ-ನೀನು, ಸರ್ವರಾಕ್ಷಸಭರ್ತಾರಂ-ಸಮಸ್ತರಾದ ರಕ್ಕಸರಿಗೂ ಅಧಿಪತಿಯಾದ, ಕಾಮಾತ್-ಕೋರಿಕೆಯ ದೆಸೆಯಿಂದ ಸ್ವಯಂ-ತನ್ನಷ್ಟಕ್ಕೆ ತಾನೇ, ಇಹ-ಇಲ್ಲಿ, ಆಗತಂ-ಬಂದಿರುವ, ಮನ್ಮಥಶರಾವಿಷ್ಟಂ-ಮನ್ಮಥಬಾಣದಿಂ ವ್ಯಾಪ್ತನಾದ ನನ್ನನ್ನು. ಪ್ರತ್ಯಾಖ್ಯಾತುಂ-ನಿರಾಕರಿಸುವುದಕ್ಕಾಗಿ. ನಾರ್ಹಸಿ-ಯೋಗ್ಯಳಾಗಬೇಡ. (ಇದಕ್ಕೆ ವಾಸ್ತವಿಕಾರ್ಥವೇನೆಂದರೆ-ಸಮಸ್ತ ರಕ್ಕಸರಿಗೂ ಅಧಿಪತಿಯಾದ. ಕಾಮಾತ್-ನಿನಗೆ ಭೃತ್ಯನಾಗುವೆನೆಂಬ ಕೋರಿಕೆಯ ದೆಸೆಯಿಂದ ಸ್ವಯಂ-ತನ್ನಷ್ಟಕ್ಕೆ ತಾನೇ. ಆಗತಂ-ಬಂದಿರುವ ನನ್ನುದ್ದೇಶಿಸಿ. ಮನ್ಮಥಶರಾವಿಷ್ಟಂಪ್ರತಿ-ಕಾಮಬಾಣದಿಂ ಹೊಡೆಯಲ್ಪಟ್ಟ ಜನವನ್ನೆಂತೆ, ಪ್ರತ್ಯಾಖ್ಯಾತುಂ-ಹೇಳುವದಕ್ಕೆ. ನಾರ್ಹಸಿ-ಯೋಗ್ಯಳಾಗಬೇಡ)॥ ಹೇಭೀರು-ಎಲೆ ಭಯಶೀಲಳೇ. ಮಾಂ-ನನ್ನನ್ನು, ಪ್ರತ್ಯಾಖ್ಯಾತುಂ-ತಿರಸ್ಕರಿಸಿ. ಚರಣೇನ-ಪಾದದಿಂದ. ಪುರೂರವಸಂ-ಪುರೂರವನೆಂಬ ನನ್ನನ್ನು, ಅಭಿಹತ್ಯ-ಒದ್ದು, ಉರ್ವಶೀವ-ಊರ್ವಶಿಯಂತೆ, ಪರಿತಾಪಂ-ಸಂತಾಪವನ್ನು, ಗಮಿಷ್ಯಸಿ-ಹೊಂದುವಿ. (ಸರ್ವರಾಕ್ಷಸಭರ್ತಾರಮಿತ್ಯತ್ರ)-ರಕ್ಷರಾಕ್ಷಸಭರ್ತಾರಮಿತಿ ಪಾಠಾಂತರಂ-ಆ ಪಾಠದಲ್ಲಿ. ರಾಕ್ಷಸಭರ್ತಾರಂ-ರಕ್ಕಸರಿಗೆ ಪತಿಯಾದ ನನ್ನನ್ನು, ರಕ್ಷ-ಸಂರಕ್ಷಿಸೆಂಬ ತಾತ್ಪರ್ಯವು. ಮಾಂ-ಅಕಾಮುಕನಾದ ನನ್ನನ್ನು, ಪ್ರತ್ಯಾಖ್ಯಾಯ-ತಿರಸ್ಕರಿಸಿ, ತ್ವಂ-ಮಾತೃಭೂತಳಾದ ನೀನು, ಪಶ್ಚಾತ್ತಾಪಂ-ಪರಿತಾಪವನ್ನು, ಗಮಿಷ್ಯಸಿ-ಹೊಂದುವಿ) ॥೧೮॥ ಹೇವರವರ್ಣಿನಿ-

---

ಪಂ ತಾಳಿದ ಶ್ರೀಮನ್ನಾರಾಯಣನ ಸಂಬಂಧಿಗಳಾದ ನಮ್ಮುಗಳಂ ಸ್ಮರಿಸುತಲಿರುವೆ, ಯಾವ ಪುರುಷನು ಸ್ವಲ್ಪವಾದ ಪರಾಕ್ರಮವುಳ್ಳವನೋ, ಅಂಥಾ ಪುತ್ರನಾದ ಭರತನಿಗೆ ಪಟ್ಟಣದಲ್ಲಿ ಯೌವರಾಜ್ಯ ಪಟ್ಟಾಭಿಷೇಕವಂ ಮಾಡಿ, ಅಂತರ್ಯಾಮಿಯಾದ ಭಗವಂತನಿಂದ ಪ್ರೇರಿಸಲ್ಪಟ್ಟವನಾಗಿ ದಶರಥಮಹಾರಾಯನು, ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ರಾಕ್ಷಸಸಂಹಾರಾರ್ಥವಾಗಿ ಕಳುಹಿಸಿದನು; ಶತ್ರುರಾಜ್ಯಂಗಳನ್ನೆಲ್ಲ ಅಪಹರಿಸುತಲಿರುವ ಸ್ವಯಮೇವ ತಾಪಸನಾದ ಶ್ರೀರಾಮನ ಸಂಗಡ ನಮ್ಮವಿಜ್ಞಾಪನೆಯಂ ಪ್ರಸ್ತಾಪವ ಗೈಯ್ಯುವಿಯೋ ಯೇನು? ನೀನು ಪ್ರಸ್ತಾಪವಂ ಮಾಡುವದಿಲ್ಲವೆಂದು ಭಾವವು] ॥೧೬॥ ಎಲೌ ಉತ್ತಮಾಂಗನೆಯೇ! ಸಮಸ್ತರಾದ ರಾಕ್ಷಸರಿಗೆಲ್ಲ ಪತಿಯಾದವನಾದರೂ ಸ್ವಯಮೇವ ಬಂದಿರುವ ಮತ್ತು ಮನ್ಮಥಬಾಣಂಗಳಿಂದ ನೊಂದ ನನ್ನನ್ನು ನಿರಾಕರಣೆಯಂ ಗೈಯ್ಯಲರ್ಹಳಾಗಬೇಡ, [ವಿಶೇಷಾಭಿಪ್ರಾಯವೇನಂದರೆ.—ಸರ್ವರಾಕ್ಷಸರಿಗೂ ಅಧಿಪತಿಯಾದರೂ, ನಿನಗೆ ಭೃತ್ಯನಾಗಬೇಕೆಂದು ಇಷ್ಟದಿಂದ ಬಂದಿರುವ ನನ್ನನ್ನು ಕಾಮಾತುರರಾದ ಜನರನ್ನು ತಿಳಿಯುವಂತೆ ತಿಳಿದುಕೊಳ್ಳಬೇಡ] ॥೧೭॥ ಎಲೌ ಭಯಶೀಲಳೇ! ಪೂರ್ವದಲ್ಲಿ ಊರ್ವಶಿಯು ಇಂದ್ರನನ್ನು ಪಾದದಿಂದ ಧಿಕ್ಕರಿಸಿ ಸಂತಾಪವನ್ನೈದಿದಂತೆ ನೀನು ನನ್ನನ್ನು ತಿರಸ್ಕಾರವಂ ಗೈದು ಸಂಕಟವನ್ನೈದುವವಳಾಗುವಿ [ವಿಶೇಷಾಭಿಪ್ರಾಯವೇನಂದರೆ,—ಮಾತೃಪ್ರಾಯಳಾದ ನೀನು ಕಾಮುಕನಲ್ಲದೆ ಬಾಲಕನಾದ ನನ್ನನ್ನು ತಿರಸ್ಕಾರವಂ ಗೈದು ಬಳಿಕ ತಪಿಸುವವಳಾಗುವೆ] ॥೧೮॥

ಸ್ತ್ವವರವರ್ಣಿನಿ ॥೧೯॥ ಏವಮುಕ್ತಾತುವೈದೇಹೀಕ್ರುದ್ಧಾಸಂರಕ್ತಲೋಚನಾ । ಅಬ್ರವೀತ್ಪರುಷಂವಾಕ್ಯಂರಹಿತೇರಾಕ್ಷ
ಸಾಧಿಪಂ ॥೨೦॥ ಕಥಂವೈಶ್ರವಣಂದೇವಂಸರ್ವಭೂತನಮಸ್ಕೃತಂ । ಭ್ರಾತರಂವ್ಯಪದಿಶ್ಯತ್ವಮಶುಭಂಕರ್ತುಮಿಚ್ಛ
ಸಿ ॥೨೧॥ ಅವಶ್ಯಂವಿನಶಿಷ್ಯಂತಿಸರ್ವೇರಾವಣರಾಕ್ಷಸಾಃ । ಯೇಷಾಂತ್ವಂಕರ್ಕಶೋರಾಜಾದುರ್ಬುದ್ಧಿರಜಿತೇಂದ್ರಿಯಃ ॥೨೨॥
ಅಪಹೃತ್ಯಶಚೀಂಭಾರ್ಯಾಂಶಕ್ಯಮಿಂದ್ರಸ್ಯಜೀವಿತುಂ । ನಚರಾಮಸ್ಯಭಾರ್ಯಾಂಮಾಮಪನೀಯಾಸ್ತಿಜೀವಿತಂ ॥೨೩॥

ಶ್ರೇಷ್ಠವಾದವರ್ಣವುಳ್ಳವಳೇ. ಯುದ್ಧೇ-ಕಾಳಗದಲ್ಲಿ ಮಾನುಷಃ-ಮನುಷ್ಯನಾದ ಸರಾಮಃ-ಆ ಶ್ರೀರಾಮನು, ಮಮ-ನನಗೆ, ಅಂಗುಳ್ಯಾ-ಬೆರಳಿನಿಂದ, ನಸಮಃ-ಸಮಾನನಲ್ಲ. ತವ-ನಿನ್ನ ಭಾಗ್ಯೇನ-ಭಾಗ್ಯದಿಂದ, ಸಂಪ್ರಾಪ್ತಂ-ಬಂದ ನನ್ನನ್ನು. ಭಜಸ್ವ-ಹೊಂದು (ತಾತ್ಪರ್ಯಸ್ತು-ತಾತ್ಪರ್ಯವಾದರೆ, ಯಸ್ಯ-ಯಾವ ಶ್ರೀರಾಮನಿಗೆ. ಯುದ್ಧೇ-ಕಾಳಗದಲ್ಲಿ, ಅಂಗುಳ್ಯಾ-ಬೆರಳಿಗೂಕೂಡ. ಸಮಃ-ಸಮಾನನಾದ ಪುರುಷನು ನ-ಇಲ್ಲ, ಸರಾಮಃ-ಅಂಥಾಶ್ರೀರಾಮನು. ಮಾನುಷಃ-ಮನುಷ್ಯನಾಗಿ ಹುಟ್ಟಿರುವನೆ. ಮಮ-ನನ್ನ ಭಾಗ್ಯದಿಂದ. ಸಂಪ್ರಾಪ್ತಂ-ಬಂದಿರುವ. ತವ-ನಿನ್ನ. ಪತಿಂ-ಗಂಡನನ್ನು, ಭಜಸ್ವ-ಹೊಂದು, ) ॥೧೯॥ ಏವಂ-ಈರೀತಿಯಾಗಿ, ಉಕ್ತಾ-ಹೇಳಲ್ಪಟ್ಟ, ವೈದೇಹೀತು-ಸೀತಾದೇವಿಯಾದರೆ ಕ್ರುದ್ಧಾ-ಕೋಪಿಸಿದ್ದವಳಾಗಿ, ಸಂರಕ್ತಲೋಚನಾ-ಕೆಂಗಣ್ಣುಗಳುಳ್ಳವಳಾಗಿ, ರಹಿತೇ-ಜನಶೂನ್ಯವಾದಾಶ್ರಮದಲ್ಲಿ, ರಾಕ್ಷಸಾಧಿಪಂ-ರಕ್ಕಸಾಧಿಪತಿಯಾದ ರಾವಣನ ಕುರಿತು, ಪರುಷಂ-ಕ್ರೂರವಾದ, ವಾಕ್ಯಂ-ಮಾತನ್ನು ಅಬ್ರವೀತ್-ನುಡಿದನು ॥೨೦॥ ಸರ್ವಭೂತನಮಸ್ಕೃತಂ-ಸಮಸ್ತಪ್ರಾಣಿಗಳಿಂದಲೂ ನಮಸ್ಕರಿಸಲ್ಪಟ್ಟ, ವೈಶ್ರವಣಂದೇವಂ-ಕುಬೇರನನ್ನು ಭ್ರಾತರಂ-ಅಣ್ಣನನ್ನಾಗಿ. ವ್ಯಪದಿಶ್ಯ-ವ್ಯವಹರಿಸಿ, ತ್ವಂ-ನೀನು. ಅಶುಭಂ-ಅಮಂಗಳವಾದ ಕೃತ್ಯವನ್ನು ಕರ್ತುಂ ಮಾಡಲೋಸುಗ, ಇಚ್ಛಸಿ-ಅಪೇಕ್ಷಿಸುತ್ತೀಯೆ ॥೨೧॥ ಹೇರಾವಣ-ಎಲೈರಾವಣನೇ. ದುರ್ಬುದ್ಧಿಃ-ಕೆಟ್ಟಬುದ್ಧಿಯುಳ್ಳ, ; ಅಜಿತೇಂದ್ರಿಯಃ-ಜಿತೇಂದ್ರಿಯನಲ್ಲದಿರುವ. ಕರ್ಕಶಃ-ಕ್ರೂರನಾದ ತ್ವಂ-ನೀನು, ಯೇಷಾಂ-ಯಾವರಾಕ್ಷಸರಿಗೆ, ರಾಜಾ-ಅರಸೊ, ಸರ್ವೇ-ಸಮಸ್ತರಾದ. ತೇರಾಕ್ಷಸಾಃ-ಆ ರಾಕ್ಷಸರು. ಅವಶ್ಯಂ-ನಿಶ್ಚಯವಾಗಿ. ವಿನಶಿಷ್ಯಂತಿ-ನಶಿಸಿಹೋಗುವರು ॥೨೨॥ ಇಂದ್ರಸ್ಯ-ದೇವೇಂದ್ರನ. ಭಾರ್ಯಾಂ-ಹೆಂಡತಿಯಾದ, ಶಚೀಂ-ಶಚೀದೇವಿಯನ್ನು, ಅಪಹೃತ್ಯ-ಅಪಹರಿಸಿ. ಜೀವಿತುಂ-ಬದುಕುವದಕ್ಕೆ, ಶಕ್ಯಂ-ಸಾಧ್ಯವು. ರಾಮಸ್ಯ-ಶ್ರೀರಾಮನ ಭಾರ್ಯಾಂ-ಹೆಂಡತಿಯಾದ. ಮಾಂ-ನನ್ನನ್ನು. ಅಪನೀಯ-ಸೆಳೆದುಕೊಂಡುಹೋಗಿ ಜೀವಿತಂಚ-ಬಾಳುವೂ. ನಾಸ್ತಿ-ಇಲ್ಲ ॥೨೩॥ ವಜ್ರಧರಸ್ಯಹಸ್ತಾತ್-ವಜ್ರಾಯುಧವುಳ್ಳವನಾದ ದೇವೇಂದ್ರನ ಹಸ್ತದ ದೆಸೆಯಿಂದ. ಅಪ್ರತಿರೂಪರೂಪಾಂ-ಸಮಾನವಿಲ್ಲದಿರುವ ಸೌಂದರ್ಯವುಳ್ಳ. ಶಚೀಂ-ಶಚೀದೇವಿಯನ್ನು ಪ್ರಧೃಷ್ಯ-ತಿರಸ್ಕರಿಸಿ. ಚಿರಂ-ಬಹುಕಾಲವು. ಜೀವತಿ-ಬದುಕುವನು ॥೨೪॥ ಹೇರಾಕ್ಷಸ-ಎಲೈರಕ್ಕಸನೇ. ಮಾದೃಶೀಂ-ನನ್ನಂಥಾವಳನ್ನು. ದೂಷಯಿತ್ವಾ-ದೋಷಯುಕ್ತಳನ್ನಾಗಿಮಾಡಿ. ಪೀತಾಮೃತಸ್ಯಾಪಿ-ಪಾನಮಾಡಲ್ಪಟ್ಟ ಅಮೃತವುಳ್ಳವನಾದರೂ, ತವ-ನಿನಗೆ. ಮೋಕ್ಷಃ-ಮೃತ್ಯುವಿನಿಂದ ಬಿಡುಗಡೆ, ನಾಸ್ತಿ-ಇಲ್ಲ,

ಎಲೌ ಉತ್ತಮವಾದ ವರ್ಣವುಳ್ಳವಳೇ! ಮನುಷ್ಯಮಾತ್ರನಾದ ಶ್ರೀರಾಮನು ನನ್ನ ನಖಾಗ್ರಕ್ಕೆ ಈಡಾದವನಲ್ಲ; ನಿನ್ನ ಭಾಗ್ಯಾತಿಶಯದಿಂದ ಸ್ವಯಮೇವಬಂದಿರುವನನ್ನನ್ನು ಹೊಂದುವವಳಾಗು; [ತತ್ತ್ವಾಭಿಪ್ರಾಯವೇನೆಂದರೆ,— ರಣರಂಗದಲ್ಲಿ ಶ್ರೀರಾಮನ ನಖಾಗ್ರಕ್ಕೆ ಸಮಾನನಾದ ಪುರುಷನು ಲೋಕದಲ್ಲಿ ಯಾರೂ ಇಲ್ಲ, ಅಂಥಾ ಮಹಾನುಭಾವನಾದ ಶ್ರೀರಾಮನು ಮನುಷ್ಯನಾಗಿ ಸಂಭವಿಸಿದವನಾದನು, ನನ್ನ ಭಾಗ್ಯಾತಿಶಯದಿಂದ ಭೂಲೋಕದಲ್ಲಿ ಸಂಪ್ರಾಪ್ತನಾಗಿರುವ ನಿನ್ನ ಪತಿಯನ್ನು ಹೊಂದುವವಳಾಗೆಂದು ಭಾವವು] ॥೧೯॥ ಈ ರೀತಿಯಲ್ಲಿ ಹೇಳಲ್ಪಟ್ಟವಳಾಗಿ, ಆ ಸೀತಾದೇವಿಯು, ಬಹು ಕೋಪವನ್ನೈದಿದವಳಾಗಿ, ಕೆಂಗಣ್ಣುಗಳುಳ್ಳವಳಾಗಿಯೂ ಸಹ ಇರುವವಳಾಗಿ ವಿಜನವಾದ ಆ ಆಶ್ರಮದಲ್ಲಿ, ರಾಕ್ಷಸಾಧಿಪತಿಯಾದ ರಾವಣನಂ ಕುರಿತು ನುಡಿದಳೆಂತೆನೆ,— ॥೨೦॥
ಎಲೈ ರಾಕ್ಷಸನೆ! ಸಮಸ್ತವಾದ ಜೀವರಾಶಿಗಳಿಂದ ನಮಸ್ಕರಿಸಲ್ಪಡುತಿರುವ ಕುಬೇರನು ನನಗೆ ಅಣ್ಣನಾಗಬೇಕೆಂದು ನುಡಿದು ನೀನು ಅಕಾರ್ಯವಂ ಗೈಯ್ಯಲಿಚ್ಛಿಸುತ್ತಲಿದ್ದಿ ಇದು ನಿನಗೆ ಯುಕ್ತವಲ್ಲ; ॥೨೧॥ ಎಲೈ ರಾವಣನೆ! ದುರ್ಬುದ್ಧಿಯುಳ್ಳವನಾಗಿಯೂ, ಜಿತೇಂದ್ರಿಯನಲ್ಲದೆಯೂ, ಕ್ರೂರನಾಗಿಯೂ, ಇರುವ ನೀನು ಯಾವರಾಕ್ಷಸರಿಗೆ ಒಡೆಯನಾಗಿರುವಿಯೋ, ಅಂಥಾ ರಾಕ್ಷಸರೆಲ್ಲರು ಅಗತ್ಯವಾಗಿ ನಾಶವನ್ನೈದುವರು ॥೨೨॥ ಯಾಕಂದರೆ;—ಲೋಕದಲ್ಲಿ ದೇವೇಂದ್ರನ ಸತಿಯಾದ ಶಚೀದೇವಿಯನ್ನು ಅಪಹರಿಸಿ ಜೀವಿಸಿದರೂ ಜೀವಿಸಬಹುದು, ರಾಮಪತ್ನಿಯಾದ ನನ್ನನ್ನು ಅಪಹರಿಸಿ ಯೆಂಥವನಾದರೂ ಬದುಕಲಾಗದು. ಒಂದುವೇಳೆ ಶಚಿಯನ್ನು ಅಪಹಾರವು ಗೈದವನಾದರೂ ಜೀವಿಸುವನು, ನನ್ನನ್ನು ಅಪಹರಿಸಿದವನಾದರೇ ಯೆಂದಿಗೂ ಜೀವಿಸಲಾರನು; ॥೨೩॥ ಎಲೈ ರಾಕ್ಷಸನೆ! ನೀನು ನನ್ನಂಥಾ ಮಹಾ ಪತಿವ್ರತೆಯನ್ನು ದೋಷಯುಕ್ತಳನ್ನಾಗಿ ಮಾಡಿದರೆ, ಅಮೃತಪಾನವಂ ಮಾಡಿದವನಾಗಿದ್ದರೂ ಮೃತ್ಯುವು ತಪ್ಪುವದಿಲ್ಲ; [ತತ್ತ್ವಾಭಿಪ್ರಾಯವೇನೆಂದರೆ;—ಮಲಿನವಾದ ಚಿತ್ತವುಳ್ಳ ನಿನಗೆ ಜ್ಞಾನೈಕ ಸಾಧಕವಾದ

ಜೀವೇಚ್ಚಿರಂವಜ್ರಧರಸ್ಯಹಸ್ತಾತ್ಶಚೀಂಪ್ರಧೃಷ್ಯಾಪ್ರತಿರೂಪರೂಪಾಂ। ನಮಾದೃಶೀಂರಾಕ್ಷಸದೂಷಯಿತ್ವಾಪೀತಾಮೃತಸ್ಯಾಪಿತವಾಸ್ತಿಮೋಕ್ಷಃ॥೨೪॥

—*** ಇತಿಶ್ರೀಮದಾರ್ಣ್ಯಕಾಂಡೇ-ಅಷ್ಟಚತ್ವಾರಿಂಶಸ್ಸರ್ಗಃ ***—

ಸೀತಾಯಾವಚನಂಶ್ರುತ್ವಾದಶಗ್ರೀವಃಪ್ರತಾಪವಾನ್। ಹಸ್ತೇಹಸ್ತಂಸಮಾಹೃತ್ಯಚಕಾರಸುಮಹದ್ವಪುಃ ॥೧॥
ಸಮೈಥಿಲೀಂಪುನರ್ವಾಕ್ಯಂಬಭಾಷೇಚತತೋಭೃಶಂ।। ನೋನ್ಮತ್ತಯಾಶ್ರುತೌಮನ್ಯೇಮಮವೀರ್ಯಪರಾಕ್ರಮೌ ॥೨॥
ಉದ್ವಹೇಯಂಭುಜಾಭ್ಯಾಂತುಮೇದಿನೀಮಂಬರೇಸ್ಥಿತಃ। ಆಪಿಬೇಯಂಸಮುದ್ರಂಹಚನ್ಯಾಂಮೃತ್ಯುಂರಣೇಸ್ಥಿತಃ ॥೩॥
ಅರ್ಕಂರುಂಧ್ಯಾಂಶರೈಸ್ತೀಕ್ಷ್ಣೈರ್ವಿಭಿಂದ್ಯಾಂಹಿಮಹೀತಲಂ। ಕಾಮರೂಪಿಣಮುನ್ಮತ್ತೇಪಶ್ಯಮಾಂಕಾಮದಂಪತಿಂ ॥
ಏವಮುಕ್ತವತಸ್ತಸ್ಯಸೂರ್ಯಕಲ್ಪಶಿಖಿಪ್ರಭೇ। ಕ್ರುದ್ಧಸ್ಯಹರಿಪರ್ಯಂತೇರಕ್ತೇನೇತ್ರೇಬಭೂವತುಃ॥೫॥ ಸದ್ಯಸ್ಸೌಮ್ಯಂಪರಿತ್ಯಜ್ಯಭಿಕ್ಷುರೂಪಂಚಸಂಮತಂ ।। ಸ್ವಂರೂಪಂಕಾಲರೂಪಾಭಂಭೇಜೇವೈಶ್ರವಣಾನುಜಃ ॥೬॥ ಸಂರಕ್ತನಯನ

(ವಾಸ್ತವಿಕಾರ್ಥವಾದರೆ_ತವ-ಮಲಿನಾಂತಃಕರಣವುಳ್ಳ ನಿನಗೆ, ಮೋಕ್ಷಃ-ಜ್ಞಾನೈಕಸಾಧಕವಾದ ಮೋಕ್ಷವು, ನಾಸ್ತಿ-ಇಲ್ಲವೇಯಿಲ್ಲ) ॥೨೪॥

—** ಇತಿಶ್ರೀಮದಾರಣ್ಯಕಾಂಡೇಅಷ್ಟಚತ್ವಾರಿಂಶಸ್ಸರ್ಗಃ **—

ಸೀತಾಯಾಃ-ಸೀತಾದೇವಿಯ. ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಪ್ರತಾಪವಾನ್-ಪರಾಕ್ರಮಶಾಲಿಯಾದ. ದಶಗ್ರೀವಃ-ದಶಕಂಠನಾದಾರಾವಣನು. ಹಸ್ತೇ-ಕೈಯ್ಯಲ್ಲಿ, ಹಸ್ತಂ-ದಕ್ಷಿಣಹಸ್ತವನ್ನು, ಸಮಾಹತ್ಯ-ಹೊಡೆದು ಸುಮಹತ್-ದೊಡ್ಡದಾದ, ವಪುಃ-ಶರೀರವನ್ನು, ಚಕಾರ_ಮಾಡಿದನು ॥೧॥ ಸಃ-ಆ ರಾವಣನು, ತತಃ-ಬಳಿಕ, ಭೃಶಂ_ಬಹಳವಾಗಿ, ಮೈಥಿಲೀಂ-ಸೀತಾದೇವಿಯನ್ನು ಕುರಿತು, ವಾಕ್ಯಂ-ಮಾತನ್ನು, ಬಭಾಷೇ-ನುಡಿದನು, ಉನ್ಮತ್ತಯಾ-ಉನ್ಮಾದಾವಸ್ಥೆಯನ್ನು ಹೊಂದಿರುವ, ತ್ವಯಾ-ನಿನ್ನಿಂದ. ಮಮ-ನನ್ನ, ವೀರ್ಯಪರಾಕ್ರಮೌ-ಸಾಮರ್ಥ್ಯ ಪರಾಕ್ರಮಗಳೆರಡೂ, ನಶ್ರುತೌ-ಕೇಳಲ್ಪಡಲಿಲ್ಲವೆಂದು. ಮನ್ಯೇ-ತಿಳಿದಿದ್ದೇನೆ ॥೨॥ ಅಂಬರೇ-ಅಂತರಿಕ್ಷದಲ್ಲಿ. ಸ್ಥಿತಃ-ನಿಂತವನಾಗಿ, ಭುಜಾಭ್ಯಾಂ-ಬಾಹುಗಳಿಂದ, ಮೇದಿನೀಂ-ನೆಲವನ್ನು, ಉದ್ವಹೇಯಂ-ಹೊರುವೆನು, ರಣೇ_ಕಾಳಗದಲ್ಲಿ, ಸ್ಥಿತಃ-ನಿಂತವನಾಗಿ. ಸಮುದ್ರಂ-ಕಡಲನ್ನು. ಅಪಿಬೇಯಂ-ಪಾನಮಾಡುವೆನು, ಮೃತ್ಯುಂ-ಯಮಧರ್ಮರಾಯನನ್ನು, ಹನ್ಯಾಂ-ಸಂಹರಿಸುವೆನು, ತೀಕ್ಷ್ಣೈಃ-ಕ್ರೂರಗಳಾದ, ಶರೈಃ-ಬಾಣಗಳಿಂದ, ಅರ್ಕಂ_ಸೂರ್ಯನನ್ನು, ರುಂಧ್ಯಾಂ-ತಡೆಮಾಡುವೆನು, ಮಹೀತಲಂ-ಭೂಪ್ರದೇಶವನ್ನು. ವಿಭಿಂದ್ಯಾಂ-ಭೇದಿಸುವೆನು, ಹೇಉನ್ಮತ್ತೇ-ಎಲೈ ಹುಚ್ಚಳೇ, ಕಾಮರೂಪಿಣಂ-ಕಾಮರೂಪಿಯಾದ, ಮಾಂ-ನನ್ನನ್ನು. ಕಾಮದಂ-ಸಮಸ್ತ ಕೋರಿಕೆಗಳನ್ನು ಕೊಡುತ್ತಿರುವ, ಪತಿಂ-ಪತಿಯನ್ನಾಗಿ, ಪಶ್ಯ-ಕಾಣು ॥೪॥ ಏವಂ-ಈಪರಿಯಾಗಿ, ಉಕ್ತವತಃ-ಹೇಳುತ್ತಿರುವ, ಕ್ರುದ್ಧಸ್ಯ-ಕೋಪಿಷ್ಠನಾದ. ತಸ್ಯ-ಆ ರಾವಣನ, ಸೂರ್ಯಕಲ್ಪೇ-ಸೂರ್ಯರಿಗೆ ಸಮಾನವಾದ, ಶಿಖಿಪ್ರಭೇ-ಅಗ್ನಿಯ ಉಷ್ಣೆಯಂತೆ ಉಷ್ಣವುಳ್ಳ, ರಕ್ತೇ-ಕೆಂಪಾದ, ನೇತ್ರೇ-ಕಣ್ಣುಗಳು, ಹರಿಪರ್ಯಂತೇ-ಪಿಂಗಳವರ್ಣವಾಗಿ ಕೊನೆಗಳುಳ್ಳವುಗಳು, ಬಭೂವತುಃ-ಆದವು ॥೫॥ ವೈಶ್ರವಣಾನುಜಃ-ಕುಬೇರನ ತಮ್ಮನಾದ ರಾವಣನು, ಸದ್ಯಃ-ಆಗಲೇ, ಸೌಮ್ಯಂ-ಪ್ರಸನ್ನವಾದ, ಸಮ್ಮತಂ_ಯಿಷ್ಟವಾದ, ಭಿಕ್ಷುರೂಪಂ-ಸನ್ಯಾಸಿರೂಪವನ್ನು, ಪರಿತ್ಯಜ್ಯ-ಬಿಟ್ಟು, ಕಾಲರೂಪಾಭಂ-ಸ್ವಕೀಯವಾದ ರಕ್ಕಸರೂಪವನ್ನು, ಭೇಜೇ-ಹೊಂದಿದನು ॥೬॥ ಸಂರಕ್ತನಯನಃ -ಕೆಂಗಣ್ಣುಗಳುಳ್ಳ

ಮೋಕ್ಷವು ಯಿಲ್ಲವೇ ಯಿಲ್ಲವೆಂದು ಭಾವವು.] ॥೨೪॥ —* ಆರಣ್ಯಕಾಂಡದಲ್ಲಿನ ೪೮ ನೇಸರ್ಗವು ಮುಗಿದುದು. *—

ಈ ರೀತಿಯಲ್ಲಿ ಅತಿಕಠಿಣವಾಗಿ ಸೀತಾದೇವಿಯು ನುಡಿದವಾಕ್ಯವಂ ಕೇಳಿ ಮಹಾ ಪರಾಕ್ರಮಿಯಾದ ದಶಕಂಠನು ಹಸ್ತಂಗಳಿಂದ ಚಪ್ಪಾಳೆಗಳಂಗೈದು ಮಹತ್ತರವಾದ ತನ್ನ ಸ್ವಸ್ವರೂಪವನ್ನೈದಿದಬಳಿಕ ಸೀತಾದೇವಿಯಂ ಕುರಿತು ಬಹು ಮಾತಾಡುವನ ದೆಂತೆನೆ;— ಎಲಾ ಮಿಥಿಲ ರಾಜಕನ್ನಿಕೆಯೆ! ಉನ್ಮತ್ತಾವಸ್ಥೆಯನ್ನೈದಿರುವ ನಿನ್ನಿಂದ ನನ್ನ ಭುಜಪರಾಕ್ರಮವು ಕೇಳಲ್ಪಡಲಿಲ್ಲವೆಂದೆಣಿಸುತ್ತೇನೆ; ಈಗಲಾದರು ಹೇಳುವೆನು ಕೇಳುವವಳಾಗು, ನಾನು ಭೂಸ್ಪರ್ಶ ಯಿಲ್ಲದೆ ಗಗನದಲ್ಲಿಯೇ ನಿಂತು, ಭೂಮಿಯನ್ನೆಲ್ಲ ಭುಜಂಗಳಿಂದ ಹೊರುವೆನು; ರಣರಂಗದಲ್ಲಿ ನಿಂತವನಾಗಿ ಅಗಾಧವಾದ ಸಮುದ್ರವನ್ನಾದರೂ ಪಾನವಂ ಮಾಡುವೆನು, ಯಮಧರ್ಮರಾಜನನ್ನಾದರೂ ಕೊಲ್ಲುವೆನು; ಸಿಡಿಗೋಲುಗಳಿಂದ ಸೂರ್ಯನನ್ನೂ ಕೂಡಾ ತಡೆಯುವೆನು, ಅಥವಾ ಭೂಮಂಡಲವನ್ನೆಲ್ಲ ಭೇದಿಸುವೆನು, ಯಾವ ಯಾವ ರೂಪವಂ ತಾಳಬೇಕೆಂದರೆ ಆಯಾ ರೂಪಂಗಳನ್ನೆಲ್ಲ ವಹಿಸಬಲ್ಲೆನು ನೀನು ಯಾವದನ್ನೂ ಅಪೇಕ್ಷಿಸಿದರೂ ತಂದುಕೊಡಬಲ್ಲೆನು, ಇಂಥಾ ನನ್ನನ್ನು ಪತಿಯನ್ನಾಗಿ ವಹಿಸುವವಳಾಗೆಂದು ಹೇಳಿದಾಗ, ಸೂರ್ಯಕಿರಣಂಗಳಂತೆ ಬಹು ಉಷ್ಣೆಯುಳ್ಳ ಅವನ ಕಣ್ಣುಗಳು ಕೆಂಪುಬಣ್ಣವುಳ್ಳವುಗಳಾದವು ॥೫॥ ಈ ರೀತಿಯಲ್ಲಿ ಆ ರಾವಣಾಸುರನು ತಕ್ಷಣದಲ್ಲಿಯೇ ಸೌಮ್ಯವಾದ ಆ ತಾಪಸವೇಷವಂ ಬಿಟ್ಟು ಯಮನಶರೀರಕ್ಕೆ ಸಮಾನವಾದ ತನ್ನ ರೂಪವನ್ನೈದಿದನದೆಂತೆನೆ,— ॥೬॥ ಆ ದಶಕಂಠನು ಕೆಂಗಣ್ಣುಗಳುಳ್ಳವನಾಗಿಯೂ, ಐಶ್ವರ್ಯವಂತನಾಗಿಯೂ

ಶ್ರೀಮಾಂಸ್ತಪ್ತಕಾಂಚನಕುಂಡಲಃ। ಕ್ರೋಧೇನಮಹತಾವಿಷ್ಟೋನೀಲಜೀಮೂತಸನ್ನಿಭಃ। ದಶಾಸ್ಯಃ ಕಾರ್ಮುಕೀಬಾಣೀಬಭೂವಕ್ಷಣದಾಚರಃ ॥೭॥ ಸಪರಿವ್ರಾಜಕಚ್ಛದ್ಮಮಹಾಕಾಯೋವಿಹಾಯತತ್। ಪ್ರತಿಪದ್ಯಸ್ವಕಂರೂಪಂರಾವಣೋರಾಕ್ಷಸಾಧಿಪಃ। ಸಂರಕ್ತನಯನಃಕ್ರೋಧಾಜ್ಜೀಮೂತನಿಚಯಪ್ರಭಃ ॥ ರಕ್ತಾಂಬರಧರಸ್ತಸ್ಥೌಸ್ತ್ರೀರತ್ನಂಪ್ರೇಕ್ಷ್ಯಮೈಥಿಲೀಂ ॥೯॥ ಸತಾಮಸಿತಕೇಶಾಂತಾಂಭಾಸ್ಕರಸ್ಯಪ್ರಭಾಮಿವ। ವಸನಾಭರಣೋಪೇತಾಂಮೈಥಿಲೀಂರಾವಣೋಬ್ರವೀತ್ ॥೧೦॥ ತ್ರಿಷುಲೋಕೇಷುವಿಖ್ಯಾತಂಯದಿಭರ್ತಾರಮಿಚ್ಛಸಿ ॥ ಮಾಮಾಶ್ರಯವರಾರೋಹೇತವಾಹಂಸದೃಶಃಪತಿಃ ॥೧೧॥ ಮಾಂಭಜಸ್ವಚಿರಾಯತ್ವಮಹಂಶ್ಲಾಘ್ಯಃಪ್ರಿಯಸ್ತವ। ನೈವಚಾಹಂಕ್ವಚಿದ್ಭದ್ರೇಕರಿಷ್ಯೇತವವಿಪ್ರಿಯಂ ॥೧೨॥ ತ್ಯಜ್ಯತಾಂಮಾನುಷೇಭಾವೋಮಯಿಭಾವಃಪ್ರಣೀಯತಾಂ। ರಾಜ್ಯಾಚ್ಚ್ಯುತಮಸಿದ್ಧಾರ್ಥಂರಾಮಂ

---

ಶ್ರೀಮಾನ್–ಐಶ್ವರ್ಯಸಂಪನ್ನನಾದ, ತಪ್ತಕಾಂಚನಕುಂಡಲಃ–ಕಾಸಲ್ಪಟ್ಟ ಭಂಗಾರದ ಕರ್ಣಾಭರಣಗಳುಳ್ಳ, ಮಹತಾ–ಬಹಳವಾದ, ಕ್ರೋಧೇನ–ಕೋಪದಿಂದ ಆವಿಷ್ಟಃ–ವ್ಯಾಪ್ತನಾದ. ನೀಲಜೀಮೂತಸನ್ನಿಭಃ–ಕಪ್ಪಾಗಿರುವ ಮೇಘಕ್ಕೆ ಸಮಾನನಾದ, ದಶಾಸ್ಯಃ–ಹತ್ತು ಮುಖಗಳುಳ್ಳ, ಕ್ಷಣದಾಚರಃ–ನಿಶಾಚರನಾದ ಆರಾವಣನು. ಕಾರ್ಮುಕೀ–ಧನುಸ್ಸುಳ್ಳವನಾಗಿ, ಬಾಣೀ–ಬಾಣಗಳನ್ನು ಧರಿಸಿದವನು, ಬಭೂವ–ಆದನು॥೭॥ ॥ ಪರಿವ್ರಾಜಕಚ್ಛದ್ಮಮಹಾಕಾಯಃ–ಸನ್ಯಾಸಿಎಂಬ ಕಪಟದಿಂ ಮಹಾಶರೀರವುಳ್ಳ, ರಾಕ್ಷಸಾಧಿಪಃ–ರಕ್ಕಸಾಧಿಪತಿಯಾದ, ರಾವಣಃ–ರಾವಣನು, ತತ್–ಆ ಸನ್ಯಾಸಿಯರೂಪವನ್ನು ವಿಹಾಯ–ಬಿಟ್ಟು, ಸ್ವಕಂ–ಸ್ವಕೀಯವಾದ. ರೂಪಂ–ರೂಪವನ್ನು, ಪ್ರತಿಪದ್ಯ–ಹೊಂದಿ, ಕ್ರೋಧಾತ್–ಕೋಪದದೆಸೆಯಿಂದ, ಸಂರಕ್ತನಯನಃ–ಕೆಂಪಾದ ನೇತ್ರಗಳುಳ್ಳವನಾಗಿ, ಜೀಮೂತನಿಚಯಪ್ರಭಃ–ಮೇಘಗಳ ತಂಡಗಳಿಗೆ ಸಮಾನವಾದ ಕಾಂತಿಯುಳ್ಳವನಾಗಿ, ರಕ್ತಾಂಬರಧರಃ–ಕೆಂಪಾದ ವಸ್ತ್ರವನ್ನುಟ್ಟವನಾಗಿ, ಸ್ತ್ರೀರತ್ನಂ–ಸ್ತ್ರೀಯರೊಳಗೆ ಶ್ರೇಷ್ಠಳಾದ, ಮೈಥಿಲೀಂ–ಸೀತಾದೇವಿಯನ್ನು, ಪ್ರೇಕ್ಷ್ಯ–ಕಂಡು. ತಸ್ಥೌ–ನಿಂತನು॥೯॥ ॥ ಸರಾವಣಃ–ಆ ರಾವಣನು, ಅಸಿತಕೇಶಾಂತಾಂ–ಕಪ್ಪಾಗಿರುವ ಕೂದಲುಗಳ ತುದಿಗಳುಳ್ಳ, ಭಾಸ್ಕರಸ್ಯ–ಸೂರ್ಯನ, ಪ್ರಭಾಮಿವಸ್ಥಿತಾಂ–ಕಾಂತಿಯಂತೆ ಕಾಂತಿಯುಳ್ಳ, ವಸನಾಭರಣೋಪೇತಾಂ–ವಸ್ತ್ರದಿಂದಲೂ ವಡಿವೆಗಳಿಂದಲೂ ಕೂಡಿಕೊಂಡಿರುವ, ಮೈಥಿಲೀಂ–ಸೀತಾದೇವಿಯನ್ನು ಕುರಿತು, ಅಬ್ರವೀತ್–ನುಡಿದನು॥೧೦॥ ॥ ತ್ರಿಷುಲೋಕೇಷು–ಮೂರು ಲೋಕಗಳಲ್ಲಿಯೂ, ವಿಖ್ಯಾತಂ–ಪ್ರಸಿದ್ಧನಾದ, ಭರ್ತಾರಂ–ಗಂಡನನ್ನು, ಇಚ್ಛಸಿಯದಿ–ಅಪೇಕ್ಷಿಸಿದವಳೇ ಆದರೆ ಹೇವರಾರೋಹೇ–ಎಲೌ ಶ್ರೇಷ್ಠಸ್ತ್ರೀಯೆನಾದವಳೇ, ಮಾಂ–ನನ್ನನ್ನು, ಆಶ್ರಯ–ಹೊಂದು. ಅಹಂ–ನಾನು, ತವ–ನಿನಗೆ. ಸದೃಶಃ–ಅನುರೂಪನಾದ ಪತಿಃ–ಗಂಡನು ॥೧೧॥ ॥ ತ್ವಂ–ನೀನು, ಚಿರಾಯ–ಬಹಳಕಾಲವು, ಮಾಂ–ನನ್ನನ್ನು, ಭಜಸ್ವ–ಹೊಂದು, ಹೇಭದ್ರೇ–ಎಲೈ ಶುಭಳೇ, ಅಹಂ–ನಾನು, ಕ್ವಚಿತ್–ಬಂದಾನೊಂದುಕಾಲದಲ್ಲಿಯೂ. ತವ–ನಿನಗೆ, ವಿಪ್ರಿಯಂ–ಇಷ್ಟವಿಲ್ಲದ ಕಾರ್ಯವನ್ನು, ನೈವಕರಿಷ್ಯೇ–ಮಾಡುವನಲ್ಲ ॥೧೨॥ ॥ ಮಾನುಷೇ–ಮನುಷ್ಯನಲ್ಲಿ, ಭಾವಃ–ಅಭಿಪ್ರಾಯವು. ತ್ಯಜ್ಯತಾಂ–ಬಿಡಲ್ಪಡಲಿ, ಮಯಿ–ನನ್ನಲ್ಲಿ, ಭಾವಃ–ಮನೋಭಾವವು. ಪ್ರಣೀಯತಾಂ–ಇರಿಸಲ್ಪಡಲಿ, ಹೇಮೂಢೇ–ಎಲೌ ಮೂಢಳೇ, ಹೇಪಂಡಿತಮಾನಿನಿ–ನಾನು ಪಂಡಿತಳೆಂದು ತಿಳಿದಿರುವಳೇ, ರಾಜ್ಯಾತ್–ರಾಜ್ಯದದೆಸೆಯಿಂದ. ಚ್ಯುತಂ–ಬಿಡಲ್ಪಟ್ಟ, ಅಸಿದ್ಧ

---

ಅಪರಂಜೀವಿಕಾರವಾದ ಕರ್ಣಕುಂಡಲಂಗಳುಳ್ಳವನಾಗಿಯೂ, ಬಹುಕೋಪಾಟೋಪವುಳ್ಳವನಾಗಿಯೂ, ಕಾಳಮೇಘದಂದದಿ ಬೆಳಗುವ ದೇಹಕಾಂತಿಯುಳ್ಳವನಾಗಿಯೂ, ದಶಮುಖಂಗಳಿರುವವನಾಗಿಯೂ, ಇಪ್ಪತ್ತು ಭುಜಂಗಳುಳ್ಳವನಾಗಿಯೂ, ಧನುರ್ಬಾಣಂಗಳಂ ಧರಿಸಿದವನಾಗಿಯೂ, ಕೆಂಪುವಸ್ತ್ರಗಳನ್ನುಟ್ಟವನಾಗಿಯೂ ಇರುವವನಾಗಿ, ಆ ಭಿಕ್ಷುರೂಪವಂ ಬಿಟ್ಟು ತನ್ನ ಸ್ವಸ್ವರೂಪದಿಂದ ಉತ್ತಮಾಂಗನೆಯಾದ ಸೀತಾದೇವಿಗೆದುರಾಗಿ ನಿಂತುಕೊಂಡು ಕಪ್ಪಾದ ಕೂದಲುಗಳುಳ್ಳ ಮತ್ತೂ ಸೂರ್ಯನ ಕಾಂತಿಯಂತೆ ಬಹು ಬೆಳಗುವ ದೇಹಕಾಂತಿಯುಳ್ಳ, ಸಮಸ್ತವಾದ ವಡಿವೆಗಳಿಂದಲೂ ಅಲಂಕೃತಳಾದ ಆಕೆಯಂ ಕುರಿತಿಂತೆಂದನು ॥೧೦॥ ಎಲೌ ಉತ್ತಮಾಂಗನೆಯೇ! ನೀನು ಮೂಜಗಗಳಲ್ಲಿಯೂ ಪ್ರಖ್ಯಾತನಾದ ಪತಿಯನ್ನಿಚ್ಛಿಸುವವಳಾದರೆ, ನನ್ನನ್ನು ವರಿಸುವವಳಾಗು, ನಾನು ನಿನಗೆ ಅನುರೂಪನಾದ ಪತಿಯು, ನೀನು ಬಹು ಕಾಲವು ನನ್ನನ್ನು ಹೊಂದುವವಳಾಗು, ನಾನೆಂದಿಗೂ ನಿನಗೆ ಇಷ್ಟವಿಲ್ಲದ ಕಾರ್ಯವಂ ಮಾಡತಕ್ಕವನಲ್ಲ; ಮನುಷ್ಯನಲ್ಲಿ ಅಭಿಪ್ರಾಯವಂ ಬಿಟ್ಟು ನನ್ನಲ್ಲಿ ಇರಿಸಲ್ಪಡಲಿ; ಎಲೌ ತಿಳುವಳಿಕೆಯಿಲ್ಲದವಳೇ! ನಾನೇಪಂಡಿತಳೆಂದು ತಿಳಿದು ಕೊಂಡಿರುವವಳೇ! ರಾಜ್ಯವಂ ನೀಗಿಕೊಂಡು ಪ್ರಯೋಜನವಿಲ್ಲದ ಮತ್ತು ಮಿತವಾದ ಆಯುಸ್ಸುಳ್ಳ ಆ ರಾಮನನ್ನು ಯಾವ ಗುಣಗಳಿಂದ ಅನುಸರಿಸಿಗೊಂಡಿದ್ದೀ; ದುರ್ಬುದ್ಧಿಯುಳ್ಳ ಯಾವ ಶ್ರೀರಾಮನು ಸ್ತ್ರೀನಿಮಿತ್ತವಾಗಿ ಸ್ನೇಹಿತರನ್ನೂ ರಾಜ್ಯವನ್ನೂ ಸಹಬಿಟ್ಟು ವ್ಯಾಘ್ರಾದಿಗಳಿಂದ ಯುಕ್ತವಾದ ಈ ವನದಲ್ಲಿರುವನೋ, ಅಂಥಾಶ್ರೀರಾಮನನ್ನು ಯಾವ ಗುಣಗಳಿಂದ ಆಶ್ರಯಿಸಿಗೊಂಡಿದ್ದೀ [ತತ್ವಾಭಿಪ್ರಾಯವೇನೆಂದರೆ,—ಎಲೌ ದೇವಿಯೇ! ಭೂಮಂಡಲಕ್ಕೆಲ್ಲ ಧಣಿಯಾದ ಮತ್ತು ರಾಕ್ಷಸಾಧಿಪತಿಯಾದ ನನ್ನನ್ನು

ಪರಿಮಿತಾಯುಷಂ। ಕೈರ್ಗುಣೈರನುರಕ್ತಾಸಿ ಮೂಢೇ ಪಂಡಿತಮಾನಿನಿ॥ ಯಃ ಸ್ತ್ರೀವಚನಮಾತ್ರೇಣ ರಾಜ್ಯಂ ವಿಹಾಯ ಸಸುಹೃಜ್ಜನಂ। ಅಸ್ಮಿನ್ ವ್ಯಾಳಾನುಚರಿತೇ ವನೇ ವಸತಿ ದುರ್ಮತಿಃ ॥ ಇತ್ಯುಕ್ತ್ವಾ ಮೈಥಿಲೀಂ ವಾಕ್ಯಂ ಪ್ರಿಯಾರ್ಹಾಂ ಪ್ರಿಯವಾದಿನೀಂ। ಅಭಿಗಮ್ಯ ಸುದುಷ್ಟಾತ್ಮಾ ರಾಕ್ಷಸಃ ಕಾಮಮೋಹಿತಃ। ಜಗ್ರಾಹ ರಾವಣಸ್ಸೀತಾಂ ಬುಧಃ ಖೇ ರೋಹಿಣೀಮಿವ॥ ೧೬-೧೮॥

ಪರಿಮಿತಾಯುಷಂ-ಪರಿಮಿತವಾದ ಆಯುಸ್ಸುಳ್ಳ, ರಾಮಂ-ಶ್ರೀರಾಮನನ್ನು, ಕೈರ್ಗುಣೈಃ-ಯಾವ ಗುಣಗಳಿಂದ, ಅನುರಕ್ತಾ-ಅನುಸರಿಸಿರುವವಳು, ಅಸಿ-ಆಗಿದ್ದೀ. ಮೂಢೇ-ಮೂಢಳೇ, ಯಃ-ಯಾವ ಶ್ರೀರಾಮನು, ಸ್ತ್ರೀವಚನಮಾತ್ರೇಣ-ಸ್ತ್ರೀಯಾದ ಕೈಕೇಯಿಯ ಮಾತಿನ ಮಾತ್ರದಿಂದ, ಸಸುಹೃಜ್ಜನಂ-ಸ್ನೇಹಿತಜನರಿಂದೊಡಗೂಡಿದ, ರಾಜ್ಯಂ-ರಾಜ್ಯವನ್ನು, ವಿಹಾಯ-ಬಿಟ್ಟು, ವ್ಯಾಳಾನುಚರಿತೇ-ಸರ್ಪವ್ಯಾಘ್ರಾದಿ ಘಾತುಕಮೃಗಗಳಿಂ ಸಂಚರಿಸಲ್ಪಟ್ಟ, ಅಸ್ಮಿನ್ ವನೇ-ಈ ವನದಲ್ಲಿ, ವಸತಿ-ಇರುತ್ತಾನೆಯೋ, ತಂ-ಆ ಶ್ರೀರಾಮನನ್ನು, ಕೈರ್ಗುಣೈಃ-ಯಾವ ಗುಣಗಳಿಂದ, ಅನುರಕ್ತಾ-ಅನುಸರಿಸಿರುವವಳು, ಅಸಿ-ಆಗಿದ್ದೀಯೆ. (ಶ್ರೀಮುಲೋಕೇಪಿ ವ್ಯಾಖ್ಯೆ-ನಾಲ್ಕು ಪರ ಶ್ಲೋಕಗಳಿಗೂ ನಾಸ್ತಿಕಾರ್ಥವೇನೆಂದರೆ, ಭರ್ತಾರಂ-ತನ್ನ ಧಣಿಗೆ ಸಂರಕ್ಷಣಕರ್ತನಾದಂಥಾ, ಪತಿಂ-ರಾಕ್ಷಸರಿಗೆ ಅಧಿಪತಿಯಾದ ನನ್ನನ್ನು, ಭೃತ್ಯತ್ವೇನ-ಅನುಗ್ರಹಿಸು ನಾನು ನಿನಗೆ, ಸದೃಶಃ-ಅನುರೂಪನಾದ ಭೃತ್ಯನಲ್ಲ, ಅಥಾಪಿ-ಅನುಗ್ರಹದಿಂ, ಮಾಂ-ನನ್ನನ್ನು, ಆಶ್ರಯ-ಭೃತ್ಯನೆಂದಂಗೀಕರಿಸು, ಚಿರಂ ಬಹುಕಾಲದಿಂದಲೂ, ತವ-ನಿನಗೆ, ಶ್ಲಾಘ್ಯಃ-ಇಷ್ಟನಾದ ಪ್ರಿಯಃ-ಪ್ರಿಯಭೃತ್ಯನಾದ ನಾನು, ತೇ-ನಿನಗೆ, ಕ್ವಚಿದಪಿ-ಎಂದಿಗೂ ಅನಿಷ್ಟವನ್ನು ಮಾಡಲಾರೆನು, ಮಾನುಷೇ-ಮನುಷ್ಯಮಾತ್ರದಲ್ಲಿ, ಭಾವಃ-ರಕ್ಷಣೀಯನೆಂಬ ಅಭಿಪ್ರಾಯವು, ತ್ಯಜ್ಯತಾಂ-ಬಿಡಲ್ಪಡಲಿ, ಮೂಢೇ-ಏನೂ ತಿಳಿಯದಿರುವ, ಪಂಡಿತಮಾನಿನಿ-ಪಂಡಿತಮನ್ಯಳಾದ, ಮಯಿ-ನನ್ನಲ್ಲಿ, ಭಾವಃ-ಇವನೂ ಸಂರಕ್ಷಣೀಯನೆಂಬ ಅಭಿಪ್ರಾಯವು, ಪ್ರಣೀಯತಾಂ-ಅನುಸಂಧಾನಮಾಡಲ್ಪಡಲಿ. ರಾಜ್ಯಾತ್-ತುಚ್ಛೀಕೃತವಾದ ರಾಜ್ಯಭೋಗವುಳ್ಳ, ಅಸಿದ್ಧಾರ್ಥಂ-ಅಕಾರವಾಚ್ಯನಾದ ವಿಷ್ಣುಸ್ವರೂಪನಾಗಿಯೂ, ಅವಾಪ್ತ-ಸಕಲಕಾಮನಾಗಿಯೂ ಇರುವ, ಪರಿಮಿತಾಯುಷಂ-ಬಿಡಲ್ಪಟ್ಟ ಸ್ವಲ್ಪಾಯುಸ್ಸುಳ್ಳ, ಅಥವಾ-ಅಪರಿಮಿತವಾದ ಆಯುಸ್ಸುಳ್ಳ, ಕೈರ್ಗುಣೈಃ-ಅನಿರ್ವಚನೀಯನಾದ ಅನಂತಕಲ್ಯಾಣಗುಣಗಳಿಂದ ಕೂಡಿದ ಆ ಶ್ರೀರಾಮನಲ್ಲಿ, ಅನುರಕ್ತಾ ಅಸಿ-ಅನುರಕ್ತಳಾಗಿದ್ದೀ, ದುರ್ಮತಿಃ-ದುಷ್ಟರಲ್ಲಿಯೂ ಅನುಗ್ರಾಹಕಬುದ್ಧಿಯುಳ್ಳ ಶ್ರೀರಾಮನು ಕೈಕೇಯೀದೇವಿಯ ಮಾತಿನದೆಸೆಯಿಂದ ರಾಜ್ಯವಂ ಬಿಟ್ಟು ವನದಲ್ಲಿರುವನೆಯೋ ಅಂಥಾ ಶ್ರೀರಾಮನಲ್ಲಿ ಅನುರಕ್ತಳಾದ ನೀನು ಸರ್ವೋತ್ತಮಳಾದ ಲಕ್ಷ್ಮಿಯು. ಮಾಂ-ನನ್ನನ್ನು, ಭೃತ್ಯತ್ವೇನ-ಭೃತ್ಯತ್ವದಿಂದ ಅಂಗೀಕಾರಮಾಡು ರಾಮನು ಮನುಷ್ಯನೆಂಬ ಭಾವವನ್ನು ಬಿಡು ಭಗವಂತನೆಂದು ತಿಳಿದುಕೊಳ್ಳೆಂದು ಹೇಳಿದನೆಂಬ ಭಾವವು) ॥೧೭॥ ಸುದುಷ್ಟಾತ್ಮಾ-ಬಹಳ ದುಷ್ಟಸ್ವಭಾವವುಳ್ಳ, ರಾಕ್ಷಸಃ-ರಕ್ಕಸನಾದ ರಾವಣಃ-ರಾವಣನು, ಕಾಮಮೋಹಿತಃ-ಕಾಮಗುಣದಿಂ ಭ್ರಾಂತನಾಗಿ, ಇತಿ-ಈಪರಿಯಾಗಿ, ವಾಕ್ಯಂ-ಮಾತನ್ನು, ಉಕ್ತ್ವಾ-ಹೇಳಿ, ಅಭಿಗಮ್ಯ-ಬಂದು, ಪ್ರಿಯಾರ್ಹಾಂ-ಇಷ್ಟವಾದ ಮಾತುಗಳಿಗೆ ಅರ್ಹಳಾದ, ಪ್ರಿಯವಾದಿನೀಂ-ಮೃದುವಾಗಿ ಮಾತನಾಡುತ್ತಿರುವ, ಮೈಥಿಲೀಂ-ಜನಕರಾಯನ ಪುತ್ರಿಯಾದ, ಸೀತಾಂ-ಸೀತಾದೇವಿಯನ್ನು, ಖೇ-ಅಂತರಿಕ್ಷದಲ್ಲಿ, ಬುಧಃ-ಬುಧನು, ರೋಹಿಣೀಮಿವ-ರೋಹಿಣೀದೇವಿಯನ್ನಂತೆ, ಜಗ್ರಾಹ-ಗ್ರಹಿಸಿದನು॥ ೧೮॥ ॥ ಸಃ-ಆ ರಾವಣನು, ವಾಮೇನ ಕರೇಣ-ಎಡಗೈಯಿಂದ, ಪದ್ಮಾಕ್ಷೀಂ-ಕಮಲಗಳಂತೆ ನೇತ್ರಗಳುಳ್ಳ, ಸೀತಾಂ-ಸೀತಾದೇವಿಯನ್ನು, ಮೂರ್ಧಜೈ

ಭೃತ್ಯಭಾವದಿಂದನುಗ್ರಹಿಸುವವಳಾಗು, ನಾನು ನಿನಗೆ ಸರಿಯಾದ ಭೃತ್ಯನಲ್ಲದಿದ್ದರೂ ನನ್ನನ್ನು ಭೃತ್ಯನೆಂದು ಅಂಗೀಕರಿಸುವವಳಾಗು, ಬಹು ಕಾಲದಿಂದ ಶ್ಲಾಘ್ಯನಾದ ಮತ್ತೂ ಇಷ್ಟಭೃತ್ಯನಾದ ನಾನು ನಿನಗೆಂದಿಗೂ ಇಷ್ಟವಿಲ್ಲದ ಕಾರ್ಯಗಳಂ ಮಾಡುವವನಲ್ಲ, ಮನುಷ್ಯಮಾತ್ರನಲ್ಲಿ ರಕ್ಷಕನೆಂಬಭಿಪ್ರಾಯವಂ ಬಿಟ್ಟು ಪಂಡಿತನೆಂದು ತಿಳಿದುಕೊಂಡಿರುವ ನನ್ನಲ್ಲಿ ರಕ್ಷಕಭಾವವನ್ನು ಇಡುವವಳಾಗು, ರಾಜ್ಯವಂ ತುಚ್ಛವನ್ನಾಗಿ ತಿಳಿದ ಮತ್ತು ಅಕಾರವಾಚ್ಯನಾದ ಶ್ರೀಮನ್ನಾರಾಯಣನ ಸ್ವರೂಪನಾದ ಸಫಲವಾದ ಸರ್ವೇಷ್ಟಾರ್ಥಂಗಳುಳ್ಳ, ಅಪಾರವಾದ ಆಯುಸ್ಸುಳ್ಳ, ಮತ್ತೂ ಅನಂತವಾದ ಕಲ್ಯಾಣಗುಣಂಗಳಿಂದ ಒಪ್ಪುವ ಶ್ರೀರಾಮನಲ್ಲಿ ಅನುರಕ್ತಳಾಗಿದ್ದೀ, ದುಷ್ಟರನ್ನೂ ಸಹ ಅನುಗ್ರಹಿಸುತಲಿರುವ ಯಾವ ಶ್ರೀರಾಮನು ಕೈಕೇಯೀದೇವಿಯ ವಚನದಿಂದ ರಾಜ್ಯವಂ ಬಿಟ್ಟು ವನದಲ್ಲಿ ವಾಸಂಗೈಯ್ಯುತಲಿರುವನೋ, ಅಂಥಾ ಶ್ರೀರಾಮನಲ್ಲಿ ಅನುರಾಗವುಳ್ಳ ನೀನು ಸಾಕ್ಷಾಲ್ಲಕ್ಷ್ಮೀದೇವಿಯೇ ಸರಿ; ನಾನು ಭೃತ್ಯತ್ವದಿಂದಿರುವೆನು, ಅಂಗೀಕರಿಸುವವಳಾಗು, ಶ್ರೀರಾಮನು ಸಾಧಾರಣವಾಗಿ ಮನುಷ್ಯನೆಂಬಭಿಪ್ರಾಯವಂ ಬಿಡುವವಳಾಗೆಂದು ಭಾವವು] ॥೧೬॥ ಬಹು ದುಷ್ಟಸ್ವಭಾವವುಳ್ಳ ಆ ರಾವಣನು ಕಾಮಮೋಹಿತನಾಗಿ ಈ ರೀತಿಯಲ್ಲಿ ಹೇಳಿ, ಬುಧನು ಗಗನದಲ್ಲಿ ರೋಹಿಣೀ ದೇವಿಯಂ ಹಿಡಿದಂತೆ ಹಿಡಿದು ಕೊಂಡನ ಹೇಗೆನೆ,—ಆ ದುಷ್ಟನಾದ ರಾವಣನು ಕಂಜಾಕ್ಷಿಯಾದ ಸೀತಾದೇವಿಯನ್ನು ಎಡಗೈಯಿಂದ ಕೇಶಂಗಳಲ್ಲಿ ಪಿಡಿದು, ಬಲಗೈಯ್ಯಿಂದ ಊರುಪ್ರದೇಶದಲ್ಲಿ ಹಿಡಿದುಕೊಂಡನು (ತತ್ವಾಭಿಪ್ರಾಯವೇನೆಂದರೆ,—ಇತರಸ್ತ್ರೀಯರಲ್ಲಿ ದುಡುಕುವವನಾದರೂ, ಆ ರಾವಣನು ಬುಧನು ತನ್ನ ತಾಯಿಯಾದ ರೋಹಿಣೀ ದೇವಿಯನ್ನು ಗ್ರಹಿಸಿದಂತೆ ಸೀತಾದೇವಿಯಂ ಪರಿಗ್ರಹಿಸಿದನು,

ವಾಮೇನ ಸೀತಾಂ ಪದ್ಮಾಕ್ಷೀಂ ಮೂರ್ಧಜೇಷು ಕರೇಣ ಸಃ ॥ ಊರ್ವೋಸ್ತು ದಕ್ಷಿಣೇನೈವ ಪರಿಜಗ್ರಾಹ ಪಾಣಿನಾ ।೧೭। ತಂ ದೃಷ್ಟ್ವಾ ಮೃತ್ಯುಸಂಕಾಶಂ ತೀಕ್ಷ್ಣದಂಷ್ಟ್ರಂ ಮಹಾಭುಜಂ ॥ ಪ್ರಾದ್ರವನ್ ಗಿರಿಸಂಕಾಶಂ ಭಯಾರ್ತಾ ವನದೇವತಾಃ ॥ ಸ ಚ ಮಾಯಾಮಯೋ ದಿವ್ಯಃ ಖರಯುಕ್ತಃ ಖರಸ್ವನಃ ॥ ಪ್ರತ್ಯದೃಶ್ಯತ ಹೇಮಾಂಗೋ ರಾವಣಸ್ಯ ಮಹಾರಥಃ ।೧೯। ತತಸ್ತಾಂ ಪರುಷೈರ್ವಾಕ್ಯೈರಭಿತರ್ಜ್ಯ ಮಹಾಸ್ವನಃ ॥ ಅಂಕೇನಾದಾಯ ವೈದೇಹೀಂ ರಥಮಾರೋಪಯತ್ತದಾ ।೨೦।

ಮೂರ್ಧಸು–ಕೂದಲುಗಳಲ್ಲಿ, ದಕ್ಷಿಣೇನ ಪಾಣಿನಾ–ಬಲಗೈಯಿಂದ, ಊರ್ವೋಸ್ತು–ತೊಡೆಗಳಲ್ಲಿಯೂ, ಪರಿಜಗ್ರಾಹ–ಹಿಡಿದುಕೊಂಡನು, (ವಾಸ್ತವಿಕಾರ್ಥವಾದರೆ–ಸಃ–ಆ ರಾವಣನು, ಸುದುಷ್ಟಾತ್ಮಾ–ಅನ್ಯತ್ರ ಕಾಮಮೋಹಿತನಾದರೂ, ಬುಧಃ–ಬುಧನು. ರೋಹಿಣೀಮಿವ–ರೋಹಿಣೀದೇವಿಯನ್ನಂತೆ ಎಂಬ ಉಪಮಾನದಿಂದ ರಾವಣನು ಮಾತೃಬುದ್ಧಿಯಿಂದ ಸೀತಾದೇವಿಯನ್ನು ಗ್ರಹಿಸಿದನೆಂದು ಭಾವವು, ಇದಲ್ಲದೆ ರಾಕ್ಷಸರು ಛಾಯಾಗ್ರಾಹಿಗಳಾದ್ದರಿಂದ ಸೀತಾದೇವಿಯ ಕೂದಲುಗಳ ಛಾಯೆಯಂ ಹಿಡಿದು ತೊಡೆಗಳ ಛಾಯೆಯಂ ಹಿಡಿದು ಛಾಯಾರೂಪಳಾದ ಸೀತಾದೇವಿಯನ್ನು ಕರೆದುಕೊಂಡು ಹೋದನೆಂದು ಸ್ಕಾಂದಾದಿ ಪುರಾಣದಲ್ಲಿ ಹೇಳುತ್ತದೆ ಆದ್ದರಿಂದ ಸಾಕ್ಷಾತ್ತಾಗಿ ಸ್ಪರ್ಶವಾಗಲಿಲ್ಲವೆಂದು ತೋರುತ್ತದೆ) ಪ್ರಿಯಭಾದಿನೀಮಿತ್ಯಸ್ಯ–ರಾವಣನಿಗಿಂತಲೂ ಭಿನ್ನರಾದ ಜನರಲ್ಲಿ ಸೀತಾದೇವಿಯು ಇಷ್ಟವಾಗಿ ಮಾತಾಡುವಳೆಂದು ಹೇಳಲ್ಪಟ್ಟಿತು. ಹ್ಯಾಗೆಂದರೆ–ವೇದವತಿಯೇ ಸೀತಾರೂಪವಾಗಿ ಅವತರಿಸಿ ಸ್ವಪ್ರತಿಜ್ಞಾ ನಿರ್ವಾಹಕ್ಕೋಸ್ಕರ ಶ್ರೀರಾಮನಿಂದ ರಾಕ್ಷಸವಧೆಯ ವಿಷಯದಲ್ಲಿ ಪ್ರತಿಜ್ಞೆ ಮಾಡಿಸಿದಳೂ ಎಂದು ತಾತ್ಪರ್ಯವು.) ಮೂರ್ಧಜೇಷುಕರೇಣ–ಎಂಬ ಪದಕ್ಕೆ, ಮೂರ್ಧಜ–ಶ್ರೇಷ್ಠಗಳಾದ, ಇಷು–ಬಾಣಗಳುಳ್ಳ, ಕರೇಣ–ಹಸ್ತದಿಂದಲೂ, ದಕ್ಷಿಣೇನ–ದಕ್ಷಿಣಹಸ್ತದಿಂದಲೂ. ಊರ್ವೋಃ–ಪಾದಗಳಲ್ಲಿ, ಪರಿಜಗ್ರಾಹ–ಗ್ರಹಿಸಿದನು ಎಂಬ ಅರ್ಥದಿಂದ ಸೀತಾದೇವಿಯ ಪಾದಗಳಂ ಹಿಡಿದು ಲಂಕಾಪುರವಂ ಪ್ರವೇಶಿಸಿ ನನಗೆ ಮುಕ್ತಿಯಂ ಕೊಡಬೇಕೆಂದು ಬೇಡಿದನೆಂದು ತಾತ್ಪರ್ಯವು) ||೧೭|| ಮೃತ್ಯುಸಂಕಾಶಂ–ಯಮನಿಗೆ ಸಮಾನನಾದ, ತೀಕ್ಷ್ಣದಂಷ್ಟ್ರಂ–ತೀಕ್ಷ್ಣವಾದ ಕೋರೆಹಲ್ಲುಗಳುಳ್ಳ, ಮಹಾಭುಜಂ–ದೊಡ್ಡ ಭುಜಗಳುಳ್ಳ, ಗಿರಿಸಂಕಾಶಂ–ಬೆಟ್ಟಕ್ಕೆ ಸಮಾನನಾದ, ತಂ–ಆ ರಾವಣನನ್ನು. ದೃಷ್ಟ್ವಾ–ಕಂಡು, ವನದೇವತಾಃ–ವನದೇವತೆಗಳು, ಭಯಾರ್ತಾಃ–ಭೀತಿಗೊಂಡವರಾಗಿ, ಪ್ರಾದ್ರವನ್–ಓಡಿಹೋದರು ||೧೮|| ರಾವಣಸ್ಯ–ರಾವಣನ ಸಂಬಂಧಿಯಾದ, ಮಾಯಾಮಯಃ–ಮಾಯಾಸ್ವರೂಪವಾದ. ದಿವ್ಯಃ–ಅಂತರಿಕ್ಷದಲ್ಲಿ ನಿಲ್ಲುವಶಕ್ತಿಯುಳ್ಳ, ಖರಯುಕ್ತಃ–ಕತ್ತೆಗಳಿಂ ಕೂಡಿಕೊಂಡಿರುವ. ಖರಸ್ವನಃ–ಕ್ರೂರವಾದ ಬಂಡಿಗಳ ಘೋಷೆಯುಳ್ಳ, ಹೇಮಾಂಗಃ–ಭಂಗಾರದವಿಕಾರವಾದ ರಥಾವಯವಗಳುಳ್ಳ, ಸಮಹಾರಥಃ–ಆ ದೊಡ್ಡರಥವೂ, ತತ್ರ ಪ್ರತ್ಯದೃಶ್ಯತ–ಅಲ್ಲಿ ಕಾಣಿಸಿತು.||೧೯|| ತತಃ–ಬಳಿಕ, ಮಹಾಸ್ವನಃ–ಮಹಾಕಂಠಧ್ವನಿಯುಳ್ಳ, ಸಃ–ಆ ರಾವಣನು, ತಾಂ–ಆ ಸೀತಾದೇವಿಯನ್ನು, ಪರುಷೈಃ–ಕ್ರೂರಗಳಾದ, ವಾಕ್ಯೈಃ–ಮಾತುಗಳಿಂದ ಅಭಿತರ್ಜ್ಯ–ಹೆದರಿಸಿದಂಥಾವನಾಗಿ, ತದಾ–ಆಕ್ಷಣದಲ್ಲಿ. ಅಂಕೇನ–ತೊಡೆಯಿಂದ, ವೈದೇಹೀಂ–ಸೀತಾದೇವಿಯನ್ನು ಆದಾಯ–ತೆಗೆದುಕೊಂಡು, ರಥಂ–ತೇರನ್ನು, ಆರೋಪಯತ್–ಏರಿಸಿದನು. (ವಾಸ್ತವಿಕಾರ್ಥವಾದರೆ–ಪರುಷೈಃ–ಕ್ರೂರಗಳಾದ, ವಾಕ್ಯೈಃ–ನನ್ನನ್ನು ನೀನು ಭೃತ್ಯನನ್ನಾಗಿ ಅಂಗೀಕರಿಸದಿದ್ದರೆ ನಾನು ಪ್ರಾಣಗಳನ್ನು ನಿನ್ನ ಮುಂದೆ ಬಿಡುವೆನೆಂಬ ವಾಕ್ಯಗಳಿಂದ, ಅಭಿತರ್ಜ್ಯ–ಹೆದರಿಸುತ್ತಿರುವವನಾಗಿ, ರಥಂ–ತೇರನ್ನು, ಆರೋಪಯತ್–ಹತ್ತಿಸಿದನು) ||೨೦|| ಯಶಸ್ವಿನೀ–ಕೀರ್ತಿವಂತಳಾದ, ಸಾಸೀತಾ–ಆ ಸೀತಾದೇವಿಯು, ರಾವಣೇನ–ರಾವಣನಿಂದ, ಗೃಹೀತಾ–

ಮತ್ತೂ ರಾಕ್ಷಸರು ಛಾಯಾಗ್ರಾಹಿಗಳಾದ ಕಾರಣ ಸೀತಾದೇವಿಯ ಕೇಶಂಗಳ ಛಾಯೆಯನ್ನೂ ತೊಡೆಗಳ ಛಾಯೆಯನ್ನೂ ಸಹ ಹಿಡಿದು, ಪ್ರತಿಬಿಂಬರೂಪಳಾದ ಸೀತಾದೇವಿಯಂ ಕರೆದುಕೊಂಡು ಪೋದನೆಂದು ಸ್ಕಾಂದಾದಿ ಪುರಾಣಗಳಲ್ಲಿ ನಿರೂಪಿಸಲ್ಪಟ್ಟಿರುವದರಿಂದ, ರಾವಣನು ಸಾಕ್ಷಾತ್ತಾಗಿ ಸೀತಾದೇವಿಯ ಸ್ಪರ್ಶಯಂ ಗೈಯ್ಯಲಿಲ್ಲವೆಂಬುದಾಗಿಯೂ, ಆ ಸೀತಾದೇವಿಯು ರಾವಣನಿಗಿಂತಲೂ ಇತರರಾದವರಲ್ಲಿ ಇಷ್ಟವಾಗಿ ಮಾತಾಡುವವಳೆಂಬುದಾಗಿಯೂ ತೋರುವದು, ಅದು ಹ್ಯಾಗೆಂದರೆ,—ವೇದವತೀ ದೇವಿಯು ಸೀತಾರೂಪವಾಗಿ ಅವತಾರವಂ ಗೈದು, ತನ್ನ ಪ್ರತಿಜ್ಞೆಯನ್ನು ನೆರವೇರಿಸುವದಕ್ಕಾಗಿ ಶ್ರೀರಾಮನ ಮುಖಾಂತರವಾಗಿ ರಾಕ್ಷಸವಧೆಯ ವಿಷಯದಲ್ಲಿ ಪ್ರತಿಜ್ಞೆಯಂ ಮಾಡಿಸಿದಳೆಂದು ಭಾವವು) ।೧೭। ಆ ಸಮಯದಲ್ಲಿ ವನದೇವತೆಗಳೆಲ್ಲರು ಮೃತ್ಯುಸದೃಶನಾದ, ತೀಕ್ಷ್ಣವಾದ ಕೋರೆದಾಡೆಗಳುಳ್ಳ, ಮಹಾ ಭುಜಗಳುಳ್ಳ ಮತ್ತೂ ಗಿರಿಸದೃಶನಾದ ಆ ರಾವಣನಂ ವೀಕ್ಷಿಸಿ ಹೆದರಿಕೊಂಡು ಓಡಿಹೋದರು ।೧೮। ಅನಂತರದಲ್ಲಿ ರಾವಣನ ಸಂಬಂಧವಾದ ಬಹು ಮಾಯಾವಿಕಾರವಾಗಿರುವ ಖರಯುಕ್ತವಾಗಿರುವ ಸುವರ್ಣವಿಕಾರವಾದ ಆ ಮಹಾರಥವು ಕಾಣಲ್ಪಟ್ಟದ್ದಾಗಲೂ, ಬಹು ಕಂಠಧ್ವನಿಯುಳ್ಳ ಆ ರಾವಣನು ಆ ಸೀತಾದೇವಿಯನ್ನು ಕ್ರೂರವಾದ ವಾಕ್ಯಗಳಿಂದ ಹೆದರಿಸಿ, ಆಕೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ರಥವನ್ನೇರಿದನು. (ತತ್ವಾಭಿಪ್ರಾಯವೇನೆಂದರೆ,—ಎಲೌ ದೇವಿಯೇ! ಕ್ರೂರವಾದ ಮಾತುಗಳಂ ನುಡಿದು ನನ್ನನ್ನು ನೀನು ಭೃತ್ಯನನ್ನಾಗಿ ಅಂಗೀಕಾರವಂ ಗೈಯ್ಯದಿದ್ದರೆ, ನಿನ್ನ ಮುಂದುಗಡೆಯಲ್ಲಿಯೇ ನಾನು ಪ್ರಾಣಂಗಳಂ ಬಿಡುವೆನೆಂದು ಸೀತಾದೇವಿಯಂ ಹೆದರಿಸಿ ತೇರನ್ನೇರಿದನೆಂದು ತಾತ್ಪರ್ಯವು) ।೨೦। ಆಗ ಮಹಾಯ

ಸಾಗೃಹೀತಾವಿಚುಕ್ರೋಶರಾವಣೇನಯಶಸ್ವಿನೀ॥ ರಾಮೇತಿಸೀತಾದುಃಖಾರ್ತಾರಾಮಂದೂರಗತಂವನೇ ॥೨೧॥ ತಾಮ
ಕಾಮಾಂಸಕಾಮಾರ್ತಃಪನ್ನಗೇಂದ್ರವಧೂಮಿವ । ವಿವೇಷ್ಟಮಾನಾಮಾದಾಯಉತ್ಪಪಾತಾಥರಾವಣಃ ॥೨೨॥ ತತಸ್ಸಾ
ರಾಕ್ಷಸೇಂದ್ರೇಣಹ್ರಿಯಮಾಣಾವಿಹಾಯಸಾ । ಭೃಶಂಚುಕ್ರೋಶಮತ್ತೇವಭ್ರಾಂತಚಿತ್ತಾಯಥಾತುರಾ ॥೨೩॥ ಹಾಲ
ಕ್ಷ್ಮಣಮಹಾಬಾಹೋಗುರುಚಿತ್ತಪ್ರಸಾದಕ । ಹ್ರಿಯಮಾಣಾಂನಜಾನೀಷೇರಕ್ಷಸಾಮಾಮಮರ್ಷಿಣಾ ॥೨೪॥ ಜೀ
ವಿತಂಸುಖಮರ್ಥಾಂಶ್ಚಧರ್ಮಹೇತೋಃಪರಿತ್ಯಜನ್ । ಹ್ರಿಯಮಾಣಾಮಧರ್ಮೇಣಮಾಂರಾಘವನಪಶ್ಯಸಿ ॥೨೫॥ ನನುನಾ
ಮವಿನೀತಾನಾಂವಿನೇತಾಸಿಪರಂತಪ ॥ ಕಥಮೇವಂವಿಧಂಪಾಪಂನತ್ವಂಶಾಸಿಹಿರಾವಣಂ ॥೨೬॥ ನನುಸದ್ಯೋವಿನೀತಸ್ಯ

---

ಅಪಹಾರಮಾಡಲ್ಪಟ್ಟವಳಾಗಿ, ವನೇ–ಅರಣ್ಯದಲ್ಲಿ, ಹೇರಾಮಇತಿ–ಎಲೈ ಶ್ರೀರಾಮನೇ ಎಂದು, ದೂರಗತಂ–ದೂರದೇಶವಂ ಹೊಂದಿರುವ, ರಾಮಂ–ಶ್ರೀರಾಮನನ್ನು, ಚುಕ್ರೋಶ–ಕೂಗಿದಳು ॥೨೧॥ ಅಥ–ಬಳಿಕ, ಕಾಮಾರ್ತಃ–ಕಾಮಗುಣದಿಂ ಬಾಧಿತನಾದ, ಸರಾವಣಃ–ಆ ರಾವಣನು, ಅಕಾಮಾಂ–ಕಾಮರಹಿತಳಾದ, ಪನ್ನಗೇಂದ್ರವಧೂಮಿವ–ಹೆಣ್ಣುಹಾವಿನಂತೆ, ವಿವೇಷ್ಟಮಾನಾಂ–ಹೊರಳಾಡುತ್ತಿರುವ, ತಾಂ–ಆ ಸೀತಾದೇವಿಯನ್ನು, ಆದಾಯ–ತೆಗೆದುಕೊಂಡು, ಉತ್ಪಪಾತ–ಹಾರಿದನು ॥೨೨॥ ತತಃ–ಬಳಿಕ, ರಾಕ್ಷಸೇಂದ್ರೇಣ–ರಾಕ್ಷಸಶ್ರೇಷ್ಠನಾದ ರಾವಣನಿಂದ, ವಿಹಾಯಸಾ–ಗಗನಮಾರ್ಗದಲ್ಲಿ, ಹ್ರಿಯಮಾಣಾ–ತೆಗೆದುಕೊಂಡು ಹೋಗಲ್ಪಡುತ್ತಿರುವ, ಸಾ–ಆ ಸೀತಾದೇವಿಯು, ಮತ್ತೇವ–ಪ್ರಜ್ಞೆ ತಪ್ಪಿದವಳಂತೆ, ಭ್ರಾಂತಚಿತ್ತಾಯಥಾ–ಉನ್ಮತ್ತಾವಸ್ಥೆಯಿಂದ ಕೂಡಿಕೊಂಡಿರುವ ಮನಸ್ಸುಳ್ಳವಳಂತೆ, ಆತುರಾ–ದೀನಳಾಗಿ, ವಿಚುಕ್ರೋಶ–ಕೂಗಿದಳು, (ಈ ಎರಡು ಶ್ಲೋಕಕ್ಕೂ ವಾಸ್ತವಿಕಾರ್ಥವೇನೆಂದರೆ–ಸೀತಾದೇವಿಯಿಂದ ದೀನವಾದ ಮಾತುಗಳು ಲೋಕರೀತಿಯನ್ನನುಸರಿಸಿ ಹೇಳಲ್ಪಟ್ಟವೆಂದು ಸರ್ವತ್ರ ತಿಳಿದುಕೊಳ್ಳತಕ್ಕದ್ದು ॥೨೩॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಹಾ–ಕಷ್ಟವು. ಹೇಮಹಾಬಾಹೋ–ಎಲೈ ಮಹಾಭುಜಪರಾಕ್ರಮಶಾಲಿಯೇ, ಹೇಗುರುಚಿತ್ತಪ್ರಸಾದಕ–ಎಲೈ ಜ್ಯೇಷ್ಠನಾದ ರಾಮನ ಮನೋರಂಜಕನೇ ಅಮರ್ಷಿಣಾ–ಕೋಪಾವಿಷ್ಟನಾದ, ರಕ್ಷಸಾ–ರಾವಣನಿಂದ. ಹ್ರಿಯಮಾಣಾಂ–ಅಪಹರಿಸಿಕೊಂಡು ಹೋಗಲ್ಪಡುತ್ತಿರುವ, ಮಾಂ–ನನ್ನನ್ನು, ನಜಾನೀಷೇ–ಅರಿಯದೇಹೋದೆ ॥೨೪॥ ಹೇರಾಘವ–ಎಲೈ ಶ್ರೀರಾಮನೇ. ಜೀವಿತಂ–ಪ್ರಾಣವನ್ನು, ಸುಖಂ–ಸುಖವನ್ನು. ಅರ್ಥಾಂಶ್ಚ–ಪ್ರಯೋಜನಗಳನ್ನು, ಧರ್ಮಹೇತೋಃ–ಧರ್ಮಕಾರ್ಯನಿಮಿತ್ತವಾಗಿ, ಪರಿತ್ಯಜನ್–ಬಿಟ್ಟವನಾಗಿ, ಅಧರ್ಮೇಣ–ಧರ್ಮಶೂನ್ಯನಾದ ರಾಕ್ಷಸನಿಂದ ಹ್ರಿಯಮಾಣಾಂ–ತೆಗೆದುಕೊಂಡು ಹೋಗಲ್ಪಡುತ್ತಿರುವ, ಮಾಂ–ನನ್ನನ್ನು. ನಪಶ್ಯಸಿ–ಕಾಣದೇಹೋದೆ ॥೨೫॥ ಹೇಪರಂತಪ–ಎಲೈ ಶತ್ರುಸಂಹಾರಕನೇ. ತ್ವಂ–ನೀನು, ಅವಿನೀತಾನಾಂ–ದುರ್ಜನರಿಗೆಲ್ಲಾ. ವಿನೇತಾಸಿನನುನಾಮ–ಶಿಕ್ಷಕನಾಗಿದ್ದೀಯಷ್ಟೆ. ಏವಂವಿಧಂ–ಇಂಥಾ ಪಾಪಿಷ್ಠನಾದ, ಪಾಪಂ–ಪಾಪಕೃತ್ಯವಂ ಮಾಡುವ. ರಾವಣಂ–ರಾವಣನನ್ನು, ಕಥಂನಶಾಸಿಹಿ–ಯಾತಕ್ಕೆ ಶಿಕ್ಷಿಸದೇಹೋದೆ ॥೨೬॥ ಹೇರಾಮ–ಎಲೈ ಶ್ರೀರಾಮನೇ, ಅವಿನೀತಸ್ಯ–ದುಷ್ಟನಾದ ಪುರುಷನಿಗೆ, ಸದ್ಯಃ–ಆಗಲೇ, ಕರ್ಮಣಃ–ದುರ್ವ್ಯಾಪಾರಕ್ಕೆ, ಫಲಂ–ಫಲವು, ದೃಶ್ಯತೇ–ಕಾಣಲ್ಪಡುತ್ತದೋ ಏನು ಕಾಣಲ್ಪಡುವದಿಲ್ಲ. ಕಿಂತು–ಮತ್ತೇನೆಂದರೆ, ಕಾಲೋಪಿ–ಕಾಲವೂಕೂಡ, ಅತ್ರ–ಈ ಫಲವಿಷಯದಲ್ಲಿ, ಸಸ್ಯಾನಾಮಿವ–ಪೈರುಗಳಿಗಂತೆ ಪಕ್ತಯೇ–ಪರಿಪಾಕಕ್ಕೋ

---

ಶೋಕವಂತಳಾದ ಸೀತಾದೇವಿಯು ರಾವಣನಿಂದ ಅಪಹರಿಸಲ್ಪಟ್ಟವಳಾಗಿ, ಅರಣ್ಯದಲ್ಲಿ, ಅಯ್ಯೋಯ್ಯೋ, ರಾಮನೇ! ಎಂದು, ದೂರದಲ್ಲಿರುವ ಶ್ರೀರಾಮನನ್ನು ಕೂಗಿಕೊಳ್ಳುತ್ತಿದ್ದಳು ॥೨೧॥ ಅನಂತರದಲ್ಲಿ ಕಾಮಾತುರನಾದ ಆ ರಾವಣನು ಕಾಮರಹಿತಳಾದ ಮತ್ತು ಹೆಣ್ಣಾನೆಯಂತೆ ನೆಲದಲ್ಲಿ ಹೊರಳಾಡುವ ಆ ಸೀತಾದೇವಿಯನ್ನು ಹೊತ್ತುಕೊಂಡು ಮೇಲಕ್ಕೆ ಹಾರಿದನು ॥೨೨॥ ಬಳಿಕ ರಾವಣನಿಂದ ಗಗನಮಾರ್ಗದಲ್ಲಿ ತೆಗೆದುಕೊಂಡು ಹೋಗಲ್ಪಡುವ ಆ ಸೀತಾದೇವಿಯು ಪ್ರಜ್ಞೆಯಿಲ್ಲದವಳಂತೆಯೂ ಉನ್ಮತ್ತಾವಸ್ಥೆಯಂ ಪಡದವಳಂತೆಯೂ ಸಹ ದೀನಳಾಗಿ ಕೂಗುತ್ತಿದ್ದಳು (ತತ್ವಾಭಿಪ್ರಾಯವೇನೆಂದರೆ,—ಸೀತಾದೇವಿಯಿಂದ ದೀನವಾದ ಮಾತುಗಳು ಲೋಕರೀತಿಯನ್ನನುಸರಿಸಿ ಹೇಳಲ್ಪಟ್ಟವೇ ಹೊರತು ಮತ್ತು ಬೇರೆಅಲ್ಲವೆಂದು ಮುಂದೆಯೂ ಸಹ ತಿಳಿದುಕೊಳ್ಳತಕ್ಕದ್ದು) ॥೨೩॥ ಎಲೋ ಎಲೋ ಲಕ್ಷ್ಮಣನೇ! ಓಡಿಬರುವವನಾಗು, ಅಯ್ಯೋ! ಮಹಾ ಭುಜಪರಾಕ್ರಮಶಾಲಿಯೇ! ಪೂಜ್ಯನಾದ ಶ್ರೀರಾಮನ ಮನಕ್ಕೆ ಅಲಂಕಾರಪ್ರಾಯನಾದವನೇ! ಮಹಾ ಕೋಪಿಷ್ಠನಾದ ರಾಕ್ಷಸನಿಂದ ಅಪಹರಿಸಲ್ಪಡುವ ನನ್ನನ್ನು ನೀನು ನೋಡದಿರುವವನಾದೆ ॥೨೪॥ ಎಲೈ ರಾಜಪುತ್ರನಾದ ಶ್ರೀರಾಮನೇ! ನೀನು ಧರ್ಮಕಕ್ಕಾಗಿ ಪ್ರಾಣಂಗಳನ್ನೂ ಸುಖವನ್ನೂ ಸರ್ವ ಪ್ರಯೋಜನಂಗಳನ್ನೂ ಸಹ ಬಿಟ್ಟವನಾಗಿ, ಧರ್ಮಶೂನ್ಯನಾದ ರಾಕ್ಷಸನಿಂದ ಅಪಹರಿಸಲ್ಪಡುತ್ತಿರುವ ನನ್ನನ್ನು ಕಾಣದೆ ಯೆಲ್ಲಿಹೋದವನಾದೆ ॥೨೫॥ ಎಲೈ ಶತ್ರುಸಂಹಾರಕನೇ! ನೀನು ದುರ್ಜನರಿಗೆಲ್ಲ ಶಿಕ್ಷಾಕರ್ತನೆಂದು ನಿನಗೆ ಪ್ರಸಿದ್ಧಿಯಿರುವದಲ್ಲವೆ? ಇಂಥಾ ಪಾಪಕೃತ್ಯವಂ ಮಾಡುವ ಇವನನ್ನು ಯಾಕೆ ಶಿಕ್ಷಿಸದೇ ಹೋದೆ? ॥೨೬॥ ಅಯ್ಯೋ, ರಾಮನೇ! ದುಷ್ಟವ್ಯಾಪಾರಂಗಳಂ ಗೈಯ್ಯುವ ಪುರುಷರಿಗೆ ತಕ್ಷಣದಲ್ಲಿ ಆ ಪಾಪಕೃತ್ಯದ ಫಲವು ಕಾಣಲ್ಪಡುವದೇ ಯೇನು? (ತಕ್ಷಣದಲ್ಲಿ ಕಾಣುವದಿಲ್ಲ) ಯಾಕಂದರೆ,—

ದೃಶ್ಯತೇಕರ್ಮಣಃಫಲಂ ॥ ಕಾಲೋಪ್ಯಂಗೀಭವತ್ಯತ್ರಸಸ್ಯಾನಾಮಿವಪಕ್ತಯೆ ॥೨೭॥ ಸಕರ್ಮಕೃತವಾನೇತತ್ಕಾಲೋಪಹತಚೇತನಃ । ಜೀವಿತಾಂತಕರಂಘೋರಂರಾಮಾದ್ವ್ಯಸನಮಾಪ್ನುಹಿ ॥೨೮॥ ಹಂತೇದಾನೀಂಸಕಾಮಾಸ್ತುಕೈಕೇಯೀಸಹಬಾಂಧವೈಃ । ಹ್ರಿಯೆಯದ್ಧರ್ಮಕಾಮಸ್ಯಧರ್ಮಪತ್ನೀಯಶಸ್ವಿನಃ ॥೨೯॥ ಆಮಂತ್ರಯೆಜನಸ್ಥಾನೇಕರ್ಣಿಕಾರಾನ್ಸುಪುಷ್ಪಿತಾನ್ । ಕ್ಷಿಪ್ರಂರಾಮಾಯಶಂಸಧ್ವಂಸೀತಾಂಹರತಿರಾವಣಃ ॥೩೦॥ ಮಾಲ್ಯವಂತಂಶಿಖರಿಣಂವಂದೆಪ್ರಸ್ರವಣಂಗಿರಿಂ । ಕ್ಷಿಪ್ರಂರಾಮಾಯಶಂಸತ್ವಂಸೀತಾಂಹರತಿರಾವಣಃ ॥೩೧॥ ಹಂಸಸಾರಸಸಂಘುಷ್ಟಾಂವಂದೆಗೋದಾವರೀಂನದೀಂ । ಕ್ಷಿಪ್ರಂರಾಮಾಯಶಂಸತ್ವಂಸೀತಾಂಹರತಿರಾವಣಃ ॥೩೨॥ ದೈವತಾನಿಚಯಾನ್ಯಸ್ಮಿನ್ವನೇವಿವಿಧಪಾದಪೆ ॥ ನಮಸ್ಕರೋಮ್ಯಹಂತೇಭ್ಯೋಭರ್ತುಃಶಂಸಂತುಮಾಂಹೃತಾಂ ॥೩೩॥ ಯಾನಿಕಾನಿಚಿದಪ್ಯತ್ರಸತ್ವಾನಿನಿವಸಂ

ಸ್ಯಗ–ಅಂಗೀಭವತಿ–ಸಹಾಯವಾಗುತ್ತದೆ ॥೨೭॥ ಏತತ್ಕರ್ಮ–ಇಂಥಾ ಪರದಾರಾಪಹರಣರೂಪವಾದ ವ್ಯಾಪಾರವನ್ನು, ಕೃತವಾನ್–ಮಾಡಿದ, ಕಾಲೋಪಹತಚೇತನಃ–ಕಾಲದಿಂ ಹೊಡೆಯಲ್ಪಟ್ಟ ಪ್ರಜ್ಞೆಯುಳ್ಳ, ಸತ್ವಂ–ಆ ಈನೀನು, ರಾಮಾತ್–ರಾಮನ ಸಲೆಸೆಯಿಂದ. ಜೀವಿತಾಂತಕರಂ–ಪ್ರಾಣನಾಶಕರಮಾದ, ಘೋರಂ–ಭಯಂಕರವಾದ, ವ್ಯಸನಂ–ವ್ಯಸನವನ್ನು ಆಪ್ನುಹಿ–ಹೊಂದುವಿ ॥೨೮॥ ಹಂತ–ಕಷ್ಟವು, ಯತ–ಯಾವಕಾರಣದದೆಶೆಯಿಂದ, ಧರ್ಮಕಾಮಸ್ಯ–ಧರ್ಮದಲ್ಲೇ ದೃಷ್ಟಿಯಿರುವ, ಯಶಸ್ವಿನಃ–ಕೀರ್ತಿವಂತನಾದ ಶ್ರೀರಾಮನ, ಧರ್ಮಪತ್ನೀ–ಹೆಂಡತಿಯಾದನಾನು, ಹ್ರಿಯೆ–ಅಪಹರಿಸಲ್ಪಟ್ಟಿನೋ, ತತ್–ಆ ಕಾರಣದದೆಶೆಯಿಂದ. ಇದಾನೀಂ–ಈಗ, ಕೈಕೇಯೀ–ಕೈಕೇಯೀದೇವಿಯು, ಬಾಂಧವೈಸ್ಸಹ–ಬಂಧುಜನಗಳೊಡಗೂಡ, ಸಕಾಮಾ–ಕೋರಿಕೆಯಿಂದ ಕೂಡಿದವಳು. ಅಸ್ತು–ಆಗಲಿ ॥೨೯॥ ಜನಸ್ಥಾನೆ–ಉಕ್ಕದಲ್ಲಿರುವ ಸುಪುಷ್ಪಿತಾನ್–ಸಂಜಾತ ಪುಷ್ಪಗಳುಳ್ಳ, ಕರ್ಣಿಕಾರಾನ್–ಬೆಟ್ಟದ ತಾವರೆಗಿಡಗಳನ್ನುಕುರಿತು, ಆಮಂತ್ರಯೆ–ಹೇಳಿಕೊಳ್ಳುತ್ತೇನೆ, ರಾವಣಃ–ರಾವಣನು, ಸೀತಾಂ–ಸೀತಾದೇವಿಯನ್ನು. ಹರತಿ–ಕಳ್ಳತನದಿಂಅಪಹರಿಸಿಕೊಂಡು ಹೋಗುತ್ತಾನೆ, ಇತಿ–ಇಂತೆಂದು. ರಾಮಾಯ–ಶ್ರೀರಾಮನಿಗೋಸುಗ,ಕ್ಷಿಪ್ರಂ–ಜಾಗ್ರತೆಯಾಗಿ,ಶಂಸಧ್ವಂ–ಹೇಳಿರಿ ॥೩೦॥ ಮಾಲ್ಯವಂತಂ–ಪುಷ್ಪಗಳುಳ್ಳ, ಶಿಖರಿಣಂ–ಪ್ರಶಸ್ತವಾದ ಶೃಂಗಗಳುಳ್ಳ, ಪ್ರಸ್ರವಣಂ–ಪ್ರಸ್ರವಣವೆಂಬ, ಗಿರಿಂ–ಬೆಟ್ಟವಂಕುರಿತು. ವಂದೆ–ನಮಸ್ಕರಿಸುವೆನು, ರಾವಣಃ–ರಾವಣನು. ಸೀತಾಂ–ಸೀತಾದೇವಿಯನ್ನು, ಹರತಿ–ಅಪಹರಿಸಿಕೊಂಡುಹೋಗುತ್ತಾನೆ, ಇತಿ–ಇಂತೆಂದು, ತ್ವಂ–ನೀನು. ಕ್ಷಿಪ್ರಂ–ಜಾಗ್ರತೆಯಾಗಿ. ರಾಮಾಯ–ಶ್ರೀರಾಮನಿಗಾಗಿ, ಶಂಸ–ಹೇಳು ॥೩೧॥ ಹಂಸಸಾರಸಸಂಘುಷ್ಟಾಂ–ಹಂಸಪಕ್ಷಿಗಳಿಂ ಸಾರಸಪಕ್ಷಿಗಳಿಂ ಧ್ವನಿಗೊಳಿಸುತ್ತಿರುವ, ಗೋದಾವರೀಂನದೀಂ–ಗೋದಾವರೀನದಿಯಂಕುರಿತು, ವಂದೆ–ನಮಸ್ಕಾರ ಮಾಡುತ್ತೇನೆ, ರಾವಣಃ–ರಾವಣನು, ಸೀತಾಂ–ಸೀತಾದೇವಿಯನ್ನು, ಹರತಿ–ಅಪಹರಿಸಿಕೊಂಡುಹೋಗುವನೆಂದು, ತ್ವಂ–ನೀನು, ಕ್ಷಿಪ್ರಂ–ಜಾಗ್ರತೆಯಾಗಿ, ರಾಮಾಯ–ಶ್ರೀರಾಮನಿಗೆ. ಶಂಸ–ಹೇಳು ॥೩೨॥ ವಿವಿಧಪಾದಪೆ–ನಾನಾಬಗೆಗಳಾದ ಗಿಡಗಳುಳ್ಳ, ಅಸ್ಮಿನ್ವನೆ–ಈ ವನದಲ್ಲಿ, ಯಾನಿದೈವತಾನಿ–ಯಾವವನದೇವತೆಗಳು, ಸಂತಿ–ಇರುತ್ತಾರೋ, ತೇಭ್ಯಃ–ಆ ವನದೇವತೆಗಳಿಗೆ, ಅಹಂ–ನಾನು. ನಮಸ್ಕರೋಮಿ–ನಮಸ್ಕಾರವಂಮಾಡುತ್ತೇನೆ, ಮಾಂ–ನನ್ನನ್ನು, ಹೃತಾಂ–ಅಪಹರಿಸಲ್ಪಟ್ಟವಳನ್ನಾಗಿ.ಭರ್ತುಃ–ಗಂಡನಿಗೆ. ಶಂಸಂತು–ಹೇಳಿರಿ ॥೩೩॥ ಅತ್ರ–ಈ ವನದಲ್ಲಿ, ಯಾನಿಕಾನಿಚಿತ್ಸತ್ವಾನಿ–ಯಾವ ಜಂತುವಿಶೇಷಗಳು, ವಸಂತಿ–ಯಿರುತ್ತವೋ, ತಾನಿಸರ್ವಾಣಿ ಸಮಸ್ತಗಳಾದ ಜಂತುಗಳನ್ನು, ಶರಣಂ–ರಕ್ಷಕರನ್ನಾಗಿ, ಯಾಮಿ–ಹೊಂದುವೆನು,ಮೃಗಪಕ್ಷಿಗಣಾನಪಿ–ಮೃಗಗಳನ್ನೂಪಕ್ಷಿಗಳತಂಡಗಳನ್ನು. ಶರಣಂ

ಪೈರುಗಳಿಗೆ ಪಕ್ವವಾಗುವವರಿಗೂ ಕಾಲವು ಯೆಂತು ಅಂಗೀಕರಿಸುವದೋ ಅಂತು ದುರ್ವ್ಯಾಪಾರಿಗಳಿಗೂ ಕೂಡಾ ಕಾಲವು ಸಹಾಯಕವಾಗಿರುವದು, ಎಲೋ, ಎಲೋ, ರಾವಣನೇ! ಇಂಥಾ ಪಾಪಕೃತ್ಯವಂ ಮಾಡಿದ ನೀನು ಕಾಲದಿಂದ ಉಪಹತವಾದ ಪ್ರಜ್ಞೆಯುಳ್ಳವನಾಗಿ ಪ್ರಾಣಹರವಾದ ಮಹಾ ವ್ಯಸನವಂ ಹೊಂದುವವನಾಗುವೆ; ॥೨೮॥ ಅಕಟಕಟಾ! ಮಹಾ ಧರ್ಮಿಷ್ಠನಾದ ಮತ್ತೂ ಯಶೋವಂತನಾದ ಶ್ರೀರಾಮನಧರ್ಮಪತ್ನಿಯಾದನಾನುಅಪಹರಿಸಲ್ಪಟ್ಟಿನಾದಕಾರಣಕೈಕೇಯೀ ದೇವಿಯು ನೆಂಟರೆಲ್ಲರುಇಂದಿಗೆ ಸಫಲವಾದಮನೋರಥಂಗಳುಳ್ಳವರಾಗಿರಲಿ ॥೨೯॥ ಜನಸ್ಥಾನದಲ್ಲಿ ಸಂಜಾತಪುಷ್ಪಂಗಳುಳ್ಳ, ಎಲೈ ಕರ್ಣಿಕಾರ ವೃಕ್ಷಂಗಳಿರಾ! ನಿಮ್ಮೆಲ್ಲರನ್ನು ಬೇಡಿಕೊಳ್ಳುತ್ತೇನೆ; ಈ ದುಷ್ಟನಾದ ರಾವಣನು ನನ್ನಂ ಅಪಹರಿಸಿದನೆಂದು ನೀವೆಲ್ಲರು ಶ್ರೀರಾಮನಿಗೆ ಪೇಳುವವರಾಗಿ ॥೩೦॥ ಎಲೈ ಮಾಲ್ಯವತ್ಪರ್ವತವೇ! ನಿನಗೆ ವಂದನೆಯಂ ಗೈಯ್ಯುವೆನು, ದಶಕಂಠನುಸೀತಾಪಹಾರವಂಗೈದನೆಂದುಶ್ರೀರಾಮನಿಗೆ ಪೇಳುವವನಾಗು ॥೩೧॥ ಹಂಸಪಕ್ಷಿಗಳಿಂದಲೂ ಸಾರಸಪಕ್ಷಿಗಳಿಂದಲೂ ಶಬ್ದಾಯಮಾನವಾದ, ಎಲೌ ಗೋದಾವರೀ ನದಿಯೇ! ನಿನಗೆ ನಮಸ್ಕಾರವಂ ಮಾಡುವೆನು, ನೀನಾದರೂ ಶ್ರೀರಾಮನಿಗೆ ಪೇಳುವವಳಾಗು, ಮತ್ತು ಈ ವನದಲ್ಲಿ ಯಾವ ಯಾವ ದೇವತೆಗಳು ನೆಲಗೊಂಡಿರುವವೋ, ಯಾವ ಯಾವ ಜಂತುಗಳಿರುವವೋ, ಯಾವ ಯಾವ ಪಕ್ಷಿಗಳಿರುವವೋ, ಅಂಥಾ ನಿಮಗೆಲ್ಲ ಕೈಮುಗಿಯುವೆನು ನನ್ನನ್ನು ರಾವಣನು ಅಪಹರಿಸಿಕೊಂಡು

ತ್ಸ್ಯತ । ಸರ್ವಾಣಿಶರಣಂಯಾಮಿಮೃಗಪಕ್ಷಿಗಣಾನಪಿ । ಹ್ರಿಯಮಾಣಾಂಪ್ರಿಯಾಂಭರ್ತುಃಪ್ರಾಣೇಭ್ಯೋಪಿಗರೀಯಸೀಂ
ವಿವಶಾಪಹೃತಾಸೀತಾರಾವಣೇನೇತಿಶಂಸತ ॥೩೫॥ ವಿದಿತ್ವಾಮಾಂಮಹಾಬಾಹುರಮುತ್ರಾಪಿಮಹಾಬಲಃ । ಆನೇಷ್ಯ
ತಿಪರಾಕ್ರಮ್ಯವೈವಸ್ವತಹೃತಾಮಪಿ ॥೩೬॥ ಸಾತದಾಕರುಣಾವಾಚೋವಿಲಪಂತೀಸುದುಃಖಿತಾ । ವನಸ್ಪತಿಗತಂ
ಗೃಧ್ರಂದದರ್ಶಾಯತಲೋಚನಾ ॥೩೭॥ ಸಾತಮುದ್ವೀಕ್ಷ್ಯಸುಶ್ರೋಣೀರಾವಣಸ್ಯವಶಂಗತಾ । ಸಮಾಕ್ರಂದದ್ಭಯ
ಪರಾದುಃಖೋಪಹತಯಾಗಿರಾ ॥೩೮॥ ಜಟಾಯೋಪಶ್ಯಮಾಮಾರ್ಯಹ್ರಿಯಮಾಣಾಮನಾಥವತ್ । ಅನೇನರಾಕ್ಷಸೇಂದ್ರೇ
ಣಕರುಣಂಪಾಪಕರ್ಮಣಾ ॥೩೯॥ ನೈಷವಾರಯಿತುಂಶಕ್ಯಸ್ತ್ವಯಾಕ್ರೂರೋನಿಶಾಚರಃ । ಸತ್ವವಾನ್ಜಿತಕಾಶೀಚಸಾ
ಯುಧಶ್ಚೈವದುರ್ಮತಿಃ ॥೪೦॥ ರಾಮಾಯತುಯಥಾತತ್ವಂಜಟಾಯೋಹರಣಂಮಮ । ಲಕ್ಷ್ಮಣಾಯಚತತ್ಸರ್ವ
ಮಾಖ್ಯಾತವ್ಯಮಶೇಷತಃ —*** ಇತಿಶ್ರೀಮದಾರಣ್ಯಕಾಂಡೇ-ಏಕೋನಪಂಚಾಶಸ್ಸರ್ಗಃ ***—

ತಂಶಬ್ದಮವಸುಪ್ತಸ್ತುಜಟಾಯುರಥಶುಶ್ರುವೇ । ನಿರೀಕ್ಷ್ಯರಾವಣಂಕ್ಷಿಪ್ರಂವೈದೇಹೀಂಚದದರ್ಶಸಃ ॥೧॥ ತ

---

ರಕ್ಷಕರುಗಳನ್ನಾಗಿ, ಯಾಮಿ-ಹೊಂದುವೆನು. ಉತ-ಎಲೈ ಪಕ್ಷಿಗಳೇ ಮುಂತಾದವುಗಳಿರಾ, ಭರ್ತುಃ-ಗಂಡನಾದ ಶ್ರೀರಾಮನಿಗೆ ಪ್ರಾಣೇಭ್ಯೋಪಿ-ಪ್ರಾಣಗ ಳಿಗಿಂತಲೂ, ಗರೀಯಸೀ-ಹೆಚ್ಚಾದ ಪ್ರಿಯಾಂ-ಇಷ್ಟಳಾದ, ಹ್ರಿಯಮಾಣಾಂ-ಅಪಹರಿಸಲ್ಪಡುತ್ತಿರುವ, ಮಾಂ-ನನ್ನನ್ನು, ರಾವಣೇನ-ರಾವಣನಿಂದ ಸೀತಾ-ಸೀತಾದೇವಿಯು, ವಿವಶಾ-ಪರಾಧೀನಳಾಗಿ, ಅಪಹೃತೇತಿ-ಅಪಹರಿಸಲ್ಪಟ್ಟಳೆಂದು, ಶಂಸತ-ಹೇಳಿರಿ ॥೩೫॥ ಮಹಾಬಾಹುಃ-ಮಹಾಭುಜವ ರಾಕ್ರಮಶಾಲಿಯಾದ ಮಹಾಬಲಃ-ಬಹುಸಾಮರ್ಥ್ಯವಂತನಾದ ಶ್ರೀರಾಮನು ಅಮುತ್ರಾಪಿ-ಪರಲೋಕದಲ್ಲಿಯೂ, ವೈವಸ್ವತಹೃತಾಮಪಿ-ಯಮನಿಂ ದ ಅಪಹರಿಸಲ್ಪಟ್ಟವಳಾದರೂ, ಮಾಂ-ನನ್ನನ್ನು ವಿದಿತ್ವಾ-ತಿಳಿದು, ಪರಾಕ್ರಮ್ಯ-ಯುದ್ಧಮಾಡಿ, ಆನೇಷ್ಯತಿ-ತಿರುಗಿ ತೆಗೆದುಕೊಂಡುಬರುವನು. ॥೩೬॥ ಆಯತಲೋಚನಾ-ವಿಸ್ತಾರವಾದ ನೇತ್ರಗಳುಳ್ಳ, ಸಾ-ಆ ಸೀತಾದೇವಿಯು; ತದಾ-ಆಕಾಲದಲ್ಲಿ, ಕರುಣಾಃ-ದೀನಗಳಾದ, ವಾಚಃ-ಮಾತುಗಳನ್ನು, ವಿ ಲಪಂತೀ-ಘಟ್ಟಿಯಾಗಿ ಹೇಳುತ್ತಿರುವಳಾಗಿ, ಸುದುಃಖಿತಾ-ಅಳುತ್ತಿರುವವಳಾಗಿ, ವನಸ್ಪತಿಗತಂ-ಗಿಡವಮೇಲೆ ಕುಳಿತುಕೊಂಡಿರುವ, ಗೃಧ್ರಂ-ಜಟಾಯು ವೆಂಬ ಹದ್ದನ್ನು, ದದರ್ಶ-ಕಂಡಳು ॥೩೭॥ ಸುಶ್ರೋಣೀ-ಚಕ್ಕಶ್ರೋಣಿಪ್ರದೇಶಗಳುಳ್ಳ, ಸಾ-ಆ ಸೀತಾದೇವಿಯು, ರಾವಣಸ್ಯ-ರಾವಣನಿಗೆ, ವಶಂಗತಾ-ಸ್ವಾಧೀನಳಾಗಿ, ತಂ-ಆ ಜಟಾಯುವಿನನ್ನು, ಉದ್ವೀಕ್ಷ್ಯ-ಕಂಡು, ಭಯಪರಾ-ಭಯದಿಂದ ಪರವಶಳಾಗಿ, ದುಃಖೋಪಹತಯಾ-ಅಳುವಿ ಕೆಯಿಂದ ಗದ್ಗದಭಾವವುಳ್ಳ, ಗಿರಾ-ಮಾತಿನಿಂದ, ಸಮಾಕ್ರಂದತ್-ಕೂಗಿದಳು ॥೩೮॥ ಹೇಜಟಾಯೋ-ಎಲೈ ಜಟಾಯುವೇ ಹೇಆರ್ಯ-ಎಲೈ ಪೂಜ್ಯನೇ, ಅನಾಥವತ್-ಅನಾಥಳಂತೆ, ಮಾಂ-ನನ್ನನ್ನು, ಪಾಪಕರ್ಮಣಾ-ಪಾಪವ್ಯಾಪಾರಿಯಾದ, ಅನೇನರಾಕ್ಷಸೇಂದ್ರೇಣ-ರಾಕ್ಷಸರಿಗೆ ಅಧಿಪತಿಯಾದ ರಾವಣನಿಂದ ಹ್ರಿಯಮಾಣಾಂ-ಅಪಹರಿಸಲ್ಪಡುವವಳನ್ನಾಗಿ, ಕರುಣಂ-ದೈನ್ಯವಾಗಿ, ಪಶ್ಯ-ನೋಡು ॥೩೯॥ ಏಷಃನಿಶಾಚರಃ-ಈ ರಾಕ್ಷಸನು ಯತಃ-ಯಾವಕಾರಣದದೆಶೆಯಿಂದ, ಸತ್ವವಾನ್-ಸಾಮರ್ಥ್ಯವುಳ್ಳವನೋ, ಜಿತಕಾಶೀಚ-ಜಯಶೀಲನೋ, ಸಾಯುಧಶ್ಚೈವ-ಆಯುಧಗಳಿಂದೊಡ ಗೂಡಿದವನೋ, ತಸ್ಮಾತ್-ಆ ಕಾರಣದದೆಶೆಯಿಂದ, ಕ್ರೂರಃ-ಕ್ರೂರನಾದ ದುರ್ಮತಿಃ-ದುರ್ಬುದ್ಧಿಯುಳ್ಳ, ಏಷಃ-ಈ ರಾವಣನು, ತ್ವಯಾ-ನಿನಗೆ, ವಾರಯಿತುಂ-ತಡೆಮಾಡುವದಕ್ಕೆ, ನಶಕ್ಯಃ-ಸಾಮರ್ಥ್ಯನಲ್ಲಾ ॥೪೦॥ ಹೇಜಟಾಯೋ-ಎಲೈ ಜಟಾಯುವೇ ಮಮ-ನನ್ನ ಹರಣಂ-ಅಪಹಾರವನ್ನು ರಾಮಾಯ-ಶ್ರೀರಾಮನಿಗೆ, ಯಥಾತತ್ವಂ-ಯಥಾರ್ಥವಾಗಿ, ಆಖ್ಯಾತವ್ಯಂ-ಹೇಳತಕ್ಕದ್ದು. ಲಕ್ಷ್ಮಣಾಯಚ-ಲಕ್ಷ್ಮಣನಿಗೂ, ತತ್ಸರ್ವಂ-ಆ ಸ ಮಸ್ತವೂ, ಅಶೇಷತಃ-ನಿಶ್ಶೇಷವಾಗಿ, ಆಖ್ಯಾತವ್ಯಂ-ಹೇಳತಕ್ಕದ್ದು, (ಇತಿ-ಇಂತೆಂದು, ಉವಾಚ-ಹೇಳಿದಳು)॥೪೧॥ ಏಕೋನಪಂಚಾಶಸ್ಸರ್ಗಃ

ಅಥ-ಬಳಿಕ, ಅವಸುಪ್ತಃ-ನಿದ್ರೆಹೋಗುತ್ತಿರುವ, ಸಜಟಾಯುಃ-ಆ ಜಟಾಯುವು, ತಂಶಬ್ದಂ-ಆ ಶಬ್ದವನ್ನು ಶುಶ್ರುವೇ-ಕೇಳಿದನು, ತತಃ-ಬಳಿ ಕ, ರಾವಣಂ-ರಾವಣನನ್ನು, ನಿರೀಕ್ಷ್ಯ-ಕಂಡು, ಕ್ಷಿಪ್ರಂ-ಜಾಗ್ರತೆಯಾಗಿ, ವೈದೇಹೀಂಚ-ಸೀತಾದೇವಿಯನ್ನೂ, ದದರ್ಶ-ಕಂಡನು ॥೧॥ ತತಃ-ಬಳಿಕ, ಶ್ರೀಮಾನ್-ಭಗವತ್ಕೈಂಕರ್ಯಸಂಪನ್ನನಾದ, ತೀಕ್ಷ್ಣತುಂಡಃ-ತೀಕ್ಷ್ಣವಾದ ಮೂಗುಳ್ಳ, ಖಗೋತ್ತಮಃ-ಪಕ್ಷಿಶ್ರೇಷ್ಠನಾದ ಜಟಾಯುವು. ವನ

---

ಹೋದನೆಂದು, ನನ್ನ ಪತಿಯಾದ ಶ್ರೀರಾಮನಿಗೆ ಹೇಳುವವರಾಗಿ, ಮಹಾ ಪರಾಕ್ರಮಶಾಲಿಯಾದ ಆತನು ಇದನ್ನು ತಿಳಿದಕೂಡಲೆ ಪರಾಕ್ರಮವಂ ಗೈದು ನಾನು ಯಮಮಂದಿರದಲ್ಲಿದ್ದರೂ ಕರೆತರುವನೆಂದು ಬಹು ದುಃಖಿತಳಾಗಿ ಅ ಳುತ್ತಿರುವಾಗ, ಆ ದೇವಿಯು ವೃಕ್ಷದಮೇಲೆ ಕುಳಿತಿರುವ, ಜಟಾಯುವಿನಂ ಕಂಡು, ಎಲೈ ಪೂಜ್ಯನಾದ ಜಟಾ ಯುವೇ! ನೋಡುವವನಾಗು, ಪಾಪಕಾರಿಯಾದ ಈ ರಾಕ್ಷಸನು ನನ್ನನ್ನು ಅಪಹರಿಸಿಕೊಂಡು ಹೋಗುವನು, ಈ ದ ಷ್ಟನಂ ತಡೆಯುವದಕ್ಕೆ ನಿನ್ನಿಂದಾಗಲಾರದು, ಯಾಕಂದರೆ,—ಇವನು ಮಹಾ ಬಲವಂತನು, ಆಯುಧಗಳಿಂದ ಯುಕ್ತನಾದವನು, ಆದ್ದರಿಂದ ನೀನು ಶ್ರೀರಾಮನಿಗೂ, ನನ್ನ ಲಕ್ಷ್ಮಣನಿಗೂ ಸಹ ತಿಳುಹಿಸುವವನಾಗೆಂದು ಕೂ ಗಿಕೊಂಡಳು ॥೪೧॥

—*ಅರಣ್ಯಕಾಂಡದಲ್ಲಿನ ೪೯ನೆಯ ಸರ್ಗಂ ಮುಗಿದುದು*—

ಅನಂತರದಲ್ಲಿ ಮಲಗಿದ್ದ ಆ ಜಟಾಯುವು ಆ ಸೀತಾದೇವಿಯ ವಾಕ್ಯವಂ ಕೇಳಿ, ಆ ರಾವಣನನ್ನೂ ಮಹಾ

ತಂ ಪರ್ವತಕೂಟಾಭಸ್ತೀಕ್ಷ್ಣತುಂಡಃ ಖಗೋತ್ತಮಃ । ವನಸ್ಪತಿಗತಶ್ರೀಮಾನ್ ವ್ಯಾಜಹಾರ ಶುಭಾಂ ಗಿರಂ ॥೧॥ ದಶಗ್ರೀವ ಸ್ಥಿತೋ ಧರ್ಮೇ ಪುರಾಣೇ ಸತ್ಯಸಂಶ್ರಯಃ । ಜಟಾಯುರ್ನಾಮ ನಾಮ್ನಾಹಂ ಗೃಧ್ರರಾಜೋ ಮಹಾಬಲಃ ॥೨॥ ರಾಜಾ ಸರ್ವಸ್ಯ ಲೋಕಸ್ಯ ಮಹೇಂದ್ರವರುಣೋಪಮಃ । ಲೋಕಾನಾಂ ಚ ಹಿತೇ ಯುಕ್ತೋ ರಾಮೋ ದಶರಥಾತ್ಮಜಃ ॥೪॥ ತಸ್ಯೈಷಾ ಲೋಕನಾಥಸ್ಯ ಧರ್ಮಪತ್ನೀ ಯಶಸ್ವಿನೀ । ಸೀತಾ ನಾಮ ವರಾರೋಹಾ ಯಾಂ ತ್ವಂ ಹರ್ತುಮಿಹೇಚ್ಛಸಿ ॥೫॥ ಕಥಂ ರಾಜಾ ಸ್ಥಿತೋ ಧರ್ಮೇ ಪರದಾರಾನ್ ಪರಾಮೃಶೇತ್ । ರಕ್ಷಣೀಯಾ ವಿಶೇಷೇಣ ರಾಜದಾರಾ ಮಹಾಬಲ ॥೬॥ ನಿವರ್ತಯ ಮತಿಂ ನೀಚಾಂ ಪರದಾರಾಭಿಮರ್ಶನಾತ್ । ನ ತತ್ಸಮಾಚರೇದ್ಧೀರೋ ಯತ್ಪರೋಽಸ್ಯ ವಿಗರ್ಹಯೇತ್ ॥ ಯಥಾತ್ಮನಸ್ತಥಾನ್ಯೇಷಾಂ ದಾರಾ ರಕ್ಷ್ಯಾ ವಿಮರ್ಶನಾತ್ ॥೭॥ ಧರ್ಮಮರ್ಥಂ ಚ ಕಾಮಂ ಚ ಶಿಷ್ಟಾಃ ಶಾಸ್ತ್ರೇಷ್ವನಾಗತಂ ॥ ವ್ಯವಸ್ಯಂತಿ ರಾಜಾನೋ ಧರ್ಮಂ ಪೌಲಸ್ತ್ಯನಂ

---

ಸ್ಪತಿಗತಃ-ಗಿಡವನ್ನು ಹೊಂದಿದವನಾಗಿ, ಪರ್ವತಕೂಟಾಭಃ-ಬೆಟ್ಟದ ಶಿಖರಕ್ಕೆ ಸಮಾನಪ್ರಕಾಶವುಳ್ಳವನಾಗಿ, ಶುಭಾಂಗಿರಂ-ಶುಭಕರವಾದ ಮಾತ ನ್ನು. ವ್ಯಾಜಹಾರ-ಹೇಳಿದನು ॥೧॥ ಹೇದಶಗ್ರೀವ-ಎಲೈ ದಶಕಂಠನೇ, ಪುರಾಣೇ-ಅನಾದಿಸಿದ್ಧವಾದ ಧರ್ಮೇ-ಧರ್ಮದಲ್ಲಿ, ಸ್ಥಿತಃ-ಯಿರುತ್ತಿರುವ, ಸತ್ಯಸಂಶ್ರಯಃ-ಸತ್ಯವನ್ನೇ ಆಶ್ರಯಿಸಿರುವ, ಅಹಂ-ನಾನು, ನಾಮ್ನಾ-ಹೆಸರಿನಿಂದ, ಜಟಾಯುರ್ನಾಮ-ಜಟಾಯುವೆಂದು ಪ್ರಸಿದ್ಧನಾದ, ಗೃಧ್ರರಾಜಃ ಹದ್ದುಗಳಿಗೆ ದೊರೆಯು, ಮಹಾಬಲಃ-ಬಹಳ ಶಕ್ತಿವಂತನಾಗಿದ್ದೇನೆ ॥೩॥ ಸರ್ವಸ್ಯಲೋಕಸ್ಯ-ಸಮಸ್ತಲೋಕಗಳಿಗೂ, ರಾಜಾ-ದೊರೆಯಾದ, ಮಹೇಂದ್ರವರುಣೋಪಮಃ-ದೇವೇಂದ್ರ ವರುಣರಿಗೆ ಸಮಾನನಾದ. ಲೋಕಾನಾಂಚ-ಸಮಸ್ತ ಜನಗಳಿಗೂ, ಹಿತೇ-ಯಿಷ್ಟವಾದವುಗಳಲ್ಲಿ, ಯುಕ್ತಃ-ಆಸಕ್ತನಾದ, ರಾಮಃ-ಶ್ರೀರಾಮನೆಂಬ, ದಶರಥಾತ್ಮಜಃ-ದಶರಥರಾಯನ ಕುಮಾರನು, ಅಸ್ತಿ-ಇದ್ದಾನೆ ॥೪॥ ತ್ವಂ-ನೀನು ಇಹ-ಈಗ ಯಾಂ-ಯಾವ ಹೆಂಗಸನ್ನು ಹರ್ತುಂ-ಅಪಹರಿಸುವದಕ್ಕೆ, ಯಿಚ್ಛಸಿ-ಅಪೇಕ್ಷಿಸುತ್ತೀಯೋ. ಏಷಾಸೀತಾ-ಈ ಸೀತಾದೇವಿಯು. ಲೋಕನಾಥಸ್ಯ-ಜಗತ್ಸ್ವಾಮಿಯಾದ ತಸ್ಯ-ಆ ಶ್ರೀರಾಮನಿಗೆ, ಧರ್ಮಪತ್ನೀ-ಹೆಂಡತಿಯಾದವಳು, ಯಶಸ್ವಿನೀ-ಕೀರ್ತಿವಂತಳು. ವರಾರೋಹಾ-ಉತ್ತಮವಾದ ಕಟಿಯುಳ್ಳವಳು, ॥೫॥ ಹೇ ಮಹಾಬಲ ಎಲೈ ಮಹಾಸಾಮರ್ಥ್ಯವಂತನೇ, ಧರ್ಮೇ-ಧರ್ಮದಲ್ಲಿ, ಸ್ಥಿತಃ-ಇರುತ್ತಿರುವ. ರಾಜಾ-ಅರಸು. ಪರದಾರಾನ್-ಪರರ ಹೆಂಡತಿಯರನ್ನು ಕಥಂಪರಾಮೃಶೇತ್-ಹ್ಯಾಗೆ ಸ್ಪರ್ಶಿಸುವನು. ವಿಶೇಷೇಣ-ವಿಶೇಷವಾಗಿ, ರಾಜದಾರಾಃ-ರಾಜಪತ್ನಿಯರು ರಕ್ಷಣೀಯಾಃ-ಸಂರಕ್ಷಿಸತಕ್ಕವರು ॥೬॥ ಪರದಾರಾಭಿಮರ್ಶನಾತ್-ಪರದಾರಸ್ಪರ್ಶದಿಂದ. ನೀಚಾಂ-ದುಷ್ಟವಾದ, ಮತಿಂ-ಬುದ್ಧಿಯನ್ನು ನಿವರ್ತಯ-ಹಿಂತಿರುಗಿಸು, ಪರಃ-ಪರಪುರುಷನು ಅಸ್ಯ-ಈಪುರುಷನ, ಯತ್-ಯಾವಕೃತ್ಯವನ್ನು, ವಿಗರ್ಹಯೇತ್-ನಿಂದಿಸುವನೋ ಧೀರಃ-ಬುದ್ಧಿವಂತನು, ತತ್-ಅಂಥಾಕೃತ್ಯವನ್ನು ನಸಮಾಚರೇತ್-ಮಾಡಲಾಗದು ॥೬॥ ಆತ್ಮನಃ-ತನ್ನ, ದಾರಾಃ-ಹೆಂಡತಿಯರು. ಯಥಾ-ಹ್ಯಾಗೆ, ರಕ್ಷ್ಯಾಃ-ಸಂರಕ್ಷಣೆಮಾಡತಕ್ಕವರೋ, ಅನ್ಯೇಷಾಂ-ಯಿತರರ, ದಾರಾಃ-ಹೆಂಡತಿಯು, ವಿಮರ್ಶನಾತ್-ವಿಚಾರದಿಂದ ತಥಾ-ಹಾಗೆಯೇ, ರಕ್ಷ್ಯಾಃ-ಸಂರಕ್ಷಣೆಮಾಡತಕ್ಕವರ ॥೭॥ ಹೇಪೌಲಸ್ತ್ಯನಂದ-ಎಲೈ ಪುಲಸ್ತ್ಯವಂಶೋತ್ಪನ್ನನಾದ ರಾವಣನೇ. ಶಿಷ್ಟಾಃ-ಸಜ್ಜನರು, ಶಾಸ್ತ್ರೇಷು-ಶಾಸ್ತ್ರಗಳಲ್ಲಿ. ಅನಾಗತಂ-ತಿಳಿಯಲ್ಪಡದಿರುವದಾದರೂ, ರಾಜಾನಮನು-ಅರಸನನ್ನನುಸರಿಸಿ ಧರ್ಮಂ-ಧರ್ಮವನ್ನು ಅರ್ಥಂಚ-ಅರ್ಥವನ್ನು ಕಾಮಂಚ-ಕಾಮವೆಂಬ ಪುರುಷಾರ್ಥವನ್ನು, ವ್ಯವಸ್ಯಂತಿ-ಪ್ರಯತ್ನಮಾಡುತ್ತಾರೆ, ತಸ್ಮಾತ್-ಆ ಕಾರಣದ ದೆಸೆಯಿಂದ, ಧರ್ಮಃ-ಧರ್ಮವೇ, ಆಶ್ರಯಣೀಯಃ-ಆಶ್ರಯಿಸತಕ್ಕದ್ದು. ) ॥೮॥ ರಾಜಾ-ಅರಸು, ಧರ್ಮಸ್ಯ-ಧರ್ಮಕ್ಕೂ, ಕಾಮ

---

ಪತಿವ್ರತೆಯಾದ ಆ ಸೀತಾದೇವಿಯನ್ನೂ ಸಹ ನೋಡಿ, ನ್ಯಾಯವಾಗಿ ರಾವಣನಂ ಕುರಿತು ನುಡಿವನದೆಂತೆನೆ,— ॥೧॥ ಎಲೈ ದಶಕಂಠನೇ! ಬಹುಕಾಲದಿಂದ ಯಾವಧರ್ಮವಿರುವದೋ ಅಂಥಾ ಧರ್ಮದಲ್ಲಿರುವ ಜಟಾಯುವೆಂದು ಪ್ರಸಿದ್ಧನಾದ ನಾನು ಮಹಾ ಬಲವಂತನಾದ ಗೃಧ್ರರಾಜನು, ಸಮಸ್ತವಾದ ಲೋಕಗಳಿಗೆ ದೇವೇಂದ್ರನು ಯಂತು ದೊರೆಯಾಗಿರುವನೋ, ಅಂತು ಮಹಾರಾಜನಾಗಿರುವ ಮತ್ತೂ ಲೋಕಹಿತದಲ್ಲಿಯೇ ಆಸಕ್ತನಾದ ಶ್ರೀರಾಮನೆಂಬವನು ದಶರಥಮಹಾರಾಯನ ಮಗನು, ಈಕೆಯು ಲೋಕಾಧೀಶ್ವರನಾದ ಆತನ ಧರ್ಮಪತ್ನಿಯು, ಸೀತಾದೇವಿಯೆಂದು ಪ್ರಖ್ಯಾತಳಾದವಳು ಈಕೆಯನ್ನು ಬಿಡುವವನಾಗು ॥೫॥ ಎಲೈ ಮಹಾ ಬಲವಂತನಾದ ರಾವಣನೇ! ಧರ್ಮಿಷ್ಠನಾದ ರಾಜನು ಸಾಧಾರಣವಾಗಿ ಪರಭಾರ್ಯೆಯರನ್ನು ಹ್ಯಾಗೆ ಸ್ಪರ್ಶಿಸುವನು? (ಅಂದರೆ ಯಾರೂ ಸ್ಪರ್ಶಿಯುಂಗೈಯ್ಯುವದಿಲ್ಲ) ಅದರಲ್ಲಿಯೂ ವಿಶೇಷವಾಗಿ ರಾಜಸ್ತ್ರೀಯರನ್ನು ರಕ್ಷಿಸಬೇಕು, ಆದ್ದರಿಂದ ರಾಕ್ಷಸರಾಜನಾದ ನೀನು ಈ ನೀಚಬುದ್ಧಿಯಂ ಬಿಟ್ಟು ಇತರರು ನಿನ್ನನ್ನು ನಿಂದನೆಯಂ ಗೈಯ್ಯದಿರುವಂತೆ ಇರುವವನಾಗು, ಇಂಥಾ ನೀಚವ್ಯಾಪಾರವಂ ಮಾಡಬೇಡ, ಲೋಕದಲ್ಲಿ ಪುರುಷನು ತನ್ನ ಕುಟುಂಬಪೋಷಣೆಯನ್ನು ಯೆಂತುಗೈಯ್ಯುವನೋ, ಅದರಂತೆ ಇತರರ ಹೆಂಡತಿಯರನ್ನೂ ರಕ್ಷಿಸಬೇಕು, ಎಲೈ ಪುಲಸ್ತ್ಯವಂಶೋತ್ಪನ್ನನಾದ ರಾವಣನೇ, ಪ್ರಾಜ್ಞರು ಶಾಸ್ತ್ರಗಳಲ್ಲಿ ತಿಳಿಯಲ್ಪಡದಿದ್ದರೂ ರಾಜನನ್ನುದ್ದೇಶಿಸಿ ಧರ್ಮಾರ್ಥಕಾಮಂಗಳನ್ನು ಕುರಿತು ಪ್ರಯತ್ನವಂ ಗೈಯ್ಯುತ್ತಾರೆ; ಆದ್ದರಿಂದ ರಾಜನೇ ಧರ್ಮಾದಿಗಳುಂಟಾಗುವದಕ್ಕೆ ಕಾರಣಭೂತನು, ದ್ರವ್ಯಗಳಿಗೆಲ್ಲ ಉ

ದನ॥ ರಾಜಾಧರ್ಮಸ್ಯಕಾಮಸ್ಯದ್ರವ್ಯಾಣಾಂಚೋತ್ತಮೋನಿಧಿಃ। ಧರ್ಮಶ್ಶುಭಂವಾಪಾಪಂವಾರಾಜಮೂಲಂಪ್ರವರ್ತತೇ ॥೯॥
ಪಾಪಸ್ವಭಾವಶ್ಚಪಲಃ ಕಥಂತ್ವಂರಕ್ಷಸಾಂವರ। ಐಶ್ವರ್ಯಮಭಿಸಂಪ್ರಾಪ್ತೋ ವಿಮಾನಮಿವದುಷ್ಕೃತಿಃ।೧೦। ಕಾಮಂ
ಸ್ವಭಾವೋಯೋಯಸ್ಯನಶಕ್ಯಃಪರಿಮಾರ್ಜಿತುಂ। ನಹಿದುಷ್ಟಾತ್ಮನಾಮಾರ್ಯಮಾವಸತ್ಯಾಲಯೇಚಿರಂ॥೧೧॥ ವಿಷಯೇವಾ
ಪುರೇವಾತೇಯದಾರಾಮೋಮಹಾಬಲಃ। ನಾಪರಾಧ್ಯತಿಧರ್ಮಾತ್ಮಾ ಕಥಂತಸ್ಯಾಪರಾಧ್ಯಸಿ।೧೨। ಯದಿಶೂರ್ಪಣಖಾಹೇತೋ
ರ್ಜನಸ್ಥಾನಗತಃಖರಃ। ಅತಿವೃತ್ತೋಹತಃಪೂರ್ವಂರಾಮೇಣಾಕ್ಲಿಷ್ಟಕರ್ಮಣಾ। ಅತ್ರಬ್ರೂಹಿಯಥಾತತ್ತ್ವಂಕೋರಾ
ಮಸ್ಯವ್ಯತಿಕ್ರಮಃ। ಯಸ್ಯತ್ವಂಲೋಕನಾಥಸ್ಯಭಾರ್ಯಾಂಹೃತ್ವಾಗಮಿಷ್ಯಸಿ।೧೪॥ ಕ್ಷಿಪ್ರಂವಿಸೃಜವೈದೇಹೀಂಮಾ
ತ್ವಾಂಘೋರೇಣಚಕ್ಷುಷಾ। ದಹೇದ್ದಹನಭೂತೇನವೃತ್ರಮಿಂದ್ರಾಶನಿರ್ಯಥಾ॥೧೫॥ ಸರ್ಪಮಾಶೀವಿಷಂಬದ್ಧ್ವಾವಸ್ತ್ರಾಂತೇ

---

ಸ್ಯ-ಕಾಮಕ್ಕೂ, ಪ್ರವರ್ತಕಃ-ಪ್ರವರ್ತಕನು, ದ್ರವ್ಯಾಣಾಂ-ಧನಗಳಿಗೆ. ಉತ್ತಮೋನಿಧಿಃ-ಉತ್ತಮನಿಕ್ಷೇಪಸ್ವರೂಪನು, ಧರ್ಮಃ-ಧರ್ಮವು ಶುಭಂವಾ-ಸದಾಚಾರವು, ಪಾಪಂವಾ-ದುರಾಚಾರವು. ರಾಜಮೂಲಂ-ರಾಜನೇಮೂಲವಾಗಿ ಉಳ್ಳದ್ದಂತೆ. ಪ್ರವರ್ತತೇ-ಪ್ರವರ್ತಿಸುತ್ತದೆ ॥೯॥. ಹೇರಾಕ್ಷಸಾಂವರ-ಎಲೈ ರಾಕ್ಷಸರೊಳಗೆ ಶ್ರೇಷ್ಠನೇ. ಪಾಪಸ್ವಭಾವಃ-ಪಾಪಕೃತ್ಯದಲ್ಲಿ ಅಭಿಪ್ರಾಯವುಳ್ಳ, ಚಪಲಃ-ಚಂಚಲಚಿತ್ತನಾದ, ತ್ವಂ-ನೀನು, ದುಷ್ಕೃತಿಃ-ಪಾಪಿಷ್ಠನು, ವಿಮಾನಮಿವ-ದೇವತೆಗಳ ವಾಹನವನ್ನಂತೆ, ಐಶ್ವರ್ಯಂ-ಪ್ರಭುತ್ವವನ್ನು, ಯದ್ವಾ-ಐಶ್ವರ್ಯಂ-ಧನಸಮೃದ್ಧಿಯನ್ನು ಕಥಮಭಿಸಂಪ್ರಾಪ್ತಃ-ಹ್ಯಾಗೆ ಹೊಂದಿದ್ದೀಯಿ ॥೧೦॥ ಯಸ್ಯ-ಯಾವ ಪುರುಷನಿಗೆ, ಯಃಸ್ವಭಾವಃ-ಯಾವ ಸ್ವಭಾವವೋ. ಸಃಸ್ವಭಾವಃ-ಆ ಸ್ವಭಾವವು, ಕಾಮಂ-ಬಹಳವಾಗಿ, ಪರಿಮಾರ್ಜಿತುಂ-ಹೋಗಲಾಡಿಸುವದಕ್ಕೆ, ನಶಕ್ಯಃ-ಸಾಧ್ಯವಲ್ಲ, ಹಿ-ಯಾವ ಕಾರಣದ ದೆಶೆಯಿಂದ, ದುಷ್ಟಾತ್ಮನಾಂ-ದುರಾತ್ಮರ. ಆಲಯೇ-ಮನೆಗಳಲ್ಲಿ, ಆರ್ಯಂ-ಪೂಜ್ಯವಾದ ಪುಣ್ಯಕೃತ್ಯವು, ಚಿರಂ-ಬಹಳಕಾಲವು, ನಾವಸತಿ-ಇರುವದಿಲ್ಲವೊ ॥೧೧॥ ತೇ-ನಿನ್ನ. ಪುರೇ-ಪಟ್ಟಣದಲ್ಲಿಯೇ ಆಗಲಿ. ವಿಷಯೇವಾ-ರಾಜ್ಯದಲ್ಲಿಯೇ ಆಗಲಿ, ಯದಾ-ಯಾವಕಾಲದಲ್ಲಿ, ಮಹಾಬಲಃ-ಮಹಾಸಾಮರ್ಥ್ಯವುಳ್ಳ, ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಶ್ರೀರಾಮನು, ನಾಪರಾಧ್ಯತಿ-ಅಪರಾಧಮಾಡಲಿಲ್ಲ, ತದಾ-ಆ ಕಾಲದಲ್ಲಿ, ತಸ್ಯ-ಆ ಶ್ರೀರಾಮನಿಗೆ. ಕಥಮಪರಾಧ್ಯಸಿ-ಹ್ಯಾಗೆ ಅಪಕಾರವಂ ಮಾಡುತ್ತೀಯಿ ॥೧೨॥ ಶೂರ್ಪಣಖಾಹೇತೋಃ-ಶೂರ್ಪಣಖಾ ಎಂಬ ನಿಮಿತ್ತದಿಂದ. ಜನಸ್ಥಾನಗತಃ-ನಿನ್ನ ದೇಶದ ಎಲ್ಲೆಯಲ್ಲಿರಿಸಲ್ಪಟ್ಟ, ಖರಃ-ಖರಾಸುರನು, ಅತಿವೃತ್ತಃ-ಉಚಿತವನ್ನತಿಕ್ರಮಿಸಿದ ನಡವಳಿಕೆಯುಳ್ಳವನಾಗಿ, ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದ ವ್ಯಾಪಾರವುಳ್ಳ- ರಾಮೇಣ-ಶ್ರೀರಾಮನಿಂದ, ಪೂರ್ವಂ-ಮೊದಲು, ಹತೋಯದಿ-ಹೊಡೆಯಲ್ಪಟ್ಟವನೇ ಆದರೆ. ಅತ್ರ-ಈ ವಿಷಯದಲ್ಲಿ, ಯಥಾತತ್ತ್ವಂ-ಯಥಾರ್ಥವಾಗಿ, ಬ್ರೂಹಿ-ಹೇಳು. ರಾಮಸ್ಯ-ಶ್ರೀರಾಮನ, ವ್ಯತಿಕ್ರಮಃ-ಕೆಟ್ಟತನವು. ಕಃ-ಯಾವದು, ಲೋಕನಾಥಸ್ಯ-ಲೋಕಗಳಿಗೆ ಸ್ವಾಮಿಯಾದ, ಯಸ್ಯ-ಯಾವ ಶ್ರೀರಾಮನ, ಭಾರ್ಯಾಂ-ಹೆಂಡತಿಯನ್ನು, ತ್ವಂ-ನೀನು, ಹೃತ್ವಾ-ಅಪಹರಿಸಿಕೊಂಡು, ಗಮಿಷ್ಯಸಿ-ಹೋಗುವಿಯೋ ॥೧೪॥ ವೈದೇಹೀಂ-ಸೀತಾದೇವಿಯನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ವಿಸೃಜ-ಬಿಡು। ತ್ವಾಂ-ನಿನ್ನನ್ನು. ದಹನಭೂತೇನ-ಅಗ್ನಿಸ್ವರೂಪವಾದ, ಘೋರೇಣ-ಭಯಂಕರವಾದ ಚಕ್ಷುಷಾ-ನೇತ್ರದಿಂದ, ವೃತ್ರಂ-ವೃತ್ರಾಸುರನನ್ನು, ಇಂದ್ರಾಶನಿರ್ಯಥಾ-ದೇವೇಂದ್ರನ ವಜ್ರಾಯುಧದಂತೆ, ತ್ವಾಂ-ನಿನ್ನನ್ನು, ಮಾದಹೇತ್-ದಹಿಸಬ್ಯಾಡ॥

---

ತ್ತಮನಾದ ನಿಧಿಸ್ವರೂಪನು, ಆದಕಾರಣ ಧರ್ಮವಾಗಲೀ ಶುಭವಾಗಲೀ, ಪಾಪವಾಗಲೀ, ಯಾವದುಂಟಾಗಬೇಕಾದರೂ ರಾಜನಿಂದಲೇ ಉಂಟಾಗುವದು ।೯। ಹೀಗಿರುವಲ್ಲಿ ಮಹಾ ಚಪಲಚಿತ್ತನಾದ ನೀನು, ಪಾಪಿಷ್ಠನಾದವನು ದೇವತಾ ವಿಮಾನವನ್ನೇರಿದಂತೆ ಈ ಮಹದೈಶ್ವರ್ಯವನ್ನು ಯೆಂತು ಪಡದವನಾಗಿದ್ದೀ ॥೧೦। ಲೋಕದಲ್ಲಿ ಯಾವ ಯಾವ ಜನಗಳಿಗೆ ಯಾವ ಯಾವ ಬುದ್ಧಿಇರುವದೋ, ಯೆಂಥಾ ಸ್ವಭಾವವಿರುವದೋ, ಅದನ್ನು ಬದಲಾಯಿಸುವದಕ್ಕೆ ಯಾರಿಂದಲೂ ಆಗುವದಿಲ್ಲ. ಅಥವಾ ಅದನ್ನು ಪರಿಹಾರವಂ ಗೈದರೂ ಸ್ಥಿರವಾಗಿ ನಿಲ್ಲುವದಿಲ್ಲ. ಅದು ಹ್ಯಾಗಂದರೆ,—ದುಷ್ಟಜನಗಳಿಗೆ ಮಂದಿರದಲ್ಲಿ ಪುಣ್ಯಕರ್ಮಗಳನ್ನು ಮಾಡಿಸುವಂತೆ ಯಾರಾದರೂ ಬೋಧಿಸಿದರೂ ಶಾಶ್ವತವಾಗಿ ನಿಲ್ಲುವದೇ? ನಿಲ್ಲಲಾರದು ॥೧೧। ಎಲೈ ಪಾಪಿಯಾದ ದಶಕಂಠನೇ! ಧರ್ಮಾತ್ಮನಾದ ಶ್ರೀರಾಮನು; ನಿನ್ನ ಪುರದಲ್ಲಿಯೇ ಆಗಲಿ, ದೇಶದಲ್ಲಿಯೇ ಆಗಲೀ, ಯಾವಾಗಲಾದರೂ ಅಪಕಾರವಂ ಮಾಡಿದನೆ? (ಅಂದರೆ ಯೇನಪಕಾರವನ್ನೂ ಮಾಡಲಿಲ್ಲ) ಇಂತಿರುವಾಗ ನೀನು ಆತನಿಗೆ ಹ್ಯಾಗೆ ಅಪಕೃತಿಯನ್ನು ಮಾಡುವವನಾಗಿದ್ದೀ? ಆದರೆ (ಖರಸಂಹಾರದಿಂದ ನಾನೀರೀತಿ ಮಾಡುತ್ತೇನೆನ್ನುವಿಯೋ, ಅದು ಸರಿಯಾದದ್ದಲ್ಲ ಯಾಕಂದರೆ,—ಜನಸ್ಥಾನದಲ್ಲಿದ್ದ ಖರಾಸುರನು ಶೂರ್ಪನಖಿಯ ನಿಮಿತ್ತವಾಗಿ ಅಯೋಗ್ಯವಾದ ವ್ಯಾಪಾರವಂ ಗೈದದ್ದರಿಂದ ಹೊಡೆಯಲ್ಪಟ್ಟನು, ವೊಂದುವೇಳೆ ಇದೇನಾದರೂ ನಿನ್ನ ಮನದಲ್ಲಿದ್ದದ್ದಾದರೆ ಅದನ್ನಾದರೂ ಯಥಾರ್ಥವಾಗಿ ಹೇಳುವವನಾಗು, ಲೋಕನಾಥನಾದ ಯಾವ ಶ್ರೀರಾಮನ ಧರ್ಮಪತ್ನಿಯನ್ನು ನೀನು ಅಪಹರಿಸುತಲಿದ್ದೀಯೋ,

ತೇನಾವಬುಧ್ಯಸೇ । ಗ್ರೀವಾಯಾಂಪ್ರತಿಮುಕ್ತಂಚಕಾಲಪಾಶಂನಪಶ್ಯಸಿ ॥೧೬॥ ಸಭಾರಸ್ಸೌಮ್ಯಭರ್ತವ್ಯೋಯೋನರಂನಾವಸಾದಯೇತ್ । ತದನ್ನಮಪಿಭೋಕ್ತವ್ಯಂಜೀರ್ಯತೇಯದನಾಮಯಂ ॥೧೭॥ ಯತ್ಕೃತ್ವಾನಭವೇದ್ಧರ್ಮೋ ಕೀರ್ತಿರ್ನಯಶೋಭುವಿ । ಶರೀರಸ್ಯಭವೇತ್ಖೇದಃಕಸ್ತತ್ಕರ್ಮಸಮಾಚರೇತ್ ॥೧೮॥ ಷಷ್ಟಿರ್ವರ್ಷಸಹಸ್ರಾಣಿಮಮಜಾತಸ್ಯರಾವಣ । ಪಿತೃಪೈತಾಮಹಂರಾಜ್ಯಂಯಥಾವದನುತಿಷ್ಠತಃ । ವೃದ್ಧೋಹಂತ್ವಂಯುವಾಧನ್ವೀಸಶರಃಕವಚೀರಥೀ। ತಥಾಪ್ಯಾದಾಯವೈದೇಹೀಂಕುಶಲೀನಗಮಿಷ್ಯಸಿ ॥೨೦॥ ನಶಕ್ತಸ್ತ್ವಂಬಲಾದ್ಧರ್ತುಂವೈದೇಹೀಂಮಮಪಶ್ಯತಃ । ಹೇತುಭಿ

೧೫|| || ಆಶೀವಿಷಂ-ಕೋರೆಹಲ್ಲಿನಲ್ಲಿ ವಿಷವುಳ್ಳ, ಸರ್ಪಂ-ಹಾವಿನನ್ನು. ವಸ್ತ್ರಾಂತೇ-ಬಟ್ಟೆಯ ಸೆರಗಿನಲ್ಲಿ, ಬಧ್ವಾ-ಕಟ್ಟಿಕೊಂಡು, ನಾವಬುಧ್ಯಸೇ-ತಿಳಿಯದವನಾಗಿದ್ದೀಯೆ. ಗ್ರೀವಾಯಾಂ-ಕಂಠದಲ್ಲಿ. ಪ್ರತಿಮುಕ್ತಂ-ಕಟ್ಟಲ್ಪಟ್ಟ. ಕಾಲಪಾಶಂ-ಯಮಪಾಶವನ್ನು, ನಪಶ್ಯಸಿ-ಕಾಣದಿದ್ದೀಯೆ ||೧೬|| || ಹೇಸೌಮ್ಯ-ಎಲೋಸೌಮ್ಯನೇ, ಯಃ-ಯಾವಭಾರವು, ನರಂ-ಪುರುಷನನ್ನು ನಾವಸಾದಯೇತ್-ನಾಶಗೊಳಿಸುವದಿಲ್ಲವೋ, ಸಭಾರಃ-ಅಂಥಾಭಾರವು ಭರ್ತವ್ಯಃ-ಹೊರತಕ್ಕದ್ದು, ಯತ್-ಯಾವ ಅನ್ನವು, ಅನಾಮಯಂ-ರೋಗಜನಕವಾಗದಿರುವದೋ, ಜೀರ್ಯತೇಪಿ-ಜೀರ್ಣವಾಗುತದೋ. ತದನ್ನಂ-ಅಂಥಾ ಅನ್ನವು, ಭೋಕ್ತವ್ಯಂ-ಭೋಜನಮಾಡತಕ್ಕದ್ದು ||೧೭|| || ಯತ್-ಯಾವಕರ್ಮವನ್ನು, ಕೃತ್ವಾ-ಮಾಡಿ, ಧರ್ಮಃ-ಧರ್ಮವು, ನಭವೇತ್-ಆಗದಿರುವದೋ, ಕೀರ್ತಿಃ-ಐಶ್ವರ್ಯಜನಿತವಾದ ಪ್ರಸಿದ್ಧಿಯು, ನ-ಅಲ್ಲವೋ. ಭುವಿ-ಭೂಮಿಯಲ್ಲಿ, ಯಶೋವಾ-ಪುಣ್ಯವಂತನೆಂಬ ಯಶಸ್ಸಾದರೂ, ನ-ಇಲ್ಲವೋ. ಶರೀರಸ್ಯ-ಶರೀರಕ್ಕೆ, ಖೇದಃ-ಬಳಲಿಕೆಯು, ಭವೇತ್-ಆಗುವದೋ. ತತ್ಕರ್ಮ-ಅಂಥಾಕರ್ಮವನ್ನು, ಕಃ-ಯಾವಪುರುಷನು, ಸಮಾಚರೇತ್-ಮಾಡುವನು ||೧೮|| || ಹೇರಾವಣ-ಎಲೈ ರಾವಣನೇ. ಪಿತೃಪೈತಾಮಹಂ-ತಂದೆತಾತಂದಿರುಗಳಿಂದ ಆರ್ಜಿತಂ-ಸಂಪಾದಿಸಲ್ಪಟ್ಟ, ರಾಜ್ಯಂ-ರಾಜ್ಯವನ್ನು, ಯಥಾವತ್-ಯಥಾಶಾಸ್ತ್ರವಾಗಿ, ಅನುತಿಷ್ಠತಃ-ಆಧಿಪತ್ಯಮಾಡುತ್ತಿರುವ. ಜಾತಸ್ಯ-ಹುಟ್ಟಿದ. ಮಮ-ನನಗೆ, ಷಷ್ಟಿರ್ವರ್ಷಸಹಸ್ರಾಣಿ-ಅರವತ್ತುಸಾವಿರವರುಷಗಳು, ಗತಾನಿ-ಕಳೆದುಹೋದವು ||೧೯|| || ಇದಾನೀಂ-ಈಗ, ಅಹಂ-ನಾನು, ವೃದ್ಧಃ-ವೃದ್ಧನು, ತ್ವಂ-ನೀನು, ಯುವಾ-ಯೌವನಪುರುಷನು, ಧನ್ವೀ-ಧನುರ್ಧಾರಿಯಾಗಿದ್ದೀ, ಸಶರಃ-ಬಾಣಗಳಿಂದೊಡಗೂಡಿದವನು. ಕವಚೀ-ಕವಚವಂಧರಿಸಿದ್ದೀ, ರಥೀ-ರಥಾರೂಢನಾಗಿದ್ದೀಯೆ, ತಥಾಪಿ-ಹಾಗಾದರೂ. ವೈದೇಹೀಂ-ಸೀತಾದೇವಿಯನ್ನು, ಆದಾಯ-ತೆಗೆದುಕೊಂಡು. ಕುಶಲೀ-ಕ್ಷೇಮವಂತನಾಗಿ, ನಗಮಿಷ್ಯಸಿ-ಹೋಗಲಾರೆ||೨೦|| ತ್ವಂ-ನೀನು, ಮಮ-ನಾನು, ಪಶ್ಯತಸ್ಸತಃ-ನೋಡುತ್ತಿರುವನಾಗಲಾಗಿಯೇ, ನ್ಯಾಯಸಂಸಿದ್ಧೈಃ-ನ್ಯಾಯಶಾಸ್ತ್ರದಲ್ಲಿ ಪ್ರತಿಪಾದಿತಗಳಾದ, ಹೇತುಭಿಃ-

ಅಂಥಾ ಶ್ರೀರಾಮನಲ್ಲಿ ದುಡುಕುತನವು ಯಾವದಾದರೂ ಉಂಟೋ? ಯಾವದೂ ಇಲ್ಲ, ಆದ್ದರಿಂದ ಎಲೈ ರಾವಣನೇ! ಈ ಜನಕರಾಜ ಪುತ್ರಿಯಂ ಬಿಟ್ಟು ಓಡಿಪೋಗುವವನಾಗು, ಅಗ್ನಿಸದೃಶವಾದ ಫಾಲನೇತ್ರದಿಂದ ದಹಿಸಿಹೋದಂತೆ, ನೀನು ಬೆಂಕಿಯ ಕಿಡಿಗಳಂ ಕಕ್ಕುವ ನೇತ್ರದಿಂದ ಭಸ್ಮೀತನಾಗಬೇಡ, ಮಹಾ ವಿಷವುಳ್ಳ ಸರ್ಪವನ್ನು ಸೆರಗಿನಲ್ಲಿ ಕಟ್ಟಿಕೊಂಡು ತಿಳಿಯದಿರುವವನಂತೆ ತಿಳಿಯದವನಾಗಿದ್ದೀ, ಕೊರಳಿನಲ್ಲಿ ಬಂಧಿಸಲ್ಪಟ್ಟ ಕಾಲಪಾಶವನ್ನು ತಿಳಿಯದೇ ಹೋದೆ ।೧೬। ಎಲೈ ಕೋಪರಹಿತನಾದ ರಾವಣನೇ! ಲೋಕದಲ್ಲಿ ಯಾವದಾದರೂ ಒಂದು ಹೊರೆಯನ್ನು ಹೊರುವಾಗ, ಯಾವ ಭಾರವು ತನ್ನನ್ನು ಹೊರುವ ಪುರುಷನನ್ನು ನಾಶಂ ಗೈಯ್ಯಿಸುವದಿಲ್ಲವೋ, ಅಂಥಾ ಹೊರೆಯನ್ನೇ ಹೊತ್ತು ತರಬೇಕು, ಯಾವ ಅನ್ನವನ್ನು ಭೋಜನವಂ ಗೈದರೆ ರೋಗವನ್ನುಂಟುಮಾಡದ ಜೀರ್ಣವಾಗುವದೋ ಅಂಥಾ ಅನ್ನವನ್ನೇ ಭುಜಿಸಬೇಕು. (ಅಂದರೆ ತನ್ನ ಶಕ್ತಿ ಇದ್ದಮಟ್ಟಿಗೆ ಭಾರವನ್ನು ಹೊರಬೇಕು, ಮತ್ತು ಯೆಷ್ಟುಮಟ್ಟಿಗೆ ಗ್ರಾಸಂ ಗೈದರೆ ಜೀರ್ಣವಾಗುವದೋ ಅಷ್ಟುಮಾತ್ರವೇ ಭೋಜನವಂ ಮಾಡಬೇಕೇ ಹೊರತು ಹೆಚ್ಚಾಗಿ ಮಾಡಬಾರದೆಂದು ಭಾವವು) ।೧೭। ಎಲೈ ರಾವಣನೇ! ಯಾವ ಕಾರ್ಯವಂ ಗೈದರೆ ಧರ್ಮವಿಲ್ಲದಿರುವದೋ, ಪುಣ್ಯಹೀನವಾಗುವದೋ, ಅಂಥಾ ಪಾಪಕೃತ್ಯವನ್ನು ಯಾವ ಪುರುಷನಾದರೂ ಮಾಡುವನೇ? (ಯಾವನೂ ಮಾಡುವದಿಲ್ಲವೆಂದು ಭಾವವು) ಎಲೋ, ಎಲೋ, ರಾವಣನೇ! ಕೇಳುವವನಾಗು. ತಂದೆ ತಾತಂದಿರಿಂದ ಸಂಪಾದಿಸಲ್ಪಟ್ಟ ರಾಜ್ಯವನ್ನು ಧರ್ಮವಾಗಿ ಪರಿಪಾಲನೆಯಂ ಗೈಯ್ಯುತಲಿರುವ ನನಗೆ ಅರವತ್ತು ಸಾವಿರ ವರುಷಗಳು ಕಳೆದವು, ಈಗ ವೃದ್ಧನಾಗಿಧೇನೆ, ನೀನು ಯೌವನವಂತನು, ಧನುರ್ಬಾಣಂಗಳನ್ನೂ, ಕವಚವನ್ನೂ, ಖಡ್ಗವನ್ನೂ ಸಹ ಧರಿಸಿದವನಾಗಿ ರಥದಲ್ಲಿ ಕುಳಿತವನಾಗಿದ್ದೀ, ಆದರೂ ನಾನು ನೋಡುತಿರುವಾಗ ನನ್ನನ್ನು ತಿರಸ್ಕಾರವಂ ಗೈದು ಸೀತೆಯನ್ನು ತೆಗೆದುಕೊಂಡು ಕ್ಷೇಮವಾಗಿ ತೆರಳಲಾರೆ ।೨೦। ಎಲೈ ದಶಕಂಠನೇ! ನ್ಯಾಯಶಾಸ್ತ್ರಪ್ರತಿಪಾದಿತನಾದ ಅನುಮಾನಾದಿ ರೂಪ ಪ್ರಮಾಣಂಗಳಿಂದ ನಿಶ್ಚಿತವಾದ ಪ್ರಾಮಾಣ್ಯಜ್ಞಾನವುಳ್ಳ ಮತ್ತು ಸ್ವತಃ ಪ್ರಮಾಣಭೂತವಾದ ವೇದಶ್ರುತಿಯು ಶತಾತ್ಕಾರದಿಂದ ಯೆಂತು ಪರಿಹರಿಸಲಾಗದೋ, ಅಂತು ಬಲಾ

ನ್ನಾರ್ಯಸಂಯುಕ್ತೈರ್ಧ್ರುವಾಂವೇದಶ್ರುತೀಮಿವ ।೨೧। ಯುದ್ಧ್ಯಸ್ವಯದಿಶೂರೋಽಸಿಮುಹೂರ್ತಂತಿಷ್ಠರಾವಣ। ಶಯಿಷ್ಯಸೇಹತೋಭೂಮೌಯಥಾಪೂರ್ವಂಖರಸ್ತಥಾ ।೨೨॥ ಅಸಕೃತ್ಸಂಯುಗೇಯೇನನಿಹತಾದೈತ್ಯದಾನವಾಃ । ನಚಿರಾಚ್ಚೀರವಾಸಾಸ್ತ್ವಾಂರಾಮೋಯುಧಿವಧಿಷ್ಯತಿ ॥೨೩॥ ಕಿನ್ನುಶಕ್ಯಂಮಯಾಕರ್ತುಂಗತೌದೂರಂನೃಪಾತ್ಮಜೌ॥ ಕ್ಷಿಪ್ರಂತ್ವಂನಶ್ಯಸೇನೀಚತಯೋರ್ಭೀತೋನಸಂಶಯಃ ॥೨೪॥ ನಹಿಮೇಜೀವಮಾನಸ್ಯನಯಿಷ್ಯಸಿಶುಭಾಮಿಮಾಂ ॥ ಸೀತಾಂಕಮಲಪತ್ರಾಕ್ಷೀಂರಾಮಸ್ಯಮಹಿಷೀಂಪ್ರಿಯಾಂ ॥ ಅವಶ್ಯಂತುಮಯಾಕಾರ್ಯಂಪ್ರಿಯಂತಸ್ಯಮಹಾತ್ಮನಃ॥ಜೀವಿತೇನಾಪಿರಾಮಸ್ಯತಥಾದಶರಥಸ್ಯಚ ।೨೬। ತಿಷ್ಠತಿಷ್ಠದಶಗ್ರೀವಮುಹೂರ್ತಂಪಶ್ಯರಾವಣ॥ಯುದ್ಧಾತಿಥ್ಯಂಪ್ರದಾಸ್ಯಾಮಿಯಥಾಪ್ರಾಣಂನಿಶಾಚರ॥ವೃಂತಾದಿವಫಲಂತ್ವಾಂತುಪಾತಯೇಯಂರಥೋತ್ತಮಾತ್॥ -* ಪಂಚಾಶಸ್ಸರ್ಗಃ. *-

---

ಅನುಮಾನಾದಿರೂಪ ಪ್ರಮಾಣಗಳಿಂದ, ನಿಷ್ಠಾಂ-ನಿಶ್ಚಿತಪ್ರಾಮಾಣ್ಯವುಳ್ಳ, ವೇದಶ್ರುತೀಮಿವ-ಸ್ವತಃ-ಪ್ರಮಾಣಭೂತವಾದ ಶ್ರುತಿಯನ್ನಂತೆ, ಬಲಾತ್-ಬಲಾತ್ಕಾರದಿಂದ. ವೈದೇಹೀಂ-ಸೀತಾದೇವಿಯನ್ನು, ಹರ್ತುಂ-ತೆಗೆದುಕೊಂಡು ಹೋಗುವದಕ್ಕೆ, ನಶಕ್ತಃ-ಸಮರ್ಥನಲ್ಲ ॥೨೧॥ ॥ ಹೇರಾವಣ-ಎಲೈ ರಾವಣನೇ-ಶೂರಃ-ಪರಾಕ್ರಮಶಾಲಿಯು, ಅಸಿಯದಿ-ಆದವನೇ ಆದರೆ, ಯುದ್ಧ್ಯಸ್ವ-ಯುದ್ಧಮಾಡು, (ಅಂದರೆ-ಶ್ರೀರಾಮನೊಡನೆ ಕೂಡಿ ಯುದ್ಧಮಾಡು) ಯುದ್ಧ್ಯಸ್ವ-ಯುದ್ಧ್ಯಸ್ವ-ನನ್ನೊಡಗೂಡ ಯುದ್ಧಮಾಡು.) ಮುಹೂರ್ತಂ-ಮುಹೂರ್ತಕಾಲವು ತಿಷ್ಠ-ಇರು ಖರಃ-ಖರನು, ಪೂರ್ವಂ-ಮೊದಲು, ಯಥಾ-ಹ್ಯಾಗೆ. ಹತಃ-ಹೊಡೆಯಲ್ಪಟ್ಟನೋ. ತಥಾ-ಹಾಗೆಯೇ-ಹತಃ-ರಾಮನಿಂ ಹೊಡೆಯಲ್ಪಟ್ಟವನಾಗಿ, (ಯದ್ವಾ-ನನ್ನಿಂದಹೊಡೆಯಲ್ಪಟ್ಟವನಾಗಿ.) ಭೂಮೌ-ನೆಲದಲ್ಲಿ, ಶಯಿಷ್ಯಸೇ-ಮಲಗುತ್ತಲಿದ್ದೀಯೆ ॥೨೨॥ ॥ ಯೇನ-ಯಾವಶ್ರೀರಾಮನಿಂದ, ದೈತ್ಯದಾನವಾಃ-ದೈತ್ಯರೂ ದಾನವರೂ ಎಂಬ ರಾಕ್ಷಸಭೇದಗಳು, ಅಸಕೃತ್-ಬಾರಿಬಾರಿಗೂ, ಸಂಯುಗೇ-ಕಾಳಗದಲ್ಲಿ ನಿಹತಾಃ-ಸಂಹೃತರಾದರೋ, ಚೀರವಾಸಾಃ-ನಾರುಮಡಿಯೇ ವಸ್ತ್ರವಾಗುಳ್ಳ. ಸರಾಮಃ-ಆ ಶ್ರೀರಾಮನು, ತ್ವಾಂ-ನಿನ್ನನ್ನು. ಅಚಿರಾತ್-ಜಾಗ್ರತೆಯಾಗಿ, ಯುಧಿ-ಕಾಳಗದಲ್ಲಿ, ವಧಿಷ್ಯತಿ-ಸಂಹಾರಮಾಡುವನು ॥೨೩॥ ॥ ನೃಪಾತ್ಮಜೌ-ರಾಜಕುವರರಾದ ರಾಮ ಲಕ್ಷ್ಮಣರಿಬ್ಬರೂ, ದೂರಂಗತೌ-ದೂರದೇಶವಂಕುರಿತು ಹೋಗಿಧಾರೆ ಆಹರ್ತುಂ-ಕರೆದುಕೊಂಡು ಬರುವದಕ್ಕಾಗಿ, ಮಯಾ-ನನ್ನಿಂದ. ಕಿಂನಶಕ್ಯಂ-ಸಾಧ್ಯವೋಯೇನು. ( ಅಂದರೆ-ಸಾಧ್ಯವಲ್ಲ ; ಹೇನೀಚ-ಎಲೈ ಕ್ಷುದ್ರನೇ, ತಯೋಃ-ಅವರಿಬ್ಬರದೆಶೆಯಿಂದ. ಭೀತಃ-ಭಯಗೊಂಡವನಾಗಿ, ತ್ವಂ-ನೀನು. ಕ್ಷಿಪ್ರಂ-ಜಾಗ್ರತೆಯಾಗಿ. ನಶ್ಯಸೇ-ನಶಿಸಿಹೋಗುತ್ತೀಯೆ, ಸಂಶಯಃ-ಸಂಶಯವು. ನ-ಇಲ್ಲ ॥೨೪॥ ॥ ಮೇ-ನಾನು. ಜೀವಮಾನಸ್ಯಸತಃ-ಬದುಕಿರುವನಾಗುತ್ತಿರಲಾಗಿ, ಕಮಲಪತ್ರಾಕ್ಷೀಂ-ಕಮಲದಳಗಳಿಗೆ ಸಮಾನವಾದ ನೇತ್ರಗಳುಳ್ಳ, ರಾಮಸ್ಯ-ಶ್ರೀರಾಮನಿಗೆ ಪ್ರಿಯಾಂ-ಯಿಷ್ಟಳಾದ, ಮಹಿಷೀಂ-ಪಟ್ಟದರಾಣಿಯಾದ, ಶುಭಾಂ-ಶುಭಕರಳಾದ. ಇಮಾಂಸೀತಾಂ-ಈ ಸೀತಾದೇವಿಯನ್ನು, ನನಯಿಷ್ಯಸಿ-ತೆಗೆದುಕೊಂಡು ಹೋಗಲಾರೆ ॥೨೫॥ ॥ ಮಯಾ-ನನ್ನಿಂದ, ಮಹಾತ್ಮನಃ-ಮಹಾಧೈರ್ಯಶಾಲಿಯಾದ ತಸ್ಯರಾಮಸ್ಯ-ಆ ಶ್ರೀರಾಮನಿಗೂ, ತಥಾ-ಹಾಗೆಯೇ, ದಶರಥಸ್ಯ-ದಶರಥರಾಯನಿಗೂ, ಪ್ರಿಯಂ-ಹಿತವು, ಅವಶ್ಯಂ-ನಿಶ್ಚಯವಾಗಿ. ಜೀವಿತೇನಾಪಿ-ಪ್ರಾಣಗಳಕೊಂಬುವವರಿವಿಗೂ, ಕಾರ್ಯಂ-ಮಾಡತಕ್ಕದ್ದು ॥೨೬॥ ॥ ಹೇದಶಗ್ರೀವ-ಎಲೈ ರಾವಣನೇ. ಮುಹೂರ್ತಂ-ಮುಹೂರ್ತಕಾಲವು, ತಿಷ್ಠತಿಷ್ಠ-ನಿಲ್ಲುನಿಲ್ಲು, ಪಶ್ಯ-ನೋಡು, ಹೇರಾವಣ-ಎಲೈರಾವಣನೇ. ಹೇನಿಶಾಚರ-ಎಲೈರಾಕ್ಷಸನೇ. ಯುದ್ಧಾತಿಥ್ಯಂ-ಯುದ್ಧವೆಂಬ ಅತಿಥಿಸತ್ಕಾರದನ್ನು. ಯಥಾಪ್ರಾಣಂ-ಪ್ರಾಣಶಕ್ತಿಯಿದ್ದಷ್ಟು. ಪ್ರದಾಸ್ಯಾಮಿ-ಕೊಡುತ್ತೇನೆ. ವೃಂತಾತ್-ತೊಟ್ಟಿನದೆಶೆಯಿಂದ ಫಲಮಿವ-ಫಲವನ್ನಂತೆ. ತ್ವಾಂತು-ನಿನ್ನನ್ನಾದರೆ,

---

ತ್ಕಾರದಿಂದ ನನ್ನೆದುರಾಗಿ ಸೀತಾದೇವಿಯು ಅಪಹರಿಸಲ್ಪಡುವದಕ್ಕೆ ಆಗುವದಿಲ್ಲ ॥೨೧॥ ನೀನು ಶೂರನಾದವನಾದರೆ ನಮ್ಮ ಶ್ರೀರಾಮನ ಸಂಗಡ ಯುದ್ಧವಂ ಗೈಯ್ಯುವವನಾಗು (ಅಥವಾ ನನ್ನ ಸಂಗಡಲಾದರೂ ಯುದ್ಧವಂ ಮಾಡು) ಮುಹೂರ್ತಕಾಲವು ಇಲ್ಲಿಯೇ ನಿಲ್ಲುವವನಾಗು, ಪೂರ್ವದಲ್ಲಿ ಖರಾಸುರನು ಯೆಂತು ಹತನಾದನೋ ಅಂತು ಹತನಾಗಿ ನೆಲದಲ್ಲಿ ಮಲಗುವಿ ।೨೨। ಎಲೈ ರಾವಣನೇ! ಯಾವ ರಘುನಂದನನಿಂದ ದೈತ್ಯರೂ ದಾನವರೂ ರಾಕ್ಷಸರೂ ಎಂಬ ರಾಕ್ಷಸಜಾತೀಯರು, ಬಾರಿಬಾರಿಗೂ ರಣರಂಗದಲ್ಲಿ ಸಂಹಾರವಂಗೈಯ್ಯಲ್ಪಟ್ಟರೋ,ಅಂಥಾನಾರುವಸ್ತ್ರಗಳನ್ನುಟ್ಟಿರುವ ಶ್ರೀರಾಮನು ಜಾಗ್ರತೆಯಾಗಿನಿನ್ನಂಸಂಹರಿಸುವನು।೨೩।ರಾಜಪುತ್ರರಾದ ಅವರೀರ್ವರು ದೂರವಾಗಿ ಪೋಗಿಧಾರೆ,ಅವರನ್ನೀಗ ಕರೆದುಕೊಂಡು ಬರುವದಕ್ಕೆಆಗಲಾರದು,ಎಲೋ ನೀಚನೇ! ಅವರಿಗೆ ಭೀತನಾಗಿ ನೀನುತ್ವರೆಯಾಗಿ ನಾಶವನ್ನೈದುವವನಾಗುವೆ,ಎಲೊ,ಎಲೋ,ದುಷ್ಟನಾದರಾವಣನೇ! ನಾನು ಬದುಕಿರುವಾಗ,ನಮ್ಮಶ್ರೀರಾಮನ ಪಟ್ಟದರಸಿಯಾದಸೀತಾದೇವಿಯನ್ನು ನೀನುಬಲಾತ್ಕಾರದಿಂದ ತೆಗದುಕೊಂಡು ಪೋಗಲಾರೆ ।೨೪। ಮಹಾತ್ಮನಾದ ಶ್ರೀರಾಮನಿಗೂ ದಶರಥಮಹಾರಾಯನಿಗೂ ಸಹಾ ಯೆಂತು ಇಷ್ಟವಾಗುವದೋ ಅಂತು ನಾನು ಮಾಡತಕ್ಕದ್ದು, ಎಲೊ, ಎಲೋ, ನೀಚನೇ! ನಿಲ್ಲು ನಿಲ್ಲು; ಯುದ್ಧಾತಿಥ್ಯವಂ ಕೊ

ಇತ್ಯುಕ್ತಸ್ಯಯಥಾನ್ಯಾಯಂರಾವಣಸ್ಯಜಟಾಯುಷಾ। ಕ್ರುದ್ಧಸ್ಯಾಗ್ನಿನಿಭಾಸ್ಸರ್ವಾರೇಜುರ್ವಿಂಶತಿದೃಷ್ಟಯಃ॥೧॥ ಸಂರಕ್ತನಯನಃಕೋಪಾತ್ತಪ್ತಕಾಂಚನಕುಂಡಲಃ। ರಾಕ್ಷಸೇಂದ್ರೋಭಿದುದ್ರಾವಪತಗೇಂದ್ರಮಮರ್ಷಣಃ ।೨। ಸಸಂಪ್ರಹಾರಸ್ತುಮುಲಸ್ತಯೋಸ್ತಸ್ಮಿನ್ಮಹಾವನೇ। ಬಭೂವವಾತೋದ್ಧತಯೋರ್ಮೇಘಯೋರ್ಗಗನೇಯಥಾ ।೩॥ ತದ್ಬಭೂವಾದ್ಭುತಂಯುದ್ಧಂಗೃಧ್ರರಾಕ್ಷಸಯೋಸ್ತದಾ। ಸಪಕ್ಷಯೋರ್ಮಾಲ್ಯವತೋರ್ಮಹಾಪರ್ವತಯೋರಿವ॥೪॥ತತೋನಾಳೀಕನಾರಾಚೈಸ್ತೀಕ್ಷ್ಣಾಗ್ರೈಶ್ಚವಿಕರ್ಣಿಭಿಃ। ಅಭ್ಯವರ್ಷನ್ಮಹಾಘೋರೈರ್ಗೃಧ್ರರಾಜಂಮಹಾಬಲಃ॥೫॥ಸತಾನಿಶರಜಾಲಾನಿಗೃಧ್ರಃಪತ್ರರಥೇಶ್ವರಃ ಜಟಾಯುಃಪ್ರತಿಜಗ್ರಾಹರಾವಣಾಸ್ತ್ರಾಣಿಸಂಯುಗೇ।೬।ತಸ್ಯತೀಕ್ಷ್ಣನಖಾಭ್ಯಾಂತುಚರಣಾಭ್ಯಾಂಮಹಾಬಲಃ।ಚಕಾರಬಹುಧಾಗಾತ್ರೇವ್ರಣಾನ್ಪತಗಸತ್ತಮಃ॥೭॥ಅಥಕ್ರೋಧಾದ್ದಶಗ್ರೀವೋಜಗ್ರಾಹದಶಮಾರ್ಗಣಾನ್। ಮೃ

---

ರಥೋತ್ತಮಾತ್–ಉತ್ತಮವಾದ ರಥಪದೇಶದಿಂದ, ಪಾತಯಿಷ್ಯಾಮಿ–ಕೆಡಹುವೆನು ॥೨೮॥ —** ಪಂಚಾಶಸ್ಸರ್ಗಃ **—

ಇತಿ–ಈಪರಿಯಾಗಿ, ಜಟಾಯುಷಾ–ಜಟಾಯುವಿನಿಂದ ಯಥಾನ್ಯಾಯಂ–ಯುಕ್ತವಾಗಿ, ಉಕ್ತಸ್ಯ–ಹೇಳಲ್ಪಟ್ಟ, ಕ್ರುದ್ಧಸ್ಯ–ಕೋಪಿಷ್ಠನಾದ, ರಾವಣಸ್ಯ–ರಾವಣನ, ಸರ್ವಾಃ–ಸಮಸ್ತಗಳಾದ. ವಿಂಶತಿದೃಷ್ಟಯಃ–ಇಪ್ಪತ್ತು ಕಣ್ಣುಗಳೂ. ಅಗ್ನಿನಿಭಾಃ–ಬೆಂಕಿಗೆ ಸಮಾನಗಳಾಗಿ. ರೇಜುಃ–ಹೊಳೆಯುತ್ತಿದ್ದವು ॥೧॥ ಕೋಪಾತ್–ಕೋಪದದೆಶೆಯಿಂದ. ಸಂರಕ್ತನಯನಃ–ಕೆಂಗಣ್ಣುಗಳುಳ್ಳವನಾಗಿ, ತಪ್ತಕಾಂಚನಕುಂಡಲಃ–ಕಾಸಲ್ಪಟ್ಟ ಭಂಗಾರದ ಕರ್ಣಕುಂಡಲಗಳುಳ್ಳ, ರಾಕ್ಷಸೇಂದ್ರಃ–ರಾಕ್ಷಸಾಧಿಪತಿಯಾದ ರಾವಣನು, ಅಮರ್ಷಣಃ–ಕೋಪಗೊಂಡವನಾಗಿ, ಪತಗೇಂದ್ರಂ–ಪಕ್ಷಿರಾಜನಾದ ಜಟಾಯುವಿನನ್ನು, ಅಭಿದುದ್ರಾವ–ಅಟ್ಟಿಕೊಂಡುಬಂದನು. ॥೨॥ ತಸ್ಮಿನ್ಮಹಾವನೇ–ಆ ದೊಡ್ಡ ಅರಣ್ಯದಲ್ಲಿ, ಗಗನೇ–ಅಂತರಿಕ್ಷದಲ್ಲಿ, ವಾತೋದ್ಧತಯೋಃ–ಗಾಳಿಯಿಂದ ಹೊಡೆಯಲ್ಪಟ್ಟ ಮೇಘಯೋರ್ಯಥಾ–ಮೇಘಗಳಗಂತೆ. ತಯೋಃ–ಆಜಟಾಯು ರಾವಣರಿಬ್ಬರಿಗೂ, ತುಮುಲಃ–ಸಂಕುಲವಾದ, ಸಂಪ್ರಹಾರಃ–ಪೋಷಣೆಯುಳ್ಳ, ಬಭೂವ–ಆಯಿತು ॥೩॥ತದಾ–ಆ ಕಾಲದಲ್ಲಿ, ಸಪಕ್ಷಯೋಃ–ಪಕ್ಷಗಳಿಂದೊಡಗೂಡಿದ, ಮಾಲ್ಯವತೋಃ–ಮಾಲ್ಯವಂತರ್ಕ್ಷೆಂಬ ಹೆಸರುಗಳುಳ್ಳ, ಮಹಾಪರ್ವತಯೋರಿವ–ಮಹಾಬೆಟ್ಟಗಳಗಂತೆ, ಗೃಧ್ರರಾಕ್ಷಸಯೋಃ–ಜಟಾಯುರಾವಣರಿಗೆ, ಅದ್ಭುತಂ–ಆಶ್ಚರ್ಯಕರವಾದ, ತದ್ಯುದ್ಧಂ–ಅಂಥಾ ಯುದ್ಧವು. ಬಭೂವ–ಆಯಿತು ॥೪॥ ತತಃ–ಬಳಿಕ, ಮಹಾಬಲಃ–ಮಹಾಸಾಮರ್ಥ್ಯವುಳ್ಳ ರಾವಣನು, ನಾಳೀಕನಾರಾಚೈಃ–ನಾಳವಾತ್ರಶೇಷವಾಗುಳ್ಳ ಬಾಣಗಳಿಂದಲೂ, ಕಬ್ಬಿಣವಿಕಾರವಾದ ಬಾಣಗಳಿಂದಲೂ, ವಿಕರ್ಣಿಭಿಃ–ಅಂಕುಶಪ್ರಾಯವಾದ ಕೋಕಿಗಳುಳ್ಳ ಬಾಣವಿಶೇಷಗಳಿಂದಲೂ, ಮಹಾಘೋರೈಃ–ಮಹಾಭಯಂಕರವಾದ ಬಾಣಗಳಿಂದ, ಗೃಧ್ರರಾಜಂ–ಜಟಾಯುವಿನನ್ನು, ಅಭ್ಯವರ್ಷತ್–ಸುರಿಸಿದನು ॥೫॥ ಗೃಧ್ರಃ–ಹದ್ದಾದ. ಪತ್ರರಥೇಶ್ವರಃ–ಪಕ್ಷಿಗಳಿಗಧಿಪತಿಯಾದ. ಸಜಟಾಯುಃ–ಆ ಜಟಾಯುವು, ಸಂಯುಗೇ–ಕಾಳಗದಲ್ಲಿ, ತಾನಿಶರಜಾಲಾನಿ–ಆ ಬಾಣಸಂಘಗಳನ್ನು, ರಾವಣಾಸ್ತ್ರಾಣಿಚ–ರಾವಣಾಸುರನ ಅಸ್ತ್ರಗಳನ್ನು ಪ್ರತಿಜಗ್ರಾಹ–ಸಹಿಸಿಕೊಂಡನು ॥೬॥ ಮಹಾಬಲಃ–ಮಹಾಬಲಶಾಲಿಯಾದ, ಪತಗಸತ್ತಮಃ–ಜಟಾಯುವು, ತೀಕ್ಷ್ಣನಖಾಭ್ಯಾಂ–ಹದವಾದ ಉಗುರುಗಳುಳ್ಳ, ಚರಣಾಭ್ಯಾಂ–ಪಾದಗಳಿಂದ, ತಸ್ಯ–ಆ ರಾವಣನ, ಗಾತ್ರೇ–ಶರೀರದಲ್ಲಿ, ಬಹುಧಾ–ಬಹಳವಾಗಿ, ವ್ರಣಾನ್–ಘಾಯಗಳನ್ನು, ಚಕಾರ–ಮಾಡಿದನು॥೭॥ಅಥ–ಬಳಿಕ. ದಶಗ್ರೀವಃ–ರಾವಣನು, ಕ್ರೋಧಾತ್–ಕೋಪದದೆಶೆಯಿಂದ, ಶತ್ರುಮರ್ದನಾ

---

ಡುವೆನು, ನಿನ್ನನ್ನು ರಥದಿಂದ, ತೊಟ್ಟಸಿಂದಹಣ್ಣಿನನ್ನು ವೃಕ್ಷದಿಂಕೆಡಹುವಂತೆಕೆಡಹುವೆನುನೋಡೆಂದುನುಡಿದನು

—* ಆರಣ್ಯಕಾಂಡದಲ್ಲಿನ ೫೦ನೆಯ ಸರ್ಗಂ ಮುಗಿದುದು *—

ಈ ರೀತಿಯಲ್ಲಿ ಜಟಾಯುವು ನ್ಯಾಯವಾಗಿ ಆ ರಾವಣನಿಗೆ ನಿರೂಪಿಸಿದವನಾಗಲೂ, ಬಹು ಕೋಪಾಟೋಪವುಳ್ಳ ಆ ರಾವಣನ ಇಪ್ಪತ್ತು ದೃಷ್ಟಿಗಳು ಅಗ್ನಿಸದೃಶವಾಗಿ ಹೊಳೆದವು. ॥೧॥ ಅನಂತರದಲ್ಲಿ ಕೋಪೋದ್ರೇಕದಿಂದ ಕೆಂಗಣ್ಣುಗಳುಳ್ಳ ಆ ರಾಕ್ಷಸೇಂದ್ರನಾದ ರಾವಣನು ಬಹು ಕೋಪವುಳ್ಳವನಾಗಿ, ಪಕ್ಷೀಂದ್ರನಾದ ಆ ಜಟಾಯುವಿನನ್ನಟ್ಟಿಕೊಂಡು ಬಂದವನಾಗಲೂ, ಆ ಮಹದರಣ್ಯದಲ್ಲಿ ಆ ಜಟಾಯು ರಾವಣರೀರ್ವರಿಗೂ, ಗಗನಮಾರ್ಗದಲ್ಲಿ ಮಹಾ ಮೇಘಂಗಳಿಗೆ ಸಂಕುಲವಾದ ಹೊಡತೆಯುಂಟಾಗುವಂತೆ ಉಂಟಾದಂಥಾದ್ದಾಯಿತು, ಮತ್ತು ಆ ಸಮಯದಲ್ಲಿ ಪಕ್ಷಂಗಳಿಂ ದೊಡಗೂಡಿದ ಮಾಲ್ಯವತ್ಪರ್ವತಂಗಳಿಗೆ ಯುದ್ಧವಾಗುವಂದದಿ ಆ ಜಟಾಯುರಾವಣರೀರ್ವರಿಗೂ ಮಹತ್ತರವಾದ ಕಾಳಗವು ಸಂಭವಿಸಿದಂಥಾದ್ದಾಯಿತು ।೪। ಅನಂತರದಲ್ಲಿ ಮಹಾ ಸಾಮರ್ಥ್ಯವಂತನಾದ ರಾವಣಾಸುರನು ಗರಿಗಳು ಕಟ್ಟಿದ ಬಾಣಂಗಳಿಂದಲೂ ಸಿಡಿಗೋಲುಗಳಿಂದಲೂ ಸಹ, ಗೃಧ್ರರಾಜನಾದ ಆ ಜಟಾಯುವಿನನ್ನು ಹೊಡೆದವನಾಗಲೂ, ಆ ಪಕ್ಷೀಂದ್ರನಾದ ಜಟಾಯುವು, ರಣರಂಗದಲ್ಲಿ ಆ ರಾವಣನಿಂದ ಬಿಡಲ್ಪಡುವ ಬಾಣವರ್ಷಂಗಳನ್ನೂ ಅಸ್ತ್ರಸಮುದಾಯಗಳನ್ನೂ ಸಹ ಸಹಿಸಿಕೊಂಡವನಾಗಿ, ತೀಕ್ಷ್ಣವಾದ ತನ್ನ ನಖಂಗಳಿಂದಲೂ ಪಾದಂಗಳಿಂದಲೂ ಸಹ ಆ ರಾವಣನ ಶರೀರದಲ್ಲಿ ಅನೇಕವಾದ ಘಾಯಂಗಳಂ ಗೈದನು ।೭। ಅನಂತರದ

ತ್ಯುದಂಡನಿಭಾನ್ಘೋರಾನ್ಶತ್ರುಮರ್ದನಕಾಂಕ್ಷಯಾ ।೮। ಸತೈರ್ಬಾಣೈರ್ಮಹಾವೀರ್ಯಃ ಪೂರ್ಣಮುಕ್ತೈರಜಿಹ್ಮಗೈಃ ।
ಬಿಭೇದನಿಶಿತೈಸ್ತೀಕ್ಷ್ಣೈರ್ಗೃಧ್ರಂಘೋರೈಶ್ಶಿಲೀಮುಖೈಃ ॥೯॥ ಸರಾಕ್ಷಸರಥೇಪಶ್ಯನ್ಜಾನಕೀಂಬಾಷ್ಪಲೋಚನಾಂ। ಅ
ಚಿಂತಯಿತ್ವಾತಾನ್ಬಾಣಾನ್ರಾಕ್ಷಸಂಸಮಭಿದ್ರವತ್ ।೧೦॥ ತತೋಽಸ್ಯಸಶರಂಚಾಪಂಮುಕ್ತಾಮಣಿವಿಭೂಷಿತಂ । ಚರ
ಣಾಭ್ಯಾಂಮಹಾತೇಜಾಬಭಂಜಪತಗೇಶ್ವರಃ ॥೧೧। ತತೋಽನ್ಯದ್ಧನುರಾದಾಯರಾವಣಃಕ್ರೋಧಮೂರ್ಛಿತಃ । ವವರ್ಷಶ
ರವರ್ಷಾಣಿಶತಶೋಽಥಸಹಸ್ರಶಃ ।೧೨॥ ಶರೈರಾವಾರಿತಸ್ತಸ್ಯಸಂಯುಗೇಪತಗೇಶ್ವರಃ। ಕುಲಾಯಮುಪಸಂಪ್ರಾಪ್ತಃಪಕ್ಷೀ
ವಪ್ರಬಭೌತದಾ ॥೧೩। ಸತಾನಿಶರವರ್ಷಾಣಿಪಕ್ಷಾಭ್ಯಾಂಚವಿಧೂಯಚ । ಚರಣಾಭ್ಯಾಂಮಹಾವೀರ್ಯೋವ್ಯಾಧು
ನೋತ್ಪತಗೇಶ್ವರಃ॥೧೪॥ ಕಾಂಚನೋರಶ್ಛದಾನ್ದಿವ್ಯಾನ್ಪಿಶಾಚವದನಾನ್ಖರಾನ್। ತಾಂಶ್ಚಾಸ್ಯಜವಸಂಪನ್ನಾನ್ಜಘಾನ

---

ಕ್ಷಯಾ-ಶತ್ರುಸಂಹಾರದಲ್ಲಿ ಅಪೇಕ್ಷೆಯಿಂದ. ಘೋರಾನ್-ಭಯಂಕರವಾದ ಮೃತ್ಯುದಂಡನಿಭಾನ್-ಯಮದಂಡಗಳಿಗೆ ಸಮಾನವಾದ, ದಶ-ಮಾರ್ಗ ಣಾನ್-ಹತ್ತು ಬಾಣಗಳನ್ನು, ಜಗ್ರಾಹ-ತೆಗೆದುಕೊಂಡನು ॥೮॥ ಮಹಾವೀರ್ಯಃ-ಮಹಾ ಸಾಮರ್ಥ್ಯವಂತನಾದ ಸಃ-ಆ ರಾವಣನು. ಪೂರ್ಣಮು ಕ್ತೈಃ-ಸಂಪೂರ್ಣವಾಗಿ ಬಿಡಲ್ಪಟ್ಟ, ಅಜಿಹ್ಮಗೈಃ-ರುಜುವಾಗಿ ಹೋಗುತ್ತಿರುವ. ನಿಶಿತೈಃ-ಸಾಣೆ ಹಿಡಿಯಲ್ಪಟ್ಟ. ಶಿಲೀಮುಖೈಃ-ಶಲ್ಯಗಳೇಮುಖದ ಲ್ಲಿ ಉಳ್ಳ, ತೀಕ್ಷ್ಣೈಃ-ತೀಕ್ಷ್ಣಗಳಾಗ ಘೋರೈಃ-ಭಯಂಕರಗಳಾದ, ತೈರ್ಬಾಣೈಃ-ಆ ಬಾಣಗಳಿಂದ. ಗೃಧ್ರಂ-ಜಟಾಯುವಿನನ್ನು. ಬಿಭೇದ-ಭೇದಿ ಸಿದನು ॥೯॥ ಸಃ-ಆ ಜಟಾಯುವು, ರಾಕ್ಷಸರಥೇ-ರಾವಣನ ರಥದಲ್ಲಿ. ಬಾಷ್ಪಲೋಚನಾಂ-ಕಂಬನಿಗಳಿಂಕೂಡಿದ ನೇತ್ರಗಳುಳ್ಳ, ಜಾನಕೀಂ-ಸೀತಾದೇವಿ ಯನ್ನು, ಪಶ್ಯನ್-ನೋಡುತ್ತಿರುವನಾಗಿ, ತಾನ್ಬಾಣಾನ್-ಆ ಬಾಣಗಳನ್ನು ಅಚಿಂತಯಿತ್ವಾ-ಲಕ್ಷಿಸದೆ. ರಾಕ್ಷಸಂ-ರಾವಣನನ್ನು, ಸಮಭಿದ್ರವತ್-ಅ ಟ್ಟಿಕೊಂಡುಬಂದನು ॥೧೦॥ ತತಃ-ಬಳಿಕ, ಮಹಾತೇಜಾಃ-ಮಹಾಸಾಮರ್ಥ್ಯವಂತನಾದ, ಪತಗೇಶ್ವರಃ-ಪಕ್ಷಿರಾಜನಾದ ಜಟಾಯುವು. ಚರಣಾಭ್ಯಾಂ- ಪಾದಗಳಿಂದ, ಅಸ್ಯ-ಈ ರಾವಣನ, ಮುಕ್ತಾಮಣಿವಿಭೂಷಿತಂ-ಮುತ್ತುಗಳಿಂ ಪೋಣಿಸಲ್ಪಟ್ಟ, ಸಶರಂ-ಬಾಣದಿಂದೊಡಗೂಡಿದ, ಚಾಪಂ-ಬಿಲ್ಲಿನನ್ನು. ಬಭಂಜ-ಮುರಿದನು ॥೧೧॥ ತತಃ-ಬಳಿಕ, ರಾವಣಃ-ರಾವಣನು, ಕ್ರೋಧಮೂರ್ಛಿತಃ-ಕ್ರೋಧೋದ್ದೀಪಿತನಾಗಿ, ಅನ್ಯದ್ಧನುಃ-ಮತ್ತೊಂದುಬಿಲ್ಲಿ ನನ್ನು ಆದಾಯ-ತೆಗೆದುಕೊಂಡು, ಶತಶಃ-ನೂರುಪ್ರಕಾರವಾಗಿ, ಅಥ-ಬಳಿಕ. ಸಹಸ್ರಶಃ-ಸಾವಿರಪ್ರಕಾರವಾಗಿ, ಶರವರ್ಷಾಣಿ-ಬಾಣಗಳ ಮಳೆ ಗಳನ್ನು. ವವರ್ಷ-ಸುರಿಸಿದನು ॥೧೨॥ ಸಂಯುಗೇ-ಕಾಳಗದಲ್ಲಿ, ತಸ್ಯ-ಆ ರಾವಣನ-ಶರೈಃ-ಬಾಣಗಳಿಂದ, ಆವಾರಿತಃ-ಸುತ್ತುಕೊಳ್ಳಲ್ಪಟ್ಟ, ಪತ ಗೇಶ್ವರಃ-ಪಕ್ಷಿಶ್ರೇಷ್ಠನಾದ ಜಟಾಯುವು, ಕುಲಾಯಂ-ಗೂಡನ್ನು, ಉಪಸಂಪ್ರಾಪ್ತಃ-ಹೊಂದಿರುವ, ಪಕ್ಷೀವ-ಹಕ್ಕಿಯಂತೆ, ತದಾ-ಆಕಾಲದಲ್ಲಿ ಪ್ರಬ ಭೌ-ಹೊಳೆಯುತ್ತಿದ್ದನು ॥೧೩॥ ಮಹಾತೇಜಾಃ-ಬಹಳ ಸಾಮರ್ಥ್ಯವಂತನಾದ, ಸಃ-ಆ ಜಟಾಯುವು. ತಾನಿಶರವರ್ಷಾಣಿ-ಆ ಬಾಣ ವೃಷ್ಟಿಗಳ ನ್ನು, ಪಕ್ಷಾಭ್ಯಾಂ-ರೆಕ್ಕೆಗಳಿಂದ, ವಿಧೂಯ-ಕೊಡವಿ, ಚರಣಾಭ್ಯಾಂ-ಪಾದಗಳಿಂದ, ಅಸ್ಯ-ಈ ರಾವಣನ. ಮಹದ್ಧನುಃ-ದೊಡ್ಡಬಿಲ್ಲಿನನ್ನು, ಬಭಂಜ- ಮುರಿದನು ॥೧೪॥ ಮಹಾವೀರ್ಯಃ-ಬಹುಪರಾಕ್ರಮಿಯಾದ, ಪತಗೇಶ್ವರಃ-ಹಕ್ಕಿಗಳಿಗೆಲ್ಲಾ ರಾಜನಾದ, ಸಃ-ಆ ಜಟಾಯುವು, ಪಕ್ಷಾಭ್ಯಾಂ-ರೆಕ್ಕೆಗಳಿಂ ದ, ರಾವಣಸ್ಯ-ರಾವಣನ, ಅಗ್ನಿಸದೃಶಂ-ಅಗ್ನಿಗೆ ಸಮಾನವಾಗಿ, ದೀಪ್ತಂ-ಹೊಳೆಯುತ್ತಿರುವ, ಶರಾವರಂ-ಶ್ರೇಷ್ಠವಾದ ಕವಚವನ್ನು. ವ್ಯಾದುನೊ ತ್-ಕೊಡಹಿದನು, ಶರಾಸನವಿಕೀರ್ಣೇತು-ಆ ಪಾತದಲ್ಲಿ ರಾವಣನ, ಶರಾಸನಂ-ಧನುಸ್ಸಿನನ್ನು, ಬಭಂಜ-ಮುರಿದನು, ರಾವಣಂ-ರಾವಣನನ್ನು ವ್ಯಾಧು ನೋತ್-ಕಂಪಿಸುವವನನ್ನಾಗಿ ಮಾಡಿದನು ॥೧೫॥ ಬಲೀ-ಬಲವಂತನಾದ ಜಟಾಯುವು, ಸಮರೆ-ಕಾಳಗದಲ್ಲಿ, ಅಸ್ಯ-ಈ ರಾವಣನ, ಕಾಂಚನೋರಶ್ಛದಾನ್-

---

ಲ್ಲಿ ದಶಕಂಠನು ಶತ್ರುನಿಗ್ರಹವಂ ಗೈಯ್ಯಲಿಚ್ಛೆಯಿಂದ ಅತಿಕೋಪದಿಂದ, ಮಹಾ ಭಯಂಕರವಾದ ಮತ್ತೂ ಯಮದಂಡಕ್ಕೆ ಸಮಾನವಾದ ಹತ್ತು ನಿಡುಸರಳುಗಳಂ ಪಿಡಿದವನಾಗಿ, ಶ್ರೋತುಂಗಳಾವರಿವಿಗೂ ಕೋದಂಡವನ್ನು ಬಲವಾಗಿ ಸೆಳೆದು, ಆ ಬಾಣಂಗಳಿಂದ ಗೃಧ್ರರಾಜನಂ ಹೊಡದವನಾಗಲೂ, ಬಹು ಸಾಮರ್ಥ್ಯವಂತನಾದ ಆ ಜಟಾ ಯುವು ರಾವಣನ ರಥದಲ್ಲಿ ಕಂಬನಿಗಳಂ ಸುರಿಸುತಿರುವ ಪದ್ಮಾಕ್ಷಿಯಾದ ಆ ಸೀತಾದೇವಿಯುಂ ನೋಡುತ್ತಾ, ಆ ನಿ ಡುಗೋಲುಗಳನ್ನು ಲಕ್ಷಂಗೈಯ್ಯದೆ, ದಶಕಂಠನಿಗೆ ಮೇಲ್ವಾಯ್ದು ಬಂದು, ತನ್ನ ಪಾದಗಳಿಂದ ಆ ರಾವಣನ ಧ ನುರ್ದಂಡವನ್ನು ಭಂಜನವಂ ಗೈದನು ।೧೧॥ ಅನಂತರದಲ್ಲಿ ಆ ರಾವಣನು ಬಹು ಕೋಪೋದ್ದೀಪಿತನಾಗಿ, ಮ ತ್ತೊಂದು ಕೋದಂಡವಂ ತೆಗದುಕೊಂಡು, ಅನೇಕ ಬಾಣಂಗಳ ವರ್ಷವನ್ನು ಸರಿಸಿದವನಾಗಲೂ, ಆ ಸಮಯ ದಲ್ಲಿ ಜಟಾಯುವು ಆ ಬಾಣಂಗಳಿಂದ ಪರಿವೃತನಾಗಿ, ಗೂಡಲ್ಲಿ ಹೊಕ್ಕಿಕೊಂಡಿರುವ ಪಕ್ಷಿಯಂತೆ ಹೊಳೆಯುತ್ತಿದ್ದ ನು ।೧೩॥ ಸಮನಂತರ ಕಾಲದಲ್ಲಿ ಮಹಾ ಪರಾಕ್ರಮಶಾಲಿಯಾದ ಆ ಜಟಾಯುವು ಆ ಬಾಣಂಗಳ ವರ್ಷವನ್ನು ತನ್ನ ರೆಕ್ಕೆಗಳಿಂದ ಭಂಜನವಂ ಮಾಡಿ, ರಾವಣನ ಮಹತ್ತರವಾದ ಆ ಕೋದಂಡವನ್ನೂ ಸಹಾ ಮುರಿದು ಹಾಕಿ ದನು ।೧೪॥ ಈರೀತಿಯಲ್ಲಿ ಪಕ್ಷೀಂದ್ರನಾದ ಆ ಜಟಾಯುವು ಅಗ್ನಿಯಂತೆ ಹೊಳೆವ ಆ ರಾವಣನ ಬಿಲ್ಲನ್ನು ಮುರಿ ದು, ಬಹು ಸಾಮರ್ಥ್ಯವಂತನಾದ ಆ ರಾವಣನನ್ನು ಸಹಾ ಕಂಪಿಸುವಂತೆ ಮಾಡಿದನೆಂತೆನೆ,—ಬಲವಂತನಾದ

ಸಮುಖೀಬಲೀ ।೧೬। ವರಂ ತ್ರಿವೇಣುಸಂಪನ್ನಂ ಕಾಮಗಂ ಪಾವಕಾರ್ಚಿಷಂ । ಮಣಿಹೇಮವಿಚಿತ್ರಾಂಗಂ ಬಭಂಜ ಚ ಮಹಾರಥಂ ।೧೭। ಪೂರ್ಣಚಂದ್ರಪ್ರತೀಕಾಶಂ ಛತ್ರಂ ಚ ವ್ಯಜನೈಸ್ಸಹ । ಪಾತಯಾಮಾಸ ವೇಗೇನ ಗ್ರಾಹಿಭೀ ರಾಕ್ಷಸೈಸ್ಸಹ ।೧೮। ಸಾರಥೇಶ್ಚಾಸ್ಯ ವೇಗೇನ ತುಂಡೇನೈವ ಮಹಚ್ಛಿರಃ । ಪುನರ್ವ್ಯಪಾಹರಚ್ಛ್ರೀಮಾನ್ ಪಕ್ಷಿರಾಜೋ ಮಹಾಬಲಃ ।೧೯। ಸಭಗ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ । ಅಂಕೇನಾದಾಯ ವೈದೇಹೀಂ ಪಪಾತ ಭುವಿ ರಾವಣಃ ।೨೦। ದೃಷ್ಟ್ವಾ ನಿಪತಿತಂ ಭೂಮೌ ರಾವಣಂ ಭಗ್ನವಾಹನಂ । ಸಾಧು ಸಾಧ್ವಿತಿ ಭೂತಾನಿ ಗೃಧ್ರರಾಜಮಪೂಜಯನ್ ।೨೧। ಪರಿಶ್ರಾಂತಂ ತು ತಂ ದೃಷ್ಟ್ವಾ ಜರಯಾ ಪಕ್ಷಿಯೂಥಪಂ । ಉತ್ಪಪಾತ ಪುನರ್ಹೃಷ್ಟೋ ಮೈಥಿಲೀಂ ಗೃಹ್ಯ ರಾವಣಃ ।೨೨। ತಂ ಪ್ರಹೃಷ್ಟಂ ನಿಧಾಯಾಂಕೇ ಗಚ್ಛಂತಂ ಜನಕಾತ್ಮಜಾಂ । ಗೃಧ್ರರಾಜಸ್ಸಮುತ್ಪತ್ಯ ಸಮಭಿದ್ರುತ್ಯ ರಾವಣಂ । ಸಮಾವಾರ್ಯ ಮಹಾತೇಜಾ ಜಟಾಯುರಿದಮಬ್ರವೀತ್ ।೨೩। ವಜ್ರಸಂಸ್ಪರ್ಶಬಾಣಸ್ಯ ಭಾರ್ಯಾಂ ರಾಮಸ್ಯ ರಾವಣ । ಅಲ್ಪಬುದ್ಧೇ ಹರಸ್ಯೇ

---

ಭಂಗಾರದವಿಕಾರವಾದ ಕವಚಗಳುಳ್ಳ. ದಿವ್ಯಾನ್–ದೇವತಾಸಂಬಂಧವಾದ, ಪಿಶಾಚವದನಾನ್–ಪಿಶಾಚಮುಖಗಳಂತೆ ಮುಖಗಳುಳ್ಳ, ಜವಸಂಪನ್ನಾನ್–ವೇಗದಿಂ ಕೂಡಿಕೊಂಡಿರುವ, ಅಸ್ಯ–ಈ ರಾವಣನ. ಖರಾನ್ ಖರಾನ್–ಆ ರಥಾಶ್ವಗಳನ್ನು. ಜಘಾನ–ಹೊಡೆದನು ॥೧೬॥ ವರಂ–ಶ್ರೇಷ್ಠವಾದ, ತ್ರಿವೇಣುಸಂಪನ್ನಂ–ಈಚಲುಮರಗಳಿಂ ಕೂಡಿಕೊಂಡಿರುವ, ಕಾಮಗಂ–ಇಚ್ಛಾನುಸಾರವಾಗಿ ಹೋಗುತ್ತಿರುವ, ಪಾವಕಾರ್ಚಿಷಂ–ಅಗ್ನಿಜ್ವಾಲೆಯಂತೆ ಜ್ವಾಲೆಯುಳ್ಳ, ಮಣಿಹೇಮವಿಚಿತ್ರಾಂಗಂ–ರತ್ನಗಳಿಂದಲೂ ಭಂಗಾರದರೇಖೆಗಳಿಂದಲೂ ಚಿತ್ರವರ್ಣವಾದ ಅವಯವಗಳುಳ್ಳ, ಮಹಾರಥಂ–ದೊಡ್ಡರಥವನ್ನು, ಬಭಂಜ ಚ–ಮುರಿಯಲೂ ಮುರಿದನು ॥೧೭॥ ಪೂರ್ಣಚಂದ್ರಪ್ರತೀಕಾಶಂ–ಪೂರ್ಣಚಂದ್ರನಿಗೆ ಸಮಾನವಾದ, ಛತ್ರಂ ಚ–ಛತ್ರವನ್ನೂ, ವ್ಯಜನೈಸ್ಸಹ–ಚಾಮರಗಳೊಡಗೂಡ, ಗ್ರಾಹಿಭಿಃ–ಹಿಡಿದುಕೊಂಡಿರುವ, ಅಂದರೆ–ಛತ್ರಚಾಮರಗಳನ್ನು ಹಿಡಿದುಕೊಂಡಿರುವ, ರಾಕ್ಷಸೈಸ್ಸಹ–ರಕ್ಕಸರೊಡಗೂಡ, ವೇಗೇನ–ಪಕ್ಷವೇಗದಿಂದ. ಪಾತಯಾಮಾಸ–ಕೆಡಹಿದನು ॥೧೮॥ ಶ್ರೀಮಾನ್–ಶೌರ್ಯಸಂಪನ್ನನಾದ, ಮಹಾಬಲಃ–ಮಹಾಸಾಮರ್ಥ್ಯವಂತನಾದ, ಪಕ್ಷಿರಾಜಃ–ಹದ್ದುಗಳಿಗೆ ಅಧಿಪತಿಯಾದ ಜಟಾಯುವು, ತುಂಡೇನೈವ–ಮೂಗಿನಿಂದಲೇ. ಅಸ್ಯ–ಈ ರಾವಣನ, ಸಾರಥೇಃ–ಸಾರಥಿಯು, ಮಹತ್–ದೊಡ್ಡದಾದ, ಶಿರಃ–ಮಂಡೆಯನ್ನು, ಪುನಃ–ಮತ್ತು, ವ್ಯಪಾಹರತ್–ಖಂಡಿಸಿದನು ॥೧೯॥ ಸರಾವಣಃ–ಆ ರಾವಣನು, ಭಗ್ನಧನ್ವಾ–ಮುರಿಯಲ್ಪಟ್ಟ ಧನುಸ್ಸುಳ್ಳವನಾಗಿ, ವಿರಥಃ–ರಥಹೀನನಾಗಿ, ಹತಾಶ್ವಃ–ಹೊಡೆಯಲ್ಪಟ್ಟ ಕುದುರೆಯುಳ್ಳವನಾಗಿ, ಹತಸಾರಥಿಃ–ನಷ್ಟವಾದ ಸಾರಥಿಯುಳ್ಳವನಾಗಿ, ಅಂಕೇನ–ತೊಡೆಯಿಂದ, ವೈದೇಹೀಂ–ಸೀತಾದೇವಿಯನ್ನು, ಆದಾಯ–ತೆಗೆದುಕೊಂಡು, ಭುವಿ–ನೆಲದಲ್ಲಿ, ಪಪಾತ–ಬಿದ್ದನು ॥೨೦॥ ಭಗ್ನವಾಹನಂ–ಮುರಿಯಲ್ಪಟ್ಟ ರಥವುಳ್ಳ, ರಾವಣಂ–ರಾವಣನನ್ನು, ಭೂಮೌ–ನೆಲದಲ್ಲಿ, ನಿಪತಿತಂ–ಬಿದ್ದವನನ್ನಾಗಿ. ದೃಷ್ಟ್ವಾ–ಕಂಡು. ಭೂತಾನಿ–ಪ್ರಾಣಿಗಳು, ಸಾಧು ಸಾಧ್ವಿತಿ–ಒಳ್ಳೇದು ಒಳ್ಳೇದೆಂದು. ಗೃಧ್ರರಾಜಂ–ಜಟಾಯುವಿನನ್ನು. ಅಪೂಜಯನ್–ಶ್ಲಾಘಿಸಿದವು ॥೨೧॥ ರಾವಣಃ–ರಾವಣನು, ಜರಯಾ–ವಾರ್ಧಿಕಾವಸ್ಥೆಯಿಂದ, ಪರಿಶ್ರಾಂತಂ–ಬಳಲಿದ, ಪಕ್ಷಿಯೂಥಪಂ–ಪಕ್ಷಿರಾಜನಾದ. ತಂ–ಆ ಜಟಾಯುವಿನನ್ನು, ದೃಷ್ಟ್ವಾ–ಕಂಡು, ಹೃಷ್ಟಃ–ಸಂತೋಷಗೊಂಡವನಾಗಿ, ಮೈಥಿಲೀಂ–ಸೀತಾದೇವಿಯನ್ನು, ಗೃಹ್ಯ–ಹಿಡಿದುಕೊಂಡು, ಪುನಃ–ಮತ್ತು, ಉತ್ಪಪಾತ–ಹಾರಿದನು ॥೨೨॥ ಅಂಕೇ–ತೊಡೆಯಲ್ಲಿ, ಜನಕಾತ್ಮಜಾಂ–ಸೀತಾದೇವಿಯನ್ನು, ನಿಧಾಯ–ಇರಿಸಿಕೊಂಡು. ಗಚ್ಛಂತಂ–ಹೋಗುತ್ತಿರುವ. ಪ್ರಹೃಷ್ಟಂ–ಸಂತೋಷಗೊಂಡ. ತಂ ರಾವಣಂ–ಆ ರಾವಣನನ್ನು, ಮಹಾತೇಜಾಃ–ಮಹಾಪರಾಕ್ರಮಶಾಲಿಯಾದ, ಗೃಧ್ರರಾಜಃ–ಹದ್ದುಗಳಿಗೆ ಅಧಿಪತಿಯಾದ. ಜಟಾಯುಃ–ಜಟಾಯುವು. ಸಮು

---

ಆ ಜಟಾಯುವು ರಣರಂಗದಲ್ಲಿ ಆ ದಶಕಂಠನ ತೇರಿಗೆ ಕಟ್ಟಿದ ಸುವರ್ಣವಿಕಾರವಾದ ಕವಚಂಗಳುಳ್ಳ ಮತ್ತೂ ಪಿಶಾಚಗಳ ಮುಖಂಗಳಂದದಿ ಬಹು ಭಯಂಕರವಾದ ಮುಖಂಗಳುಳ್ಳ ಆತನ ರಥಾಶ್ವಂಗಳಂ ಹೊಡೆದು, ಅಗ್ನಿಯಂತೆ ಕಂಗೊಳಿಸುವ ಮತ್ತು ಸ್ವೇಚ್ಛೆಯಾಗಿ ಸಂಚರಿಸುತಲಿರುವ, ಸುವರ್ಣ ರೇಖೆಗಳಿಂದಲಂಕೃತವಾದ ಆ ಮಹತ್ತರವಾದ ರಥವಂ ಮುರಿದು, ಚಂದ್ರ ಸದೃಸವಾದ ಶ್ವೇತಚ್ಛತ್ರವನ್ನೂ ಚಾಮರಂಗಳನ್ನೂ ಸಹ ಭಂಜನವನ್ನೈದಿಸಿ, ಅವುಗಳಂ ಪಿಡಿದಿರುವ ರಾಕ್ಷಸರನ್ನು ಅತಿವೇಗದಿಂದ ಧ್ವಂಸವಂ ಮಾಡಿ, ತ್ರೋಟೀಪುಟದಿಂದ ಆ ರಾವಣನ ಸಾರಥಿಯು ಶಿರವನ್ನು ಖಂಡಿಸಿ ಕೆಡಹಿದನು ।೧೯। ಅನಂತರದಲ್ಲಿ ಭಗ್ನವಾದ ಕೋದಂಡವೂ, ರಥವೂ ಸಹ ಉಳ್ಳ ಮತ್ತು ಹತವಾದ ಕುದುರೆಗಳೂ ಸಾರಥಿಯೂ ಸಹಾ ಉಳ್ಳ ಆ ರಾವಣನು ತನ್ನ ತೊಡೆಯಿಂದ ಸೀತಾದೇವಿಯನ್ನು ತೆಗದುಕೊಂಡು ನೆಲದಲ್ಲಿ ಬಿದ್ದನು ।೨೦। ಈ ರೀತಿಯಲ್ಲಿ ವಿರಥನಾಗಿ ನೆಲದಲ್ಲಿ ಬಿದ್ದಿರುವ ಆ ರಾವಣನಂ ಕಂಡು ಸರ್ವ ಭೂತಂಗಳು ಆ ಜಟಾಯುವಿನಂ ಕುರಿತು, ಎಲೈ ಪಕ್ಷೀಂದ್ರನೇ! ಬಹು ಚೆನ್ನಾಗಿ ಹೊಡೆದವನಾದೆಂದು ಶ್ಲಾಘಿಸಿದರು ।೨೧। ಅನಂತರದಲ್ಲಿ ಆ ರಾವಣನು ವೃದ್ಧಾಪ್ಯದಿಂದ ಬಹು ಪರಿಶ್ರಾಂತನಾಗಿರುವ ಆ ಜಟಾಯುವಿನಂ ಕಂಡು, ಸಂತಸವನ್ನೈದಿದವನಾಗಿ, ಸೀತಾದೇವಿಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಪುನಃ ಗಗನಕ್ಕೆ ಹಾರಿದವನಾಗಲೂ, ಆ ಪತಗೇಂದ್ರನಾದ ಜಟಾಯುವು ಆ ರಾವಣನನ್ನಟ್ಟಿ ಓಡಿಬಂದು ಇಂತೆಂದನು

ನಾಂವಧಾಯಖಲುರಕ್ಷಸಾಂ ॥೨೪। ಸಮಿತ್ರಬಂಧುಸ್ಸಾಮಾತ್ಯಸ್ಸಬಲಸ್ಸಪರಿಚ್ಛದಃ । ವಿಷಪಾನಂಪಿಬಸ್ಯೈತತ್ಪಿಪಾಸಿತಇವೋದಕಂ ।೨೫॥ ಅನುಬಂಧಮಜಾನಂತಃಕರ್ಮಣಾಮವಿಚಕ್ಷಣಾಃ । ಶೀಘ್ರಮೇವವಿನಶ್ಯಂತಿಯಥಾತ್ವಂವಿನಶಿಷ್ಯಸಿ ।೨೬॥ ಬದ್ಧಸ್ತ್ವಂಕಾಲಪಾಶೇನಕ್ವಗತಸ್ತಸ್ಯಮೋಕ್ಷ್ಯಸೇ॥ ವಧಾಯಬಡಿಶಂಗೃಹ್ಯಸಾಮಿಷಂಜಲಜೋಯಥಾ॥೨೭॥ ನಹಿಜಾತುದುರಾಧರ್ಷೌಕಾಕುತ್ಸ್ಥೌತವರಾವಣ ॥ ಧರ್ಷಣಂಚಾಶ್ರಮಸ್ಯಾಸ್ಯಸ್ಷಮಿಷ್ಯೇತೇತುರಾಘವೌ ॥೨೮॥ ಯಥಾತ್ವಯಾಕೃತಂಕರ್ಮಭೀರುಣಾಲೋಕಗರ್ಹಿತಂ ॥ ತಸ್ಕರಾಚರಿತೋಮಾರ್ಗೋನೈಷವೀರನಿಷೇವಿತಃ॥೨೯॥ ಯುದ್ಧೇಯಸ್ಯಯದಿಶೂರೋಸಿಮುಹೂರ್ತಂತಿಷ್ಠರಾವಣ । ಶಯಿಷ್ಯಸೇಹತೋಭೂಮೌಯಥಾಭ್ರಾತಾಖರಸ್ತಥಾ ।೩೦। ಪರೇತ

ಕೃತ್ಯ-ಹಾರಿ, ಸಮಭಿದ್ರುತ್ಯ-ಅನುಸರಿಸಿ ಓಡಿಹೋಗಿ, ಸಮಾವಾರ್ಯ-ತಡೆಹಾಕಿ, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು ॥೨೩॥ ॥ ಹೇರಾವಣ-ಎಲೈ ರಾವಣನೇ, ಹೇಅಲ್ಪಬುದ್ಧೇ-ಎಲೈ ನೀಚಬುದ್ಧಿಯುಳ್ಳವನೇ, ರಕ್ಷಸಾಂ-ರಕ್ಕಸರ. ವಧಾಯ-ಸಂಹಾರಕ್ಕಾಗಿ, ವಜ್ರಸಂಸ್ಪರ್ಶಬಾಣಸ್ಯ-ವಜ್ರಾಯುಧಕ್ಕೆ ಸಮಾನವಾದ ಬಾಣಗಳುಳ್ಳ, ರಾಮಸ್ಯ-ಶ್ರೀರಾಮನಿಗೆ, ಭಾರ್ಯಾಂ-ಹೆಂಗಸಿಯಾದ, ಏನಾಂ-ಈ ಸೀತಾದೇವಿಯನ್ನು. ಹರಸಿಖಲು-ಅಪಹರಿಸುತ್ತೀಯಷ್ಟೆ ॥೨೪॥ ॥ ಸಮಿತ್ರಬಂಧುಃ-ಬಂಧುಸ್ನೇಹಿತರಿಂದಲೂ ಒಡಗೂಡಿದ, ಸಾಮಾತ್ಯಃ-ಮಂತ್ರಿಗಳಿಂ ಸಮೇತನಾದ, ಸಬಲಃ-ಸೈನ್ಯಸಮೇತನಾದ, ತ್ವಂ-ನೀನು, ಸಪರಿಚ್ಛದಃ-ಪರಿವಾರದಿಂದೊಡಗೂಡಿದವನಾಗಿ, ಪಿಪಾಸಿತಃ-ನೀರಡಿಕೆಯುಳ್ಳ ಪುರುಷನು ಉದಕಮಿವ-ನೀರಿನನ್ನಂತೆ, ಏತತ್ವಿಷಪಾನಂ-ಈ ವಿಷಯುಕ್ತವಾದ ರಸವನ್ನು, ಪಿಬಸಿ-ಪಾನಮಾಡುತ್ತಿ ॥೨೫॥ ॥ ತ್ವಂ-ನೀನು, ಯಥಾ-ಹ್ಯಾಗೆ, ವಿನಶಿಷ್ಯಸಿ-ನಶಿಸಿಹೋಗುತ್ತಿದ್ದೀಯೋ, ತಥಾ-ಹಾಗೆಯೇ, ಕರ್ಮಣಾಂ-ದುಷ್ಕರ್ಮಗಳ, ಅನುಬಂಧಂ-ಫಲವನ್ನು, ಅಜಾನಂತಃ-ಅರಿಯದಿರುವ, ಅವಿಚಕ್ಷಣಾಃ-ಮೂಢರು, ತಥಾ-ಹಾಗೆಯೇ, ಶೀಘ್ರಮೇವ-ಜಾಗ್ರತೆಯಾಗಿಯೇ, ವಿನಶ್ಯಂತಿ-ನಶಿಸಿಹೋಗುವರು ॥೨೬॥ ॥ ತ್ವಂ-ನೀನು. ಕಾಲಪಾಶೇನ-ಯಮಪಾಶದಿಂದ, ಬದ್ಧಃ-ಕಟ್ಟಲ್ಪಟ್ಟವನಾಗಿ, ಕ್ವದೇಶೇ-ಯಾವ ದೇಶಕ್ಕೆ ತಾನೆ, ಗತಃ-ಹೋದವನಾಗಿ. ಸಾಮಿಷಂ-ಮಾಂಸದಿಂದೊಡಗೂಡಿದ, ಬಡಿಶಂ-ಬಲೆಯನ್ನು ಗೃಹ್ಯ-ಹಿಡಿದುಕೊಂಡು. ವಧಾಯ-ಸಂಹಾರಕ್ಕೆ, ಜಲಜೋಯಥಾ-ಮೀನಿನಂತೆ, ತಸ್ಯ-ಆ ಶ್ರೀರಾಮನದೆಶೆಯಿಂದ, ಮೋಕ್ಷ್ಯಸೇ-ಬಿಡಲ್ಪಡುತ್ತೀಯೆ ॥೨೭॥ ॥ ಹೇರಾವಣ-ಎಲೈ ರಾವಣನೇ, ದುರಾಧರ್ಷೌ-ತಿರಸ್ಕರಿಸಲಸಾಧ್ಯರಾದ, ಕಾಕುತ್ಸ್ಥೌ-ಕಕುತ್ಸ್ಥವಂಶೋತ್ಪನ್ನರಾದ, ರಾಘವೌ-ರಾಮಲಕ್ಷ್ಮಣರು, ತವ-ನಿನ್ನ, ಅಸ್ಯಆಶ್ರಮಸ್ಯ-ಈ ಪರ್ಣಶಾಲೆಯ, (ಅಂದರೆ-ಪರ್ಣಶಾಲೆಯಲ್ಲಿರುವ ಸೀತಾದೇವಿಯ) ಧರ್ಷಣಂ-ತಿರಸ್ಕಾರವನ್ನು, ಜಾತು-ಎಂದಿಗೂ, ನಕ್ಷಮಿಷ್ಯೇತೇ-ಸಹಿಸಲಾರರು ॥೨೮॥ ॥ ಭೀರುಣಾ-ಭಯಶೀಲನಾದ, ತ್ವಯಾ-ನಿನ್ನಿಂದ. ಲೋಕಗರ್ಹಿತಂ-ಲೋಕದಲ್ಲಿ ನಿಂದಿತವಾದ, ಕರ್ಮ-ಪರದಾರಾಪಹರಣರೂಪವಾದ ಕೃತ್ಯವು. ಯಥಾ-ಹ್ಯಾಗೆ, ಕೃತಂ-ಮಾಡಲ್ಪಟ್ಟಿತೋ, ಏಷಮಾರ್ಗಃ-ಈ ಮಾರ್ಗವು. ತಸ್ಕರಾಚರಿತಃ-ಕಳ್ಳನಿಂದ ಮಾಡಲ್ಪಟ್ಟದ್ದು, ವೀರನಿಷೇವಿತಃ-ಶೂರನಿಂದ ಸೇವಿಸಲ್ಪಟ್ಟದ್ದು, ನ-ಅಲ್ಲ ॥೨೯॥ ॥ ಹೇರಾವಣ-ಎಲೈ ರಾವಣನೇ, ಶೂರಃ-ಶೂರನು ಅಸಿಯದಿ-ಆದವನಾದರೆ, ಮುಹೂರ್ತಂ-ಎರಡುಘಳಿಗೆ, ತಿಷ್ಠ-ಇರು, ಯುದ್ಧ್ಯಸ್ವ-ಯುದ್ಧಮಾಡು, ಭ್ರಾತಾ-ತಮ್ಮನಾದ, ಖರಃ-ಖರಾಸುರನು ಯಥಾ-ಹ್ಯಾಗೆಯೋ, ತಥಾ-ಹಾಗೆಯೇ, ಹತಃ-ಹೊಡೆಯಲ್ಪಟ್ಟವನಾಗಿ, ಭೂಮೌ-ನೆಲದಲ್ಲಿ. ಶಯಿಷ್ಯಸೇ-ಮಲಗುತ್ತೀಯೆ ॥೩೦॥ ॥ ಪುರು

॥೨೩। ಎಲೊ, ಎಲೋ, ದುಷ್ಟಬುದ್ಧಿಯುಳ್ಳ ದಶಕಂಠನೇ! ರಾಕ್ಷಸರ ಸಂಹಾರನಂ ಗೈಯ್ಯುವದಕ್ಕಾಗಿ ವಜ್ರಸದೃಶವಾದ ಬಾಣಂಗಳುಳ್ಳ ಶ್ರೀರಾಮನ ಧರ್ಮಪತ್ನಿಯಾದ ಈ ಸೀತಾದೇವಿಯನ್ನು ಅಪಹರಿಸಿಕೊಂಡು ಪೋಗುತ್ತೀಯಲ್ಲವೆ? ಸ್ನೇಹಿತರಿಂದಲೂ, ಬಂಧುಗಳಿಂದಲೂ, ಮಂತ್ರಿಗಳಿಂದಲೂ, ಸೇನೆಗಳಿಂದಲೂ, ಪರಿವಾರಕರಿಂದಲೂ ಒಡಗೂಡಿ ನೀನು, ಕುಡಿಯಬೇಕೆಂನಿಚ್ಛಿಸುವ ಪುರುಷನು ಜಲಪಾನವಂ ಗೈಯ್ಯುವಂತೆ ವಿಷಪಾನವಂ ಮಾಡುತ್ತೀ, ಎಲೈರಾವಣನೇ! ನೀನುಯೆಂತುನಾಶವನ್ನೈದುವಿಯೋ, ಅಂತುದುಷ್ಕರ್ಮದಫಲವನ್ನು ಅರಿಯದಮೂಢರುತ್ವರೆಯಾಗಿನಶಿಸಿ ಹೋಗುವರು ।೨೬। ಎಲೋ ನೀಚನೇ! ಯಮಪಾಶಬಂಧಿತನಾಗಿ ಯೆತ್ತಕಡೆಯಲ್ಲಿ ಓಡಿದರೂ, ಮಾಂಸಯುಕ್ತವಾದಬಲೆಯಂಪಿಡಿದವನಿಗೆಮೀನುಶಿಕ್ಕುವಂತೆ, ನಿನ್ನ ಸಂಹಾರಾರ್ಥವಾಗಿಹುಡುಕುವಆಶ್ರೀರಾಮನಿಗೆಯೆಂತಾದ್ದಾದರೂಶಿಕ್ಕಲೇ ಶಿಕ್ಕುವದೇ ಹೊರತುಬಿಡುಗಡೆಯನ್ನೈದುವವನಾಗಲಾರೆ!।೨೭॥ರಾವಣನೇ! ಕಕುತ್ಸ್ಥವಂಶೋತ್ಪನ್ನರಾದ ಆ ರಾಮಲಕ್ಷ್ಮಣರೀರ್ವರು, ನೀನೀ ಆಶ್ರಮದಲ್ಲಿ ಮಾಡಿದ ಸೀತಾದೇವಿಯ ಧರ್ಷಣವನ್ನು ಯೆಂದಿಗೂ ಸೈರಿಸಲಾರರು, ಭಯಶೀಲನಾದ ನಿನ್ನಿಂದ ಲೋಕನಿಂದಿತವಾದ ಪರದಾರಾಪಹಾರರೂಪವಾದ ಯಾವ ಕೃತ್ಯವು ಮಾಡಲ್ಪಟ್ಟಿತೋ, ಇದು ವೀರರಿಂದಸೇವಿಸಲ್ಪಡತಕ್ಕದ್ದಲ್ಲ, ಮತ್ತೇನಂದರೆಇದುಕಳ್ಳತನದಿಂದಮಾಡಲ್ಪಟ್ಟದ್ದೇಸರಿ। ಎಲೊ, ಎಲೋ, ನೀಚನಾದ ರಾವಣನೇ! ನೀನು ಶೂರನಾದರೆ ಮುಹೂರ್ತಮಾತ್ರವು ನಿಲ್ಲುವವನಾಗು, ಯುದ್ಧವಂ ಮಾಡು, ನಿನ್ನ ತಮ್ಮನಾದ ಖರಾಸುರನು ಹತನಾಗಿ ಯೆಂತುನೆಲದಲ್ಲಿ ಬಿದ್ದನೋ, ಅಂತು ನೀನು ಸಹಾ ಹತನಾಗಿ ನೆಲದಲ್ಲಿ ಮಲಗುವವನಾಗುವೆ ।೩೦। " ವಿನಾಶಕಾಲೆ ವಿಪರೀತಬುದ್ಧಿಃ " ಎಂಬಂತೆ ಪುರುಷನು ತನಗೆ

ಕಾಲೇಪುರುಷೋಯತ್ಕರ್ಮಪ್ರತಿಪದ್ಯತೇ ॥ ವಿನಾಶಾಯಾತ್ಮನೋಧರ್ಮ್ಯಂಪ್ರತಿಪನ್ನೋಸಿಕರ್ಮತತ್ ।೩೧। ಪಾಪಾನುಬಂಧೋವೈಯಸ್ಯಕರ್ಮಣಃಕರ್ಮಕೋನುತತ್ ॥ ಕುರ್ವೀತಲೋಕಾಧಿಪತಿಸ್ಸ್ವಯಂಭೂರ್ಭಗವಾನಪಿ ।೩೨। ಏವಮುಕ್ತ್ವಾಶುಭಂವಾಕ್ಯಂಜಟಾಯುಸ್ತಸ್ಯರಕ್ಷಸಃ ॥ ನಿಪಪಾತಭೃಶಂಪೃಷ್ಠೇದಶಗ್ರೀವಸ್ಯವೀರ್ಯವಾನ್ ॥೩೩॥ ತಂಗೃಹೀತ್ವಾನಖೈಸ್ತೀಕ್ಷ್ಣೈರ್ವಿದದಾರಸಮಂತತಃ ॥ ಅಧಿರೂಢೋಗಜಾರೋಹೋಯಥಾಸ್ಯಾದ್ದುಷ್ಟವಾರಣಂ ।೩೪। ವಿರರಾದನಖೈರಸ್ಯತುಂಡಂಪೃಷ್ಠೇಸಮರ್ಪಯನ್ ॥ ಕೇಶಾಂಶ್ಚೋತ್ಪಾಟಯಾಮಾಸನಖಪಕ್ಷಮುಖಾಯುಧಃ ।೩೫॥ ಸತಥಾಗೃಧ್ರರಾಜೇನಕ್ಲಿಶ್ಯಮಾನೋಮುಹುರ್ಮುಹುಃ । ಅಮರ್ಷಸ್ಫುರಿತೋಷ್ಠಸ್ಸನ್ಪ್ರಾಕಂಪತಸರಾವಣಃ ।೩೬। ಸಪರಿಷ್ವಜ್ಯವೈದೇಹೀಂವಾಮೇನಾಂಕೇನರಾವಣಃ ॥ ತಲೇನಾಭಿಜಘಾನಾಶುಜಟಾಯುಂಕ್ರೋಧಮೂರ್ಛಿತಃ ।೩೭॥ಜಟಾಯುಸ್ತಮಭಿಕ್ರಮ್ಯತುಂಡೇನಾಸ್ಯಖಗಾಧಿಪಃ ॥ ವಾಮಬಾಹೂನ್ದಶತದಾವ್ಯಪಾಹರದರಿಂದಮಃ ।೩೮। ಸಂಛಿನ್ನಬಾಹೋಸ್ಸದ್ಯೋವಬಾಹ

---

ಪುಃ-ಪುರುಷನು, ಪರೇತಕಾಲೇ-ಮರಣಕಾಲದಲ್ಲಿ, ಯತ್ಕರ್ಮ-ಯಾವ ಕರ್ಮವನ್ನು, ಪ್ರತಿಪದ್ಯತೇ-ಮಾಡುವನೋ, ಆತ್ಮನಃ-ತನ್ನ ವಿನಾಶಾಯ-ನಾಶಕ್ಕಾಗಿ, ಅಧರ್ಮ್ಯಂ-ಧರ್ಮಪ್ರಧಾನವಲ್ಲದಿರುವ, ತತ್ಕರ್ಮ-ಅಂಥಾ ಕರ್ಮವನ್ನು. ಪ್ರತಿಪನ್ನಃ-ಹೊಂದಿದವನು. ಅಸಿ-ಆದೆ ||೩೧|| || ಯಸ್ಯಕರ್ಮಣಃ-ಯಾವ ಕೃತ್ಯಕ್ಕೆ. ಪಾಪಾನುಬಂಧಃ-ಪಾಪರೂಪಫಲದ ಸಂಬಂಧವುಂಟಾಗುವದೋ, ಭಗವಾನ್-ಪೂಜ್ಯನಾದ. ಲೋಕಾಧಿಪತಿಃ-ಜಗಕ್ಕೆ ಅಧಿಪತಿಯಾದ, ಸ್ವಯಂಭೂಃ-ಬ್ರಹ್ಮದೇವರಾದರೂ ಕೋನು-ಯಾರುತಾನೆ. ತತ್ಕರ್ಮ-ಅಂಥಾ ಕರ್ಮವನ್ನು. ಕುರ್ವೀತ-ಮಾಡುವನು ||೩೨|| || ಏವಂ-ಈಪರಿಯಾಗಿ, ವೀರ್ಯವಾನ್-ಪರಾಕ್ರಮಶಾಲಿಯಾದ, ಜಟಾಯುಃ-ಜಟಾಯುವು, ಶುಭಂ-ಮಂಗಳಕರವಾದ, ವಾಕ್ಯಂ-ಮಾತನ್ನು. ಉಕ್ತ್ವಾ-ಹೇಳಿ, ದಶಗ್ರೀವಸ್ಯ-ದಶಕಂಠಗಳುಳ್ಳ, ತಸ್ಯರಕ್ಷಸಃ-ಆ ರಾವಣಾಸುರನ, ಪೃಷ್ಠೇ-ಬೆನ್ನಮೇಲೆ, ಭೃಶಂ-ಬಹಳವಾಗಿ, ನಿಪಪಾತ-ಬಿದ್ದನು ||೩೩|| || ಗಜಾರೋಹಃ-ಮಾವಟೀಕನು ದುಷ್ಟವಾರಣಂ-ದುಷ್ಟವಾದಾನೆಯನ್ನು, ಅಧಿರೂಢಃ-ಹತ್ತಿದವನು ಯಥಾ-ಹ್ಯಾಗೆ. ಸ್ಯಾತ್-ಆಗುವನೋ, ತಥಾ-ಹಾಗೆಯೇ, ತಂ-ಆ ರಾವಣನನ್ನು. ಗೃಹೀತ್ವಾ-ಹಿಡಿದುಕೊಂಡು, ತೀಕ್ಷ್ಣೈಃ-ಹದವಾಗುಳ್ಳ, ನಖೈಃ-ಉಗುರುಗಳಿಂದ. ಸಮಂತತಃ-ಎಲ್ಲಾಕಡೆ, ವಿದದಾರ-ಸೀಳಿಹಾಕಿದನು ||೩೪|| || ನಖಪಕ್ಷಮುಖಾಯುಧಃ-ಉಗುರುಗಳೂ ರೆಕ್ಕೆಗಳೂ ಮುಖವೇ ಆಯುಧವಾಗುಳ್ಳ ಜಟಾಯುವು. ಅಸ್ಯ-ಈ ರಾವಣನ. ಪೃಷ್ಠೇ-ಪೃಷ್ಠಭಾಗದಲ್ಲಿ, ತುಂಡಂ-ಮೂಗನ್ನು. ಸಮರ್ಪಯನ್-ಚುಚ್ಚಿದವನಾಗಿ, ನಖೈಃ-ಉಗುರುಗಳಿಂದಲೂ, ವಿದದಾರ-ಸೀಳಿಹಾಕಿದನು, ಕೇಶಾನ್ಚ-ಕೂದಲುಗಳನ್ನೂ. ಉತ್ಪಾಟಯಾಮಾಸ-ಕಿತ್ತುಹಾಕಿದನು ||೩೫|| || ತದಾ-ಆಪರಿಯಾಗಿ, ಗೃಧ್ರರಾಜೇನ-ಹದ್ದುಗಳಿಗಧಿಪತಿಯಾದ ಜಟಾಯುವಿನಿಂದ, ಮುಹುರ್ಮುಹುಃ-ಬಾರಿಬಾರಿಗೂ, ಕ್ಲಿಶ್ಯಮಾನಃ-ಬಾಧೆಗೊಳಿಸಲ್ಪಡುತ್ತಿರುವ, ಸರಾವಣಃ-ಆ ರಾವಣನು, ಅಮರ್ಷಸ್ಫುರಿತೋಷ್ಠಸ್ಸನ್-ಕೋಪದಿಂ ಚಲಿಸಲ್ಪಟ್ಟ ತುಟಿಗಳುಳ್ಳವನಾಗಿ, ಪ್ರಾಕಂಪತ-ನಡುಗಿದನು ||೩೬|| || ಸರಾವಣಃ-ಆ ರಾವಣನು, ಕ್ರೋಧಮೂರ್ಛಿತ-ಕ್ರೋಧದಿಂ ವ್ಯಾಪ್ತನಾಗಿ ವಾಮೇನಾಂಕೇನ-ಎಡತೊಡೆಯಿಂದ, ವೈದೇಹೀಂ-ಸೀತಾದೇವಿಯನ್ನು. ಪರಿಷ್ವಜ್ಯ-ಅಪ್ಪಿಕೊಂಡು, ತಲೇನ-ಅಂಗೈಯಿಂದ ಜಟಾಯುಂ-ಜಟಾಯುವಿನನ್ನು. ಆಶು-ಜಾಗ್ರತೆಯಾಗಿ, ಅಭಿಜಘಾನ-ಹೊಡೆದನು ||೩೭|| || ಖಗಾಧಿಪಃ-ಪಕ್ಷಿಗಳಿಗೆ ಅಧಿಪತಿಯಾದ, ಅರಿಂದಮಃ-ಶತ್ರುಸಂಹಾರಕನಾದ. ಜಟಾಯುಃ-ಜಟಾಯುವು, ತುಂಡೇನ-ಮೂಗಿನಿಂದ, ತಂ-ಆ ರಾವಣನನ್ನು. ಅಭಿಕ್ರಮ್ಯ-ಆಕ್ರಮಿಸಿ, ತದಾ-ಆಕಾಲದಲ್ಲಿ. ಅಸ್ಯ-ಈ ರಾವಣನ. ದಶ-ಹತ್ತಾದ, ವಾಮಬಾಹೂನ್-ಎಡಭುಜಗಳನ್ನು, ವ್ಯಪಾಹರತ್-ಅಪಹರಿಸಿದನು, (ಅಂದರೆ ಕತ್ತರಿಸಿದನು) ||೩೮|| || ಸಂಛಿನ್ನಬಾಹೋಃ-ಸಂಛಿನ್ನ-ಕತ್ತರಿಸಲ್ಪಟ್ಟ,

---

ಮರಣಕಾಲವು ಸಂಭವಿಸಿದಾಗ ಯೆಂತು ಕಾರ್ಯಂಗಳಂ ಗೈಯ್ಯುವನೋ, ಅಂತು ನೀನು ನಿನ್ನ ವಿನಾಶಕ್ಕಾಗಿ ಅಧರ್ಮವಾದ ಈ ವ್ಯಾಪಾರವಂ ಗೈದವನಾದೆ, ಲೋಕದಲ್ಲಿ ಯಾವ ಕೃತ್ಯಕ್ಕೆ ಪಾಪರೂಪವಾದ ಫಲದ ಸಂಬಂಧವುಂಟಾಗುವದೋ, ಅಂಥಾ ಕಾರ್ಯವನ್ನು ಜಗಕ್ಕೆಲ್ಲ ಅಧಿಪತಿಯಾದ ಭಗವಂತನಾದ ಚತುರ್ಮುಖ ಬ್ರಹ್ಮನಾದರೂ ಸರಿಯೇ ಅಥವಾ ಮತ್ಯಾವನಾದರು ತಾನೇ ಮಾಡುವರು (ಯಾರೂ ಮಾಡುವದಿಲ್ಲವೆಂದು ಭಾವವು) ।೩೧-೩೨। ಈ ರೀತಿಯಲ್ಲಿ ಮಹಾ ಸಾಮರ್ಥ್ಯವಂತನಾದ ಆ ಜಟಾಯುವು ರಾವಣನಿಗೆ ಒಳ್ಳೆಮಾತುಗಳಂ ಪೇಳುತ್ತಾ, ಅವನನ್ನಟ್ಟಿ ಬಂದವನಾಗಿ, ಮಾವಟಿಗಳು ದುಷ್ಟವಾದ ಆನೆಯನ್ನೇರಿ ಅದರ ಗರ್ವಭಂಜನವಂ ಗೈಯ್ಯುವದಕ್ಕಾಗಿ ಕುಂಭಸ್ಥಲವನ್ನೆಂತು ಸೀಳುವನೋ, ಅಂತು ಆ ರಾವಣನನ್ನು ಹಿಡಿದುಕೊಂಡು ತನ್ನ ನಖಂಗಳಿಂದ ಪರಚಿದವನಾಗಿ ಅವನ ಶರೀರವನ್ನೆಲ್ಲ ಸೀಳಿಹಾಕಿದನು ॥೩೪॥ ನಖಮುಖಂಗಳೇ ಆಯುಧವಾಗಿ ಉಳ್ಳ ಆ ಜಟಾಯುವು ಆ ರಾವಣನನ್ನಟ್ಟಿ ಬಂದು ಪುನಃ ಪೃಷ್ಠಭಾಗದಲ್ಲಿ ತ್ರೋಟೀಪುಟದಿಂದ ಕಚ್ಚಿ ಉಗುರುಗಳಿಂದಲೂ, ಸೀಳಿ, ಕೂದಲುಗಳನ್ನು ಕಿತ್ತುಹಾಕಿದನು ।೩೫॥ ಆ ರೀತಿಯಾಗಿ ಗೃಧ್ರರಾಜನಿಂದ ಬಾರಿಬಾರಿಗೂ ಕ್ಲೇಶಗೊಳಿಸಲ್ಪಟ್ಟವನಾಗಿ, ಆ ರಾವಣನು ಕೋಪದಿಂದ ತುಟಿಗಳಂ ಕಚ್ಚುತ್ತಾ ನಡುಗಿದವನಾಗಿ, ಸೀತಾದೇವಿಯನ್ನು ತೊಡೆಯಲ್ಲಿ ಸಿಲುಕಿಕೊಂಡು, ಅಂಗೈಯಿಂದ ಜಟಾಯುವಿನಂ ಹೊಡದವನಾಗಲೂ; ಪಕ್ಷೀಂದ್ರನಾದ ಜಟಾಯುವು ಆ ರಾವಣನ ಮೇಲ್ಹಾ

ವನ್ಸಹಸಾಭವನ್ ।ವಿಷಜ್ವಾಲಾವಲೀಯುಕ್ತಾವಲ್ಮೀಕಾದಿವಪನ್ನಗಾಃ ।೩೯।ತತಃ ಕ್ರೋಧಾದ್ದಶಗ್ರೀವಸ್ಸೀತಾಮುತ್ಸೃ
ಜ್ಯರಾವಣಃ । ಮುಷ್ಟಿಭ್ಯಾಂಚರಣಾಭ್ಯಾಂಚಗೃಧ್ರರಾಜಮಪೋಥಯತ್ ।೪೦। ತತೋಮುಹೂರ್ತಂಸಂಗ್ರಾಮೋಬ
ಭೂವಾತುಲವೀರ್ಯಯೋಃ। ರಾಕ್ಷಸಾನಾಂಚಮುಖ್ಯಸ್ಯಪಕ್ಷಿಣಾಂಪ್ರವರಸ್ಯಚ ।೪೧। ತಸ್ಯವ್ಯಾಯಚ್ಛಮಾನಸ್ಯರಾ
ಮಸ್ಯಾರ್ಥೇಽಥರಾವಣಃ । ಪಕ್ಷೌಪಾರ್ಶ್ವೌಚಪಾದೌಚಖಡ್ಗಮುದ್ಧೃತ್ಯಸೋಽಚ್ಛಿನತ್।೪೨। ಸಚ್ಛಿನ್ನಪಕ್ಷಸ್ಸಹಸಾ
ರಕ್ಷಸಾರೌದ್ರಕರ್ಮಣಾ।ನಿಪಪಾತಹತೋಗೃಧ್ರೋಧರಣ್ಯಾಮಲ್ಪಜೀವಿತಃ।೪೩।ತಂದೃಷ್ಟ್ವಾಪತಿತಂಭೂಮೌಕ್ಷತಜಾ
ರ್ದ್ರಂಜಟಾಯುಷಂ । ಅಭ್ಯಧಾವತವೈದೇಹೀಸ್ವಬಂಧುಮಿವದುಃಖಿತಾ ।೪೪। ತಂನೀಲಜೀಮೂತನಿಕಾಶಕಲ್ಪಂಸು
ಪಾಂಡುರೋರಸ್ಕಮುದಾರವೀರ್ಯಂ । ದದರ್ಶಲಂಕಾಧಿಪತಿಃಪೃಥಿವ್ಯಾಂಜಟಾಯುಷಂಶಾಂತಮಿವಾಗ್ನಿದಾವಂ ।೪೫।

---

ಬಾಹೋಃ-ಭುಜಗಳುಳ್ಳ ಆ ರಾವಣನದೇಹದಿಂದ, ಬಾಹವಃ-ಭುಜಗಳು, ಸದ್ಯಏವ-ಆಗಲೇ, ಸಹಸಾ-ಜಾಗ್ರತೆಯಾಗಿ. ವಿಷಜ್ವಾಲಾವಲೀಯು
ಕ್ತಾಃ-ವಿಷವಿಶ್ರವಾದ ಉರಿಗಳಪಙ್ಕ್ತಿಯಿಂದ ಕೂಡಿಕೊಂಡಿರುವ, ಪನ್ನಗಾಃ-ಹಾವುಗಳು, ವಲ್ಮೀಕಾದಿವ-ಹುತ್ತದದೆಸೆಯಿಂದಂತೆ, ಅಭವನ್-ಹುಟ್ಟಿ
ದವು ॥೩೯॥ ತತಃ-ಬಳಿಕ, ದಶಗ್ರೀವಃ-ಹತ್ತು ಕಂಠಗಳುಳ್ಳ, ರಾವಣಃ-ರಾವಣನು, ಸೀತಾಂ-ಸೀತಾದೇವಿಯನ್ನು ಉತ್ಸೃಜ್ಯ-ಬಿಟ್ಟು, ಕ್ರೋಧಾ
ತ್-ಕೋಪದದೆಸೆಯಿಂದ. ಮುಷ್ಟಿಭ್ಯಾಂ-ಹಿಡಿಗಳಿಂದಲೂ, ಚರಣಾಭ್ಯಾಂಚ-ಕಾಲುಗಳಿಂದಲೂ, ಗೃಧ್ರರಾಜಂ-ಹದ್ದುಗಳಿಗೆ ರಾಜನಾದ ಜಟಾಯುವಿ
ನನ್ನು, ಅಪೋಥಯತ್-ತುಳಿದನು ॥೪೦॥ ತತಃ-ಬಳಿಕ. ಅತುಲವೀರ್ಯಯೋಃ-ಸಮಾನವಿಲ್ಲದ ಪರಾಕ್ರಮವುಳ್ಳ, ರಾಕ್ಷಸಾನಾಂಚ-ರಕ್ಕಸರೊಳಗೆ,
ಮುಖ್ಯಸ್ಯ-ಮುಖ್ಯನಾದ ರಾವಣನಿಗೆ, ಪಕ್ಷಿಣಾಂ-ಹಕ್ಕಿಗಳಿಗೆ, ಪ್ರವರಸ್ಯ-ಶ್ರೇಷ್ಠನಾದ ಜಟಾಯುವಿಗೂ, ಉಭಯೋಃ-ಇಬ್ಬರಿಗೂ, ಮುಹೂ
ರ್ತಂ-ಒಂದು ಮುಹೂರ್ತಕಾಲವು, ಸಂಗ್ರಾಮಃ-ಕಾಳಗವು. ಬಭೂವ-ಆಯಿತು ॥೪೧॥ ಸಃ-ರಾವಣಃ-ಪ್ರಸಿದ್ಧನಾದ, ಆ ರಾವಣನು, ರಾಮಸ್ಯಾ
ರ್ಥೇ-ಶ್ರೀರಾಮನ ನಿಮಿತ್ತವಾಗಿ, ವ್ಯಾಯಚ್ಛಮಾನಸ್ಯ-ಪ್ರಯಾಸದಿಂ ಯುದ್ಧವ್ಯಾಪಾರವಂ ಮಾಡುತ್ತಿರುವ, ತಸ್ಯ-ಆ ಜಟಾಯುವಿನ. ಪಕ್ಷೌ-ರೆಕ್ಕೆ
ಗಳನ್ನು, ಪಾರ್ಶ್ವೌ-ಪಕ್ಷಮೂಲಗಳನ್ನೂ, ಪಾದೌಚ-ಚರಣಗಳನ್ನು, ಖಡ್ಗಂ-ಕತ್ತಿಯನ್ನು. ಉದ್ಧೃತ್ಯ-ಮ್ಯಾಲಕ್ಕೆ ಎತ್ತಿಕೊಂಡು, ಅಚ್ಛಿನತ್-
ಕತ್ತರಿಸಿದನು ॥೪೨॥ ರೌದ್ರಕರ್ಮಣಾ-ಕ್ರೂರವ್ಯಾಪಾರವುಳ್ಳ, ರಕ್ಷಸಾ-ರಾವಣಾಸುರನಿಂದ, ಛಿನ್ನಪಕ್ಷಃ-ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ, ಹತಃ-
ಹೊಡೆಯಲ್ಪಟ್ಟ, ಸಗೃಧ್ರಃ-ಆ ಜಟಾಯುವು. ಅಲ್ಪಜೀವಿತಃ-ಸ್ವಲ್ಪಕಾಲದಲ್ಲಿರತಕ್ಕ ಪ್ರಾಣಗಳುಳ್ಳವನಾಗಿ, ಧರಣ್ಯಾಂ-ಭೂಮಿಯಲ್ಲಿ, ಸಹಸಾ-
ಜಾಗ್ರತೆಯಾಗಿ. ನಿಪಪಾತ-ಬಿದ್ದನು ॥೪೩॥ ಭೂಮೌ-ನೆಲದಲ್ಲಿ, ಪತಿತಂ-ಬಿದ್ದಿರುವ. ಕ್ಷತಜಾರ್ದ್ರಂ-ರಕ್ತದಿಂ ತೋಯಿಸಿಹೋದ, ತಂಜಟಾಯು
ಷಂ-ಆ ಜಟಾಯುವಿನನ್ನು. ದೃಷ್ಟ್ವಾ-ಕಂಡು, ವೈದೇಹೀ-ಸೀತಾದೇವಿಯು, ದುಃಖಿತಾ-ವ್ಯಸನಪಡುತ್ತಿರುವಳಾಗಿ. ಸ್ವಬಂಧುಮಿವ-ತನ್ನ ಬಂಧುಜನವ
ನ್ನಂತೆ, ಅಭ್ಯಧಾವತ-ಓಡಿಬಂದಳು ॥೪೪॥ ಲಂಕಾಧಿಪತಿಃ-ರಾವಣನು, ನೀಲಜೀಮೂತನಿಕಾಶಕಲ್ಪಂ-ನೀಲಮೇಘಕ್ಕೆ ಸಮಾನವಾದ ಪ್ರಕಾಶವುಳ್ಳ,
ಸುಪಾಂಡುರೋರಸ್ಕಂ-ಬೆಳ್ಳಗಿರುವ ಎದೆಯುಳ್ಳ, ಉದಾರವೀರ್ಯಂ-ಮಹಾಪರಾಕ್ರಮಶಾಲಿಯಾದ, ಜಟಾಯುಷಂ-ಜಟಾಯುವಿನನ್ನು, ಪೃಥಿವ್ಯಾಂ-
ನೆಲದಲ್ಲಿ, ಶಾಂತಂ-ತಣ್ಣಗಾಗಿರುವ, ಅಗ್ನಿದಾವಮಿವ-ಕಾಡುಕಿಚ್ಚಿನತೆರದಿ, ದದರ್ಶ-ಕಂಡನು ॥೪೫॥ ॥ತತಃ-ಬಳಿಕ ಜನಕಾತ್ಮಜಾ-ಜನಕರಾಯನಕುವರಿಯಾದ,

---

ಯುದ್ಧಬಂದು ಆಗ ಅವನ ಹತ್ತುತೋಳುಗಳನ್ನು ತನ್ನ ತ್ರೋಟೀಪುಟದಿಂದ ಕಚ್ಚಿ ಕತ್ತರಿಸಿದನು ।೩೮। ಈರೀ
ತಿಯಾಗಿ ಭೇದಿಸಲ್ಪಟ್ಟ ಭುಜಂಗಳುಳ್ಳ ಆ ರಾವಣನ ದೆಸೆಯಿಂದ ಆ ಭುಜಂಗಳು, ವಿಷಜ್ವಾಲೆಗಳಿಂದ ಯುಕ್ತವಾದ
ಮಹಾ ಸರ್ಪಂಗಳು ಹುತ್ತದಿಂದ ಹೊರಡುವಂತೆ, ತತ್ಕ್ಷಣದಲ್ಲಿ ಹುಟ್ಟಿ ಹೊರಗೆ ಕಂಡು ಬಂದವು ।೩೯। ಅನಂ
ತರದಲ್ಲಿ ದಶಕಂಠನು ಸೀತಾದೇವಿಯಂ ಬಿಟ್ಟು ಬಹು ಕೋಪದಿಂದ, ಆ ಜಟಾಯುವಿನನ್ನು ತನ್ನ ಮುಷ್ಟಿಗಳಿಂದ
ಗುದ್ದುತ್ತಲೂ, ಪಾದಗಳಿಂದ ತುಳಿಯುತ್ತಲೂ ಇದ್ದನು ।೪೦। ಅನಂತರದಲ್ಲಿ ಮಹಾ ಪರಾಕ್ರಮಶಾಲಿಗಳಾದ
ಆ ರಾಕ್ಷಸೇಂದ್ರನಿಗೂ ಪಕ್ಷೀಂದ್ರನಿಗೂ ಸಹ ಮಹತ್ತರವಾದ ಕಾಳಗವು ಮುಹೂರ್ತಮಾತ್ರವು ಸಂಭವಿಸಿದಂ
ತಾದ್ದಾಯಿತು ।೪೧। ಬಳಿಕ ರಾವಣನು ಖಡ್ಗವಂ ತೆಗೆದುಕೊಂಡು, ಶ್ರೀರಾಮನಿಗಾಗಿ ಬಹು ಪ್ರಯಾಸಪಡು
ವ ಆ ಜಟಾಯುವಿನ ಪಕ್ಷಂಗಳನ್ನೂ ಪಾದಂಗಳನ್ನೂ ಸಹಾ ಭೇದಿಸಿದವನಾದನು ।೪೨। ಈರೀತಿಯಲ್ಲಿಮಹಾ
ದಾರುಣನಾದ ಆ ರಾವಣನಿಂದ ಭೇದಿಸಲ್ಪಟ್ಟ ಗರಿಗಳೂಪಾದಂಗಳೂ ಸಹ ವುಳ್ಳ ಮತ್ತೂ ಹೊಡೆಯಲ್ಪಟ್ಟ ಆ ಜಟಾ
ಯುವು ಅಲ್ಪವಾದ ಪ್ರಾಣಂಗಳುಳ್ಳವನಾಗಿ ನೆಲದಲ್ಲಿ ಬಿದ್ದು ರಕ್ತವಂ ಸ್ರವಿಸುತ್ತಿರಲೂ, ಆಗಸೀತಾದೇವಿಯು ಅ
ತಿದುಃಖಿತಳಾಗಿ ತನ್ನ ಬಂಧುಗಳಂ ಕುರಿತು, ಓಡಿಬರುವಂತೆ ಓಡಿಬಂದನು ।೪೪। ಆ ಸಮಯದಲ್ಲಿ ಲಂಕೇ
ಶ್ವರನಾದ ದಶಕಂಠನು, ಕಾಲಮೇಘಸದೃಶನಾದ, ಶುಭ್ರವಾಗಿರುವವಕ್ಷಸ್ಥಲವುಳ್ಳ, ಮಹಾ ಪರಾಕ್ರಮಶಾಲಿಯಾದ
ಆ ಜಟಾಯುವಿನನ್ನು, ಉಪಶಾಂತವಾದದಾವಾಗ್ನಿಯಂತೆ ಉಪಶಾಂತನಾದವನನ್ನಾಗಿ ಕಂಡನು।೪೫।ಅನಂತರದಲ್ಲಿ

ತತಸ್ತು ತಂ ಪತ್ರರಥಂ ಮಹೀತಲೇ ನಿಪಾತಿತಂ ರಾವಣವೇಗಮರ್ದಿತಂ । ಪುನಃ ಪರಿಷ್ವಜ್ಯ ಶಶಿಪ್ರಭಾನನಾ ರುರೋದ ಸೀತಾ ಜನಕಾತ್ಮಜಾ ತದಾ ॥೪೮॥

—*** ಇತಿ ಶ್ರೀಮದಾರಣ್ಯಕಾಂಡೇ ಏಕಪಂಚಾಶಸ್ಸರ್ಗಃ ***—

ತಮಲ್ಪಜೀವಿತಂ ಗೃಧ್ರಂ ಸ್ಫುರಂತಂ ರಾಕ್ಷಸಾಧಿಪಃ । ದದರ್ಶ ಭೂಮೌ ಪತಿತಂ ಸಮೀಪೇ ರಾಘವಾಶ್ರಮಾತ್ ॥೧॥ ಸಾ ತು ತಾರಾಧಿಪಮುಖೀ ರಾವಣೇನ ಸಮೀಕ್ಷ್ಯ ತಂ । ಗೃಧ್ರರಾಜಂ ವಿನಿಹತಂ ವಿಲಲಾಪ ಸುದುಃಖಿತಾ ॥೨॥ ಆಲಿಂಗ್ಯ ಗೃಧ್ರಂ ನಿಹತಂ ರಾವಣೇನ ಬಲೀಯಸಾ । ವಿಲಲಾಪ ಸುದುಃಖಾರ್ತಾ ಸೀತಾ ಶಶಿನಿಭಾನನಾ ॥೩॥ ನಿಮಿತ್ತಂ ಲಕ್ಷಣಜ್ಞಾನಂ ಶಕುನಿಸ್ವರದರ್ಶನಂ । ಅವಶ್ಯಂ ಸುಖದುಃಖೇಷು ನರಾಣಾಂ ಪ್ರತಿದೃಶ್ಯತೇ ॥೪॥ ನೂನಂ ರಾಮ ನ ಜಾನಾಸಿ ಮಹದ್ವ್ಯಸನಮಾತ್ಮನಃ । ಧಾವಂತಿ ನೂನಂ ಕಾಕುತ್ಸ್ಥ ಮದರ್ಥಂ ಮೃಗಪಕ್ಷಿಣಃ ॥೫॥ ಅಯಂ ಹಿ ಪಾಪಚಾರೇಣ ಮಾಂ ತ್ರಾತುಮಭಿಸಂಗತಃ । ಶೇತೇ ವಿನಿಹತೋ ಭೂಮೌ ಮಮ ಭಾಗ್ಯಾದ್ವಿಹಂಗಮಃ ॥೬॥ ತ್ರಾಹಿ ಮಾಮದ್ಯ ಕಾಕುತ್ಸ್ಥ ಲಕ್ಷ್ಮಣೇತಿ ವ

ಶಶಿಪ್ರಭಾನನಾ–ಚಂದ್ರನ ಕಾಂತಿಯಂತೆ ಕಾಂತಿಯುಳ್ಳ ಮುಖವುಳ್ಳ, ಸೀತಾ–ಸೀತಾದೇವಿಯು, ಮಹೀತಲೇ–ನೆಲದಲ್ಲಿ, ನಿಪಾತಿತಂ–ಬಿದ್ದಿರುವ ರಾವಣವೇಗಮರ್ದಿತಂ–ರಾವಣಾಸುರನ ವೇಗದಿಂ ಹೊಡೆಯಲ್ಪಟ್ಟ, ತಂಪತ್ರರಥಂ–ಆ ಪಕ್ಷಿರಾಜನಾದ ಜಟಾಯುವಿನನ್ನು, ಪುನಃಪುನಃ–ಬಾರಿಬಾರಿಗೂ ಪರಿಷ್ವಜ್ಯ–ಅಪ್ಪಿಕೊಂಡು, ತದಾ–ಆ ಕಾಲದಲ್ಲಿ, ರುರೋದ–ರೋದನಮಾಡುತ್ತಿದ್ದಳು ॥ —**ಏಕಪಂಚಾಶಸ್ಸರ್ಗಃ**—

ರಾಕ್ಷಸಾಧಿಪಃ–ರಾವಣನು, ರಾಘವಾಶ್ರಮಾತ್–ಶ್ರೀರಾಮನ ಆಶ್ರಮದ ದೆಸೆಯಿಂದ, ಸಮೀಪೇ–ಸಮೀಪದಲ್ಲಿ, ಭೂಮೌ–ನೆಲದಲ್ಲಿ, ಪತಿತಂ–ಬಿದ್ದಿರುವ ಅಲ್ಪಜೀವಿತಂ–ಸ್ವಲ್ಪಪ್ರಾಣವುಳ್ಳ, ಸ್ಫುರಂತಂ–ಹೊರಳುತ್ತಿರುವ, ತಂಗೃಧ್ರಂ–ಆ ಗೃಧ್ರನನ್ನು, ದದರ್ಶ–ಕಂಡನು ॥೧॥ ತಾರಾಧಿಪಮುಖೀ–ಚಂದ್ರನಿಗೆ ಸಮಾನವಾದ, ಸಾತು–ಆ ಸೀತಾದೇವಿಯಾದರೆ, ರಾವಣೇನ–ರಾವಣನಿಂದ, ವಿನಿಹತಂ–ಹೊಡೆಯಲ್ಪಟ್ಟವನಾಗಿ, ತಂಗೃಧ್ರರಾಜಂ–ಆ ಜಟಾಯುವಿನನ್ನು, ಸಮೀಕ್ಷ್ಯ–ಕಂಡು, ಸುದುಃಖಿತಾ–ಬಹಳ ದುಃಖಗೊಂಡವಳಾಗಿ, ವಿಲಲಾಪ–ಪ್ರಲಾಪವನ್ನು ಮಾಡಿದಳು ॥೨॥ ಶಶಿನಿಭಾನನಾ–ಚಂದ್ರನಿಗೆ ಸಮಾನವಾದ ಕಾಂತಿಯುಳ್ಳ, ಸೀತಾ–ಸೀತಾದೇವಿಯು, ಬಲೀಯಸಾ–ಬಲಿಷ್ಠನಾದ ರಾವಣೇನ–ರಾವಣನಿಂದ, ನಿಹತಂ–ಹೊಡೆಯಲ್ಪಟ್ಟ, ಗೃಧ್ರಂ–ಜಟಾಯುವಿನನ್ನು, ಆಲಿಂಗ್ಯ–ಅಪ್ಪಿಕೊಂಡು, ಸುದುಃಖಾರ್ತಾ–ಬಹಳ ದುಃಖಗೊಂಡವಳಾಗಿ, ವಿಲಲಾಪ–ಅಳುತ್ತಿದ್ದಳು ॥೩॥ ಲಕ್ಷಣಜ್ಞಾನಂ–ಲಕ್ಷಣ–ನೇತ್ರಕಂಪನಾದಿ ಲಕ್ಷಣಗಳ, ಜ್ಞಾನಂ–ಜ್ಞಾನವು, ಶಕುನಿಸ್ವರದರ್ಶನಂ–ಪಕ್ಷಿಗಳ ಸ್ವರಜ್ಞಾನವು, ನರಾಣಾಂ–ಮನುಜರಿಗೆ, ಸುಖದುಃಖೇಷು ಸುಖಗಳಲ್ಲಿಯೂ ದುಃಖಗಳಲ್ಲಿಯೂ ಕೂಡ, ಅವಶ್ಯಂ–ನಿಶ್ಚಯವಾಗಿ, ನಿಮಿತ್ತಂ–ಜ್ಞಾಪಕವೂ ಅಂಥಾದ್ದಾಗಿ, ಪ್ರತಿದೃಶ್ಯತೇ–ಕಾಣಲ್ಪಡುತ್ತದೆ ॥೪॥ ಹೇರಾಮ–ಎಲೆ ಶ್ರೀರಾಮನೇ, ಆತ್ಮನಃ–ನಿನಗೆ, ಮಹತ್–ಬಹಳವಾದ, ವ್ಯಸನಂ–ದುಃಖವನ್ನು, ನಜಾನಾಸಿ–ತಿಳಿದಿದ್ದೀ, ನೂನಂ–ನಿಶ್ಚಯವು, ಹೇಕಾಕುತ್ಸ್ಥ–ಎಲೈ ಶ್ರೀರಾಮನೇ, ಮದರ್ಥಂ–ನನ್ನ ನಿಮಿತ್ತವಾಗಿ, ಮೃಗಪಕ್ಷಿಣಃ–ಮೃಗಗಳೂ ಪಕ್ಷಿಗಳೂ, ಧಾವಂತಿ–ಓಡಿಬರುತ್ತವೆ, ನೂನಂ–ನಿಶ್ಚಯವು ॥೫॥ ಅಯಂವಿಹಂಗಮಃ–ಈ ಪಕ್ಷಿಯು, ಮಾಂ–ನನ್ನನ್ನು, ತ್ರಾತುಂ–ಸಂರಕ್ಷಿಸುವದಕ್ಕೋಸ್ಕರ, ಅಭಿಸಂಗತಃ–ಬಂದಂಥಾವನಾಗಿ, ಮಮ–ನನ್ನ, ಅಭಾಗ್ಯಾತ್–ದೌರ್ಭಾಗ್ಯದ ದೆಸೆಯಿಂದ, ಪಾಪಚಾರೇಣ–ಪಾಪಕೃತ್ಯವಂ ಮಾಡುತ್ತಿರುವ ರಾವಣನಿಂದ, ವಿನಿಹತಃ–ಹೊಡೆಯಲ್ಪಟ್ಟವನಾಗಿ, ಭೂಮೌ–ನೆಲದಲ್ಲಿ, ಶೇತೇ–ಮಲಗಿಥಾನವೆ ॥೬॥ ಹೇಕಾಕುತ್ಸ್ಥ–ಎಲೈ ಶ್ರೀರಾಮನೇ, ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಅದ್ಯ–ಈಗ, ಮಾಂ–ನನ್ನನ್ನು, ತ್ರಾಹಿ–

ಚಂದ್ರಮುಖಿಯಾದ ಸೀತಾದೇವಿಯು ನೆಲದಲ್ಲಿ ಬಿದ್ದಿರುವ ಆ ಜಟಾಯುವಿನಂ ಕಂಡು ಪರಿಪರಿ ರೋದನವಂಗೈದಳು ॥೪೮॥

—* ಅರಣ್ಯಕಾಂಡದಲ್ಲಿನ ೫೧ನೆಯ ಸರ್ಗಂ ಮುಗಿದುದು *—

ಈ ರೀತಿಯಲ್ಲಿ ರಾಕ್ಷಸಾಧಿಪತಿಯಾದ ರಾವಣನು ಶ್ರೀರಾಮನ ಪರ್ಣಶಾಲೆಯ ಸಮೀಪದಲ್ಲಿ ಅಲ್ಪಪ್ರಾಣಂಗಳುಳ್ಳವನಾಗಿ ಬಿದ್ದಿದ್ದರೂ ಬಹು ಬೆಳಗುವ ಆ ಜಟಾಯುವಿನಂ ಕಂಡು, ಸಂತಸವನ್ನೈದಿದನು. ಅನಂತರದಲ್ಲಿ ಚಂದ್ರಮುಖಿಯಾದ ಸೀತಾದೇವಿಯು ರಾವಣನಿಂದ ಹೊಡೆಯಲ್ಪಟ್ಟ ಆ ಜಟಾಯುವಿನಂ ಕಂಡು, ಬಹು ದುಃಖಾಕ್ರಾಂತಳಾಗಿ ರೋದನವಂ ಗೈಯ್ಯುವವಳೆಂತೆನೆ,— ॥೨॥ ಚಂದಿರನ ತೆರದಿ ಬೆಳಗುತಲಿರುವ ಮುಖಕಾಂತಿಯುಳ್ಳ ಸೀತಾದೇವಿಯು, ಬಲವಂತನಾದ ರಾವಣನಿಂದ ಹೊಡೆಯಲ್ಪಟ್ಟ ಆ ಜಟಾಯುವಿನನ್ನಪ್ಪಿಕೊಂಡು, ಹಾಹಾ! ಲೋಕದಲ್ಲಿ ಮನುಷ್ಯರಿಗೆ, ಕಣ್ಣುಗಳು, ಭುಜಂಗಳು, ತೊಡೆಗಳು ಮೊದಲಾದವುಗಳು ಅದುರೋಣವು, ಹಕ್ಕಿಗಳ ಸ್ವರಂಗಳು, ಇವೆಲ್ಲ ಸುಖದುಃಖಂಗಳು ಸಂಭವಿಸುವದಕ್ಕೆ ಜ್ಞಾಪಕವನ್ನೀಯುತಿರುವವು ॥೪॥ ಎಲೈ ಆರ್ಯಪುತ್ರನಾದ ಶ್ರೀರಾಮನೇ! ನನಗೆ ಸಂಭವಿಸಿರುವ ಮಹತ್ತರವಾದ ಈ ವ್ಯಸನವನ್ನು ನೀನು ಅರಿಯದವನಾದೆ, ನನ್ನ ನಿಮಿತ್ತವಾಗಿ ಮೃಗಂಗಳೂ ಪಕ್ಷಿಗಳೂ ಸಹ ಓಡಿಬರುತಲಿವೆ, ಅಕಟಕಟಾ! ಈ ಪಕ್ಷಿಯು ನನ್ನನ್ನು ರಕ್ಷಿಸುವದಕ್ಕಾಗಿ ಬಂದಂಥಾದ್ದಾಗಿ, ನನ್ನ ದೌರ್ಭಾಗ್ಯದಿಂದ, ಪಾಪಿಯಾದ ಈ ರಾಕ್ಷಸನಿಂದ ಹೊಡೆಯಲ್ಪಟ್ಟದ್ದಾಗಿ ಈ

ಶ್ರೀ

ರಾಂಗನಾ । ಸುಸಂತ್ರಸ್ತಾಸಮಾಕ್ರಂದಚ್ಛೃಣ್ವತಾಂತುಯಥಾಂತಿಕೇ ।೬। ತಾಂಕ್ಲಿಷ್ಟಮಾಲ್ಯಾಭರಣಾಂವಿಲಪಂತೀಮನಾಥವತ್ । ಅಭ್ಯಧಾವತವೈದೇಹೀಂರಾವಣೋರಾಕ್ಷಸಾಧಿಪಃ ॥೭॥ ತಾಂಲತಾಮಿವವೇಷ್ಟಂತೀಮಾಲಿಂಗಂತೀಂಮಹಾದ್ರುಮಾನ್ । ಮುಂಚಮುಂಚೇತಿಬಹುಶಃಪ್ರವದನ್ರಾಕ್ಷಸಾಧಿಪಃ ।೮। ಕ್ರೋಶಂತೀಂರಾಮರಾಮೇತಿರಾಮೇಣರಹಿತಾಂವನೇ । ಜೀವಿತಾಂತಾಯಕೇಶೇಷುಜಗ್ರಾಹಾಂತಕಸನ್ನಿಭಃ ।೯। ಪ್ರಧರ್ಷಿತಾಯಾಂಸೀತಾಯಾಂಬಭೂವಸಚರಾಚರಂ। ಜಗತ್ಸರ್ವಮಮರ್ಯಾದಂತಮಸಾಂಧೇನಸಂವೃತಂ ।೧೦। ನವಾತಿಮಾರುತಸ್ತತ್ರನಿಷ್ಪ್ರಭೋಽಭೂದ್ದಿವಾಕರಃ ॥೧೧॥ ದೃಷ್ಟ್ವಾಸೀತಾಂಪರಾಮೃಷ್ಟಾಂದೀನಾಂದಿವ್ಯೇನಚಕ್ಷುಷಾ ॥ ಕೃತಂಕಾರ್ಯಮಿತಿಶ್ರೀಮಾನ್ವ್ಯಾಜಹಾರಪಿತಾಮಹಃ ॥೧೨॥ ಪ್ರಹೃಷ್ಟಾವ್ಯಥಿತಾಶ್ಚಾಸನ್ಸರ್ವೇತೇಪರಮರ್ಷಯಃ ॥ ದೃಷ್ಟ್ವಾಸೀತಾಂಪರಾಮೃಷ್ಟಾಂದಂಡಕಾರಣ್ಯವಾಸಿನಃ । ರಾವಣಸ್ಯವಿನಾಶಂಚಪ್ರಾಪ್ತಂಬುದ್ಧ್ವಾಯದೃಚ್ಛಯಾ । ಸತುತಾಂರಾಮರಾಮೇತಿರುದಂತೀಂಲಕ್ಷ್ಮಣೇತಿಚ । ಜಗಾಮಾದಾಯಚಾಕಾಶಂರಾವಣೋರಾಕ್ಷಸೇಶ್ವರಃ ।ತಪ್ತಾಭರಣವರ್ಣಾಂಗೀಪೀತಕೌಶೇಯವಾಸಿನೀ । ರರಾಜ

---

ಸಂರಕ್ಷಿಸು, ಇತಿ-ಇಂತೆಂದು, ವರಾಂಗನಾ-ಶ್ರೇಷ್ಠವಾದ ಅವಯವಗಳುಳ್ಳ ಸೀತಾದೇವಿಯು, ಸುಸಂತ್ರಸ್ತಾ-ಬಹಳ ಹೆದರಿದವಳಾಗಿ. ಶೃಣ್ವತಾಂ-ಕೇಳುತ್ತಿರುವಜನರ, ಅಂತಿಕೆಯಥಾ-ಸಮೀಪದಲ್ಲಂತೆ. ಸಮಾಕ್ರಂದತ್-ಘಟ್ಟಿಯಾಗಿ ಕೂಗಿದಳು ॥೬॥ ಕ್ಲಿಷ್ಟಮಾಲ್ಯಾಭರಣಾಂ-ಉಜ್ಜಲ್ಪಟ್ಟ ಹೂವ್ವುಗಳೂ ಆಭರಣಗಳೂ ಉಳ್ಳ, ಅನಾಥವತ್-ದೀನಳಂತೆ, ವಿಲಪಂತೀಂ-ಅಳುತ್ತಿರುವ, ತಾಂವೈದೇಹೀಂ-ಆ ಸೀತಾದೇವಿಯಂ ಕುರಿತು, ರಾಕ್ಷಸಾಧಿಪಃ-ರಕ್ಕಸರಿಗೆ ಅಧಿಪತಿಯಾದ, ರಾವಣಃ-ರಾವಣನು, ಅಭ್ಯಧಾವತ-ಓಡಿಬಂದನು ॥೭॥ ಅಂತಕಸನ್ನಿಭಃ-ಯಮನಿಗೆ ಸದೃಶನಾದ, ರಾಕ್ಷಸಾಧಿಪಃ-ರಾವಣನು ಲತಾಮಿವ-ಬಳ್ಳಿಯಂತೆ. ವೇಷ್ಟಂತೀಂ-ಹೊರಳಾಡುತ್ತಿರುವ, ಮಹಾದ್ರುಮಾನ್-ದೊಡ್ಡಗಿಡಗಳನ್ನು, ಆಲಿಂಗಂತೀಂ-ಅಪ್ಪಿಕೊಳ್ಳುತ್ತಿರುವ. ವನೇ-ಅರಣ್ಯದಲ್ಲಿ. ರಾಮೇಣ-ಶ್ರೀರಾಮನಿಂದ, ರಹಿತಾಂ-ಬಿಡಲ್ಪಟ್ಟ, ರಾಮರಾಮೇತಿ-ರಾಮರಾಮಾ ಎಂದು. ಕ್ರೋಶಂತೀಂ-ಕೂಗುತ್ತಿರುವ. ತಾಂ-ಆ ಸೀತಾದೇವಿಯನ್ನು, ಮುಂಚಮುಂಚೇತಿ-ಬಿಡುಬಿಡು ಎಂದು. ಬಹುಶಃ-ಬಹಳಪ್ರಕಾರವಾಗಿ, ಪ್ರವದನ್-ಹೇಳುತ್ತಿರುವನಾಗಿ, ಜೀವಿತಾಂತಾಯ-ಪ್ರಾಣನಾಶಕ್ಕೆ, ಕೇಶೇಷು-ಕೂದಲುಗಳಲ್ಲಿ, ಜಗ್ರಾಹ-ಹಿಡಿದುಕೊಂಡನು ॥೧೦॥ ಸೀತಾಯಾಂ-ಸೀತಾದೇವಿಯು, ಪ್ರಧರ್ಷಿತಾಯಾಂ-ತಿರಸ್ಕರಿಸಲ್ಪಟ್ಟವಳಾಗಲಾಗಿ, ಸಚರಾಚರಂ-ಸ್ಥಾವರಜಂಗಮಗಳಿಂದೊಡಗೂಡಿದ. ಸರ್ವಂ-ಸಮಸ್ತವಾದ, ಜಗತ್-ಲೋಕವು, ಅಂಧೇನತಮಸಾ-ಗಾಢಾಂಧಕಾರದಿಂದ ಸಂವೃತಂ-ವ್ಯಾಪ್ತವಾದ್ದಾಗಿ. ಅಮರ್ಯಾದಂ-ಅತಿಕ್ರಾಂತವಾದ ನಿಜಸ್ಥಿತಿಯುಳ್ಳದ್ದು, ಬಭೂವ-ಆಯಿತು ॥೧೧॥ ಮಾರುತಃ-ಗಾಳಿಯು. ತತ್ರ-ಆ ಅರಣ್ಯದಲ್ಲಿ. ನವಾತಿ-ಬೀಸಲಿಲ್ಲ ದಿವಾಕರಃ-ಸೂರ್ಯನು. ನಿಷ್ಪ್ರಭಃ-ಕಾಂತಿಹೀನನು, ಅಭವತ್-ಆದನು, ಶ್ರೀಮಾನ್-ಜ್ಞಾನಸಂಪದ್ಯುಕ್ತನಾದ, ಪಿತಾಮಹಃ-ಬ್ರಹ್ಮನು. ದೀನಾಂ-ಪರಿತಪಿಸುತ್ತಿರುವ. ಸೀತಾಂ-ಸೀತಾದೇವಿಯನ್ನು. ಪರಾಮೃಷ್ಟಾಂ-ಅಪಹರಿಸಲ್ಪಟ್ಟವಳನ್ನಾಗಿ, ದಿವ್ಯೇನಚಕ್ಷುಷಾ-ಜ್ಞಾನಚಕ್ಷುಸ್ಸಿನಿಂದ ದೃಷ್ಟ್ವಾ-ತಿಳಿದು, ಕಾರ್ಯಂ-ರಾವಣವಧರೂಪ ಕಾರ್ಯವು, ಕೃತಂ-ಮಾಡಲ್ಪಟ್ಟಿತು, ಇತಿ-ಇಂತೆಂದು, ವ್ಯಾಜಹಾರ-ಹೇಳಿದನು ॥೧೨॥ ॥ ಸರ್ವೇ-ಸಮಸ್ತರಾದ ದಂಡಕಾರಣ್ಯದಲ್ಲಿ ವಾಸಮಾಡುತ್ತಿರುವ, ತೆಪರಮರ್ಷಯಃ-ಆ ಶ್ರೇಷ್ಠರಾದ ಋಷಿಗಳು, ಸೀತಾಂ-ಸೀತಾದೇವಿಯನ್ನು, ಪರಾಮೃಷ್ಟಾಂ-ಅಪಹರಿಸಲ್ಪಟ್ಟವಳನ್ನಾಗಿ, ದೃಷ್ಟ್ವಾ-ಕಂಡು. ವ್ಯಥಿತಾಶ್ಚ-ವ್ಯಸನಗೊಂಡವರು, ಆಸನ್-ಆದರು; ರಾವಣಸ್ಯ-ರಾವಣನಿಗೆ. ಯದೃಚ್ಛಯಾ-ಸ್ವೇಚ್ಛೆಯಿಂ

---

ಗ ನೆಲದಲ್ಲಿ ಬಿದ್ದಿಹವು; ಎಲೈ ಕಕುತ್ಸ್ಥ ವಂಶೋತ್ಪನ್ನರಾದ ರಾಮಲಕ್ಷ್ಮಣರೇ! ನನ್ನನ್ನೀಗ ಪರಿಪಾಲಿಸುವವರಾಗಿ, ಎಂದು ಸೀತಾದೇವಿಯು ಬಹು ಭೀತಳಾಗಿ, ಯಾರಾದರೂ ಕೇಳುತ್ತಿದ್ದರೆ ಕೂಗುವಂತೆ ಘಟ್ಟಿಯಾಗಳುತ್ತಿದ್ದಳು ।೬। ಅನಂತರದಲ್ಲಿ ಯಮಸದೃಶನಾದ ರಾಕ್ಷಸಾಧಿಪತಿಯಾದ ರಾವಣನು, ದೀನಳಾಗಿ ಪ್ರಲಾಪವಂ ಗೈಯ್ಯುತ್ತಿರುವ ಆ ಸೀತಾದೇವಿಯಂ ಕುರಿತು ಓಡಿಬಂದವನಾಗಿ, ಆ ಅರಣ್ಯದಲ್ಲಿ ಲತೆಯಂತೆ ಹೊರಳಾಡುವ, ದೊಡ್ಡದೊಡ್ಡ ವೃಕ್ಷಂಗಳನ್ನು ಅಪ್ಪಿಕೊಳ್ಳುತ್ತಿರುವ, ಮತ್ತು ರಾಮ, ರಾಮಾ! ಎಂದು ಕೂಗುತ್ತಿರುವ ಆಕೆಯನ್ನು, ಬಿಡು ಬಿಡೆಂದು ಪರಿಪರಿ ನುಡಿಯುತ್ತಾ, ತನ್ನ ಪ್ರಾಣನಾಶಕ್ಕಾಗಿ ಕೇಶಗಳಲ್ಲಿ ಕೈಯ್ಯಿಕ್ಕಿದನು ।೧೦। ಈ ರೀತಿಯಾಗಿ ಸೀತಾದೇವಿಯು ತಿರಸ್ಕರಿಸಲ್ಪಟ್ಟವಳಾಗಲೂ, ಚರಾಚರಾತ್ಮಕವಾದ ಸಮಸ್ತವಾದ ಜಗತ್ತು ಗಾಢಾಂಧಕಾರದಿಂದ ವ್ಯಾಪ್ತವಾದದ್ದಾಗಿ, ಅತಿಕ್ರಾಂತವಾದ ನಿಜಸ್ಥಿತಿಯುಳ್ಳದ್ದಾಯಿತು ।೧೧। ಮತ್ತು ಆ ಪ್ರದೇಶದಲ್ಲಿ ವಾಯುವು ಬೀಸಲಿಲ್ಲ; ಸೂರ್ಯನು ಕಂಗೆಟ್ಟವನಾದನು, ಚತುರ್ಮುಖಬ್ರಹ್ಮನು ಜಗನ್ಮಾತೆಯಾದ ಸೀತಾದೇವಿಯನ್ನು ಅಪಹರಿಸಲ್ಪಟ್ಟವಳನ್ನಾಗಿ ಜ್ಞಾನದೃಷ್ಟಿಯಿಂದ ವೀಕ್ಷಿಸಿದವನಾಗಿ, ಲೋಕರಾವಣನಾದ ರಾವಣಾಸುರನ ವಧೆಯೂ ಪವಾಢ ಕಾರ್ಯವು ಮಾಡಲ್ಪಟ್ಟಿತೆಂದು ನಿರೂಪಿಸಿದನು ।೧೨। ಆ ಸಮಯದಲ್ಲಿ ದಂಡಕಾರಣ್ಯದಲ್ಲಿ ವಾಸವಂ ಗೈಯ್ಯುತಲಿದ್ದ ಮಹರ್ಷಿಗಳೆಲ್ಲ, ಅಪಹರಿಸಲ್ಪಟ್ಟ ಆ ಸೀತಾದೇವಿಯಂ ಕಂಡು ದುಃಖವನ್ನೈದಿದರು, ಮತ್ತು ರಾವ

ರಾಜಪುತ್ರೀ ತು ವಿದ್ಯುತ್ಸೌದಾಮಿನೀಯಥಾ। ಉದ್ಧೂತೇನಚವಸ್ತ್ರೇಣ ತಸ್ಯಾಃ ಪೀತೇನರಾವಣಃ। ಅಧಿಕಂ ಪ್ರತಿಬಭ್ರಾಜಗಿರಿರ್ದೀಪ್ತ ಇವಾಗ್ನಿನಾ ॥೧೭॥ ತಸ್ಯಾಃ ಪರಮಕಲ್ಯಾಣ್ಯಾಸ್ತಾಮ್ರಾಣಿ ಸುರಭೀಣಿ ಚ । ಪದ್ಮಪತ್ರಾಣಿ ವೈದೇಹ್ಯಾ ಅಭ್ಯಕೀರ್ಯಂತ ರಾವಣಂ ॥೧೮॥ ತಸ್ಯಾಃ ಕೌಶೇಯಮುದ್ಧೂತಮಾಕಾಶೇ ಕನಕಪ್ರಭಂ। ಬಭೌ ಚಾದಿತ್ಯರಾಗೇಣ ತಾಮ್ರಮಭ್ರಮಿವಾತಪೇ ॥೧೯॥ ತಸ್ಯಾಸ್ತತ್ಸುನಸಂ ವಕ್ತ್ರಮಾಕಾಶೇ ರಾವಣಾಂಕಗಂ । ನರರಾಜ ವಿನಾರಾಮಂ ವಿನಾಳಮಿವ ಪಂಕಜಂ ॥ ಬಭೌ ಘನಜಲಧರಂ ನೀಲಂ ಭಿತ್ವಾ ಚಂದ್ರ ಇವೋದಿತಃ । ಸುಲಲಾಟಂ ಸುಕೇಶಾಂತಂ ಪದ್ಮಗರ್ಭಾಭಮವ್ರಣಂ ॥೨೧॥ ಶುಕ್ಲೈ

---

ದ ವಿನಾಶಂ ತು-ವಿನಾಶವನ್ನು, ಪ್ರಾಪ್ತಂ-ಬಂದದ್ದನ್ನಾಗಿ, ಬುದ್ಧ್ವಾ-ತಿಳಿದು, ಪ್ರಹೃಷ್ಟಾಃ-ಸಂತೋಷಗೊಂಡವರು, ಆಸನ್-ಆದರು ||೧೪|| ರಾಕ್ಷಸೇಶ್ವರಃ-ರಕ್ಕಸಾಧಿಪತಿಯಾದ, ಸರಾವಣಸ್ತು-ಆ ರಾವಣನಾದರೆ, ರಾಮರಾಮೇತಿ-ಶ್ರೀರಾಮಾ ರಾಮಾ ಎಂದು, ಲಕ್ಷ್ಮಣೇತಿ ಚ-ಲಕ್ಷ್ಮಣಾ ಎಂದು, ರುದಂತೀಂ-ಅಳುತ್ತಿರುವ, ತಾಂ-ಆ ಸೀತಾದೇವಿಯನ್ನು, ಆದಾಯ-ತೆಗೆದುಕೊಂಡು, ಆಕಾಶಂ-ಅಂತರಿಕ್ಷದಲ್ಲಿ, ಜಗಾಮ-ಹೋದನು ||೧೫|| ತಪ್ತಾಭರಣವರ್ಣಾಂಗೀ-ಕಾಸಲ್ಪಟ್ಟ ಭಂಗಾರದ ಒಡವೆಗಳ ಕಾಂತಿಯಂತೆ ಕಾಂತಿಯುಳ್ಳ ಶರೀರವುಳ್ಳ, ಪೀತಕೌಶೇಯವಾಸಿನೀ-ಹಚ್ಚಗಿರುವ ಪಟ್ಟೆವಸ್ತ್ರವನ್ನುಟ್ಟಿರುವ, ರಾಜಪುತ್ರೀ-ಸೀತಾದೇವಿಯು, ಸೌದಾಮಿನೀ-ಸುದಾಮವೆಂಬ ಬೆಟ್ಟದಲ್ಲಿ ಹುಟ್ಟಿದ, ತಟಿದಿವ-ಮಿಂಚಿನಂತೆ, ರರಾಜ-ಹೊಳೆಯುತ್ತಿದ್ದಳು ||೧೬|| ರಾವಣಃ-ರಾವಣನು, ಉದ್ಧೂತೇನ-ಕೊಡಹಲ್ಪಟ್ಟ. ತಸ್ಯಾಃ-ಆ ಸೀತಾದೇವಿಯ, ಪೀತೇನವಸ್ತ್ರೇಣ-ಪೀತಾಂಬರದಿಂದ, ಅಗ್ನಿನಾ-ಅಗ್ನಿಯಿಂದ, ದೀಪ್ತಃ-ಹೊಳೆಯುತ್ತಿರುವ, ಗಿರಿರಿವ-ಬೆಟ್ಟದಂತೆ, ಅಧಿಕಂ-ಹೆಚ್ಚಾಗಿ, ಪ್ರತಿಬಭ್ರಾಜ-ಹೊಳೆಯುತ್ತಿದ್ದನು, || (ಹೀಗೆ ಹೇಳಿದ್ದರಿಂದ ರಾವಣನಿಗೆ ಸೀತಾದೇವಿ ಸಂಬಂಧದಿಂ ಬಹಳ ಸಂತಾಪವುಂಟಾಗುವದೆಂದು ಹೇಳಲ್ಪಟ್ಟಿತು ||೧೭|| ಪರಮಕಲ್ಯಾಣ್ಯಾಃ-ಬಹಳ ಶುಭಕರಳಾದ, ತಸ್ಯಾಃ ವೈದೇಹ್ಯಾಃ-ಆ ಸೀತಾದೇವಿಯ, ತಾಮ್ರಾಣಿ-ಕೆಂಪಾಗಿರುವ. ಸುರಭೀಣಿ-ಪರಿಮಳಯುಕ್ತಂಗಳಾದ, ಪದ್ಮಪತ್ರಾಣಿ-ಕಮಲದ ರೇಕೆಗಳು, ರಾವಣಂ-ರಾವಣನ. ಅಭ್ಯಕೀರ್ಯಂತ-ಸುತ್ತುಮುತ್ತಲೂ ಯೆರಚಿಹೋದವು, ಇದರಿಂದ ಕಮಲಪತ್ರಗಳು ಹ್ಯಾಗೆ ಉದುರಿಹೋಗುತ್ತವೋ ಹಾಗೆ ರಾವಣನ ಐಶ್ವರ್ಯವೂ ಶೀಘ್ರವಾಗಿ ನಶಿಸಿಹೋಗುತ್ತೆಂದು ಸೂಚಿಕವಾಯಿತು ) ||೧೮|| ಆಕಾಶೇ-ಅಂತರಿಕ್ಷಮಾರ್ಗದಲ್ಲಿ, ಉದ್ಧೂತಂ-ಕೊಡಹಲ್ಪಟ್ಟ, ಕನಕಪ್ರಭಂ-ಭಂಗಾರದ ಬಣ್ಣವುಳ್ಳ, ತಸ್ಯಾಃ-ಆ ಸೀತಾದೇವಿಯ, ಕೌಶೇಯಂ-ಪಟ್ಟುವಸ್ತ್ರವು, ಆತಪೇ-ಬಿಸಿಲಲ್ಲಿ, ಆದಿತ್ಯರಾಗೇಣ-ಸೂರ್ಯನ ಕೆಂಪುಕಾಂತಿಯಿಂದ, ತಾಮ್ರಂ-ಕೆಂಪಾಗಿರುವ, ಅಭ್ರಮಿವ-ಮೇಘದಂತೆ, ಬಭೌ-ಹೊಳೆಯುತ್ತಿತ್ತು, ( ಇದರಿಂದ ಸೂರ್ಯನಿಗೆ ಮಧ್ಯಾಹ್ನದಲ್ಲಿ ಕೆಂಪುಬಣ್ಣ ಉಂಟಾದ್ದರಿಂದ ರಾವಣನವಿನಾಶ ಹೇತುಭೂತವಾದ ಉತ್ಪಾತ ಸೂಚಕವಾಯಿತು ) ||೧೯|| ತಸ್ಯಾಃ-ಆ ಸೀತಾದೇವಿಯ, ಸುನಸಂ-ಒಳ್ಳೇ ಮೂಗುಳ್ಳ, ತದ್ವಕ್ತ್ರಂ-ಆ ಮುಖವು, ಆಕಾಶೇ-ಆಕಾಶದಲ್ಲಿ, ರಾವಣಾಂಕಗಂ-ರಾವಣನ ತೊಡೆಯಂ ಹೊಂದಿರುವದಾಗಿ. ರಾಮಂ ವಿನಾ-ಶ್ರೀರಾಮನನ್ನು ಹೊರತಾಗಿ. ವಿನಾಳಂ-ನಾಳವಿಲ್ಲದ ಪಂಕಜಮಿವ-ಕಮಲದಂತೆ. ನರರಾಜ-ಪ್ರಕಾಶಿಸಲಿಲ್ಲ (ಇದರಿಂದ ಸೀತಾದೇವಿಗೆ ದುಃಖಾತಿಶಯ ಸೂಚಿಕವಾಯಿತು ) ||೨೦|| ಸುಲಲಾಟಂ-ಒಳ್ಳೇ ಫಾಲಪ್ರದೇಶವುಳ್ಳ. ಸುಕೇಶಾಂತಂ-ಸಮೀಚೀನವಾದ ಕೇಶಾಗ್ರಗಳುಳ್ಳ, ಪದ್ಮಗರ್ಭಾಭಂ-ಕಮಲದ ಮಧ್ಯಪ್ರದೇಶಕ್ಕೆ ಸಮಾನವಾದ ಕಾಂತಿಯುಳ್ಳ, ಅವ್ರ

---

ಣನಿಗೆ ವಿನಾಶಕಾಲವು ಸಂಭವಿಸಿತೆಂದು ಸಂತಸವನ್ನೈದಿದರು॥೧೪॥ ಅನಂತರದಲ್ಲಿ ರಾಕ್ಷಸಾಧಿಪತಿಯಾದ ರಾವಣನು, ರಾಮರಾಮೆಂತಲೂ, ಹಾ! ಲಕ್ಷ್ಮಣನೇ! ಎನುತಲೂ ಕೂಗುವ ಆ ಸೀತಾದೇವಿಯಂ ತೆಗದುಕೊಂಡು ಗಗನದಲ್ಲಿ ಸಾರಿದನು ॥೧೫॥ ಆ ವೇಳೆಯಲ್ಲಿ ಅಪರಂಜಿಯ ಬಣ್ಣದಂತೆ ಬೆಳಗುವ ದೇಹಕಾಂತಿಯುಳ್ಳ, ಮತ್ತೂ ಹಸರುಬಣ್ಣವಾದ ಪಟ್ಟೇಶೀರೆಯನ್ನುಟ್ಟಿರುವ, ಆ ರಾಜಪುತ್ರಿಯಾದ ಸೀತಾದೇವಿಯು, ಸೌದಾಮವೆಂಬ ಬೆಟ್ಟದಲ್ಲಿ ಹುಟ್ಟಿದ ಮಿಂಚಿನಂತ ಗಗನದಲ್ಲಿ ಹೊಳೆಯುತ್ತಿದ್ದಳು. ಆಗ ರಾವಣನು ಕಂಗೊಳಿಸುವ ಆಕೆಯ ಪೀತಾಂಬರವೆಂಬ ಅಗ್ನಿಯಿಂದ ಬೆಳಗುವ ಬೆಟ್ಟದಂತೆ ಹೊಳೆಯುತ್ತಿದ್ದನು. [ಹೀಗೆ ಉಪಮಾನಹೇಳಿದ್ದರಿಂದ ರಾವಣನಿಗೆ ಸೀತಾದೇವಿಯ ಸಂಬಂಧದಿಂದ ಬಹು ಸಂತಾಪವುಂಟಾಗುವದೆಂಬ ಭವಿಷ್ಯದರ್ಥವು ಸೂಚಕವಾಯಿತು]॥೧೭॥ಇದಲ್ಲದೆ ಸೀತಾದೇವಿಯು ಅಲಂಕಾರಾರ್ಥವಾಗಿ ಕಟ್ಟಿಕೊಂಡಿದ್ದ ಕಮಲಪತ್ರಂಗಳೆಲ್ಲ ರಾವಣನ ಸುತ್ತುಮುತ್ತಲೂ ಬಿದ್ದುಹೋದವು [ಅಂದರೆ ಈ ಕಮಲಪತ್ರಂಗಳು ಎಂತು ಉದುರಿದವೋ ರಾವಣನ ಮಹದೈಶ್ವರ್ಯವೂ ಸಹ ತ್ವರೆಯಾಗಿ ನಾಶವನ್ನೈದುವದೆಂಬ ಅರ್ಥವು ತೋರುತದೆ] ।೧೮। ಮತ್ತು ಗಗನಮಾರ್ಗದಲ್ಲಿ ಕೊಡಹಲ್ಪಟ್ಟ ಆ ಸೀತಾದೇವಿಯ ಪಟ್ಟೆವಸ್ತ್ರವು, ಮಧ್ಯಾಹ್ನಕಾಲದಲ್ಲಿ ಬಿಸಿಲಿನಿಂದ ಕೆಂಪಾಗಿ ಕಾಣುವ ಮೇಘದಂತೆ ಹೊಳೆಯುತ್ತಿತ್ತು. [ಇದೂ ಸಹ ಉತ್ಪಾತಕ್ಕೆ ಕಾರಣವೆಂದು ತಿಳಿಯುತಕ್ಕದ್ದು] ।೧೯। ಇಷ್ಟುಮಾತ್ರವಲ್ಲದೆ, ಆ ಸೀತಾದೇವಿಯ ಮುಖವು ರಾಮನ ವಿನಹಾ ಗಗನದಲ್ಲಿ ರಾವಣನ ತೊಡೆಯನ್ನೈದಿದಂಥಾದ್ದಾಗಿ, ನಾಶವಿಲ್ಲದಿರುವ ಕಮಲದಂತೆ ಹೊಳೆಯುತ್ತಿರಲಿಲ್ಲ (ಈ ಅರ್ಥದಿಂದ ಸೀತಾದೇವಿಗೆ ಬಹು ದುಃಖಾತಿಶಯವುಂಟಾಯಿತೆಂದು ತೋರುತ್ತದೆ]।೨೦। ಮತ್ತು ಸಮೀಚೀನವಾದ ಫಾಲಪ್ರದೇಶವುಳ್ಳದ್ದಾಗಿಯೂ, ಶುಭಕರವಾದ ಕೇಶಾಗ್ರಂಗಳುಳ್ಳದ್ದಾಗಿಯೂ, ಕಮಲದ ಮಧ್ಯಪ್ರದೇ

ಸ್ನಿವಿಮಲೈರ್ದಂತೈಃಪ್ರಭಾವದ್ಭಿರಲಂಕೃತಂ । ತಸ್ಯಾಸ್ತದ್ವಿಮಲಂವಕ್ತ್ರಮಾಕಾಶೇರಾವಣಾಂಕಗಂ ॥೧೮॥ ರುದಿ
ತಂವ್ಯಪಮೃಷ್ಟಾಸ್ರಂಚಂದ್ರವತ್ಪ್ರಿಯದರ್ಶನಂ । ಸುನಾಸಂಚಾರುತಾಮ್ರೋಷ್ಠಮಾಕಾಶೇಹಾಟಕಪ್ರಭಂ ॥೧೯॥
ರಾಕ್ಷಸೇನಸಮಾಧೂತಂತಸ್ಯಾಸ್ತದ್ವದನಂಶುಭಂ । ಶುಶುಭೇನವಿನಾರಾಮಂದಿವಾಚಂದ್ರಇವೋದಿತಃ ॥೨೦॥ ಸಾಹೇಮವ
ರ್ಣಾನೀಲಾಂಗಂಮೈಥಿಲೀರಾಕ್ಷಸಾಧಿಪಂ । ಶುಶುಭೇಕಾಂಚನೀಕಾಂಚೀನೀಲಂಮಣಿಮಿವಾಶ್ರಿತಾ ॥೨೧॥ ಸಾಪದ್ಮಗೌರೀಹೇ
ಮಾಭಾರಾವಣಂಜನಕಾತ್ಮಜಾ । ವಿದ್ಯುದ್ಘನಮಿವಾವಿಶ್ಯಶುಶುಭೇತಪ್ತಭೂಷಣಾ ॥೨೨॥ ತರುಪ್ರವಾಳರಕ್ತಾಸಾನೀ
ಲಾಂಗಂರಾಕ್ಷಸೇಶ್ವರಂ । ಪ್ರಾಶೋಭಯತವೈದೇಹೀಗಜಂಕಕ್ಷ್ಯೇವಕಾಂಚನೀ ॥೨೩॥ ತಸ್ಯಾಭೂಷಣಘೋಷೇಣವೈದೇಹ್ಯಾ

---

ಣಂ-ಶೌಚ್ಯವಿಲ್ಲದಿರುವ, ಶುಕ್ಲೈಃ-ಬೆಳ್ಳಗಿರುವ, ಪ್ರಭಾವದ್ಭಿಃ-ಕಾಂತಿಯುಕ್ತವಾದ, ಸುವಿಮಲೈಃ-ಬಹಳ ನಿರ್ಮಲವಾದ ದಂತೈಃ-ಹಲ್ಲುಗಳಿಂದ, ಅ ಲಂಕೃತಂ-ಅಲಂಕಾರವಾಡಲ್ಪಟ್ಟ. ತಸ್ಯಾಃ-ಆ ಸೀತಾದೇವಿಯ, ವಿಮಲಂ-ನಿರ್ಮಲವಾದ, ತದ್ವಕ್ತ್ರಂ-ಆ ಮುಖವು, ಆಕಾಶೇ-ಅಂತರಿಕ್ಷದಲ್ಲಿ. ರಾವ ಣಾಂಕಗಂ-ರಾವಣಾಸುರನ ತೊಡೆಯಂ ಹೊಂದಿದ್ದಾಗಿ, ನೀಲಂ-ಕಪ್ಪಾಗಿರುವ. ಜಲದಂ-ಮೇಘವನ್ನು ಭಿತ್ವಾ-ಛೇದಿಸಿ, ಉದಿತಃ-ಹುಟ್ಟಿದ, ಚಂದ್ರ ಇವ-ಚಂದ್ರನಂತೆ, ಬಭೌವ-ಆಯಿತು, ( ಇದರಿಂದ ರಾವಣನಿಗೆ ನಾಶಹೇತುವಾದ ಪ್ರತಿಚಂದ್ರ ದರ್ಶನವೆಂಬ ಉತ್ಪಾತ ಸೂಚಕವಾಯಿತು ) ॥೧೮॥ ರುದಿತಂ-ರೋದನ ಮಾಡುತ್ತಿರುವ. ವ್ಯಪಮೃಷ್ಟಾಸ್ರಂ-ನಿವೃತ್ತಿ-ಇಲ್ಲದಿರುವ ಕಂಬನಿಗಳುಳ್ಳ, ಚಂದ್ರವತ್-ಚಂದ್ರನಂತೆ, ಪ್ರಿಯದರ್ಶನಂ-ಇಷ್ಟವಾದ ನೋಟವುಳ್ಳ, ಸುನಾಸಂ-ಚೆಲ್ಲೀವ ಮೂಗುಳ್ಳ, ಚಾರು-ಮನೋಹರವಾದ, ತಾಮ್ರೋಷ್ಠಂ-ಕೆಂಪಾಗಿರುವ ತುಟಿಗಳುಳ್ಳ, ಹಾಟಕಪ್ರಭಂ-ಚಿನ್ನದ ಬಂ ಣದಂತೆ ಬಣ್ಣವುಳ್ಳ. ರಾಕ್ಷಸೇನ-ರಕ್ಕಸನಿಂದ, ಸಮಾಧೂತಂ-ಭಯಕಂಪಿತವಾದ. ಶುಭಂ-ಶುಭಕರವಾದ. ತಸ್ಯಾಃ-ಆ ಸೀತಾದೇವಿಯ, ತದ್ವದನಂ-ಆ ಮುಖವು, ಆಕಾಶೇ-ಅಂತರಿಕ್ಷದಲ್ಲಿ, ರಾಮಂವಿನಾ-ಶ್ರೀರಾಮನಬಿಟ್ಟು, ದಿವಾ-ಹಗಲು, ಉದಿತಃ-ಹುಟ್ಟಿದ. ಚಂದ್ರಇವ-ಚಂದ್ರನಂತೆ. ನಶುಶುಭೆ-ಹೊಳೆಯುತ್ತಿರಲಿಲ್ಲ ॥೨೦॥ ಹೇಮವರ್ಣಾ-ಭಂಗಾರಬಣ್ಣವುಳ್ಳ, ಸಾಮೈಥಿಲೀ-ಆ ಸೀತಾದೇವಿಯು. ನೀಲಾಂಗಂ-ಕಪ್ಪಾಗಿರುವ ಶರೀರವುಳ್ಳ, ರಾಕ್ಷಸಾಧಿಪಂ-ರಾವಣನನ್ನು, ಆಶ್ರಿತಾ-ಹೊಂದಿದಂಥಾವಳಾಗಿ. ನೀಲಂ-ಕಪ್ಪಾದ. ಮಣಿಂ-ರತ್ನವನ್ನು, ಆಶ್ರಿತಾ-ಆಶ್ರಯಿಸಿದ, (ಯದ್ವಾ-ನೀಲಂ-ಕಪ್ಪಾಗಿರುವ ಆನೆಯನ್ನು; ಆಶ್ರಿತಾ-ಹೊಂದಿರುವ, ಕಾಂಚನೀ-ಭಂಗಾರುವಿಕಾರವಾದ, ಕಾಂಚೀವ-ಓಡ್ಯಾಣದಂತೆ, ಶುಶುಭೆ-ಹೊಳೆಯುತ್ತಿತ್ತು ॥೨೧॥ ಪದ್ಮಗೌ ರೀ-ಕಮಲದಂತೆ ಗೌರವರ್ಣವುಳ್ಳ, ಹೇಮಾಭಾ-ಚಿನ್ನದಂತೆ ಕಾಂತಿಯುಳ್ಳ, ತಪ್ತಭೂಷಣಾ-ಕಾಸಲ್ಪಟ್ಟ ಚಿನ್ನದ ಒಡವೆಗಳುಳ್ಳ, ಸಾಜನಕಾತ್ಮಜಾ-ಆ ಸೀತಾದೇವಿಯು, ರಾವಣಂ-ರಾವಣಾಸನನ್ನು. ಆವಿಶ್ಯ-ಪ್ರವೇಶಿಸಿ ಘನಂ-ಮೇಘವನ್ನು, ಆವಿಶ್ಯ-ಪ್ರವೇಶಿಸಿ, ವಿದ್ಯುದಿವ-ಮಿಂಚಿನಂತೆ, ಶುಶುಭೆ-ಹೊಳೆಯುತ್ತಿದ್ದಳು ॥೨೨॥ ತರುಪ್ರವಾಳರಕ್ತಾ-ತರು-ಗಿಡದ. ಪ್ರವಾಳ-ಚಿಗುರಿನಂತೆ. ರಕ್ತಾ-ಕೆಂಪುಬಣ್ಣವುಳ್ಳ, ಸಾವೈದೇಹೀ-ಆ ಸೀತಾದೇವಿಯು, ಕಾಂಚನೀ-ಭಂಗಾರುವಿಕಾರವಾದ, ಕಕ್ಷ್ಯಾ-ಗಜಬಂಧನವು, ಗಜಮಿವ-ಗಜವನ್ನಂತೆ, ನೀಲಾಂಗಂ-ಕಪ್ಪಾದಶರೀರವುಳ್ಳ, ರಾಕ್ಷಸೇಶ್ವರಂ-ರಾವಣನನ್ನು, ಪ್ರಾಶೋಭಯತ-ಕಂಗೊಳಿಸುವಂತೆಮಾಡಿದಳು ( ಈ ಅರ್ಥದಿಂ ಗಜಬಂಧನದಿಂ ಗಜವನ್ನು ಹ್ಯಾಗೆ ನಿಗ್ರಾಹ್ಯವನ್ನಾಗಿ ಹೋಗಿ ಸವರಿಗೆ ಶಿಕ್ಷ್ಯವದನ್ನಾಗಿ

---

ಶಕ್ಕೆ ಸಮಾನವಾದ ಕಾಂತಿಯುಳ್ಳದ್ದಾಗಿಯೂ, ಶುಭ್ರವಾದ ಮತ್ತೂ ಬೆಳಗುವ ದಂತಂಗಳಿಂಗಳಿಂದ ಯುಕ್ತವಾಗಿಯೂ ಇರುವ ಆಕೆಯ ಮುಖವು ಅಂತರಿಕ್ಷದಲ್ಲಿ ರಾವಣನ ತೊಡೆಯನ್ನೈದಿದಂಥಾದ್ದಾಗಿ, ಕಾಲಮೇಘವಂ ಭೇದಿಸಿಕೊಂಡು ಉದೆಯವನ್ನೈದಿದ ಚಂದಿರನತೆರದಿ ಹೊಳೆಯುತ್ತಿತ್ತು [ಹೀಗೆ ಹೇಳುವದರಿಂದ ರಾವಣನ ವಿನಾಶಕ್ಕೆ ಹೇತುವಾದ ಪ್ರತಿಚಂದ್ರ ದರ್ಶನವೆಂಬ ಉತ್ಪಾತಕವು ಸೂಚಕವಾಯಿತು] ॥೧೮॥ ಇದಲ್ಲದೆ ರೋದನವಂ ಮಾಡುವದಾಗಿಯೂ, ಸಂತತವೂ ಸ್ರವಿಸುತಿರುವ ಕಂಬನಿಗಳುಳ್ಳದ್ದಾಗಿಯೂ, ಚಂದಿರನಂತೆಬೆಳಗುವದಾಗಿಯೂ, ಸಂಪಿಗೆ ಹೂವಿನಂದದಿರುವ ಮೂಗುಳ್ಳದ್ದಾಗಿಯೂ, ಕೆಂಪಾದ ತುಟಿಗಳುಳ್ಳದ್ದಾಗಿಯೂ, ಚಿನ್ನದ ಬಣ್ಣದಂತೆ ಬಣ್ಣವುಳ್ಳದ್ದಾಗಿಯೂ, ರಾಕ್ಷಸನಾದ ರಾವಣನ ಭೀತಿಯಿಂದ ಕಂಪಿಸುವದಾಗಿಯೂ, ಇರುವ ಆ ಸೀತಾದೇವಿಯ ಮುಖವು, ಹಗಲಿನಲ್ಲಿ ಉದಯವನ್ನೈದಿದ ಚಂದಿರನು ಯಿಂತು ಹೊಳೆಯದಿರುವನೋ, ಅಂತು ಶ್ರೀರಾಮನಂ ವಿನಹಾ ಹೊಳೆಯುತಿರಲಿಲ್ಲ ॥೨೦॥ ಮತ್ತು ಅಪರಂಜಿಯ ಬಣ್ಣದಂತೆ ಶರೀರದ ಬಣ್ಣವುಳ್ಳ ಆ ಸೀತಾದೇವಿಯು, ಕಪ್ಪಾಗಿ ರುವ ಆ ರಾವಣನನ್ನು ಹಿಡಿದಂಥಾದ್ದಾಗಿ, ನೀಲಮಣಿಯನ್ನಾಶ್ರಯಿಸಿದ ಓಡ್ಯಾಣದಂತೆ ಹೊಳೆಯುತ್ತಿದ್ದಳು (ಅಥವಾ ಕಪ್ಪಾಗಿರುವ ಆನೆಯನ್ನು ಆಶ್ರಯಿಂಗೈದ ಸುವರ್ಣವಿಕಾರವಾದ ಪಟ್ಟಿಯಂತೆ ಬೆಳಗುತ್ತಿದ್ದಳು. ॥೨೧॥ ಮತ್ತೂ ಕಮಲದಂತೆ ಗೌರವರ್ಣವುಳ್ಳ, ಚಿನ್ನದ ಕಾಂತಿಯಂತೆ ಕಾಂತಿಯುಳ್ಳ ಮತ್ತೂ ಅಪರಂಜೀವಿಕಾರವಾದ ಒಡವೆಗಳುಳ್ಳ ಆ ಜನಕನಂದಿನಿಯಾದ ಸೀತಾದೇವಿಯು ರಾವಣನ ತೊಡೆಯನ್ನೈದಿ, ಮೇಘಮಧ್ಯವರ್ತಿಯಾದ ಮಿಂಚಿನಂತೆ ಕಂಗೊಳಿಸುತ್ತಿದ್ದಳು ॥೨೨॥ ಇದಲ್ಲದೆ ವೃಕ್ಷಂಗಳ ಪ್ರವಾಳಂಗಳಂತೆ ಕೆಂಪುಬಣ್ಣವುಳ್ಳ ಆ ಸೀತಾದೇವಿಯು, ಸುವರ್ಣನಿರ್ಮಿತವಾದ ಆನೆಯನ್ನು ಕಂಗೊಳಿಸುವಂತೆ ಮಾಡುವ ಅಂದದಿ

ರಾಕ್ಷಸಾಧಿಪಃ । ಬಭೌ ಸಚಪಲೋ ನೀಲಸ್ಸಘೋಷ ಇವ ತೋಯದಃ ।೧೮। ಉತ್ತಮಾಂಗಾಚ್ಚ್ಯುತಾ ತಸ್ಯಾಃ ಪುಷ್ಪವೃ
ಷ್ಟಿಸ್ಸಮಂತತಃ। ಸೀತಾಯಾ ಹ್ರಿಯಮಾಣಾಯಾಃ ಪಪಾತ ಧರಣೀತಲೇ ।೧೯। ಸಾ ತು ರಾವಣವೇಗೇನ ಪುಷ್ಪವೃಷ್ಟಿಸ್ಸಮಂ
ತತಃ । ಸಮಾಧೂತಾ ದಶಗ್ರೀವಂ ಪುನರೇವಾಭ್ಯವರ್ತತ ।೨೦। ಅಭ್ಯವರ್ತತ ಪುಷ್ಪಾಣಾಂ ಧಾರಾ ವೈಶ್ರವಣಾನುಜಂ ।
ನಕ್ಷತ್ರಮಾಲಾ ವಿಮಲಾ ಮೇರುಂ ನಗಮಿವೋನ್ನತಂ ।೨೧। ಚರಣಾನ್ನೂಪುರಂ ಭ್ರಷ್ಟಂ ವೈದೇಹ್ಯಾ ರತ್ನಭೂಷಿತಂ । ವಿ
ದ್ಯುನ್ಮಂಡಲಸಂಕಾಶಂ ಪಪಾತ ಮಧುರಸ್ವನಂ ।೨೨। ತಾಂ ಮಹೋಲ್ಕಾಮಿವಾಕಾಶೇ ದೀಪ್ಯಮಾನಾಂ ಸ್ವತೇಜಸಾ । ಜ
ಹಾರಾಕಾಶಮಾವಿಶ್ಯ ಸೀತಾಂ ವೈಶ್ರವಣಾನುಜಃ ।೨೩। ತಸ್ಯಾಸ್ತಾನ್ಯಗ್ನಿವರ್ಣಾನಿ ಭೂಷಣಾನಿ ಮಹೀತಲೇ । ಸಘೋಷಾ
ಣ್ಯವಕೀರ್ಯಂತ ಕ್ಷೀಣಾಸ್ತಾರಾ ಇವಾಂಬರಾತ್ ।೨೪। ತಸ್ಯಾಸ್ಸ್ತನಾಂತರಾದ್ಭ್ರಷ್ಟೋ ಹಾರಸ್ತಾರಾಧಿಪದ್ಯುತಿಃ । ವೇ

---

ಮಾಡಿಸುತ್ತದೋ ಹಾಗೆ ಸೀತಾದೇವಿಯೂ ರಾವಣನನ್ನು, ರಾಮನಿಂದ ಬದ್ಧನನ್ನಾಗಿಮಾಡಿಸುವಳೆಂದು ಸೂಚನೆಯಾಗುತ್ತದೆ) ||೧೭|| ತಸ್ಯಾಃ ವೈದೇಹ್ಯಾಃ-ಆ ಸೀತಾದೇವಿಯ, ಭೂಷಣಘೋಷೇಣ-ವಡವೆಗಳ ಧ್ವನಿಯಿಂದ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ ರಾವಣನು, ಸಚಪಲಃ-ಮಿಂಚಿನಿಂದೊಡಗೂಡಿದ. ನೀಲಃ-ಕಪ್ಪಾಗಿರುವ, ಸಘೋಷಃ-ಗರ್ಜನೆಯಿಂದ ಕೂಡಿಕೊಂಡಿರುವ, ತೋಯದಃ ಇವ-ಮೇಘದಂತೆ, ಬಭೌ-ಹೊಳೆಯುತ್ತಿತ್ತು, (ಇದರಿಂದ ಮೇಘವು ಹ್ಯಾಗೆ ಧ್ವನಿಗೊಂಡು ನಿಸ್ಸಾರವಾಗಿ ಆಗುತದೋ ಹಾಗೆ ಆ ರಾವಣನು ಬ್ಯಾಗನೆ ಕ್ಷೀಣವಾದ ಬಲವುಳ್ಳವನಾಗುವನೆಂದು ಸೂಚಕವಾಗುತ್ತದೆ) ||೧೮|| ಹ್ರಿಯಮಾಣಾಯಾಃ-ಅಪಹರಿಸಿಕೊಂಡು ಹೋಗಲ್ಪಡುತ್ತಿರುವ- ತಸ್ಯಾಸ್ಸೀತಾಯಾಃ-ಆ ಸೀತಾದೇವಿಯ, ಉತ್ತಮಾಂಗಾತ್-ಶಿರಸ್ಸಿನಿಂದ. ಚ್ಯುತಾ-ಜಾರುತ್ತಿರುವ. ಪುಷ್ಪವೃಷ್ಟಿಃ-ಪುಷ್ಪಗಳಮಳೆಯು, ಸಮಂತತಃ-ಯಲ್ಲಾ ಕಡೆಯಲ್ಲಿಯೂ, ಧರಣೀತಲೇ-ನೆಲದಲ್ಲಿ, ಪಪಾತ-ಬಿದ್ದುಹೋಯಿತು ||೧೯|| ಸಾ ಪುಷ್ಪವೃಷ್ಟಿಃ-ಆ ಹುವ್ವುಗಳ ಮಳೆಯು. ರಾವಣವೇಗೇನ-ರಾವಣಾಸುರನ ಗಮನವೇಗದಿಂದ, ಸಮಂತತಃ-ಎಲ್ಲಾ ಕಡೆಯಲ್ಲಿಯೂ, ಸಮಾಧೂತಾ-ಕೊಡಹಲ್ಪಟ್ಟಂಥಾದ್ದಾಗಿ. ದಶಗ್ರೀವಂ-ರಾವಣನನ್ನು, ಪುನರೇವ-ಮತ್ತೂ, ಅಭ್ಯವರ್ತತ-ಹೊಂದಿತು ||೨೦|| ಪುಷ್ಪಾಣಾಂ-ಹುವ್ವುಗಳ, ಧಾರಾ-ಪಙ್ಕ್ತಿಯು. ವೈಶ್ರವಣಾನುಜಂ-ಕುಬೇರನಿಗೆ ತಮ್ಮನಾದ ರಾವಣನನ್ನು, ವಿಮಲಾ-ನಿರ್ಮಲವಾದ, ನಕ್ಷತ್ರಮಾಲಾ-ನಕ್ಷತ್ರಗಳ ಪಙ್ಕ್ತಿ, ಉನ್ನತಂ-ಅತಿಉದ್ದವಾಗಿರುವ, ಮೇರುಂ ನಗಮಿವ-ಮೇರುಪರ್ವತದಂತೆ, ಅಭ್ಯವರ್ತತ-ಸುತ್ತುಮುತ್ತಲೂ ನಿಂತಿತು ||೨೧|| ವೈದೇಹ್ಯಾಃ-ಸೀತಾದೇವಿಯ. ಚರಣಾತ್-ಕಾಲುಗಳ ಕಡೆಯಿಂದ. ಭ್ರಷ್ಟಂ-ಕೆಳಕ್ಕೆ ಜಾರುತ್ತಿರುವ. ರತ್ನಭೂಷಿತಂ-ರತ್ನಖಚಿತವಾದ, ಮಧುರಸ್ವನಂ-ಮನೋಹರವಾದ ಧ್ವನಿಯುಳ್ಳ, ನೂಪುರಂ-ಪಾದಕಡಗವು, ವಿದ್ಯುನ್ಮಂಡಲಸಂಕಾಶಂ-ಮಿಂಚುಗಳ ಗುಂಪಿನಂತೆ ಹೊಳೆಯುವಂಥಾದ್ದಾಗಿ, ಪಪಾತ-ಬಿದ್ದಿತು ||೨೨|| ವೈಶ್ರವಣಾನುಜಃ-ಕುಬೇರನ ತಮ್ಮನಾದ ರಾವಣನು, ಆಕಾಶೇ-ಅಂತರಿಕ್ಷಮಾರ್ಗದಲ್ಲಿ, ಸ್ವತೇಜಸಾ-ತನ್ನ ತೇಜಸ್ಸಿನಿಂದ, ದೀಪ್ಯಮಾನಾಂ-ಹೊಳೆಯುತ್ತಿರುವ. ಮಹೋಲ್ಕಾಮಿವ-ದೊಡ್ಡ ಕೊಳ್ಳಿಯಂತೆ ಇರುವ. ತಾಂ ಸೀತಾಂ-ಆ ಸೀತಾದೇವಿಯನ್ನು, ಆಕಾಶಂ-ಅಂತರಿಕ್ಷವನ್ನು, ಆವಿಶ್ಯ-ಹೊಕ್ಕು, ಜಹಾರ-ತೆಗೆದುಕೊಂಡು ಹೋದನು ||೨೩|| ತಸ್ಯಾಃ-ಆ ಸೀತಾದೇವಿಯ, ಅಗ್ನಿವರ್ಣಾನಿ-ಬೆಂಕಿಗೆ ಸಮಾನವಾದ ಬಣ್ಣವುಳ್ಳ, ಸಘೋಷಾಣಿ-ಶಬ್ದದಿಂದೊಡಗೂಡಿದ, ತಾನಿ ಭೂಷಣಾನಿ-ಆ ಆಭರಣಗಳು, ಅಂಬರಾತ್-ಅಂತರಿಕ್ಷದ ಕಡೆಯಿಂದ, ಕ್ಷೀಣಾಃ-ಕ್ಷಯವಂ ಹೊಂದಿದ, ತಾರಾ ಇವ-ನಕ್ಷತ್ರಗಳಂತೆ, ಮಹೀತಲೇ-ನೆಲದಲ್ಲಿ, ಅವಕೀರ್ಯಂತ-ಎರಚಲ್ಪಟ್ಟವು ||೨೪|| ತಸ್ಯಾಃ ವೈದೇಹ್ಯಾಃ-ಆ ಸೀತಾದೇವಿಯ, ಸ್ತನಾಂತರಾತ್-ಸ್ತನಗಳ ಮ

---

ರಾಕ್ಷಸೇಶ್ವರನಾದ ರಾವಣನನ್ನು ಕಂಗೊಳಿಸುವಂತೆ ಮಾಡಿದಳು [ಈ ಅರ್ಥದಿಂದ ಸೀತಾದೇವಿಯು ದುಷ್ಟನಾದ ರಾವಣನನ್ನು ಶ್ರೀರಾಮನಿಂದ ಬದ್ಧಂಗೈಯ್ಯಿಸುವಳೆಂಬ ಅಭಿಪ್ರಾಯವು ಸೂಚನೆಯಾಗುತದೆ] ।೧೭। ಮತ್ತೂ ಆ ಸೀತಾದೇವಿಯ ವಡಿವೆಗಳ ಧ್ವನಿಯಿಂದ ರಾವಣನು, ಮಿಂಚಿನಿಂದೊಡಗೂಡಿದ ಕಾಲಮೇಘವು ಘರ್ಜನೆಯಂಗೈದು ಯಿಂತು ನಿಸ್ಸಾರವಾಗುವದೋ, ಅಂತು ರಾವಣನು ಬೇಗ ಕ್ಷೀಣವಾದ ಬಲವುಳ್ಳವನಾಗುವನೆಂದು ಭಾವವು ತೋರುತ್ತದೆ] ।೧೮। ಇದಲ್ಲದೆ ಗಗನಮಾರ್ಗದಲ್ಲಿ ತೆಗದುಕೊಂಡು ಪೋಗಲ್ಪಡುವ ಆ ಸೀತಾದೇವಿಯ ಶಿರದಲ್ಲಿ ಮುಡಿಕೊಂಡಿರುವ ಪುಷ್ಪಂಗಳು ಸುತ್ತುಮುತ್ತಲೂ ನೆಲದಲ್ಲಿ ಉದುರುತ್ತಿರಲೂ, ಆ ಪುಷ್ಪವೃಷ್ಟಿಯು ರಾವಣಾಸುರನ ವೇಗದಿಂದ ಕೊಡಲ್ಪಟ್ಟದ್ದಾಗಿ ಮತ್ತೂ ರಾವಣನ ಸಮೀಪವನ್ನೈದಿತು. ಈಪ್ರಕಾರವಾಗಿ ರಾವಣನ ಸಮೀಪವನ್ನೈದಿದ ಆ ಪುಷ್ಪವೃಷ್ಟಿಯು, ಮೇರುಗಿರಿಗೆ ಸುತ್ತುಮುತ್ತಲೂ ನಕ್ಷತ್ರಂಗಳ ಪಙ್ಕ್ತಿಯು ನಿಲ್ಲುವಂತೆ, ಕುಬೇರನ ತಮ್ಮನಾದ ಆ ರಾವಣನ ಸುತ್ತಲೂ ನಿಂತದ್ದಾಯಿತು ।೨೧। ಮತ್ತೂ ಸೀತಾದೇವಿಯ ಪಾದದಿಂದ ಜಾರಿದ ರತ್ನಖಚಿತವಾದ ಕಾಲುಸರಪಣಿಯು ಮಿಂಚುಗಳ ಸಮೂಹದಂದದಿ ಹೊಳೆಯುತ್ತಾ ಗಗನದಿಂದ ನೆಲದಲ್ಲಿ ಬಿದ್ದದ್ದಾಯಿತು ।೨೨। ಆ ಸಮಯದಲ್ಲಿ ದಶಕಂಠನು, ಅಂತರಿಕ್ಷವನ್ನೈದಿ ಗಗನಮಾರ್ಗದಲ್ಲಿ ತನ್ನ ಕಾಂತಿಯಿಂದ ಹೊಳೆವ ದೊಡ್ಡ ಕೊಳ್ಳಿಯಂತೆ ಆ ಸೀತಾದೇವಿಯನ್ನು ಅಪಹರಿಸಿಕೊಂಡುಪೋದನು ।೨೩। ಆ ವೇಳೆಯಲ್ಲಿ ಅಗ್ನಿಸದೃಶನಾದ ಮತ್ತೂ ಶಬ್ದವಂಗೈಯ್ಯುವ ಆ ಆಭರಣಂಗಳು, ಕ್ಷೀಣವಾಗಿ ಗಗನದಿಂದ ಉದುರುತ್ತ

ದೇಹ್ಯಾನಿಪತನ್ಭಾತಿಗಂಗೇವಗಗನಾಚ್ಚ್ಯುತಾ ||೩೫|| ಉತ್ಪನ್ನವಾತಾಭಿಹತಾನಾನಾದ್ವಿಜಗಣಾಯುತಾಃ | ಮಾಭೈರಿತಿವಿಧೂತಾಗ್ರಾವ್ಯಾಜಹ್ರುರಿವಪಾದಪಾಃ ||೩೬|| ನಳಿನ್ಯೋಧ್ವಸ್ತಕಮಲಾಸ್ತ್ರಸ್ತಮೀನಜಲೇಚರಾಃ | ಸಖೀಮಿವಗತೋಚ್ಛ್ವಾಸಾಮನ್ವಶೋಚಂತಮೈಥಿಲೀಂ ||೩೭|| ಸಮಂತಾದಭಿಸಂಪತ್ಯಸಿಂಹವ್ಯಾಘ್ರಮೃಗದ್ವಿಜಾಃ | ಅನ್ವಧಾವಂಸ್ತದಾರೋಷಾತ್ಸೀತಾಂಛಾಯಾನುಗಾಮಿನಃ ||೩೮|| ಜಲಪ್ರಪಾತಾಸ್ರಮುಖಾಶ್ಶೃಂಗೈರುಚ್ಛ್ರಿತಬಾಹುಭಿಃ | ಸೀತಾಯಾಂಹ್ರಿಯಮಾಣಾಯಾಂವಿಕ್ರೋಶಂತೀವಪರ್ವತಾಃ ||೩೯|| ಹ್ರಿಯಮಾಣಾಂತುವೈದೇಹೀಂದೃಷ್ಟ್ವಾದೀನೋದಿವಾಕರಃ | ಪ್ರತಿಧ್ವಸ್ತಪ್ರಭಶ್ಶ್ರೀಮಾನಾಸೀತ್ಪಾಂಡುರಮಂಡಲಃ ||೪೦|| ನಾಸ್ತಿಧರ್ಮಃಕುತಸ್ಸತ್ಯಂನಾರ್ಜವಂನಾನೃಶಂಸತಾ | ಯತ್ರರಾಮಸ್ಯವೈದೇಹೀಂಭಾರ್ಯಾಂಹರತಿರಾವಣಃ | ಇತಿಸರ್ವಾಣಿಭೂತಾನಿಗಣಶಃಪರ್ಯದೇವಯನ್ ||೪೧||

---

ಧ್ಯಪ್ರದೇಶದಿಂದ, ಭ್ರಷ್ಟಃ-ಜಾರಿಹೋಗುತ್ತಿರುವ, ತಾರಾಧಿಪದ್ಯುತಿಃ-ಚಂದ್ರನ ಕಾಂತಿಯಂತೆ ಕಾಂತಿಯುಳ್ಳ, ಹಾರಃ-ಕಂಠೀಸರವು, ಗಗನಾತ್-ಅಂತರಿಕ್ಷದದೆಶೆಯಿಂದ ನಿಪತನ್-ಬೀಳುತ್ತಿರುವದಾಗಿ, ಗಗನಾತ್-ಅಂತರಿಕ್ಷದದೆಶೆಯಿಂದ, ಚ್ಯುತಾ-ಜಾರುತ್ತಿರುವ, ಗಂಗೇವ-ಗಂಗೆಯಂತೆ, ಭಾತಿ-ಹೊಳೆಯುತ್ತಿತ್ತು ||೩೫|| ಉತ್ಪನ್ನವಾತಾಭಿಹತಾಃ-ರಾವಣನ ಊರುವೇಗದದೆಶೆಯಿಂದ ಉತ್ಪನ್ನವಾದ ಘಾಳಿಯಿಂದ ಹೊಡೆಯಲ್ಪಟ್ಟ, ನಾನಾದ್ವಿಜಗಣಾಯುತಾಃ-ಅನೇಕ ಪಕ್ಷಿಗಳ ತಂಡಗಳಿಂ ಕೂಡಿಕೊಂಡಿರುವ, ವಿಧೂತಾಗ್ರಾಃ-ಕೊಡಹಲ್ಪಟ್ಟ ತುದಿಗಳುಳ್ಳ, ಪಾದಪಾಃ-ಗಿಡಗಳು. ಮಾಭೈರಿತಿ-ಭಯ ಬೀಳಬ್ಯಾಡವೆಂದು, ವ್ಯಾಜಹ್ರುರಿವ-ಹೇಳುತ್ತವೋ ಎಂಬಂತಿದ್ದವು ||೩೬|| ಧ್ವಸ್ತಕಮಲಾಃ-ನಾಶಗೊಂಡ ಕಮಲಗಳುಳ್ಳ, ತ್ರಸ್ತಮೀನಜಲೇಚರಾಃ-ಭಯಗೊಂಡ ಮೀನುಗಳೇ ಮೊದಲಾದ ಜಲಜಂತುಗಳುಳ್ಳ, ನಳಿನ್ಯಃ-ಕಮಲಸರಸ್ಸುಗಳು, ಗತೋಚ್ಛ್ವಾಸಾಂ-ಹೋದ ಉಸುರುಳ್ಳ, ಸಖೀಮಿವ-ಸ್ನೇಹಿತಳನ್ನಂತೆ. ಮೈಥಿಲೀಂ-ಸೀತಾದೇವಿಯನ್ನು, ಅನ್ವಶೋಚಂತ-ಅನುಸರಿಸಿ ವ್ಯಥೆಗೊಂಡವು ||೩೭|| ಸಿಂಹವ್ಯಾಘ್ರಮೃಗದ್ವಿಜಾಃ-ಸಿಂಹಗಳೂ ಹುಲಿಗಳೂ ಜಿಂಕೆಗಳೂ ಹಕ್ಕಿಗಳೂ, ಸಮಂತಾತ್-ಎಲ್ಲಾ ಕಡೆಯಲ್ಲಿಯೂ, ಅಭಿಸಂಪತ್ಯ-ಸೇರಿ. ತದಾ-ಆಕಾಲದಲ್ಲಿ, ರೋಷಾತ್-ರಾವಣನಲ್ಲಿ ರೋಷದದೆಶೆಯಿಂದ ಛಾಯಾನುಗಾಮಿನಃ-ನೆರಳನ್ನೇ ಅನುಸರಿಸಿಬರುತ್ತಿರುವವುಗಳಾಗಿ, ಸೀತಾಂ-ಸೀತಾದೇವಿಯನ್ನು. ಅನ್ವಧಾವನ್-ಅನುಸರಿಸಿಓಡಿದವು ||೩೮|| ಸೀತಾಯಾಂ-ಸೀತಾದೇವಿಯು, ಹ್ರಿಯಮಾಣಾಯಾಂಸತ್ಯಾಂ-ಅಪಹರಿಸಲ್ಪಡುತ್ತಿರಲಾಗಿ, ಜಲಪ್ರಪಾತಾಸ್ರಮುಖಾಃ-ಬೆಟ್ಟದ ನದಿಗಳೇ ಕಂಬನಿಗಳು ಮುಖದಲ್ಲಿಯುಳ್ಳ. ಪರ್ವತಾಃ-ಬೆಟ್ಟಗಳು, ಶೃಂಗೈಃ-ಶಿಖರಗಳೆಂಬ, ಉಚ್ಛ್ರಿತಬಾಹುಭಿಃ-ಉನ್ನತಭುಜಗಳಿಂದ ವಿಕ್ರೋಶಂತೀವ-ಕೂಗುತ್ತವೋ ಎಂಬಂತಿದ್ದವು ||೩೯|| ಹ್ರಿಯಮಾಣಾಂ-ಕರೆದುಕೊಂಡು ಹೋಗಲ್ಪಡುತ್ತಿರುವ, ವೈದೇಹೀಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು. ದೀನಃ-ದೈನ್ಯವುಳ್ಳ. ದಿವಾಕರಃ-ಸೂರ್ಯನು ಶ್ರೀಮಾನ್-ಶೋಕವೆಂಬ ಸಂಪತ್ತುಳ್ಳವನಾಗಿ. ಪ್ರತಿಧ್ವಸ್ತಪ್ರಭಃ-ಹೋಗಲಾಡಿಸಲ್ಪಟ್ಟ ಕಾಂತಿಯುಳ್ಳವನಾಗಿ, ಪಾಂಡುರಮಂಡಲಃ-ಬೆಳ್ಳಗಿರುವಂತೆ ಮಂಡಲಾಕಾರವುಳ್ಳವನು, ಆಸೀತ್-ಆದನು ||೪೦|| ಯತ್ರ-ಯಾವ ಸ್ಥಳದಲ್ಲಿ, ರಾಮಸ್ಯ-ಶ್ರೀರಾಮನ, ಭಾರ್ಯಾಂ-ಹೆಂಡತಿಯಾದ. ವೈದೇಹೀಂ-ಸೀತಾದೇವಿಯನ್ನು, ರಾವಣಃ-ರಾವಣನು, ಹರತಿ-ಅಪಹರಿಸಿದನೋ, ತತ್ರ-ಆ ಸ್ಥಳದಲ್ಲಿ, ಧರ್ಮಃ-ಧರ್ಮವು. ನಾಸ್ತಿ-ಇಲ್ಲ, ಸತ್ಯಂ-ಯಥಾರ್ಥವು, ಕುತಃ-ಎಲ್ಲೀದು, ಆರ್ಜವಂ-ಕುಟಿಲರಹಿತ್ಯವು, ನ-ಇಲ್ಲ. ಅನೃಶಂಸತಾ-ದಯೆಯು, ನ-ಇಲ್ಲ. ಇತಿ-ಇಂತೆಂದು, ಸರ್ವಾಣಿ-ಸಮಸ್ತಗಳಾದ, ಭೂತಾನಿ-ಪ್ರಾಣಿಗಳು, ಗಣಶಃ-ಗುಂಪುಸೇರಿ, ಪರ್ಯದೇವಯನ್-ಅನುತಾಪಗೊಂಡರು ||೪೧|| || ವಿತ್ರಸ್ತಕಾ-ಭೀತಳ

---

ವ ನಕ್ಷತ್ರಂಗಳಂತೆ ನೆಲದಲ್ಲಿ ಯೆರಚಲ್ಪಟ್ಟವು ||೩೪|| ಆ ಸೀತಾದೇವಿಯ ಸ್ತನಂಗಳ ಮಧ್ಯದಿಂದ ಜಾರಿದ ಮುತ್ತಿನ ಚಂದಿರನಂತೆ ಹೊಳೆವ ಕಂಠೀಸರವು, ಅಂತರಿಕ್ಷದಿಂದ ಇಳಿಯುತ್ತಿರುವ ಗಂಗಾನದಿಯಂತೆ ಹೊಳೆಯುತ್ತಿತ್ತು ||೩೫|| ಇದಲ್ಲದೆ ಆ ರಾವಣನ ಊರುವೇಗದಿಂದ ಉತ್ಪನ್ನವಾದ ಘಾಳಿಯಿಂ ಹೊಡೆಯಲ್ಪಟ್ಟ, ಮತ್ತೂ ಅನೇಕ ಪಕ್ಷಿಗಳ ಸಮೂಹಂಗಳಿಂದೊಡಗೂಡಿದವೃಕ್ಷಂಗಳು ಕಂಪಾಯಮಾನವಾದ ಕೊನೆಗಳುಳ್ಳವುಗಳಾಗಿ. ಭಯಪಡಬ್ಯಾಡೆಂದು ಹೇಳುತವೋ ಯೇನೋ ಯೆಂಬಂತಿದ್ದವು ||೩೬|| ಆ ಸಮಯದಲ್ಲಿ ನಾಶವನ್ನೈದಿದ ಕಮಲಂಗಳುಳ್ಳ ಮತ್ತೂ ಭಯವನ್ನೈದಿದ ಮೀನು ಮೊದಲಾದ ಜಲಜಂತುಗಳುಳ್ಳ ಕಮಲಸರೋವರಂಗಳು, ಉಸುರಿಲ್ಲದ ಸಖಿಯಂ ಕಂಡು ದುಃಖಿಸುವಂತೆ ದುಃಖಿಸುತಿದ್ದವು ||೩೭|| ಮತ್ತೂ ಆ ವೇಳೆಯಲ್ಲಿ ಸಿಂಹಗಳೂ, ಹುಲಿಗಳೂ, ಜಿಂಕೆಗಳೂ ಹಕ್ಕಿಗಳೂ ಇವೆಲ್ಲ ಗುಂಪುಸೇರಿ, ರಾವಣನಲ್ಲಿ ಮಹಾರೋಷದಿಂದ ಅವನ ನೆರಳನ್ನನುಸರಿಸಿ ಸೀತಾದೇವಿಯ ಹಿಂದುಗಡೆಯಲ್ಲಿ ಓಡಿಬರುತ್ತಿದ್ದವು ||೩೮|| ಮತ್ತೂ ಆ ಸಮಯದಲ್ಲಿ ನದಿಗಳೆಂಬ ಕಂಬನಿಗಳುಳ್ಳ ಮುಖಂಗಳುಳ್ಳವುಗಳಾಗಿ, ಪರ್ವತಂಗಳು ಶಿಖರಂಗಳೆಂಬ ಉನ್ನತವಾದ ಭುಜಂಗಳಿಂದ ಕೂಗುತವೋ ಯೇನೋ ಯೆಂಬಂತೆ ತೋರುತ್ತಿದ್ದವು ||೩೯|| ಮತ್ತೂ ಆ ಸೀತಾಪಹಾರಕಾಲದಲ್ಲಿ ಸೂರ್ಯನು ಶೋಕವೆಂಬ ಸಂಪತ್ತುಳ್ಳವನಾಗಿ ಕಳೆಗುಂದಿದವನಾಗಿ ಬೆಳ್ಳಗಿರುವ ಮಂಡಲವುಳ್ಳವನಾದನು ||೪೦|| ಇದಲ್ಲದೆ ಯಾವ ಪ್ರದೇಶದಲ್ಲಿ ರಾವಣನು ಸೀತೆಯನ್ನಪಹರಿಸಿಕೊಂಡು ಪೋದನೋ, ಆ ಪ್ರದೇಶದಲ್ಲಿ ಸರ್ವಪ್ರಾಣಿಗಳು, ಹಾಹಾ!! ಇಲ್ಲಿ ಧರ್ಮವು, ದಯೆಯು, ಸತ್ಯ

ವಿತ್ರಸ್ತಕಾ ದೀನಮುಖಾ ರುರುದುರ್ಮೃಗಪೋತಕಾಃ । ಉದ್ವೀಕ್ಷ್ಯೋದ್ವೀಕ್ಷ್ಯ ನಯನೈರಾಸ್ರಪಾತಾವಿಲೇಕ್ಷಣಾಃ ॥೪೨॥
ಸುಪ್ರವೇಪಿತಗಾತ್ರಾಶ್ಚ ಬಭೂವುರ್ವನದೇವತಾಃ । ವಿಕ್ರೋಶಂತೀಂ ದೃಢಂ ಸೀತಾಂ ದೃಷ್ಟ್ವಾ ದುಃಖಂ ತಥಾಗತಾಂ ॥
ತಾಂ ತು ಲಕ್ಷ್ಮಣ ರಾಮೇತಿ ಕ್ರೋಶಂತೀಂ ಮಧುರಸ್ವರಂ । ಅವೇಕ್ಷಮಾಣಾಂ ಬಹುಶೋ ವೈದೇಹೀಂ ಧರಣೀತಲಂ ॥೪೪॥ ಸ
ತಾಮಾಕುಲಕೇಶಾಂತಾಂ ವಿಪ್ರಮೃಷ್ಟವಿಶೇಷಕಾಂ । ಜಹಾರಾತ್ಮವಿನಾಶಾಯ ದಶಗ್ರೀವೋ ಮನಸ್ವಿನೀಂ ॥೪೫॥ ತತ
ಸ್ತು ಸಾ ಚಾರುದತೀ ಶುಚಿಸ್ಮಿತಾ ವಿನಾಕೃತಾ ಬಂಧುಜನೇನ ಮೈಥಿಲೀ । ಅಪಶ್ಯತೀ ರಾಘವಲಕ್ಷ್ಮಣಾವುಭೌ ವಿವರ್ಣವ
ಕ್ತ್ರಾ ಭಯಭಾರಪೀಡಿತಾ ॥೪೬॥ —* ಇತಿ ಶ್ರೀಮದಾರಣ್ಯಕಾಂಡೇ ದ್ವಿಪಂಚಾಶಸ್ಸರ್ಗಃ *—

ಖಮುತ್ಪತಂತಂ ತಂ ದೃಷ್ಟ್ವಾ ಮೈಥಿಲೀ ಜನಕಾತ್ಮಜಾ । ದುಃಖಿತಾ ಪರಮೋದ್ವಿಗ್ನಾ ಭಯೇ ಮಹತಿ ವರ್ತಿನೀ ॥೧॥
ರೋಷರೋದನತಾಮ್ರಾಕ್ಷೀ ಭೀಮಾಕ್ಷಂ ರಾಕ್ಷಸಾಧಿಪಂ । ರುದಂತೀ ಕರುಣಂ ಸೀತಾ ಹ್ರಿಯಮಾಣೇದಮಬ್ರವೀತ್ ॥೨॥

---

ಯುಗೊಂಡ, ದೀನಮುಖಾಃ-ದೈನ್ಯಯುಕ್ತವಾದ ಮುಖಗಳುಳ್ಳ, ಮೃಗಪೋತಕಾಃ-ಜಿಂಕೇಮರಿಗಳೂ, ನಯನೈಃ-ನೇತ್ರಗಳಿಂದ ಉದ್ವೀಕ್ಷ್ಯೋದ್ವೀಕ್ಷ್ಯ-ನೋಡಿನೋಡಿ, ಆಸ್ರಪಾತಾವಿಲೇಕ್ಷಣಾಃ-ಕಣ್ಣೀರಿನಿಂದ ವ್ಯಾಪ್ತವಾದ ನೇತ್ರಗಳುಳ್ಳವುಗಳಾಗಿ, ರುರುದುಃ-ಅಳುತ್ತಿದ್ದವು ॥೪೨॥ ವನದೇವತಾಃ-ವನದೇವತೆಗಳು, ವಿಕ್ರೋಶಂತೀಂ-ಅಳುತ್ತಿರುವ, ತಥಾ-ಅಂಥಾದ್ದಾದ, ದುಃಖಂ-ದುಃಖವನ್ನು, ಗತಾಂ-ಹೊಂದುತ್ತಿರುವ, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಹೇರಾಮ-ಎಲೈ ಶ್ರೀರಾಮನೇ. ಇತಿ-ಇಂತೆಂದು, ಮಧುರಸ್ವರಂ ಯಥಾತಥಾ-ಮನೋಹರವಾದ ಧ್ವನಿಗೊಳಿಸೋಣಹ್ಯಾಗೋ ಹಾಗೆ. ಕ್ರೋಶಂತೀಂ-ಕೂಗುತ್ತಿರುವ, ಭೂಯಃ-ಬಹಳವಾಗಿ, ಧರಣೀತಲಂ-ಭೂಪ್ರದೇಶವನ್ನು, ಅವೇಕ್ಷಮಾಣಾಂ-ನೋಡುತ್ತಿರುವ, ವೈದೇಹೀಂ-ವಿದೇಹರಾಜನ ಮಗಳಾದ, ಖ್ಯಾತಾಂ-ಪ್ರಸಿದ್ಧಳಾದ, ತಾಂ-ಆ. ಸೀತಾಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು, ದೃಢಂ-ನಿಶ್ಚಯವಾಗಿ, ಸುಪ್ರವೇಪಿತಗಾತ್ರಾಃ-ಬಹಳವಾಗಿ ನಡುಗುತ್ತಿರುವ ಶರೀರವುಳ್ಳವರು, ಬಭೂವುಃ-ಆದರು ॥೪೪॥ ಸದಶಗ್ರೀವಃ-ಆ ರಾವಣಾಸುರನು, ಆಕುಲಕೇಶಾಂತಾಂ-ವ್ಯಾಕುಲವಾದ ಕೂದಲುಗಳ ಕೊನೆಗಳುಳ್ಳ, (ಅಂದರೆ-ಬಿಚ್ಚಿ ಹೋದ ಕೇಶಗಳುಳ್ಳ,) ವಿಪ್ರಮೃಷ್ಟವಿಶೇಷಕಾಂ-ವರಸಿಕೊಳ್ಳಲ್ಪಟ್ಟ ತಿಲಕವುಳ್ಳ, ಮನಸ್ವಿನೀಂ-ದೃಢಮನಸ್ಸುಳ್ಳ, ತಾಂ-ಆ ಸೀತಾದೇವಿಯನ್ನು, ಆತ್ಮವಿನಾಶಾಯ-ತನ್ನ ನಾಶಕ್ಕೋಸುಗ, ಜಹಾರ-ಅಪಹರಿಸಿಕೊಂಡು ಹೋದನು ॥೪೫॥ ತತಃ-ಬಳಿಕ, ಚಾರುದತೀ-ಮನೋಹರವಾದ ದಂತಗಳುಳ್ಳ, ಶುಚಿಸ್ಮಿತಾ-ಶುಭ್ರವಾದ ಮುಗುಳುನಗೆಯುಳ್ಳ, ಮೈಥಿಲೀ-ಸೀತಾದೇವಿಯು, ಬಂಧುಜನೇನ-ಬಂಧುಜನರೊಡನೆ, ವಿನಾಕೃತಾ-ಪ್ರತ್ಯೇಕವಾಗಿ ಮಾಡಲ್ಪಟ್ಟವಳಾಗಿ, ರಾಘವಲಕ್ಷ್ಮಣಾವುಭೌ-ರಾಮಲಕ್ಷ್ಮಣರಿಬ್ಬರನ್ನು, ಅಪಶ್ಯತೀ-ಕಾಣದಿರುವಳಾಗಿ, ಭಯಭಾರಪೀಡಿತಾ-ಭಯವೆಂಬ ಭಾರದಿಂ ಬಾಧೆಗೊಂಡ, ಸಾ-ಆ ಸೀತಾದೇವಿಯು, ವಿವರ್ಣವಕ್ತ್ರಾ-ಕಾಂತಿಹೀನವಾದ ಮುಖವುಳ್ಳವಳು, ಬಭೂವ-ಆದಳು ॥೪೬॥

—** ಇತಿ ಶ್ರೀಮದಾರಣ್ಯಕಾಂಡೇ ದ್ವಿಪಂಚಾಶಸ್ಸರ್ಗಃ **—

ಜನಕಾತ್ಮಜಾ-ಜನಕರಾಯನ ಮಗಳಾದ, ದುಃಖಿತಾ-ದುಃಖಗೊಂಡ, ಪರಮೋದ್ವಿಗ್ನಾ-ಬಹಳ ಹೆದರಿಕೆಯುಳ್ಳ, ಮಹತಿ ಭಯೇ-ಮಹಾಭಯದಲ್ಲಿ, ವರ್ತಿನೀ-ಇರುತ್ತಿರುವ, ಮೈಥಿಲೀ-ಸೀತಾದೇವಿಯೂ, ಖಂ-ಅಂತರಿಕ್ಷವಂಕುರಿತು, ಉತ್ಪತಂತಂ-ಹಾರುತ್ತಿರುವ, ತಂ-ಆ ರಾವಣನನ್ನು, ದೃಷ್ಟ್ವಾ-ಕಂಡು ॥೧॥ ರೋಷರೋದನತಾಮ್ರಾಕ್ಷೀ-ರೋಷದಿಂದಲೂ ಅಳುವಿಕೆಯಿಂದಲೂ ಕೆಂಪಾದ ನೇತ್ರಗಳುಳ್ಳ, ಕರುಣಂ-ದೈನ್ಯವಾಗಿ, ರುದಂತೀ-ಅಳುತ್ತಿರುವ. ಸೀತಾ-ಸೀತಾದೇವಿಯು, ಹ್ರಿಯಮಾಣಾ-ಅಪಹರಿಸಿಕೊಂಡು ಹೋಗಲ್ಪಡುತ್ತಿರುವಳಾಗಿ, ಭೀಮಾಕ್ಷಂ-ಭಯಂಕರವಾದ ನೇತ್ರಗಳುಳ್ಳ. ರಾಕ್ಷಸಾಧಿಪಂ-ರಕ್ಕಸರಿಗೆ ಅಧಿಪತಿಯಾದ ರಾವಣನಂಕುರಿತು. ಇದಂ-ಈ ಮಾತನ್ನು, ಅಬ್ರವೀತ್-ನುಡಿದಳು ॥೨॥ ಹೇನೀಚ-ಎಲೋ ನೀಚ

---

ವು, ಯಾವದೂ ಇಲ್ಲ, ಎಂದು ಸಂತಪಿಸುತ್ತಿದ್ದರು ॥೪೧॥ ಮತ್ತೂ ಆ ಸಮಯದಲ್ಲಿ ಕೇವಲ ಭಯವನ್ನೈದಿದ, ಜಿಂಕೇಮರಿಗಳು ಜನಕನಂದಿನಿಯಾದ ಸೀತಾದೇವಿಯಂ ನೋಡಿ ಸ್ವಕೀಯವಾದ ನೇತ್ರಂಗಳಿಂದ ಕಂಬನಿಗಳಂ ಸುರಿಸುತ್ತಾ ಅಳುತ್ತಿದ್ದವು ॥೪೨॥ ಆ ವೇಳೆಯಲ್ಲಿ ವನದೇವತೆಗಳು, ವಿಧವಿಧವಾಗಿ ಅಳುತ್ತಲೂ, ಅಯ್ಯೋ, ರಾಮನೇ! ಲಕ್ಷ್ಮಣನೇ! ಯೆಂದು ಕೂಗುತ್ತಲೂ ಇರುವ ಮಹಾ ದುಃಖವನ್ನೈದಿದ, ಆ ವಿದೇಹರಾಜನ ಪುತ್ರಿಕೆಯಾದ ಸೀತಾದೇವಿಯಂ ಕಂಡು, ನಿಶ್ಚಯವಾಗಿ ಕಂಪಿಸುತ್ತಿರುವ ಶರೀರಂಗಳುಳ್ಳವುಗಳಾದವು ॥೪೪॥ ಈ ರೀತಿಯಲ್ಲಿ ಆ ರಾವಣನು ಕೆದರಿದ ಕೂದಲುಗಳುಳ್ಳ ಮತ್ತೂ ವೊರಸಿಕೊಳ್ಳಲ್ಪಟ್ಟ ತಿಲಕವುಳ್ಳ ಆ ಸೀತಾದೇವಿಯನ್ನು, ತನ್ನ ನಾಶಕ್ಕಾಗಿ ಅಪಹರಿಸಿಕೊಂಡು ಹೋದನು ॥೪೫॥ ಅನಂತರದಲ್ಲಿ ಆ ಸೀತಾದೇವಿಯು ತನ್ನ ನೆಂಟರಾದ ರಾಮಲಕ್ಷ್ಮಣರಿಂದ ಬೇರೆಮಾಡಲ್ಪಟ್ಟವಳಾದ ಕಾರಣ, ಅವರೀರ್ವರಂ ಕಾಣದೆ ಬಹು ಭೀತಿಯನ್ನೈದಿದವಳಾಗಿ, ಕಂಗೆಟ್ಟಮುಖವುಳ್ಳವಳಾದಳು ॥೪೬॥ —* ಆರಣ್ಯಕಾಂಡದಲ್ಲಿನ ಐವತ್ತೆರಡನೆಯ ಸರ್ಗಂ ಮುಗಿದುದು *—

ಮಹಾದುಃಖವನ್ನೈದಿದವಳಾದಕಾರಣ ಬಹು ಹೆದರಿದ್ದವಳೂ ಜನಕನಂದಿನಿಯಾದ ಆ ಸೀತಾದೇವಿಯು, ಗಗನಕ್ಕೆ ಹಾರುತ್ತಿರುವ ಆ ರಾವಣನಂ ಕಂಡು, ರೋಷದಿಂದಲೂ ರೋದನದಿಂದಲೂ, ಸಹ ಕೆಂಪಾದ ಕಣ್ಣುಗಳು

ದೇಹ್ಯಾನಿಪತನ್ಭಾತಿಗಂಗೇವಗಗನಾಚ್ಚ್ಯುತಾ ॥೩೫। ಉತ್ಪನ್ನವಾತಾಭಿಹತಾನಾನಾದ್ವಿಜಗಣಾಯುತಾಃ । ಮಾಭೈರಿತಿವಿಧೂತಾಗ್ರಾವ್ಯಾಜಹ್ರುರಿವಪಾದಪಾಃ ।೩೬। ನಳಿನ್ಯೋಧ್ವಸ್ತಕಮಲಾಸ್ತ್ರಸ್ತಮೀನಜಲೇಚರಾಃ । ಸಖೀಮಿವಗತೋಚ್ಛ್ವಾಸಾಮನ್ವಶೋಚಂತಮೈಥಿಲೀಂ ।೩೭। ಸಮಂತಾದಭಿಸಂಪತ್ಯಸಿಂಹವ್ಯಾಘ್ರಮೃಗದ್ವಿಜಾಃ । ಅನ್ವಧಾವಂಸ್ತದಾರೋಷಾತ್ಸೀತಾಂಛಾಯಾನುಗಾಮಿನಃ ।೩೮। ಜಲಪ್ರಪಾತಾಸ್ರಮುಖಾಶ್ಶೃಂಗೈರುಚ್ಛ್ರಿತಬಾಹುಭಿಃ । ಸೀತಾಯಾಂಹ್ರಿಯಮಾಣಾಯಾಂವಿಕ್ರೋಶಂತೀವಪರ್ವತಾಃ ।೩೯। ಹ್ರಿಯಮಾಣಾಂತುವೈದೇಹೀಂದೃಷ್ಟ್ವಾದೀನೋದಿವಾಕರಃ । ಪ್ರತಿಧ್ವಸ್ತಪ್ರಭಶ್ಶ್ರೀಮಾನಾಸೀತ್ಪಾಂಡುರಮಂಡಲಃ ॥೪೦॥ ನಾಸ್ತಿಧರ್ಮಃಕುತಸ್ಸತ್ಯಂನಾರ್ಜವಂನಾನೃಶಂಸತಾ । ಯತ್ರರಾಮಸ್ಯವೈದೇಹೀಂಭಾರ್ಯಾಂಹರತಿರಾವಣಃ । ಇತಿಸರ್ವಾಣಿಭೂತಾನಿಗಣಶಃಪರ್ಯದೇವಯನ್ ।೪೧॥

ಧ್ಯಪ್ರದೇಶದಿಂದ, ಭ್ರಷ್ಟಾಃ-ಜಾರಿಹೋಗುತ್ತಿರುವ, ತಾರಾಧಿಪದ್ಯುತಿಃ-ಚಂದ್ರನಕಾಂತಿಯಂತೆ ಕಾಂತಿಯುಳ್ಳ, ಹಾರಃ-ಕಂಠೀಸರವು, ಗಗನಾತ್-ಅಂತರಿಕ್ಷದವಕಾಶದಿಂದ ನಿಪತಂತೀ-ಬೀಳುತ್ತಿರುವದಾಗಿ, ಗಗನಾತ್-ಅಂತರಿಕ್ಷದವಕಾಶದಿಂದ, ಚ್ಯುತಾ-ಜಾರುತ್ತಿರುವ, ಗಂಗೇವ-ಗಂಗೆಯಂತೆ, ಭಾತಿ-ಹೊಳೆಯುತ್ತಿತ್ತು ॥೩೫॥ ಉತ್ಪನ್ನವಾತಾಭಿಹತಾಃ-ರಾವಣನ ಊರುವೇಗದವಶದಿಂದ ಉತ್ಪನ್ನವಾದ ಘಾಳಿಯಿಂದ ಹೊಡೆಯಲ್ಪಟ್ಟ, ನಾನಾದ್ವಿಜಗಣಾಯುತಾಃ-ಅನೇಕ ಪಕ್ಷಿಗಳ ತಂಡಗಳಿಂ ಕೂಡಿಕೊಂಡಿರುವ, ವಿಧೂತಾಗ್ರಾಃ-ಕೊಡಹಲ್ಪಟ್ಟ ತುದಿಗಳುಳ್ಳ, ಪಾದಪಾಃ-ಗಿಡಗಳು. ಮಾಭೈಃ ಇತಿ-ಭಯ ಬೀಳಬ್ಯಾಡವೆಂದು, ವ್ಯಾಜಹ್ರುರಿವ-ಹೇಳುತ್ತವೋ ಎಂಬಂತಿದ್ದವು ॥೩೬॥ ಧ್ವಸ್ತಕಮಲಾಃ-ನಾಶಗೊಂಡ ಕಮಲಗಳುಳ್ಳ, ತ್ರಸ್ತಮೀನಜಲೇಚರಾಃ-ಭಯಗೊಂಡ ಮೀನುಗಳೇ ಮುಂತಾದ ಜಲಜಂತುಗಳುಳ್ಳ, ನಳಿನ್ಯಃ-ಕಮಲಸರಸ್ಸುಗಳು, ಗತೋಚ್ಛ್ವಾಸಾಂ-ಹೋದ ಉಸುರುಳ್ಳ, ಸಖೀಮಿವ-ಸ್ನೇಹಿತಳನ್ನಂತೆ. ಮೈಥಿಲೀಂ-ಸೀತಾದೇವಿಯನ್ನು, ಅನ್ವಶೋಚಂತ-ಅನುಸರಿಸಿ ವ್ಯಥೆಗೊಂಡವು ॥೩೭॥ ಸಿಂಹವ್ಯಾಘ್ರಮೃಗದ್ವಿಜಾಃ-ಸಿಂಹಗಳೂ ಹುಲಿಗಳೂ ಜಿಂಕೆಗಳೂ ಹಕ್ಕಿಗಳೂ, ಸಮಂತಾತ್-ಎಲ್ಲಾ ಕಡೆಯಲ್ಲಿಯೂ, ಅಭಿಸಂಪತ್ಯ-ಸೇರಿ. ತದಾ-ಆಕಾಲದಲ್ಲಿ, ರೋಷಾತ್-ರಾವಣನಲ್ಲಿ ರೋಷದವಶದಿಂದ ಛಾಯಾನುಗಾಮಿನಃ-ನೆರಳನ್ನೇ ಅನುಸರಿಸಿಬರುತ್ತಿರುವುಗಳಾಗಿ, ಸೀತಾಂ-ಸೀತಾದೇವಿಯನ್ನು. ಅನ್ವಧಾವನ್-ಅನುಸರಿಸಿಓಡಿದವು ॥೩೮॥ ಸೀತಾಯಾಂ-ಸೀತಾದೇವಿಯು, ಹ್ರಿಯಮಾಣಾಯಾಂಸತ್ಯಾಂ-ಅಪಹರಿಸಲ್ಪಟ್ಟವಳಾಗುತ್ತಿರಲಾಗಿ, ಜಲಪ್ರಪಾತಾಸ್ರಮುಖಾಃ-ಬೆಟ್ಟದ ನದಿಗಳೇ ಕಂಬನಿಗಳುಳ್ಳ ಮುಖದಲ್ಲಿಯುಳ್ಳ. ಪರ್ವತಾಃ-ಬೆಟ್ಟಗಳು, ಶೃಂಗೈಃ-ಶಿಖರಗಳೆಂಬ, ಉಚ್ಛ್ರಿತಬಾಹುಭಿಃ-ಉನ್ನತಭುಜಗಳಿಂದ ವಿಕ್ರೋಶಂತೀವ-ಕೂಗುತ್ತವೋ ಎಂಬಂತಿದ್ದವು ॥೩೯॥ ಹ್ರಿಯಮಾಣಾಂ-ಕಸೆದುಕೊಂಡು ಹೋಗಲ್ಪಡುತ್ತಿರುವ, ವೈದೇಹೀಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು. ದೀನಃ-ದೈನ್ಯವುಳ್ಳ. ದಿವಾಕರಃ-ಸೂರ್ಯನು ಶ್ರೀಮಾನ್-ಶೋಕವೆಂಬ ಸಂಪತ್ತುಳ್ಳವನಾಗಿ. ಪ್ರತಿಧ್ವಸ್ತಪ್ರಭಃ-ಹೋಗಲಾಡಿಸಲ್ಪಟ್ಟ ಕಾಂತಿಯುಳ್ಳವನಾಗಿ, ಪಾಂಡುರಮಂಡಲಃ-ಬೆಳ್ಳಗಿರುವಂತೆ ಮಂಡಲಾಕಾರವುಳ್ಳವನು, ಆಸೀತ್-ಆದನು ॥೪೦॥ ಯತ್ರ-ಯಾವ ಸ್ಥಳದಲ್ಲಿ, ರಾಮಸ್ಯ-ಶ್ರೀರಾಮನ, ಭಾರ್ಯಾಂ-ಹೆಂಡತಿಯಾದ. ವೈದೇಹೀಂ-ಸೀತಾದೇವಿಯನ್ನು, ರಾವಣಃ-ರಾವಣನು, ಹರತಿ-ಅಪಹರಿಸಿದನೋ, ತತ್ರ-ಆ ಸ್ಥಳದಲ್ಲಿ, ಧರ್ಮಃ-ಧರ್ಮವು. ನಾಸ್ತಿ-ಇಲ್ಲ, ಸತ್ಯಂ-ಯಥಾರ್ಥವು, ಕುತಃ-ಎಲ್ಲೀದು, ಆರ್ಜವಂ-ಕುಟಿಲರಹಿತ್ಯವು, ನ-ಇಲ್ಲ, ಅನೃಶಂಸತಾ-ದಯೆಯು, ನ-ಇಲ್ಲ. ಇತಿ-ಇಂತೆಂದು, ಸರ್ವಾಣಿ-ಸಮಸ್ತಗಳಾದ, ಭೂತಾನಿ-ಪ್ರಾಣಿಗಳು, ಗಣಶಃ-ಗುಂಪುಸೇರಿ, ಪರ್ಯದೇವಯನ್-ಅನುತಾಪಗೊಂಡರು ॥೪೧॥ ವಿತ್ರಸ್ತಕಾಃ-ಕೇವಲಭ

ವನಕ್ಷತ್ರಂಗಳಂತೆ ನೆಲದಲ್ಲಿ ಯೆರಚಲ್ಪಟ್ಟವು ।೩೪। ಆ ಸೀತಾದೇವಿಯ ಸ್ತನಂಗಳ ಮಧ್ಯದಿಂದ ಜಾರಿದ ಮುತ್ತೂ ಚಂದಿರನಂತೆ ಹೊಳೆವ ಕಂಠೀಸರವು, ಅಂತರಿಕ್ಷದಿಂದ ಇಳಿಯುತ್ತಿರುವ ಗಂಗಾನದಿಯಂತೆ ಹೊಳೆಯುತ್ತಿತ್ತು ।೩೫। ಇದಲ್ಲದೆ ಆ ರಾವಣನ ಊರುವೇಗದಿಂದ ಉತ್ಪನ್ನವಾದ ಘಾಳಿಯಿಂ ಹೊಡೆಯಲ್ಪಟ್ಟ, ಮತ್ತೂ ಅನೇಕ ಪಕ್ಷಿಗಳ ಸಮೂಹಂಗಳಿಂದೊಡಗೂಡಿದವೃಕ್ಷಂಗಳು ಕಂಪಾಯಮಾನವಾದ ಕೊನೆಗಳುಳ್ಳವುಗಳಾಗಿ. ಭಯಪಡಬ್ಯಾಡೆಂದು ಹೇಳುತವೋ ಯೇನೋ ಯೆಂಬಂತಿದ್ದವು ।೩೬। ಆ ಸಮಯದಲ್ಲಿ ನಾಶವನ್ನೈದಿದ ಕಮಲಂಗಳುಳ್ಳ ಮತ್ತೂ ಭಯವನ್ನೈದಿದ ಮೀನು ಮೊದಲಾದ ಜಲಜಂತುಗಳುಳ್ಳ ಕಮಲಸರೋವರಂಗಳು, ಉಸುರಿಲ್ಲದ ಸಖಿಯಂ ಕಂಡು ದುಃಖಿಸುವಂತೆ ದುಃಖಿಸುತಿದ್ದವು ।೩೭। ಮತ್ತೂ ಆ ವೇಳೆಯಲ್ಲಿ ಸಿಂಹಗಳೂ, ಹುಲಿಗಳೂ, ಜಿಂಕೆಗಳೂ ಹಕ್ಕಿಗಳೂ ಇವೆಲ್ಲ ಗುಂಪುಶೇರಿ, ರಾವಣನಲ್ಲಿ ಮಹಾರೋಷದಿಂದ ಅವನ ನೆರಳನ್ನನುಸರಿಸಿ ಸೀತಾದೇವಿಯ ಹಿಂದುಗಡೆಯಲ್ಲಿ ಓಡಿಬರುತ್ತಿದ್ದವು ।೩೮। ಮತ್ತೂ ಆ ಸಮಯದಲ್ಲಿ ನದಿಗಳೆಂಬ ಕಂಬನಿಗಳುಳ್ಳ ಮುಖಂಗಳುಳ್ಳವುಗಳಾಗಿ, ಪರ್ವತಂಗಳು ಶಿಖರಂಗಳೆಂಬ ಉನ್ನತವಾದ ಭುಜಂಗಳಿಂದ ಕೂಗುತವೋ ಯೇನೋ ಯೆಂಬಂತೆ ತೋರುತ್ತಿದ್ದವು ।೩೯। ಮತ್ತೂ ಆ ಸೀತಾಪಹಾರಕಾಲದಲ್ಲಿ ಸೂರ್ಯನು ಶೋಕವೆಂಬ ಸಂಪತ್ತುಳ್ಳವನಾಗಿ ಕಳೆಗುಂದಿದವನಾಗಿ ಬೆಳ್ಳಗಿರುವ ಮಂಡಲವುಳ್ಳವನಾದನು ।೪೦। ಇದಲ್ಲದೆ ಯಾವ ಪ್ರದೇಶದಲ್ಲಿ ರಾವಣನು ಸೀತೆಯನ್ನಪಹರಿಸಿಕೊಂಡು ಹೋದನೋ, ಆ ಪ್ರದೇಶದಲ್ಲಿ ಸರ್ವಪ್ರಾಣಿಗಳು, ಹಾಹಾ!! ಇಲ್ಲಿ ಧರ್ಮವು, ದಯೆಯು, ಸತ್ಯ

ವಿತ್ರಸ್ತಕಾ ದೀನಮುಖಾ ರುರುದುರ್ಮೃಗಪೋತಕಾಃ । ಉದ್ವೀಕ್ಷ್ಯೋದ್ವೀಕ್ಷ್ಯ ನಯನೈರಾಸ್ರಪಾತಾವಿಲೇಕ್ಷಣಾಃ ॥೪೩॥
ಸುಪ್ರವೇಪಿತಗಾತ್ರಾಶ್ಚ ಬಭೂವುರ್ವನದೇವತಾಃ । ವಿಕ್ರೋಶಂತೀಂ ದೃಢಂ ಸೀತಾಂ ದೃಷ್ಟ್ವಾ ದುಃಖಂ ತಥಾಗತಾಂ ।
ತಾಂ ತು ಲಕ್ಷ್ಮಣ ರಾಮೇತಿ ಕ್ರೋಶಂತೀಂ ಮಧುರಸ್ವರಾಂ । ಅವೇಕ್ಷಮಾಣಾಂ ಬಹುಶೋ ವೈದೇಹೀಂ ಧರಣೀತಲಂ ।೪೪। ಸ
ತಾಮಾಕುಲಕೇಶಾಂತಾಂ ವಿಪ್ರಮೃಷ್ಟವಿಶೇಷಕಾಂ । ಜಹಾರಾತ್ಮವಿನಾಶಾಯ ದಶಗ್ರೀವೋ ಮನಸ್ವಿನೀಂ ।೪೫। ತತ
ಸ್ತು ಸಾ ಚಾರುದತೀ ಶುಚಿಸ್ಮಿತಾ ವಿನಾಕೃತಾ ಬಂಧುಜನೇನ ಮೈಥಿಲೀ । ಅಪಶ್ಯತೀ ರಾಘವಲಕ್ಷ್ಮಣಾವುಭೌ ವಿವರ್ಣವ
ಕ್ತ್ರಾ ಭಯಭಾರಪೀಡಿತಾ ।೪೬।

— * ಇತಿ ಶ್ರೀಮದಾರಣ್ಯಕಾಂಡೇ ದ್ವಿಪಂಚಾಶಸ್ಸರ್ಗಃ * —

ಖಮುತ್ಪತಂತಂ ತಂ ದೃಷ್ಟ್ವಾ ಮೈಥಿಲೀ ಜನಕಾತ್ಮಜಾ । ದುಃಖಿತಾ ಪರಮೋದ್ವಿಗ್ನಾ ಭಯೇ ಮಹತಿ ವರ್ತಿನೀ ।೧।
ರೋಷರೋದನತಾಮ್ರಾಕ್ಷೀ ಭೀಮಾಕ್ಷಂ ರಾಕ್ಷಸಾಧಿಪಂ । ರುದಂತೀ ಕರುಣಂ ಸೀತಾ ಹ್ರಿಯಮಾಣೇದಮಬ್ರವೀತ್ ।೨।

---

ಯುಗೊಂಡ, ದೀನಮುಖಾಃ-ದೈನ್ಯಯುಕ್ತವಾದ ಮುಖಗಳುಳ್ಳ, ಮೃಗಪೋತಕಾಃ-ಜಿಂಕೇಮರಿಗಳೂ, ನಯನೈಃ-ನೇತ್ರಗಳಿಂದ ಉದ್ವೀಕ್ಷ್ಯೋದ್ವೀಕ್ಷ್ಯ-ನೋಡಿನೋಡಿ, ಆಸ್ರಪಾತಾವಿಲೇಕ್ಷಣಾಃ-ಕಣ್ಣೀರಿನಿಂದ ವ್ಯಾಪ್ತವಾದ ನೇತ್ರಗಳುಳ್ಳವುಗಳಾಗಿ, ರುರುದುಃ-ಅಳುತ್ತಿದ್ದವು ॥೪೨॥ ವನದೇವತಾಃ-ವನದೇವತೆಗಳು, ವಿಕ್ರೋಶಂತೀಂ-ಅಳುತ್ತಿರುವ, ತಥಾ-ಅಂಥಾದ್ದಾದ, ದುಃಖಂ-ದುಃಖವನ್ನು, ಗತಾಂ-ಹೊಂದುತ್ತಿರುವ, ಹೇ ಲಕ್ಷ್ಮಣಾ-ಎಲೈ ಲಕ್ಷ್ಮಣನೇ, ಹೇ ರಾಮ-ಎಲೈ ಶ್ರೀರಾಮನೇ, ಇತಿ-ಇಂತೆಂದು, ಮಧುರಸ್ವರಂ ಯಥಾ ತಥಾ-ಮನೋಹರವಾದ ಧ್ವನಿಗೊಳಿಸೋಣ ಹ್ಯಾಗೋ ಹಾಗೆ, ಕ್ರೋಶಂತೀಂ-ಕೂಗುತ್ತಿರುವ, ಭೂಯಃ-ಬಹಳವಾಗಿ, ಧರಣೀತಲಂ-ಭೂಪ್ರದೇಶವನ್ನು, ಅವೇಕ್ಷಮಾಣಾಂ-ನೋಡುತ್ತಿರುವ, ವೈದೇಹೀಂ-ವಿದೇಹರಾಜನ ಮಗಳಾದ, ತಾಂ-ಪ್ರಸಿದ್ಧಳಾದ, ತಾಂ-ಆ, ಸೀತಾಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು, ದೃಢಂ-ನಿಶ್ಚಯವಾಗಿ, ಸುಪ್ರವೇಪಿತಗಾತ್ರಾಃ-ಬಹಳವಾಗಿ ನಡುಗುತ್ತಿರುವ ಶರೀರವುಳ್ಳವರು, ಬಭೂವುಃ-ಆದರು ॥೪೪॥ ಸಃ ದಶಗ್ರೀವಃ-ಆ ರಾವಣಾಸುರನು, ಆಕುಲಕೇಶಾಂತಾಂ-ವ್ಯಾಕುಲವಾದ ಕೂದಲುಗಳ ಕೊನೆಗಳುಳ್ಳ, (ಅಂದರೆ-ಬಿಚ್ಚಿ ಹೋದ ಕೇಶಗಳುಳ್ಳ,) ವಿಪ್ರಮೃಷ್ಟವಿಶೇಷಕಾಂ-ವರಿಸಿಕೊಳ್ಳಲ್ಪಟ್ಟ ತಿಲಕವುಳ್ಳ, ಮನಸ್ವಿನೀಂ-ದೃಢಮನಸ್ಸುಳ್ಳ, ತಾಂ-ಆ ಸೀತಾದೇವಿಯನ್ನು, ಆತ್ಮವಿನಾಶಾಯ-ತನ್ನ ನಾಶಕ್ಕೋಸುಗ, ಜಹಾರ-ಅಪಹರಿಸಿಕೊಂಡು ಹೋದನು ॥೪೫॥ ತತಃ-ಬಳಿಕ, ಚಾರುದತೀ-ಮನೋಹರವಾದ ದಂತಗಳುಳ್ಳ, ಶುಚಿಸ್ಮಿತಾ-ಶುಭ್ರವಾದ ಮುಗುಳುನಗೆಯುಳ್ಳ, ಮೈಥಿಲೀ-ಸೀತಾದೇವಿಯು, ಬಂಧುಜನೇನ-ಬಂಧುಜನರೊಡನೆ, ವಿನಾಕೃತಾ-ಪ್ರತ್ಯೇಕವಾಗಿ ಮಾಡಲ್ಪಟ್ಟವಳಾಗಿ, ರಾಘವಲಕ್ಷ್ಮಣಾವುಭೌ-ರಾಮಲಕ್ಷ್ಮಣರಿಬ್ಬರನ್ನು, ಅಪಶ್ಯತೀ-ಕಾಣದಿರುವವಳಾಗಿ, ಭಯಭಾರಪೀಡಿತಾ-ಭಯವೆಂಬ ಭಾರದಿಂ ಬಾಧೆಗೊಂಡ, ಸಾ-ಆ ಸೀತಾದೇವಿಯು, ವಿವರ್ಣವಕ್ತ್ರಾ-ಕಾಂತಿಹೀನವಾದ ಮುಖವುಳ್ಳವಳು, ಬಭೂವ-ಆದಳು ॥೪೬॥

—** ಇತಿ ಶ್ರೀಮದಾರಣ್ಯಕಾಂಡೇ ದ್ವಿಪಂಚಾಶಸ್ಸರ್ಗಃ **—

ಜನಕಾತ್ಮಜಾ-ಜನಕರಾಯನ ಮಗಳಾದ, ದುಃಖಿತಾ-ದುಃಖಗೊಂಡ, ಪರಮೋದ್ವಿಗ್ನಾ-ಬಹಳ ಹೆದರಿಕೆಯುಳ್ಳ, ಮಹತಿ ಭಯೇ-ಮಹಾಭಯದಲ್ಲಿ, ವರ್ತಿನೀ-ಇರುತ್ತಿರುವ, ಮೈಥಿಲೀ-ಸೀತಾದೇವಿಯೂ, ಖಂ-ಅಂತರಿಕ್ಷವಂಕುರಿತು, ಉತ್ಪತಂತಂ-ಹಾರುತ್ತಿರುವ, ತಂ-ಆ ರಾವಣನನ್ನು, ದೃಷ್ಟ್ವಾ-ಕಂಡು ॥೧॥ ರೋಷರೋದನತಾಮ್ರಾಕ್ಷೀ-ರೋಷದಿಂದಲೂ ಅಳುವಿಕೆಯಿಂದಲೂ ಕೆಂಪಾದ ನೇತ್ರಗಳುಳ್ಳ, ಕರುಣಂ-ದೈನ್ಯವಾಗಿ, ರುದಂತೀ-ಅಳುತ್ತಿರುವ, ಸೀತಾ-ಸೀತಾದೇವಿಯು, ಹ್ರಿಯಮಾಣಾ-ಅಪಹರಿಸಿಕೊಂಡು ಹೋಗಲ್ಪಡುತ್ತಿರುವವಳಾಗಿ, ಭೀಮಾಕ್ಷಂ-ಭಯಂಕರವಾದ ನೇತ್ರಗಳುಳ್ಳ, ರಾಕ್ಷಸಾಧಿಪಂ-ರಕ್ಕಸರಿಗೆ ಅಧಿಪತಿಯಾದ ರಾವಣನಂಕುರಿತು, ಇದಂ-ಈ ಮಾತನ್ನು, ಅಬ್ರವೀತ್-ನುಡಿದಳು ॥೨॥ ಹೇ ನೀಚ-ಎಲೋ ನೀಚ

---

ವು, ಯಾವದೂ ಇಲ್ಲ, ಎಂದು ಸಂತಪಿಸುತ್ತಿದ್ದರು ।೪೧। ಮತ್ತೂ ಆ ಸಮಯದಲ್ಲಿ ಕೇವಲ ಭಯವನ್ನೈದಿದ, ಜಿಂಕೇಮರಿಗಳು ಜನಕನಂದಿನಿಯಾದ ಸೀತಾದೇವಿಯಂ ನೋಡಿ ಸ್ವಕೀಯವಾದ ನೇತ್ರಂಗಳಿಂದ ಕಂಬನಿಗಳಂ ಸುರಿಸುತ್ತಾ ಅಳುತ್ತಿದ್ದವು ।೪೩। ಆ ವೇಳೆಯಲ್ಲಿ ವನದೇವತೆಗಳು, ವಿಧವಿಧವಾಗಿ ಅಳುತ್ತಲೂ, ಅಯ್ಯೋ, ರಾಮನೇ! ಲಕ್ಷ್ಮಣನೇ! ಯೆಂದು ಕೂಗುತ್ತಲೂ ಇರುವ ಮಹಾ ದುಃಖವನ್ನೈದಿದ, ಆ ವಿದೇಹರಾಜನ ಪುತ್ರಿಕೆಯಾದ ಸೀತಾದೇವಿಯಂ ಕಂಡು, ನಿಶ್ಚಯವಾಗಿ ಕಂಪಿಸುತ್ತಿರುವ ಶರೀರಂಗಳುಳ್ಳವುಗಳಾದವು ।೪೪। ಈ ರೀತಿಯಲ್ಲಿ ಆ ರಾವಣನು ಕೆದರಿದ ಕೂದಲುಗಳುಳ್ಳ ಮತ್ತೂ ಒರಸಿಕೊಳ್ಳಲ್ಪಟ್ಟ ತಿಲಕವುಳ್ಳ ಆ ಸೀತಾದೇವಿಯನ್ನು, ತನ್ನ ನಾಶಕ್ಕಾಗಿ ಅಪಹರಿಸಿಕೊಂಡು ಹೋದನು ।೪೫। ಅನಂತರದಲ್ಲಿ ಆ ಸೀತಾದೇವಿಯು ತನ್ನ ನೆಂಟರಾದ ರಾಮಲಕ್ಷ್ಮಣರಿಂದ ಬೇರೆಮಾಡಲ್ಪಟ್ಟವಳಾದ ಕಾರಣ, ಅವರೀರ್ವರಂ ಕಾಣದೆ ಬಹು ಭೀತಿಯನ್ನೈದಿದವಳಾಗಿ, ಕಂಗೆಟ್ಟಮುಖವುಳ್ಳವಳಾದಳು ।೪೬। —* ಆರಣ್ಯಕಾಂಡದಲ್ಲಿ ನಲ್ವತ್ತೆರಡನೆಯ ಸರ್ಗಂ ಮುಗಿದುದು *—

ಮಹಾದುಃಖವನ್ನೈದಿದವಳಾದ ಕಾರಣ ಬಹು ಹೆದರಿದ, ಮತ್ತೂ ಜನಕನಂದಿನಿಯಾದ, ಆ ಸೀತಾದೇವಿಯು, ಗಗನಕ್ಕೆ ಹಾರುತ್ತಿರುವ ಆ ರಾವಣನಂ ಕಂಡು, ರೋಷದಿಂದಲೂ ರೋದನದಿಂದಲೂ, ಸಹ ಕೆಂಪಾದ ಕಣ್ಣುಗಳು

ನವ್ಯಪತ್ರಪಸೇನೀಚೇಕರ್ಮಣಾನೇನರಾವಣ । ಜ್ಞಾತ್ವಾವಿರಹಿತಾಂಯನ್ಮಾಂಚೋರಯಿತ್ವಾಪಲಾಯಸೇ ॥೩॥ ತ್ವಯೈವ ನೂನಂದುಷ್ಟಾತ್ಮನ್ಭೀರುಣಾಹರ್ತುಮಿಚ್ಛತಾ । ಮಮಾಪವಾಹಿತೋಭರ್ತಾಮೃಗರೂಪೇಣಮಾಯಯಾ ।೪॥ ಯೋ ಹಿಮಾಮುದ್ಯತಸ್ತ್ರಾತುಂಸೋಪ್ಯಯಂವಿನಿಪಾತಿತಃ । ಗೃಧ್ರರಾಜಃಪುರಾಣೋಸೌಶ್ವಶುರಸ್ಯಸಖಾಮಮ ॥೫॥ ಪ ರಮಂಖಲುತೇವೀರ್ಯಂದೃಶ್ಯತೇರಾಕ್ಷಸಾಧಮ । ವಿಶ್ರಾವ್ಯನಾಮಧೇಯಂಹಿಯುದ್ಧೇಸ್ಮಿವಿಜಿತಾತ್ವಯಾ ।೬॥ ಈದೃಶಂಗ ರ್ಹಿತಂಕರ್ಮಕಥಂಕೃತ್ವಾನಲಜ್ಜಸೇ । ಸ್ತ್ರಿಯಾಶ್ಚಹರಣಂನೀಚರಹಿತೇಚಪರಸ್ಯಚ ॥೭॥ ಕಥಯಿಷ್ಯಂತಿಲೋ ಕೇಷುಪುರುಷಾಃಕರ್ಮಕುತ್ಸಿತಂ । ಸುನೃಶಂಸಮಧರ್ಮಿಷ್ಠಂತವಶೌಂಡೀರ್ಯಮಾನಿನಃ ॥೮॥ ಧಿಕ್ತೇಶೌರ್ಯಂಚಸತ್ವಂಚ ಯತ್ತ್ವಂಕಥಿತವಾಂಸ್ತದಾ । ಕುಲಾಕ್ರೋಶಕರಂಲೋಕೇಧಿಕ್ತೇಚಾರಿತ್ರಮೀದೃಶಂ ।೯। ಕಿಂಕರ್ತುಂಶಕ್ಯಮೇವಂಹಿಯಜ್ಜ

---

ನೀಚ. ಹೇರಾವಣ-ಎಲೈ! ರಾವಣನೇ ಅನೇನಕರ್ಮಣಾ-ಈ ದುಷ್ಕೃತ್ಯದಿಂದ, ನವ್ಯಪತ್ರಪಸೇ-ನಾಚಿಕೆಯಿಲ್ಲದವನಾಗಿದ್ದೀಯಿ. ಯತಃ-ಯಾವಕಾರಣದದೆಶೆ ಯಿಂದ ಮಾಂ-ನನ್ನನ್ನು. ವಿರಹಿತಾಂ-ರಾಮಲಕ್ಷ್ಮಣರಿಂ ವರ್ಜಿತಳನ್ನಾಗಿ, ಜ್ಞಾತ್ವಾ-ತಿಳಿದು, ಚೋರಯಿತ್ವಾ-ಕದ್ದುಕೊಂಡು, ಪಲಾಯಸೇ-ಓಡಿ ಹೋಗುತ್ತಿ ॥೩॥ ಹೇದುಷ್ಟಾತ್ಮನ್-ಎಲೈ ದುಷ್ಟಮನಸ್ಸುಳ್ಳವನೇ, ಭೀರುಣಾ-ಭಯಶೀಲನಾದ, ಹರ್ತುಂ-ಅಪಹರಿಸುವದಕ್ಕೋಸುಗ, ಇಚ್ಛತಾ-ಅಪೇ ಕ್ಷಿಸುತ್ತಿರುವ, ತ್ವಯೈವ-ನಿನ್ನಿಂದಲೇ, ಮಮ-ನನ್ನ, ಭರ್ತಾ-ಗಂಡನು, ಮಾಯಯಾ-ಮಾಯೆಯಿಂದ, ಮೃಗರೂಪೇಣ-ಮೃಗರೂಪದಿಂದ. ಅಪ ವಾಹಿತಃ-ಆಶ್ರಮದಿಂ ಹೊರಡಿಸಲ್ಪಟ್ಟನು ॥೪॥ ಯಃ-ಯಾವ. ಗೃಧ್ರರಾಜಃ-ಜಟಾಯುವು, ಮಾಂ-ನನ್ನನ್ನು, ತ್ರಾತುಂ-ರಕ್ಷಿಸುವದಕ್ಕೆ, ಉದ್ಯ ತಃ-ಉದ್ಯುಕ್ತನಾದನೋ. ಮಮ-ನನ್ನ, ಶ್ವಶುರಸ್ಯ-ಮಾವನಿಗೆ, ಸಖಾ-ಸ್ನೇಹಿತನಾದ. ಪುರಾಣಃ-ವೃದ್ಧನಾದ, ಅಸೌ-ಈ ಎದುರಾಗಿರುವ, ಸೋ ಯಂ-ಆ ಈ ಜಟಾಯುವೂ, ವಿನಿಪಾತಿತಃ-ಕ್ಕೆಳಗೆ ಬೀಳಿಸಲ್ಪಟ್ಟನು ॥೫॥ ಹೇರಾಕ್ಷಸಾಧಮ-ಎಲೈ ರಾಕ್ಷಸನೇ, ತೇ-ನಿನಗೆ, ಪರಮಂ-ಶ್ರೇಷ್ಠವಾ ದ ವೀರ್ಯಂ-ಸಾಮರ್ಥ್ಯವು, ದೃಶ್ಯತೇಖಲು-ಕಾಣಿಸಲ್ಪಡುತ್ತದಷ್ಟೆ, ನಾಮಧೇಯಂ-ಹೆಸರನ್ನು, ವಿಶ್ರಾವ್ಯ-ಕೇಳಿಸಿ, ಯುದ್ಧೇ-ಕಾಳಗದಿಂದ, ತ್ವ ಯಾ-ನಿನ್ನಿಂದ. ಜಿತಾ-ಜಯಿಸಲ್ಪಟ್ಟವಳು, ಅಸ್ಮಿ-ಆದೆನಷ್ಟೆ, (ಅಂದರೆ-ಯುದ್ಧಮಾಡದೆ ನನ್ನನ್ನುಕಳ್ಳತನದಿಂ ತೆಗದುಕೊಂಡು ಬಂದೆಎಂದು ಹೇಳಿ ದ್ದು) ॥೬॥ ಹೇನೀಚ-ಎಲೈ ನೀಚನೇ. ರಹಿತೇನ-ರಾಮನಿಂದ ರಹಿತವಾದ ಕಾಲದಲ್ಲಿ, ಪರಸ್ಯ-ಪರಪುರುಷನ, ಸ್ತ್ರಿಯಾಃ-ಹೆಂಡತಿಯ. ಹರಂ-ಅಪಹಾರ ರೂಪವಾದ. ಈದೃಶಂ-ಇಂಥಾದ್ದಾದ, ಗರ್ಹಿತಂ-ನೀಚವಾದ, ಕರ್ಮ-ವ್ಯಾಪಾರವನ್ನು, ಕೃತ್ವಾ-ಮಾಡಿ, ಕಥಂನಲಜ್ಜಸೇ-ಯಾಕೆ ನಾಚಿಕೆಗೊಳ್ಳ ಲ್ಲಿ ॥೭॥ ಲೋಕೇಷು-ಲೋಕದಲ್ಲಿ, ಪುರುಷಾಃ-ಸತ್ಪುರುಷರು, ಶೌಂಡೀರ್ಯಮಾನಿನಃ-ಶೂರತ್ವವಂ ತಿಳಿದುಕೊಂಡಿರುವ, ತವ-ನಿನ್ನ. ಸುನೃಶಂಸಂ-ಘಾ ತುಕವಾದ. ಅಧರ್ಮಿಷ್ಠಂ-ಅಧರ್ಮಕರವಾದ ಈ ಕಾರ್ಯವನ್ನು, ಕುತ್ಸಿತಂಕರ್ಮ-ನೀಚವ್ಯಾಪಾರವನ್ನಾಗಿ, ಕಥಯಿಷ್ಯಂತಿ-ಹೇಳುವರಷ್ಟೆ ॥೮॥ ತದಾ- ಆಕಾಲದಲ್ಲಿ, ತ್ವಂ-ನೀನು. ಯತ್-ಯಾವ ಪರಾಕ್ರಮವನ್ನು, ಕಥಿತವಾನ್-ಹೇಳಿಕೊಂಡಿದ್ದೀಯೊ, ತೇ-ನಿನ್ನ, ಶೌರ್ಯಂ-ಶೂರತ್ವವನ್ನು, ತತ್ಸತ್ವಂ-ಆ ಸಾಮರ್ಥ್ಯವನ್ನು, ಧಿಕ್-ನಿಂದಿಸು, ಲೋಕೇ-ಲೋಕದಲ್ಲಿ, ಕುಲಾಕ್ರೋಶಕರಂ-ಕುಲಕ್ಕೆ ನಿಂದಾಕರವಾದ, ಈದೃಶಂ-ಇಂಥಾದ್ದಾದ. ತೇ-ನಿನ್ನ, ಚಾರಿ ತ್ರಂ-ನಡತೆಯನ್ನು, ಧಿಕ್-ನಿಂದಿಸು॥೯॥ಯತ್-ಯಾವಕಾರಣದದೆಶೆಯಿಂದ, ಏವಂ-ಈಪರಿಯಾಗಿ, ಜವೇನೈವ-ವೇಗದಿಂದಲೇ, ಧಾವಸಿ-ಪೋಗುತ್ತೀಯೋ

---

ಕ್ಷವಳಾಗಿ, ಭಯಂಕರವಾದ ನೇತ್ರಂಗಳುಳ್ಳ ದಶಗ್ರೀವನಂ ಕುರಿತು ನುಡಿವಳದೆಂತೆನೆ,—।೨॥ ಎಲೊ, ಎಲೋ, ನೀಚನೇ! ಈ ಕೆಟ್ಟಕೆಲಸದಿಂದ ನಿನಗೆ ನಾಚಿಕೆಯಾಗುವದಿಲ್ಲವೇ ಯೇನು? ನನ್ನ ಬಂಧುಗಳಾದ ಆ ರಾಮಲಕ್ಷ್ಮ ಣರೀರ್ವರು ಇಲ್ಲದಿರುವಾಗ ನನ್ನನ್ನು ಕದ್ದುಕೊಂಡು ಓಡಿಹೋಗುತಲಿದ್ದೀ ।೩॥ ಎಲೋ, ದುಷ್ಟನೇ! ನನ್ನ ಪತಿಯಾದ ಶ್ರೀರಾಮನು, ಯೆನ್ನನ್ನಪಹರಿಸಲಿಚ್ಛಿಸುವ ಮತ್ತೂ ಭಯಶೀಲನಾದ ನಿನ್ನಿಂದಲೇ, ಮಾಯಾಮೃಗ ರೂಪದಿಂದ ಹೊರಡಿಸಲ್ಪಟ್ಟನು ॥೪। ನಮ್ಮ ಮಾವನಾದ ದಶರಥಮಹಾರಾಜನಿಗೆ ಮಿತ್ರನಾದ, ಮಹಾ ವೃದ್ಧನಾ ದ ಜಟಾಯುವು ನನ್ನಂ ಪಾಲಿಸುವದಕ್ಕಾಗಿ ಬಂದವನಾಗಿ ನಿನ್ನಿಂದ ಹತನಾದನು ।೫॥ ಎಲೈ ರಾಕ್ಷಸಾಧಮನೇ! ನಿನ್ನ ಸಾಮರ್ಥ್ಯ ಮೀಗ ಕಾಣಲ್ಪಡುತಲಿಹೆಯಷ್ಟೆ?ಮತ್ತೂ ನಿನ್ನ ಹೆಸರು ವಾಸಿಯಂ ಕೇಳಿಸಿ ನಿನ್ನಿಂದಲೇ ನಾನು ಯುದ್ಧದಿಂದ ಜಯಿಸಲ್ಪಟ್ಟವಳಾದೆನಲ್ಲವೆ? [ಅಂದರೆ ಅಬಲೆಯಾದ ನನ್ನ ಮುಂದೆ ಪರಾಕ್ರಮವಂ ಮಾಡಿ ಚೌರ್ಯ ದಿಂದ ನನ್ನನ್ನು ಕದ್ದುಕೊಂಡು ಬಂದವನಾಗಿ, ನಿನ್ನ ಪರಾಕ್ರಮವು ತಿಳಿಯಿತೆಂದು ಭಾವವು]॥೬॥ಎಲೊ, ಎಲೋ, ನೀಚನೇ! ಯಾರೂಇಲ್ಲದ ಕಾಲದಲ್ಲಿ, ಪರಸತಿಯ ಅಪಹಾರರೂಪವಾದ ಇಂಥಾ ನೀಚವ್ಯಾಪಾರವಂ ಗೈದ ನಿನಗೆ ಯಾಕೆ ನಾಚಿಕೆಯಿಲ್ಲ? ಲೋಕದಲ್ಲಿ ಸತ್ಪುರುಷರೆಲ್ಲರು, ನಾನು ಶೂರನೆಂದು ತಿಳಿಕೊಂಡಿರುವ ನಿನ್ನ ಘಾತುಕರೂ ಪವಾಗಿರುವ ಈ ಅಧರ್ಮಕಾರ್ಯವನ್ನು ತುಚ್ಛೀಕರಿಸುವರು ॥೮॥ ನೀನು ಆ ಸಮಯದಲ್ಲಿ ಯಾವ ಯಾವ ನಿನ್ನ ಸಾಮರ್ಥ್ಯಗಳನ್ನು ಹೇಳಿದವನಾದೆಯೋ, ಛೀಛೀ ಅದೇನುಕೆಲಸಕ್ಕೆ ಬಂದದ್ದು? ಕುಲಸ್ಥರಿಗೆಲ್ಲ ನಿಂದೆಯುನ್ನುಂಟು

ಚೇತ್ಸೈವಧಾವಸಿ। ಮುಹೂರ್ತಮಪಿತಿಷ್ಠಸ್ವನಜೀವನ್‌ಪ್ರತಿಯಾಸ್ಯಸಿ । ನಹಿಚಕ್ಷುಷ್ಪಥಂಪ್ರಾಪ್ಯತಯೋಃಪಾರ್ಥಿವಪುತ್ರಯೋಃ।ಸಸೈನ್ಯೋಪಿಸಮರ್ಥಸ್ತ್ವಂಮುಹೂರ್ತಮಪಿಜೀವಿತುಂ।ನತ್ವಂತಯೋಶ್ಶರಸ್ಪರ್ಶಂಸೋಢುಂಶಕ್ತಃಕಥಂಚನ।ವನೇಪ್ರಜ್ವಲಿತಸ್ಯೇವಸ್ಪರ್ಶಮಗ್ನೇರ್ವಿಹಂಗಮಃ ।೧೨। ಸಾಧುಕುರ್ವಾತ್ಮನಃಪಥ್ಯಂಸಾಧುಮಾಂಮುಂಚರಾವಣ।೧೩।ಮತ್ಪ್ರಧರ್ಷಣರುಷ್ಟೋಹಿಭ್ರಾತ್ರಾಸಹಪತಿರ್ಮಮ । ವಿಧಾಸ್ಯತಿವಿನಾಶಾಯತ್ವಂಮಾಂಯದಿನಮುಂಚಸಿ।೧೩। ಯೇನತ್ವಂವ್ಯವಸಾಯೇನಬಲಾನ್ಮಾಂಹರ್ತುಮಿಚ್ಛಸಿ । ವ್ಯವಸಾಯಸ್ಸತೇನೀಚಭವಿಷ್ಯತಿನಿರರ್ಥಕಃ ।೧೪। ನಹ್ಯಹಂತಮಪಶ್ಯಂತೀಭರ್ತಾರಂವಿಬುಧೋಪಮಂ । ಉತ್ಸಹೇಶತ್ರುವಶಗಾಪ್ರಾಣಾನ್‌ಧಾರಯಿತುಂಚಿರಂ ।೧೫। ನನೂನಂಚಾತ್ಮನಃಪಥ್ಯಂಶ್ರೇಯೋವಾಸಮವೇಕ್ಷಸೇ । ಮೃತ್ಯುಕಾಲೇಯಥಾಮರ್ತ್ಯೋವಿಪರೀತಾನಿಸೇವತೇ ।೧೬। ಮುಮೂರ್ಷೂಣಾಂಹಿ

ತದಾ-ಆಕಾಲದಲ್ಲಿ, ರಾಮೇಣ-ಶ್ರೀರಾಮನಿಂದ, ಕಿಂಕರ್ತುಂ-ಏನು ಮಾಡುವದಕ್ಕೆ, ಶಕ್ಯಂ-ಸಾಧ್ಯವು, ಮುಹೂರ್ತಮಪಿ-ಒಂದು ಮುಹೂರ್ತವಾದರೂ, ತಿಷ್ಠಸ್ವ-ನಿಲ್ಲು. ಜೀವನ್-ಬದುಕಿರುವವನಾಗಿ, ನಪ್ರತಿಯಾಸ್ಯತಿ-ಹಿಂದಕ್ಕೆ ತೆರಳಲಾರೆ ॥೧೦॥ ಪಾರ್ಥಿವಪುತ್ರಯೋಃ-ರಾಜಕುವರರಾದ ತಯೋಃ-ಆ ರಾಮಲಕ್ಷ್ಮಣರ, ಚಕ್ಷುಷ್ಪಥಂ-ಕಣ್ಣಿನ ನೋಟವನ್ನು, ಪ್ರಾಪ್ಯ-ಹೊಂದಿ, ತ್ವಂ-ನೀನು, ಸಸೈನ್ಯಃಅಪಿ-ಸೇನೆಯಿಂದೊಡಗೂಡಿದವನಾದರೂ. ಮುಹೂರ್ತಮಪಿ-ಎರಡು ಘಳಿಗೆಯಾದರೂ ಜೀವಿತುಂ-ಬದುಕುವದಕ್ಕೆ. ನಸಮರ್ಥೋಹಿ-ಶಕ್ಯನಲ್ಲವಷ್ಟೆ ॥ ... ॥೧೧॥ ತ್ವಂ-ನೀನು, ತಯೋಃ-ಆರಾಮಲಕ್ಷ್ಮಣರ, ಶರಸ್ಪರ್ಶಂ-ಬಾಣಸ್ಪರ್ಶವನ್ನು, ವನೇ-ಅರಣ್ಯದಲ್ಲಿ, ಪ್ರಜ್ವಲಿತಸ್ಯ-ಉರಿಯುತ್ತಿರುವ ಅಗ್ನೇಃ-ಅಗ್ನಿಯ ಸ್ಪರ್ಶಂ-ಮುಟ್ಟೋಣವನ್ನು, ವಿಹಂಗಮಇವ-ಹಕ್ಕಿಯಂತೆ, ಕಥಂಚನ-ಅತಿಪ್ರಯಾಸದಿಂದಲಾದರೂ, ಸೋಢುಂ-ಸಹಿಸುವದಕ್ಕೆ, ನಶಕ್ತಃ-ಸಮರ್ಥನಲ್ಲ ॥೧೨॥ ಹೇರಾವಣ-ಎಲೈರಾವಣನೇ. ಆತ್ಮನಃ-ನಿನಗೆ, ಸಾಧು-ಚನ್ನಾಗಿ, ಪಥ್ಯಂ-ಇಷ್ಟವನ್ನು, ಕುರುಮಾಡು, ಸಾಧು-ಚನ್ನಾಗಿ, ಮಾಂ-ನನ್ನನ್ನು ಮುಂಚ-ಬಿಡು ॥೧೨॥ ॥ ತ್ವಂ-ನೀನು, ಮಾಂ-ನನ್ನನ್ನು. ನಮುಂಚಸಿಯದಿ-ಬಿಡದೇಹೋದರೆ, ಮತ್ಪ್ರಧರ್ಷಣರುಷ್ಟಃ-ನನ್ನತಿರಸ್ಕಾರದಿಂ ಕೋಪಿಷ್ಠನಾದ, ಮಮ-ನನ್ನ. ಪತಿಃ-ಗಂಡನು, ಭ್ರಾತ್ರಾಸಹ-ತಮ್ಮನೊಡಗೂಡ, ವಿನಾಶಯ-ನಿನ್ನ ನಾಶಕ್ಕೆ, ಯತ್ನಂ-ಪ್ರಯತ್ನವನ್ನು, ವಿಧಾಸ್ಯತಿ-ಮಾಡುತ್ತಾನೆ ॥೧೩॥ ॥ ತ್ವಂ-ನೀನು, ಯೇನವ್ಯವಸಾಯೇನ-ಯಾವ ಪ್ರಯತ್ನದಿಂದ, ಬಲಾತ್-ಬಲಾತ್ಕಾರದಿಂದ, ಮಾಂ-ನನ್ನನ್ನು, ಹರ್ತುಂ ಅಪಹರಿಸುವದಕ್ಕಾಗಿ, ಇಚ್ಛಸಿ-ಅಪೇಕ್ಷಿಸುತ್ತೀಯೋ. ಹೇನೀಚ-ಎಲೈ ನೀಚನೇ, ತೇ-ನಿನ್ನ, ಸಃವ್ಯವಸಾಯಃ-ಆ ಉದ್ಯೋಗವು. ನಿರರ್ಥಕಃ-ನಿಷ್ಪ್ರಯೋಜನವು, ಭವಿಷ್ಯತಿ-ಆಗುವದು ॥೧೪॥ ॥ ಅಹಂ-ನಾನು, ವಿಬುಧೋಪಮಂ-ದೇವತಾಸಮಾನನಾದ. ಭರ್ತಾರಂ-ಗಂಡನಾದ, ತಂ-ಆ ಶ್ರೀರಾಮನನ್ನು ಅಪಶ್ಯಂತೀ-ಕಾಣದಿರುವವಳಾಗಿ, ಶತ್ರುವಶಗಾ-ಶತ್ರುವಿಗೆ ಸ್ವಾಧೀನಳಾಗಿ, ಚಿರಂ-ಬಹಳಕಾಲವು,ಪ್ರಾಣಾನ್-ಪ್ರಾಣಗಳನ್ನು. ಧಾರಯಿತುಂ-ಧರಿಸುವದಕ್ಕಾಗಿ, ನೋತ್ಸಹೇಹಿ-ಉದ್ಯುಕ್ತಳಾಗಲಾರೆನಷ್ಟೆ ॥೧೫॥ ॥ ಮೃತ್ಯುಕಾಲೇ-ಮರಣಕಾಲದಲ್ಲಿ, ಮರ್ತ್ಯಃ-ಮನುಷ್ಯನು. ವಿಪರೀತಾನಿ-ಅಪಥ್ಯಗಳಾಗಿರುವಂಥಾ ಪದಾರ್ಥಗಳನ್ನು. ಯಥಾ-ಹ್ಯಾಗೆ, ಸೇವತೇ-ಸೇವಿಸುತ್ತಾನೆಯೋ. ತಥಾ-ಹಾಗೆಯೇ. ಆತ್ಮನಃ-ನಿನಗೆ, ಪಥ್ಯಂ-ಇಷ್ಟವನ್ನಾದರೂ, ಶ್ರೇಯೋವಾ-ಅಭಿವೃದ್ಧಿಯನ್ನಾದರೂ, ಸಮವೇಕ್ಷಸೇ-ನೀನು ನೋಡುವನಲ್ಲ ॥೧೬॥ ॥ಯತ್-ಯಾವದು,ಪಥ್ಯಂ-ಹಿತವೋ, ತತ್-ಅದು, ಸರ್ವೇಷಾಂ-ಸಮ

ಮಾಡುವ ನಿನ್ನ ನಡತೆಯು ಬಹು ನಿಂದಿತವಾದದ್ದು; ಈಗಲಾದರೂ ನನ್ನ ಪತಿಯಾದ ಶ್ರೀರಾಮನು ಬರುವವರಿಗೂ ಕೊಂಚನಿಂತವನಾದರೆ, ನೀನು ಬದುಕಿಹಿಂದಕ್ಕೆ ಹೋಗಲಾರೆ; ನಾಚಿಕೆಯಿಲ್ಲದೆ ಅಬಲೆಯಾದ ನನ್ನನ್ನಪಹರಿಸಿಕೊಂಡು ವೇಗವಾಗಿ ಓಡುತಲಿದ್ದೀ, ನನ್ನ ಪತಿಯಾದ ಶ್ರೀರಾಮನು ಯೇನುಮಾಡುವನು? ರಾಜಪುತ್ರರಾದ ಆ ರಾಮಲಕ್ಷ್ಮಣರ ದೃಷ್ಟಿಗೆವಿಷಯನಾದವನಾದರೆ, ಸೈನ್ಯದಿಂದ ಯುಕ್ತವಾಗಿದ್ದರೂ ನೀನುಮುಹೂರ್ತಮಾತ್ರವಾದರೂ ನಿಲ್ಲಲಾರೆ; ಆ ರಾಮಲಕ್ಷ್ಮಣರ ಸಂಬಂಧವಾದ ಬಾಣಂಗಳ ಸ್ಪರ್ಶಯಂ ಗೈಯ್ಯುವದಕ್ಕೆ, ವನದಲ್ಲಿ ಪ್ರಜ್ವಲಿಸುವ ಅಗ್ನಿಯ ಸ್ಪರ್ಶಯಂ ಗೈಯ್ಯುವದಕ್ಕೆ ಹಕ್ಕಿಗಳಿಂದ ಯೆಂತು ಆಗಲಾರದೋ, ಅಂತು ನಿನ್ನಿಂದೆ ಆಗಲಾರದು; ಆದ್ದರಿಂದ ನನ್ನಂ ಬಿಟ್ಟು ನಿನಗಿಷ್ಟವಿದ್ದಂತೆ ಹೊರಟು ಹೋಗಿ ಇರುವವನಾಗು; ಹೀಗಾದರೆ ನೀನು ಕ್ಷೇಮವಾಗಿರುವಿ; ಇಲ್ಲದಿದ್ದರೆ ನನ್ನ ತಿರಸ್ಕಾರದಿಂದ ಬಹು ಕೋಪವನ್ನೈದಿದ ಶ್ರೀರಾಮನು, ತಮ್ಮನಾದ ಲಕ್ಷ್ಮಣನಿಂ ದೊಡಗೂಡಿ ನಿನ್ನ ವಿನಾಶಕ್ಕಾಗಿ ಯತ್ನವಂ ಮಾಡುವನು ॥೧೩-೧೪॥ ಎಲೊ, ಎಲೋ, ನೀಚನೇ! ಕೇಳುವವನಾಗು, ಬಲಾತ್ಕಾರದಿಂದ ನನ್ನನ್ನು ಅಪಹಾರವಂ ಗೈದು ನೀನು ಯಾವ ಉದ್ಯೋಗವನ್ನು ಮಾಡಲಿಚ್ಛಿಸುತ್ತೀಯೋ, ಅದು ನಿಷ್ಪ್ರಯೋಜನವಾಗಿರುವದು; ದೇವತಾಸದೃಶನಾದ ಆ ಪತಿಯಾದ ಶ್ರೀರಾಮನಂ ಕಾಣದೆ ಶತ್ರುವಿನಕೈಗೆ ಶಿಲುಕಿ ಚಿರಕಾಲವು ಪ್ರಾಣಂಗಳಂ ಧರಿಸಲಾರೆನು ॥೧೫॥ ಮರಣಕಾಲವು ಸಂಭವಿಸಿದಾಗ ಮನುಜನು ಅಪಥ್ಯವಾದ ಪದಾರ್ಥಂಗಳನ್ನೂ ಯೆಂತು ಸೇವಿಸುವನೋ, ಅಂತು ನೀನು ನಿನಗೆ ಇಷ್ಟವಾದ ಕಾರ್ಯವನ್ನಾಗಲೀ ಶ್ರೇಯಸ್ಸನ್ನಾಗಲೀ ನೋಡತಕ್ಕವನಲ್ಲ;ಎಲೋರಾವಣನೇ!ಜನಗಳಿಗೆ ಯಾವದು ಇಷ್ಟವೋ ಅದು ರುಚಿ

ಸರ್ವೇಷಾಂಯತ್ಪಥ್ಯಂತನ್ನರೋಚತೆ । ಪಶ್ಯಾಮ್ಯದ್ಯಹಿಕಂಠೇತ್ವಾಂಕಾಲಪಾಶಾವಪಾಶಿತಂ ॥೧೭॥ ಯಥಾಚಾಸ್ಮಿನ್ಭಯಸ್ಥಾನೇನಬಿಭೇಷಿದಶಾನನ ॥ ವ್ಯಕ್ತಂಹಿರಣ್ಮಯಾನ್ಹಿತ್ವಂಸಂಪಶ್ಯಸಿಮಹೀರುಹಾನ್ ॥೧೮॥ ನದೀಂವೈತರಣೀಂಘೋರಾಂರುಧಿರೌಘನಿವಾಹಿನೀಂ । ಅಸಿಪತ್ರವನಂಚೈವಭೀಮಂಪಶ್ಯಸಿರಾವಣ ॥೧೯॥ ತಪ್ತಕಾಂಚನಪುಷ್ಪಾಂಚವೈಡೂರ್ಯಪ್ರವರಚ್ಛದಾಂ । ದ್ರಕ್ಷ್ಯಸೇಶಾಲ್ಮಲೀಂತೀಕ್ಷ್ಣಾಮಾಯಸೈಃಕಂಟಕೈಶ್ಚಿತಾಂ ।೨೦।ನಹಿತ್ವಮೀದೃಶಂಕೃತ್ವಾತಸ್ಯಾಲೀಕಂಮಹಾತ್ಮನಃ । ಧರ್ಷಿತುಂಶಕ್ಷ್ಯಸಿಚಿರಂವಿಷಂಪೀತ್ವೇವನಿರ್ಘೃಣಃ ।೨೧।ಬದ್ಧಸ್ತ್ವಂಕಾಲಪಾಶೇನದುರ್ನಿವಾರೇಣರಾವಣ॥ಕ್ವಗತೋಲಪ್ಸ್ಯಸೇಶರ್ಮಭರ್ತುರ್ಮಮಮಹಾತ್ಮನಃ॥ನಿಮೇಷಾಂತರಮಾತ್ರೇಣವಿನಾಭ್ರಾತ್ರಾಮಹಾವನೇ॥ ರಾಕ್ಷಸಾನಿಹತಾಯೇನಸಹಸ್ರಾಣಿಚತುರ್ದಶ । ಸಕಥಂರಾಘವೋವೀರಸ್ಸರ್ವಾಸ್ತ್ರಕುಶಲೋಬಲೀ ॥ ನತ್ವಾಂಹನ್ಯಾಚ್ಛರೈಸ್ತೀಕ್ಷ್ಣೈರಿಷ್ಟಭಾರ್ಯಾಪಹಾರಿಣಂ ॥೨೪। ಏತಚ್ಚಾನ್ಯಚ್ಚಪರುಷಂವೈದೇಹೀರಾವಣಾಂಕಗಾ । ಭಯಶೋಕಸ

---

ಸ್ತ್ರರಾದ, ಮುಮೂರ್ಷೂಣಾಂ-ಸಾಯಲಿಚ್ಛೆಯುಳ್ಳವರಿಗೆ, ನರೋಚತೆ-ರುಚಿಸುವದಿಲ್ಲ, ತ್ವಾಂ-ನಿನ್ನನ್ನು, ಅದ್ಯ-ಈಗಲೇ, ಕಂಠೇ-ಕೊರಳಲ್ಲಿ ಕಾಲಪಾಶಾವಪಾಶಿತಂ-ಯಮಪಾಶದಿಂ ಕಟ್ಟಲ್ಪಟ್ಟಂಥಾವನನ್ನಾಗಿ, ಪಶ್ಯಾಮಿಹಿ-ಕಾಣುತ್ತೇನಷ್ಟೆ ॥೧೭॥ ॥ ಹೇದಶಾನನ-ಎಲೈ ರಾವಣನೇ, ಯಥಾ-ಹಾಗೆ. ಅಸ್ಮಿನ್ಭಯಸ್ಥಾನೇ-ಇಂಥಾ ಭಯಸ್ಥಳದಲ್ಲಿ, ನಬಿಭೇಷಿ-ಭಯಬೀಳದಿದ್ದೀಯೋ, ತಥಾ-ಹಾಗೆಯೇ, ತ್ವಂ-ನೀನು, ಹಿರಣ್ಮಯಾನ್-ಭಂಗಾರದವಿಕಾರಗಳನ್ನಾಗಿ, ಮಹೀರುಹಾನ್-ಗಿಡಗಳನ್ನು, ಸಂಪಶ್ಯಸಿಹಿ-ನೋಡುತ್ತೀಯಷ್ಟೆ ॥೧೮॥ ॥ ಹೇರಾವಣ-ಎಲೈ ರಾವಣನೇ, ರುಧಿರೌಘನಿವಾಹಿನೀಂ-ರಕ್ತದ ಪ್ರವಾಹಗಳಿಂ ಪ್ರವಹಿಸುತ್ತಿರುವ, ಘೋರಾಂ-ಭಯಂಕರವಾದ, ವೈತರಣೀಂನದೀಂ-ವೈತರಣೀಯೆಂಬ ನದಿಯನ್ನು ಭೀಮಂ-ಭಯಂಕರವಾದ. ಅಸಿಪತ್ರವನಂಚೈವ-ಕತ್ತಿಗಳವಿಕಾರವಾದ ಪರ್ಣಗಳಿಂಕೂಡಿಕೊಂಡಿರುವ ವನವನ್ನು ( ಅಂದರೆ_ಅಸಿಪತ್ರವನವೆಂಬ ನರಕವನ್ನು. ) ಪಶ್ಯಸಿ-ಕಾಣುವೀ ॥೧೯॥ ॥ ತಪ್ತಕಾಂಚನಪುಷ್ಪಾಂಚ-ಕಾಸಲ್ಪಟ್ಟ ಭಂಗಾರದಹುವ್ವುಗಳುಳ್ಳ, ವೈಡೂರ್ಯಪ್ರವರಚ್ಛದಾಂ-ವೈಡೂರ್ಯಮಣಿವಿಕಾರವಾದ ಪತ್ರಗಳುಳ್ಳ ಆಯಸೈಃ-ಕಬ್ಬಿಣವಿಕಾರವಾದ, ಕಂಟಕೈಃ-ಮುಳ್ಳುಗಳಿಂದ, ಚಿತಾಂ-ವ್ಯಾಪ್ತವಾದ, ತೀಕ್ಷ್ಣಾಂ-ಹದವುಳ್ಳ, ಶಾಲ್ಮಲೀಂ-ಶಾಲ್ಮಲೀ ವೃಕ್ಷವನ್ನು, ದ್ರಕ್ಷ್ಯಸಿ-ಕಾಣುವಿ ॥೨೦॥ ॥ ನಿರ್ಘೃಣಃ-ದಯಾಹೀನನಾದ, ತ್ವಂ-ನೀನು, ತಸ್ಯಮಹಾತ್ಮನಃ-ಮಹಾತ್ಮನಾದ ಶ್ರೀರಾಮನಿಗೆ, ಈದೃಶಂ-ಇಂಥಾದ್ದಾದ ಅಲೀಕಂ-ಅಪರಾಧವನ್ನು. ಕೃತ್ವಾ-ಮಾಡಿ, ವಿಷಂಪೀತ್ವೇವ-ವಿಷವನ್ನು ಪಾನಮಾಡಿದಂತೆ, ಚಿರಂ-ಬಹುಕಾಲವನ್ನು. ಜೀವಿತಂ-ಪ್ರಾಣವನ್ನು ಧರಿತುಂ-ಧರಿಸುವದಕೆ , ನಶಕ್ಷ್ಯಸಿ-ಸಮರ್ಥನಾಗಲಾರೆ ॥೨೧॥ ॥ ಹೇರಾವಣ_ಎಲೈ ರಾವಣನೇ, ತ್ವಂ-ನೀನು, ದುರ್ನಿವಾರೇಣ-ಪರಿಹರಿಸಲಸಾಧ್ಯವಾದ ಕಾಲಪಾಶೇನ-ಯಮಪಾಶದಿಂದ, ಬದ್ಧಃ-ಕಟ್ಟಲ್ಪಟ್ಟವನಾಗಿದ್ದೀ, ಮಮ-ನನಿಗೆ, ಭರ್ತುಃ-ಗಂಡನಾದ, ಮಹಾತ್ಮನಃ-ಮಹಾಮನಸ್ವಿಯಾದ ಶ್ರೀರಾಮನಪೆಶೆಯಿಂದ, ಕ್ವಗತಃ-ಯಲ್ಲಿಹೋದರೂ, ಶರ್ಮ-ಸುಖವನ್ನು, ಲಪ್ಸ್ಯಸೆ-ಹೊಂದುವೀ ॥೨೨॥ ॥ ನಿಮೇಷಾಂತರಮಾತ್ರೇಣ-ಒಂದುನಿಮಿಷ ಕಾಲದಲ್ಲಿ. ಮಹಾವನೇ-ದೊಡ್ಡ ಅರಣ್ಯದಲ್ಲಿ, ಭ್ರಾತ್ರಾವಿನಾ-ತಮ್ಮನನ್ನು ವಿನಾಯಿಸಿ, ಯೇನ-ಯಾವಶ್ರೀರಾಮನಿಂದ, ಚತುರ್ದಶಸಹಸ್ರಾಣಿ-ಹದಿನಾಲ್ಕುಸಾವಿರಗಳಾದ, ರಾಕ್ಷಸಾಃ-ರಕ್ಕಸರು, ನಿಹತಾಃ-ಹೊಡೆಯಲ್ಪಟ್ಟರೋ, ವೀರಃ-ಶೂರನಾದ ಸರ್ವಾಸ್ತ್ರಕುಶಲಃ-ಸಮಸ್ತಾಸ್ತ್ರವಿದ್ಯೆಯಲ್ಲಿ ಬುದ್ಧಿಶಾಲಿಯಾದ, ಬಲೀ-ಬಲವಂತನಾದ. ಸರಾಘವಃ-ಆ ಶ್ರೀರಾಮನು, ಇಷ್ಟಭಾರ್ಯಾಪಹಾರಿಣಂ-ಹಿತಕರಳಾದ ಹೆಂಡತಿಯನ್ನು ಅಪಹರಿಸಿದ, ತ್ವಾಂ-ನಿನ್ನನ್ನು, ತೀಕ್ಷ್ಣೈಃ-ಹದವುಳ್ಳ. ಶರೈಃ-ಬಾಣಗಳಿಂದ, ಕಥಂನಹನ್ಯಾತ್-ಹ್ಯಾಗೆ ಹೊಡಿಯದಿರುವನು, ॥೨೪॥ ॥ ಏತಚ್ಚ-ಈ ಮಾತನ್ನು, ಅನ್ಯಚ್ಚ-ಮತ್ತೊಂ

---

ಸುವದಿಲ್ಲ; ಆದ್ದರಿಂದ ನಿನಗೂಸಹ ವಿನಾಶಕಾಲವು ಸಂಭವಿಸಿ ಕಾಲಪಾಶ ಬಂಧಿತನಾಗಿ ತೋರುತ್ತೀ; ಇಂಥಾ ಭಯಸ್ಥಳದಲ್ಲಿಯೂ ಕೂಡಾ ನೀನು ಯೆಂತು ಭಯಪಡದಿದ್ದೀಯೋ, ಅಂತು ಸುವರ್ಣವಿಕಾರವಾದ ವೃಕ್ಷಂಗಳನ್ನು ನೋಡುವವನಾಗುವೆ ।೧೮॥ ಮತ್ತೂ ರಕ್ತಪ್ರವಾಹಗಳಿಂದ ಪ್ರವಹಿಸುವಮಹಾಭಯಂಕರವಾದ ವೈತರಿಣೀನದಿಯನ್ನೂ ಮಹಾ ಭಯಂಕರವಾದಅಸಿಪತ್ರವನವನ್ನು,ಮತ್ತೂ ಕಾಸಲ್ಪಟ್ಟಭಂಗಾರದಪುಷ್ಪಂಗಳುಳ್ಳದ್ದಾಗಿಯೂ, ವೈಡೂರ್ಯಮಣಿವಿಕಾರವಾದ ಯೆಲೆಗಳುಳ್ಳದ್ದಾಗಿಯೂ, ಕಬ್ಬಿಣದ ವಿಕಾರವಾದ ಮುಳ್ಳುಗಳುಳ್ಳದ್ದಾಗಿಯೂ ಇರುವ ಶಾಲ್ಮಲೀ ವೃಕ್ಷವನ್ನೂ ಸಹಾ ನೋಡುವವನಾಗುವೆ ।೨೦॥ ಎಲೋ ದಯಾಹೀನನಾದರಾವಣನೇ! ಮಹಾನುಭಾವನಾದ ಶ್ರೀರಾಮನಿಗೆ ಇಂಥಾ ಅಪ್ರಿಯವಂ ಗೈದು, ವಿಷಪಾನವಂ ಮಾಡಿದವನಂತೆ ಬಹುಕಾಲವು ಜೀವಿಸಲಾರೆ; ಮತ್ತೂ ನೀನು ನಿವಾರಿಸಲಶಕ್ಯವಾದ ಕಾಲಪಾಶದಿಂದ ಬದ್ಧನಾಗಿದ್ದೀಯಾದಕಾರಣ, ನಿನಗೆ ನನ್ನ ಪತಿಯಾದ ಶ್ರೀರಾಮನಿಂದೆಂದಿಗೂ ಸುಖವುಂಟಾಗುವದಿಲ್ಲ; ಯಾಕಂದರೆ;_ಹೇಳುವೆನು ಕೇಳುವವನಾಗು, ತಮ್ಮನಾದ ಲಕ್ಷ್ಮಣನ ಸಹಾಯವೂ ಸಹಾ ಇದಲ್ಲದೆ ಯಾವ ಮಹಾತ್ಮನಾದ ಶ್ರೀರಾಮನು ನಿಮಿಷಮಾತ್ರದಲ್ಲಿ ಹದಿನಾಲ್ಕು ಸಾವಿರ ರಾಕ್ಷಸರನ್ನು ಹೊಡದವನಾದನೋ, ಅಂಥಾ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು, ತನ್ನ ಪ್ರಾಣಪ್ರಿಯಳಾದ ನನ್ನನ್ನು ಅಪಹಾರವಂ ಗೈದ ನಿನ್ನನ್ನು, ತೀಕ್ಷ್ಣಂಗಳಾದ ಬಾಣಂಗಳಿಂದ ಕೊಲ್ಲದೆ

ಮಾವಿಷ್ಟಾ ಕರುಣಂ ವಿಲಲಾಪ ಹ ॥೨೫॥ ತಥಾ ಭೃಶಾರ್ತಾಂ ಬಹು ಚೈವ ಭಾಷಿಣೀಂ ವಿಲಾಪಪೂರ್ವಂ ಕರುಣಂ ಚ ಭಾಮಿನೀಂ । ಜಹಾರ ಪಾಪಃ ಕರುಣಂ ವಿವೇಷ್ಟತೀಂ ನೃಪಾತ್ಮಜಾಮಾಗತಗಾತ್ರವೇಪಥುಂ ॥೨೬॥ —* ತ್ರಿಪಂಚಾಶಸ್ಸರ್ಗಃ *—

ಹ್ರಿಯಮಾಣಾ ತು ವೈದೇಹೀ ಕಂಚಿನ್ನಾಥಮಪಶ್ಯತೀ । ದದರ್ಶ ಗಿರಿಶೃಂಗಸ್ಥಾನ್ ಪಂಚ ವಾನರಪುಂಗವಾನ್ ॥೧॥ ತೇಷಾಂ ಮಧ್ಯೇ ವಿಶಾಲಾಕ್ಷೀ ಕೌಶೇಯಂ ಕನಕಪ್ರಭಂ । ಉತ್ತರೀಯಂ ವರಾರೋಹಾ ಶುಭಾನ್ಯಾಭರಣಾನಿ ಚ । ಮುಮೋಚ ಯದಿ ರಾಮಾಯ ಶಂಸೇಯುರಿತಿ ಮೈಥಿಲೀ ॥೨॥ ವಸ್ತ್ರಮುತ್ಸೃಜ್ಯ ತನ್ಮಧ್ಯೇ ನಿಕ್ಷಿಪ್ತಂ ಸಹಭೂಷಣಂ । ಸಂಭ್ರಮಾತ್ತು ದಶಗ್ರೀವಸ್ತತ್ಕರ್ಮ ನ ಸಬುದ್ಧವಾನ್ ॥೩॥ ಪಿಂಗಾಕ್ಷಾಸ್ತಾಂ ವಿಶಾಲಾಕ್ಷೀಂ ನೇತ್ರೈರನಿಮಿಷೈರಿವ । ವಿಕ್ರೋಶಂತೀಂ ತಥಾ ಸೀತಾಂ ದದೃಶುರ್ವಾನರರ್ಷಭಾಃ ॥೪॥ ಸ ಚ ಪಂಪಾಮತಿಕ್ರಮ್ಯ ಲಂಕಾಮಭಿಮುಖಃ ಪುರೀಂ । ಜಗಾಮ ರುದತೀಂ ಗೃ

ದನ್ನು, ಪರುಷಂ-ಕ್ರೂರವಾದ ವಾಕ್ಯವನ್ನು, ರಾವಣಾಂಕಗಾ-ರಾವಣನ ತೊಡೆಯಲ್ಲಿ ಸೇರಿರುವಳಾಗಿ, ವೈದೇಹೀ-ಸೀತಾದೇವಿಯು ಭಯಶೋಕಸಮಾವಿಷ್ಟಾ-ಭಯದಿಂದಲೂ ದುಃಖದಿಂದಲೂ ವ್ಯಾಪ್ತಳಾದಂಥಾವಳಾಗಿ, ಕರುಣಂ-ದೀನವಾಗಿ, ವಿಲಲಾಪಹ-ಪ್ರಲಾಪವಂ ಮಾಡಿದ್ದಳು ॥೨೫॥ ॥ ತಥಾ-ಆ ಪರಿಯಾಗಿ, ಭೃಶಾರ್ತಾಂ-ಬಹಳವಾಗಿ, ಆರ್ತಾಂ-ದೀನಧ್ವನಿಯಂ ಮಾಡುತ್ತಿರುವ, ವಿಲಾಪಪೂರ್ವಂ-ಪ್ರಲಾಪವೇ ಮೊದಲಾಗುಳ್ಳದ್ದಾಗಿ, ಬಹು-ಅನೇಕ ಬಗೆಯಾಗಿ, ಕರುಣಂ-ದೈನ್ಯವಾಗಿ, ಭಾಷಿಣೀಂ-ಮಾತನಾಡುತ್ತಿರುವ, ಕರುಣಂ-ದೀನಧ್ವನಿಯಾಗಿ, ವಿವೇಷ್ಟಂತೀಂ-ಹೊರಳಾಡುತ್ತಿರುವ, ಆಗತಗಾತ್ರವೇಪಥುಂ-ಪ್ರಾಪ್ತವಾದ ಶರೀರದ ಕಂಪವುಳ್ಳ, ನೃಪಾತ್ಮಜಾಂ-ರಾಜನ ಕುಮಾರಿಯಾದ, ಭಾಮಿನೀಂ-ಸೀತಾದೇವಿಯನ್ನು, ಪಾಪಃ-ಪಾಪಿಷ್ಠನಾದ ರಾವಣನು, ಜಹಾರ-ಅಪಹರಿಸಿದನು ॥೨೬॥ ॥ —** ಇತಿಶ್ರೀಮದಾರಣ್ಯಕಾಂಡೇ-ತ್ರಿಪಂಚಾಶಸ್ಸರ್ಗಃ **—

ಹ್ರಿಯಮಾಣಾ-ಅಪಹರಿಸಿಕೊಂಡು ಹೋಗಲ್ಪಡುತ್ತಿರುವ, ವೈದೇಹೀ-ಸೀತಾದೇವಿಯು, ಕಂಚಿನ್ನಾಥಂ-ಒಬ್ಬನಾದರೂ ರಕ್ಷಕನನ್ನು, ಅಪಶ್ಯತೀ-ಕಾಣದಿರುವಳಾಗಿ. ಗಿರಿಶೃಂಗಸ್ಥಾನ್-ಬೆಟ್ಟದ ತುದಿಯಂ ಹೊಂದಿರುವ, ವಾನರಪುಂಗವಾನ್-ವಾನರಶ್ರೇಷ್ಠರಾದ ಐದು ಜನರನ್ನು, ದದರ್ಶ-ಕಂಡಳು ॥೧॥ ವಿಶಾಲಾಕ್ಷೀ-ವಿಸ್ತಾರವಾದ ನೇತ್ರಗಳುಳ್ಳ, ವರಾರೋಹಾ-ಶ್ರೇಷ್ಠಳಾದ, ಮೈಥಿಲೀ-ಸೀತಾದೇವಿಯು, ಕನಕಪ್ರಭಂ-ಚಿನ್ನದ ಕಾಂತಿಯುಳ್ಳ, ಉತ್ತರೀಯಂ-ಹೊದ್ದಿರುವ, ಕೌಶೇಯಂ-ಪಟ್ಟುಮಡಿಯನ್ನು, ಶುಭಾನಿ-ಮಂಗಳಕರಂಗಳಾದ, ಆಭರಣಾನಿಚ-ಪದಿವೆಗಳನ್ನು, ರಾಮಾಯ-ಶ್ರೀರಾಮನಿಗೋಸ್ಕರ, ಯದಿ-ಆದರೆ, ಶಂಸೇಯುರಿತಿ-ಹೇಳುವರೆಂದು. ತೇಷಾಂ-ಆ ಕಪಿಗಳ, ಮಧ್ಯೇ-ಮಧ್ಯಪ್ರದೇಶದಲ್ಲಿ, ಮುಮೋಚ-ಬಿಟ್ಟಳು ॥೨॥ ತನ್ಮಧ್ಯೇ-ಆ ಕಪಿಗಳ ಮಧ್ಯದಲ್ಲಿ, ಸಹಭೂಷಣಂ-ಒಡವೆಗಳಿಂದೊಡಗೂಡಿದ, ವಸ್ತ್ರಂ-ಉತ್ತರೀಯವನ್ನು, ಉತ್ಸೃಜ್ಯ-ಬಿಟ್ಟು, ನಿಕ್ಷಿಪ್ತಂ ಇತಿ ಯತ್-ಇರಿಸಲ್ಪಟ್ಟಿತೆಂಬದ್ಯಾವದುಂಟೋ. ತತ್ಕರ್ಮ-ಆ ಕರ್ಮವನ್ನು, ದಶಗ್ರೀವಃ-ಆ ರಾವಣನು, ಸಂಭ್ರಮಾತ್-ತ್ವರೆಯ ವಶದಿಂದ ನಬುದ್ಧವಾನ್-ತಿಳಿಯದೇ ಹೋದನು ॥೩॥ ॥ ಪಿಂಗಾಕ್ಷಾಃ-ಹಚ್ಚಗಿರುವ ನೇತ್ರಗಳುಳ್ಳ, ವಾನರರ್ಷಭಾಃ-ವಾನರಶ್ರೇಷ್ಠರಾದ ಕಪಿಗಳು. ತಥಾ-ಆ ಪರಿಯಾಗಿ, ವಿಕ್ರೋಶಂತೀಂ-ಅಳುತ್ತಿರುವ. ವಿಶಾಲಾಕ್ಷೀಂ-ವಿಸ್ತಾರವಾದ ನೇತ್ರಗಳುಳ್ಳ, ತಾಂಸೀತಾಂ-ಆ ಸೀತಾದೇವಿಯನ್ನು, ಅನಿಮಿಷೈರಿವ-ನಿಮೇಷ ರಹಿತನಾದವನಂತೆ ಯಿರುವ. ನೇತ್ರೈಃ-ಕಣ್ಣುಗಳಿಂದ, ದದೃಶುಃ-ಕಂಡರು ॥೪॥ ॥ ಸರಾಕ್ಷಸೇಶ್ವರಃ-ಆ ರಕ್ಕಸಾಧಿಪತಿಯಾದ ರಾವಣನು, ಪಂಪಾಂ-ಪಂಪಾನದಿಯನ್ನು, ಅತಿಕ್ರಮ್ಯ-ದಾಂಟಿ. ರುದತೀಂ-ರೋದನಮಾಡುತ್ತಿರುವ, ವೈದೇಹೀಂ-ಸೀತಾದೇವಿಯನ್ನು, ಗೃಹ್ಯ-ಹಿಡಿದುಕೊಂಡು, ಲಂಕಾಪುರೀಂ-ಲಂಕಾಪಟ್ಟ

ಬಿಡುವನೇ ಯೇನು? ಎಂದು ಸೀತಾದೇವಿಯು ತೊಡೆಯನ್ನೈದಿದವಳಾಗಿ ಈ ರೀತಿಯಾಗಿಯೂ, ಮತ್ತು ಕೆಲವಿಧವಾಗಿಯೂ ಸಹಾ ಅತಿಕಠಿಣವಾಗಿ ನುಡಿದು, ಭೀತಿಯಿಂದಲೂ ದುಃಖದಿಂದಲೂ ಸಹಾ ವ್ಯಾಪ್ತಳಾದಂಥಾವಳಾಗಿ ದೈನ್ಯದಿಂದ ಪ್ರಲಾಪವಂ ಗೈದಳು ॥೨೫॥ ಆ ರೀತಿಯಲ್ಲಿ ಬಹು ಪ್ರಲಾಪವಂ ಗೈಯ್ಯುತ್ತಲೂ, ದೈನ್ಯವಾಗಿ ಮಾತಾಡುತ್ತಲೂ, ಹೊರಳಾಡುತ್ತಲೂ, ಕಂಪಿಸುತ್ತಲೂ ಇರುವ ಆ ಜನಕರಾಜ ನಂದಿನಿಯಾದ ಸೀತಾದೇವಿಯನ್ನು ಪಾಪಿಯಾದ ರಾವಣನು ಅಪಹಾರವಂ ಗೈದನು ॥೨೬॥ —* ೫೩ನೆಯ ಸರ್ಗಂ ಮುಗಿದುದು *—

ಈ ರೀತಿಯಾಗಿ ಅಪಹರಿಸಿಕೊಂಡು ಪೋಗಲ್ಪಡುತಿರುವ ಆ ಸೀತಾದೇವಿಯು ಯಾವ ರಕ್ಷಕನನ್ನೂ ಕಾಣದೆ ಇರುವವಳಾಗಿ, ಬೆಟ್ಟದ ಶಿಖರದಲ್ಲಿ ಕುಳಿತಿರುವ ಐದುಮಂದಿ ವಾನರರಂ ನೋಡಿ, ಇವರಾದರೂ ತನ್ನ ಪ್ರಿಯನಾದ ಶ್ರೀರಾಮನಿಗೆ ಭಿನ್ನವಿಸುವರೋ ಯೇನೋ ಯೆಂದು ಯೋಚಿಸಿ, ಅಪರಂಜೀಮಯವಾದ ತಾನುಟ್ಟ ಸೀರೆಯ ಕೊನೆಯಲ್ಲಿ ಶುಭಕರವಾದ ಪಡಿವೆಗಳಂ ಕಟ್ಟಿ ಅವರ ಮಧ್ಯದಲ್ಲಿ ಬೀಳುವಂತೆ ಗಗನಮಾರ್ಗದಿಂದ ಬಿಟ್ಟವಳಾದಳು; ಆ ವ್ಯಾಪಾರವನ್ನು ರಾವಣನು ತ್ವರೆಯಿಂದ ನೋಡಲಿಲ್ಲ ॥೩॥ ಅನಂತರದಲ್ಲಿ ಹಸುರುಬಣ್ಣವಾದ ಕಣ್ಣುಗಳುಳ್ಳ ಆ ಕಪಿಗಳು ಆ ರೀತಿಯಲ್ಲಿ ಅಳುವ ಕಂಜಾಕ್ಷಿಯಾದ ಆ ಸೀತಾದೇವಿಯಂ ನಿಮೇಷರಹಿತರಾಗಿ ನೋಡಿದರೂ ॥೪॥ ಬಳಿಕ ರಾಕ್ಷಸಾಧಿಪತಿಯಾದ ಆ ರಾವಣನು ಸೀತಾದೇವಿಯನ್ನು ಹಪರಿಸಿಕೊಂಡು ಪಂಪಾನದಿಯಂ

ಹ್ಯವೈದೇಹೀಂರಾಕ್ಷಸೇಶ್ವರಃ ॥೫॥ ತಾಂಜಹಾರಸುಸಂಹೃಷ್ಟೋರಾವಣೋಮೃತ್ಯುಮಾತ್ಮನಃ । ಉತ್ಸಂಗೇನೈವಭುಜಗೀಂ
ತೀಕ್ಷ್ಣದಂಷ್ಟ್ರಾಂಮಹಾವಿಷಾಂ ॥೬॥ ವನಾನಿಸರಿತಶ್ಶೈಲಾನ್ಸರಾಂಸಿಚವಿಹಾಯಸಾ । ಸಕ್ಷಿಪ್ರಂಸಮತೀಯಾ
ಯಶರಶ್ಚಾಪಾದಿವಚ್ಯುತಃ ॥೭॥ ತಿಮಿನಕ್ರನಿಕೇತಂತುವರುಣಾಲಯಮಕ್ಷಯಂ । ಸರಿತಾಂಶರಣಂಗತ್ವಾಸಮತೀಯಾ
ಯಸಾಗರಂ ॥೮॥ ಸಂಭ್ರಮಾತ್ಪರಿವೃತ್ತೋರ್ಮೀರುದ್ಧಮೀನಮಹೋರಗಃ । ವೈದೇಹ್ಯಾಂಹ್ರಿಯಮಾಣಾಯಾಂಬಭೂವವ
ರುಣಾಲಯಃ ॥೯॥ ಅಂತರಿಕ್ಷಗತಾವಾಚಸ್ಸಸೃಜುಶ್ಚಾರಣಾಸ್ತದಾ । ಏತದಂತೋದಶಗ್ರೀವಇತಿಸಿದ್ಧಾಸ್ತದಾಬ್ರು
ವನ್ ॥೧೦॥ ಸತುಸೀತಾಂವಿವೇಷ್ಟಂತೀಮಂಕೇನಾದಾಯರಾವಣಃ । ಪ್ರವಿವೇಶಪುರೀಂಲಂಕಾಂರೂಪಿಣೀಂಮೃತ್ಯುಮಾತ್ಮ
ನಃ ॥೧೧॥ ಸೋಭಿಗಮ್ಯಪುರೀಂಲಂಕಾಂಸುವಿಭಕ್ತಮಹಾಪಥಾಂ । ಸಂರೂಢಕಕ್ಷ್ಯಾಬಹುಳಂಸ್ವ ಮಂತಃಪುರಮಾವಿಶತ್ ।

---

ನಕ್ಕೆ, ಅಭಿಮುಖಃ-ಯದುರಾಗಿ, ಜಗಾಮ-ಹೊರಟುಹೋದನು ॥೫॥ ರಾವಣಃ-ರಕ್ಕಸನು, ಸುಸಂಹೃಷ್ಟಃ-ಸಂತೋಷಗೊಂಡವನಾಗಿ, ತೀಕ್ಷ್ಣದಂಷ್ಟ್ರಾಂ-ಹರವಾದಕೋರೆಹಲ್ಲುಗಳುಳ್ಳ, ಮಹಾವಿಷಾಂ-ಬಹುವಿಷವುಳ್ಳ, ಭುಜಗೀಂ-ಹೆಣ್ಣಾವಿನಂತೆ, ತಾಂ-ಆ ಸೀತಾದೇವಿಯನ್ನು. ಆತ್ಮನಃ-ತನಗೆ. ಮೃತ್ಯುಂ-ಮರಣಕ್ಕೆ ಹೇತುಭೂತಳಾದವಳನ್ನಾಗಿ. ಜಹಾರ-ಅಪಹರಿಸಿದನು ॥೬॥ ಸಃ-ಆ ರಾವಣನು, ಚಾಪಾತ್-ಧನುಸ್ಸಿನಿಂದ, ಚ್ಯುತಃ-ಬಿಡಲ್ಪಟ್ಟ, ಶರಇವ-ಬಾಣದಂತೆ, ಕ್ಷಿಪ್ರಂ-ಜಾಗ್ರತೆಯಾಗಿ, ವಿಹಾಯಸಾ-ಅಂತರಿಕ್ಷಮಾರ್ಗದಿಂದ, ವನಾನಿ-ಅರಣ್ಯಗಳನ್ನೂ, ಸರಿತಃ-ಹೊಳೆಗಳನ್ನೂ, ಶೈಲಾನ್-ಬೆಟ್ಟಗಳನ್ನೂ, ಸರಾಂಸಿಚ-ಸರೋವರಗಳನ್ನೂ, ಸಮತೀಯಾಯ-ದಾಂಟಿದನು ॥೭॥ ತಿಮಿನಕ್ರನಿಕೇತಂ-ತಿಮಿಗಳೆಂಬ ಮತ್ಸ್ಯವಿಶೇಷಗಳಿಗೂ ನೆಗಳು ಗಳಿಗೂ ಆಶ್ರಯಭೂತನಾದ. ಸರಿತಾಂ-ನದಿಗಳಿಗೆ. ಶರಣಂ-ರಕ್ಷಕನಾದ, ಅಕ್ಷಯಂ-ನಾಶರಹಿತನಾದ. ವರುಣಾಲಯಂ-ವರುಣನಮನೆಯನ್ನು, ಗತ್ವಾ-ಹೊಂದಿ, ಸಾಗರಂ-ಕಡಲನ್ನು. ಸಮತೀಯಾಯ-ದಾಂಟಿದನು ॥೮॥ ವೈದೇಹ್ಯಾಂ-ಸೀತಾದೇವಿಯು, ಹ್ರಿಯಮಾಣಾಯಾಂ-ಸೆಳೆದುಕೊಂಡು ಹೋಗಲ್ಪಟ್ಟವಳಾಗುತ್ತಿರಲಾಗಿ, ಸಂಭ್ರಮಾತ್-ತ್ವರೆಯಿಂದ, ವರುಣಾಲಯಃ-ಸಮುದ್ರವು. ಪರಿವೃತ್ತೋರ್ಮಿಃ-ಹೋಗಲಾಡಿಸಲ್ಪಟ್ಟ ತೆರೆಗಳುಳ್ಳದ್ದೂ, ರುದ್ಧಮೀನ ಮಹೋರಗಃ-ಒಳಗೆ ತಡೆಮಾಡಲ್ಪಟ್ಟ ಮೀನುಗಳೂ ದೊಡ್ಡಹಾವುಗಳೂ ವುಳ್ಳದ್ದೂ, ಬಭೂವ-ಆಯಿತು ॥೯॥ ತದಾ-ಆ ಕಾಲದಲ್ಲಿ, ಚಾರಣಾಃ-ಚಾರಣರು, ಅಂತರಿಕ್ಷಗತಾಃ-ಅಂತರಿಕ್ಷವಂ ಹೊಂದಿದವರಾಗಿ, ದಶಗ್ರೀವಃ-ರಾವಣನು. ಏತದಂತಃ-ಈ ಸೀತಾಪಹರಣವೇ ಅಂತವಾಗುಳ್ಳವನು, ಇತಿ-ಇಂತೆಂದು, ತದಾ-ಆ ಕಾಲದಲ್ಲಿ, ವಾಚಃ-ಮಾತುಗಳನ್ನು. ಸಸೃಜುಃ-ಉಸುರಿದರು, ತದಾ-ಆ ಕಾಲದಲ್ಲಿ, ಸಿದ್ಧಾಶ್ಚ-ಸಿದ್ಧರೂ, ಅಬ್ರುವನ್-ನುಡಿದರು ॥೧೦॥ ಸರಾವಣಃ-ಆ ರಾವಣನು, ವಿವೇಷ್ಟಂತೀಂ-ಹೊರಳುತ್ತಿರುವ, ಆತ್ಮನಃ-ತನಗೆ, ರೂಪಿಣೀಂ-ಶರೀರಧಾರಿಯಾದ, ಮೃತ್ಯುಂ-ಮೃತ್ಯುದೇವತಾಸ್ವರೂಪಳಾದ, ಸೀತಾಂ-ಸೀತಾದೇವಿಯನ್ನು, ಅಂಕೇನ-ತೊಡೆಯಿಂದ, ಆದಾಯತು-ಸೆಗೆದುಕೊಂಡು. ಲಂಕಾಂ ಪುರೀಂ-ಲಂಕಾಪಟ್ಟಣವನ್ನು, ಪ್ರವಿವೇಶ-ಹೊಕ್ಕನು ॥೧೧॥ ಸಃ-ಆ ರಾವಣನು ಸುವಿಭಕ್ತಮಹಾಪಥಾಂ-ವಿಂಗಡಿಸಲ್ಪಟ್ಟ ರಾಜಬೀದಿಗಳುಳ್ಳ. ಲಂಕಾಂಪುರೀಂ-ಲಂಕಾಪಟ್ಟಣವನ್ನು ಕುರಿತು. ಅಭಿಗಮ್ಯ-ಹೋಗಿ, ಸಂರೂಢಕಕ್ಷ್ಯಾಬಹುಳಂ-ಜನಸಂಮರ್ದವಾದ ದ್ವಾರದ ಒಳಪ್ರದೇಶಗಳಿಂ ತುಂಬಿರುವ. ಸ್ವಂ-ಸ್ವಕೀಯವಾದ, ಅಂತಃಪುರಂ-ಅಂತಃಪುರವನ್ನು, ಆವಿಶತ್-ಹೊಕ್ಕನು ॥೧೨॥ ತತ್ರ-ಆ ಅಂತಃಪುರದಲ್ಲಿ, ರಾವಣಃ-ರಾವಣನು, ಅಸಿತಾಪಾಂಗೀಂ-ಕಪ್ಪಾಗಿರುವ ಕಡೆಗಣ್ಣೋನೆಗಳುಳ್ಳ, ಶೋಕಮೋಹಪರಾಯಣಾಂ-ಶೋಕದಿಂದಲೂ ಭ್ರಾಂತಿಯಿಂದಲೂ ಪರತಂತ್ರಳಾದ, ತಾಂಸೀತಾಂ-

---

ದಾಂಟಿ ಲಂಕಾಪುರಿಗಭಿಮುಖವಾಗಿ ಸಾರಿದನು ॥೫-೭॥ ಈ ಪ್ರಕಾರನಾಗಿ ದಶಕಂಠನು ಮಹಾ ಸಂತೋಷಚಿತ್ತನಾಗಿ, ತೀಕ್ಷ್ಣವಾದ ಕೋರೆದಾಡೆಗಳುಳ್ಳ ಮತ್ತೂ ಬಹು ವಿಷವುಳ್ಳ ಮಹಾ ಸರ್ಪವನ್ನು ಅಪಹರಿಸುವಂತೆ, ತನಗೆ ಮೃತ್ಯುವುಂಟಾಗುವದಕ್ಕಾಗಿ ಆ ಸೀತಾದೇವಿಯನ್ನು ಅಪಹರಿಸಿಕೊಂಡು, ಧನುರ್ದಂಡದಿಂದ ಬಿಡಲ್ಪಡುವ ನಿಡಿಗೋಲಂತೆ ಕಡುಜಾಗ್ರತೆಯಾಗಿ ಗಗನಮಾರ್ಗದಲ್ಲಿ ಪೋಗುತ್ತಾ, ವನಂಗಳನ್ನೂ ನದಿಗಳನ್ನೂ ಪರ್ವತಂಗಳನ್ನೂ ಸಹ ದಾಂಟಿ, ತಿಮಿತಿಮಿಂಗಿಲವೆಂಬ ಮತ್ಸ್ಯವಿಶೇಷಂಗಳಿಗೆ ಆಶ್ರಯಭೂತನಾಗಿಯೂ, ನದಿಗಳಿಗೆಲ್ಲ ರಕ್ಷಕನಾಗಿಯೂ, ನಾಶರಹಿತನಾಗಿಯೂ ಇರುವ ಸಮುದ್ರವಂ ದಾಂಟುತಿದ್ದನು. ॥೮॥ ಈ ರೀತಿಯಲ್ಲಿ ಸೀತಾದೇವಿಯು ಅಪಹರಿಸಲ್ಪಡುತಿರಲೂ, ತತ್ಕ್ಷಣದಲ್ಲಿಯೇ ಸಮುದ್ರನು ಗತವಾದ ತೆರೆಗಳುಳ್ಳವನಾಗಿಯೂ, ಒಳಗೆತಡೆಯಲ್ಪಟ್ಟ ಮೀನುಗಳೂ ದೊಡ್ಡದೊಡ್ಡ ಹಾವುಗಳೂ ಸಹಾ ಉಳ್ಳವನಾಗಿಯೂ ಇದ್ದನು ॥೯॥ ಆ ಸಮಯದಲ್ಲಿ ಚಾರಣರೆಲ್ಲರು ಅಂತರಿಕ್ಷವನ್ನೈದಿದವರಾಗಿ ರಾವಣನಿಗೆ ನಾಶಕಾಲವು ವದಗಿತೆಂದು ಉಸುರಿದರು ॥೧೦॥ ಅನಂತರದಲ್ಲಿ ರಾವಣನು ಹೊರಳಾಡುವ ಮತ್ತೂ ತನಗೆ ಮೃತ್ಯುಸ್ವರೂಪಳಾದ ಆ ಸೀತಾದೇವಿಯನ್ನು , ತೊಡೆಯನ್ನೇರಿಸಿಕೊಂಡು ಕಡುವೇಗದಿಂದ ಲಂಕಾಪುರಪ್ರವೇಶವಂ ಗೈದು, ಚೆನ್ನಾಗಿ ವಿಂಗಡಿಸಲ್ಪಟ್ಟ ಬೀದಿಗಳುಳ್ಳ ಪಟ್ಟಣದಲ್ಲಿ ಸಾರಿ, ಸ್ವಕೀಯವಾದ ಅಂತಃಪುರವನ್ನೈದಿದನು ॥೧೧-೧೨॥ ಆ ಅಂತಃಪುರದಲ್ಲಿ ರಾವಣನು ಕಪ್ಪಾಗಿರುವ ಕಟಾಕ್ಷಂಗಳುಳ್ಳ ಮತ್ತೂ ಶೋಕದಿಂದಲೂ ಮೋಹದಿಂದಲೂ ಸಹ ಪ್ರಜ್ಞೆಯಿಲ್ಲದಿರುವ ಆ ಸೀತಾದೇವಿಯನ್ನು, ಮಯನೆಂಬ

ತತ್ರ ತಾಮಸಿತಾಪಾಂಗಾಂ ಶೋಕಮೋಹಪರಾಯಣಾಂ । ನಿದಧೇ ರಾವಣಸ್ಸೀತಾಂ ಮಯೋ ಮಾಯಾಮಿವಾಸುರೀಂ ॥೧೩॥
ಅಬ್ರವೀಚ್ಚ ದಶಗ್ರೀವಃ ಪಿಶಾಚೀರ್ಘೋರದರ್ಶನಾಃ । ಯಥಾ ನೇಮಾಂ ಪುಮಾನ್ ಸ್ತ್ರೀ ವಾ ಸೀತಾಂ ಪಶ್ಯತ್ಯಸಮ್ಮತಃ ॥೧೪॥ ಮುಕ್ತಾಮಣಿಸುವರ್ಣಾನಿ ವಸ್ತ್ರಾಣ್ಯಾಭರಣಾನಿ ಚ । ಯದ್ಯದಿಚ್ಛೇತ್ತದೇವಾಸ್ಯಾ ದೇಯಂ ಮಚ್ಛಂದತೋ ಯಥಾ ॥೧೫॥ ಯಾ ಚ ವಕ್ಷ್ಯತಿ ವೈದೇಹೀಂ ವಚನಂ ಕಿಂಚಿದಪ್ರಿಯಂ । ಅಜ್ಞಾನಾದ್ಯದಿ ವಾ ಜ್ಞಾನಾನ್ನ ತಸ್ಯಾ ಜೀವಿತಂ ಪ್ರಿಯಂ ॥೧೬॥ ತಥೋಕ್ತ್ವಾ ರಾಕ್ಷಸೀಸ್ತಾಸ್ತು ರಾಕ್ಷಸೇಂದ್ರಃ ಪ್ರತಾಪವಾನ್ । ನಿಷ್ಕ್ರಮ್ಯಾಂತಃಪುರಾತ್ತಸ್ಮಾತ್ಕಿಂ ಕೃತ್ಯಮಿತಿ ಚಿಂತಯನ್ । ದದರ್ಶಾಷ್ಟೌ ಮಹಾವೀರ್ಯಾನ್ ರಾಕ್ಷಸಾನ್ ಪಿಶಿತಾಶನಾನ್ ॥೧೭॥ ಸ ತಾನ್ ದೃಷ್ಟ್ವಾ ಮಹಾವೀರ್ಯೋ ವರದಾನೇನ ಮೋಹಿತಃ । ಉವಾಚೈತಾನಿದಂ ವಾಕ್ಯಂ ಪ್ರಶಸ್ಯ ಬಲವೀರ್ಯತಃ ॥೧೮॥ ನಾನಾಪ್ರಹರಣಾಃ ಕ್ಷಿಪ್ರಮಿತೋ ಗಚ್ಛತ ಸತ್ವರಾಃ । ಜನಸ್ಥಾನಂ ಹತಸ್ಥಾನಂ ಭೂತಪೂರ್ವಂ ಖರಾಲಯಂ ॥೨೦॥ ತತ್ರೋಷ್ಯತಾಂ ಜನಸ್ಥಾನೇ

ಆ ಸೀತಾದೇವಿಯನ್ನು. ಮಯಃ–ಮಯನೆಂಬ ರಾಕ್ಷಸಶಿಲ್ಪಿಯು. ಆಸುರೀಂ–ಅಸುರಸಂಬಂಧವಾದ. ಮಾಯಾಮಿವ–ಮಾಯಾಭಿಮಾನಿದೇವತೆಯನ್ನಂತೆ, ನಿದಧೇ–ಇರಿಸಿದನು ॥೧೩॥ ॥ ದಶಗ್ರೀವಃ–ರಾವಣನು, ಘೋರದರ್ಶನಾಃ–ಭಯಂಕರವಾದ ನೋಟವುಳ್ಳ, ಪಿಶಾಚೀಃ–ಪಿಶಾಚಹೆಂಗಸರನ್ನು ಕುರಿತು, ಇಮಾಂ ಸೀತಾಂ–ಈ ಸೀತಾದೇವಿಯನ್ನು, ಅಸಮ್ಮತಃ–ನನ್ನ ಅಜ್ಞೆಯಿಲ್ಲದವನು, ಪುಮಾನ್ವಾ–ಪುರುಷನೇ ಆಗಲಿ, ಸ್ತ್ರೀವಾ–ಹೆಂಗಸಾಗಲಿ, ಯಥಾ–ಹ್ಯಾಗೆ, ನಪಶ್ಯತಿ–ನೋಡಲಾರನೋ, ತಥಾ–ಹಾಗೆಯೇ. ಕುರುಧ್ವಮಿತಿ–ಮಾಡಿರೀ ಎಂದು, ಅಬ್ರವೀತ್–ನುಡಿದನು ॥೧೪॥ ॥ ಮುಕ್ತಾಮಣಿಸುವರ್ಣಾನಿ–ಮುತ್ತುಗಳನ್ನು ರತ್ನಗಳನ್ನು ಭಂಗಾರವನ್ನು, ವಸ್ತ್ರಾಣಿ–ಶೀರೆಗಳನ್ನೂ, ಆಭರಣಾನಿಚ–ಒಡವೆಗಳನ್ನೂ, ಯದ್ಯತ್–ಯಾವಯಾವದನ್ನು, ಇಚ್ಛೇತ್–ಅಪೇಕ್ಷಿಸುವಳೋ, ತದೇವ–ಅದೇ, ಏತಸ್ಯಾಃ–ಈ ಸೀತಾದೇವಿಗೆ. ಮಚ್ಛಂದತೋಯಥಾ–ನನ್ನ ಅಜ್ಞೆಯಾದಂತೆ. ದೇಯಂ–ಕೊಡತಕ್ಕದ್ದು ॥೧೫॥ ॥ ಯಾಚ–ಯಾವ ಹೆಂಗಸು, ವೈದೇಹೀಂ–ಸೀತಾದೇವಿಯಂ ಕುರಿತು, ಅಜ್ಞಾನಾತ್–ಅಜ್ಞಾನದದೆಶೆಯಿಂದಲೇ ಆಗಲಿ, ಯದಿವಾ–ಹಾಗಲ್ಲದಿದ್ದರೆ, ಜ್ಞಾನಾತ್–ಜ್ಞಾನದದೆಶೆಯಿಂದಲಾಗಲಿ, ಕಿಂಚಿತ್–ಸ್ವಲ್ಪವಾದರೂ, ನಪ್ರಿಯಂ–ಹಿತವಲ್ಲದಿರುವ. ವಚನಂ–ಮಾತನ್ನು. ವಕ್ಷ್ಯತಿ–ಹೇಳುವಳೋ, ತಸ್ಯಾಃ–ಅವಳಿಗೆ. ಜೀವಿತಂ–ಪ್ರಾಣವು, ನಪ್ರಿಯಂ–ಇಷ್ಟವಲ್ಲ ॥೧೬॥ ॥ ಪ್ರತಾಪವಾನ್–ಪರಾಕ್ರಮಶಾಲಿಯಾದ. ರಾಕ್ಷಸೇಂದ್ರಃ–ರಾವಣನು ತಾಃರಾಕ್ಷಸೀಸ್ತು–ಆ ರಕ್ಕಸಹೆಂಗಳಂ ಕುರಿತು. ತಥಾ–ಆಪರಿಯಾಗಿ. ಉಕ್ತ್ವಾ–ಹೇಳಿ. ತಸ್ಮಾದಂತಃಪುರಾತ್–ಆ ಅಂತಃಪುರದದೆಶೆಯಿಂದ, ನಿಷ್ಕ್ರಮ್ಯ–ಹೊರಟುಬಂದು. ಕಿಂಕೃತ್ಯಮಿತಿ–ಏನುಮಾಡತಕ್ಕದ್ದೆಂದು. ಚಿಂತಯನ್–ಆಲೋಚನೆಮಾಡಿದವನಾಗಿ. ಮಹಾವೀರ್ಯಃ–ಮಹಾಪರಾಕ್ರಮಶಾಲಿಯಾದ ಸಃ–ಆ ರಾವಣನು, ವರದಾನೇನ–ಬ್ರಹ್ಮವರಪ್ರದಾನದಿಂ. ಮೋಹಿತಃ–ಮೋಹಿಸಲ್ಪಟ್ಟವನಾಗಿ. ಮಹಾವೀರ್ಯಾನ್–ಬಲುಪರಾಕ್ರಮಶಾಲಿಗಳಾದ. ಪಿಶಿತಾಶನಾನ್–ಮಾಂಸಾಶನರಾದ, ಅಷ್ಟೌರಾಕ್ಷಸಾನ್–ಎಂಟುಮಂದಿ ರಕ್ಕಸರನ್ನು, ದದರ್ಶ–ಕಂಡನು. ತಾನ್–ಆ ರಕ್ಕಸರನ್ನು, ದೃಷ್ಟ್ವಾ–ಕಂಡು. ಬಲವೀರ್ಯತಃ–ದೇಹಶ್ರಾಣೆಯಿಂದಲೂ ಸಾಮರ್ಥ್ಯದಿಂದಲೂ, ಪ್ರಶಸ್ಯ–ಬಹುಮತಿಸಿ, ಏತಾನ್–ಈ ರಕ್ಕಸರಂ ಕುರಿತು, ಇದಂವಾಕ್ಯಂ–ಈ ಮಾತನ್ನು ಉವಾಚ–ಹೇಳಿದನು ॥೧೮॥ ॥ ನಾನಾಪ್ರಹರಣಾಃ–ಅನೇಕಬಗೆಗಳಾದಾಯುಧಗಳುಳ್ಳವರಾಗಿ, ಸತ್ವರಾಃ–ತ್ವರೆಗೊಂಡವರಾಗಿ, ಇತಃ–ಇಲ್ಲಿಂದ, ಹತಸ್ಥಾನಂ–ಜನಶೂನ್ಯವಾದ ನಿವೇಶನಗಳುಳ್ಳದ್ದಾಗಿಯುಂ, ಖರಾಲಯಂ–ಖರಾಸುರನ ಮನೆಯುಂ, ಭೂತಪೂರ್ವಂ–ಪೂರ್ವದಲ್ಲಾಗಿರುವ. ಜನಸ್ಥಾನಂ–ಲಂಕಾಪುರಿಯ ಸರಹದ್ದಿನಂ ಕುರಿತು. ಕ್ಷಿಪ್ರಂ–ಜಾಗ್ರತೆಯಾಗಿ, ಗಚ್ಛತ–ಹೋಗಿರಿ ॥೨೦॥ ನಿಹತರಾಕ್ಷಸೇ–ಹೊಡೆಯಲ್ಪಟ್ಟ ರಕ್ಕಸರುಗಳು

ರಾಕ್ಷಸಶಿಲ್ಪಿಯು ಅಸುರಸಂಬಂಧಿಯಾದ ಮಾಯಾಭಿಮಾನಿ ದೇವತೆಯನ್ನು ಇರಿಸಿದಂತೆ ಇರಿಸಿದವನಾದನು ।೧೩। ಅನಂತರದಲ್ಲಿ ಆ ದಶಕಂಠನು ಭಯಂಕರವಾದ ದೃಷ್ಟಿಯುಳ್ಳ ಆ ಪಿಶಾಚಿಗಳಂ ಕುರಿತು ಎಲೈ ಪಿಶಾಚಗಳಿರಾ! ನನ್ನಾಜ್ಞೆಯಿಲ್ಲದೆ ಪುರುಷರೇ ಆಗಲಿ, ಸ್ತ್ರೀಯರೇ ಆಗಲಿ, ಈಕೆಯನ್ನು ಯೆಂತು ನೋಡದಿರುವರೋ ಅಂತು ಮಾಡುವವರಾಗಿ; ಮತ್ತೂ ಈಕೆಯು ಮುತ್ತುಗಳನ್ನಾಗಲೀ ರತ್ನಗಳನ್ನಾಗಲೀ ಸುವರ್ಣವನ್ನಾಗಲೀ ವಡಿವೆಗಳನ್ನಾಗಲೀ ಯಾವ ಯಾವದನ್ನು ಇಚ್ಛಿಸುವಳೋ ಅದನ್ನೆಲ್ಲ ನನ್ನಾಜ್ಞೆಯಂತೆ ಕೊಡುತ್ತಲಿರಬೇಕು; ಯಾವ ಹೆಂಗಸು ಈ ವಿದೇಹರಾಜ ಪುತ್ರಿಕೆಯನ್ನು ಜ್ಞಾನದಿಂದಲಾಗಲೀ, ಅಜ್ಞಾನದಿಂದಲಾಗಲೀ ಯೇನಾದರೂ ಅಪ್ರಿಯವಾದ ಮಾತುಗಳನ್ನು ನುಡಿದರೆ ಪ್ರಾಣಾಂತ ದಂಡನೆಯಂಗೈಯ್ಯುವೆನು; ಎಂಬದಾಗಿ ಮಹಾ ಪರಾಕ್ರಮಶಾಲಿಯಾದ ರಾವಣನು ಆ ರಾಣಿವಾಸದಲ್ಲಿರುವ ರಾಕ್ಷಸರಿಗೆ ಆಜ್ಞಾಪನೆಯಂಗೈದು ಆ ಅಂತಃಪುರದ ದೆಶೆಯಿಂದ ಹಿಂತಿರಿಗಿಬಂದು ಮುಂದೇನು ಮಾಡಬೇಕೆಂದು ಯೋಚನೆಯಂಗೈಯ್ಯುವವನಾಗಿ ಬ್ರಹ್ಮವರದಿಂ ಮೋಹವನ್ನೈದಿ ಮಹಾಪರಾಕ್ರಮಶಾಲಿಗಳಾದ ಯೆಂಟುಮಂದಿ ರಾಕ್ಷಸರಂ ಕರೆದು ನುಡಿವನದೆಂತೆನೆ,— ॥೧೯॥ ಎಲೈ ರಾಕ್ಷಸರುಗಳಿರಾ! ನೀವು ಯೆಂಟುಮಂದಿಯೂ ಅನೇಕವಾದ ಆಯುಧಂಗಳಂ ಪಿಡಿದವರಾಗಿ ಇಲ್ಲಿಂದ ಹೊರಟು ಹತವಾದ ಜನಸ್ಥಾನವನ್ನೈದಿ ಜನರಹಿತವಾದ ಆ ಪ್ರದೇಶದಲ್ಲಿ ಪೌರುಷವನ್ನೂ ನೀತಿಬಲವನ್ನೂ ಸಹ ಆಶ್ರೈಸಿ ಹೆದರಿಕೆಯಂಬಿಟ್ಟು ವಾಸವಂ

ಶೂನ್ಯೇನಿಹತರಾಕ್ಷಸೇ । ಪೌರುಷಂಬಲಮಾಶ್ರಿತ್ಯತ್ರಾಸಮುತ್ಸೃಜ್ಯದೂರತಃ ॥೨೧॥ ಬಲಂಹಿಸುಮಹನ್ಮೆದ್ಯಜ
ನಸ್ಥಾನೇನಿವೇಶಿತಂ । ಸದೂಷಣಖರಂಯುದ್ಧೇಹತಂರಾಮೇಣಸಾಯಕೈಃ ॥೨೨॥ ತತ್ರಕ್ರೋಧೋಮಮಾಮರ್ಷಾದ್ಧೈ
ರ್ಯಸ್ಯೋಪರಿವರ್ತತೇ । ವೈರಂಚಸುಮಹಜ್ಜಾತಂರಾಮಂಪ್ರತಿಸುದಾರುಣಂ ॥೨೩॥ ನಿರ್ಯಾತಯಿತುಮಿಚ್ಛಾಮಿತಚ್ಚ
ವೈರಮಹಂರಿಪೋಃ । ನಹಿಲಪ್ಸ್ಯೇಮ್ಯಹಂನಿದ್ರಾಮಹತ್ವಾಸಂಯುಗೇರಿಪುಂ ॥೨೪॥ ತಂತ್ವಿದಾನೀಮಹಂಹತ್ವಾಖ
ರದೂಷಣಘಾತಿನಂ । ರಾಮಂಶರ್ಮೋಪಲಪ್ಸ್ಯಾಮಿಧನಂಲಬ್ಧ್ವೇವನಿರ್ಧನಃ ॥೨೫॥ ಜನಸ್ಥಾನೇವಸದ್ಭಿಸ್ತುಭವದ್ಭಿಃ
ರಾಮಮಾಶ್ರಿತಾ । ಪ್ರವೃತ್ತಿರುಪನೇತವ್ಯಾಕಿಂಕರೋತೀತಿತತ್ವತಃ ॥೨೬॥ ಅಪ್ರಮಾದಾಚ್ಚಗಂತವ್ಯಂಸರ್ವೈರಪಿನಿ
ಶಾಚರೈಃ । ಕರ್ತವ್ಯಶ್ಚಸದಾಯತ್ನೋರಾಘವಸ್ಯವಧಂಪ್ರತಿ ॥೨೭॥ ಯುಷ್ಮಾಕಂಚಬಲಜ್ಞೋಹಂಬಹುಶೋರಣ
ಮೂರ್ಧನಿ । ಅತಶ್ಚಾಸ್ಮಿನ್ಜನಸ್ಥಾನೇಮಯಾಯೂಯಂನಿಯೋಜಿತಾಃ ॥೨೮॥ ತತಃಪ್ರಿಯಂವಾಕ್ಯಮುಪೇತ್ಯರಾಕ್ಷ

---

ಳ್ಳ, ಶೂನ್ಯೇ-ಜನರಿಂ ವರ್ಜಿತವಾದ, ಜನಸ್ಥಾನೇ-ಉಕ್ಕುಣದಲ್ಲಿ, ಪೌರುಷಂ-ಪುರುಷಸಂಬಂಧವಾದ, ಬಲಂ-ಸೀತಿಬಲವನ್ನು, ಆಶ್ರಿತ್ಯ-ಹೊಂದಿ,
ತ್ರಾಸಂ-ಹೆದರಿಕೆಯನ್ನು, ದೂರತಃ-ದೂರದಲ್ಲಿ, ಉತ್ಸೃಜ್ಯ-ಬಿಟ್ಟು, ತತ್ರ-ಅಲ್ಲಿ ಉಷ್ಯತಾಂ-ವಾಸಮಾಡಲ್ಪಡಲಿ ॥೨೧॥ ಮೇ-ನನ್ನ ಸಂಬಂಧವಾ
ದ. ಸುಮಹತ್-ಬಹಳವಾದ, ಯದ್ಬಲಂ-ಯಾವ ಸೈನ್ಯವು, ಜನಸ್ಥಾನೇ-ಜನಸ್ಥಾನದಲ್ಲಿ, ನಿವೇಶಿತಂ-ಇರಿಸಲ್ಪಟ್ಟಿತ್ತೋ, ಸದೂಷಣಖರಂ-ಆ ದೂಷಣ
ಖರಾಸುರರಿಂದೊಡಗೂಡಿದ, ತದ್ಬಲಂ-ಆ ಸೈನ್ಯವು. ಯುದ್ಧೇ-ಕಾಳಗದಲ್ಲಿ, ರಾಮೇಣ-ಶ್ರೀರಾಮನಿಂದ, ಸಾಯಕೈಃ-ಬಾಣಗಳಿಂದ, ಹತಂಹಿ-ಹೊಡೆ
ಯಲ್ಪಟ್ಟಿತಷ್ಟೆ ॥೨೨॥ ತತ್ರ-ಆ ವಧವಿಷಯದಲ್ಲಿ, ಮಮ-ನನಗೆ, ಅಮರ್ಷಾತ್-ಸಹನೆಯಿಲ್ಲದಿರುವದರಿಂದಲೂ, ಧೈರ್ಯಸ್ಯ-ಧೈರ್ಯಕ್ಕೆ, ಉಪರಿ-
ಮೇಲ್ಭಾಗದಲ್ಲಿ, ಕ್ರೋಧಃ-ಕೋಪವು, ವರ್ತತೇ-ಇರುತ್ತಿದೆ, ರಾಮಂಪ್ರತಿ-ಶ್ರೀರಾಮನನ್ನುದ್ದೇಶಿಸಿ, ಸುದಾರುಣಂ-ಬಹಳ ಕ್ರೂರವಾದ, ವೈರಂಚ-
ವೈರವು, ಜಾತಂ-ಹುಟ್ಟಿತು ॥೨೩॥ ಅಹಂ-ನಾನು ರಿಪೋಃ-ಶತ್ರುಸಂಬಂಧವಾದ, ತದ್ವೈರಂ-ಆ ದ್ವೇಷವನ್ನು. ನಿರ್ಯಾತಯಿತುಂ-ಹೋಗ
ಲಾಡಿಸುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ, ಸಂಯುಗೇ-ಕಾಳಗದಲ್ಲಿ. ರಿಪುಂ-ಶತ್ರುವಿನನ್ನು, ಅಹತ್ವಾ-ಹೊಡೆಯದೆ, ನಿದ್ರಾಂ-ನಿದ್ದೆಯನ್ನು, ನಲ
ಪ್ಸ್ಯೇಹಿ-ಹೊಂದಲಾರೆನಷ್ಟೆ ॥೨೪॥ ಅಹಂ-ನಾನು, ಇದಾನೀಂ-ಈಗಲೇ, ಖರದೂಷಣಘಾತಿನಂ-ಖರದೂಷಣರನ್ನು ಸಂಹರಿಸುವ. ತಂರಾಮಂ
ತು-ಆ ರಾಮನನ್ನಾದರೆ, ಹತ್ವಾ-ಕೊಂದು, ನಿರ್ಧನಃ-ಧನಹೀನನು,ಧನಂ-ಧನವನ್ನು. ಲಬ್ಧ್ವೇವ-ಹೊಂದಿದಂತೆ, ಶರ್ಮ-ಸುಖವನ್ನು, ಉಪಲಪ್ಸ್ಯಾಮಿ-
ಹೊಂದುವೆನು, ವಸ್ತುತಸ್ತು-ಖರದೂಷಣಘಾತಿಯಾದ ಶ್ರೀರಾಮನನ್ನು ಕೊಂದು ಸುಖವನ್ನು ಹೊಂದುತ್ತೇನೆಯೇ. (ಅಂದರೆ-ಹೊಂದಲಾರೆನು ಎಂಬ
ತಾತ್ಪರ್ಯವು) ॥೨೫॥ ಜನಸ್ಥಾನೇ-ಉಕ್ಕುಣದಲ್ಲಿ, ವಸದ್ಭಿಃ-ಇರುತ್ತಿರುವ, ಭವದ್ಭಿಃ-ನಿಮ್ಮಿಂದ, ರಾಮಂ-ಶ್ರೀರಾಮನನ್ನು. ಆಶ್ರಿತಃ-ಆಶ್ರಯಿಸಲ್ಪಟ್ಟ
ಕಿಂಕರೋತೀತಿ-ಏನು ಮಾಡುತ್ತಾನೋ ಎಂಬ, ಪ್ರವೃತ್ತಿಃ-ವಾರ್ತೆಯು, ತತ್ವತಃ-ಯಥಾರ್ಥವಾಗಿ, ಉಪನೇತವ್ಯಾ-ತರತಕ್ಕದ್ದು ॥೨೬॥ ಸರ್ವೈಃ-
ಸಮಸ್ತರಾದ, ನಿಶಾಚರೈರಪಿ-ರಾಕ್ಷಸರಿಂದಲೂ, ಅಪ್ರಮಾದಾತ್-ಮೋಹವಂಬಿಟ್ಟು, ಗಂತವ್ಯಂ-ಪೋಗತಕ್ಕದ್ದು, ಸರ್ವದಾ-ಯಲ್ಲಾ ಕಾಲದಲ್ಲಿಯೂ,
ರಾಘವಸ್ಯ-ಶ್ರೀರಾಮನ, ವಧಂಪ್ರತಿ-ಸಂಹಾರವಂಕುರಿತು, ಯತ್ನಃ-ಪ್ರಯತ್ನವು, ಕರ್ತವ್ಯಶ್ಚ-ಮಾಡತಕ್ಕದ್ದು ॥೨೭॥ ರಣಮೂರ್ಧನಿ-ಯುದ್ಧ
ರಂಗದಲ್ಲಿ, ಬಹುಶಃ-ಬಹಳವಾಗಿ, ಅಹಂ-ನಾನು, ಯುಷ್ಮಾಕಂ-ನಿಮ್ಮಗಳ, ಬಲಜ್ಞಃ-ಬಲವಂತಿಳಿದಿಧ್ದೇನೆ, ಅತಃ-ಈಕಾರಣದಿಂ, ಅಸ್ಮಿನ್ಜನಸ್ಥಾನೇ-ಈ
ಉಕ್ಕುಣದಲ್ಲಿ, ಯೂಯಂ-ನೀವುಗಳು, ಮಯಾ-ನನ್ನಿಂದ, ನಿಯೋಜಿತಾಃ-ಆಜ್ಞಾಪಿಸಲ್ಪಟ್ಟರಿ ॥೨೮॥ ತತಃ-ಬಳಿಕ, ಅಷ್ಟರಾಕ್ಷಸಾಃ-ಎಂಟು

---

ಗೈಯ್ಯುತಲಿರುವವರಾಗಿ॥೨೧॥ ಯಾಕಂದರೆ? ನಮ್ಮ ಜನಸ್ಥಾನದಲ್ಲಿ ಯೆಷ್ಟುಬಲವು ಇರಿಸಲ್ಪಟ್ಟಿತ್ತೋ; ಖರ
ದೂಷಣಾದಿಗಳಿಂದ ಯುಕ್ತವಾದ ಆ ಸೇನೆ ಯೆಲ್ಲ ರಣರಂಗದಲ್ಲಿ ಶ್ರೀರಾಮನಿಂದ ಹತವಾಯಿತು, ಅದಂ ನಾ
ನು ಸೈರಿಸದೆ ಬಹು ಕೋಪವಂತನಾಗಿಧ್ದೇನೆ, ಆತನಸಂಗಡ ಬಹಳವೈರವು ಹುಟ್ಟದಂಥಾದ್ದಾಗಿದೆ, ಆ ವೈರವನ್ನು
ತೀರಿಸಿಕೊಳ್ಳಬೇಕು, ಮಹತ್ತರವಾದ ಸಂಗರದಲ್ಲಿ ಆ ಶ್ರೀರಾಮನಂ ಕೊಲ್ಲದೆ ನನಗೆ ನಿದ್ದೆಯೂ ಆಹಾರವೂ ಸಹ
ಉಂಟಾಗುವದಿಲ್ಲ. ಖರದೂಷಣ ಸಂಹಾರವಂಗೈದ ಅವನಂ ಸಂಹರಿಸಿ ಧನಹೀನನು ದ್ರವ್ಯವಂಪಡದಂತೆ ಬಹುಸಂ
ತಸವನ್ನೈದುವೆನು. ಅದುವರಿಗೂ ನನಗೆ ಸಂತೋಷವಿಲ್ಲ ॥೨೫॥ ಆದ್ದರಿಂದ ನೀವುಗಳು ಜನಸ್ಥಾನದಲ್ಲಿರುವವ
ರಾಗಿ, ರಘುಕುಲೋತ್ಪನ್ನನಾದ ಶ್ರೀರಾಮನು ಯೇನೇನುಗೈಯ್ಯುತಲಿರುವನೋ ಅದನ್ನೆಲ್ಲ ತಿಳಿದು ಆಗಾಗ್ಯೆ ವ
ರ್ತಮಾನವನ್ನು ನನಗೆ ತಿಳುಹಿಸುತ್ತಲಿರಬೇಕು, ಮತ್ತೂ ನೀವುಗಳು ಅವನ ಸಂಹಾರದವಿಷಯದಲ್ಲಿ ಯಾವಾಗ
ಲೂ ಬಹು ಜಾಗರೂಕರಾಗಿ ಪ್ರಯತ್ನವಂಮಾಡುತಲಿರಬೇಕು. ಪೂರ್ವದಲ್ಲಿ ಅನೇಕಯುದ್ಧಂಗಳು ಸಂಭವಿಸಿದಾ
ಗ ನಾನು ನಿಮ್ಮ ಬಲವನ್ನು ತಿಳಿದಿಧ್ದೇನೆ, ಆದ್ದರಿಂದ ಈಗ ನಿಮ್ಮನ್ನೇ ಜನಸ್ಥಾನಕ್ಕೆ ಕಳುಹಿಸಿದವನಾದೆ, ಎಂಬ
ದಾಗಿ ರಾವಣನು ನುಡಿದವನಾಗಲು, ಆ ಯೆಂಟುಮಂದಿರಾಕ್ಷಸರು ಗಂಭೀರಾರ್ಥವುಳ್ಳ ಆ ಮಾತನ್ನು ಅಂಗೀಕರಿ
ಸಿ ಒಡೆಯನಾದ ರಾವಣನಿಗೆ ವಂದನೆಯಂಗೈದು ಆತನಿಂದ ಅಪ್ಪಣೆಯಂ ಪಡದು ಯೆಲ್ಲರೂ ಗುಂಪುಕೂಡಿ ಜನಸ್ಥಾ

ಸೌಮಹಾರ್ಥಮಷ್ಟಾವಭಿವಾದ್ಯರಾವಣಂ । ವಿಹಾಯಲಂಕಾಂಸಹಿತಾಃಪ್ರತಸ್ಥಿರೇಯತೋಜನಸ್ಥಾನಮಲಕ್ಷ್ಯದರ್ಶನಾಃ ॥೨೯॥ ತತಸ್ತುಸೀತಾಮುಪಲಭ್ಯರಾವಣಸ್ಸುಸಂಪ್ರಹೃಷ್ಟಃಪರಿಗೃಹ್ಯಮೈಥಿಲೀಂ । ಪ್ರಸಜ್ಯರಾಮೇಣಚವೈರಮುತ್ತಮಂಬಭೂವಮೋಹಾನ್ಮುದಿತಸ್ಸರಾಕ್ಷಸಃ॥ **ಇತಿಶ್ರೀಮದಾರಣ್ಯಕಾಂಡೇ-ಚತುಃಪಂಚಾಶಸ್ಸರ್ಗಃ***—

ಸಂದಿಶ್ಯರಾಕ್ಷಸಾನ್ಘೋರಾನ್ರಾವಣೋಷ್ಟೌಮಹಾಬಲಾನ್ । ಆತ್ಮಾನಂಬುದ್ಧಿವೈಕ್ಲಬ್ಯಾತ್ಕೃತಕೃತ್ಯಮಮನ್ಯತ ॥೧॥ ಸಚಿಂತಯಾನೋವೈದೇಹೀಂಕಾಮಬಾಣಸಮರ್ಪಿತಃ । ಪ್ರವಿವೇಶಗೃಹಂರಮ್ಯಂಸೀತಾಂದ್ರಷ್ಟುಮಭಿತ್ವರನ್ ॥೨॥ ಸಪ್ರವಿಶ್ಯತುತದ್ವೇಶ್ಮರಾವಣೋರಾಕ್ಷಸಾಧಿಪಃ । ಅಪಶ್ಯದ್ರಾಕ್ಷಸೀಮಧ್ಯೇಸೀತಾಂಶೋಕಪರಾಯಣಾಂ॥೩॥ ಅಶ್ರುಪೂರ್ಣಮುಖೀಂದೀನಾಂಶೋಕಭಾರಾಭಿಪೀಡಿತಾಂ । ವಾಯುವೇಗೈರಿವಾಕ್ರಾಂತಾಂಮಜ್ಜಂತೀಂನಾವಮರ್ಣವೇ

---

ಮಂದಿ ರಕ್ಕಸರು ಪ್ರಿಯಂ-ಇಷ್ಟವಾದ. ಮಹಾರ್ಥಂ-ಗಂಭೀರವಾದ ಅರ್ಥವುಳ್ಳ, ವಾಕ್ಯಂ-ಮಾತನ್ನು, ಉಪೇತ್ಯ-ಅಂಗೀಕರಿಸಿ, ರಾವಣಂ-ರಾವಣನನ್ನು. ಅಭಿವಾದ್ಯ-ನಮಸ್ಕರಿಸಿ, ಸಹಿತಾಃ-ಗುಂಪುಕೂಡಿದವರಾಗಿ, ಲಂಕಾಂ-ಲಂಕಾಪುರವನ್ನು. ವಿಹಾಯ-ಬಿಟ್ಟು, ಅಲಕ್ಷ್ಯದರ್ಶನಾಃ-ಅಂತರ್ಧಾನವಂ ಹೊಂದಿದವರಾಗಿ, ಯತಃ-ಯಾವ ದಿಕ್ಕಿನಲ್ಲಿ, ಜನಸ್ಥಾನಂ-ಉಕ್ಕುಟವು, ಆಸ್ತಿ-ಇದೆಯೋ. ತತ್ರ-ಅಲ್ಲಿ, ಪ್ರತಸ್ಥಿರೇ-ತೆರಳಿಬಿಡರು ॥೨೯॥ ತತಃ-ಬಳಿಕ, ಸುಸಂಪ್ರಹೃಷ್ಟಃ-ಬಹಳ ಸಂತೋಷಗೊಂಡ, ರಾವಣಃ-ರಾವಣನು, ಮೈಥಿಲೀಂ-ಸೀತಾದೇವಿಯನ್ನು, ಪರಿಗೃಹ್ಯ-ಹಿಡಿದುಕೊಂಡು, ಸೀತಾಂ-ಸೀತಾದೇವಿಯನ್ನು, ಉಪಲಭ್ಯ-ಹೊಂದಿ, (ಅಥವಾ-ಸೀತಾಂ-ಸೀತಾದೇವಿಯನ್ನು, ಉಪಲಭ್ಯ-ಹೊಂದಿ) ಪರಿಗೃಹ್ಯ-ಅಂತಃಪುರದಲ್ಲಿರಿಸಿಕೊಂಡು. ರಾಮೇಣಚ-ಶ್ರೀರಾಮನೊಡನೆ, ಉತ್ತಮಂ-ಬಹಳವಾದ, ವೈರಂ-ವೈರವನ್ನು, ಪ್ರಸಜ್ಯ-ಮಾಡಿಕೊಂಡು, ಮೋಹಾತ್-ಅಜ್ಞಾನದಿಂದ, ಸರಾಕ್ಷಸಃ-ರಾಕ್ಷಸರಿಂದೊಡಗೂಡಿದವನಾಗಿ, ಮುದಿತಃ-ಅಂತಃಸಂತೋಷಗೊಂಡವನು, ಬಭೂವ-ಆದನು, (ಅಂದರೆ-ವಾಸ್ತವಿಕಾರ್ಥವು, ಲೋಕದೃಷ್ಟಿಯಿಂ ಶ್ರೀರಾಮನ ಸಂಗಡ ವೈರವಂಮಾಡಿ ಅನರ್ಥಕರವಾದ ಸೀತಾಪಹರಣದ್ವಾರಾ ಶ್ರೀರಾಘವನ ಹಸ್ತದಿಂದಲೇ ತಾನು ಮರಣವಂ ಪೊಂದಬೇಕೆಂಬಭಿಪ್ರಾಯದಿಂ ಶ್ರೀರಾಮನ ಸಂಗಡಲೆ ವೈರವಂ ಹೊಂದಿ ತಾನು ಸಂತೋಷಗೊಂಡನೆಂದು ಮುಖ್ಯಾಭಿಪ್ರಾಯವು) ॥೩೦॥

—**ಇತಿಶ್ರೀಮದಾರಣ್ಯಕಾಂಡೇ-ಚತುಃಪಂಚಾಶಸ್ಸರ್ಗಃ**—

ರಾವಣಃ-ರಾವಣಾಸುರನು, ಮಹಾಬಲಾನ್-ಮಹಾಸಾಮರ್ಥ್ಯವಂತರಾದ, ಘೋರಾನ್-ಭಯಂಕರರಾದ. ಅಷ್ಟೌ-ಎಂಟುಮಂದಿಯಾದ, ರಾಕ್ಷಸಾನ್-ರಕ್ಕಸರನ್ನು. ಸಂದಿಶ್ಯ-ಆಜ್ಞಾಪಿಸಿ, ಬುದ್ಧಿವೈಕ್ಲಬ್ಯಾತ್-ಬುದ್ಧಿಯ ವೈಕ್ಲಬ್ಯದಶೆಯಿಂದ, ಆತ್ಮಾನಂ-ತನ್ನನ್ನು, ಕೃತಕೃತ್ಯಂ-ಕೃತಾರ್ಥನನ್ನಾಗಿ. ಅಮನ್ಯತ-ತಿಳಿದುಕೊಂಡನು ॥೧॥ ಸಃ-ಆ ರಾವಣಾಸುರನು, ವೈದೇಹೀಂ-ಸೀತಾದೇವಿಯನ್ನು, ಚಿಂತಯಾನಃ-ಧ್ಯಾನಿಸುತ್ತಿರುವನಾದಕಾರಣ, ಕಾಮಬಾಣಸಮರ್ಪಿತಃ-ಮನ್ಮಥನಬಾಣದಿಂ ಬಾಧಿಸಲ್ಪಟ್ಟವನಾಗಿ. ಸೀತಾಂ-ಸೀತಾದೇವಿಯನ್ನು, ದ್ರಷ್ಟುಂ-ನೋಡುವುದಕ್ಕೆ, ಅಭಿತ್ವರನ್-ತ್ವರೆಗೊಂಡವನಾಗಿ, ರಮ್ಯಂ-ಮನೋಹರವಾಗಿರುವ, ಗೃಹಂ-ಮನೆಯನ್ನು. ಪ್ರವಿವೇಶ-ಹೊಕ್ಕನು ॥೨॥ ರಾಕ್ಷಸಾಧಿಪಃ-ರಕ್ಕಸರಿಗೆ ರಾಜನಾದ, ಸರಾವಣಃ-ಆ ರಾವಣನು, ತದ್ವೇಶ್ಮ-ಆ ಮನೆಯನ್ನು, ಪ್ರವಿಶ್ಯ-ಹೊಕ್ಕು. ರಾಕ್ಷಸೀಮಧ್ಯೇ-ರಕ್ಕಸರಹೆಂಗಳ ಮಧ್ಯದಲ್ಲಿ. ಶೋಕಪರಾಯಣಾಂ-ಶೋಕದಲ್ಲೇ ಆಸಕ್ತಳಾದ, ಅಶ್ರುಪೂರ್ಣಮುಖೀಂ-ಕಂಬನಿಗಳಿಂ ತುಂಬಿದಮುಖವುಳ್ಳ, ದೀನಾಂ-ಜ್ವಲಿಕೆಯುಳ್ಳ, ಶೋಕಭಾರಾಭಿಪೀಡಿತಾಂ-ವ್ಯಸನಭಾರದಿಂ ಬಾಧಿಸಲ್ಪಟ್ಟ. ವಾಯುವೇಗೈಃ-ಗಾಳಿಯವೇಗಗಳಿಂದ, ಆಕ್ರಾಂತಾಂ-ಶಕ್ಕೆಯಲ್ಪಟ್ಟ, ಅರ್ಣವೇ-ಕಡಲಿನಲ್ಲಿ, ಮಜ್ಜಂತೀಂ-ಮುಳುಗು

---

ನಕ್ಕೆ ಸಾರಿದರು ।೨೯। ಅನಂತರದಲ್ಲಿ ರಾವಣನು ಬಹುಸಂತೋಷಪುಳ್ಳವನಾಗಿ ಸೀತಾದೇವಿಯನ್ನು ಹಿಡಿದುಕೊಂಡುಬಂದು ಅಂತಃಪುರವಂ ಸೇರಿಸಿ ಶ್ರೀರಾಮನೊಡನೆ ಅಜ್ಞಾನದಿಂದ ಮಹಾವೈರವಂ ಬೆಳೆಯಿಸುತ್ತಾ ರಾಕ್ಷಸರಿಂದೊಡಗೂಡಿ ಸಂತೋಷಚಿತ್ತನಾಗಿದ್ದನು. [ ಮುಖ್ಯಾಭಿಪ್ರಾಯವೇನಂದರೆ,—ದಶಕಂಠನು ಲೋಕದೃಷ್ಟಿಯಿಂದ ಶ್ರೀರಾಮನ ಸಂಗಡ ವೈರವಂ ಬೆಳೆಯಿಸಿ ಅನರ್ಥವನ್ನುಂಟುಮಾಡುವ ಸೀತಾಪಹರಣ ನಿಮಿತ್ತವಾಗಿ ಶ್ರೀರಾಮನ ಕೈಯಿಂದಲೆ ತಾನು ಮರಣವನ್ನೈಯ್ದಬೇಕೆಂದು ಬುದ್ಧಿಪೂರ್ವಕವಾಗಿ ಆತನಸಂಗಡ ವೈರವಂಗೈದು ಹ್ಯಾಗಾದರೂ ಆತನಿಂದ ತನಗೆ ಸಂಹಾರವುಂಟಾಗುವದೆಂದು ನಿಶ್ಚೈಸಿ ಸಂತಸವನ್ನೈದಿದನೆಂದು ಭಾವವು] ।

—** ಆರಣ್ಯಕಾಂಡದಲ್ಲಿನ ೫೪ನೆಯ ಸರ್ಗಂ ಮುಗಿದುದು **—

ಈರೀತಿಯಾಗಿ ರಾವಣನು ಮಹಾ ಪರಾಕ್ರಮಶಾಲಿಗಳಾದ ಆ ಯೆಂಟುಮಂದಿ ರಾಕ್ಷಸರನ್ನು ಜನಸ್ಥಾನಕ್ಕೆ ಕಳುಹಿಸಿ ಬುದ್ಧಿಮಾಂದ್ಯದಿಂದ ತನ್ನನ್ನು ಕೃತಕೃತ್ಯನನ್ನಾಗಿ ತಿಳಿದುಕೊಂಡನು ।೧। ಅನಂತರದಲ್ಲಿ ರಾವಣನು ಸೀತಾದೇವಿಯನ್ನೇ ಚಿಂತಿಸುವವನಾದಕಾರಣ ಮನ್ಮಥಬಾಣಗಳಿಂದ ನೊಂದವನಾಗಿ ಆಕೆಯಂ ನೋಡುವದಕ್ಕಾಗಿ ಅತಿತ್ವರೆಯಿಂದ ಮಂದಿರವಂಪೊಕ್ಕು ಅಲ್ಲಿ ರಾಕ್ಷಸರ ಮಧ್ಯಪ್ರದೇಶದಲ್ಲಿ ಬಹುಶೋಕಾಕ್ರಾಂತಳಾಗಿಯೂ ಕಂಬನಿಗಳಿಂದ ತೋಯಿಸಲ್ಪಟ್ಟ ಮುಖವುಳ್ಳವಳಾಗಿಯೂ, ದೀನಳಾಗಿಯೂ, ವ್ಯಸನಾತಿಶಯದಿಂದ ಪೀಡಿತಳಾಗಿಯೂ

ವೆ । ಮೃಗಯೂಥಪರಿಭ್ರಷ್ಟಾಂಮೃಗೀಂಶ್ವಭಿರಿವಾವೃತಾಂ । ಅಧೋಮುಖಮುಖೀಂಸೀತಾಮಭ್ಯೇತ್ಯಚನಿಶಾಚರಃ॥
ತಾಂತುಶೋಕಪರಾಂದೀನಾಮವಶಾಂರಾಕ್ಷಸಾಧಿಪಃ । ಸಬಲಾದ್ದರ್ಶಯಾಮಾಸಗೃಹಂದೇವಗೃಹೋಪಮಂ । ಹರ್ಮ್ಯ
ಪ್ರಾಸಾದಸಂಬಾಧಂಸ್ತ್ರೀಸಹಸ್ರನಿಷೇವಿತಂ । ನಾನಾಪಕ್ಷಿಗಣೈರ್ಜುಷ್ಟಂನಾನಾರತ್ನಸಮನ್ವಿತಂ । ದಾಂತಕೈಸ್ತಾ
ಪನೀಯೈಶ್ಚಸ್ಫಾಟಿಕೈರಾಜತೈರಪಿ । ವಜ್ರವೈಡೂರ್ಯಚಿತ್ರೈಶ್ಚಸ್ತಂಭೈರ್ದೃಷ್ಟಿಮನೋಹರೈಃ ।೮॥ ದಿವ್ಯದುಂ
ದುಭಿನಿರ್ಹ್ರಾದಂತಪ್ತಕಾಂಚನತೋರಣಂ । ಸೋಪಾನಂಕಾಂಚನಂಚಿತ್ರಮಾರುರೋಹತಯಾಸಹ ।೯। ದಾಂತಕಾ
ರಾಜತಾಶ್ಚೈವಗವಾಕ್ಷಾಃಪ್ರಿಯದರ್ಶನಾಃ । ಹೇಮಜಾಲಾವೃತಾಶ್ಚಾಸನ್ ತತ್ರಪ್ರಾಸಾದಪಙ್ಕ್ತಯಃ॥೧೦॥ಸುಧಾಮಣಿ

---

ತ್ತಿರುವ, ನಾವಮಿವಸ್ಥಿತಾಂ-ನಾವೆಯಂತಿರುವ. ಮೃಗಯೂಥಪರಿಭ್ರಷ್ಟಾಂ-ಜಿಗರಿಗಳ ತಂಡಗಳಿಂ ತಪ್ಪಿಸಲ್ಪಟ್ಟ, ಶ್ವಭಿಃ-ನಾಯಿಗಳಿಂದ, ಆವೃ
ತಾಂ-ಸುತ್ತಿಕೊಳ್ಳಲ್ಪಟ್ಟ, ಮೃಗೀಮಿವಸ್ಥಿತಾಂ-ಹೆಣ್ಣು ಜಿಗರಿಯಂತಿರುವ, ಸೀತಾಂ-ಸೀತಾದೇವಿಯನ್ನು, ಅಪಶ್ಯತ್-ಕಂಡನು ॥ ನಿಶಾಚರಃ-ರಾಕ್ಷ
ಸನಾದ ರಾವಣನು, ಅಧೋಮುಖಮುಖೀಂ-ಅಧೋಮುಖ-ಬಗ್ಗಿದ ಮುಖವುಳ್ಳ. ಸೀತಾಂ-ಸೀತಾದೇವಿಯನ್ನುಕುರಿತು. ಅಭ್ಯೇತ್ಯ-ಬಂದು, ರಾಕ್ಷ
ಸಾಧಿಪಃ-ರಕ್ಕಸರಿಗೆ ಅಧಿಪತಿಯಾದ, ಸಃ-ಆ ರಾವಣನು, ಶೋಕಪರಾಂ-ಅಳುವಿಕೆಯಲ್ಲೇ ಆಸಕ್ತಳಾದ, ದೀನಾಂ-ಪರಿತಪ್ತಳಾದ, ಅವಶಾಂ-ಪರಾಧೀ
ನಳಾದ. ತಾಂ-ಆ ಸೀತಾದೇವಿಯನ್ನುಕುರಿತು, ಬಲಾತ್-ಬಲಾತ್ಕಾರದಿಂದ, ದೇವಗೃಹೋಪಮಂ-ದೇವತೆಗಳ ಮನೆಗಳಿಗೆ ಸಮಾನವಾದ, ಹರ್ಮ್ಯಪ್ರಾ
ಸಾದಸಂಬಾಧಂ-ಹರ್ಮ್ಯ-ಸ್ವಲ್ಪ ಉನ್ನತವಾಗಿರುವ ಉಪ್ಪರಿಗೆಗಳಿಂದಲೂ. ಪ್ರಾಸಾದ-ದೊಡ್ಡ ಉಪ್ಪರಿಗೆಗಳಿಂದಲೂ, ಸಂಬಾಧಂ-ತುಂಬಿರುವ, ಸ್ತ್ರೀ
ಸಹಸ್ರನಿಷೇವಿತಂ-ಸಹಸ್ರಜನ ಹೆಂಗಳಿಂ ಸೇವಿಸಲ್ಪಟ್ಟ, ನಾನಾಪಕ್ಷಿಗಣೈಃ-ಅನೇಕಬಗೆಗಳಾದ ಪಕ್ಷಿಗಳತಂಡಗಳಿಂದ, ಜುಷ್ಟಂ-ವ್ಯಾಪ್ತವಾದ, ನಾನಾ
ರತ್ನಸಮನ್ವಿತಂ-ಅನೇಕ ರತ್ನಗಳಿಂ ಖಚಿತವಾದ, ದಾಂತಕೈಃ-ದಂತವಿಕಾರಂಗಳಾದ. ತಾಪನೀಯೈಃ-ಚಿನ್ನವಿಕಾರಂಗಳಾದ, ಸ್ಫಾಟಿಕೈಃ-ಸ್ಫಟಿಕವ
ಣಿಗಳ ವಿಕಾರವಾದ, ರಾಜತೈರಪಿ-ಬೆಳ್ಳಿಯವಿಕಾರವಾದ, ವಜ್ರವೈಡೂರ್ಯಚಿತ್ರೈಶ್ಚ-ವಜ್ರಮಣಿಗಳಿಂದಲೂ ವೈಡೂರ್ಯಮಣಿಗಳಿಂದಲೂ ಆಶ್ಚರ್ಯಕರಂಗ
ಳಾದ, ದೃಷ್ಟಿಮನೋಹರೈಃ-ನೋಟಕ್ಕೆ ಇಂಪಾಗಿರುವ, ಸ್ತಂಭೈಃ-ಕಂಭಗಳಿಂದ, ಉಪಲಕ್ಷಿತಂ-ಕೂಡಿಕೊಂಡಿರುವ, ಗೃಹಂ-ಮನೆಯನ್ನು,
ದರ್ಶಯಾಮಾಸ-ತೋರಿಸಿದನು ॥೮॥ ದಿವ್ಯದುಂದುಭಿನಿರ್ಹ್ರಾದಂ-ದೇವತೆಗಳ ಸಂಬಂಧಿಯಾದ ನೌಬತ್ತುಗಳಿಂ ಧ್ವನಿಗೊಳಿಸುತ್ತಿರುವ. ತಪ್ತಕಾಂಚ
ನತೋರಣಂ-ಕಾಸಲ್ಪಟ್ಟ ಚಿನ್ನಮಯವಾದ ತೋರಣಗಳುಳ್ಳ, ಕಾಂಚನಂ-ಸುವರ್ಣವಿಕಾರವಾದ, ಚಿತ್ರಂ-ಆಶ್ಚರ್ಯಕರವಾದ, ಸೋಪಾನಂ-ಪಾವ
ಟಿಗೆಗಳನ್ನು, ತಯಾಸಹ-ಆ ಸೀತಾದೇವಿಯೊಡಗೂಡ, ಆರುರೋಹ-ಏರಿದನು ॥೯॥ ತತ್ರ-ಆ ಲಂಕಾಪುರದಲ್ಲಿ, ದಾಂತಕಾಃ-ದಂತವಿಕಾರವಾದ, ರಾ
ಜತಾಶ್ಚೈವ-ಬೆಳ್ಳಿಯವಿಕಾರಂಗಳಾದ, ಪ್ರಿಯದರ್ಶನಾಃ-ನೋಟಕ್ಕೆ ಇಂಪಾಗಿರುವ, ಗವಾಕ್ಷಾಃ-ಗವಾಕ್ಷಿಗಳು, ಆಸನ್-ಆದವು. ಹೇಮಜಾಲಾವೃತಾಃ-
ಚಿನ್ನದ ಗವಾಕ್ಷಿಗಳಿಂದ ಸುತ್ತಿಕೊಳ್ಳಲ್ಪಟ್ಟ, ಪ್ರಾಸಾದಪಂಕ್ತಯಶ್ಚ-ಉಪ್ಪರಿಗೆಗಳ ಶ್ರೇಣಿಗಳು, ಆಸನ್-ಆದವು ॥೧೦॥ ದಶಗ್ರೀವಃ-ರಾವಣನು,
ಸ್ವಭವನೇ-ತನ್ನಮನೆಯಲ್ಲಿ, ಮೈಥಿಲೀಂ-ಸೀತಾದೇವಿಯಂಕುರಿತು, ಸರ್ವತಃ-ಎಲ್ಲಾಕಡೆಯಲ್ಲಿ, ಸುಧಾಮಣಿವಿಚಿತ್ರಾಣಿ-ಸುಣ್ಣದ ಲೇಪನೆಗಳಿಂದ

---

ವಾಯುವೇಗದಿಂದ ಆಕ್ರಮಿಸಲ್ಪಟ್ಟ ಶೋಕವೆಂಬ ಸಮುದ್ರದಲ್ಲಿ ಮುಳುಗಿದ ನಾವೆಯಂತಿರುವಳಾಗಿಯೂ, ಮ
ತ್ತೂ ಮೃಗಂಗಳ ಯೂಥವನ್ನಗಲಿ ನಾಯಿಗಳಿಂದ ಪರಿವೃತವಾದ ಜಿಗರಿಯಂತೆ ಭೀತಿಗೊಂಡವಳಾಗಿಯೂ ಮೊಂ
ಡೆಯಂಬಗ್ಗಿಸಿಕೊಂಡವಳಾಗಿಯೂ, ಇರುವ ಆ ಸೀತಾದೇವಿಯಂ ಕಂಡು ಆಕೆಯ ಸಮೀಪವನ್ನೈದಿ ಪರಾಧೀನ
ಳಾದ ಆ ದೇವಿಯಂ ಬಲಾತ್ಕಾರವಾಗಿ ಕರೆದುಕೊಂಡುಹೋಗಿ ಇಂದ್ರನ ಮಂದಿರಕ್ಕೆ ಸಮಾನವಾಗಿಯೂ, ಸ್ವ
ಲ್ಪಸ್ವಲ್ಪ ಉನ್ನತವಾದ ಪ್ರಾಸಾದಗಳಿಂದಲೂ, ಅತ್ಯುನ್ನತವಾದ ಪ್ರಾಸಾದಂಗಳಿಂದಲೂ, ಸಹ ತುಂಬಿರುವದಾ
ಗಿಯೂ, ಅನೇಕ ಸ್ತ್ರೀಯರಿಂದ ಪರಿವೃತವಾಗಿಯೂ, ನಾನಾವಿಧವಾದ ಪಕ್ಷಿಗಳಿಂದ ವ್ಯಾಪ್ತವಾದದ್ದಾಗಿಯೂ,
ಅನೇಕ ವಿಧವಾದ ರತ್ನಗಳಿಂದ ಕೆತ್ತಲ್ಪಟ್ಟದ್ದಾಗಿಯೂ, ಸ್ಫಟಿಕ ವಿಕಾರ ಸ್ತಂಭಗಳಿಂದಲೂ, ದಂತವಿಕಾರವಾದ
ಕಂಭಗಳಿಂದಲೂ, ಚಿನ್ನದವಿಕಾರವಾದ ಸ್ತಂಭಗಳಿಂದಲೂ, ರಜತವಿಕಾರವಾದ ಕಂಭಗಳಿಂದಲೂ, ಮತ್ತು ವಜ್ರ
ವೈಡೂರ್ಯಾದಿ ಅನೇಕ ಮಣಿವಿಕಾರವಾದ ಕಂಭಗಳಿಂದಲೂ ಸಹ ಯುಕ್ತವಾದ ಆ ಮಂದಿರವಂ ತೋರಿಸಿದನು ।೮॥
ಅನಂತರದಲ್ಲಿ ರಾವಣನು ಆ ಸೀತಾದೇವಿಯಿಂದೊಡಗೂಡಿ ದೇವತಾಸಂಬಂಧವಾದ ದುಂದುಭಿಗಳಿಂದ ಶಬ್ದಾಯ
ಮಾನವಾಗಿಯೂ ಅಪರಂಜೀ ಮಯವಾದ ತೋರಣಗಳುಳ್ಳದ್ದಾಗಿಯೂ, ಅತ್ಯಾಶ್ಚರ್ಯಕರವಾಗಿಯೂ ಇರುವ ಪಾ
ವಟಿಗೆಯನ್ನೇರಿದನು ।೯। ಅಲ್ಲಿ ದಂತವಿಕಾರವಾಗಿಯೂ, ರಜತವಿಕಾರವಾಗಿಯೂ, ಅತಿ ಮನೋಹರವಾಗಿಯೂ,
ಇರುವ ಗವಾಕ್ಷಿಗಳಿದ್ದುವು. ಮತ್ತೂ ಆ ಪ್ರದೇಶದಲ್ಲಿ ಸುವರ್ಣವಿಕಾರವಾದ ಗವಾಕ್ಷಿಗಳಿಂದ ಪರಿವೃತವಾದ ಪ್ರಾ
ಸಾದಂಗಳು ಇದ್ದಂಥಾವುಗಳಾದವು ।೧೦। ಈರೀತಿಯಾಗಿ ರಾವಣನು ಸೀತಾದೇವಿಗೆ ತನ್ನ ಮಂದಿರದಲ್ಲಿ

ವಿಚಿತ್ರಾಣಿಭೂಭಿಭಾಗಾನಿಸರ್ವಶಃ । ದಶಗ್ರೀವಸ್ಸ್ವಭವನೇಪ್ರಾದರ್ಶಯತಮೈಥಿಲೀಂ ।೧೧। ದೀರ್ಘಿಕಾಃ
ಪುಷ್ಕರಿಣ್ಯಶ್ಚನಾನಾವೃಕ್ಷಸಮನ್ವಿತಾಃ । ರಾವಣೋದರ್ಶಯಾಮಾಸಸೀತಾಂಶೋಕಪರಾಯಣಾಂ ।೧೨। ದರ್ಶ
ಯಿತ್ವಾತುವೈದೇಹ್ಯಾಃಕೃತ್ಸ್ನಂತದ್ಭವನೋತ್ತಮಂ ।ಉವಾಚವಾಕ್ಯಂಪಾಪಾತ್ಮಾಸೀತಾಂಲೋಭಿತುಮಿಚ್ಛಯಾ।೧೩।
ದಶರಾಕ್ಷಸಕೋಟ್ಯಶ್ಚದ್ವಾವಿಂಶತಿರಥಾಪರಾಃ । ತೇಷಾಂಪ್ರಭುರಹಂಸೀತೇಸರ್ವೇಷಾಂಭೀಮಕರ್ಮಣಾಂ ।೧೪।
ವರ್ಜಯಿತ್ವಾಜರಾವೃದ್ಧಾನ್ಬಾಲಾಂಶ್ಚರಜನೀಚರಾನ್ । ಸಹಸ್ರಮೇಕಮೇಕಸ್ಯಮಮಕಾರ್ಯಪುರಸ್ಸರಂ ।೧೫।
ಯದಿದಂರಾಜತಂತ್ರಂಮೇತ್ವಯಿಸರ್ವಂಪ್ರತಿಷ್ಠಿತಂ । ಜೀವಿತಂಚವಿಶಾಲಾಕ್ಷಿತ್ವಂಮೇಪ್ರಾಣೈರ್ಗರೀಯಸೀ ।೧೬।
ಬಹೂನಾಂಸ್ತ್ರೀಸಹಸ್ರಾಣಾಂಮಮಯೋಸೌಪರಿಗ್ರಹಃ । ತಾಸಾಂತ್ವಮೀಶ್ವರಾಸೀತೇಮಮಭಾರ್ಯಾಭವಪ್ರಿಯೇ।

ಮಣಿಗಳಿಂದಲೂ ವಿಚಿತ್ರವಾದ ಬಣ್ಣವುಳ್ಳ, ಭೂಮಿಭಾಗಾನಿ-ಭೂಪ್ರದೇಶಗಳನ್ನು, ಪ್ರಾದರ್ಶಯತ-ತೋರಿಸಿದನು ॥೧೧॥ ರಾವಣಃ-ರಾವಣನು, ಶೋಕಪರಾಯಣಾಂ-ವ್ಯಸನದಿಂ ರಾಮನಲ್ಲೇ ಆಸಕ್ತಳಾದ, ಸೀತಾಂ-ಸೀತಾದೇವಿಯೆಂಕುರಿತು, ದೀರ್ಘಿಕಾಃ-ಕಲ್ಲುಕಟ್ಟೆ ಭಾವಿಗಳನ್ನು ನಾನಾವೃಕ್ಷಸಮನ್ವಿತಾಃ-ನಾನಾಬಗೆಗಳಾದ ಗಿಡಗಳಿಂ ಕೂಡಿಕೊಂಡಿರುವ, ಪುಷ್ಕರಿಣ್ಯಶ್ಚ-ಕಮಲಗಳ ಸರೋವರಗಳನ್ನು, ದರ್ಶಯಾಮಾಸ-ತೋರಿಸಿದನು ॥೧೨॥ ಪಾಪಾತ್ಮಾ-ಪಾಪಿಷ್ಠವಾದ ಬುದ್ಧಿಯುಳ್ಳ ರಾವಣನು, ಸೀತಾಂ-ಸೀತಾದೇವಿಯನ್ನು. ಲೋಭಿತುಂ-ವಂಚನೆಯಿಂ ತನ್ನಲ್ಲಿ ಆಸಕ್ತಿಯುಳ್ಳವಳನ್ನಾಗಿ ಮಾಡುವದಕ್ಕೋಸ್ಕರ, ಇಚ್ಛಯಾ-ಅಪೇಕ್ಷೆಯಿಂದ, ವೈದೇಹ್ಯಾಃ-ಸೀತಾದೇವಿಗೆ. ಕೃತ್ಸ್ನಂ-ಸಮಸ್ತವಾದ, ತದ್ಭವನೋತ್ತಮಂ-ಆ ಶ್ರೇಷ್ಠವಾದ ಮನೆಯನ್ನು, ದರ್ಶಯಿತ್ವಾ-ತೋರಿಸಿ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧೩॥ ಹೇಸೀತೆ-ಎಲೌ ಸೀತಾದೇವಿಯೇ, ದಶರಾಕ್ಷಸಕೋಟ್ಯಶ್ಚ-ಹತ್ತು ಕೋಟಿ ಸಂಖ್ಯೆಯುಳ್ಳ ರಕ್ಕಸರು, ಅಥ-ಬಳಿಕ, ಅಪರಾಃ-ಮತ್ತು ಕೆಲಬರಾದ. ದ್ವಾವಿಂಶತಿಃರಾಕ್ಷಸಕೋಟ್ಯಶ್ಚ-ಇಪ್ಪತ್ತೆರಡುಕೋಟಿ ರಾಕ್ಷಸರೂ, ಸಂತಿ-ಇರುತ್ತಾರೆ, ಭೀಮಕರ್ಮಣಾಂ-ಭಯಂಕರವಾದ ಕೃತ್ಯವುಳ್ಳ, ತೇಷಾಂಸರ್ವೇಷಾಂ-ಆ ರಾಕ್ಷಸರಿಗೆಲ್ಲಾ, ಅಹಂ-ನಾನು, ಪ್ರಭುಃ-ರಾಜನು ॥೧೪॥ ಜರಾವೃದ್ಧಾನ್-ವಾರ್ಧಕಾವಸ್ಥೆಯಿಂ ವೃದ್ಧರನ್ನು, ಬಾಲಾಂಶ್ಚ-ಹುಡುಗರಾದ, ರಜನೀಚರಾನ್-ರಕ್ಕಸರನ್ನು, ವರ್ಜಯಿತ್ವಾ-ಬಿಟ್ಟು, ಏಕಸ್ಯ-ಒಬ್ಬನಾದ, ಮಮ-ನನಿಗೆ, ಕಾರ್ಯಪುರಸ್ಸರಂ-ಕಾರ್ಯದಲ್ಲಿ ನಾನು ಮುಂದೆ ತಾನು ಮುಂದೆ ಎಂದು ಸಾಧಕರಾದ, ಏಕಂಸಹಸ್ರಂ-ಒಂದು ಸಾವಿರ ಜನವು. ಅಸ್ತಿ-ಇಧೆ ॥೧೫॥ ಹೇವಿಶಾಲಾಕ್ಷಿ-ಎಲೌ ದೊಡ್ಡಕಣ್ಣುಗಳುಳ್ಳವಳೇ, ಮೇ-ನನ್ನ, ರಾಜತಂತ್ರಂ-ರಾಜನಸಾಮಗ್ರಿಯು, ಯತ್-ಯಾವದುಂಟೋ, ತತ್ಸರ್ವಂ-ಅದುಯೆಲ್ಲಾ, ತ್ವಯಿ-ನಿನ್ನಲ್ಲಿ, ಪ್ರತಿಷ್ಠಿತಂ-ಇರಿಸಲ್ಪಟ್ಟಿಧೆ, ಮೇ-ನನ್ನ, ಜೀವಿತಂ-ಪ್ರಾಣವೂ, ತ್ವಯಿ-ನಿನ್ನಲ್ಲಿ, ಪ್ರತಿಷ್ಠಿತಂ-ಸಮರ್ಪಿಸಲ್ಪಟ್ಟಿಧೆ. ತ್ವಂ-ನೀನು, ಮೇ-ಯನಗೆ, ಪ್ರಾಣೈಃ-ಪ್ರಾಣಗಳಿಗಿಂತಲೂ, ಗರೀಯಸೀ-ಹೆಚ್ಚಾದವಳು ॥೧೬॥ ಬಹೂನಾಂ-ಬಹಳ ಸಂಖ್ಯೆಯುಳ್ಳ. ಸ್ತ್ರೀಸಹಸ್ರಾಣಾಂ-ಸಹಸ್ರಾರುಸಂಖ್ಯೆಯುಳ್ಳ ಹೆಂಗಳೊಳಗೆ, ಮಮ-ನನ್ನ, ಯೋಸೌಪರಿಗ್ರಹಃ-ಯಾವ ಈ ಹೆಂಡತೀರುಂಟೋ, ಹೇಸೀತೆ-ಎಲೌ ಸೀತಾದೇವಿಯೇ, ತಾಸಾಂ-ಅವರುಗಳಿಗೆ, ತ್ವಂ-ನೀನು, ಈಶ್ವರಾ-ಧರಣಿಯಾದವಳಾಗಿ, ಹೇಪ್ರಿಯೇ-ಎಲೌ ಇಷ್ಟಳೇ, ಮಮ-ನನ್ನ, ಭಾರ್ಯಾ-ಹೆಂಡತಿಯು, ಭವ-ಆಗು.(ವಾಸ್ತವಿಕಾರ್ಥವಾದರೆ-ಹೇಅಭಯಪ್ರಿಯೇ-ಎಲೌ ಮೋಕ್ಷದಲ್ಲೇ ಪ್ರೀತಿಯುಳ್ಳವಳೇ, ಭಾರ್ಯಾ-ಚಿದ್ರೂಪಳಾಗಿಯೂ ಪೂಜ್ಯಳಾಗಿಯೂ ಯಿರು, ತ್ವಂ-ನೀನು, ಮಮ-ನನಿಗೂ, ತಾಸಾಂಚ-ಆ ಹೆಂಗಸುಗಳಿಗೂ, ಈಶ್ವರಾ-ಸ್ವಾಮಿನಿಯು, ಭವ-ಆಗು) ॥೧೭॥ ತೇ-ನಿನಗೆ, ಅನ್ಯಯಾಬುಧ್ಯಾ-ಮತೊಂದು ಬುದ್ಧಿಯಿಂದ, ಕಿಂ-ಏನು, ಸಾಧು-ಹಿತಕರವಾದ, ಮಮ-ನನ್ನ, ವಚಃ-

ಯೆಲ್ಲಾ ಕಡೆಯಲ್ಲಿಯೂ ತೋರಿಸಿ ಶೋಕಾಕ್ರಾಂತಳಾದ ಆ ಸೀತಾದೇವಿಗೆ ಕಲ್ಲುಕಟ್ಟೆ ಭಾವಿಗಳನ್ನೂ ಮತ್ತೂ ನಾನಾ ವೃಕ್ಷಂಗಳಿಂದ ತುಂಬಿರುವ ಕಮಲ ಸರೋವರಗಳನ್ನೂ ಸಹ ತೋರಿಸಿದನು ।೧೨। ಕಡುಪಾಪಿಯಾದ ಆ ರಾವಣನು ಜನಕನಂದಿನಿಯಾದ ಸೀತಾದೇವಿಯನ್ನು ವಂಚಿಸಬೇಕೆಂಬಿಚ್ಛೆಯಿಂದ ಆಕೆಗೆ ತನ್ನ ಮಂದಿರವನ್ನೆಲ್ಲ ತೋರಿಸಿ ಇಂತೆಂದು ಪೇಳಿದನು ।೧೩। ಎಲೌ ಸೀತಾದೇವಿಯೇ! ಹತ್ತುಕೋಟಿ ರಾಕ್ಷಸರುಂ ಮತ್ತು ಇತರರಾದ ಇಪ್ಪತ್ತುಕೋಟಿ ರಾಕ್ಷಸರು ಸಹಾ ಇಲ್ಲಿರುವರು, ಭಯಂಕರವಾದ ವ್ಯಾಪಾರವಂಗೈಯ್ಯುವ ಅವರಿಗೆಲ್ಲಾ ನಾನು ಪ್ರಭುವಾದವನು. ಇದಲ್ಲದೆ ಯೆನ್ನ ಸೇವಾವೃತ್ತಿಗೈಯ್ಯುವ ಜನಗಳಪೈಕಿ ವೃದ್ಧರನ್ನೂ ಬಾಲಕರನ್ನೂ ಸಹ ಬಿಟ್ಟು ನಾನುಮುಂದು ತಾನುಮುಂದು ಯೆಂದು ಕಾರ್ಯಂಗಳಂಮಾಡುವ ರಾಕ್ಷಸರು ಸಾವಿರಮಂದಿ ಯಿರುವರು ।೧೫। ಎಲೌ ವಿಸ್ತಾರವಾದ ಕಣ್ಣುಗಳುಳ್ಳವಳೇ! ನನ್ನ ರಾಜತಂತ್ರವೆಂಬುದು ಯೆಷ್ಟುಯಿಧೆಯೋ ಅದೆಲ್ಲ ನಿನ್ನಲ್ಲಿಯೇ ಇರಿಸಲ್ಪಟ್ಟಿಧೆ, ನೀನೆನ್ನ ಪ್ರಾಣಗಳಿಗಿಂತಲೂ ಅತಿಶಯವಾದವಳಾದಕಾರಣ ನನ್ನ ಪ್ರಾಣವೇ ನಿನ್ನಲ್ಲಿರಿಸಲ್ಪಟ್ಟಿಧೆ, ಎಲೌ ಸೀತಾದೇವಿಯೇ! ನನಗೆ ಯೆಷ್ಟುಸಾವಿರ ಭಾರ್ಯೆಯರಿರುವರೋ ಅವರಿಗೆಲ್ಲ ನೀನೇ ಈಶ್ವರಿಯಾಗಿ ಇರುವವಳಾಗು. ಎಲೌ ಪ್ರಿಯಳೇ! ನನಗೆ ಭಾರ್ಯೆಯಾಗಿರು; [ ತತ್ವಾಭಿಪ್ರಾಯವೇನೆಂದರೆ;—ಎಲೌ ಮೋಕ್ಷದಲ್ಲಿಯೇ ದೃಷ್ಟಿಯುಳ್ಳವಳೇ! ಚಿದ್ರೂಪಳಾಗಿಯೂ, ಪೂಜ್ಯಳಾಗಿಯೂ, ಇರುವ ನೀನು ನನಿಗೂ, ಆ ಹೆಂಗಸರಿಗೂ ಸಹ

ಸಾಧು ಕಿಂತೆನ್ಯಯಾಬುದ್ಧ್ಯಾರೋಚಯಸ್ವವಚೋಮಮ । ಭಜಸ್ವಮಾಭಿತಪ್ತಸ್ಯಪ್ರಸಾದಂಕರ್ತುಮರ್ಹಸಿ ॥೧೮॥ ಪರಿಕ್ಷಿಪ್ತಾಸಮುದ್ರೇಣಲಂಕೆಯಂಶತಯೋಜನಾ । ನೇಯಂಧರ್ಷಯಿತುಂಶಕ್ಯಾಸೇಂದ್ರೈರಪಿಸುರಾಸುರೈಃ ॥೧೯॥ ನದೇವೇಷುನಯಕ್ಷೇಷುನಗಂಧರ್ವೇಷುಪಕ್ಷಿಷು । ಅಹಂಪಶ್ಯಾಮಿಲೋಕೇಷುಯೋಮೇವೀರ್ಯಸಮೋಭವೇತ್ ॥೨೦॥ ರಾಜ್ಯಭ್ರಷ್ಟೇನದೀನೇನತಾಪಸೇನಗತಾಯುಷಾ । ಕಿಂಕರಿಷ್ಯಸಿರಾಮೇಣಮಾನುಷೇಣಾಲ್ಪತೇಜಸಾ ॥೨೧॥ ಭಜಸ್ವಸೀತೆಮಾಮೇವಭರ್ತಾಹಂಸದೃಶಸ್ತವ । ಯೌವ್ವನಂಹ್ಯಧ್ರುವಂಭೀರುರಮಸ್ವೇಹಮಯಾಸಹ ॥೨೨॥ ದರ್ಶನೇ

---

ಮಾತನ್ನು, ರೋಚಯಸ್ವ–ಸಮ್ಮತಿಸು, ಭಜ–ಹೊಂದು, ಕಾಮಾಭಿತಪ್ತಸ್ಯ–ಕಾಮದಿಂ ಸಂಕಟಿಗೊಂಡಿರುವ, ಮಮ–ನನಿಗೆ, ಪ್ರಸಾದಂ–ಅನುಗ್ರಹವನ್ನು, ಕರ್ತುಂ–ಮಾಡುವದಕ್ಕೆ, ಅರ್ಹಸಿ–ಯೋಗ್ಯಳಾಗು. (ಭಜಸ್ವಮಾಭಿತಪ್ತಸ್ಯೇತಿಪಾಠಾಂತರಂ–ಮಾಂ–ನನ್ನನ್ನುಕುರಿತು ಭಜಸ್ವ–ಹೊಂದು, ಅಭಿತಪ್ತಸ್ಯ–ಕಾಮದಿಂ ತಪ್ತನಾದಂಥಾ ನನಿಗೆ, ಪ್ರಸಾದಂ–ಅನುಗ್ರಹವನ್ನು, ಕರ್ತುಂ–ಮಾಡುವದಕ್ಕೋಸುಗ, ಅರ್ಹಸಿ–ಯೋಗ್ಯಳಾಗು) ||೧೮|| ಸಮುದ್ರೇಣ–ಕಡಲಿನಿಂದ. ಪರಿಕ್ಷಿಪ್ತಾ–ಸುತ್ತಿಕೊಳ್ಳಲ್ಪಟ್ಟ, ಶತಯೋಜನಾ–ನೂರುಗಾವುದವುಳ್ಳದ್ದು, ಇಯಂ–ಈ. ಲಂಕಾ–ಲಂಕಾಪಟ್ಟಣವು, ಸೇಂದ್ರೈಃ–ಇಂದ್ರನಿಂದೊಡಗೂಡಿದ. ಸುರಾಸುರೈರಪಿ–ದೇವರಾಕ್ಷಸರಿಂದಲೂ. ಧರ್ಷಯಿತುಂ–ತಿರಸ್ಕರಿಸುವದಕ್ಕೆ, ನಶಕ್ಯಾ–ಸಾಧ್ಯವಲ್ಲ, (ಕಾಮಾಭಿತಪ್ತಸ್ಯೇತಿ–ಈ ಶ್ಲೋಕಕ್ಕೆ ವಾಸ್ತವಿಕಾರ್ಥವೇನಂದರೆ,–ನಿನ್ನ ಭೃತ್ಯನಾಗಬೇಕೆಂಬ ಕೋರಿಕೆಯಿಂದ ಪರಿತಪ್ತನಾಗಿರುವ ನನಿಗೆ ಅನುಗ್ರಹವಂ ಮಾಡೆಂದು ತಾತ್ಪರ್ಯವು) ||೧೯|| ಲೋಕೇಷು–ಲೋಕಗಳಲ್ಲಿ, ಯಃ–ಯಾವನು, ಮೇ–ಯನಗೆ, ವೀರ್ಯಸಮಃ–ಸಾಮರ್ಥ್ಯದಲ್ಲಿ ಸಮಾನನು. ಭವೇತ್–ಆಗುವನೋ. ತಂ–ಅಂಥಾ ಪುರುಷನನ್ನು, ಅಹಂ–ನಾನು, ದೇವೇಷು–ದೇವತೆಗಳಲ್ಲಿ, ನಪಶ್ಯಾಮಿ–ಕಾಣೆನು, ಯಕ್ಷೇಷು–ಯಕ್ಷರಲ್ಲಿ, ನ–ಇಲ್ಲ, ಗಂಧರ್ವೇಷು–ಗಂಧರ್ವರಲ್ಲಿಯೂ, ಪಕ್ಷಿಷು–ಹಕ್ಕಿಜಾತಿಗಳಲ್ಲಿಯೂ, ನಪಶ್ಯಾಮಿ–ಕಾಣೆನು ||೨೦|| ರಾಜ್ಯಭ್ರಷ್ಟೇನ–ರಾಜ್ಯದಿಂ ಬಿಡಿಸಲ್ಪಟ್ಟ, ದೀನೇನ–ದೈನ್ಯವಂತನಾದ, ತಾಪಸೇನ–ಮುನಿವೇಷದಿಂದಿರುವ, ಗತಾಯುಷಾ–ಗಳಿತವಾದಾಯುಸ್ಸುಳ್ಳ, ಮಾನುಷೇಣ–ಮನುಷ್ಯನಾದ, ಅಲ್ಪತೇಜಸಾ–ಸ್ವಲ್ಪವಾದ ಪರಾಕ್ರಮವುಳ್ಳ, ರಾಮೇಣ–ಶ್ರೀರಾಮನಿಂದ, ಕಿಂಕರಿಷ್ಯಸಿ–ಏನು ಮಾಡುತ್ತೀಯಿ ||೨೧|| ಹೇಸೀತೆ–ಎಲೌ ಸೀತಾದೇವಿಯೇ. ಮಾಮೇವ–ನನ್ನನ್ನೇ, ಭಜಸ್ವ–ಹೊಂದು, ಅಹಂ–ನಾನು, ತವ–ನಿನಗೆ, ಸದೃಶಃ–ಸಮಾನನಾದ, ಭರ್ತಾ–ಗಂಡನು, ಹೇಭೀರು–ಎಲೌ–ಭಯಶೀಲಳೇ, ಯೌವನಂ–ತಾರುಣ್ಯವು. ಅಧ್ರುವಂ–ಶಾಶ್ವತವಲ್ಲ, ಇಹ–ಈಗಲೇ, ಮಯಾಸಹ–ನನ್ನೊಡನೆ, ರಮಸ್ವ–ವಿಹರಿಸು, (ರಾಜ್ಯಭ್ರಷ್ಟೇನೇತ್ಯಾದಿ ಎರಡು ಶ್ಲೋಕಕ್ಕೂ ವಾಸ್ತವಿಕಾರ್ಥವೇನಂದರೆ,–ರಾಜ್ಯಭ್ರಷ್ಟೇನ–ರಾಜ್ಯದಿಂ ಭ್ರಷ್ಟರಾದ ಶತೃಗಳುಳ್ಳ, ದೀನೇನತಾಪಸೇನಗತಾಯುಷಾ–ದೀನ–ದೀನರಿಗೆ, ಇನ–ಸ್ವಾಮಿಯಾದ, ತಾಪಸೇನ–ಋಷಿಗಳಿಗೂ ಪ್ರಭುವಾದ, ಗತಾಯುಷಾ–ಪ್ರಾಪ್ತವಾದ ಹನ್ನೊಂದುಸಾವಿರ ಪರಿಮಿತವಾದ ಆಯುಸ್ಸುಳ್ಳ, ಮಾನುಷೇಣ–ಮನುಷ್ಯತ್ವೇನ–ಅವತಾರಮಾಡಿರುವ, ಅಲ್ಪತೇಜಸಾ–ಸ್ವಲ್ಪವಾಗಿ ಮಾಡಲ್ಪಟ್ಟ ಇತರ ತೇಜಸ್ಸುಳ್ಳ, ರಾಮೇಣ–ಶ್ರೀರಾಮನನ್ನುದ್ದೇಶಿಸಿ, ಕಿಂ–ಯಾತಕ್ಕೋಸ್ಕರ, ಕರಿಷ್ಯಸಿ–ವಿಲಾಪವಂ ಮಾಡುತ್ತೀಯಿ, ಹೇಸೀತೆ–ಎಲೌ–ಸೀತಾದೇವಿಯೆ, ಯತಃ–ಯಾವಕಾರಣದದೆಶೆಯಿಂದ, ಮೇ–ನನಿಗೆ, ಯೌವನಂ–

---

ಈಶ್ವರಿಯಾಗಿ ಇರುವವಳಾಗೆಂದು ತತ್ವಾಭಿಪ್ರಾಯವು] ||೧೭|| ಮತ್ತೊಂದು ವಿಧವಾಗಿ ಯೋಚಿಸುವದರಿಂದ ಯೇನು ಪ್ರಯೋಜನವೂ ಇಲ್ಲ; ಹಿತಕರವಾದ ವಾಕ್ಯವಂ ಕೇಳುವವಳಾಗಿ ಕಾಮಬಾಧೆಯಿಂದ ಪೀಡಿತನಾದ ನನ್ನಲ್ಲಿ ಅನುಗ್ರಹವಂಗೈಯ್ಯುವದಕ್ಕೆ ಯೋಗ್ಯಳಾಗುವಳಾಗು [ತತ್ವಾಭಿಪ್ರಾಯವೇನಂದರೆ;— ನಿನಗೆ ಭೃತ್ಯನಾಗಬೇಕೆಂದು ಪರಿತಪಿಸುತಲಿರುವ ನನ್ನಲ್ಲಿ ಅನುಗ್ರಹವಂ ಮಾಡುವವಳಾಗು] ||೧೮|| ಸಮುದ್ರದಿಂದ ಪರಿವೇಷ್ಟಿತವಾದ ಈ ಲಂಕಾಪಟ್ಟಣವು ಇಂದ್ರನಿಂದೊಡಗೂಡಿದ ದೇವತೆಗಳಿಂದಲಾಗಲಿ ರಾಕ್ಷಸರಿಂದಲಾಗಲೀ ಪ್ರವೇಶಿಸಲೂ ಆಗತಕ್ಕದ್ದಲ್ಲ ||೧೯|| ಲೋಕದಲ್ಲಿ ಯಾವಪುರುಷನು ನನ್ನ ಪರಾಕ್ರಮವುಳ್ಳವನಾಗುವನೋ ಅಂಥಾ ಪುರುಷನನ್ನು ನಾನು ದೇವತೆಗಳಲ್ಲಿಯೇ ಆಗಲೀ ಯಕ್ಷರಲ್ಲಿಯೇ ಆಗಲೀ ಗಂಧರ್ವರಲ್ಲಿಯೇ ಆಗಲೀ ಪಕ್ಷಿಗಳಲ್ಲಿಯೇ ಆಗಲೀ ಕಾಣೆನು, ಇಂತಿರುವಲ್ಲಿ ರಾಜ್ಯವನ್ನೀಗಿಕೊಂಡುದೈನ್ಯವನ್ನೈದಿದೆತಾಪಸವೇಷದಿಂದಸಂಚರಿಸುವ ಗತವಾದ ಆಯುಸ್ಸುಳ್ಳ ರಾಮನಿಂದ ಯೇನುಮಾಡಲಾದೀತು? ಹೀಗಿರುವದ್ದರಿಂದ ನೀನೆನ್ನನ್ನೇ ಹೊಂದುವವಳಾಗು, ನಾನು ನಿನಗೆಸಮಾನನಾದ ಪತಿಯು, ಈ ಯೌವ್ವನವು ಸ್ಥಿರವಾಗಿರುವದಿಲ್ಲ; ಈಗಲೇ ನನ್ನೊಡನೆ ರಮಿಸುವವಳಾಗು, ತತ್ವಾಭಿಪ್ರಾಯವೇನಂದರೆ;—ರಾಜ್ಯದಿಂ ಭ್ರಷ್ಟರಾದ ಶತ್ರುಗಳುಳ್ಳವನಾಗಿಯೂ, ದೀನರಾದವರಿಗೆಲ್ಲ ದೈನ್ಯವಂ ಪರಿಹರಿಸುವ ಸ್ವಾಮಿಯಾಗಿಯೂ, ಋಷಿಗಳಿಗೆಲ್ಲ ಪ್ರಭುವಾಗಿಯೂ, ಕ್ಲುಪ್ತವಾದ ಹನ್ನೊಂದುಸಾವಿರ ವರ್ಷಂಗಳ ಆಯುಸ್ಸುಳ್ಳವನಾಗಿಯೂ, ಮಾಯಾಮಾನುಷಾವತಾರವಂ ಮಾಡಿದವನಾಗಿಯೂ, ಇತರ ತೇಜಸ್ಸನ್ನೆಲ್ಲ ಅಲ್ಪವಾಗಿ ಮಾಡುವ ಮಹಾತೇಜೋವಿಶೇಷವುಳ್ಳವನಾಗಿಯೂ, ಇರುವ ಶ್ರೀರಾಮನ ನಿಮಿತ್ತವಾಗಿ ಯಾಕೆ ವಿಲಾಪವಂಗೈಯ್ಯುತಲಿರುವೆ? ಈ ವಿಲಾಪವಂಬಿಟ್ಟು ಸಮಾನಚಿತ್ತಳಾಗಿ ಯೆನ್ನ ಸೇವೆಯನ್ನೀಗಲೇ ಪರಿಗ್ರಹಿಸುವವಳಾಗು;

ಮಾಕೃಥಾಬುದ್ಧಿಂರಾಘವಸ್ಯವರಾನನೇ । ಕಾಸ್ಯಶಕ್ತಿರಿಹಾಗಂತುಮಪಿಸೀತೇಮನೋರಥೈಃ ।। ನಶಕ್ಯೋವಾಯುರಾಕಾಶೇಪಾಶೈರ್ಬದ್ಧುಂಮಹಾಜವಃ । ದೀಪ್ಯಮಾನಸ್ಯವಾಪ್ಯಗ್ನೇರ್ಗ್ರಹೀತುಂವಿಮಲಾಂಶಿಖಾಂ ।೨೪। ತ್ರಯಾಣಾಮಪಿಲೋಕಾನಾಂನತಂಪಶ್ಯಾಮಿಶೋಭನೇ । ವಿಕ್ರಮೇಣನಯೇದ್ಯಸ್ತ್ವಾಂಮದ್ಬಾಹುಪರಿಪಾಲಿತಾಂ ।೨೫। ಲಂಕಾಯಾಂಸುಮಹದ್ರಾಜ್ಯಮಿದಂತ್ವಮನುಪಾಲಯ । ತ್ವತ್ಪ್ರೇಷ್ಯಾಮದ್ವಿಧಾಶ್ಚೈವದೇವಾಶ್ಚಾಪಿಚರಾಚರಾಃ ।೨೬। ಅಭಿಷೇಕೋದಕಕ್ಲಿನ್ನಾತುಷ್ಟಾಚರಮಯಸ್ವಮಾಂ ।೨೭।' ದುಷ್ಕೃತಂಯತ್ಪುರಾಕರ್ಮವನವಾಸೇನತದ್ಗತಂ ।

---

ನಿನ್ನ ಸೇವೆಗೆ ಅನುರೂಪವಾದ ಆಯುಸ್ಸು. ಅಧ್ರುವಂ-ಶಾಶ್ವತವಲ್ಲ, ತತಃ-ಆಕಾರಣದವೆಶೆಯಿಂದ, ತವ-ನಿನಗೆ, ಅಹಂ-ನಾನು, ಸದೃಶಃ-ಅನುಕೂಲನಾದ, ಭರ್ತಾ-ಭೃತ್ಯನು, ಇಹ-ಈ ಮನೆಯಲ್ಲಿ, ಮಯಾಸಹ-ನನ್ನೊಡಗೂಡಿ. ರಮಸ್ವ-ವಿಹರಿಸುತ್ತಿರುವಳಾಗಿ, ಮಾಂ-ನನ್ನನ್ನು ಅನಸಂರಕ್ಷಿಸು ‖೨೨‖ ಹೆವರಾನನೆ-ಎಲೈ ಶ್ರೇಷ್ಠವಾದ ಮುಖವುಳ್ಳವಳೇ, ರಾಘವಸ್ಯ-ಶ್ರೀರಾಮನ. ದರ್ಶನೆ-ನೋಡದಲ್ಲಿಯೂ, ಬುದ್ಧಿಂ-ಮನಿಯನ್ನು, ಮಾಕೃಥಾಃ-ಮಾಡಬ್ಯಾಡ. ಹೆಸೀತೆ-ಎಲೌ ಸೀತಾದೇವಿಯೇ, ಅಸ್ಯ-ಈ ಶ್ರೀರಾಮನಿಗೆ, ಮನೋರಥೈಃ-ಸಂಕಲ್ಪಗಳಿಂದ, ಇಹ-ಇಲ್ಲಿ, ಆಗಂತುಂ-ಬರುವದಕ್ಕಾಗಿ, ಕಾಶಕ್ತಿಃ-ಯೇನು ಶಕ್ತಿಯು, ಆಕಾಶೆ-ಅಂತರಿಕ್ಷದಲ್ಲಿ, ಮಹಾಜವಃ-ಮಹಾವೇಗವುಳ್ಳ, ವಾಯುಃ-ಘಾಳಿಯು, ಪಾಶೈಃ-ಹಗ್ಗಗಳಿಂದ. ಬದ್ಧುಂ-ಕಟ್ಟುವದಕ್ಕೆ, ನಶಕ್ಯಃ-ಸಾಧ್ಯವಲ್ಲ, ದೀಪ್ಯಮಾನಸ್ಯ-ಪ್ರಜ್ವಲಿಸುತ್ತಿರುವ, ಅಗ್ನೇಃ-ಬೆಂಕಿಯ, ವಿಮಲಾಂ-ನಿರ್ಮಲವಾದ, ಶಿಖಾಂ-ಜ್ವಾಲೆಯನ್ನು, ಗ್ರಹೀತುಂ-ಹಿಡಿದುಕೊಳ್ಳುವದಕ್ಕೆ, ನಶಕ್ಯಂ-ಸಾಧ್ಯವಲ್ಲ ‖೨೪‖ ಹೆಶೋಭನೆ-ಎಲೌ ಮಂಗಳಕರಳೇ. ತ್ರಯಾಣಾಮಪಿ-ಮೂರಾದ, ಲೋಕಾನಾಂ-ಲೋಕಗಳೊಳಗಾಗಿ, ಯಃ-ಯಾವ ಪುರುಷನು, ಮದ್ಬಾಹುಪರಿಪಾಲಿತಾಂ-ನನ್ನ ಭುಜಗಳಿಂ ಪಾಲಿಸಲ್ಪಟ್ಟ, ತ್ವಾಂ-ನಿನ್ನನ್ನು, ವಿಕ್ರಮೇಣ-ಪರಾಕ್ರಮದಿಂದ. ನಯೇತ್-ಕರೆದುಕೊಂಡುಹೋಗುವನೋ, ತಂ-ಅಂಥಾವನನ್ನು, ನಪಶ್ಯಾಮಿ-ಕಾಣೆನು ‖೨೫‖ ಲಂಕಾಯಾಂ-ಲಂಕಾಪಟ್ಟಣದಲ್ಲಿ, ತ್ವಂ-ನೀನು, ಸುಮಹತ್-ಬಹಳ ದೊಡ್ಡದಾದ, ಇದಂರಾಜ್ಯಂ-ಈ ರಾಜ್ಯವನ್ನು, ಅನುಪಾಲಯ-ಸಂರಕ್ಷಿಸು, ಮದ್ವಿಧಾಶ್ಚೈವ-ನನ್ನಂಥಾವರೂ, ದೇವಾಶ್ಚಾಪಿ-ದೇವತೆಗಳೂ. ಚರಾಚರಾಃ-ಸ್ಥಾವರಜಂಗಮಗಳೂ. ತ್ವತ್ಪ್ರೇಷ್ಯಾಃ-ನಿನ್ನ ಕೈಕೆಳಗಿರುವರಾಗುತ್ತಾರೆ, (ದರ್ಶನೆತ್ಯಾದ್ಯರ್ಥ್ಯ-ಎಂಬುವದು ಮೊದಲ್ಗೊಂಡು ಮೂರು ಶ್ಲೋಕಕ್ಕೂ ವಾಸ್ತವಿಕಾರ್ಥವೇನಂದರೆ,-ವಾಯುವು ಹ್ಯಾಗೆ ಬಂಧನ ಮಾಡುವದಕ್ಕೆ ಶಕ್ಯನಲ್ಲವೋ ಅಗ್ನಿಜ್ವಾಲೆ ಹ್ಯಾಗೆ ಹಿಡಿಯುವದಕ್ಕೆ ಸಾಧ್ಯವಲ್ಲವೋ ಹಾಗೆಯೇ ಶ್ರೀರಾಮನಂ ಹೊರ್ತು ಈ ಲಂಕಾಪಟ್ಟಣಕ್ಕೆ ಬರುವದಕ್ಕೆ ಯಾರಿಗೂ ಸಾಧ್ಯವಲ್ಲ, ಆಕಾರಣದದೆಶೆಯಿಂದ ರಾಮನೇ ಬಂದು ನಿನ್ನನ್ನು ಹೊಂದುತ್ತಾನೆ ನೀನು ರಾಮನ ದರ್ಶನವಿಷಯದಲ್ಲಿ ಉತ್ಕಂಠೆಯನ್ನು ಮಾಡಬ್ಯಾಡ ನೀನು ಸುಮ್ಮನಿದ್ದರೂ ಆತನೇ ಬಂದು ನಿನ್ನಂ ಕರೆದುಕೊಂಡು ಹೋಗುವನೆಂದು ತಾತ್ಪರ್ಯವು) ‖೨೬‖ ಅಭಿಷೆಕೋದಕಕ್ಲಿನ್ನಾ-ಪಟ್ಟಾಭಿಷೇಕೋದಕದಿಂ ನೆನಿಸಲ್ಪಟ್ಟ

---

ಯಾಕಂದರೆ;—ನಿನ್ನ ಸೇವೆಯಂಗೈಯ್ಯುವದಕ್ಕೆ ನನಗೆ ಆಯುಸ್ಸು ಶಾಶ್ವತವಾಗಿರಲಾರದು, ಆದಕಾರಣ ಈಗಲೆ ಸೇವೆಯಂಗೈಯ್ಯುವೆನು, ನಾನು ನಿನಗೆ ಸರಿಯಾದಭೃತ್ಯನು, ಈ ಮಂದಿರದಲ್ಲಿನನ್ನೊಡನೆ ವಿಹಾರವಂಗೈಯ್ಯುತಲಿರುವವಳಾಗಿ ನನ್ನನ್ನು ಪರಿಪಾಲಿಸುವವಳಾಗೆಂದು ಭಾವವು ] ।೨೨‖ ಎಲೌ ಶ್ರೇಷ್ಠವಾದ ಮುಖವುಳ್ಳವಳೇ! ರಾಮನಂ ನೋಡಬೇಕೆಂದು ಯೋಚನೆಯಂಗೈಯ್ಯಬೇಡ; ಆತನು ಇಲ್ಲಿಗೆ ಬರಬೇಕೆಂದು ಸಂಕಲ್ಪಂಗೈಯ್ಯುವದಕ್ಕೆತಾನೆ ಯೇನುಶಕ್ತಿಯಿರುವದು? ಎಲೌಸೀತಾದೇವಿಯೇ! ಕೇಳುವವಳಾಗು; ಗಗನದಲ್ಲಿ ಅತಿವೇಗದಿಂದ ತಿರುಗುವ ವಾಯುವಿನನ್ನು ಪಾಶಂಗಳಿಂದ ಯೆಂತು ಕಟ್ಟುವದಕ್ಕೆ ಆಗಲಾರದೋ ಮತ್ತು ಪ್ರಜ್ವಲಿಸುವ ಅಗ್ನಿಜ್ವಾಲೆಯನ್ನು ಸ್ಪರ್ಶೆಯಂಗೈಯ್ಯುವದಕ್ಕೆ ಯೆಂತು ಅಸಾಧ್ಯವೋ, ಅಂತು ಇಲ್ಲಿಗೆ ಬರುವದು ಬಹಳ ಅಸಾಧ್ಯವಾದದ್ದು; ಆದ್ದರಿಂದ ಮೂಜಗಗಳಲ್ಲಿಯೂ ಯಾವಪುರುಷನಾಗಲಿ ತನ್ನ ಪರಾಕ್ರಮದಿಂದ ನನ್ನ ಭುಜಬಲದಿಂದ ಪರಿಪಾಲಿಸಲ್ಪಡುತ್ತಿರುವ ನಿನ್ನನ್ನು ಕರೆದುಕೊಂಡು ಪೋಗುವನೋ? ಅಂಥಾಪುರುಷನನ್ನು ನಾನುಕಾಣೆನು.ಆದುದರಿಂದ ಆ ದುರಾಶೆಯಂ ಬಿಟ್ಟು ಈ ಪುರದಲ್ಲಿ ಮಹತ್ತರವಾದ ಈ ರಾಜ್ಯವನ್ನು ಪರಿಪಾಲಿಸುತ್ತಿರುವವಳಾಗು: ನೀನು ಈರೀತಿಯಲ್ಲಿ ಇರುವವಳಾದರೆ, ನನ್ನಂಥಾವರು ದೇವತೆಗಳೂ ಮತ್ತೂ ಚರಾಚರವಸ್ತುಗಳೂ ಸಹ ನಿನ್ನಧೀನದಲ್ಲಿ ಇರುವಂಥಾವವುಗಳಾಗುವವು. [ತತ್ವಾಭಿಪ್ರಾಯವೇನಂದರೆ;—ಎಲೌ ಸರ್ವೋತ್ತಮವಾದ ಮುಖವುಳ್ಳ ಸೀತಾದೇವಿಯೇ! ಎನ್ನಮಾತಂ ಲಾಲಿಸಿ ಕೇಳುವವಳಾಗು; ಸರ್ವತ್ರ ಸಂಚಾರಶೀಲನಾದ ವಾಯುವಿನನ್ನು ಹಗ್ಗಗಳಿಂದ ಕಟ್ಟಲು ಯೆಂತಸಾಧ್ಯವೋ ಮತ್ತು ಅಗ್ನಿಜ್ವಾಲೆಯನ್ನು ಹಸ್ತಾದಿಗಳಿಂದ ಪಿಡಿಯಲು ಯೆಂತಸಾಧ್ಯವೋ ಅಂತು ಶ್ರೀರಾಮನಹೊರ್ತು ಇತರರಿಗೆ ಈ ಲಂಕಾಪುರಪ್ರವೇಶಂಗೈಯ್ಯಲು ಸಾಧ್ಯವಲ್ಲ, ಆದ್ದರಿಂದ ನೀನು ಶ್ರೀರಾಮನ ಸಂದರುಶನವಂಗೈಯ್ಯುವದರಲ್ಲಿ ಈ ಮಹದುತ್ಕಂಠೆಯಂ ಬಿಡುವವಳಾಗು; ನೀನು ಸುಮ್ಮನಿದ್ದ

ಯಶ್ಚ ತೇಸುಕೃತೋಧರ್ಮಸ್ತಸ್ಯೇಹಫಲಮಾಪ್ನುಹಿ ॥೨೭॥ ಇಹಮಾಲ್ಯಾನಿಸರ್ವಾಣಿದಿವ್ಯಗಂಧಾನಿಮೈಥಿಲಿ । ಭೂಷಣಾನಿಚಮುಖ್ಯಾನಿಸೇವಸ್ವಚಮಯಾಸಹ ॥೨೮॥ ಪುಷ್ಪಕಂನಾಮಸುಶ್ರೋಣಿಭ್ರಾತುರ್ವೈಶ್ರವಣಸ್ಯಮೇ । ವಿಮಾನಂಸೂರ್ಯಸಂಕಾಶಂತರಸಾನಿರ್ಜಿತಂಮಯಾ । ವಿಶಾಲಂರಮಣೀಯಂಚತದ್ವಿಮಾನಮನುತ್ತಮಂ । ತತ್ರಸೀತೇಮಯಾಸಾರ್ಧಂವಿಹರಸ್ವಯಥಾಸುಖಂ ॥೩೦॥ ವದನಂಪದ್ಮಸಂಕಾಶಮಮಲಂಚಾರುದರ್ಶನಂ । ಶೋಕಾರ್ತಂತುವರಾರೋಹೇನಭ್ರಾಜತಿವರಾನನೇ ॥೩೧॥ ಏವಂವದತಿತಸ್ಮಿನ್‌ಸಾವಸ್ತ್ರಾಂತೇನವರಾಂಗನಾ । ಪಿಧಾಯೇಂದುನಿಭಂಸೀತಾಮುಖಮಶ್ರೂಣ್ಯವರ್ತಯತ್ ॥೩೨॥ ಧ್ಯಾಯಂತೀಂತಾಮಿವಾಸ್ವಸ್ಥಾಂದೀನಾಂಚಿಂತಾಹತಪ್ರಭಾಂ ।

ವಳಾಗಿ, ತುಷ್ಟಾಚ-ಸಂತೋಷಗೊಂಡವಳಾಗಿ, ಮಾಂ-ನನ್ನನ್ನು, ರಮಸ್ವ-ರಂಜನೆಮಾಡು, ಪುರಾ-ಪೂರ್ವದಲ್ಲಿ, ಯತ್ದುಷ್ಕೃತಂಕರ್ಮ-ಯಾವ ಪಾಪವ್ಯಾಪಾರವುಂಟೋ, ತತ್-ಆ ಪಾಪವು, ವನವಾಸೇನ-ಅರಣ್ಯವಾಸದಿಂದ, ಗತಂ-ಹೋಯಿತು, ತೇ-ನಿನಗೆ, ಸುಕೃತಃ-ಪುಣ್ಯಸಂಪಾದಕವಾದ. ಧರ್ಮಃ-ಧರ್ಮವು, ಯಃ-ಯಾವದೋ, ತಸ್ಯ-ಆ ಧರ್ಮಕ್ಕೆ, ಇಹ-ಇಲ್ಲಿ, ಫಲಂ-ಫಲವನ್ನು, ಆಪ್ನುಹಿ-ಹೊಂದು ॥೨೭॥ ಹೇಮೈಥಿಲಿ-ಎಲೌ ಸೀತಾದೇವಿಯೇ, ಇಹ-ಈ ಪಟ್ಟಣದಲ್ಲಿ. ಸರ್ವಾಣಿ-ಸಮಸ್ತಗಳಾದ, ಮಾಲ್ಯಾನಿ-ಹುಷ್ಪಗಳೂ, ದಿವ್ಯಗಂಧಾನಿ-ಮನೋಹರವಾದ ವಾಸನೆಯುಳ್ಳವುಗಳು, ತಾನಿ-ಆ ಹುಷ್ಪಗಳನ್ನು, ಮುಖ್ಯಾನಿ-ಶ್ರೇಷ್ಠಗಳಾದ, ಭೂಷಣಾನಿಚ-ವಡಿವೆಗಳನ್ನು, ಮಯಾಸಹ-ನನ್ನೊಡಗೂಡ, ಸೇವಸ್ವ-ಸೇವಿಸು ॥೨೮॥ ಹೇಸುಶ್ರೋಣೀ-ಎಲೌ ಒಳ್ಳೇಶ್ರೋಣೀಪ್ರದೇಶವುಳ್ಳವಳೇ, ಪುಷ್ಪಕಂನಾಮ-ಪುಷ್ಪಕವೆಂದು ಪ್ರಸಿದ್ಧವಾದ, ಸೂರ್ಯಸಂಕಾಶಂ-ಸೂರ್ಯನಕಾಂತಿಗೆ ಸಮಾನವಾದ ಪ್ರಕಾಶವುಳ್ಳ, ಯತ್-ಯಾವ ವಿಮಾನವು, ಮೇ-ನನ್ನ, ಭ್ರಾತುಃ-ಅಣ್ಣನಾದ. ವೈಶ್ರವಣಸ್ಯ-ಕುಬೇರನದೋ, ರಮಣೀಯಂ-ಮನೋಹರವಾದ. ವಿಶಾಲಂ-ವಿಸ್ತಾರವಾದ. ಅನುತ್ತಮಂ-ಸರ್ವೋತ್ತಮವಾದ. ತದ್ವಿಮಾನಂ-ಆ ವಿಮಾನವು, ಮಯಾ-ನಿನ್ನಿಂದ, ತರಸಾ-ಸಾಮರ್ಥ್ಯದಿಂದ, ನಿರ್ಜಿತಂ-ಜಯಿಸಲ್ಪಟ್ಟಿತು ॥೨೯॥ ಹೇಸೀತೇ-ಎಲೌ ಸೀತಾದೇವಿಯೇ, ತತ್ರ-ಆ ಪುಷ್ಪಕವಿಮಾನದಲ್ಲಿ, ಮಯಾಸಾರ್ಧಂ-ನನ್ನೊಡಗೂಡ, ಯಥಾಸುಖಂ-ಸುಖವಾಗಿ, ವಿಹರಸ್ವ-ವಿಹಾರಮಾಡು ॥೩೦॥ ಹೇವರಾರೋಹೇ-ಎಲೌ ಶ್ರೇಷ್ಠಸ್ತ್ರೀಯೇ. ಹೇವರಾನನೇ-ಎಲೌ ಶ್ರೇಷ್ಠವಾದ ಮುಖವುಳ್ಳವಳೇ. ಪದ್ಮಸಂಕಾಶಂ-ಕಮಲಗಳಿಗೆ ಸಮಾನವಾದ, ಅಮಲಂ-ನಿರ್ಮಲವಾದ, ವದನಂ-ನಿನ್ನ ಮುಖವು, ಚಾರುದರ್ಶನಂ-ಇಂಪಾಗಿರುವ ನೋಟವುಳ್ಳದ್ದು. ಶೋಕಾರ್ತಂತು-ಶೋಕದಿಂದ ಆಕ್ರಾಂತವಾದದ್ದಾದರೆ, ನಭ್ರಾಜತಿ-ಪ್ರಕಾಶಿಸುವದಿಲ್ಲ ॥೩೧॥ ಏವಂ-ಈಪರಿಯಾಗಿ, ತಸ್ಮಿನ್-ಆ ರಾವಣನು, ವದತಿಸತಿ-ಹೇಳುತ್ತಿರುವನಾಗುತ್ತಿರಲಾಗಿ, ವರಾಂಗನಾ-ಶ್ರೇಷ್ಠಹೆಂಗಸಾದ. ಸಾಸೀತಾ-ಆ ಸೀತಾದೇವಿಯು, ವಸ್ತ್ರಾಂತೇನ-ಸೀರೆಯ ಸೆರಗಿನಿಂದ, ಇಂದುನಿಭಂ-ಚಂದಿರನಿಗೆ ಸಮಾನವಾದ, ಮುಖಂ-ಮುಖವನ್ನು, ಪಿಧಾಯ-ಮುಚ್ಚಿಕೊಂಡು, ಅಶ್ರೂಣಿ-ಕಂಬನಿಗಳನ್ನು, ಅವರ್ತಯತ್-ಹಾಕಿದಳು ॥೩೨॥ ಧ್ಯಾಯಂತೀಮಿವ-ಧ್ಯಾನಮಾಡುತ್ತಾಳೋ ಎಂಬಂತಿರುವ. ದೀನಾಂ-ಸಂಕಟಗೊಂಡಿರುವ, ಚಿಂತಾಹತಪ್ರಭಾಂ-ಶ್ರೀರಾಮನ ಚಿಂತೆಯಿಂದ ಹೋಗಲಾಡಿಸಲ್ಪಟ್ಟ ಕಾಂತಿಯುಳ್ಳ. ಅಸ್ವಸ್ಥಾಂ-ಸ್ವಸ್ಥಚಿತ್ತವಿಲ್ಲದಿರುವ, ತಾಂ-ಆ ಸೀತಾದೇವಿಯಂಕುರಿತು, ರಾಕ್ಷಸೇಶ್ವರಃ-ರಕ್ಕಸರಿಗಧಿಪತಿಯಾದ, ಪಾಪಃ-ಪಾಪಿಷ್ಠನಾದ, ರಾವಣಃ-ರಾವಣನು. ವಚನಂ-ಮಾತನ್ನು, ಉಪಾಚ-

ರೂ ಆತನೇಬಂದು ಹ್ಯಾಗಾದರೂ ನಿನ್ನನ್ನು ಕರೆದುಕೊಂಡು ಪೋಗುವನೆಂದು ತಾತ್ಪರ್ಯವು ॥೨೬॥ ಎಲೌ ಜನಕರಾಜನಂದಿನಿಯೇ! ಪಟ್ಟಾಭಿಷೇಕ ಮಹೋತ್ಸವೋದಕದಿಂದ ತೋಯಿಸಲ್ಪಟ್ಟ ಶರೀರವುಳ್ಳವಳಾಗಿ ನೀನು ಕಡು ಸಂತಸವನ್ನೈದಿದವಳಾಗಿ ನನ್ನನ್ನು ಸಂತೋಷಗೊಳಿಸುವವಳಾಗು, ಪೂರ್ವದಲ್ಲಿ ನೀನು ಯೇನೇನು ಪಾಪಂಗಳಂ ಮಾಡಿದ್ದೀಯೋ ಆಪಾಪಫಲವು ವನವಾಸದಲ್ಲಿ ಕಳದಂಥಾದ್ದಾಯಿತು, ಮತ್ತು ಯೇನು ಪುಣ್ಯವಂಮಾಡಿದ್ದೆಯೋ ಅದರ ಫಲವನ್ನು ಇಲ್ಲಿಯೇ ಅನುಭವಿಸುವಿ ॥೨೭॥ ಈ ಪಟ್ಟಣದಲ್ಲಿ ಸಮಸ್ತವಾದ ಪುಷ್ಪಗಳೂ ಉತ್ತಮವಾದ ಗಂಧಗಳೂ ಸಹ ಇರುವವು; ಅವುಗಳನ್ನೂ ಮತ್ತು ಶ್ರೇಷ್ಠವಾದ ವಡಿವೆಗಳನ್ನೂ ಸಹ ನನ್ನೊಡನೆ ಅನುಭವಿಸುವವಳಾಗು; ಪುಷ್ಪಕವೆಂದು ಪ್ರಸಿದ್ಧವಾದ ಸೂರ್ಯನಂತೆ ಕಂಗೊಳಿಸುವ ಯಾವ ವಿಮಾನವು ನನ್ನ ಅಗ್ರಜನಾದ ಕುಬೇರನ ಸಂಬಂಧವಾದದ್ದೋ, ಸರ್ವೋತ್ತಮವಾದ ಆ ವಿಮಾನವು ನನ್ನಿಂದ ಬಹುಸಾಮರ್ಥ್ಯದಿಂದ ಜಯಿಸಲ್ಪಟ್ಟದ್ದೆ, ಅಂಥಾ ವಿಮಾನದಲ್ಲಿ ನೀನು ನನ್ನೊಡನೆ ಸುಖವಾಗಿ ವಿಹಾರವಂಗೈಯುತಲಿರುವವಳಾಗು ॥೨೯॥ ಎಲೌ ಉತ್ತಮಾಂಗನೆಯೇ! ನಿನ್ನಮುಖವು ಕಮಲಸದೃಶವಾಗಿಯೂ. ಇಂಪಾಗಿರುವ ದೃಷ್ಟಿಯುಳ್ಳದ್ದಾಗಿಯೂ ಇರುವದು, ಆದರೂ ಈಗ ಶೋಕದಿಂದ ಆಕ್ರಮಿಸಲ್ಪಟ್ಟಿರುವದಾದಕಾರಣ ಹೊಳೆವದೇಯಿಲ್ಲ, ಎಂದು ಈರೀತಿಯಲ್ಲಿ ರಾವಣನು ನಿರೂಪಿಸಿದವನಾಗಲು, ಆ ಜನಕನಂದಿನಿಯಾದ ಸೀತಾದೇವಿಯು ತಾನುಟ್ಟಿರುವ ಸೀರೆಯ ಸೆರಗಿನಿಂದ ಚಂದ್ರನ ಸದೃಶವಾದ ಮುಖವಂ ಮುಚ್ಚಿಕೊಂಡು ಕಂಬನಿಗಳಂ ಸುರಿಸಿದಳು ॥ ಆಸಮಯದಲ್ಲಿ ರಾವಣನು ಧ್ಯಾನವಂಗೈಯ್ಯುವಳೋ ಯೇನೋ ಯೆಂಬಂತೆ ಸಂತಪಿಸುವ ದೀನಳಾದ ಆಸೀತಾದೇವಿಯನ್ನು

ಉವಾಚವಚನಂಪಾಪೋರಾವಣೋರಾಕ್ಷಸೇಶ್ವರಃ ।೩೩॥ ಅಲಂವ್ರೀಡೇನವೈದೆಹಿಧರ್ಮಲೋಪಕೃತೇನಚೆ । ಆ
ರ್ಷೋಯಂದೈವನಿಷ್ಯಂದೋಯಸ್ತ್ವಾಮಭಿಗಮಿಷ್ಯತಿ ।೩೪॥ ಏತೌಪಾದೌಮಯಾಸ್ನಿಗ್ಧೌಶಿರೋಭಿಃಪರಿಪೀಡಿ
ತೌ । ಪ್ರಸಾದಂಕುರುಮೆಕ್ಷಿಪ್ರಂವಶ್ಯೋದಾಸೋಹಮಸ್ಮಿತೆ ।೩೫॥ ಇಮಾಶ್ಶೂನ್ಯಾಮಯಾವಾಚಶ್ಶುಷ್ಯಮಾ
ಣೇನಭಾಷಿತಾಃ । ನಚಾಪಿರಾವಣಃಕಾಂಚಿನ್ಮೂರ್ಧ್ನಾಸ್ತ್ರೀಂಪ್ರಣಮೇತಹ ।೩೬॥ ಏವಮುಕ್ತ್ವಾದಶಗ್ರೀವೋ
ಮೈಥಿಲೀಂಜನಕಾತ್ಮಜಾಂ । ಕೃತಾಂತವಶಮಾಪನ್ನೋಮಮೇಯಮಿತಿಮನ್ಯತೆ॥೩೭॥ **ಪಂಚಪಂಚಾಶಸ್ಸರ್ಗಃ**
ಸಾತಥೋಕ್ತಾತುವೈದೆಹೀನಿರ್ಭಯಾಶೋಕಕರ್ಶಿತಾ । ತೃಣಮಂತರತಃಕೃತ್ವಾರಾವಣಂಪ್ರತ್ಯಭಾಷತ ॥೧॥

---

ಹೇಳಿದನು ॥೩೩॥ ॥ ಹೆವೈದೆಹಿ-ಎಲೌ ಸೀತಾದೇವಿಯೇ, ಧರ್ಮಲೋಪಕೃತೇನ-ಧರ್ಮಲೋಪವಂ ಮಾಡುತ್ತಿರುವ. ವ್ರೀಡೇನ-ನಾಚಿಕೆಯಿಂದ, ಅಲಂ-
ಸಾಕು, ಯಃ-ಯಾವ, ದೈವನಿಷ್ಯಂದಃ-ದೈವಾಧೀನದಿಂದುಂಟಾದ ಸಂಬಂಧವೋ, ಅಯಂ-ಇದು, ಆರ್ಷಃ-ಋಷಿಪ್ರೋಕ್ತವಾದದ್ದು, ತ್ವಾಂ-ನಿನ್ನ
ನ್ನು ಅಭಿಗಮಿಷ್ಯತಿ-ಹೊಂದಿಧೆ. ಲಂಕಾಯಾಂ-ಎಂಬ ಶ್ಲೋಕ ಮೊದಲು, ಅಲಂವ್ರೀಡೆ-ನ ಎಂಬ ಶ್ಲೋಕದವರಿವಿಗೂ ಈ ಶ್ಲೋಕಗಳಿಗೆ ವಾಸ್ತವಿ
ಕಾರ್ಥವೇನಂದರೆ,-ಕುಲದೇವತಾರೂಪವಾದ ಸೀತಾದೇವಿಗೆ ತಾನು ಭೃತ್ಯನಾಗಿರುತ್ತೇನೆಂದು ತನ್ನ ಆತ್ಮನನ್ನು ಸಮರ್ಪಿಸಿದ್ದಲ್ಲದೆ ರಾಜ್ಯಸಮರ್ಪಣೆ
ವೂ ಮಾಡಿ ತನ್ನ ಜನವನ್ನೂ ಸಮರ್ಪಣೆಮಾಡಿದನು, ವನವಾಸೇನ-ಮಾಯಾಜಾಲದಲ್ಲಿ ವಾಸಮಾಡುತ್ತಿರುವ ಲಂಕಾದ್ವೀಪದಲ್ಲಿರುವ ನನ್ನಿಂದ ಪೂರ್ವದ
ಲ್ಲಿ ಯಾವ ಪಾಪವು ಮಾಡಲ್ಪಟ್ಟಿತ್ತೋ ಅದು ಹೋಯಿತು ಈಗ ನನಗೆ ನಿನ್ನ ದರ್ಶನದಿಂ ಪುಣ್ಯಪ್ರಾಪ್ತಿ ಆಯಿತು, ನಿನಗೆ ನನ್ನಿಂದ ಅರ್ಜಿತ
ವಾದ ವಿಮಾನವು ಸಮರ್ಪಿಸಿಧೇನೆ ಭೃತ್ಯನಾದ ನನ್ನೊಡಗೂಡ ಆ ವಿಮಾನದಲ್ಲಿ ಸ್ವೇಚ್ಛೆಯಾಗಿ ಸಂಚರಿಸು ನಿನಗೆ ಭೃತ್ಯನವಿಷಯದಲ್ಲಿ ನಾಚಿಕೆ
ಕೆಲಸವಿಲ್ಲ, ನನಗೂ ನಿನಗೂ ಸ್ವಾಮಿ ಭೃತ್ಯಭಾವರೂಪವಾದ ಸಂಬಂಧ ಋಷಿಪ್ರೋಕ್ತವಾಗಿಧೆ ಅದರನ್ನು ನೀನಂಗೀಕರಿಸೆಂದ ತಾತ್ಪರ್ಯವು) ॥೩೪॥ ॥
ಮಯಾ-ನನ್ನಿಂದ, ಸ್ನಿಗ್ಧೌ-ಮೃದುವಾದ, ಏತೌಪಾದೌ-ಈ ಚರಣಗಳು, ಶಿರೋಭಿಃ-ಹತ್ತು ತಲೆಗಳಿಂದಲೂ, ಪರಿಪೀಡಿತೌ-ನಮಸ್ಕರಿಸಲ್ಪಟ್ಟವು
ಮೆ-ನನಗೆ, ಪ್ರಸಾದಂ-ಅನುಗ್ರಹವನ್ನು, ಕುರು-ಮಾಡು. ಅಹಂ-ನಾನು, ತೆ-ನಿನಗೆ, ವಶ್ಯಃ-ಸ್ವಾಧೀನನಾದ, ದಾಸಃ-ಚಾಕರನು, ಅಸ್ಮಿ-ಆಗಿಧೇನೆ॥
ಶುಷ್ಯಮಾಣೇನ-ಮನ್ಮಥಬಾಧೆಯಿಂ ಶೋಷಿಸಲ್ಪಟ್ಟ, ಮಯಾ-ನನ್ನಿಂದ, ಶೂನ್ಯಾಃ-ನೀಚಗಳಾದ, ಇಮಾವಾಚಃ-ಈ ಮಾತುಗಳು, ಭಾಷಿ
ತಾಃ-ಹೇಳಲ್ಪಟ್ಟವು, ರಾವಣಃ-ರಾವಣನು,ಮೂರ್ಧ್ನಾ-ಮಂಡೆಯಿಂದ,ಕಾಂಚಿತ್ಸ್ತ್ರೀಯಂ-ಯಾವ ಸ್ತ್ರೀಯನ್ನೂ, ನಪ್ರಣಮೇತಹ-ನಮಸ್ಕ
ರಿಸಲಾರನು ॥೩೬॥ ॥ ಏವಂ-ಈಪರಿಯಾಗಿ, ದಶಗ್ರೀವಃ-ಹತ್ತು ಕಂಠಗಳುಳ್ಳ ರಾವಣನು, ಜನಕಾತ್ಮಜಾಂ-ಜನಕರಾಯನಮಗಳಾದ, ಮೈಥಿಲೀಂ-
ಸೀತಾದೇವಿಯನ್ನುಕುರಿತು, ಉಕ್ತ್ವಾ-ಹೇಳಿ, ಕೃತಾಂತವಶಂ-ಯಮನಸ್ವಾಧೀನತೆಯನ್ನು, ಆಪನ್ನಃ-ಹೊಂದಿದವನಾಗಿ, ಇಯಂ-ಈ ಸೀತಾದೇವಿ
ಯು, ಮಮೇತಿ-ನನ್ನ ಸಂಬಂಧಳೆಂದು, ಮನ್ಯತೆ-ತಿಳಿದುಕೊಂಡಿಧಾನೆ, (ಅಲಂವ್ರೀಡೇನ-ಎಂಬ ಶ್ಲೋಕ ಮೊದಲು ಸರ್ಗಪೂರ್ತಿವರಿವಿಗೂ ವಾಸ್ತವಿ
ಕಾರ್ಥವೇನಂದರೆ,-ಧರ್ಮಲೋಪಕೃತೇನ-ಧರ್ಮಲೋಪವೆಂಬ ಭೃತ್ಯತ್ಯಾಗದಿಂದ ಮಾಡಲ್ಪಟ್ಟ ಲಜ್ಜೆಯಿಂದ, ಅಲಂ-ಸಾಕು ನಿನಗೆ ನಾನು ದಾಸನಾಗಿ
ಧೇನೆ ನಿನ್ನ ಪಾದಗಳಿಗೆ ವಂದನವಂ ಮಾಡುತ್ತೇನೆ ನನ್ನ ಕೋರಿಕೆಯನ್ನು ನೀನು ವ್ಯರ್ಥಮಾಡಬ್ಯಾಡ ಮಾತೃಭೂತಳಾದ ಸೀತಾದೇವಿಯನ್ನು ವಿ
ನಹಾ ರಾವಣನು ಇನ್ನು ಯಾವ ಹೆಂಗಸಿಗೂ ನಮಸ್ಕರಿಸುವವನಲ್ಲ ಎಂದುತಾತ್ಪರ್ಯವು॥೩೭॥ ॥ —**ಪಂಚಪಂಚಾಶಸ್ಸರ್ಗಃ**—
ತಥಾ-ಆಪರಿಯಾಗಿ, ಉಕ್ತಾ-ಹೇಳಲ್ಪಟ್ಟ, ಶೋಕಕರ್ಶಿತಾ-ವ್ಯಸನದಿಂ ಕೃಶೀಭೂತಳಾದ. ಸಾವೈದೆಹೀ-ಆ ಸೀತಾದೇವಿಯು, ನಿರ್ಭ

---

ಕುರಿತು ನುಡಿದನದೆಂತನೆ;— ।೩೩॥ ಎಲೌ ಸೀತಾದೇವಿಯೇ! ಸಾಕು ಸಾಕು ಧರ್ಮಲೋಪವಂಮಾ
ಡುವ ಈ ನಾಚಿಕೆಯಂಬಿಡು; ದೈವಾಧೀನದಿಂದ ಯಾವ ಸಂಬಂಧ ವುಂಟಾಗುವದೋ ಅದು ಋಷಿಪ್ರೋಕ್ತವಾದ
ದ್ದು, ಈಗ ಪದಗಿಧೆ; ಮೃದುವಾಗಿರುವ ನಿನ್ನ ಪಾದಂಗಳಂ ಕುರಿತು ನಾನು ಯೆನ್ನ ಶಿರಗಳಿಂದ ನಮಸ್ಕಾರವಂ
ಗೈಯ್ಯುತ್ತೇನೆ. ನನ್ನಲ್ಲಿ ಅನುಗ್ರಹವಂ ಮಾಡುವವಳಾಗು. ನಿನಗೆ ದಾಸನಾಗಿಯೂ, ಅಧೀನನಾಗಿಯೂ, ಇಧೇ
ನೆ; ಎಲೌ ದೇವಿಯೇ! ಮನ್ಮಥಬಾಧೆಯಿಂದ ನೊಂದವನಾಗಿ ನಾ ನಿಂಥಾ ನೀಚಮಾತುಗಳನ್ನು ಹೇಳಿದವನಾದೆ, ದ
ಶಕಂಠನು ಯೆಂದಿಗೂ ಸ್ತ್ರೀಗೆ ನಮಸ್ಕಾರವಂಮಾಡುವವನಲ್ಲ; ಅಂಥವನಾದರೂ ಈಗ ನಿನ್ನಪಾದಂಗಳಿಗೆ ವಂ
ದನೆಯಂಗೈಯ್ಯುತಲಿಧೇನೆಂದು ದಶಕಂಠನು ಸೀತಾದೇವಿಯಂ ಕುರಿತು ನುಡಿದವನಾಗಿ ಸೀತಾದೇವಿಯು ಯೆಂ
ತಾದರೂ ನನಗೆ ಶಿಲುಕಿದಳೆಂದು ತಿಳಿದುಕೊಂಡನು. [ತತ್ವಾಭಿಪ್ರಾಯವೇನಂದರೆ;— ಎಲೌದೇವಿಯೇ! ಭೃತ್ಯ
ನಾದ ನನ್ನನ್ನು ತ್ಯಾಗವಂ ಮಾಡುವದೆಂಬ ಧರ್ಮಲೋಪವಂ ಮಾಡಬೇಡ, ನಿನಗೆ ದಾಸನಾಗಿಧೇನೆ, ನಿನ್ನಪಾ
ದಂಗಳಂಪಿಡಿವೆನು, ಯೆನ್ನ ಕೋರಿಕೆಯನ್ನು ನೆರವೇರಿಸುವವಳಾಗೆಂದು ರಾವಣನು ಮಾತೃಭಾವದಿಂದ ಸೀತಾದೇ
ವಿಗೆ ವಂದನೆಯಂಗೈದನು, ಇಂತುಮತ್ತಾವಹೆಂಗಸಿಗೂನಮಸ್ಕಾರವಂಗೈಯ್ಯುವವನಲ್ಲ, ಎಂದುನುಡಿದನು॥೩೭॥

—*** ಅರಣ್ಯಕಾಂಡದಲ್ಲಿನ ೫೪ನೇ ಸರ್ಗಂಮುಗಿದುದು ***—

ಆ ರೀತಿಯಲ್ಲಿ ಹೇಳಲ್ಪಟ್ಟವಳಾದಕಾರಣ ಶೋಕದಿಂದ ಕೃಶೀಭಾವವನ್ನೈದಿದವಳಾಗಿ ಆ ಸೀತಾದೇವಿಯು

ರಾಜಾದಶರಥೋನಾಮಧರ್ಮಸೇತುರಿವಾಚಲಃ । ಸತ್ಯಸಂಧಃಪರಿಜ್ಞಾತೋಯಸ್ಯಪುತ್ರಸ್ಸರಾಘವಃ ॥೨॥ ರಾಮೋನಾಮಸಧರ್ಮಾತ್ಮಾತ್ರಿಷುಲೋಕೇಷುವಿಶ್ರುತಃ । ದೀರ್ಘಬಾಹುರ್ವಿಶಾಲಾಕ್ಷೋದೈವತಂಹಿಪತಿರ್ಮಮ ॥೩॥ ಇಕ್ಷ್ವಾಕೂಣಾಂಕುಲೇಜಾತಸ್ಸಿಂಹಸ್ಕಂಧೋಮಹಾದ್ಯುತಿಃ । ಲಕ್ಷ್ಮಣೇನಸಹಭ್ರಾತ್ರಾಯಸ್ತೇಪ್ರಾಣಾನ್ಹರಿಷ್ಯತಿ ॥೪॥ ಪ್ರತ್ಯಕ್ಷಂಯದ್ಯಹಂತಸ್ಯತ್ವಯಾಸ್ಯಾಂಧರ್ಷಿತಾಬಲಾತ್ । ಶಯಿತಾತ್ವಂಹತಸ್ಸಂಖ್ಯೇಜನಸ್ಥಾನೇಯಥಾಖರಃ ॥೫॥ ಯಏತೇರಾಕ್ಷಸಾಃಪ್ರೋಕ್ತಾಘೋರರೂಪಾಮಹಾಬಲಾಃ । ರಾಘವೇನಿರ್ವಿಷಾಸ್ಸರ್ವೇಸುಪರ್ಣೇಪನ್ನಗಾಯಥಾ ॥೬॥ ತಸ್ಯಜ್ಯಾವಿಪ್ರಮುಕ್ತಾಸ್ತೇಶರಾಃಕಾಂಚನಭೂಷಣಾಃ । ಶರೀರಂವಿಧಮಿಷ್ಯಂತಿಗಂಗಾಕೂಲಮಿವೋರ್ಮಯಃ ॥೭॥

---

ಯಾ-ಭಯರಹಿತಳಾಗಿ, ಅಂತರತಃ-ಮಧ್ಯದಲ್ಲಿ. ತೃಣಂಕೃತ್ವಾ-ಹುಲ್ಲುಕಡ್ಡಿಯನ್ನು ಮಾಡಿಕೊಂಡು, ರಾವಣಂ-ರಾವಣನನ್ನು ಕುರಿತು, ಪ್ರತ್ಯಭಾಷತ-ಪ್ರತ್ಯುತ್ತರವಂ ಕೊಟ್ಟಳು ॥೧॥ ದಶರಥೋನಾಮ-ದಶರಥನೆಂದು ಪ್ರಸಿದ್ಧನಾದ, ಧರ್ಮಸೇತುಃ-ಧರ್ಮಕ್ಕೆ ನಿಯಾಮಕನಾದ, ಅಚಲಃ-ಚಪಲಚಿತ್ತನಲ್ಲದಿರುವ, ಸತ್ಯಸಂಧಃ-ಸತ್ಯಪ್ರತಿಜ್ಞೆಯುಳ್ಳ, ಪರಿಜ್ಞಾತಃ-ಪ್ರಸಿದ್ಧನಾದ, ರಾಜಾ-ಅರಸು, ಆಸೀತ್-ಇದ್ದನು ॥೨॥ ರಾಮೋನಾಮ-ರಾಮನೆಂದು ಪ್ರಸಿದ್ಧನಾದ. ಸಃ-ಆತನು, ಧರ್ಮಾತ್ಮಾ-ಧರ್ಮಿಷ್ಠನು, ತ್ರಿಷುಲೋಕೇಷು-ಮೂರು ಲೋಕಗಳಲ್ಲಿಯೂ, ವಿಶ್ರುತಃ-ಪ್ರಸಿದ್ಧನು, ದೀರ್ಘಬಾಹುಃ-ಉದ್ದವಾದ ಭುಜಗಳುಳ್ಳವನು, ವಿಶಾಲಾಕ್ಷಃ-ವಿಸ್ತಾರವಾದ ನೇತ್ರಗಳುಳ್ಳವನು, ಪತಿಃ-ಗಂಡನಾದ ಶ್ರೀರಾಮನು, ಮಮ-ನನಗೆ. ದೈವತಂಹಿ-ದೇವತಾಸ್ವರೂಪನಷ್ಟೆ ॥೩॥ ಯಃ-ಯಾವ ಶ್ರೀರಾಮನು, ಭ್ರಾತ್ರಾ-ತಮ್ಮನಾದ, ಲಕ್ಷ್ಮಣೇನಸಹ-ಲಕ್ಷ್ಮಣನೊಡಗೂಡ, ತೇ-ನಿನ್ನ, ಪ್ರಾಣಾನ್-ಪ್ರಾಣಗಳನ್ನು, ಅಪಹರಿಷ್ಯತಿ-ಅಪಹರಿಸುವನೋ, ಸಃ-ಅಂಥಾ ಶ್ರೀರಾಮನು, ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥರಾದರ, ಕುಲೇ-ವಂಶದಲ್ಲಿ, ಜಾತಃ-ಹುಟ್ಟಿದವನು, ಸಿಂಹಸ್ಕಂಧಃ-ಸಿಂಹದಭುಜಗಳಂತೆ ಭುಜಶಿರಗಳುಳ್ಳವನು. ಮಹಾದ್ಯುತಿಃ-ಮಹಾಪ್ರಕಾಶವಂತನು ॥೪॥ ತಸ್ಯಪ್ರತ್ಯಕ್ಷಂ-ಆವನಿಗೆದುರಾಗಿ, ಅಹಂ-ನಾನು, ತ್ವಯಾ-ನಿನ್ನಿಂದ, ಬಲಾತ್-ಬಲಾತ್ಕಾರದಿಂದ, ಧರ್ಷಿತಾ-ತಿರಸ್ಕೃತಳು, (ಅಂದರೆ ಅಪಹರಿಸಲ್ಪಟ್ಟವಳು) ಸ್ಯಾಂಯದಿ-ಆಗುವಳೇ ಆಗಿದ್ದರೆ, ತ್ವಂ-ನೀನು, ಜನಸ್ಥಾನೇ-ಉಕ್ಕುವದಲ್ಲಿ, ಖರೋಯಥಾ-ಖರಾಸುರನಂತೆ, ಸಂಖ್ಯೇ-ಕಾಳಗದಲ್ಲಿ, ಹತಃ-ಹೊಡೆಯಲ್ಪಟ್ಟವನಾಗಿ, ಶಯಿತಾ-ಮಲಗುವಿ ॥೫॥ ಯೇರಾಕ್ಷಸಾಃ-ಯಾವ ರಕ್ಕಸರು, ಘೋರರೂಪಾಃ-ಭಯಂಕರವಾದ ರೂಪವುಳ್ಳವರಾಗಿಯೂ, ಮಹಾಬಲಾಃ-ಬಹಳ ಸಾಮರ್ಥ್ಯವಂತರಾಗಿಯೂ, ಪ್ರೋಕ್ತಾಃ-ಹೇಳಲ್ಪಟ್ಟರೋ, ಏತೇಸರ್ವೇ-ಇವರೆಲ್ಲರೂ, ರಾಘವೇ-ಶ್ರೀರಾಮನಲ್ಲಿ, ಸುಪರ್ಣೇ-ಗರುಡನಲ್ಲಿ, ಪನ್ನಗಾಯಥಾ-ಸರ್ಪಗಳಂತೆ. ನಿರ್ವಿಷಾಃ-ವಿರಹಿತರು, (ಅಂದರೆ-ಸಾಮರ್ಥ್ಯರಹಿತರು) ತಸ್ಯ-ಆ ಶ್ರೀರಾಮನ. ಜ್ಯಾವಿಪ್ರಮುಕ್ತಾಃ-ಹೆದೆಯಿಂದ ಬಿಡಲ್ಪಟ್ಟ, ಕಾಂಚನಭೂಷಣಾಃ-ಚಿನ್ನದ ಆಭರಣಗಳುಳ್ಳ, ಶರಾಃ-ಬಾಣಗಳು, ಊರ್ಮಯಃ-ತೆರೆಗಳು. ಗಂಗಾಕೂಲಮಿವ-ಗಂಗಾನದಿಯ ದಡವನ್ನಂತೆ. ತೇ-ನಿನ್ನ, ಶರೀರಂ-ದೇಹವನ್ನು, ವಿಧಮಿಷ್ಯಂತಿ-ಧ್ವಂಸಮಾಡುತ್ತವೆ ॥೭॥ ಹೇರಾವಣ-ಎಲೋ ರಾವಣನೇ, ತ್ವಂ-ನೀನು, ಅಸುರೈರ್ವಾ-ರಾಕ್ಷಸರೊಡನೆಯೇ ಆಗಲಿ. ಸುರೈರ್ವಾ-ದೇವತೆಗಳೊಡನೆಯಾದರೂ, ಅವಧ್ಯಃ-ವಧಿಸಲಸಾಧ್ಯನು, ಅಸಿಯದಿ-ಆದವನೇ ಆದರೆ, ಸುಮಹತ್-ಬಹಳವಾದ, ವೈರಂ-

---

ಭೀತಿಯಂಬಿಟ್ಟು ಹುಲ್ಲಂ ಮಧ್ಯದಲ್ಲಿರಿಸಿಕೊಂಡು ರಾವಣನಂ ಕುರಿತು ಉತ್ತರವಂ ಕೊಡುವಳವೆಂತೆನೆ;— ॥೧॥ ಎಲೈ ದುಷ್ಟನಾದ ರಾವಣನೇ! ದಶರಥನೆಂದು ಪ್ರಖ್ಯಾತನಾಗಿಯೂ ಧರ್ಮಕ್ಕೆ ಸೇತುರೂಪನಾಗಿಯೂ, ಚಪಲಚಿತ್ತನಾಗದೆಯೂ, ಸತ್ಯವಾದ ಪ್ರತಿಜ್ಞೆಯುಳ್ಳವನಾಗಿಯೂ, ಶ್ರೀರಾಮನಿಗೆ ಜನಕನಾಗಿಯೂ, ಸಹ ಇರುವ ಓರ್ವರಾಜನಿದ್ದನು ॥೨॥ ಆ ಮಹಾರಾಜನಿಗೆ ಪುತ್ರನಾಗಿಯೂ, ಧರ್ಮಿಷ್ಠನಾಗಿಯೂ, ಮೂಜಗಗಳಲ್ಲಿಯೂ ಪ್ರಖ್ಯಾತಿಯಂ ಪಡದವನಾಗಿಯೂ, ದೀರ್ಘಂಗಳಾದ ತೋಳುಗಳುಳ್ಳವನಾಗಿಯೂ, ವಿಸ್ತಾರವಾದ ವಕ್ಷಸ್ಥಳವುಳ್ಳವನಾಗಿಯೂ, ಸಹ ಇರುವ ನನ್ನ ಪತಿಯಾದ ಶ್ರೀರಾಮನು ನನಿಗೆ ದೇವತಾಸ್ವರೂಪನಾಗಿರುವನು ॥೩॥ ಎಲೈ ದಶಕಂಠನೇ! ಎನ್ನ ಪತಿಯಾದ ಯಾವ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನಿಂದೊಡಗೂಡಿ ನಿನ್ನ ಪ್ರಾಣಗಳನ್ನು ಅಪಹಾರಂಗೈಯ್ಯುವನೋ ಅಂಥಾ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು ಇಕ್ಷ್ವಾಕುಕುಲದಲ್ಲಿ ಉದ್ಭವಿಸಿದವನು ॥೪॥ ಆತನಿಗೆದುರಾಗಿ ನಾನು ಬಲಾತ್ಕಾರದಿಂದ ನಿನ್ನಿಂದ ಹೆದರಿಸಲ್ಪಟ್ಟವಳಾದರೆ ನೀನು ಆ ಜನಸ್ಥಾನದಲ್ಲಿ ಖರಾಸುರನಂತೆ ರಣರಂಗದಲ್ಲಿ ಹೊಡೆಯಲ್ಪಟ್ಟವನಾಗಿ ಮಲುಗುತ್ತಲಿದ್ದೆ ॥೫॥ ಯಾವ ರಾಕ್ಷಸರು ಭಯಂಕರವಾದ ರೂಪಂಗಳುಳ್ಳವರಾಗಿಯೂ, ಬಹುಬಲವಂತರಾಗಿಯೂ, ಇರುವರೋ ಅವರುಗಳು ಗರುಡನಲ್ಲಿ ಸರ್ಪಂಗಳು ವಿಷವಿಲ್ಲದವುಗಳಂತೆ ಸಾಮರ್ಥ್ಯವಿಲ್ಲದವರಾಗುವರು ॥೬॥ ಅಂಥಾ ಮಹಾ ಪರಾಕ್ರಮ ಸಂಪನ್ನನಾದ ಶ್ರೀರಾಮನಿಂದ ಬಿಡಲ್ಪಡುವ ಮತ್ತೂ ಚಿನ್ನದವಡಿವೆಗಳುಳ್ಳ ಬಾಣಗಳು ಗಂಗಾನದಿಯ ದಡಗಳನ್ನು ಭೇದಿಸುವಂತೆ ನಿನ್ನ ಶರೀರವಂ ಭೇದಿಸುವವು ॥೭॥ ಎಲೋ ಎಲೋ ರಾವಣನೇ! ನೀನು ರಾಕ್ಷಸರಿಂದಲಾಗಲೀ ದೇವತೆಗಳಿಂದಲಾಗಲೀ ವಧಿಸಲಸಾಧ್ಯನಾಗಿದ್ದರೂ ಆ ರಘುನಂದನನಿಗೆ ವೈರವನ್ನು ಉತ್ಪಾದನಂಗೈದು ಒದುಕಿದವನಾಗಿ ಆತನಿಂ

ಅಸುರೈರ್ವಾಸುರೈರ್ವಾತ್ವಂಯದ್ಯವಧ್ಯೋಸಿರಾವಣ । ಉತ್ಪಾದ್ಯಸುಮಹದ್ವೈರಂಜೀವಂಸ್ತಸ್ಯನಮೋಕ್ಷ್ಯಸೇ ।೮।
ಸತೇಜೀವಿತಶೇಷಸ್ಯರಾಘವೋಂತಕರೋಬಲೀ । ಪಶೋರ್ಯೂಪಗತಸ್ಯೇವಜೀವಿತಂತವದುರ್ಲಭಂ ।೯। ಯದಿಪಶ್ಯೇತ
ರಾಮಸ್ತ್ವಾಂರೋಷದೀಪ್ತೇನಚಕ್ಷುಷಾ । ರಕ್ಷಸ್ತ್ವಮದ್ಯನಿರ್ದಗ್ಧೋಗಚ್ಛೇಃಸದ್ಯಃಪರಾಭವಂ ।೧೦। ಯಶ್ಚಂದ್ರಂ
ನಭಸೋಭೂಮೌಪಾತಯೇನ್ನಾಶಯೇತವಾ । ಸಾಗರಂಶೋಷಯೇದ್ವಾಪಿಸಸೀತಾಂಮೋಚಯೇದಿಹ ।೧೧। ಗತಾಯು
ಸ್ತ್ವಂಗತಶ್ರೀಕೋಗತಸತ್ವೋಗತೇಂದ್ರಿಯಃ । ಲಂಕಾವೈಧವ್ಯಸಂಯುಕ್ತಾತ್ವತ್ಕೃತೇನಭವಿಷ್ಯತಿ ।೧೨। ನತೇಪಾ
ಪಮಿದಂಕರ್ಮಸುಖೋದರ್ಕಂಭವಿಷ್ಯತಿ । ಯಾಹಂನೀತಾವಿನಾಭಾವಂಪತಿಪಾರ್ಶ್ವಾತ್ತ್ವಯಾವನೇ ।೧೩। ಸಹಿ
ದೈವತಸಂಯುಕ್ತೋಮಮಭರ್ತಾಮಹಾದ್ಯುತಿಃ । ನಿರ್ಭಯೋವೀರ್ಯಮಾಶ್ರಿತ್ಯಶೂನ್ಯೇವಸತಿದಂಡಕೇ ।೧೪। ಸತೇ
ದರ್ಪಂಬಲಂವೀರ್ಯಮುತ್ಸೇಕಂಚತಥಾವಿಧಂ । ಅಪನೇಷ್ಯತಿಗಾತ್ರೇಭ್ಯಃಶರವರ್ಷೇಣಸಂಯುಗೇ ।೧೫। ಯದಾವಿ

---

ವೈರವನ್ನು, ತಸ್ಯ-ಆ ಶ್ರೀರಾಮನಿಗೆ, ಉತ್ಪಾದ್ಯ-ಹುಟ್ಟಿಸಿ, ಜೀವನ್-ಬದುಕಿದವನಾಗಿ, ನಮೋಕ್ಷ್ಯಸೇ-ಬಿಡಲ್ಪಡಲಾರೆ ।।೮।। ಜೀವಿತಶೇಷಸ್ಯ-ಪ್ರಾ
ಣವೇ ಅವಶೇಷವಾಗುಳ್ಳ, ತೇ-ನಿನಗೆ. ಬಲೀ-ಬಲಿಷ್ಠನಾದ, ಸರಾಘವಃ-ಆ ಶ್ರೀರಾಮನು, ಅಂತಕರಃ-ನಾಶಕನು, ಯೂಪಗತಸ್ಯ-ಯೂಪಸ್ತಂಭವ
ನ್ನು ಹೊಂದಿರುವ, ಪಶೋರಿವ-ಪಶುವಿನಂತೆ, ತವ-ನಿನ್ನ, ಜೀವಿತಂ-ಪ್ರಾಣವು, ದುರ್ಲಭಂ-ದುರ್ಲಭವು ।।೯।। ಹೇರಕ್ಷಃ-ಎಲೈ ರಕ್ಕಸನೆ, ಸರಾಮಃ-ಆ
ಶ್ರೀರಾಮನು, ತ್ವಾಂ-ನಿನ್ನನ್ನು, ರೋಷದೀಪ್ತೇನ-ಕ್ರೋಧದಿಂ ಉರಿಯುತ್ತಿರುವ, ಚಕ್ಷುಷಾ-ನೇತ್ರದಿಂದ, ಪಶ್ಯೇದ್ಯದಿ-ನೋಡಿದವನಾದರೆ, ಅದ್ಯ-ಈಗ
ಲೇ, ತ್ವಂ-ನೀನು. ನಿರ್ದಗ್ಧಃ-ದಹಿಸಲ್ಪಟ್ಟವನಾಗಿ, ಸದ್ಯಃ-ಆಗಲೇ, ಪರಾಭವಂ-ತಿರಸ್ಕಾರವನ್ನು, ಗಚ್ಛೇಃ-ಹೊಂದುವೀ ।।೧೦।। ಯಃ-ಯಾ
ಶ್ರೀರಾಮನು, ಚಂದ್ರಂ-ಚಂದ್ರನನ್ನು, ನಭಸಃ-ಅಂತರಿಕ್ಷಪ್ರದೇಶದಿಂದ. ಭೂಮೌ-ನೆಲದಲ್ಲಿ, ಪಾತಯೇತ್-ಬೀಳಿಸುವನು, ನಾಶಯೇತವಾ-ನಾಶಗೊಳಿ
ಸಲೂ ಗೊಳಿಸುವನು, ಸಾಗರಂ-ಕಡಲನ್ನು. ಶೋಷಯೇದ್ವಾಪಿ-ಶೋಷಿಸಲೂ ಶೋಷಿಸುವನು, ಸಃ-ಆ ಶ್ರೀರಾಮನು, ಸೀತಾಂ-ಸೀತಾದೇವಿಯ
ನ್ನು, ಮೋಚಯೇತ್-ಬಿಡುವನೇ (ಬಿಡಲಾರನೂ ಎಂದು ತಾತ್ಪರ್ಯವು) ।।೧೧।। ತ್ವಂ-ನೀನು. ಗತಾಯುಃ-ಕಳೆದ ಆಯುಸ್ಸುಳ್ಳವನು, ಗತಶ್ರೀಕಃ-
ಹೋದ ಸಂಪತ್ತುಳ್ಳವನು, ಗತಸತ್ವಃ-ಹೋದ ಬಲವುಳ್ಳವನು, ಗತೇಂದ್ರಿಯಃ-ಹೋದ ಇಂದ್ರಿಯವ್ಯಾಪಾರವುಳ್ಳವನು, ತ್ವತ್ಕೃತೇ-ನಿನ್ನಿಂದ ಮಾ
ಡಲ್ಪಟ್ಟ ಅಪರಾಧದಿಂದ. ಲಂಕಾ-ಲಂಕಾಪಟ್ಟಣವು. ವೈಧವ್ಯಸಂಯುಕ್ತಾ-ನಾಥನಿಲ್ಲದ ಭಾವದಿಂ ಯುಕ್ತವಾಗಿ, ನಭವಿಷ್ಯತಿ-ಇರಲಾರದು, (ಅಂದ
ರೆ-ಲಂಕಾಪಟ್ಟಣವು ನಶಿಸಿಹೋಗುತ್ತದೆ.) ಯಾಹಂ-ಯಾವ ನಾನು. ವನೇ-ಅರಣ್ಯದಲ್ಲಿ, ತ್ವಯಾ-ನಿನ್ನಿಂದ, ಪತಿಪಾರ್ಶ್ವಾತ್-ಗಂಡನಪಾರ್ಶ್ವಭಾಗ
ದಿಂದ. ವಿನಾಭಾವಂ-ವಿಯೋಗವನ್ನು, ನೀತಾ-ಹೊಂದಿಸಲ್ಪಟ್ಟೆನೋ, ತೇ-ನಿನ್ನ, ಇದಂಪಾಪಂ-ಈ ಪಾಪಕರ್ಮವು, ಸುಖೋದರ್ಕಂ-ಸುಖವೇ ಉ
ತ್ತರಫಲವಾಗುಳ್ಳದ್ದಾಗಿ, ನಭವಿಷ್ಯತಿ-ಆಗಲಾರದು ।।೧೩।। ದೈವಸಂಯುಕ್ತಃ-ದೈವಬಲದಿಂ ಕೂಡಿಕೊಂಡಿರುವ. ಮಹಾದ್ಯುತಿಃ-ಮಹಾಪ್ರಕಾಶವುಳ್ಳವ
ಮಮ-ನನಗೆ. ಭರ್ತಾ-ಗಂಡನಾದ, ಸಃ-ಆ ಶ್ರೀರಾಮನು, ನಿರ್ಭಯಃ-ಭಯಹೀನನಾಗಿ, ವೀರ್ಯಂ-ಸಾಮರ್ಥ್ಯವನ್ನು, ಆಶ್ರಿತ್ಯ-ಹೊಂದಿ. ಶೂನ್ಯೇ-
ಜನರಹಿತವಾದ, ದಂಡಕೇ-ದಂಡಕಾರಣ್ಯದಲ್ಲಿ, ವಸತಿ-ಇರುತ್ತಾನೆಯೋ ।।೧೪।। ಸಃ-ಆ ಶ್ರೀರಾಮನು, ಸಂಯುಗೇ-ಕಾಳಗದಲ್ಲಿ. ಶರವರ್ಷೇಣ-ಬಾಣ
ಗಳವೃಷ್ಟಿಯಿಂದ. ತೇ-ನಿನ್ನ, ಗಾತ್ರೇಭ್ಯಃ-ಅವಯವಗಳದೆಸೆಯಿಂದ, ದರ್ಪಂ-ಗರ್ವವನ್ನು, ಬಲಂ-ಸಾಮರ್ಥ್ಯವನ್ನು, ತಥಾವಿಧಂ-ಅಂಥಾದ್ದಾದ,
ವೀರ್ಯಂ-ಪರಾಕ್ರಮವನ್ನು. ಉತ್ಸೇಕಂಚ-ಉಲ್ಲಂಘಿಸುವಿಕೆಯನ್ನು, ಅಪನೇಷ್ಯತಿ-ತೆಗೆದುಹಾಕುವನು ।।೧೫।। ಭೂತಾನಾಂ-ಪ್ರಾಣಿಗಳಿಗೆ, ವಿನಾಶಃ-

---

ದ ಬಿಡಲ್ಪಡಲಾರೆ ।೮। ಸಮೀಪವನ್ನೈದಿದ ಅಂತಕಾಲವುಳ್ಳ ನಿನಗೆ ಆ ಶ್ರೀರಾಮನೇ ನಾಶಕನು ಯೂಪಸ್ತಂಭ
ಕ್ಕೆ ಕಟ್ಟದ ಪಶುವಿನಂತೆ ಚಿರಕಾಲವು ಬದುಕಲಾರೆ ।೯। ಎಲೋ ಎಲೋ ಅಸುರನೇ! ಆ ಶ್ರೀರಾಮನು ರೋಷ
ದಿಂದ ಪ್ರಜ್ವಲಿಸುವ ತನ್ನನೇತ್ರದಿಂದ ನಿನ್ನನ್ನು ನೋಡಿದವನಾದರೆ ನೀನೀಗಲೆ ದಹಿಸಲ್ಪಟ್ಟು ಭಸ್ಮವನ್ನೈದುವ
ವನಾಗುವೆ ।೧೦। ಯಾವ ಶ್ರೀರಾಮನು ತನ್ನ ಸಾಮರ್ಥ್ಯದಿಂದ ಚಂದಿರನನ್ನು ನೆಲದಲ್ಲಿ ಬೀಳಿಸುವದಕ್ಕೆ ಸಮ
ರ್ಥನಾಗಿರುವನೋ ಸಮುದ್ರವನ್ನು ಶೋಷಿಸಲು ಶಕ್ತನೋ ಅಂಥಾ ಪರಾಕ್ರಮಿಯು ನಿನ್ನಂ ಬಿಡುವನೇ ಏನು?
।೧೧। ನೀನಾದರೆ ಗತವಾದ ಆಯುಸ್ಸುಳ್ಳವನಾಗಿಯೂ, ವಿಗತವಾದ ಐಶ್ವರ್ಯವುಳ್ಳವನಾಗಿಯೂ, ನಾಶವನ್ನೈದಿದ ಶ
ಕ್ತಿಯುಳ್ಳವನಾಗಿಯೂ ಇಂದ್ರಿಯವ್ಯಾಪಾರವಿಲ್ಲದವನಾಗಿಯೂ, ಇರುವವನಾಗಿದ್ದೀ; ನಿನ್ನಿಂದ ನಾನು ಪತಿಯಸ್ನ
ಗಲಬೇಕಾಯಿತಾದಕಾರಣ ಆ ಪಾಪಕಾರ್ಯದಿಂದ ಈ ಲಂಕಾಪುರಿಯು ಶೀಘ್ರದಲ್ಲಿ ನಶಿಸಿಪ್ರೋಗುವದು ನೀನುಮಾ
ಡಿದ ಪಾಪಕೃತ್ಯವು ಯೆಂದಿಗೂ ಸುಖವನ್ನುಂಟುಮಾಡಲಾರದು ।೧೩। ದೈವಬಲದಿಂದ ಯುಕ್ತನಾದ ಆ ಶ್ರೀರಾ
ಮನು ಭೀತಿಯಿಲ್ಲದವನಾಗಿ ದಂಡಕಾರಣ್ಯದಲ್ಲಿ ವಾಸಂಗೈಯುತ್ತಲಿರುವನು. ಆತನು ಬಾಣವರುಷಗಳಿಂದ
ಮ್ಯಾಗಾದರೂ ನಿನ್ನ ಗರ್ವವಂ ಮುರಿಯುವನು। ... ... ... ।೧೫।

ನಾಶೋಭೂತಾನಾಂದೃಶ್ಯತೇಕಾಲಚೋದಿತಃ । ತದಾಕಾರ್ಯೇಪ್ರಮಾದ್ಯಂತಿನರಾಃಕಾಲವಶಂಗತಾಃ ॥೧೬॥ ಮಾಂಪ್ರಧೃಷ್ಯಸತೇಕಾಲಃಪ್ರಾಪ್ತೋಯಂರಾಕ್ಷಸಾಧಮ । ಆತ್ಮನೋರಾಕ್ಷಸಾನಾಂಚವಧಾಯಾಂತಃಪುರಸ್ಯಚ ॥೧೭॥ ನಶಕ್ಯಾಯಜ್ಞಮಧ್ಯಸ್ಥಾವೇದಿಃಸ್ರುಗ್ಭಾಂಡಮಂಡಿತಾ । ದ್ವಿಜಾತಿಮಂತ್ರಪೂತಾಚಚಂಡಾಲೇನಾವಮರ್ದಿತುಂ । ತಥಾಹಂಧರ್ಮನಿತ್ಯಸ್ಯಧರ್ಮಪತ್ನೀಪತಿವ್ರತಾ । ತ್ವಯಾಸ್ಪ್ರಷ್ಟುಂನಶಕ್ಯಾಸ್ಮಿರಾಕ್ಷಸಾಧಮಪಾಪಿನಾ ॥೧೮॥ ಕ್ರೀಡಂತೀರಾಜಹಂಸೇನಪದ್ಮಷಂಡೇಷುನಿತ್ಯದಾ । ಹಂಸೀಸಾತೃಣಷಂಡಸ್ಥಂಕಥಂಪಶ್ಯೇತಮದ್ಗುಕಂ ॥೧೯॥ ಇದಂಶರೀರಂನಿಸ್ಸಂಜ್ಞಂಬಂಧವಾಖಾದಯಸ್ವವಾ । ನೇದಂಶರೀರಂರಕ್ಷ್ಯಂಮೇಜೀವಿತಂವಾಪಿರಾಕ್ಷಸ ॥೨೦॥ ನತುಶಕ್ಷ್ಯಾಮ್ಯುಪಕ್ರೋಶಂಪೃಥಿವ್ಯಾಂದಾತುಮಾತ್ಮನಃ ॥೨೧॥ ಏವಮುಕ್ತ್ವಾತುವೈದೇಹೀಕ್ರೋಧಾತ್ಸುಪರುಷಂವಚಃ ।

---

ವಿನಾಶವು, ಕಾಲಚೋದಿತಃ-ಯಮನಿಂ ಪ್ರೇರಿತವಾಗಿ, ಯದಾ-ಯಾವಕಾಲದಲ್ಲಿ, ದೃಶ್ಯತೇ-ಕಾಣಲಾದುತ್ತದೋ, ತದಾ-ಆಕಾಲದಲ್ಲಿ, ಕಾರ್ಯೇ-ಕಾರ್ಯವಿಷಯದಲ್ಲಿ, ನರಾಃ-ಮನುಜರು, ಕಾಲವಶಂಗತಾಃ-ಯಮನವಶಕ್ಕೆ ಹೋದವರಾಗಿ, ಪ್ರಮಾದ್ಯಂತಿ-ಮೈಮರೆತುಹೋಗುತ್ತಾರೆ ॥೧೬॥ ಹೇರಾಕ್ಷಸಾಧಮ-ಎಲೈ ರಕ್ಕಸಾಧಮನೇ, ಮಾಂ-ನನ್ನನ್ನು. ಪ್ರಧೃಷ್ಯ-ತಿರಸ್ಕಾರಮಾಡಿ, ತೇ-ನಿನಗೂ, ಆತ್ಮನಃ-ದೇಹಕ್ಕೂ, ರಾಕ್ಷಸಾನಾಂಚ-ರಕ್ಕಸರಿಗೂ, ಅಂತಃಪುರಸ್ಯಚ-ಅಂತಃಪುರಸ್ತ್ರೀಯರುಗಳಿಗೂ. ವಧಾಯ-ಸಂಹಾರಕ್ಕೆ, ಸೋಯಂಕಾಲಃ-ಆ ಕಾಲವು. ಪ್ರಾಪ್ತಃ-ಬಂತು ॥೧೭॥ ಯಜ್ಞಮಧ್ಯಸ್ಥಾ-ಯಾಗಶಾಲೆಯ ಮಧ್ಯದಲ್ಲಿರುವ ಗಾರ್ಹಪತ್ಯ ಆಹವನೀಯ ದಕ್ಷಿಣಾಗ್ನಿಗಳೆಂಬ ಯಜ್ಞಪುರುಷರ ಮಧ್ಯದಲ್ಲಿರುವ, ವೇದಿಃ-ಇಷ್ಟಿಮಾಡತಕ್ಕ ವೇದಿಕೆಯೂ, ಸ್ರುಗ್ಭಾಂಡಮಂಡಿತಾ-ಸ್ರುಕ್ಕುಗಳಿಂದಲೂ ಉಪಕರಣಗಳಿಂದಲೂ ಅಲಂಕೃತವಾದದ್ದಾಗಿ, ದ್ವಿಜಾತಿಮಂತ್ರಪೂತಾಚ-ಬ್ರಾಹ್ಮಣರ ಮಂತ್ರಗಳಿಂದ ಪರಿಶುದ್ಧವಾದ್ದಾಗಿಯೂ, ಚಂಡಾಲೇನ-ಚಂಡಾಲನಿಂದ, ಅವಮರ್ದಿತುಂ-ಸ್ಪರ್ಶಮಾಡುವದಕ್ಕಾಗಿ, ಯಥಾ-ಹ್ಯಾಗೆ, ನಶಕ್ಯಾ-ಸಾಧ್ಯವಲ್ಲವೋ. ತಥಾ-ಹಾಗೆಯೇ, ಹೇರಾಕ್ಷಸಾಧಮ-ಎಲೈ ನೀಚರಾಕ್ಷಸನೇ, ಧರ್ಮನಿತ್ಯಸ್ಯ-ಧರ್ಮದಲ್ಲೇ ಆಸಕ್ತಿಯುಳ್ಳ, ಧರ್ಮಪತ್ನೀ-ಧರ್ಮಪತ್ನಿಯಾದ, ಪತಿವ್ರತಾ-ಪತಿಯಲ್ಲೇವ್ರತವುಳ್ಳ, ಅಹಂ-ನಾನು, ಪಾಪಿನಾ-ಪಾಪಿಷ್ಠನಾದ, ತ್ವಯಾ-ನಿನ್ನಿಂದ, ಸ್ಪ್ರಷ್ಟುಂ-ಸ್ಪರ್ಶಮಾಡುವದಕ್ಕಾಗಿ ನಶಕ್ಯಾ-ಸಾಧ್ಯಳಲ್ಲವಳು, ಅಸ್ಮಿ-ಆಗಿಧೇನೆ ॥೧೮॥ ಪದ್ಮಷಂಡೇಷು-ಕಮಲಗಳ ತಂಡಗಳಲ್ಲಿ, ನಿತ್ಯದಾ-ಯಾವಾಗಲೂ, ರಾಜಹಂಸೇನ-ಶ್ರೇಷ್ಠವಾದ ಹಂಸಪಕ್ಷಿಯೊಡಗೂಡ, ಕ್ರೀಡಂತೀ-ವಿಹರಿಸುತ್ತಿರುವ, ಸಾ-ಅಂಥಾ ಪ್ರಸಿದ್ಧಳಾದ, ಹಂಸೀ-ಹೆಣ್ಣು ಹಂಸಪಕ್ಷಿಯು, ತೃಣಷಂಡಸ್ಥಂ-ಹುಲ್ಲುಗುಂಪಿನಲ್ಲಿ ಕುಳಿತುಕೊಂಡಿರುವ, ಮದ್ಗುಕಂ-ನೀರುಕಾಗೆಯನ್ನು, ಕಥಂ-ಹ್ಯಾಗೆ, ಪಶ್ಯೇತ-ಕಾಣುವಳು ॥೧೯॥ ಹೇರಾಕ್ಷಸ-ಎಲೈ ರಕ್ಕಸನೇ, ನಿಸ್ಸಂಜ್ಞಂ-ನಿಶ್ಚೇಷ್ಟವಾಗಿರುವ ಇದಂಶರೀರಂ-ಈ ದೇಹವನ್ನು. ಬಂಧವಾ-ಬಿಗಿಸಲಾದರೂ ಬಿಗಿಸು, ಖಾದಯಸ್ವ-ತಿನ್ನಲಾದರೂ ತಿನ್ನು, ಇದಂ-ಈ, ಮೇಶರೀರಂ-ನನ್ನ ಶರೀರವು, ಜೀವಿತಂವಾಪಿ-ಪ್ರಾಣವಾದರೂ, ನರಕ್ಷ್ಯಂ-ಸಂರಕ್ಷಿಸತಕ್ಕದ್ದಲ್ಲ ॥೨೦॥ ಆತ್ಮನಃ-ನನಗೆ, ಪೃಥಿವ್ಯಾಂ-ನೆಲದಲ್ಲಿ. ಉಪಕ್ರೋಶಂ-ಅಪವಾದವನ್ನು, ದಾತುಂ-ಕೊಡುವದಕ್ಕೆ. ನಶಕ್ಷ್ಯಾಮಿ-ಸಮರ್ಥಳಾಗಲಾರೆನು ॥೨೧॥ ಏವಂ-ಈಪರಿಯಾಗಿ, ವೈದೇಹೀ-ವಿದೇಹರಾಜಕುಮಾರಿಯಾದ. ಮೈಥಿಲೀ-ಸೀತಾದೇವಿಯು, ರಾವಣಂ-ರಾವಣನನ್ನು ಕುರಿತು ಕ್ರೋಧಾತ್-ಕೋಪದದೆಸೆಯಿಂದ. ಸುಪರುಷಂ-ಬಹಳ ಕ್ರೂರವಾದ, ವಚಃ-ಮಾತನ್ನು, ಉಕ್ತ್ವಾ-ಹೇ-

---

ಲೋಕದಲ್ಲಿ ಸಾಧಾರಣವಾಗಿ ಯಾವಾಗ ವಿನಾಶಕಾಲವು ಯಮನಿಂದ ಪ್ರೇರಿಸಲ್ಪಟ್ಟದ್ದಾಗಿರುವದೋ, ಆ ಸಮಯದಲ್ಲಿ ಮನುಷ್ಯರು ವ್ಯಾಪಾರಂಗಳಲ್ಲಿ ಯಮನಕೈಗೆ ಶಿಲುಕಿದವರಾಗಿ ಪ್ರಮಾದವನ್ನೈದುವರು ।೧೬। ರಾಕ್ಷಸನೀಚನಾದ ಎಲೈ ರಾವಣನೇ! ನೀನು ನನ್ನನ್ನು ತಿರಸ್ಕಾರಂ ಗೈದವನಾದ ಯಾದಕಾರಣ, ನಿನಿಗೂ ನಿನ್ನ ಶರೀರಕ್ಕೂ ರಾಕ್ಷಸರಿಗೂ ರಾಣಿವಾಸಸ್ತ್ರೀಯರಿಗೂಸಹಾ ಸಂಹಾರಕಾಲವು ಪ್ರಾಪ್ತವಾಗಿರುವದು।೧೭। ಎಲೋಎಲೋ ದುಷ್ಟನೇ! ಯಜ್ಞಶಾಲೆಯ ಮಧ್ಯಪ್ರದೇಶದಲ್ಲಿರುವ "ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ" ಎಂಬ ತ್ರೇತಾಗ್ನಿಗಳ ವೇದಿಕೆಗಳು ಸ್ರುಕ್ಕು ಮೊದಲಾದ ಉಪಕರಣಗಳಿಂದ ಅಲಂಕರಿಸಲ್ಪಟ್ಟು ಮತ್ತೂ ಬ್ರಾಹ್ಮಣೋತ್ತಮರಿಂದ ಪೇಳಲ್ಪಡುವ ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟವುಗಳಾಗಿ, ಚಂಡಾಲನಿಂದ ಸ್ಪರ್ಶಯಂ ಗೈಯ್ಯಪಡಕ್ಕೆ ಯೆಂತಾಗಲಾರವೋ, ಅಂತು ಧರ್ಮಾತ್ಮನಾದ ಆ ಶ್ರೀರಾಮನ ಧರ್ಮಪತ್ನಿಯಾದ ನಾನು ಪಾಪಿಯಾದ ನಿನ್ನಿಂದ ಸ್ಪರ್ಶಿಸುವದಕ್ಕೆ ಅಸಾಧ್ಯಳು ।೧೮। ಎಲೈ ರಾಕ್ಷಸಾಧಮನೇ! ತಾವರೆಗಳ ಸಮೂಹದಲ್ಲಿ ಯಾವಾಗಲೂ ವಾಸಂಗೈಯ್ಯುತಲಿರುವ ಹಂಸಪಕ್ಷಿಯೊಡನೆ ವಿಹಾರಂ ಗೈಯ್ಯುತಲಿರುವ ಹೆಣ್ಣು ಹಂಸಪಕ್ಷಿಯು ಹುಲ್ಲಿನ ಗುಂಪಿನಲ್ಲಿ ಕುಳಿತಿರುವ ನೀರು ಕಾಗೆಯನ್ನು ಎಂತು ನೋಡುವಳು? ।೧೯। ಚೇಷ್ಟಾರಹಿತವಾದ ಈ ದೇಹವನ್ನು ಬಂಧಿಸಲಾದರೂ ಬಂಧಿಸು; ತಿನ್ನಲಾದರೂ ತಿನ್ನು, ಈ ಶರೀರವು ಪ್ರಾಣಗಳು ಸಹಾ ರಕ್ಷಿಸತಕ್ಕವುಗಳಲ್ಲ;ನಾನೀ ಧರಾತಲದಲ್ಲಿ ಅಪವಾದವನ್ನು ಸೈರಿಸಲಾರೆನು, ಎಂಬದಾಗಿ ಈ ರೀತಿಯಲ್ಲಿ ಸೀತಾದೇವಿಯು ಮಹಾ ಕೋಪದಿಂದ

ರಾವಣಂಮೈಥಿಲೀಂತತ್ರಪುನರ್ನೋವಾಚಕಿಂಚನ।೨೧। ಸೀತಾಯಾವಚನಂಶ್ರುತ್ವಾಪರುಷಂರೋಮಹರ್ಷಣಂ।
ಪ್ರತ್ಯುವಾಚತತಸ್ಸೀತಾಂಭಯಸಂದರ್ಶನಂವಚಃ ।೨೨। ಶೃಣುಮೈಥಿಲಿಮದ್ವಾಕ್ಯಂಮಾಸಾನ್ ದ್ವಾದಶಭಾಮಿ
ನಿ । ಕಾಲೇನಾನೇನನಾಭ್ಯೇಷಿಯದಿಮಾಂಚಾರುಹಾಸಿನೀ । ತತಸ್ತ್ವಾಂಪ್ರಾತರಾಶಾರ್ಥಂಸೂದಾಶ್ಛೇತ್ಸ್ಯಂತಿಲೇಶಶಃ ।
೨೩। ಇತ್ಯುಕ್ತ್ವಾಪರುಷಂವಾಕ್ಯಂರಾವಣಶ್ಶತ್ರುರಾವಣಃ ।ರಾಕ್ಷಸೀಶ್ಚತತಃಕ್ರುದ್ಧಇದಂವಚನಮಬ್ರವೀತ್।೨೪।
ಶೀಘ್ರಮೇವಹಿರಾಕ್ಷಸ್ಯೋವಿಕೃತಾಘೋರದರ್ಶನಾಃ। ದರ್ಪಮಸ್ಯಾವಿನೇಷ್ಯಂತುಮಾಂಸಶೋಣಿತಭೋಜನಾಃ ।೨೫।
ವಚನಾದೇವತಾಸ್ತಸ್ಯಸುಘೋರಾರಾಕ್ಷಸೀಗಣಾಃ । ಕೃತಪ್ರಾಂಜಲಯೋಭೂತ್ವಾಮೈಥಿಲೀಂಪರ್ಯವಾರಯನ್।೨೬।

---

ಪೇಳಿಯಾದರೆ. ತತ್ರ-ಆ ವಿಷಯವಾಗಿ, ಪುನಃ-ಮತ್ತು, ಕಿಂಚನ-ಯಾವ ಮಾತನ್ನೂ, ನೋವಾಚ-ಪೇಳದೇಹೋದಳು ||೨೧|| || ಸೀತಾಯಾಃ-ಸೀತಾದೇವಿಯು, ಪರುಷಂ-ಕ್ರೂರವಾದ, ರೋಮಹರ್ಷಣಂ-ರೋಮಾಂಚವನ್ನುಂಟುಮಾಡುತ್ತಿರುವ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ತತಃ-ಬಳಿಕ, ಸೀತಾಂ-ಸೀತಾದೇವಿಯಂಕುರಿತು ಭಯಸಂದರ್ಶನಂ-ಭೀತಿಯಂ ತೋರಿಸುತ್ತಿರುವ, ವಚಃ-ಮಾತನ್ನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ||೨೨|| || ಹೆಮೈಥಿಲಿ-ಎಲೌ ಜನಕರಾಜಕುಮಾರಿಯಾದ, ಹೆಭಾಮಿನಿ-ಎಲೌ ಸ್ತ್ರೀಯೇ, ಮದ್ವಾಕ್ಯಂ-ನನ್ನ ಮಾತನ್ನು, ಶೃಣು-ಕೇಳು, ದ್ವಾದಶಮಾಸಾನ್-ಹನ್ನೆರಡು ಮಾಸಗಳನ್ನು, ಪ್ರತೀಕ್ಷೆ-ನಿರೀಕ್ಷಿಸುತ್ತೇನೆ, ಅನೇನಕಾಲೇನ-ಈ ಕಾಲದಿಂದ, ಮಾಂ-ನನ್ನನ್ನು ಕುರಿತು, ನಾಭ್ಯೇಷಿಯದಿ-ಬಾರದೇಹೋದರೆ, ಹೆಚಾರುಹಾಸಿನಿ-ಇಂಪಾಗಿರುವ ನಗೆಯುಳ್ಳವಳೇ, ತತಃ-ಬಳಿಕ, ತ್ವಾಂ-ನಿನ್ನನ್ನು ಪ್ರಾತರಾಶಾರ್ಥಂ-ಪ್ರಾತಃಕಾಲಭೋಜನಾರ್ಥವಾಗಿ, ಸೂದಾಃ-ಪರಿಚಾರಕರು, ಲೇಶಶಃ-ಖಂಡಖಂಡವಾಗಿ, ಛೇತ್ಸ್ಯಂತಿ-ತುಂಡುತುಂಡು ಮಾಡುವರು ||೨೩|| ಶತ್ರುರಾವಣಃ-ಶತ್ರುಗಳನ್ನು ದುಃಖಗೊಳಿಸುತ್ತಿರುವ ರಾವಣನು, ಇತಿ-ಈಪರಿಯಾಗಿ, ಪರುಷಂ-ಕ್ರೂರವಾದ, ವಾಕ್ಯಂ-ಮಾತನ್ನು, ಉಕ್ತ್ವಾ-ಪೇಳಿ, ತತಃ-ಬಳಿಕ, ಕ್ರುದ್ಧಃ-ಕೋಪಿಸಿದ್ದವನಾಗಿ, ರಾಕ್ಷಸೀಶ್ಚ-ರಕ್ಕಸರ ಹೆಂಗಳನ್ನು ಕುರಿತು, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು ||೨೪|| ಹೆರಾಕ್ಷಸ್ಯಃ-ಎಲೌ ರಕ್ಕಸಸ್ತ್ರೀಯರುಗಳಿರಾ, ಘೋರದರ್ಶನಾಃ-ಭಯಂಕರವಾದ ನೋಟವುಳ್ಳ, ವಿಕೃತಾಃ-ವಿಕಾರರೂಪಿಗಳಾದ, ಯೂಯಂ-ನೀವುಗಳು, ಮಾಂಸಶೋಣಿತ, ಭೋಜನಾಃ-ಮಾಂಸವೂ ರಕುತವೂ ಭೋಜನವಾಗುಳ್ಳವರಾಗಿ, ಶೀಘ್ರಮೇವ-ಜಾಗ್ರತೆಯಾಗಿ, ಅಸ್ಯಾಃ-ಈ ಸೀತಾದೇವಿಯ, ದರ್ಪಂ-ಗರ್ವವನ್ನು ವಿನಿಷ್ಯಂತು-ಹೋಗಲಾಡಿಸಿರಿ, (ಈ ಮೂರು ಶ್ಲೋಕಕ್ಕೆ ತಾತ್ಪರ್ಯಾರ್ಥವೇನೆಂದರೆ-ಹೆವೈದೇಹಿ-ಎಲೌ ಸೀತಾದೇವಿಯೇ, ಮೇ-ನನ್ನ, ವಾಕ್ಯಂ-ಮಾತನ್ನು, ಶೃಣು-ಕೇಳು, ದ್ವಾದಶಮಾಸಾನ್-ಹನ್ನೆರಡುಮಾಸಗಳಪರಿಯಂತರವೂ. ಪ್ರತೀಕ್ಷೆ-ನಿರೀಕ್ಷಿಸುತ್ತೇನೆ, ಅನೇನಕಾಲೇನ-ಈ ಕಾಲದಿಂದ, ನಾಭ್ಯೇಷಿಯದಿ-ಭೃತ್ಯಾನುಗ್ರಹಾರ್ಥವಾಗಿ ಈ ಪಟ್ಟಣದಲ್ಲಿರುವದಕ್ಕೆ ಅಂಗೀಕಾರಮಾಡದಿದ್ದರೆ, ತತಃ-ಬಳಿಕ, ತ್ವಾಂ-ನಿನ್ನನ್ನುದ್ದೇಶಿಸಿ, ಪ್ರಾತರಾಶಾರ್ಥಂ-ಪ್ರಾತಃಕಾಲ ಭೋಜನಾರ್ಥವಾಗಿ. ಮಾಂಸಶೋಣಿತಭೋಜನಾಃ-ಮಾಂಸವೂ ರಕುತವೂ ಭೋಜನವಾಗುಳ್ಳ ಹದ್ದೇ ಮೊದಲಾದ ಪಕ್ಷಿವಿಶೇಷಗಳು ಮಾಂ-ನನ್ನನ್ನು, ಛೇತ್ಸ್ಯಂತಿ-ಕತ್ತರಿಸುತ್ತವೇ ಎಂದು ತಾತ್ಪರ್ಯವು,) ಹೆರಾಕ್ಷಸ್ಯಃ-ಎಲೈ ರಕ್ಕಸಸ್ತ್ರೀಯರುಗಳಿರಾ. ಅವಿಕೃತಾಃ-ವಿಕಾರರಹಿತರಾಗಿ ದರ್ಪಂವಿನಾ-ದರ್ಪವನ್ನು ವಿನಾಯಿಸಿ, ಇಷ್ಯಂತು-ಈಗ ಸಮೀಪದಲ್ಲಿದ್ದುಕೊಂಡಿರಿ) ||೨೫|| ತಸ್ಯ-ಆ ರಾವಣನ, ವಚನಾದೇವ-ಮಾತಿನದೆಸೆಯಿಂದಲೇ. ಸುಘೋರಾಃ-ಭಯಂಕರರಾದ, ತಾಃರಾಕ್ಷಸೀಗಣಾಃ-ಆ ಗುಂಪಿನಲ್ಲಿ ಶೇರಿದ ರಾಕ್ಷಸಸ್ತ್ರೀಯರು, ಕೃತಪ್ರಾಂಜಲಯಃ-ಅಂಜಲಿಬಂಧಮಾಡಿದವರು ಭೂತ್ವಾ-ಆಗಿ, ಮೈಥಿಲೀಂ-ಸೀತಾದೇವಿಯನ್ನು, ಪರ್ಯವಾರಯನ್-ಸುತ್ತಿಕೊಂಡರು ||೨೬|| ಘೋರದರ್ಶನಾಃ-ಭಯಂಕರವಾದ ನೋಟವುಳ್ಳ,

---

ಅತಿಕಠಿಣವಾಗಿ ಮಾತುಗಳಂ ಪೇಳಿ ಪುನಃ ಯಾವ ಕಾರ್ಯವನ್ನೂ ಪೇಳಲಿಲ್ಲ ।೨೧। ಈ ರೀತಿಯಾಗಿ ಸೀತಾದೇವಿಯುನುಡಿದವಾಕ್ಯವಂಕೇಳಿದಬಳಿಕಆದಶಕಂಠನುಭಯಜನಕವಾದಮಾತುಗಳನ್ನುನುಡಿವನದೆಂತೆನೆ,- ।೨೨। ಎಲೌ ಮಿಥಿಲರಾಜಕನ್ನಿಕೆಯೇ! ಎನ್ನಮಾತಂ ಕೇಳುವವಳಾಗು; ನಾನು ಹನ್ನೆರಡು ತಿಂಗಳ ವರಿವಿಗೂ ನಿರೀಕ್ಷಣೆಯಂ ಗೈಯ್ಯುತಲಿರುವೆನು, ಅಷ್ಟರೊಳಗಾಗಿ ನೀನೆನ್ನ ಮಾತಂ ಕೇಳದಿದ್ದರೆ, ಬಳಿಕ ಬಾಣಿಸರು ನಿನ್ನನ್ನು ಪ್ರಾತಃಕಾಲದಲ್ಲಿ ಭೋಜನಂ ಗೈಯ್ಯುವದಕ್ಕಾಗಿ ತುಂಡುತುಂಡುಗಳಾಗಿ ಖಂಡ್ರಿಸುವರೆಂದು ರಾವಣನು ನುಡಿದಬಳಿಕ ಬಹು ಕೋಪವನ್ನೈದಿದವನಾಗಿ ರಾಕ್ಷಸಸ್ತ್ರೀಯರಂ ಕುರಿತು ನಿರೂಪಿಸುವನದೆಂತೆನೆ,— ಎಲೈ ರಕ್ಕಸಿಯರೇ! ಭಯಂಕರವಾಗಿಯೂ ವಿಕಾರವಾಗಿಯೂ ಸಹಾ ಇರುವ ರೂಪವುಳ್ಳ ನೀವುಗಳೆಲ್ಲರು ಮಾಂಸವನ್ನೂ ರಕ್ತವನ್ನೂ ಸಹಾ ಮೆದ್ದು ತ್ವರೆಯಿಂದ ಈಕೆಯ ಕೊಬ್ಬನ್ನು ಇಳಿಸುವವರಾಗಿ (ತತ್ವಾಭಿಪ್ರಾಯವೇನಂದರೆ,— ಎಲೌ ಸೀತಾದೇವಿಯೇ! ಎನ್ನ ಮಾತಂ ಲಾಲಿಸುವವಳಾಗು, ನಾನು ಹನ್ನೆರಡು ತಿಂಗಳವರಿಗೂ ನಿರೀಕ್ಷಣೆಯಂ ಮಾಡುವೆನು, ಅದರೊಳಗಾಗಿ ನೀನು ಭೃತ್ಯಾನುಗ್ರಹಾರ್ಥವಾಗಿ ಈ ಲಂಕಾಪಟ್ಟಣದಲ್ಲಿ ವಾಸಂ ಗೈಯ್ಯುವದಕ್ಕೆ ಅನುಮೋದಿಸದಿದ್ದರೆ ಅನಂತರದಲ್ಲಿ ನಿನ್ನನ್ನುದ್ದೇಶಿಸಿ ಪ್ರಾತಃಕಾಲದ ಭೋಜನಾರ್ಥವಾಗಿ ಮಾಂಸಾದಿಗಳನ್ನು ಗ್ರಾಸಂಗೈಯ್ಯುವ ಪಕ್ಷಿವಿಶೇಷಂಗಳು ನನ್ನನ್ನು ಛೇದಿಸುವವು, ಎಲೈ ರಕ್ಕಸಿಯರೇ! ಆದ್ದರಿಂದ ನೀವು ವಿಕಾರರಹಿತರಾಗಿ ಕೊಬ್ಬಿಲ್ಲದೆ ಸಮೀಪದಲ್ಲಿರುವವರಾಗೆಂದು ಭಾವವು) ।೨೩। ಎಂಬದಾಗಿ ರಾವಣನು ನುಡಿದ

ಸತಾಃಪ್ರೋವಾಚರಾಜಾತುರಾವಣೋಘೋರದರ್ಶನಃ । ಪ್ರಚಾಲ್ಯಚರಣೋತ್ಕರ್ಷೈರ್ದಾರಯನ್ನಿವಮೇದಿನೀಂ ॥೨೯॥ ಅಶೋಕವನಿಕಾಮಧ್ಯೇಮೈಥಿಲೀನೀಯತಾಮಿಯಂ । ತತ್ರೇಯಂರಕ್ಷ್ಯತಾಂಗೂಢಂಯುಷ್ಮಾಭಿಃಪರಿವಾರಿತಾ ॥೩೦॥ ತತ್ರೈನಾಂತರ್ಜನೈರ್ಘೋರೈಃಪುನಸ್ಸಾಂತ್ವೈಶ್ಚಮೈಥಿಲೀಂ । ಆನಯಧ್ವಂವಶಂಸರ್ವಾವನ್ಯಾಂಗಜವಧೂಮಿವ ಇತಿಪ್ರತಿಸಮಾದಿಷ್ಟಾರಾಕ್ಷಸ್ಯೋರಾವಣೇನತಾಃ । ಅಶೋಕವನಿಕಾಂಜಗ್ಮುರ್ಮೈಥಿಲೀಂಪ್ರತಿಗೃಹ್ಯತು । ಸರ್ವಕಾಲಫಲೈರ್ವೃಕ್ಷೈರ್ನಾನಾಪುಷ್ಪಫಲೈರ್ವೃತಾಂ । ಸರ್ವಕಾಲಮದೈಶ್ಚಾಪಿದ್ವಿಜೈಸ್ಸಮುಪಸೇವಿತಾಂ ॥೩೩॥ ಸಾತು ಶೋಕಪರೀತಾಂಗೀಮೈಥಿಲೀಜನಕಾತ್ಮಜಾ । ರಾಕ್ಷಸೀವಶಮಾಪನ್ನಾವ್ಯಾಘ್ರೀಣಾಂಹರಿಣೀಯಥಾ ॥೩೪॥ ಶೋಕೇನಮಹತಾಗ್ರಸ್ತಾಮೈಥಿಲೀಜನಕಾತ್ಮಜಾ । ನಶರ್ಮಲಭತೇಭೀರುಃಪಾಶಬದ್ಧಾಮೃಗೀಯಥಾ ॥೩೫॥ ನವಿಂದತೇತ

ರಾಜಾ–ಅರಸಾದ, ಸರಾವಣಃ–ಆ ರಾವಣನು, ಪ್ರಚಾಲ್ಯ–ಎದ್ದು, ಚರಣೋತ್ಕರ್ಷೈಃ–ಪಾದಘಾತಗಳಿಂದ. ಮೇದಿನೀಂ–ನೆಲವನ್ನು, ದಾರಯನ್ನಿವ–ಸೀಳುವನೆಂಬಂತೆ ಎರುವವನಾಗಿ, ತಾಃ–ಆ ರಕ್ಕಸೀಯರಂಕುರಿತು, ಪ್ರೋವಾಚ–ಹೇಳಿದನು ॥೨೯॥ ಇಯಂಮೈಥಿಲೀ–ಈ ಸೀತಾದೇವಿಯು, ಅಶೋಕವನಿಕಾಮಧ್ಯೇ–ಅಶೋಕವನದ ಮಧ್ಯದಲ್ಲಿ, ನೀಯತಾಂ–ಕರೆದುಕೊಂಡುಹೋಗಲ್ಪಡಲಿ, ತತ್ರ–ಆ ವನದಲ್ಲಿ, ಇಯಂ–ಈ ಸೀತಾದೇವಿಯು, ಯುಷ್ಮಾಭಿಃ–ನಿಮ್ಮುಗಳಿಂದ, ಪರಿವಾರಿತಾ–ಸುತ್ತಿ ಕೊಳ್ಳಲ್ಪಟ್ಟವಳಾಗಿ, ಗೂಢಂ–ರಹಸ್ಯವಾಗಿ, ರಕ್ಷ್ಯತಾಂ–ಸಂರಕ್ಷಿಸಲ್ಪಡಲಿ ॥೩೦॥ ತತ್ರ–ಆ ಅಶೋಕವನದಲ್ಲಿ. ಸರ್ವಾಃ–ನೀವೆಲ್ಲರೂ, ಏನಾಂಮೈಥಿಲೀಂ–ಈ ಸೀತಾದೇವಿಯನ್ನು, ಘೋರೈಃ–ಭಯಂಕರವಾದ. ತರ್ಜನೈಃ–ಗರ್ಜನೆಗಳಿಂದಲೂ, ಪುನಃ–ಮತ್ತು ಸಾಂತ್ವೈಶ್ಚ–ಸಮಾಧಾನಮಾತುಗಳಿಂದಲೂ, ವನ್ಯಾಂ–ವನದಲ್ಲಿ ಹುಟ್ಟಿದ, ಗಜವಧೂಮಿವ–ಹೆಣ್ಣಾನೆಯನ್ನಂತೆ, ವಶಂ–ಸ್ವಾಧೀನವನ್ನು. ಆನಯಧ್ವಂ–ಹೊಂದಿಸಿರಿ ॥೩೧॥ ಇತಿ–ಈಪರಿಯಾಗಿ, ರಾವಣೇನ–ರಾವಣನಿಂದ, ಪ್ರತಿಸಮಾದಿಷ್ಟಾಃ–ಆಜ್ಞಾಪಿಸಲ್ಪಟ್ಟ, ತಾರಾಕ್ಷಸ್ಯಃ–ಆ ರಕ್ಕಸಸ್ತ್ರೀಯರುಗಳು. ಮೈಥಿಲೀಂ–ಸೀತಾದೇವಿಯನ್ನು. ಪ್ರತಿಗೃಹ್ಯ–ಕರೆದುಕೊಂಡು, ಸರ್ವಕಾಲಫಲೈಃ–ಸರ್ವಕಾಲದಲ್ಲಿಯೂ ಫಲಗಳುಳ್ಳ, ನಾನಾವೃಕ್ಷೈಃ–ಬಗೆಬಗೆಗಿಡಗಳಿಂದಲೂ, ಪುಷ್ಪಫಲೈಃ–ಅನೇಕಬಗೆಗಳಾದ ಹುವ್ವುಗಳಿಂದಲೂ ಫಲಗಳಿಂದಲೂ, ವೃತಾಂ–ಸುತ್ತಿಕೊಳ್ಳಲ್ಪಟ್ಟ, ಸರ್ವಕಾಲಮದೈಃ–ಸರ್ವಕಾಲದಲ್ಲೀ ವಿಕಾರಮದವುಳ್ಳ, ದ್ವಿಜೈಶ್ಚಾಪಿ–ಹಕ್ಕಿಗಳಿಂದಲೂ, ಸಮುಪಸೇವಿತಾಂ–ಸೇವಿಸಲ್ಪಟ್ಟ, ಅಶೋಕವನಿಕಾಂ–ಅಶೋಕವನವನ್ನುಕುರಿತು, ಜಗ್ಮುಃ–ತೆರಳಿದರು ॥೩೩॥ ಶೋಕಪರೀತಾಂಗೀ–ವ್ಯಸನದಿಂ ವ್ಯಾಪ್ತವಾದಾಂತರಂಗವುಳ್ಳ, ಜನಕಾತ್ಮಜಾ–ಜನಕರಾಯನ ಮಗಳಾದ, ಸಾಮೈಥಿಲೀ–ಆ ಸೀತಾದೇವಿಯು, ವ್ಯಾಘ್ರೀಣಾಂ–ಹೆಣ್ಣುಹುಲಿಗಳ, ವಶಂ–ಸ್ವಾಧೀನವನ್ನು, ಆಪನ್ನಾ–ಹೊಂದಿರುವ, ಹರಿಣೀಯಥಾ–ಹೆಣ್ಣುಚಿಗರಿಯಂತೆ, ರಾಕ್ಷಸೀ–ರಕ್ಕಸಸ್ತ್ರೀಯರುಗಳ, ವಶಂ–ಸ್ವಾಧೀನತೆಯನ್ನು, ಆಪನ್ನಾ–ಹೊಂದುವಳು ॥೩೪॥ ಮಹತಾ–ದೊಡ್ಡದಾದ, ಶೋಕೇನ–ದುಃಖದಿಂದ, ಗ್ರಸ್ತಾ–ವ್ಯಾಪ್ತಳಾದ, ಜನಕಾತ್ಮಜಾ–ಜನಕರಾಯನ ಕುವರಿಯಾದ, ಮೈಥಿಲೀ–ಸೀತಾದೇವಿಯು. ಪಾಶಬದ್ಧಾ–ಹಗ್ಗದಿಂ ಕಟ್ಟಲ್ಪಟ್ಟ, ಮೃಗೀಯಥಾ–ಹೆಣ್ಣುಜಿಂಕೆಯಂತೆ, ಭೀರುಃ–ಭಯಗೊಂಡವಳಾಗಿ. ಶರ್ಮ–ಸುಖವನ್ನು, ನಲಭತೆ–ಹೊಂದದೇಹೋದಳು ॥೩೫॥ ತತ್ರ–ಆ ಅಶೋಕವನದಲ್ಲಿ, ವಿರೂಪನೇತ್ರಾಭಿಃ–ವಿಕಾರವಾದ ನೇತ್ರಗಳುಳ್ಳ ರಕ್ಕಸೀಯರಿಂದ, ಅತೀವ–ಬಹಳವಾಗಿ, ತರ್ಜಿತಾ–ಹೆದರಿಸಲ್ಪಟ್ಟ, ಮೈಥಿಲೀ–ಸೀತಾದೇವಿಯು, ದಯಿತಂ–ಇಷ್ಟನಾದ, ಪತಿಂ–ಗಂಡನಾದ ಶ್ರೀರಾಮನನ್ನು. ದೈವತಂ–ದೇವರನ್ನಾಗಿ, ಸ್ಮರಂತೀ–ಸ್ಮರಣೆಮಾಡುತ್ತಿರುವಳಾಗಿ, ವಿಚೇತನಾ–ಪ್ರಜ್ಞೆತಪ್ಪಿದವಳಾಗಿ, ಭಯಶೋಕಪೀಡಿತಾ–ಭೀತಿಯಿಂದಲೂ ಶೋಕದಿಂದಲೂ ಬಾಧಿತಳಾಗಿದ್ದಂಥಾವಳು, ಅಭೂತ್–ಆದಳು, (ಈ ಶ್ಲೋಕಗಳಲ್ಲಿ ವಾಸ್ತವಿಕಾರ್ಥವೇ ಸಂದಳೆ.–ಈ ಸ್ತ್ರೀ

ಮಾತ್ರದಿಂದಲೇ ಆ ರಕ್ಕಸಿಯರು ಅಂಜಲಿಬಂಧವಂಗೈದು ಸೀತಾದೇವಿಯನ್ನು ಸುತ್ತುಬಾರಿಕೊಂಡರು ॥೨೮॥ ಅನಂತರದಲ್ಲಿ ಮಹಾ ಭಯಂಕರವಾದ ದರ್ಶನವುಳ್ಳ ಆ ರಾವಣನು, ಮೇಲಕ್ಕೆದ್ದವನಾಗಿ ಪಾದಘಾತಂಗಳಿಂದ ಭೂಮಿಯನ್ನು ಕಂಪಿಸುವಂತೆ ಮಾಡುತ್ತಾ ಆ ರಾಕ್ಷಸಿಯರಂ ಕುರಿತಿಂತೆಂದನು,—ಎಲೈ ರಾಕ್ಷಸಿಯರೇ! ಜನಕರಾಜ ಪುತ್ರಿಯಾದ ಈ ಸೀತಾದೇವಿಯನ್ನು ಅಶೋಕವನಕ್ಕೆ ಕರೆದುಕೊಂಡು ಸಾರಿ ಅಲ್ಲಿ ನೀವೆಲ್ಲರು ಸುತ್ತುಬಾರಿಕೊಂಡು ರಹಸ್ಯವಾಗಿ ಪಾಲಿಸುತ್ತಿರಿ ; ಮತ್ತೂ ಆ ಪ್ರದೇಶದಲ್ಲಿ ನೀವೆಲ್ಲರು ಈಕೆಯನ್ನು ಭೀತಿಯನ್ನುಂಟುಮಾಡುವ ಘರ್ಜನೆಗಳಿಂದಲೂ ಸಮಾಧಾನದ ಮಾತುಗಳಿಂದಲೂ ಸಹ ಹೆಣ್ಣಾನೆಯನ್ನು ಸ್ವಾಧೀನಮಾಡಿಕೊಳ್ಳುವಂತೆ ನಿಮ್ಮಸ್ವಾಧೀನಕ್ಕೆ ತೆಗದುಕೊಳ್ಳುವವರಾಗಿ; ಎಂದು ಆಜ್ಞಾಪಿಸಲು ಆ ರಾಕ್ಷಸಸ್ತ್ರೀಯರು ಸೀತಾದೇವಿಯಂ ಕರೆದುಕೊಂಡು ಪೋಗಿ ಸರ್ವಕಾಲದಲ್ಲಿಯೂ, ಫಲಿಸುವ ನಾನಾವಿಧವಾದ ವೃಕ್ಷಂಗಳಿಂದಲೂ, ಪುಷ್ಪಂಗಳಿಂದಲೂ, ಮದದಾನೆಗಳಿಂದಲೂ ಸಹಾ ಯುಕ್ತವಾದ ಆ ಅಶೋಕವನಕ್ಕೆ ಸಾರಿದರು ॥೩೩॥ ಬಳಿಕ ಬಹುವ್ಯಸನಾಕ್ರಾಂತಳಾದ ಆ ಜನಕನಂದಿನಿಯು ಹುಲಿಗಳಕೈಗೆ ಶಿಲುಕಿದ ಚಿಗರಿಯಂತೆ ಆ ರಾಕ್ಷಸಸ್ತ್ರೀಯರಿಗೆ ಅಧೀನವನ್ನೈದಿದಳು ಮತ್ತೂ ಆ ದೇವಿಯು ಪಾಶದಿಂದ ಬಂಧಿಸಲ್ಪಟ್ಟ ಮೃಗದಂತೆ ! ಭೀತಿಯಿಂದಲೂ, ಶೋಕದಿಂದಲೂ ಸಹ ಮೋಹಿತಳಾಗಿ ಸುಖವನ್ನೈದಲಿಲ್ಲ ॥೩೫॥ ವಿಕಾರವಾದ ನೇತ್ರಂಗಳುಳ್ಳ ರಕ್ಕಸಿಯರಿಂದ ಆ ಸೀತಾ

ತ್ರಾತುಶರ್ಮಾ ಮೈಥಿಲೀ ವಿರೂಪನೇತ್ರಾಭಿರತೀವ ತರ್ಜಿತಾ । ಪತಿಂ ಸ್ಮರಂತೀ ದಯಿತಂ ಚ ದೈವತಂ ವಿಚೇತನಾಽಭೂದ್ಭಯಶೋಕಪೀಡಿತಾ ॥೩೬॥ —** ಇತಿ ಶ್ರೀಮದಾರಣ್ಯಕಾಂಡೆ-ಷಟ್ಪಂಚಾಶಸ್ಸರ್ಗಃ **—

ರಾಕ್ಷಸಂ ಮೃಗರೂಪೇಣ ಚರಂತಂ ಕಾಮರೂಪಿಣಂ । ನಿಹತ್ಯ ರಾಮೋ ಮಾರೀಚಂ ತೂರ್ಣಂ ಪಥಿ ನಿವರ್ತತೇ ॥೧॥ ತಸ್ಯ ಸಂತ್ವರಮಾಣಸ್ಯ ದ್ರಷ್ಟುಕಾಮಸ್ಯ ಮೈಥಿಲೀಂ । ಕ್ರೂರಸ್ವನೋಽಥ ಗೋಮಾಯುರ್ವಿನನಾದಾಸ್ಯ ಪೃಷ್ಠತಃ ॥೨॥ ಸ ತಸ್ಯ ಸ್ವರಮಾಜ್ಞಾಯ ದಾರುಣಂ ರೋಮಹರ್ಷಣಂ । ಚಿಂತಯಾಮಾಸ ಗೋಮಾಯೋಸ್ಸ್ವರೇಣ ಪರಿಶಂಕಿತಃ ॥೩॥ ಅಶುಭಂ ಬತ ಮನ್ಯೇಽಹಂ ಗೋಮಾಯುರ್ವಾಶ್ಯತೇ ಯಥಾ । ಸ್ವಸ್ತಿ ಸ್ಯಾದಪಿ ವೈದೇಹ್ಯಾ ರಾಕ್ಷಸೈರ್ಭಕ್ಷಣಂ ವಿನಾ ॥೪॥ ಮಾರೀಚೇನ ತು ವಿಜ್ಞಾಯ ಸ್ವರಮಾಲಂಬ್ಯ ಮಾಮಕಂ । ವಿಕ್ರುಷ್ಟಂ ಮೃಗರೂಪೇಣ ಲಕ್ಷ್ಮಣಶ್ಶೃಣುಯಾದ್ಯದಿ ॥ ಸ ಸೌಮಿತ್ರಿಸ್ಸ್ವರಂ ಶ್ರುತ್ವಾ ತಾಂ ಚ ಹಿತ್ವಾ ಚ ಮೈಥಿಲೀಂ । ತಯೈವ ಪ್ರಹಿತಃ ಕ್ಷಿಪ್ರಂ ಮತ್ಸಕಾಶಮಿಹೈಷ್ಯತಿ ॥೬॥ ರಾಕ್ಷಸೈ

---

ತಾದೇವಿಯು ಸಾಕ್ಷಾಲ್ಲಕ್ಷ್ಮೀಸ್ವರೂಪಳಾದರೂ ಈ ರಕ್ಕಸರ ಸ್ತ್ರೀಯರ ಕೈಗೆ ಶಿಕ್ಕಿ ಯಥಾಃ ಶೋಕಮೋಹಾದಿಗಳಿಂ ವ್ಯಾಪ್ತಳಾದಳೆಂದರೆ, ಈ ಶೋಕವು ಈ ಮೋಹವೂ ಈ ಪ್ರಲಾಪವಚನಗಳೂ ಇವುಗಳೆಲ್ಲವೂ ಲೋಕನಾರ್ಥವಾಗಿ ನಡಿಸುತ್ತಾ ಸಾಕ್ಷಾದ್ಭಗವಂತನಾದ ಶ್ರೀರಾಮನನ್ನೇ ಪರದೇವತೆಯನ್ನಾಗಿ ಸ್ಮರಿಸಿಕೊಂಡು ಇದ್ದಳೆಂದು ತಾತ್ಪರ್ಯವು) ॥೩೬॥ —**ಇತಿ ಶ್ರೀಮದಾರಣ್ಯಕಾಂಡೆ-ಷಟ್ಪಂಚಾಶಸ್ಸರ್ಗಃ**—

ರಾಮಃ-ಶ್ರೀರಾಮನು. ಮೃಗರೂಪೇಣ-ಜಿಗರಿಯರೂಪದಿಂ, ಚರಂತಂ-ಸಂಚರಿಸುತ್ತಿರುವ, ಕಾಮರೂಪಿಣಂ-ಕಾಮರೂಪಿಯಾದ. (ಅಂದರೆ-ಬೇಕಾದರೂಪವಂ ಧರಿಸುವ ಶಕ್ತಿಯುಳ್ಳ.) ರಾಕ್ಷಸಂ-ರಾಕ್ಷಸನಾದ, ಮಾರೀಚಂ-ಮಾರೀಚನನ್ನು. ನಿಹತ್ಯ-ಹೊಡೆದು, ತೂರ್ಣಂ-ಜಾಗ್ರತೆಯಾಗಿ, ಪಥಿ-ಮಾರ್ಗದಲ್ಲಿ. ನಿವರ್ತತೇ-ಹಿಂದಕ್ಕೆ ತಿರಗಿದನು ॥೧॥ ಮೈಥಿಲೀಂ-ಸೀತಾದೇವಿಯನ್ನು, ದ್ರಷ್ಟುಕಾಮಸ್ಯ-ನೋಡಲಿಚ್ಛೆಯುಳ್ಳ, ತಸ್ಯ-ಆ ಶ್ರೀರಾಮನು, ಸಂತ್ವರಮಾಣಸ್ಯ-ತ್ವರೆಗೊಂಡಿರುವವನಾಗಲಾಗಿ, ಅಸ್ಯ-ಈ ಶ್ರೀರಾಮನ, ಅಥವಾ-ಅಸ್ಯ-ಈ ನರಿಯ, ಪೃಷ್ಠತಃ-ಹಿಂದುಗಡೆ. ಅಥ-ಬಳಿಕ. ಕ್ರೂರಸ್ವನಃ-ಕ್ರೂರವಾದ ಧ್ವನಿಯುಳ್ಳ, ಗೋಮಾಯುಃ-ದೊಡ್ಡನರಿಯು, ವಿನನಾದ-ಧ್ವನಿಗೊಂಡಿತು ॥೨॥ ಸಃ-ಆ ಶ್ರೀರಾಮನು ತಸ್ಯ ಗೋಮಾಯೋಃ-ಆ ನರಿಯ, ದಾರುಣಂ-ಕ್ರೂರವಾದ, ರೋಮಹರ್ಷಣಂ-ರೋಮಾಂಚೋತ್ಪಾದಕವಾದ, ಸ್ವರಂ-ಧ್ವನಿಯನ್ನು. ಆಜ್ಞಾಯ-ತಿಳಿದು, ಸ್ವರೇಣ-ಧ್ವನಿಯಿಂದ. ಪರಿಶಂಕಿತಃ-ಸಂಶಯಗೊಂಡವನಾಗಿ. ಚಿಂತಯಾಮಾಸ-ಆಲೋಚಿಸಿದನು ॥೩॥ ಗೋಮಾಯುಃ-ನರಿಯು, ಯಥಾ-ಹ್ಯಾಗೆ. ವಾಶ್ಯತೇ-ಧ್ವನಿಗೊಳಿಸುತ್ತದೋ, ತಥಾ-ಹಾಗೆಯೇ, ಅಹಂ-ನಾನು, ಅಶುಭಂ-ಅಮಂಗಳವನ್ನಾಗಿ. ಮನ್ಯೇ-ಎಣಿಸುತ್ತೇನೆ, ಬತ-ಕಷ್ಟವು, ವೈದೇಹ್ಯಾಃ-ಸೀತಾದೇವಿಗೆ, ರಾಕ್ಷಸೈಃ-ರಕ್ಕಸರಿಂದ. ಭಕ್ಷಣಂ ವಿನಾ-ತಿನ್ನುವಿಕೆಯಂ ವಿನಾಯಿಸಿ, ಸ್ವಸ್ತಿ-ಕ್ಷೇಮವು, ಸ್ಯಾದಪಿ-ಆಗುವದೇ ಯೇನು ॥೪॥ ಮೃಗರೂಪೇಣ-ಜಿಗರಿಯರೂಪಧಾರಿಯಾದ, ಮಾರೀಚೇನ-ಮಾರೀಚನೆಂಬ ರಕ್ಕಸನಿಂದ, ಮಾಮಕಂ-ನನ್ನ ಸಂಬಂಧವಾದ, ಸ್ವರಂ-ಧ್ವನಿಯನ್ನು. ಆಲಂಬ್ಯ-ಅವಲಂಬಿಸಿ, ವಿಕ್ರುಷ್ಟಂ-ಕೂಗಲ್ಪಟ್ಟ. ಸ್ವರಂ-ಧ್ವನಿಯನ್ನು, ವಿಜ್ಞಾಯ-ತಿಳಿದು, ಲಕ್ಷ್ಮಣಃ-ಲಕ್ಷ್ಮಣನು. ಶೃಣುಯಾದ್ಯದಿ-ಕೇಳಿದವನೇ ಆದರೆ. ಸೌಮಿತ್ರಿಃ-ಲಕ್ಷ್ಮಣನು, ಸ್ವರಂ-ಕಂಠಧ್ವನಿಯನ್ನು, ಶ್ರುತ್ವಾ-ಕೇಳಿ, ತಾಂ ಮೈಥಿಲೀಂ ಚ-ಆ ಸೀತಾದೇವಿಯನ್ನು. ಹಿತ್ವಾ-ಬಿಟ್ಟು, ತಯೈವ-ಆ ಸೀತಾದೇವಿಯಿಂದಲೇ. ಕ್ಷಿಪ್ರಂ-ಜಾಗ್ರತೆಯಾಗಿ, ಪ್ರಹಿತಃ-ಕಳುಹಿಸಲ್ಪಟ್ಟವನಾಗಿ, ಇಹೈವ-ಈಗಲೇ, ಕ್ಷಿಪ್ರಂ-ಜಾಗ್ರತೆಯಾಗಿ, ಏಷ್ಯತಿ-ಬರುವನು ॥೬॥ ಮಾರೀಚೋ ರಾಕ್ಷಸಃ-ಮಾರೀಚನೆಂಬ ರಕ್ಕಸನು. ಕಾಂಚನಸ್ಯ-ಭಂಗಾರುವಿಕಾರವಾದ, ಮೃಗಃ-ಜಿಗರಿಯು

---

ದೇವಿಯು ಬಹು ಹೆದರಿಸಲ್ಪಟ್ಟು ಪತಿಯಾದ ಶ್ರೀರಾಮನನ್ನೇ ದೈವವೆಂದು ಚಿಂತಿಸುತ್ತಾ ಪ್ರಜ್ಞೆಯಿಲ್ಲದವಳಾಗಿದ್ದಳು. (ತತ್ವಾಭಿಪ್ರಾಯವೇನಂದರೆ,—ಜನಕರಾಜನ ಪುತ್ರಿಯಾದ ಸೀತಾದೇವಿಯು ಸಾಕ್ಷಾಲ್ಲಕ್ಷ್ಮೀಸ್ವರೂಪಳಾದಗೂ ಈ ರಕ್ಕಸಿಯರ ಕೈಗೆ ಶಿಲುಕಿ ಶೋಕಮೋಹಾದಿಗಳಿಂದ ವ್ಯಾಪ್ತಳಾದಳು ಅಂದರೆ,—ಈ ದುಃಖವೂ ಮೋಹವೂ, ಪ್ರಲಾಪವೂ ಸಹ ಲೋಕವಿಡಂಬನಾರ್ಥವಾಗಿ ನಟಿಸುತ್ತಾ ಸಾಕ್ಷಾದ್ಭಗವಂತನಾದ ಶ್ರೀರಾಮನನ್ನು ಪರದೇವತಾಸ್ವರೂಪನೆಂದು ಭಾವಿಸುತ್ತಲೇ ಇದ್ದಳೆಂದು ಭಾವವು ॥೩೬॥ *೫೬ನೇ ಸರ್ಗಂ ಮುಗಿದುದು*

ಇತ್ತ ಶ್ರೀರಾಮನು ಮಾಯಾಮೃಗರೂಪವನ್ನೈದಿದ ಮತ್ತೂ ಬೇಕಾದ ರೂಪವಂ ಧರಿಸುವ ರಾಕ್ಷಸನಾದ ಆ ಮಾರೀಚನನ್ನು ಹೊತ್ತುಕೊಂಡು ಹಿಂತಿರಿಗಿದನು ॥೧॥ ಈ ರೀತಿಯಾಗಿ ಸೀತಾದೇವಿಯಂ ನೋಡಲಿಚ್ಛೆಯಿಂದ ಆ ಶ್ರೀರಾಮನು ಅತಿತ್ವರೆಯಾಗಿ ಬರುತ್ತಿರಲು ಆತನ ಹಿಂದುಗಡೆಯಲ್ಲಿ ಒಂದಾನೊಂದು ದೊಡ್ಡನರಿಯು ಕ್ರೂರ ಧ್ವನಿಯಂ ಮಾಡಿತು ॥೨॥ ಅನಂತರದಲ್ಲಿ ಆ ಶ್ರೀರಾಮನು ರೋಮಾಂಚಕರವಾದ ಆ ಧ್ವನಿಯಂ ಕೇಳಿ ಸಂದೇಹಗೊಂಡವನಾಗಿ ಯೋಚಿಸುವದೆಂತೆನೆ,—ಹಾಹಾ ಈ ನರಿಯು ಕೂಗುವಂತೆ ಯೇನೋ ಅಶುಭವು ಸಂಭವಿಸುವದೆಂದೆಣಿಸುತ್ತೇನೆ, ಜನಕಮಹಾರಾಜನ ಪುತ್ರಿಯಾದ ಸೀತಾದೇವಿಯು ರಾಕ್ಷಸರಿಂದ ಭಕ್ಷಿಸಲ್ಪಡದೇ ಕ್ಷೇಮವಾಗಿರುವಳೇ? ಮೃಗರೂಪಧಾರಿಯಾದ ಈ ಮಾರೀಚನು ನನ್ನ ಧ್ವನಿಯನ್ನನುಸರಿಸಿ ಕೂಗಿದಸ್ವರವನ್ನು ತಿಳಿದು

ಸ್ಸಹಿತೈರ್ನೂನಂಸೀತಾಯಾಈಪ್ಸಿತೋವಧಃ | ಕಾಂಚನಶ್ಚಮೃಗೋಭೂತ್ವಾವ್ಯಪನೀಯಾಶ್ರಮಾತ್ತುಮಾಂ | ದೂರಂನೀತ್ವಾತುಮಾರೀಚೋರಾಕ್ಷಸೋಭೂಚ್ಛರಾಹತಃ | ಹಾಲಕ್ಷ್ಮಣಹತೋಸ್ಮೀತಿಯದ್ವಾಕ್ಯಂವ್ಯಾಜಹಾರಚ ||೮|| ಅಪಿಸ್ವಸ್ತಿಭವೇತ್ತಾಭ್ಯಾಂರಹಿತಾಭ್ಯಾಮ್ಮಹಾವನೇ | ಜನಸ್ಥಾನನಿಮಿತ್ತಂಹಿಕೃತವೈರೋಸ್ಮಿರಾಕ್ಷಸೈಃ ||೯|| ನಿಮಿತ್ತಾನಿಚಘೋರಾಣಿದೃಶ್ಯಂತೇದ್ಯಬಹೂನಿಚ | ಇತ್ಯೇವಂಚಿಂತಯನ್ರಾಮಶ್ಶ್ರುತ್ವಾಗೋಮಾಯುನಿಸ್ವನಂ | ಆತ್ಮನಶ್ಚಾಪನಯನಾನ್ಮೃಗರೂಪೇಣರಕ್ಷಸಾ | ಆಜಗಾಮಜನಸ್ಥಾನಂರಾಘವಃಪರಿಶಂಕಿತಃ ||೧೧||ತಂದೀನಮಾನಸೋನದೀಮಾಸೇದುರ್ಮೃಗಪಕ್ಷಿಣಃ | ಸವ್ಯಂಕೃತ್ವಾಮಹಾತ್ಮಾನಂಘೋರಾಂಶ್ಚಸಸೃಜುಸ್ಸ್ವರಾನ್ ||೧೨|| ತಾನಿದೃಷ್ಟ್ವಾನಿಮಿತ್ತಾನಿಮಹಾಘೋರಾಣಿರಾಘವಃ | ನ್ಯವರ್ತತಾಥತ್ವರಿತೋಜವೇನಾಶ್ರಮಮಾತ್ಮನಃ||೧೩||ಸೀತಾಂಸತುವರಾರೋಹಾಂ ಲಕ್ಷ್ಮಣಂಚಮಹಾಬಲಂ | ಆಜಗಾಮಜನಸ್ಥಾನಂಚಿಂತಯನ್ನೇವರಾಘವಃ ||೧೪|| ತತೋಲಕ್ಷ್ಮಣಮಾಯಾಂತಂ

---

ಭೂತ್ವಾ-ಆಗಿ, ಆಶ್ರಮಾತ್-ಆಶ್ರಮದದೆಶೆಯಿಂದ, ವ್ಯಪನೀಯ-ಸೆಳೆದು, ಮಾಂ-ನನ್ನನ್ನು, ದೂರಂ-ದೂರದೇಶವನ್ನುಕುರಿತು, ನೀತ್ವಾ-ಕರೆದುಕೊಂಡುಹೋಗಿ, ಶರಾಹತಃ-ಬಾಣದಿಂದೊಡೆಯಲ್ಪಟ್ಟವನು, ಅಭವತ್-ಆದನು, ಹಾ-ಕಷ್ಟವು, ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಹತಃ-ಹೊಡೆಯಲ್ಪಟ್ಟವನು. ಅಸ್ಮಿ-ಆದೆನು, ಯತ್-ಯಾವಕಾರಣದದೆಶೆಯಿಂದ. ವಾಕ್ಯಂ-ಮಾತನ್ನು, ವ್ಯಾಜಹಾರಚ-ಹೇಳಲೂ ಹೇಳಿದನೋ, ತಸ್ಮಾತ್-ಆಕಾರಣದದೆಶೆಯಿಂದ, ಸೀತಾಯಾಃ-ಸೀತಾದೇವಿಯ, ವಧಃ-ಸಂಹಾರವು, ಸಹಿತೈಃ-ಗುಂಪುಸೇರಿದ. ರಾಕ್ಷಸೈಃ-ರಾಕ್ಷಸರಿಂದ, ನೂನಂ-ನಿಶ್ಚಯವಾಗಿ, ಈಪ್ಸಿತಃ-ಅಪೇಕ್ಷಿಸಲ್ಪಟ್ಟಿತೆ ||೮|| ಮಹಾವನೇ-ದೊಡ್ಡ ಅರಣ್ಯದಲ್ಲಿ, ಹಿ-ಯಾವಕಾರಣದದೆಶೆಯಿಂದ, ಜನಸ್ಥಾನನಿಮಿತ್ತಂ-ಜನಸ್ಥಾನವೇ ನಿಮಿತ್ತವಾಗುಳ್ಳದ್ದಂತೆ, ರಾಕ್ಷಸೈಃ-ರಕ್ಕಸರಿಂದ, ಕೃತವೈರಃ-ಮಾಡಲ್ಪಟ್ಟ ದ್ವೇಷವುಳ್ಳವನು. ಅಸ್ಮಿ-ಆಗಿದ್ದೇನೆಯೋ, ತಸ್ಮಾತ್-ಆಕಾರಣದದೆಶೆಯಿಂದ, ರಹಿತಾಭ್ಯಾಂ-ನನ್ನಿಂದವರ್ಜಿತರಾದ, ತಾಭ್ಯಾಂ-ಆ ಸೀತಾಲಕ್ಷ್ಮಣರಿಗೆ. ಸ್ವಸ್ತಿ-ಕ್ಷೇಮವು, ಭವೇದಪಿ-ಆಗುವದೇ ಯೇನು ||೯|| ಅದ್ಯ-ಈಗ, ಘೋರಾಣಿ-ಭಯಂಕರಗಳಾದ, ಬಹೂನಿ-ಅನೇಕಗಳಾದ. ನಿಮಿತ್ತಾನಿ-ದುಶ್ಶಕುನಗಳು, ದೃಶ್ಯಂತೆ-ಕಾಣಲ್ಪಡುತ್ತವೆ, ಇತ್ಯೇವಂ-ಈಪರಿಯಾಗಿ, ರಾಘವಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು, ಗೋಮಾಯುನಿಸ್ವನಂ-ನರಿಯಧ್ವನಿಯನ್ನು, ಶ್ರುತ್ವಾ-ಕೇಳಿ, ಮೃಗರೂಪೇಣ-ಮಾಯಾಮೃಗರೂಪನಾದ, ರಕ್ಷಸಾ-ರಕ್ಕಸನಾದ ಮಾರೀಚನಿಂದ. ಆತ್ಮನಃ-ತನ್ನ, ಅಪನಯನಾತ್-ಆಶ್ರಮದಿಂ ಸೆಳೆದುಕೊಂಡು ಹೋಗುವಿಕೆಯದೆಶೆಯಿಂದಲೂ, ಪರಿಶಂಕಿತಃ-ಸಂಶಯಿಸುತ್ತಿರುವವನಾಗಿ. ಜನಸ್ಥಾನಂ-ಉತ್ಕಟವಂಕುರಿತು, ಆಜಗಾಮ-ಬಂದನು ||೧೧|| ದೀನಂ-ಪರಿತಪಿಸುತ್ತಿರುವ, ಮಹಾತ್ಮಾನಂ-ಮಹಾಮನಸ್ವಿಯಾದ, ತಂ-ಆ ಶ್ರೀರಾಮನಂಕುರಿತು. ಸವ್ಯಂಕೃತ್ವಾ-ಅಪ್ರದಕ್ಷಿಣವಾಗಿ ಬಂದು, ದೀನಮನಸಃ-ದೈನ್ಯವಾದ ಮನಸ್ಸುಳ್ಳವುಗಳಾಗಿ. ಮೃಗಪಕ್ಷಿಣಃ-ಮೃಗಗಳೂ ಪಕ್ಷಿಗಳೂ, ಘೋರಾನ್-ಕ್ರೂರಗಳಾದ. ಸ್ವರಾನ್-ಧ್ವನಿಗಳನ್ನು, ಸಸೃಜುಃ-ಬಿಟ್ಟವು ||೧೨|| ರಾಘವಃ-ಶ್ರೀರಾಮನು, ಮಹಾಘೋರಾಣಿ-ಮಹಾಭಯಂಕರಗಳಾದ, ತಾನಿನಿಮಿತ್ತಾನಿ-ಆ ದುಷ್ಟಶಕುನಗಳನ್ನು, ದೃಷ್ಟ್ವಾ-ಕಂಡು, ಅಥ-ಬಳಿಕ, ತ್ವರಿತಃ-ಜಾಗ್ರತೆಯುಳ್ಳವನಾಗಿ, ಜವೇನ-ವೇಗದಿಂದ, ಆತ್ಮನಃ-ತನ್ನ, ಆಶ್ರಮಂ-ಪರ್ಣಶಾಲೆಯಂಕುರಿತು, ನ್ಯವರ್ತತ-ಹಿಂತಿರುಗಿಬಂದನು ||೧೩|| ಸಃರಾಘವಃ-ಆ ಶ್ರೀರಾಮನು, ವರಾರೋಹಾಂ-ಶ್ರೇಷ್ಠಸ್ತ್ರೀಯಾದ, ಸೀತಾಂ-ಸೀತಾದೇವಿಯನ್ನು, ಮಹಾಬಲಂ-ಬಹಳ ಸಾಮರ್ಥ್ಯವಂತನಾದ. ಲಕ್ಷ್ಮಣಂಚ-ಲಕ್ಷ್ಮಣನನ್ನು, ಚಿಂತಯನ್ನೇವ-ಆಲೋಚಿಸುತ್ತಿರುವನಾಗಿಯೇ, ಜನಸ್ಥಾನಂ-ಸರಹದ್ದುಭೂಮಿಯಂಕುರಿತು, ಆಜಗಾಮ-ಬಂದನು ||೧೪|| ತತಃ-

---

ಲಕ್ಷ್ಮಣನು ಆಕೆಯಂಬಿಟ್ಟು ಇಲ್ಲಿಗೆ ಬರುವನೋ ಅಥವಾ ಆಕೆಯಿಂದಲೇ ಕಳುಹಿಸಲ್ಪಡುವನೋ ಏನೋ? |೭| ಹಾಹಾ ಈ ರಾಕ್ಷಸನು ಸುವರ್ಣವಿಕಾರವಾದ ಮೃಗರೂಪವನ್ನೈದಿ ನನ್ನನ್ನು ಆಶ್ರಮದಿಂದ ದೂರವಾಗಿ ಸೆಳೆದುಕೊಂಡುಬಂದು ಬಾಣದಿಂ ಹೊಡೆಯಲ್ಪಟ್ಟವನಾದನು |೮| ಲಕ್ಷ್ಮಣನು ನುಡಿದಮಾತು ನಿಶ್ಚಯವೇಸರಿ, ಅಬಲೆಯಾದ ಸೀತಾದೇವಿಯವಧೆಯನ್ನಿಚ್ಛಿಸುವ ರಾಕ್ಷಸರು ನಿಶ್ಚಯವಾಗಿ ಸಮಯ ನಿರೀಕ್ಷಣೆಯಂಗೈಯ್ಯುತಲಿರುವರು, ಈ ಮಹಾರಣ್ಯದಲ್ಲಿ ರಾಕ್ಷಸರಸಂಗಡ ನನಗೆ ಬಹುವೈರವು ಸಂಭವಿಸಿತು, ಆದ್ದರಿಂದ ನಾನು ಲಕ್ಷ್ಮಣನೂ ಸಹಾ ಇಲ್ಲದಕಾಲದಲ್ಲಿ ಆಕೆಯು ಕ್ಷೇಮವಾಗಿರುವಳೇ? ಈಗಲಾದರೆ ಅನೇಕ ದುಶ್ಶಕುನಂಗಳು ಕಾಣುತಲಿವೆ; ಎಂಬದಾಗಿ ಶ್ರೀರಾಮನು ನರಿಯ ಘೋಷೆಯಿಂದಲೂ, ಮೃಗರೂಪಧಾರಿಯಾದ ರಾಕ್ಷಸನಿಂದ ತಾನು ಆಶ್ರಮದಿಂದ ಸೆಳೆದುಕೊಂಡು ಬಂದದ್ದರಿಂದಲೂ, ಸಹಾ ಸಂದೇಹಿಸುತ್ತಾ ಆ ಜನಸ್ಥಾನವಂ ಕುರಿತು ಬರುತ್ತಿದ್ದನು|೧೧| ಈ ರೀತಿಯಲ್ಲಿ ಸಂತಪಿಸುತ್ತಾ ಬರುತಲಿರಲು, ಆಗ ಮೃಗಂಗಳೂ ಪಕ್ಷಿಗಳೂ ಸಹ ಪುನಃ ವಿಕಾರಧ್ವನಿಯಂ ಮಾಡಿದವು, ಅನಂತರದಲ್ಲಿ ಶ್ರೀರಾಮನು ಮಹಾ ಭಯಂಕರವಾದ ಆ ಅಪಶಕುನಗಳನ್ನು ಕಂಡಬಳಿಕ ಅತಿತ್ವರೆಯಾಗಿ ತನ್ನ ಪರ್ಣಶಾಲೆಯಂಕುರಿತು ಬಂದನು |೧೩| ಆಗ ಶ್ರೀರಾಮನು ಉತ್ತಮಾಂಗನೆಯಾದ ಆ ಸೀತಾದೇವಿಯನ್ನೂ, ಮಹಾ ಭುಜಪರಾಕ್ರಮಶಾಲಿಯಾದ ಲಕ್ಷ್ಮಣನನ್ನೂ ಸಹ ಚಿಂತಿಸುತ್ತಾ ಆಶ್ರಮಕ್ಕೆ ಬರುತ್ತಿರಲು

ದದರ್ಶವಿಗತಪ್ರಭಂ ||೧೪|| ತತೋವಿದೂರೇರಾಮೇಣಸಮೀಯಾಯಸಲಕ್ಷ್ಮಣಃ | ವಿಷಣ್ಣಸ್ಸನ್ವಿಷಣ್ಣೇನದುಃಖಿತೋದುಃಖಭಾಗಿನಾ ||೧೫|| ಸಂಜಗರ್ಹೇಚತಂಭ್ರಾತಾಜ್ಯೇಷ್ಠೋಲಕ್ಷ್ಮಣಮಾಗತಂ | ವಿಹಾಯಸೀತಾಂವಿಜನೇವನೇರಾಕ್ಷಸಸೇವಿತೇ ||೧೬|| ಗೃಹೀತ್ವಾಚಕರಂಸವ್ಯಂಲಕ್ಷ್ಮಣಂರಘುನಂದನಃ | ಉವಾಚಮಧುರೋದರ್ಕಮಿದಂಪರುಷಮಾರ್ತಿಮತ್ ||೧೭|| ಅಹೋಲಕ್ಷ್ಮಣಗರ್ಹ್ಯಂತೇಕೃತಂಯಸ್ತ್ವಂವಿಹಾಯತಾಂ| ಸೀತಾಮಿಹಾಗತಸ್ಸೌಮ್ಯಕಚ್ಚಿತ್ಸ್ವಸ್ತಿಭವೇದಿಹ ||೧೮|| ನಮೇಸ್ತಿಸಂಶಯೋವೀರಸರ್ವಥಾಜನಕಾತ್ಮಜಾ | ವಿನಷ್ಟಾಭಕ್ಷಿತಾವಾಪಿರಾಕ್ಷಸೈರ್ವನಚಾರಿಭಿಃ | ಅಶುಭಾನ್ಯೇವಭೂಯಿಷ್ಠಂಯಥಾಪ್ರಾದುರ್ಭವಂತಿಮೇ ||೨೦|| ಅಪಿಲಕ್ಷ್ಮಣಸೀತಾಯಾಸ್ಸಾಮಗ್ರ್ಯಂಪ್ರಾಪ್ನುಯಾವಹೇ | ಜೀವಂತ್ಯಾಃಪುರುಷವ್ಯಾಘ್ರಸುತಾಯಾಜನಕಸ್ಯವೈ | ಯಥಾವೈಮೃಗಸಂಘಾಶ್ಚಗೋಮಾಯುಶ್ಚೈವಭೈರವಂ | ವಾಶ್ಯಂತೇಶಕುನಾಶ್ಚಾಪಿಪ್ರದೀಪ್ತಾಮಭಿತೋದಿಶಂ ||೨೧|| ಅಪಿಸ್ವಸ್ತಿಭವೇತ್ತಸ್ಯಾರಾಜ

---

ಬಳಿಕ, ಆಯಾಂತಂ-ಬರುತ್ತಿರುವ. ವಿಗತಪ್ರಭಂ-ಹೋದಕಾಂತಿಯುಳ್ಳ, ಲಕ್ಷ್ಮಣಂ-ಲಕ್ಷ್ಮಣನನ್ನು. ದದರ್ಶ-ಕಂಡನು. ತತಃ-ಬಳಿಕ. ಅವಿದೂರೇ-ಸಮೀಪದಲ್ಲಿಯೇ. ವಿಷಣ್ಣಃ-ವಿಷಾದಗೊಂಡ. ಸಲಕ್ಷ್ಮಣಃ-ಆ ಲಕ್ಷ್ಮಣನು, ವಿಷಣ್ಣೇನ-ವ್ಯಸನಗೊಂಡಿರುವ, ದುಃಖಭಾಗಿನಾ-ದುಃಖವಂ ಹೊಂದಿದ ರಾಮೇಣಸಹ-ಶ್ರೀರಾಮನೊಡಗೂಡ. ಸಮೀಯಾಯ-ಸೇರಿದನು ||೧೫|| || ಅಥ-ಬಳಿಕ, ಜ್ಯೇಷ್ಠಃ-ಜ್ಯೇಷ್ಠನಾದ, ಭ್ರಾತಾ-ಸಹೋದರನಾದ ರಾಮಃ-ಶ್ರೀರಾಮನು, ವಿಜನೇ-ಜನರಹಿತವಾದ, ರಾಕ್ಷಸಸೇವಿತೇ-ರಕ್ಕಸರಿಂ ಸೇವಿಸಲ್ಪಟ್ಟ, ವನೇ-ಅರಣ್ಯದಲ್ಲಿ, ಸೀತಾಂ-ಸೀತಾದೇವಿಯನ್ನು, ವಿಹಾಯ-ಬಿಟ್ಟು. ಆಗತಂ-ಬಂದಿರುವ, ತಂಲಕ್ಷ್ಮಣಂ-ಆ ಲಕ್ಷ್ಮಣನನ್ನು, ಸಂಜಗರ್ಹೇ-ನಿಂದಿಸಿದನು ||೧೬|| || ರಘುನಂದನಃ-ಶ್ರೀರಾಮನು, ಸವ್ಯಂಕರಂ-ಎಡಗೈಯನ್ನು. ಗೃಹೀತ್ವಾ-ಹಿಡಿದುಕೊಂಡು, ಲಕ್ಷ್ಮಣಂ-ಲಕ್ಷ್ಮಣನಂಕುರಿತು. ಮಧುರೋದರ್ಕಂ-ಒಳ್ಳೇದಾದ ಉತ್ತರಫಲವುಳ್ಳ, ಪರುಷಂ-ತಾತ್ಕಾಲಕ್ಕೆ ಕಠಿನವಾದ, ಆರ್ತಿಮತ್-ದುಃಖಕರವಾದ, ಇದಂ-ಈ ಮಾತನ್ನು. ಉವಾಚ-ಹೇಳಿದನು ||೧೭|| || ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ಹೇಸೌಮ್ಯ-ಎಲೈ ಸೌಮ್ಯನೇ, ಯಸ್ತ್ವಂ-ಯಾವ ನೀನು, ತಾಂಸೀತಾಂ-ಆ ಸೀತಾದೇವಿಯನ್ನು, ವಿಹಾಯ-ಬಿಟ್ಟು, ಇಹ-ಇಲ್ಲಿಗೆ, ಆಗತಃ-ಬಂದೆಯೋ. ತಸ್ಯ-ಅಂಥಾ, ತೇ-ನಿನ್ನ. ಕೃತಂ-ಕಾರ್ಯವು, ಗರ್ಹ್ಯಂ-ನಿಂದಿಸತಕ್ಕದ್ದು, ಅಹೋ-ಆಶ್ಚರ್ಯವು, ಇಹ-ಈಗ, ಸ್ವಸ್ತಿ-ಕ್ಷೇಮವು, ಭವೇತ್ಕಚ್ಚಿತ್-ಆಗುವದೋ ಏನು ||೧೮|| || ಹೇವೀರ-ಎಲೈ ಶೂರನೇ, ಮೇ-ನನಗೆ, ಸಂಶಯಃ-ಸಂಶಯವು, ನಾಸ್ತಿ-ಇಲ್ಲ, ಸರ್ವಥಾ-ಸರ್ವಪ್ರಕಾರದಲ್ಲಿಯೂ. ಜನಕಾತ್ಮಜಾ-ಸೀತಾದೇವಿಯು, ವನಚಾರಿಭಿಃ-ಅರಣ್ಯವಾಸಿಗಳಾದ, ರಾಕ್ಷಸೈಃ-ರಕ್ಕಸರಿಂದ, ವಿನಷ್ಟಾ-ಕೊಲ್ಲಲ್ಪಟ್ಟಳು, ಭಕ್ಷಿತಾವಾಪಿ-ತಿನ್ನಲಾದರೂ ತಿನಲ್ಪಟ್ಟಳು, ಮೇ-ನನಗೆ, ಯಥಾ-ಹ್ಯಾಗೆ, ಅಶುಭಾನ್ಯೇವ-ದುಷ್ಟಶಕುನಗಳೇ, ಭೂಯಿಷ್ಠಂ-ಬಹಳವಾಗಿ, ಪ್ರಾದುರ್ಭವಂತಿ-ಹುಟ್ಟುತ್ತಿರುವವು ||೨೦|| ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ಹೇಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಮೃಗಸಂಘಾಃ-ಜಿಗರಿಗಳ ತಂಡಗಳೂ, ಯಥಾ-ಹ್ಯಾಗೆ, ವಾಶ್ಯಂತೇ-ಕೂಗುತ್ತವೋ, ಗೋಮಾಯುಶ್ಚೈವ-ದೊಡ್ಡನರಿಯೂ, ಶಕುನಾಶ್ಚಾಪಿ-ಪಕ್ಷಿಗಳೂ, ಪ್ರದೀಪ್ತಾಂ-ಹೊಳೆಯುತ್ತಿರುವ. ದಿಶಂ-ಪೂರ್ವದಿಕ್ಕಿಗೆ, ಅಭಿತಃ-ಎದುರಾಗಿ, ಭೈರವಂ-ಭಯಂಕರವಾಗಿ. ವಾಶ್ಯಂತೇ-ಕೂಗುತ್ತವೋ. ತಥಾ-ಹಾಗೆಯೇ, ಜೀವಂತ್ಯಾಃ-ಬದುಕಿರುವ, ಜನಕಸ್ಯ-ಜನಕಮಹಾರಾಯನ, ಸುತಾಯಾಃ-ಕುವರಿಯಾದ. ಸೀತಾಯಾಃ-ಸೀತಾದೇವಿಯ, ಸಾಮಗ್ರ್ಯಂ-ಸಂಪೂರ್ಣಕ್ಷೇಮವನ್ನು, ಪ್ರಾಪ್ನುಯಾವಹೇಅಪಿ-ಹೊಂದುವೆವೋ ಏನು ||೨೧|| ಹೇಮಹಾಬಲ-ಎಲೈ ಬಹಳ ಬಲಶಾಲಿಯೇ, ತಸ್ಯಾಃ-ಆ, ರಾಜಪುತ್ರ್ಯಾಃ-ರಾಜಕುವರಿಯಾದ ಸೀತಾದೇವಿಗೆ, ಸ್ವಸ್ತಿ-ಕುಶಲವು, ಭವೇದಪಿ-ಆಗುವದೋ ಏನು ||೨೨|| || ಇದಂಹಿರಕ್ಷಃ-ಈ ರಾಕ್ಷಸನು, ಮೃಗಸನ್ನಿಕಾಶಂ-ಮೃಗದಂತೆಹೊಳೆಯುವವ

---

ತನ್ನ ಸಮೀಪಕ್ಕೆ ದೈನ್ಯದಿಂ ಬರುತ್ತಿರುವ ಲಕ್ಷ್ಮಣನಂ ಕಂಡನು. ಈ ರೀತಿಯಲ್ಲಿ ಲಕ್ಷ್ಮಣನುಬಂದು ಶ್ರೀರಾಮನಸಂಗಡ ಸೇರಿದವನಾಗಲು, ಅಣ್ಣನಾದ ಶ್ರೀರಾಮನು ವಿಜನವಾಗಿಯೂ, ರಾಕ್ಷಸರಿಂದ ಸೇವಿಸಲ್ಪಡುವದಾಗಿಯೂ ಸಹಾ ಇರುವ ಆ ಅರಣ್ಯದಲ್ಲಿ ಸೀತಾದೇವಿಯಂಬಿಟ್ಟು ಬಂದವನಾದ ಲಕ್ಷ್ಮಣನನ್ನು ನಿಂದಿಸುವನದೆಂತೆನೆ ರಘುಕುಲೋತ್ಪನ್ನನಾದ ಶ್ರೀರಾಮನು ಆ ಕಾಲಕ್ಕೆ ಕಠಿಣವಾಗಿ ತೋರುವದಾಗಿಯೂ, ಮುಂದು ಶುಭವನ್ನುಂಟುಮಾಡುವದಾಗಿಯೂ ಇರುವ ಈ ಮಾತಂ ಹೇಳಿದನು ||೧೭|| ಏನಂದರೆ,—ಎಲೈ ಲಕ್ಷ್ಮಣನೇ! ಜನಕರಾಯನ ಪುತ್ರಿಯಾದ ಸೀತಾದೇವಿಯನ್ನು ವಿಜನವಾದ ಅರಣ್ಯದಲ್ಲಿ ಓರ್ವಳನ್ನೇ ಬಿಟ್ಟು ಇಲ್ಲಿಗೆ ಬಂದದ್ದು ನಿಂದಿತವಾಗಿಯೂ ಆಶ್ಚರ್ಯಕರವಾಗಿಯೂ ಸಹಾ ಇರುವದು ಈಗ ಆಕೆಯು ಕ್ಷೇಮದಿಂದಿರುವಳೋ ಇಲ್ಲವೋ ಯೇನೋ, ಎಂತಾದರೂ ಆ ದೇವಿಯು ನಿಶ್ಚಯವಾಗಿ ವನವಾಸಿಗಳಾದ ರಾಕ್ಷಸರಿಂದ ಭಕ್ಷಿಸಲ್ಪಟ್ಟಿರಬಹುದು, ನನಗೆ ದುಶ್ಶಕುನಗಳೆ ಅನೇಕವಾಗಿ ಕಾಣುತಲಿವೆ; ಇದಲ್ಲದೆ ಮೃಗ ಸಮೂಹಗಳು ನರಿಗಳು ಪಕ್ಷಿಗಳು ಬಹು ಭಯಂಕರವಾಗಿ ಕೂಗುವವು, ಸೀತಾದೇವಿಯು ಕ್ಷೇಮವಾಗಿರುವಳೋ ಇಲ್ಲವೋ. ಈ ರಾಕ್ಷಸನು ಮೃಗರೂಪವನ್ನೈದಿ ನನ್ನನ್ನು ಅತಿದೂರವಾಗಿ ಸೆಳೆದುಕೊಂಡು ಬಂದು ನನ್ನನ್ನು ವಂಚಿಸಿ ನನ್ನಿಂದಲೆ ಅತಿಪ್ರಯಾಸದಿಂದ ಹೊಡೆಯು

ಪುತ್ರಾಃ ಮಹಾಬಲ ॥೨೨॥ ಇದಂಹಿರಕ್ಷೋಮೃಗಸನ್ನಿಕಾಶಂಪ್ರಲೋಭ್ಯಮಾಂದೂರಮನುಪ್ರಯಾಂತಂ । ಹತಂಕ
ಥಂಚಿನ್ಮಹತಾಶ್ರಮೇಣಸರಾಕ್ಷಸೋಭೂನ್ಮ್ರಿಯಮಾಣಏವ ॥೨೩॥ ಮನಶ್ಚಮೇದೀನಮಿಹಾಪ್ರಹೃಷ್ಟಂಚಕ್ಷು
ಶ್ಚಸವ್ಯಂಕುರುತೇವಿಕಾರಂ । ಅಸಂಶಯಂಲಕ್ಷ್ಮಣನಾಸ್ತಿಸೀತಾಹೃತಾಮೃತಾವಾಪಥಿವರ್ತತೇವಾ ॥೨೪॥

—**ಇತಿಶ್ರೀಮದಾರಣ್ಯಕಾಂಡೇ-ಸಪ್ತಪಂಚಾಶಸ್ಸರ್ಗಃ**—

ಸದೃಷ್ಟ್ವಾಲಕ್ಷ್ಮಣಂದೀನಂಶೂನ್ಯೇದಶರಥಾತ್ಮಜಃ।ಪರ್ಯಪೃಚ್ಛತಧರ್ಮಾತ್ಮಾವೈದೇಹೀಮಾಗತಂವಿನಾ॥೧॥
ಪ್ರಸ್ಥಿತಂದಂಡಕಾರಣ್ಯಂಯಾಮಾಮನುಜಗಾಮಹ । ಕ್ವಸಾಲಕ್ಷ್ಮಣವೈದೇಹೀಯಾಂಹಿತ್ವಾತ್ವಮಿಹಾಗತಃ ॥೨॥
ರಾಜ್ಯಭ್ರಷ್ಟಸ್ಯದೀನಸ್ಯದಂಡಕಾನ್ಪರಿಧಾವತಃ । ಕ್ವಸಾದುಃಖಸಹಾಯಾಮೇವೈದೇಹೀತನುಮಧ್ಯಮಾ ॥೩॥
ಯಾಂವಿನಾನೋತ್ಸಹೇವೀರಮುಹೂರ್ತಮಪಿಜೀವಿತುಂ । ಕ್ವಸಾಪ್ರಾಣಸಹಾಯಾಮೇಸೀತಾಸುರಸುತೋಪಮಾ ॥೪॥

ನಾಗಿ, ದೂರಂ-ಬಹಳ ದೂರವಾಗಿ, ಅನುಪ್ರಯಾಂತಂ-ಅನುಸರಿಸಿಕೊಂಡು ಹೋಗುತ್ತಿರುವ, ಮಾಂ-ನನ್ನನ್ನು, ಪ್ರಲೋಭ್ಯ-ಭ್ರಮಿಸುವ ಹಾಗೆಮಾಡಿ, ಮಹತಾ-ಬಹಳವಾದ, ಶ್ರಮೇಣ-ದೇಹಾಯಾಸದಿಂದ, ಕಥಂಚಿತ್-ಅತಿಪ್ರಯಾಸದಿಂದ, ಹತಂ-ಹೊಡೆಯಲ್ಪಟ್ಟವನಾಗಿ, ಮ್ರಿಯಮಾಣಏವ-ಮರಣವಂ ಹೊಂದುತ್ತಿರುವನಾಗಿಯೆ, ಸರಾಕ್ಷಸಃ-ಆ ಮಾರೀಚನೆಂಬ ರಕ್ಕಸನು, ಅಭೂತ್-ಆದನು ॥೨೩॥ ಮೇ-ನನ್ನ, ಮನಃ-ಮನವು, ಇಹ-ಈಗ, ದೀನಂ-ದೈನ್ಯವಂ ಪೊಂದಿದ್ದಾಗಿ. ಅಪ್ರಹೃಷ್ಟಂ-ಸಂತೋಷವಿಲ್ಲದಹಾಗಿಧೆ, ಸವ್ಯಂಚಕ್ಷುಃ-ಎಡಗಣ್ಣೂ, ವಿಕಾರಂ-ಚಾಂಚಲ್ಯವನ್ನು, ಕುರುತೆ-ಮಾಡುತ್ತದೆ, ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಸೀತಾ-ಸೀತಾದೇವಿಯು, ನಾಸ್ತಿ-ಇಲ್ಲ, ಹೃತಾವಾ-ಅಪಹರಿಸಲ್ಪಟ್ಟಳೋ, ಅಥವಾ-ಹಗಲ್ಲದಿದ್ದೊಡಂ, ಮೃತಾವಾ-ಮರಣವಂ ಹೊಂದಿದಳೋ, ಪಥಿ-ಮಾರ್ಗದಲ್ಲಿ, ವರ್ತತೇವಾ-ತಿರುಗುತ್ತಾಳೆಯೋ ಏನೋ. ಅಸಂಶಯಂ-ಸಂಶಯವಿಲ್ಲ॥

—**ಇತಿಶ್ರೀಮದಾರಣ್ಯಕಾಂಡೇ-ಸಪ್ತಪಂಚಾಶಸ್ಸರ್ಗಃ**—

ದಶರಥಾತ್ಮಜಃ-ದಶರಥನಕುವರನಾದ, ಧರ್ಮಾತ್ಮಾ-ಧರ್ಮದಲ್ಲೇ ಬುದ್ಧಿಯುಳ್ಳ, ಸಃ-ಆ ಶ್ರೀರಾಮನು, ಶೂನ್ಯೇ-ವಿಜನವಾದ ಆಶ್ರಮದಲ್ಲಿ, ವೈದೇಹೀಂವಿನಾ-ಸೀತಾದೇವಿಯನ್ನು ವಿನಾಹಿಸಿ. ಆಗತಂ-ಬಂದಿರುವ. ದೀನಂ-ಮುಗ್ಗಿಹೋದ, ಲಕ್ಷ್ಮಣಂ-ಲಕ್ಷ್ಮಣನನ್ನು, ದೃಷ್ಟ್ವಾ-ಕಂಡು, ಪರ್ಯಪೃಚ್ಛತ-ಕೇಳಿದನು ॥೧॥ ಹೆಲಕ್ಷ್ಮಣ-ಎಲೋ ಲಕ್ಷ್ಮಣನೇ, ದಂಡಕಾರಣ್ಯಂ-ದಂಡಕಾರಣ್ಯವಂಕುರಿತು, ಪ್ರಸ್ಥಿತಂ-ಹೊರಟುಬಂದ, ಮಾಂ-ನನ್ನನ್ನು, ಯಾ-ಯಾವ ಸೀತಾದೇವಿಯು. ಅನುಜಗಾಮಹ-ಅನುಸರಿಸಿಬಂದಳೋ, ಇಹ-ಈಗ, ತ್ವಂ-ನೀನು, ಯಾಂ-ಯಾವ ಸೀತಾದೇವಿಯನ್ನು, ಹಿತ್ವಾ-ಬಿಟ್ಟು. ಆಗತಃ-ಬಂದೆಯೋ, ಸಾವೈದೇಹೀ-ಆ ಸೀತಾದೇವಿಯು, ಕ್ವ-ಎಲ್ಲಿ ॥೨॥ ರಾಜ್ಯಭ್ರಷ್ಟಸ್ಯ-ಬಿಡಲ್ಪಟ್ಟ ರಾಜ್ಯವುಳ್ಳ, ದೀನಸ್ಯ-ದರಿದ್ರನಾದ, ದಂಡಕಾನ್-ದಂಡಕಾರಣ್ಯದಲ್ಲಿ, ಪರಿಧಾವತಃ-ಓಡ್ಯಾಡುತ್ತಿರುವ, ಮೇ-ಯನಗೆ. ದುಃಖಸಹಾಯಾ-ದುಃಖಕಾಲದಲ್ಲಿ ಸಹಾಯಭೂತಳಾದ, ತನುಮಧ್ಯಮಾ-ಸೂಕ್ಷ್ಮವಾದ ಮಧ್ಯಪ್ರದೇಶವುಳ್ಳ, ಸಾವೈದೇಹೀ-ಆ ಸೀತಾದೇವಿಯು, ಕ್ವ-ಎಲ್ಲಿ ॥೩॥ ಹೆವೀರ-ಎಲೈ ಶೂರನೇ, ಯಾಂವಿನಾ-ಯಾವ ಸೀತಾದೇವಿಯು ಹೊರತು, ಮುಹೂರ್ತಮಪಿ-ಎರಡುಘಳಿಗೆ ಕಾಲವಾದರೂ, ಜೀವಿತುಂ-ಬದುಕುವದಕ್ಕೋಸುಗ, ನೋತ್ಸಹೆ-ಉತ್ಸಾಹನಾಗಲಾರೆನೋ, ಮೇ-ನನಗೆ, ಪ್ರಾಣಸಹಾಯಾ-ಪ್ರಾಣಗಳಿಗೆ ಸಮಾನಳಾದ, ಸುರಸುತೋಪಮಾ-ದೇವಕನ್ಯಕೆಗೆ ಸಮಾನಳಾದ, ಸಾ-ಆ ಸೀತಾದೇವಿಯು, ಕ್ವ-ಎಲ್ಲಿ ॥೪॥ ಹೆಲಕ್ಷ್ಮಣ-ಎಲಾ ಲಕ್ಷ್ಮಣನೇ, ತಪನೀಯಾಭಾಂ-ಭಂಗಾರಿನ ಬಣ್ಣದಂತೆ ಕಾಂತಿಯುಳ್ಳ, ಜನಕಾತ್ಮಜಾಂ-ಜನಕರಾಜನ

ಲ್ಪಟ್ಟನು, ಆಗ ತನ್ನ ರೂಪವನ್ನೈದಿದನು, ಈಗ ನನ್ನ ಮನವು ಬಹು ದೈನ್ಯವನ್ನೈದಿದ್ದಾಗಿ ಅಸಂತುಷ್ಟವಾಗಿಧೆ; ಇದಲ್ಲದೆ ಯೆಡಗಣ್ಣು ಚಲಿಸುವದು, ಆದ್ದರಿಂದಾ ಸೀತಾದೇವಿಯು ರಾಕ್ಷಸರಿಂದ ಅಪಹರಿಸಲ್ಪಟ್ಟಳೋ, ಅಥವಾ ಮರಣವನ್ನೈದಿದಳೋ ಮಾರ್ಗದಲ್ಲಿಯೇ ಇರುವಳೋ ಯೇನೋ, ಈ ವಿಷಯದಲ್ಲಿ ಸಂದೇಹವಿಲ್ಲ ॥೨೪॥

—* ಆರಣ್ಯಕಾಂಡದಲ್ಲಿನ ೫೭ ನೇ ಸರ್ಗಂ ಮುಗಿದುದು *—

ಅನಂತರದಲ್ಲಿ ದಶರಥ ಪುತ್ರನಾದ ಮಹಾ ಧರ್ಮಿಷ್ಠನಾದ ಶ್ರೀರಾಮನು ವಿಜನವಾಗಿರುವ ತನ್ನ ಆಶ್ರಮದಲ್ಲಿ ಸೀತಾದೇವಿಯಂ ಬಿಟ್ಟು ಬಂದವನಾದ ಲಕ್ಷ್ಮಣನನ್ನು ಕೇಳುವನದೆಂತೆನೆ,—ಎಲೈ ಲಕ್ಷ್ಮಣನೇ! ದಂಡಕಾರಣ್ಯವಂ ಕುರಿತು ಹೊರಟುಬಂದ ನನ್ನನ್ನು ಯಾವ ಸೀತಾದೇವಿಯು. ಅನುಸರಿಸಿಬಂದಳೋ, ನೀನು ಯಾವಾಕೆಯನ್ನು ಬಿಟ್ಟು ಬಂದವನಾದೆಯೋ, ಅಂಥಾ ಸೀತಾದೇವಿಯು ಯೆಲ್ಲಿರುವಳು? ॥೨॥ ರಾಜ್ಯಭ್ರಷ್ಟನಾಗಿ ದಾರಿದ್ರ್ಯವನ್ನೈದಿ ದಂಡಕಾರಣ್ಯದಲ್ಲಿ ತಿರುಗಾಡುವ ನನ್ನ ಸುಖದುಃಖಂಗಳನ್ನು ಅನುಭವಿಸುವ ಮತ್ತೂ ಸೂಕ್ಷ್ಮವಾದ ಮಧ್ಯಪ್ರದೇಶವುಳ್ಳ ಆ ಸೀತಾದೇವಿಯು ಯೆಲ್ಲಿರುವಳು? ॥೩॥ ಎಲೈ ಶೂರನೇ! ಯಾವ ಸೀತಾದೇವಿಯಂ ಬಿಟ್ಟು ಮುಹೂರ್ತವಾದರೂ ಜೀವಿಸಲಾರೆನೋ, ಅಂಥಾ ಪ್ರಾಣಪ್ರಿಯಳಾದ ಸೀತಾದೇವಿಯು ಯೆಲ್ಲಿಧಾಳೆ?ಪೇಳುವವನಾಗು, ಎಲೊಎಲೋ, ಅಪ್ಪ, ಲಕ್ಷ್ಮಣನೇ! ಸುವರ್ಣದ ಬಣ್ಣದಂತೆ ಬಣ್ಣವುಳ್ಳ ಆ ದೇವಿಯು ಹೊರತು

ಪತಿತ್ವಮಮರಾಣಾಂವಾಪೃಥಿವ್ಯಾಶ್ಚಾಪಿಲಕ್ಷ್ಮಣ । ತಾಂವಿನಾತಪನೀಯಾಭಾಂನೇಚ್ಛೇಯಂಜನಕಾತ್ಮಜಾಂ ।೫॥
ಕಚ್ಚಿಜ್ಜೀವತಿವೈದೇಹೀಪ್ರಾಣೈಃಪ್ರಿಯತರಾಮಮ । ಕಚ್ಚಿತ್ಪ್ರವ್ರಾಜನಂಸೌಮ್ಯನಮೇಮಿಥ್ಯಾಭವಿಷ್ಯತಿ ।೬।
ಸೀತಾನಿಮಿತ್ತಂಸೌಮಿತ್ರೇಮೃತೇಮಯಿಗತೇತ್ವಯಿ । ಕಚ್ಚಿತ್ಸಕಾಮಾಸುಖಿತಾಕೈಕೇಯೀಸಾಭವಿಷ್ಯತಿ ।೭॥
ಸಪುತ್ರರಾಜ್ಯಾಂಸಿದ್ಧಾರ್ಥಾಂಮೃತಪುತ್ರಾತಪಸ್ವಿನೀ । ಉಪಸ್ಥಾಸ್ಯತಿಕೌಸಲ್ಯಾಕಚ್ಚಿತ್ಸೌಮ್ಯೇನಕೈಕಯೀಂ॥೮॥
ಯದಿಜೀವತಿವೈದೇಹೀಗಮಿಷ್ಯಾಮ್ಯಾಶ್ರಮಂಪುನಃ। ಸುವೃತ್ತಾಯದಿವೃತ್ತಾಸಾಪ್ರಾಣಾಂಸ್ತ್ಯಕ್ಷ್ಯಾಮಿಲಕ್ಷ್ಮಣ॥೯॥
ಯದಿಮಾಮಾಶ್ರಮಗತಂವೈದೇಹೀನಾಭಿಭಾಷತೇ । ಪುನಃಪ್ರಹಸಿತಾಸೀತಾವಿನಶಿಷ್ಯಾಮಿಲಕ್ಷ್ಮಣ ।೧೦। ಬ್ರೂಹಿಲ
ಕ್ಷ್ಮಣವೈದೇಹೀಯದಿಜೀವತಿವಾನವಾ । ತ್ವಯಿಪ್ರಮತ್ತೇರಕ್ಷೋಭಿರ್ಭಕ್ಷಿತಾವಾತಪಸ್ವಿನೀ ।೧೧। ಸುಕುಮಾರೀಚ
ಬಾಲಾಚನಿತ್ಯಂಚಾದುಃಖದರ್ಶಿನೀ । ಮದ್ವಿಯೋಗೇನವೈದೇಹೀವ್ಯಕ್ತಂಶೋಚತಿದುರ್ಮನಾಃ ।೧೨॥ ಸರ್ವದಾರಕ್ಷ

ಕುವರಿಯಾದ. ತಾಂವಿನಾ–ಆ ಸೀತಾದೇವಿಯ ಹೊರತು. ಪೃಥಿವ್ಯಾಃ–ಭೂಮಂಡಲಕ್ಕೆ. ಅಮರಾಣಾಂವಾ–ದೇವತೆಗಳಿಗಾದರೂ, ಪತಿತ್ವಮಪಿ–ಪ್ರಭುತ್ವ ವನ್ನೂಕೂಡ. ನೇಚ್ಛೇಯಂ–ಇಚ್ಛಿಸಲಾರೆನು ॥೫॥ ಮಮ–ನನಗೆ, ಪ್ರಾಣೈಃ–ಪ್ರಾಣಗಳಿಗಿಂತಲೂ, ಪ್ರಿಯತರಾ–ಬಹಳ ಪ್ರಿಯಳಾದ ವೈದೇಹೀ–ಸೀತಾದೇವಿಯು ಜೀವತಿಕಚ್ಚಿತ್–ಬದುಕಿರುವಳೋ ಏನು. ಹೇಸೌಮ್ಯ–ಎಲೈ ಪ್ರಸನ್ನನೇ, ಮೇ–ನನ್ನ, ಪ್ರವ್ರಾಜನಂ–ವನವಾಸವು. ಮಿಥ್ಯಾ–ಅಪದ್ಧವು, ನಭವಿಷ್ಯತಿಕಚ್ಚಿತ್–ಆಗದೇಯಿರುವದೋ ಏನು ॥೬॥ ಹೇಸೌಮಿತ್ರೇ–ಎಲೈ ಲಕ್ಷ್ಮಣನೇ. ಮಯಿ–ನಾನು, ಸೀತಾನಿಮಿತ್ತಂ–ಸೀತಾನಿಮಿತ್ತವಾಗಿ. ಮೃತೇಸತಿ–ನಿವೃತ್ತನಾಗುತ್ತಿರಲೀಕಾಗಿ. ತ್ವಯಿ–ನೀನು. ಗತೇಸತಿ–ಅಯೋಧ್ಯಾಪಟ್ಟಣವಂಕುರಿತು ಹೋಗಲೀಕಾಗಿ, ಸಾಕೈಕೇಯೀ–ಆ ಕೈಕೆಯಿದೇವಿಯು. ಸಕಾಮಾ–ಕೋರಿಕೆಯಿಂದೊಡಗೂಡಿದವಳಾಗಿ. ಸುಖಿತಾ–ಸುಖವುಳ್ಳವಳು, ಭವಿಷ್ಯತಿಕಚ್ಚಿತ್–ಆಗುವಳೋ ಯೇನು ॥೭॥ ಮೃತಪುತ್ರಾ–ಮೃತನಾದ ಪುತ್ರನುಳ್ಳ, ತಪಸ್ವಿನೀ–ದೀನಳಾದ. ಕೌಸಲ್ಯಾ–ಕೌಸಲ್ಯಾದೇವಿಯು. ಸಪುತ್ರರಾಜ್ಯಾಂ–ಮಗನಿಂದಲೂ ರಾಜ್ಯದಿಂದಲೂ ಕೂಡಿರುವ, ಸಿದ್ಧಾರ್ಥಾಂ–ನಿಷ್ಪನ್ನವಾದ ಪ್ರಯೋಜನವುಳ್ಳ, ಕೈಕೇಯೀಂ–ಕೈಕೇಯಿದೇವಿಯನ್ನು, ಸೌಮ್ಯೇನ–ವಿನಯದಿಂದ. ಉಪಸ್ಥಾಸ್ಯತಿಕಚ್ಚಿತ್–ಸೇವಿಸುವಳೋ ಯೇನು ॥೮॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಸುವೃತ್ತಾ–ಸಚ್ಚರಿತ್ರೆಯುಳ್ಳ. ವೈದೇಹೀ–ವಿದೇಹರಾಜನಕುವರಿಯಾದ, ಸಾ–ಆ ಸೀತಾದೇವಿಯು, ಜೀವತಿಯದಿ–ಬದುಕಿರುವಳೇ ಆದರೆ. ಪುನಃ–ಮತ್ತು, ಆಶ್ರಮಂ–ಆಶ್ರಮವಂಕುರಿತು, ಗಮಿಷ್ಯಾಮಿ–ಹೋಗುವೆನು, ವೃತ್ತಾಯದಿ–ಸತ್ತವಳೇ ಆದರೆ, ಪ್ರಾಣಾನ್–ಜೀವಗಳನ್ನು, ತ್ಯಕ್ಷ್ಯಾಮಿ–ಬಿಡುವೆನು ॥೯॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ವೈದೇಹೀ–ಜನಕರಾಯನ ಪುತ್ರಿಯಾದ, ಸೀತಾ–ಸೀತಾದೇವಿಯು, ಪುನಃ–ಮತ್ತು. ಆಶ್ರಮಗತಂ–ಆಶ್ರಮವಂಕುರಿತು ಬಂದಿರುವ, ಮಾಂ–ನನ್ನನ್ನುಕುರಿತು, ಪ್ರಹಸಿತಾ–ನಕ್ಕವಳಾಗಿ, ನಾಭಿಭಾಷತೆಯದಿ–ಮಾತನಾಡಿದವಳಾಗದೇ ಹೋದರೆ, ವಿನಶಿಷ್ಯಾಮಿ–ನಶಿಸಿಹೋಗುವೆನು ॥೧೦॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ. ವೈದೇಹೀ–ಸೀತಾದೇವಿಯು, ಯದಿ–ಆದರೆ, ಜೀವತಿವಾನವಾ–ಬದುಕಿರುವಳೋ ಇಲ್ಲವೋ, ತ್ವಯಿ–ನೀನು. ಪ್ರಮತ್ತೇಸತಿ–ಅಜಾಗ್ರತೆವಂತನಾಗುತ್ತಿರಲೀಕಾಗಿ, ತಪಸ್ವಿನೀ–ದೀನಳಾದ ಸೀತಾದೇವಿಯು, ಭಕ್ಷಿತಾವಾ–ಭಕ್ಷಿಸಲ್ಪಟ್ಟಳೋ ಏನು, ಬ್ರೂಹಿ–ಹೇಳು ॥೧೧॥ ಸುಕುಮಾರೀಚ–ಮೃದುಸ್ವಭಾವವುಳ್ಳ, ಬಾಲಾಚ–ಹುಡುಗಿಯಾದ, ನಿತ್ಯಂ–ನಿರಂತರವೂ, ಅದುಃಖದರ್ಶಿನೀ–ದುಃಖವಂ ಕಾಣದಿರುವ, ವೈದೇಹೀ–ಸೀತಾದೇವಿಯು, ಮದ್ವಿಯೋಗೇನ–ನನ್ನ ವಿರಹದಿಂದ. ದುರ್ಮನಾಃ–ದುಃಖಯುಕ್ತವಾದ ಮನವುಳ್ಳವಳಾಗಿ, ಶೋಚತಿ–ಅಳುತ್ತಾಳೆ. ವ್ಯಕ್ತಂ–ಸ್ಪಷ್ಟವೂ ॥೧೨॥ ಸರ್ವಥಾ–ಸರ್ವಪ್ರಕಾರದಲ್ಲಿಯೂ. ಜಿಷ್ಣೇನ–

ಭೂಮಂಡಲಕ್ಕಾಗಲೀ, ದೇವತೆಗಳಿಗಾಗಲೀ ಪತಿಯಾಗುವಣವನ್ನು ನಾನು ಇಚ್ಛಿಸತಕ್ಕವನಲ್ಲ॥೫। ಎನ್ನಪ್ರಾಣಕಾಂತೆಯಾದ ಆ ದೇವಿಯು ಬದುಕಿರುವಳೇ ಏನು? ನನ್ನ ಪ್ರವಾಸವು ಅಸತ್ಯವಾಗದಿರುವದೆ? ನಾನು ಸೀತಾದೇವಿಗಾಗಿ ಹೊರಟುಬಂದವನಾಗಲೂ, ಮತ್ತೂ ನೀನು ನನ್ನ ವಿನಹಾ ಅಯೋಧ್ಯಾಪುರಪ್ರವೇಶಂ ಗೈದವನಾಗಲೂ, ಆ ಕೈಕೇಯಿದೇವಿಯು ಸಫಲವಾದ ಮನೋರಥವುಳ್ಳವಳಾಗಿ ಸುಖಿತಳಾಗುವಳೋ ಏನೋ, ಮತ್ತೂ ನನ್ನತಾಯಿಯಾದ ಕೌಸಲ್ಯಾದೇವಿಯು ಪುತ್ರನಿಂದಲೂ ರಾಜ್ಯದಿಂದಲೂ ಸಹಾ ಸಂಪನ್ನಳಾದ ಆ ಕೈಕೇಯಿದೇವಿಯನ್ನು ವಿನಯದಿಂದ ಅನುಸರಿಸುತಲಿರುವಳೋ ಇಲ್ಲವೋ ॥೮। ಎಲೈ ಲಕ್ಷ್ಮಣನೇ! ಸಚ್ಚರಿತ್ರೆಯುಳ್ಳ ಆ ವಿದೇಹರಾಜನ ಮಗಳಾದ ಸೀತಾದೇವಿಯು ಜೀವಿಸಿರುವವಳೇ ಆದರೆ, ನಾನು ಪುನಃ ಆಶ್ರಮಪ್ರದೇಶವನ್ನು ಪೊಂದುವೆನು, ಇಲ್ಲದಿದ್ದರೆ ಪ್ರವೇಶಂಗೈಯ್ಯುವದೇ ಇಲ್ಲ, ಆ ರಾಜಪುತ್ರಿಯಾದ ಸೀತಾದೇವಿಯು ಆಶ್ರಮವನ್ನೈದಿದನನ್ನನ್ನು ದ್ವೇಸಿಸಿ ನಸುನಗುತಾ ನನ್ನನ್ನು ಮಾತಾಡಿಸಡಿದ್ದರೆ ನಾಶವನ್ನೈದುವೆನು, ಆದರೆ,— ಆ ದೇವಿಯು ಈಗ ಬದುಕಿರುವಳೋ ಇಲ್ಲವೋ ನೀನೀಪರಿ ಅಜಾಗ್ರತೆಯಾಗಿರಲೂ ಆ ದೇವಿಯುದೀನಳಾಗಿ ರಾಕ್ಷಸರಿಂದ ಗ್ರಾಸಂಗೈಯ್ಯಲ್ಪಟ್ಟಿರಬಹುದು, ಪೇಳುವವನಾಗು ।೧೧॥ ಮೃದುವಾದ ಸ್ವಭಾವವುಳ್ಳವಳಾಗಿಯೂ, ಹುಡುಗಿಯಾಗಿಯೂ ನನ್ನ ವಿಯೋಗದಿಂದದುಃಖವನ್ನೈದಿದವಳಾಗಿಯೂ ಸಹಾ ಇರುವವಳಾಗಿ ಸ್ಪಷ್ಟವಾಗಿ ದುಃಖಿಸುವಳು ।೧೨॥

ನಾತೇನಜಿಹ್ಮೇನಸುದುರಾತ್ಮನಾ । ವದತಾಲಕ್ಷ್ಮಣೇತ್ಯುಚ್ಚೈಸ್ತವಾಪಿಜನಿತಂಭಯಂ ॥೧೩॥ ಶ್ರುತಸ್ತುಶಂಕೆವೈದೆ ಹ್ಯಾಸ್ಸ್ವರಸ್ಸದೃಶೋಮಮ । ತ್ರಸ್ತಯಾಪ್ರೇಷಿತಸ್ತ್ವಂಚದ್ರಷ್ಟುಂಮಾಂಶೀಘ್ರಮಾಗತಃ ॥ ೧೪ ॥ ಸರ್ವಥಾತು ಕೃತಂಕಷ್ಟಂಸೀತಾಮುತ್ಸೃಜತಾವನೇ । ಪ್ರತಿಕರ್ತುಂನೃಶಂಸಾನಾಂರಕ್ಷಸಾಂದತ್ತಮಂತರಂ ॥೧೫॥ ದುಃಖಿತಾಃ ಖರಘಾತೇನರಾಕ್ಷಸಾಃಪಿಶಿತಾಶನಾಃ । ತೈಸ್ಸೀತಾನಿಹತಾಘೋರೈರ್ಭವಿಷ್ಯತಿನಸಂಶಯಃ ॥೧೬॥ ಅಹೋಸ್ಮಿನ್ವ್ಯಸನೇ ಮಗ್ನಸ್ಸರ್ವಥಾಶತ್ರುಸೂದನ । ಕಿನ್ನ್ವಿದಾನೀಂಕರಿಷ್ಯಾಮಿಶಂಕೆಪ್ರಾಪ್ತವ್ಯಮೀದೃಶಂ ॥೧೭॥ ಇತಿಸೀತಾಂವರಾ ರೋಹಾಂಚಿಂತಯನ್ನೇವರಾಘವಃ । ಆಜಗಾಮಜನಸ್ಥಾನಂತ್ವರಯಾಸಹಲಕ್ಷ್ಮಣಃ ॥೧೮॥ ವಿಗರ್ಹಮಾಣೋನುಜ ಮಾರ್ತರೂಪಂಕ್ಷುಧಾಶ್ರಮಾಚ್ಚೈವಪಿಪಾಸಯಾಚ । ವಿನಿಶ್ವಸನ್ಶುಷ್ಕಮುಖೋವಿವರ್ಣಃಪ್ರತಿಶ್ರಯಂಪ್ರಾಪ್ಯ

---

ಕಪಟಿಯಾದ. ದುರಾತ್ಮನಾ-ದುಷ್ಟಮನವುಳ್ಳ, ಹೇಲಕ್ಷ್ಮಣೇತಿ-ಎಲೈ ಲಕ್ಷ್ಮಣನೇ ಎಂದು, ಉಚ್ಚೈಃ-ಘಟ್ಟಿಯಾಗಿ, ವದತಃ-ಹೇಳುತ್ತಿರುವ, ತೇನ ರಕ್ಷಸಾ-ಆ ಮಾರೀಚನಿಂದ ತವಾಪಿ-ನಿನಿಗೂಕೂಡ; ಭಯಂ-ಭೀತಿಯು, ಜನಿತಂ-ಹುಟ್ಟಿಸಲ್ಪಟ್ಟಿತು ॥೧೩॥ ಮಮ-ನನಿಗೆ, ಸದೃಶಃ-ಸಮಾನವಾದ, ಸಸ್ವರಃ-ಆ ಸ್ವರವು, ವೈದೇಹ್ಯಾ-ಸೀತಾದೇವಿಯಿಂದ, ಶ್ರುತಃ-ಕೇಳಲ್ಪಟ್ಟಿತು; ತ್ರಸ್ತಯಾತು-ಭಯಪಟ್ಟ ಆಕೆಯಿಂದಾದರೆ, ಪ್ರೇಷಿತಃ-ಕಳುಹಿಸಲ್ಪಟ್ಟ, ತ್ವಂಚ-ನೀನೂ. ಶೀಘ್ರಂ-ಜಾಗ್ರತೆಯಾಗಿ, ಮಾಂ-ನನ್ನನ್ನು, ದ್ರಷ್ಟುಂ-ನೋಡುವದಕ್ಕೋಸುಗ, ಆಗತಃ-ಬಂದೆ. ಇತಿ-ಇಂತೆಂದು, ಶಂಕೆ-ಊಹಿಸುತ್ತೇನೆ ॥೧೪॥ ಸರ್ವಥಾತು-ಸರ್ವಪ್ರಕಾರದಲ್ಲಿಯೂ, ವನೇ-ಅರಣ್ಯದಲ್ಲಿ. ಸೀತಾ-ಸೀತಾದೇವಿಯನ್ನು. ಉತ್ಸೃಜತಾ-ಬಿಡುತ್ತಿರುವ ನಿನ್ನಿಂದ, ಕಷ್ಟಂ-ಅನುಚಿತಕೃತ್ಯವು, ಕೃತಂ-ಮಾಡಲ್ಪಟ್ಟಿತು, ನೃಶಂಸಾನಾಂ-ಘಾತುಕರಾದ, ರಕ್ಷಸಾಂ-ರಕ್ಕಸರಿಗೆ, ಪ್ರತಿಕರ್ತುಂ-ಅಪಕಾರಮಾಡುವದಕ್ಕೆ, ಅಂತರಂ-ಅವಕಾಶವು, ದತ್ತಂ-ಕೊಡಲ್ಪಟ್ಟಿತು ॥೧೫॥ ಪಿಶಿತಾಶನಾಃ-ಮಾಂಸಭಕ್ಷಕರಾದ. ರಾಕ್ಷಸಾಃ-ರಕ್ಕಸರು, ಖರಘಾತೇನ-ಖರಾಸುರನ ಸಂಹಾರದಿಂದ, ದುಃಖಿತಾಃ-ದುಃಖಗೊಂಡವರಾಗಿದ್ದರು, ಘೋರೈಃ-ಕ್ರೂರರಾದ, ತೈಃ-ಆ ರಕ್ಕಸರಿಂದ, ಸೀತಾ-ಸೀತಾದೇವಿಯು, ನಿಹತಾ-ಕೊಲ್ಲಲ್ಪಟ್ಟವಳು, ಭವಿಷ್ಯತಿ-ಆಗುವಳು, ಸಂಶಯೋನ-ಸಂಶಯವಿಲ್ಲ ॥೧೬॥ ಹೇಶತ್ರುಸೂದನ-ಎಲೈ ಶತ್ರುಸಂಹಾರಕನೇ, ಸರ್ವಥಾ-ಸರ್ವಪ್ರಕಾರದಲ್ಲಿಯೂ, ಅಸ್ಮಿನ್ವ್ಯಸನೇ-ಈ ವ್ಯಸನದಲ್ಲಿ, ಮಗ್ನಃ-ಮುಳುಗಿದವನಾಗಿ, ಇದಾನೀಂ-ಈಕಾಲದಲ್ಲಿ, ಕಿಂಕರಿಷ್ಯಾಮಿ-ಯೇನು ಮಾಡುವೆನು, ಈದೃಶಂ-ಇಂಥಾ ದುಃಖವು ಪ್ರಾಪ್ತವ್ಯಂ-ಅನುಭವಿಸತಕ್ಕದ್ದು, ಇತಿ-ಇಂತೆಂದು, ಶಂಕೆ-ಊಹಿಸುತ್ತೇನೆ ॥೧೭॥ ಇತಿ-ಈಪರಿಯಾಗಿ, ರಾಘವಃ-ಶ್ರೀರಾಮನು, ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದವನಾಗಿ, ವರಾರೋಹಾಂ-ಶ್ರೇಷ್ಠಸ್ತ್ರೀಯಾದ. ಸೀತಾಂ-ಸೀತಾದೇವಿಯನ್ನು, ಚಿಂತಯನ್ನೇವ-ಧ್ಯಾನಮಾಡುತ್ತಿರುವನಾಗಿಯೇ, ತ್ವರಯಾ-ತ್ವರೆಯಿಂದ, ಜನಸ್ಥಾನಂ-ಉತ್ಕಟಸಮೀಪದಲ್ಲಿರುವ ಪಂಚವಟೀತೀರವಂಕುರಿತು, ಆಜಗಾಮ-ಬಂದನು ॥೧೮॥ ಶುಷ್ಕಮುಖಃ-ಬಾಗಿದ ಮುಖವುಳ್ಳವನಾಗಿ, ಆರ್ತರೂಪಂ-ದೀನವಾದಾಕಾರವುಳ್ಳ, ಅನುಜಂ-ತಮ್ಮನನ್ನು, ವಿಗರ್ಹಮಾಣಃ-ನಿಂದಿಸುತ್ತಿರುವನಾಗಿ, ಕ್ಷುಧಾ-ಹಶಿವಿನಿಂದಲೂ. ಶ್ರಮಾಚ್ಚೈವ-ದೇಹಾಯಾಸದಿಂದಲೂ, ಪಿಪಾಸಯಾಚ-ನೀರಡಿಕೆಯಿಂದಲೂ, ವಿನಿಶ್ವಸನ್-ನಿಟ್ಟುಸುರನ್ನು ಬಿಡುತ್ತಿರುವನಾಗಿ ಶೂನ್ಯಂ-ನಿರ್ಜನವಾದ, ಪ್ರತಿಶ್ರಯಂ-ಸ್ವಾಶ್ರಮವನ್ನು, ಪ್ರಾಪ್ಯ-ಹೊಂದಿ, ಸಮೀಕ್ಷ್ಯ-ನೋಡಿ, ವಿವರ್ಣಃ-ಕಾಂತಿಹೀನನಾದವನಾಗಿ, ಸ್ವಂ-ಸ್ವಕೀಯವಾದ, ಆಶ್ರಮಂ-ಪರ್ಣಶಾಲೆಯನ್ನು, ಸಂಪ್ರವಿಗಾಹ್ಯ-ಹೊಕ್ಕು, ಏತತ್-ಇದು, ತತ್-ಅದು, ಇತ್ಯೇವ-ಹೀಗೆಂತಲೇ, ನಿವಾಸಭೂಮೌ-

---

ಹಾಹಾ!! ಮಹಾ ಕಪಟಿಯಾದ ದುರ್ಬುದ್ಧಿಯುಳ್ಳ ಈ ರಾಕ್ಷಸನು, ನನ್ನ ಸ್ವರದಂತೆ ಸ್ವರವುಳ್ಳವನಾಗಿ, ಅಯ್ಯೋ, ಲಕ್ಷ್ಮಣನೇ! ಎಂದು ಘಟ್ಟಿಯಾಗಿ ಕೂಗಿಕೊಂಡನು, ಅದರಿಂದ ನಿನಿಗೂ ಸಹಾ ಮಹಾ ಭೀತಿಯುಂಟಾಯಿತು; ಮತ್ತೂ ಆ ಸ್ವರವು ಸೀತಾದೇವಿಯಿಂದ ಕೇಳಲ್ಪಟ್ಟ ಕೂಡಲೆ ಆಕೆಯಿಂದ ನೀನು ನನ್ನಂ ಹುಡುಕುವದಕ್ಕಾಗಿ ಕಳುಹಿಸಲ್ಪಟ್ಟಿರಬಹುದು, ಎಂಬದಾಗಿ ಊಹಿಸುತ್ತೇನೆ ॥೧೪॥ ಹ್ಯಾಗಾದರೂ ನಿನ್ನಿಂದ ಬಹು ಅನುಚಿತವಾದ ಕಾರ್ಯವು ಮಾಡಲ್ಪಟ್ಟಿತು, ಆಕೆಯನ್ನು ಓರ್ವಳನ್ನೇ ಬಿಟ್ಟು ಬಂದದ್ದು ಯುಕ್ತವಲ್ಲ, ರಾಕ್ಷಸರಿಗೆ ಅವಕಾಶವು ಕೊಡಲ್ಪಟ್ಟಿತು, ಮಾಂಸಾಹಾರಿಗಳಾದ ಆ ರಾಕ್ಷಸರು ಖರಾಸುರನ ವಧೆಯಿಂದ ಅತಿದುಃಖಿತರಾಗಿದ್ದವರಾದರು, ಈಗ ಆ ಅಸುರರಿಂದ ಸೀತಾದೇವಿಯು ನಿಸ್ಸಂದೇಹವಾಗಿ ಕೊಲ್ಲಲ್ಪಟ್ಟಿರಬಹುದು ॥೧೬॥ ಎಲೈ ಶತ್ರುಸಂಹಾರಕನೇ! ಸರ್ವಪ್ರಕಾರದಲ್ಲಿಯೂ ಈ ಮಹಾ ವ್ಯಸನದಲ್ಲಿ ಮುಳುಗಿದವನಾಗಿ ನಾನೇನು ಮಾಡಲಿ? ಈಗ ಪ್ರಾಪ್ತವಾಗಿರುವ ಈ ದುಃಖವು ಅನುಭವಿಸತಕ್ಕದ್ದಾಗಿಯೇ ಇರುವದು, ಎಂಬದಾಗಿ ಶ್ರೀರಾಮನು ಲಕ್ಷ್ಮಣನಿಂದೊಡಗೂಡಿ ಆ ಸೀತಾದೇವಿಯನ್ನೇ ಚಿಂತಿಸುತ್ತಾ ಅತಿತ್ವರೆಯಿಂದ ಜನಸ್ಥಾನದಲ್ಲಿರುವ ಪಂಚವಟೀತೀರವಂ ಕುರಿತು ಬಂದವನಾದನದೆಂತೆನೆ;—॥೧೮॥ ದಶರಥರಾಜನಂದನನಾದ ಆ ಶ್ರೀರಾಮನು ಬತ್ತಿದ ಮುಖವುಳ್ಳವನಾಗಿ, ಅತಿದೀನನಾದ ಒಡಹುಟ್ಟಿದವನನ್ನು ನಿಂದಿಸುತ್ತಾ ಹಶಿವಿನಿಂದಲೂ ದೇಹಪ್ರಯಾಸದಿಂದಲೂ ಬಾಯಾರಿಕೆಯಿಂದಲೂ ನಿಟ್ಟುಸುರುಗಳಂ ಬಿಡುತ್ತಾ ಜನರಹಿತವಾಗಿರುವ ತನ್ನ ಆಶ್ರಮವನ್ನೈದಿ, ಶೂನ್ಯವಾಗಿರುವ

ಸಮೀಕ್ಷ್ಯಶೂನ್ಯಂ । ಸ್ವಮಾಶ್ರಮಂಸಂಪ್ರವಿಗಾಹ್ಯವೀರೋವಿಹಾರದೇಶಾನನುಸೃತ್ಯಕಾಂಶ್ಚಿತ್ । ಏತತ್ತದಿತ್ಯೇವನಿವಾಸಭೂಮೌಪ್ರಹೃಷ್ಟರೋಮಾವ್ಯಥಿತೋಬಭೂವ ॥೨೦॥

—**ಅಷ್ಟಪಂಚಾಶಸ್ಸರ್ಗಃ**—

ಅಥಾಶ್ರಮಾದುಪಾವೃತ್ತಮಂತರಾರಘುನಂದನಃ । ಪರಿಪಪ್ರಚ್ಛಸೌಮಿತ್ರಿಂರಾಮೋದುಃಖಾರ್ದಿತಂಪುನಃ ॥೧॥
ತಮುವಾಚಕಿಮರ್ಥಂತ್ವಮಾಗತೋಪಾಸ್ಯಮೈಥಿಲೀಂ । ಯದಾಸಾತವವಿಶ್ವಾಸಾದ್ವನೇವಿರಹಿತಾಮಯಾ ॥೨॥
ದೃಷ್ಟ್ವೈವಾಭ್ಯಾಗತಂತ್ವಾಂಮೇಮೈಥಿಲೀಂತ್ಯಜ್ಯಲಕ್ಷ್ಮಣ । ಶಂಕಮಾನಂಮಹತ್ಪಾಪಂಯತ್ಸತ್ಯಂವ್ಯಥಿತಂಮ
ನಃ ॥೩॥ ಸ್ಫುರತೇನಯನಂಸವ್ಯಂಬಾಹುಶ್ಚಹೃದಯಂಚಮೇ । ದೃಷ್ಟ್ವಾಲಕ್ಷ್ಮಣದೂರೇತ್ವಾಂಸೀತಾವಿರಹಿತಂಪಥಿ ॥೪॥
ಏವಮುಕ್ತಸ್ತುಸೌಮಿತ್ರಿರ್ಲಕ್ಷ್ಮಣಶ್ಶುಭಲಕ್ಷಣಃ । ಭೂಯೋದುಃಖಸಮಾವಿಷ್ಟೋದುಃಖಿತಂರಾಮಮಬ್ರವೀತ್ ॥೫॥
ನಸ್ವಯಂಕಾಮಕಾರೇಣತಾಂತ್ಯಕ್ತ್ವಾಹಮಿಹಾಗತಃ । ಪ್ರಚೋದಿತಸ್ತಯೈವೋಗ್ರೈಸ್ತ್ವತ್ಸಕಾಶಮಿಹಾಗತಃ ॥೬॥

---

ನಿವಾಸಪ್ರದೇಶದಲ್ಲಿ, ಕಾಂಶ್ಚಿತ್-ಕೆಲವಾದ, ವಿಹಾರದೇಶಾನ್-ಕ್ರೀಡಾಪ್ರದೇಶಗಳನ್ನು ಅನುಸೃತ್ಯ-ಅನುಸರಿಸಿನೋಡಿ. ಪ್ರಹೃಷ್ಟರೋಮಾಸನ್-ರೋಮಾಂಚಗಳುಳ್ಳವನಾಗಿ. ವ್ಯಥಿತಃ-ದುಃಖಗೊಂಡವನು, ಬಭೂವ-ಆದನು ॥೨೦॥ —**ಅಷ್ಟಪಂಚಾಶಸ್ಸರ್ಗಃ**—

ಅಥ-ಬಳಿಕ, ರಘುನಂದನಃ-ರಘುಕುಲಾನಂದಕರನಾದ ಶ್ರೀರಾಮನು, ಅಂತರಾ-ಮಧ್ಯಮಾರ್ಗದಲ್ಲಿ, ದುಃಖಾರ್ದಿತಂ-ದುಃಖದಿಂ ಬಾಧಿತನಾಗುವಂತೆ, ಆಶ್ರಮಾತ್-ಪರ್ಣಶಾಲೆಯಬಳಿಯಿಂದ. ಉಪಾವೃತ್ತಂ-ಬರುತ್ತಿರುವ, ಸೌಮಿತ್ರಿಂ-ಲಕ್ಷ್ಮಣಸ್ವಾಮಿಯನ್ನು, ಪುನಃ-ಬಾರಿಬಾರಿಗೂ, ಪರಿಪಪ್ರಚ್ಛ-ಪ್ರಶ್ನೆಮಾಡಿದನು ॥೧॥ ಯದಾತು-ಯಾವಕಾಲದಲ್ಲಾದರೆ, ತವ-ನಿನ್ನ. ವಿಶ್ವಾಸಾತ್-ವಿಶ್ವಾಸದಬಳಿಯಿಂದ, (ಅಂದರೆ-ನಿನ್ನಿಂದ ಸಂರಕ್ಷಿತಳಾದ ಸೀತಾದೇವಿಗೆ ಏನು ಉಪಹತಿಎಂಬ ನಂಬಿಕೆಯಿಂದ,) ಸಾ-ಆ ಸೀತಾದೇವಿಯು, ವನೇ-ಅರಣ್ಯದಲ್ಲಿ, ಮಯಾ-ನನ್ನಿಂದ, ವಿರಹಿತಾ-ಬಿಡಲ್ಪಟ್ಟಳು, ತ್ವಂ-ಅಂಥಾ ನೀನು, ಮೈಥಿಲೀಂ-ಸೀತಾದೇವಿಯನ್ನು. ಕಿಮರ್ಥಂ-ಯಾತಕ್ಕಾಗಿ, ಅಪಾಸ್ಯ-ಬಿಟ್ಟು. ಆಗತಃ-ಬಂದೆ, ಇತಿ-ಇಂತೆಂದು ತಂ-ಆ ಲಕ್ಷ್ಮಣನಂ ಕುರಿತು, ಉವಾಚ-ಹೇಳಿದನು ॥೨॥ ಹೇಲಕ್ಷ್ಮಣ-ಎಲೆ ಲಕ್ಷ್ಮಣನೇ, ಮೈಥಿಲೀಂ-ಸೀತಾದೇವಿಯನ್ನು, ತ್ಯಜ್ಯ-ಬಿಟ್ಟು, ಅಭ್ಯಾಗತಂ-ಎದುರಾಗಿ ಬರುತ್ತಿರುವ, ತ್ವಾಂ-ನಿನ್ನನ್ನು, ದೃಷ್ಟ್ವೈವ-ನೋಡುತ್ತಲೇ, ಮಹತ್-ಬಹಳವಾದ, ಪಾಪಂ-ಸೀತಾನಿಷ್ಟರೂಪವಾದ ಪಾಪವನ್ನು. ಶಂಕಮಾನಂ-ಊಹಿಸುತ್ತಿರುವ, ಮೇ-ನನ್ನ, ಮನಃ-ಮನವು, ವ್ಯಥಿತಮಿತಿಯತ್-ವ್ಯಸನಗೊಂಡಿತೂ ಎಂಬುವದು ಯಾವದುಂಟೋ. ತತ್-ಅದು, ಸತ್ಯಂ-ಸತ್ಯವಾಯಿತು ॥೩॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಪಥಿ-ಮಾರ್ಗದಲ್ಲಿ, ಸೀತಾವಿರಹಿತಂ-ಸೀತಾದೇವಿಯಿಂದ ಬಿಡಲ್ಪಟ್ಟ, ತ್ವಾಂ-ನಿನ್ನನ್ನು, ದೂರೇ-ದೂರದಲ್ಲಿ, ದೃಷ್ಟ್ವಾ-ಕಂಡು, ಸವ್ಯಂನಯನಂ-ಎಡಕಣ್ಣು, ಸ್ಫುರತೇ-ನಡುಗುತ್ತದೆ, ಸವ್ಯಃಬಾಹುಃ-ಎಡಭುಜವು, ಸ್ಫುರತೇ-ಚಲಿಸುತ್ತದೆ, ಮೇ-ನನ್ನ, ಹೃದಯಂಚ-ಎದೆಯು, ಸ್ಫುರತೇ-ಚಲಿಸುತ್ತದೆ ॥೪॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸೌಮಿತ್ರಿಃ-ಸುಮಿತ್ರಾದೇವಿಯ ಕುವರನಾದ, ಶುಭಲಕ್ಷಣಃ-ಶುಭಕರವಾದ ಲಕ್ಷಣಗಳುಳ್ಳ, ಲಕ್ಷ್ಮಣಃ-ಲಕ್ಷ್ಮಣನು. ಭೂಯಃ-ಮತ್ತೂ. ದುಃಖಸಮಾವಿಷ್ಟಃ-ವ್ಯಸನದಿಂ ಕೂಡಿಕೊಂಡವನಾಗಿ, ದುಃಖಿತಂ-ಸಂಕಟಪಡುತ್ತಿರುವ, ರಾಮಂ-ಶ್ರೀರಾಮನಂ ಕುರಿತು. ಅಬ್ರವೀತ್-ನುಡಿದನು ॥೫॥ ಅಹಂ-ನಾನು, ಕಾಮಕಾರೇಣ-ಬುದ್ಧಿಪೂರ್ವಕದಿಂದ, ತಾಂ-ಆ ಸೀತಾದೇವಿಯನ್ನು, ತ್ಯಕ್ತ್ವಾ-ಬಿಟ್ಟು, ಸ್ವಯಂ-ತಾನೇ, ಇಹ-ಇಲ್ಲಿಗೆ. ನಾಗತಃ-ಬರಲಿಲ್ಲ. ಕಿಂತು-ಮತ್ತೇನಂದರೆ, ತಯೈವ-ಆ ಸೀತಾದೇವಿಯಿಂದಲೇ, ಉಗ್ರೈಃ-ಕಠೋರವಾದ ಮಾತುಗಳಿಂದ, ಪ್ರಚೋದಿತಃ-ಚುಚ್ಚಲ್ಪಟ್ಟವನಾಗಿ. ತ್ವತ್ಸಕಾಶಂ-ನಿನ್ನ ಸಮೀಪವಂ ಕುರಿತು, ಇಹ-ಇಲ್ಲಿ, ಆಗತಃ-ಬಂದೆನು ॥೬॥ ಹಾ-ಕಷ್ಟವು, ಹೇಸೀತೇ-ಎಲೌ ಸೀತಾದೇವಿಯೇ, ಹೇಲಕ್ಷ್ಮಣ-ಎಲೈ ಲಕ್ಷ್ಮ

---

ಅದಂ ಕಂಡು ಕಂಗೆಟ್ಟ ಮುಖವುಳ್ಳವನಾಗಿ, ಆ ಆಶ್ರಮವಂ ಪೊಕ್ಕು ವಿಹಾರಸ್ಥಾನಂಗಳಲ್ಲಿ ಅಲ್ಲಲ್ಲಿ ನೋಡಿ ಆ ದೇವಿಯಂ ಕಾಣದೆ ದುಃಖಗೊಂಡವನಾದನು ॥೨೦॥ —* ಆರಣ್ಯಕಾಂಡದಲ್ಲಿ ನಲ್ವತ್ತೇಳನೆಯ ಸರ್ಗಂ ಮುಗಿದುದು *—

ಅನಂತರದಲ್ಲಿ ರಘುಕುಲೋತ್ಪನ್ನನಾದ ಶ್ರೀರಾಮನು, ಪರ್ಣಶಾಲೆಯಂ ಬಿಟ್ಟು ಮಾರ್ಗದಲ್ಲಿ ತನಗೆದುರಾಗಿ ಬಂದ ಲಕ್ಷ್ಮಣನನ್ನು ಕುರಿತು ಪುನಃ ಹೇಳಿದವನಾದನ ದೆಂತೆನೆ,—ಎಲೈ ಲಕ್ಷ್ಮಣನೇ! ನಿನ್ನ ಸಮೀಪದಲ್ಲಿರುವಾಗ ಸೀತಾದೇವಿಗೆ ಯೇನು ಉಪಹತಿಯು ಸಂಭವಿಸಲಾರದೆಂದು ನಾನು ನಂಬಿದವನಾಗಿ, ಆಕೆಯನ್ನು ನಿನ್ನ ಸಮೀಪದಲ್ಲಿ ಬಿಟ್ಟು ಬಂದವನಾದೆನು, ನೀನು ಆಕೆಯನ್ನು ಯಾಕೆ ಬಿಟ್ಟು ಬಂದವನಾದೆ? ಆ ದೇವಿಯಂ ಬಿಟ್ಟು ಬಂದ ನಿನ್ನನ್ನು ನೋಡುತಲೇ ನನಗೆ ಬಹು ಭೀತಿಯು ಪುಟ್ಟಿದಂಥಾದ್ದಾಯಿತು, ಅದೀಗ ಸತ್ಯವಾಯಿತು, ಮತ್ತೂ ಆಗಲೇ ಯೆನ್ನ ಯೆಡಭಾಗದ ತೋಳು ಕಂಪಿಸಿತು; ಮನವು ಚಲಿಸುವದು, ಎಂಬದಾಗಿ ಶ್ರೀರಾಮನು ನುಡಿಯುತ್ತಿರಲೂ ಮಹಾ ಪರಾಕ್ರಮಶಾಲಿಯಾದ ಲಕ್ಷ್ಮಣನು ಆ ಶ್ರೀರಾಮನಿಗಿಂತಲೂ ಅತಿಶಯವಾದ ದುಃಖವುಳ್ಳವನಾಗಿ ಆತನಂ ಕುರಿತು ನುಡಿವನದೆಂತೆನೆ,—।೫। ಎಲೈ ಅಗ್ರಜನೇ! ನಾನು ಬುದ್ಧಿಪೂರ್ವಕವಾಗಿ ಬಂದವನಲ್ಲ, ಆಕೆಯಿಂದಲೇ ಪ್ರೇರಿಸಲ್ಪಟ್ಟು ಇಲ್ಲಿಗೆ ಬಂದವನಾದೆನು, ಯಾಕಂದರೆ,—ಅಯ್ಯೋ, 'ಸೀತೆಯೇ,

ಆರ್ಯೇಣೇವಪರಾಕ್ರುಷ್ಟಂಹಾಸೀತೇಲಕ್ಷ್ಮಣೇತಿಚ । ಪರಿತ್ರಾಹೀತಿಯದ್ವಾಕ್ಯಂಮೈಥಿಲ್ಯಾಸ್ತಚ್ಛ್ರುತಿಂಗತಂ ।೭। ಸಾತಮಾರ್ತಸ್ವರಂಶ್ರುತ್ವಾತವಸ್ನೇಹೇನಮೈಥಿಲೀ । ಗಚ್ಛಗಚ್ಛೇತಿಮಾಮಾಹರುದಂತೀಭಯವಿಹ್ವಲಾ ।೮। ಪ್ರಚೋದ್ಯಮಾನೇನಮಯಾಗಚ್ಛೇತಿಬಹುಶಸ್ತಯಾ । ಪ್ರತ್ಯುಕ್ತಾಮೈಥಿಲೀವಾಕ್ಯಮಿದಂತ್ವತ್ಪ್ರತ್ಯಯಾನ್ವಿತಂ ।೯। ನತತ್ಪಶ್ಯಾಮ್ಯಹಂರಕ್ಷೋಯದಸ್ಯಭಯಮಾವಹೇತ್ । ನಿರ್ವೃತಾಭವನಾಸ್ತ್ಯೇತತ್ಕೇನಾಪ್ಯೇವಮುದಾಹೃತಂ ।೧೦। ವಿಗರ್ಹಿತಂಚನೀಚಂಚಕಥಮಾರ್ಯೋಭಿಧಾಸ್ಯತಿ । ತ್ರಾಹೀತಿವಚನಂಸೀತೇಯಸ್ತ್ರಾಯೇತ್ತ್ರಿದಶಾನಪಿ ।೧೧। ಕಿಂನಿಮಿತ್ತಂತುಕೇನಾಪಿಭ್ರಾತುರಾಲಂಬ್ಯಮೇಸ್ವರಂ । ರಾಕ್ಷಸೇನೇರಿತಂವಾಕ್ಯಂತ್ರಾಹಿತ್ರಾಹೀತಿಶೋಭನೇ ।೧೨। ವಿಸ್ವರಂವ್ಯಾಹೃತಂವಾಕ್ಯಂಲಕ್ಷ್ಮಣತ್ರಾಹಿಮಾಮಿತಿ । ನಭವತ್ಯಾವ್ಯಥಾಕಾರ್ಯಾಕುನಾರೀಜನಸೇವಿತಾ ।೧೩। ಅಲಂವೈಕ್ಲಬ್ಯಮಾಲಂಬ್ಯಸ್ವಸ್ಥಾಭವನಿರುತ್ಸುಕಾ । ನಸೋಸ್ತಿತ್ರಿಷುಲೋಕೇಷುಪುಮಾನ್ಯೋರಾಘವಂರಣೇ । ಜಾತೋವಾಜಾಯಮಾ

---

ನನೇ ಎಂದು, ಪರಿತ್ರಾಹೀತಿ-ಸಂರಕ್ಷಣೆಮಾಡೆಂದು, ಆರ್ಯೇಣೇವ-ಪೂಜ್ಯನಾದ ಶ್ರೀರಾಮನಿಂದಂತೆ, ಯದ್ವಾಕ್ಯಂ-ಯಾವ ಮಾತು, ಪರಾಕ್ರುಷ್ಟಂ-ಯಾವನೊಬ್ಬನಿಂ ಉದ್ಘೋಷಮಾಡಲ್ಪಟ್ಟಿತೋ, ತದ್ವಾಕ್ಯಂ-ಆ ವಾಕ್ಯವು, ಮೈಥಿಲ್ಯಾಃ-ಸೀತಾದೇವಿಯ, ಶ್ರುತಿಂ-ಶ್ರೋತ್ರವನ್ನು, ಗತಂ-ಹೊಂದಿತು ||೭|| ಸಾಮೈಥಿಲೀ-ಆ ಸೀತಾದೇವಿಯು, ತಂ-ಆ, ಆರ್ತಸ್ವರಂ-ದೀನಧ್ವನಿಯನ್ನು, ಶ್ರುತ್ವಾ-ಕೇಳಿ, ತವ-ನಿನ್ನ, ಸ್ನೇಹೇನ-ಮೈತ್ರಿಯಿಂದ, ರುದಂತೀ-ಅಳುತ್ತಿರುವವಳಾಗಿ, ಭಯವಿಹ್ವಲಾ-ಭಯದಿಂದ ಚಪಲವುಳ್ಳವಳಾಗಿ, ಗಚ್ಛಗಚ್ಛೇತಿ-ಹೋಗುಹೋಗೂಎಂದು, ಮಾಂ-ನನ್ನನ್ನು ಕುರಿತು, ಆಹ-ಹೇಳಿದಳು ||೮|| ತಯಾ-ಆ ಸೀತಾದೇವಿಯಿಂದ, ಗಚ್ಛೇತಿ-ಹೋಗೆಂದು, ಬಹುಶಃ-ಅನೇಕಬಗೆಯಾಗಿ, ಪ್ರಚೋದ್ಯಮಾನೇನ-ಪ್ರೇರಣೆಮಾಡಲ್ಪಡುವ, ಮಯಾ-ನನ್ನಿಂದ, ಮೈಥಿಲೀ-ಸೀತಾದೇವಿಯು, ತ್ವತ್ಪ್ರತ್ಯಯಾನ್ವಿತಂ-ನಿನ್ನ ನಂಬಿಕೆಯಿಂದ ಕೂಡಿಕೊಂಡಿರುವ, ಇದಂವಾಕ್ಯಂ-ಈ ಮಾತು, ಪ್ರತ್ಯುಕ್ತಾ-ಪ್ರತ್ಯುತ್ತರ ಹೇಳಲ್ಪಟ್ಟಳು ||೯|| ಯತ್-ಯಾವ ರಕ್ಕಸನು, ಅಸ್ಯ-ಈ ಶ್ರೀರಾಮನಿಗೆ, ಭಯಂ-ಭಯವನ್ನು, ಆವಹೇತ್-ಮಾಡುವನೋ, ತದ್ರಕ್ಷಃ-ಅಂಥಾ ರಾಕ್ಷಸನನ್ನು, ಅಹಂ-ನಾನು, ನಪಶ್ಯಾಮಿ-ಕಾಣೆನು, ನಿರ್ವೃತಾ-ಸುಖವಾಗಿ, ಭವ-ಇರು, ಕೇನಾಪಿ-ಯಾವನಿಂದಲೊ, ಏವಂ-ಈಪರಿಯಾಗಿ, ಉದಾಹೃತಂ-ಹೇಳಲ್ಪಟ್ಟಿತು, ಏತತ್-ಇದು, ನಾಸ್ತ್ಯೇವ-ಇಲ್ಲವೇಇಲ್ಲ ||೧೦|| ಹೇಸೀತೇ-ಎಲೈ ಸೀತಾದೇವಿಯೇ, ಯಃ-ಯಾವ ಶ್ರೀರಾಮನು ತ್ರಿದಶಾನಪಿ-ದೇವತೆಗಳನ್ನೂ, ತ್ರಾಯೇತ್-ಸಂರಕ್ಷಿಸುವನೋ, ಸಃಆರ್ಯಃ-ಅಂಥಾ ಅಣ್ಣನು, ತ್ರಾಹೀತಿ-ಸಂರಕ್ಷಿಸೆಂದು, ವಿಗರ್ಹಿತಂ-ನಿಂದ್ಯವಾದ, ನೀಚಂ-ಕುತ್ಸಿತವಾದ, ವಚನಂ-ಮಾತನ್ನು, ಕಥಮಭಿಧಾಸ್ಯತಿ-ಹ್ಯಾಗೆ ಹೇಳುವನು ||೧೧|| ಹೇಶೋಭನೇ-ಎಲೈ ಶುಭಕರಳೇ, ಕೇನಾಪಿ ರಾಕ್ಷಸೇನ-ಯಾವನೋ ಒಬ್ಬ ರಕ್ಕಸನಿಂದ, ಮೇ-ನನ್ನ ಭ್ರಾತುಃ-ಅಣ್ಣನಾದ ಶ್ರೀರಾಮನ, ಸ್ವರಂ-ಧ್ವನಿಯನ್ನು, ಅವಲಂಬ್ಯ-ಆಶ್ರಯಿಸಿ, ಕಿಂನಿಮಿತ್ತಂ-ಯಾವ ನಿಮಿತ್ತವಾಗಿಯೋ, ತ್ರಾಹಿತ್ರಾಹೀತಿ-ಸಂರಕ್ಷಣೆಮಾಡೆಂದು, ವಾಕ್ಯಂ-ಮಾತು, ಈರಿತಂ-ಹೇಳಲ್ಪಟ್ಟಿತು ||೧೨|| ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಮಾಂ-ನನ್ನನ್ನು, ತ್ರಾಹೀತಿ-ಸಂರಕ್ಷಿಸೆಂದು, ವಿಸ್ವರಂ-ವಿಕಾರಸ್ವರವುಳ್ಳಂತೆ, ವಾಕ್ಯಂ-ಮಾತು, ವ್ಯಾಹೃತಂ-ಹೇಳಲ್ಪಟ್ಟಿತು, ಭವತ್ಯಾ-ನಿನ್ನಿಂದ, ಕುನಾರೀಜನಸೇವಿತಾ-ಕುತ್ಸಿತಸ್ತ್ರೀಜನರಿಂ ಸೇವಿಸಲ್ಪಟ್ಟ, ವ್ಯಥಾ-ವ್ಯಸನವು, ನಕಾರ್ಯಾ-ಮಾಡತಕ್ಕದ್ದಲ್ಲ ||೧೩|| ವೈಕ್ಲಬ್ಯಂ-ವಿಹ್ವಲಚಿತ್ತತ್ವವನ್ನು, ಆಲಂಬ್ಯ-ಆಶ್ರಯಿಸಿ, ಅಲಂ-ಸಾಕು, ನಿರುತ್ಸುಕಾ-ನನ್ನ ಪ್ರಯಾಣದಲ್ಲಿ ಉತ್ಕಂಠಾರಹಿತಳಾಗಿ, ಸ್ವಸ್ಥಾ-ಸ್ವಸ್ಥಚಿತ್ತಳು, ಭವ-ಆಗು, ಜಾತೋವಾ-ಹುಟ್ಟಿದವನೇ ಆಗಲಿ, ಜಾಯಮಾನೋವಾ-ಹುಟ್ಟುತ್ತಿರುವವನೇ ಆಗಲಿ ಸಂಯುಗೇ-ಕಾಳಗದಲ್ಲಿ, ಯಃ-ಯಾವ ಪುರುಷನು, ರಾಮಂ-ಶ್ರೀರಾಮನನ್ನು, ಪರಾಜಯೇತ್-ಜಯಿಸುವನೋ ||೧೪|| ಯಃ-ಯಾವ ಪುರುಷನು, ರಣೇ-ಕಾಳಗದಲ್ಲಿ, ಪರಾಜಯೇತ್-ಜಯಿಸುತ್ತಿರುವ

---

ಲಕ್ಷ್ಮಣನೇ! ಸಂರಕ್ಷಿಸು, ಎಂದು ಪೂಜ್ಯನಾದ ನಿನ್ನಿಂದ ಹೇಳಲ್ಪಟ್ಟಂತೆ, ಯಾವನೋ ಒಬ್ಬ ರಾಕ್ಷಸನಿಂದುಸುರಲ್ಪಟ್ಟಿತು, ಆ ಮಾತನ್ನು ಸೀತಾದೇವಿಯು ಕೇಳಿದವಳಾಗಿ ಸ್ನೇಹಭಾವದಿಂದ ಅತಿದುಃಖವನ್ನೈದಿದವಳಾಗಿ, ಎಲೈ ಲಕ್ಷ್ಮಣನೇ! ವೇಗದಿಂ ಹೋಗುವವನಾಗೆಂದು ನನಿಗೆ ನಿರೂಪಿಸಿದಳು, ಅನಂತರದಲ್ಲಿ ನಾನು ವಿಧವಿಧವಾಗಿ ನಂಬಿಕೆಮಾತುಗಳಂ ಹೇಳಿದೆನು ಏನಂದರೆ;—ಎಲೌ ತಾಯಿಯೇ! ಪೂಜ್ಯನಾದ ಶ್ರೀರಾಮನಿಗೆ ಭಯವನ್ನುಂಟು ಮಾಡುವ ರಾಕ್ಷಸನನ್ನು ನಾನೆಲ್ಲಿಯೂಕಾಣೆನು, ನೀನೀ ಭೀತಿಯಂ ಬಿಡುವವಳಾಗು, ಯಾವನೋ ಒಬ್ಬ ರಾಕ್ಷಸನಿಂದ ಈ ರೀತಿಯಲ್ಲಿ ನುಡಿಯಲ್ಪಟ್ಟಿರ ಬಹುದು ಇದು ಸತ್ಯವಲ್ಲ, ಯಾಕಂದರೆ;—ನಿನ್ನ ಪತಿಯಾದ ಶ್ರೀರಾಮನು ದೇವತೆಗಳನ್ನೂ ಕೂಡಾ ಪಾಲಿಸಲೂ ಶಕ್ತಿಯುಳ್ಳವನೋ, ಅಂಥಾ ಪರಾಕ್ರಮಶಾಲಿಯು ನನ್ನಂ ರಕ್ಷಿಸೆಂದು ನಿಂದಿತವಾದ ವಾಕ್ಯವನ್ನ ಎಂತು ಹೇಳುವನು? ಎಲೌ ಶುಭಕರಳೇ! ಯಾವನಾದರೂ ಓರ್ವರಾಕ್ಷಸನು, ನಮ್ಮಣ್ಣನಾದ ಶ್ರೀರಾಮನ ಸ್ವರದಂತೆ ಸ್ವರವುಳ್ಳವನಾಗಿ ಈ ರೀತಿಯಲ್ಲಿ ಹೇಳಿಹನೇ ಹೊರತು ಇದು ಸರ್ವಾತ್ಮನಾದ ಆತನಿಂದ ಹೇಳಲ್ಪಡಲಿಲ್ಲ, ಸಾಧಾರಣ ಸ್ತ್ರೀಯು ವ್ಯಸನಪಡುವಂತೆ ದುಃಖಿಸಬ್ಯಾಡ ಸಾಕುಸಾಕು ಈ ಬುದ್ಧಿಮೋಹವಂ ಬಿಡುಬಿಡು, ಸ್ವಸ್ಥಚಿತ್ತಳಾಗಿರುವವಳಾಗು, ಈಗ ಹುಟ್ಟಿದವನೇ ಆಗಲೀ ಮುಂದು ಹುಟ್ಟತಕ್ಕವನೇ

ಸೋಪಾಸಂಯುಗೇಯುಃಪರಾಜಯೇತ್ ॥೧೪॥ ನಜಯ್ಯೋರಾಘವೋಯುದ್ಧೇದೇವೈಶ್ಶಕ್ರಪುರೋಗಮೈಃ ॥೧೫॥ ಏವ
ಮುಕ್ತಾತುವೈದೇಹೀಪರಿಮೋಹಿತಚೇತನಾ । ಉವಾಚಾಶ್ರೂಣಿಮುಂಚಂತೀದಾರುಣಂಮಾಮಿದಂವಚಃ ॥೧೬॥ ಭಾ
ವೋಮಯಿತವಾತ್ಯರ್ಥಂಪಾಪಏವನಿವೇಶಿತಃ । ವಿನಷ್ಟೇಭ್ರಾತರಿಪ್ರಾಪ್ತುಂನಚತ್ವಂಮಾಮವಾಪ್ಸ್ಯಸಿ ॥೧೭॥ ಸಂಕೇ
ತಾದ್ಭರತೇನತ್ವಂರಾಮಂಸಮನುಗಚ್ಛಸಿ । ಕ್ರೋಶಂತಂಹಿಯಥಾತ್ಯರ್ಥಂನೈನಮಭ್ಯವಪದ್ಯಸೇ ॥೧೮॥ ರಿಪುಃಪ್ರಚ್ಛ
ನ್ನಚಾರೀತ್ವಂಮದರ್ಥಮನುಗಚ್ಛಸಿ । ರಾಘವಸ್ಯಾಂತರಪ್ರೇಪ್ಸುಸ್ತಥೈವಂನಾಭಿಪದ್ಯಸೇ ॥೧೯॥ ಏವಮುಕ್ತೋಹಿವೈ
ದೇಹ್ಯಾಸಂರಬ್ಧೋರಕ್ತಲೋಚನಃ । ಕ್ರೋಧಾತ್ಪ್ರಸ್ಫುರಮಾಣೋಷ್ಠ ಆಶ್ರಮಾದಭಿನಿರ್ಗತಃ ॥೨೦॥ ಏವಂಬ್ರುವಾಣಂಸೌ
ಮಿತ್ರಿಂರಾಮಸ್ಸಂತಾಪಮೋಹಿತಃ । ಅಬ್ರವೀದ್ದುಷ್ಕೃತಂಸೌಮ್ಯತಾಂವಿನಾಯತ್ತ್ವಮಾಗತಃ ॥೨೧॥ ಜಾನನ್ನಪಿ

---

ಟೀ. ಸಪುರುಷಃ-ಅಂಥಾ ಪುರುಷನು, ತ್ರಿಷುಲೋಕೇಷು, ಮೂರು ಲೋಕಗಳಲ್ಲಿಯೂ, ನ-ಇಲ್ಲ ॥೧೪॥ ರಾಘವಃ-ಶ್ರೀರಾಮನು. ಯುದ್ಧೇ-ಕಾಳಗದಲ್ಲಿ, ಶಕ್ರಪುರೋಗಮೈಃ-ದೇವೇಂದ್ರನೇ ಮೊದಲಾಗುಳ್ಳ, ದೇವೈಃ-ದೇವತೆಗಳಿಂದ; ನಜಯ್ಯಃ-ಜಯಿಸಲಸಾಧ್ಯನು ॥೧೫॥ ಏವಂ-ಈಪರಿಯಾಗಿ. ಉಕ್ತಾ-ಹೇಳಲ್ಪಟ್ಟ, ವೈದೇಹೀತು-ಸೀತಾದೇವಿಯಾದರೆ, ಪರಿಮೋಹಿತಚೇತನಾ-ಕಲುಷವಾಗಿ ಮಾಡಲ್ಪಟ್ಟ ಬುದ್ಧಿಯುಳ್ಳವಳಾಗಿ, ಅಶ್ರೂಣಿ-ಕಂಬನಿಗಳನ್ನು, ಮುಂಚಂತೀ-ಬಿಡುತ್ತಿರುವವಳಾಗಿ, ಮಾಂ-ನನ್ನನ್ನು ಕುರಿತು, ದಾರುಣಂ-ಕರ್ಣಕಠೋರವಾದ. ಇದಂವಾಕ್ಯಂ-ಈ ಮಾತನ್ನು ಉವಾಚ-ಹೇಳಿದಳು ॥೧೬॥ ತವ-ನಿನಗೆ, ಅತ್ಯರ್ಥಂ-ಬಹಳವಾಗಿ, ಮಯಿ-ನನ್ನಲ್ಲಿ, ಪಾಪಃ-ಪಾಪಕರವಾದ. ಭಾವಏವ-ಅಭಿಪ್ರಾಯವೇ ಸರಿ ಭ್ರಾತರಿ-ಅಣ್ಣನು, ವಿನಷ್ಟೇಸತಿ-ನಶಿಸಿದವನಾಗಲಾಗಿ, ಪ್ರಾಪ್ತುಂ-ಹೊಂದುವದಕ್ಕಾಗಿ, ನಿವೇಶಿತಃ-ಇರಿಸಲ್ಪಟ್ಟಿದೆ, ತ್ವಂಚ-ನೀನು, ಮಾಂ-ನನ್ನನ್ನು, ನಾವಾಪ್ಸ್ಯಸಿ-ಹೊಂದಲಾರೆ ॥೧೭॥ ಹಿ-ಯಾವಕಾರಣದದೆಶೆಯಿಂದ, ಕ್ರೋಶಂತಂ-ಕೂಗುತ್ತಿರುವ, ಏನಂ-ಈ ಶ್ರೀರಾಮನಂ ಕುರಿತು, ನಾಭ್ಯವಪದ್ಯಸೇ-ಹೊಂದದೇ ಇದ್ದೀಯೋ, ತಥಾ-ಹಾಗೆಯೇ, ತ್ವಂ-ನೀನು, ಭರತೇನ-ಭರತನಿಂದ, ಸಂಕೇತಾತ್-ರಾಮನಿಗೆ ದ್ರೋಹವಿಷಯವಾದ ದುರಾಲೋಚನರೂಪವಾದಸಂಕೇತದದೆಶೆಯಿಂದ, ರಾಮಂ-ಶ್ರೀರಾಮನನ್ನು, ಅನುಗಚ್ಛಸಿ-ಅನುಸರಿಸಿಬಂದಿದ್ದೀಯೆ ॥೧೮॥ ತ್ವಂ-ನೀನು, ಪ್ರಚ್ಛನ್ನಚಾರೀ-ಗೂಢವಾಗಿ ಸಂಚಾರಮಾಡುತ್ತಿರುವ. ರಿಪುಃ-ಶತ್ರುವು, ತ್ವಂ-ನೀನು, ಮದರ್ಥಂ-ನನ್ನ ನಿಮಿತ್ತವಾಗಿ, ಅನುಗಚ್ಛಸಿ-ಅನುಸರಿಸಿಬಂದಿದ್ದೀಯೆ ರಾಘವಸ್ಯ-ಶ್ರೀರಾಮನ, ಅಂತರಂಪ್ರೇಪ್ಸುಃ-ಛಿದ್ರವನ್ನು ಹುಡುಕುತ್ತಿರುವವನಾಗಿ, ತಥಾ-ಹಾಗೆಯೇ, ಏವಂ-ಈಪರಿಯಾಗಿ, ನಾಭಿಪದ್ಯಸೇ-ಹೋಗದೇಯಿದ್ದೀಯೆ ॥೧೯॥ ಏವಂ-ಈಪರಿಯಾಗಿ, ವೈದೇಹ್ಯಾ-ಸೀತಾದೇವಿಯಿಂದ, ಉಕ್ತಃ-ಹೇಳಲ್ಪಟ್ಟವನಾಗಿ, ಸಂರಬ್ಧಃ-ಕೋಪಗೊಂಡವನಾಗಿ, ರಕ್ತಲೋಚನಃ-ಕೆಂಗಣ್ಣುಗಳುಳ್ಳವನಾಗಿ, ಕ್ರೋಧಾತ್-ಕೋಪದದೆಶೆಯಿಂದ, ಪ್ರಸ್ಫುರಮಾಣೋಷ್ಠಃ-ಅದುರುತ್ತಿರುವ ಓಷ್ಠಗಳುಳ್ಳವನಾಗಿ, ಆಶ್ರಮಾತ್-ಆಶ್ರಮದದೆಶೆಯಿಂದ, ಅಭಿನಿರ್ಗತಃ-ಅಭಿಮುಖವಾಗಿ ಹೊರಟುಬಂದವನಾದೆ॥ ... ... ... ... ... ॥೨೦॥

ಏವಂ-ಈಪರಿಯಾಗಿ, ಬ್ರುವಾಣಂ-ಹೇಳುತ್ತಿರುವ, ಸೌಮಿತ್ರಿಂ-ಲಕ್ಷ್ಮಣನಂ ಕುರಿತು, ರಾಮಃ-ಶ್ರೀರಾಮನು, ಸಂತಾಪಮೋಹಿತಃ-ಸೀತಾವಿರಹಸಂತಾಪದಿಂ ಮೋಹಿತನಾಗಿ, ಹೇಸೌಮ್ಯ-ಎಲೈಪ್ರಸನ್ನನೇ, ತಾಂವಿನಾ-ಆ ಸೀತಾದೇವಿಯನ್ನುಬಿಟ್ಟು, ರಕ್ಷಸಾಂ-ರಕ್ಕಸರ. ವಿನಿವಾಶನೇ-ನಾಶದಲ್ಲಿ, ಮಾಂ-ನನ್ನನ್ನು, ಸಮರ್ಥಂ-ಸಮರ್ಥನನ್ನಾಗಿ, ಜಾನನ್ನಪಿ-ತಿಳಿದವನಾದರೂ, ತ್ವಂ-ನೀನು, ಆಗತಇತಿಯತ್-ಬಂದೆಂಬುವದು ಯಾವದುಂಟೋ ತತ್-ಅದು, ದುಷ್ಕೃತಂ-ದುಷ್ಟಕಾರ್ಯವು, ಇತಿ-ಇಂತೆಂದು, ಅಬ್ರವೀತ್-ನುಡಿದನು ॥೨೧॥ ಅನೇನ-ಈ, ಮೈಥಿಲ್ಯಾಃ-ಸೀತಾದೇವಿಯ, ಕ್ರೋಧವಾಕ್ಯೇನ-ನ

---

ಆಗಲೀ ಯಾವ ಪುರುಷನು ಶ್ರೀರಾಮನಂ ಜಯಿಸುವನೋ, ಅಂಥಾ ಪುರುಷನು ಮೂಜಗಗಳಲ್ಲಿಯೇ ಇಲ್ಲ; ಅಂಥಾ ಮಹಾ ಪರಾಕ್ರಮಸಂಪನ್ನನಾದ ಶ್ರೀರಾಮನು ರಣರಂಗದಲಿ ನಿಂತವನಾದರೆ, ಇಂದ್ರಾದಿಗಳಿಗೂ ಕೂಡಾ ಜಯಿಸಲಸಾಧ್ಯನು ॥೧೫॥ ಎಂಬದಾಗಿ ನಾನು ವಿಧವಿಧವಾಗಿ ಹೇಳಿದರೂ ಕೂಡಾ ಆ ದೇವಿಯು ಎನ್ನ ಮಾತಂ ಕೇಳದೆ ದೈನ್ಯವಾದ ಮನವುಳ್ಳವಳಾಗಿ, ನನ್ನಂ ಕುರಿತು ಅತಿಕ್ರೂರವಾಗಿ ಈ ರೀತಿಹೇಳಿದಳು ॥೧೬॥ ಏನಂದರೆ;- ಎಲೋ ಎಲೋ, ಲಕ್ಷ್ಮಣನೇ! ನನ್ನ ವಿಷಯದಲ್ಲಿ ನಿನ್ನಿಂದ ಪಾಪಕರವಾದ ಬುದ್ಧಿಯು ಗೈಯ್ಯಲ್ಪಟ್ಟಿರಬಹುದು, ಅಗ್ರಜನಾದ ಶ್ರೀರಾಮನು ನಾಶವನ್ನೈದಿದವನಾಗಲೂ ಹೊಂದಲಿಚ್ಛಿಸುತಲಿದ್ದೀ, ಅದೆಂದಿಗೂ ಈಡೇರಲಾರದು, ಅತಿಕಷ್ಟವನ್ನೈದಿಕೂಗುವ ಆತನಂ ಕುರಿತು ಸಾರಲೇ ಇಲ್ಲವಾದ್ದರಿಂದ, ಒಳ್ಳೇ ತರವಾಗಿ ನೀನು ಭರತನಿಂದಲೇ ಕಳುಹಿಸಲ್ಪಟ್ಟಿರಬಹುದು, ನೀನು ಗೂಢವಾಗಿ ಅಭಿಪ್ರಾಯವಂ ನಿಟ್ಟುಕೊಂಡು ಸಂಚಾರವಂ ಗೈಯ್ಯುತಲಿರುವ ಶತ್ರುವೇಸರಿ, ನನ್ನ ನಿಮಿತ್ತವಾಗಿಯೆ ಇಲ್ಲಿಗೆ ಬಂದವನಾದೆ, ರಂಧ್ರಾನ್ವೇಷಣೆಯಂ ಮಾಡುತಲಿದ್ದೀ, ಅದಕ್ಕಾಗಿಯೇ ತೆರಳಲಿಲ್ಲ ॥೧೯॥ ಎಂಬದಾಗಿ ಈ ರೀತಿಯಲ್ಲಿ ಸೀತಾದೇವಿಯು ನುಡಿಯಲೂ ನಾನು ಕೋಪಗೊಂಡವನಾಗಿ ಅಲ್ಲಿಂದ ಬಂದವನಾದೆನೆಂದು ನುಡಿಯುವ ಆ ಲಕ್ಷ್ಮಣನಂ ಕುರಿತು, ಆ ಶ್ರೀರಾಮನು ಸೀತಾವಿರಹದಿಂದ ಸಂತಾಪವನ್ನೈದಿದವನಾಗಿಂತೆಂದನು, ಎಲೈ ಕೋಪರಹಿತನಾದ ಲಕ್ಷ್ಮಣನೇ! ನಾನು ಸಮರ್ಥನೆಂದು

ಸಮರ್ಥಂಮಾಂರಕ್ಷಸಾಂವಿನಿವಾರಣೆ। ಅನೇನಕ್ರೋಧವಾಕ್ಯೇನಮೈಥಿಲ್ಯಾನಿಸ್ಸೃತೋಭವಾನ್ ।೨೨। ನಹಿತೇಪರಿತುಷ್ಯಾಮಿತ್ಯಕ್ತ್ವಾಯದ್ಯಾಸಿಮೈಥಿಲೀಂ । ಕ್ರುದ್ಧಾಯಾಃಪರುಷಂಶ್ರುತ್ವಾತಾಂವಿಹಾಯತ್ವಮಾಗತಃ ।೨೩। ಸರ್ವಥಾತ್ವಪನೀತಂತೇಸೀತಯಾಯತ್ಪ್ರಚೋದಿತಃ । ಕ್ರೋಧಸ್ಯವಶಮಾಪನ್ನೋನಾಕರೋಶ್ಶಾಸನಂಮಮ ।೨೪। ಅಸೌಹಿರಾಕ್ಷಸಶ್ಶೇತೇಶರೇಣಾಭಿಹತೋಮಯಾ । ಮೃಗರೂಪೇಣಯೇನಾಹಮಾಶ್ರಮಾದಪವಾಹಿತಃ ।೨೫। ವಿಕೃಷ್ಯಚಾಪಪರಿಧಾಯಸಾಯಕಂಸಲೀಲಬಾಣೇನಚತಾಡಿತೋಮಯಾ।ಮಾರ್ಗೀಂತನುಂತ್ಯಜ್ಯಚವಿಕ್ಲಬಸ್ವರೋಬಭೂವಕೇಯೂರಧರಸ್ಸರಾಕ್ಷಸಃ ।೨೬। ಶರಾಹತೇನೈವತದಾರ್ತಯಾಗಿರಾಸ್ವರಂಸಮಾಲಂಬ್ಯಸುದೂರಸಂಶ್ರವಂ । ಉದಾಹೃತಂತದ್ವಚನಂಸುದಾರುಣಂತ್ವಮಾಗತೋಯೇನವಿಹಾಯಮೈಥಿಲೀಂ ।೨೭। —* ಏಕೋನಷಷ್ಟಿತಮಸ್ಸರ್ಗಃ *—

ಭೃಶಮಾವ್ರಜಮಾನಸ್ಯತಸ್ಯಾಧೋವಾಮಲೋಚನಂ। ಪ್ರಾಸ್ಫುರಚ್ಚಾಸ್ಖಲದ್ರಾಮೋವೇಪಥುಶ್ಚಾಪ್ಯಜಾಯತ।೧।

---

ಸ್ಸಳ್ಳಿ ಭಾವನಿವೇಶಿತವಾಗಿದೆ ಎಂಬ ವಾಕ್ಯದಿಂದ ಭವಾನ್–ನೀನು, ನಿಸ್ಸೃತಇತಿಯತ್–ಹೊರಟುಬಂದೇ ಎಂಬದು ಯಾವದುಂಟೋ, ಮೈಥಿಲೀಂ–ಸೀತಾದೇವಿಯನ್ನು, ತ್ಯಕ್ತ್ವಾ–ಬಿಟ್ಟು. ತೇ–ನಿನ್ನಿಂದ ಮಾಡಲ್ಪಟ್ಟ, ತತ್–ಆ ಕರ್ಮವಂಕುರಿತು, ನಪರಿತುಷ್ಯಾಮಿ–ಸಂತೋಷಿಸಲಾರೆ ||೨೨|| ಕ್ರುದ್ಧಾಯಾಃ–ಕೋಪಿಸ್ಕೊಳ್ಳದ ಸೀತಾದೇವಿಯ. ಪರುಷಂ–ಕ್ರೂರವಾದ ಮಾತನ್ನು, ಶ್ರುತ್ವಾ–ಕೇಳಿ, ತಾಂ–ಆ ಸೀತಾದೇವಿಯನ್ನು, ವಿಹಾಯ–ಬಿಟ್ಟು, ತ್ವಂ–ನೀನು, ಆಗತಇತಿಯತ್–ಹೊರಟುಬಂದೆಂಬದು ಯಾವದುಂಟೋ, ತೇ–ನಿನ್ನಿಂದ, ತತ್–ಆ ಕರ್ಮ, ಸರ್ವಥಾ–ಯೆಲ್ಲಾ ಪ್ರಕಾರದಲ್ಲಿಯೂ. ಅಪನೀತಂ–ಅವಿನಯವುಮಾಡಲ್ಪಟ್ಟಿತು ||೨೩|| ಯತ್–ಯಾದಕಾರಣದವೆಶೆಯಿಂದ, ಸೀತಯಾ–ಸೀತಾದೇವಿಯಿಂದ, ಪ್ರಚೋದಿತಃ–ಪ್ರೇಳಲ್ಪಟ್ಟವನಾಗಿ, ಕ್ರೋಧಸ್ಯ–ಕೋಪಕ್ಕೆ, ವಶಂ–ಸ್ವಾಧೀನತೆಯನ್ನು, ಆಪನ್ನಃ–ಹೊಂದಿದವನಾಗಿ, ಮಮ–ನನ್ನ, ಶಾಸನಂ–ಆಜ್ಞೆಯನ್ನು, ನಾಕರೋಃ–ಮಾಡದೇಹೋದೆ ||೨೪|| ಅಹಂ–ನಾನು, ಮೃಗರೂಪೇಣ–ಮೃಗರೂಪಧಾರಿಯಾದ, ಯೇನ–ಯಾವ ಮಾರೀಚನಿಂದ. ಆಶ್ರಮಾತ್–ಆಶ್ರಮದವೆಶೆಯಿಂದ, ಅಪವಾಹಿತಃ–ಹೊರಡಿಸಲ್ಪಟ್ಟೆನೋ, ಅಸೌರಾಕ್ಷಸಃ–ಈ ರಕ್ಕಸನು, ಮಯಾ–ನನ್ನಿಂದ, ಶರೇಣ–ಬಂದ್ರುಬಾಣದಿಂದ, ಅಭಿಹತಃ–ಹೊಡೆಯಲ್ಪಟ್ಟವನಾಗಿ ಶೇತೇ–ಮಲಗಿದನು ||೨೫|| ಚಾಪಂ–ಧನುಸ್ಸನ್ನು. ವಿಕೃಷ್ಯ–ಶೆಳೆದು, ಸಾಯಕಂ–ಬಾಣವನ್ನು, ಪರಿಧಾಯ–ಸಂಧಾನವಮಾಡಿ, ಸಲೀಲಬಾಣೇನ–ವಿಲಾಸಾರ್ಥವಾಗಿರುವ ಬಾಣಗಳುಳ್ಳ, ಮಯಾ–ನನ್ನಿಂದ, ತಾಡಿತಃ–ಹೊಡೆಯಲ್ಪಟ್ಟವನಾಗಿ, ಮಾರ್ಗೀಂ–ಮೃಗಸಂಬಂಧವಾದ, ತನುಂ–ಶರೀರವನ್ನು, ತ್ಯಜ್ಯ–ಬಿಟ್ಟು, ಸವಿಕ್ಲಬಸ್ವರಃ–ದೀನಧ್ವನಿಯಿಂದೊಡಗೂಡಿದವನಾಗಿ, ಕೇಯೂರಧರಃ–ಬಾಹುಪುರಿಗಳಂ ಧರಿಸಿದವನಾಗಿ, ಸರಾಕ್ಷಸಃ–ಆ ರಾಕ್ಷಸನೇ, ಬಭೂವ–ಆದನು ||೨೬|| ತದಾ–ಆ ಕಾಲದಲ್ಲಿ, ಶರಾಹತೇನೈವ–ಬಾಣದಿಂಹೊಡೆಯಲ್ಪಟ್ಟ ರಕ್ಕಸನಿಂದಲೇ. ಸುದೂರಸಂಶ್ರವಂ–ಬಹಳದೂರ ಕೇಳಿಸತಕ್ಕ, ಮಮ–ನನ್ನ, ಸ್ವರಂ–ಧ್ವನಿಯನ್ನು. ಆಲಂಬ್ಯ–ಆಶ್ರಯಿಸಿ, ಆರ್ತಯಾ–ದೀನವಾದ, ಗಿರಾ–ಮಾತಿನಿಂದ. ಸುದಾರುಣಂ–ಬಹಳ ಕ್ರೂರಮಾದ, ತದ್ವಚಂ–ಲಕ್ಷ್ಮಣಾ ತ್ರಾಹಿ ಯೆಂಬ ಮಾತು, ಉದಾಹೃತಂ–ಹೇಳಲ್ಪಟ್ಟಿತು, ಯೇನ–ಯಾವ ವಚನದಿಂದ. ಮೈಥಿಲೀ–ಸೀತಾದೇವಿಯನ್ನು, ವಿಹಾಯ–ಬಿಟ್ಟು, ತ್ವಂ–ನೀನು. ಆಗತಃ–ಬಂದವನಾದೆಯೋ||೨೭|| —** ಇತಿಶ್ರೀಮದಾರಣ್ಯಕಾಂಡೇ–ಏಕೋನಷಷ್ಟಿತಮಸ್ಸರ್ಗಃ **—

ಭೃಶಂ–ಬಹಳವಾಗಿ, ಆವ್ರಜಮಾನಸ್ಯ–ಬರುತ್ತಿರುವ ತಸ್ಯ–ಆ ಶ್ರೀರಾಮನ, ಅಧೋವಾಮಲೋಚನಂ–ಎಡಗಣ್ಣಿನ ಅಧಃಪ್ರದೇಶವು, ಪ್ರಾಸ್ಫುರತ್–ಅದುರಿತು. ರಾಮಃ–ಶ್ರೀರಾಮನು, ಪ್ರಾಸ್ಖಲಚ್ಚ–ಜಾರಿದನು, ವೇಪಥುಶ್ಚಾಪಿ–ಶರೀರಕಂಪವೂ. ಅಜಾಯತ–ಹುಟ್ಟಿತು ||೧|| ಸಃ–ಆ ಶ್ರೀರಾಮನು-

---

ನಿನಗೆ ಗೊತ್ತಾಗಿದ್ದರೂ ಕೂಡಾ ನೀನು ಆಕೆಯಂ ಬಿಟ್ಟು ಬಂದದ್ದು ಅಯುಕ್ತವು, ಈ ಕೋಪೋದ್ರೇಕವಾದ ಮಾತುಗಳಿಂದ ಹೊರಟು ಬಂದವಿಷಯದಲ್ಲಿ ನಾನು ಸಂತೋಷಿಸುವದಿಲ್ಲ, ಕುಪಿತಳಾದ ಆಕೆಯ ಮಾತುಗಳಂ ಕೇಳಿ ನೀನುಹೊರಟುಬಂದದ್ದಾವದುಂಟೋ ಅದು ವಿನಯಮಾರ್ಗವಲ್ಲ ಸರ್ವಾತ್ಮನಾಧೂರ್ತತೆಯೇ ಸರಿ?।೨೩। ಯಾಕಂದರೆ,—ಸೀತಾದೇವಿಯಿಂದ ಪ್ರೇರಿಸಲ್ಪಟ್ಟವನಾಗಿ ಕೋಪವನ್ನೈದಿ ನನ್ನಾಜ್ಞೆಯನ್ನು ಮಾಡದೇ ಹೋದೆ, ನಾನಾದರೆ ಮೃಗರೂಪಧಾರಿಯಾದ ಮಾರೀಚನಿಂದ ಆಶ್ರಮಪ್ರದೇಶದ ದೆಶೆಯಿಂದ ಕಳದೊಯ್ಯಲ್ಪಟ್ಟವನಾದೆನು, ಈ ಅಸುರನಾದರೆ ಈಗ ಬಾಣದಿಂದ ಹತನಾಗಿ ಮಲಗಿದನು ।೨೫। ಎಲೈ ಲಕ್ಷ್ಮಣನೇ! ಕೋದಂಡವಂ ಕೆಳದು ಬಾಣಸಂಧಾನಂ ಗೈದು ನನ್ನಿಂದ ಹೊಡೆಯಲ್ಪಟ್ಟು, ಆ ಮೃಗರೂಪವಂ ಬಿಟ್ಟು ದೀನಧ್ವನಿಯನ್ನೈದಿ, ತೋಳುಬಂದಿಗಳಂ ಧರಿಸಿಕ್ಕೊಂಡು ರಾಕ್ಷಸನಾದನು, ಆಗ ಆ ಬಾಣಪಾತದಿಂದ ಕೆಳಗೆ ಬೀಳುವ ಆ ರಾಕ್ಷಸನು ಬಹುದೂರದವರಿಗೂ ಕೇಳಿಸುವಂತೆ, ನನ್ನ ಸ್ವರವನ್ನನುಸರಿಸಿ, ಎಲೈ ಲಕ್ಷ್ಮಣನೇ! ಎನ್ನಂ ಪಾಲಿಸುವವನಾಗೆಂದು ಪೇಳಿದನು, ಆ ವಾಕ್ಯದಿಂದ ನೀನು ಸೀತಾದೇವಿಯುಂಬಿಟ್ಟುಬಂದವನಾದೆಂದು ಶ್ರೀರಾಮನು ನುಡಿದನು ।೨೭।

—** ಆರಣ್ಯಕಾಂಡದಲ್ಲಿನ ೫೯ ನೆಯ ಸರ್ಗಂ ಮುಗಿದುದು **—

ಈರೀತಿಯಾಗಿ ಪರಿಪರಿನುಡಿಯುತ್ತಾ ಬರುತಲಿರುವ ಆ ಶ್ರೀರಾಮನ ಯೆಡಗಣ್ಣಿನ ಕೆಳಭಾಗವು

ಉಪಾಲಕ್ಷ್ಯೆಸಿಮಿತ್ತಾನಿಸೋಶುಭಾನಿಮುಹುರ್ಮುಹುಃ । ಅಪಿಕ್ಷೇಮಂನುಸೀತಾಯಾಇತಿವೈವ್ಯಾಜಹಾರಚ ।೨।
ತ್ವರಮಾಣೋಜಗಾಮಾಭಿಸೀತಾದರ್ಶನಲಾಲಸಃ । ಶೂನ್ಯಮಾವಸಥಂದೃಷ್ಟ್ವಾಬಭೂವೋದ್ವಿಗ್ನಮಾನಸಃ ।೩।
ಉದ್ಭ್ರಮನ್ನಿವವೇಗೇನವಿಕ್ಷಿಪನ್ರಘುನಂದನಃ । ತತ್ರತತ್ರೋಟಜಸ್ಥಾನಮಭಿವೀಕ್ಷ್ಯಸಮಂತತಃ । ದದರ್ಶಪರ್ಣ
ಶಾಲಾಂಚರಹಿತಾಂಸೀತಯಾತದಾ । ಶ್ರಿಯಾವಿರಹಿತಾಂಧ್ವಸ್ತಾಂಹೇಮಂತೇಪದ್ಮಿನೀಮಿವ ।೪। ರುದಂತಮಿವವೃಕ್ಷೈ
ಶ್ಚಮ್ಲಾನಪುಷ್ಪಮೃಗದ್ವಿಜಂ । ಶ್ರಿಯಾವಿಹೀನಂವಿಧ್ವಸ್ತಂಸಂತ್ಯಕ್ತವನದೈವತಂ । ವಿಪ್ರಕೀರ್ಣಾಜಿನಕುಶಂವಿಪ್ರ
ವಿದ್ಧಬೃಸೀಕಟಂ । ದೃಷ್ಟ್ವಾಶೂನ್ಯಂನಿಜಸ್ಥಾನಂವಿಲಲಾಪಪುನಃಪುನಃ ।೭। ಹೃತಾಮೃತಾವಾನಷ್ಟಾವಾಭಕ್ಷಿ
ತಾವಾಭವಿಷ್ಯತಿ । ನಿಲೀನಾಪ್ಯಥವಾಭೀರುರಥವಾವನಮಾಶ್ರಿತಾ । ಗತಾವಿಚೇತುಂಪುಷ್ಪಾಣಿಫಲಾನ್ಯಪಿಚವಾಪುನಃ ।
ಅಥವಾಪದ್ಮಿನೀಂಯಾತಾಜಲಾರ್ಥಂವಾನದೀಂಗತಾ ।೯। ಯತ್ನಾನ್ಮೃಗಯಮಾಣಸ್ತುನಾಸಸಾದವನೇಪ್ರಿಯಾಂ ।

---

ನು ಮುಹುರ್ಮುಹುಃ-ಬಾರಿಬಾರಿಗೂ, ಅಶುಭಾನಿ-ಅಮಂಗಳಕರವಾದ, ನಿಮಿತ್ತಾನಿ-ದುಶ್ಶಕುನಗಳನ್ನು, ಉಪಾಲಕ್ಷ್ಯ-ಕಂಡು, ಸೀತಾಯಾಃ-ಸೀತಾದೇವಿಗೆ, ಕ್ಷೇಮಮಪಿ-ಕ್ಷೇಮವೇ ಎಂದು, ವ್ಯಾಜಹಾರಚ-ಹೇಳಿದನು ॥೨॥ ಅಥ-ಬಳಿಕ, ಸೀತಾದರ್ಶನಲಾಲಸಃ-ಸೀತಾದೇವಿಯು ನೋಡುವಿಕೆಯಲ್ಲಿ ಆಸಕ್ತನಾಗಿ, ತ್ವರಮಾಣಃ-ತ್ವರೆಗೊಂಡವನಾಗಿ, ಅಭಿಜಗಾಮ-ತೆರಳಿದನು, ಶೂನ್ಯಂ-ಬರಿದಾಗಿರುವ, ಆವಸಥಂ-ಮನೆಯನ್ನು, ದೃಷ್ಟ್ವಾ-ಕಂಡು, ಉದ್ವಿಗ್ನಮಾನಸಃ-ಗಾಬರಿಬಿದ್ದ ಮನವುಳ್ಳವನು, ಬಭೂವ-ಆದನು ॥೩॥ ರಘುನಂದನಃ-ಶ್ರೀರಾಮನು, ತತ್ರತತ್ರ-ಆಯಾಯ ಪ್ರದೇಶಗಳಲ್ಲಿ, ಉಟಜಸ್ಥಾನಂ-ಆಶ್ರಮಸ್ಥಳವನ್ನು, ಸಮಂತತಃ-ಯಲ್ಲಾ ಕಡೆಯಲ್ಲಿ, ಅಭಿವೀಕ್ಷ್ಯ-ಕಂಡು, ವೇಗೇನ-ಜವದಿಂದ, ಉದ್ಭ್ರಮನ್ನಿವ-ಕುಣಿದಾಡುವನೋ ಎಂಬಂತೆ, ವಿಕ್ಷಿಪನ್-ಯಗುರುತ್ತಿರುವವನಾಗಿ, ತದಾ-ಆ ಕಾಲದಲ್ಲಿ, ಪರ್ಣಶಾಲಾಂ-ಆಶ್ರಮವನ್ನು, ಸೀತಯಾ-ಸೀತಾದೇವಿಯಿಂದ, ರಹಿತಾಂ-ವರ್ಜಿತವಾದ್ದನ್ನಾಗಿ, ಶ್ರಿಯಾ-ಕಾಂತಿಯಿಂದ, ವಿರಹಿತಾಂ-ಶೂನ್ಯವಾದ, ಹೇಮಂತೇ-ಹಿಮಂತಋತುವಿನಲ್ಲಿ, ಧ್ವಸ್ತಾಂ-ನಾಶಗೊಳಿಸಲ್ಪಟ್ಟ, ಪದ್ಮಿನೀಮಿವ-ಕಮಲದ ಬಳ್ಳಿಯನ್ನಂತೆ, ದದರ್ಶ-ಕಂಡನು ॥೪॥ ॥ ವೃಕ್ಷೈಃ-ಗಿಡಗಳಿಂದ, ರುದಂತಮಿವ-ಅಳುತ್ತದೋ ಎಂಬಂತಿರುವ, ಮ್ಲಾನಪುಷ್ಪಮೃಗದ್ವಿಜಂ-ಬಾಡಿದ ಪುಷ್ಪಗಳೂ ಮೃಗಗಳೂ ಹಕ್ಕಿಗಳೂ ವುಳ್ಳ, ಶ್ರಿಯಾ-ಕಾಂತಿಯಿಂದ, ವಿಹೀನಂ-ಶೂನ್ಯವಾದ, ವಿಧ್ವಸ್ತಂ-ನಾಶಗೊಳಿಸಲ್ಪಟ್ಟ, ಸಂತ್ಯಕ್ತವನದೈವತಂ-ಬಿಡಲ್ಪಟ್ಟ ವನದೇವತೆಗಳುಳ್ಳ, ವಿಪ್ರಕೀರ್ಣಾಜಿನಕುಶಂ-ತಲೆಕೆಳಗಾಗಿ ಹಾಸಲ್ಪಟ್ಟ ಕೃಷ್ಣಾಜಿನವೂ ದರ್ಭೆಗಳೂ ಉಳ್ಳ, ವಿಪ್ರವಿದ್ಧಬೃಸೀಕಟಂ-ವ್ಯತ್ಯಾಸವಾಗಿ ಹಾಸಲ್ಪಟ್ಟ ಋಷ್ಯಾಸನವೂ ವುಳ್ಳ, ( ಅಂದರೆ_ಚಾಪೆಗಳು. ) ಶೂನ್ಯಂ-ಜನರಹಿತವಾದ, ನಿಜಸ್ಥಾನಂ-ತನ್ನಸ್ಥಳವನ್ನು, ದೃಷ್ಟ್ವಾ-ಕಂಡು, ಪುನಃಪುನಃ-ಬಾರಿಬಾರಿಗೂ, ವಿಲಲಾಪ-ಪ್ರಲಾಪವಮಾಡಿದನು ॥೭॥ ಹೃತಾ-ಯಾವನಿಂದಲಾದರೂ ಅಪಹರಿಸಲ್ಪಟ್ಟವಳು, ಮೃತಾವಾ-ಮರಣಹೊಂದಿದವಳಾದರೂ, ನಷ್ಟಾವಾ-ಯದೃಚ್ಛೆಯಿಂ ಅದರ್ಶನವಂ ಹೊಂದಿದವಳು, ಭಕ್ಷಿತಾವಾ-ತಿನ್ನಲ್ಪಟ್ಟವಳು, ಭವಿಷ್ಯತಿ-ಆಗುವಳು, ಅಥವಾ-ಹಾಗಲ್ಲದಿದ್ದೊಡೆ, ಭೀರುಃ-ಭಯಶೀಲಳಾಗಿ. ನಿಲೀನಾ-ಔತುಕೊಂಡಿರುವಳೋ ಯೇನೊ, ಅಥವಾ-ಹಾಗಲ್ಲದಿದ್ದೊಡೆ, ವನಂ-ಅರಣ್ಯವನ್ನು, ಆಶ್ರಿತಾ-ಆಶ್ರಯಿಸಿದಳೋ ಯೇನೊ, ಪುಷ್ಪಾನಿ-ಹುವ್ವುಗಳನ್ನು, ಫಲಾನ್ಯಪಿಚ-ಫಲಗಳನ್ನು, ವಿಚೇತುಂ-ಕೊಯ್ಯುವದಕ್ಕಾಗಿ, ಗತಾವಾ-ಪೋದಳೋ ಯೇನೊ, ಪುನಃ-ಮತ್ತು, ಅಥವಾ-ಹಾಗಲ್ಲದಿದ್ದೊಡೆ, ಜಲಾರ್ಥಂ-ನೀರಿಗಾಗಿ, ಪದ್ಮಿನೀಂ-ಸರೋವರವಂಕುರಿತು, ಯಾತಾವಾ-ಹೋಗಿಧ್ದ

---

ಚಲಿಸಿದಂಥಾದ್ದಾಗಲೂ, ಶ್ರೀರಾಮನು ಜಾರಿದನು, ಮತ್ತೂ ಆತನ ಶರೀರವು ಕಂಪಿಸಿತು।೧।ಅನಂತರದಲ್ಲಿಶ್ರೀರಾಮನು ಅಮಂಗಳಕರವಾದ ಆದುಶ್ಶಕುನಗಳನ್ನು ನೋಡಿಸೀತಾದೇವಿಯುಕ್ಷೇಮವಾಗಿರುವಳೋ ಏನೋ ಎಂದು ನುಡಿದು, ಆ ದೇವಿಯಂ ನೋಡುವುದರಲ್ಲಿಯೇ ಆಸಕ್ತಿಯುಳ್ಳವನಾಗಿ, ತ್ವರೆಯಿಂ ಬಂದು ಶೂನ್ಯವಾಗಿರುವ ಆ ಮನೆಯಂ ಕಂಡು, ಹೆದರಿದ ಮನವುಳ್ಳವನಾದನು ।೩। ಮತ್ತೂ ಆ ಆಶ್ರಮದಲ್ಲಿ ಶ್ರೀರಾಮನು ಪರ್ಣಶಾಲೆಯನ್ನೆಲ್ಲಾ ನೋಡಿ ಕುಣಿದಾಡುವನೋ ಯೇನೋ ಎಂಬಂತೆ ನೆಗದಾಡುತ್ತಾ, ಸೀತಾರಹಿತವಾದ ಆ ಆಶ್ರಮವನ್ನು, ಕಾಂತಿಹೀನವಾದ ತಾವರೇ ಬಳ್ಳಿಯಂ ನೋಡುವಂದದಿ ನೋಡಿದನು ।೪೫। ಮತ್ತೂ ಆ ಶ್ರೀರಾಮನು ಅನೇಕವಾದ ವೃಕ್ಷಂಗಳಿಂದ ಅಳುತಿರುವದೋ ಯೇನೋ, ಎಂಬಂತಿರುವದಾಗಿಯೂ, ಬಾಡಿದ ಪುಷ್ಪಂಗಳೂ ಬಳಲಿದ ಮೃಗಂಗಳೂ ಹಕ್ಕಿಗಳೂ ಸಹಾ ಉಳ್ಳದ್ದಾಗಿಯೂ ನಿಸ್ತೇಜಸ್ಕವಾಗಿಯೂ, ಬಿಡಲ್ಪಟ್ಟ ಸ್ಥಾನಂಗಳುಳ್ಳವನದೇವತೆಗಳುಳ್ಳದ್ದಾಗಿಯೂ, ತಲೆಕೆಳಗಾಗಿ ಹಾಸಲ್ಪಟ್ಟ ಕೃಷ್ಣಾಜಿನಗಳೂ ದರ್ಭೆಗಳೂ ಸಹಾ ಉಳ್ಳದ್ದಾಗಿಯೂ,ವ್ಯತ್ಯಾಸವಾಗಿ ಮಾಡಲ್ಪಟ್ಟ ಋಷ್ಯಾಸನಗಳೂ ಚಾಪೆಗಳೂ ಸಹಾ ಉಳ್ಳದ್ದಾಗಿಯೂ ಇರುವ ಆ ಜನಸ್ಥಾನವಂ ಕಂಡು, ಬಾರಿಬಾರಿಗೂ ವಿಲಾಪಂ ಗೈದನದೆಂತೆನೆ,—।೭। ಜನಕರಾಜ ಕನ್ನಿಕೆಯಾದ ಸೀತಾದೇವಿಯು ಯಾವನಿಂದಲಾದರೂ ಅಪಹರಿಸಲ್ಪಟ್ಟಳೋ, ಅಥವಾ ಮರಣವನ್ನೈದಿದಳೋ, ಸ್ವೇಚ್ಛೆಯಿಂದ ಅದರ್ಶನವನ್ನೈದಿದಳೋಯೇನೋ, ಹಾಗಲ್ಲದಿದ್ದರೆ ಭೀತಿಗೊಂಡವಳಾಗಿ ಯೆಲ್ಲ್ಯಾದರೂ ಬಂದು ಕಡೆಯಲ್ಲಿ ಔತುಕೊಂಡಿರುವಳೋ ಇಲ್ಲದಿದ್ದ

ಶೋಕರಕ್ತೇಕ್ಷಣಶ್ಶೋಕಾದುನ್ಮತ್ತಇವಲಕ್ಷ್ಯತೇ ॥೧೦॥ ವೃಕ್ಷಾದ್ವೃಕ್ಷಂಪ್ರಧಾವನ್ಸಗಿರೇಶ್ಚಾದ್ರಿಂನದಾನ್ನದೀಂ। ಬಭೂವವಿಲಪನ್ರಾಮಶ್ಶೋಕಪಂಕಾರ್ಣವಾಪ್ಲುತಃ ॥೧೧॥ ಅಪಿಕಾಚಿತ್ತ್ವಯಾದೃಷ್ಟಾನಾಕದಂಬಪ್ರಿಯಾಪ್ರಿಯಾ। ಕದಂಬಯದಿಜಾನೀಷೇಶಂಸಸೀತಾಂಶುಭಾನನಾಂ ॥೧೨॥ ಸ್ನಿಗ್ಧಪಲ್ಲವಸಂಕಾಶಾಪೀತಕೌಶೇಯವಾಸಿನೀ । ಶಂಸಸ್ವಯದಿವಾದೃಷ್ಟಾಬಿಲ್ವಬಿಲ್ವೋಪಮಸ್ತನೀ ॥೧೩॥ ಅಥವಾರ್ಜುನಶಂಸತ್ವಂಪ್ರಿಯಾಂತಾಮರ್ಜುನಪ್ರಿಯಾಂ । ಜನಕಸ್ಯಸುತಾಭೀರುರ್ಯದಿಜೀವತಿವಾನವಾ ॥೧೪॥ ಕಕುಭಃಕಕುಭೋರೂಂತಾಂವ್ಯಕ್ತಂಜಾನಾತಿಮೈಥಿಲೀಂ । ಯಥಾಪಲ್ಲವಪುಷ್ಪಾಢ್ಯೋಭಾತಿಹ್ಯೇಷವನಸ್ಪತಿಃ ॥೧೫॥ ಭ್ರಮರೈರುಪಗೀತಶ್ಚ ಯಥಾದ್ರುಮವರೋಹ್ಯಯಂ । ಏಷವ್ಯ

ಳೋ ಯೇನು, ಅಥವಾ–ಹಾಗಲ್ಲದಿದ್ದರೆ, ನದೀಂ–ನದಿಯಂ ಕುರಿತು. ಗತಾವಾ–ಹೋಗಿಥಾಳೋ ಯೇನು ಇತಿ–ಇಂತೆಂದು, ವಿಲಲಾಪ–ವಿಲಪಿಸಿದನು ॥೯॥ ಯತ್ನಾತ್–ಪ್ರಯತ್ನದ ದೆಸೆಯಿಂದ. ವನೇ–ಅರಣ್ಯದಲ್ಲಿ. ಪ್ರಿಯಾಂ–ಹೆಂಡತಿಯಾದ ಸೀತಾದೇವಿಯನ್ನು, ಮೃಗಯಮಾಣಸ್ತು–ಹುಡುಕುತ್ತಿರುವವನಾಗಿ ನಾಸನಾದ–ಹೊಂದಲಿಲ್ಲ. ಶೋಕರಕ್ತೇಕ್ಷಣಃ–ವ್ಯಸನದಿಂ ಕೆಂಪೇರಿದ ನೇತ್ರಗಳುಳ್ಳವನಾಗಿ, ಶೋಕಾತ್–ವ್ಯಸನದದೆಸೆಯಿಂದ, ಉನ್ಮತ್ತ ಇವ–ಭ್ರಾಂತಚಿತ್ತನಂತೆ, ಲಕ್ಷ್ಯತೇ–ಕಾಣಲ್ಪಟ್ಟನು ॥೧೦॥ ಸರಾಮಃ–ಆ ಶ್ರೀರಾಮನು, ವೃಕ್ಷಾತ್–ಗಿಡದದೆಸೆಯಿಂದ, ವೃಕ್ಷಂ–ಗಿಡವಂ ಕುರಿತು, ಗಿರೇಃ–ಬೆಟ್ಟದದೆಸೆಯಿಂದ ಗಿರಿಂ–ಬೆಟ್ಟವಂ ಕುರಿತು, ನದಾತ್–ಗಂಡುಹೊಳೆಯದೆಸೆಯಿಂದ, ನದೀಂ–ಸ್ತ್ರೀನದಿಯನ್ನು ಕುರಿತು, ಪ್ರಧಾವನ್–ಓಡಿಹೋಗುತ್ತಿರುವವನಾಗಿ, ವಿಲಪನ್–ವಿಲಾಪವಮಾಡುತ್ತಿರುವವನಾಗಿ, ಶೋಕಪಂಕಾರ್ಣವಾಪ್ಲುತಃ–ಶೋಕ–ವ್ಯಸನವೆಂಬ, ಪಂಕಾರ್ಣವ–ಕೆಸರಿನ ಕಡಲಿನಲ್ಲಿ, ಆಪ್ಲುತಃ–ಮುಳುಗಿದವನು ಬಭೂವ ಆದನು ॥೧೧॥ ಹೇಕದಂಬ–ಎಲೈ ಕಡಹದ ಗಿಡವೇ, ಕದಂಬಪ್ರಿಯಾ–ಕದಂಬ ಪುಷ್ಪಗಳು ಯಿಷ್ಟವಾಗುಳ್ಳ, ಪ್ರಿಯಾ–ನನಗೆ ಹೆಂಡತಿಯಾದ, ಕಾಚಿತ್–ಒಬ್ಬಾನೊಬ್ಬಳಾದ, ಸಾ–ಆ ಸೀತಾದೇವಿಯು, ತ್ವಯಾ–ನಿನ್ನಿಂದ, ದೃಷ್ಟಾ–ನೋಡಲ್ಪಟ್ಟಳೇ, ಶುಭಾನನಾಂ–ಶುಭಕರವಾದ ಮುಖವುಳ್ಳ, ಸೀತಾಂ–ಸೀತಾದೇವಿಯನ್ನು. ಜಾನೀಷೇಯದಿ–ತಿಳಿದವನೇ ಆದರೆ. ಶಂಸ–ಹೇಳು ॥೧೨॥ ಹೇಬಿಲ್ವ–ಎಲೈಬಿಲ್ವವೃಕ್ಷವೇ. ಸ್ನಿಗ್ಧಪಲ್ಲವಸಂಕಾಶಾ–ಸ್ನಿಗ್ಧ–ಮೃದುವಾದ ಚಿಗರುಗಳಿಗೆ ಸಮಾನವಾದ ಮಾರ್ದವವುಳ್ಳ, ಪೀತಕೌಶೇಯವಾಸಿನೀ–ಪೀತಾಂಬರಧಾರಿಯಾದ, ಬಿಲ್ವೋಪಮಸ್ತನೀ–ಬಿಲ್ವಪತ್ರೆಕಾಯಿಗೆ ಸಮಾನವಾದ ಸ್ತನಗಳುಳ್ಳ ಸೀತಾದೇವಿಯು, ದೃಷ್ಟಾವಾಯದಿ–ಕಾಣಲ್ಪಟ್ಟವಳೇ ಆದರೆ, ಶಂಸಸ್ವ–ಹೇಳು ॥೧೩॥ ಅಥವಾ–ಹಾಗಲ್ಲದಿದ್ದರೆ, ಹೇಅರ್ಜುನ–ಎಲೈ ಅರ್ಜುನವೃಕ್ಷವೇ, ಅಂದರೆ–ಗಣಿಗಲಗಿಡ, ಅರ್ಜುನಪ್ರಿಯಾಂ–ಕರವೀರಪುಷ್ಪಗಳಲ್ಲಿ ವಿಶ್ವಾಸವುಳ್ಳ, ತಾಂಪ್ರಿಯಾಂ–ಆನನ್ನ ಹೆಂಡತಿಯನ್ನು, ತ್ವಂ–ನೀನು, ಶಂಸ–ಹೇಳು, ಜನಕಸ್ಯ–ಜನಕರಾಯನ, ಸುತಾ–ಮಗಳಾದ, ಭೀರುಃ–ಭಯಶೀಲಳಾದ ಸೀತಾದೇವಿಯು, ಯದಿಜೀವತಿವಾ–ಆದರೆ ಬದುಕಿರುವಳೇ, ನವಾ–ಇಲ್ಲವೇ ಶಂಸ–ಹೇಳು, ॥೧೪॥ ಕಕುಭಃ–ಎಲೈ ಕೆಂಪು ಮತ್ತೀಗಿಡವೇ, ಕಕುಭೋರೂಂ–ಮತ್ತೀಗಿಡಗಳಿಗೆ ಸಮಾನವಾದ ತೊಡೆಗಳುಳ್ಳ, ತಾಂಮೈಥಿಲೀಂ–ಆ ಸೀತಾದೇವಿಯನ್ನು, ವ್ಯಕ್ತಂ–ಸ್ಪಷ್ಟವಾಗಿ, ಜಾನಾತಿ–ತಿಳಿದಿಥೆ, ಯಥಾ–ಹ್ಯಾಗೆ, ಏಷವನಸ್ಪತಿಃ–ಈ ಗಿಡವು. ಪಲ್ಲವಶೋಭಾಢ್ಯಃ–ಚಿಗರುಗಳ ಕಾಂತಿಯಿಂದ ತುಂಬಿದಂಥಾದ್ದಾಗಿ, ಭಾತಿ–ಬೆಳಗುತ್ತದೋ, ॥೧೫॥ ಭ್ರಮರೈಃ–ದುಂಬಿಗಳಿಂದ, ಉಪಗೀತಶ್ಚ–ಗಾನವಾ

ರೆ ಫಲಗಳನ್ನಾಗಲೀ ಪುಷ್ಪಂಗಳನ್ನಾಗಲೀ ಹುಡುಕುವದಕ್ಕಾಗಿ ಪೋಗಿರುವಳೋ ಏನೋ, ಅಥವಾ ನೀರುತರುವದಕ್ಕಾಗಿ ಸರೋವರಕ್ಕೆ ಸಾರಿದಳೋ ಯೇನೋ, ಇಲ್ಲದಿದ್ದರೆ ನದಿಗೆ ಪೋದಳೋ ಏನೋ, ಎಂದು ವಿಲಾಪವಂಗೈಯ್ಯುತ್ತಾ ಅತಿಪ್ರಯತ್ನದಿಂದ ಆ ಅರಣ್ಯದಲ್ಲಿ ತನ್ನ ಪ್ರಿಯಳಾದ ಸೀತಾದೇವಿಯಂ ಹುಡುಕುತ್ತಾ ಆಕೆಯಂ ಕಾಣದೆ ಆ ಶೋಕದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಉನ್ಮತ್ತನಂತೆ ಕಾಣುತಲಿದ್ದನು ॥೧೦॥ ಮತ್ತೂ ಆ ಶ್ರೀರಾಮನು ಒಂದು ವೃಕ್ಷದಿಂದ ಮತ್ತೊಂದು ವೃಕ್ಷವನ್ನೂ, ಒಂದು ಬೆಟ್ಟದಿಂದ ಮತ್ತೊಂದು ಬೆಟ್ಟವನ್ನೂ, ಒಂದು ಹೊಳೆಯಿಂದ ಇನ್ನೊಂದು ಹೊಳೆಯನ್ನೂ ಸಹಾ ಕುರಿತು ಓಡಿಬರುತ್ತಲೂ ವಿಲಾಪವಂ ಗೈಯ್ಯುತಲೂ ಇರುವವನಾಗಿ, ಶೋಕವೆಂಬ ಕೆಸರುಳ್ಳ ಮಹಾ ಸಮುದ್ರದಲ್ಲಿ ಮುಳುಗಿದವನಾಗಿ, ಹುಡುಕಿದನದೆಂತೆನೆ;— ॥೧೧॥ ಎಲೈ ಕದಂಬವೃಕ್ಷವೇ! ನಿನ್ನ ಪುಷ್ಪಂಗಳಲ್ಲಿ ಅತಿಪ್ರೀತಿಯುಳ್ಳ ಮತ್ತೂ ನನ್ನ ಪ್ರಾಣಪ್ರಿಯಳಾದ ಸೀತೆಯೆಂಬ ಓರ್ವಳಾದ ಹೆಂಗಸು ನಿನ್ನಿಂದ ನೋಡಲ್ಪಟ್ಟಳೇ ಯೇನು? ಶುಭಕರವಾದ ದೃಷ್ಟಿಯುಳ್ಳ ಆಕೆಯನ್ನು ನೀನು ನೋಡಿದ್ದಾದರೆ ನನಗೆ ಪೇಳುವನಾಗು ॥೧೨॥ ಎಲೈ, ಬಿಲ್ವವೃಕ್ಷವೇ! ಮೃದುವಾದ ಚಿಗರಿನಂತೆ ಮೆತ್ತಗಿರುವ ಶರೀರವುಳ್ಳ, ಪಟ್ಟೆಸೀರೆಯನುಟ್ಟದ, ಮತ್ತೂ ನಿನ್ನ ಫಲಗಳಿಗೆ ಸಮಾನವಾದ ಪಯೋಧರಂಗಳುಳ್ಳ ಆ ಸೀತಾದೇವಿಯನ್ನು ನೀನು ನೋಡಿದ್ದರೆ ಪೇಳುವವನಾಗು ॥೧೩॥ ಎಲೋ ಎಲೋ, ಕರವೀರವೃಕ್ಷವೇ! ನಿನ್ನ ಸಂಬಂಧವಾದ ಕರವೀರಪುಷ್ಪಂಗಳಲ್ಲಿ ಪ್ರೀತಿಯುಳ್ಳ ಸೀತಾದೇವಿಯು, ನಿನಗೆ ಗೊತ್ತಾಗಿದ್ದರೇ ಆಕೆಯು ಜೀವದಿಂದಿರುವಳೋಯಿಲ್ಲವೊ ಪೇಳುವವನಾಗು ॥೧೪॥ ಎಲೈ ಮತ್ತೀಗಿಡವೇ! ನಿನಗೆ ಸಮಾನವಾದ ಊರುಪ್ರದೇಶವುಳ್ಳ, ಆ ಸೀತಾದೇವಿಯನ್ನು ನೀನು ಚೆನ್ನಾಗಿ ತಿಳಿದಿದ್ದರೆ, ಸೀತಾದೇವಿಯು ಯಲ್ಲಿರುವಳೊ ಪೇಳುವವನಾಗು ॥೧೫॥ ಎಲೈ ತಿಲ

ಕ್ತೇಂವಿಜಾನಾತಿತಿಲಕಸ್ತಿಲಕಪ್ರಿಯಾಂ ॥೧೬॥ ಅಶೋಕಶೋಕಾಪನುದಶೋಕೋಪಹತಚೇತಸಂ । ತ್ವನ್ನಾಮಾನಂಕುರು ಕ್ಷಿಪ್ರಂಪ್ರಿಯಾಸಂದರ್ಶನೇನಮಾಂ ॥೧೭॥ ಯದಿತಾಲತ್ವಯಾದೃಷ್ಟಾಪಕ್ವತಾಲಫಲಸ್ತನೀ । ಕಥಯಸ್ವವರಾರೋಹಾಂಕಾರುಣ್ಯಂಯದಿತೇಮಯಿ ॥೧೮॥ ಯದಿದೃಷ್ಟಾತ್ವಯಾಸೀತಾಜಂಬುಜಂಬೂಫಲೋಪಮಾ । ಪ್ರಿಯಾಂಯದಿವಿಜಾನೀಷೇನಿಶ್ಶಂಕಂಕಥಯಸ್ವಮೇ ॥೧೯॥ ಅಹೋತ್ವಂಕರ್ಣಿಕಾರಾದ್ಯಸುಪುಷ್ಪೈಃಶೋಭಸೇಭೃಶಂ । ಕರ್ಣಿಕಾರಪ್ರಿಯಾಂಸಾಧ್ವೀಂಶಂಸದೃಷ್ಟಾಪ್ರಿಯಾಯದಿ ॥೨೦॥ ಚೂತನೀಪಮಹಾಸಾಲಾನ್ಪನಸಾನ್ಕುರವಾನ್ಧವಾನ್ । ದಾಡಿಮಾನಸನಾನ್ಗತ್ವಾದೃಷ್ಟ್ವಾರಾಮೋಮಹಾಯಶಾಃ ॥ ಮಲ್ಲಿಕಾಮಾಧವೀಶ್ಚೈವಚಂಪಕಾನ್ಕೇತಕೀಸ್ತಥಾ । ಪೃಚ್ಛನ್ರಾ

---

ಗಲ್ಪಟ್ಟ. ದ್ರುಮಪುಂಗವಃ-ಗಿಡಗಳೊಳಗೆ ಶ್ರೇಷ್ಠವಾದ, ಅಯಂತಿಲಕಃ-ಈ ತಿಲಕವೃಕ್ಷವು, ಯಥಾ-ಹ್ಯಾಗೆ. ತಿಲಕಪ್ರಿಯಾಂ-ತಿಲಕದಲ್ಲಿ ವಿಶ್ವಾಸವುಳ್ಳ ಆ ಸೀತಾದೇವಿಯನ್ನು, ಯಥಾ-ಹ್ಯಾಗೆ, ವಿಜಾನಾತಿ-ತಿಳಿದಿರುವೆಯೋ. ತಥಾ-ಹಾಗೆ, ಏಷಃ-ಈ ಗಿಡವು, ಜಾನಾತೀತಿ-ತಿಳಿದಿರುವರೆಂದು, ಮನ್ಯೇ-ತಿಳಿದುಕೊಂಡಿದ್ದೇನೆ ॥೧೬॥ ಹೇಅಶೋಕ-ಎಲೈ ಅಶೋಕವೃಕ್ಷವೇ, ಶೋಕಾಪನುದ-ಶೋಕವನ್ನು ಹೋಗಲಾಡಿಸುವದೇ. ಶೋಕೋಪಹತಚೇತಸಂ-ವ್ಯಸನದಿಂ ಕೆಡಿಸಲ್ಪಟ್ಟ ಮನಸುಳ್ಳ, ಮಾಂ-ನನ್ನನ್ನು ಪ್ರಿಯಾಸಂದರ್ಶನೇನ-ಹೆಂಡತಿಯ ತೋರಿಸುವಿಕೆಯಿಂದ, ಕ್ಷಿಪ್ರಂ-ಜಾಗ್ರತೆಯಾಗಿ. ತ್ವನ್ನಾಮಾನಂ ನಿನ್ನ ಹೆಸರಿಗೆ ಸಮಾನವಾದ ಹೆಸರುಳ್ಳವನನ್ನಾಗಿ. (ಅಂದರೆ-ವ್ಯಸನರಹಿತನನ್ನಾಗಿ,) ಕುರು-ಮಾಡು ॥೧೭॥ ಹೇತಾಲ-ಎಲೈ ತಾಳವೃಕ್ಷವೇ, ಪಕ್ವತಾಳಫಲಸ್ತನೀ-ಹಣ್ಣಾದ ತಾಳಫಲಗಳಂತೆ ಸ್ತನಗಳುಳ್ಳ ಸೀತಾದೇವಿಯು. ತ್ವಯಾ-ನಿನ್ನಿಂದ, ದೃಷ್ಟಾಯದಿ-ನೋಡಲ್ಪಟ್ಟವಳೇ ಆದರೆ. ತೇ-ನಿನಗೆ, ಮಯಿ-ನನ್ನಲ್ಲಿ, ಕಾರುಣ್ಯಂಯದಿ-ದಯೆಯುಂಟಾದರೆ, ವರಾರೋಹಾಂ-ಶ್ರೇಷ್ಠಳೆಂಗಾದ ಸೀತಾದೇವಿಯನ್ನು, ಕಥಯಸ್ವ-ಹೇಳು ॥೧೮॥ ಹೇಜಂಬು-ಎಲೈ ನೇರಳೇ ಗಿಡವೇ, ಜಂಬೂಫಲೋಪಮಾಂ-ನೇರಳೇಹಣ್ಣಿಗೆ ಸಮಾನವಾದ ಮೃದುತ್ವವುಳ್ಳ, ಪ್ರಿಯಾಂ-ಹೆಂಡತಿಯಾದ ಸೀತಾದೇವಿಯನ್ನು ವಿಜಾನೀಷೇಯದಿ-ತಿಳಿದವನೇ ಆದರೆ, ತ್ವಯಾ-ನಿನ್ನಿಂದ ಸೀತಾ-ಸೀತಾದೇವಿಯು. ದೃಷ್ಟಾಯದಿ-ಕಾಣಲ್ಪಟ್ಟಳೇ ಆದರೆ-ನಿಶ್ಶಂಕಂ-ನಿರ್ಭಯವಾಗಿ, ಕಥಯಸ್ವ-ಹೇಳು ॥೧೯॥ ಹೇಕರ್ಣಿಕಾರ-ಎಲೈ ಬೆಟ್ಟದ ತಾವರೇ ಗಿಡವೇ, ಅದ್ಯ-ಈಗ. ತ್ವಂ-ನೀನು. ಸುಪುಷ್ಪೈಃ-ಒಳ್ಳೇ ಹುವ್ವುಗಳಿಂದ, ಭೃಶಂ-ಬಹಳವಾಗಿ, ಶೋಭಸೇ-ಬೆಳಗುತ್ತಿದ್ದೀಯಿ, ಅಹೋ-ಆಶ್ಚರ್ಯವು, ಕರ್ಣಿಕಾರಪ್ರಿಯಾ-ತಾವರೇ ಹುವ್ವುಗಳಲ್ಲಿ ವಿಶ್ವಾಸವುಳ್ಳ, ಸಾಧ್ವೀ-ಪತಿವ್ರತೆಯಾದ, ಪ್ರಿಯಾ-ನನ್ನ ಕಾಂತೆಯು, ತ್ವಯಾ-ನಿನ್ನಿಂದ, ದೃಷ್ಟಾಯದಿ-ಕಾಣಲ್ಪಟ್ಟವಳಾದರೆ, ಶಂಸ-ಹೇಳು ॥ ... ... ॥೨೦॥ ಮಹಾಯಶಾಃ-ಮಹಾಪರಾಕ್ರಮವಂತನಾದ, ರಾಮಃ-ರಂಜಕನಾದ, ರಾಮಃ-ಶ್ರೀರಾಮನು, ಚೂತನೀಪಮಹಾಸಾಲಾನ್-ಮಾವಿನಗಿಡಗಳನ್ನೂ ಅರ್ಜುನಗಿಡಗಳನ್ನೂ ದೊಡ್ಡಮದ್ದೀಗಿಡಗಳನ್ನೂ, ಪನಸಾನ್-ಹಲಸಿನಗಿಡಗಳನ್ನೂ, ಕುರವಾನ್-ಗೋರಟಗಿಡಗಳನ್ನೂ, ಧವಾನ್-ಕಗ್ಗಲೀಮರಗಳನ್ನೂ, ಅಸನಾನ್-ಹೊನ್ನೇಗಿಡಗಳನ್ನೂ ಕುರಿತು, ಗತ್ವಾ-ಹೋಗಿ, ದೃಷ್ಟ್ವಾ-ಕಂಡು. ಪೃಚ್ಛನ್-ಕೇಳುತ್ತಿರುವವನಾಗಿ, ತಥಾ-ಹಾಗೆಯೇ, ಮಲ್ಲಿಕಾಃ-ಮಲ್ಲಿಗೆ ಗಿಡಗಳನ್ನು, ಮಾಧವೀಶ್ಚೈವ-ಗುಲಗಂಜಿಬಳ್ಳಿಗಳನ್ನು, ಚಂಪಕಾನ್-ಸಂಪಿಗೆಗಿಡಗಳನ್ನು, ಕೇತಕೀಃ-ಗೇದಗೆಗಿಡಗಳನ್ನು, ಅಪೃಚ್ಛತ್-ಕೇಳಿದನು, ವನೇ-ಅರಣ್ಯದಲ್ಲಿ, ಉನ್ಮತ್ತಇವ-ಉನ್ಮಾದಾವಸ್ಥೆಯನ್ನು ಹೊಂದಿದವನಂತೆ, ಭ್ರಾಂತಯಿವ-ಭ್ರಾಂತಿಯಂ ಹೊಂದಿದವನಂತೆ, ಲಕ್ಷ್ಯತೇ-ಕಾಣಲ್ಪಟ್ಟನು. (ಅಥವಾ-ಈ ಶ್ಲೋಕದಲ್ಲಿ ಎರಡು ರಾಮಪದಗಳಿದ್ದದ್ದರಿಂ ಆ ಎರಡು ಪದಗಳಿಗೂ ಅಪೃಚ್ಛ ಎಂಬ ಕ್ರಿಯಾಪದಕ್ಕೆ ಒಂದು ಸೇರಿಸಿ. ಲಕ್ಷ್ಯತೇ-ಎಂಬ ಕ್ರಿಯಾಪದಕ್ಕೆ ಒಂದು ಸೇರಿಸಿದರೆ ದೋಷವಿಲ್ಲ) ಇಲ್ಲಿ ವಸ್ತುತಸ್ತು-ಅಂಥಾ ಭಗವತ್ಸ್ವರೂಪನಾದ ಶ್ರೀರಾಮನು ಸೀತಾದೇವಿಯಂಕುರಿತು ವೃಕ್ಷಗಳ

---

ವೃಕ್ಷವೇ! ದುಂಬಿಗಳಿಂದ ಗಾನವಂ ಗೈಯ್ಯಲ್ಪಟ್ಟ, ಮತ್ತು, ವೃಕ್ಷಶ್ರೇಷ್ಠನಾದ ನೀನು, ತಿಲಕದಲ್ಲಿ ಅತಿಪ್ರೀತಿಯುಳ್ಳ ಆ ಸೀತಾದೇವಿಯನ್ನು, ತಿಳಿದಿರುವೀ ಎಂದು ನಾನು ಭಾವಿಸುತ್ತೇನೇ ॥೧೬॥ ಶೋಕಪರಿಹಾರವಂ ಗೈಯುತ್ತಲಿರುವ ಎಲೈ ಅಶೋಕವೃಕ್ಷವೇ! ಬಹು ಶೋಕಾಕ್ರಾಂತನಾದ ನನಗೆ ಪ್ರಾಣಕಾಂತೆಯಾದ ಸೀತಾದೇವಿಯಂ ತೋರಿಸಿ ಎನ್ನನ್ನು ಶೋಕರಹಿತನನ್ನಾಗಿ ಮಾಡು ॥೧೭॥ ಎಲೈ ತಾಳವೃಕ್ಷವೇ! ನಿನ್ನ ಫಲಂಗಳೋಪಾದಿಯುಳ್ಳಿರುವಕುಚಗಳುಳ್ಳ ಆ ಸೀತೆಯು, ನಿನ್ನಿಂ ವೀಕ್ಷಿಸಲ್ಪಟ್ಟಿರ್ದೊಡೆ, ಮತ್ತು ನಿನಗೆ ನನ್ನಲ್ಲಿ ವಿಶ್ವಾಸವಿರ್ದೊಡೆ, ಆ ಜನಕರಾಜನ ಕುವರಿಯನ್ನು ಪೇಳುವವನಾಗು ॥೧೮॥ ಎಲೈ ಜಂಬೂವೃಕ್ಷವೇ! ನಿನ್ನ ಫಲಂಗಳ ತೆರದತಿ ಮೃದುವಾಗಿರುವ ನನ್ನ ಪ್ರಾಣನಾಯಕಿಯಾದ ಆ ವೈದೇಹಿಯನ್ನು ನೀನು ತಿಳಿದಿದ್ದರೂ, ಅಥವಾ ಆಕೆಯನ್ನು ನೋಡಿದ್ದರೂ ಪೇಳುವವನಾಗು ॥೧೯॥ ಎಲೈ ಕರ್ಣಿಕಾರವೃಕ್ಷವೇ! ನೀನೀಗ, ಮಹಾ ಪರಿಮಳಯುಕ್ತಂಗಳಾದ ಪುಷ್ಪಂಗಳಿಂದ ಅತಿರಮ್ಯವಾಗಿ ಬೆಳಗುತಲಿದ್ದೀ, ಮಹಾ ಪತಿವ್ರತೆಯಾದ ಎನ್ನ ಪ್ರಾಣಕಾಂತೆಯು ನಿನ್ನಿಂದ ನೋಡಲ್ಪಟ್ಟಿದ್ದರೇ, ಪೇಳುವವನಾಗು ॥೨೦॥ ಎಂಬದಾಗಿ, ರಘುಕುಲೋತ್ಪನ್ನನಾದ ಶ್ರೀರಾಮನು, ಈ ವೃಕ್ಷಂಗಳನ್ನು ಮತ್ತು "ಚೂತ, ನೀಪ, ಮಹಾಸಾಲ, ಪನಸ, ಕುರವ, ಧವ, ಅಸನ," ಎಂಬಿವುಗಳು ಮೊದಲಾದ ವೃಕ್ಷಂಗಳನ್ನು, ಮತ್ತು, ಇತರವಾದ "ಮಲ್ಲಿಕಾ, ಮಾಧವೀ, ಚಂಪಕ, ಕೇತಕೀ," ಎಂಬಿವುಗಳು ಮುಂತಾದ ವೃಕ್ಷಂ

ಮೋವನೇಭ್ರಾಂತಉನ್ಮತ್ತಇವಲಕ್ಷ್ಯತೇ ।೨೨। ಅಥವಾಮೃಗಶಾಬಾಕ್ಷೀಂಮೃಗಜಾನಾಸಿಮೈಥಿಲೀಂ । ಮೃಗವಿಪ್ರೇಕ್ಷಣೀಕಾಂತಾಮೃಗೀಭಿಸ್ಸಹಿತಾಭವೇತ್ ।೨೩। ಗಜಸಾಗಜನಾಸೋರೂರ್ಯದಿದೃಷ್ಟಾತ್ವಯಾಭವೇತ್ । ತಾಂಮನ್ಯೇವಿದಿತಾಂತುಭ್ಯಮಾಖ್ಯಾಹಿವರವಾರಣ ।೨೪। ಶಾರ್ದೂಲಯದಿಸಾದೃಷ್ಟಾಪ್ರಿಯಾಚಂದ್ರನಿಭಾನನಾ । ಮೈಥಿಲೀಮಮವಿಸ್ರಬ್ಧಂಕಥಯಸ್ವನತೇಭಯಂ ।೨೫। ಕಿಂಧಾವಸಿಪ್ರಿಯೆದೂರಂದೃಷ್ಟಾಸಿಕಮಲೇಕ್ಷಣೇ । ವೃಕ್ಷೈರಾಚ್ಛಾದ್ಯ

ನ್ನು ಕೇಳುತ್ತಲೂ ಉನ್ಮತ್ತನಂತೆ ಭ್ರಾಂತನಂತೆ ಕಾಣಲ್ಪಟ್ಟನೆಂಬದಾಗಿ ಸರ್ವಜ್ಞನಾದ ಶ್ರೀವಾಲ್ಮೀಕಿಋಷಿಗಳಿಂದ ಇವಶಬ್ದ ಪ್ರಯುಕ್ತವಾಯಿತು ಉನ್ಮತ್ತನಂತೆ ಯಿದ್ದನೆಂದು ಹೇಳಿದ್ದರಿಂದಲೂ ಭ್ರಾಂತನಂತೆ ಯಿದ್ದನೆಂದು ಹೇಳಿದ್ದರಿಂದಲೂ ಭ್ರಾಂತನಲ್ಲವೆಂತಲೂ ಉನ್ಮತ್ತನಲ್ಲವೆಂತಲೂ ಅರ್ಥ ತೋರಿಸಲ್ಪಟ್ಟಿತು. ಅತಏವ-ಶ್ರೀರಾಮನಿಂದ ಈವೃಕ್ಷಾದಿಗಳನ್ನು ಕುರಿತು ಪ್ರಶ್ನೆಮಾಡಿದ್ದೂ ಲೋಕಶಿಕ್ಷಾರ್ಥವಾಗಿ ನಟನೆಮಾಡಿದನೆಂದು ಸ್ಪಷ್ಟವಾಗಿ ತೋರುತ್ತದೆ ಆದ್ದರಿಂದಲೇ ಶ್ರೀಶಂಕರಾಚಾರ್ಯರೂಕೂಡ ಶ್ರೀರಾಮನ ಕಥಾಸಂದರ್ಭದಲ್ಲಿ ಹೇಳಿಧಾರೆ, ಏನಂದರೆ (ಶ್ಲೋ) ರಕ್ಷೋಧವೇನಕ್ರಿಯಾದ್ವಿಪಿನೇಸಮಕ್ಷಂವೈದೇಹರಾಜದುಹಿತರ್ವ್ಯಪಯಾಪಿತಾಯಾಂ ॥ಭ್ರಾತ್ರಾವನೇಪಶ್ವಿಪ್ರಿಯಯಾವಿಯುಕ್ತಃಸ್ತ್ರೀಸಂಗಿನಾಂಗತಿಮಿತಿಪ್ರಥಯಂಶ್ಚಚಾರ॥೧॥ ಪುಶ್ಯಾವತಾರಸ್ತ್ವಿಹಮರ್ತ್ಯಶಿಕ್ಷಣಂ-ರಕ್ಷೋವಧಾಯೈವನಕೇವಲಂವಿಭೋಃ-ಕುತೋನ್ಯಥಾಸ್ಯರಮತಸ್ಸ್ವಆತ್ಮನಸ್ಸೀತಾಕೃತಾನಿವ್ಯಸನಾನೀಶ್ವರಸ್ಯ॥೨॥ ಸನ್ವೈಸಆತ್ಮಾತ್ಮವತಾಂಸುಹೃದೀಶ್ವರಃ-ಶಕ್ತಸ್ತ್ರಿಲೋಕ್ಯಾಂಭಗವಾನ್ವಾಸುದೇವಃ।ನಸ್ತ್ರೀಕೃತಂಕಶ್ಮಲಮಶ್ನುವೀತನಲಕ್ಷ್ಮಣಂಚಾಪಿವಿಹಾತುಮಿಚ್ಛತಿ॥೩॥ಇತಿ॥ ತಥಾಚಸ್ಕಾಂದೇಉಮಾಸಂಹಿತಾಯಾಂದೇವಾನ್ಪ್ರತಿಪಿದ್ಮ ವಚನಂ।ಅಹಂದಾಶರಥಿರ್ಭೂತ್ವಾಹನ್ಮಿರಾವಣಮಾಹವೇ॥ ಶ್ರೀಮದ್ರಾಮಾವತಾರೇಸ್ಮಿನ್ಶೃಣ್ವತ್ವಿಪ್ರಯತೈಮಯಾ॥ ತತ್ರಶಂಕಾನಕರ್ತವ್ಯಾ-ಸರ್ವಜ್ಞೇನಾಪಿಮಾಯಯಾ॥ಮನ್ಮಾಯಯಾಮೋಹಿತಂಕ್ಷಿಃಮಾನುಷ್ಯಂ-ಮಾಮವೇಕ್ಷ್ಯತಿ ॥ ಅನ್ಯಥಾತಸ್ಯಸಂನೂ ಸಂಭವೇದ್ಯತ್ರಕುತ್ರಚಿತ್॥ಇತಿ॥ ಈ ಶ್ಲೋಕಗಳಅರ್ಥಪರ್ಯಾಲೋಚನೆಯಿಂದ ಬಹುವಿಧದುಃಖವೂ ಪ್ರಲಾಪವೂ ದೇಹಾದಿಗಳಲ್ಲಿ ಆತ್ಮಬುದ್ಧಿ ಯಾರಿಗುಂಟೋ ಅವರಿಗೆ ಈ ದುಃಖಗಳು ಉಂಟಾಗಿರುವವಾದ್ದರಿಂದ ದೇಹಾದಿಗಳಲ್ಲಿ ಆತ್ಮಬುದ್ಧಿಯೂ ಅಜ್ಞಾನಮೂಲಕವಾದ್ದರಿಂದ ತನ್ನಿಂದ ಮಾಡಲ್ಪಟ್ಟ ವಿಲಾಸಗಳ ಶ್ರವಣಮಾತ್ರದಿಂ ಸರ್ವಜನರಿಗೂಮುಕ್ತಿ ಕೊಡುವದಕ್ಕೆ ರಾಜಶರೀರದಿಂ ಅವತರಿಸಿದ ಸಚ್ಚಿದಾನಂದರೂಪವಾದ ವಿಗ್ರಹವನ್ನು ಧರಿಸಿರುವ ಶ್ರೀರಾಮನೆಂಬ ಹೆಸರು ಪಡೆದಿರುವ ಮತ್ತೂ ಭೃಗುಶಾಪರೂಪವಾದ ಹೇತುವಿನಿಂದಲೂ ಮನುಷ್ಯರಲ್ಲಿ ಅವತರಿಸಿ ಪತ್ನೀವಿಯುಕ್ತನಾದ ಪರಮೇಶ್ವರನಿಗೆ ಅಜ್ಞಾನಗಂಧವಾದರೂ ಇ ಧೆಎಂಬದಾಗಿ ಹೇಳುವದಕ್ಕೆ ಅಶಕ್ಯವಾದ್ದರಿಂದ ಈ ವಿಲಾಪಾದಿಗಳೆಲ್ಲಾ ಶ್ರೀರಾಮನಿಂದ ಲೋಕನಗಣೆಗೋಸುಗ ಮಾಡಲ್ಪಟ್ಟವೆಂದು ವಾಲ್ಮೀಕರ ಅಭಿಪ್ರಾಯವೆಂದು ತಿಳಿಯತಕ್ಕದ್ದು, ಪ್ರಕರಣಾಂತರಗಳಲ್ಲಿಯೂ ಇದೇ ಅರ್ಥವೇ ಅನುಸಂಧಾನಮಾಡಿಕೊಳ್ಳತಕ್ಕದ್ದು॥೨೨॥ ಅಥವಾ-ಹಾಗಲ್ಲದಿದ್ದರೆ. ಹೇಮೃಗ-ಎಲೈ ಜಿಗರೇಯೇ, ಮೃಗಶಾಬಾಕ್ಷೀಂ-ಎಳೇಜಿಗರಿಯ ನೇತ್ರಗಳಂತೆ ನೇತ್ರಗಳುಳ್ಳ, ಮೈಥಿಲೀಂ-ಸೀತಾದೇವಿಯನ್ನು, ಜಾನಾಸಿ-ಕಂಡಿರುವೆಯೋ. ಮೃಗವಿಪ್ರೇಕ್ಷಣೀ-ಮೃಗದಂತೆ ನಾನಾವಿಧವಾಗಿ ನೋಡುತ್ತಿರುವ, ಕಾಂತಾ-ನನ್ನಕಾಂತೆಯು. ಮೃಗೀಭಿಃ-ಹೆಣ್ಣು ಜಿಗರಿಗಳೊಡನೆ, ಸಹಿತಾ-ಕೂಡಿದವಳು, ಭವೇತ್-ಆಗುವಳು ॥೨೩॥ ಹೇಗಜ-ಎಲೈ ಗಜವೇ, ಗಜನಾಸೋರೂಃ-ಆನೆಯಸೊಂಡಿಲದಂತಿರುವ ತೊಡೆಗಳುಳ್ಳ, ಸಾ-ಆ ಸೀತಾದೇವಿಯು, ತ್ವಯಾ-ನಿನ್ನಿಂದ, ದೃಷ್ಟಾ-ನೋಡಲ್ಪಟ್ಟವಳು. ಭವೇದ್ಯದಿ-ಆಗಿದ್ದೇ ಉಂಟಾದರೆ, ಆಖ್ಯಾಹಿ-ಹೇಳು. ಹೇವರವಾರಣ-ಎಲೈ ಗಜಶ್ರೇಷ್ಠವೇ, ತುಭ್ಯಂ-ನಿನ್ನಿಂದ, ತಾಂ-ಆ ಸೀತಾದೇವಿಯನ್ನು, ವಿದಿತಾಂ-ತಿಳಿಯಲ್ಪಟ್ಟವಳನ್ನಾಗಿ, ಮನ್ಯೇ-ತಿಳಿದಿದ್ದೇನೆ, ಆಖ್ಯಾಹಿ-ಹೇಳು ॥೨೪॥ ಹೇಶಾರ್ದೂಲ-ಎಲೈ ವ್ಯಾಘ್ರವೇ, ಪ್ರಿಯಾ-ಹೆಂಡತಿಯಾದ,ಚಂದ್ರನಿಭಾನನಾ-ಚಂದ್ರನಿಗೆ ಸಮವಾದ ಮುಖವುಳ್ಳ, ಸಾಮೈಥಿಲೀ-ಆ ಸೀತಾದೇವಿಯು, ದೃಷ್ಟಾಯದಿ-ಕಾಣಲ್ಪಟ್ಟವಳಾದರೆ, ತೇ-ನಿನಗೆ, ಭಯಂ-ಭೀತಿಯು, ನ-ಇಲ್ಲ ಮಮ-ನನಗೆ, ವಿಸ್ರಬ್ಧಂ-ವಿಶ್ವಾಸವಾಗಿ, ಕಥಯಸ್ವ-ಹೇಳು ॥೨೫॥ ಹೇಪ್ರಿಯೆ-ಎಲೌ ಪ್ರಿಯಳೇ, ದೂರಂ-ದೂರವಾಗಿ, ಕಿಂಧಾವಸಿ-ಯಾತಕ್ಕೆ ಹೋಗುತ್ತಿ, ಹೇಕಮಲೇಕ್ಷಣೆ-ಎಲೌ ಕಮಲಾಕ್ಷಿಯೇ. ದೃಷ್ಟಾ-

ಗಳನ್ನೂ ಸಹ, ಕೇಳುತ್ತಾ ಆ ಮಹದರಣ್ಯದಲ್ಲಿ ಉನ್ಮತ್ತನಂತೆಯೂ,ಭ್ರಾಂತನಂತೆಯೂ, ತಿರುಗುತಲಿರ್ದನು. (ವಿಶೇಷಾಭಿಪ್ರಾಯವು ಪ್ರತಿಪದಟೀಕಿನಲ್ಲಿ ನೋಡಿಕೊಳ್ಳಬಹುದು)। ಅನಂತರದಲ್ಲಿ ದಶರಥರಾಜನಂದನನಾದ ಶ್ರೀರಾಮನು, ಒಂದಾನೊಂದು ಜಿಗರಿಯಂ ಕಂಡದಂ ಕುರಿತು, ಎಲೈ ಮೃಗವೇ! ಎಳೆಜಿಗರಿಯ ಕಣ್ಗಳಂತೆ ನೇತ್ರಗಳುಳ್ಳ ಆ ಸೀತಾದೇವಿಯನ್ನು ನೀನು ತಿಳಿದಿರುವಿಯೋ? ಮೃಗದಂತೆ ವಿಧವಿಧವಾಗಿ ನೋಡುವ ನನ್ನ ಕಾಂತೆಯಾದ ಆ ದೇವಿಯು, ಜಿಗರಿಗಳಾದ ನಿಮ್ಮೊಡನೆ ಸೇರಿರಬಹುದು, ಹೇಳುವವನಾಗು ।೨೩। ಎಲೈ ಗಜವೇ! ಆನೆಯ ಸೊಂಡಿಲದೋಪಾದಿಯಲ್ಲಿರುವ ಊರುಪ್ರದೇಶಂಗಳುಳ್ಳ ಆ ದೇವಿಯು ನಿನ್ನಿಂದ ನೋಡಲ್ಪಟ್ಟದ್ದರೆ, ಹೇಳುವವನಾಗು ಬಹುತರವಾಗಿ ಆಕೆಯನ್ನು ನೀನು ತಿಳಿದಿರುವೀಎಂದು ಭಾವಿಸುತ್ತೇನೆ ।೨೪। ಎಲೋ ವ್ಯಾಘ್ರವೇ! ನನ್ನಪ್ರಿಯಳಾದ ಮತ್ತೂ, ಚಂದಿರನಂತೆ ಬೆಳಗುವ ಮುಖವುಳ್ಳ ಆ ಸೀತಾದೇವಿಯಂ ನೋಡಿದ್ದರೆ, ನಿರ್ಭಯವಾಗಿ ಹೇಳು ।೨೫। ಅಯ್ಯೋಪ್ರಿಯಳೇ! ದೂರವಾಗಿ ಯಾಕೆ ಓಡಿಹೋದವಳಾದೆ? ನನಗೆ ತಿಳೀತು ಮತ್ತೂ ಗೊತ್ತಾಯಿತು, ವೃಕ್ಷಂಗಳಿಂದ ಆಚ್ಛಾದನಂ ಗೈಯ್ಯಲ್ಪಟ್ಟವಳಾಗಿ ನನ್ನ ಸಂಗಡ ಯಾತಕ್ಕೆ ಮಾತನಾಡುವದಿಲ್ಲಾ ನಿಲ್ಲು ನಿಲ್ಲು ನಿನಗೆ ನನ್ನಲ್ಲಿ ದಯೆಯೆಂಬದುಮಿಲ್ಲವೇ ಇಲ್ಲ ಹಾಸ್ಯದಲ್ಲಿಯೇ ಪ್ರೀತಿಯುಳ್ಳವಳಾಗಬ್ಯಾಡ,

ಚಾತ್ಮಾನಂಕಿಂಮಾಂನಪ್ರತಿಭಾಷಸೇ ।೨೬। ತಿಷ್ಠತಿಷ್ಠವರಾರೋಹೇನತೇಸ್ತಿಕರುಣಾಮಯಿ । ನಾತ್ಯರ್ಥಹಾಸ್ಯಶೀ
ಲಾಸಿಕಿಮರ್ಥಂಮಾಮುಪೇಕ್ಷಸೇ ।೨೭। ಪೀತಕೌಶೇಯಕೇನಾಸಿಸೂಚಿತಾವರವರ್ಣಿನೀ । ಧಾವಂತ್ಯಪಿಮಯಾದೃ
ಷ್ಟಾತಿಷ್ಠಯದ್ಯಸ್ತಿಸೌಹೃದಂ ।೨೮। ನೈವಸಾನೂನಮಥವಾಹಿಂಸಿತಾಚಾರುಹಾಸಿನೀ । ಕೃಚ್ಛ್ರಂಪ್ರಾಪ್ತಂ
ನಮಾಂನೂನಂಯಥೋಪೇಕ್ಷಿತುಮರ್ಹತಿ ।೨೯। ವ್ಯಕ್ತಂಸಾಭಕ್ಷಿತಾಬಾಲಾರಾಕ್ಷಸೈಃಪಿಶಿತಾಶನೈಃ । ವಿಭಜ್ಯಾಂ
ಗಾನಿಸರ್ವಾಣಿಮಯಾವಿರಹಿತಾಪ್ರಿಯಾ ।೩೦। ನೂನಂತಚ್ಛುಭದಂತೋಷ್ಠಂಸುನಾಸಂಚಾರುಕುಂಡಲಂ । ಪೂ
ರ್ಣಚಂದ್ರನಿಭಂಗ್ರಸ್ತಂಮುಖಂನಿಷ್ಪ್ರಭತಾಂಗತಂ ।೩೧। ಸಾಹಿಚಂಪಕವರ್ಣಾಭಾಗ್ರೀವಾಗ್ರೈವೇಯಶೋಭಿ
ತಾ । ಕೋಮಲಾವಿಲಪಂತ್ಯಾಸ್ತುಕಾಂತಾಯಾಭಕ್ಷಿತಾಶುಭಾ ।೩೨।ನೂನಂವಿಕ್ಷಿಪ್ಯಮಾಣೌತಾಬಾಹೂಪಲ್ಲವಕೋಮ

---

ನೋಡಲ್ಪಟ್ಟವಳು. ಅಸಿ-ಆದೆ, ಆತ್ಮಾನಂ-ತನ್ನನ್ನು, ವೃಕ್ಷೈಃ-ಗಿಡಗಳಿಂದ, ಆಚ್ಛಾದ್ಯ-ಮುಚ್ಚಿಕೊಂಡು ಮಾಂ-ನನ್ನನ್ನು ಕುರಿತು, ನಪ್ರತಿಭಾಷಸೇ-ಯಾತಕ್ಕೆ ಮಾತನಾಡುವದಿಲ್ಲ ||೨೬|| ಹೇವರಾರೋಹೇ-ಎಲೌ ಶ್ರೇಷ್ಠಳೇ, ತಿಷ್ಠತಿಷ್ಠ-ನಿಲ್ಲುನಿಲ್ಲು. ತೇ-ನಿನಗೆ, ಮಯಿ-ನನ್ನಲ್ಲಿ, ಕರುಣಾ-ದಯೆಯು ನಾಸ್ತಿ-ಇಲ್ಲ ಅತ್ಯರ್ಥಹಾಸ್ಯಶೀಲಾ-ಬಹಳವಾಗಿ ಹಾಸ್ಯದಲ್ಲಿ ಸ್ವಭಾವವುಳ್ಳವಳು, ನಾಸಿ-ಆಗಬ್ಯಾಡ, ಕಿಮರ್ಥಂ-ಯಾವನಿಮಿತ್ತವಾಗಿ, ಮಾಂ-ನನ್ನನ್ನು, ಉಪೇಕ್ಷಸಿ-ಉಪೇಕ್ಷೆಮಾಡುತ್ತಿ ||೨೭|| ಹೇವರವರ್ಣಿನಿ-ಎಲೈ ಶ್ರೇಷ್ಠವಾದ ವರ್ಣವುಳ್ಳವಳೇ, ಪೀತಕೌಶೇಯಕೇನ-ಪೀತಾಂಬರದಿಂದ, ಸೂಚಿತಾ-ಸೂಚನೆಮಾಡಲ್ಪಟ್ಟವಳು, ಅಸಿ-ಆಗಿದ್ದೀಯಿ, ಮಯಾ-ನನ್ನಿಂದ, ಧಾವಂತ್ಯಪಿ-ಓಡಿಹೋಗುವವಳಾದರೂ ದೃಷ್ಟಾ-ಕಾಣಲ್ಪಟ್ಟೆ. ಸೌಹೃದಂ-ಸ್ನೇಹವು ಅಸ್ತಿಯದಿ-ಇದ್ದದ್ದೇ ಆದರೆ, ತಿಷ್ಠ-ನಿಲ್ಲು ||೨೮|| ಅಥವಾ-ಹಾಗಲ್ಲದಿದ್ದರೆ, ಸಾ-ಆ ಸೀತಾದೇವಿಯು, ನೈವ-ಇಲ್ಲವೇಇಲ್ಲ. ಚಾರುಹಾಸಿನೀ-ಮನೋಹರವಾದ ಮುಗುಳುನಗೆಯುಳ್ಳ ಸೀತೆಯು. ಹಿಂಸಿತಾ-ಕೊಲ್ಲಲ್ಪಟ್ಟಳು, ಯಥಾ-ಹ್ಯಾಗೆ. ಕೃಚ್ಛ್ರಂ-ಕಷ್ಟವನ್ನು. ಪ್ರಾಪ್ತಂ-ಹೊಂದಿರುವ, ಮಾಂ-ನನ್ನನ್ನು, ಉಪೇಕ್ಷಿತುಂ-ತಿರಸ್ಕರಿಸುವದಕ್ಕೆ, ನಾರ್ಹತಿ-ಯೋಗ್ಯಳಲ್ಲವೋ. ನೂನಂ-ನಿಶ್ಚಯವು, ತಥಾ-ಹಾಗೆಯೇ, ಸಾ-ಆ ಸೀತಾದೇವಿಯು ಇಲ್ಲವೆಂದು ತಾತ್ಪರ್ಯವು) ||೨೯|| ವ್ಯಕ್ತಂ-ಸ್ಪಷ್ಟವಾಯಿತು, ಮಯಾ-ನನ್ನಿಂದ. ವಿರಹಿತಾ-ರಹಿತಳಾದ. ಪ್ರಿಯಾ-ಇಷ್ಟಳಾದ ಬಾಲಾ-ಹುಡುಗಿಯಾದ, ಸಾ-ಆ ಸೀತಾದೇವಿಯು, ಸರ್ವಾಣ್ಯಂಗಾನಿ-ಸಮಸ್ತಾವಯವಗಳನ್ನು, ವಿಭಜ್ಯ-ವಿಂಗಡಿಸಿ, ಪಿಶಿತಾಶನೈಃ-ಮಾಂಸಭಕ್ಷಕರಾದ, ರಾಕ್ಷಸೈಃ-ರಕ್ಕಸರಿಂದ, ಭಕ್ಷಿತಾ-ತಿನ್ನಲ್ಪಟ್ಟಳು ||೩೦|| ಶುಭದಂತೋಷ್ಠಂ-ಮಂಗಳಕರವಾದ ಹಲ್ಲುಗಳೂ ತುಟಿಗಳೂ ಉಳ್ಳ, ಸುನಾಸಂ-ಒಳ್ಳೇ ಮೂಗುಳ್ಳ, ಚಾರುಕುಂಡಲಂ-ಮನೋಹರವಾದ ಕರ್ಣಾಭರಣಗಳುಳ್ಳ. ಪೂರ್ಣಚಂದ್ರನಿಭಂ-ಹುಣ್ಣಿಮೆ ಚಂದ್ರನಿಗೆ ಸಮಾನವಾದ, ತನ್ಮುಖಂ-ಆ ಸೀತಾದೇವಿಯ ಸಂಬಂಧವಾದ ಮುಖವು, ನಿಷ್ಪ್ರಭತಾಂ-ಕಾಂತಿರಾಹಿತ್ಯವನ್ನು. ಗತಂ-ಹೊಂದಿದಂಥಾದ್ದಾಗಿ, ರಾಕ್ಷಸೈಃ-ರಕ್ಕಸರಿಂದ, ಗ್ರಸ್ತಂ-ತಿನ್ನಲ್ಪಟ್ಟಿತು ||೩೧|| ಚಂಪಕವರ್ಣಾಭಾ-ಸಂಪಗೆಹೂವಿನ ಬಣ್ಣದಂತೆ ಬೆಳಗುತ್ತಿರುವ, ಗ್ರೈವೇಯಶೋಭಿತಾ-ಕಂಠಾಭರಣದಿಂದಲಂಕೃತವಾದ, ಕೋಮಲಾ-ಮನೋಹರವಾದ, ಶುಭಾ-ಮಂಗಳಕರವಾದ. ವಿಲಪಂತ್ಯಾಃ-ಪ್ರಲಾಪಮಾಡುತ್ತಿರುವ, ಕಾಂತಾಯಾಃ-ಹೆಂಡತಿಯ, ಸಾಗ್ರೀವಾ-ಆ ಕೊರಳು ಭಕ್ಷಿತಾ-ರಕ್ಕಸರಿಂ ಭಕ್ಷಿಸಲ್ಪಟ್ಟಿತು ||೩೨|| ವಿಕ್ಷಿಪ್ಯಮಾಣೌ-ಇಲ್ಲಿ ಅಲ್ಲಿ ಎಸೆಯಲ್ಪಟ್ಟ. ಪಲ್ಲವಕೋಮಲೌ-ಚಿಗುರುಗಳಂತೆ ಮೃದುಗಳಾದ, ವೇಪಮಾನಾಗ್ರೌ-ನಡುಗುತ್ತಿರುವ ತುದಿಗಳುಳ್ಳ, ಸಹಸ್ತಾಭರಣಾಂಗದೌ-ಕೈಕಡಗಗಳಿಂದಲೂ ವಂಕೀಗಳಿಂದಲೂ ಕೂಡಿದ, ತೌ ಬಾಹೂ-ಆ ಭುಜಗಳು, ಭಕ್ಷಿತೌ-ರಾಕ್ಷಸರಿಂದ ತಿನ್ನಲ್ಪಟ್ಟವು, ನೂನಂ-ನಿಶ್ಚಯವು ||33|| ರಕ್ಷಸಾಂ-ರಾಕ್ಷಸರಿಗೆ, ಭಕ್ಷಣಾಯವೈ-ತಿನ್ನುವದಕ್ಕೆ, ಮಯಾ-ನನ್ನಿಂದ, ವಿರಹಿತಾ

---

ನನ್ನನ್ನು ಈ ರೀತಿಯಲ್ಲಿ ಯಾಕೆ ಉಪೇಕ್ಷಿಸುವೀ, ನೀನು ಓಡಿಹೋಗುತಲಿದ್ದರೂ ನಿನ್ನ ಪೀತಾಂಬರದ ಗುರ್ತಿನಿಂದ ನಿನ್ನಂ ಕಂಡು ಹಿಡಿದೆನು, ನನ್ನಲ್ಲಿ ವಿಶ್ವಾಸವಿದ್ದರೆ ನಿಲ್ಲು ನಿಲ್ಲು ।೨೮। ಹಾಹಾ! ಜನಕರಾಜನಂದಿನಿಯಾದ ಮತ್ತೂ, ನಸುನಗೆಯುಳ್ಳ ಆ ದೇವಿಯು ಇಲ್ಲವೇ ಇಲ್ಲ, ಯಾರಿಂದಲೋ ಹಿಂಸಿಸಲ್ಪಟ್ಟಳು, ಆಕೆಯು ಜೀವದಿಂದಿದ್ದರೆ, ನಾನಿಂಥಾ ಕಷ್ಟಾವಸ್ಥೆಯಂ ಹೊಂದುವಲ್ಲಿ ಆಕೆಯು ನನ್ನನ್ನು ಉಪೇಕ್ಷಿಸುವಳೇ, ಆದ್ದರಿಂದ, ಆಕೆಯು ಜೀವದಿಂದಲೇ ಇರಲಾರಳು, ನನ್ನಿಂದ ವಿಯೋಗವಂ ಪಡೆದು ಆಗ ಆ ದೇವಿಯು, ರಾಕ್ಷಸರಿಂದ ವಿಭಾಗಿಸಲ್ಪಟ್ಟು, ಗ್ರಾಸಂಗೈಯ್ಯಲ್ಪಟ್ಟಳು, ಶುಭಕರವಾದ ದಂತಂಗಳೂ ತುಟಿಗಳೂ ಸಹಾ ಉಳ್ಳದ್ದಾಗಿಯೂ, ಸಮೀಚೀನವಾದ ನಾಸಿಕೆಯುಳ್ಳದ್ದಾಗಿಯೂ, ಮನೋಹರವಾದ ತಾಟಂಕಂಗಳುಳ್ಳದ್ದಾಗಿಯೂ, ಸಂಪೂರ್ಣನಾದ ಚಂದ್ರನಿಗೆ ಸಮಾನವಾಗಿಯೂ, ಇರುವ ಆಕೆಯ ಮುಖವು ಕಂಗೆಟ್ಟದ್ದಾಗಿ, ಯಾರಿಂದಲೋ ರಕ್ಕಸರಿಂದ ಗ್ರಾಸವಂ ಗೈಯ್ಯಲ್ಪಟ್ಟಿತು ।೩೧। ಹಾಹಾ! ಕಷ್ಟವು, ಸಂಪಿಗೆ ಹುವ್ವಿನ ಬಣ್ಣದಂತೆ ಬಣ್ಣವುಳ್ಳವಳಾಗಿಯೂ, ಕಂಠಾಭರಣಂಗಳಿಂದಲಂಕರಿಸಲ್ಪಟ್ಟವಳಾಗಿಯೂ, ಸುಂದರಳಾಗಿಯೂ, ಮಂಗಳಕರಳಾಗಿಯೂ, ಎನ್ನ ಕಾಂತೆಯಾಗಿಯೂ, ಇರುವ ಆಕೆಯ ಕೊರಳು ಭಕ್ಷಿಸಲ್ಪಟ್ಟಿತು ।೩೨। ಮತ್ತೂ, ಚಿಗುರುಗಳಂತೆ ಮೃದುವಾದ ನಡುಗುವ ಹಸ್ತಂಗಳುಳ್ಳ ತೋಳುಬಂದಿಗಳಿಂದ ಯುಕ್ತವಾದ ಅಂಥಾ ಭುಜಂಗಳು ನಿಶ್ಚಯವಾಗಿ ರಾಕ್ಷಸ

ಲಾ । ಭಕ್ಷಿತಾವೆಸವಮಾನಾಗ್ರಾಸಹಸ್ತಾಭರಣಾಂಗದಾ ॥೨೩॥ ಮಯಾವಿರಹಿತಾಬಾಲಾರಕ್ಷಸಾಂಭಕ್ಷಣಾಯವೈ । ಸಾರ್ಥೇನೆವಪರಿತ್ಯಕ್ತಾಭಕ್ಷಿತಾಬಹುಬಾಂಧವಾ ॥೨೪॥ ಹಾಲಕ್ಷ್ಮಣಮಹಾಬಾಹೊಪಶ್ಯಸಿತ್ವಂಪ್ರಿಯಾಂಕ್ವಚಿತ್ । ಹಾಪ್ರಿಯೆಕ್ವಗತಾಭದ್ರೆಹಾಸೀತೆತಿಪುನಃಪುನಃ ॥೨೫॥ ಇತ್ಯೇವಂವಿಲಪನ್ರಾಮಃಪರಿಧಾವನ್ವನಾದ್ವನಂ।ಕ್ವಚಿದುದ್ಭ್ರಮತೆವೆಗಾತ್ಕ್ವಚಿದ್ವಿಭ್ರಮತೆಬಲಾತ್ ॥ಕ್ವಚಿನ್ಮತ್ತಇವಾಭಾತಿಕಾಂತಾನ್ವೆಷಣತತ್ಪರಃ ॥೨೬॥ ಸವನಾನಿನದೀಶ್ಶೈಲಾನ್ಗಿರಿಪ್ರಸ್ರವಣಾನಿಚ । ಕಾನನಾನಿಚವೆಗೆನಭ್ರಮತ್ಯಪರಿಸಂಸ್ಥಿತಃ ॥೨೭॥ ತಥಾಸಗತ್ವಾವಿಪುಲಂಮಹದ್ವನಂಪರೀತ್ಯಸರ್ವಂತ್ವಥಮೈಥಿಲೀಂಪ್ರತಿ । ಅನಿಷ್ಠಿತಾಶಸ್ಸಚಕಾರಮಾರ್ಗಣೆಪುನಃಪ್ರಿಯಾಯಾಃಪರಮಂಪರಿಶ್ರಮಂ ॥೨೮॥

—** ಇತಿಶ್ರೀಮದಾರಣ್ಯಕಾಂಡೆ-ಷಷ್ಟಿತಮಸ್ಸರ್ಗಃ **—

ದೃಷ್ಟ್ವಾಶ್ರಮಪದಂಶೂನ್ಯಂರಾಮೊದಶರಥಾತ್ಮಜಃ । ರಹಿತಾಂಪರ್ಣಶಾಲಾಂಚವಿಧ್ವಸ್ತಾನ್ಯಾಸನಾನಿಚ ॥

---

ಬಿಡಲ್ಪಟ್ಟ, ಬಹುಬಾಂಧವಾ-ಅನೇಕಮಂದಿ ಬಂಧುಗಳುಳ್ಳ, ಬಾಲಾ-ಸೀತಾದೇವಿಯು, ಸಾರ್ಥೇನ-ತನ್ನಗುಂಪಿನಿಂದ, ಪರಿತ್ಯಕ್ತೇವ-ಬಿಡಲ್ಪಟ್ಟವಳಂತೆ, ಭಕ್ಷಿತಾ-ತಿನ್ನಲ್ಪಟ್ಟಳು ॥೨೪॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಹೆಮಹಾಬಾಹೊ-ಎಲೈ ಮಹಾಭುಜಪರಾಕ್ರಮಶಾಲಿಯೇ, ತ್ವಂ-ನೀನು, ಕ್ವಚಿತ್-ಎಲ್ಲಾದರೂ, ಪ್ರಿಯಾಂ-ಹೆಂಡತಿಯನ್ನು, ಪಶ್ಯಸಿ-ಕಂಡೆ. ಹಾ-ಕಷ್ಟವು, ಹೆಪ್ರಿಯೆ-ಎಲೈ ಯಿಷ್ಟಳೇ, ಕ್ವಗತಾ-ಎಲ್ಲಿಹೋದೆ, ಹಾ-ಕಷ್ಟವು, ಹೆಭದ್ರೆ-ಎಲೌ-ಶುಭಕರಳೇ, ಹೆಸೀತೆ-ಎಲೌ ಸೀತಾದೇವಿಯೇ, ಹಾ-ಕಷ್ಟವು, ಇತಿ-ಇಂತೆಂದು, ಪುನಃಪುನಃ-ಬಾರಿಬಾರಿಗೂ, ವಿಲಲಾಪ-ವಿಲಾಪಿಸಿದನು ॥೨೫॥ ಇತ್ಯೇವಂ-ಈಪರಿಯಾಗಿ. ವಿಲಪನ್-ಪ್ರಲಾಪಮಾಡುತ್ತಿರುವ, ರಾಮಃ-ಶ್ರೀರಾಮನು, ವನಾತ್-ಅರಣ್ಯದಪಕ್ಕದಿಂದ ವನಾತ್-ಮತ್ತೊಂದು ವನವಂಕುರಿತು, ಪರಿಧಾವನ್-ಓಡಿಹೋಗುತ್ತಿರುವವನಾಗಿ, ಕ್ವಚಿತ್-ಬಂದಾನೊಂದು ಸ್ಥಳದಲ್ಲಿ, ಉದ್ಭ್ರಮತೆ-ನೆಗದಾಡುತ್ತಾನೆ. ಕ್ವಚಿತ್-ಬಂದಾನೊಂದು ಸ್ಥಳದಲ್ಲಿ, ವೆಗಾತ್-ಜವದದೆಶೆಯಿಂದ, ವಿಭ್ರಮತೆ-ಭ್ರಾಂತಿಯನ್ನು ಹೊಂದುವನು, ಕ್ವಚಿತ್-ಬಂದಾನೊಂದು ಸ್ಥಳದಲ್ಲಿ, ಕಾಂತಾನ್ವೆಷಣತತ್ಪರಃ-ಸೀತಾದೇವಿಯ ಹುಡುಕೋಣದರಲ್ಲಾಸಕ್ತನಾಗಿ, ಮತ್ತಇವ-ಉನ್ಮಾದಾವಸ್ಥೆಯನ್ನು ಹೊಂದಿದವನಂತೆ, ಆಭಾತಿ-ಪ್ರಕಾಶಿಸುತ್ತಿದ್ದನು ॥೨೬॥ ಸಃ-ಆ ಶ್ರೀರಾಮನು, ಅಪರಿಸಂಸ್ಥಿತಃ-ಅಸ್ವಸ್ಥಚಿತ್ತನಂತೆ ನಟಿಸುತ್ತಿರುವವನಾಗಿ, ವನಾನಿ-ವನಗಳನ್ನು ನದೀಃ-ಹೊಳೆಗಳನ್ನೂ. ಶೈಲಾನ್-ಬೆಟ್ಟಗಳನ್ನೂ, ಗಿರಿಪ್ರಸ್ರವಣಾನಿಚ-ಬೆಟ್ಟದ ನದಿಗಳನ್ನೂ, ಕಾನನಾನಿಚ-ಅರಣ್ಯಗಳನ್ನು ಕುರಿತು, ವೆಗೆನ-ಜಾಗ್ರತೆಯಿಂದ. ಭ್ರಮತಿ-ತಿರುಗುತ್ತಿದ್ದನು ॥೨೭॥ ॥ ಸಃ-ಆ ಶ್ರೀರಾಮನು, ತಥಾ-ಆಪರಿಯಾಗಿ, ವಿಪುಲಂ-ವಿಸ್ತಾರವಾದ, ಸರ್ವಂ-ಸಮಸ್ತವಾದ, ಮಹತ್-ದೊಡ್ಡದಾದ, ವನಂ-ಅರಣ್ಯವನ್ನು, ಪರೀತ್ಯ-ಸುತ್ತಿ ಅಥ-ಬಳಿಕ. ಮೈಥಿಲೀಂಪ್ರತಿ-ಸೀತಾದೇವಿಯಂಕುರಿತು, ಅನಿಷ್ಠಿತಾಶಃ-ನಿವೃತ್ತವಾದ ಆಶೆಯುಳ್ಳವನಾಗಿ, ಪುನಃ-ಮತ್ತು. ಪ್ರಿಯಾಯಾಃ-ಸೀತಾದೇವಿಯ, ಮಾರ್ಗಣೆ-ಹುಡುಕುವವಿಷಯದಲ್ಲಿ, ಸಃ-ಆ ಶ್ರೀರಾಮನು, ಪರಮಂ-ಬಹಳವಾದ, ಪರಿಶ್ರಮಂ-ಆಯಾಸವನ್ನು, ಚಕಾರ-ಮಾಡಿದನು,

—**ಇತಿಶ್ರೀಮದಾರಣ್ಯಕಾಂಡೆ-ಷಷ್ಟಿತಮಸ್ಸರ್ಗಃ**—

ದಶರಥಾತ್ಮಜಃ-ದಶರಥನಕುವರನಾದ ರಾಮಃ-ಶ್ರೀರಾಮನು. ಶೂನ್ಯಂ-ಬರಿದಾದ, ಆಶ್ರಮಪದಂ-ಪರ್ಣಶಾಲೆಯನ್ನು, ದೃಷ್ಟ್ವಾ-ಕಂಡು, ರಹಿತಾಂ-ಸೀತಾರಹಿತವಾದ, ಪರ್ಣಶಾಲಾಂಚ-ಆಪರ್ಣಶಾಲೆಯನ್ನು, ವಿಧ್ವಸ್ತಾನಿ-ನಾಶಗೊಳಿಸಲ್ಪಟ್ಟ, ಆಸನಾನಿಚ-ಆಸ್ತರಣಗಳನ್ನು. ದೃಷ್ಟ್ವಾ-ಕಂಡು * ರಾಮಃ-ಶ್ರೀರಾಮನು, ತತ್ರ-ಆ ಪರ್ಣಶಾಲೆಯಲ್ಲಿ, ವೈದೆಹೀಂ-ಸೀತಾದೇವಿಯನ್ನು, ಅದೃಷ್ಟ್ವಾ-ಕಾಣದೆ, ಸರ್ವಶಃ-ಎಲ್ಲಾ

---

ರಿಂದ ತಿನ್ನಲ್ಪಟ್ಟಿತು ಆ ದೇವಿಯು ಬಹು ಬಂಧುಗಳುಳ್ಳವಳಾದರೂ ಆ ನೆಂಟರಿಂದಲೂ ನನ್ನಿಂದಲೂ ಸಹ ವಿಯೋಗವನ್ನೈದಿದವಳಾಗಿ ರಾಕ್ಷಸರ ಭಕ್ಷಣಾರ್ಥವಾಗಿಯೇ, ಬಿಡಲ್ಪಟ್ಟಳಾದಕಾರಣ, ಆಕೆಯು ಗ್ರಾಸಂಗೈಯ್ಯಲ್ಪಟ್ಟಳು ॥೨೪॥ ಎಲೋ ಎಲೋ, ತಮ್ಮ, ಲಕ್ಷ್ಮಣನೇ! ಮಹಾಭುಜಪರಾಕ್ರಮಶಾಲಿಯೇ! ನೀನೆಲ್ಲಾದರೂ ಆಕೆಯನ್ನು ಕಂಡವನಾದೆಯೋ? ಅಯ್ಯೋ ಪ್ರಿಯಳೇ! ಎಲ್ಲಿಪೋದವಳಾದೆ, ಎಂಬದಾಗಿ ವಿಲಾಪವಂ ಗೈಯ್ಯುತ್ತಾ ಶ್ರೀರಾಮನು ಒಂದು ವನದಿಂ ಮತ್ತೊಂದು ಬನಕ್ಕೆ ಓಡಿಪೋಗುತಲೂ, ನೆಗದಾಡುತಲೂಕೆಲಸ್ಥಲಗಳಲ್ಲಿ ಭ್ರಾಂತಿಯನ್ನೈದುತಲೂ ಇನ್ನು ಕೆಲವು ಪ್ರದೇಶಂಗಳಲ್ಲಿ ಆಕೆಯಂ ಹುಡುಕುತಲೂ ಸಹ, ಸ್ವಸ್ಥಚಿತ್ತೆಯಂನ್ನೈದಿದ ವನಗಳನ್ನೂ, ನದಿಗಳನ್ನೂ, ಪರ್ವತಂಗಳನ್ನೂ ದೊಡ್ಡದೊಡ್ಡ ಆರಣ್ಯಗಳನ್ನೂ ಸಹ, ಕುರಿತು, ವೇಗದಿಂ ತಿರುಗಿದವನಾಗಿ ಆಕೆಯ ವಿಷಯದೋಳ್ ನಿರಾಶೆಯಂ ಗೈದು ಪುನಹಾ ಆ ದೇವಿಯನ್ನು ಹುಡುಕುವದರಲ್ಲಿ ಬಹು ಆಯಾಸಗೊಂಡನು ॥೨೮॥ —* ಆರಣ್ಯಕಾಂಡದಲ್ಲಿನ೬೦ನೆಯ ಸರ್ಗಂ ಮುಗಿದುದು *—

ದಶರಥಪುತ್ರನಾದ ಶ್ರೀರಾಮನು, ಸೀತೆಯಿಂದ ರಹಿತವಾದ ಆ ಪರ್ಣಶಾಲೆಯನ್ನು ಧ್ವಸ್ತವಾಗಿರುವ ಆಸನಂಗಳನ್ನೂ ಸಹ ಕಂಡು, ಅಲ್ಲಿ ಸೀತಾದೇವಿಯಂ ಕಾಣದೆ ದಿಕ್ಕು ದಿಕ್ಕುಗಳಲ್ಲಿಯೂ ನೋಡಿ ಭುಜಗಳಂಚಾಚಿ ನುಡಿವನದೆಂತೆನೆ,— ॥೧॥ ಅಯ್ಯೋ ಲಕ್ಷ್ಮಣನೇ! ಸೀತಾದೇವಿ

ಅದೃಷ್ಟ್ವಾತತ್ರವೈದೇಹೀಂಸನ್ನಿರೀಕ್ಷ್ಯಚಸರ್ವಶಃ । ಉವಾಚರಾಮಃಪ್ರಾಕ್ರುಶ್ಯಪ್ರಗೃಹ್ಯರುಚಿರೌಭುಜೌ ॥೨
ಕ್ವನುಲಕ್ಷ್ಮಣವೈದೇಹೀಕಂವಾದೇಶಮಿತೋಗತಾ । ಕೇನಾಹೃತಾವಾಸೌಮಿತ್ರೇಭಕ್ಷಿತಾಕೇನವಾಪ್ರಿಯಾ ।೩। ವೃಕ್ಷೇಣಾ
ವಾರ್ಯಯದಿಮಾಂಸೀತೇಹಸಿತುಮಿಚ್ಛಸಿ । ಅಲಂತೇಹಸಿತೇನಾದ್ಯಮಾಂಭಜಸ್ವಸುದುಃಖಿತಂ ॥೪॥ ಯೈಸ್ಸಹಕ್ರೀಡಸೇ
ಸೀತೇವಿಶ್ವಸ್ತೈರ್ಮೃಗಪೋತಕೈಃ । ಏತೇಹೀನಾಸ್ತ್ವಯಾಸೌಮ್ಯೇಧ್ಯಾಯಂತ್ಯಸ್ರಾವಿಲೇಕ್ಷಣಾಃ ॥೫॥ ಸೀತಯಾರ
ಹಿತೋಹಂವೈನಹಿಜೀವಾಮಿಲಕ್ಷ್ಮಣ ॥೫॥ ಮೃತಂಶೋಕೇನಮಹತಾಸೀತಾಹರಣಜೇನಮಾಂ । ಪರಲೋಕೇಮಹಾ
ರಾಜೋನೂನಂದ್ರಕ್ಷ್ಯತಿಮೇಪಿತಾ ॥೬॥ ಕಥಂಪ್ರತಿಜ್ಞಾಂಸಂಶ್ರುತ್ಯಮಯಾತ್ವಮಭಿಯೋಜಿತ । ಅಪೂರಯಿತ್ವಾ
ತಂಕಾಲಂಮತ್ಸಕಾಶಮಿಹಾಗತಃ । ಕಾಮವೃತ್ತಮನಾರ್ಯಂಮಾಂಮೃಷಾವಾದಿನಮೇವಚ । ಧಿಕ್ತ್ವಾಮಿತಿಪರಲೋಕೇ
ವ್ಯಕ್ತಂವಕ್ಷ್ಯತಿಮೇಪಿತಾ ॥೮॥ ವಿವಶಂಶೋಕಸಂತಪ್ತಂದೀನಂಭಗ್ನಮನೋರಥಂ । ಮಾಮಿಹೋತ್ಸೃಜ್ಯಕರುಣಂ

---

ದಿಕ್ಕುಗಳಲ್ಲಿಯೂ, ಸಂನಿರೀಕ್ಷ್ಯಚ-ಚನ್ನಾಗಿನೋಡಿ. ಪ್ರಾಕ್ರುಶ್ಯ-ಆಕ್ರೋಶಮಾಡಿ, ರುಚಿರೌ-ಮನೋಹರವಾದ, ಭುಜೌ-ಭುಜಗಳನ್ನು, ಪ್ರಗೃಹ್ಯ-ಮೇಲಕ್ಕೆ ಎತ್ತಿಕೊಂಡು, ಉವಾಚ-ಹೇಳಿದನು ॥೨॥ ಹೇಲಕ್ಷ್ಮಣ-ಎಲೆ ಲಕ್ಷ್ಮಣನೇ, ವೈದೇಹೀ-ಸೀತಾದೇವಿಯು, ಕ್ವ-ಎಲ್ಲಿ, ಇತಃ-ಇಲ್ಲಿಂದ, ಕಂವಾದೇಶಂ-ಯಾವ ಸ್ಥಳವಂಕುರಿತು, ಗತಾ-ಹೋದಳು. ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಕೇನವಾ-ಯಾವವನಿಂದಲಾದರೂ, ಆಹೃತಾ-ಅಪಹರಿಸಲ್ಪಟ್ಟಳೋ, ಪ್ರಿಯಾ-ಇಷ್ಟಳಾದ ಸೀತಾದೇವಿಯು, ಕೇನವಾ-ಯಾವನಿಂದಲಾದರೂ, ಭಕ್ಷಿತಾ-ತಿನ್ನಲ್ಪಟ್ಟಳೋ ॥೩॥ ಹೇಸೀತೇ-ಎಲೈ ಸೀತಾದೇವಿಯೇ, ತ್ವಂ-ನನ್ನನ್ನು, ವೃಕ್ಷೇಣ-ಗಿಡದಿಂದ. ಆವಾರ್ಯ-ಹೊದ್ದುಕೊಂಡು, ಮಾಂ-ನನ್ನನ್ನುಕುರಿತು, ಹಸಿತುಂ-ನಗುವದಕ್ಕೆ, ಇಚ್ಛಸಿಯದಿ-ಅಭಿಲಾಷೆವುಳ್ಳವಳಾದರೆ, ತೇ-ನಿನ್ನ, ಹಸಿತೇನ-ಅಪಹಾಸ್ಯದಿಂದ, ಅಲಂ-ಸಾಕು, ಸುದುಃಖಿತಂ-ಬಹಳ ದುಃಖಗೊಂಡ. ಮಾಂ-ನನ್ನನ್ನು ಭಜಸ್ವ-ಸೇವಿಸು ॥೪॥ ಹೇಸೀತೇ-ಎಲೌ ಸೀತಾದೇವಿಯೇ, ತ್ವಂ-ನೀನು, ವಿಶ್ವಸ್ತೈಃ-ವಿಶ್ವಾಸಯುಕ್ತಗಳಾದ, ಯೈರ್ಮೃಗಪೋತಕೈಸ್ಸಹ-ಯಾವ ಎಳೇಮೃಗಗಳೊಡನೆ ಕೂಡಿ, ಕ್ರೀಡಸೆ-ವಿಹರಿಸುತ್ತೀಯೋ. ಹೇಸೌಮ್ಯೇ-ಎಲೌ ಪ್ರಸನ್ನಳೇ. ಏತೇ-ಈ ಮೃಗಶಿಶುಗಳು, ತ್ವಯಾ-ನಿನ್ನಿಂದ. ಹೀನಾಃ-ವರ್ಜಿತಗಳಾಗಿ ಅಸ್ರಾವಿಲೇಕ್ಷಣಾಃ-ಕಂಬನಿಗಳಿಂದ ಕಲುಷಗಳಾದ ನೇತ್ರಗಳುಳ್ಳವುಗಳಾಗಿ, ಧ್ಯಾಯಂತಿ-ಚಿಂತಿಸುತ್ತವೆ ॥೫॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಸೀತಯಾ-ಸೀತಾದೇವಿಯಿಂದ. ರಹಿತಃ-ವರ್ಜಿತನಾದ, ಅಹಂ-ನಾನು, ನಹಿಜೀವಾಮಿ-ಬದುಕಲಾರೆನಷ್ಟೆ ॥೫॥ ॥ ಸೀತಾವಿರಹಿತೇನ-ಸೀತಾವಿಯೋಗದಿಂ ಹುಟ್ಟಿದ, ಮಹತಾ-ಬಹಳವಾದ, ಶೋಕೇನ-ವ್ಯಸನದಿಂದ. ಮೃತಂ-ಮರಣವಂ ಪೊಂದಿದ, ಮಾಂ-ನನ್ನನ್ನು, ಪರಲೋಕೇ-ಸ್ವರ್ಗಲೋಕದಲ್ಲಿ, ಮಹಾರಾಜಃ-ದೊಡ್ಡಅರಸಾದ, ಮೇ-ನನ್ನ, ಪಿತಾ-ತಂದೆಯು, ದ್ರಕ್ಷ್ಯತಿ-ನೋಡುವನು, ನೂನಂ-ನಿಶ್ಚಯವು ॥೬॥ ಮಯಾ-ನನ್ನಿಂದ, ಪ್ರತಿಜ್ಞಾಂ-ಪ್ರತಿಜ್ಞೆಯನ್ನು. ಸಂಶ್ರುತ್ಯ-ಅಂಗೀಕರಿಸಿ, ಅಭಿಯೋಜಿತಃ-ನಿಯೋಜಿಸಲ್ಪಟ್ಟ, ತ್ವಂ-ನೀನು, ತಂಕಾಲಂ-ಆ ಕಾಲವನ್ನು (ಅಂದರೆ-ಹದಿನಾಲ್ಕುವರುಷ ಪರಿಮಿತಕಾಲವನ್ನು.) ಅಪೂರಯಿತ್ವಾ-ಪೂರ್ತಿಮಾಡದೆ, ಮತ್ಸಕಾಶಂ-ನನ್ನ ಸಮೀಪವಂಕುರಿತು. ಇಹ-ಇಲ್ಲಿ, ಕಥಮಾಗತಃ-ಹ್ಯಾಗೆಬಂದೆ ॥೭॥ ಕಾಮವೃತ್ತಂ-ಸ್ವೇಚ್ಛಾವ್ಯಾಪಾರಿಯಾದ. ಅನಾರ್ಯಂ-ಪೂಜ್ಯನಲ್ಲದಿರುವ, ಮೃಷಾವಾದಿನಂ-ಸುಳ್ಳುಮಾತು ಹೇಳುತ್ತಿರುವ, ತ್ವಾಂ-ನಿನ್ನನ್ನು. ಧಿಕ್-ನಿಂದಿಸು, ಮಾಂ-ನನ್ನನ್ನುಕುರಿತು, ಇತಿ-ಈಪರಿಯಾಗಿ, ಪರಲೋಕೇ-ಪರಲೋಕದಲ್ಲಿ, ಮೇ-ನನ್ನ, ಪಿತಾ-ತಂದೆಯು, ವ್ಯಕ್ತಂ-ಸ್ಪಷ್ಟವಾಗಿ. ವಕ್ಷ್ಯತಿ-ಹೇಳುವನು ॥೮॥ ॥ ವಿವಶಂ-ಅಸ್ವತಂತ್ರನಾದ, ಶೋಕಸಂತಪ್ತಂ-ಶೋಕದಿಂದ ಪರಿಸಂಕಟಗೊಂಡ. ದೀನಂ-ದೈನ್ಯಸಾದ, ಭಗ್ನಮನೋರಥಂ-ಮುರಿದ ಮನಸ್ಸಂಕಲ್ಪವುಳ್ಳ. ಮಾಂ-ನನ್ನನ್ನು, ಇಹ-ಇಲ್ಲಿ, ಉತ್ಸೃಜ್ಯ-ಬಿಟ್ಟು, ಕರುಣಂಯಥಾಭವತಿತಥಾ-ದೀನವಾದ್ದಂತೆ, ಅನೃಜಂ-ಕುಟಿಲವುಳ್ಳ

---

ಯು ಯಲ್ಲಿರುವಳು? ಯಾವ ದೇಶಕ್ಕೆ ಪೋದಳು? ಯಾವನಿಂದಲಾದರೂ ಅಪಹರಿಸಲ್ಪಟ್ಟಳೋ? ಅಥವಾ ಭಕ್ಷಿಸಲ್ಪಟ್ಟಳೋ ಯೇನು? ।೩। ಎಲೌ ಸೀತಾದೇವಿಯೇ; ನನ್ನನ್ನು ನಗುವದಕ್ಕಾಗಿ ವೃಕ್ಷಗಳಲ್ಲಿ ಔತುಕೊಂಡಿರುವವಳಾದರೇ, ಈ ಹಾಸ್ಯವಂ ಸಾಕುಮಾಡು. ಮಹಾ ದುಃಖಿತನಾಗಿರುವ ನನ್ನಂ ಪೊಂದು, ನೀನು, ಜಿಂಕೆಗಳೊಡನೆ ಕ್ರೀಡೆಯಂ ಗೈಯ್ಯುತಲಿರುವಿಯೋ? ಇಲ್ಲಿ ನಿನಗಾಗಿ, ಈ ಮೃಗಶಿಶುಗಳು ಕಂಬನಿಗಳಂಸುರಿಸುತ್ತಾ, ನಿಂನನ್ನೇ ಧ್ಯಾನಿಸುತಿವೇ ।೫। ಎಲಲೋ; ತಮ್ಮನಾದಲಕ್ಷ್ಮಣನೇ; ಸೀತೆಯನ್ನಗಲಿ ನಾನು ಬದುಕಲಾರೆನು, ಮಹಾ ರಾಜನಾದ ನಮ್ಮತಂದೆಯು, ಸೀತಾವಿರಹದಿಂದ ಮೃತಿಯುಂನ್ನೈದಿದ ನನ್ನನ್ನು ಪರಲೋಕದಲ್ಲಿ ನೋಡುವನು, ನನ್ನಿಂದ ಗೈಯ್ಯಲ್ಪಟ್ಟ ಪ್ರತಿಜ್ಞೆಯನ್ನು ನೀನು ಪೂರೈಸದೆ ನನ್ನ ಸಮೀಪಕ್ಕೆ ಹ್ಯಾಗೆ ಬರುವೀ (ಅಂದರೆ ವನವಾಸಂ ಗೈಯ್ಯುವೆನೆಂದು ಪ್ರತಿಜ್ಞೆಯಂ ಮಾಡಿದೆನು, ಅದುಪರಿಪೂರ್ತಿಯಾಗಲಿಲ್ಲಾ ನೀನಾದರೂ ಅದಂ ಪಾಲಿಸೆಂದು ಭಾವವು) ।೭। ನಮ್ಮತಂದೆಯಾದ ಆ ಮಹಾ ರಾಜನು ಪರಲೋಕದೋಳ್ ನನ್ನಂ ಕಂಡು, ಛೀ ಛೀ ಸ್ವೇಚ್ಛೆಯಾಗಿ ಮಾಡುವನೇ, ಅಪೂಜ್ಯನೇ; ಸುಳ್ಳುಮಾತುಗಳಂ ಪೇಳುವವನೇ, ಎಂಬದಾಗಿ ನುಡಿವನು ।೮।
ಎಲೌ ಸೀತಾದೇವಿಯೇ! ಮಹಾಶೋಕಾಕ್ರಾಂತನಾದ ಭಗ್ನಮನೋರಥವುಳ್ಳ ನನ್ನನ್ನಿಲ್ಲಿಯೇ ಬಿಟ್ಟು ನೀನುಕೀ

ಕೀರ್ತಿರ್ನರಮಿವಾನ್ಯಜುಂ । ಕ್ವಗಚ್ಛಸಿವರಾರೋಹೇಮಾಂನೊತ್ಸೃಜಸುಮಧ್ಯಮೇ । ತ್ವಯಾವಿರಹಿತಶ್ಚಾಹಂಮೋ ಕ್ಷ್ಯೇಜೀವಿತಮಾತ್ಮನಂ ॥೧೦॥ ಇತೀವವಿಲಪನ್ರಾಮಸ್ಸೀತಾದರ್ಶನಲಾಲಸಃ । ನದದರ್ಶಸುದುಃಖಾರ್ತೋರಾಘ ವೋಜನಕಾತ್ಮಜಾಂ ॥೧೧॥ ಅನಾಸಾದಯಮಾನಂತಂಸೀತಾಂದಶರಥಾತ್ಮಜಂ । ಪಂಕಮಾಸಾದ್ಯವಿಪುಲಂಸೀದಂ ತಮಿವಕುಂಜರಂ । ಲಕ್ಷ್ಮಣೋರಾಮಮತ್ಯರ್ಥಮುವಾಚಹಿತಕಾಮ್ಯಯಾ ॥೧೨॥ ಮಾವಿಷಾದಂಮಹಾಬಾಹೋ ಕುರುಯತ್ನಂಮಯಾಸಹ । ಇದಂಚಹಿವನಂಶೂರಬಹುಕಂದರಶೋಭಿತಂ ॥೧೩॥ ಪ್ರಿಯಕಾನನಸಂಚಾರಾವನೋ ನ್ಮತ್ತಾಚಮೈಥಿಲೀ । ಸಾವನಂವಾಪ್ರವಿಷ್ಟಾಸ್ಯಾನ್ನಳಿನೀಂವಾಸುಪುಷ್ಪಿತಾಂ ॥೧೪॥ ಸರಿತಂವಾಪಿಸಂಪ್ರಾಪ್ತಾಮೀ ನವಂಜುಳಸೇವಿತಾಂ । ಸ್ನಾತುಕಾಮಾನಿಲೀನಾಸ್ಯಾದ್ಧಾಸಕಾಮಾವನೇಕ್ವಚಿತ್ ॥೧೫॥ ವಿತ್ರಾಸಯಿತುಕಾಮಾವಾ ಲೀನಾಸ್ಯಾತ್ಕಾನನೇಕ್ವಚಿತ್ । ಜಿಜ್ಞಾಸಮಾನಾವೈದೇಹೀತ್ವಾಂಮಾಂಚಪುರುಷರ್ಷಭ ॥೧೬॥ ತಸ್ಯಾಹ್ಯನ್ವೇಷಣೇಶ್ರೀಮನ್

---

ನರಃ-ಮನುಷ್ಯನನ್ನು, ಉತ್ಸೃಜ್ಯ-ಬಿಟ್ಟು, ಕೀರ್ತಿರಿವ-ಕೀರ್ತಿಯಂತೆ, ಹೇವರಾರೋಹೇ-ಎಲೌ ಉತ್ತಮಳಾದಸ್ತ್ರೀಯೇ, ಕ್ವಗಚ್ಛಸಿ-ಇಲ್ಲಿ ಹೋ ಗುತ್ತೀಯೆ ॥೯॥ ಹೇಸುಮಧ್ಯಮೇ-ಒಳ್ಳೇಮಧ್ಯಪ್ರದೇಶವುಳ್ಳವಳೇ, ಮಾಂ-ನನ್ನನ್ನು, ನೋತ್ಸೃಜ-ಬಿಡಬ್ಯಾಡ, ತ್ವಯಾ-ನಿನ್ನಿಂದ, ವಿರಹಿತಃ- ಸುಜಾತವಿರಹವುಳ್ಳ, ಅಹಂ-ನಾನು, ಆತ್ಮನಃ-ನನ್ನ, ಜೀವಿತಂ-ಪ್ರಾಣವನ್ನು, ಮೋಕ್ಷ್ಯೇ-ಬಿಡುವೆನು ॥೧೦॥ ಇತಿ-ಈಪರಿಯಾಗಿ, ವಿಲಪನ್-ಪ್ರ ಲಾಪಮಾಡುತ್ತಿರುವ, ಸೀತಾದರ್ಶನಲಾಲಸಃ-ಸೀತಾದೇವಿಯನ್ನು ನೋಡಬೇಕೆಂಬುವದರಲ್ಲಿ ಆಸಕ್ತಿಯುಳ್ಳ, ರಾಘವಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು, ಸುದುಃಖಾರ್ತಃ-ಬಹಳ ದುಃಖದಿಂದ ದೀನನಾಗಿ, ಜನಕಾತ್ಮಜಾಂ-ಸೀತಾದೇವಿಯನ್ನು, ನದದರ್ಶ-ಕಾಣದೇಹೋದನು ॥೧೧॥ ಸೀತಾಂ-ಸೀತಾದೇವಿಯನ್ನು. ಅನಾಸಾದಯಮಾನಂ-ಹೊಂದದಿರುವ, ವಿಪುಲಂ-ವಿಸ್ತಾರವಾದ, ಪಂಕಂ-ಕೆಸರನ್ನು. ಆಸಾದ್ಯ-ಹೊಂದಿ, ಸೀದಂತಂ-ದುಃ ಖಿಸುತ್ತಿರುವ, ಕುಂಜರಮಿವ-ಆನೆಯಂತಿರುವ, ದಶರಥಾತ್ಮಜಂ-ಆ ದಶರಥಕುಮಾರನಾದ ಶ್ರೀರಾಮನನ್ನು. ಅತ್ಯರ್ಥಂ-ಬಹಳವಾಗಿ, ಲಕ್ಷ್ಮಣಃ-ಲಕ್ಷ್ಮ ಣನು, ಹಿತಕಾಮ್ಯಯಾ-ಇಷ್ಟವನ್ನು ಮಾಡಲಿಚ್ಛೆಯಿಂದ. ಉವಾಚ-ಹೇಳಿದನು ॥೧೨॥ ಹೇಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೆ, ವಿಷಾದಂ-ವ್ಯಸನವನ್ನು, ಮಾಕುರು-ಮಾಡಬ್ಯಾಡ. ಮಯಾಸಹ-ನನ್ನೊಡಗೂಡಿ, ಯತ್ನಂ-ಪ್ರಯತ್ನವನ್ನು, ಕುರು-ಮಾಡು, ಹೇಶೂರ-ಎಲೈ ಶೂ ರನೇ, ಇದಂವನಂಹಿ-ಈ ವನವನ್ನಾದರೆ, ಬಹುಕಂದರಶೋಭಿತಂ-ಬಹಳ ಗುಹೆಗಳಿಂದ ಕಂಗೊಳಿಸುತ್ತಿದೆ ॥೧೩॥ ಪ್ರಿಯಕಾನನಸಂಚಾರಾ-ಇಷ್ಟವಾ ಗಿಯೇ ಅರಣ್ಯದಲ್ಲಿ ಸಂಚಾರವುಳ್ಳ, ವನೋನ್ಮತ್ತಾ-ವನದಲ್ಲಿಯೇ ಉತ್ಕಂಠವುಳ್ಳ. ಸಾಮೈಥಿಲೀ-ಆ ಸೀತಾದೇವಿಯು, ವನಂವಾ-ವನವನ್ನಾದರೂ, ಪ್ರವಿಷ್ಟಾ-ಹೊಕ್ಕವಳು, ಸ್ಯಾತ್-ಆಗುವಳು, ಸುಪುಷ್ಪಿತಾಂ-ಒಳ್ಳೇಪುಷ್ಪಗಳುಳ್ಳ, ನಳಿನೀಂವಾ-ಕಮಲಸರೋವರವನ್ನಾದರೂ, ಪ್ರವಿಷ್ಟಾ- ಹೊಕ್ಕವಳು. ಸ್ಯಾತ್-ಆಗುವಳು, ಮೀನವಂಜುಳಸೇವಿತಾಂ-ಮೀನುಗಳಿಂದಲೂ ವಂಜುಳ ನೀರುವಂಜೀಗಿಡಗಳಿಂದಲೂ ಸೇವಿಸಲ್ಪಟ್ಟ, ಸರಿತಂವಾಪಿ-ನದಿ ಯನ್ನು ಕುರಿತಾದರೂ, ಸ್ನಾತುಕಾಮಾ-ಸ್ನಾನಮಾಡಲಿಚ್ಛೆಯುಳ್ಳವಳಾಗಿ. ಸಂಪ್ರಾಪ್ತಾ-ಬಂದವಳಾಗಿ. ಹಾಸಕಾಮಾ-ಪರಿಹಾಸದಲ್ಲಿ ಕೋರಿಕೆಯು ಳ್ಳವಳಾಗಿಯೂ, ವನೇ-ವನದಲ್ಲಿ, ಕ್ವಚಿತ್-ಒಂದಾನೊಂದು ಸ್ಥಳದಲ್ಲಿ, ನಿಲೀನಾ-ಔತುಕೊಂಡಿರುವಳು. ಸ್ಯಾತ್-ಆಗುವಳು ॥೧೪॥ ಹೇಪುರುಷರ್ಷಭ- ಎಲೈ ಪುರುಷಶ್ರೇಷ್ಠನೇ, ಅಸ್ಮಾನ್-ನಮ್ಮಗಳನ್ನು ವಿತ್ರಾಸಯಿತುಕಾಮಾವಾ-ಹೆದರಿಸಲಿಚ್ಛೆಯುಳ್ಳವಳಾಗಿ, ಕ್ವಚಿತ್ಕಾನನೇ-ಒಂದಾನೊಂದು ಅರಣ್ಯ ದಲ್ಲಿ, ಲೀನಾ-ಔತುಕೊಂಡಿರುವಳು, ಸ್ಯಾತ್-ಆಗುವಳು, ಅಥವಾ-ಹಾಗಲ್ಲದಿದ್ದರೆ. ವೈದೇಹೀ-ಸೀತಾದೇವಿಯು, ತ್ವಾಂ-ನಿನ್ನನ್ನು. ಮಾಂಚ-ನನ್ನ ನ್ನು, ಜಿಜ್ಞಾಸಮಾನಾ-ತಿಳಿಯಲಿಚ್ಛೆಸಿದವಳಾಗಿ. ಲೀನಾಸ್ಯಾತ್-ಔತುಕೊಂಡಿರುವವಳಾಗುವಳು ॥೧೫॥ ಹೇಶ್ರೀಮನ್-ಎಲೈ ಲಕ್ಷ್ಮೀವಂತನೇ, ತಸ್ಯಾಃ- ಆ ಸೀತಾದೇವಿಯು, ಅನ್ವೇಷಣೇ-ಹುಡುಕುವಿಕೆಯಲ್ಲಿ, ಕ್ಷಿಪ್ರಂ-ಜಾಗ್ರತೆಯಾಗಿ, ತಾವತ್ಹಿ- ಪ್ರಯತ್ನ ಮಾಡೋಣ, ಹೇಕಾಕುತ್ಸ್ಥ-ಎಲೈ ಕಕುತ್ಸ್ಥ

---

ರ್ತಿಯು ಕುಟಿಲ ಪುರುಷನನ್ನು ಬಿಟ್ಟು ಪೋಗುವಂತೆ ಯಲ್ಲಿಗೆ ಪೋಗುವಳಾದೆ? ಖಂಡಿತವಾಗಿ ನನ್ನಂ ಬಿಡಬ್ಯಾ ಡ, ನಿನ್ನ ಗಲಿಕೆಯಿಂದ ನಾನು ಪ್ರಾಣಂಗಳಂ ಬಿಡುವೆನೆಂದು ವಿಲಾಪವಂಗೈಯ್ಯುತ್ತಾ ಆಕೆಯಂ ನೋಡಲಿಚ್ಛಿಸಿ ಎ ಷ್ಟು ದುಃಖಿಸುತಿರ್ದರೂ ಆ ದೇವಿಯಂ ಕಾಣಲಿಲ್ಲಾ ॥೧೧॥ ಅನಂತರದೋಳ್ ಲಕ್ಷ್ಮಣನು ಸೀತಾವಿರಹದಿಂ ಬಹು ಶೋಕಾಕ್ರಾಂತನಾಗಿರ್ಪ ಆ ಅಣ್ಣನಂಕುರಿತು ನುಡಿವನದೆಂತೆನೆ; ಎಲೈ ಮಹಾ ಭುಜಪರಾಕ್ರಮಿಯೇ! ಚಿಂತಿಸಬೇಡ ನನ್ನೊಡನೆ ನೀನು ಹುಡುಕಲು ಪ್ರಯತ್ನವಂಮಾಡುವವನಾಗು, ಈ ವನದಲ್ಲಿ ಅನೇಕ ಗುಹೆಗಳಿರು ವವು, ವನಸಂಚಾರದಲ್ಲಿ ಚತುರಳಾದ ಆ ದೇವಿಯು ವನಕ್ಕೋ ಕಮಲಸರೋವರಕ್ಕೋ ಪೋಗಿರುವಳು. ಅಥ ವಾ ಮೀನುಗಳಿಂದಲೂ, ನೀರುವಂಜೀ ಗಿಡಗಳಿಂದಲೂ ಸಹಾ ಯುಕ್ತವಾದ ನದಿಯಲ್ಲಿ ಸ್ನಾನವಂಗೈಯ್ಯುವದಕ್ಕಾ ದರೂ ಪೋಗಿರುವಳೋಯೇನೋ ॥೧೫॥ ಎಲೈಪುರುಷಶ್ರೇಷ್ಠನೇ ಆ ಸೀತಾದೇವಿಯು ನಮ್ಮಗಳನ್ನು ಹೆದರಿಸಲಿಚ್ಛೆ ಯುಳ್ಳವಳಾಗಿ ಯೆಲ್ಲಿಯೋ ಔತುಕೊಂಡಿರಬಹುದೇ ಆಕೆಯು ನಿನ್ನನ್ನೂ, ನನ್ನನ್ನೂ, ಬಿಡತಕ್ಕವಳಲ್ಲಾ ಆದ್ದ ರಿಂ ನಾವುಗಳು ಆಕೆಯಂ ಹುಡುಕುವ ವಿಷಯದಲ್ಲಿ ಪ್ರಯತ್ನವ ಮಾಡೋಣ, ನೀನು ಚಿಂತಿಸದಿರು ಸೀತಾದೇವಿ

ಕ್ಷಿಪ್ರಮೇವ ಯತಾವಹೈ ॥೧೭॥ ವನಂ ಸರ್ವಂ ವಿಚಿನುವೋ ಯತ್ರ ಸಾ ಜನಕಾತ್ಮಜಾ । ಮನ್ಯಸೇ ಯದಿ ಕಾಕುತ್ಸ್ಥ ಮಾಸ್ಮ ಶೋಕೇ ಮನಃ ಕೃಥಾಃ ॥೧೮॥ ಏವಮುಕ್ತಸ್ತು ಸೌಹಾರ್ದಾಲ್ಲಕ್ಷ್ಮಣೇನ ಸಮಾಹಿತಃ । ಸಹ ಸೌಮಿತ್ರಿಣಾ ರಾಮೋ ವಿಚೇತುಮುಪಚಕ್ರಮೇ ॥೧೯॥ ತೌ ವನಾನಿ ಗಿರೀಂಶ್ಚೈವ ಸರಿತಶ್ಚ ಸರಾಂಸಿ ಚ । ನಿಖಿಲೇನ ವಿಚಿನ್ವಾನೌ ಸೀತಾಂ ದಶರಥಾತ್ಮಜೌ ॥೨೦॥ ತಸ್ಯ ಶೈಲಸ್ಯ ಸಾನೂನಿ ಗುಹಾಶ್ಚ ಶಿಖರಾಣಿ ಚ । ನಿಖಿಲೇನ ವಿಚಿನ್ವಾನೌ ನೈವ ತಾಮಭಿಜಗ್ಮತುಃ ॥೨೧॥ ವಿಚಿತ್ಯ ಸರ್ವತಶ್ಶೈಲಂ ರಾಮೋ ಲಕ್ಷ್ಮಣಮಬ್ರವೀತ್ । ನೇಹ ಪಶ್ಯಾಮಿ ಸೌಮಿತ್ರೇ ವೈದೇಹೀಂ ಪರ್ವತೇ ಶುಭಾಂ ॥ ತತೋ ದುಃಖಾಭಿಸಂತಪ್ತೋ ಲಕ್ಷ್ಮಣೋ ವಾಕ್ಯಮಬ್ರವೀತ್ । ವಿಚರನ್ ದಂಡಕಾರಣ್ಯಂ ಭ್ರಾತರಂ ದೀಪ್ತತೇಜಸಂ ॥೨೩॥ ಪ್ರಾಪ್ಸ್ಯಸಿ ತ್ವಂ ಮಹಾಪ್ರಾಜ್ಞ ಮೈಥಿಲೀಂ ಜನಕಾತ್ಮಜಾಂ । ಯಥಾ ವಿಷ್ಣುರ್ಮಹಾಬಾಹುರ್ಬಲಿಂ ಬದ್ಧ್ವಾ ಮಹೀಮಿಮಾಂ ॥೨೪॥ ಏವಮುಕ್ತಸ್ತು ಸೌಹಾರ್ದಾಲ್ಲಕ್ಷ್ಮಣೇನ ಸ ರಾಘವಃ । ಉವಾಚ ದೀನಯಾ ವಾಚಾ ದುಃಖಾಭಿಹತಚೇತನಃ ॥೨೫॥ ವನಂ ಸರ್ವಂ ಸುವಿಚಿತಂ ಪದ್ಮಿನ್ಯಃ ಫುಲ್ಲಪಂಕಜಾಃ । ಗಿರಿಶ್ಚಾಯಂ ಮಹಾಪ್ರಾಜ್ಞ ಬಹುಕಂದರನಿರ್ಝ

---

ಕಾಕುತ್ಸ್ಥ-ಶ್ರೀರಾಮನೇ, ಶೋಕೇ-ದುಃಖದಲ್ಲಿ, ಮನಃ-ಮನಸ್ಸನ್ನು, ಮಾಸ್ಮಕೃಥಾಃ-ಮಾಡಬಾರದಷ್ಟೆ, ಮನ್ಯಸೇಯದಿ-ಈಗ ನೀನಾದರೆ, ಯತ್ರ-ಯಾವಸ್ಥಳದಲ್ಲಿ, ಸಾಜನಕಾತ್ಮಜಾ-ಆ ಸೀತಾದೇವಿಯು, ಅಸ್ತಿ-ಇರುತ್ತಾಳೆಯೋ, ಸರ್ವಂ-ಸಮಸ್ತವಾದ, ತದ್ವನಂ-ಆ ವನವನ್ನು, ವಿಚಿನುವಃ-ಹುಡುಕುವೆವು ‖೧೮‖ ‖ ಏವಂ-ಈಪರಿಯಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ, ಸೌಹಾರ್ದಾತ್-ಸ್ನೇಹಭಾವದಿಂದ, ಉಕ್ತಃ-ಹೇಳಲ್ಪಟ್ಟವನಾದಕಾರಣ ಸಮಾಹಿತಃ-ಸಮಾಧಾನಚಿತ್ತನಾಗಿ. ರಾಮಃ-ಶ್ರೀರಾಮನು, ಸೌಮಿತ್ರಿಣಾಸಹ-ಲಕ್ಷ್ಮಣನನ್ನೊಡಗೂಡ, ವಿಚೇತುಂ-ಹುಡುಕುವದಕ್ಕಾಗಿ. ಉಪಚಕ್ರಮೇ-ಆರಂಭಿಸಿದನು ‖೧೯‖ ‖ ದಶರಥಾತ್ಮಜೌ-ದಶರಥರಾಯನ ಕುವರರಾದ, ತೌ-ಆ ರಾಮಲಕ್ಷ್ಮಣರು ವನಾನಿ-ವನಗಳನ್ನೂ, ಗಿರೀಂಶ್ಚ-ಬೆಟ್ಟಗಳನ್ನೂ ಸರಿತಶ್ಚ-ಹೊಳೆಗಳನ್ನೂ, ಸರಾಂಸಿಚ-ಸರೋವರಗಳನ್ನೂ. ನಿಖಿಲೇನ-ಸಾಕಲ್ಯದಿಂದ. ವಿಚಿನ್ವಾನೌ-ಹುಡುಕಿದರು ‖೨೦‖ ‖ ತಸ್ಯಶೈಲಸ್ಯ-ಆ ಬೆಟ್ಟದ. ಸಾನೂನಿ-ಜರಿಗಳನ್ನು, ಗುಹಾಶ್ಚ-ಗಹ್ವರಗಳನ್ನು, ಶಿಖರಾಣಿಚ-ಶೃಂಗಗಳನ್ನು, ನಿಖಿಲೇನ-ಸಾಮಸ್ತ್ಯದಿಂದ ವಿಚಿನ್ವಾನೌ-ಹುಡುಕಿದವರಾಗಿ, ತಾಂ-ಆ ಸೀತಾದೇವಿಯನ್ನು. ನಾಭಿಜಗ್ಮತುಃ-ಹೊಂದದೇಹೋದರು ‖೨೧‖ ‖ ರಾಮಃ-ಶ್ರೀರಾಮನು, ಸರ್ವತಃ-ಎಲ್ಲಾ ಕಡೆಯಲ್ಲಿಯೂ, ಶೈಲಂ-ಬೆಟ್ಟವನ್ನು. ವಿಚಿತ್ಯ-ಹುಡುಕಿ. ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಇಹಪರ್ವತೇ-ಈ ಬೆಟ್ಟದಲ್ಲಿ. ಶುಭಾಂ-ಮಂಗಳಕರಳಾದ. ವೈದೇಹೀಂ-ಸೀತಾದೇವಿಯನ್ನು, ನಪಶ್ಯಾಮಿ-ಕಾಣೆನೆಂದು, ಅಬ್ರವೀತ್-ನುಡಿದನು ‖೨೨‖ ‖ ತತಃ-ಬಳಿಕ. ದುಃಖಾಭಿಸಂತಪ್ತಃ-ದುಃಖದಿಂ ಸಂಕಟಗೊಂಡ, ಲಕ್ಷ್ಮಣಃ-ಲಕ್ಷ್ಮಣನು. ದಂಡಕಾರಣ್ಯಂ-ದಂಡಕಾವನವನ್ನು. ವಿಚರನ್-ಸಂಚರಿಸುತ್ತಿರುವವನಾಗಿ, ದೀಪ್ತತೇಜಸಂ-ಹೊಳೆಯುತ್ತಿರುವ ಕ್ಷತ್ರಿಯತೇಜಸ್ಸುಳ್ಳ, ಭ್ರಾತರಂ-ಅಣ್ಣನಾದ ಶ್ರೀರಾಮನಂಕುರಿತು, ವಾಕ್ಯಂ-ಮಾತನ್ನು. ಅಬ್ರವೀತ್-ನುಡಿದನು ‖೨೩‖ ‖ ಹೇಮಹಾಪ್ರಾಜ್ಞ-ಎಲೈ ಬಹಳ ಬುದ್ಧಿಶಾಲಿಯೇ, ಮಹಾಬಾಹುಃ-ಮಹಾಭುಜಗಳುಳ್ಳ. ವಿಷ್ಣುಃ-ಶ್ರೀಮಹಾವಿಷ್ಣುವು, ಬಲಿಂ-ಬಲಿಚಕ್ರವರ್ತಿಯನ್ನು, ಬದ್ಧ್ವಾ-ಕಟ್ಟಿ. ಇಮಾಂಮಹೀಂಯಥಾ-ಈ ಭೂದೇವಿಯನ್ನಂತೆ, ಜನಕಾತ್ಮಜಾಂ-ಜನಕರಾಯನ ಕುವರಿಯಾದ, ಮೈಥಿಲೀಂ-ಸೀತಾದೇವಿಯನ್ನು. ಪ್ರಾಪ್ಸ್ಯಸಿ-ಹೊಂದುವಿ ‖೨೪‖ ‖ ಏವಂ-ಈಪರಿಯಾಗಿ, ಲಕ್ಷ್ಮಣೇನ-ಲಕ್ಷ್ಮಣನಿಂದ. ಸೌಹಾರ್ದಾತ್-ಮಿತ್ರಭಾವದಿಂದ, ಉಕ್ತಃ-ಹೇಳಲ್ಪಟ್ಟ, ಸರಾಘವಃ-ಆ ಶ್ರೀರಾಮನು. ದುಃಖಾಭಿಹತಚೇತನಃ-ದುಃಖದಿಂ ಭಗ್ನವಾದ ಬುದ್ಧಿಯುಳ್ಳವನಾಗಿ, ದೀನಯಾ-ದೈನ್ಯದಿಂ ಕೂಡಿಕೊಂಡಿರುವ ವಾಚಾ-ಮಾತಿನಿಂದ, ಉವಾಚ-ಹೇಳಿದನು ‖೨೫‖ ‖ ಹೇಮಹಾಪ್ರಾಜ್ಞ-ಎಲೈ ಮಹಾಬುದ್ಧಿಶಾಲಿಯೇ, ಸರ್ವಂ-ಸಮಸ್ತವಾದ, ವನಂ-ಅರಣ್ಯವು, ಸುವಿಚಿತಂ-ಚನ್ನಾಗಿ ಹುಡುಕಲ್ಪಟ್ಟಿತು, ಫುಲ್ಲಪಂಕಜಾಃ-ಅರಳಿದ ಕಮಲಗಳುಳ್ಳ, ಪದ್ಮಿನ್ಯಃ-ಸರೋವರಗಳು, ಸುವಿಚಿತಾಃ-ಚನ್ನಾಗಿ ಹುಡುಕಲ್ಪಟ್ಟವು, ಬಹುಕಂದರನಿರ್ಝರಃ-ಬಹಳವಾದ ಗುಹೆಗಳೂ ನದಿಗಳೂಉಳ್ಳ, ಅಯಂಗಿರಿಶ್ಚ-ಈ ಬೆಟ್ಟವೂ, ಸುವಿಚಿತಃ-ಚನ್ನಾಗಿ ಹುಡು

---

ಯಲ್ಲಿರುವಳೋ ಈ ವನದಲ್ಲೆಲ್ಲಾ ಹುಡುಕುವಣವೆಂದು ಲಕ್ಷ್ಮಣನು ಅತಿವಿಶ್ವಾಸದಿಂ ನುಡಿದವನಾಗಲು, ಆಗ ಶ್ರೀರಾಮನು ಆ ಲಕ್ಷ್ಮಣನಿಂದೊಡಗೂಡಿ ಹುಡುಕುವದಕ್ಕೆ ಪ್ರಾರಂಭಿಸಿದನು ॥೧೯॥ ದಶರಥರಾಜನ ಕುವರರಾದ, ಆ ರಾಮಲಕ್ಷ್ಮಣರೀರ್ವರು ವನಂಗಳನ್ನೂ, ಪರ್ವತಂಗಳನ್ನೂ, ಹೊಳೆಗಳನ್ನೂ, ಸರೋವರಂಗಳನ್ನೂ, ಜರಿಗಳನ್ನೂ, ಗುಹೆಗಳನ್ನೂ, ಪರ್ವತದ ತುದಿಭಾಗಗಳನ್ನೂ, ಸಹಾ, ಹುಡುಕಿದರೂ, ಆ ದೇವಿಯಂ ಕಾಣಲಿಲ್ಲಾ ॥೨೧॥ ಅನಂತರದೋಳ್ ಶ್ರೀರಾಮನು ಆ ಪರ್ವತದ ಯಲ್ಲಾ ಕಡೆಯಲ್ಲಿಯೂ ಹುಡುಕಿ, ಆಗ ಲಕ್ಷ್ಮಣನಂ ಕುರಿತು, ಎಲೈ ಲಕ್ಷ್ಮಣನೇ! ಶುಭಕರಳಾದ ಸೀತಾದೇವಿಯನ್ನು ಕಾಣಲಿಲ್ಲಾ ಎಂದು ನುಡಿದ ಬಳಿಕ, ಲಕ್ಷ್ಮಣನು ಶೋಕಾಕ್ರಾಂತನಾಗಿ, ದಂಡಕಾರಣ್ಯವಾಸಿಯಾದ ಮತ್ತು ಬೆಳಗುತಲಿರುವ ಆ ಅಗ್ರಜನಂ ಕುರಿತು ಎಲೈ ಪ್ರಾಜ್ಞನೇ! ಶ್ರೀಮಹಾ ವಿಷ್ಣುವು ಬಲಿಚಕ್ರವರ್ತಿಯಂ ಬಂಧಿಸಿ ಭೂಮಿಯಾಪಡೆದಂತೆ ನೀನು ಜನಕರಾಜನ ಕುವರಿಯಾದ ಆ ದೇವಿಯನ್ನು ಹೊಂದುವವನಾಗುವೇ ॥೨೪॥ ಎಂದು ಈ ಪ್ರಕಾರವಾಗಿ ಲಕ್ಷ್ಮಣನು ನುಡಿಯಲಾ ರಘುವೀರನು ದುಃಖಾಕ್ರಾಂತನಾಗಿಂತೆಂದನು, ಎಲೈ ಬುದ್ಧಿಶಾಲಿಯೇ!

ರಃ ।೨೬॥ ನಹಿಪಶ್ಯಾಮಿವೈದೇಹೀಂಪ್ರಾಣೇಭ್ಯೋಪಿಗರೀಯಸೀಂ।೨೭। ಏವಂಸವಿಲಪನ್ರಾಮಸ್ಸೀತಾಹರಣಕರ್ಶಿತಃ।
ದೀನಶ್ಶೋಕಸಮಾವಿಷ್ಟೋಮುಹೂರ್ತಂವಿಹ್ವಲೋಭವತ್ ।೨೮। ಸಂತಪ್ತೋಹ್ಯವಸನ್ನಾಂಗೋಗತಬುದ್ಧಿರ್ವಿಚೇತನಃ।
ನಿಷಸಾದಾತುರೋದೀನೋನಿಶ್ಶ್ವಸ್ಯಾಶೀತಮಾಯತಂ ।೨೯। ಬಹುಳಂಸತುನಿಶ್ಶ್ವಸ್ಯರಾಮೋರಾಜೀವಲೋಚ
ನಃ। ಹಾಪ್ರಿಯೇತಿವಿಚುಕ್ರೋಶಬಹುಶೋಬಾಷ್ಪಗದ್ಗದಃ ।೩೦। ತಂತತಸ್ಸಾಂತ್ವಯಾಮಾಸಲಕ್ಷ್ಮಣಃಪ್ರಿಯಬಾಂಧ
ವಃ। ಬಹುಪ್ರಕಾರಂಧರ್ಮಜ್ಞಃಪ್ರಶ್ರಿತಂಪ್ರಶ್ರಿತಾಂಜಲಿಃ ।೩೧। ಅನಾದೃತ್ಯತುತದ್ವಾಕ್ಯಂಲಕ್ಷ್ಮಣೋಷ್ಠಪುಟಾ
ಚ್ಚ್ಯುತಂ। ಅಪಶ್ಯಂಸ್ತಾಂಪ್ರಿಯಾಂಸೀತಾಂಪ್ರಾಕ್ರೋಶತ್ಸಪುನಃಪುನಃ।೩೨।—**ಏಕಷಷ್ಟಿತಮಸ್ಸರ್ಗಃ**—
ಸೀತಾಮಪಶ್ಯನ್ಧರ್ಮಾತ್ಮಾಕಾಮೋಪಹತಚೇತನಃ। ವಿಲಲಾಪಮಹಾಬಾಹೂರಾಮಃಕಮಲಲೋಚನಃ।೧।ಪಶ್ಯ
ನ್ನಿವಚತಾಂಸೀತಾಮಪಶ್ಯನ್ಮದನಾರ್ದಿತಃ । ಉವಾಚರಾಘವೋವಾಕ್ಯಂವಿಲಾಪಾಶ್ರಯದುರ್ವಚಂ ॥೨॥ ತ್ವಮಶೋ

---

ಕಸ್ಯಶಿಟ್ಪತು ॥೨೬॥॥ ಪ್ರಾಣೇಭ್ಯೋಪಿ-ಪ್ರಾಣಗಳಿಗಿಂತಲೂ, ಗರೀಯಸೀಂ-ಶ್ರೇಷ್ಠಳಾದ, ವೈದೇಹೀಂ-ಸೀತಾದೇವಿಯನ್ನು, ನಪಶ್ಯಾಮಿಹಿ-ಕಾಣೆ ನಷ್ಟೆ ॥೨೭॥ ಏವಂ-ಈಪರಿಯಾಗಿ. ವಿಲಪನ್-ವಿಲಾಪವಮಾಡುತ್ತಿರುವ, ಸೀತಾಹರಣಕರ್ಶಿತಃ-ಸೀತಾಪಹಾರದಿಂ ಕೃಶೀಭೂತನಾದ. ಸರಾಮಃ-ಆ ಶ್ರೀರಾಮನು, ದೀನಃ-ಸಂಕಟಗೊಂಡವನಾಗಿ, ಶೋಕಸಮಾವಿಷ್ಟಃ-ದುಃಖದಿಂ ವ್ಯಾಪ್ತನಾಗಿ, ಮುಹೂರ್ತಂ-ಎರಡುಘಳಿಗೆ ಕಾಲವು. ವಿಹ್ವಲಃ-ಶೋಕದಿಂದಪರಾಧೀನನು, ಅಭವತ್-ಆದನು ॥೨೮॥ ಸಂತಪ್ತಃ-ಸಂಕಟಗೊಂಡ. ಅವಸನ್ನಾಂಗಃ-ಕ್ಷೀಣವಾದ ಅವಯವಗಳುಳ್ಳ. ಗತಬುದ್ಧಿಃ-ಶಿಥಿಲವಾದ ಬುದ್ಧಿಯುಳ್ಳ. ವಿಚೇತನಃ-ಪ್ರಜ್ಞಾಶೂನ್ಯನಾದ, ರಾಮಃ-ಶ್ರೀರಾಮನು, ದೀನಃ-ದೈನ್ಯವಾದ ಮುಖವುಳ್ಳವನಾಗಿ, ಆತುರಃ-ಗಾಬರಿಗೊಂಡವನಾಗಿ. ಅಶೀತಂ-ಉಷ್ಣವಾಗಿಯೂ, ಆಯತಂ-ದೀರ್ಘವಾಗಿಯೂ. ನಿಶ್ಶ್ವಸ್ಯ-ನಿಟ್ಟುಸುರುಬಿಟ್ಟು. ನಿಷಸಾದ-ಕುಳಿತುಕೊಂಡನು ॥೨೯॥ ರಾಜೀವಲೋಚನಃ-ತಾವರೇಹುವ್ವಿನಂತೆ ನೇತ್ರಗಳುಳ್ಳ, ಸರಾಮಸ್ತು-ಆ ಶ್ರೀರಾಮನು ಆದರೆ, ಬಹುಳಂ-ಬಹಳವಾಗಿ, ನಿಶ್ಶ್ವಸ್ಯ-ನಿಟ್ಟುಸುರುಬಿಟ್ಟು, ಹಾ-ಕಷ್ಟವು. ಹೇಪ್ರಿಯೇ-ಎಲೌ ಪ್ರೀತಿಪಾತ್ರಳೇ, ಇತಿ-ಇಂತೆಂದು, ಬಾಷ್ಪಗದ್ಗದಃ-ಕಂಬನಿಗಳಿಂದ ಗದ್ಗದಸ್ವರವುಳ್ಳವನಾಗಿ, ಬಹುಶಃ-ಬಹಳವಾಗಿ, ವಿಚುಕ್ರೋಶ-ಘಟ್ಟಿಯಾಗಿ ಕೂಗಿದನು ॥೩೦॥ ತತಃ-ಬಳಿಕ, ಧರ್ಮಜ್ಞಃ-ಧರ್ಮವಂತಿಳಿದ, ಪ್ರಿಯಬಾಂಧವಃ-ಇಷ್ಟವಾಗಿಯೂ ಸಂಬಂಧಿಯಾಗಿಯೂ ಯಿರುವ, ಸಲಕ್ಷ್ಮಣಃ-ಆ ಲಕ್ಷ್ಮಣನು. ಪ್ರಶ್ರಿತಾಂಜಲಿಃ-ಅಂಜಲಿಬಂಧನಾಗಿ, ಪ್ರಶ್ರಿತಂ-ಸವಿನಯವಾದ, ತಂ-ಆ ಶ್ರೀರಾಮನನ್ನು, ಬಹುಪ್ರಕಾರಂ-ಬಹಳ ಬಗೆಯಾಗಿ, ಸಾಂತ್ವಯಾಮಾಸ-ಸಮಾಧಾನಗೊಳಿಸಿದನು ॥೩೧॥ ಸಃ-ಆ ಶ್ರೀರಾಮನು, ಲಕ್ಷ್ಮಣೋಷ್ಠಪುಟಾತ್-ಲಕ್ಷ್ಮಣನ ತುಟಿಯಪ್ರದೇಶದಕೆಳೆಯಿಂದ, ಚ್ಯುತಂ-ಹೊರಟುಬಂದ, ತದ್ವಾಕ್ಯಂ-ಆ ಮಾತನ್ನು, ಅನಾದೃತ್ಯ-ಕೇಳದೇಲೆ, ತಾಂಪ್ರಿಯಾಂ-ಇಷ್ಟಳಾದ ಆ ಸೀತಾದೇವಿಯನ್ನು ಅಪಶ್ಯನ್-ಕಾಣದಿರುವವನಾಗಿ, ಪ್ರಾಕ್ರೋಶತ್-ಘಟ್ಟಿಯಾಗಿ ಕೂಗಿದನು॥೩೨॥ —**ಏಕಷಷ್ಟಿತಮಸ್ಸರ್ಗಃ**—

ಧರ್ಮಾತ್ಮಾ-ಧರ್ಮಿಷ್ಠನಾದ, ಕಾಮೋಪಹತಚೇತನಃ-ಕಾಮದಿಂ ಹೊಡೆಯಲ್ಪಟ್ಟ ಮನವುಳ್ಳ, ಮಹಾಬಾಹುಃ-ಮಹಾ ಭುಜಪರಾಕ್ರಮಶಾಲಿಯಾದ, ಕಮಲಲೋಚನಃ-ಕಮಲಗಳೋಪಾದಿಯಲ್ಲಿರುವ ನೇತ್ರಗಳುಳ್ಳ, ರಾಮಃ-ಶ್ರೀರಾಮನು, ಸೀತಾಂ-ಸೀತಾದೇವಿಯನ್ನು ಅಪಶ್ಯನ್-ಕಾಣದಿರುವವನಾದರೂ, ಮದನಾರ್ದಿತಃ-ಮನ್ಮಥನಿಂ ಹೊಡಿಯಲ್ಪಟ್ಟವನಾಗಿ, ತಾಂ-ಆ ಸೀತಾದೇವಿಯನ್ನು, ಪಶ್ಯನ್ನಿವ-ಕಂಡವನಂತೆ, ವಿಲಾಪಾಶ್ರಯದುರ್ವ

---

ಈ ವನದಲ್ಲೆಲ್ಲಾ ಅನೇಕವಾದ ಪರ್ವತಂಗಳೂ ಇರುವವಲ್ಲವೇ? ಅವುಗಳನ್ನೆಲ್ಲಾ ಹುಡುಕಿದೆವಾದರೂ ಆ ದೇವಿಯು ಕಾಣ್ಬರಲಿಲ್ಲಾ, ಎಂಬದಾಗಿ ವಿಲಾಪವಂ ಗೈಯ್ಯುತ್ತಾ ಆ ಶ್ರೀರಾಮನು ಸೀತಾಪಹಾರದಿಂ ಕೃಶೀಭಾವವಂನ್ನೈದಿ ಮುಹೂರ್ತಮಾತ್ರವು ವಿಹ್ವಲಚಿತ್ತನಾದನು ।೨೮। ಈ ಪ್ರಕಾರವಾಗಿ ಬಹಳ ಸಂತಾಪವನ್ನೈದಿದ ಆ ಶ್ರೀರಾಮನು ಬುದ್ಧಿಚಾಂಚಲ್ಯವನ್ನೈದಿ ಪ್ರಜ್ಞೆಯಿಲ್ಲದೆ ದೀನನಾಗಿ, ಬಹು ಭೀತಿಗೊಂಡು, ನಿಟ್ಟುಸುರುಗಳಂ ಬಿಡುತ್ತಾ ಕುಳಿತುಕೊಂಡು ಅಯ್ಯೋ ಪ್ರಿಯಳೇ ಯಲ್ಲಿ ಪೋದವಳಾದೇ ಎಂದು ವಿಸ್ವರವಾಗಿ ಘಟ್ಟಿಯಾಗಿ ಕೂಗಿಕೊಂಡನು ।೩೦। ಅನಂತರದೊಳ್ ಧರ್ಮಜ್ಞನಾದ, ಮತ್ತು ಯಿಷ್ಟಬಂಧುವಾದ, ಲಕ್ಷ್ಮಣನು, ಅಂಜಲಿಬಂಧವಂ ಗೈದು ವಿನಯದಿಂ ಆ ಶ್ರೀರಾಮನನ್ನು ಸಮಾಧಾನಗೊಳಿಸಿದವನಾಗಲೂ, ಆ ಶ್ರೀರಾಮನು ಲಕ್ಷ್ಮಣನ ಮುಖದಿಂ ಪೊರಟಾ ಮಾತಂ ಕೇಳದೇ ತನ್ನ ಪ್ರಾಣಕಾಂತೆಯಾದ ಆ ಸೀತಾದೇವಿಯಂ ಕಾಣದಿರುವವನಾಗಿ ಘಟ್ಟಿಯಾಗಿ, ಕೂಗಿಕೊಂಡನು ।೩೨।—*ಆರಣ್ಯಕಾಂಡದಲ್ಲಿನ ೬೦ ನೆಯಸರ್ಗಂ ಮುಗಿದುದು*—

ಅನಂತರದಲ್ಲಿ ಮಹಾ ಭುಜಪರಾಕ್ರಮ ಶಾಲಿಯಾಗಿಯೂ ತಾವರೇ ಯಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವನಾಗಿಯೂ ಸಹಾ ಇರುವ ಶ್ರೀರಾಮನು ಸೀತಾದೇವಿಯಂ ಕಾಣದೆ ಮನ್ಮಥ ಬಾಣಂಗಳಿಂದನೊಂದ ಚೈತನ್ಯವುಳ್ಳವನಾಗಿ ವಿಲಾಪಂ ಗೈದನದೆಂತೆನೆ,—।೧। ರಘುಕುಲೋತ್ಪನ್ನನಾದ ಶ್ರೀರಾಮನು ಸೀತಾದೇವಿಯನ್ನು ಕಾಣದಿರುವವನಾದಕಾರಣ ಮದನನಿಂದಲೂ ಬಾಧೆಗೊಳಿಸಲ್ಪಟ್ಟವನಾಗಿ ಆ ಜನಕನಂದಿನಿಯನ್ನು ಕಂ

ಕಸ್ಯಶಾಖಾಭಿಃಪುಷ್ಪಪ್ರಿಯತಯಾಪ್ರಿಯೆ । ಆವೃಣೋಷಿಶರೀರಂತೆಮಮಶೋಕವಿವರ್ಧನೀ।೩।ಕದಳೀಸ್ಕಂಧಸದೃಶೌಕದಳ್ಯಾಸಂವೃತಾವುಭೌ । ಊರೂಪಶ್ಯಾಮಿತೆದೇವಿನಾಸಿಶಕ್ತಾನಿಗೂಹಿತುಂ ।೪। ಕರ್ಣಿಕಾರವನಂಭದ್ರೇಹಸಂತೀದೇವಿಸೇವಸೆ । ಅಲಂತೆಪರಿಹಾಸೇನಮಮಬಾಧಾವಹೇನವೈ ।೫। ಪರಿಹಾಸೇನಕಿಂಸೀತೆಪರಿಶ್ರಾಂತಸ್ಯಮೆಪ್ರಿಯೆ । ಅಯಂಸಪರಿಹಾಸೋಪಿಸಾಧುದೇವಿನರೋಚತೆ ।೬। ವಿಶೇಷೇಣಾಶ್ರಮಸ್ಥಾನೇಹಾಸೋಯಂನಪ್ರಶಸ್ಯತೆ । ಅವಗಚ್ಛಾಮಿತೆಶೀಲಂಪರಿಹಾಸಪ್ರಿಯಂಪ್ರಿಯೆ ।೭। ಆಗಚ್ಛತ್ವಂವಿಶಾಲಾಕ್ಷಿಶೂನ್ಯೋಯಮುಟಜಸ್ತವ ॥೮॥ ಸುವ್ಯಕ್ತಂರಾಕ್ಷಸೈಸ್ಸೀತಾಭಕ್ಷಿತಾವಾಹೃತಾಪಿವಾ । ನಹಿಸಾವಿಲಪಂತಂಮಾಮುಪಸಂಪ್ರೈತಿಲಕ್ಷ್ಮಣ।೯। ಏತಾನಿಮೃಗಯೂಥಾನಿಸಾಶ್ರುನೇತ್ರಾಣಿಲಕ್ಷ್ಮಣ । ಶಂಸಂತೀವಹಿವೈದೇಹೀಂಭಕ್ಷಿತಾಂರಜನೀಚರೈಃ ।೧೦। ಹಾಮಮಾರ್ಯೇಕ್ವಯಾತಾಸಿಹಾಸಾಧ್ವಿ

---

ಚಂ-ವಿಲಾಪದಸಂಬಂಧದಿಂ ಹೇಳಲಸಾಧ್ಯವಾದ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೨॥ ಹೆಪ್ರಿಯೆ-ಎಲೆ ಪ್ರೇಮುಕಳೇ ಪುಷ್ಪಪ್ರಿಯತಯಾ-ಪುಷ್ಪಗಳಲ್ಲಿ ಬಹಳ ಪ್ರೀತಿಯುಳ್ಳವಳಾದ್ದರಿಂದ, ತ್ವಂ-ನೀನು ಮಮ-ನನಿಗೆ, ಶೋಕವಿವರ್ಧಿನೀ-ವ್ಯಸನವನ್ನು ವೃದ್ಧಿಗೊಳಿಸುತ್ತಿರುವಳಾಗಿ, ಅಶೋಕಸ್ಯ-ಅಶೋಕವೃಕ್ಷದ, ಶಾಖಾಭಿಃ-ಕೊಂಬೆಗಳಿಂದ ಶರೀರಂ-ಶರೀರವನ್ನು, ಆವೃಣೋಷಿ-ಆಚ್ಛಾದನಮಾಡಿಕೊಂಡಿದ್ದೀಯಾ ॥೩॥ ಹೆದೇವೀ-ಎಲೌ ಸೀತಾದೇವಿಯೇ ಕದಳೀಸ್ಕಂಧಸದೃಶೌ-ಬಾಳೇಗಿಡಗಳ ಕಂಭಗಳಿಗೆ ಸಮಾನವಾದ, ಕದಳ್ಯಾ-ಕದಳೀ ಯೆಲೆಯಿಂದ ಸಂವೃತೌ-ಆಚ್ಛಾದಿತಗಳಾದ ಉಭೌ-ಎರಡಾದ, ತೆಊರೂ-ನಿನ್ನ ತೊಡೆಗಳನ್ನು, ಪಶ್ಯಾಮಿ-ಕಾಣುತಲಿದ್ದೇನೆ. ನಿಗೂಹಿತುಂ-ಆಚ್ಛಾದನಮಾಡಿಕೊಳ್ಳುವದಕ್ಕೆ, ಶಕ್ತಾ-ಸಮರ್ಥಳು, ನಾಸಿ-ಆಗಲಾರೆ ॥೪॥ ಹೆಭದ್ರೆ-ಎಲೌ ಮಂಗಳಕರಳೇ. ಹೆದೇವಿ-ಎಲೈ ಸೀತಾದೇವಿಯೇ. ಹಸಂತೀ-ನಗುತ್ತಿರುವವಳಾಗಿ, ಕರ್ಣಿಕಾರವನಂ-ಬೆಟ್ಟದತಾವರೇಗಿಡಗಳ ಗುಂಪನ್ನು, ಸೇವಸೆ-ಸೇವಿಸುತ್ತಿದ್ದೀಯಾ. ಮಮ-ನನಿಗೆ, ಬಾಧಾವಹೇನ-ದುಃಖಕರವಾದ, ತೆ-ನಿನ್ನ ಪರಿಹಾಸೇನ-ಹಾಸ್ಯದಿಂದ, ಅಲಂ-ಸಾಕು ॥೫॥ ಹೆಪ್ರಿಯೆ-ಎಲೌ ಇಷ್ಟಳೇ. ಪರಿಶ್ರಾಂತಸ್ಯ-ಬಳಲಿದ, ಮೆ-ನನಿಗೆ, ಪರಿಹಾಸೇನ-ಹಾಸ್ಯದಿಂದ, ಕಿಂ-ಯೇನುಪ್ರಯೋಜನು. ಹೆಸೀತೆ ಹೆದೇವೀ-ಎಲೌ ಸೀತಾದೇವಿಯೇ, ಸೋಯಂ-ಆ ಈ ಪರಿಹಾಸೋಪಿ-ಹಾಸ್ಯವನ್ನು, ಸಾಧು-ಚನ್ನಾಗಿ, ನರೋಚತೆ-ರುಚಿಸುವದಿಲ್ಲ ॥೬॥ ಹೆಪ್ರಿಯೆ-ಎಲೌ ಇಷ್ಟಳೇ, ವಿಶೇಷೇಣ-ವಿಶೇಷದಿಂದ, ಆಶ್ರಮಸ್ಥಾನೆ-ಆಶ್ರಮಪ್ರದೇಶದಲ್ಲಿ, ಹಾಸೋಯಂ-ಈ ಪರಿಹಾಸವು. ನಪ್ರಶಸ್ಯತೆ-ಪ್ರಶಸ್ತವಾಗಿರುವದಿಲ್ಲ, ತೆ-ನಿನ್ನ, ಶೀಲಂ-ಸ್ವಭಾವವನ್ನು, ಪರಿಹಾಸಪ್ರಿಯಂ-ಹಾಸ್ಯದಲ್ಲೇ ಪ್ರೀತಿಯುಳ್ಳದ್ದಾಗಿ ಅವಗಚ್ಛಾಮಿ-ತಿಳಿದಿದ್ದೇನೆ ॥೭॥ ಹೆವಿಶಾಲಾಕ್ಷಿ-ಎಲೌ ವಿಸ್ತಾರವಾದ ನೇತ್ರಗಳುಳ್ಳವಳೇ. ತವ-ನಿನ್ನ. ಅಯಂಉಟಜಃ-ಈ ಪರ್ಣಶಾಲೆಯು, ಶೂನ್ಯಃ-ಜನರಹಿತವಾಗಿದೆ, ತ್ವಂ-ನೀನು, ಆಗಚ್ಛ-ಬಾ ॥೮॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ. ಹಿ-ಯಾವಕಾರಣದ ದೆಸೆಯಿಂದ, ಸಾ-ಆ ಸೀತಾದೇವಿಯು, ವಿಲಪಂತಂ-ವಿಲಾಪಮಾಡುತ್ತಿರುವ, ಮಾಂ-ನನ್ನನ್ನು ಕುರಿತು, ನೋಪಸಂಪ್ರೈತಿ-ಸಮೀಪಕ್ಕೆ ಬರಲಿಲ್ಲವೋ, ತಸ್ಮಾತ್-ಆ ಕಾರಣದ ದೆಸೆಯಿಂದ, ಸೀತಾ-ಸೀತಾದೇವಿಯು, ರಾಕ್ಷಸೈಃ-ರಕ್ಕಸರಿಂದ, ಭಕ್ಷಿತಾವಾ-ತಿನ್ನಲ್ಪಟ್ಟಳೋ, ಹೃತಾಪಿವಾ-ಅಪಹರಿಸಿಕೊಂಡು ಹೋಗಲ್ಪಟ್ಟಳೋ, ಸುವ್ಯಕ್ತಂ-ಸ್ಪಷ್ಟವು ॥೯॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಏತಾನಿ-ಈ ಕಾಣುತ್ತಿರುವ, ಮೃಗಯೂಥಾನಿ-ಜಿಂಕೆಗಳ ಗುಂಪುಗಳು, ಸಾಶ್ರುನೇತ್ರಾಣಿ-ಕಂಬನಿಗಳಿಂದೊಡಗೂಡಿದ ನೇತ್ರಗಳುಳ್ಳವುಗಳಾಗಿ, ವೈದೇಹೀಂ-ಸೀತಾದೇವಿಯನ್ನು, ರಜನೀಚರೈಃ-ರಕ್ಕಸರಿಂದ, ಭಕ್ಷಿತಾಂ-ತಿನ್ನಲ್ಪಟ್ಟವಳನ್ನಾಗಿ, ಶಂಸಂತೀವಹಿ-ಹೇಳುತಿವೆಯೋ ಎಂಬಂತಿವೆ ॥೧೦॥ ಹಾ-ಕಷ್ಟವು,

---

ಢವನಂತೆ ಬಂಣಿಸಿಗೊಂಡು. ಈ ರೀತಿಯಲ್ಲಿ ವಾಕ್ಯಂಗಳಂ ನುಡಿದನು ।೨॥ ಅದು ಹ್ಯಾಗಂದರೆ;—ಎಲೌ ಪ್ರಾಣಕಾಂತೆಯಾದ ಜನಕರಾಜಕನ್ನಿಕೆಯೇ! ನೀನು ಪುಷ್ಪಂಗಳಲ್ಲಿ ಪ್ರೀತಿಯುಳ್ಳವಳಾದಕಾರಣ, ನನಿಗೆ ಶೋಕವನ್ನು ವೃದ್ಧಿಯನ್ನೈದುವವಳಾಗಿ ಅಶೋಕವೃಕ್ಷದ ಶಾಖಂಗಳಿಂದ ನಿನ್ನ ಶರೀರವನ್ನು ಆಚ್ಛಾದನಂಗೈಕೊಂಡವಳಾಗಿ ಎಲ್ಲಿ ಔತುಕೊಂಡವಳಾಗಿರುವೆ? ।೩। ಎಲೌ ದೇವಿಯೇ! ಬಾಳೆಗಿಡಗಳಿಗೆ ಸದೃಶವಾದ ನಿನ್ನ ಊರುಗಳನ್ನು ನಾನು ನೋಡುತಲಿದ್ದೇನಾದಕಾರಣ ನೀನೌತುಕೊಳ್ಳಲೂ ಸಮರ್ಥಳಾಗಲಾರೆ ।೪। ಎಲೌ ಶುಭಕರಳೇ! ನನಿಗೆ ಬಾಧೆಯನ್ನುಂಟುಮಾಡುವ ಈ ಪರಿಹಾಸವಂ ಬಿಡುಬಿಡು; ನೀನು ಬೆಟ್ಟದಾವರೆಗಳ ತಂಡವನ್ನು ಸೇವಿಸುತಳಿದ್ದ, ಏನಗೆ ತಿಳಿದಿದ್ದಾಯಿತು ।೫। ಎಲೌ ಪ್ರಿಯಳೇ; ಬಹು ಪರಿಶ್ರಾಂತನಾಗಿರುವ ನನ್ನನ್ನು ಯಾಕೆ ಪರಿಹಾಸವಂ ಮಾಡುವವಳಾಗುವೆ? ಇದು ನನಗೆ ಇಷ್ಟವಾದದ್ದಲ್ಲವಾದಕಾರಣ ಇದನ್ನು ಬಿಡುವವಳಾಗು, ನೀನು ಯಾವಾಗಲೂ ಹಾಸ್ಯದಲ್ಲಿಯೇ ಪ್ರೀತಿಯುಳ್ಳವಳೆಂದು ನಿನ್ನ ಸ್ವಭಾವವನ್ನು ನಾನು ಚೆನ್ನಾಗಿ ತಿಳಿದಿರುವೆನು; ಆಶ್ರಮ ಪ್ರದೇಶದಲ್ಲಿ ಈ ರೀತಿಯಾಗಿ ಹಾಸ್ಯವಂ ಗೈಯ್ಯುವದು ಯುಕ್ತವಲ್ಲ; ಈ ಪರ್ಣಶಾಲೆಯು ನಿರ್ಜನವಾಗಿರುವದು ವೇಗದಿಂ ಬರುವವಳಾಗು; ಎಂದು ನುಡಿಯುತ್ತಾ ಪರಿತಪಿಸುವವನಾಗಿ ಲಕ್ಷ್ಮಣನಂ ಕುರಿತು, ಎಲೈ ಪ್ರೊಡಹುಟ್ಟಿದವನೇ; ಕೇಳುವವನಾಗು, ಜನಕನಂದಿನಿಯಾದ ಸೀತಾದೇವಿಯು ನನ್ನಿಂದ ಈಪರಿ ಕರೆಯಲ್ಪಟ್ಟವಳಾಧರೂ ಬರಲಿಲ್ಲವಾದಕಾರಣ ಆಕೆಯು ರಾಕ್ಷಸರಿಂದ ಗ್ರಾಸಂಗೈಯ್ಯಲ್ಪಟ್ಟಳೋ ಅಥವಾ ಅಪಹಾರಂ

ವರವರ್ಣಿನಿ । ಹಾಸಕಾಮಾತ್ವಯಾದೇವೀಕೈಕಯೀಸಾಭವಿಷ್ಯತಿ ॥೧೦॥ ಸೀತಯಾಸಹನಿರ್ಯಾತೋವಿನಾಸೀತಾ
ಮುಪಾಗತಃ । ಕಥಂನಾಮಪ್ರವೇಕ್ಷ್ಯಾಮಿಶೂನ್ಯಮಂತಃಪುರಂಪುನಃ ॥೧೧॥ ನಿರ್ವೀರ್ಯಇತಿಲೋಕೋಮಾಂನಿರ್ದಯ
ಶ್ಚೇತಿವಕ್ಷ್ಯತಿ। ಕಾತರತ್ವಂಪ್ರಕಾಶಂಹಿಸೀತಾಪನಯನೇನಮೇ ॥೧೨॥ ನಿವೃತ್ತವನವಾಸಶ್ಚಜನಕಂಮಿಥಿಲಾಧಿಪಂ।
ಕುಶಲಂಪರಿಪೃಚ್ಛಂತಂಕಥಂಶಕ್ಷ್ಯೇನಿರೀಕ್ಷಿತುಂ ॥೧೩॥ ವಿದೇಹರಾಜೋನೂನಂಮಾಂದೃಷ್ಟ್ವಾವಿರಹಿತಂತಯಾ
ಸುತಾಸ್ನೇಹೇನಸಂತಪ್ತೋಮೋಹಸ್ಯವಶಮೇಷ್ಯತಿ ॥೧೪॥ ಅಥವಾನಗಮಿಷ್ಯಾಮಿಪುರೀಂಭರತಪಾಲಿತಾಂ । ಸ್ವರ್ಗೋಪಿ
ಸೀತಯಾಹೀನಶ್ಶೂನ್ಯಏವಮತೋಮಮ ॥೧೫॥ ಮಾಮಿಹೋತ್ಸೃಜ್ಯಹಿವನೇಗಚ್ಛಾಯೋಧ್ಯಾಂಪುರೀಂಶುಭಾಂ
ನತ್ವಹಂತಾಂವಿನಾಸೀತಾಂಜೀವೇಯಂಹಿಕಥಂಚನ॥೧೬॥ ಗಾಢಮಾಶ್ಲಿಷ್ಯಭರತೋವಾಚ್ಯೋಮದ್ವಚನಾತ್ತ್ವಯಾ।

---

ಹೆ ಆರ್ಯೇ-ಎಲೌ ಪೂಜ್ಯಳೇ. ಮಮ-ನನ್ನ ಸಂಬಂಧಿಯಾದವಳು, ಹೆಸಾಧ್ವಿ-ಎಲೌ ಪತಿವ್ರತಾಶಿರೋಮಣಿಯೇ, ಹೆವರವರ್ಣಿನಿ-ಎಲೌ ಉತ್ತಮವಾದ ಬಣ್ಣವುಳ್ಳವಳೇ, ಕ್ವಯಾತಾಸಿ-ಯಲ್ಲಿಹೋದವಳಾದೆ. ತ್ವಯಾ-ನಿನ್ನಿಂದ. ಸಾಕೈಕಯೀದೇವೀ-ಆ ಕೈಕಯೀ ದೇವಿಯು. ಸಕಾಮಾ-ಕೋರಿಕೆಯಿಂದ ಕೂಡಿದವಳು, ಭವಿಷ್ಯತಿ-ಆಗುವಳು ॥೧೦॥ ॥ ಸೀತಯಾಸಹ-ಸೀತಾದೇವಿಯೊಡಗೂಡ. ನಿರ್ಯಾತಃ-ಹೊರಟುಬಂದವನಾಗಿ, ಸೀತಾಂವಿನಾ-ಸೀತಾದೇವಿಯನ್ನುಬಿಟ್ಟು, ಉಪಾಗತಃ-ಬಂದವನಾಗಿ, ಶೂನ್ಯಂ-ಸೀತಾರಹಿತವಾದ, ಅಂತಃಪುರಂ-ಅಂತಃಪುರವನ್ನುಕುರಿತು, ಪುನಃ-ಮತ್ತು, ಕಥನ್ನಾಮ-ಹ್ಯಾಗೆತಾನೆ, ಪ್ರವೇಕ್ಷ್ಯಾಮಿ-ಪ್ರವೇಶಿಸುವೆನು ॥೧೧॥ ॥ ಲೋಕಃ-ಜನವು. ಮಾಂ-ನನ್ನನ್ನು. ನಿರ್ವೀರ್ಯಃ ಇತಿ-ಸಾಮರ್ಥ್ಯವಿಲ್ಲದವನೆಂದು ನಿರ್ದಯಶ್ಚೇತಿಚ-ದಯಾಹೀನನೆಂದು, ವಕ್ಷ್ಯತಿ-ಹೇಳುತ್ತದೆ. ಮೇ-ನನಗೆ, ಸೀತಾಪನಯನೇನ-ಸೀತಾದೇವಿಯನ್ನು ಕಳೆಗಳೆದುಕೊಂಡಿರುವಿಕೆಯಿಂದ. ಕಾತರತ್ವಂ-ಭಯಚಾಂಚಲ್ಯವು, ಪ್ರಕಾಶಂಹಿ-ಸ್ಪಷ್ಟವಾಗುತ್ತದೆ ॥೧೨॥ ॥ ನಿವೃತ್ತವನವಾಸಶ್ಚ-ನರವೇರಿಸಲ್ಪಟ್ಟ ವನವಾಸವುಳ್ಳವನಾಗಿ, ಕುಶಲಂ-ಕ್ಷೇಮವನ್ನು ಪರಿಪೃಚ್ಛಂತಂ-ಕೇಳುತ್ತಿರುವ, ಮಿಥಿಲಾಧಿಪಂ-ಮಿಥಿಲದೇಶಾಧೀಶ್ವರನಾದ, ಜನಕಂ-ಜನಕರಾಯನನ್ನು, ನಿರೀಕ್ಷಿತುಂ-ನೋಡುವದಕ್ಕೆ, ಕಥಂಶಕ್ಷ್ಯೇ-ಹ್ಯಾಗೆಸಹಿಸಲೀ ॥೧೩॥ ॥ ವಿದೇಹರಾಜಃ-ಮಿಥಿಲಾಧಿಪತಿಯಾದ ಜನಕರಾಯನು. ತಯಾ-ಆ ಸೀತಾದೇವಿಯಿಂದ, ವಿರಹಿತಂ-ಹೀನನಾದ, ಮಾಂ-ನನ್ನನ್ನು, ದೃಷ್ಟ್ವಾ-ಕಂಡು. ಸುತಾಸ್ನೇಹೇನ-ಮಗಳಲ್ಲಿ ಪ್ರೇಮದಿಂದ, ಸಂತಪ್ತಃ-ಸಂಕಟಗೊಂಡವನಾಗಿ, ಮೋಹಸ್ಯ-ಮೂರ್ಛೆಯ, ವಶಂ-ಸ್ವಾಧೀನತೆಯನ್ನು ಏಷ್ಯತಿ-ಹೊಂದುವನು ॥೧೪॥ ॥ ಅಥವಾ-ಹಾಗಲ್ಲದಿದ್ದರೆ, ಭರತಪಾಲಿತಾಂ-ಭರತನಿಂ ರಕ್ಷಿಸಲ್ಪಟ್ಟ, ಪುರೀಂ-ಅಯೋಧ್ಯಾಪಟ್ಟಣವಂಕುರಿತು, ನಗಮಿಷ್ಯಾಮಿ-ಹೋಗಲಾರೆನು, ಸೀತಯಾ-ಸೀತಾದೇವಿಯಿಂದ. ಹೀನಃ-ರಹಿತವಾದ, ಸ್ವರ್ಗೋಪಿ-ಸ್ವರ್ಗವೂ ಕೂಡ, ಮಮ-ನನಗೆ ಶೂನ್ಯಏವ-ಬರೇದಾಗಿಯೇ, ಮತಃ-ಸಮ್ಮತವಾಗಿ ತೋರುತದೆ ॥೧೫॥ ॥ ಮಾಂ-ನನ್ನನ್ನು, ಇಹವನೇ-ಈ ವನದಲ್ಲಿಯೇ. ಉತ್ಸೃಜ್ಯ-ಬಿಟ್ಟು, ಶುಭಾಂ-ಶುಭಕರವಾದ, ಅಯೋಧ್ಯಾಂಪುರೀಂ-ಅಯೋಧ್ಯಾಪಟ್ಟಣವಂಕುರಿತು, ಗಚ್ಛ-ಹೋಗು, ಅಹಂತು-ನಾನಾದರೆ, ತಾಂಸೀತಾಂವಿನಾ-ಆ ಸೀತಾದೇವಿಯ ಹೊರತು, ಕಥಂಚನ-ಅತಿಪ್ರಯಾಸದಿಂದಲಾದರೂ, ನಜೀವೇಯಂ-ಬದುಕಲಾರೆನು ॥೧೬॥ ॥ ತ್ವಯಾ-ನಿನ್ನಿಂದ, ಮದ್ವಚನಾತ್-ನನ್ನಮಾತಿನ

---

ಗೈಯಲ್ಪಟ್ಟವಳೋ ಯೇನೋ, ಎಂಬದಾಗಿ ತೋರುವದು, ಯಾಕಂದರೆ,—ಈ ಮೃಗಯೂಥಂಗಳು ಕಂಬನಿಗಳಿಂದ ಯುಕ್ತವಾದ ನೇತ್ರಂಗಳುಳ್ಳವುಗಳಾಗಿ, ಸೀತಾದೇವಿಯು ರಾಕ್ಷಸರಿಂದ ಗ್ರಾಸಂಗೈಯಲ್ಪಟ್ಟಳೆಂದು ಪೇಳುತಲಿರುವಂತಿವೆ, ಹಾಹಾ? ಕಷ್ಟವು? ಎಲೌ ಪೂಜ್ಯತೆಯಂ ಪಡದವಳೇ, ಮಹಾ ಪತಿವ್ರತೆಯೇ, ಪತಿವ್ರತಾಶ್ರೇಷ್ಠಳೇ; ಯೆಲ್ಲಿಗೆ ಸಾರಿದವಳಾದೆ? ನಿನ್ನಿಂದ ಆ ಕೈಕೇಯೀ ದೇವಿಯು ಸಫಲವಾದ ಮನೋರಥವುಳ್ಳವಳಾಗುವಳು; ಹಾಹಾ, ಜನಕರಾಜನ ಕುಮರಿಯಾದ ಸೀತಾದೇವಿಯಿಂದೊಡಗೂಡಿ ನಾನು ಪ್ರಯಾಣಂ ಗೈದವನಾಗಿ ಆಕೆಯಂ ಬಿಟ್ಟು ಪುನಃ ಅಂತಃಪುರವನ್ನು ಎಂತು ಪ್ರವೇಶಂ ಗೈಯ್ಯುವವನಾಗುವೆನು ॥೧೧॥ ಲೋಕದಲ್ಲಿ ಜನಗಳೆಲ್ಲರು ನನ್ನನ್ನು ಅಸಮರ್ಥನೆಂಬದಾಗಿಯೂ ದಯಾರಹಿತನೆಂಬದಾಗಿಯೂ ನುಡಿವರು, ಈ ಭೀತಿಯಿಂದ ನನ್ನ ಮನವು ಸಂದೇಹಿಸುತಿಥೆ ॥೧೨॥ ಕೇಳೆಲೈ ಲಕ್ಷ್ಮಣನೇ, ಈ ವನವಾಸವು ಪರಿಪೂರ್ತಿಯನ್ನೈದಿದ ಬಳಿಕ ಗ್ರಾಮಪ್ರವೇಶಂ ಗೈದ ನನ್ನನ್ನು, ನನ್ನ ಮಾವನಾದ ಮಿಥಿಲರಾಜನು ಕ್ಷೇಮವಂ ಕೇಳುವವನಾದರೆ, ಆಗ ಆತನಿಗೆ ಈ ವಾರ್ತೆಯನ್ನು ಎಂತು ಪೇಳಲಿ? ಆ ಮಹಾ ರಾಜನು ತನ್ನ ಪ್ರೇಮಪುತ್ರಿಯಾದ ಸೀತಾದೇವಿಯಿಂದ ವಿಯೋಗವನ್ನೈದಿದ ನನ್ನಂ ಕಂಡು, ಆ ಪುತ್ರೀಸ್ನೇಹದಿಂದ ಸಂತಪಿಸುವವನಾಗಿ ಮಹಾ ಮೋಹವನ್ನೈದುವನು ॥೧೪॥ ಅಥವಾ ಸೀತಾದೇವಿಯಿಂದ ಹೀನನಾಗಿ ಭರತನಿಂದ ಪರಿಪಾಲಿಸಲ್ಪಡುತಲಿರುವ ಅಯೋಧ್ಯಾಪುರಪ್ರವೇಶಂ ಗೈಯ್ಯಲಾರೆನು, ಹಾಹಾ! ಸೀತಾದೇವಿಯಿಂದ ರಹಿತವಾದ ಸ್ವರ್ಗವೂ ಕೂಡಾ ನನಗೆ ಶೂನ್ಯವಾಗಿಯೇ, ತೋರುವದು, ಆದಕಾರಣ ನಾನೆಲ್ಲಿಗೂ ಬರುವದಿಲ್ಲ; ಆದುದರಿಂದ ನನ್ನನ್ನಿಲ್ಲಿಯೇ ಬಿಟ್ಟು ನೀನಯೋಧ್ಯಾಪುರಿಗೆ ಪೋಗುವವನಾಗು, ನಾನು ಸೀತೆಯನ್ನಗಲಿ ಜೀವಿಸಲಾರೆನು, ನೀನಯೋಧ್ಯಾಪುರಿಗೆಸಾರಿ

ಅನುಜ್ಞಾತೋಸಿರಾಮೇಣಪಾಲಯೇತಿವಸುಂಧರಾಂ ।೧೭॥ ಅಂಬಾಚಮಮಕೈಕೇಯೀಸುಮಿತ್ರಾಚತ್ವಯಾವಿಭೋ। ಕೌಸಲ್ಯಾಚಯಥಾನ್ಯಾಯಮಭಿವಾದ್ಯಮಮಾಜ್ಞಯಾ ।೧೮॥ ರಕ್ಷಣೀಯಾಪ್ರಯತ್ನೇನಭವತಾಸೋಕ್ತಕಾರಿಣಾ ।೧೯॥ ಸೀತಾಯಾಶ್ಚವಿನಾಶೋಯಂಮಮಚಾಮಿತ್ರಕರ್ಶನ। ವಿಸ್ತರೇಣಜನನ್ಯಾಮೇವಿನಿವೇದ್ಯಸ್ತ್ವಯಾಭವೇತ್ ।೨೦॥ ಇತಿವಿಲಪತಿರಾಘವೇಸುದೀನೇವನಮುಪಗಮ್ಯತಯಾವಿನಾಸುಕೇಶ್ಯಾ। ಭಯವಿಕಲಮುಖಸ್ತುಲಕ್ಷ್ಮಣೋಪಿವ್ಯಥಿತಮನಾಭೃಶಮಾತುರೋಬಭೂವ ।೨೧। —** ಇತಿಶ್ರೀಮದಾರಣ್ಯಕಾಂಡೇ_ದ್ವಿಷಷ್ಟಿತಮಸ್ಸರ್ಗಃ**—

ಸರಾಜಪುತ್ರಃಪ್ರಿಯಯಾವಿಹೀನಶ್ಶೋಕೇನಮೋಹೇನಚಪೀಡ್ಯಮಾನಃ ।ವಿಷಾದಯರ್ನ್ಭ್ರಾತರಮಾರ್ತರೂಪೋಭೂಯೋವಿಷಾದಂಪ್ರವಿವೇಶತೀವ್ರಂ ॥೧। ಸಲಕ್ಷ್ಮಣಂಶೋಕವಶಾಭಿಪನ್ನಂಶೋಕೇನಿಮಗ್ನೋವಿಪುಲೇತುರಾಮಃ । ಉವಾ

---

ಚೆಶೆಯಿಂದ, ಭರತಃ-ಭರತನು. ವಸುಂಧರಾಂ-ನೆಲವನ್ನು, ಪಾಲಯೇತಿ-ಸಂರಕ್ಷಿಸೆಂದು, ರಾಮೇಣ-ಶ್ರೀರಾಮನಿಂದ. ಅನುಜ್ಞಾತಃ-ಸಮ್ಮತಿಸಲ್ಪಟ್ಟವನು, ಅಸೀತಿ-ಆಗಿದ್ದೀ ಎಂದು, ಗಾಢಂ-ದೃಢವಾಗಿ, ಆಶ್ಲಿಷ್ಯ-ಅಪ್ಪಿಕೊಂಡು, ವಾಚ್ಯಃ-ಹೇಳತಕ್ಕವನು, ಹೇವಿಭೋ-ಎಲೈಸಮರ್ಥನೇ, ಮಮ-ನನಗೆ, ಅಂಬಾ-ತಾಯಿಯಾದ, ಕೈಕೇಯೀ-ಕೈಕೇಯೀದೇವಿಯು, ಸುಮಿತ್ರಾಚ-ಸುಮಿತ್ರಾದೇವಿಯು. ಕೌಸಲ್ಯಾಚ-ಕೌಸಲ್ಯಾದೇವಿಯು, ಮಮ-ನನ್ನ, ಆಜ್ಞಯಾ-ಆಜ್ಞೆಯಿಂದ, ಯಥಾನ್ಯಾಯಂ-ಯುಕ್ತಾನುಸಾರವಾಗಿ, ತ್ವಯಾ-ನಿನ್ನಿಂದ, ಅಭಿವಾದ್ಯ-ನಮಸ್ಕರಿಸತಕ್ಕವಳು, ( ಅಂದರೆ-ಈ ಮೂರುಮಂದಿ ತಾಯಿಗಳೂ ನನ್ನಾಜ್ಞೆಯಿಂದ ನಿನ್ನಿಂದ ನಮಸ್ಕರಿಸತಕ್ಕವರೆಂದು ತಾತ್ಪರ್ಯವು॥೧೮॥ ॥ ಉಕ್ತಕಾರಿಣಾ-ಹೇಳಿದಮಾತನ್ನು ನಡೆಸುತ್ತಿರುವ, ಭವತಾ-ನಿನ್ನಿಂದ, ಸಾ-ಆ ಕೌಸಲ್ಯಾದೇವಿಯು, ಪ್ರಯತ್ನೇನ-ಯತ್ನದಿಂದ, ರಕ್ಷಣೀಯಾ-ಸಂರಕ್ಷಣೆಮಾಡತಕ್ಕವಳು ॥೧೯॥ ಹೇಅಮಿತ್ರಕರ್ಶನ-ಎಲೈಶತ್ರುಸಂಹಾರಕನೇ, ಮಮ-ನನ್ನಸಂಬಂಧಿಯಾದ, ಸೀತಾಯಾಶ್ಚ-ಸೀತಾದೇವಿಯ, ಅಯಂವಿನಾಶಃ-ಈ ನಾಶವು, ಮೇ-ನನ್ನ, ಜನನ್ಯಾಃ-ತಾಯಿಯಾದ ಕೌಸಲ್ಯಾದೇವಿಗೆ, ವಿಸ್ತರೇಣ-ವಿಸ್ತಾರದಿಂದ, ತ್ವಯಾ-ನಿನ್ನಿಂದ, ವಿನಿವೇದ್ಯಃ-ತಿಳಿಸತಕ್ಕದ್ದು, ಭವೇತ್-ಆಗುವದು ॥೨೦॥ ಇತಿ-ಈಪರಿಯಾಗಿ, ದೀನೇ-ದೈನ್ಯವಾಗಿರುವ. ರಾಘವೇ-ಶ್ರೀರಾಮನು, ವನಂ-ಅರಣ್ಯವನ್ನುಕುರಿತು, ಉಪಗಮ್ಯ-ಹೊಂದು, ಸುಕೇಶ್ಯಾ-ಮಂಗಳಕರವಾದ ಕೂದಲುಗಳುಳ್ಳ, ತಯಾವಿನಾ-ಆ ಸೀತಾದೇವಿಯುಂ ವಿನಾಯಿಸಿ. ವಿಲಪತಿಸತಿ-ವಿಲಾಪವನ್ನು ಮಾಡುತ್ತಿರುವವನಾಗುತ್ತಿರಲೀಕಾಗಿ, ಭಯವಿಕಲಮುಖಃ-ಭಯದಿಂ ವಿವರ್ಣವಾದ ಮುಖವುಳ್ಳ, ಲಕ್ಷ್ಮಣೋಪಿ-ಲಕ್ಷ್ಮಣನೂ. ವ್ಯಥಿತಮನಾಃ-ವ್ಯಸನಗೊಂಡ ಮನಸ್ಸುಳ್ಳವನಾಗಿ, ಭೃಶಂ-ಬಹಳವಾಗಿ, ಆತುರಃ-ಆತುರತ್ತಿರುವನು, ಬಭೂವ-ಆದನು ॥೨೧॥ —*** ಇತಿಶ್ರೀಮದಾರಣ್ಯಕಾಂಡೇ-ದ್ವಿಷಷ್ಟಿತಮಸ್ಸರ್ಗಃ ***—

ರಾಜಪುತ್ರಃ-ದಶರಥರಾಯನ ಕುವರನಾದ, ಸಃ-ಆ ಶ್ರೀರಾಮನು, ಪ್ರಿಯಯಾ-ಸೀತಾದೇವಿಯಿಂದ. ವಿಹೀನಃ-ವಿರಹಿತನಾದಕಾರಣ, ಶೋಕೇನ-ವ್ಯಸನದಿಂದಲೂ, ಮೋಹೇನಚ-ಕಾಮವಿಕಾರದಿಂಪುಟ್ಟಿದ ಚಿತ್ತಪಾರವಶ್ಯದಿಂದಲೂ.ಪೀಡ್ಯಮಾನಃ-ಬಾಧಿಸಲ್ಪಟ್ಟವನಾಗಿ, ಆರ್ತರೂಪಃ-ದೀನವಾದಾಕಾರವುಳ್ಳವನಾಗಿ. ಭ್ರಾತರಂ-ತಮ್ಮನಾದ ಲಕ್ಷ್ಮಣನನ್ನು ವಿಷಾದಯರ್ನ್-ದುಃಖಿಸುವಂತೆ ಮಾಡುತ್ತಿರುವನಾಗಿ, ಭೂಯಃ-ಮತ್ತು, ತೀವ್ರಂ-ಹೆಚ್ಚಾದ. ವಿಷಾದಂ-ದುಃಖವನ್ನು, ಪ್ರವಿವೇಶ-ಹೊಂದಿದನು ॥೧॥ ॥ ವಿಪುಲೇ-ವಿಸ್ತಾರವಾದ, ಶೋಕೇ-ವ್ಯಸನದಲ್ಲಿ, ನಿಮಗ್ನಃ-ಮುಳುಗಿರುವ, ಸರಾಮಃ-ಆ ಶ್ರೀರಾಮನು, ಶೋಕವಶಾಭಿಪನ್ನಂ-ಶೋಕದಿಂದ ಪರಾಧೀನನಾದ, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಉಷ್ಣಂ-ಬಿಸಿಯಾಗಿ, ವಿನಿಶ್ವಸ್ಯ-ನಿಟ್ಟುಸುರಂಬಿಟ್ಟು,

---

ನನ್ನ ಮಾತಿನಿಂದ ಭರತನನ್ನು ಭೂಮಿಯಂ ಪರಿಪಾಲಿಸುತಿರೆಂದು ನುಡಿಯುವವನಾಗೆಂಬದಾಗಿ ನುಡಿದು ಆತನನ್ನಪ್ಪಿಕೊಂಡು ಮತ್ತೀರೀತಿಯಲಿ ಪೇಳುವವನಾಗು, ಯೇನಂದರೆ,—ಎಲೈ ಸಮರ್ಥನೇ! ನನ್ನಜನನಿಗಳಾದ ಕೈಕೇಯೀ ಸುಮಿತ್ರಾಕೌಸಲ್ಯಾ ಎಂಬ ಈಮೂರ್ವರನ್ನು ನನ್ನಾಜ್ಞೆಯಿಂದ ಯುಕ್ತಾನುಸಾರವಾಗಿ ನಮಸ್ಕರವಂ ಮಾಡುವವನಾಗು ।೧೮॥ ಎಲೈ ಶತ್ರುಸಂಹಾರಕನೇ! ನನ್ನಾಜ್ಞಾವಚನವನ್ನು ಉಲ್ಲಂಘನೆಯಂ ಗೈಯ್ಯದಿರುವ ನೀನು ಆ ಕೌಸಲ್ಯಾ ದೇವಿಯನ್ನು ಪ್ರಯತ್ನದಿಂದ ಸಂರಕ್ಷಿಸುತಿರುವದಲ್ಲದೆ ಈಸೀತಾದೇವಿಯವಿನಾಶವನ್ನು ಆಕೆಗೆ ವಿಸ್ತಾರದಿಂ ಪೇಳುವವನಾಗು, ಎಂಬದಾಗಿ ಶ್ರೀರಾಮನು ಸೀತಾದೇವಿಯನ್ನಗಲಿ ದೈನ್ಯವನ್ನೈದಿದವನಾಗಿ ವಿಲಾಪವಂ ಮಾಡುವವನಾಗಲೂ, ಭೀತಿಯಿಂದ ವಿಹ್ವಲವಾದ ಮುಖವುಳ್ಳ ಲಕ್ಷ್ಮಣನೂ ಸಹಾ ಮಹಾವ್ಯಸನವನ್ನೈದಿದವನಾಗಿಬಹುಆತುರನಾದನು ।೨೧। -*ಆರಣ್ಯಕಾಂಡದಲ್ಲಿನ೬೨ನೆಯಸರ್ಗಂಮುಗಿದುದು*-

ಅನಂತರದಲ್ಲಿ ಆ ದಶರಥರಾಜನಂದನನಾದ ಶ್ರೀರಾಮನು ತನ್ನ ಪ್ರಾಣಕಾಂತೆಯಾದ ಸೀತಾದೇವಿಯಿಂದ ರಹಿತನಾದಕಾರಣ, ಮಹಾ ಮೋಹವನ್ನೈದಿದವನಾಗಿ ತಮ್ಮನಾದ ಲಕ್ಷ್ಮಣನನ್ನು ದುಃಖವನ್ನೈದಿಸುತ್ತಾ ಮತ್ತೂ ಅತಿಶಯವಾದ ವಿಷಾದವನ್ನೈದಿದನು ।೧। ಇದಲ್ಲದೆ ಆ ಶ್ರೀರಾಮನ ಶೋಕಕ್ಕೆ ಆಧೀನನಾಗಿರುವ ಲಕ್ಷ್ಮಣನಂ ಕುರಿತು, ನಿಟ್ಟುಸುರುಗಳಂ ಬಿಟ್ಟು ಆತನಂ ದುಃಖಿತನಾಗಿ ಮಾಡುತ್ತಾ ನುಡಿವನದೆಂತೆನೆ,—ಎಲೈ ದೊಡಹುಟ್ಟಿದವನೇ! ನನ್ನಂಥಾ ಪಾಪಕಾರಿಯು ಈ ಧರಾತಲದಲ್ಲಿ ಯಾರೂಇಲ್ಲ, ದೊಂದು ವ್ಯಸನವು ತೀರಲೂ

ಚವಾಕ್ಯಂವ್ಯಸನಾನುರೂಪಮುಷ್ಣಂವಿನಿಶ್ವಸ್ಯರುದನ್ಸಶೋಕಂ ॥೧॥ ನಮದ್ವಿಧೋದುಷ್ಕೃತಕರ್ಮಕಾರೀ
ಮನ್ಯೇದ್ವಿತೀಯೋಸ್ತಿವಸುಂಧರಾಯಾಂ । ಶೋಕೇನಶೋಕೋಹಿಪರಂಪರಾಯಾಮಾಮೇತಿಭಿಂದನ್ಹೃದಯಂಮನಶ್ಚ ॥೩॥
ಪೂರ್ವಂಮಯಾನೂನಮಭೀಪ್ಸಿತಾನಿಪಾಪಾನಿಕರ್ಮಾಣ್ಯಸಕೃತ್ಕೃತಾನಿ । ತತ್ರಾಯಮದ್ಯಾಪತಿತೋವಿಪಾಕೋ
ದುಃಖೇನದುಃಖಂಯದಹಂವಿಶಾಮಿ ॥೪॥ ರಾಜ್ಯಪ್ರಣಾಶಸ್ಸ್ವಜನೈರ್ವಿಯೋಗಃಪಿತುರ್ವಿನಾಶೋಜನನೀವಿಯೋಗಃ ।
ಸರ್ವಾಣಿಮೇಲಕ್ಷ್ಮಣಶೋಕವೇಗಮಾಪೂರಯಂತಿಪ್ರವಿಚಿಂತಿತಾನಿ ॥೫॥ ಸರ್ವಂತುದುಃಖಂಮಮಲಕ್ಷ್ಮಣೇದಂಶಾಂತಂ
ಶರೀರೇವನಮೇತ್ಯಶೂನ್ಯಂ । ಸೀತಾವಿಯೋಗಾತ್ಪುನರಪ್ಯುದೀರ್ಣಂಕಾಷ್ಠೈರಿವಾಗ್ನಿಸ್ಸಹಸಾಪ್ರದೀಪ್ತಃ ॥೬॥ ಸಾ
ನೂನಮಾರ್ಯಾಮಮರಾಕ್ಷಸೇನಬಲಾದ್ಧೃತಾಖಂಸಮುಪೇತ್ಯಭೀರುಃ । ಅಪಸ್ವರಂಸಸ್ವರವಿಪ್ರಲಾಪಾಭಯೇನವಿಕ್ರಂ
ದಿತವತ್ಯಭೀಕ್ಷ್ಣಂ ॥೭॥ ತೌಲೋಹಿತಸ್ಯಪ್ರಿಯದರ್ಶನಸ್ಯಸದೋಚಿತಾವುತ್ತಮಚಂದನಸ್ಯ । ವೃತ್ತೌಸ್ತನೌಶೋ

---

ಸಶೋಕಂ-ದುಃಖದಿಂದೊಡಗೂಡಿದವನಂತೆ, ರುದನ್-ರೋದನಮಾಡುತ್ತಿರುವವನಾಗಿ, ವ್ಯಸನಾನುರೂಪಂ-ದುಃಖಕ್ಕೆ ಅನುಗುಣವಾದ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧॥ ಮದ್ವಿಧಃ-ನನ್ನಂಥಾ, ದುಷ್ಕೃತಕರ್ಮಕಾರೀ-ಪಾಪಕರ್ಮವಂ ಮಾಡಿದವನು, ದ್ವಿತೀಯಃ-ಎರಡನೇಯವನು, ವಸುಂಧರಾಯಾಂ-ನೆಲದಲ್ಲಿ, ನಾಸ್ತಿ-ಯಿಲ್ಲ, ಶೋಕೇನ-ವ್ಯಸನದಿಂದ, ಶೋಕಃ-ಶೋಕವು, ಪರಂಪರಾಯಾಃ-ಪರಂಪರಾರೂಪದಿಂದ, ಹೃದಯಂ-ಯೆದೆಯನ್ನು, ಮನಶ್ಚ-ಮನವನ್ನು, ಭಿಂದನ್-ಭೇದಿಸುತ್ತಿರುವದಾಗಿ, ಮಾಂ-ನನ್ನನ್ನು, ಏತಿಹಿ-ಹೊಂದುತ್ತದಷ್ಟೆ ॥೩॥ ಪೂರ್ವಂ-ಪೂರ್ವಜನ್ಮದಲ್ಲಿ ಮಯಾ-ನನ್ನಿಂದ, ಅಭೀಪ್ಸಿತಾನಿ-ಪ್ರಾರ್ಥಿಸಲ್ಪಟ್ಟ, ಪಾಪಾನಿ-ಪಾಪಜನಕವಾದ, ಕರ್ಮಾಣಿ-ಕರ್ಮಗಳು, ಅಸಕೃತ್-ಬಾರಿಬಾರಿಗೂ ಕೃತಾನಿ-ಮಾಡಲ್ಪಟ್ಟವೆ, ತತ್ರ-ಆ ಕರ್ಮಗಳಲ್ಲಿ, ಅದ್ಯ-ಈಗ, ಅಯಂವಿಪಾಕಃ-ಈ ಪರಿಪಾಕವು, ಅದ್ಯ-ಈಗ. ಆಪತಿತಃ-ಪ್ರಾಪ್ತವಾಯಿತು, ಯತ್-ಯಾವಕಾರಣದಿಂದ, ಅಹಂ-ನಾನು, ದುಃಖಂ-ದುಃಖವನ್ನು, ವಿಶಾಮಿ-ಹೊಂದುತ್ತೇನೆಯೋ ॥೪॥ ರಾಜ್ಯಪ್ರಣಾಶಃ-ರಾಜ್ಯದ ತ್ಯಾಗವೂ, ಸ್ವಜನೈಃ-ತನ್ನಜನರೊಡನೆ. ವಿಯೋಗಃ-ಸಂಬಂಧತಪ್ಪೋಣವು, ಪಿತುಃ-ತಂದೆಯ, ವಿನಾಶಃ-ಮರಣವು, ಜನನೀ-ತಾಯಿಯ, ವಿಯೋಗಃ-ವಿಯೋಗವು, ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಮೇ-ನನಗೆ, ಸರ್ವಾಣಿ-ಸಮಸ್ತವಾದ ದುಃಖಗಳು, ಪ್ರವಿಚಿಂತಿತಾನಿ-ಮರಿಸಲ್ಪಟ್ಟವುಗಳಾಗಿ, ಶೋಕವೇಗಂ-ಶೋಕವೆಂಬ ರಾಶಿಯನ್ನು, ಆಪೂರಯಂತಿ-ತುಂಬಿದವನನ್ನಾಗಿ ಮಾಡಿಸುತ್ತದೆ ॥೫॥ ಹೇಲಕ್ಷ್ಮಣ-ಎಲೈಲಕ್ಷ್ಮಣನೇ. ಇದಂಸರ್ವಂದುಃಖಂ-ಈ ಸಮಸ್ತವಾದ ದುಃಖವು, ಶೂನ್ಯಂ-ಜನವರ್ಜಿತವಾದ, ವನಂ-ಅರಣ್ಯವನ್ನು, ಏತ್ಯ-ಹೊಂದಿ, ಸ್ಥಿತಸ್ಯ-ಇರುತ್ತಿರುವ. ಮಮ-ನನ್ನ. ಶರೀರೇ-ದೇಹದಲ್ಲಿ, ಶಾಂತಂ-ಔತುಕೊಂಡಿತ್ತು, (ಅಂದರೆ, ವಿಸ್ಮೃತವಾಗಿತ್ತು) ಸೀತಾವಿಯೋಗಾತ್-ಸೀತಾದೇವಿಯ ವಿರಹದದೆಶೆಯಿಂದ. ಕಾಷ್ಠೈಃ-ಕಟ್ಟಿಗೆಗಳಿಂದ, ಸಹಸಾ-ಜಾಗ್ರತೆಯಾಗಿ, ಪ್ರದೀಪ್ತಃ-ಉರಿಯುತ್ತಿರುವ, ಅಗ್ನಿರಿವ-ಅಗ್ನಿಯಂತೆ, ಇದಂ-ಈ ದುಃಖಸಮುದಾಯವು, ಪುನರಪಿ-ಮತ್ತೂ, ಉದೀರ್ಣಂ-ಅಭಿವ್ಯಕ್ತವಾಯಿತು ॥೬॥ ಭೀರುಃ-ಭಯಶೀಲಳಾದ, ಮಮ-ನನ್ನಸಂಬಂಧಿಯಾದ, ಆರ್ಯಾ-ಪೂಜ್ಯಳಾದ, ಸಾ-ಆ ಸೀತಾದೇವಿಯು. ರಾಕ್ಷಸೇನ-ರಕ್ಕಸನಿಂದ, ಬಲಾತ್-ದೇಹಶ್ರಾಣೆಯದೆಶೆಯಿಂದ. ಹೃತಾ-ಅಪಹರಿಸಲ್ಪಟ್ಟವಳಾಗಿ, ಖಂ-ಅಂತರಿಕ್ಷವನ್ನು. ಸಮುಪೇತ್ಯ-ಹೊಂದಿ, ಸಸ್ವರವಿಪ್ರಲಾಪ-ಸ್ವರದಿಂ ಕೂಡಿದ ಅಳುವಿಕೆಯುಳ್ಳವಳಾಗಿ, ಭಯೇನ-ಭಯದಿಂದ, ಅಭೀಕ್ಷ್ಣಂ-ಬಹಳವಾಗಿ, ಅಪಸ್ವರಂ-ವಿಸ್ವರವಾಗಿ, ವಿಕ್ರಂದಿತವತಿ-ದೀನಧ್ವನಿಯಾಗಿ ಅಳುತ್ತಿರ್ದಳು ॥೭॥ ಪ್ರಿಯದರ್ಶನಸ್ಯ-ಇಷ್ಟವಾದ ನೋಟವುಳ್ಳ, ಲೋಹಿತಸ್ಯ-ಸ್ವಲ್ಪಕೆಂಪಾಗಿರುವ, ಉತ್ತಮಚಂದನಸ್ಯ-ಉತ್ಕೃಷ್ಟವಾದ ಚಂದನ ಗಂಧಕ್ಕೊ, ಸದಾ-ಸರ್ವಕಾಲದಲ್ಲಿಯೂ, ಉಚಿತೌ-ಯೋಗ್ಯಗಳಾದ. ವೃತ್ತೌ-ಗುಂಡಾಗಿರುವ. ಮಮ-ನನ್ನ, ಪ್ರಿಯಾಯಾಃ-ಹೆಂಡತಿಯ, ತೌಸ್ತನೌ-ಆಸ್ತನಗಳು, ಶೋಣಿತಪಂಕದಿಗ್ಧೌ-ರಕುತವೆಂಬ ಕೆಸರಿನಿಂದ ಲೇಪನಮಾಡಲ್ಪಟ್ಟವುಗಳಾಗಿ, ನಾಭಿಭಾತಃ-ಪ್ರಕಾಶಿಸಲಾರವು, ನೂನಂ-ನಿಶ್ಚಯವು, (ನಾಭಿಪಾ

---

ಮತ್ತೊಂದು ವ್ಯಸನವು ಅದರಸಂಗಡಲೇ ಬರುತಲಿಧೆ, ಈ ಶೋಕಪರಂಪರೆಯು ಎನ್ನ ಮನವಂ ಭೇದಿಸುತ್ತಾ ನನಗೆ ಪ್ರಾಪ್ತವಾಗುತಿಧೆ, ನಾನು ಪೂರ್ವಜನ್ಮದಲ್ಲಿ ಬಾರಿಬಾರಿಗೂ ಪಾಪಕೃತ್ಯಗಳಂ ಮಾಡಿರಬಹುದು, ಅದಕ್ಕೆ ಈಗ ಪರಿಪಾಕವು ಪ್ರಾಪ್ತವಾಯಿತು, ಅದೇನಂದರೆ,—ಕೇಳುವವನಾಗು, ಹಾಹಾ! ರಾಜ್ಯನಾಶವೂ ಸ್ವಕೀಯರಲ್ಲಿ ವಿರೋಧವೂ, ಜನಕನಾದ ದಶರಥಮಹಾರಾಯನ ಮೃತಿಯೂ, ಜನನಿಯ ವಿಯೋಗವೂ ಈ ಸಮಸ್ತವಾದ ದುಃಖಗಳು ಮರಯಲ್ಪಟ್ಟವುಗಳಾಗಿ, ನನ್ನನ್ನು ಶೋಕಸಮುದ್ರದಲ್ಲಿ ಮುಳುಗಿಸುವಂತಿವೆ, ಆದರೂ ಈ ದುಃಖಂಗಳು ನಿಜನವಾಗಿರುವ ಈ ಅರಣ್ಯದಲ್ಲಿ ಎನ್ನ ಶರೀರದಲ್ಲಿ ಔತುಕೊಂಡಿತು;(ಅಂದರೆ ವಿಸ್ಮೃತವಾಗಿತ್ತು) ಈಗ ಸೀತಾದೇವಿಯ ವಿಯೋಗದಿಂದ, ಕಾಷ್ಠಂಗಳಿಂದ ಅಗ್ನಿಯು ಪ್ರಜ್ವಲಿಸುವಂತೆ ಅಭಿವ್ಯಕ್ತವಾಯಿತು ॥೬॥ ಭಯಶೀಲಳಾದ ಮಹಾ ಪೂಜ್ಯಳಾದ ಆ ಸೀತಾದೇವಿಯು, ರಕ್ಕಸನಿಂದ ಅಪಹರಿಸಲ್ಪಟ್ಟವಳಾಗಿ ಗಗನವನ್ನೈದಿ ಮಹಾ ಭೀತಿಯಿಂದ ವಿಸ್ವರವಾಗಿ ಕೂಗುತ್ತಾ ಅಳುತ್ತಿದ್ದಳೋ ಯೇನೋ ॥೭॥ ಸದಾಕಾಲದಲ್ಲಿಯೂ ಸರ್ವೋತ್ತಮವಾದ ಚಂದಣ ಗಂಧದ ಲೇಪನಕ್ಕೆ ಯೋಗ್ಯವಾದ ಗುಂಡಾಗಿರುವ ಆಕೆಯ ಪಯೋಧರಂಗಳು ಶೋಣಿತ

ಣಿತಪಂಕದಿಗ್ಧಂ ನೂನಂಪ್ರಿಯಾಯಾಮಮನಾಭಿಭಾತಿ ॥೮॥ ತಚ್ಛ್ಲಕ್ಷ್ಣಸುವ್ಯಕ್ತಮೃದುಪ್ರಲಾಪಂತಸ್ಯಾಮುಖಂಕುಂಚಿತಕೇಶಭಾರಂ । ರಕ್ಷೋವಶಂನೂನಮುಪಾಗತಾಯಾನಭ್ರಾಜತೇರಾಹುಮುಖೇಯಥೇಂದುಃ ।೯। ತಾಂಹಾರಪಾಶಸ್ಯಸದೋಚಿತಾಯಾಗ್ರೀವಾಂಪ್ರಿಯಾಯಾಮಮಸುವ್ರತಾಯಾಃ । ರಕ್ಷಾಂಸಿನೂನಂಪರಿಪೀತವಂತಿವಿಭಿದ್ಯಶೂನ್ಯೈರುಧಿರಾಶನಾನಿ ।೧೦। ಮಯಾವಿಹೀನಾವಿಜನೇವನೇಯಾರಕ್ಷೋಭಿರಾಹೃತ್ಯವಿಕೃಷ್ಯಮಾಣಾ । ನೂನಂವಿನಾದಂಕುರರೀವದೀನಾಸಾಮುಕ್ತವತ್ಯಾಯತಕಾಂತನೇತ್ರಾ ।೧೧। ಅಸ್ಮಿನ್ಮಯಾಸಾರ್ಧಮುದಾರಶೀಲಾಶಿಲಾತಲೇಪೂರ್ವ

ಇತಿಪಾತೆ-ಮಮ-ನನಿಗೆ, ಅಭಿಪಾತಃ-ನಾಶವು, ನ-ಇಲ್ಲಾ, ನೂನಂ-ನಿಶ್ಚಯವು ) ॥೮॥ ಶ್ಲಕ್ಷ್ಣಸುವ್ಯಕ್ತಮೃದುಪ್ರಲಾಪಂ-ಶ್ಲಕ್ಷ್ಣ-ಮಧುರವಾದ. ಸುವ್ಯಕ್ತ-ಅರ್ಥಾಭಿವ್ಯಂಜಕವಾದ, ಮೃದು-ಕಠಿನವಾಗಿರುವ. ಪ್ರಲಾಪಂ-ಮಾತುಗಳುಳ್ಳ, ಕುಂಚಿತಕೇಶಭಾರಂ-ಉಂಗುರುಂಗುರವಾಗಿರುವ ಕೂದಲುಗಳ ಸಮುದಾಯವುಳ್ಳ, ತಸ್ಯಾಃ-ಆ ಸೀತಾದೇವಿಯ. ತನ್ಮುಖಂ-ಆ ಮುಖವು ರಕ್ಷೋವಶಂ-ರಾಕ್ಷಸನ ಸ್ವಾಧೀನತೆಯನ್ನು. ಉಪಾಗತಾಯಾಃ-ಹೊಂದಿರುವ ಸೀತಾದೇವಿಯ ಸಂಬಂಧವಾದ್ದಾಗಿ ರಾಹುಮುಖೇ-ರಾಹುಗ್ರಹದ ಬಾಯಿಯಲ್ಲಿ, ಇಂದುರ್ಯಥಾ-ಚಂದಿರನಂತೆ. ಅದ್ಯ-ಈಗ. ನಭ್ರಾಜತೇ-ಪ್ರಕಾಶಿಸಲಾರದು, ನೂನಂ-ನಿಶ್ಚಯವು ॥ ... ... ... ... ... ... ... ... ... ॥೯॥ ಯಾ-ಯಾವ ಕಂಠವು, ಹಾರಪಾಶಸ್ಯ-ಕಂಠೀಸರಕ್ಕೆ, ಸದಾ-ನಿರಂತರವೂ, ಉಚಿತಾ-ಯೋಗ್ಯವೋ, ಮಮ-ನನಗೆ, ಪ್ರಿಯಾಯಾಃ-ಹೆಂಡತಿಯಾದ. ಸುವ್ರತಾಯಾಃ-ಪತಿವ್ರತೆಯಾದ ಸೀತಾದೇವಿಯ, ತಾಂಗ್ರೀವಾಂ-ಆ ಕಂಠವನ್ನು. ರುಧಿರಾಶನಾನಿ-ರಕ್ತವೇ ಅಶನವಾಗುಳ್ಳ. ರಕ್ಷಾಂಸಿ-ರಕ್ಕಸರು. ಶೂನ್ಯೇ-ನಿರ್ಜನಪ್ರದೇಶದಲ್ಲಿ, ವಿಭಿದ್ಯ-ಕೊಯ್ದು, ಪರಿಪೀತವಂತಿ-ಪಾನಮಾಡುತ್ತಾರೆ. ನೂನಂ-ನಿಶ್ಚಯವು ॥೧೦॥ ಆಯತಕಾಂತನೇತ್ರಾ-ವಿಸ್ತಾರವಾಗಿಯೂ ಮನೋಹರವಾಗಿಯೂ ಇರುವ ನೇತ್ರಗಳುಳ್ಳ, ಯಾ-ಯಾವ ಸೀತಾದೇವಿಯು, ವಿಜನೇ-ಜನರಹಿತವಾದ. ವನೇ-ಅರಣ್ಯದಲ್ಲಿ, ಮಯಾ-ನನ್ನಿಂದ, ವಿಹೀನಾ-ವರ್ಜಿತಳಾಗಿ, ರಕ್ಷೋಭಿಃ-ರಾಕ್ಷಸರಿಂದ, ಆಹೃತ್ಯ-ಹಿಡಿದುಕೊಂಡು. ವಿಕೃಷ್ಯಮಾಣಾ-ಸೆಳೆಯಲ್ಪಟ್ಟಳೋ, ಸಾ-ಅಂಥಾ ಸೀತಾದೇವಿಯು, ಕುರರೀವ-ಕುರರೀಎಂಬ ಪಕ್ಷಿವಿಶೇಷದಂತೆ, ದೀನಾ-ಪರಿತಪ್ತಳಾಗಿ, ವಿನಾದಂ-ಧ್ವನಿಯನ್ನು, ಮುಕ್ತವತೀ-ಬಿಡುತ್ತಿದ್ದಳು, ನೂನಂ-ನಿಶ್ಚಯವು ॥೧೧॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಅಸ್ಮಿನ್-ಈ ಪ್ರದೇಶದಲ್ಲಿ, ಉದಾರಶೀಲಾ-ಗಂಭೀರವಾದ ಸ್ವಭಾವವುಳ್ಳ, ಕಾಂತಸ್ಮಿತಾ-ಮನೋಹರವಾದ ಮುಗುಳ್ನಗೆಯುಳ್ಳ, ಸೀತಾ-ಸೀತಾದೇವಿಯು, ಪೂರ್ವಂ-ಪೂರ್ವದಲ್ಲಿ. ಮಯಾಸಾರ್ಧಂ-ನನ್ನೊಡಗೂಡ, ಶಿಲಾತಲೇ-ಕಲ್ಲಿನ ಪ್ರದೇಶದಲ್ಲಿ, ಉಪೋಪವಿಷ್ಟಾ-ಕುಳಿತುಕೊಂಡಿರುವವಳಾಗಿ, ಜಾತಹಾಸಾ-ಹುಟ್ಟಿದ ಮಂದಸ್ಮಿತವುಳ್ಳವಳಾಗಿ, ತ್ವಾಂ-ನಿನ್ನನ್ನು ಕುರಿತು, ಬಹುವಾಕ್ಯಜಾತಂ-ಅನೇಕವಾತುಗಳ ಸಮುದಾಯವನ್ನು, ಅಹ-ಹೇಳಿದಳು, (ವಿಶೇಷಾರ್ಥವೇನೆಂದರೆ-ಅಸ್ಮಿನ್-ಈ ಶೂನ್ಯಪ್ರದೇಶದಲ್ಲಿ, ಮಯಾ-ಪ್ರಿಯಕಲಹದಲ್ಲಿ ಪಂಡಿತನಾನಿಯಾದ ನಾನು ಏನು ಮಾಡುವಳೋ ಎಂದು ನೋಡುತ್ತಿರುವ ನನ್ನೊಡಗೂಡ, ಉದಾರಶೀಲಾ-ಮಾತುಗಳಲ್ಲಿ ಕೇವಲ ನಿಪುಣಳಾದ. ಪೂರ್ವಂ-ದಶರಥರಾಯ ಕೌಸಲ್ಯಾದೇವಿ ಇವರಸನ್ನಿಧಾನದಲ್ಲಿರುವ ಕಾಲದಲ್ಲಿ ಸಂಕೋಚದಿಂ ವಿಹರಿಸುತ್ತಿರುವವಳಾಗಿ ಈಗ ಏಕಾಂತಸ್ಥಳವಾದ್ದರಿಂದ ಸರಸ ಭೋಗಗಳಲ್ಲಿ ಸರ್ವಸ್ವದಾನವನ್ನು ಮಾಡುತ್ತಿರುವವಳಾಗಿ, ಶಿಲಾತಲೇ-ಪಾಷಾಣಪ್ರದೇಶದಲ್ಲಿ ಹತ್ತಿ ಕೂತುಕೊಂಡಳು, ಪೂರ್ವಂ-ಗೋದಾವರೀ ತೀರದಲ್ಲಿ ಜಲಕ್ರೀಡೆಗಳಾಡುತ್ತಿರಲಾಗಿ ವಿಹಾರಮಾಡಿ ಬಳಲಿದ ಶ್ರೀರಾಮನು ಪ್ರದೇಶಾಂತರದಲ್ಲಿ ಹತ್ತುವದಕ್ಕೆ ಅಸಾಧ್ಯವಾದ ಪ್ರದೇಶದಲ್ಲಿ ಯೇರುವದಕ್ಕಾಗಿ ಬಂದಾನೊಂದು ಪಾಷಾಣದ ಮಾರ್ಗದಿಂ ಹೊರಟುಬರುವದಕ್ಕೆ. ಮುಖವನ್ನು ನೋಡಿದನು ಅಪ್ರೇಕ್ಷಣಾತಿಶಯವನ್ನು ಕಂಡು ಮೊದಲೇ ತಾನು ಯೇರಿ ಶಿಲಾತಲದಮ್ಯಾಲೆ ಕೂತುಕೊಂಡಳು ಯಾವಯಾವ ಮೂಲೆಯನ್ನು ಹಿಡಿದುಕೊಂಡು ಯೇರುವದಕ್ಕೆ ಇಚ್ಛಿಸುತ್ತಾನೆಯೋ ಅಂಥಾ ಮೂಲೆಗಳನ್ನು ಹಿಡಿದುಕೊಂಡು ಮುಖದಲ್ಲಿ ಉದಕವನ್ನು ಸೇಚನಮಾಡಿಸುತ್ತಾ ನಿಂತಳು ಆಮ್ಯಾಲೆ ಇದು ನೋಡಿ, ಕಾಂತಸ್ಮಿತಾ-ಸಹಜಮಧುರವಾದ ಮಂದಸ್ಮಿತವುಳ್ಳವಳಾದರೂ ಸಶಬ್ದವಾಗಿ, ಜಾತಹಾಸಾ-ಹುಟ್ಟಿದ ನಗೆಯುಳ್ಳವಳಾಗಿ, ಅಂದರೆ-ನಾನು ಜಯಿಸಿದೆನು ನೀನು ಪರಾಜಿತನಾದೆ ಎಂದು ನಗುವಳಾಗಿ, ತ್ವಾಂ-ನಿನ್ನನ್ನು ಕುರಿತು, ಅಂದರೆ-ಶ್ರೀರಾಮನಿಗೆ ಯಾವಯಾವ ಸ್ಥಳದಲ್ಲಿಯೂ ಪರಾಜಯವಿಲ್ಲ ನಾವು ಬಹಳ ಸಮರ್ಥರು ಎಂ

ವೆಂಬ ಕೆಸರಿನಿಂದ ಲೇಪನಂ ಗೈಯ್ಯಲ್ಪಟ್ಟವುಗಳಾಗಿ ನಿಶ್ಚಯವಾಗಿ ಪ್ರಕಾಶಿಸುವದಿಲ್ಲ; ಇದಲ್ಲದೆ ಆ ದೇವಿಯ ಸಂಬಂಧವಾದಮತ್ತೂಮೃದುವಾಗಿ ಮಾತುಗಳಂ ನುಡಿಯುವಮುಖವು ರಕ್ಕಸರ ಕೈಯಿಗೆ ಶಿಲುಕಿ, ರಾಹು ಮುಖಗತನಾದ ಚಂದಿರನಂದದಿ ಬೆಳಗುವದಿಲ್ಲ ।೯। ಮತ್ತೂ ಯಾವ ಕಂಠವು ಕಂಠೀಸರಗಳಿಗೆ ಅರ್ಹವಾದದ್ದೋ, ಅಂಥಾ ಆ ದೇವಿಯ ಕಂಠವನ್ನು ಮಾಂಸಾಹಾರಿಗಳಾದ ರಾಕ್ಷಸರು ವಿಜನವಾದ ಅರಣ್ಯದಲ್ಲಿ ಛೇದಿಸಿ ಸತ್ಯವಾಗಿ ರಕುತಪಾನಂ ಗೈದರು ।೧೦। ಇದಲ್ಲದೆ ವಿಸ್ತಾರವಾಗಿಯೂ ಮನೋಹರವಾಗಿಯೂ ಇರುವ ನೇತ್ರಂಗಳುಳ್ಳಯಾವ ಜನಕರಾಜಪುತ್ರಿಯು ಜನವಿಲ್ಲದ ಅರಣ್ಯದಲ್ಲಿ ನನ್ನಿಂದ ಹೀನಳಾಗಿ ರಾಕ್ಷಸರಿಂದ ಹಿಡಿಯಲ್ಪಟ್ಟು ಸೆಳೆಯಲ್ಪಟ್ಟಳೋ, ಆ ದೇವಿಯು ಕುರರಿಯೆಂಬ ಪಕ್ಷಿವಿಶೇಷದಂತೆ ಖಂಡಿತವಾಗಿ ದೀನಧ್ವನಿಯಂ ಮಾಡಿದಳು ।೧೧। ಎಲೋ ಎಲೋ, ತಮ್ಮ ಲಕ್ಷ್ಮಣನೇ! ಗಂಭೀರವಾದ ಸ್ವಭಾವವುಳ್ಳ ಮತ್ತೂ ಮನೋಹರವಾದ ಮಂದಹಾಸವುಳ್ಳ ಆ ದೇವಿಯು ಪೂರ್ವದೊಳು ಈ ಪ್ರದೇಶದಲ್ಲಿ ನನ್ನೊಡನೆ ಕಲ್ಲಿನಮೇಲೆ ಕುಳಿತುಕೊಂಡು ನಸುನಗುತ್ತಾ ನಿ

ಮುಪ್ರೊಪವಿಷ್ಟಾ । ಕ್ರಾಂತಸ್ಮಿತಾಲಕ್ಷ್ಮಣಜಾತಹಾಸಾತ್ವಾಮಾಹಸೀತಾಬಹುವಾಕ್ಯಜಾತಂ ।೧೨॥ ಗೋದಾವರೀಯಂಸರಿತಾಂವರಿಷ್ಠಾಪ್ರಿಯಾಪ್ರಿಯಾಯಾಮಮನಿತ್ಯಕಾಲಂ । ಅಪ್ಯತ್ರಗಚ್ಛೇದಿತಿಚಿಂತಯಾಮಿನೈಕಾಕಿನೀಯಾತಿಹಿಸಾಕದಾಚಿತ್ ।೧೩। ಪದ್ಮಾನನಾಪದ್ಮವಿಶಾಲನೇತ್ರಾಪದ್ಮಾನಿವಾನೇತುಮಭಿಪ್ರಯಾತಾ ॥ ತದಪ್ಯಯುಕ್ತಂನಹಿಸಾಕದಾಚಿನ್ಮಯಾವಿನಾಗಚ್ಛತಿಪಂಕಜಾನಿ ।೧೪॥ ಕಾಮಂತ್ವಿದಂಪುಷ್ಪಿತವೃಕ್ಷಷಂಡಂನಾನಾವಿಧೈಃಪಕ್ಷಿಗಣೈರುಪೇತಂ । ವನಂಪ್ರಯಾತಾನುತದಪ್ಯಯುಕ್ತಮೇಕಾಕಿನೀಸಾತಿಬಿಭೇತಿಭೀರುಃ ॥೧೫॥ ಆದಿತ್ಯಭೋಲೋಕಕೃತಾಕೃತಜ್ಞಲೋಕಸ್ಯಸತ್ಯಾನೃತಕರ್ಮಸಾಕ್ಷಿನ್ । ಮಮಪ್ರಿಯಾಸಾಕ್ವಗತಾಹೃತಾವಾಶಂಸಸ್ವಮೇಶೋಕವಶಸ್ಯನಿತ್ಯಂ । ೧೬॥ ಲೋಕೇಷುಸರ್ವೇಷುಚನಾಸ್ತಿಕಿಂಚಿದ್ಯತ್ತೇನನಿತ್ಯಂವಿದಿತಂಭವೇತ್ತತ್ । ಶಂಸಸ್ವವಾಯೋಕುಲಶಾಲಿನೀಂತಾಂ

---

ಖವಾಗಿ ಬಹುಬಗೆಯಾಗಿ ಪ್ರಶಂಸೆಯಂ ಮಾಡುತ್ತಿರುವ ಲಕ್ಷ್ಮಣನಂಕುರಿತು, ಬಹುವಾಕ್ಯಜಾತಂ-ಬಹಳವಾದ ಮಾತುಗಳು ಪೇಳಿದಳು ಈಗ ನಿಮ್ಮಣ್ಣನು ಜಲಕ್ರೀಡಾವಿಷಯದಲ್ಲಿಯೂ ಕಲ್ಲಿನಮ್ಯಾಲೆ ಹತ್ತುವ ವಿಷಯದಲ್ಲಿಯೂ ನನ್ನಿಂದ ಪರಾಜಿತನಾದನು ನೀನುಮಾತ್ರ ನಿಮ್ಮ ಅಣ್ಣನು ಎಂದಿಗೂ ಪರಾಜಿತನಾಗುವದಿಲ್ಲವೆಂದು ಪೇಳುತಿ ಎಂದು ಅಪಹಾಸ್ಯ ಮಾಡಿದವಳಾಗಿ ನೀವುಗಳು ಸಂಕಲ್ಪಿತವಾದ ಸಕಲ ಕಾರ್ಯಗಳನ್ನು ನೆರವೇರಿಸುವರು ಬಹುಪರಾಕ್ರಮಶಾಲಿಗಳು ಉತ್ತಮಪುರುಷರು ನಾವು ಅಬಲಾಜನರು ನೀವು ಬ್ಯಾಟೆಗಾದರೂ ಶತೃಹತ್ಯಕ್ಕಾದರೂ ಹೋಗುವರು ನಾವುಗಳು ಮನೆಯಿಂದ ಹೊರಕ್ಕೆ ಬರುವರೇ ಅಲ್ಲ ನಿಮ್ಮಿಬ್ಬರ ಸಂಕಲ್ಪವು ಸಫಲವಾಗಿ ಮಾಡಿಕೊಂಬುವದಕ್ಕೆ ಸಾಧ್ಯವು ನಿಮ್ಮನ್ನೂ ಈಗ ಜಯಿಸಿದೆನಷ್ಟೆ ಇಂಥಾ ಬಗೆಯಾದ ಮಾತುಗಳ ತಂಡವನ್ನು ಪೇಳಿದಳು) ॥೧೨॥ ಇಯಂಗೋದಾವರೀ-ಈ ಗೋದಾವರಿಯು. ಸರಿತಾಂ-ಹೊಳೆಗಳೊಳಗೆ, ವರಿಷ್ಠಾ-ಬಹಳ ಉತ್ಕೃಷ್ಟವಾದ್ದು, ನಿತ್ಯಕಾಲಂ-ಸರ್ವಕಾಲದಲ್ಲಿಯೂ, ಮಮ-ನನಗೆ, ಪ್ರಿಯಾಯಾಃ-ಹೆಂಡತೀಗೆ, ಪ್ರಿಯಾ-ಇಷ್ಟಳು, ಅತ್ರ-ಈ ನದಿಯಲ್ಲಿ, ಗಚ್ಛೇದಿತ್ಯಪಿ-ಹೋಗಿಧಾಳೆಯೋ ಏನೋ, ಇತಿ-ಇಂತೆಂದು. ಚಿಂತಯಾಮಿ-ಆಲೋಚಿಸುತ್ತೇನೆ, ಏಕಾಕಿನೀ-ಒಬ್ಬಳೇ ಒಬ್ಬಳಾಗಿ, ಸಾ-ಆ ಸೀತಾದೇವಿಯು, ಕದಾಚಿತ್-ಒಂದಾನೊಂದು ಕಾಲದಲ್ಲಿ, ನಯಾತಿಹಿ-ಹೋಗುವಳಲ್ಲವಷ್ಟೆ. ॥೧೩॥ ಪದ್ಮಾನನಾ-ಕಮಲಗಳಂತೆ ಮುಖವುಳ್ಳ, ಪದ್ಮವಿಶಾಲನೇತ್ರಾ-ಕಮಲಗಳಂತೆ ವಿಸ್ತಾರವಾದ ನೇತ್ರಗಳುಳ್ಳ ಸೀತಾದೇವಿಯು, ಪದ್ಮಾನಿ-ಕಮಲಗಳನ್ನು, ಆನೇತುಂವಾ-ತರುವದಕ್ಕಾದರೂ, ಅಭಿಪ್ರಯಾತಾ-ಹೋಗಿಧಾಳೆಯೋ ಏನು, ತದಪಿ-ಅದೂಕೂಡ. ಅಯುಕ್ತಂ-ಒಳ್ಳೇದಲ್ಲ, ಸಾ-ಆ ಸೀತಾದೇವಿಯು, ಕದಾಚಿತ್-ಯಾವಾಗಲಾದರೂ, ಮಯಾವಿನಾ-ನನ್ನಿಂದ ಹೊರತು, ಪಂಕಜಾನಿ-ಕಮಲಗಳನ್ನು, ಆನೇತುಂ-ತರುವದಕ್ಕೆ. ನಗಚ್ಛತಿಹಿ-ಹೋಗುವಳಲ್ಲವಷ್ಟೆ. ॥೧೪॥ ಪುಷ್ಪಿತವೃಕ್ಷಷಂಡಂ-ಹುವ್ವುಗಳು ಬಿಟ್ಟಿರುವ ಗಿಡಗಳುಳ್ಳ, ನಾನಾವಿಧೈಃ-ಅನೇಕಬಗೆಗಳಾದ. ಪಕ್ಷಿಗಣೈಃ-ಹಕ್ಕಿಗಳ ಶಂಡಗಳಿಂದ. ಉಪೇತಂ-ಕೂಡಿಕೊಂಡಿರುವ. ಇದಂವನಂ-ಈ ವನವನ್ನುಕುರಿತು, ಕಾಮಂ-ಇಷ್ಟಾನುಸಾರವಾಗಿ, ಪ್ರಯಾತಾನು-ಹೋಗಿಧಾಳೆಯೋ ಏನು. ತದಪಿ-ಅದೂ, ಅಯುಕ್ತಂ-ಯುಕ್ತವಲ್ಲ, ಭೀರುಃ-ಭಯಶೀಲಸ್ವಭಾವ, ಸಾ-ಆ ಸೀತಾದೇವಿಯು, ಏಕಾಕಿನೀ-ಒಬ್ಬಳೇ, ಬಿಭೇತಿ-ಭಯಗೊಂಡಿರೋಳು ॥೧೫॥ ಭೋಆದಿತ್ಯ-ಎಲೋ ಸೂರ್ಯನೇ, ಹೇಲೋಕಕೃತಾಕೃತಜ್ಞ-ಎಲೋ ಜನರ ಒಳ್ಳೇಕಾರ್ಯ ಕೆಟ್ಟಕಾರ್ಯಗಳನ್ನು ತಿಳಿದವನೇ, ಲೋಕಸ್ಯ-ಜನರ, ಸತ್ಯಾನೃತಕರ್ಮಸಾಕ್ಷಿನ್-ಸತ್ಯವಾದ ಅನೃತವಾದ ಕರ್ಮಗಳಿಗೂ ಸಾಕ್ಷಿಚೈತನ್ಯರೂಪನೇ, ಮಮ-ನನ್ನ, ಪ್ರಿಯಾ-ಹೆಂಡತಿಯಾದ, ಸಾ-ಆ ಸೀತಾದೇವಿಯು, ಕ್ವಗತಾ-ಎಲ್ಲಿಹೋದಳು, ಹೃತಾವಾ-ಅಪಹರಿಸಿಕೊಂಡು ಹೋಗಲ್ಪಟ್ಟಳು. ನಿತ್ಯಂ-ನಿರಂತರವೂ, ಶೋಕವಶಸ್ಯ-ವ್ಯಸನಗೊಂಡಿರುವ, ಮೇ-ಯನಗೆ, ಶಂಸಸ್ವ-ಪೇಳು ॥೧೬॥ ಹೇವಾಯೋ-ಎಲೈವಾಯುವೇ, ಸರ್ವೇಷುಲೋಕೇಷು-ಸಮಸ್ತ ಲೋಕಗಳಲ್ಲಿ, ಯತ್-ಯಾವದು, ತೇ-ನಿನ್ನಿಂದ, ನಿತ್ಯಂ-ನಿರಂತರವೂ, ನವಿದಿತಂ-ತಿಯಲ್ಪಟ್ಟದ್ದು, ನಭವೇತ್-

---

ನ್ನ ವಿಷಯವಾಗಿ ಅನೇಕ ಮಾತುಗಳಂ ಪೇಳಿದಳು. (ವಿಶೇಷಾಭಿಪ್ರಾಯವನ್ನು ಪ್ರತಿಪದಟೀಕಿನಲ್ಲಿ ನೋಡಬಹುದು) ॥೧೨॥ ಮತ್ತೂ ಈ ಗೋದಾವರೀ ನದಿಯು ನದಿಗಳೊಳಗೆ ಸರ್ವೋತ್ತಮವಾದದ್ದು; ಆದ್ದರಿಂದ ಈ ನದಿಗೆ ಪೋಗಿರಬಹುದೆಂದೆಣಿಸುತ್ತೇನೆ, ಆದರೆ ಆಕೆಯು ಎಂದಿಗೂ ಓರ್ವಳೇ ಪೋದದ್ದಿಲ್ಲ, ಮತ್ತೂ ತಾವರೆಯ ಎಸಳೆಯಂತೆ ವಿಸ್ತಾರವಾದ ನೇತ್ರಂಗಳುಳ್ಳವಳಾಗಿಯೂ, ಕಮಲದೋಪಾದಿಯಲ್ಲಿರುವ ಮುಖವುಳ್ಳವಳಾಗಿಯೂ ಸಹಾ ಇರುವ ಆ ದೇವಿಯು ಕಮಲಗಳನ್ನು ತರುವುದಕ್ಕೆ ಪೋಗಿರುವಳೋ ಏನೋ, ಹಾಹಾ! ನನ್ನ ವಿನಹಾ ಅದಕ್ಕೂ ಕೂಡಾ ಪೋಗಲಾರಳು, ಅಥವಾ ಪುಷ್ಪಿಸಿದ ವೃಕ್ಷಂಗಳುಳ್ಳ ಈ ವನವಂ ನೋಡುತ್ತಾ ಸ್ವೇಚ್ಛೆಯಾಗಿ ಸಾರಿದಳೋ ಏನೋ, ಅದೂ ಸಹಾ ಯುಕ್ತವಲ್ಲ, ಯಾಕಂದರೆ,— ಭಯಶೀಲಳಾದ ಆಕೆಯು ಓರ್ವಳೇ ತೆರಳುವದಕ್ಕೆ ಹೆದರುವಳು. ॥೧೫॥ ಲೋಕದಲ್ಲಿ ಜನಗಳು ಮಾಡುವ ಪುಣ್ಯಪಾಪಂಗಳಿಗೆ ಸಾಕ್ಷಿಭೂತನಾದ ಎಲೈ ಸೂರ್ಯನೇ! ನನ್ನ ಪ್ರಿಯಪತ್ನಿಯಾದ ಸೀತಾದೇವಿಯು ಯೆಲ್ಲಿಸಾರಿದಳು? ಯಾರಿಂದ ಅಪಹರಿಸಲ್ಪಟ್ಟಳು? ಸಂತತವು ಸ್ವಾಂತದಲ್ಲಿ ಸಂತಾಪವನ್ನೈದುವವನಿಗೆ ಪೇಳುವವನಾಗು॥ ಸರ್ವತ್ರ ಸಂಚಾರಶೀಲನಾದ ಎಲೈವಾಯುವೇ! ಲೋಕದಲ್ಲಿ ನೀನರಿಯದವಿಷಯವು ಯಾವದೂ ಇಲ್ಲ, ಆದ್ದರಿಂದ ನೀನು ಸತ್ಕುಲಪ್ರಸೂತಳಾದ ಆ ಸೀತಾದೇವಿಯನ್ನು

ಹೃತಾವ್ಯಾ ಮೃತಾವಾಪಥಿವರ್ತತೇವಾ ।೧೭। ಇತೀವತಂಶೋಕವಿಧೇಯದೇಹಂರಾಮಂವಿಸಂಜ್ಞಂವಿಲಪಂತಮೇವಂ। ಉವಾಚಸೌಮಿತ್ರಿರದೀನಸತ್ವೋನ್ಯಾಯೇಸ್ಥಿತಃಕಾಲಯುತಂಚವಾಕ್ಯಂ ॥೧೮। ಶೋಕಂವಿಮುಂಚಾರ್ಯಧೃತಿಂಭಜಸ್ವಸೋತ್ಸಾಹತಾಚಾಸ್ತುವಿಮಾರ್ಗಣೇಸ್ಯಾಃ। ಉತ್ಸಾಹವಂತೋಹಿನರಾನಲೋಕೇಸೀದಂತಿಕರ್ಮಸ್ವತಿದುಷ್ಕರೇಷು।೧೯ ಇತೀವಸೌಮಿತ್ರಿಮುದಗ್ರಪೌರುಷಂಬ್ರುವಂತಮಾರ್ತೋರಘುವಂಶವರ್ಧನಃ। ನಚಿಂತಯಾಮಾಸಧೃತಿಂವಿಮುಕ್ತವಾನ್ಪುನಶ್ಚದುಃಖಂಮಹದಭ್ಯುಪಾಗಮತ್ ।೨೦। —** ತ್ರಿಷಷ್ಟಿತಮಸ್ಸರ್ಗಃ **—

ಸದೀನೋದೀನಯಾವಾಚಾಲಕ್ಷ್ಮಣಂವಾಕ್ಯಮಬ್ರವೀತ್ ।೫। ಶೀಘ್ರಂಲಕ್ಷ್ಮಣಜಾನೀಹಿಗತ್ವಾಗೋದಾವರೀಂನದೀಂ। ಅಪಿಗೋದಾವರೀಂಸೀತಾಪದ್ಮಾನ್ಯಾನಯಿತುಂಗತಾ ।೧೫। ಏವಮುಕ್ತಸ್ತುರಾಮೇಣಲಕ್ಷ್ಮಣಃಪರವೀರಹಾ। ನದೀಂಗೋದಾವರೀಂರಮ್ಯಾಂಜಗಾಮಲಘುವಿಕ್ರಮಃ ।೭೫। ತಾಂಲಕ್ಷ್ಮಣಸ್ತೀರ್ಥವಂತೀಂವಿಚಿತ್ವಾರಾಮ

ಸ್–ಅಗದೇ ಇರುವದೋ, ತತ್–ಅದು. ಕಿಂಚಿತ್–ಯಾವದು. ನಾಸ್ತಿ–ಇಲ್ಲ. ತತ್–ಆಕಾರಣದದೆಸೆಯಿಂದ, ಕುಲಶಾಲಿನೀಂ–ಸತ್ಕುಲದಿಂ ಬಪ್ಪುತ್ತಿರುವ ತಾಂ–ಆ ಸೀತಾದೇವಿಯನ್ನು. ಶಂಸಸ್ವ–ಪೇಳು. ಹೃತಾ–ಅಪಹರಿಸಿಕ್ಕೊಂಡೊಯ್ಯಲ್ಪಟ್ಟಳೋ ಏನು. ಮೃತಾವಾ–ಮೃತಪಟ್ಟಳೋ ಏನು, ಪಥಿ–ಮಾರ್ಗದಲ್ಲಿ. ವರ್ತತೇವಾ–ಇರುತ್ತಾಳೆಯೋ ಏನು ಶಂಸಸ್ವ–ಪೇಳು ॥೧೭॥ ಇತೀವ–ಈಪರಿಯಾಗಿ, ಶೋಕವಿಧೇಯದೇಹಂ–ವ್ಯಸನಕ್ಕೆ ಸ್ವಾಧೀನಮಾದ ಶರೀರವುಳ್ಳ, ವಿಸಂಜ್ಞಂ–ಪ್ರಜ್ಞಾಶೂನ್ಯನಾದ, ಏವಂವಿಲಪಂತಂ–ಈಪರಿ ಅಳುತ್ತಿರುವ, ತಂರಾಮಂ–ಆ ಶ್ರೀರಾಮನಂಕುರಿತು, ಅದೀನಸತ್ವಃ–ಧೈರ್ಯವಾದ ಮನವುಳ್ಳವನಾಗಿ, ಸೌಮಿತ್ರಿಃ–ಲಕ್ಷ್ಮಣಸ್ವಾಮಿಯು, ನ್ಯಾಯೇ–ಯುಕ್ತವಾದಮಾರ್ಗದಲ್ಲಿ, ಸ್ಥಿತಃ–ಇರುತ್ತಿರುವವನಾಗಿ, ಕಾಲಯುತಂ–ಕಾಲಾನುಸಾರವಾದ ವಾಕ್ಯಂಚ–ಮಾತನ್ನು, ಉವಾಚ–ಪೇಳಿದನು ॥೧೮॥ ಹೇಆರ್ಯ–ಎಲೈ ಪೂಜ್ಯನಾದ ಅಣ್ಣನೇ. ಶೋಕಂ–ವ್ಯಸನವನ್ನು. ವಿಮುಂಚ–ಬಿಡು. ಧೃತಿಂ–ಧೈರ್ಯವನ್ನು ಭಜಸ್ವ–ಹೊಂದು. ಅಸ್ಯಾಃ–ಈ ಸೀತಾದೇವಿಯ ವಿಮಾರ್ಗಣೇ–ಹುಡುಕುವ ವಿಷಯದಲ್ಲಿ, ಸೋತ್ಸಾಹತಾ–ಉತ್ಸಾಹದಿಂದ ಕೂಡಿಕೆಯು, ಅಸ್ತು–ಆಗಲಿ. ಲೋಕೇ–ಲೋಕದಲ್ಲಿ, ಅತಿದುಷ್ಕರೇಷು–ಮಾಡಲಸಾಧ್ಯವಾದ, ಕರ್ಮಸು–ಕರ್ಮಗಳಲ್ಲಿ. ಉತ್ಸಾಹವಂತಃ–ಸಂತೋಷವುಳ್ಳ, ನರಾಃ–ಮನುಷ್ಯರು, ನಸೀದಂತಿಹಿ–ದುಃಖಗೊಂಡವರಾಗುವದಿಲ್ಲವಷ್ಟೆ, ॥೧೯॥ ಆರ್ತಃ–ದೀನನಾದ. ರಘುವಂಶವರ್ಧನಃ–ರಘುಕುಲೋದ್ಧಾರಕನಾದ ಶ್ರೀರಾಮನು ಇತೀವ–ಈಪರಿಯಾಗಿಯೇ, ಬ್ರುವಂತಂ–ಮಾತನಾಡುತ್ತಿರುವ, ಉದಗ್ರಪೌರುಷಂ–ಉತ್ತಮವಾದ ಪರಾಕ್ರಮವುಳ್ಳ, ಸೌಮಿತ್ರಿಂ–ಲಕ್ಷ್ಮಣಸ್ವಾಮಿಯನ್ನು, ನಚಿಂತಯಾಮಾಸ–ಲಕ್ಷ್ಯವನ್ನಾಗಿಯೇ ಆಲೋಚಿಸಲಿಲ್ಲ. ಧೃತಿಂ–ಧೈರ್ಯವನ್ನು, ವಿಮುಕ್ತವಾನ್–ಬಿಟ್ಟವನು, ಪುನಶ್ಚ–ಮತ್ತೂನೆ. ಮಹತ್–ಬಹಳವಾದ. ದುಃಖಂ–ವ್ಯಸನವನ್ನು, ಅಭ್ಯುಪಾಗಮತ್–ಹೊಂದಿದನು ॥೨೦॥ —**ತ್ರಿಷಷ್ಟಿತಮಸ್ಸರ್ಗಃ**—

ದೀನಃ–ಪರಿತಪ್ತನಾದ, ಸಃ–ಆ ಶ್ರೀರಾಮನು, ದೀನಯಾ–ದೈನ್ಯವುಳ್ಳ, ವಾಚಾ–ಮಾತಿನಿಂದ, ಲಕ್ಷ್ಮಣಂ–ಲಕ್ಷ್ಮಣನಂಕುರಿತು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಗೋದಾವರೀಂ–ಗೋದಾವರೀಎಂಬ. ನದೀಂ–ಹೊಳೆಯನ್ನುಕುರಿತು, ಗತ್ವಾ–ಹೋಗಿ, ಶೀಘ್ರಂ–ಜಾಗ್ರತೆಯಾಗಿ, ಜಾನೀಹಿ–ತಿಳಿದುಕೋ, ಸೀತಾ–ಸೀತಾದೇವಿಯು, ಪದ್ಮಾನಿ–ತಾವರೇಹುವ್ವುಗಳನ್ನು, ಆನೇತುಂ–ತರುವದಕ್ಕಾಗಿ, ಗೋದಾವರೀಂ–ಗೋದಾವರೀನದಿಯನ್ನುಕುರಿತು, ಅಪಿಗತಾ–ಹೋಗಿದ್ದಾಳೆಯೋ ಏನೋ ॥೧॥ ॥ ಏವಂ–ಈಪರಿಯಾಗಿ, ರಾಮೇಣ–ಶ್ರೀರಾಮನಿಂದ, ಉಕ್ತಃ–ಪೇಳಲ್ಪಟ್ಟ, ಪರವೀರಹಾ–ಶತ್ರುಗಳನ್ನು ಸಂಹರಿಸುವ, ಲಕ್ಷ್ಮಣಸ್ತು–ಲಕ್ಷ್ಮಣನಾದರೆ. ಲಘುವಿಕ್ರಮಃ–ತ್ವರಿತವಾದ ಪಾದವಿನ್ಯಾಸವುಳ್ಳವನಾ

ನ್ನು ಯಾರಾದರೂ ಅಪಹಾರವಂ ಗೈದರೋ, ಅಥವಾ ಮೃತಿಯನ್ನೈದಿದಳೋ, ಇಲ್ಲದಿದ್ದರೆ, ಎಲ್ಲಿಯಾದರೂ ಪೊಂದುಕಡೆಯಲ್ಲಿ ಮಾರ್ಗದಲ್ಲಿರುವಳೋ, ನಿರೂಪಿಸುವವನಾಗು ।೧೭। ಎಂದು ಈ ಪ್ರಕಾರವಾಗಿ ನುಡಿಯುತ್ತಾ ವ್ಯಸನಾಧೀನವಾದ ಶರೀರವುಳ್ಳ, ಮತ್ತು ಪ್ರಜ್ಞೆಯಿಲ್ಲದಿರುವ ಆ ಶ್ರೀರಾಮನಂ ಕುರಿತು ಲಕ್ಷ್ಮಣನು ಧೈರ್ಯವಾದ ಮನವುಳ್ಳವನಾಗಿ, ಆ ಕಾಲಕ್ಕೆ ಉಚಿತವಾದಂತೆ ನುಡಿವನದೆಂತೆನೇ,—।೧೮। ಎಲೈ ಅಗ್ರಜನಾದ ಶ್ರೀರಾಮನೇ! ಈ ದುಃಖವಂ ಬಿಟ್ಟು ಧೈರ್ಯವಂತನಾಗಿರುವ ಯಾಕೆಯನ್ನು ಹುಡುಕುವದರಲ್ಲಿ ಉತ್ಸಾಹವಂತನಾಗಿರು, ಯಾಕಂದರೇ,— ಲೋಕದಲ್ಲಿ ಅಸಾಧ್ಯವಾದ ವ್ಯಾಪಾರಂಗಳಲ್ಲಿ ಯಾರು ಉತ್ಸಾಹವಂತರಾಗಿರುವರೋ, ಅವರು ದುಃಖವಂತರಾಗುವದಿಲ್ಲಾ. ಎಂದು ನುಡಿದವನಾಗಲೂ, ಆ ರಘುಕುಲೋದ್ಧಾರಕನಾದ ಶ್ರೀರಾಮನು, ಈ ಪರಿಪೇಳುವ ಲಕ್ಷ್ಮಣನ ವಾಕ್ಯವಂ ಕೇಳಿದರೂ, ಅದನ್ನು ಚಿಂತಿಸದೆ ಧೈರ್ಯಹೀನನಾಗಿ ಪುನಹಾ ವ್ಯಸನವನ್ನೈದಿದನು ।೨೦॥ —** ಆರಣ್ಯಕಾಂಡದಲ್ಲಿನ ೬೩ನೆಯ ಸರ್ಗಂ ಮುಗಿದುದು **—

ಈ ರೀತಿಯಲ್ಲಿ ಮಹಾ ದುಃಖಿತನಾದ ಆ ಶ್ರೀರಾಮನು ದೀನವಾದ ವಾಕ್ಯದಿಂದ ಲಕ್ಷ್ಮಣನಂ ಕುರಿತು ಯಿಂತೆಂದನು ।೧೧। ಎಲೈ ಒಡಹುಟ್ಟಿದವನೇ! ತ್ವರೆಯಿಂದ ಗೋದಾವರೀ ನದಿಗೆ ಸಾರಿ ಸೀತಾದೇವಿಯು ಕಮಲಗಳನ್ನು ತರುವದಕ್ಕೋಸುಗ ಆ ನದಿಗೇನಾದರೂ ಪೋಗಿರುವಳೋ ಯೇನೊ ತಿಳಿದುಕೊಂಡು ಬರುವವನಾ

ಮಬ್ರವೀತ್ ॥೩॥ ನೈನಾಂಪಶ್ಯಾಮಿತೀರ್ಥೇಷುಕ್ರೋಶತೋನಶೃಣೋತಿಮೆ ॥೩½॥ ಕಿನ್ನುಸಾದೇಶಮಾಪನ್ನಾವೈದೇಹೀ ಕ್ಲೇಶನಾಶಿನೀ । ನಹ್ಯಹಂವೇದತಂದೇಶಂಯತ್ರಸಾಜನಕಾತ್ಮಜಾ ॥೪½॥ ಲಕ್ಷ್ಮಣಸ್ಯವಚಶ್ಶ್ರುತ್ವಾದೀನಸ್ಸಂತಾಪ ಮೋಹಿತಃ । ರಾಮಸ್ಸಮಭಿಚಕ್ರಾಮಸ್ವಯಂಗೋದಾವರೀಂನದೀಂ ॥೫॥ ಸತಾಮುಪಸ್ಥಿತೋರಾಮಃಕ್ವಸೀತೇತ್ಯೇವಮ ಬ್ರವೀತ್ ॥೬॥ ಭೂತಾನಿರಾಕ್ಷಸೇಂದ್ರೇಣವಧಾರ್ಹೇಣಹೃತಾಮಿತಿ । ನತಾಂಶಶಂಸೂರಾಮಾಯತಥೋಗೋದಾವರೀ ನದೀ ॥೭॥ ತತಃಪ್ರಚೋದಿತಾಭೂತೈಶ್ಶಂಸಾಸ್ಮೈತಾಂಪ್ರಿಯಾಮಿತಿ । ನತುಸಾಭ್ಯವದತ್ಸೀತಾಂಪೃಷ್ಟಾರಾಮೇಣ ಶೋಚತಾ ॥೮॥ ರಾವಣಸ್ಯಚತದ್ರೂಪಂಕರ್ಮಾಣಿಚದುರಾತ್ಮನಃ । ಧ್ಯಾತ್ವಾಭಯಾತ್ತುವೈದೇಹೀಂಸಾನದೀನಶಶಂ ಸತಾಂ ॥೯॥ ನಿರಾಶಸ್ತುತಯಾನದ್ಯಾಸೀತಾಯಾದರ್ಶನೇಕೃತಃ । ಉವಾಚರಾಮಸ್ಸೌಮಿತ್ರಿಂಸೀತಾದರ್ಶನಕರ್ಶಿ

---

೩. ರಮ್ಯಾಂ-ಮನೋಹರವಾದ, ಗೋದಾವರೀಂ-ಗೋದಾವರೀಎಂಬ, ನದೀಂ-ಹೊಳೆಯಂಕುರಿತು ಜಗಾಮ-ತೆರಳಿದನು ॥೨॥ ॥ ಲಕ್ಷ್ಮಣಃ-ಲಕ್ಷ್ಮಣನು, ತೀರ್ಥವತೀಂ-ಅನೇಕ ತೀರ್ಥಗಳುಳ್ಳ, ತಾಂ-ಆ ನದಿಯನ್ನು. ವಿಚಿತ್ಯ-ಹುಡುಕಿ. ರಾಮಂ-ಶ್ರೀರಾಮನಂಕುರಿತು. ಅಬ್ರವೀತ್-ನುಡಿದನು ತೀರ್ಥೇಷು-ತೀರ್ಥಗಳಲ್ಲಿ. ಏನಾಂ-ಈ ಸೀತಾದೇವಿಯನ್ನು. ನಪಶ್ಯಾಮಿ-ಕಾಣೆನು, ಕ್ರೋಶತಃ-ಕೂಗುತ್ತಿರುವ, ಮೇ-ನನ್ನ ಧ್ವನಿಯನ್ನು, ಸಾ-ಆ ಸೀತಾದೇವಿಯು. ನಶೃಣೋತಿ-ಕೇಳುವದಿಲ್ಲ ॥೩॥ ॥ ಕ್ಲೇಶನಾಶನೀ-ದುಃಖನಿವಾರಕಳಾದ. ಸಾವೈದೇಹೀ-ಆ ಸೀತಾದೇವಿಯು. ಕಂದೇಶಮಾಪನ್ನಾ-ಯಾವ ದೇಶವಂಕುರಿತು ಹೋಗಿಧಾಳೋ, ಸಾಜನಕಾತ್ಮಜಾ-ಆ ಸೀತಾದೇವಿಯು, ಯತ್ರ-ಎಲ್ಲಿಯೋ, ಅಹಂ-ನಾನು. ತಂದೇಶಂ-ಅಂಥಾ ಪ್ರದೇಶವನ್ನು. ನವೇದ-ತಿಳಿಯಲಾರೆನು ॥೪॥ ॥ ಲಕ್ಷ್ಮಣಸ್ಯ-ಲಕ್ಷ್ಮಣನ. ವಚಃ-ಮಾತನ್ನು, ಶ್ರುತ್ವಾ-ಕೇಳಿ. ದೀನಃ-ದೀನಮುಖವುಳ್ಳವನಾಗಿ, ಸಂತಾಪಮೋಹಿತಃ-ಪರಿತಾಪದಿಂ ಮೋಹಾಕ್ರಾಂತನಾಗಿ, ರಾಮಃ-ಶ್ರೀರಾಮನು, ಸ್ವಯಂ-ತಾನೇ. ಗೋದಾವರೀಂನದೀಂ-ಗೋದಾವರೀನದಿಯಂಕುರಿತು, ಸಮಭಿಚಕ್ರಾಮ-ತೆರಳಿದನು ॥೫॥ ॥ ಸಃ-ಆ ಶ್ರೀರಾಮನು, ತಾಂ-ಆ ಗೋದಾವರಿಯನ್ನುಕುರಿತು. ಉಪಸ್ಥಿತಃ-ಸಮೀಪಕ್ಕೆ ಹೋದವನಾಗಿ. ಸೀತಾ-ಸೀತಾದೇವಿಯು, ಕ್ವ-ಎಲ್ಲಿ, ಇತ್ಯೇವಂ-ಈಪರಿಯಾಗಿ, ಅಬ್ರವೀತ್-ನುಡಿದನು ॥೬॥ ಭೂತಾನಿ-ವನದಲ್ಲಿರುವ ಜಂತುಗಳು ರಾಮಾಯ-ಶ್ರೀರಾಮನಿಗೋಸುಗ. ವಧಾರ್ಹೇಣ-ಸಂಹಾರಯೋಗ್ಯನಾದ, ರಾಕ್ಷಸೇಂದ್ರೇಣ-ರಾವಣನಿಂದ, ಹೃತಾಂ-ಅಪಹರಿಸಲ್ಪಟ್ಟ, ತಾಂ-ಆ ಸೀತಾದೇವಿಯನ್ನು. ಇತಿ-ಹೀಗೆಂದು. ನಶಶಂಸುಃ-ಹೇಳದೇಹೋದವು, ತಥಾ-ಹಾಗೆಯೇ, ಗೋದಾವರೀನದೀ-ಗೋದಾವರೀ ನದಿಯು, ನಶಶಂಸ-ಹೇಳಲಿಲ್ಲ ॥೭॥ ತತಃ-ಬಳಿಕ, ಅಸ್ಮೈ-ನಮ್ಮನಿಮಿತ್ತವಾಗಾದರೂ, ಪ್ರಿಯಾಂ-ರಾಮನಿಗೆ ಹೆಂಡತಿಯಾದ ಸೀತಾದೇವಿಯನ್ನು, ಶಂಸ-ಹೇಳು, ಇತಿ-ಇಂತೆಂದು. ಭೂತೈಃ-ವನವಾಸಿಗಳಾದ ಜಂತುಗಳಿಂದ, ಪ್ರಚೋದಿತಾಪಿ-ಪ್ರೇರೇಪಿಸಲ್ಪಟ್ಟದ್ದಾದರೂ, ಸಾ-ಆ ಗೋದಾವರೀನದಿಯು. ಶೋಚತಾ-ದುಃಖಿಸುತ್ತಿರುವ, ರಾಮೇಣ-ಶ್ರೀರಾಮನಿಂದ, ಪೃಷ್ಟಾ-ಕೇಳಲ್ಪಟ್ಟವಳಾದರೂ, ಸೀತಾಂ-ಸೀತಾದೇವಿಯನ್ನು. ನಾಭ್ಯವದತ್-ಹೇಳದೇಹೋದಳು ॥೮॥ ಸಾನದೀ-ಆ ಗೋದಾವರೀನದಿಯು, ದುರಾತ್ಮನಃ-ದುಷ್ಟಬುದ್ಧಿಯುಳ್ಳ, ರಾವಣಸ್ಯ-ರಾವಣನ, ತದ್ರೂಪಂಚ-ಆ ಆಕಾರವನ್ನು, ಕರ್ಮಾಣಿಚ-ಕೃತ್ಯಗಳನ್ನು, ಧ್ಯಾತ್ವಾ-ಯೋಚಿಸಿ, ಭಯಾತ್-ಭೀತಿಯಿಂದಯಿಂದ, ತಾಂವೈದೇಹೀಂ-ಆ ಸೀತಾದೇವಿಯನ್ನು. ನಶಶಂಸ-ಹೇಳದೇಹೋದಳು ॥೯॥ ತಯಾನದ್ಯಾ-ಆ ನದಿಯಿಂದ, ಸೀತಾಯಾಃ-ಸೀತಾದೇವಿಯ, ದರ್ಶನೇ-ನೋಟದಲ್ಲಿ, ನಿರಾಶಃ-ಆಶಾರಹಿತನಾಗಿ, ಕೃತಃ-ಮಾಡಲ್ಪಟ್ಟ. ರಾಮಸ್ತು-ಶ್ರೀರಾಮನಾದರೆ, ಸೀತಾದರ್ಶನಕರ್ಶಿತಃ-ಸೀತಾದೇ

---

ಗೆಂಬದಾಗಿ ನಿರೂಪಿಸಿದವನಾಗಲೂ, ಶತ್ರುಸಂಹಾರಕನಾದ ಲಕ್ಷ್ಮಣನು ಅಗ್ರಜನ ವಾಕ್ಯವಂ ಕೇಳಿ ಅತಿತ್ವರೆಯಿಂದ ಆ ನದಿಗೆ ತೆರಳಿ ಅಲ್ಲಿ ಸೀತಾದೇವಿಯಂ ಹುಡುಕಿ ರಾಮನಂ ಕುರಿತಿಂತೆಂದನು ॥೩॥ ಎಲೈ ಪೂಜ್ಯನೇ! ನಾನು ಎಷ್ಟು ಕೂಗಿದರೂ ಎನ್ನ ಮಾತನ್ನು ಆಕೆಯು ಕೇಳಲಿಲ್ಲ, ವ್ಯಸನ ಪರಿಹಾರಕಳಾದ ಆ ಸೀತಾದೇವಿಯು ಯಾವ ಪ್ರದೇಶದಲ್ಲಿರುವಳೋ ತಿಳಿಯಲಾರೆನು, ಎಂದು ಲಕ್ಷ್ಮಣನಿಂದನುಡಿಯಲ್ಪಟ್ಟ ವಾಕ್ಯವಂ ಕೇಳಿದ ಬಳಿಕ, ಆ ಶ್ರೀರಾಮನು ದೀನವಾದ ಮುಖವುಳ್ಳವನಾಗಿ ಮಹಾ ಸಂತಾಪವನ್ನೈದಿ ಸ್ವಯಮೇವ ಗೋದಾವರೀ ನದಿಯ ಸಮೀಪಕ್ಕೆ ಸಾರಿದನದೆಂತೆನೆ,—ಸೀತೆಯು ಯಲ್ಲಿರುವಳೆಂದು ಕೂಗಲೂ, ಆಗ ಸರ್ವಜಂತುಗಳು ವಧಾರ್ಹನಾದ ರಾವಣನಿಂದ ಅಪಹರಿಸಲ್ಪಟ್ಟಳೆಂದು ಹೇಳಲಿಲ್ಲಾ ಹಾಗೆಯೇ ಗೋದಾವರೀನದಿಯೂ ಕೂಡ ಹೇಳಲಿಲ್ಲಾ ॥೭॥ ಅನಂತರದೊಳ್ ಸಮಸ್ತ ಜಂತುಗಳಿಂದಲೂ ನಮ್ಮನಿಮಿತ್ತವಾಗಾದರೂ ಶ್ರೀರಾಮನಪ್ರಾಣಕಾಂತೆಯಾದ ಸೀತಾದೇವಿಯನ್ನು ಹೇಳುವವಳಾಗೆಂದು ಪ್ರೇರಿಸಲ್ಪಟ್ಟರೂ, ಶ್ರೀರಾಮನಿಂದ ಕೇಳಲ್ಪಟ್ಟರೂ ಸಹ ಆ ನದಿಯು ದುರಾತ್ಮನಾದ ರಾವಣನ ಮಹಾ ಭಯಂಕರವಾದ ಆತನವ್ಯಾಪಾರಂಗಳನ್ನೂ, ಆತನ ಆಕಾರವನ್ನೂ ಸಹ ಚಿಂತಿಸಿಭೀತಿಗೊಂಡವಳಾಗಿ ಆ ಸೀತಾದೇವಿಯನ್ನು ಹೇಳಲಿಲ್ಲಾ॥ಈ ಪ್ರಕಾರವಾಗಿ ಭಯಗೊಂಡದ್ದಾಗಿ ಆ ನದಿಯು ಪೇಳದಿರಲೂ, ಶ್ರೀರಾಮನು ಸೀತಾವಿಷಯದಲ್ಲಿ ಆಶೆಯಿಲ್ಲದವನಾಗಿ ಆಕೆಯಂ ನೋಡಬೇಕೆಂಬಿಚ್ಛೆಯಿಂದ ಕೃಶೀಭಾವವನ್ನೈದಿ ಲಕ್ಷ್ಮಣನಂ ಕುರಿತಿಂತೆಂದನು ॥೧೦॥ ಎಲೈ ಸೌಮ್ಯನಾದ ಲಕ್ಷ್ಮಣನೇ! ಈ ಗೋದಾವ

ತೇಃ ॥೧೦॥ ಏಷಾಗೋದಾವರೀಸೌಮ್ಯಕಿಂಚಿನ್ನಪ್ರತಿಭಾಷತೇ । ಕಿನ್ನುಲಕ್ಷ್ಮಣವಕ್ಷ್ಯಾಮಿಸಮೇತ್ಯಜನಕಂವಚಃ ।
ಮಾತರಂಚೈವವೈದೇಹ್ಯಾವಿನಾತಾಮಹಮಪ್ರಿಯಂ । ಯಾಮೇರಾಜ್ಯವಿಹೀನಸ್ಯವನೇವನ್ಯೇನಜೀವತಃ । ಸರ್ವಂವ್ಯಪ
ನಯೇಚ್ಛೋಕಂವೈದೇಹೀಕ್ವನುಸಾಗತಾ ॥೧೨॥ ಜ್ಞಾತಿಪಕ್ಷವಿಹೀನಸ್ಯರಾಜಪುತ್ರೀಮಪಶ್ಯತಃ । ಮನ್ಯೇದೀರ್ಘಾಭ
ವಿಷ್ಯಂತಿರಾತ್ರಯೋಮಮಜಾಗ್ರತಃ ॥೧೩॥ ಮಂದಾಕಿನೀಂಜನಸ್ಥಾನಮಿಮಂಪ್ರಸ್ರವಣಂಗಿರಿಂ । ಸರ್ವಾಣ್ಯನುಚ
ರಿಷ್ಯಾಮಿಯದಿಸೀತಾಹಿದೃಶ್ಯತೇ ॥೧೪॥ ಏತೇಮೃಗಾಮಹಾವೀರ್ಯಾಮಾಮೀಕ್ಷಂತೇಮುಹುರ್ಮುಹುಃ । ವಕ್ತುಕಾ
ಮಾಇವಹಿಮೇಇಂಗಿತಾನ್ಯುಪಲಕ್ಷಯೇ ॥೧೫॥ ತಾಂಸ್ತುದೃಷ್ಟ್ವಾನರವ್ಯಾಘ್ರೋರಾಘವಃಪ್ರತ್ಯುವಾಚಹ । ಕ್ವಸೀತೇ
ತಿನಿರೀಕ್ಷನ್ವೈಬಾಷ್ಪಸಂರುದ್ಧಯಾದೃಶಾ ॥೧೬॥ ಏವಮುಕ್ತಾನರೇಂದ್ರೇಣತೇಮೃಗಾಸ್ಸಹಸೋತ್ಥಿತಾಃ । ದಕ್ಷಿಣಾಭಿ
ಮುಖಾಸ್ಸರ್ವೇದರ್ಶಯಂತೋನಭಸ್ಥಲಂ । ಮೈಥಿಲೀಹ್ರಿಯಮಾಣಾಸಾದಿಶಂಯಾಮನ್ವಪದ್ಯತ । ತೇನಮಾರ್ಗೇಣ

---

ವಿಯ ದರ್ಶನಾಭಾವದಿಂ ಕೃಶೀಭೂತನಾಗಿ, ಸೌಮಿತ್ರಿಂ-ಲಕ್ಷ್ಮಣನಂಕುರಿತು, ಉವಾಚ-ಹೇಳಿದನು ॥೧೦॥ ಹೇಸೌಮ್ಯ-ಎಲೈ ಪ್ರಸನ್ನನೇ, ಏಷಾಗೋದಾವರೀ-ಈ ಗೋದಾವರೀನದಿಯು, ಕಿಂಚಿತ್-ಯಾವ ಮಾತನ್ನಾದರೂ. ನಪ್ರತಿಭಾಷತೇ-ಹೇಳದೇಹೋದಳು. ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಸಮೇತ್ಯ-ಊರಿಗೆಹೋಗಿ, ಜನಕಂ-ಆಕೆಯತಂದೆಯಂಕುರಿತು, ತಾಂ-ಆ ಮಾತರಂಚೈವ-ತಾಯಿಯನ್ನೂ ಕುರಿತು,ವೈದೇಹ್ಯಾವಿನಾ-ಸೀತಾದೇವಿಯನ್ನೂ ಹೊರತು. ಅಹಂ-ನಾನು, ಅಪ್ರಿಯಂ-ಅನಿಷ್ಟಕರವಾದ, ವಚಃ-ಮಾತನ್ನು, ಕಿನ್ನುವಕ್ಷ್ಯಾಮಿ-ಏನು ಹೇಳುವೆನು ॥೧೧॥ ಯಾ-ಯಾವ ಸೀತಾದೇವಿಯು, ರಾಜ್ಯವಿಹೀನಸ್ಯ-ರಾಜ್ಯವಿಲ್ಲದಿರುವ. ವನೇ-ಅರಣ್ಯದಲ್ಲಿ, ವನ್ಯೇನ-ವನದಲ್ಲಿ ಪುಟ್ಟಿದ ಕಂದಮೂಲಾದಿಗಳಿಂದ. ಜೀವತಃ-ಜೀವನಮಾಡುತ್ತಿರುವ, ಮೇ-ನನಗೆ, ಸರ್ವಂ-ಸಮಸ್ತವಾದ, ಶೋಕಂ-ವ್ಯಸನವನ್ನು, ವ್ಯಪನಯೇತ್-ಹೋಗಲಾಡಿಸುವಳೋ, ಸಾವೈದೇಹೀ-ಆ ಸೀತಾದೇವಿಯು. ಕ್ವನುಗತಾ-ಯೆಲ್ಲಿಹೋದಳೋ ॥೧೨॥ ಜ್ಞಾತಿಪಕ್ಷವಿಹೀನಸ್ಯ-ಜ್ಞಾತಿಗಳೆಂಬ ಸಹಾಯಗಳಿಂದ ಹೀನನಾದ, ರಾಜಪುತ್ರೀಂ-ರಾಜಕುಮಾರಿಯಾದ ಸೀತಾದೇವಿಯನ್ನು, ಅಪಶ್ಯತಃ-ಕಾಣದಿರುವ. ಜಾಗ್ರತಃ-ನಿದ್ದೆಹೋಗದಿರುವ, ಮಮ-ನನಗೆ, ರಾತ್ರಯಃ-ರಾತ್ರಿಗಳು, ದೀರ್ಘಾಃ-ದೀರ್ಘಗಳು. ಭವಿಷ್ಯಂತಿ-ಆಗುವವು ॥೧೩॥ ಮಂದಾಕಿನೀಂ-ಮಂದಾಕಿನೀಎಂಬ ನದಿಯನ್ನು, ಜನಸ್ಥಾನಂ-ಉತ್ಕಟವನ್ನು, ಪ್ರಸ್ರವಣಂ-ಪ್ರಸ್ರವಣವೆಂಬ, ಇಮಂಗಿರಿಂ-ಈ ಬೆಟ್ಟವನ್ನು, ಸರ್ವಾಣಿ-ಸಮಸ್ತಗಳಾದ ಸ್ಥಳಗಳನ್ನು. ಸೀತಾ-ಸೀತಾದೇವಿಯು, ದೃಶ್ಯೇತಯದಿ-ಕಾಣಲ್ಪಟ್ಟವಳೇ ಆದರೆ, ಅನುಚರಿಷ್ಯಾಮಿ-ಸಂಚಾರಮಾಡುವೆನು ॥೧೪॥ ಮಹಾವೀರ್ಯಾಃ-ಬಹಳ ಸಾಮರ್ಥ್ಯವುಳ್ಳ, ಏತೇಮೃಗಾಃ-ಈ ಮೃಗಗಳು, ಮೇ-ನನಗೆ. ವಕ್ತುಕಾಮಾಇವ-ಹೇಳಲಿಚ್ಛೆಯುಳ್ಳವುಗಳೋಎಂಬಂತೆ, ಮುಹುರ್ಮುಹುಃ-ಬಾರಿಬಾರಿಗೂ, ಮಾಂ-ನನ್ನನ್ನು, ಈಕ್ಷಂತೇಹಿ-ನೋಡುತ್ತವಷ್ಟೆ, ಇಂಗಿತಾನಿ-ಚೇಷ್ಟಾವಿಶೇಷಗಳನ್ನು, ಉಪಲಕ್ಷಯೇ-ಕಾಣುತ್ತೇನೆ ॥೧೫॥ ನರವ್ಯಾಘ್ರಃ-ಪುರುಷಶ್ರೇಷ್ಠನಾದ, ರಾಘವಃ-ಶ್ರೀರಾಮನು, ತಾನ್-ಆ ಮೃಗಗಳನ್ನು. ದೃಷ್ಟ್ವಾ-ಕಂಡು, ಬಾಷ್ಪಸಂರುದ್ಧಯಾ-ಕಂಬನಿಗಳಿಂದ ತಡೆಮಾಡಲ್ಪಟ್ಟ, ದೃಶಾ-ನೇತ್ರದಿಂದ. ನಿರೀಕ್ಷನ್ವೈ-ನೋಡುತ್ತಿರುವವನಾಗಿ, ಸೀತಾ-ಸೀತಾದೇವಿಯು, ಕ್ವೇತಿ-ಎಲ್ಲೀಎಂದು, ಪ್ರತ್ಯುವಾಚಹ-ಪ್ರತ್ಯುತ್ತರಕೊಟ್ಟನಷ್ಟೆ, ॥೧೬॥ ಏವಂ-ಈಪರಿಯಾಗಿ, ನರೇಂದ್ರೇಣ-ರಾಜನಾದ ಶ್ರೀರಾಮನಿಂದ, ಉಕ್ತಾಃ-ಹೇಳಲ್ಪಟ್ಟ. ಸರ್ವೇ-ಸಮಸ್ತಗಳಾದ, ತೇಮೃಗಾಃ-ಆ ಚಿಗರಿಗಳು, ಸಹಸಾ-ಜಾಗ್ರತೆಯಾಗಿ, ಉತ್ಥಿತಾಃ-ಎದ್ದವುಗಳಾಗಿ, ದಕ್ಷಿಣಾಭಿಮುಖಾಃ-ದಕ್ಷಿಣದಿಕ್ಕಿಗೆ ಅಭಿಮುಖಗಳಾಗಿ, ನಭಸ್ಥಲಂ-ಅಂತರಿಕ್ಷಮಾರ್ಗವನ್ನು, ದರ್ಶಯಂತಃ-ತೋರಿಸುತ್ತಿರುವುಗಳಾಗಿ, ಹ್ರಿಯಮಾಣಾ-ಅಪಹರಿಸಿಕೊಂಡು ಹೋಗ

---

ರೀ ನದಿಯು ಯಾವ ಮಾತನ್ನೂ ಹೇಳಲಿಲ್ಲ, ಆ ದೇವಿಯ ಹೊರ್ತು ನಾನು ಊರಿಗೆ ಪೋಗಿ ಅನಿಷ್ಟವಾದ ವಾಕ್ಯವನ್ನೆಂತು ಹೇಳಲಿ, ರಾಜ್ಯವನ್ನಗಲಿ ವನದಲ್ಲಿ ಪುಟ್ಟಿದ ಕಂದಮೂಲಾದಿಗಳಿಂದ ಜೀವನವಂ ಮಾಡುತಿರುವ ನನಗೆ ಯಾವ ವ್ಯಸನವು ಸಂಭವಿಸಿದರೂ ಆ ಶೋಕವನ್ನೆಲ್ಲಾ ಯಾವ ವೈದೇಹಿಯು ಪರಿಹರಿಸುತ್ತಿದ್ದಳೋ, ಅಂಥಾ ಸೀತಾದೇವಿಯು ಯಲ್ಲಿಪೋದಳೋ, ಯಾವ ಜ್ಞಾತಿಗಳ ಸಹಾಯವಿಲ್ಲದೆಯೂ, ರಾಜಕುವರಿಯಾದ ಆ ದೇವಿಯನ್ನು ಕಾಣದೆಯೂ, ಇರುವ ನನಗೆ ರಾತ್ರಿಕಾಲಗಳು ಅತಿದೀರ್ಘವಾಗಿಕಾಣುತವೆ ಆದ್ದರಿಂದ ಈ ಗೋದಾವರೀ ನದಿಯನ್ನು ಜನಸ್ಥಾನವನ್ನು ಈ ಪರ್ವತವನ್ನೂ ಸಹ ಹುಡುಕುವೆಣ, ಯಿಲ್ಲಿ ಯೇನಾದರೂ ಸೀತಾದೇವಿಯು ಯಿರುವಳೋ ಯೇನೋ ॥೧೪॥ ಬಹು ಸಾಮರ್ಥ್ಯವುಳ್ಳ ಈ ಮೃಗಂಗಗಳು ನನಗೆ ಹೇಳಲಿಚ್ಛೆಯುಳ್ಳವುಗಳೋ ಯೇನೋ ಎಂಬಂತೆ ಬಾರಿಬಾರಿಗೂ ನನ್ನನ್ನು ನೋಡುತಲಿವೆ ಯಿವುಗಳಚೇಷ್ಟಾವಿಶೇಷಂಗಳಿಂದ ಈರೀತಿ ಊಹಿಸುತ್ತೇನೆಂದುನುಡಿದು ಮತ್ತೂಚಿಂತಿಸಿದವನಾಗಿ ಆ ಶ್ರೀರಾಮನು ಆ ಮೃಗಂಗಳಂ ಕಂಡು ಬಾಷ್ಪಂಗಳಿಂದ ತಡೆಯಲ್ಪಟ್ಟ ದೃಷ್ಟಿಯಿಂದ ನೋಡುತಾ ಸೀತೆಯು ಯೆಲ್ಲಿರುವಳೋ ಹೇಳುವವಾಗೆಂದು ನುಡಿಯಲು, ಆ ಸಮಸ್ತವಾದ ಮೃಗಂಗಳು ತ್ವರೆಯಿಂದೆದ್ದು ದಕ್ಷಿಣದಿಕ್ಕಿಗೆ ಯೆದುರಾಗಿ ಅಂತರಿಕ್ಷವಂ ತೋರಿಸುತ್ತಾ ಸೀತಾಪಹಾರವಾದ ಮಾರ್ಗದಲ್ಲಿಯೇ ತಾವುಗಳು ಓಡಿಪೋಗುತಾ ಆ ನರನಾಥನಾದ ಶ್ರೀರಾಮನನ್ನು

ಧಾವಂತೋನಿರೀಕ್ಷಂತೇನರಾಧಿಪಂ ॥೧೮॥ ಯೇನಮಾರ್ಗಂಚಭೂಮಿಂಚನಿರೀಕ್ಷಂತೇಸ್ಮತೇಮೃಗಾಃ । ಪುನಶ್ಚಮಾರ್ಗಮಿಚ್ಛಂತಿಲಕ್ಷ್ಮಣೇನೋಪಲಕ್ಷಿತಾಃ ॥೧೯॥ ತೇಷಾಂವಚನಸರ್ವಸ್ವಂಲಕ್ಷಯಿತ್ವಾಸಚೇಂಗಿತಂ । ಉವಾಚಲಕ್ಷ್ಮಣೋಜ್ಯೇಷ್ಠಂಧೀಮಾನ್ಭ್ರಾತರಮಾರ್ತವತ್ ॥೨೦॥ ಕ್ವಸೀತೇತಿತ್ವಯಾಪೃಷ್ಟಾಯಥೇಮೇಸಹಸೋತ್ಥಿತಾಃ । ದರ್ಶಯಂತಿಕ್ಷಿತಿಂಚೈವದಕ್ಷಿಣಾಂಚದಿಶಂಮೃಗಾಃ । ಸಾಧುಗಚ್ಛಾವಹೇದೇವದಿಶಮೇತಾಂಹಿನೈರೃತಿಂ । ಯದಿಸ್ಯಾದಾಗಮಃಕಶ್ಚಿದಾರ್ಯಾವಾಸಾಥಲಕ್ಷ್ಯತೇ ॥೨೨॥ ಬಾಢಮಿತ್ಯೇವಕಾಕುತ್ಸ್ಥಃಪ್ರಸ್ಥಿತೋದಕ್ಷಿಣಾಂದಿಶಂ । ಲಕ್ಷ್ಮಣಾನುಗತಃಶ್ರೀಮಾನ್ವೀಕ್ಷಮಾಣೋವಸುಂಧರಾಂ ॥೨೩॥ ಏವಂಸಂಭಾಷಮಾಣೌತಾವನ್ಯೋನ್ಯಂಭ್ರಾತರಾವುಭೌ ವಸುಂಧರಾಯಾಂಪತಿತಂಪುಷ್ಪಮಾರ್ಗಮಪಶ್ಯತಾಂ ॥೨೪॥ ತಾಂಪುಷ್ಪವೃಷ್ಟಿಂಪತಿತಾಂದೃಷ್ಟ್ವಾರಾಮೋಮಹೀತಲೇ । ಉವಾಚಲಕ್ಷ್ಮಣಂವೀರೋದುಃಖಿತೋದುಃಖಿತಂವಚಃ ॥೨೫॥ ಅಭಿಜಾನಾಮಿಪುಷ್ಪಾಣಿತಾನೀಮಾನೀಹಲ

---

ಟೀ.. ಸಾವೈಥಿಲೀ-ಆ ಸೀತಾದೇವಿಯು. ಯಾಂದಿಶಂ-ಯಾವ ದಕ್ಷಿಣದಿಕ್ಕನ್ನು, ಅನುಪದ್ಯೇತ-ಅನುಸರಿಸಿಹೋದಳೋ, ತೇನಮಾರ್ಗೇಣ-ಆ ಮಾರ್ಗದಿಂದಲೇ. ಧಾವಂತಃ-ಓಡಿಹೋದವುಗಳಾಗಿ. ನರಾಧಿಪಂ-ಮನುಷ್ಯರಿಗೆ ಅಧಿಪತಿಯಾದ ಶ್ರೀರಾಮನನ್ನು ನಿರೀಕ್ಷಂತೇ-ನೋಡುತ್ತಲಿದ್ದವು ॥೧೮॥ ತೇಮೃಗಾಃ-ಆ ಜಿಂಕೆಗಳು. ಯೇನ-ಯಾವಕಾರಣದಿಂದ ಮಾರ್ಗಂಚ-ಮಾರ್ಗವನ್ನೂ, ಭೂಮಿಂಚ-ನೆಲವನ್ನೂ. ನಿರೀಕ್ಷಂತೇ-ನೋಡುತ್ತಲಿದ್ದವೋ, ಲಕ್ಷ್ಮಣೇನ-ಲಕ್ಷ್ಮಣನೊಡನೆ, ಉಪಲಕ್ಷಿತಾಃ-ಕೂಡಿದವುಗಳಾಗಿ, ಪುನಶ್ಚ-ಮತ್ತೂ, ಮಾರ್ಗಂ-ಮಾರ್ಗವನ್ನು, ಇಚ್ಛಂತಿಸ್ಮ-ಇಚ್ಛೈಸಿದವಷ್ಟೆ ॥೧೯॥ ಧೀಮಾನ್-ಬುದ್ಧಿವಂತನಾದ. ಲಕ್ಷ್ಮಣಃ-ಲಕ್ಷ್ಮಣನು, ತೇಷಾಂ-ಆ ಮೃಗಗಳ, ವಚನಸರ್ವಸ್ವಂ-ಸಾರಭೂತವಾದ. ಇಂಗಿತಂ-ಚೇಷ್ಟಾವಿಶೇಷವನ್ನು, ಲಕ್ಷಯಿತ್ವಾಸ-ಕಂಡನು. ಆರ್ತವತ್-ದುಃಖಿತನಾದ, ಜ್ಯೇಷ್ಠಂಭ್ರಾತರಂ-ಅಣ್ಣನಾದ ಶ್ರೀರಾಮನಂಕುರಿತು. ಉವಾಚ-ಹೇಳಿದನು ॥೨೦॥ ತ್ವಯಾ-ನಿನ್ನಿಂದ. ಸೀತಾ-ಸೀತಾದೇವಿಯು ಕ್ವೇತಿ-ಎಲ್ಲೀ ಎಂದು. ಪೃಷ್ಟಾಃ-ಕೇಳಲ್ಪಟ್ಟವುಗಳಾಗಿ, ಇಮೇಮೃಗಾಃ-ಈ ಮೃಗಗಳು. ಯಥಾ-ಹ್ಯಾಗೆ. ಸಹಸಾ-ಜಾಗ್ರತೆಯಾಗಿ. ಉತ್ಥಿತಾಃ-ಎದ್ದವುಗಳಾಗಿ. ಕ್ಷಿತಿಂಚೈವ-ನೆಲವನ್ನೂ, ದಕ್ಷಿಣಾಂದಿಶಂಚ-ದಕ್ಷಿಣದಿಕ್ಕನ್ನೂ, ದರ್ಶಯಂತಿ-ತೋರಿಸುತ್ತವೋ, ತಥೈವ-ಹಾಗೆಯೇ. ಹೇದೇವ-ಎಲೆ ಸ್ವಾಮಿಯೇ. ಏತಾಂ-ಈ, ನೈರೃತಿಂ-ನಿಋತಿಸಂಬಂಧವಾದ, ದಿಶಂ-ದಕ್ಷಿಣದಿಕ್ಕನ್ನುಕುರಿತು. ಸಾಧು-ಜಾಗ್ರತೆಯಾಗಿ, ಗಚ್ಛಾವಹೇ-ಹೋಗೋಣ ॥೨೧॥ ಕಶ್ಚಿತ್-ಯಾವದಾದ, ಆಗಮಃ-ಉಪಾಯವು, ಸ್ಯಾದ್ಯದಿ-ಇದ್ದಲ್ಲಿ ಆದರೆ. ಅಥ-ಬಳಿಕ, ಆರ್ಯಾ-ಪೂಜ್ಯಳಾದ. ಸಾ-ಆ ಸೀತಾದೇವಿಯಾದರೂ. ಲಕ್ಷ್ಯತೇ-ಕಾಣಲ್ಪಡುತ್ತಾಳೆ, ಕಾಕುತ್ಸ್ಥಃ-ಶ್ರೀರಾಮನು. ಬಾಢಮಿತ್ಯೇವ-ಹಾಗೇಸರಿ ಎಂದು, ದಕ್ಷಿಣಾಂದಿಶಂ-ದಕ್ಷಿಣದಿಕ್ಕನ್ನುಕುರಿತು. ಪ್ರಸ್ಥಿತಃ-ಹೊರಟನು, ಲಕ್ಷ್ಮಣಾನುಗತಃ-ಲಕ್ಷ್ಮಣನಿಂದ ಅನುಸರಿಸಲ್ಪಟ್ಟವನಾಗಿ, ಶ್ರೀಮಾನ್-ಧೈರ್ಯಸಂಪನ್ನನಾದ ಶ್ರೀರಾಮನು, ವಸುಂಧರಾಂ-ನೆಲವನ್ನು, ವೀಕ್ಷಮಾಣಃ-ನೋಡುತ್ತಲಿದ್ದನು ॥೨೩॥ ಏವಂ-ಈಪರಿಯಾಗಿ. ಅನ್ಯೋನ್ಯಂ-ಪರಸ್ಪರವಾಗಿ. ಸಂಭಾಷಮಾಣೌ-ಮಾತನಾಡುತ್ತಿರುವ, ಭ್ರಾತರೌ-ಅಣ್ಣತಮ್ಮಂದಿರಾದ, ಉಭೌ-ಇಬ್ಬರಾದ. ತೌ-ಆ ರಾಮಲಕ್ಷ್ಮಣರು, ವಸುಂಧರಾಯಾಂ-ಭೂಮಿಯಲ್ಲಿ, ಪತಿತಂ-ಬಿದ್ದಿರುವ, ಪುಷ್ಪಮಾರ್ಗಂ-ಹುವ್ವುಗಳಿಂದ ಕೂಡಿಕೊಂಡಿರುವ ಮಾರ್ಗವನ್ನು. ಅಪಶ್ಯತಾಂ-ಕಂಡರು ॥೨೪॥ ವೀರಃ-ಶೂರನಾದ. ರಾಮಃ-ಶ್ರೀರಾಮನು, ಮಹೀತಲೇ-ನೆಲದಲ್ಲಿ. ಪತಿತಾಂ-ಬಿದ್ದಿರುವ, ತಾಂಪುಷ್ಪವೃಷ್ಟಿಂ-ಆ ಹುವ್ವುಗಳ ವರ್ಷವನ್ನು, ದೃಷ್ಟ್ವಾ-ಕಂಡು, ದುಃಖಿತಃ-ದುಃಖಗೊಂಡವನಾಗಿ, ದುಃಖಿತಂ-ವ್ಯಸನಗೊಂಡಿರುವ, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ವಚಃ-ಮಾತನ್ನು, ಉವಾಚ-ಹೇಳಿದನು ॥೨೫॥

---

ನೋಡುತಿರ್ದವು ॥೧೮॥ ಮತ್ತು ಆ ಮೃಗಂಗಳು ಮಾರ್ಗವನ್ನೂ ಭೂಮಿಯನ್ನೂ ಸಹ ನೋಡುತ್ತಾ ಲಕ್ಷ್ಮಣನಿಂ ದೊಡಗೂಡಿ ಪುನಹಾ ಮಾರ್ಗವನ್ನೇ ತೋರಿಸಲೂ ಮಹಾ ತಿಳುವಳಿಕೆಯುಳ್ಳ ಲಕ್ಷ್ಮಣನು ಆ ಮೃಗಂಗಳ ಚೇಷ್ಟಾವಿಶೇಷಂಗಳಂ ಕಂಡು ಅತಿದುಃಖಿತನಾದ ಅಣ್ಣನಂ ಕುರಿತಿಂತೆಂದನು ॥೨೦॥ ಎಲೈ ಮಹಾರಾಜನೇ! ನೀನು ಜನಕರಾಜನಂದಿನಿಯಾದ ಸೀತಾದೇವಿಯು ಯೆಲ್ಲಿರುವಳೋ ಪೇಳುವವಾಗೆಂದು ನಿರೂಪಿಸಲೂ. ಈ ಮೃಗಂಗಳು ತ್ವರೆಯಿಂ ಕೂಡಿದವುಗಳಾಗಿ ನೆಲವನ್ನೂ ದಕ್ಷಿಣದಿಕ್ಕಿನನ್ನೂ ಸಹ ತೋರಿಸುತಲಿರುವೆ ಯಾದಕಾರಣ ನಾವು ಈರ್ವರು ನೈಋತ್ಯ ದಿಕ್ಕಂ ಕುರಿತುಪೋಗೋಣ, ಇದೇ ಉಪಾಯವುಸರಿಯಾಗಿರುವದು

ಪೂಜ್ಯಳಾದ ಸೀತಾದೇವಿಯು ಕಾಣಲ್ಪಡುತ್ತಾಳೆ, ಎಂದು ನುಡಿಯಲೂ, ಕಕುತ್ಸ್ಥವಂಶೋತ್ಪನ್ನನಾದಶ್ರೀ, ರಾಮನು ಹಾಗೇಸರಿ, ಎಂದು ಒಪ್ಪಿಕೊಂಡು ಪ್ರಯಾಣವಂಗೈದವನಾಗಿ ಲಕ್ಷ್ಮಣನೊಡನೆ ಭೂಮಿಯಂ ನೋಡುತಿರ್ದನು ॥೨೩॥ ಈರೀತಿಯಲ್ಲಿ ಅನ್ಯೋನ್ಯವಾಗಿ ಮಾತನಾಡುತ್ತಿರುವ ಆ ರಾಮಲಕ್ಷ್ಮಣರೀರ್ವರೂ ನೆಲದಲ್ಲಿ ಬಿದ್ದಿರುವ ಪೂ ಮಳೆಯಿಂದ ಯುಕ್ತವಾದ ಮಾರ್ಗವಂ ಕಂಡವರಾದರು ॥೨೪॥ ಅನಂತರದಲ್ಲಿ ಶ್ರೀರಾಮನು ಧರಾತಲದಲ್ಲಿ ಬಿದ್ದಿರುವ ಆ ಪೂ ಮಳೆಯುಂ ಕಂಡು ಬಹು ದುಃಖವನ್ನೈದಿದವನಾಗಿ ಲಕ್ಷ್ಮಣನಂ ಕಂಡಿಂತೆಂದನು ॥೨೫॥ ಎಲೋ ಎಲೋ ತಮ್ಮನಾದ ಲಕ್ಷ್ಮಣನೇ! ಈ ವನದಲ್ಲಿ ಸೀತಾದೇವಿಗೆ ನನ್ನಿಂದ ಕೊಡಲ್ಪಟ್ಟ ಪುಷ್ಪಂಗಳ

ಲಕ್ಷ್ಮಣ । ಪಿನದ್ಧಾನೀಹವೈದೇಹ್ಯಾಮಯಾದತ್ತಾನಿಕಾನನೇ ॥೨೬॥ ಮನ್ಯೇಸೂರ್ಯಶ್ಚವಾಯುಶ್ಚಮೇದಿನೀಚಯಶಸ್ವಿನೀ । ಅಭಿರಕ್ಷಂತಿಪುಷ್ಪಾಣಿಪ್ರಕುರ್ವಂತೋಮಮಪ್ರಿಯಂ ॥೨೭॥ ಏವಮುಕ್ತ್ವಾಮಹಾಬಾಹುಂಲಕ್ಷ್ಮಣಂಪುರುಷರ್ಷಭಃ । ಉವಾಚರಾಮೋಧರ್ಮಾತ್ಮಾಗಿರಿಂಪ್ರಸ್ರವಣಾಕುಲಂ । ೨೮॥ ಕಚ್ಚಿತ್‍ಕ್ಷಿತಿಭೃತಾಂನಾಥದೃಷ್ಟಾಸರ್ವಾಂಗಸುಂದರೀ । ರಾಮಾರಮ್ಯೇವನೋದ್ದೇಶೇಮಯಾವಿರಹಿತಾತ್ವಯಾ ॥೨೯॥ ಕ್ರುದ್ಧೋಬ್ರವೀದ್ಗಿರಿಂತತ್ರಸಿಂಹಃಕ್ಷುದ್ರಮೃಗಂಯಥಾ ॥೩೦॥ ತಾಂಹೇಮವರ್ಣಾಂಹೇಮಾಭಾಂಸೀತಾಂದರ್ಶಯಪರ್ವತ । ಯಾವತ್ಸಾನೂನಿಸರ್ವಾಣಿನತೇವಿಧ್ವಂಸಯಾಮ್ಯಹಂ ॥೩೧॥ ಏವಮುಕ್ತಸ್ತುರಾಮೇಣಪರ್ವತೋಮೈಥಿಲೀಂಪ್ರತಿ । ಶಂಸನ್ನಿವತತಸ್ಸೀತಾಂನಾದರ್ಶಯತರಾಘವೇ ॥೩೨॥ ತತೋದಾಶರಥೀರಾಮಉವಾಚಚಶಿಲೋಚ್ಚಯಂ ॥೩೩॥ ಮಮಬಾಣಾಗ್ನಿನಿ

---

ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ಇಹಕಾನನೇ-ಈ ವನದಲ್ಲಿ, ಮಯಾ-ನನ್ನಿಂದ, ದತ್ತಾನಿ-ಕೊಡಲ್ಪಟ್ಟ, ವೈದೇಹ್ಯಾ-ಸೀತಾದೇವಿಯಿಂದ, ಇಹ-ಈಗಲೇ, ಪಿನದ್ಧಾನಿ-ಕೇಶಪಾಶದಲ್ಲಿ ಮುಡಿದುಕೊಳ್ಳಲ್ಪಟ್ಟ, ಇಮಾನಿಪುಷ್ಪಾಣಿ-ಈ ಪುಷ್ಪಗಳು, ತಾನೀತಿ-ಅವುಗಳೇ ಎಂದು, ಅಭಿಜಾನಾಮಿ-ತಿಳಿಯುತ್ತೇನೆ ॥೨೬॥ ಸೂರ್ಯಶ್ಚ-ಸೂರ್ಯನು, ವಾಯುಶ್ಚ-ಗಾಳಿಯು, ಯಶಸ್ವಿನೀ-ಕೀರ್ತಿವಂತಳಾದ, ಮೇದಿನೀಚ-ಭೂಮಿಯು, ಮಮ-ನನಗೆ, ಪ್ರಿಯಂ-ಇಷ್ಟವನ್ನು. ಪ್ರಕುರ್ವಂತಃ-ಮಾಡುತ್ತಿರುವವಾಗಿ. ಪುಷ್ಪಾಣಿ-ಹುವ್ವುಗಳನ್ನು, ಅಭಿರಕ್ಷಂತಿ-ಸಂರಕ್ಷಿಸಿಕೊಂಡಿರುವರೆ, ಇತಿಮನ್ಯೇ-ಇಂತೆಂದು ತಿಳಿಯುತ್ತೇನೆ ॥೨೭॥ ಪುರುಷರ್ಷಭಃ-ಪುರುಷಶ್ರೇಷ್ಠನಾದ, ಧರ್ಮಾತ್ಮಾ-ಧರ್ಮದಲ್ಲೇ ಮನಸ್ಸುಳ್ಳ, ರಾಮಃ-ಶ್ರೀರಾಮನು. ಮಹಾಬಾಹುಂ-ಮಹಾಭುಜಗಳುಳ್ಳ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು. ಏವಮುಕ್ತ್ವಾ-ಈಪರಿಯಾಗಿ ಪೇಳಿ, ಪ್ರಸ್ರವಣಾಕುಲಂ-ಪ್ರಸ್ರವಣ-ಬೆಟ್ಟದನದಿಗಳಿಂದ, ಆಕುಲಂ-ತುಂಬಿರುವ, ಗಿರಿಂ-ಬೆಟ್ಟವನ್ನು ಕುರಿತು ಉವಾಚ-ಪೇಳಿದನು ॥೨೮॥ ಹೇಕ್ಷಿತಿಭೃತಾಂನಾಥ-ಎಲೈ ಪರ್ವತಗಳೊಳಗೆ ಶ್ರೇಷ್ಠನೇ, ರಮ್ಯೇ-ಮನೋಹರವಾದ. ವನೋದ್ದೇಶೇ-ವನಪ್ರದೇಶದಲ್ಲಿ, ಮಯಾ-ನನ್ನಿಂದ. ವಿರಹಿತಾ-ವಿರಹಿತಳಾದ, ಸರ್ವಾಂಗಸುಂದರೀ-ಸರ್ವಾವಯವಗಳಲ್ಲಿಯೂ ಸೌಂದರ್ಯವುಳ್ಳ, ರಾಮಾ-ರಮಣಿಯಾದ ಸೀತಾದೇವಿಯು, ತ್ವಯಾ-ನಿನ್ನಿಂದ, ದೃಷ್ಟಾಕಚ್ಚಿತ್-ನೋಡಲ್ಪಟ್ಟಳೇ ಏನು, ಹೇಕ್ಷಿತಿಭೃತಾಂನಾಥ-ರಾಜರೊಳಗೆ ಶ್ರೇಷ್ಠನಾದ ರಾಮನೇ, ರಮ್ಯೇ-ಇಂಪಾಗಿರುವ, ವನೋದ್ದೇಶೇ-ವನಪ್ರದೇಶದಲ್ಲಿ, ತ್ವಯಾವಿರಹಿತಾ-ನಿನ್ನಿಂದ ವಿರಹಿತಳಾದ. ಸರ್ವಾಂಗಸುಂದರೀಂ ಸರ್ವಾವಯವಗಳಲ್ಲಿ ಸುಂದರಳಾಗಿರುವ, ರಾಮಾ-ಸೀತಾದೇವಿಯು, ಮಯಾ-ನನ್ನಿಂದ, ದೃಷ್ಟೇತಿಕಚ್ಚಿತ್-ನೋಡಲ್ಪಟ್ಟವಳೆಂಬುವದು ಸಮ್ಮತವೇಸರಿ ಎಂಬ ಧ್ವನ್ಯರ್ಥವು ಸೂಚಿತವಾಗುತ್ತದೆ ॥೨೯॥ ಕ್ರುದ್ಧಃ-ಕೋಪಿಷ್ಠನಾಗಿ, ತತ್ರ-ಆ ವನದಲ್ಲಿ, ಸಿಂಹಃ-ಸಿಂಹವು. ಕ್ಷುದ್ರಮೃಗಂಯಥಾ-ನೀಚಮೃಗವನ್ನಂತೆ, ಗಿರಿಂ-ಬೆಟ್ಟವಂಕುರಿತು, ಅಬ್ರವೀತ್-ನುಡಿದನು ॥೩೦॥ ಹೇಪರ್ವತ-ಎಲೈ ಬೆಟ್ಟವೇ. ಅಹಂ-ನಾನು, ಯಾವತ್-ಎಷ್ಟರವಳಗಾಗಿ, ತೇ-ನಿನ್ನ. ಸರ್ವಾಣಿ-ಸಮಸ್ತಗಳಾದ. ಸಾನೂನಿ-ಜರಿಗಳನ್ನು, ವಿಧ್ವಂಸಯಾಮಿ-ಧ್ವಂಸಮಾಡುತ್ತೇನೆಯೋ, ತಾವತ್-ಅಷ್ಟರವಳಗಾಗಿ, ಹೇಮವರ್ಣಾಂ-ಬಂಗಾರಪ್ರತಿಮೆಗೆ ಸಮಾನಳಾದ, ಹೇಮಾಭಾಂ-ಸುವರ್ಣದಂತೆ ಕಾಂತಿಯುಳ್ಳ, ತಾಂಸೀತಾಂ-ಆ ಸೀತಾದೇವಿಯನ್ನು, ದರ್ಶಯ-ತೋರಿಸು ॥೩೧॥ ರಾಮೇಣ-ಶ್ರೀರಾಮನಿಂದ, ಪರ್ವತಃ-ಬೆಟ್ಟವು, ಮೈಥಿಲೀಂಪ್ರತಿ-ಸೀತಾದೇವಿಯನ್ನುದ್ದೇಶಿಸಿ, ಏವಂ-ಈಪರಿಯಾಗಿ, ಉಕ್ತಃ-ಪೇಳಲ್ಪಟ್ಟದ್ದಾಗಿ, ಶಂಸನ್ನಿವ-ಹೊಗಳುತ್ತಿದೆಯೋ ಎಂಬಂತಿರುವದಾಗಿ, ತತಃ-ಬಳಿಕ, ರಾಘವೇ-ಶ್ರೀರಾಮನಿಗೋಸುಗ. ಸೀತಾಂ-ಸೀತಾದೇವಿಯನ್ನು, ನಾದರ್ಶಯತ-ತೋರಿಸದೇಹೋಯಿತು ॥೩೨॥ ತತಃ-ಬಳಿಕ, ದಾಶರಥಿಃ-ದಶರಥಕುಮಾರನಾದ, ರಾಮಃ-ಶ್ರೀರಾಮನು, ಶಿಲೋಚ್ಚಯಂ-ಬೆಟ್ಟವನ್ನು ಕುರಿತು, ಮಮ-

---

ನ್ನು ಆಕೆಯು ತನ್ನ ಕೇಶಪಾಶದಲ್ಲಿ ಮುಡಿದುಕೊಂಡಿದ್ದಳು, ಇವುಗಳು ಆ ಪುಷ್ಪಂಗಳೇಸರಿ, ಎಂದು ಭಾವಿಸುತ್ತೇನೆ॥ ಸೂರ್ಯನು, ವಾಯುವು, ಭೂದೇವಿಯು, ಇವುಗಳು ನನಗೆ ಪ್ರಿಯವಂಗೈಯ್ಯ ಲಿಚ್ಛಿಸುವವುಗಳಾಗಿ ಇವುಗಳನ್ನು ರಕ್ಷಿಸಿಕೊಂಡಿರಬಹುದೆಂದು ಮಹಾ ಬಲ ಪರಾಕ್ರಮಶಾಲಿಯಾದ ಶ್ರೀರಾಮನು, ಲಕ್ಷ್ಮಣನಿಗೆಪೇಳಿ, ಬಳಿಕ ಆ ಪರ್ವತವಂ ಕುರಿತಿಂತೆಂದನು ।೨೮। ಎಲೈ ಪರ್ವತೋತ್ತಮನೇ! ಮನೋಹರವಾದ ಈ ವನಪ್ರದೇಶದಲ್ಲಿ, ನನ್ನಿಂದರಹಿತಳಾದ ಮಹಾ ಸೌಂದರ್ಯಶಾಲಿಯಾದ ಸೀತಾದೇವಿಯು, ನಿನ್ನಿಂದ ನೋಡಲ್ಪಟ್ಟಳೇ ಯೇನು? (ಧ್ವನ್ಯರ್ಥಾಭಿಪ್ರಾಯವೇನಂದರೇ,—ಎಲೈ ರಾಜೋತ್ತಮನಾದ ಶ್ರೀರಾಮನೇ! ಮನಸ್ಸಿಗಿಂಪಾಗಿರುವವನ ಪ್ರದೇಶದಲ್ಲಿ ನಿನ್ನಿಂದ ವಿರಹವನ್ನೈದಿದ ಸೀತಾದೇವಿಯು ನನ್ನಿಂದ ನೋಡಲ್ಪಟ್ಟಳೆಂಬದು ಸಮ್ಮತವೇಸರಿ ಎಂದು ಅಭಿಪ್ರಾಯವು) ।೨೯। ಈ ಪ್ರಕಾರವಾಗಿ ಶ್ರೀರಾಮನು, ಸೌಮ್ಯವಾಗಿ ಕೇಳಿ ಮತ್ತು ಕುಪಿತನಾಗಿ, ಸಿಂಹವು ಕ್ಷುದ್ರಮೃಗವನ್ನು ಹೆದರಿಸುವಂತೆ ಆ ಪರ್ವತವನ್ನು ಹೆದರಿಸುತ್ತಾ ನುಡಿದನು ॥೩೦॥ ಎಲೈ ಪರ್ವತವೇ! ನಾನು, ನಿನ್ನ ಜರಿಗಳನ್ನೆಲ್ಲಾ ಧ್ವಂಸವಂ ಗೈಯ್ಯುವದರೊಳಗಾಗಿ ಆಸೀತಾದೇವಿಯನ್ನು ತೋರಿಸೆಂದು ನುಡಿಯಲೂ, ಆ ಬೆಟ್ಟವು ಈರೀತಿಯಾಗಿ ಪೇಳಲ್ಪಟ್ಟದ್ದಾಗಿ ಸೀತಾದೇವಿಯ ವಿಷಯವನ್ನು ಪೇಳುವದೋ ಎನೋ, ಎಂಬಂತಿರವದಾಗಿ ತೋರುತ್ತಿತ್ತೆ ಹೊರತು ಆಕೆಯನ್ನು ಮಾತ್ರ ತೋರಿಸಲಿಲ್ಲಾ ।೩೨। ಅನಂತರದೋಳ್ ಶ್ರೀರಾಮನು, ಆ ಪರ್ವ

ರ್ದಗ್ಧೋಭಸ್ಮೀಭೂತೋಭವಿಷ್ಯಸಿ । ಅಸೇವ್ಯಸ್ಸತತಂಚೈವನಿಸ್ತೃಣದ್ರುಮಪಲ್ಲವಃ ।೩೩॥ ಇಮಾಂವಾಸರಿತಂಚಾದ್ಯಶೋಷಯಿಷ್ಯಾಮಿಲಕ್ಷ್ಮಣ ॥ ಯದಿನಾಖ್ಯಾತಿಮೇಸೀತಾಮಾರ್ಯಾಂಚಂದ್ರನಿಭಾನನಾಂ ।೩೪॥ ಏವಂಸರುಷಿತೋರಾಮೋದಿಧಕ್ಷನ್ನಿವಚಕ್ಷುಷಾ । ದದರ್ಶಭೂಮೌನಿಷ್ಕ್ರಾಂತಂರಾಕ್ಷಸಸ್ಯಪದಂಮಹತ್ । ತ್ರಸ್ತಾಯಾರಾಮಕಾಂಕ್ಷಿಣ್ಯಾಃಪ್ರಧಾವಂತ್ಯಾಇತಸ್ತತಃ ॥ ರಾಕ್ಷಸೇನಾನುವೃತ್ತಾಯಾಮೈಥಿಲ್ಯಾಶ್ಚಪದಾನ್ಯಥ ।೩೬॥ ಸಸಮೀಕ್ಷ್ಯಪರಿಕ್ರಾಂತಂಸೀತಾಯಾರಾಕ್ಷಸಸ್ಯಚ ॥ ಭಗ್ನಂಧನುಶ್ಚತೂಣೀಚವಿಕೀರ್ಣಂಬಹುಧಾರಥಂ ।ಸಂಭ್ರಾಂತಹೃದಯೋರಾಮಶ್ಶಶಂಸಭ್ರಾತರಂಪ್ರಿಯಂ ।೩೮। ಪಶ್ಯಲಕ್ಷ್ಮಣವೈದೇಹ್ಯಾಶ್ಶೀರ್ಣಾಃಕನಕಬಿಂದವಃ।ಭೂಷಣಾನಾಂಹಿಸೌಮಿತ್ರೇಮಾಲ್ಯಾನಿವಿವಿಧಾನಿಚ।೩೯।ತಪ್ತಬಿಂದುನಿಕಾಶೈಶ್ಚಚಿತ್ರೈಃಕ್ಷತಜಬಿಂದುಭಿಃ। ಆವೃತಂಪಶ್ಯಸೌಮಿತ್ರೇಸರ್ವತೋಧರಣೀತಲಂ।೪೦।ಮನ್ಯೇಲಕ್ಷ್ಮಣವೈದೇಹೀರಾಕ್ಷಸೈಃಕಾಮರೂಪಿಭಿಃ। ಭಿತ್ವಾಭಿತ್ವಾವಿಭಕ್ತಾವಾಭಕ್ಷಿತಾವಾಭವಿಷ್ಯ

---

ನನ್ನ. ಬಾಣಾಗ್ನಿನಿರ್ದಗ್ಧಃ-ಬಾಣಗಳಲ್ಲಿ ಹುಟ್ಟಿದ ಅಗ್ನಿಯಿಂದ ದಹಿಸಲ್ಪಟ್ಟದ್ದಾಗಿ. ಸತತಂ-ನಿರಂತರವೂ, ಅಸೇವ್ಯಃ-ಯಾರಿಂದಲೂ ಅಗಮ್ಯವಾಗಿ, ನಿಸ್ತೃಣದ್ರುಮಪಲ್ಲವಃ-ಹೋದಂಥಾ ಹುಲ್ಲುಗಳೂ ಗಿಡಗಳೂ ಚಿಗುರುಗಳೂ ಉಳ್ಳದ್ದಾಗಿ, ಭಸ್ಮೀಭೂತಃ-ಬೂದಿಯಾಗಿ, ಭವಿಷ್ಯಸಿ-ಆಗುವಿ, ಇತಿ-ಇಂತೆಂದು, ಉವಾಚ-ಹೇಳಿದನು ॥33॥ ॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಚಂದ್ರನಿಭಾನನಾಂ-ಚಂದಿರನಿಗೆ ಸಮಾನವಾದ ಮುಖವುಳ್ಳ, ಆರ್ಯಾಂ-ಪೂಜ್ಯಳಾದ, ಸೀತಾಂ-ಸೀತಾದೇವಿಯನ್ನು, ಮೇ-ಯೆನಗೆ, ನಖ್ಯಾತಿಯದಿ-ಹೇಳದಿದ್ದರೆ, ಅದ್ಯ-ಈಗಲೇ, ಇಮಾಂಸರಿತಂವಾ-ಈ ಹೊಳೆಯನ್ನಾದರೂ, ಶೋಷಯಿಷ್ಯಾಮಿ-ಶೋಷಿಸುವೆನು ॥34॥ ॥ ಏವಂ-ಈಪರಿಯಾಗಿ, ಸರುಷಿತಃ-ಕೋಪಗೊಂಡವನಾದ, ರಾಮಃ-ಶ್ರೀರಾಮನು, ಚಕ್ಷುಷಾ-ಕಣ್ಣಿನಿಂದ, ದಿಧಕ್ಷನ್ನಿವ-ದಹಿಸುವನೋ ಎಂಬಂತಿರುವನಾಗಿ. ಭೂಮೌ-ನೆಲದಲ್ಲಿ, ನಿಷ್ಕ್ರಾಂತಂ-ಅಭಿವ್ಯಕ್ತವಾದ, ರಾಕ್ಷಸಸ್ಯ-ರಕ್ಕಸನ, ಮಹತ್-ದೊಡ್ಡದಾದ, ಪದಂ-ಪಾದವಿನ್ಯಾಸವನ್ನು, ದದರ್ಶ-ಕಂಡನು ॥೩೫॥ ॥ ಅಥ-ಬಳಿಕ, ತ್ರಸ್ತಾಯಾಃ-ಭಯಗೊಂಡ, ರಾಮಕಾಂಕ್ಷಿಣ್ಯಾಃ-ಶ್ರೀರಾಮನಂ ನಿರೀಕ್ಷಿಸುತ್ತಿರುವ, ಇತಸ್ತತಃ-ಇಲ್ಲಿ ಅಲ್ಲಿ, ಪ್ರಧಾವಂತ್ಯಾಃ-ಓಡಿಹೋಗುತ್ತಿರುವ, ರಾಕ್ಷಸೇನ-ರಾಕ್ಷಸನಿಂದ, ಅನುವೃತ್ತಾಯಾಃ-ಅನುಸರಿಸಲ್ಪಟ್ಟ, ಮೈಥಿಲ್ಯಾಃ-ಸೀತಾದೇವಿಯ, ಪದಾನಿ-ಪಾದವಿನ್ಯಾಸವನ್ನು, ದದರ್ಶ-ಕಂಡನು ॥೩೬॥ ॥ ಸಃ-ಆ ಶ್ರೀರಾಮನು, ಸೀತಾಯಾಃ-ಸೀತಾದೇವಿಯ, ರಾಕ್ಷಸಸ್ಯಚ-ರಕ್ಕಸನ, ಪದನ್ಯಾಸಂಚ-ಪಾದವಿನ್ಯಾಸಗಳನ್ನು, ಭಗ್ನಂ-ಮುರಿದುಹೋದ, ಧನುಶ್ಚ-ಬಿಲ್ಲುನನ್ನು, ತೂಣೀಚ-ಬತ್ತಳಿಕೆಗಳನ್ನು, ಬಹುಧಾ-ಬಹಳವಾಗಿ, ವಿಕೀರ್ಣಂ-ಮುರಿದುಹೋದ. ರಥಂ-ತೇರನ್ನು. ಸಮೀಕ್ಷ್ಯ-ಕಂಡು, ಸಂಭ್ರಾಂತಹೃದಯಃ-ಗಾಬರಿಬಿದ್ದ ಮನಸ್ಸುಳ್ಳವನಾಗಿ. ಪ್ರಿಯಂ-ಹಿತಕರನಾದ, ಭ್ರಾತರಂ-ತಮ್ಮನಾದ ಲಕ್ಷ್ಮಣನಂಕುರಿತು, ಶಶಂಸ-ಹೇಳಿದನು ॥೩೮॥ ॥ ಹೇಲಕ್ಷ್ಮಣ-ಎಲೆ ಲಕ್ಷ್ಮಣನೇ, ವೈದೇಹ್ಯಾಃ-ಸೀತಾದೇವಿಯ, ಭೂಷಣಾನಾಂ-ಒಡವೆಗಳ, ಕನಕಬಿಂದವಃ-ಬಂಗಾರದ ಲೇಶಗಳು, ಶೀರ್ಣಾಃ-ಎರಚಿಹೋಗಿವೆ. ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ವಿವಿಧಾನಿ-ನಾನಾಬಗೆಗಳಾದ. ಮಾಲ್ಯಾನಿ-ಹುವ್ವಿನಸರಗಳನ್ನು, ಪಶ್ಯ-ನೋಡು ॥೩೯॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ. ತಪ್ತಬಿಂದುನಿಕಾಶೈಃ-ಬಂಗಾರದ ಹನಿಗಳಿಗೆ ಸಮಾನವಾದ, ಚಿತ್ರೈಃ-ಚಿತ್ರವರ್ಣಗಳಾದ. ಕ್ಷತಜಬಿಂದುಭಿಃ-ರಕ್ತದ ಹನಿಗಳಿಂದ, ಆವೃತಂ-ತುಂಬಿರುವ, ಧರಣೀತಲಂ-ಭೂಪ್ರದೇಶವ, ಸರ್ವತಃ-ಎಲ್ಲಾಕಡೆಯಲ್ಲಿ, ಪಶ್ಯ-ನೋಡು ॥೪೦॥ ಹೇಲಕ್ಷ್ಮಣ-ಎಲೆ ಲಕ್ಷ್ಮಣನೇ, ವೈದೇಹೀ-ಸೀತಾದೇವಿಯು, ಕಾಮರೂಪಿಭಿಃ-

---

ತವಂ ಕುರಿತು, ಎಲೈ ಪರ್ವತವೇ! ನೀನು ಸೀತೆಯನ್ನು ತೋರಿಸಲಿಲ್ಲವಾದಕಾರಣ ಯನ್ನ ಬಾಣಾಗ್ನಿಯಿಂದ ದಹಿಸಲ್ಪಟ್ಟದ್ದಾಗಿ ಯಾರಿಗೂ ಸೇವಿಸಲಸಾಧ್ಯವಾಗಿಯೂ, ಗಮಿಸಲಶಕ್ಯವಾಗಿಯೂ, ಗತವಾದ ಹುಲ್ಲು, ಚಿಗುರು, ಗಿಡಮೊದಲಾಗಿ ಉಳ್ಳಂಥಾದ್ದಾಗಿ ಭಸ್ಮೀಭೂತವಂ ನೈದುವೆ ಎಂದು ನುಡಿದ ಬಳಿಕ, ಲಕ್ಷ್ಮಣನಂ ಕುರಿತಿಂತೆಂದನು ।೩೩॥ ಎಲೈ ಲಕ್ಷ್ಮಣನೇ! ಚಂದಿರನಿಗೆ ಸದೃಶವಾದ ಮುಖವುಳ್ಳ ಆ ಜನಕರಾಜನಂದಿನಿಯನ್ನು ಯನಗೆ ಹೇಳದಿದ್ದರೆ, ಈಗಲೇ ಈ ನದಿಯನ್ನು ಶೋಷಿಸುವೆನೆಂದು ಕಡುಕೋಪಮುಳ್ಳವನಾಗಿ ತನ್ನ ದೃಷ್ಟಿಪ್ರಸರಣ ಮಾತ್ರದಿಂದಲೇ ದಹಿಸುವನೋ ಏನೋ ಎಂಬಂತಿರುವವನಾಗಿ ನೋಡುತ್ತಿರಲು, ನೆಲದಲ್ಲಿ ಸ್ಪಷ್ಟವಾಗಿ ಕಾಣುವ ರಾಕ್ಷಸನ ಹೆಜ್ಜೆಗಳಂ ಕಂಡನು ।೩೫॥ ಅನಂತರದಲ್ಲಿ ಶ್ರೀರಾಮನು, ಭೀತಿಗೊಂಡವಳಾಗಿ ತನ್ನನ್ನೇ ನಿರೀಕ್ಷಿಸುತ್ತಾ ಅಲ್ಲಿಲ್ಲಿ ಓಡ್ಯಾಡುವ ಮತ್ತೂ ರಾಕ್ಷಸನಿಂದ ಅನುಸರಿಸಲ್ಪಟ್ಟ ಸೀತಾದೇವಿಯ ಪಾದನ್ಯಾಸಗಳನ್ನೂ, ಆ ರಾಕ್ಷಸನಹೆಜ್ಜೆಗಳನ್ನೂ, ಭಂಗವನ್ನೈದಿದ ಕೋದಂಡವನ್ನೂ, ಸರಳುಬತ್ತಳಿಕೆಗಳನ್ನೂ, ಮತ್ತೂ ತುಂಡುತುಂಡುಗಳಾಗಿ ಬಿದ್ದಿರುವ ತೇರನ್ನೂ ಸಹಾ ಕಂಡು ಭ್ರಾಂತಿಯನ್ನೈದಿದವನಾಗಿ ತಮ್ಮನಂ ಕುರಿತಿಂತೆಂದನು ।೩೮। ಎಲೈ ಲಕ್ಷ್ಮಣನೇ! ಸೀತಾದೇವಿಯ ತೊಡಿವೆಗಳಲ್ಲಿರುವ ಸುವರ್ಣದ ಚೂರುಗಳು ಶೀರ್ಣಂಗಳಾಗಿವೆ; ಮತ್ತೂ ವಿಧವಿಧವಾಗಿ ಬಿದ್ದಿರುವ ಪುಷ್ಪಂಗಳಂ ನೋಡುವವನಾಗು ।೩೯। ಮತ್ತೂ ಈ ಪ್ರದೇಶವು ಅಪರಂಜೀ ವಿಕಾರವಾದ ವಿಚಿತ್ರವಾದಬಣ್ಣವುಳ್ಳ ರಕ್ತದಿಂದ ವ್ಯಾಪ್ತವಾದದ್ದಾಗಿ ಯಲ್ಲೆಲ್ಲಿಯೂ ಕಾಣು

ತಿ ॥೪೧॥ ತಸ್ಯಾನಿಮಿತ್ತಂ ವೈದೇಹ್ಯಾ ದ್ವಯೋರ್ವಿವದಮಾನಯೋಃ । ಬಭೂವ ಯುದ್ಧಂ ಸೌಮಿತ್ರೇ ಘೋರಂ ರಾಕ್ಷಸಯೋರಿಹ ॥೪೨॥ ಮುಕ್ತಾಮಣಿಮಯಂ ಚೇದಂ ತಪನೀಯವಿಭೂಷಿತಂ । ಧರಣ್ಯಾಂ ಪತಿತಂ ಸೌಮ್ಯ ಕಸ್ಯ ಭಗ್ನಂ ಮಹದ್ಧನುಃ ॥೪೩॥ ತರುಣಾದಿತ್ಯಸಂಕಾಶಂ ವೈಡೂರ್ಯಗುಳಿಕಾಚಿತಂ । ವಿಶೀರ್ಣಂ ಪತಿತಂ ಭೂಮೌ ಕವಚಂ ಕಸ್ಯ ಕಾಂಚನಂ ॥೪೪॥ ಛತ್ರಂ ಶತಶಲಾಕಂ ಚ ದಿವ್ಯಮಾಲ್ಯೋಪಶೋಭಿತಂ । ಭಗ್ನದಂಡಮಿದಂ ಕಸ್ಯ ಭೂಮೌ ಸಮ್ಯಙ್ನಿಪಾತಿತಂ ॥೪೫॥ ಕಾಂಚನೋರಶ್ಛದಾಶ್ಚೇಮೇ ಪಿಶಾಚವದನಾಃ ಖರಾಃ । ಭೀಮರೂಪಾ ಮಹಾಕಾಯಾಃ ಕಸ್ಯ ವಾ ನಿಹತಾ ರಣೇ ॥೪೬॥ ದೀಪ್ತಪಾವಕಸಂಕಾಶೋ ದ್ಯುತಿಮಾನ್ ಸಮರಧ್ವಜಃ । ಅಪವಿದ್ಧಶ್ಚ ಭಗ್ನಶ್ಚ ಕಸ್ಯ ಸಾಂಗ್ರಾಮಿಕೋ ರಥಃ ॥೪೭॥ ರಥಾಕ್ಷಮಾತ್ರಾ ವಿಶಿಖಾಸ್ತಪನೀಯವಿಭೂಷಣಾಃ । ಕಸ್ಯೇಮೇಽಭಿಹತಾ ಬಾಣಾಃ ಪ್ರಕೀರ್ಣಾ ಘೋರಕರ್ಮಣಃ

---

ಕಾಮಚಾರಿಗಳಾದ, ರಾಕ್ಷಸೈಃ-ರಕ್ಕಸರಿಂದ, ಭಿತ್ವಾಭಿತ್ವಾ-ಭೇದಿಸಿ ಭೇದಿಸಿ, ವಿಭಕ್ತಾ-ತುಂಡುತುಂಡಾಗಿ ಮಾಡಲ್ಪಟ್ಟವಳು, ಭಕ್ಷಿತಾವಾ-ತಿನ್ನಲ್ಪಟ್ಟವಳು. ಭವಿಷ್ಯತಿ-ಆಗುವಳು ॥೪೧॥ ಹೇ ಸೌಮಿತ್ರೇ-ಎಲೈ ಲಕ್ಷ್ಮಣನೇ, ಇಹ-ಈ ವನದಲ್ಲಿ, ತಸ್ಯಾಃ ವೈದೇಹ್ಯಾಃ-ಆ ಸೀತಾದೇವಿಯ. ನಿಮಿತ್ತಂ-ನಿಮಿತ್ತವಾಗಿ, ವಿವದಮಾನಯೋಃ-ಜಗಳವಾಡುತ್ತಿರುವ, ದ್ವಯೋಃ ರಾಕ್ಷಸಯೋಃ-ಇಬ್ಬರು ರಕ್ಕಸರಿಗೆ. ಘೋರಂ-ಭಯಂಕರವಾದ. ಯುದ್ಧಂ-ಕಾಳಗವು, ಬಭೂವ-ಆಯಿತು. ಇತಿ-ಇಂತೆಂದು, ಮನ್ಯೇ-ಎಣಿಸುತ್ತೇನೆ ॥೪೨॥ ಹೇ ಸೌಮ್ಯ-ಎಲೈ ಸೌಮ್ಯನೇ, ಮುಕ್ತಾಮಣಿಮಯಂ-ಮುತ್ತಿನಮಣಿಗಳ ವಿಕಾರವಾದ. ತಪನೀಯವಿಭೂಷಿತಂ-ಬಂಗಾರುರೇಖೆಗಳಿಂದಲಂಕೃತವಾದ. ಇದಂ-ಈ, ಧರಣ್ಯಾಂ-ಭೂಮಿಯಲ್ಲಿ, ಪತಿತಂ-ಬಿದ್ದಿರುವ, ಮಹತ್-ದೊಡ್ಡದಾದ. ಧನುಃ-ಬಿಲ್ಲು, ಕಸ್ಯ-ಯಾರದೋ. ಭಗ್ನಂ-ಮುರಿದುಹೋಗಿದೆ ॥೪೩॥ ತರುಣಾದಿತ್ಯಸಂಕಾಶಂ-ಬಾಲಸೂರ್ಯನಿಗೆ ಸಮಾನವಾದ, ವೈಡೂರ್ಯಗುಳಿಕಾಚಿತಂ-ವೈಡೂರ್ಯದ ಗುಂಡುಗಳಿಂದ ವ್ಯಾಪ್ತವಾದ, ಕಾಂಚನಂ-ಸುವರ್ಣವಿಕಾರವಾದ. ಕಸ್ಯ-ಯಾವ ಪುರುಷನ, ಕವಚಂ-ಕವಚವು, ವಿಶೀರ್ಣಂ-ಮುರಿದು, ಭೂಮೌ-ನೆಲದಲ್ಲಿ, ಪತಿತಂ-ಬಿದ್ದುಹೋಗಿದೆ ॥೪೪॥ ಶತಶಲಾಕಂ-ನೂರು ಸಲಾಕೆಗಳುಳ್ಳ, ದಿವ್ಯಮಾಲ್ಯೋಪಶೋಭಿತಂ-ದೇವತೆಗಳ ಸಂಬಂಧವಾದ ಹುವ್ವಿನಸರಗಳಿಂದಲಂಕೃತವಾದ, ಭಗ್ನದಂಡಂ-ಮುರಿಯಲ್ಪಟ್ಟ ದಂಡವುಳ್ಳ, ಇದಂ ಛತ್ರಂ-ಈ ಶ್ವೇತಛತ್ರವು, ಕಸ್ಯ-ಯಾರದೋ. ಭೂಮೌ-ನೆಲದಲ್ಲಿ, ಸಮ್ಯಕ್-ಚನ್ನಾಗಿ, ನಿಪಾತಿತಂ-ಕೆಡಹಲ್ಪಟ್ಟಿದೆ ॥೪೫॥ ಕಾಂಚನೋರಶ್ಛದಾಃ-ಸುವರ್ಣವಿಕಾರವಾದ ಕವಚಗಳುಳ್ಳ, ಪಿಶಾಚವದನಾಃ-ಪಿಶಾಚದಂತೆ ಮುಖವುಳ್ಳ, ಭೀಮರೂಪಾಃ-ಭಯಂಕರವಾದ ಆಕಾರವುಳ್ಳ. ಮಹಾಕಾಯಾಃ-ದೊಡ್ಡಶರೀರವುಳ್ಳ. ಕಸ್ಯ-ಯಾರದೋ ಜಬ್ಬನ ಸಂಬಂಧಿಗಳಾದ, ಇಮೇ ಖರಾಃ-ಈ ಕತ್ತೆಗಳು, ರಣೇ-ಕಾಳಗದಲ್ಲಿ, ನಿಹತಾಃ-ಹೊಡೆಯಲ್ಪಟ್ಟವು ॥೪೬॥ ದೀಪ್ತಪಾವಕಸಂಕಾಶಃ-ಹೊಳೆಯುತ್ತಿರುವ ಬೆಂಕಿಯಂತೆ ಕಾಂತಿಯುಳ್ಳ. ದ್ಯುತಿಮಾನ್-ಪ್ರಕಾಶವುಳ್ಳ. ಸಮರಧ್ವಜಃ-ಕಾಳಗದಲ್ಲಿ ನಾಯಕನಿಗೆ ಧ್ವಜಪ್ರಾಯವಾದ. ಕಸ್ಯ-ಯಾವ ಪುರುಷನ, ಸಾಂಗ್ರಾಮಿಕಃ-ಯುದ್ಧೋಪಯುಕ್ತವಾದ. ರಥಃ-ತೇರು, ಅಪವಿದ್ಧಶ್ಚ-ಧ್ವಂಸಮಾಡಲ್ಪಟ್ಟದ್ದಾಗಿ. ಭಗ್ನಃ-ಮುರಿಯಲ್ಪಟ್ಟದ್ದಾಗಿಯೂ (ಅಸ್ತಿ-ಇದೆ) ॥೪೭॥ ರಥಾಕ್ಷಮಾತ್ರಾಃ-ರಥದ ಅಚ್ಚಿನ ಪ್ರಮಾಣದಂತೆ ಪ್ರಮಾಣವುಳ್ಳ, ತಪನೀಯವಿಭೂಷಣಾಃ-ಬಂಗಾರದ ವಿಕಾರವಾದ ಆಭರಣಗಳುಳ್ಳ, ಕಸ್ಯ-ಯಾವ ಪುರುಷನ, ಇಮೇ-ಈ. ವಿಶಿಖಾಃ-ತುದಿಗಳಿಲ್ಲದಿರುವ, ಅಭಿಹತಾಃ-ಹೊಡೆಯಲ್ಪಟ್ಟ, ಘೋರಕರ್ಮಣಃ-ಕ್ರೂರವ್ಯಾಪಾರವುಳ್ಳ, ಕಸ್ಯ-ಯಾವ ಪುರುಷನ, ಬಾಣಾಃ-ಬಾಣಗಳು, ಪ್ರಕೀರ್ಣಾಃ-ಎರಚಲ್ಪಟ್ಟಿವೆ ॥೪೮॥ ಹೇ ಲಕ್ಷ್ಮಣ-ಎಲೈ ಲಕ್ಷ್ಮಣನೇ, ಕಸ್ಯ-ಯಾವನ, ಶರಾವಪೌ-ಬ

---

ಹದು ॥೪೧॥ ಎಲೋ ಎಲೋ ತಮ್ಮ ಲಕ್ಷ್ಮಣನೇ! ವಿದೇಹರಾಜನ ಮಗಳಾದ ಸೀತಾದೇವಿಯು ಕಾಮಚಾರಿಗಳಾದ ರಾಕ್ಷಸರಿಂದ ಕತ್ತರಿಸಿ ತುಂಡು ತುಂಡುಗಳಾಗಿ ಮಾಡಲ್ಪಟ್ಟು ಗ್ರಾಸಂಗೈಯ್ಯಲ್ಪಟ್ಟಳೋ ಏನೋ, ಇದಲ್ಲದೇ ಈ ವನದಲ್ಲಿ ಆ ದೇವಿಯ ನಿಮಿತ್ತವಾಗಿ ವಿವಾದಂಗೈದ ಇಬ್ಬರು ರಾಕ್ಷಸರಿಗೆ ಭಯಂಕರವಾದ ಸಂಗರವು ಸಂಭವಿಸಿದಂತೆ ಚಿಂತಿಸುತ್ತೇನೆ ॥೪೨॥ ಯಾಕಂದರೆ,—ಈ ಪ್ರದೇಶದಲ್ಲಿ ಮುಕ್ತಾಮಣಿಗಳ ವಿಕಾರವಾದ ಮತ್ತು ಸುವರ್ಣಾಲಂಕೃತವಾದ ಮಹಾ ಕೋದಂಡವು ಭಗ್ನವಾಗಿ ಬಿದ್ದಿಹದು ॥೪೩॥ ಮತ್ತು ಬಾಲಸೂರ್ಯಸದೃಶವಾಗಿಯೂ ವೈಡೂರ್ಯಮಣಿಗಳಿಂದ ವ್ಯಾಪ್ತವಾಗಿಯೂ, ಸುವರ್ಣವಾಗಿಯೂ ಇರುವ ಕವಚವು ಕತ್ತರಿಸಲ್ಪಟ್ಟದ್ದಾಗಿ ನೆಲದಲ್ಲಿ ಬಿದ್ದಿದೆ ॥೪೪॥ ಇದಲ್ಲದೆ ನೂರು ಸಲಾಕೆಗಳುಳ್ಳ ಮತ್ತು ದಿವ್ಯವಾದ ಪುಷ್ಪಂಗಳಿಂದ ಅಲಂಕರಿಸಲ್ಪಟ್ಟ ಶ್ವೇತಚ್ಛತ್ರವು ಯಾರದೋ, ಭಗ್ನವಾಗಿ ನೆಲದಲ್ಲಿ ಬಿದ್ದಿಹದು ॥೪೫॥ ಮತ್ತು ಸುವರ್ಣವಿಕಾರವಾದ ಕವಚಗಳುಳ್ಳ, ಪಿಶಾಚಿಗಳ ಮುಖಂಗಳಂತೆ ಮುಖಂಗಳುಳ್ಳ, ಮತ್ತು ಘೋರವಾದ ಆಕಾರಗಳುಳ್ಳ ಈ ಕತ್ತೆಗಳು ಯಾರವೋ, ರಣರಂಗದಲ್ಲಿ ಹೊಡೆಯಲ್ಪಟ್ಟಿವೆ; ಇದಲ್ಲದೆ ಅಗ್ನಿಯಂತೆ ಬೆಳಗುವ ಮತ್ತು ಧ್ವಜಪಟವುಳ್ಳ ಯುದ್ಧೋಪಯುಕ್ತವಾದ ರಥವು ಧ್ವಂಸಂಗೈಯ್ಯಲ್ಪಟ್ಟದ್ದಾಗಿ ಮುರಿದು ಬಿದ್ದಂಥಾದ್ದಾಗಿದೆ ॥೪೭॥ ಇದಲ್ಲದೆ ರಥಂಗಳ ಅಚ್ಚುಗಳ ಪ್ರಮಾಣಗಳಂತೆ ಪ್ರಮಾಣವುಳ್ಳ ಮತ್ತು ಸುವರ್ಣಾಲಂಕೃತವಾದ ಈ ಸಿಬಿಗೋಲುಗಳು ಯಾವ ಪುರುಷನ ಸಂಬಂಧವಾದವುಗಳೋ ಇಲ್ಲಿ ಬಿದ್ದಿವೆ, ನೋಡುವವನಾಗು ॥೪೮॥ ಎಲೋ,ಎ

॥೪೮॥ ಶರಾವರಾಶ್ಶರೈಃಪೂರ್ಣಾವಿಧ್ವಸ್ತಾಃಪಶ್ಯಲಕ್ಷ್ಮಣ । ಪ್ರತೋದಾಭೀಶುಹಸ್ತೋವೈಕಸ್ಯಾಯಂಸಾರಥಿರ್ಹತಃ
೪೯॥ ಕಸ್ಯೇಮೌಪುರುಷವ್ಯಾಘ್ರಶಯಾತೇನಿಹತೌಯುಧಿ । ಚಾಮರಗ್ರಾಹಿಣಾಸೌಮ್ಯಸೋಷ್ಣೀಷಮಣಿಕುಂಡ
ಲೌ ॥೫೦॥ ಪದವೀಪುರುಷಸ್ಯೈಷಾವ್ಯಕ್ತಂಕಸ್ಯಾಪಿರಕ್ಷಸಃ । ವೈರಂಶತಗುಣಂಪಶ್ಯಮಮೇದಂಜೀವಿತಾಂತಕಂ
೫೧॥ ಸುಘೋರಹೃದಯೈಸ್ಸೌಮ್ಯರಾಕ್ಷಸೈಃಕಾಮರೂಪಿಭಿಃ । ಹೃತಾಮೃತಾವಾಸೀತಾಸಾಭಕ್ಷಿತಾವಾತಪಸ್ವಿನೀ
॥೫೨॥ ನಧರ್ಮಸ್ತ್ರಾಯತೇಸೀತಾಂಹ್ರಿಯಮಾಣಾಂಮಹಾವನೇ ॥೫೩॥ ಭಕ್ಷಿತಾಯಾಂಹಿವೈದೇಹ್ಯಾಂಹೃತಾಯಾ
ಮಪಿಲಕ್ಷ್ಮಣ । ಕೇಹಿಲೋಕೇಪ್ರಿಯಂಕರ್ತುಂಶಕ್ತಾಸ್ಸೌಮ್ಯಮಮೇಶ್ವರಾಃ ॥೫೪॥ ಕರ್ತಾರಮಪಿಲೋಕಾನಾಂ

---

ತ್ರೀಕೆಗಳು, ಶರೈಃ-ಬಾಣಗಳಿಂದ. ಪೂರ್ಣಾಃ-ತುಂಬಿದವುಗಳಾಗಿ, ವಿಧ್ವಸ್ತಾಃ-ನಾಶಗೊಳಿಸಲ್ಪಟ್ಟವೆ. ಪಶ್ಯ-ನೋಡು, ಪ್ರತೋದಾಭೀಶುಹಸ್ತಃ-ಕೊರಡಾನು ಹಗ್ಗಗಳೂ ಹಸ್ತದಲ್ಲಿದ್ದೆಲ್ಲ, ಕಸ್ಯ-ಯಾವ ಪುರುಷನ ಸಂಬಂಧಿಯಾದ, ಅಯಂಸಾರಥಿಃ-ಈ ಸಾರಥಿಯು, ಹತಃ-ಹೊಡೆಯಲ್ಪಟ್ಟವನಾಗಿಹಾನೆ ॥೪೯॥ ಹೆಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಸೋಷ್ಣೀಷಮಣಿಕುಂಡಲೌ-ಮುಂಡಾಸವೂ ರತ್ನಖಚಿತಕುಂಡಲಗಳೆರಡರಿಂದೊಡಗೂಡಿಷ, ಕಸ್ಯ-ಯಾವ ಪುರುಷನ ಸಂಬಂಧಿಗಳಾದ, ಚಾಮರಗ್ರಾಹಿಣೌ-ಚಾಮರವನ್ನು ಹಾಕುವ; ಇಮೌ-ಈ ಪುರುಷರು, ಯುಧಿ-ಕಾಳಗದಲ್ಲಿ, ನಿಹತೌ-ಹೊಡೆಯಲ್ಪಟ್ಟವರಾಗಿ, ಶಯಾತೇ-ಮಲಗಿಧಾರೆ ॥೫೦॥ ಏಷಾಪದವೀ-ಈ ಮಾರ್ಗವು, ರಕ್ಷಸಃ-ರಾಕ್ಷಸನಾದ ಕಸ್ಯಪುರುಷಸ್ಯ-ಯಾವನೋ ಒಬ್ಬಪುರುಷನ ಸಂಬಂಧವೂ, ವ್ಯಕ್ತಂ-ಸ್ಪಷ್ಟವೂ, ಮಮ-ನನಿಗೆ ಜೀವಿತಾಂತಕಂ-ರಾಕ್ಷಸರ ಪ್ರಾಣನಾಶಕರವಾದ, ಶತಗುಣಂ-ನೂರುಬಗೆಯಾಗುಳ್ಳ, ಇದಂವೈರಂ-ಈ ವೈರವು, ಆಸೀತ್-ಆಯಿತು. ಪಶ್ಯ-ನೋಡು ॥೫೧॥ ಹೆಸೌಮ್ಯ-ಎಲೈ ಪ್ರಸನ್ನನೇ, ಸುಘೋರಹೃದಯೈಃ-ಭಯಂಕರವಾದ ಮನಸ್ಸುಳ್ಳ, ಕಾಮರೂಪಿಭಿಃ-ಇಚ್ಛಾರೂಪಿಗಳಾದ, ರಾಕ್ಷಸೈಃ-ರಕ್ಕಸರಿಂದ. ತಪಸ್ವಿನೀ-ದೀನಳಾದ ಸಾಸೀತಾ-ಆ ಸೀತಾದೇವಿಯು, ಹೃತಾ-ಅಪಹರಿಸಲ್ಪಟ್ಟಳೋ, ಮೃತಾವಾ-ಮರಣವಂ ಹೊಂದಿಸಲ್ಪಟ್ಟಳೋ, ಭಕ್ಷಿತಾವಾ-ತಿನ್ನಲ್ಪಟ್ಟಳೋ ॥೫೨॥ ಮಹಾವನೇ-ಮಹಾರಣ್ಯದಲ್ಲಿ, ಹ್ರಿಯಮಾಣಾಂ-ಅಪಹರಿಸಿಕೊಂಡು ಹೋಗಲ್ಪಡುತ್ತಿರುವ, ಸೀತಾಂ-ಸೀತಾದೇವಿಯನ್ನು, ಧರ್ಮಃ-ಧರ್ಮವು, ನತ್ರಾಯತೇ-ಸಂರಕ್ಷಿಸಲಿಲ್ಲ॥೫೩॥ ॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಹೆಸೌಮ್ಯ-ಎಲೈ ಪ್ರಸನ್ನನೇ. ವೈದೇಹ್ಯಾಂ-ಸೀತಾದೇವಿಯು ಭಕ್ಷಿತಾಯಾಂ-ತಿನ್ನಲ್ಪಟ್ಟವಳಾಗಲಾಗಿ,ಹೃತಾಯಾಂ-ಅಪಹರಿಸಿಕೊಂಡು ಹೋಗಲ್ಪಟ್ಟವಳಾದರೂ, ಲೋಕೇ-ಲೋಕದಲ್ಲಿ, ಮಮ-ನನಿಗೆ, ಅಪ್ರಿಯಂ-ಅನಿಷ್ಟವನ್ನು, ಕರ್ತುಂ-ಮಾಡುವದಕ್ಕೋಸುಗ, ಈಶ್ವರಾಃ-ಯಾವ ಧೊರೆಗಳು ತಾನೇ, ಶಕ್ತಾಹಿ-ಸಮರ್ಥರಾಗುವರಷ್ಟೆ॥ ... ... ... ॥೫೩॥ ॥

ಹೆಲಕ್ಷ್ಮಣ-ಎಲೆ ಲಕ್ಷ್ಮಣನೇ, ಲೋಕಾನಾಂ-ಲೋಕಗಳಿಗೆ, ಕರ್ತಾರಮಪಿ-ಸೃಷ್ಟಿಕರ್ತನಾದರೂ, ಶೂರಂ-ಶೂರನಾದರೂ, ಕರುಣವೇದಿನಂ-ದಯಾವಂತನಾದ ಪುರುಷನನ್ನು. ಅಜ್ಞಾನಾತ್-ಅಜ್ಞಾನದವಶದಿಂದ. ಸರ್ವಭೂತಾನಿ-ಸರ್ವಪ್ರಾಣಿಗಳು, ಅವಮನ್ಯೇರನ್-ಅವಮಾನಮಾಡುತ್ತಾರೆ, (ಯದ್ವಾ-ಲೋಕಾನಾಂ-ಲೋಕಗಳಿಗೆ,ಕರ್ತಾರಮಪಿ-ಉತ್ಪತ್ತಿ ಮಾಡುವ ಸಾಮರ್ಥ್ಯವುಳ್ಳವನಾದರೂ, ಶೂರಂ-ಸಂಹಾರಕರಣ ಸಮರ್ಥನಾದರೂ, ಕರುಣವೇದಿನಂ-ದಾಂತನಾದ ಪುರುಷನನ್ನು ಸರ್ವಭೂತಾನಿ-ಸರ್ವಪ್ರಾಣಿಗಳು, ಅಜ್ಞಾನಾತ್-ಅವನಸ್ವರೂಪವನ್ನು ತಿಳಿಯದೆ (ಅಂದರೆ ಸೃಷ್ಟಿಸ್ಥಿತಿಲಯಂಗಳು ಮಾಡುತ್ತಾನೆಂಬ ಸ್ವರೂಪವನ್ನು ತಿಳಿಯದೆ, ) ಅವಮನ್ಯೇರನ್-ಪ್ರಾಕೃತಮನುಷ್ಯನನ್ನಾಗಿ ತಿಳಿದು ತಿರಸ್ಕರಿಸುವರು ) ॥೫೪॥ ॥ತ್ರಿದಶೇಶ್ವರಾಃ-ದೇವಶ್ರೇಷ್ಠರು. ಮೃದುಂ-ಕೋಮಲವಾದ ಹೃದಯವುಳ್ಳ, ಲೋಕಹಿತೇ-ಲೋಕಕ್ಕೆ ಹಿತದಲ್ಲಿ, ಯುಕ್ತಂ-ಉದ್ಯುಕ್ತನಾದ, ದಾಂತಂ-

---

ಲೋ, ತಮ್ಮ, ಲಕ್ಷ್ಮಣನೇ! ಸರಳುಗಳಿಂದ ತುಂಬಿದ ಬತ್ತಳಿಕೆಗಳು ಧ್ವಂಸಂ ಗೈಯ್ಯಲ್ಪಟ್ಟು ನೆಲದಲ್ಲಿ ಬಿದ್ದಿವೆ, ನೋಡುವವನಾಗು ॥೪೯॥ ಮತ್ತೂ ಮುಂಡಾಸಗಳಿಂದಲೂ ರತ್ನವಿಕಾರವಾದ ಕುಂಡಲಗಳಿಂದಲೂ ಸಹಾ ಅಲಂಕೃತರಾದ ಚಾಮರ ಗ್ರಾಹಿಗಳೀರ್ವರು ನಿಹತರಾಗಿ ಧರಾತಲದಲ್ಲಿ ಮಲಗಿಧಾರೆ; ಇವರು ಯಾವ ಪುರುಷನ ಸಂಬಂಧಿಗಳೋ ಏನೋ ॥೫೦॥ ಇವೆಲ್ಲವಂ ನೋಡಿದರೆ ಈ ಮಾರ್ಗದಲ್ಲಿ ಯಾವನೋ ಓರ್ವ ರಾಕ್ಷಸನು ಸಂಚಾರಂ ಗೈದಂತೆ ಕಾಣುತಲಿಧೆ; ರಾಕ್ಷಸರಿಗೆಲ್ಲ ಪ್ರಾಣಾಂತ್ಯವನ್ನುಂಟು ಮಾಡುವ ಈ ವೈರವು ಪುಟ್ಟಿದಂಥಾದ್ದಾಯಿತು ॥೫೧॥ ಎಲೋ, ಸೌಮ್ಯನಾದ ಲಕ್ಷ್ಮಣನೇ! ಆದ್ದರಿಂದ ಕಡುಭಯಂಕರರಾಗಿಯೂ, ಕಾಮರೂಪಿಗಳಾಗಿಯೂ, ಇರುವ ರಾಕ್ಷಸರಿಂದ, ದೀನಳಾದ ಆ ಸೀತಾದೇವಿಯು ಅಪಹಾರಂ ಗೈಯ್ಯಲ್ಪಟ್ಟಳೋ, ಅಥವಾ ರಾಕ್ಷಸರಿಗೆ ಹೆದರಿದವಳಾಗಿ ಸ್ವಯಮೇವ ಮರಣವನ್ನೈದಿದಳೋ, ಅಥವಾ ಆ ದುಷ್ಟರಾದ ರಾಕ್ಷಸರಿಂದ ಗ್ರಾಸಂಗೈಯ್ಯಲ್ಪಟ್ಟಳೋ ಏನೋ ತಿಳಿಯಲಿಲ್ಲ ॥೫೨॥ ಈ ಮಹಾ ಅರಣ್ಯದಲ್ಲಿ ಅಪಹರಿಸಲ್ಪಡುವ ಆ ದೇವಿಯನ್ನು ಧರ್ಮದೇವತೆಯಾದರೂ ಸಂರಕ್ಷಿಸಲಿಲ್ಲ ॥೫೩॥ ಎಲೋ ಲಕ್ಷ್ಮಣನೇ! ಜನಕರಾಜನಂದಿನಿಯಾದ ಸೀತಾದೇವಿಯು ಭಕ್ಷಿಸಲ್ಪಟ್ಟದ್ದರೂ ಸರಿಯೇ, ಅಥವಾ ಅಪಹರಿಸಲ್ಪಟ್ಟದ್ದರೂ ಸರಿಯೇ,ನನಗೆ ಲೋಕಾಧೀಶ್ವರರೆಲ್ಲರು ಅನಿಷ್ಟವಂ ಗೈಯ್ಯುವದಕ್ಕೆ ಸಮರ್ಥರಾದಂತೆ ಆಯಿತಲ್ಲವೇ ॥೫೪॥ ಎಲೋ, ಎಲೋ, ಲಕ್ಷ್ಮಣನೇ! ಲೋಕಾಧೀಶ್ವರನಾದರೂ ಸೃಷ್ಟಿಕರ್ತನಾದರೂ ಮಹಾಶೂರನಾದರೂ ಕೂಡಾ ದಯಾವಂತನಾಗಿದ್ದಲ್ಲಿ ಅಂಥಾ ಪುರುಷನನ್ನು,

ಶೂರಂ ಕರುಣವೇದಿನಂ । ಅಜ್ಞಾನಾದವಮನ್ಯೇರನ್ ಸರ್ವಭೂತಾನಿ ಲಕ್ಷ್ಮಣ ॥೫೫॥ ಮಾಂ ಪ್ರಾಪ್ಯ ಹಿ ಗುಣೋ ದೋಷ
ಸ್ಸಂವೃತ್ತಃ ಪಶ್ಯ ಲಕ್ಷ್ಮಣ । ಅದ್ಯೈವ ಸರ್ವಭೂತಾನಾಂ ರಕ್ಷಸಾಮಭವಾಯ ಚ ॥೫೬॥ ಸಂಹೃತ್ಯೈವ ಶಶಿಜ್ಯೋತ್ಸ್ನಾಂ
ಮಹಾನ್ ಸೂರ್ಯ ಇವೋದಿತಃ । ಸಂಹೃತ್ಯೈವ ಗುಣಾನ್ ಸರ್ವಾನ್ ಮಮ ತೇಜಃ ಪ್ರಕಾಶತೇ ॥೫೭॥ ನೈವ ಯಕ್ಷಾ ನ ಗಂಧರ್ವಾ
ನ ಪಿಶಾಚಾ ನ ರಾಕ್ಷಸಾಃ । ಕಿನ್ನರಾ ವಾ ಮನುಷ್ಯಾ ವಾ ಸುಖಂ ಪ್ರಾಪ್ಸ್ಯಂತಿ ಲಕ್ಷ್ಮಣ ॥೫೮॥ ಮಮಾಸ್ತ್ರಬಾಣಸಂಪೂ
ರ್ಣಮಾಕಾಶಂ ಪಶ್ಯ ಲಕ್ಷ್ಮಣ । ನಿಸ್ಸಂಪಾತಂ ಕರಿಷ್ಯಾಮಿ ಹ್ಯದ್ಯ ತ್ರೈಲೋಕ್ಯಚಾರಿಣಾಂ ॥೫೯॥ ಸನ್ನಿರುದ್ಧಗ್ರಹಗಣ
ಮಾವಾರಿತನಿಶಾಕರಂ । ವಿಪ್ರಣಷ್ಟಾನಲಮರುದ್ಭಾಸ್ಕರದ್ಯುತಿಸಂವೃತಂ ॥೬೦॥ ವಿನಿರ್ಮಥಿತಶೈಲಾಗ್ರಂ ಶುಷ್ಯಮಾಣಜಲಾ
ಶಯಂ । ಧ್ವಸ್ತದ್ರುಮಲತಾಗುಲ್ಮಂ ವಿಪ್ರಣಾಶಿತಸಾಗರಂ ॥೬೧॥ ತ್ರೈಲೋಕ್ಯಂ ತು ಕರಿಷ್ಯಾಮಿ ಸಂಯುಕ್ತಂ ಕಾಲಧರ್ಮಣಾ ।

---

ಉಪಶಾಂತನಾದ, ಮಾಂ–ನನ್ನನ್ನು, ನಿರ್ವೀರ್ಯಇತಿ–ಸಾಮರ್ಥ್ಯವಂತನಲ್ಲವೆಂದು, ಮನ್ಯಂತೇ–ತಿಳಿದುಕೊಂಡಿಧಾರೆ ॥೫೫॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಗುಣಃ–ಶಾಂತ್ಯಾದಿಗುಣವು, ಮಾಂ–ನನ್ನನ್ನು, ಪ್ರಾಪ್ಯ–ಹೊಂದಿ, ಸರ್ವಭೂತಾನಾಂ–ಸಮಸ್ತಪ್ರಾಣಿಗಳಿಗೂ, ರಕ್ಷಸಾಂ–ರಾಕ್ಷಸರಿಗೂ, ಅದ್ಯೈವ–ಈಗಲೇ, ಅಭವಾಯಚ–ನಾಶಕ್ಕಾಗಿಯೂ, ದೋಷಃ–ದೋಷರೂಪವಾಗಿ, ಸಂಪ್ರವೃತ್ತಃ–ಪರಿಣಮಿಸಿತು. ಪಶ್ಯ–ನೋಡು. (ಯದ್ವಾ–ಸರ್ವಭೂತಾನಾಂ–ಸಮಸ್ತಪ್ರಾಣಿಗಳಿಗೂ, ರಕ್ಷಸಾಂಚ–ರಾಕ್ಷಸರಿಗೂ ಅಭವಾಯಚ–ನಾಶಕ್ಕಾಗಿ, ಗುಣಃ–ಶಾಂತಿಗುಣವು, ಮಾಂ–ನನ್ನನ್ನು, ಪ್ರಾಪ್ಯ–ಹೊಂದಿ, ದೋಷಸಂವೃತ್ತಃ–ಕ್ರೋಧರೂಪ ದೋಷವಾಗಿ ಪರಿಣಮಿಸಿತು. (ಅಂದರೆ–ಈಗಲೇ ಸಕಲಲೋಕವನ್ನು ಸಂಹಾರಮಾಡುವೆನೆಂಬ ಆಗ್ರಹ ಹುಟ್ಟಿಧೇಯೆಂದು ತಾತ್ಪರ್ಯವು) ॥೫೬॥ ಮಹಾನ್–ಮಹಾತ್ಮನಾದ, ಉದಿತಃ–ಉದಯವನ್ನು ಹೊಂದಿದ, ಸೂರ್ಯಃ–ಸೂರ್ಯನು, ಯಥಾ–ಹ್ಯಾಗೆ, ಶಶಿಜ್ಯೋತ್ಸ್ನಾಂ–ಚಂದ್ರನ ಬೆಳದಿಂಗಳನ್ನು. ಸಂಹೃತ್ಯೈವ–ಹೋಗಲಾಡಿಸಿ, ಯಥಾ–ಹ್ಯಾಗೆ, ಪ್ರಕಾಶತೇ–ಹೊಳೆಯುತ್ತದೋ, ತಥಾ–ಹಾಗೆಯೇ, ಮಮ–ನನ್ನ. ತೇಜಃ–ತೇಜಸ್ಸು. ಸರ್ವಾನ್–ಸಮಸ್ತಗಳಾದ, ಗುಣಾನ್–ಮಾರ್ದವಾದಿ ಗುಣಗಳನ್ನು, ಸಂಹೃತ್ಯೈವ–ಹೋಗಲಾಡಿಸೀ, ಪ್ರಕಾಶತೇ–ಹೊಳೆಯುತ್ತದೆ ॥೫೭॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಯಕ್ಷಾಃ–ಯಕ್ಷರು, ಸುಖಂ–ಸುಖವನ್ನು, ನಪ್ರಾಪ್ಸ್ಯಂತಿ–ಹೊಂದಲಾರರು. ಗಂಧರ್ವಾಃ–ಗಂಧರ್ವರು. ನ–ಸುಖವಂಪೊಂದಲಾರರು. ಪಿಶಾಚಾಃ–ಪಿಶಾಚಗಳು, ನ–ಸುಖವಂ ಹೊಂದಲಾರರು, ರಾಕ್ಷಸಾಃ–ರಕ್ಕಸರು, ನ–ಸುಖವಂ ಪೊಂದಲಾರರು, ಕಿನ್ನರಾವಾ–ಕಿನ್ನರರಾದರೂ, ಸುಖಂ–ಸುಖವನ್ನು, ನ–ಹೊಂದಲಾರರು, ಮನುಷ್ಯಾವಾ–ಮನುಷ್ಯರಾದರೂ. ನಪ್ರಾಪ್ಸ್ಯಂತಿ–ಸುಖವಂ ಹೊಂದಲಾರರು ॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಆಕಾಶಂ–ಆಕಾಶವನ್ನು, ಮಮ–ನನ್ನ, ಅಸ್ತ್ರಬಾಣಸಂಪೂರ್ಣಂ–ಅಸ್ತ್ರಗಳಿಂ ಬಾಣಗಳಿಂ ತುಂಬಿರುವದನ್ನಾಗಿ, ಪಶ್ಯ–ಕಾಣು, ಅದ್ಯ–ಈಗ, ತ್ರೈಲೋಕ್ಯಚಾರಿಣಾಂ–ಲೋಕತ್ರಯಸಂಚಾರಿಗಳಿಗೆ, ನಿಸ್ಸಂಪಾತಂ–ಸಂಚಾರ ರಾಹಿತ್ಯವನ್ನು, ಕರಿಷ್ಯಾಮಿ–ಮಾಡುವೆನು ॥೫೯॥ ಸನ್ನಿರುದ್ಧಗ್ರಹಗಣಂ–ಅಡ್ಡಗಿಸಲ್ಪಟ್ಟ ಗ್ರಹಗಳ ಕೂಟವುಳ್ಳ, ಆವಾರಿತನಿಶಾಕರಂ–ತಡೆಮಾಡಲ್ಪಟ್ಟ ಚಂದಿರನುಳ್ಳ, ವಿಪ್ರನಷ್ಟಾನಲಮರುತ್–ನಾಶಗೊಳಿಸಲ್ಪಟ್ಟ ಗಾಳಿಯೂ ಅಗ್ನಿಯೂ ವುಳ್ಳ, ವಿಪ್ರನಷ್ಟಾನಲಜಲಮರುದ್ಭಾಸ್ಕರಸಂಯುತಂ– (ಇತಿಪಾಠಾಂತರಂ–ವಿಪ್ರನಷ್ಟ–ಹೋಗಲಾಡಿಸಲ್ಪಟ್ಟ. ಅನಲ–ಅಗ್ನಿಯೂ ಜಲವೂ ಗಾಳಿಯೂ ಸೂರ್ಯನಿಂ ಕೂಡಿಕೊಂಡಿರುವ.) ಭಾಸ್ಕರದ್ಯುತಿಸಂವೃತಂ–ಆಚ್ಛಾದಿತವಾದ ಸೂರ್ಯನ ಪ್ರಕಾಶವುಳ್ಳ, ವಿನಿರ್ಮಥಿತಶೈಲಾಗ್ರಂ–ಹೊಡೆಯಲ್ಪಟ್ಟ ಬೆಟ್ಟದ ತುದಿಗಳುಳ್ಳ, ಶುಷ್ಯಮಾಣಜಲಾಶಯಂ–ಶೋಷಿಸಿಹೋಗುತ್ತಿರುವ ಸರೋವರಗಳುಳ್ಳ, ತ್ರೈಲೋಕ್ಯಂ–ಲೋಕತ್ರಯವನ್ನು, ಧ್ವಸ್ತದ್ರುಮಲತಾಗುಲ್ಮಂ–ಧ್ವಂಸಮಾಡಲ್ಪಟ್ಟ ಗಿಡಗಳೂ ಬಳ್ಳಿಗಳೂ ಪೇಲಿಗಳೂ ಉಳ್ಳದ್ದನ್ನಾಗಿಯೂ, ವಿಪ್ರಣಾಶಿತಸಾಗರಂ–ನಾಶಗೊಳಿಸಲ್ಪಟ್ಟ ಕಡಲುಗಳೂ ಉಳ್ಳದ್ದನ್ನಾಗಿಯೂ, ಕಾಲಧರ್ಮಣಾ–ವಿನಾಶದಿಂದ, ಸಂಯುಕ್ತಂ-

---

ಸರ್ವಪ್ರಾಣಿಗಳು ಅಜ್ಞಾನದಿಂದ ಅವಮಾನ ಮಾಡುತ್ತಾರೆ ಆದ್ದರಿಂದ ದೇವತಾ ಶ್ರೇಷ್ಠರೆಲ್ಲರು, ಮೃದು ಸ್ವಭಾವವುಳ್ಳವರಾಗಿಯೂ, ಲೋಕಕ್ಕೆ ಹಿತವಂ ಗೈಯ್ಯುವದರಲ್ಲಿಯೇ ಆಸಕ್ತಿಯುಳ್ಳವನಾಗಿಯೂ, ಉಪಶಾಂತನಾಗಿಯೂ, ದಯಾಶಾಲಿಯಾಗಿಯೂ ಸಹಾ ಇರುವವನನ್ನನ್ನು, ಪರಾಕ್ರಮಶಾಲಿಯಲ್ಲವೆಂದು ತಿಳಿದಿಧಾರೆ, ಈ ನನ್ನ ದಯಾದಾಕ್ಷಿಣ್ಯಾದಿಗಳು ಸರ್ವಪ್ರಾಣಿಗಳಿಗೂ ಮತ್ತೂ ರಾಕ್ಷಸರಿಗೂ ಸಹಾ ನಾಶಂಗೈಯ್ಯುವದಕ್ಕಾಗಿ ಪರಿಣಮಿಸಿಧೆ (ಅಂದರೆ ಈಗಲೇ ಸರ್ವರನ್ನು ಸಂಹರಿಸಬೇಕೆಂದು ನನಗೆ ಮಹಾ ಆಗ್ರಹವುಂಟಾಗಿಧೆ ಯೆಂದು ಭಾವವು) ॥೫೬॥ ಎಲೋ ಎಲೋ ತಮ್ಮ ಲಕ್ಷ್ಮಣನೇ! ಸೂರ್ಯನು ಉದಯವನ್ನೈದಿದವನಾಗಿ ಬೆಳದಿಂಗಳನ್ನು ಎಂತು ನಾಶಂ ಗೈಯ್ಯುವನೋ, ಅಂತು ನನ್ನ ತೇಜವು ಈ ಸಮಸ್ತವಾದ ಮೃದುತ್ವಾದಿ ಗುಣಂಗಳನ್ನು ಹೋಗಲಾಡಿಸಿ ತಾನೇ ಬೆಳಗುವದು ನೋಡುವವನಾಗು, ನನಗೆ ಈ ರೀತಿಯಲ್ಲಿ ಸಂಭವಿಸಿದರಿಂದ ಯಕ್ಷರಾಕ್ಷಸ ಗಂಧರ್ವಾದಿಗಳೆಲ್ಲರೂ ಸುಖದಿಂದಿರಲಾರರು, ಈಗ ಗಗನದಲ್ಲೆಲ್ಲ ಬಾಣಂಗಳಂ ತುಂಬಿಸುವೆನು, ಮೂಜಗಗಳಲ್ಲಿಯೂ ಯಾರೂ ಸಂಚಾರಂ ಗೈಯ್ಯದಿರುವಂತೆ ಮಾಡುವೆನು, ಯೆಲ್ಲೆಲ್ಲಿರುವ ಗ್ರಹಗಳಲ್ಲಿ ಅಲ್ಲಲ್ಲಿಯೇ ತಡೆವೆನು, ಗಾಳಿಯು ಬೀಸದಂತೆ ಮಾಡುವೆನು, ಮತ್ತೂ ಸೂರ್ಯಮಂಡಲವನ್ನು ಆಚ್ಛಾದನಂ ಗೈಯ್ಯುವೆನು, ಪರ್ವತಂಗಳ

ನತಾಂಕುಶಲಿನೀಂಸೀತಾಂಪ್ರದಾಸ್ಯಂತಿಮಮೇಶ್ವರಾಃ । ಅಸ್ಮಿನ್ಮುಹೂರ್ತೇಸೌಮಿತ್ರೇಮಮದ್ರಕ್ಷ್ಯಂತಿವಿಕ್ರಮಂ॥೬೩॥ ನಾಕಾಶಮುತ್ಪತಿಷ್ಯಂತಿಸರ್ವಭೂತಾನಿಲಕ್ಷ್ಮಣ । ಮಮಚಾಪಗುಣೋನ್ಮುಕ್ತೈರ್ಬಾಣಜಾಲೈರ್ನಿರಂತರಂ॥೬೪॥ ಅರ್ದಿತಂಮಮನಾರಾಚೈರ್ಧ್ವಸ್ತಭ್ರಾಂತಮೃಗದ್ವಿಜಂ । ಸಮಾಕುಲಮಮರ್ಯಾದಂಜಗತ್ಪಶ್ಯಾದ್ಯಲಕ್ಷ್ಮಣ॥೬೫॥ ಆಕರ್ಣಪೂರ್ಣೈರಿಷುಭಿರ್ಜೀವಲೋಕಂದುರಾವರೈಃ । ಕರಿಷ್ಯೇಮೈಥಿಲೀಹೇತೋರಪಿಶಾಚಮರಾಕ್ಷಸಂ॥೬೬॥ಮಮರೋಷಪ್ರಯುಕ್ತಾನಾಂಸಾಯಕಾನಾಂಬಲಂಸುರಾಃ । ದ್ರಕ್ಷ್ಯಂತ್ಯದ್ಯವಿಮುಕ್ತಾನಾಮತಿದೂರಾತಿಗಾಮಿನಾಂ ॥೬೭॥ ನೈವ ದೇವಾನದೈತೇಯಾನಪಿಶಾಚಾನರಾಕ್ಷಸಾಃ । ಭವಿಷ್ಯಂತಿಮಮಕ್ರೋಧಾತ್ತ್ರೈಲೋಕ್ಯೇವಿಪ್ರಣಾಶಿತೇ॥೬೮॥ ದೇವದಾನವಯಕ್ಷಾಣಾಂಲೋಕಾಯೇರಕ್ಷಸಾಮಪಿ । ಬಹುಧಾನಭವಿಷ್ಯಂತಿಬಾಣೌಘೈಃಶಕಲೀಕೃತಾಃ ॥೬೯॥ ನಿರ್ಮರ್ಯಾದಾನಿಮಾನ್ಲೋಕಾನ್ಕರಿಷ್ಯಾಮ್ಯದ್ಯಸಾಯಕೈಃ । ಹೃತಾಂಮೃತಾಂವಾಸೌಮಿತ್ರೇನದಾಸ್ಯಂತಿಯದೀಶ್ವರಾಃ ॥೭೦॥ ತಥಾರೂಪಾಂ

---

ಕೂಡಿದ್ದನ್ನಾಗಿ, ಕರಿಷ್ಯಾಮಿ-ಮಾಡುವೆನು ॥೬೨॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಅಸ್ಮಿನ್ಮುಹೂರ್ತೇ-ಈ ಮುಹೂರ್ತದಲ್ಲಿ, ಈಶ್ವರಾಃ-ದೇವರ್ಕಳು, ಕುಶಲಿನೀಂ-ಕ್ಷೇಮವಂತಳಾದ, ತಾಂಸೀತಾಂ-ಆ ಸೀತಾದೇವಿಯನ್ನು ಮಮ-ನನಗೆ ನಪ್ರದಾಸ್ಯಂತಿ-ಕೊಡುವದಿಲ್ಲವೋ, ( ಅಥವಾ ನಪ್ರದಾಸ್ಯಂತಿ-ಯದಿ ಕೊಡದೆಹೋದರೇ, ಮಮ-ನನ್ನ, ವಿಕ್ರಮಂ-ಪರಾಕ್ರಮವನ್ನು, ದ್ರಕ್ಷ್ಯಂತಿ-ನೋಡುವರು ॥೬೩॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಸರ್ವಭೂತಾನಿ-ಸಮಸ್ತಪ್ರಾಣಿಗಳು, ಮಮ-ನನ್ನ, ಚಾಪಗುಣೋನ್ಮುಕ್ತೈಃ-ಬಿಲ್ಲುಗಳ ಹೆದೆಗಳಿಂದ ಬಿಡಲ್ಪಟ್ಟ, ಬಾಣಜಾಲೈಃ-ಬಾಣತಂಡಗಳಿಂದ, ನಿರಂತರಂ-ಅವಕಾಶವಿಲ್ಲದಿರುವ, ಆಕಾಶಂ-ಅಂತರಿಕ್ಷವನ್ನು ಕುರಿತು, ನೋತ್ಪತಿಷ್ಯಂತಿ-ಹಾರದೇಹೋಗುವರೇ ॥೬೪॥ ಹೇಲಕ್ಷ್ಮಣ-ಎಲೈಲಕ್ಷ್ಮಣನೇ, ಅದ್ಯ-ಈಗ ಅಮರ್ಯಾದಂ-ಮರ್ಯಾದರಹಿತವಾದ, ಜಗತ್-ಲೋಕವನ್ನು, ಮಮ-ನನ್ನ, ನಾರಾಚೈಃ-ಬಾಣಗಳಿಂದ, ಅರ್ದಿತಂ-ಹೊಡೆಯಲ್ಪಟ್ಟದ್ದನ್ನಾಗಿಯೂ ಧ್ವಸ್ತಭ್ರಾಂತ ಮೃಗದ್ವಿಜಂ-ನಾಶಗೊಳಿಸಲ್ಪಟ್ಟ ಭ್ರಮೆಹಿಡಿಯಲ್ಪಟ್ಟ ಮೃಗಗಳೂ ಉಳ್ಳದ್ದನ್ನಾಗಿಯೂ, ಸಮಾಕುಲಂ-ವ್ಯಾಕುಲವಾದ್ದನ್ನಾಗಿಯೂ, ಪಶ್ಯ-ನೋಡು ॥೬೫॥ ಅದ್ಯ-ಈಗ, ಮೈಥಿಲೀಹೇತೋಃ-ಸೀತಾನಿಮಿತ್ತದ ದೆಸೆಯಿಂದ, ಜೀವಲೋಕಂ-ಈ ಮನುಷ್ಯಲೋಕವನ್ನು, ಆಕರ್ಣಪೂರ್ಣೈಃ-ಕರ್ಣಪರಿಯಂತವೂ ಸೆಳೆಯಲ್ಪಟ್ಟ, ದುರಾವರೈಃ-ಆವರಣವಿಲ್ಲದಿರುವ, ಇಷುಭಿಃ-ಬಾಣಗಳಿಂದ, ಅಪಿಶಾಚಂ-ಪಿಶಾಚಿಗಳಿಲ್ಲದ್ದನ್ನಾಗಿಯೂ, ಅರಾಕ್ಷಸಂ-ರಕ್ಕಸರಿಲ್ಲದ್ದನ್ನಾಗಿಯೂ, ಕರಿಷ್ಯೇ-ಮಾಡುವೆನು ॥೬೬॥ ಸುರಾಃ-ದೇವರ್ಕಳು, ಅದ್ಯ-ಈಗ ಮಮ-ನನ್ನ, ರೋಷಪ್ರಯುಕ್ತಾನಾಂ-ಕೋಪದಿಂ ಕೂಡಿಕೊಂಡಿರುವ, ವಿಮುಕ್ತಾನಾಂ-ಬಿಡಲ್ಪಟ್ಟ, ಅತಿದೂರಾತಿಗಾಮಿನಾಂ-ಬಹುದೂರ ಹೋಗುತ್ತಿರುವ, ಸಾಯಕಾನಾಂ-ಬಾಣಗಳ, ಬಲಂ-ಬಲವನ್ನು, ದ್ರಕ್ಷ್ಯಂತಿ-ನೋಡುವರು ॥೬೭॥ ತ್ರೈಲೋಕ್ಯೇ-ಲೋಕತ್ರಯವು, ಮಮ-ನನ್ನ, ಕ್ರೋಧಾತ್-ಕೋಪದದೆಸೆಯಿಂದ, ವಿಪ್ರಣಾಶಿತೇಸತಿ-ನಾಶಗೊಳಿಸಲ್ಪಟ್ಟದ್ದಾಗುತ್ತಿರಲೀಕಾಗಿ, ದೇವಾಃ-ದೇವರ್ಕಳು. ನಭವಿಷ್ಯಂತಿ-ಇರುವದಿಲ್ಲ, ದೈತೇಯಾಃ-ರಕ್ಕಸರು. ನ-ಇಲ್ಲ, ಪಿಶಾಚಾಃ-ಪಿಶಾಚಗಳು. ನ-ಇಲ್ಲ, ರಾಕ್ಷಸಾಃ-ರಾಕ್ಷಸರು, ನಭವಿಷ್ಯಂತಿ-ಯಿರಲಾರರು ॥೬೮॥ ದೇವದಾನವಯಕ್ಷಾಣಾಂ-ದೇವರ್ಕಳೂ ದಾನವರೂ ಯಕ್ಷರೂ, ರಕ್ಷಸಾಮಪಿ-ರಕ್ಕಸರ, ಲೋಕಾಃ-ಲೋಕಗಳು, ಯೇ-ಯಾವವೋ, ತೇ-ಅವುಗಳು, ಬಾಣೌಘೈಃ-ಬಾಣಗಳ ತಂಡಗಳಿಂ, ಶಕಲೀಕೃತಾಃ-ಪುಡಿಪುಡಿಯಾಗಿ ಮಾಡಲ್ಪಟ್ಟವುಗಳಾಗಿ. ಬಹುಧಾ-ಅನೇಕಬಗೆಯಾಗಿ, ನಭವಿಷ್ಯಂತಿ-ಇರಲಾರವು ॥೬೯॥ ಅದ್ಯ-ಈಗ, ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಈಶ್ವರಾಃ-ದೇವರ್ಕಳು, ಮಮ-ನನಗೆ, ಹೃತಾಂವಾ-ಅಪಹರಿಸಲ್ಪಟ್ಟವಳನ್ನೇ ಆಗಲೀ, ಮೃತಾಂವಾ-ಸತ್ತವಳನ್ನೇ ಆಗಲೀ, ನದಾಸ್ಯಂತಿಯದಿ-ಕೊಡದೇಹೋದರೆ, ಇಮಾನ್‌ಲೋಕಾನ್-ಈಲೋಕಗಳನ್ನು, ನಿರ್ಮರ್ಯಾದಾನ್-ಮರ್ಯಾದಾಶೂನ್ಯಗಳಾದವುಗಳನ್ನಾಗಿ. ಕರಿಷ್ಯಾಮಿ-ಮಾಡುವೆ

---

ಶಿಖರಗಳನ್ನೆಲ್ಲ ಭಂಜಿಸಿ ಕೆಳಗೆ ಬೀಳಿಸುವೆನು, ಈ ರೀತಿಯಾಗಿ ಲೋಕತ್ರಯವನ್ನು ನಾಶಂಗೈಯ್ಯುವೆನು ॥೬೨॥ ಎಲೋ ಎಲೋ, ತಮ್ಮ ಲಕ್ಷ್ಮಣನೇ! ಕೇಳುವವನಾಗು, ಈ ಕ್ಷಣದಲ್ಲಿಯೇ ದೇವತೆಗಳು ಕ್ಷೇಮವಾಗಿ ಸೀತಾದೇವಿಯನ್ನು ನನಗೆ ಸಮರ್ಪಣಂಗೈಯ್ಯದಿದ್ದರೆ, ಎನ್ನ ಪರಾಕ್ರಮವಂ ನೋಡಲಿ, ಸರ್ವಪ್ರಾಣಿಗಳು ನನ್ನ ಕೋದಂಡದಿಂದ ಬಿಡಲ್ಪಡುವ ನಿಡುಗೋಲುಗಳಿಂದ ಗಗನವನ್ನು ತುಂಬಿದಂಥಾದ್ದನಾಗಿ ಕಂಡು, ಮೇಲಕ್ಕೆ ಹಾರದೆ ಹೋಗುವರು, ಮತ್ತೂ ಮಹಾ ಬಾಣಗಳಿಂದ ಹೊಡದು ಈ ಜಗದಲ್ಲಿ ಪಕ್ಷ್ಯಾದಿಗಳೂ ಸಹಾ ಇಲ್ಲದಂತೆ ಮಾಡುವೆನು; ಸೀತಾನಿಮಿತ್ತವಾಗಿ ಈ ಮಾನುಷಲೋಕವು ಎನ್ನ ಬಾಣಗಳಿಂದ ರಾಕ್ಷಸರಹಿತವಾದಂಥಾದ್ದಾಗುವದು, ದೇವತೆಗಳೆಲ್ಲರು ನನ್ನ ಸಾಮರ್ಥ್ಯವಂ ನೋಡಲಿ ॥೬೭॥ ಎಲೋ ಎಲೋ, ಅಪ್ಪಲಕ್ಷ್ಮಣನೇ! ಈ ರೀತಿಯಲ್ಲಿ ಲೋಕತ್ರಯವೂ ನಾಶವಾಗಲೂ, ದೇವತೆಗಳಾಗಲೀ, ರಾಕ್ಷಸರಾಗಲೀ, ಪಿಶಾಚಗಳಾಗಲೀ, ಯಾರೂ ಇರಲಾರರು ಮತ್ತೂ " ದೇವ, ದಾನವ, ಯಕ್ಷ, ರಾಕ್ಷಸ, " ಎಂಬಿವರು ಮೊದಲಾದವರ ಲೋಕಂಗಳು ಯಾವವುಂಟೋ, ಅವುಗಳೂ ಸಹಾ ಖಂಡಿತವಾಗಿ ನಿಲ್ಲಲಾರವು ॥೬೯॥ ಆದರೆ ಈಗ ಆ ಸೀತಾದೇವಿಯು ಅಪಹರಿಸಲ್ಪಟ್ಟದ್ದರೂ, ಮೃತಿಪಟ್ಟದ್ದರೂ, ಆಕೆಯನ್ನು ದೇವತೆಗಳು ತಂದುಕೊಡುವವರಾದರೆ, ಎಲ್ಲವೂ ಕ್ಷೇಮವಾಗಿರುವ

ಹಿವೈದೆಹೀಂಸದಾಸ್ಯಾಂತಿಯದಿಪ್ರಿಯಾಂ । ನಾಶಯಾಮಿಜಗತ್ಸರ್ವಂತ್ರೈಲೋಕ್ಯಂಸಚರಾಚರಂ ... ... ॥೭೧॥
ಇತ್ಯುಕ್ತ್ವಾರೋಷತಾಮ್ರಾಕ್ಷೋರಾಮೋನಿಷ್ಪೀಡ್ಯಕಾರ್ಮುಕಂ । ಶರಮಾದಾಯಸಂದೀಪ್ತಂಘೋರಮಾಶೀವಿಷೋಪಮಂ
॥೭೨॥ ಸಂಧಾಯಧನುಷಿಶ್ರೀಮಾನ್ರಾಮಃಪರಪುರಂಜಯಃ । ಯುಗಾಂತಾಗ್ನಿರಿವಕ್ರುದ್ಧ ಇದಂವಚನಮಬ್ರವೀತ್
॥೭೩॥ ಯಥಾಜರಾಯಥಾಮೃತ್ಯುರ್ಯಥಾಕಾಲೋಯಥಾವಿಧಿಃ । ನಿತ್ಯಂನಪ್ರತಿಹನ್ಯಂತೆಸರ್ವಭೂತೇಷುಲಕ್ಷ್ಮಣ । ತಥಾ
ಹಂಕ್ರೋಧಸಂಯುಕ್ತೋನನಿವಾರ್ಯೋಸ್ಮಿಸರ್ವಥಾ ॥೭೪॥ ಪುರೇವಮೇಚಾರುದತೀಮನಿಂದಿತಾಂದಿಶಂತಿಸೀತಾಂಯದಿ
ನಾದ್ಯಮೈಥಿಲೀಂ । ಸದೇವಗಂಧರ್ವಮನುಷ್ಯಪನ್ನಗಂಜಗತ್ಸಶೈಲಂಪರಿವರ್ತಯಾಮ್ಯಹಂ ॥೭೫॥

—** ಇತಿ ಶ್ರೀಮದಾರಣ್ಯಕಾಂಡೆ ಚತುಷ್ಷಷ್ಟಿತಮಸ್ಸರ್ಗಃ **—

ತಪ್ಯಮಾನಂತಥಾರಾಮಂಸೀತಾಹರಣಕರ್ಶಿತಂ । ಲೋಕಾನಾಮಭವೇಯುಕ್ತಂಸಾಂವರ್ತಕಮಿವಾನಲಂ । ವೀ

---

ನು ॥೭೦॥ ತಥಾರೂಪಾಂ-ಅಂಥಾ ರೂಪವುಳ್ಳ. ಪ್ರಿಯಾಂ-ಹೆಂಡತಿಯಾದ, ವೈದೆಹೀಂ-ಸೀತಾದೇವಿಯನ್ನು ನದಾಸ್ಯಂತಿಯದಿ-ಕೊಡದೇಹೋದರೆ, ಸಚರಾಚರಂ-ಚರಾತ್ಮಕವಾದ ಸ್ಥಾವರಜಂಗಮಗಳಿಂದೊಡಗೂಡಿದ, ತ್ರೈಲೋಕ್ಯಂ-ಲೋಕತ್ರಯದಲ್ಲಿಯೂ ಇರುವ, ಸರ್ವಂಜಗತ್-ಸಮಸ್ತ ಜನರನ್ನು, ನಾಶಯಾಮಿ-ನಾಶಗೊಳಿಸುತ್ತೇನೆ ॥ ... ... ... ... ... ... .. ॥೭೧॥ ಇತ್ಯುಕ್ತ್ವಾ-ಈಪರಿಪೇಳಿ. ರೋಷತಾಮ್ರಾಕ್ಷಃ-ಕೋಪದಿಂ ಕೆಂಗಣ್ಣುಗಳುಳ್ಳ, ರಾಮಃ-ಶ್ರೀರಾಮನು, ಕಾರ್ಮುಕಂ-ಬಿಲ್ಲನನ್ನು, ನಿಷ್ಪೀಡ್ಯ-ಬಿಗಿಯಾಗಿಕಟ್ಟಿ, ಆಶೀವಿಷೋಪಮಂ-ಹಾವಿಗೆ ಸಮಾನವಾದ, ಘೋರಂ-ಭಯಂಕರವಾದ. ಸಂದೀಪ್ತಂ-ಉರಿಯುತ್ತಿರುವ, ಶರಂ-ಬಾಣವನ್ನು, ಆದಾಯ-ತೆಗೆದುಕೊಂಡು * ಶ್ರೀಮಾನ್-ಶೌರ್ಯಸಂಪನ್ನನಾದ, ಪರಪುರಂಜಯಃ-ಶತ್ರುಪುರಗಳಂ ಜಯಿಸುವ. ರಾಮಃ-ಶ್ರೀರಾಮನು, ಧನುಷಿ-ಬಿಲ್ಲಿನಲ್ಲಿ, ಸಂಧಾಯ-ಹೂಡಿ, ಯುಗಾಂತಾಗ್ನಿರಿವ-ಪ್ರಳಯಕಾಲಾಗ್ನಿಯಂತೆ, ಕ್ರುದ್ಧಃ-ಕೋಪಿಷ್ಠನಾಗಿ, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು॥೭೩॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ. ಜರಾ-ವಾರ್ಧಿಕಾವಸ್ಥೆಯು, ಯಥಾ-ಹ್ಯಾಗೆಯೋ, ಮೃತ್ಯುಃ-ಯಮನು, ಯಥಾ-ಹ್ಯಾಗೆಯೋ, ಕಾಲಃ-ನಾಶಕಾಲವು. ಯಥಾ-ಹ್ಯಾಗೆಯೋ, ವಿಧಿಃ-ಅದೃಷ್ಟವೂ, ಯಥಾ-ಹ್ಯಾಗೆಯೋ, (ಅಂದರೆ-ಈ ಜರಾದಿಗಳು ನಾಲ್ಕು, ) ಯಥಾ-ಹ್ಯಾಗೆ. ನಿತ್ಯಂ-ನಿರಂತರವೂ, ನಪ್ರತಿಹನ್ಯಂತೆ-ಹೊಡೆಯಲ್ಪಡುವದಿಲ್ಲವೋ, ತಥಾ-ಹಾಗೆಯೇ, ಕ್ರೋಧಸಂಯುಕ್ತಃ-ಕೋಪದಿಂ ಕೂಡಿಕೊಂಡಿರುವ, ಅಹಂ-ನಾನು. ಸರ್ವಭೂತೇಷು-ಸರ್ವಪ್ರಾಣಿಗಳಲ್ಲಿಯೂ. ಸರ್ವಥಾ-ಬಹುಪ್ರಕಾರವಾಗಿ, ನನಿವಾರ್ಯಃ-ನಿವಾರಿಸಲಸಾಧ್ಯನು, ಅಸ್ಮಿ-ಆಗಿಧೇನೆ ॥೭೪॥ ಪುರೇವಾ-ಪೂರ್ವದಂತೆ. ಚಾರುದತೀಂ-ಸುಂದರವಾದ ದಂಗಳುಳ್ಳ, ಅನಿಂದಿತಾಂ-ದೋಷರಹಿತಳಾದ. ಮೈಥಿಲೀಂ-ಜನಕರಾಯನಮಗಳಾದ, ಸೀತಾಂ-ಸೀತಾದೇವಿಯನ್ನು, ಮೇ-ನನಿಗೆ. ನದಿಶಂತಿಯದಿ-ಕೊಡದಿದ್ದರೆ, ಅದ್ಯ-ಈಗ, ಅಹಂ-ನಾನು, ಸದೇವಗಂಧರ್ವಮನುಷ್ಯಪನ್ನಗಂ-ದೇವರ್ಕಳಿಂದಲೂ ಗಂಧರ್ವರಿಂದಲೂ ಮನುಷ್ಯರಿಂದಲೂ ಸರ್ಪಗಳಿಂದೊಡಗೂಡಿದ, ಸಶೈಲಂ-ಬೆಟ್ಟಗಳಿಂ ಕೂಡಿದ, ಜಗತ್-ಲೋಕವನ್ನು. ಪರಿವರ್ತಯಾಮಿ-ತಲೆಕೆಳಕ್ಕೆ ಮಾಡುತ್ತೇನೆ, ಅಥವಾ ನಾಶಗೊಳಿಸುತ್ತೇನೆ ॥೭೫॥ —** ಇತಿಶ್ರೀಮದಾರಣ್ಯಕಾಂಡೆ-ಚತುಃಷಷ್ಟಿತಮಸ್ಸರ್ಗಃ **—

ತಥಾ-ಆ ಪರಿಯಾಗಿ. ತಪ್ಯಮಾನಂ-ಸಂಕಟಗೊಂಡಿರುವ, ಸೀತಾಹರಣಕರ್ಶಿತಂ-ಸೀತಾಪಹಾರದಿಂ ಕೃಶೀಭೂತನಾದ, ಲೋಕಾನಾಂ-ಲೋಕಗಳಿಗೆ, ಅಭವೆ-ನಾಶದಲ್ಲಿ, ಯುಕ್ತಂ-ಉದ್ಯುಕ್ತನಾದ, ಸಾಂವರ್ತಕಂ-ಪ್ರಳಯಕಾಲಿಕವಾದ, ಅನಲಮಿವ-ಅಗ್ನಿಯಂತಿರುವ, ಸಜ್ಯಂ-ಹೆದೆಯಿಂದೊಡ

---

ವು, ಇಲ್ಲದಿದ್ದರೆ, ಈ ಲೋಕಗಳನ್ನೆಲ್ಲ ಮರ್ಯಾದೆ ಇಲ್ಲದವುಗಳನ್ನಾಗಿ ಮಾಡುವದೇಸರಿ ಯೆನುತಲೂ, ಮತ್ತೂ ಚರಾಚರಾತ್ಮಕವಾದ ಈ ಪ್ರಪಂಚವನ್ನು ನಾಶಗೊಳಿಸುವದೇ ಸರಿಯೆನುತಲೂ, ದಶರಥನಂದನನಾದ ಶ್ರೀರಾಮನು ನುಡಿದವನಾಗಿ, ತನ್ನ ಧನುರ್ದಂಡಕ್ಕೆ ಹೆದೆಯಂ ಬಿಗಿದುಕಟ್ಟಿ ಸರ್ಪದಂತೆ ಮಹಾ ಭಯಂಕರವಾದ ಒಂದಾನೊಂದು ಬಾಣವಂ ತೆಗದು, ಆ ಧನುರ್ದಂಡದಲ್ಲಿ ಸಂಧಾನಂಗೈದು ಮತ್ತಿಂತ್ತೆಂದನು ॥೭೩॥ ಎಲೋ, ಎಲೋ, ತಮ್ಮ ಲಕ್ಷ್ಮಣನೇ! ಲೋಕದಲ್ಲಿ “ ವೃದ್ಧಾಪ್ಯ, ಮೃತ್ಯು, ಕಾಲ, ಅದೃಷ್ಟ, ಎಂಬಿವುಗಳು ನಾಲ್ಕು ಯಾವಾಗಲೂ, ಎಂತು ಹೊಡೆಯಲ್ಪಡದಿರುವವೋ, ಅಂತು ನಾನು ಹ್ಯಾಗಾದರೂ ನಿವಾರಿಸಲಶಕ್ಯನಾಗಿಧೇನೆ, ಆದ್ದರಿಂದ ದೇವಾದಿಗಳು, ಪೂರ್ವದಲ್ಲಿ ಸೀತಾದೇವಿಯು ಸುಂದರವಾದ ಮುಖವುಳ್ಳವಳಾಗಿ ಎಂತಿದ್ದಳೋ, ಅಂತು ಸುಖವಾಗಿರುವಂತೆ ನನಗೆ ಸಮರ್ಪಣಂ ಗೈದರೇ ಸರಿ ಇಲ್ಲದಿದ್ದರೆ, ದೇವ, ಗಂಧರ್ವ, ಮನುಷ್ಯಮೊದಲಾದವರಿಂದೊಡಗೂಡಿದ ಈ ಜಗವನ್ನು ವ್ಯತ್ಯಸ್ತವಾಗುವಂತೆ ಮಾಡುವೆನೆಂದು ಶ್ರೀರಾಮನು ನಿರೂಪಿಸಿದನು।

—* ಆರಣ್ಯಕಾಂಡದಲ್ಲಿನ ೬೪ನೇ ಸರ್ಗಂ ಮುಗಿದುದು *—

ಸೀತಾದೇವಿಯ ಅಪಹಾರದಿಂದ ಆ ರೀತಿಯಲ್ಲಿ ಸಂತಪಿಸುತ್ತಾ, ಲೋಕನಾಶವಂ ಗೈಯ್ಯುವದರಲ್ಲಿ ಆಸಕ್ತಿಯುಳ್ಳವನಾಗಿಯೂ, ಪ್ರಳಯಕಾಲದಲ್ಲಿರುವ ಅಗ್ನಿಯಂತೆ ಮಹಾ ಭಯಂಕರವಾಗಿ ಸನ್ನದ್ಧವಾಗಿರುವ ಕೋ

ಕ್ಷಮಾಣಂಧನುಸ್ಸಜ್ಯಂನಿಶ್ಶ್ವಸಂತಂಪುನಃಪುನಃ । ದಗ್ಧುಕಾಮಂಜಗತ್ಸರ್ವಂಯುಗಾಂತೇತುಯಥಾಹರಂ ‖೨‖
ಅದೃಷ್ಟಪೂರ್ವಂಸಂಕ್ರುದ್ಧಂದೃಷ್ಟ್ವಾರಾಮಂತುಲಕ್ಷ್ಮಣಃ‖ಅಬ್ರವೀತ್ಪ್ರಾಂಜಲಿರ್ವಾಕ್ಯಂಮುಖೇನಪರಿಶುಷ್ಯತಾ‖೩‖
ಪುರಾಭೂತ್ವಾಮೃದುರ್ದಾಂತಸ್ಸರ್ವಭೂತಹಿತೇರತಃ । ನಕ್ರೋಧವಶಮಾಪನ್ನಃಪ್ರಕೃತಿಂಹಾತುಮರ್ಹಸಿ ‖೪‖ ಚಂ
ದ್ರೇಲಕ್ಷ್ಮೀಃಪ್ರಭಾಸೂರ್ಯೇಗತಿರ್ವಾಯೌಭುವಿಕ್ಷಮಾ । ಏತಚ್ಚನಿಯತಂಸರ್ವಂತ್ವಯಿಚಾನುತ್ತಮಂಯಶಃ ‖೫‖ ಏ
ಕಸ್ಯನಾಪರಾಧೇನಲೋಕಾನ್ಹಂತುಂತ್ವಮರ್ಹಸಿ । ನತುಜಾನಾಮಿಕಸ್ಯಾಯಂಭಗ್ನಸ್ಸಾಂಗ್ರಾಮಿಕೋರಥಃ । ಕೇನ
ವಾಕಸ್ಯವಾಹೇತೋಸ್ಸಾಯುಧಸ್ಸಪರಿಚ್ಛದಃ ‖೬‖ ಖುರನೇಮಿಕ್ಷತಶ್ಚಾಯಂಸಿಕ್ತೋರುಧಿರಬಿಂದುಭಿಃ । ದೇಶೋನಿ
ರ್ವೃತ್ತಸಂಗ್ರಾಮಸ್ಸುಘೋರಃಪಾರ್ಥಿವಾತ್ಮಜ‖೭‖ಏಕಸ್ಯತುವಿಮರ್ದೋಽಯಂನದ್ವಯೋರ್ವದತಾಂವರ‖ನಹಿವೃತ್ತಂಹಿ

---

ಗೂಡಿದ, ಧನುಃ-ಬಿಲ್ಲಿನನ್ನು, ವೀಕ್ಷಮಾಣಂ-ನೋಡುತ್ತಿರುವ, ಪುನಃಪುನಃ-ಬಾರಿಬಾರಿಗೂ, ನಿಶ್ಶ್ವಸಂತಂ-ನಿಟ್ಟುಸುರುಬಿಡುತ್ತಿರುವ. ಯುಗಾಂತೇ-ಪ್ರಳಯಕಾಲದಲ್ಲಿ, ಸರ್ವಂಜಗತ್-ಸಮಸ್ತಲೋಕವನ್ನು ದಗ್ಧುಕಾಮಂ-ದಹಿಸಲಿಚ್ಛೆಯುಳ್ಳ. ಹರಂಯಥಾ-ಪ್ರಳಯ ರುದ್ರನಂತಿರುವ. ಅದೃಷ್ಟಪೂರ್ವಂ-ಎಂದಿಗೂ ನೋಡಲ್ಪಡದಿರುವ, ಸಂಕ್ರುದ್ಧಂ-ಕೋಪಿಷ್ಠನಾದ, ರಾಮಂ-ಶ್ರೀರಾಮನನ್ನು, ದೃಷ್ಟ್ವಾ-ಕಂಡು. ಲಕ್ಷ್ಮಣಃ-ಲಕ್ಷ್ಮಣನು ಪ್ರಾಂಜಲಿಃ-ಅಂಜಲಿಬದ್ಧನಾಗಿ. ಪರಿಶುಷ್ಯತಾ-ಒಣಗಿಹೋಗುತ್ತಿರುವ, ಮುಖೇನ-ಮುಖದಿಂದ. ಉಪಲಕ್ಷಿತಃ-ಕೂಡಿದವನಾಗಿ. ರಾಮಂ-ಶ್ರೀರಾಮನಂ ಕುರಿತು, ವಾಕ್ಯಂ-ಮಾತನ್ನು ಅಬ್ರವೀತ್-ನುಡಿದನು ‖೩‖ ಪುರಾ-ಪೂರ್ವದಲ್ಲಿ, ಮೃದುಃ-ಮೃದುಸ್ವಭಾವವುಳ್ಳವನಾಗಿ, ದಾಂತಃ-ಜಿತೇಂದ್ರಿಯನಾಗಿ ಸರ್ವಭೂತಹಿತೇ-ಸಮಸ್ತಪ್ರಾಣಿಗಳಲ್ಲಿಯೂ ಹಿತಮಾಡುವದರಲ್ಲಿ. ರತಃ-ಆಸಕ್ತನು, ಭೂತ್ವಾ-ಆಗಿ, ಕ್ರೋಧವಶಂ-ಕೋಪ ಸ್ವಾಧೀನತೆಯನ್ನು, ಆಪನ್ನಃ-ಹೊಂದಿದವನಾಗಿ. ಪ್ರಕೃತಿಂ-ಸ್ವಭಾವವನ್ನು, ಹಾತುಂ-ಬಿಡುವದಕ್ಕಾಗಿ. ನಾರ್ಹಸಿ-ಯೋಗ್ಯನಾಗಬ್ಯಾಡ‖೪‖ ಚಂದ್ರೇ-ಚಂದ್ರನಲ್ಲಿ, ಲಕ್ಷ್ಮೀಃ-ಕಾಂತಿಯು. ಸೂರ್ಯೇ-ಸೂರ್ಯನಲ್ಲಿ, ಪ್ರಭಾ-ಬಿಸಲು, ವಾಯೌ-ಗಾಳಿಯಲ್ಲಿ, ಗತಿಃ-ಗಮನವು. ಭುವಿ-ಭೂಮಿಯಲ್ಲಿ, ಕ್ಷಮಾ-ಕ್ಷಮೆಯು, ಏತಚ್ಚ-ಇದು, ನಿಯತಂ-ನಿಶ್ಚಯವಾಗಿರುವದು. ತ್ವಯಿ-ನಿನ್ನಲ್ಲಿ ಏತತ್ಸರ್ವಂ-ಈ ಕಾಂತ್ಯಾದಿ ಚತುಷ್ಟಯವು, ಅನುತ್ತಮಂ-ಸರ್ವೋತ್ತಮವಾದ, ಯಶಃ-ಕೀರ್ತಿಯು, ನಿಯತಂ-ನಿಯಮವಾಗಿದೆ ‖೫‖ ತ್ವಂ-ನೀನು, ಏಕಸ್ಯಾಪರಾಧೇನ-ಒಬ್ಬನ ಅಪರಾಧದಿಂದ, ಲೋಕಾನ್-ಸಮಸ್ತಜನರನ್ನು, ಹಂತುಂ-ಸಂಹಾರಮಾಡುವದಕ್ಕೋಸುಗ, ನಾರ್ಹಸಿ-ಯೋಗ್ಯನಾಗಬ್ಯಾಡ, ಕಸ್ಯ-ಯಾವ ಪುರುಷನ ಸಂಬಂಧಿಯಾದ. ಸಾಂಗ್ರಾಮಿಕಃ-ಯುದ್ಧಕ್ಕೆ ಉಪಯೋಗಿಯಾದ. ಅಯಂರಥಃ-ಈ ರಥವು, ಕೇನವಾ-ಯಾವನಿಂದ. ಲೋಕಸ್ಯವಾಹೇತೋಃ-ಯಾವನ ನಿಮಿತ್ತದಿಂದ, ಸಾಯುಧಃ-ಆಯುಧಗಳಿಂ ದೊಡಗೂಡಿದ್ದಾಗಿ, ಸಪರಿಚ್ಛದಃ-ಸಾಮಗ್ರಿಯುಕ್ತವಾಗಿ, ಭಗ್ನಃ-ಮುರಿದುಹೋಗಿದೆ, ಅಹಂತು-ನಾನಾದರೆ, ನಜಾನಾಮಿ-ತಿಳಿಯಲಾರೆನು‖೬‖ ಹೇಪಾರ್ಥಿವಾತ್ಮಜ-ಎಲೈ ಅರಸುಮಗನೆ. ಖುರನೇಮಿಕ್ಷತಃ-ಕುದುರೆಗಳ ಗೊರಸುಗಳಿಂದಲೂ, ರಥಚಕ್ರದ ಕೊನೆಗಳಿಂದಲೂ ತುಳಿಯಲ್ಪಟ್ಟ, ರುಧಿರಬಿಂದುಭಿಃ-ರಕ್ತದ ಹನಿಗಳಿಂದ, ಸಿಕ್ತಃ-ತೋಯಿಸಲ್ಪಟ್ಟ, ಅಯಂದೇಶಃ-ಈ ಪ್ರದೇಶವು, ನಿರ್ವೃತ್ತಸಂಗ್ರಾಮಃ-ಪೂರ್ತಿಯಾದ ಕಾಳಗ ಉಳ್ಳದ್ದಾಗಿ, ಸುಘೋರಃ-ಬಹಳ ಭಯಂಕರವಾಗಿದೆ ‖೭‖ ಹೇವದತಾಂವರ-ಎಲೈ ಮಾತಾಡುವರೊಳಗೆ ಬುದ್ಧಿವಂತನೇ, ಏಕಸ್ಯ-ಒಬ್ಬನದೇ, ಅಯಂವಿಮರ್ದಃ-ಈ ಕಾಳಗವು. ದ್ವಯೋಃ-ಇಬ್ಬರಿಗೂ, ನ-ಇಲ್ಲ, ಮಹತಃ-ಬಹಳವಾದ, ಬಲಸ್ಯ-ಸೈನ್ಯಕ್ಕೆ, ಪದಂ-ಸ್ಥಾನವನ್ನು, ವೃತ್ತಂ-ಇದ್ದನ್ನಾಗಿ,

---

ದಂಡವನ್ನು ನಿರೀಕ್ಷಿಸುವವನಾಗಿಯೂ, ಬಾರಿಬಾರಿಗೂ ನಿಟ್ಟುಸುರುಗಳಂ ಬಿಡುತ್ತಾ, ಪ್ರಳಯಕಾಲದಲ್ಲಿ ಸಮಸ್ತವಾದ ಜಗತ್ತನ್ನು ದಹಿಸಲಿಚ್ಛೆಯುಳ್ಳ ರುದ್ರನಂತೆ ನೋಡಲಸಾಧ್ಯನಾಗಿಯೂ, ಯೆಂದಿಗೂ ಇಲ್ಲದಿರುವ ಮಹಾ ಕೋಪವುಳ್ಳವನಾಗಿಯೂ, ಇರುವ ಶ್ರೀರಾಮನಂ ಕಂಡು ಲಕ್ಷ್ಮಣನು ಅಂಜಲಿ ಬಂಧವಂ ಗೈದು ಬತ್ತಿದ ಮುಖವುಳ್ಳವನಾಗಿ, ಆ ಅಗ್ರಜನಂ ಕುರಿತಿಂತೆಂದನು ।೩। ಎಲೈ ಪೂಜ್ಯನಾದ ಶ್ರೀರಾಮನೇ! ನೀನು ಮೃದುವಾದ ಸ್ವಭಾವವುಳ್ಳವನು, ಜಿತೇಂದ್ರಿಯನು ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡುವದರಲ್ಲಿ ಆಸಕ್ತಿಯುಳ್ಳವನು ಎಂಬದಾಗಿ ಪ್ರಸಿದ್ಧಿಯಂ ಪಡದು, ಈಗ ಕೋಪಕ್ಕೆ ಅಧೀನನಾಗಿ, ನಿನ್ನ ಸ್ವಭಾವವಂ ಬಿಡಲೂ ಅರ್ಹನಾಗಬೇಡ ।೪। ಚಂದಿರನಲ್ಲಿ ಕಾಂತಿಯೂ, ಸೂರ್ಯನಲ್ಲಿ ಪ್ರಭೆಯೂ ವಾಯುವಿನಲ್ಲಿ ಗಮನವೂ ಭೂಮಿಯಲ್ಲಿ ಕ್ಷಮೆಯೂ ಇದು ಎಂತು ನಿಯತವಾಗಿರುವದೋ, ಅಂತು ನಿನ್ನಲ್ಲಿ ಈ ನಾಲ್ಕು ಗುಣಗಳೂ ಮತ್ತೂ ಕೀರ್ತಿಯೂ ಸಹಾ ಸ್ಥಿರವಾಗಿದೆ ಓರ್ವನು ಮಾಡಿದ ಅಪರಾಧದಿಂದ ಸಮಸ್ತರನ್ನು ಕೊಲ್ಲಲರ್ಹನಾಗಬೇಡ, ಯುದ್ಧಂಗೈಯ್ಯುವದಕ್ಕೆ ಅರ್ಹವಾದ ಈ ರಥವು ಯಾವ ಪುರುಷನದೋ, ಇದು ಯಾರಿಂದ ಭಗ್ನಂ ಗೈಯ್ಯಲ್ಪಟ್ಟತೋ ನಾನು ತಿಳಿದುಕೊಂಡು ಬರುತ್ತೇನೆ ।೬। ಮತ್ತೂ ಈ ಸ್ಥಳವು ಕುದುರೆಗಳ ಗೊರಸುಗಳಿಂದಲೂ, ಚಕ್ರದ ಕೊನೆಗಳಿಂದಲೂ ಹೊಡೆಯಲ್ಪಟ್ಟದ್ದಾಗಿಯೂ, ರಕ್ತಬಿಂದುಗಳಿಂದ ತೋಯಿಸಲ್ಪಟ್ಟದ್ದಾಗಿಯೂ ಇರುವದರಿಂದ ಇಲ್ಲಿ ಯುದ್ಧನಡೆದಿರಬಹುದು, ಬಹುತರವಾಗಿ ಇಲ್ಲಿ ಒಬ್ಬರಿಗೊಬ್ಬರಿಗೆ ಕಾಳಗವು ಸಂಭವಿಸಲಿಲ್ಲ; ಬಹು ಜನಗಳಿಗೆ

ಪಶ್ಯಾಮಿ ಬಲಸ್ಯೈವಮುಹತಃ ಪದಂ ॥೯॥ ನೈಕಸ್ಯತುಕೃತೇಲೋಕಾನ್ವಿನಾಶಯಿತುಮರ್ಹಸಿ। ಯುಕ್ತದಂಡಾಹಿಮೃದವಃ ಪ್ರಶಾಂತಾವಸುಧಾಧಿಪಾಃ । ಸದಾತ್ವಂಸರ್ವಭೂತಾನಾಂಶರಣ್ಯಃಪರಮಾಗತಿಃ॥ ಕೋನುದಾರಪ್ರಣಾಶಂತೇಸಾಧುಮನ್ಯೇತರಾಘವ ॥೧೦॥ ಸರಿತಸ್ಸಾಗರಾಶ್ಶೈಲಾದೇವಗಂಧರ್ವದಾನವಾಃ। ನಾಲಂತೇವಿಪ್ರಿಯಂಕರ್ತುಂದೀಕ್ಷಿತಸ್ಯೇವಸಾಧವಃ ॥೧೧॥ ಯೇನರಾಜನ್ಹೃತಾಸೀತಾತಮನ್ವೇಷಿತುಮರ್ಹಸಿ। ಮದ್ದ್ವಿತೀಯೋಧನುಷ್ಪಾಣಿಸ್ಸಹಾಯೈಃಪರಮರ್ಷಿಭಿಃ॥೧೨॥ಸಮುದ್ರಂಚವಿಚೇಷ್ಯಾಮಃಪರ್ವತಾಂಶ್ಚವನಾನಿಚ। ಗುಹಾಶ್ಚವಿವಿಧಾಘೋರಾನದೀಃಪದ್ಮವನಾನಿಚ।೧೩॥ ದೇವಗಂಧರ್ವಲೋಕಾಂಶ್ಚವಿಚೇಷ್ಯಾಮಸ್ಸಮಾಹಿತಾಃ। ಯಾವನ್ನಾಧಿಗಮಿಷ್ಯಾಮಸ್ತವಭಾರ್ಯಾಪಹಾರಿಣಂ॥೧೪॥ ನಚೇತ್ಸಾಮ್ನಾಪ್ರದಾಸ್ಯಂತಿಪತ್ನೀಂತೇತ್ರಿದಶೇಶ್ವರಾಃ। ಕೋಸಲೇಂದ್ರತತಃಪಶ್ಚಾತ್ಪ್ರಾಪ್ತಕಾಲಂಕರಿಷ್ಯಸಿ ॥೧೫॥ ಶೀಲೇನಸಾ

---

ಪಶ್ಯಾಮಿಹಿ-ಕಾಣೆನಷ್ಟೆ ॥೯॥ ॥ ಏಕಸ್ಯತು-ಒಬ್ಬನ ನಿಮಿತ್ತವಾಗಿ ಆದರೆ, ಲೋಕಾನ್-ಮೂರು ಲೋಕವನ್ನು, ವಿನಾಶಯಿತುಂ-ನಾಶಗೊಳಿಸುವದಕ್ಕೋಸುಗ, ನಾರ್ಹಸಿ-ಯೋಗ್ಯನಾಗಬ್ಯಾಡ, ಹಿ-ಯಾವಕಾರಣದದೆಶೆಯಿಂದ, ಮೃದವಃ-ಕಠಿನರಾಗದಿರುವ, ಪ್ರಶಾಂತಾಃ-ಶಾಂತರಾದ, ವಸುಧಾಧಿಪಾಃ-ಅರಸುಗಳು, ಯುಕ್ತದಂಡಾಃ-ಅಪರಾಧಕ್ಕೆ ಯೋಗ್ಯವಾದ ಶಿಕ್ಷೆಯನ್ನು ಮಾಡುವರೋ, ತಸ್ಮಾತ್-ಆಕಾರಣದದೆಶೆಯಿಂದ, ತ್ವಂ-ನೀನು. ಸದಾ-ಸರ್ವಕಾಲದಲ್ಲಿಯೂ. ಸರ್ವಭೂತಾನಾಂ-ಸರ್ವಪ್ರಾಣಿಗಳಿಗೂ, ಶರಣ್ಯಃ-ರಕ್ಷಕನಾಗಿ, ಪರಮಾಗತಿಃ-ಒಹಳ ಪ್ರಾಪ್ಯನಾಗಿದ್ದೀಯಿ ॥೧೦॥ ಹೇರಾಘವ-ಎಲೈ ಶ್ರೀರಾಮನೇ, ಕಃ-ಯಾವೋನು ತಾನೇ, ತೇ-ನಿನ್ನ. ದಾರಪ್ರಣಾಶಂ-ಹೆಂಡತಿಯನಾಶವನ್ನು. ಸಾಧು-ಒಳ್ಳೇದನ್ನಾಗಿ. ಮನ್ಯೇತ-ಎಣಿಸುವನು, ಸರಿತಃ-ನದಿಗಳು. ಸಾಗರಾಃ-ಕಡಲುಗಳು, ಶೈಲಾಃ-ಬೆಟ್ಟಗಳು, ದೇವಗಂಧರ್ವದಾನವಾಃ-ದೇವತೆಗಳೂ ಗಂಧರ್ವರೂ ದಾನವರೂ, ದೀಕ್ಷಿತಸ್ಯ-ಆರಂಭಿಸಲ್ಪಟ್ಟ ದೀಕ್ಷೆಯುಳ್ಳವನಿಗೆ, ಸಾಧವಇವ-ಋತ್ವಿಕ್ಕುಗಳಂತೆ, ತೇ-ನಿನಗೆ, ವಿಪ್ರಿಯಂ-ಅನಿಷ್ಟವನ್ನು. ಕರ್ತುಂ-ಮಾಡುವದಕ್ಕೆ, ನಾಲಂ-ಅರ್ಹರಾಗಲಾರರು ॥೧೧॥ ॥ ಹೇರಾಜನ್-ಎಲೈ ಅರಸೇ, ಸೀತಾ-ಸೀತಾದೇವಿಯು. ಯೇನ-ಯಾವೋನಿಂದ, ಹೃತಾ-ಅಪಹರಿಸಲ್ಪಟ್ಟಳೋ, ಮದ್ದ್ವಿತೀಯಃ-ನಾನೇ ಎರಡನೇಯುವನಾಗಿ, ಧನುಷ್ಪಾಣಿಃ-ಧನುರ್ಧಾರಿಯಾಗಿ, ಸಹಾಯೈಃ-ಸಹಾಯಭೂತರಾದ, ಪರಮರ್ಷಿಭಿಃ-ಋಷಿಗಳೊಡಗೂಡ. ತಂ-ಆ ಪುರುಷನನ್ನು, ಅನ್ವೇಷಿತುಂ-ಹುಡುಕುವದಕ್ಕೆ. ಅರ್ಹಸಿ-ಯೋಗ್ಯನಾಗು ॥೧೨॥ ॥ ಸಮುದ್ರಂಚ-ಕಡಲನ್ನೂ, ಪರ್ವತಾಂಶ್ಚ-ಬೆಟ್ಟಗಳನ್ನೂ, ವನಾನಿಚ-ಅರಣ್ಯಗಳನ್ನೂ, ವಿವಿಧಾಃ-ನಾನಾಬಗೆಗಳಾದ. ಘೋರಾಃ-ಭಯಂಕರಗಳಾದ, ಗುಹಾಶ್ಚ-ಗುಹೆಗಳನ್ನೂ. ನದೀಃ-ನದಿಗಳನ್ನೂ, ಪದ್ಮವನಾನಿಚ-ಕಮಲಗಳ ವನಗಳನ್ನೂ, ವಿಚೇಷ್ಯಾಮಃ-ಹುಡುಕೋಣ ॥೧೩॥ ॥ ಸಮಾಹಿತಾಃ-ಸಾವಧಾನಮನಸ್ಕರಾಗಿ, ದೇವಗಂಧರ್ವಲೋಕಾಂಶ್ಚ-ದೇವತೆಗಳ ಗಂಧರ್ವರ ಲೋಕಗಳನ್ನೂ, ವಿಚೇಷ್ಯಾಮಃ-ಹುಡುಕೋಣ, ಯಾವತ್-ಎಷ್ಟರಪರ್ಯಂತರವೂ, ತವ-ನಿನ್ನ. ಭಾರ್ಯಾಪಹಾರಿಣಂ-ಹೆಂಡತಿಯನ್ನಪಹರಿಸಿಕೊಂಡು ಹೋದಂಥಾವನನ್ನು, ನಾಧಿಗಮಿಷ್ಯಾಮಃ-ಹೊಂದೋದಿಲ್ಲವೋ, ತಾವತ್-ಅಷ್ಟರವರಿವಿಗೂ, ವಿಚೇಷ್ಯಾಮಃ-ಹುಡುಕೋಣ ॥೧೪॥ ॥ ಹೇಕೋಸಲೇಂದ್ರ-ಎಲೈ ಕೋಸಲದೇಶಾಧೀಶ್ವರನೇ, ಸಾಮ್ನಾ-ಸಾಮೋಪಾಯದಿಂದ, ತ್ರಿದಶೇಶ್ವರಾಃ-ದೇವತಾಶ್ರೇಷ್ಠರು, ತೇ-ನಿನ್ನ, ಪತ್ನೀಂ-ಹೆಂಡತಿಯನ್ನು, ನಪ್ರದಾಸ್ಯಂತಿಚೇತ್-ಕೊಡದೇಹೋದರೆ, ತತಃಪಶ್ಚಾತ್-ಆಬಳಿಕ, ಪ್ರಾಪ್ತಕಾಲಂ-ಯುದ್ಧಕಾಲಕ್ಕೆ ಯೋಗ್ಯವಾದ್ದಂತೆ, ಕರಿಷ್ಯಸಿ-ಮಾಡುವಿ ॥೧೫॥ ॥ ಹೇನರೇಂದ್ರ-ಎಲೈ ರಾಜನೇ, ಶೀಲೇನ-ಸ್ವಭಾವದಿಂದ, ಸಾಮ್ನಾ-ಸಾಮೋಪಾಯದಿಂದ, ವಿನಯೇನ-ವಿನಯದಿಂದ,

---

ಪ್ರಾಪ್ತವಾದಂತೆ ಕಾಣಲ್ಪಡುತ್ತೆ ॥೯॥ ನೀನು ಒಬ್ಬನಿಗಾಗಿ ಲೋಕವನ್ನೆಲ್ಲ ನಾಶಂ ಗೈಯ್ಯಲರ್ಹನಾಗಬೇಡ, ಯಾಕಂದರೆ,— ಲೋಕದಲ್ಲಿ ಮೃದುಸ್ವಭಾವವುಳ್ಳವರಾಗಿಯೂ, ಉಪಶಾಂತರಾಗಿಯೂ ಇರುವ ಅರಸುಗಳು ಅಪರಾಧಕ್ಕೆ ಯೋಗ್ಯವಾದ ದಂಡನೆಯಂ ವಿಧಿಸುವರೇ ಹೊರತು ವಿಪರೀತವಾಗಿ ಶಿಕ್ಷೆಯಂ ಗೈಯ್ಯುವದಿಲ್ಲ, ನೀನು ಸದಾಕಾಲದಲ್ಲಿಯೂ ಪ್ರಾಣಿಗಳಿಗೆಲ್ಲ ರಕ್ಷಕನಾಗಿಯೂ ಪರಮಗತಿರೂಪನಾಗಿಯೂ ಇದ್ದೀ ॥೧೦॥ ರಘುಕುಲೋತ್ಪನ್ನನಾದ ಶ್ರೀರಾಮನೇ! ಯಾವ ಪುರುಷನು ತಾನೇ ನಿನ್ನ ದಾರನಾಶವನ್ನು ಒಳ್ಳೇದೆಂದು ತಿಳಿವನು, ನದಿಗಳೂ, ಸಮುದ್ರಗಳೂ, ಪರ್ವತಗಳೂ, ದೇವಾದಿಗಳೂ ಇವರೆಲ್ಲ ಅಶ್ವಮೇಧ ಯಜ್ಞಾದಿ ಕರ್ಮಗಳನ್ನುದ್ದೇಶಿಸಿ ದೀಕ್ಷಾಬದ್ಧನಾದವನಿಗೆ ಋತ್ವಿಜರು ಸಹಾಯಕರಾಗಿರುವಂತೆ, ನಿನಗೆ ಸಹಾಯಕರಾಗಿರುವರೇ ಹೊರತು ಅನಿಷ್ಟವಂ ಮಾಡತಕ್ಕವರಲ್ಲ ॥೧೧॥ ಎಲೈ ರಾಜಪುತ್ರನಾದ ಶ್ರೀರಾಮನೇ! ಜನಕರಾಜನಂದಿನಿಯಾದ ಸೀತಾದೇವಿಯು ಯಾವ ಪುರುಷನಿಂದ ಅಪಹಾರಂ ಗೈಯ್ಯಲ್ಪಟ್ಟಳೋ, ನೀನು ನನ್ನಿಂದೊಡಗೂಡಿ ಕೋದಂಡವಂ ಪಿಡಿದವನಾಗಿ, ಮಹರ್ಷಿಗಳಂ ಸಹಾಯಮಾಡಿಕೊಂಡು ಸಮುದ್ರದಲ್ಲಿಯೂ ಪರ್ವತಗಳಲ್ಲಿಯೂ, ವನಗಳಲ್ಲಿಯೂ, ಗುಹೆಗಳಲ್ಲಿಯೂ, ನದಿಗಳಲ್ಲಿಯೂ ಪದ್ಮಂಗಳ ವನಗಳಲ್ಲಿಯೂ ಸಹಾ ಹುಡುಕುವವನಾಗು ॥೧೩॥ ಎಲೈ ಅಣ್ಣನಾದ ಶ್ರೀರಾಮನೇ! ನಾವೆಲ್ಲರೂ ಗುಂಪು ಸೇರಿ, ದೇವಾದಿಗಳ ಲೋಕಂಗಳಲ್ಲಿ, ಸೀತಾದೇವಿಯು ಸಿಕ್ಕುವವರೆವಿಗೂ ಹುಡುಕುವಣ, ಅದುವರಿವಿಗೂ ನಿಧಾನಂ ಗೈಯ್ಯುವವನಾಗು, ಸಾಮೋಪಾಯದಿಂದ ದೇವತಾಶ್ರೇಷ

ವ್ಯಾನ್ನಿವಿನಯೇನಸೀತಾಂನಯಿನನಪ್ರಸ್ಯಸಿಚೇನ್ನರೇಂದ್ರ । ತತಸ್ಸಮುತ್ಪಾದಯಹೇಮಪುಂಖೈರ್ಮಹೇಂದ್ರವಜ್ರಪ್ರತಿ
ಮೈಶ್ಶರೌಘೈಃ ॥೧೬॥ ......**ಇತಿಶ್ರೀಮದಾರಣ್ಯಕಾಂಡೆ ಪಂಚಷಷ್ಟಿತಮಸ್ಸರ್ಗಃ **......

ತಂತಥಾಶೋಕಸಂತಪ್ತಂವಿಲಪಂತಮನಾಥವತ್ । ಮೋಹೇನಮಹತಾವಿಷ್ಟಂಪರಿದ್ಯೂನಮಚೇತನಂ । ತತ
ಸ್ಸೌಮಿತ್ರಿರಾಶ್ವಾಸ್ಯಮುಹೂರ್ತಾದಿವಲಕ್ಷ್ಮಣಃ । ರಾಮಂಸಂಬೋಧಯಾಮಾಸಚರಣೌಚಾಭಿಪೀಡಯನ್ ॥೨॥ ಮಹ
ತಾತಪಸಾರಾಮಮಹತಾಚಾಪಿಕರ್ಮಣಾ । ರಾಜ್ಞಾದಶರಥೇನಾಸಿಲಬ್ಧೋಮೃತಮಿವಾಮರೈಃ ॥೩॥ ತವಚೈವಗುಣೈರ್ಬ
ದ್ಧಸ್ತ್ವದ್ವಿಯೋಗಾನ್ಮಹೀಪತಿಃ । ರಾಜಾದೇವತ್ವಮಾಪನ್ನೋ ಭರತಸ್ಯಯಥಾಶ್ರುತಂ ॥೪॥ ಯದಿದುಃಖಮಿದಂಪ್ರಾಪ್ತಂ
ಕಾಕುತ್ಸ್ಥನಸಹಿಷ್ಯಸೆ । ಪ್ರಾಕೃತಶ್ಚಾಲ್ಪಸತ್ವಶ್ಚ ಇತರಃಕಸ್ಸಹಿಷ್ಯತಿ ॥೫॥ ದುಃಖಿತೋಹಿಭವಾನ್ಲೋಕಾಂಸ್ತೇಜಸಾಯ
ದಿಧಕ್ಷ್ಯತೆ । ಆರ್ತಾಃಪ್ರಜಾನರವ್ಯಾಘ್ರಕ್ವನುಯಾಸ್ಯಂತಿನಿರ್ವೃತಿಂ ॥೬॥ ಲೋಕಸ್ವಭಾವಏವೈಷಯಯಾತಿರ್ನಹುಷಾ

ನಯೇನ-ನೀತಿಯಿಂದಲೂ, ಸೀತಾಂ-ಸೀತಾದೇವಿಯನ್ನು, ನಪ್ರಪ್ಸ್ಯಸಿಚೇತ್-ಹೊಂದದೇಹೋದರೆ, ತತಃ-ಬಳಿಕ, ಹೇಮಪುಂಖೈಃ-ಭಂಗಾರದವಿಕಾರವಾದ ಕೊಂಕಿಗಳುಳ್ಳ, ಮಹೇಂದ್ರವಜ್ರಪ್ರತಿಮೈಃ-ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದ, ಶರೌಘೈಃ-ಬಾಣಗಳ ಶಂಡಗಳಿಂದ, ಸಮುತ್ಪಾದಯ-ವಿವಕ್ಷಿತಕಾರ್ಯವನ್ನು ಉತ್ಪಾದನೆಮಾಡು. ಯದ್ವಾ-ಸಮುತ್ಸಾದಯೇತಿಪಾಠಾಂತರಂ-ಆ ಪಕ್ಷದಲ್ಲಿ, ಲೋಕಾನ್-ಲೋಕಗಳನ್ನು, ಸಮುತ್ಸಾದಯ-ಧ್ವಂಸಮಾಡು ॥೧೬॥ ॥ —**ಇತಿಶ್ರೀಮದಾರಣ್ಯಕಾಂಡೆ-ಪಂಚಷಷ್ಟಿತಮಸ್ಸರ್ಗಃ**—

ತಥಾ-ಆಪರಿಯಾಗಿ, ಶೋಕಸಂತಪ್ತಂ-ದುಃಖದಿಂ ಪರಿತಪಿಸುತ್ತಿರುವ, ಅನಾಥವತ್-ಅನಾಥನಂತೆ, ವಿಲಪಂತಂ-ಪ್ರಲಾಪಮಾಡುತ್ತಿರುವ, ಮಹತಾ-ದೊಡ್ಡದಾದ, ಮೋಹೇನ-ಜ್ಞಾನದಿಂದ, ಆವಿಷ್ಟಂ-ವ್ಯಾಪ್ತನಾದ, ಪರಿದ್ಯೂನಂ-ಅಳುತ್ತಿರುವ, ಅಚೇತನಂ-ಪ್ರಜ್ಞಾಶೂನ್ಯನಾದ, ತಂರಾಮಂ-ಆ ಶ್ರೀರಾಮನನ್ನು, ಸೌಮಿತ್ರಿಃ-ಸುಮಿತ್ರೆಯ ಕುಮಾರನಾದ, ಲಕ್ಷ್ಮಣಃ-ಲಕ್ಷ್ಮಣನು, ಮುಹೂರ್ತಾದಿವ-ಮುಹೂರ್ತಕಾಲದಿಂದಲೇ, ಆಶ್ವಾಸ್ಯ-ಸಮಾಧಾನಗೊಳಿಸಿ, ತತಃ-ಬಳಿಕ, ಚರಣೌ-ಪಾದಗಳನ್ನು, ಅಭಿಪೀಡಯನ್-ಹಿಡಿದುಕೊಂಡವನಾಗಿ, ಸಂಬೋಧಯಾಮಾಸ-ಚನ್ನಾಗಿ ಬೋಧಿಸಿದನು ॥೨॥ ಹೇರಾಮ-ಎಲೈ ಶ್ರೀರಾಮನೇ, ಮಹತಾ-ಅಧಿಕವಾದ, ತಪಸಾ-ತಪಸ್ಸಿನಿಂದಲೂ, ಮಹತಾ-ದೊಡ್ಡದಾದ, ಕರ್ಮಣಾಚಾಪಿ-ಅಶ್ವಮೇಧ ಪುತ್ರಕಾಮೇಷ್ಟ್ಯಾದಿ ಸತ್ಕರ್ಮದಿಂದ, ದಶರಥೇನರಾಜ್ಞಾ-ದಶರಥಮಹಾರಾಜನಿಂದ, ಅಮರೈಃ-ದೇವತೆಗಳಿಂದ, ಅಮೃತಮಿವ-ಅಮೃತದಂತೆ, ಲಬ್ಧಃ-ಹೊಂದಲ್ಪಟ್ಟವನು, ಅಸಿ-ಆದೆ ॥೩॥ ಮಹೀಪತಿಃ-ಭೂಪತಿಯಾದ, ರಾಜಾ-ದಶರಥಮಹಾರಾಯನು, ತವ-ನಿನ್ನ, ಗುಣೈಶ್ಚೈವ-ಸೌಶೀಲ್ಯಾದಿ ಗುಣಗಳಿಂದಲೇ ಬದ್ಧಃ-ಬದ್ಧನಾಗಿ, ತ್ವದ್ವಿಯೋಗಾತ್-ನಿನ್ನ ವಿಯೋಗದವೆಶೆಯಿಂದಲೂ, ದೇವತ್ವಂ-ಪಂಚತ್ವವನ್ನು, ಆಪನ್ನಃ-ಹೊಂದಿದನು. ಇತಿ-ಇಂತೆಂದು, ಭರತಸ್ಯ-ಭರತನವೆಶೆಯಿಂದ, ಯಥಾ-ನಡದಂತೆ. ಶ್ರುತಂ-ಕೇಳಲ್ಪಟ್ಟಿತು, (ಯದ್ವಾಭರತಸ್ಯ-ಭರತನ, ಮುಖಾತ್-ಮುಖದವೆಶೆಯಿಂದ. ಯಥಾ-ಯಥಾವತ್ತಾಗಿ, ಶ್ರುತಂ-ಕೇಳಲ್ಪಟ್ಟಿತು ॥೪॥ ಹೇಕಾಕುತ್ಸ್ಥ-ಎಲೈ ಕಕುತ್ಸ್ಥವಂಶದಲ್ಲಿ ಪುಟ್ಟಿದವನೇ, ಪ್ರಾಪ್ತಂ-ಬಂದಂಥಾ. ಇದಂದುಃಖಂ-ಈ ದುಃಖವನ್ನು, ತ್ವಂ-ನೀನು, ನಸಹಿಷ್ಯಸೆಯದಿ-ಸಹಿಸದೇಹೋದರೆ, ಪ್ರಾಕೃತಶ್ಚ-ಪಾಮರನಾದ, ಅಲ್ಪಸತ್ವಶ್ಚ-ಸ್ವಲ್ಪಸಾಮರ್ಥ್ಯವುಳ್ಳ, ಇತರಃ-ಮತ್ತೊಬ್ಬನು ಕಃ-ಯಾವೋನು, ಸಹಿಷ್ಯತಿ-ಸಹಿಸುವನು ॥೫॥ ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಭವಾನ್-ನೀನು, ದುಃಖಿತಃ-ದುಃಖಿತನಾಗಿ, ತೇಜಸಾ-ಪರಾಕ್ರಮದಿಂದ, ಲೋಕಾನ್-ಲೋಕಗಳನ್ನು, ಧಕ್ಷ್ಯತೆಯದಿ-ದಹಿಸಿದವನೇಆದರೆ, ಆರ್ತಾಃ-ದೀನರಾದ, ಪ್ರಜಾಃ-ಪ್ರಜೆಗಳು, ನಿರ್ವೃತಿಂ-ಸುಖವ

ರು ನಿನ್ನ ಸತಿಯಾದ ಸೀತಾದೇವಿಯುಂ ಕೊಡದಿದ್ದರೆ, ಬಳಿಕ ನೀನು ಯುದ್ಧೋದ್ಯಮವಂ ಮಾಡುವವನಾಗಿ, ಹ್ಯಾಗೆ ನೀನು ಸೀತಾದೇವಿಯುಂ ಹೊಂದುವವನಾಗುವೆಯೋ, ಹಾಗೆ ಸುವರ್ಣವಿಕಾರವಾದ ಕೊಂಕಿಗಳುಳ್ಳ, ಮತ್ತೂ ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ನಿನ್ನ ಮನೋಭೀಷ್ಟವಂ ಪಡೆಯುವವನಾಗುವಿ ಎಂದು ಲಕ್ಷ್ಮಣನು ಶ್ರೀರಾಮನಿಗೆ ಪೇಳಿದವನಾದನು ॥೧೬॥—*ಆರಣ್ಯಕಾಂಡದಲ್ಲಿನ೬೫ನೆಯಸರ್ಗಂಮುಗಿದುದು *—

ಆ ರೀತಿಯಲ್ಲಿ ಮಹಾ ದುಃಖಾಕ್ರಾಂತನಾಗಿ ಮಹಾ ಮೋಹದಿಂದ ವ್ಯಾಪ್ತನಾಗಿರುವ ಶ್ರೀರಾಮನಂ ಸುಮಿತ್ರಾಪುತ್ರನಾದ ಲಕ್ಷ್ಮಣನು ಸ್ವಲ್ಪಕಾಲವು ಸಮಾಧಾನಗೊಳಿಸಿ, ಆತನ ಪಾದಂಗಳಂ ಪಿಡಿದು, ಎಲೈ ಶ್ರೀರಾಮನೇ! ಎಂದು ಸಂಬೋಧಿಸಿ ಇಂತೆಂದನು. ಏನಂದರೆ,—ನಾನಾ ವಿಧವಾದ ತಪಸ್ಸುಗಳಿಂದಲೂ ಅಶ್ವಮೇಧಾದಿ ಕ್ರತುಗಳಿಂದಲೂ ಸಹಾ ನೀನು ದಶರಥ ಮಹಾ ರಾಜನಿಂದ ದೇವತೆಗಳಿಂದ ಅಮೃತವು ಪಡೆಯಲ್ಪಟ್ಟಂತೆ ಪಡೆಯಲ್ಪಟ್ಟವನಾದೆ ॥೩॥ ಭೂಪತಿಯಾದ ಆ ಮಹಾ ರಾಜನು ಭರತನ ಮುಖದಿಂದ ಕೇಳಲ್ಪಟ್ಟಂತೆ, ನಿನ್ನ ಸೌಶೀಲ್ಯಾದಿ ಗುಣಂಗಳಿಂದ ಸ್ವರ್ಗವನ್ನೈದಿದವನಾದನು ॥೪॥ ಕಕುತ್ಸ್ಥವಂಶೋತ್ಪನ್ನನಾದ ಎಲೈ ಶ್ರೀರಾಮನೇ! ಈ ದುಃಖವನ್ನು ನೀನೇ ಸೈರಿಸದಿದ್ದರೆ, ಪ್ರಕೃತಿಸಂಬಂಧವುಳ್ಳವನಾದ ಇತರ ಮನುಷ್ಯನು ಯಾವನು ತಾನೇ ಸಹಿಸುವನು ॥೫॥ ಮತ್ತೂ ನೀನು ದುಃಖವನ್ನೈದಿದವನಾಗಿ, ಪರಾಕ್ರಮದಿಂದ ಲೋಕಂಗಳನೆಲ್ಲ ಸುಡುವ

ತ್ಮಜಃ । ಗತಶ್ಶಕ್ರೇಣಸಾಲೋಕ್ಯಮನಯಸ್ತಂತಮಸ್ಸ್ಪೃಶತ್ ॥೭॥ ಮಹರ್ಷಿರ್ಯೋವಸಿಷ್ಠಸ್ತುಯಃಪಿತುರ್ನಃಪುರೋಹಿತಃ । ಅಹ್ನಾಪುತ್ರಶತಂಜಜ್ಞೇತಥೈವಾಸ್ಯಪುನರ್ಹತಂ ॥೮॥ ಯಾಚೇಯಂಜಗತಾಂಮಾತಾದೇವೀಲೋಕನಮಸ್ಕೃತಾ । ಅಸ್ಯಾಶ್ಚಚಲನಂಭೂಮೇರ್ದೃಶ್ಯತೇಸತ್ಯಸಂಶ್ರವ ॥೯॥ ಯೌಧರ್ಮೌಜಗತಾಂನೇತ್ರೌಯತ್ರಸರ್ವಂಪ್ರತಿಷ್ಠಿತಂ । ಆದಿತ್ಯಚಂದ್ರೌಗ್ರಹಣಮಭ್ಯುಪೇತೌಮಹಾಬಲೌ ॥೧೦॥ ಸುಮಹಾಂತ್ಯಪಿಭೂತಾನಿದೇವಾಶ್ಚಪುರುಷರ್ಷಭ । ನದೈವಸ್ಯಪ್ರಮುಂಚಂತಿಸರ್ವಭೂತಾದಿದೇಹಿನಃ ॥೧೧॥ ಶಕ್ರಾದಿಷ್ವಪಿದೇವೇಷುವರ್ತಮಾನೌನಯಾನಯೌ । ಶ್ರೂಯೇತೇನರಶಾ

ನ್ನು, ಕ್ವಯಾಸ್ಯಂತಿ-ಎಲ್ಲಿಹೊಂದ್ಯಾರು ॥೬॥ ಏಷಃ-ಇದು, ಲೋಕಸ್ವಭಾವಃ-ಲೋಕ-ಜನರ, ಸ್ವಭಾವಃ-ಸ್ವಭಾವವು, ನಹುಷಾತ್ಮಜಃ-ನಹುಷರಾಯನ ಮಗನಾದ, ಯಯಾತಿಃ-ಯಯಾತಿಮಹಾರಾಯನು, ಶಕ್ರೇಣ-ದೇವೇಂದ್ರನಿಂದ. ಸಾಲೋಕ್ಯಂ-ಸಮಾನಲೋಕಪ್ರಾಪ್ತಿಯನ್ನು, ಗತಃ-ಹೊಂದಿದವನಾಗಿ. ತಮಃ-ಅಜ್ಞಾನವನ್ನು. (ಅಂದರೆ-ಆತ್ಮಶ್ಲಾಘನೆರೂಪವಾದ ಆತ್ಮಸ್ತುತಿಯನ್ನು ಮಾಡಿಕೊಳ್ಳಬಾರದೆಂಬ ಬುದ್ಧಿಯಿಲ್ಲದವನಾಗಿ ಆ ವಿಷಯಕವಾದ ಅಜ್ಞಾನವನ್ನು,) ಸ್ಪೃಶತ್-ಹೊಂದಿದನು, (ಮತ್ತು. ಅನಯಃ-ನೀತಿಮಾರ್ಗವಂ ತಪ್ಪಿರುವ ನಹುಷರಾಯನು, ಶಕ್ರೇಣ-ದೇವೇಂದ್ರನಿಂದ ಸಾಲೋಕ್ಯಂ-ಸಮಾನಲೋಕಪ್ರಾಪ್ತಿಯನ್ನು, ಗತಃ-ಹೊಂದಿದವನಾದನು. ತಂ-ಆ ನಹುಷರಾಯನನ್ನು. ತಮಃ-ಶಚೀದೇವೀವಿಷಯಕವಾದ ಮೋಹವು, ಸ್ಪೃಶತ್-ಹೊಂದಿತು, (ಅಂದರೆ-ನಹುಷರಾಯನು ಸ್ವರ್ಗರಾಜ್ಯಾಧಿಪತ್ಯವಂ ಪೊಂದಿದವನಾಗಿ ಶಚೀದೇವಿಯು ಯಾತಕ್ಕೆ ನನ್ನ ಸ್ವಾಧೀನವಾಗಲಿಲ್ಲವೆಂದು ಕೇಳಲಾಗಿ ಸಪ್ತಋಷಿಗಳಿಂದ ಪಾಲಕ್ಕಿ ಹೊರಿಸಿಕೊಂಡು ನಮ್ಮ ಮನೆಗೆ ಬಂದರೆ ನಾನು ಸ್ವಾಧೀನಳಾಗುವೆನೆಂದು ಶಚೀದೇವಿಯು ಹೇಳಲು. ಆಗ ಸಪ್ತಋಷಿಗಳಿಂ ಪಾಲಕ್ಕಿಯಂ ಹೊರಿಸಿಕೊಂಡು ಮಧ್ಯಮಾರ್ಗದಲ್ಲಿ ಅಗಸ್ತ್ಯರಿಂ ಸರ್ಪವಾಗೂ ಎಂದು ಶಪ್ತನಾಗಿ ಶಚೀದೇವಿಯಲ್ಲಿ ಮೋಹದಿಂ ಕೆಳಕ್ಕೆ ಬಿದ್ದುಹೋದನೆಂದು ತಾತ್ಪರ್ಯವು.) (ಅನಯಸ್ತಂಸಮಸ್ಪೃಶದಿತಿಪಾಠಾಂತರಂ-ಆ ಪಾಠದಲ್ಲಿ ಅನಯಃ-ದುರ್ದಶೆಯು, ತಂ-ಆ ನಹುಷರಾಯನನ್ನು, ಸಮಸ್ಪೃಶತ್-ಹೊಂದಿತು) ॥೭॥ ವಸಿಷ್ಠಃ-ವಸಿಷ್ಠರೆಂಬ, ಮಹರ್ಷಿಃ-ಮಹರ್ಷಿಯು, ಯಃ-ಯಾವನೋ, ಯಃ-ಯಾವ ವಸಿಷ್ಠಋಷಿಯು, ನಃ-ನಮ್ಮಗಳ, ಪಿತುಃ-ತಂದೆಯಾದ ದಶರಥರಾಯನಿಗೆ, ಪುರೋಹಿತಃ-ಕುಲಾಚಾರ್ಯನೋ, ಅಸ್ಯ-ಈ ವಸಿಷ್ಠಋಷಿಗೆ, ಅಹ್ನಾ-ಒಂದು ಹಗಲಿನಿಂದ. ಪುತ್ರಶತಂ-ನೂರುಮಂದಿ ಮಕ್ಕಳು, ಜಜ್ಞೇ-ಹುಟ್ಟಿದರು, ತಥೈವ-ಹಾಗೆಯೇ, ಪುನಃ-ಮತ್ತು, ಹತಂ-ಹತರಾದರು. (ಆದ್ದರಿಂದ ಸುಖದುಃಖಗಳು ಸಮವೆಂದು ತಾತ್ಪರ್ಯವು ॥೮॥ ಜಗತಾಂ-ಜಗತ್ತುಗಳಿಗೆ, ಮಾತಾ-ತಾಯಿಯಾದ, ಲೋಕನಮಸ್ಕೃತಾ-ಜನರಿಂದ ನಮಸ್ಕರಿಸಲ್ಪಟ್ಟ, ಇಯಂದೇವೀ-ಈ ಭೂಮಿಯು, ಯಾ-ಯಾವಳೋ, ಹೇಸತ್ಯಸಂಶ್ರವ-ಎಲೈ ಸತ್ಯಪ್ರತಿಜ್ಞೆಯುಳ್ಳವನೇ, ಅಸ್ಯಾಭೂಮೇಃ-ಈ ಭೂಮಿಗೂಕೂಡ. ಚಲನಂ-ಕಂಪನವು, ದೃಶ್ಯತೇ-ಕಾಣಲ್ಪಡುತ್ತದೆ ॥೯॥ ಯೌ-ಯಾವ ಸೂರ್ಯಚಂದ್ರರು, ಧರ್ಮೌ-ಧರ್ಮಪ್ರವರ್ತಕರಾಗಿ, ಜಗತಾಂ-ಲೋಕಗಳಿಗೆ, ನೇತ್ರೌ-ನಾಯಕರಾಗಿಧಾರೆಯೋ, ಮಹಾಬಲೌ-ಪರಮಸಾಮರ್ಥ್ಯವಂತರಾದ, ತೌಆದಿತ್ಯಚಂದ್ರೌ-ಆ ಸೂರ್ಯಚಂದ್ರರು, ಗ್ರಹಣಂ-ರಾಹುಗ್ರಾಸವನ್ನು, ಅಭ್ಯುಪೇತೌ-ಹೊಂದಿದರು ॥೧೦॥ ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ. ಸುಮಹಾಂತಿ-ಬಹಳ ಮಹತ್ತರವಾದ, ಭೂತಾನಿ-ಪಂಚಭೂತಾತ್ಮಕರಾದ ನಳಮಾಂಧಾತೃಪ್ರಭೃತಿಗಳು, ದೇವಾಶ್ಚ-ದೇವತೆಗಳೂ, ಸರ್ವಭೂತಾದಿದೇಹಿನಃ-ಸರ್ವಪ್ರಾಣಿಗಳಿಗೂ ಆದಿದೇಹಧಾರಿಯಾದ,

ವನಾದರೆ, ದೀನರಾದ ಪ್ರಜೆಗಳೆಲ್ಲರು ಎಲ್ಲಿ ಸುಖವನ್ನು ಪಡೆವರು? ॥೬॥ ಲೋಕಸ್ವಭಾವವು ಈ ರೀತಿಯಾಗಿಯೇ ಇರುವದು, ಈ ವಿಷಯದಲ್ಲಿ ಕೆಲವು ದೃಷ್ಟಾಂತಂಗಳಂ ಪೇಳುವೆನು, ಏನಂದರೆ,—ನಹುಷ ಮಹಾರಾಯನ ಪುತ್ರನಾದ ಯಯಾತಿ ಮಹಾರಾಜನು ದೇವೇಂದ್ರನ ಸಾಮೀಪ್ಯವನ್ನೈದಿದವನಾಗಿ, ಅಜ್ಞಾನವಂ ಪೊಂದಿದನು (ಅದು ಹ್ಯಾಗಂದರೆ,—ಆ ನಹುಷರಾಯನು ತಾನು ಸ್ವರ್ಗಾಧಿಪತ್ಯವಂ ಪೊಂದಿದವನಾದರೂ ಶಚೀದೇವಿಯು ಆತನ ಸ್ವಾಧೀನವನ್ನು ಹೊಂದಲಿಲ್ಲ, ಆಗ ಆ ಮಹಾರಾಜನು ಆಕೆಯು ಮಾತ್ರ ತನ್ನ ಸ್ವಾಧೀನವಾಗದಿರುವ ವಿಷಯದಲ್ಲಿ ಕೇಳಿದವನಾಗಲೂ, ಆ ದೇವಿಯು ಈ ರೀತಿಯಲ್ಲಿ ಪೇಳಿದಳು, ಏನಂದರೆ,—ಎಲೈ ಮಹಾರಾಜನೇ! ನೀನು ಸಪ್ತಋಷಿಗಳಿಂದ ಪಾಲಕಿಯನ್ನು ಹೊರಿಸಿಕೊಂಡು ನಮ್ಮ ಮಂದಿರಕ್ಕೆ ಬಂದವನಾದರೆ, ಆಗ ನಾನು ಸ್ವಾಧೀನಳಾಗುವೆನೆಂದು ನುಡಿದ ವಾಕ್ಯವಂ ಕೇಳಿ, ಆ ರಾಜನು ಅದೇರೀತಿಯಲ್ಲಿ ಬರುತ್ತಿರಲೂ, ಆ ಸಮಯದಲ್ಲಿ ಮಾರ್ಗಮಧ್ಯದೊಳು ಅಗಸ್ತ್ಯ ಮಹಾ ಮುನಿಯಿಂದ ಸರ್ಪವಾಗೆಂದು ಶಪಿಸಲ್ಪಟ್ಟನೆಂದು ಭಾವವು) ॥೭॥ ಇದಲ್ಲದೆ ನಮ್ಮ ತಂದೆಯಾದ ಮಹಾ ರಾಜನಿಗೂ ಕೂಡಾ ಪುರೋಹಿತನಾದ ವಸಿಷ್ಠಮಹಾ ಮುನಿಯು ಯಾರೋಆತನಿಗೆ ಒಂದು ಹಗಲಿನಲ್ಲಿಯೇ ನೂರುಮಂದಿ ಪುತ್ರರುಂಟಾದರು, ಮತ್ತು ಆಮಕ್ಕಳೆಲ್ಲರುಅದರಂತೆಯೇ ಹತರಾದರು ॥೮॥ ಜಗನ್ಮಾತೆಯಾದ ಈ ಭೂದೇವಿಯೂ ಕೂಡಾ ಸಂಚಲಿಸುತಲಿಥೆ, ಮತ್ತೂ ಜಗತ್ತಿಗೆಲ್ಲ ನೇತ್ರಂಗಳ ರೂಪವಾಗಿರುವ ಸೂರ್ಯಚಂದ್ರರೂ ಸಹಾ ಗ್ರಹಣವನ್ನೈದುವರು ॥೧೦॥ ಎಲೈ ಪುರುಷಶ್ರೇಷ್ಠನಾದ ಶ್ರೀರಾಮನೇ! ಪಾಂಚಭೌತಿಕವಾದ ಶರೀರವುಳ್ಳ ನಳಮಾಂಧಾತಾದಿ ಚಕ್ರವರ್ತಿಗಳೂ ದೇವತೆಗಳೂ ಸಹಾ, ಸರ್ವಪ್ರಾ

ರ್ದೂಲನತ್ವಂಶೋಚಿತುಮರ್ಹಸಿ ।೧೨। ನಷ್ಟಾಯಾಮಪಿವೈದೇಹ್ಯಾಂಹೃತಾಯಾಮಪಿಚಾನಘ। ಶೋಚಿತುಂನಾರ್ಹಸೇವೀ
ರಯಥಾನ್ಯಃಪ್ರಾಕೃತಸ್ತಥಾ।೧೩। ತ್ವದ್ವಿಧಾನಹಿಶೋಚಂತಿಸತತಂಸತ್ಯದರ್ಶಿನಃ । ಸುಮಹತ್ಸ್ವಪಿಕೃಚ್ಛ್ರೇಷುರಾಮ
ಾನಿರ್ವಿಣ್ಣದರ್ಶನಾಃ ।೧೪। ತತ್ವತೋಹಿನರಶ್ರೇಷ್ಠಬುದ್ಧ್ಯಾಸಮನುಚಿಂತಯ । ಬುದ್ಧ್ಯಾಯುಕ್ತಾಮಹಾಪ್ರಾ
ಜ್ಞಾವಿಜಾನಂತಿಶುಭಾಶುಭೆ ।೧೫। ಅದೃಷ್ಟಗುಣದೋಷಾಣಾಮಧೃತಾನಾಂಚಕರ್ಮಣಾಂ । ನಾಂತರೇಣಕ್ರಿಯಾಂ
ತೇಷಾಂಫಲಮಿಷ್ಟಂಪ್ರವರ್ತತೆ ।೧೬। ತ್ವಮೇವಹಿಪುರಾರಾಮಮಾಮೇವಂಬಹುಶೋನ್ವಶಾಃ । ಅನುಶಿಷ್ಯಾದ್ಧಿಕೋನು
ತ್ವಾಮಪಿಸಾಕ್ಷಾದ್ಬೃಹಸ್ಪತಿಃ।೧೭। ಬುದ್ಧಿಶ್ಚತೆಮಹಾಪ್ರಾಜ್ಞದೇವೈರಪಿದುರನ್ವಯಾ। ಶೋಕೇನಾಭಿಪ್ರಸುಪ್ತಂತೆಜ್ಞಾ
ನಂಸಂಬೋಧಯಾಮ್ಯಹಂ ।೧೮। ದಿವ್ಯಂಚಮಾನುಷಂಚತ್ವಮಾತ್ಮನಶ್ಚಪರಾಕ್ರಮಂ । ಇಕ್ಷ್ವಾಕುವೃಷಭಾವೆ

---

ದೈವಸ್ಯ-ದೇವರ, ವಶಂ-ಸ್ವಾಧೀನತೆಯನ್ನು, ನಪ್ರಮುಂಚಂತಿ-ಬಿಡಲಾರರು ||೧೧|| ಹೆನರಶಾರ್ದೂಲ-ಎಲೈ ಮನುಷ್ಯಶ್ರೇಷ್ಠನೇ, ಶಕ್ರಾದಿಷು-ದೇವೇಂದ್ರನೇ ಮೊದಲಾಗುಳ್ಳ, ದೇವೇಷ್ವಪಿ-ದೇವತೆಗಳಲ್ಲಿಯೂ, ನಯಾನಯೌ-ಸನ್ಮಾರ್ಗದುರ್ಮಾರ್ಗಗಳಿಂ ಪುಟ್ಟಿದ ಸುಕೃತ ದುಷ್ಕೃತ ಕಾರ್ಯಗಳು, ವರ್ತಮಾನೌ-ಇದ್ದವುಗಳಾಗಿ, ಶ್ರೂಯತೆ-ಕೇಳಲ್ಪಡುತ್ತದೆ, ತ್ವಂ-ನೀನು, ಶೋಚಿತುಂ-ದುಃಖಿಸುವದಕ್ಕಾಗಿ, ನಾರ್ಹಸಿ-ಯೋಗ್ಯನಾಗಬ್ಯಾಡ|| ೧೨|| ಹೆಅನಘ-ಎಲೈ ನಿರ್ದೋಷನೇ, ವೈದೇಹ್ಯಾಂ-ಸೀತಾದೇವಿಯು, ನಷ್ಟಾಯಾಂ-ಅದರ್ಶನವಂ ಪೊಂದಿದವಳಾಗಿ, ಹೃತಾಯಾಂಸತ್ಯಾಮಪಿ-ಅಪಹರಿಸಲ್ಪಟ್ಟವಳಾಗುತ್ತಿರಲೀಕಾಗಿ, ಹೆವೀರ-ಎಲೈ ಶೂರನೇ, ಪ್ರಾಕೃತಃ-ಪಾಮರನಾದ, ಅನ್ಯಃ-ಮತ್ತೊಬ್ಬಪುರುಷನು, ಯಥಾ-ಹ್ಯಾಗೋ, ತಥಾ-ಹಾಗೆ, ತ್ವಂ-ನೀನು, ಶೋಚಿತುಂ-ಅಳುವದಕ್ಕೆ, ನಾರ್ಹಸಿ-ಯೋಗ್ಯನಾಗಲಾರೆ ||೧೩|| ಹೆರಾಮ-ಎಲೈ ಶ್ರೀರಾಮನೇ, ತ್ವದ್ವಿಧಾಃ-ನಿನ್ನಂಥಾವರು. ಅನಿರ್ವಿಣ್ಣದರ್ಶನಾಃ-ದುಃಖಪರಿಹಾರಕವಾದ ನೋಟವುಳ್ಳವರಾಗಿ. (ಅಂದರೆ-ಬ್ರಹ್ಮಜ್ಞಾನಿಗಳಾಗಿ,) ಸತತಂ-ನಿರಂತರವೂ, ಸತ್ಯದರ್ಶನಃ-ಸಫಲವಾದ ಜ್ಞಾನವುಳ್ಳವರಾಗಿ, ಸುಮಹತ್ಸ್ವಪಿ-ಜಹಳ ದೊಡ್ಡವುಗಳಾದರೂ, ಕೃಚ್ಛ್ರೇಷು-ವ್ಯಸನಗಳಲ್ಲಿ, ನಶೋಚಂತಿಹಿ-ದುಃಖಗೊಂಡವರಾಗುವದಿಲ್ಲವಷ್ಟೆ|| ಹೆನರಶ್ರೇಷ್ಠ-ಎಲೈ ಉತ್ತಮಪುರುಷನೇ, ತತ್ವತಃಬುಧ್ಯಾ-ಯಥಾರ್ಥವಾದ ಬುದ್ಧಿಯಿಂದ. ಸಮನುಚಿಂತಯ-ಆಲೋಚಿಸು, ಬುಧ್ಯಾ-ಜ್ಞಾನದಿಂ, ಯುಕ್ತಾಃ-ಕೂಡಿಕೊಂಡಿರುವ, ಮಹಾಪ್ರಾಜ್ಞಾಃ-ದೊಡ್ಡಪಂಡಿತರು, ಶುಭಾಶುಭೆ-ಸುಕೃತ ದುಷ್ಕೃತಗಳನ್ನು, ವಿಜಾನಂತಿ-ತಿಳಿದುಕೊಳ್ಳುತ್ತಾರೆ|| ೧೫|| ಅದೃಷ್ಟಗುಣದೋಷಾಣಾಂ-ಕಾಣಲ್ಪಡದಿರುವ ಗುಣಗಳೂ ದೋಷಗಳೂಉಳ್ಳ. ಅಧೃತಾನಾಂ-ಹೀಗೇಸರಿಎಂದು ನಿಶ್ಚೈಸಲ್ಪಡದಿರುವ. ತೇಷಾಂಕರ್ಮಣಾಂ-ಆ ಪ್ರಸಿದ್ಧವಾದ ಕರ್ಮಗಳಿಗೆ, ಕ್ರಿಯಾಮಂತರೇಣ-ಅನುಷ್ಠಾನವಂ ಬಿಟ್ಟು, ಇಷ್ಟಂ-ಇಷ್ಟವಾದ, ಫಲಂ-ಫಲವು. ನಪ್ರವರ್ತತೆ-ಉಂಟಾಗುವದಿಲ್ಲ ||೧೬|| ಹೆರಾಮ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ, ತ್ವಮೇವ-ನೀನೆ, ಏವಂ-ಈಪರಿಯಾಗಿ. ಮಾಂ-ನನ್ನಂಕುರಿತು. ಬಹುಶಃ-ಬಹಳ ಬಗೆಯಾಗಿ. ಅನ್ವಶಾಹಿ-ಉಪದೇಶಮಾಡಿದ್ದೀಯಷ್ಟೆ, ತ್ವಾಮಪಿ-ಅಂಥಾ ನಿನ್ನನ್ನೂಕೂಡ, ಸಾಕ್ಷಾತ್-ಪ್ರತ್ಯಕ್ಷವಾಗಿ. ಬೃಹಸ್ಪತಿರಪಿ-ಬೃಹಸ್ಪತಿಯಾದರೂ, ಕಃ-ಯಾವೋನು, ಅನುಶಿಷ್ಯಾದ್ಧಿ-ಶಿಕ್ಷಿಸುವನಷ್ಟೆ ||೧೭|| ಹೆಮಹಾಪ್ರಾಜ್ಞ-ಎಲೈ ಬಹಳ ಪ್ರಜ್ಞಾವಂತನೇ, ತೆಬುದ್ಧಿಃ-ನಿನ್ನ ಬುದ್ಧಿಯು. ದೇವೈರಪಿ-ದೇವತೆಗಳಿಂದಲೂ, ದುರನ್ವಯಾ-ಹೊಂದತಕ್ಕದ್ದಲ್ಲ, ಶೋಕೇನ-ವ್ಯಸನದಿಂದ, ಅಭಿಪ್ರಸುಪ್ತಂ-ಅಂತರ್ಲೀನವಾದ. ತೆ-ನಿನಗೆ, ಜ್ಞಾನಂ-ಜ್ಞಾನವನ್ನು, ಅಹಂ-ನಾನು, ಸಂಬೋಧಯಾಮಿ-ಅಭಿವ್ಯಕ್ತವನ್ನಾಗಿ ಮಾಡಿಸುತ್ತೇನೆ, (ಅಂದರೆ-ಪ್ರಕಾಶವನ್ನಾಗಿ ಮಾಡಿಸುತ್ತೇನೆ)||

---

ಣಿಗಳಿಗೂ ಆದಿದೇಹಧಾರಿಯಾದ ದೇವನ ಸ್ವಾಧೀನವನ್ನು ಬಿಡಲಾರರು, ಇದಲ್ಲದೆ ದೇವತೆಗಳಲ್ಲಿಯೂ ಕೂಡಾ, ಸನ್ಮಾರ್ಗ ದುರ್ಮಾರ್ಗಗಳಿಂದುಂಟಾದ ಸುಕೃತದುಷ್ಕೃತಗಳೆರಡು ಇರುವವೆಂದು ಕೇಳಲ್ಪಟ್ಟಿಧೆ ಯಲ್ಲವೇ, ಆದ್ದರಿಂದ ನೀನು ದುಃಖಿಸಲರ್ಹನಾಗಬೇಡ ।೧೨। ಎಲೈ ದೋಷರಹಿತನಾದ ಶ್ರೀರಾಮನೇ! ಜನಕರಾಜನಂದಿನಿಯಾದ ಸೀತಾದೇವಿಯು ಅದರ್ಶನವನ್ನೈದಿದರೂ, ಮತ್ತೂ ಯಾರಿಂದಲಾದರೂ ಅಪಹರಿಸಲ್ಪಟ್ಟವಳಾದರೂ ಕೂಡಾ, ನೀನು, ಪ್ರಕೃತಿಸಂಬಂಧಿಯಾದ ಸಾಧಾರಣಪುರುಷರಂತೆ ದುಃಖಿಸಲೂ ಅರ್ಹನಲ್ಲ ।೧೩। ಯಾಕಂದರೆ,--ನಿನ್ನಂಥಾವರು ಬ್ರಹ್ಮಜ್ಞಾನವುಳ್ಳವರಾಗಿ ಯಾವಾಗಲೂ ಸಫಲವಾದ ಜ್ಞಾನವನ್ನೈದಿದವರಾಗಿ, ಮಹಾ ಕಷ್ಟಗಳಲ್ಲಿಯೂ ದುಃಖಿಸುವದಿಲ್ಲ, ನೀನೇ ತತ್ವಬುದ್ಧಿಯಿಂದ ಆಲೋಚಿಸುವವನಾಗು, ಜ್ಞಾನವಂತರಾದವರು ಸುಕೃತ ದುಷ್ಕೃತಗಳನ್ನು ತಿಳಿವರು ।೧೫। ಮತ್ತೂ ಗುಣದೋಷಗಳನ್ನರಿಯದ ನಿಶ್ಚಯಜ್ಞಾನವಿಲ್ಲದ ಆ ಪ್ರಸಿದ್ಧವಾದ ಕರ್ಮಗಳಿಗೆ ಅನುಷ್ಠಾನದ ಹೊರತು ಫಲವುಂಟಾಗಲಾರದು ಎಂಬದಾಗಿ ನೀನೇ ನನಗೆ ಪೂರ್ವದಲ್ಲಿ ಉಪದೇಶಮಾಡಿದವನಾದೆಯಲ್ಲವೇ, ಅಂಥಾ ಮಹಾ ಮತಿಮಂತನಾದ ನಿನಗೆ ಪೇಳಲೂ ಸಾಕ್ಷಾತ್ ಬೃಹಸ್ಪತಿಯಾದರೂ ಶಕ್ತನೇ ಏನು? ।೧೭। ಎಲೈ ಮಹಾ ಜ್ಞಾನಿಯೇ! ನಿನ್ನ ಬುದ್ಧಿಯು ದೇವತೆಗಳಿಂದಲೂ ಪಡೆಯಲಸಾಧ್ಯವಾಗಿಧೆ, ಅಂಥಾ ಮತಿಮಂತನಾದರೂ ನೀನು ಈಗ ಮಹಾ ಮೋಹವನ್ನು ಹೊಂದಿದವನಾಗಿದ್ದೀಯಾದ ಕಾರಣ, ನಾನು ನಿನ್ನ ಜ್ಞಾನವನ್ನು ಪ್ರಕಾಶಪಡಿಸುತ್ತೇನೆ ।೧೮। ಎಲೈ ಇಕ್ಷ್ವಾಕು ಕುಲದಲ್ಲಿ ಉತ್ತಮನಾದವನೇ!

ಷ್ಕೈಯೆತಸ್ವದ್ವಿಷತಾಂವಧೆ ।೧೯। ಕಿಂತೆಸರ್ವವಿನಾಶೆನಕೃತೆನಪುರುಷರ್ಷಭ। ತಮೆವತ್ವಂರಿಪುಂಪಾಪಂವಿಜ್ಞಾಯೊದ್ಧರ್ತುಮರ್ಹಸಿ ।೨೦।

......**ಇತಿಶ್ರೀಮದಾರಣ್ಯಕಾಂಡೆ-ಷಟ್‌ಷಷ್ಟಿತಮಸ್ಸರ್ಗಃ**......

ಪೂರ್ವಜೊಪ್ಯುಕ್ತಮಾತ್ರಸ್ತುಲಕ್ಷ್ಮಣೆನಸುಭಾಷಿತಂ। ಸಾರಗ್ರಾಹೀಮಹಾಸಾರಂಪ್ರತಿಜಗ್ರಾಹರಾಘವಃ।೧। ಸನ್ನಿಗೃಹ್ಯಮಹಾಬಾಹುಃಪ್ರವೃತ್ತಂಕೊಪಮಾತ್ಮನಃ। ಅವಷ್ಟಭ್ಯಧನುಶ್ಚಿತ್ರಂರಾಮೊಲಕ್ಷ್ಮಣಮಬ್ರವೀತ್ ।೨॥ ಕಿಂಕರಿಷ್ಯಾವಹೆವತ್ಸಕ್ವವಾಗಚ್ಛಾವಲಕ್ಷ್ಮಣ । ಕೆನೊಪಾಯೆನಪಶ್ಯೆಯಂಸಿತಾಮಿತಿವಿಚಿಂತಯ ॥೩। ತಂತಥಾಪರಿತಾಪಾರ್ತಂಲಕ್ಷ್ಮಣೊರಾಮಮಬ್ರವೀತ್ । ಇದಮೆವಜನಸ್ಥಾನಂತ್ವಮನ್ವೆಷಿತುಮರ್ಹಸಿ । ರಾಕ್ಷಸೈರ್ಬಹುಭಿಃಕೀರ್ಣಂನಾನಾದ್ರುಮಲತಾಯುತಂ ।೪॥ ಸಂತೀಹಗಿರಿದುರ್ಗಾಣಿನಿರ್ದರಾಃಕಂದರಾಣಿಚ। ಗುಹಾಶ್ಚವಿವಿಧಾಘೊರಾನಾನಾಮೃಗಗಣಾಕುಲಾಃ। ಆವಾಸಃಕಿನ್ನರಾಣಾಂಚಗಂಧರ್ವಭವನಾನಿಚ। ತಾನಿಯುಕ್ತೊಮಯಾಸಾರ್ಧಂತ್ವಮ

---

೧೯॥ ಹೆಇಕ್ಷ್ವಾಕುವೃಷಭ-ಎಲೈ ಇಕ್ಷ್ವಾಕುಕುಲದಲ್ಲಿ ಶ್ರೇಷ್ಠನಾದವನೇ, ದಿವ್ಯಂಚ-ದೇವಲೋಕವಾಸಿಗಳಾದ ಗಂಧರ್ವಾದಿ ಸಮುದಾಯವನ್ನು, ಮಾನುಷಂ-ಮನುಷ್ಯಲೋಕದಲ್ಲಿ ಹುಟ್ಟಿದ ಬ್ರಾಹ್ಮಣಾದಿಗಳನ್ನು, ಆತ್ಮನಃ-ತನ್ನ, ಪರಾಕ್ರಮಂಚ-ಸಾಮರ್ಥ್ಯವನ್ನು ಅವೆಕ್ಷ್ಯ-ಕಂಡು, ದ್ವಿಷತಾಂ-ಶತ್ರುಗಳ, ವಧೆ-ಸಂಹಾರವಿಷಯವಾಗಿ, ಯತಸ್ವ-ಪ್ರಯತ್ನಮಾಡು ॥೧೯॥ ಹೆಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ, ಕೃತೆನ-ಮಾಡಲ್ಪಟ್ಟ, ಸರ್ವವಿನಾಶೆನ-ಸಮಸ್ತವಾದ ಭೂತಗಳ ನಾಶದಿಂದ, ತೆ-ನಿನಗೆ, ಕಿಂ-ಯೇನುಪ್ರಯೋಜನವು, ತ್ವಂ-ನೀನು, ತಮೆವ-ಆ ಸೀತಾಪಹಾರಕನಾದ, ಪಾಪಂ-ಪಾಪಿಷ್ಠನಾದ, ರಿಪುಂ-ಶತ್ರುವಿನನ್ನು, ವಿಜ್ಞಾಯ-ತಿಳಿದು, ಉದ್ಧರ್ತುಂ-ಮೂಲೋತ್ಪಾಟನ ಮಾಡುವದಕ್ಕಾಗಿ, ಅರ್ಹಸಿ-ಯೋಗ್ಯನಾಗು॥೨೦॥

—***ಇತಿಶ್ರೀಮದಾರಣ್ಯಕಾಂಡೆ-ಷಟ್‌ಷಷ್ಟಿತಮಸ್ಸರ್ಗಃ***—

ರಾಘವಃ-ಶ್ರೀರಾಮನು, ಪೂರ್ವಜೊಪಿ-ಜ್ಯೇಷ್ಠನಾದರೂ, ಲಕ್ಷ್ಮಣೆನ-ಲಕ್ಷ್ಮಣಸ್ವಾಮಿಯಿಂದ, ಉಕ್ತಮಾತ್ರಸ್ತು-ಹೇಳಲ್ಪಟ್ಟವನಾಗುತಲೆ ಸಾರಗ್ರಾಹೀ-ಸಾರವಂ ಗ್ರಹಿಸಿದಂಥಾವನಾಗಿ, ಮಹಾಸಾರಂ-ಬಹಳ ಸಾರವತ್ತಾದ, ಸುಭಾಷಿತಂ-ಒಳ್ಳೇಮಾತನ್ನು, ಪ್ರತಿಜಗ್ರಾಹ-ಸ್ವೀಕರಿಸಿದನು॥೧ ಮಹಾಬಾಹುಃ-ಮಹಾಭುಜ ಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ಆತ್ಮನಃ-ತನಗೆ, ಪ್ರವೃತ್ತಂ-ಉಂಟಾದ, ಕೊಪಂ-ಕ್ರೋಧವನ್ನು, ಸನ್ನಿಗೃಹ್ಯ-ನಿಗ್ರಹಿಸಿ, ಚಿತ್ರಂ-ವಿಚಿತ್ರವಾದ, ಧನುಃ-ಬಿಲ್ಲಿನನ್ನು, ಅವಷ್ಟಭ್ಯ-ಅಪ್ಪಿಕೊಂಡು. ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಅಬ್ರವೀತ್-ನುಡಿದದನು ॥೨॥ ಹೆವತ್ಸ-ಎಲೈ ಹುಡುಗನೇ, ಕಿಂಕರಿಷ್ಯಾವಹೆ-ಯೇನುಮಾಡೋಣ, ಹೆಲಕ್ಷ್ಮಣ-ಎಲೈ ಲಕ್ಷ್ಮಣನೇ, ಕ್ವಗಚ್ಛಾವ-ಯೆಲ್ಲಿಗೆ ಹೋಗೋಣ, ಕೆನೊಪಾಯೆನ-ಯಾವ ಉಪಾಯದಿಂದ, ಸೀತಾಂ-ಸೀತಾದೇವಿಯನ್ನು, ಪಶ್ಯೆಯಮಿತಿ-ನೋಡುವೆವು ಎಂದು, ವಿಚಿಂತಯ-ಆಲೋಚಿಸು ॥೩॥ ತಥಾ-ಆ ಪರಿಯಾಗಿ, ಪರಿತಾಪಾರ್ತಂ-ಸಂಕಟದಿಂ ದೀನನಾದ, ತಂರಾಮಂ-ಆ ಶ್ರೀರಾಮನಂಕುರಿತು. ಲಕ್ಷ್ಮಣಃ-ಲಕ್ಷ್ಮಣನು. ಅಬ್ರವೀತ್-ನುಡಿದನು ಬಹುಭಿಃ-ಅನೇಕರಾದ, ರಾಕ್ಷಸೈಃ-ರಕ್ಕಸರಿಂದ, ಕೀರ್ಣಂ-ತುಂಬಿರುವ, ನಾನಾದ್ರುಮಲತಾಯುತಂ-ಅನೇಕಬಗೆಗಳಾದ ಗಿಡಗಳಿಂದಲೂಂ ಬಳ್ಳಿಗಳಿಂದಲೂಂ ಕೂಡಿಕೊಂಡಿರುವ, ಇದಂಜನಸ್ಥಾನಮೆವ-ಈ ಉಕ್ಕಡವನ್ನೇ, ತ್ವಂ-ನೀನು, ಅನ್ವೆಷಿತುಂ-ಹುಡುಕುವದಕ್ಕೆ, ಅರ್ಹಸಿ-ಯೋಗ್ಯನಾಗು ॥೪॥ ಇಹ-ಇಲ್ಲಿ, ಗಿರಿದುರ್ಗಾಣಿ-ಬೆಟ್ಟಗಳ ದುರ್ಗಮಸ್ಥಾನಗಳು, ನಿರ್ದರಾಃ-ಗುಹೆಗಳು, ಕಂದರಾಣಿಚ-ಪಾಷಾಣಗಳ ಸಂದುಗಳು, ( ಅಥವಾ-ಹಾಗಲ್ಲದಿದ್ದರೆ, ನಿರ್ದರಾಃ-ಒಡದಿರುವ ಕಲ್ಲುಗಳ ಸಂದುಗಳೂ, ಕಂದರಾಣಿಚ-ಗುಹೆಗಳೂ, ) ವಿವಿಧಾಃ-ನಾನಾಬಗೆಗಳಾದ, ಘೊರಾಃ-ಭಯಂಕರಗಳಾದ, ನಾನಾ

---

ದೇವಲೋಕವಾಸಿಗಳಾದ ಗಂಧರ್ವಾದಿಗಳ ಸಮೂಹವನ್ನೂ ಈ ಬ್ರಾಹ್ಮಣರನ್ನೂ ನಿನ್ನ ಸಾಮರ್ಥ್ಯವನ್ನೂ ಸಹಾ ನೋಡಿದವನಾಗಿ, ಶತ್ರುಗಳ ಸಂಹಾರದಲ್ಲಿ ಪ್ರಯತ್ನವಂ ಮಾಡುವವನಾಗು, ಈ ಲೋಕವನ್ನೆಲ್ಲಾ ನಾಶಂಗೈದರೆ ನಿನಿಗೇನು ಪ್ರಯೋಜನವೂ ಇಲ್ಲ, ಆದ್ದರಿಂದ ನೀನು ನಮ್ಮ ಸೀತಾದೇವಿಯನ್ನು ಅಪಹಾರಂ ಗೈದ ಆ ಪಾಪಿಯಾದ ಶತ್ರುವಿನಂ ತಿಳಿದು ಮೂಲೋತ್ಪಾಟನಂ ಗೈಯ್ಯುವವನಾಗು ॥ -*೬೬ನೆಯಸರ್ಗಂಮುಗಿದುದು*-

ರಘುಕುಲೋತ್ಪನ್ನನಾದ ಶ್ರೀರಾಮನು ಲಕ್ಷ್ಮಣನಿಗಿಂತಲೂ ಪೂರ್ವದಲ್ಲಿ ಪುಟ್ಟಿದವನಾದರೂ, ಆತನಿಂದ ಈ ರೀತಿಯಲ್ಲಿ ಪೇಳಲ್ಪಟ್ಟ ತಕ್ಷಣವೇ, ಆತನು ಸಾರವಂ ಸಹಿಸತಕ್ಕವನಾದಕಾರಣ ಆ ಪೊಳ್ಳೇ ಮಾತಂ ಗ್ರಹಿಸಿದನು ॥೧॥ ಅನಂತರದಲ್ಲಿ ಮಹಾ ಭುಜಪರಾಕ್ರಮ ಶಾಲಿಯಾದ ಆ ಶ್ರೀರಾಮನು ತನಗೆ ಉಂಟಾದ ಆ ಮಹಾ ಕೋಪವಂ ಬಿಟ್ಟು, ತನ್ನ ಕೋದಂಡವನ್ನಪ್ಪಿಕೊಂಡು ಲಕ್ಷ್ಮಣನಂ ಕುರಿತಿಂತೆಂದನು ।೨॥ ಎಲೈ ಬಾಲಕನೇ! ಏನುಮಾಡುವಣ? ಯೆಲ್ಲಿಹೋಗುವಣ? ಯಾವ ಉಪಾಯದಿಂದ ಸೀತಾದೇವಿಯಂ ನೋಡುವೆವೊ? ಆಲೋಚಿಸುವವನಾಗು, ಎಂದು ನುಡಿದು ಮಹಾ ಸಂತಾಪವಂ ಪೊಂದಿದವನಾಗಿರಲೂ ಬಳಿಕ ಲಕ್ಷ್ಮಣನು ಆತನಂ ಕುರಿತಿಂತೆಂದನು, ಎಲೈ ಅಗ್ರಜನೇ! ಅನೇಕರಾಕ್ಷಸರಿಂದ ತುಂಬಿರುವದಾಗಿಯೂ, ನಾನಾವಿಧವಾದ ವೃಕ್ಷಗಳಿಂದ ವ್ಯಾಪ್ತವಾದದ್ದಾಗಿಯೂ ಇರುವ ಈ ಜನಸ್ಥಾನವನ್ನೇ ಹುಡುಕುವವನಾಗು ।೪॥ ಇಲ್ಲಿ ಪರ್ವತಗಳ ದುರ್ಗಸ್ಥಾ

ನ್ವೇಷಿತುಮರ್ಹಸಿ ॥೬॥ ತ್ವದ್ವಿಧಾಬುದ್ಧಿಸಂಪನ್ನಾಮಹಾತ್ಮಾನೋನರರ್ಷಭ॥ ಆಪತ್ಸುನಪ್ರಕಂಪಂತೇವಾಯುವೇಗೈರಿವಾಚಲಾಃ॥೭॥ ಇತ್ಯುಕ್ತಸ್ತದ್ವನಂಸರ್ವಂವಿಚಚಾರಸಲಕ್ಷ್ಮಣಃ ॥ ಕ್ರುದ್ಧೋರಾಮಶ್ಶರಂಘೋರಂಸಂಧಾಯಧನುಷಿಕ್ಷುರಂ॥೮॥ ತತಃಪರ್ವತಕೂಟಾಭಂಮಹಾಭಾಗಂದ್ವಿಜೋತ್ತಮಂ। ದದರ್ಶಪತಿತಂಭೂಮೌಕ್ಷತಜಾರ್ದ್ರಂಜಟಾಯುಷಂ ॥೯॥ ತಂದೃಷ್ಟ್ವಾಗಿರಿಶೃಂಗಾಭಂರಾಮೋಲಕ್ಷ್ಮಣಮಬ್ರವೀತ್ ॥ ಅನೇನಸೀತಾವೈದೇಹೀಭಕ್ಷಿತಾನಾತ್ರಸಂಶಯಃ ॥೧೦॥ ಗೃಧ್ರರೂಪಮಿದಂರಕ್ಷೋವ್ಯಕ್ತಂಭವತಿಕಾನನೇ। ಭಕ್ಷಯಿತ್ವಾವಿಶಾಲಾಕ್ಷೀಮಾಸ್ತೇಸೀತಾಂಯಥಾಸುಖಂ॥೧೧॥ ಏನಂವಧಿಷ್ಯೇದೀಪ್ತಾಸ್ಯೈರ್ಘೋರೈರ್ಬಾಣೈರಜಿಹ್ಮಗೈಃ ॥೧೨॥ ಇತ್ಯುಕ್ತ್ವಾಭ್ಯಪತದ್ಗೃಧ್ರಂಸಂಧಾಯಧನುಷಿಕ್ಷುರಂ। ಕ್ರುದ್ಧೋರಾಮಸ್ಸಮುದ್ರಾಂತಾಂಕಂಪಯನ್ನಿವಮೇದಿನೀಂ ॥೧೩॥ ತಂದೀನಂದೀನಯಾವಾಚಾಸಫೇನಂರುಧಿರಂ

ಮೃಗಗಣಾಕುಲಾಃ-ಅನೇಕಬಗೆಗಳಾದ ಮೃಗಗಳ ತಂಡಗಳಿಂ ವ್ಯಾಪ್ತವಾದ, ಗುಹಾಃ-ದೇವರೆಗಳಿಂ ಅಗಿಯಲ್ಪಟ್ಟ ಬಿಲಗಳೂ. ಕಿನ್ನರಾಣಾಂಚ-ಕಿನ್ನರರ, ಆವಾಸಾಃ-ಸ್ಥಾನಗಳೂ, ಗಂಧರ್ವಭವನಾನಿಚ-ಗಂಧರ್ವರು ವಾಸಮಾಡತಕ್ಕ ಸ್ಥಾನಗಳು, ಸಂತಿ-ಇರುತವೆ. ತಾನಿ-ಆಯಾಯ ಸ್ಥಳಗಳನ್ನು, ಮಯಾಸಾರ್ಧಂ-ನನ್ನೊಡನೆಗೂಡಿ ಯುಕ್ತಃ-ಕೂಡಿದವನಾಗಿ, ತ್ವಂ-ನೀನು, ಅನ್ವೇಷಿತುಂ-ಹುಡುಕುವದಕ್ಕೆ, ಅರ್ಹಸಿ-ಯೋಗ್ಯನಾಗು॥ ॥೬॥ ಹೇನರರ್ಷಭ-ಎಲೈ ಪುರುಷಶ್ರೇಷ್ಠನೇ. ಬುದ್ಧಿಸಂಪನ್ನಾಃ-ಬುದ್ಧಿಯಿಂದ ಕೂಡಿಕೊಂಡಿರುವ, ತ್ವದ್ವಿಧಾಃ-ನಿಮ್ಮಂಥಾ, ಮಹಾತ್ಮಾನಃ-ಮಹಾತ್ಮರು ವಾಯುವೇಗೈಃ-ವಾಯು-ಶಾಳಿಯ, ವೇಗೈಃ-ಜವಗಳಿಂದ. ಅಚಲಾಇವ-ಬೆಟ್ಟಗಳಂತೆ, ಆಪತ್ಸು-ಆಪತ್ಕಾಲಗಳಲ್ಲಿ, ನಪ್ರಕಂಪಂತೆ-ಚಲಿಸುವದಿಲ್ಲಾ ॥೭॥ ಇತಿ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ. ರಾಮಃ-ಶ್ರೀರಾಮನು, ಕ್ರುದ್ಧಃ-ಕೋಪಿಷ್ಠನಾಗಿ ಸಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದವನಾಗಿ, ಘೋರಂ-ಭಯಂಕರವಾದ, ಕ್ಷುರಂ-ಕ್ಷುರವೆಂದು ಹೆಸರುಳ್ಳ, ಶರಂ-ಬಾಣವನ್ನು. ಧನುಷಿ-ಬಿಲ್ಲಿನಲ್ಲಿ, ಸಂಧಾಯ-ಸಂಧಾನಮಾಡಿ, ಸರ್ವಂ-ಸಮಸ್ತಮಾದ. ತದ್ವನಂ-ಆ ವನದಲ್ಲಿ, ವಿಚಚಾರ-ಸಂಚರಿಸಿದನು ॥೮॥ ತತಃ-ಬಳಿಕ, ಪರ್ವತಕೂಟಾಭಂ-ಬೆಟ್ಟದ ತುದಿಯಂತೆ ಬೆಳಗುತ್ತಿರುವ, ಮಹಾಭಾಗಂ-ಮಹಾಪುಣ್ಯವಂತನಾದ. ಭೂಮೌ-ನೆಲದಲ್ಲಿ, ಪತಿತಂ-ಬಿದ್ದಿರುವ, ಕ್ಷತಜಾರ್ದ್ರಂ-ರಕ್ತದಿಂ ತೊಯಿಸಲ್ಪಟ್ಟ, ದ್ವಿಜೋತ್ತಮಂ-ಪಕ್ಷಿಶ್ರೇಷ್ಠನಾದ, ಜಟಾಯುಷಂ-ಜಟಾಯುವಿನನ್ನು, ದದರ್ಶ-ಕಂಡನು ॥೯॥ ರಾಮಃ-ಶ್ರೀರಾಮನು, ಗಿರಿಶೃಂಗಾಭಂ-ಬೆಟ್ಟದ ಶಿಖರದ ಕಾಂತಿಯಂತೆ ಕಾಂತಿಯುಳ್ಳ, ತಂ-ಆ ಜಟಾಯುವಿನನ್ನು. ದೃಷ್ಟ್ವಾ-ಕಂಡು. ಲಕ್ಷ್ಮಣಂ-ಲಕ್ಷ್ಮಣನಂಕುರಿತು। ಅಬ್ರವೀತ್-ನುಡಿದನು, ಅನೇನ-ಈ ಪಕ್ಷಿಯಿಂದ. ವೈದೇಹೀ-ಸೀತಾದೇವಿಯು, ಭಕ್ಷಿತಾ-ಭಕ್ಷಣೆಮಾಡಲ್ಪಟ್ಟಳು, ಅತ್ರ-ಈ ಅರ್ಥದಲ್ಲಿ, ಸಂಶಯಃ-ಸಂಶಯವು. ನ-ಇಲ್ಲ ॥೧೦॥ ಇದಂ-ಈಪರಿದೃಶ್ಯಮಾನನಾದ, ಗೃಧ್ರರೂಪಂ-ಹದ್ದಿನ ರೂಪದಂತೆ ಆಕಾರವುಳ್ಳ, ರಕ್ಷಃ-ರಕ್ಕಸನು, ಕಾನನೇ-ಅರಣ್ಯದಲ್ಲಿ, ವ್ಯಕ್ತಂ-ಸ್ಪಷ್ಟವಾಗಿ, ಭವತಿ-ಆಗಿಧೆ, ವಿಶಾಲಾಕ್ಷೀಂ-ವಿಸ್ತಾರವಾದ ನೇತ್ರಗಳುಳ್ಳ, ಸೀತಾಂ-ಸೀತಾದೇವಿಯನ್ನು, ಯಥಾಸುಖಂ-ಸುಖವಾಗಿ, ಭಕ್ಷಯಿತ್ವಾ-ಭಕ್ಷಣೆಮಾಡಿ. ಆಸ್ತೇ-ಕುಳಿತುಕೊಂಡಿಧೇ ॥೧೧॥ ಏನಂ-ಈ ಗೃಧ್ರವೇಷಧಾರಿಯಾದ ರಕ್ಕಸನನ್ನು. ದೀಪ್ತಾಸ್ಯೈಃ-ಪ್ರಜ್ವಲಿಸುತ್ತಿರುವ ಮುಖಗಳುಳ್ಳ, ಘೋರೈಃ-ಭಯಂಕರಗಳಾದ, ಅಜಿಹ್ಮಗೈಃ-ರುಜುವಾಗಿ ಹೋಗುತ್ತಿರುವ ಬಾಣೈಃ-ಶರಗಳಿಂದ, ವಧಿಷ್ಯೇ-ಸಂಹಾರಮಾಡುವೆನು ॥೧೨॥ ರಾಮಃ-ಶ್ರೀರಾಮನು. ಇತಿ-ಈಪರಿಯಾಗಿ, ಉಕ್ತ್ವಾ-ಹೇಳಿ, ಕ್ಷುರಂ-ಸಣ್ಣಕತ್ತಿಯಂತಿರುವ ಬಾಣವನ್ನು, ಧನುಷಿ-ಬಿಲ್ಲಿನಲ್ಲಿ, ಸಂಧಾಯ-ಸಂಧಾನಮಾಡಿ, ಕ್ರುದ್ಧಃ-ಕೋಪಿಷ್ಠನಾಗಿ, ಸಮುದ್ರಾಂತಾಂ-ಕಡಲೇಕೊನೆಯಾಗುಳ್ಳ, ಮೇದಿನೀಂ-ಭೂಮಿಯನ್ನು, ಕಂಪಯನ್ನಿವ-ಚಲಿಸುವಂತೆ ಮಾಡುವವನಾಗಿ, ಗೃಧ್ರಂ-ಜಟಾಯುವಿನಂಕುರಿತು, ಅಭ್ಯಪತತ್-ಅಟ್ಟಿಕೊಂಡುಬಂದನು ॥೧೩॥ ಪಕ್ಷೀಶು-ಪಕ್ಷಿಯಾದರೆ. ದೀನಂ-ಪರಿತಪ್ತನಾದ, ದಶರಥಾತ್ಮಜಂ-ದಶರಥಕುವರನಾದ, ತಂರಾಮಂ-ಆ ಶ್ರೀರಾ

ನಗಳೂ ಗುಣಿಗಳೂ ಅನೇಕ ಮೃಗಗಳಿಂದ ಯುಕ್ತವಾದ ಬಹು ಗುಹೆಗಳೂ, ಕಿನ್ನರಸ್ಥಾನಗಳೂ, ಗಂಧರ್ವರು ವಾಸಂಗೈಯ್ಯುವ ಪ್ರದೇಶಗಳೂ ಸಹಾ ಅನೇಕವಾಗಿವೇ, ಅಲ್ಲಲ್ಲಿ ನೆನ್ನಿಂದೊಡಗೂಡಿ ಹುಡುಕುವವನಾಗು॥೬॥ ಎಲೈ ಪುರುಷೋತ್ತಮನೇ! ಮತಿವಂತರಾದ ನಿನ್ನಂಥಾ ಮಹಾತ್ಮರು, ವಾಯುವೇಗದಿಂದ ಬೆಟ್ಟಗಳು ಎಂತು ಚಲಿಸುವದಿಲ್ಲವೋ ಅಂತು ಚಲಿಸುವದಿಲ್ಲ ।೭॥ ಎಂದು ಈ ರೀತಿಯಲ್ಲಿ ಲಕ್ಷ್ಮಣನು ನುಡಿದವನಾಗಲೂ, ಆ ಶ್ರೀರಾಮನು ಮಹಾ ಕೋಪವನ್ನೈದಿದವನಾಗಿ, ಲಕ್ಷ್ಮಣನಿಂದೊಡಗೂಡಿ, ಕಡುಭಯಂಕರವಾದ ಕ್ಷುರವೆಂದು ಪೆಸರುಳ್ಳ ಮಹಾ ಬಾಣವನ್ನು, ತನ್ನ ಕೋದಂಡದಲ್ಲಿ ಸಂಧಾನಂಗೈದು ಆ ವನದಲ್ಲೆಲ್ಲ ಸಂಚರಿಸುತಲಿದ್ದನು ।೮॥ ಅನಂತರದಲ್ಲಿ ಶ್ರೀರಾಮನು ಪರ್ವತ ಶಿಖರದಂತೆ ಮಹಾ ಉನ್ನತವಾದ ಮತ್ತೂ ನೆಲದಲ್ಲಿ ಬಿದ್ದಿರುವ, ಮಹಾ ಪುಣ್ಯವಂತನಾದ ಆ ಜಟಾಯುವಿನಂ ಕಂಡು ಲಕ್ಷ್ಮಣನಂ ಕುರಿತಿಂತೆಂದನು, ಎಲೈ ಲಕ್ಷ್ಮಣನೇ! ಈ ಪಕ್ಷಿಯಿಂದ ವಿದೇಹರಾಜನ ಕುವರಿಯಾದ ಸೀತಾದೇವಿಯು ನಿಶ್ಚಯವಾಗಿ ಭಕ್ಷಿಸಲ್ಪಟ್ಟರ ಬಹುದು ।೧೦॥ ಬಹುತರವಾಗಿ ಈ ಅರಣ್ಯದಲ್ಲಿ ರಾಕ್ಷಸನು ಈ ಹದ್ದುವಿನ ರೂಪನಾಗಿ ಇಲ್ಲಿ ನಮ್ಮ ಸೀತಾದೇವಿಯನ್ನು ಗ್ರಾಸಂಗೈದು ಸುಖವಾಗಿ ಕುಳಿತಿಧಾನೇ, ಹೃಧ್ರರೂಪವಂ ತಾಳಿದ ಈ ರಕ್ಕಸನನ್ನು ಮಹಾ ಭಯಂಕರವಾದ ಬಾಣಗಳಿಂದ ಸಂಹಾರಂಗೈಯ್ಯುವೆನೆಂದು ನುಡಿದು, ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ, ಕೋದಂಡದಲ್ಲಿ ಬಾಣಸಂ

ವರ್ಚ । ಅಭ್ಯಭಾಷತಪಕ್ಷೀತುರಾಮಂದಶರಥಾತ್ಮಜಂ ।೧೪। ಯಾಮೋಷಧಿಮಿವಾಯುಷ್ಮನ್ನನ್ವೇಷಸಿಮಹಾವನೇ। ಸಾದೇವೀಮಮಚಪ್ರಾಣಾರಾವಣೇನೋಭಯಂಹೃತಂ ।೧೫। ತ್ವಯಾವಿರಹಿತಾದೇವೀಲಕ್ಷ್ಮಣೇನಚರಾಘವ । ಹ್ರಿಯಮಾಣಾಮಯಾದೃಷ್ಟಾರಾವಣೇನಬಲೀಯಸಾ ।೧೬। ಸೀತಾಮಭ್ಯವಪನ್ನೋಹಂರಾವಣಶ್ಚರಣೇಮಯಾ। ವಿಧ್ವಂಸಿತ್ವರಥಶ್ಚಾತ್ರಪಾತಿತೋಧರಣೀತಲೇ ।೧೭। ಏತದಸ್ಯಧನುರ್ಭಗ್ನಮೇತದಸ್ಯಶರಾವರಂ । ಅಯಮಸ್ಯರಥೋರಾಮಭಗ್ನಸ್ಸಾಂಗ್ರಾಮಿಕೋಮಯಾ ।೧೮। ಅಯಂತುಸಾರಥಿಸ್ತಸ್ಯಮತ್ಪಕ್ಷನಿಹತೋಯುಧಿ ।೧೮।। ಪರಿಶ್ರಾಂತಸ್ಯಮೇಪಕ್ಷೌಛಿತ್ವಾಖಡ್ಗೇನರಾವಣ । ಸೀತಾಮಾದಾಯವೈದೇಹೀಮುತ್ಪಪಾತವಿಹಾಯಸಂ ।೧೯। ರಕ್ಷಸಾನಿಹತಂಪೂರ್ವಂನಮಾಂಹಂತುಂತ್ವಮರ್ಹಸಿ । ರಾಮಸ್ತಸ್ಯತುವಿಜ್ಞಾಯಬಾಷ್ಪಪೂರ್ಣಮುಖಸ್ತದಾ । ದ್ವಿಗುಣೀಕೃತತಾಪಾ

---

ಮನಂ ಕುರಿತು। ದೀನಯಾ–ದೈನ್ಯಯುಕ್ತವಾದ. ವಾಚಾ–ಮಾತಿನಿಂದ ಸಫೇನಂ–ನೊರೆಯಿಂದೊಡಗೂಡಿದ, ರುಧಿರಂ–ರಕ್ತವನ್ನು, ವರ್ಚ–ಕಕ್ಕುತ್ತಿರುವವನಾಗಿ, ಅಭ್ಯಭಾಷತ–ಮಾತನಾಡಿದನು ॥೧೪॥ ಹೇಆಯುಷ್ಮನ್–ಎಲೈ ದೀರ್ಘಾಯುಷ್ಮಂತನೇ ಮಹಾವನೇ–ಮಹದರಣ್ಯದಲ್ಲಿ, ಓಷಧಿಮಿವ–ಮೂಲಿಕೆಯನ್ನಂತೆ. ಯಾಂ–ಯಾವ ಸೀತಾದೇವಿಯನ್ನು, ಅನ್ವೇಷಸಿ–ಹುಡುಕುತ್ತೀಯೋ. ಸಾದೇವೀ–ಆ ಸೀತಾದೇವಿಯು, ಮಮ–ನನ್ನ. ಪ್ರಾಣಾಶ್ಚ–ಪ್ರಾಣಗಳೂ. ರಾವಣೇನ–ರಾವಣಾಸುರನಿಂದ. ಉಭಯಂ–ಎರಡನ್ನೂ, ಹೃತಂ–ಅಪಹರಿಸಲ್ಪಟ್ಟಿತು ॥೧೫॥ ಹೇರಾಘವ–ಎಲೈ ಶ್ರೀರಾಮನೇ, ತ್ವಯಾ–ನಿನ್ನಿಂದಲೂ. ಲಕ್ಷ್ಮಣೇನಚ–ಲಕ್ಷ್ಮಣನಿಂದಲೂ, ವಿರಹಿತಾ–ಬಿಡಲ್ಪಟ್ಟ. ದೇವೀ–ಸೀತಾದೇವಿಯು. ಬಲೀಯಸಾ–ಅತ್ಯಬಲವಂತನಾದ ರಾವಣೇನ–ರಾವಣಾಸುರನಿಂದ, ಹ್ರಿಯಮಾಣಾ–ಸೆಗೆದುಕೊಂಡು ಹೋಗಲ್ಪಡುತ್ತಿರುವಳಾಗಿ, ಮಯಾ–ನನ್ನಿಂದ. ದೃಷ್ಟಾ–ಕಾಣಲ್ಪಟ್ಟಳು ॥೧೬॥ ಅಹಂ–ನಾನು. ಸೀತಾಂ–ಸೀತಾದೇವಿಯಂ ಕುರಿತು, ಅಭ್ಯವಪನ್ನಃ–ಬಿಡಿಸಲಿಚ್ಛೆಯುಳ್ಳವನಾಗಿ ಹೋದೆನು, ಮಯಾ–ನನ್ನಿಂದ, ರಣೇ–ಕಾಳಗದಲ್ಲಿ ವಿಧ್ವಂಸಿತರಥಃ–ನಾಶಗೊಳಿಸಲ್ಪಟ್ಟ ರಥವುಳ್ಳ, ರಾವಣಶ್ಚ–ರಾವಣಾಸುರನು, ಅತ್ರ–ಇಲ್ಲಿ, ಧರಣೀತಲೇ–ಭೂಪ್ರದೇಶದಲ್ಲಿ, ಪಾತಿತಃ–ಬೀಳಿಸಲ್ಪಟ್ಟನು ॥೧೭॥ ಹೇರಾಮ–ಎಲೈ ಶ್ರೀರಾಮನೇ, ಏತತ್–ಇದು, ಭಗ್ನಂ–ಮುರಿಯಲ್ಪಟ್ಟ, ಅಸ್ಯ–ಈ ರಾವಣನ–ಧನುಃ–ಧನುಸ್ಸು, ಏತ–ಇದು, ಅಸ್ಯ–ಈರಾವಣಸಂಬಂಧಿಯಾದ, ಮಯಾ–ನನ್ನಿಂದ, ಭಗ್ನಂ–ಮುರಿಯಲ್ಪಟ್ಟ, ಶರಾವರಂ–ಕವಚವು, ( ಅಥವಾ–ಹಾಗಲ್ಲದಿದ್ದರೆ, ಶರಾವರಂ–ಬತ್ತಳಿಕೆಯು. ) ಅಯಂ–ಇದು ಮಯಾ–ನನ್ನಿಂದ, ಭಗ್ನಃ–ಮುರಿಯಲ್ಪಟ್ಟ, ಅಸ್ಯ–ಈ ರಾವಣನ–ಸಾಂಗ್ರಾಮಿಕಃ–ಯುದ್ಧಕ್ಕೆಯೋಗ್ಯವಾದ,ರಥಃ–ತೇರು, ಅಯಂಸಾರಥಿಸ್ತು–ಈ ಸಾರಥಿಯಾದರೆ, ತಸ್ಯ–ಆ ರಾವಣನ ಸಂಬಂಧನು, ಯುಧಿ–ಕಾಳಗದಲ್ಲಿ, ಮತ್ಪಕ್ಷನಿಹತಃ–ನನ್ನ ರೆಕ್ಕೆಗಳಿಂ ಹೊಡೆಯಲ್ಪಟ್ಟನು ॥೧೮॥ ರಾವಣಃ–ರಾವಣಾಸುರನು, ಪರಿಶ್ರಾಂತಸ್ಯ–ವಾರ್ಧಿಕಾವಸ್ಥೆಯಿಂ ಬಳಲಿದ, ಮೇ–ನನ್ನ, ಪಕ್ಷೌ–ಗರಿಗಳನ್ನು, ಖಡ್ಗೇನ–ಕಟ್ಟಾಕತ್ತಿಯಿಂದ, ಛಿತ್ವಾ–ಕತ್ತರಿಸಿ. ವೈದೇಹೀಂ–ವಿದೇಹರಾಜನ ಕುವರಿಯಾದ, ಸೀತಾಂ–ಸೀತಾದೇವಿಯನ್ನು, ಆದಾಯ–ತೆಗೆದುಕೊಂಡು, ವಿಹಾಯಸಂ–ಅಂತರಿಕ್ಷವಂ ಕುರಿತು, ಉತ್ಪಪಾತ–ಹಾರಿದನು ॥೧೯॥ ರಕ್ಷಸಾ–ರಕ್ಕಸನಿಂದ. ಪೂರ್ವಂ–ಮೊದಲೇ. ನಿಹತಂ–ಹೊಡೆಯಲ್ಪಟ್ಟಿರುವ, ಮಾಂ–ನನ್ನನ್ನು, ತ್ವಂ–ನೀನು, ಹಂತುಂ–ಹೊಡಿಯುವದಕ್ಕೆ, ನಾರ್ಹಸಿ–ಯೋಗ್ಯನಾಗಬ್ಯಾಡ ॥೨೦॥ ರಾಮಸ್ತು–ಶ್ರೀರಾಮನಾದರೆ, ತಸ್ಯ–ಆ ಜಟಾಯು ಸಂಬಂಧಿಯಾದ. ( ಅಂದರೆ–ಜಟಾ

---

ಯುವಿನ ) ಧಾನಂ ಗೈದು ಭೂಮಿಯನ್ನು ಕಂಪಿಸುವಂತೆ ಮಾಡುವವನಾಗಿ, ಆ ಜಟಾಯುವಿನನ್ನಪ್ಪಿಕೊಂಡು ಬಂದನು ಅನಂತರದಲ್ಲಿ ಆ ಜಟಾಯುವಾದರೆ ರಕ್ತವಂ ವಮನಂ ಗೈಯ್ಯುತ್ತಾ ದೈನ್ಯದಿಂದ ಆ ಶ್ರೀರಾಮನಂ ಕುರಿತು ನುಡಿವನ ದೆಂತೆನೆ,—ಎಲೈ ದೀರ್ಘಾಯುಷ್ಮಂತನಾದ ಶ್ರೀರಾಮನೇ! ಔಷಧಾರ್ಥವಾಗಿ ಓಷಧಿಯನ್ನು ಹುಡುಕುವತೆರದಿ ಯಾವ ಸೀತಾದೇವಿಯನ್ನು ನೀನು ಹುಡುಕುತಲಿರ್ದೀಯೋ, ಆ ದೇವಿಯೂ ಮತ್ತೂ ನನ್ನ ಪ್ರಾಣಗಳೂ ಸಹಾ ರಾವಣನಿಂದ ಅಪಹರಿಸಲ್ಪಟ್ಟವು ।೧೫। ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೇ! ಕೇಳುವವನಾಗು, ನಿನ್ನಿಂದಲೂ ಲಕ್ಷ್ಮಣನಿಂದಲೂ ಸಹಾ ವಿರಹಿತಳಾಗಿ ಆ ದೇವಿಯು ಮಹಾ ಬಲವಂತನಾದ ರಾವಣನಿಂದ ಅಪಹರಿಸಲ್ಪಡುವಾಗ ನನ್ನಿಂದ ನೋಡಲ್ಪಟ್ಟಳು ।೧೬। ಆಗನಾನು ಆ ಸೀತಾದೇವಿಯಂ ಬಿಡಿಸಲಿಚ್ಛೆಯುಳ್ಳವನಾಗಿ, ಆ ದುಷ್ಟನ ರಥವನ್ನು ಭಂಗಂಗೈದು ಇಲ್ಲಿ ನೆಲದಲ್ಲಿ ಬೀಳಿಸಿದೆನು ।೧೭। ಮತ್ತೂ ನನ್ನಿಂದ ಭಗ್ನವಾದ ಅವನ ಧನುರ್ದಂಡವು ಮತ್ತೂ ಕವಚವೂ ಸಹಾ ಇದಿಗೋ ಇಲ್ಲಿಯೆ ಬಿದ್ದಿಹೆ, ಮತ್ತೂ ಇಲ್ಲಿ ಮುರಿದು ಬಿದ್ದಿರುವ ಆತನ ರಥವೂ ಸಾರಥಿಯೂ ಸಹಾ ಇವೇಸರಿ ।೧೮। ಅನಂತರದಲ್ಲಿ ಆ ರಾವಣನು ವಾರ್ಧಿಕಾವಸ್ಥೆಯಿಂದ ಬಹು ಬಳಲಿರುವ ನನ್ನ ಗರಿಗಳನ್ನು ತನ್ನ ಖಡ್ಗದಿಂದ ಛೇದನವಂ ಗೈದು, ಸೀತಾದೇವಿಯನ್ನು ಅಪಹರಿಸಿಕೊಂಡು ಗಗನಮಾರ್ಗದಲ್ಲಿ ತೆರಳಿದನು ಆದ್ದರಿಂದ ನಾನು ಆ ರಾವಣನಿಂದ ಮೊದಲೇ ಹೊಡೆಯಲ್ಪಟ್ಟಿಹೆನೇ, ನೀನು ಹೊಡೆಯಲರ್ಹನಾಗಬೇಡ ಎಂದು ನುಡಿದವನಾಗಲೂ, ಶ್ರೀರಾಮನು ಆ ವಾಕ್ಯವಂ ಕೇಳಿ, ಆ ಜ

ರ್ತ್ತಸ್ಸೀತಾಸಕ್ತಾಂಪ್ರಿಯಾಂಕಥಾಂ॥೧೧॥ಗೃಧ್ರರಾಜಂಪರಿಷ್ವಜ್ಯಪರಿತ್ಯಜ್ಯಮಹದ್ಧನುಃ ॥ನಿಪಪಾತವಶೋಭೂಮೌ ರುರೋದಸಹಲಕ್ಷ್ಮಣಃ ॥೧೨॥ ವಿಕಮೇಕಾಯನೇದುರ್ಗೇನಿಃಶ್ವಸಂತಂಕಥಂಚನ ।ಸಮೀಕ್ಷ್ಯದುಃಖಿತತರೋರಾಮ ಸ್ಸೌಮಿತ್ರಿಮಬ್ರವೀತ್॥೧೩॥ರಾಜ್ಯಾದ್ಭ್ರಂಶೋವನೇವಾಸಸ್ಸೀತಾನಷ್ಟಾದ್ವಿಜೋಹತಃ।ಈದೃಶೀಯಂಮಮಾಲಕ್ಷ್ಮೀ ರ್ನಿರ್ದಹೇದಪಿಪಾವಕಂ ।೧೪। ಸಂಪೂರ್ಣಮಪಿಚೇದದ್ಯಪ್ರತರೇಯಂಮಹೋದಧಿಂ। ಸೋಪಿನೂನಂಮಮಾಲಕ್ಷ್ಮ್ಯಾ ವಿಶುಷ್ಯೇತ್ಸರಿತಾಂಪತಿಃ ।೧೫। ನಾಸ್ತ್ಯಭಾಗ್ಯತರೋಲೋಕೇಮತ್ತೋಸ್ಮಿನ್ಸಚರಾಚರೇ।ಯೇನೇಯಂಮಹತೀಪ್ರಾಪ್ತಾ

ಯುವ ಬದಿಂಬರುತ್ತಿರುವ ) ಸೀತಾಸಕ್ತಾಂ-ಸೀತಾ ಸಂಬಂಧವಾದ, ಪ್ರಿಯಾಂ-ಶ್ರೋತ್ರಗಳಿಗಿಂಪಾಗಿರುವ. ಕಥಾಂ-ವಾರ್ತೆಯನ್ನು, ವಿಜ್ಞಾಯ-ತಿಳಿದು, ಅಥವಾ-ತಸ್ಯ-ಆ ಜಟಾಯುವಿನ. ಸ್ವರೂಪಂ-ಸ್ವರೂಪವನ್ನು. ವಿಜ್ಞಾಯ-ತಿಳಿದು, ಸೀತಾಸಕ್ತಾಂ-ಸೀತಾದೇವಿಗೆ ಸಂಬಂಧವಾದ. ಪ್ರಿಯಾಂ-ಯಿಷ್ಟವಾದ, ಕಥಾಂ-ಕಥೆಯನ್ನು, ಶ್ರುತ್ವಾ-ಕೇಳಿ, ತದಾ-ತತ್ಕ್ಷಣದಲ್ಲಿ, ಬಾಷ್ಪಪೂರ್ಣಮುಖಃ-ಕಂಬನಿಯಿಂ ತುಂಬಿರುವ ಮುಖವುಳ್ಳವನಾಗಿ, ದ್ವಿಗುಣೀಕೃತತಾಪಾರ್ತಃ-ಎರಡುಬಗೆಯಾಗಿ ಮಾಡಲ್ಪಟ್ಟ, ತಾಪ-ತಾಪದಿಂದ. ಆರ್ತಃ-ದೀನನಾಗಿ, (ಅಂದರೆ-ಸ್ವಭಕ್ತನಾದ ಜಟಾಯುವಿಗೆ ಮ ಹದಾಪತ್ತು ಬಂತೆಂಬ ಪರಿತಾಪ ಒಂದು, ಸೀತಾವಿರಹದಿಂ ಸಂಭೂತವಾದ ಅನುತಾಪವೆಂಬ ಈ ಎರಡರಿಂದ ಪರಿತಪಿಸಿದಂಥಾವನಾದನೆಂದು ತಾತ್ಪರ್ಯವು) ॥೧೧॥ ಮಹತ್-ದೊಡ್ಡದಾದ. ಧನುಃ-ಧನುಸ್ಸನ್ನು, ಪರಿತ್ಯಜ್ಯ-ಬಿಸುಟು, ಗೃಧ್ರರಾಜಂ-ಜಟಾಯುವಿನನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಅವಶಃ ಮೂರ್ಛಿತನಾಗಿ, ( ಯದ್ವಾ-ಅವಶಃ-ಶೋಕದಿಂ ಪರವಶನಾಗಿ, ) ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದವನಾಗಿ. ಭೂಮೌ-ನೆಲದಲ್ಲಿ, ನಿಪಪಾತ-ಬಿದ್ದನು, ರುರೋದ-ಅಳುತ್ತಲೂ ಯಿದ್ದನು ॥೧೨॥ ರಾಮಃ-ಶ್ರೀರಾಮನು, ದುರ್ಗೇ-ಸಂಚರಿಸಲಸಾಧ್ಯವಾದ, ಏಕಾಯನೇ-ಒಬ್ಬನೇ ಹೋಗತಕ್ಕ ಕಾಲುದಾರಿಯ, ಏಕಂ-ಅಸಹಾಯಭೂತನಾದ, ಕಥಂಚನ-ಅತಿಪ್ರಯಾಸದಿಂದ, ನಿಶ್ವಸಂತಂ-ನಿಟ್ಟುಸುರು ಬಿಡುತ್ತಿರುವ ಆ ಜಟಾಯುವಿನನ್ನು, ಸಮೀಕ್ಷ್ಯ-ಕಂಡು. ದುಃಖಿತತರಃ-ದುಃಖಗೊಂಡವರೊಳಗೆ ಅಧಿಕವಾದ ವ್ಯಸನವುಳ್ಳವನಾಗಿ. ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಅಬ್ರವೀತ್-ನುಡಿದನು ॥೧೩॥ ರಾಜ್ಯಾತ್-ರಾಜ್ಯದದೆಶೆಯಿಂದ, ಭ್ರಂಶಃ-ಪರಿತ್ಯಾಗವು, ವನೇ-ಅರಣ್ಯದಲ್ಲಿ, ವಾಸಃ-ಇರೋಣವು, ಸೀತಾ-ಸೀತಾದೇವಿಯು, ನಷ್ಟಾ-ಹೋದಳು, ದ್ವಿಜಃ-ಪಕ್ಷಿಯಾದ ಜಟಾಯುವು, ಹತಃ-ಹೊಡೆಯಲ್ಪಟ್ಟನು, ಈದೃಶೀ-ಇಂಥಾದ್ದಾದ. ಮಮ-ನನ್ನ, ಇಯಂಲಕ್ಷ್ಮೀಃ-ಈದೌರ್ಭಾಗ್ಯವು, ಪಾವಕಮಪಿ-ಸಕಲವಸ್ತುವಿನನ್ನು ದಹಿಸುತ್ತಿರುವ ಅಗ್ನಿಯನ್ನೂ ಕೂಡ. ನಿರ್ದಹೇತ್-ದಹಿಸುವದು, ( ಯದ್ವಾ-ವಿಶೇಷಾರ್ಥವಾದರೆ, ರಾಜ್ಯಾತ್-ಕೈಗೆಬಂದ ರಾಜ್ಯಪದೆಶೆಯಿಂದ, ಭ್ರಂಶಃ-ಹಠಾತ್ತಾಗಿ ಪರಿತ್ಯಾಗವು, ಅಥವಾ ರಾಜ್ಯಪರಿತ್ಯಾಗವಾದರೂ ಭಿಕ್ಷಾವೃತ್ತಿಯಿಂದ ರಾಜ್ಯದಲ್ಲಿಯೇ ಇರಬಹುದು ಅದೂಯಿಲ್ಲದೆ ವನದಲ್ಲಿ ವಾಸವಾಯಿತು, ವನದಲ್ಲಿದ್ದರೂ, ಹೆಂಡತೀ ಸ್ನೇಹಿತನೂ ತಮ್ಮನೂ ಯಿವರಿಂದೊಡಗೂಡಿರಬಹುದೆಂದರೆ,ಸೀತಾಂ-ಸೀತಾದೇವಿಯು, ನಷ್ಟಾ-ಹೋದಳು, ದ್ವಿಜಃ-ಸ್ನೇಹಿತನಾಗಿಯೂ ಭಕ್ತನಾಗಿಯೂ ಇರುವ ಪಕ್ಷಿಯು, ಹತಃ-ಮೃತನಾದನು, ಈದೃಶೀ-ಇಂಥಾದ್ದಾದ. ಇಯಂ-ಈ ಅನುಭವ ಸಿದ್ಧವಾದ, ಮಮ-ನನ್ನ, ಅಲಕ್ಷ್ಮೀಃ-ದೌರ್ಭಾಗ್ಯವು, ಪಾವಕಮಪಿ-ಅಗ್ನಿಯನ್ನೂ ಕೂಡ, ನಿರ್ದಹೇತ್-ದಹಿಸುವದು ) ॥೧೪॥ ಅದ್ಯ-ಈಗ, ಸಂಪೂರ್ಣಂ-ಉದಕದಿಂ ಪರಿಪೂರಿತವಾದ, ಮಹೋದಧಿಂ-ಕಡಲಿನಲ್ಲಿ, ಪ್ರತರೇಯಂಚೇತ್-ತಾಪಶಮನಾರ್ಥವಾಗಿ ಪ್ರವೇಶ ಮಾಡಿದರೇ, ಸೋಪಿ-ಅಂಥಾ-ಸರಿತಾಂಪತಿಃ-ನದಿಗಳಿಗೆಲ್ಲಾ ಪತಿಯಾದ ಸಮುದ್ರನು, ಮಮ-ನನ್ನ. ಅಲಕ್ಷ್ಮ್ಯಾ-ದೌರ್ಭಾಗ್ಯದಿಂದ, ವಿಶುಷ್ಯೇತ್-ಶೋಷಿಸಿಹೋಗುವನು ॥೧೫॥ ಸಚರಾಚರೇ-ಸ್ಥಾವರಜಂಗಮಗಳಿಂದೊಡಗೂಡಿದ, ಅಸ್ಮಿನ್ಲೋಕೇ-ಈ ಭೂಲೋಕದಲ್ಲಿ, ಮತ್ತಃ-ನನಗಿಂತಲೂ, ಅಭಾಗ್ಯತರಃ-ಅತಿಶಯವಾಗಿ ಭಾಗ್ಯಹೀನನು, ನಾಸ್ತಿ-ಇಲ್ಲ,ಯೇನ-ಯಾವದೌರ್ಭಾಗ್ಯದಿಂದ, ಮಹತೀ-ದೊಡ್ಡದಾದ, ಯಿಯಂವ್ಯಸನವಾಗುರಾ-ಈ ವ್ಯಸನವನ್ನು,

ಟಾಯುವಿನ ಸ್ವರೂಪವಂ ತಿಳಿದು, ತತ್ಕ್ಷಣದಲ್ಲಿಯೇ ಕಂಬನಿಗಳಂ ಸುರಿಸುತ್ತಾ ದ್ವಿಗುಣೀಕೃತವಾದ ಸಂತಾಪವುಳ್ಳವನಾಗಿ, ಆ ಕೋದಂಡವಂ ಬಿಟ್ಟು ಜಟಾಯುವಿನನ್ನಪ್ಪಿಕೊಂಡು ಮೂರ್ಛಾಕ್ರಾಂತನಾಗಿ ಲಕ್ಷ್ಮಣನೊಡನೆ ನೆಲದಲ್ಲಿ ಬಿದ್ದು ರೋದನಂ ಗೈದನು ।೧೨। ಮತ್ತೂ ಆ ಶ್ರೀರಾಮನು ಸಂಚರಿಸಲಸಾಧ್ಯವಾದ ಕಾಲುದಾರಿಯಲ್ಲಿ ಅಸಹಾಯನಾಗಿ ನಿಟ್ಟುಸುರುಗಳಂ ಬಿಡುತ್ತಾ ಅತಿಪ್ರಯಾಸದಿಂದ ಆಜಟಾಯುವಿನಂ ಕಂಡು, ಮಹಾವ್ಯಥೆಯನ್ನೈದಿದವನಾಗಿ ಲಕ್ಷ್ಮಣನಂ ಕುರಿತು ನುಡಿವನದೆಂತೆನೆ,— ॥೧೩॥ ಎಲೈ ತಮ್ಮನೇ! ನೋಡುವವನಾಗು ನನಗೆ ರಾಜ್ಯವು ತಪ್ಪಿ ಅರಣ್ಯವಾಸವು ಸಂಭವಿಸುವಣವೂ, ಅಂಥಾ ಅರಣ್ಯದಲ್ಲಿ ಸೀತಾದೇವಿಯು ನಷ್ಟವಾಗುವಣವೂ, ಪಕ್ಷೀಂದ್ರನಾದ ಜಟಾಯುವಿಗೆ ಮೃತಿಯು ಸಂಭವಿಸುವಣವೂ, ಎಂಬ ಇಂಥಾ ನನ್ನ ದೌರ್ಭಾಗ್ಯವು ಅಗ್ನಿಯನ್ನೂ ಕೂಡಾ ದಹಿಸುವದು [ವಿಶೇಷಾಭಿಪ್ರಾಯವನ್ನು ಪ್ರತಿಪದಟೀಕಿನಲ್ಲಿ ನೋಡಬಹುದು] ॥೧೪॥ ಹಾಹಾ! ನಾನೀಗ ಉದಕದಿಂದ ಸಮೃದ್ಧವಾದ ಸಮುದ್ರದಲ್ಲಿ ಸ್ನಾನಂ ಗೈದವನಾದರೆ, ನದಿಗಳಿಗೆಲ್ಲ ಪತಿಯಾದ ಆ ಸಮುದ್ರನೂ ಸಹಾ ನನ್ನ ದೌರ್ಭಾಗ್ಯದಿಂದ ಶೋಷಣವನ್ನೈದುವನು ।೧೫॥ ಈ ವ್ಯಸನವೆಂಬ ಬಲೆಯು ನನ್ನನ್ನು ಪೊಂದಿಥೆಯಾದಕಾರಣ, ಈ ಲೋಕದಲ್ಲಿ ನನಗಿಂತಲೂ ಅತಿಶಯವಾದ ದುಃಖವುಳ್ಳವನು ಯಾವ

ಮಯಾವ್ಯಸನಮಾಗತಾ ।೨೬। ಅಯಂಪಿತೃವಯಸ್ಯೋಮೇಗೃಧ್ರರಾಜೋಜರಾನ್ವಿತಃ । ಶೇತೇವಿನಿಹತೋಭೂಮೌಮ ಮಭಾಗ್ಯವಿಪರ್ಯಯಾತ್ ।೨೭। ಇತ್ಯೇವಮುಕ್ತ್ವಾಬಹುಶೋರಾಘವಸ್ಸಹಲಕ್ಷ್ಮಣಃ। ಜಟಾಯುಷಂಚಪಸ್ಪರ್ಶಪಿತೃಸ್ನೇಹಂನಿದರ್ಶಯನ್ ।೨೮। ನಿಕೃತ್ತಪಕ್ಷಂರುಧಿರಾವಸಿಕ್ತಂಸಗೃಧ್ರರಾಜಂಪರಿರಭ್ಯರಾಮಃ । ಕ್ವಮೈಥಿಲೀಪ್ರಾಣಸಮಾಮಮೇತಿವಿಮುಚ್ಯವಾಚಂನಿಪಪಾತಭೂಮೌ । ೨೯ ।ಇತಿಶ್ರೀಮದಾರಣ್ಯಕಾಂಡೇ -ಸಪ್ತಷಷ್ಟಿತಮಸ್ಸರ್ಗಃ. *

ರಾಮಸ್ಸಂಪ್ರೇಕ್ಷ್ಯತಂಗೃಧ್ರಂಭುವಿರೌದ್ರೇಣಪಾತಿತಂ। ಸೌಮಿತ್ರಿಂಮಿತ್ರಸಂಪನ್ನಮಿದಂವಚನಮಬ್ರವೀತ್।೧। ಮಮಾಯಂನೂನಮರ್ಥೇಷುಯತಮಾನೋವಿಹಂಗಮಃ। ರಾಕ್ಷಸೇನಹತಸ್ಸಂಖ್ಯೇಪ್ರಾಣಾಂಸ್ತ್ಯಕ್ಷ್ಯತಿದುಸ್ತ್ಯಜಾನ್।೨। ಅಯಮಸ್ಯಶರೀರೇಸ್ಮಿನ್ಪ್ರಾಣೋಲಕ್ಷ್ಮಣವಿದ್ಯತೇ । ತಥಾಹಿಸ್ವರಹೀನೋಯಂವಿಕ್ಲಬಸ್ಸಮುದೀಕ್ಷತೇ ।೩। ಜಟಾ

---

ಮೃಗಬಂಧಕವಾದ ಬಲೆಯು, ಮಯಾ-ನನ್ನಿಂದ. ಪ್ರಾಪ್ತಾ-ಹೊಂದಲ್ಪಟ್ಟಿತು ॥೨೬॥ ಮೇ-ನನ್ನ, ಪಿತೃವ್ಯಸ್ಯಃ-ತಂದೆಗೆ ಸ್ನೇಹಿತನಾದ ಜರಾನ್ವಿತಃ-ಮುದುಕನಾದ ಅಯಂಗೃಧ್ರರಾಜಃ-ಈ ಗೃಧ್ರಾಧಿಪತಿಯಾದ ಜಟಾಯುವು, ಮಮ-ನನ್ನ, ಭಾಗ್ಯವಿಪರ್ಯಯಾತ್-ಭಾಗ್ಯದಭ್ರಂಶದಿಂದ, ಭೂಮೌ-ನೆಲದಲ್ಲಿ, ವಿನಿಹತಃ-ಹೊಡೆಯಲ್ಪಟ್ಟವನಾಗಿ, ಶೇತೇ-ಮಲಗಿಥಾನೆ ॥೨೭॥ ಇತ್ಯೇವಂ-ಈಪರಿಯಾಗಿ, ಬಹುಶಃ-ಅನೇಕಬಗೆಯಾಗಿ, ಉಕ್ತ್ವಾ-ಮಾತನಾಡಿ, ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದ, ರಾಘವಃ-ಶ್ರೀರಾಮನು, ಪಿತೃಸ್ನೇಹಂ-ಪಿತೃ-ತಂದೆಯ, ಸ್ನೇಹಂ-ಮೈತ್ರಿಯನ್ನು, ನಿದರ್ಶಯನ್-ತೋರಿಸುತ್ತಿರುವವನಾಗಿ, ಜಟಾಯುಷಂ-ಜಟಾಯುವಿನನ್ನು, ಪಸ್ಪರ್ಶ-ಕೈಯಿಂದ ಸವರಿದನು ॥೨೮॥ ಸರಾಮಃ-ಆ ಶ್ರೀರಾಮನು, ನಿಕೃತ್ತಪಕ್ಷಂ-ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ, ರುಧಿರಾವಸಿಕ್ತಂ-ರಕುತದಿಂ ನೆನದಿರುವ, ಗೃಧ್ರರಾಜಂ-ಜಟಾಯುವಿನನ್ನು, ಪರಿರಭ್ಯ-ಅಪ್ಪಿಕೊಂಡು, ಮಮ-ನನ್ನ, ಪ್ರಾಣಸಮಾ-ಪ್ರಾಣಗಳಿಗೆ ಸಮಾನಳಾದ, ಮೈಥಿಲೀ-ಸೀತಾದೇವಿಯು, ಕ್ವ-ಎಲ್ಲಿ, ಇತಿ-ಇಂತೆಂದು, ವಾಚಂ-ಮಾತನ್ನು, ವಿಮುಚ್ಯ-ಬಾಯಿಂದ ಬಿಟ್ಟು, ಭೂಮೌ-ನೆಲದಲ್ಲಿ, ನಿಪಪಾತ-ಬಿದ್ದನು ॥೨೯॥ —**ಸಪ್ತಷಷ್ಟಿತಮಸ್ಸರ್ಗಃ**—

ರಾಮಃ-ಶ್ರೀರಾಮನು, ರೌದ್ರೇಣ-ಭಯಂಕರನಾದ ರಾವಣನಿಂದ. ಭುವಿ-ನೆಲದಲ್ಲಿ. ಪಾತಿತಂ-ಬೀಳಿಸಲ್ಪಟ್ಟ, ತಂಗೃಧ್ರಂ-ಆ ಜಟಾಯುವಿನನ್ನು, ಪ್ರೇಕ್ಷ್ಯ-ಕಂಡು, ಮಿತ್ರಸಂಪನ್ನಂ-ಮೈತ್ರಿಯಿಂದ ಕೂಡಿಕೊಂಡಿರುವ, ಸೌಮಿತ್ರಿಂ-ಲಕ್ಷ್ಮಣನಂಕುರಿತು. ಇದಂವಚನಂ-ಈ ಮುಂದೆ ಹೇಳತಕ್ಕ ಮಾತನ್ನು, ಅಬ್ರವೀತ್-ನುಡಿದನು ॥೧॥ ಅಯಂವಿಹಂಗಮಃ-ಈ ಪಕ್ಷಿಯು, ಮಮ-ನನ್ನ, ಅರ್ಥೇಷು-ಕಾರ್ಯಗಳ ವಿಷಯಕವಾಗಿ, ಯತಮಾನಃ-ಪ್ರಯತ್ನವಮಾಡಿದವನಾಗಿ, ಸಂಖ್ಯೇ-ಕಾಳಗದಲ್ಲಿ, ರಾಕ್ಷಸೇನ-ರಕ್ಕಸನಿಂದ, ಹತಃ-ಹೊಡೆಯಲ್ಪಟ್ಟವನಾಗಿ, ದುಸ್ತ್ಯಜಾನ್-ತ್ಯಜಿಸಲನರ್ಹಗಳಾದ, ಪ್ರಾಣಾನ್-ಪ್ರಾಣಗಳನ್ನು, ತ್ಯಕ್ಷ್ಯತಿ-ಬಿಡುವನು. ನೂನಂ-ನಿಶ್ಚಯವು ॥೨॥ ಹೇಲಕ್ಷ್ಮಣಾ-ಎಲೈ ಲಕ್ಷ್ಮಣನೇ, ಅಸ್ಯ-ಈ ಜಟಾಯುವಿನ. ಅಸ್ಮಿನ್ಶರೀರೇ-ಈ ದೇಹದಲ್ಲಿ, ಅಯಂಪ್ರಾಣಃ-ಈ ಸೂಕ್ಷ್ಮಪ್ರಾಣವು, ವಿದ್ಯತೇ-ಇಧೆ, ತಥಾಹಿ-ಹಾಗೇಸರಿ. ಸ್ವರಹೀನಃ-ಹೀನವಾದ ಧ್ವನಿಯುಳ್ಳ, ಅಯಂ-ಈ ಪಕ್ಷಿಯು, ವಿಕ್ಲಬಃ-ವಿಹ್ವಲಚಿತ್ತನಾಗಿ, ಸಮುದೀಕ್ಷತೇ-ಕಣ್ಣುಬಿಡುತ್ತಾನೆ ॥೩॥ ಹೇಜಟಾಯೋ-ಎಲೈ ಜಟಾಯುವೇ, ವಾಕ್ಯಂ-ಮಾತನ್ನು. ವ್ಯಾಹರಿತುಂಪುನಃ-ಹೇಳುವದಕ್ಕೆ ಆದರೆ, ಶಕ್ನೋಷಿಯದಿ-ಸಮರ್ಥನೇ ಆದವನಾದರೆ. ತೇ-ನಿನಗೆ. ಭದ್ರಂ-ಶುಭವು, ಅಸ್ತು-ಆಗಲಿ, ಸೀತಾಂ-ಸೀತಾದೇವಿಯು

---

ಪುರುಷನೂ ಇಲ್ಲ ।೨೬। ನಮ್ಮ ತಂದೆಯಾದ ದಶರಥಮಹಾರಾಜನಿಗೆ ಸ್ನೇಹಿತನಾದ ಬಹು ವೃದ್ಧನಾಗಿರುವ ಈ ಜಟಾಯುವು ನನ್ನ ದೌರ್ಭಾಗ್ಯದಿಂದ ಹೊಡೆಯಲ್ಪಟ್ಟವನಾಗಿ ನೆಲದಲ್ಲಿ ಬಿದ್ದಿಧಾನೆ ।೨೭। ಎಂಬದಾಗಿ ಶ್ರೀರಾಮನು ಪರಿಪರಿ ರೋದನಂ ಗೈಯ್ಯುತ್ತಾ, ಅನುಜನಾದ ಲಕ್ಷ್ಮಣನಿಂದೊಡಗೂಡಿ, ತನ್ನ ತಂದೆಯಾದ ದಶರಥಮಹಾರಾಜನಿಗೂ ಆ ಜಟಾಯುವಿಗೂ ಸಹಾ ಉಂಟಾದ ಸ್ನೇಹವನ್ನು ತೋರಿಸುತ್ತಾ, ಆ ಪಕ್ಷೀಂದ್ರನನ್ನು ತನ್ನ ಕೈಯ್ಯಿಂದ ಸ್ಪರ್ಶಂಗೈದು, ರಕುತದಿಂದ ತೋಯಿಸಲ್ಪಟ್ಟ ಗರಿಗಳುಳ್ಳವನಾದ ಆತನನ್ನಪ್ಪಿಕೊಂಡು, ನನ್ನ ಪ್ರಾಣಪ್ರಿಯಳಾದ ಜನಕರಾಜನಂದಿನಿಯು ಎಲ್ಲಿಥಾಳೆಂದು ಕೂಗುತ್ತಾ ಮೂರ್ಛಾಕ್ರಾಂತನಾಗಿ ನೆಲದಲ್ಲಿ ಬಿದ್ದನು ।೨೯। —* ಆರಣ್ಯಕಾಂಡದಲ್ಲಿನ ೬೭ನೆಯಸರ್ಗಂ ಮುಗಿದುದು *—

ಅನಂತರದಲ್ಲಿ ರಘುಕುಲಾನಂದಕರನಾದ ಶ್ರೀರಾಮನು, ಮಹಾ ಭಯಂಕರನಾದ ರಾವಣನಿಂದ ಧರಾತಲದಲ್ಲಿ ಬೀಳಿಸಲ್ಪಟ್ಟ ಆ ಜಟಾಯುವಿನಂ ಕಂಡು, ಬಹು ಮೈತ್ರಿಯಿಂದಯುಕ್ತನಾದ ಮತ್ತೂ ತನ್ನ ತಮ್ಮನಾದ ಲಕ್ಷ್ಮಣನಂ ಕುರಿತಿಂತೆಂದನು,—।೧। ಈ ಪಕ್ಷಿಯು ನನ್ನ ನಿಮಿತ್ತವಾಗಿ ಪ್ರಯತ್ನವಂ ಗೈದು ರಣರಂಗದಲ್ಲಿ ಆ ರಾವಣನಿಂದ ಹೊಡೆಯಲ್ಪಟ್ಟವನಾಗಿ ತ್ಯಜಿಸಲಸಾಧ್ಯವಾದ ತನ್ನ ಪ್ರಾಣಗಣಗಳಂ ಬಿಡುವನು ।೨। ಎಲೈ ಅನುಜನೇ! ಈತನ ಶರೀರದಲ್ಲಿ ಸೂಕ್ಷ್ಮವಾಗಿ ಪ್ರಾಣಂಗಳಿವೆ; ಆದರೂ ಈತನು ಸ್ವರಹೀನನಾಗಿ ವಿಹ್ವಲಚಿತ್ತತೆಯನ್ನೈದಿ ಕಣ್ಣುಗಳಂ ಬಿಡುತಲಿಧಾನೆ ।೩। ಎಲೈ ಜಟಾಯುವೇ! ಮಾತಾಡುವದಕ್ಕೆ ನಿನಗೆ ಶಕ್ತಿಯಿಲ್ಲದಿದ್ದರೆ ವಿಶೇಷವಾಗಿ ಪೇಳಬ್ಯಾಡ, ಸೀತಾದೇವಿಯು ಯೆಲ್ಲಿರುವಳು? ನಿನಗೆ ಸಂಹಾರವು ಹ್ಯಾಗೆ ಉಂಟಾಯಿತು?

ಯೊಯದಿಶಕ್ನೋಷಿವಾಕ್ಯಂವ್ಯಾಹರಿತುಂಪುನಃ। ಸೀತಾಮಾಖ್ಯಾಹಿಭದ್ರಂತೆವಧಮಾಖ್ಯಾಹಿಚಾತ್ಮನಃ ।೪। ಕಿನ್ನಿಮಿತ್ತೋಹರತ್ಸೀತಾಂರಾವಣಸ್ತಸ್ಯಕಿಂಮಯಾ। ಅಪರಾಧಂತುಯಂದೃಷ್ಟ್ವಾರಾವಣೇನಹೃತಾಪ್ರಿಯಾ ।೫। ಕಥಂತಚ್ಚಂದ್ರಸಂಕಾಶಮುಖಮಾಸೀನ್ಮನೋಹರಂ। ಸೀತಯಾಕಾನಿಚೋಕ್ತಾನಿತಸ್ಮಿನ್ಕಾಲೇದ್ವಿಜೋತ್ತಮ ।೬। ಕಥಂವೀರ್ಯಃಕಥಂರೂಪಃಕಿಂಕರ್ಮಾಸಚರಾಕ್ಷಸಃ। ಕ್ವಚಾಸ್ಯಭವನಂತಾತಬ್ರೂಹಿಮೆಪರಿಪೃಚ್ಛತಃ।೭।ತಮುದ್ವೀಕ್ಷ್ಯಾಥದೀನಾತ್ಮಾವಿಲಪಂತಮನಂತರಂ। ವಾಚಾತಿಸನ್ನಯಾರಾಮಂಜಟಾಯುರಿದಮಬ್ರವೀತ್।೮। ಹೃತಾಸಾರಾಕ್ಷಸೇಂದ್ರೇಣರಾವಣೇನವಿಹಾಯಸಾ। ಮಾಯಾಮಾಸ್ಥಾಯವಿಪುಲಾಂವಾತದುರ್ದಿನಸಂಕುಲಾಂ ।೯। ಪರಿಶ್ರಾಂತಸ್ಯಮೆತಾತಪಕ್ಷೌಛಿತ್ವಾಸರಾಕ್ಷಸಃ। ಸೀತಾಮಾದಾಯವೈದೆಹೀಂಪ್ರಯಾತೋದಕ್ಷಿಣಾಂದಿಶಂ ।೧೦। ಉಪರುಧ್ಯಂತಿಮೆಪ್ರಾಣಾದೃಷ್ಟಿರ್ಭ್ರಮತಿರಾಘವ। ಪಶ್ಯಾಮಿವೃಕ್ಷಾನ್ಸೌವರ್ಣಾನುಶೀರಕೃತಮೂರ್ಧಜಾನ್।೧೧। ಯೆನಯಾತಿಮುಹೂ

ನ್ನು, ಆಖ್ಯಾಹಿ-ಹೇಳು, ಆತ್ಮನಃ-ನಿನ್ನ. ವಧಂಚ-ಸಂಹಾರವನ್ನೂ ಕೂಡ. ಆಖ್ಯಾಹಿ-ಹೇಳು ॥೪॥ ರಾವಣಃ-ರಾವಣಾಸುರನು. ಕಿನ್ನಿಮಿತ್ತಃ-ಯಾವ ಹೇತುವುಳ್ಳವನಾಗಿ. ಸೀತಾಂ-ಸೀತಾದೇವಿಯನ್ನು, ಅಹರತ್-ಅಪಹರಿಸಿದನೋ, ತಸ್ಯ-ಅಂಥಾ ರಾವಣನಿಗೆ, ಮಯಾ-ನನ್ನಿಂದ. ಕಿಂ-ಏನು. ಕೃತಂ-ಅಪರಾಧಮಾಡಲ್ಪಟ್ಟಿತು, ಯಂಅಪರಾಧಂ-ಯಾವ ಅಪರಾಧವನ್ನು. ದೃಷ್ಟ್ವಾ-ಕಂಡು, ರಾವಣೇನ-ರಾವಣನಿಂದ, ಪ್ರಿಯಾ-ಹೆಂಡತಿಯಾದ ಸೀತಾದೇವಿಯು, ಹೃತಾ-ಅಪಹರಿಸಲ್ಪಟ್ಟಳು ॥೫॥ ಹೆದ್ವಿಜೋತ್ತಮ-ಎಲೈ ಪಕ್ಷಿಶ್ರೇಷ್ಠನೇ, ಮನೋಹರಂ-ಮನೋಹರವಾದ, ಚಂದ್ರಸಂಕಾಶಂ-ಚಂದ್ರನಿಗೆ ಸಮಾನವಾದ, ತನ್ಮುಖಂ-ಆ ಸೀತಾದೇವಿಸಂಬಂಧಿಯಾದ ಮುಖವು. ತಸ್ಮಿನ್ಕಾಲೆ-ಆ ಕಾಲದಲ್ಲಿ. ಕಥಮಾಸೀತ್-ಹ್ಯಾಗಾಯಿತು. ಸೀತಯಾ-ಸೀತಾದೇವಿಯಿಂದ. ಕಾನಿ-ಯಾವ ಮಾತುಗಳು, ಉಕ್ತಾನಿ-ಹೇಳಲ್ಪಟ್ಟವು ॥೬॥ ಸರಾಕ್ಷಸಃ-ಆ ರಾಕ್ಷಸನು. ಕಥಂವೀರ್ಯಃ-ಎಂಥಾ ಪರಾಕ್ರಮವಂತನು, ಕಥಂರೂಪಃ-ಎಂಥಾ ಆಕಾರವುಳ್ಳವನು, ಕಿಂಕರ್ಮಾ-ಏನು ಕೃತ್ಯವುಳ್ಳವನೋ, ಹೆತಾತ-ಎಲೋ ಅಪ್ಪನೇ, ಅಸ್ಯ-ಈ ರಾಕ್ಷಸನ, ಭವನಂಚ-ಮನೆಯೂ. ಕ್ವ-ಎಲ್ಲಿ. ಪರಿಪೃಚ್ಛತಃ-ಕೇಳುತ್ತಿರುವ, ಮೆ-ಯೆನಗೆ, ಬ್ರೂಹಿ-ಹೇಳು ॥೭॥ ಅಥ-ಬಳಿಕ, ದೀನಾತ್ಮಾ-ದೀನಸ್ವಭಾವವುಳ್ಳ, (ಅಂದರೆ-ಸಂಕಟಗೊಂಡ,) ಜಟಾಯುಃ-ಜಟಾಯುವು. ವಿಲಪಂತಂ-ಪ್ರಲಾಪಮಾಡುತ್ತಿರುವ, ತಂರಾಮಂ-ಆ ಶ್ರೀರಾಮನನ್ನು. ಉದ್ವೀಕ್ಷ್ಯ-ಕಣ್ತೆರೆದುನೋಡಿ, ಅನಂತರಂ-ಬಳಿಕ, ಅತಿಸನ್ನಯಾ-ಅತಿಸೂಕ್ಷ್ಮವಾದ, ವಾಚಾ-ಮಾತಿನಿಂದ, ಇದಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ॥೮॥ ರಾಕ್ಷಸೇಂದ್ರೇಣ-ರಕ್ಕಸಾಧಿಪತಿಯಾದ, ರಾವಣೇನ-ರಾವಣಾಸುರನಿಂದ. ವಿಪುಲಾಂ-ವಿಸ್ತಾರವಾದ, ವಾತದುರ್ದಿನಸಂಕುಲಾಂ-ಘಾಳಿಯಿಂದಲೂ ಮೇಘಚ್ಛಾದನವಾದ ದಿನದಿಂದಲೂ ವ್ಯಾಪ್ತವಾದ, ಮಾಯಾಂ-ಅಸಾಧಾರಣಸಾಮರ್ಥ್ಯವನ್ನು, ಆಸ್ಥಾಯ-ಮಾಡಿ. ಸಾ-ಆ ಸೀತಾದೇವಿಯು, ವಿಹಾಯಸಾ-ಅಂತರಿಕ್ಷಮಾರ್ಗದಿಂದ, ಹೃತಾ-ಅಪಹರಿಸಲ್ಪಟ್ಟಳು ॥೯॥ ಹೆತಾತ-ಎಲೈ ಅಪ್ಪನೇ, ಪರಿಶ್ರಾಂತಸ್ಯ-ಬಳಲಿದ, ಮೆ-ನನ್ನ, ಪಕ್ಷೌ-ರಕ್ಕೆಗಳನ್ನು, ಛಿತ್ವಾ-ಕತ್ತರಿಸಿ, ಸರಾಕ್ಷಸಃ-ಆ ರಾಕ್ಷಸನಾದ ರಾವಣನು, ವೈದೆಹೀಂ-ಜನಕರಾಯನ ಮಗಳಾದ, ಸೀತಾಂ-ಸೀತಾದೇವಿಯನ್ನು, ಆದಾಯ-ತೆಗದುಕೊಂಡು. ದಕ್ಷಿಣಾಂದಿಶಂ-ದಕ್ಷಿಣದಿಕ್ಕಿನಂಕುರಿತು, ಪ್ರಯಾತಃ-ಹೊರಟುಹೋದನು ॥೧೦॥ ಮೆ-ನನ್ನ, ಪ್ರಾಣಾಃ-ಪ್ರಾಣಗಳು, ಉಪರುಧ್ಯಂತಿ-ಮರಣವೇದನೆಯಿಂದ ಬಾಧಿಸಲ್ಪಡುತ್ತವೆ. ಹೆರಾಘವ-ಎಲೈ ಶ್ರೀರಾಮನೇ, ದೃಷ್ಟಿಃ-ನೋಟವು. ಭ್ರಮತಿ-ತಿರುಗುತ್ತದೆ. ವೃಕ್ಷಾನ್-ಗಿಡಗಳನ್ನು, ಸೌವರ್ಣಾನ್-ಸುವರ್ಣವಿಕಾರಗಳನ್ನಾಗಿಯೂ, ಉಶೀರಕೃತಮೂರ್ಧಜಾನ್-ಉಶೀರ-ಲಾವಂಚದ ಬೇರುಗಳಿಂದ, ಕೃತ-ಮಾಡಲ್ಪಟ್ಟ, ಮೂರ್ಧಜಾನ್-ಕೂದಲುಗಳುಳ್ಳವುಗಳನ್ನಾಗಿ. ಪಶ್ಯಾಮಿ-ಕಾಣುತ್ತೇನೆ ॥೧೧॥ ರಾವಣಃ-ರಾವಣನು, ಯೆನಮುಹೂರ್ತೇನ-ಯಾವ ಮುಹೂರ್ತ

ಷ್ಟನಾದ ರಾವಣನು ಸೀತಾದೇವಿಯನ್ನು ಯಾಕೆ ಅಪಹಾರಂ ಗೈದನು? ಆತನಿಗೆ ನಾನೇನಪರಾಧವಂ ಗೈದವನಾದೆ? ಯಾವ ಅಪರಾಧವಂ ಕಂಡು ಆತನು ಎನ್ನ ಪ್ರಾಣಕಾಂತೆಯಾದ ಸೀತಾದೇವಿಯ ಅಪಹಾರಂ ಗೈದನು?।೫। ಆ ಸಮಯದಲ್ಲಿ ಆಕೆಯ ಮುಖವು ಹ್ಯಾಗೆ ಇದ್ದಂಥಾದ್ದಾಯಿತು?ಆ ಕಾಲದಲ್ಲಿಆ ದೇವಿಯು ಏನು ಹೇಳಿದಳು? ಆ ದುಷ್ಟನಾದ ರಾವಣನು ಯೆಂಥಾಪರಾಕ್ರಮವುಳ್ಳವನು? ಅವನ ರೂಪವೆಂಥಾದ್ದು? ಆತನ ವ್ಯಾಪಾರವೇನು? ಆತನ ಮಂದಿರವು ಎಲ್ಲಿರುವದು? ಇದನ್ನೆಲ್ಲಾ ಹೇಳುವವನಾಗೆಂದು ಶ್ರೀರಾಮನು ನಿರೂಪಿಸಿದವನಾಗಲೂ, ಆ ಜಟಾಯುವು ಈ ರೀತಿಯಲ್ಲಿ ವಿಲಾಪವಂ ಗೈಯ್ಯುತಲಿರುವ ಆ ಶ್ರೀರಾಮನಂ ಕುರಿತು ನುಡಿವನದೆಂತೆನೆ;—।೮। ರಾಕ್ಷಸೇಂದ್ರನಾದ ರಾವಣನು ವಾಯುವಿನಿಂದಲೂ ದುರ್ದಿನದಿಂದಲೂ ಸಹಾ ವ್ಯಾಪ್ತವಾದ ಮಾಯೆಯಂ ಗೈದು ಸೀತಾದೇವಿಯನ್ನು ಅಪಹರಿಸಿದನು ।೯। ಅದು ಹ್ಯಾಗಂದರೆ,—ಎಲೋ ಎಲೋ, ಅಪ್ಪಶ್ರೀರಾಮನೇ! ಆ ರಾವಣಾಸುರನು, ವಾರ್ಧಿಕಾವಸ್ಥೆಯಿಂದ ಬಹು ಬಳಲಿದ ನನ್ನ ಗರಿಗಳಂ ಖಂಡ್ರಿಸಿ, ಸೀತಾದೇವಿಯಂ ತೆಗದುಕೊಂಡು ದಕ್ಷಿಣದಿಕ್ಕಿನಲ್ಲಿ ಸಾರಿದನು ।೧೦। ಎನ್ನ ಪ್ರಾಣಗಳು ಮರಣವೇದನೆಯಿಂದ ಬಾಧಿಸಲ್ಪಡುತಲಿವೆ, ಮತ್ತೂ ಕಣ್ಣುತಿರುಗುತದೆ,ಈ ವೃಕ್ಷಗಳನ್ನೆಲ್ಲ ಸುವರ್ಣವಿಕಾರವಾಗಿಯೂ,ಲಾವಂಚದ ಬೇರುಗಳಿಂದ ಗೈಯ್ಯ

ರ್ತೇನಸೀತಾಮಾದಾಯರಾವಣಃ। ವಿಪ್ರಣಷ್ಟಂಧನಂಕ್ಷಿಪ್ರಂತತ್ಸ್ವಾಮೀಪ್ರತಿಪದ್ಯತೇ॥೧೨॥ ವಿಂದೋನಾಮಮುಹೂರ್ತೋಯಂಸಚಕಾಕುತ್ಸ್ಥನಾಬುಧತ್। ತ್ವತ್ಪ್ರಿಯಾಂಜಾನಕೀಂಹೃತ್ವಾರಾವಣೋರಾಕ್ಷಸೇಶ್ವರಃ॥ ಝಷವದ್ಬಡಿಶಂಗೃಹ್ಯಕ್ಷಿಪ್ರಮೇವವಿನಶ್ಯತಿ॥೧೩॥ ನಚತ್ವಯಾವ್ಯಥಾಕಾರ್ಯಾಜನಕಸ್ಯಸುತಾಂಪ್ರತಿ। ವೈದೇಹ್ಯಾರಂಸ್ಯಸೇಕ್ಷಿಪ್ರಂಹತ್ವಾತಂರಾಕ್ಷಸಂರಣೇ॥೧೪॥ ಅಸಂಮೂಢಸ್ಯಗೃಧ್ರಸ್ಯರಾಮಂಪ್ರತ್ಯನುಭಾಷತಃ। ಆಸ್ಯಾತ್ಸುಸ್ರಾವರುಧಿರಂಮ್ರಿಯಮಾಣಸ್ಯಸಾಮಿಷಂ॥೧೫॥ ಪುತ್ರೋವಿಶ್ರವಸಸ್ಸಾಕ್ಷಾದ್ಭ್ರಾತಾವೈಶ್ರವಣಸ್ಯಚ। ಇತ್ಯುಕ್ತ್ವಾದುರ್ಲಭಾನ್ಪ್ರಾಣಾನ್ಮುಮೋಚಪತಗೇಶ್ವರಃ॥೧೬॥ ಬ್ರೂಹಿಬ್ರೂಹೀತಿರಾಮಸ್ಯಬ್ರುವಾಣಸ್ಯಕೃತಾಂಜಲೇಃ॥ ತ್ಯಕ್ತ್ವಾಶರೀರಂಗೃಧ್ರಸ್ಯಜಗ್ಮುಃಪ್ರಾಣಾವಿಹಾಯಸಂ॥೧೭॥ ಸನಿಕ್ಷಿಪ್ಯಶಿರೋಭೂಮೌಪ್ರಸಾರ್ಯಚರಣೌತದಾ। ವಿಕ್ಷಿಪ್ಯಚಶರೀರಂಸ್ವಂಪಪಾತಧರಣೀತಲೇ॥೧೮॥ ತಂಗೃಧ್ರಂಪ್ರೇಕ್ಷ್ಯತಾಮ್ರಾಕ್ಷಂಗತಾಸುಮಚಲೋಪಮಂ। ರಾಮಸ್ಸು

---

ದಲ್ಲಿ, ಸೀತಾಂ-ಸೀತಾದೇವಿಯನ್ನು, ಆದಾಯ-ತೆಗೆದುಕೊಂಡು, ಯಾತಿ-ಹೋಗಿದ್ದಾನೋ, ವಿಪ್ರಣಷ್ಟಂ-ನಷ್ಟವಾದ, ತದ್ಧನಂ-ಆ ಸ್ವತ್ತನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ಸ್ವಾಮೀ-ಸ್ವತ್ತಿಗೆ ಧಣಿಯಾದಂಥವನು, ಪ್ರತಿಪದ್ಯತೇ-ಹೊಂದುತ್ತಾನೆ ॥೧೨॥ ಹೇಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೇ, ಅಯಂಮುಹೂರ್ತಃ-ಈ ಮುಹೂರ್ತವು, ವಿಂದೋನಾಮ-ವಿಂದವೆಂದು ಪ್ರಸಿದ್ಧವಾದದ್ದು. ಸಚ-ಆ ರಾವಣನು ನಾಬುಧತ್-ಅರಿಯನು, ರಾಕ್ಷಸೇಶ್ವರಃ-ರಕ್ಕಸಾಧಿಪತಿಯಾದ, ರಾವಣಃ-ರಾವಣನು, ತ್ವತ್ಪ್ರಿಯಾಂ-ನಿನ್ನ ಹೆಂಡತಿಯಾದ ಜಾನಕೀಂ-ಸೀತಾದೇವಿಯನ್ನು, ಹೃತ್ವಾ-ಅಪಹರಿಸಿ, ಬಡಿಶಂ-ಮತ್ಸ್ಯಬಂಧನಜಾಲವನ್ನು, ಗೃಹ್ಯ-ಹಿಡಿದುಕೊಂಡು, ಝಷವತ್-ಮೀನಿನಂತೆ, ಕ್ಷಿಪ್ರಮೇವ-ಜಾಗ್ರತೆಯಾಗಿ, ವಿನಶ್ಯತಿ-ನಶಿಸಿಹೋಗುತ್ತಾನೆ ॥೧೩॥ ತ್ವಯಾ-ನಿನ್ನಿಂದ. ಜನಕಸ್ಯ-ಜನಕರಾಯನ, ಸುತಾಂಪ್ರತಿ-ಮಗಳಾದ ಸೀತಾದೇವಿಯಂಕುರಿತು. ವ್ಯಥಾ-ವ್ಯಸನವು, ನಕಾರ್ಯಾ-ಮಾಡತಕ್ಕದ್ದಲ್ಲ. ತಂರಾಕ್ಷಸಂ-ಆ ರಾಕ್ಷಸನನ್ನು, ರಣೇ-ಕಾಳಗದಲ್ಲಿ, ಕ್ಷಿಪ್ರಂ-ಜಾಗ್ರತೆಯಾಗಿ, ಹತ್ವಾ-ಕೊಂದು, ವೈದೇಹ್ಯಾ-ಸೀತೆಯೊಡನೆ, ರಂಸ್ಯಸೇ-ವಿಹರಿಸುತ್ತೀಯೆ ॥೧೪॥ ಅಸಮ್ಮೂಢಸ್ಯ-ಭ್ರಾಂತಿರಹಿತನಾದ, ರಾಮಂಪ್ರತಿ-ಶ್ರೀರಾಮನಂಕುರಿತು, ಅನುಭಾಷತಃ-ಅನುಸರಿಸಿ ಮಾತಾಡುತ್ತಿರುವ, ಮ್ರಿಯಮಾಣಸ್ಯ-ಮರಣವಂ ಹೊಂದುತ್ತಿರುವ, ಗೃಧ್ರಸ್ಯ-ಜಟಾಯುವಿನ ಆಸ್ಯಾತ್-ಬಾಯಿಯಿಂದ. ಸಾಮಿಷಂ-ಮಾಂಸದಿಂದೊಡಗೂಡಿದ ರುಧಿರಂ-ರಕ್ತವು, ಸುಸ್ರಾವ-ಸೋರುತ್ತಿತ್ತು ॥೧೫॥ ಪತಗೇಶ್ವರಃ-ಪಕ್ಷಿರಾಜನಾದ ಜಟಾಯುವು, ವಿಶ್ರವಸಃ-ವಿಶ್ರವಸ್ಸಿಗೆ, ಸಾಕ್ಷಾತ್ಪುತ್ರಃ-ಔರಸಪುತ್ರನಾದವನು, ವೈಶ್ರವಣಸ್ಯ-ಕುಬೇರನಿಗೆ, ಭ್ರಾತಾಚ-ತಮ್ಮನಾದವನು, ಇತ್ಯುಕ್ತ್ವಾ-ಈಪರಿಯಾಗಿ ಹೇಳಿ. ದುರ್ಲಭಾನ್-ಹೊಂದಲಶಕ್ಯವಾದ, ಪ್ರಾಣಾನ್-ಪ್ರಾಣಗಳನ್ನು. ಮುಮೋಚ-ಬಿಟ್ಟನು ॥೧೬॥ ಬ್ರೂಹಿಬ್ರೂಹೀತಿ-ಹೇಳು ಹೇಳೂವೆಂದು, ರಾಮಸ್ಯ-ಶ್ರೀರಾಮನು, ಬ್ರುವಾಣಸ್ಯಸತಃ-ಮಾತನಾಡುತ್ತಿರಲಿಕಾಗಿ, ಕೃತಾಂಜಲೇಃ-ಅಂಜಲಿಬದ್ಧನಾದ, ಗೃಧ್ರಸ್ಯ-ಜಟಾಯುವಿನ, ಪ್ರಾಣಾಃ-ಪ್ರಾಣಗಳು, ಶರೀರಂ-ದೇಹವನ್ನು, ತ್ಯಕ್ತ್ವಾ-ಬಿಟ್ಟು ವಿಹಾಯಸಂ-ಅಂತರಿಕ್ಷಮಾರ್ಗವಂಕುರಿತು, ಜಗ್ಮುಃ-ತೆರಳಿದವು ॥೧೭॥ ಸಃ-ಆ ಜಟಾಯುವು, ಶಿರಃ-ಮಂಡೆಯನ್ನು, ಭೂಮೌ-ನೆಲದಲ್ಲಿ, ನಿಕ್ಷಿಪ್ಯ-ಇರಿಸಿ, ಚರಣೌ-ಪಾದಗಳನ್ನು, ಪ್ರಸಾರ್ಯ-ಚಾಚಿಕೊಂಡು, ತದಾ-ತತ್ಕ್ಷಣದಲ್ಲಿ, ಸ್ವಂಶರೀರಂ-ಸ್ವಕೀಯವಾದ ಶರೀರವನ್ನು, ವಿಕ್ಷಿಪ್ಯ-ಕೊಡವಿ, ಧರಣೀತಲೇ-ನೆಲದಲ್ಲಿ, ಪಪಾತ-ಬಿದ್ದನು ॥೧೮॥ ತಾಮ್ರಾಕ್ಷಂ-ಕೆಂಪಾಗಿರುವ ನೇತ್ರಗಳುಳ್ಳ, ಗತಾಸುಂ-ಹೋದಂಥಾ

---

ಲ್ಪಟ್ಟ ಕೂದಲುಗಳುಳ್ಳವುಗಳಾಗಿಯೂ ನೋಡುತಲಿದ್ದೇನೆ ॥೧೧॥ ಮತ್ತೂ ಆ ರಾವಣನು ಯಾವ ಮುಹೂರ್ತದಲ್ಲಿ ಸೀತಾದೇವಿಯಂ ತೆಗದುಕೊಂಡು ಪೋದವನಾದನೋ, ಆ ಸಮಯದಲ್ಲಿ ಪೋದ ಸ್ವತ್ತನ್ನು ಸ್ವಾಮಿಯಾದವನು ಪೊಂದುವನೇ ಹೊರತು ಹೊಂದದಿರಲಾರನು ॥೧೨॥ ಎಲೈ ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ! ಈ ಮುಹೂರ್ತವು " ವಿಂದವೆಂದು " ಪ್ರಸಿದ್ಧವಾದದ್ದು ಆ ದುಷ್ಟನಾದ ರಾವಣನು ಇದನ್ನು ತಿಳಿಯಲಿಲ್ಲ, ಆದ್ದರಿಂದ ಆತನು ನಿನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ಅಪಹಾರಂಗೈದು, ಒಲೆಯಲ್ಲಿ ಶಿಲುಕಿದ ಮತ್ಸ್ಯವಿಶೇಷದಂತೆ ಕ್ಷಿಪ್ರವಾಗಿ ನಾಶವನ್ನೈದುವನು ॥೧೩॥ ಆ ಜನಕರಾಜನಂದಿನಿಯ ವಿಷಯವಾಗಿ ನೀನು ಚಿಂತಿಸಬೇಡ, ಆ ರಾಕ್ಷಸನನ್ನು ರಣರಂಗದಲ್ಲಿ ಕ್ಷಿಪ್ರವಾಗಿ ಸಂಹಾರಂ ಗೈಯ್ಯುವವನಾಗುವೆ, ಎಂದು ಜಟಾಯುವು ನುಡಿಯುವಾಗಲೇ ಆತನ ಬಾಯಿಯಿಂದ ರಕ್ತವು ಸುರಿದದ್ದಾಯಿತು ॥೧೫॥ ಅನಂತರದಲ್ಲಿ ಪಕ್ಷೀಂದ್ರನಾದ ಜಟಾಯುವು ಶ್ರೀರಾಮನಂ ಕುರಿತು, ಎಲೈ ರಾಮನೇ! ಕೇಳುವವನಾಗು, ಆ ರಾವಣನು ವಿಶ್ರವಸ್ಸಿನ ಪುತ್ರನು, ಕುಬೇರನ ತಮ್ಮನು ಎಂದು, ಇಷ್ಟುಮಾತ್ರ ಪೇಳಿದವನಾಗಿ ಪ್ರಾಣಂಗಳಂ ಬಿಟ್ಟನು ॥೧೬॥ ಬಳಿಕ ಶ್ರೀರಾಮನು ಪೇಳುಪೇಳೆಂದು ಕೇಳುತಿರುವಾಗಲೆ, ಆ ಜಟಾಯುವಿನ ಪ್ರಾಣಗಳು ಶರೀರವಂ ಬಿಟ್ಟು ಅಂತರಿಕ್ಷವನ್ನೈದಿದವು ॥೧೭॥ ಅನಂತರದಲ್ಲಿ ಆ ಜಟಾಯುವು ತನ್ನ ಮಂಡೆಯನ್ನು ನೆಲದಲ್ಲಿಟ್ಟುಕೊಂಡು ಕಾಲುಗಳಂ ನಾಚಿ, ತತ್ಕ್ಷಣದಲ್ಲಿಯೆ ದೇಹವಂಬಿಟ್ಟು ನೆಲದಲ್ಲಿ ಬಿದ್ದನು ॥೧೮॥ ಸಮನಂತರಕಾಲದಲ್ಲಿ ಆ ಶ್ರೀರಾಮನು ಕೆ

ಬಹುಭಿರ್ದುಃಖೈರ್ದೀನಸ್ಸೌಮಿತ್ರಿಮಬ್ರವೀತ ॥೧೯॥ ಬಹೂನಿರಕ್ಷಸಾಂವಾಸೇವರ್ಷಾಣಿವಸತಾಸುಖಂ । ಅನೇನದಂಡಕಾರಣ್ಯೇವಿಶೀರ್ಣಮಿಹಪಕ್ಷಿಣಾ ॥೨೦॥ ಅನೇಕವಾರ್ಷಿಕೋಯಸ್ತುಚಿರಕಾಲಸಮುತ್ಥಿತಃ॥ ಸೋಯಮದ್ಯಹತಶ್ಶೇತೇಕಾಲೋಹಿದುರತಿಕ್ರಮಃ ॥೨೧॥ ಪಶ್ಯಲಕ್ಷ್ಮಣಗೃಧ್ರೋಯಮುಪಕಾರೀಹತಶ್ಚಮೇ। ಸೀತಾಮಭ್ಯವಪನ್ನೋವೈರಾವಣೇನಬಲೀಯಸಾ ॥೨೨॥ಗೃಧ್ರರಾಜ್ಯಂಪರಿತ್ಯಜ್ಯಪಿತೃಪೈತಾಮಹಂಮಹತ್ । ಮಮಹೇತೋರಯಂಪ್ರಾಣಾನ್ಮುಮೋಚಪತಗೇಶ್ವರಃ ॥೨೩॥ ಸರ್ವತ್ರಖಲುದೃಶ್ಯಂತೇಸಾಧವೋಧರ್ಮಚಾರಿಣಃ॥ ಶೂರಾಶ್ಶರಣ್ಯಾಸ್ಸೌಮಿತ್ರೇತಿರ್ಯಗ್ಯೋನಿಗತೇಷ್ವಪಿ॥೨೪॥ ಸೀತಾಹರಣಜಂದುಃಖಂನಮೇಸೌಮ್ಯತಥಾಗತಂ।ಯಥಾವಿನಾಶೋಗೃಧ್ರಸ್ಯಮತ್ಕೃತೇಚಪರಂತಪ॥ ರಾಜಾದಶರಥಶ್ಶ್ರೀಮಾನ್ಯಥಾಮಮಮಹಾಯಶಾಃ । ಪೂಜನೀಯಶ್ಚಮಾನ್ಯಶ್ಚತಥಾಯಂಪತಗೇಶ್ವರಃ ॥೨೬॥

---

ಪ್ರಾಣಗಳುಳ್ಳ, ಅಚಲೋಪಮಂ-ಬೆಟ್ಟಕ್ಕೆ ಸಮಾನವಾದ, ತಂಗೃಧ್ರಂ-ಆ ಜಟಾಯುವಿನನ್ನು, ದೃಷ್ಟ್ವಾ-ಕಂಡು, ರಾಮಃ-ಶ್ರೀರಾಮನು, ಬಹುಭಿಃ-ಅನೇಕಬಗೆಗಳಾದ, ದುಃಖೈಃ-ವ್ಯಸನಗಳಿಂದ, ದೀನಃ-ಸಂಕಟಗೊಂಡವನಾಗಿ, ಸೌಮಿತ್ರಿಂ-ಲಕ್ಷ್ಮಣನಂಕುರಿತು, ಅಬ್ರವೀತ್-ನುಡಿದನು॥೧೯॥ ರಕ್ಷಸಾಂ-ರಕ್ಕಸರಿಗೆ, ವಾಸೇ-ವಾಸಸ್ಥಳವಾದ ದಂಡಕಾರಣ್ಯೇ-ದಂಡಕಾರಣ್ಯದಲ್ಲಿ, ಬಹೂನಿವರ್ಷಾಣಿ-ಅನೇಕ ಸಂವತ್ಸರಗಳು, ವಸತಾ-ಇರುತ್ತಿರುವ, ಅನೇನಪಕ್ಷಿಣಾ-ಈ ಜಟಾಯುವಿನಿಂದ, ಸುಖಂ-ಸುಖವು, ವಿಶೀರ್ಣಂ-ಅನುಭವಿಸಲ್ಪಟ್ಟಿತು ॥೨೦॥ ಅನೇಕವಾರ್ಷಿಕಃ-ಅನೇಕ ಸಂವತ್ಸರಗಳು ಬದುಕಿರುವ, ಚಿರಕಾಲಸಮುತ್ಥಿತಃ-ಬಹುಕಾಲದಿಂ ಅಭ್ಯುದಯವಂ ಹೊಂದಿರುವ, ಸೋಯಂ-ಆ ಈ ಜಟಾಯುವು, ಅದ್ಯ-ಈಗ, ಹತಃ-ಸಂಹಾರವಮಾಡಲ್ಪಟ್ಟವನಾಗಿ. ಶೇತೇ-ಮಲಗಿಧಾನೆ, ಕಾಲಃ-ಕಾಲವು, ದುರತಿಕ್ರಮೋಹಿ-ಅತಿಕ್ರಮಿಸಲಸಾಧ್ಯವಷ್ಟೆ ॥೨೧॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಮೇ-ನನಿಗೆ, ಉಪಕಾರೀ-ಉಪಕಾರವಂ ಮಾಡುತ್ತಿರುವ, ಅಯಂಗೃಧ್ರಃ-ಈ ಜಟಾಯುವು, ಸೀತಾಂ-ಸೀತಾದೇವಿಯನ್ನು ಅಭ್ಯವಪನ್ನಃ-ಬಿಡಿಸುವದಕ್ಕೆ ರಾವಣನ ಎದುರಾಗಿ ಹೋದವನಾಗಿ. ಬಲೀಯಸಾ-ಬಲಿಷ್ಠನಾದ, ರಾವಣೇನ-ರಾವಣಾಸುರನಿಂದ, ಹತಃ-ಸಂಹೃತನಾದನು ॥೨೨॥ ಪತಗೇಶ್ವರಃ-ಪಕ್ಷಿರಾಜನಾದ, ಅಯಂ-ಈ ಜಟಾಯುವು, ಪಿತೃಪೈತಾಮಹಂ-ಪಿತೃಪಿತಾಮಹರಿಂದ ಪ್ರಾಪ್ತವಾದ, ಮಹತ್-ದೊಡ್ಡದಾದ, ಗೃಧ್ರರಾಜ್ಯಂ-ಗೃಧ್ರಗಳ ರಾಜ್ಯವನ್ನು, ಪರಿತ್ಯಜ್ಯ-ಬಿಟ್ಟು. ಮಮಹೇತೋಃ-ನನ್ನ ನಿಮಿತ್ತವಾಗಿ. ಪ್ರಾಣಾನ್-ಪ್ರಾಣಗಳನ್ನು, ಮುಮೋಚಹ-ಬಿಟ್ಟನಷ್ಟೆ॥ ॥೨೩॥ ಹೇಸೌಮಿತ್ರೇ-ಎಲೈ ಲಕ್ಷ್ಮಣನೇ, ಸರ್ವತ್ರ-ಸರ್ವಜಾತಿಗಳಲ್ಲಿಯೂ, ಧರ್ಮಚಾರಿಣಃ-ಧರ್ಮವನ್ನೇ ನಡಿಸುತ್ತಿರುವ, ಸಾಧವಃ-ಸತ್ಪುರುಷರು. ತಿರ್ಯಗ್ಯೋನಿಗತೇಷ್ವಪಿ-ಪಶುಪಕ್ಷ್ಯಾದಿ ತಿರ್ಯಗ್ಯೋನಿಗಳನ್ನು ಹೊಂದಿದವರಲ್ಲಿಯೂಕೂಡ, ಶೂರಾಃ-ಶೂರರಾಗಿಯೂ, ಶರಣ್ಯಾಃ-ಸಂರಕ್ಷಕರಾಗಿಯೂ, ದೃಶ್ಯಂತೇ ಖಲು-ಕಾಣಲ್ಪಡುತ್ತಾರಷ್ಟೆ॥ಹೇಸೌಮ್ಯ-ಎಲೈ ಪುಣ್ಯವಂತನೇ,ಹೇಪರಂತಪ-ಎಲೈಶತ್ರುಸಂಹಾರಕನೇ.ಮತ್ಕೃತೇ-ನನ್ನನಿಮಿತ್ತವಾಗಿಗೃಧ್ರಸ್ಯ-ಜಟಾಯುವಿನ. ವಿನಾಶೇ-ವಿನಾಶವಾಗುತ್ತಿರಲಾಗಿ. ಯಥಾ-ಹ್ಯಾಗೆ, ದುಃಖಂ-ದುಃಖವು, ಆಗತಂ-ಪ್ರಾಪ್ತವಾಯಿತೋ, ಸೀತಾಹರಣಜಂ-ಸೀತಾದೇವಿಯ ಅಪಹಾರದಿಂ ಹುಟ್ಟಿದ,ದುಃಖಂ-ದುಃಖವು,ಮೇ-ನನಿಗೆ,ತಥಾ-ಹಾಗೆ,ನ-ಇಲ್ಲ॥(ಅಂದರೆಸೀತಾದೇವಿಯವಿಯೋಗದಿಂದುಂಟಾದದುಃಖಕ್ಕಿಂತಲೂಇದ ಅತಿಶಯವಾದದ್ದೆಂದುಭಾವವು) ॥ ಮಹಾಯಶಾಃ-ಬಹಳಕೀರ್ತಿವಂತನಾದ.ಶ್ರೀಮಾನ್-ಸಂಪದ್ಯುಕ್ತನಾದ, ದಶರಥೋರಾಜಾ-ದಶರಥರಾಯನು,ಮಮ-ನನಿಗೆ,ಯಥಾ-ಹ್ಯಾಗೆಯೋ. ತಥಾ-ಹಾಗೆಯೇ. ಅಯಂಪತಗೇಶ್ವರಶ್ಚ-ಈ ಪಕ್ಷಿಶ್ರೇಷ್ಠನಾದ ಜಟಾಯುವು. ಪೂಜನೀಯಃ-ಪೂಜಾರ್ಹನು, ಮಾನ್ಯಶ್ಚ-ಶ್ಲಾಘಿಸತಕ್ಕವನು॥೨೬॥ ॥ಹೇಸೌಮಿತ್ರೇ-ಎಲೈ ಲಕ್ಷ್ಮಣನೇ ಕಾಷ್ಠಾನಿ-ಕಟ್ಟಿಗೆಗಳನ್ನು. ಹರ-ತೆಗೆದುಕೊಂಡುಬಾ,ಪಾವಕಂ-ಯಜ್ಞೇಶ್ವರನನ್ನು ನಿರ್ಮಥಿಷ್ಯಾಮಿ-

---

ಗಣ್ಣುಗಳುಳ್ಳವನಾಗಿ ಪ್ರಾಣರಹಿತನಾದ ಮತ್ತೂ ಪರ್ವತೋಪಮನಾದ ಆ ಜಟಾಯುವಿನಂ ಕಂಡು, ಬಹು ಸಂತಾಪವನ್ನೈದಿದವನಾಗಿ ಲಕ್ಷ್ಮಣನಂ ಕುರಿತಿಂತೆಂದನು ॥೧೯॥ ಎಲೈ ತಮ್ಮನಾದ ಲಕ್ಷ್ಮಣನೇ! ನೋಡುವವನಾಗು, ರಕ್ಕಸರಿಗೆಲ್ಲವಾಸಸ್ಥಾನವಾದಈ ದಂಡಕಾರಣ್ಯದಲ್ಲಿ ಅನೇಕವರುಷಗಳಿಂದಈಜಟಾಯುವು ವಾಸಂಗೈಯುತಲಿದ್ದನು, ಇಂಥಾ ಈತನು ಈಗ ಸಂಹಾರವನ್ನೈದಿದವನಾಗಿ ನೆಲದಲ್ಲಿ ಮಲಗಿದನು, ಹಾಹಾ! ಕಾಲವು ಮೀರಲಶಕ್ಯವಾದದ್ದು ॥೨೧॥ ಎಲೈ ಲಕ್ಷ್ಮಣನೇ! ನನಿಗೆ ಮಹಾ ಉಪಕಾರಿಯಾದ ಈತನು ಸೀತಾದೇವಿಯನಿಮಿತ್ತವಾಗಿ ಬಲವಂತನಾದ ರಾವಣನಿಂದ ಸಂಹೃತನಾದನು, ನೋಡುವವನಾಗು ॥೨೨॥ ಪಕ್ಷೀಂದ್ರನಾದ ಈತನು ಪಿತೃಪಿತಾಮಹಾರ್ಜಿತವಾದ ತನ್ನ ರಾಜ್ಯವಂ ಬಿಟ್ಟು ನನಿಗೋಸುಗ ಪ್ರಾಣಂಗಳಂ ಬಿಟ್ಟನು, ಆದ್ದರಿಂದ ಸಮಸ್ತ ಜಾತಿಗಳಲ್ಲಿಯೂ ಧರ್ಮಾಚರಣವಂ ಗೈಯುವ ಸಾಧುಗಳು ಪಶುಪಕ್ಷ್ಯಾದಿಗಳ ರೂಪವನ್ನು ಹೊಂದಿದವರಾದರೂ ಶೂರರಾಗಿಯೂ ಸಂರಕ್ಷಕರಾಗಿಯೂ ಇರುವರು ॥೨೪॥ ಎಲೈ ಶತ್ರುಸಂಹಾರಕನೇ! ನನ್ನನಿಮಿತ್ತವಾಗಿ ಈ ಜಟಾಯುವಿಗೆ ನಾಶವುಂಟಾದ್ದರಿಂದ ನನಿಗೆ ಈಗ ಸಂಭವಿಸಿರುವ ದುಃಖಕಿಂತಲೂ, ಸೀತಾಪಹಾರದಿಂದುಂಟಾದ ದುಃಖವು ಅತಿಶಯವಾದದ್ದಲ್ಲ ॥೨೫॥ ನಮ್ಮ ತಂದೆಯಾದ ಮಹಾ ಕೀರ್ತಿವಂತನಾದ ದಶರಥ ಮಹಾರಾಜನು ನನಿಗೆ ಹ್ಯಾಗೆ ಪೂಜ್ಯನಾಗಿಯೂ ಶ್ಲಾಘ್ಯನಾಗಿಯೂ ಇದ್ದನೋ, ಅಂತು ಈ ಪಕ್ಷೀಂದ್ರನಾದ ಜಟಾಯುವೂ ಸಹಾ ಪೂಜ್ಯನಾಗಿಯೂ ಶ್ಲಾಘ್ಯನಾಗಿಯೂ ಇರುವನು ॥೨೬॥ ಆದ್ದರಿಂದ ಈ ಗೃಧ್ರರಾಜನನ್ನು

ಸೌಮಿತ್ರೇಹರಕಾಷ್ಠಾನಿನಿರ್ಮಥಿಷ್ಯಾಮಿಪಾವಕಂ । ಗೃಧ್ರರಾಜಂದಿಧಕ್ಷಾಮಿಮತ್ಕೃತೇನಿಧನಂಗತಂ ।೨೭॥ ನಾ
ಥಂಪತಗಲೋಕಸ್ಯಚಿತಾಮಾರೋಪ್ಯರಾಘವ । ಇಮಂಧಕ್ಷ್ಯಾಮಿಸೌಮಿತ್ರೇಹತಂರೌದ್ರೇಣರಕ್ಷಸಾ ।೨೮॥ ಯಾಗ
ತಿರ್ಯಜ್ಞಶೀಲಾನಾಮಾಹಿತಾಗ್ನೇಶ್ಚಯಾಗತಿಃ । ಅಪರಾವರ್ತಿನಾಂಯಾಚಯಾಚಭೂಮಿಪ್ರದಾಯಿನಾಂ । ಮಯಾ
ತ್ವಂಸಮನುಜ್ಞಾತೋಗಚ್ಛಲೋಕಾನನುತ್ತಮಾನ್ । ಗೃಧ್ರರಾಜಮಹಾಸತ್ವಸಂಸ್ಕೃತಶ್ಚಮಯಾವ್ರಜ ।೩೦॥
ಏವಮುಕ್ತ್ವಾಚಿತಾಂದೀಪ್ತಾಮಾರೋಪ್ಯಪತಗೇಶ್ವರಂ । ದದಾಹರಾಮೋಧರ್ಮಾತ್ಮಾಸ್ವಬಂಧುಮಿವದುಃಖಿತಃ॥೩೧।
ರಾಮೋಧಸಹಸೌಮಿತ್ರಿರ್ವನಂಗತ್ವಾಸವೀರ್ಯವಾನ್। ಸ್ಥೂಲಾನ್ಹತ್ವಾಮಹಾರೋಹೀನನುತಸ್ತಾರತಂದ್ವಿಜಂ।೩೨॥

---

ಮಾಳಿಸುವೆನು. ಮತ್ಕೃತೇ_ನನ್ನನಿಮಿತ್ತವಾಗಿ, ನಿಧನಂ-ಸಂಹಾರವನ್ನು, ಗತಂ_ಹೊಂದಿದಂಥಾ, ಗೃಧ್ರರಾಜಂ-ಜಟಾಯುವಿನನ್ನು, ದಿಧಕ್ಷಾಮಿ-ದಹಿಸುವದಕ್ಕೆ ಇಚ್ಛೈಸುತ್ತೇನೆ ॥೨೭॥ ॥ ಹೇರಾಘವ-ಎಲೈ ರಘುವಂಶದಲ್ಲಿ ಪುಟ್ಟಿದವನೇ. ಹೇಸೌಮಿತ್ರೇ-ಎಲೈಲಕ್ಷ್ಮಣನೇ, ಪತಗಲೋಕಸ್ಯ_ಪಕ್ಷಿಗಳ ತಂಡಗಳಿಗೆ, ನಾಥಂ-ಧೊರೆಯಾದ ಈ ಜಟಾಯುವಿನನ್ನು, ಚಿತಾಂ-ಚಿತಿಯನ್ನು, ಆರೋಪ್ಯ-ಯೇರಿಸಿ, ರೌದ್ರೇಣ-ಭಯಂಕರನಾದ, ರಕ್ಷಸಾ-ರಾಕ್ಷಸನಿಂದ. ಹತಂ-ಹೊಡೆಯಲ್ಪಟ್ಟ, ಇಮಂ-ಈ ಜಟಾಯುವಿನ್ನು, ಧಕ್ಷ್ಯಾಮಿ_ದಹಿಸುವೆನು ॥೨೮॥ ॥ ಹೇಗೃಧ್ರರಾಜ-ಎಲೈ ಪಕ್ಷಿರಾಜನಾದ ಜಟಾಯುವೇ, ಯಜ್ಞಶೀಲಾನಾಂ-ಯಜ್ಞಕರ್ಮದಲ್ಲೇ ಆಸಕ್ತರಾದವರಿಗೆ, (ಯದ್ವಾ-ಯಜ್ಞಕರ್ಮವೇ ಸದ್ಭಕ್ತಿಯಾಗಿ ಉಳ್ಳವರಿಗೆ, ಯಾ-ಯಾವದು. ಗತಿಃ_ಲೋಕವೋ, ಆಹಿತಾಗ್ನೇಶ್ಚ-ಆಹಿತ-ಆಯತನದಲ್ಲಿರಿಸಲ್ಪಟ್ಟ, ಅಗ್ನೇಃ-ಅಗ್ನಿಯುಳ್ಳ ಸೋಮಯಾಜಿಗೆ. ಯಾಗತಿಃ-ಯಾವಲೋಕವೋ. ಅಪರಾವರ್ತಿನಾಂ_ಪುನರಾವೃತ್ತಿ ರಹಿತನಾದಂಥಾ ಮುಕ್ತರಿಗೆ, ಯಾಚಗತಿಃ-ಯಾವಲೋಕವೋ, ಭೂಮಿಪ್ರದಾಯಿನಾಂ-ಭೂದಾನಮಾಡಿದಂಥಾವರಿಗೆ, ಯಾಚ-ಯಾವಲೋಕವೋ. ಹೇಮಹಾಸತ್ವ-ಎಲೈ ಮಹಾ ಸಾಮರ್ಥ್ಯವಂತನೇ, ತ್ವಂ-ನೀನು, ಮಯಾ-ನನ್ನಿಂದ, ಸಂಸ್ಕೃತಶ್ಚ-ಸಂಸ್ಕಾರಮಾಡಲ್ಪಟ್ಟವನಾಗಿ, ಮಯಾ-ನನ್ನಿಂದ, ಸಮನುಜ್ಞಾತಶ್ಚ-ಅಜ್ಞಾಪಿಸಲ್ಪಟ್ಟವನಾಗಿ, ಅನುತ್ತಮಾನ್-ಸರ್ವೋತ್ತಮಗಳಾದ, ಲೋಕಾನ್-ಲೋಕಗಳನ್ನುಕುರಿತು, ಗಚ್ಛ-ತೆರಳು, ತಾಃಗತೀಶ್ಚ-ಅಂಥಾಲೋಕಗಳನ್ನು. ವ್ರಜ-ಹೊಂದು. (ಯದ್ವಾ-ಯಜ್ಞಶೀಲಾನಾಂ-ಯಜ್ಞದಾಸತಪಸ್ಸಿನನ್ನು ಭಗವದರ್ಪಿತಮಾಡಬೇಕೆಂಬ ಸ್ವಭಾವವುಳ್ಳ, ಮುಕ್ತರಿಗೆ, ಯಾ-ಯಾವ, ಗತಿಃ-ಲೋಕವೋ, ಅಪರಾವರ್ತಿನಾಂ-ಪುನರಾವರ್ತಿ ರಹಿತರಾದವರಿಗೆ, ಯಾ_ಯಾವ ಗತಿಃ-ಲೋಕವೋ. ಭೂಮಿಪ್ರದಾಯಿನಾಂ-ಭೂದಾನಮಾಡಿದವರಿಗೆ, ಯಾ-ಯಾವ, ಗತಿಃ_ಲೋಕವೋ. ಮಯಾ-ನನ್ನಿಂದ, ಸಂಸ್ಕೃತಸ್ಸನ್-ಮಂತ್ರಪೂರ್ವಕವಾಗಿ ದಹಿಸಲ್ಪಟ್ಟವನಾಗಿ, ಅನುತ್ತಮಾನ್-ಸರ್ವೋತ್ತಮವಾದ. ತಾನ್‌ಲೋಕಾನ್-ಆಯಾಯ ವಿಷ್ಣುಲೋಕಗಳನ್ನುಕುರಿತು, ಗಚ್ಛ-ಹೋಗು, ) ಮಯಾ-ನನ್ನಿಂದ, ಸಮನುಜ್ಞಾತಸ್ಸನ್-ಅಜ್ಞಾಪಿಸಲ್ಪಟ್ಟವನಾಗಿ, ತಾನ್‌ಲೋಕಾನ್-ಅಂಥಾಲೋಕಗಳನ್ನು. ವ್ರಜ-ಹೊಂದು, ) ಅಂದರೆ-ಪಕ್ಷಿಗಳಿಗೆ ಕರ್ಮಾಧಿಕಾರವಿಲ್ಲದ್ದರಿಂ ಸಂಸ್ಕಾರರಹಿತನಾದರೂ ನನ್ನಿಂದ. ಅಜ್ಞಾಪಿಸಲ್ಪಟ್ಟವನಾಗಿ ಸರ್ವೋತ್ಕೃಷ್ಟವಾದ ವೈಕುಂಠಾದಿ ಲೋಕಗಳನ್ನು ಹೊಂದೆಂದು ತಾತ್ಪರ್ಯವು, (ಯದ್ವಾ-ಯಜ್ಞಶೀಲಾನಾಂ-ಯಜ್ಞಾಧಿಕಾರಿಗಳಿಗೆ ಪ್ರಾಪ್ಯವಾದ ಲೋಕಾನುಸಾರವಾಗಿ, ಅಪರಾವರ್ತಿನಾಂ-ಹಿಂದಕ್ಕೆ ತಿರಗದೇ, ಉತ್ತಮಲೋಕಾಪೇಕ್ಷಯಾ-ಉತ್ತಮಲೋಕಗಳನ್ನುಕುರಿತು ಹೋಗುತ್ತಿರುವವರಿಗೆ. ಯಾಗತಿಃ-ಯಾವ ಕ್ರಮ ಮುಕ್ತಿಗೆ ಸಾಧಕವಾದ ಲೋಕಗಳ ಪ್ರಾಪ್ತಿಯಾಗುತದೋ ನನ್ನಿಂದ ನೀನು ಸಂಸ್ಕೃತನಾಗಿ ಮತ್ತು ನನ್ನಿಂದ, ಅಜ್ಞಪ್ತನೂ ಆಗಿ ನನ್ನ ಪ್ರಸಾದದಿಂದ ಹೊಂದತಕ್ಕ ಅಂಥಾಂಥಾ ಲೋಕಗಳನ್ನು ನೀನು ಹೊಂದೆಂದು ತಾತ್ಪರ್ಯವು ) ॥೩೦॥ ॥ ಏವಂ-ಈಪರಿಯಾಗಿ. ಉಕ್ತ್ವಾ-ಹೇಳಿ. ಧರ್ಮಾತ್ಮಾ-ಧರ್ಮದಲ್ಲೇ ಮನಸ್ಸುಳ್ಳ, ರಾಮಃ-ಶ್ರೀರಾಮನು, ಸ್ವಬಂಧುಮಿವ_ತನ್ನಬಂಧುವಿನಂತೆ, ದುಃಖಿತಃ-ದುಃಖಗೊಂಡವನಾಗಿ, ಪತಗೇಶ್ವರಂ-ಜಟಾಯುವಿನನ್ನು. ದೀಪ್ತಾಂ-ಉರಿಯುತ್ತಿರುವ, ಚಿತಾಂ-ಚಿತಿಯನ್ನು, ಆರೋಪ್ಯ_ಯೇರಿಸಿ, ದದಾಹ-ಸಂಸ್ಕಾರಮಾಡಿದನು ॥೩೧॥ ॥ ಅಥ-ಬಳಿಕ, ವೀರ್ಯವಾನ್-ಪರಾಕ್ರಮಶಾಲಿಯಾದ, ರಾಮಃ-ಶ್ರೀರಾಮನು, ಸಹಸೌಮಿತ್ರಿಃ-ಲಕ್ಷ್ಮಣನಿಂದೊಡಗೂಡಿದವನಾಗಿ, ವನಂ-ಅರಣ್ಯವಂಕುರಿತು, ಗತ್ವಾ-ಪೋಗಿ, ಸ್ಥೂಲಾನ್-ಪೊಡ್ಡವಾದ, ಮಹಾರೋಹೀನ್-ಕೇಸರೀಮೃಗಗಳನ್ನು, ಹತ್ವಾ-ಕೊಂದು, ತಂದ್ವಿಜಂ-ಆ ಪಕ್ಷಿಯನ್ನುದ್ದೇಶಿಸಿ, ಅನುತಸ್ತಾರ_ದರ್ಭೆಗಳಹಾಸಿ ನಿರ್ವಾಣಮಾ.

---

ದಹಿಸಲಿಚ್ಛೈಸುತ್ತೇನೆ ನೀನು ಕಾಷ್ಠಂಗಳನ್ನು ತೆಗದುಕೊಂಡು ಬರುವವನಾಗು, ಅಗ್ನಿಮಂಥನವಂ ಗೈಯುವೆನು, ಮಹಾ ಭಯಂಕರನಾದ ರಾಕ್ಷಸನಿಂದ ಸಂಹೃತನಾದ ಈತನನ್ನು ಚಿತಿಯಲ್ಲಿರಿಸಿ ದಹಿಸುವೆನೆಂದು ಲಕ್ಷ್ಮಣನಿಗೆ ನಿರೂಪಿಸಿ, ಆ ಜಟಾಯುವಿನಂ ಕುರಿತಿಂತೆಂದನು ।೨೮। ಎಲೈ ಪಕ್ಷೀಂದ್ರನಾದ ಜಟಾಯುವೇ! ಯಜ್ಞಾದಿಕರ್ಮಗಳಲ್ಲಿ ಆಸಕ್ತಿಯುಳ್ಳವರಿಗೂ, ಆಹಿತಾಗ್ನಿಗಳಿಗೂ, ಮುಕ್ತರಿಗೂ, ಭೂದಾನವಂ ಗೈದವರಿಗೂ ಸಹಾ ಯಾವ ಗತಿಯುಂಟಾಗುವದೋ ನನ್ನಿಂದ ಸಂಸ್ಕಾರಂ ಗೈಯ್ಯಲ್ಪಟ್ಟ ನೀನು, ನನ್ನಿಂದಲೇ ಆಜ್ಞಾಪಿಸಲ್ಪಟ್ಟವನಾಗಿ ಅಂಥಾ ಸದ್ಗತಿಗಳಂ ಪೊಂದುವವನಾಗೆಂದು ನುಡಿದನು [ವಿಶೇಷಾಭಿಪ್ರಾಯವನ್ನು ಪ್ರತಿಪದಟೀಕಿನಲ್ಲಿ ನೋಡಬಹುದು] ।೩೦। ಧರ್ಮಸ್ವಭಾವವುಳ್ಳ ಶ್ರೀರಾಮನು ಈ ರೀತಿಯಲ್ಲಿ ನಿರೂಪಿಸಿ ತನ್ನ ಬಂಧುಗಳನ್ನು ಚಿತಿಯಲ್ಲಿಟ್ಟು ಸಂಸ್ಕಾರಮಾಡುವಂತೆ ಆ ಜಟಾಯುವಿನನ್ನು ಚಿತಿಯಮೇಲಿಟ್ಟು ಸಂಸ್ಕಾರವಂ ಗೈದನು। ಅನಂತರದಲ್ಲಿ ಧರ್ಮಾತ್ಮನಾದ ಶ್ರೀರಾಮನು ಲಕ್ಷ್ಮಣನಿಂ ದೊಡಗೂಡಿ ಆ ಕಾಡಿನಲ್ಲಿ ಅಲ್ಲಲ್ಲಿ ತಿರುಗಿ ದೊ

ರೋಹಿಮಾಂಸಾನಿಚೋತ್ಕೃತ್ಯಪೇಶೀಕೃತ್ಯಮಹಾಯಶಾಃ । ಶಕುನಾಯದದೌರಾಮೋರಮ್ಯೇಹರಿತಶಾದ್ವಲೇ ॥೩೩॥ ಯತ್ತತ್ಪ್ರೇತಸ್ಯಮರ್ತ್ಯಸ್ಯಕಥಯಂತಿದ್ವಿಜಾತಯಃ । ತತ್ಸ್ವರ್ಗಗಮನಂತಸ್ಯಪಿತ್ರ್ಯಂರಾಮೋಜಜಾಪಹ॥೩೪॥ ತತೋಗೋದಾವರೀಂಗತ್ವಾನದೀಂನರವರಾತ್ಮಜೌ । ಉದಕಂಚಕ್ರತುಸ್ತಸ್ಮೈಗೃಧ್ರರಾಜಾಯತಾವುಭೌ ॥೩೫॥ ಶಾಸ್ತ್ರದೃಷ್ಟೇನವಿಧಿನಾಜಲೇಗೃಧ್ರಾಯರಾಘವೌ ! ಸ್ನಾತ್ವಾತೌಗೃಧ್ರರಾಜಾಯಉದಕಂಚಕ್ರತುಸ್ತದಾ॥೩೬॥ ಸಗೃಧ್ರರಾಜಃಕೃತವಾನ್ಯಶಸ್ಕರಂಸುದುಷ್ಕರಂಕರ್ಮರಣೇನಿಪಾತಿತಃ ॥ ಮಹರ್ಷಿಕಲ್ಪೇನಚಸಂಸ್ಕೃತಸ್ತದಾಜಗಾಮಪುಣ್ಯಾಂಗತಿಮಾತ್ಮನಶ್ಶುಭಾಂ ।೩೭॥ ಕೃತೋದಕೌತಾವಪಿಪಕ್ಷಿಸತ್ತಮೇಸ್ಥಿರಾಂಚಬುದ್ಧಿಂಪ್ರಣಿಧಾಯಜಗ್ಮತುಃ । ಪ್ರವೇಶ್ಯಸೀತಾಧಿಗಮೇತತೋಮನೋವನಂಸುರೇಂದ್ರಾವಿವವಿಷ್ಣುವಾಸವೌ । *ಅಷ್ಟಷಷ್ಟಿತಮಸರ್ಗಃ*

---

ಡಿದನು ||೩೦|| || ಮಹಾಯಶಾಃ-ಬಹಳ ಕೀರ್ತಿವಂತನಾದ. ರಾಮಃ-ಶ್ರೀರಾಮನು. ರೋಹಿಮಾಂಸಾನಿ-ಕೇಸರೀಮೃಗ ಮಾಂಸಗಳನ್ನು. ಉತ್ಕೃತ್ಯ-ತುಂಡುತುಂಡಾಗಿ ಕತ್ತರಿಸಿ, ಪೇಶೀಕೃತ್ಯ-ಗುಂಡಾಗಿ ಪಿಂಡಮಾಡಿ, ರಮ್ಯೇ-ಮನಕ್ಕಿಂಪಾಗಿರುವ, ಹರಿತಶಾದ್ವಲೇ-ಹಚ್ಚಗಿರುವ ಹುಲ್ಲಿನಲ್ಲಿ. ಶಕುನಾಯ-ಪಕ್ಷಿಯಾದ ಜಟಾಯುವಿಗಾಗಿ, ದದೌ-ಕೊಟ್ಟನು ||೩೩|| || ದ್ವಿಜಾತಯಃ-ಬ್ರಾಹ್ಮಣರು, ಪ್ರೇತಸ್ಯ-ಮರಣವಂ ಪೊಂದಿದ, ಮರ್ತ್ಯಸ್ಯ-ಮನುಷ್ಯನಿಗೆ, ಯತ್ತತ್-ಯಾವಪ್ರಸಿದ್ಧವಾದ ಸೂಕ್ತವನ್ನು, ಕಥಯಂತಿ-ಹೇಳುತ್ತಾರೋ. ಸ್ವರ್ಗಗಮನಂ-ಸ್ವರ್ಗಪ್ರಾಪ್ತಿಸಾಧಕವಾದ, ಪಿತ್ರ್ಯಂ-ಪಿತೃಲೋಕಪ್ರಾಪ್ತಿಕರವಾದ, ತತ್-ಆ ಸೂಕ್ತವನ್ನು, ತಸ್ಯ-ಆ ಜಟಾಯುವಿನ ಉದ್ದೇಶವಾಗಿ, ಜಜಾಪಹ-ಪಠನಮಾಡಿದನಷ್ಟೆ ||೩೪|| || ತತಃ-ಅನಂತರದಲ್ಲಿ. ನರವರಾತ್ಮಜೌ-ರಾಜಕುವರರಾದ, ತಾಉಭೌ-ಆ ರಾಮಲಕ್ಷ್ಮಣರಿಬ್ಬರೂ. ಗೋದಾವರೀಂನದೀಂ-ಗೋದಾವರಿ ನದಿಯಂಕುರಿತು,ಗತ್ವಾ-ಹೋಗಿ, ತಸ್ಮೈ ಗೃಧ್ರರಾಜಾಯ-ಆ ಜಟಾಯುವಿಗಾಗಿ, ಉದಕಂ-ತಿಲೋದಕವನ್ನು. ಚಕ್ರುಃ-ಮಾಡಿದರು || ೩೫|| || ರಾಘವೌ-ರಘುಕುಲೋತ್ಪನ್ನರಾದ ತೌ-ಆ ರಾಮಲಕ್ಷ್ಮಣರು, ಜಲೇ-ಗೋದಾವರೀ ನದೀ ನೀರಿನಲ್ಲಿ, ಸ್ನಾತ್ವಾ-ಸ್ನಾನಮಾಡಿ, ಶಾಸ್ತ್ರ ದೃಷ್ಟೇನ-ಶಾಸ್ತ್ರೋಕ್ತವಾದ ವಿಧಿನಾ-ವಿಧಾನದಿಂದ ಗೃಧ್ರರಾಜಾಯ-ಗೃಧ್ರಾಧಿಪತಿಯಾದ ಜಟಾಯುವಿಗಾಗಿ, ಉದಕಂ-ಉದಕವನ್ನು. ಚಕ್ರತುಃ-ಮಾಡಿದರು ||೩೬|| || ಸಗೃಧ್ರರಾಜಃ-ಆ ಜಟಾಯುವು. ಯಶಸ್ಕರಂ-ಕೀರ್ತಿಕರವಾದ ಸುದುಷ್ಕರಂ-ಇತರರಿಂದ ಮಾಡಲಸಾಧ್ಯವಾದ, ಕರ್ಮ-ಯುದ್ಧವ್ಯಾಪಾರ ರೂಪವಾದ ಕರ್ಮವನ್ನು, ಕೃತವಾನ್-ಮಾಡಿದವನಾಗಿ, ರಣೇ-ಕಾಳಗದಲ್ಲಿ, ನಿಪಾತಿತಃ-ಕೆಳಕ್ಕೆ ಬೀಳಿಸಲ್ಪಟ್ಟವನಾಗಿ, ಮಹರ್ಷಿಕಲ್ಪೇನ-ದೊಡ್ಡಋಷಿಗೆ ಸಮಾನನಾದ ಶ್ರೀರಾಮನಿಂದ, ಸಂಸ್ಕೃತಶ್ಚ-ಸಂಸ್ಕಾರಮಾಡಲ್ಪಟ್ಟವನಾಗಿ, ತದಾ-ತತ್‌ಕ್ಷಣದಲ್ಲಿ, ಪುಣ್ಯಾಂ-ಪುಣ್ಯಕರವಾದ, ಶುಭಾಂ-ಶುಭಕರವಾದ, ಆತ್ಮನಃ-ತನ್ನ, ಗತಿಂ-ಲೋಕವನ್ನು ಕುರಿತು. ಜಗಾಮ-ತೆರಳಿದನು ||೩೭|| || ತಾವಪಿ-ಆ ರಾಮಲಕ್ಷ್ಮಣರು, ಪಕ್ಷಿಸತ್ತಮೇ-ಪಕ್ಷಿಶ್ರೇಷ್ಠನಾದ ಜಟಾಯುವಿನಲ್ಲಿ, ಸ್ಥಿರಾಂ-ಅಚಂಚಲವಾದ. ಬುದ್ಧಿಂ-ಮತಿಯನ್ನು, ಪ್ರಣಿಧಾಯ-ಇಟ್ಟು, ಕೃತೋದಕೌ-ಮಾಡಲ್ಪಟ್ಟ ಉದಕಗಳುಳ್ಳವರಾಗಿ, ತತಃ-ಬಳಿಕ, ಸೀತಾಧಿಗಮೇ-ಸೀತಾಪ್ರಾಪ್ತಿಯಲ್ಲಿ, ಮನಃ-ಮನವನ್ನು, ಪ್ರವೇಶ್ಯ-ಪ್ರವೇಶವಂಮಾಡಿಸಿ. ಸುರೇಂದ್ರೌ-ದೇವತಾಶ್ರೇಷ್ಠರಾದ, ವಿಷ್ಣುವಾಸವಾವಿವ-ವಿಷ್ಣು ದೇವೇಂದ್ರರಂತೆ, ವನಂ-ಅರಣ್ಯವಂಕುರಿತು, ಜಗ್ಮತುಃ-ತೆರಳಿದರು ||೩೮|| || —*** ಅಷ್ಟಷಷ್ಟಿತಮಸ್ಸರ್ಗಃ ***—

---

ಡ್ಡದೊಡ್ಡವಾದ ಕೇಸರೀಮೃಗಗಳನ್ನು ಸಂಹಾರಂಗೈದು, ಆ ಜಟಾಯುವಿನನ್ನುದ್ದೇಶಿಸಿ ಪಿಂಡನಿರ್ವಾಪಣವಂಗೈದನು, ।೩೨॥ ಮತ್ತೂ ದಶರಥರಾಜನಂದನನಾದ ಶ್ರೀರಾಮನು ಆ ಕೇಸರೀ ಮೃಗದ ಮಾಂಸವನ್ನು ತುಂಡುಂತುಂಡುಗಳಾಗಿ ಖಂಡ್ರಿಸಿ ಗುಂಡಾಗಿ ಪಿಂಡವಂ ಮಾಡಿ ಹುಲ್ಲುಬೆಳದಿರುವ ಸ್ಥಳದಲ್ಲಿ ಆ ಜಟಾಯುವಿಗಾಗಿ ಕೊಟ್ಟನು ।೩೩॥ ಲೋಕದಲ್ಲಿ ಬ್ರಾಹ್ಮಣರು ಮೃತಪಟ್ಟವನಿಗೆ ಯಾವಯಾವ ಸೂಕ್ತಗಳಂ ಪೇಳುವರೋ, ಆಯಾ ಸೂಕ್ತಗಳನ್ನು ಶ್ರೀರಾಮನು ಜಟಾಯುವಿಗೆ ಪರಲೋಕವುಂಟಾಗುವದಕ್ಕಾಗಿ ಜಪವಂಗೈದನು ।೩೪।। ಅನಂತರದಲ್ಲಿ ರಾಜಪುತ್ರರಾದ ಆ ರಾಮಲಕ್ಷ್ಮಣರೀರ್ವರು ಗೋದಾವರೀನದಿಗೆ ಸಾರಿ ಆ ನದಿಯಲ್ಲಿ ತಿಲೋದಕವಂ ಗೈಯ್ಯುವರದೆಂತೆನೆ,—।೩೫॥ ರಘುವಂಶೋತ್ಪನ್ನರಾದ ಆ ರಾಮಲಕ್ಷ್ಮಣರೀರ್ವರು ಗೋದಾವರೀನದಿಯ ಉದಕದಲ್ಲಿ ಸ್ನಾನಂಗೈದು, ಶಾಸ್ತ್ರೋಕ್ತವಾಗಿ ಆ ಜಟಾಯುವಿಗೆ ತರ್ಪಣಂಗೈದವರಾದರು ।೩೬।। ಅನಂತರದಲ್ಲಿ ಆ ಜಟಾಯುವು ತನಗೆ ಮಹಾಯಶಸ್ಸನ್ನುಂಟು ಮಾಡುವ ಮತ್ತೂ ಇತರರಿಂದ ಮಾಡಲಸಾಧ್ಯವಾದ ಯುದ್ಧವ್ಯಾಪಾರವಂ ಮಾಡಿ ರಣರಂಗದಲ್ಲಿ ಕೆಳಗೆಬೀಳಿಸಲ್ಪಟ್ಟವನಾಗಿ, ಮಹಾಮುನಿಗಳಿಗೆ ಸಮಾನನಾದ ಶ್ರೀರಾಮನಿಂದ ಸಂಸ್ಕಾರಂಗೆಯ್ಯಲ್ಪಟ್ಟವನಾಗಿ, ತತ್ಕ್ಷಣದಲ್ಲಿಪುಣ್ಯಕರವಾದ ಮತ್ತೂ ಶುಭಕರವಾದ ತನ್ನಗತಿಯನ್ನೈದಿದನು. ।೩೭।। ಆದಶರಥರಾಜ ನಂದನರಾದ ರಾಮಲಕ್ಷ್ಮಣರೀರ್ವರು ಪಕ್ಷೀಂದ್ರನಾದ ಆಜಟಾಯುವಿನಲ್ಲಿ ಸ್ಥಿರಬುದ್ಧಿಯಂಗೈದು ತಿಲತರ್ಪಣಂಗೈದಬಳಿಕ, ಸೀತಾದೇವಿಯವಿಷಯದಲ್ಲಿ ಮನವನ್ನಿಟ್ಟು, ದೇವತಾಶ್ರೇಷ್ಠರಾದ ವಿಷ್ಣುದೇವೇಂದ್ರರಂತೆ ಅವನವಲ್ಲಿ ತೆರಳಿದರು. ।೩೮।। —*೬೮ನೆಯಸರ್ಗಂಮುಗಿದುದು*—

ಕೃತ್ವೈವಮುದಕಂತಸ್ಮೈ ಪ್ರಸ್ಥಿತೌರಾಮಲಕ್ಷ್ಮಣೌ । ಅವೇಕ್ಷಂತೌವನೇಸೀತಾಂಪಶ್ಚಿಮಾಂಜಗ್ಮತುರ್ದಿಶಂ ॥೧॥ ತೌದಿಶಂದಕ್ಷಿಣಾಂಗತ್ವಾಶರಚಾಪಾಸಿಧಾರಿಣೌ। ಅವಿಪ್ರಹತಮೈಕ್ಷ್ವಾಕೌಪಂಥಾನಂಪ್ರತಿಪೇದತುಃ ॥೨॥ ಗುಲ್ಮೈರ್ವೃಕ್ಷೈಶ್ಚಬಹುಭಿರ್ಲತಾಭಿಶ್ಚಪ್ರವೇಷ್ಟಿತಂ । ಆವೃತಂಸರ್ವತೋದುರ್ಗಂಗಹನಂಘೋರದರ್ಶನಂ । ವ್ಯತಿಕ್ರಮ್ಯತುವೇಗೇನವ್ಯಾಳಸಿಂಹನಿಷೇವಿತಂ । ಸುಭೀಮಂತನ್ಮಹಾರಣ್ಯಂವ್ಯತಿಯಾತೌಮಹಾಬಲೌ ॥೪॥ ತತಃಪರಂ ಜನಸ್ಥಾನಾತ್ತ್ರಿಕ್ರೋಶಂಗಮ್ಯರಾಘವೌ । ಕ್ರೌಂಚಾರಣ್ಯಂವಿವಿಶತುರ್ಗಹನಂತೌಮಹೌಜಸೌ ॥೫॥ ನಾನಾಮೇಘಘನಪ್ರಖ್ಯಂಪ್ರಹೃಷ್ಟಮಿವಸರ್ವತಃ । ನಾನಾಪಕ್ಷಿಗಣೈರ್ಜುಷ್ಟಂನಾನಾವ್ಯಾಳಮೃಗೈರ್ಯುತಂ । ದಿದೃಕ್ಷಮಾಣೌವೈದೇಹೀಂತದ್ವನಂತೌವಿಚಿಕ್ಯತುಃ । ತತ್ರತತ್ರಾವತಿಷ್ಠಂತೌಸೀತಾಹರಣಕರ್ಶಿತೌ ॥೭॥ ತತಃಪೂರ್ವೇಣತೌಗ

---

ರಾಮಲಕ್ಷ್ಮಣೌ-ರಾಮಲಕ್ಷ್ಮಣರು, ತಸ್ಮೈ-ಆ ಜಟಾಯುವಿಗಾಗಿ, ಏವಂ-ಈ ಪರಿಯಾಗಿ, ಉದಕಂ-ತಿಲೋದಕವನ್ನು, ಕೃತ್ವಾ-ಮಾಡಿ, ಪ್ರಸ್ಥಿತೌ-ಹೊರಟುಬಂದವರಾಗಿ, ವನೇ-ಅರಣ್ಯದಲ್ಲಿ, ಸೀತಾಂ-ಸೀತಾದೇವಿಯನ್ನು, ಅವೇಕ್ಷಂತೌ-ನೋಡುತ್ತಿರುವವರಾಗಿ ಪಶ್ಚಿಮಾಂದಿಶಂ-ಪಶ್ಚಿಮದಿಕ್ಕಿನಂ ಕುರಿತು ಜಗ್ಮತುಃ-ತೆರಳಿದರು ॥೧॥ ಶರಚಾಪಾಸಿಧಾರಿಣೌ-ಬಾಣಗಳೂ ಬಿಲ್ಲುಗಳೂ ಖಡ್ಗಗಳೂ ಧರಿಸಿದಂಥಾವರಾಗಿರುವ, ಐಕ್ಷ್ವಾಕೌ-ಇಕ್ಷ್ವಾಕುಕುಲೋತ್ಪನ್ನರಾದ, ತೌ-ಆ ರಾಮಲಕ್ಷ್ಮಣರು, ದಕ್ಷಿಣಾಂದಿಶಂ-ದಕ್ಷಿಣದಿಕ್ಕಿನಲ್ಲಿ, ಗತ್ವಾ-ಹೋಗಿ, ಅವಿಪ್ರಹತಂ-ಅಕ್ಷುಣ್ಣವಾದ ಅಂದರೆ-ಯಾರಿಂದಲೂ, ತಿಳಿಯಲ್ಪಡದಿರುವ, ಪಂಥಾನಂ-ಮಾರ್ಗವನ್ನು, ಪ್ರತಿಪೇದತುಃ-ಹೊಂದಿದರು ॥೨॥ ಮಹಾಬಲೌ-ಮಹಾಪರಾಕ್ರಮಶಾಲಿಗಳಾದ ರಾಮಲಕ್ಷ್ಮಣರು, ಬಹುಭಿಃ-ಅನೇಕಬಗೆಗಳಾದ, ಗುಲ್ಮೈಃ-ಪೊದೆಗಳಿಂದಲೂ, ವೃಕ್ಷೈಃ-ಗಿಡಗಳಿಂದಲೂ, ಲತಾಭಿಶ್ಚ-ಬಳ್ಳಿಗಳಿಂದಲೂ, ಪ್ರವೇಷ್ಟಿತಂ-ಸುತ್ತಿಕೊಳ್ಳಲ್ಪಟ್ಟ ಸರ್ವತಃ-ಸರ್ವದಿಕ್ಕುಗಳಲ್ಲಿ, ಆವೃತಂ-ತುಂಬಿಕೊಂಡಿರುವ, ದುರ್ಗಂ-ಗಮಿಸಲಸಾಧ್ಯವಾದ, ಘೋರದರ್ಶನಂ-ಭಯಂಕರವಾದ ನೋಟವುಳ್ಳ, ವ್ಯಾಳಸಿಂಹನಿಷೇವಿತಂ-ಸರ್ಪಗಳಿಂದಲೂ ಸಿಂಗಗಳಿಂದಲೂ ಸೇವಿಸಲ್ಪಟ್ಟ, ಗಹನಂ-ಅರಣ್ಯವನ್ನು, ವ್ಯತಿಕ್ರಮ್ಯ-ದಾಟಿ, ಸುಭೀಮಂ-ಮಹಾಭಯಂಕರವಾದ, ತನ್ಮಹಾರಣ್ಯಂ-ಆ ದೊಡ್ಡ ಅರಣ್ಯವನ್ನು, ವ್ಯತಿಯಾತೌ-ದಾಟಿದರು ॥೪॥ ತತಃಪರಂ-ಆ ಬಳಿಕ, ಮಹೌಜಸೌ-ಮಹಾಸಾಮರ್ಥ್ಯವಂತರಾದ, ರಾಘವೌ-ಆ ರಾಮಲಕ್ಷ್ಮಣರಿಬ್ಬರು, ಜನಸ್ಥಾನಾತ್-ಪಂಚವಟೀ ತೀರದದೆಶೆಯಿಂದ ತ್ರಿಕ್ರೋಶಂ-ಮೂರು ಹರಿದಾರಿಯದೂರನ್ನು, ಗತ್ವಾ-ಹೋಗಿ, ಕ್ರೌಂಚಾರಣ್ಯಂ-ಕ್ರೌಂಚಾರಣ್ಯವೆಂದು ಪ್ರಸಿದ್ಧವಾದ ಗಹನಂ-ಅರಣ್ಯವನ್ನು, ವಿವಿಶತುಃ-ಪ್ರವೇಶಮಾಡಿದರು ॥೫॥ ತೌ-ಆ ರಾಮಲಕ್ಷ್ಮಣರು, ನಾನಾಮೇಘಘನಪ್ರಖ್ಯಂ-ಅನೇಕ ಬಣ್ಣಗಳುಳ್ಳ ಮೇಘಗಳಂತೆ ಹೊಳೆಯುತ್ತಿರುವ, ಸರ್ವತಃ-ಸರ್ವಪ್ರದೇಶದಲ್ಲಿಯೂ, ಪ್ರಹೃಷ್ಟಮಿವ-ಸಂತೋಷಗೊಂಡಂತಿರುವ, ನಾನಾಪಕ್ಷಿಗಣೈಃ-ಅನೇಕಬಗೆಗಳಾದ ಹಕ್ಕಿಗಳ ತಂಡಗಳಿಂದ, ಜುಷ್ಟಂ-ವ್ಯಾಪ್ತವಾದ, ನಾನಾವ್ಯಾಳಮೃಗೈಃ-ಅನೇಕಬಗೆಗಳಾದ ಸರ್ಪಗಳಿಂದಲೂ ಮೃಗಗಳಿಂದಲೂ, ಯುತಂ-ಕೂಡಿಕೊಂಡಿರುವ, ತದ್ವನಂ-ಆವನವನ್ನು, ದಿದೃಕ್ಷಮಾಣೌ-ನೋಡಲಿಚ್ಛೆಯುಳ್ಳವರಾಗಿ, ವೈದೇಹೀಂ-ಸೀತಾದೇವಿಯನ್ನು, ವಿಚಿಕ್ಯತುಃ-ಹುಡುಕಿದರು ॥೬॥ ತತ್ರತತ್ರ-ಆಯಾಯಾಸ್ಥಳದಲ್ಲಿ, ಅವತಿಷ್ಠಂತೌ-ಇರುತ್ತಿರುವವರಾಗಿ, ಸೀತಾಹರಣಕರ್ಶಿತೌ-ಸೀತಾಪಹಾರಜನ್ಯವಾದ ದುಃಖದಿಂ ಕೃಶೀಭೂತರಾಗಿರು ॥೭॥ ತತಃ-ಬಳಿಕ, ತೌಭ್ರಾತರೌ-ಆ ಅಣ್ಣ ತಮ್ಮಂದಿರಿಬ್ಬರು ತದಾ-ಆ ಕಾಲದಲ್ಲಿ, ತ್ರಿಕ್ರೋಶಂ-ಮೂರುಹರಿದಾರಿ, ಗತ್ವಾ-ಹೋಗಿ, ಕ್ರೌಂಚಾರಣ್ಯಂ-ಕ್ರೌಂಚಾರಣ್ಯವನ್ನು, ಅತಿಕ್ರಮ್ಯ-ದಾಟಿ, ಅಂತರಾ-ಮಾ

---

ದಶರಥರಾಜಪುತ್ರರಾದ ಆರಾಮಲಕ್ಷ್ಮಣರೀರ್ವರು ಆಜಟಾಯುವಿಗೆ ಈರೀತಿಯಲ್ಲಿ ತಿಲೋದಕವಂಗೈದು ಹೊರಟುಬಂದವರಾಗಿ, ಅರಣ್ಯದಲ್ಲಿ ಸೀತಾದೇವಿಯಂ ಹುಡುಕುತ್ತಾ ಪಡವಲುಗಡೆಯಲ್ಲಿ ನಡೆದರು. ।೧। ಅನಂತರದಲ್ಲಿ ಇಕ್ಷ್ವಾಕುವಂಶೋತ್ಪನ್ನರಾದ ಆರಾಮಲಕ್ಷ್ಮಣರೀರ್ವರು, ಕೋದಂಡಪಾಣಿಗಳಾಗಿ ದಕ್ಷಿಣದಿಕ್ಕಿನಲ್ಲಿ ಪ್ರಯಾಣಂಗೈದು ಯಾರಿಗೂ ತಿಳಿಯದಿರುವ ಒಂದಾನೊಂದುಮಾರ್ಗವನ್ನೈದಿದರು. ।೨। ಮತ್ತೂ ಮಹಾ ಬಲಶಾಲಿಗಳಾದ ರಾಮಲಕ್ಷ್ಮಣರು ಅನೇಕಬಗೆಗಳಾದ ಪೊದೆಗಳಿಂದಲೂ, ವೃಕ್ಷಂಗಳಿಂದಲೂ, ಲತೆಗಳಿಂದಲೂ ಸಹಾ ಸರ್ವತ್ರವ್ಯಾಪ್ತವಾಗಿರುವ ಮಹಾ ಭಯಂಕರವಾದ ಒಂದಾನೊಂದು ಅರಣ್ಯವಂ ದಾಂಟಿ ದಬಳಿಕ ಜನಸ್ಥಾನದಿಂದ ಮೂರುಹರದಾರಿಯ ದೂರವು ಸಾರಿ, ಕ್ರೌಂಚಾರಣ್ಯವೆಂದು ಪ್ರಸಿದ್ಧವಾದ ಮಹದರಣ್ಯವನ್ನು ಪ್ರವೇಶಂಗೈದರದೆಂತೆನೆ;—।೫। ಆ ರಾಮಲಕ್ಷ್ಮಣರು ನಾನಾ ವಿಧವಾದ ಬಣ್ಣಗಳುಳ್ಳ ಮೇಘಂಗಳಂತೆ ಹೊಳೆಯುತಲಿರುವದಾಗಿಯೂ, ಸರ್ವತ್ರಸಂತೋಷಗೊಂಡಿರುವದೋ ಏನೋ ಎಂಬಂತಿರುವದಾಗಿಯೂ, ಅನೇಕವಿಧವಾದ ಪಕ್ಷಿಗಳಿಂದ ವ್ಯಾಪ್ತವಾಗಿಯೂ, ಇರುವ ವನವನ್ನು ನೋಡಲಿಚ್ಛೆಯುಳ್ಳವರಾಗಿ ಸೀತಾದೇವಿಯನ್ನು ಈ ರೀತಿಯಲ್ಲಿ ಹುಡುಕಿದರು, ಹ್ಯಾಗಂದರೆ,—ದಶರಥರಾಜನಂದನರಾದ ಆ ರಾಮಲಕ್ಷ್ಮಣರು ಆಯಾಸ್ಥಲಗಳಲ್ಲಿ ನಿಂತುಕೊಳ್ಳುತ್ತಾ ಸೀತಾಹರಣದಿಂ ಕೃಶೀಭಾವವನ್ನೈದಿದರು ।೭। ಅನಂತರದಲ್ಲಿ ಆ ಸಹೋದರರಾದ ರಾಮಲಕ್ಷ್ಮಣರು, ಮೂರುಹರದಾರಿಯ ದೂರವೂ ಸಾರಿ, ಕ್ರೌಂಚಾರಣ್ಯವನ್ನತಿಕ್ರಮಿಸಿ, ಮಾರ್ಗಮಧ್ಯದಲ್ಲಿ

ತ್ವಾತ್ರಿಕ್ರೋಶಂಭ್ರಾತರೌತದಾ । ಕ್ರೌಂಚಾರಣ್ಯಮತಿಕ್ರಮ್ಯಮತಂಗಾಶ್ರಮಮಂತರಾ । ದೃಷ್ಟ್ವಾತುತದ್ವನಂ ಘೋರಂಬಹುಭೀಮಮೃಗದ್ವಿಜಂ । ನಾನಾಸತ್ವಸಮಾಕೀರ್ಣಂಸರ್ವಂಗಹನಪಾದಪಂ । ದದೃಶಾತೇತುತೌತತ್ರದರೀಂದಶರಥಾತ್ಮಜೌ । ಪಾತಾಳಸಮಗಂಭೀರಾಂತಮಸಾನಿತ್ಯಸಂವೃತಾಂ ॥೧೦॥ ಆಸಾದ್ಯತೌನರವ್ಯಾಘ್ರೌದರ್ಯಾಸ್ತಸ್ಯಾವಿದೂರತಃ । ದದೃಶಾತೇಮಹಾರೂಪಾಂರಾಕ್ಷಸೀಂವಿಕೃತಾನನಾಂ ।೧೧॥ ಭಯದಾಮಲ್ಪಸತ್ವಾನಾಂಬೀಭತ್ಸಾಂರೌದ್ರದರ್ಶನಾಂ । ಲಂಬೋದರೀಂತೀಕ್ಷ್ಣದಂಷ್ಟ್ರಾಂಕರಾಳೀಂಪರುಷತ್ವಚಂ । ಭಕ್ಷಯಂತೀಂಮೃಗಾನ್ ಭೀಮಾನ್ವಿಕಟಾಂಮುಕ್ತಮೂರ್ಧಜಾಂ । ಪ್ರೈಕ್ಷೇತಾಂತೌತತಸ್ತತ್ರಭ್ರಾತರೌರಾಮಲಕ್ಷ್ಮಣೌ ॥೧೩॥ ಸಾಸಮಾಸಾದ್ಯತೌವೀರೌವ್ರಜಂತಂಭ್ರಾತುರಗ್ರತಃ । ಏಹಿರಂಸ್ಯಾವಹೇತ್ಯುಕ್ತ್ವಾಸಮಾಲಂಬತಲಕ್ಷ್ಮಣಂ ।೧೪। ಉವಾಚಚೈನಂವಚನಂಸೌಮಿತ್ರಿಮುಪಗೂಹ್ಯಸಾ ।೧೫॥ ಅಹಂತ್ವಯೋಮುಖೀನಾಮಲಬ್ಧಾತೇತ್ವಮಸಿಪ್ರಿಯಃ

---

ರ್ಗಮಧ್ಯದಲ್ಲಿ, ಮತಂಗಾಶ್ರಮಂ-ಮತಂಗಋಷಿಯ ಪರ್ಣಶಾಲೆಯನ್ನು, ಪೂರ್ವೇಣ-ಪೂರ್ವಮಾರ್ಗದಲ್ಲಿ, ಗತ್ವಾ-ಹೋಗಿ, ಘೋರಂ-ಭಯಂಕರವಾದ. ಬಹುಭೀಮಮೃಗದ್ವಿಜಂ-ಅನೇಕ ಭಯಂಕರಗಳಾದ ಮೃಗಗಳೂ ಪಕ್ಷಿಗಳೂ ವುಳ್ಳ, ನಾನಾಸತ್ವಸಮಾಕೀರ್ಣಂ-ಅನೇಕ ಜಂತುಗಳಿಂದ ಕೂಡಿಕೊಂಡಿರುವ, ಸರ್ವಂ-ಸಮಸ್ತವಾದ, ಗಹನಪಾದಪಂ-ಪ್ರವೇಶಿಸಲಸಾಧ್ಯವಾದ ಗಿಡಗಳುಳ್ಳ, ತದ್ವನಂ-ಆ ವನವನ್ನು. ದೃಷ್ಟ್ವಾ-ಕಂಡು, ತತ್ರ-ಆ ವನದಲ್ಲಿ. ದಶರಥಾತ್ಮಜೌ-ದಶರಥರಾಯನ ಕುವರರಾದ. ತೌ-ಆ ರಾಮಲಕ್ಷ್ಮಣರು ಪಾತಾಳಸಮಗಂಭೀರಾಂ-ಪಾತಾಳಕ್ಕೆ ಸಮವಾಗಿ ಗಂಭೀರವಾಗುಳ್ಳ, ತಮಸಾ-ಕತ್ತಲಿದೆಂದ. ನಿತ್ಯಸಂವೃತಾಂ-ನಿರಂತರವೂ ಸುತ್ತಿಕೊಳ್ಳಲ್ಪಟ್ಟ. ದರೀಂ-ಗುಹೆಯನ್ನು, ದದೃಶಾತೆ-ಕಂಡರು ॥೧೦॥ ನರವ್ಯಾಘ್ರೌ-ಪುರುಷಶ್ರೇಷ್ಠರಾದ, ತೌ-ಆ ರಾಮಲಕ್ಷ್ಮಣರು. ಆಸಾದ್ಯ-ಹೊಂದಿ. ತಸ್ಯಾಃದರ್ಯಾಃ-ಆ ಗುಹೆಗೆ, ಅವಿದೂರತಃ-ಸಮೀಪದಲ್ಲಿ, ಮಹಾರೂಪಾಂ-ಮಹಾಭಯಂಕರವಾದ ಆಕಾರವುಳ್ಳ, ವಿಕೃತಾನನಾಂ-ವಿಕಾರವಾಗಿರುವ ಮೋರೆಯುಳ್ಳ, ಅಲ್ಪಸತ್ವಾನಾಂ-ಸ್ವಲ್ಪ ಬಲವಂತರಿಗೆ, ಭಯದಾಂ-ಭಯವಂ ಕೊಡುತ್ತಿರುವ, ಬೀಭತ್ಸಾಂ-ಅಸಹ್ಯವಾದ. ರೌದ್ರದರ್ಶನಾಂ-ಭಯಂಕರವಾದ ನೋಟವುಳ್ಳ, ಲಂಬೋದರೀಂ-ಜೋಲಾಡುತ್ತಿರುವ ಹೊಟ್ಟೆಯುಳ್ಳ, ತೀಕ್ಷ್ಣದಂಷ್ಟ್ರಾಂ-ಹಡವಾಗುಳ್ಳ ಕೋರೆಹಲ್ಲುಗಳುಳ್ಳ, ಕರಾಳೀಂ-ಅತ್ಯುನ್ನತ ಶರೀರವುಳ್ಳ, ಪರುಷತ್ವಚಂ-ಕಠಿನವಾದ ಚರ್ಮವುಳ್ಳ, ಭೀಮಾನ್-ಭಯಂಕರಗಳಾದ, ಮೃಗಾನ್-ಮೃಗಗಳನ್ನು. ಭಕ್ಷಯಂತೀಂ-ತಿನ್ನುತ್ತಿರುವ, ವಿಕಟಾಂ-ವಕ್ರಳಾದ, ಮುಕ್ತಮೂರ್ಧಜಾಂ-ಬಿಡಲ್ಪಟ್ಟ ಕೂದಲುಗಳುಳ್ಳ, ರಾಕ್ಷಸೀಂ-ರಕ್ಕಸಸ್ತ್ರೀಯನ್ನು. ದದೃಶಾತೆ-ಕಂಡರು ॥ ತತಃ-ಬಳಿಕ, ತತ್ರ-ಆ ಅರಣ್ಯದಲ್ಲಿ. ಭ್ರಾತರೌ-ಅಣ್ಣ ತಮ್ಮಂದಿರಾದ, ತೌರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರು ಪ್ರೈಕ್ಷೇತಾಂ-ಚನ್ನಾಗಿ ಕಂಡರು ॥೧೩॥ ಸಾ-ಆ ರಕ್ಕಸಿಯು. ವೀರೌ-ಶೂರರಾದ, ತೌ-ಆ ರಾಮಲಕ್ಷ್ಮಣರನ್ನು, ಸಮಾಸಾದ್ಯ ಹೊಂದಿ. ಭ್ರಾತುಃ-ಅಣ್ಣನ. ಅಗ್ರತಃ-ಮುಂದುಗಡೆ, ವ್ರಜಂತಂ-ಹೋಗುತ್ತಿರುವ, ಲಕ್ಷ್ಮಣಂ-ಲಕ್ಷ್ಮಣನಂ ಕುರಿತು, ಏಹಿ-ಬಾರೈಯ್ಯ ಇಹ-ಇಲ್ಲಿ. ರಂಸ್ಯಾವಹೆ-ಕ್ರೀಡಿಸೋಣ, ಇತಿ-ಇಂತೆಂದು, ಉಕ್ತ್ವಾ-ಹೇಳಿ, ಸಮಾಲಂಬತ-ಹಿಡಿದುಕೊಂಡಳು ॥೧೪॥ ಸಾ-ಆ ರಕ್ಕಸಿಯು, ಸೌಮಿತ್ರಿಂ-ಸುಮಿತ್ರಾದೇವಿಯ ಮಗನಾದ. ಏನಂ-ಈ ಲಕ್ಷ್ಮಣನಂ ಕುರಿತು, ಉಪಗೂಹ್ಯ-ಅಪ್ಪಿಕೊಂಡು, ವಚನಂ-ಮಾತನ್ನು, ಉವಾಚ-ಹೇಳಿದಳು ॥೧೫॥ ॥ ಅಹಂತು-ನಾನಾದರೆ, ಅಯೋಮುಖೀನಾಮ-ಅಯೋಮುಖೀಎಂದು ಪ್ರಸಿದ್ಧಳು, ತೇ-

---

ಮಾತಂಗಾಶ್ರಮಕ್ಕೆ ಪೂರ್ವಭಾಗದಲ್ಲಿ ಪಯಣವಂ ಗೈದು, ಕಡುಭಯಂಕರವಾಗಿಯೂ ಘೋರವಾದ ಮೃಗಗಳಿಂದ ಯುಕ್ತವಾಗಿಯೂ, ಅನೇಕವಿಧವಾದಜಂತುಗಳಿಂದ ವ್ಯಾಪ್ತವಾದದ್ದಾಗಿಯೂ, ಹೊಕ್ಕಲಶಕ್ಯವಾದ ವೃಕ್ಷಂಗಳುಳ್ಳದ್ದಾಗಿಯೂ, ಇರುವ ಆ ವನವಂ ಕಂಡು, ಅಲ್ಲಿ ಪಾತಾಳದಂತೆ ಬಹಳ ಆಳವಾಗಿಯೂ, ಕಾರ್ಗತ್ತಲೆಯುಳ್ಳದ್ದಾಗಿಯೂ, ಸಂತತವು ಸುತ್ತಿಕೊಳ್ಳಲ್ಪಡುವದಾಗಿಯೂ ಇರುವ ಒಂದಾನೊಂದುಗುಹೆಯಂ ಕಂಡರು।೧೦। ಪುರುಷೋತ್ತಮರಾದ ಆ ರಾಮಲಕ್ಷ್ಮಣರು ಆ ಗುಹೆಯ ಸಮೀಪದಲ್ಲಿ ಬಹು ಭಯಂಕರವಾದ ರೂಪವುಳ್ಳವಳಾಗಿಯೂ, ಸ್ವಲ್ಪವಾದ ಬಲವುಳ್ಳವಳಾಗಿಯೂ, ಲಂಬಾಯಮಾನವಾದ ಉದರವುಳ್ಳವಳಾಗಿಯೂ, ಬಹಳ ಹದವಾದ ಕೋರೆದಾಡೆಗಳುಳ್ಳವಳಾಗಿಯೂ, ಮಹಾ ಉನ್ನತವಾದ ಶರೀರವುಳ್ಳವಳಾಗಿಯೂ, ಅತಿಕಠಿಣವಾದ ಚರ್ಮವುಳ್ಳವಳಾಗಿಯೂ, ಘೋರವಾದ ಮೃಗಗಳನ್ನೂ ಸಹಾ ಭಕ್ಷಿಸುತಲಿರುವವಳಾಗಿಯೂ ಇರುವ ಓರ್ವ ರಾಕ್ಷಸಿಯಂ ಕಂಡರು ।೧೩॥ ಅನಂತರದಲ್ಲಿ ಆ ರಾಕ್ಷಸಿಯು ಶೂರರಾದ ಆ ರಾಮಲಕ್ಷ್ಮಣರಂ ಕಂಡು, ಮುಂದುಕಡೆಯಲ್ಲಿ ಸಾರುತಲಿರುವ ಲಕ್ಷ್ಮಣನಂ ಕುರಿತು, ಎಲೈ ಪುರುಷನೇ! ಬರುವವನಾಗು ವಿಹಾರಂ ಗೈಯ್ಯುವಣ ಎಂದು ನುಡಿದು ಆತನಂ ಪಿಡಿದಳು ॥೧೪॥ ಈ ರೀತಿಯಾಗಿ ಆ ರಾಕ್ಷಸಿಯು ಲಕ್ಷ್ಮಣನ್ನಪ್ಪಿಕೊಂಡು. ಆಗ ನುಡಿವಳೆಂತೆನೆ,—ನಾನು ಅಯೋಮುಖಿಯೆಂದು ಪ್ರಖ್ಯಾತಳಾದವಳು, ನಿನ್ನಂ ಪೊಂದಿಧೇನೆ, ನೀನೆನಗೆ ಪತಿಯಾಗುವವನಾಗು, ನೀನೆನ್ನೊಡನೆ ಗಿರಿಶಿಖರಗಳಲ್ಲಿಯೂ ನದಿಗಳ ಮೊರಳುದಿನ್ನೆಗಳಲ್ಲಿಯೂ, ಸಹಾ ನಿನ್ನದೇಹಾವಧಿವಿಹರಿಸು

ನಾಥಪರ್ವತಕೂಟೇಷು ನದೀನಾಂ ಪುಳಿನೇಷು ಚ । ಆಯುಶ್ಶೇಷಮಿಮಂ ವೀರ ತ್ವಂ ಮಯಾ ಸಹ ರಂಸ್ಯಸೇ ॥೧೬॥ ಏವಮುಕ್ತಸ್ತು ಕುಪಿತಃ ಖಡ್ಗಮುದ್ಧೃತ್ಯ ಲಕ್ಷ್ಮಣಃ । ಕರ್ಣನಾಸೌ ಸ್ತನೌ ತಸ್ಯಾ ನಿಚಕರ್ತಾರಿಸೂದನಃ ॥೧೭॥ ಕರ್ಣನಾಸೇ ನಿಕೃತ್ತೇ ತು ವಿಸ್ವರಂ ಸಾ ವಿನದ್ಯ ಚ । ಯಥಾಗತಂ ಪ್ರದುದ್ರಾವ ರಾಕ್ಷಸೀ ಭೀಮದರ್ಶನಾ ॥೧೮॥ ತಸ್ಯಾಂ ಗತಾಯಾಂ ಗಹನಂ ವಿಶಂತೌ ವನಮೋಜಸಾ । ಆಸೇದತುರಮಿತ್ರಘ್ನೌ ಭ್ರಾತರೌ ರಾಮಲಕ್ಷ್ಮಣೌ ॥೧೯॥ ಲಕ್ಷ್ಮಣಸ್ತು ಮಹಾತೇಜಾಸ್ಸತ್ತ್ವವಾನ್ ಶೀಲವಾನ್ ಶುಚಿಃ । ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಭ್ರಾತರಂ ದೀಪ್ತತೇಜಸಂ ॥ ಸ್ಪಂದತೇ ಮೇ ದೃಢಂ ಬಾಹುರುದ್ವಿಗ್ನಮಿವ ಮೇ ಮನಃ ॥ ಪ್ರಾಯಶಶ್ಚಾಪ್ಯನಿಷ್ಟಾನಿ ನಿಮಿತ್ತಾನ್ಯುಪಲಕ್ಷಯೇ । ತಸ್ಮಾತ್ಸಜ್ಜೀಭವಾರ್ಯ ತ್ವಂ ಕುರುಷ್ವ ವಚನಂ ಹಿತಂ । ಮಮೈವ ಹಿ ನಿಮಿತ್ತಾನಿ ಸದ್ಯಶ್ಶಂಸಂತಿ ಸಂಭ್ರಮಂ ॥೨೧॥ ಏಷ ವಂಜುಲಕೋ ನಾಮ ಪಕ್ಷೀ ಪರಮದಾರುಣಃ । ಆವಯೋರ್ವಿಜಯಂ ಯುದ್ಧೇ ಶಂಸನ್ನಿವ ವಿನರ್ದತಿ ॥೨೨॥ ತಯೋರನ್ವೇಷತೋರೇವಂ ಸರ್ವಂ ತದ್ವನಮೋಜಸಾ ।

ನಿನ್ನಿಂದ. ಲಬ್ಧಾ-ಹೊಂದಲ್ಪಟ್ಟವನು, ತ್ವಂ-ನೀನು, ಪ್ರಿಯಃ-ಗಂಡನು. ಅಸಿ-ಆದೆ, ಹೇನಾಥ-ಎಲೈ ಪ್ರಿಯನೇ, ಹೇವೀರ-ಎಲೈ ಶೂರನೇ, . ತ್ವಂ-ನೀನು. ಮಯಾಸಹ-ನನ್ನೊಡನೆಗೂಡ, ಪರ್ವತಕೂಟೇಷು-ಬೆಟ್ಟಗಳ ಶಿಖರಗಳಲ್ಲಿ. ನದೀನಾಂ-ಹೊಳೆಗಳ, ಪುಳಿನೇಷುಚ-ಮರಳು ದಿನ್ನೆಗಳಲ್ಲಿಯೂ, ಇಮಂ-ಈ ಆಯುಶ್ಶೇಷಂ-ಈ ಮಿಕ್ಕ ಆಯುಸ್ಸನನ್ನು, ರಂಸ್ಯಸೇ-ವಿಹರಿಸುತ್ತೀಯೆ ॥೧೬॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟವನಾದಕಾರಣ, ಕುಪಿತಃ-ಕೋಪಿಷ್ಠನಾದ, ಅರಿಸೂದನಃ-ಶತ್ರುಸಂಹಾರಕನಾದ ಲಕ್ಷ್ಮಣಃ-ಲಕ್ಷ್ಮಣನು, ಖಡ್ಗಂ-ಕತ್ತಿಯನ್ನು, ಉದ್ಧೃತ್ಯ-ಮೇಲೆಕ್ಕೆತ್ತಿ, ತಸ್ಯಾಃ-ಆ ಅಯೋಮುಖಿಯ, ಕರ್ಣನಾಸಸ್ತನಂ-ಕಿವಿಗಳನ್ನು ಮೂಗುಗಳನ್ನು ಸ್ತನಗಳನ್ನು. ನಿಚಕರ್ತ-ಕತ್ತರಿಸಿದನು ॥೧೭॥ ಕರ್ಣನಾಸೇ-ಶ್ರೋತ್ರಗಳೂ ಮೂಗುಗಳೂ, ನಿಕೃತ್ತೇಸತಿ-ಕತ್ತರಿಸಲ್ಪಟ್ಟವುಗಳಾಗಲಾಗಿ, ಭೀಮದರ್ಶನಾ-ಭಯಂಕರವಾದ ನೋಟವುಳ್ಳ. ಸಾರಾಕ್ಷಸೀ-ಆ ರಕ್ಕಸಿಯು, ವಿಸ್ವರಂ-ವಿಕಾರಸ್ವರವಾಗಿ, ವಿನದ್ಯ-ಕೂಗಿ. ಯಥಾಗತಂ-ಬಂದಹಾಗೆ. ಪ್ರದುದ್ರಾವ-ಓಡಿಹೋದಳು ॥೧೮॥ ತಸ್ಯಾಂ-ಆ ಅಯೋಮುಖಿಯು, ಗತಾಯಾಂಸತ್ಯಾಂ-ಹೋದವಳಾಗುತ್ತಿರಲಾಗಿ, ಅಮಿತ್ರಘ್ನೌ-ಶತ್ರುಸಂಹಾರಕರಾದ, ಭ್ರಾತರೌ-ಅಣ್ಣತಮ್ಮಂದರಾದ. ರಾಮಲಕ್ಷ್ಮಣೌ-ರಾಮಲಕ್ಷ್ಮಣರಿಬ್ಬರು, ಓಜಸಾ-ಸಾಮರ್ಥ್ಯದಿಂದ, ಗಹನಂ-ಪ್ರವೇಶಿಸಲಸಾಧ್ಯವಾದ, ವನಂ-ಅರಣ್ಯವನ್ನು, ವಿಶಂತೌ-ಹೊಕ್ಕುತ್ತಿರುವವರಾಗಿ, ಆಸೇದತುಃ-ಬಂದರು ॥೧೯॥ ಮಹಾತೇಜಾಃ-ಮಹಾಪರಾಕ್ರಮಶಾಲಿಯಾದ, ಸತ್ತ್ವವಾನ್-ಸಾಮರ್ಥ್ಯವಂತನಾದ, ಶೀಲವಾನ್-ಸದ್ವೃತ್ತಿಯುಳ್ಳ, ಶುಚಿಃ-ಪರಿಶುದ್ಧನಾದ, ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ದೀಪ್ತತೇಜಸಂ-ಹೊಳೆಯುತ್ತಿರುವ ತೇಜಸ್ಸುಳ್ಳ, ಭ್ರಾತರಂ-ಅಣ್ಣನಾದ ಶ್ರೀರಾಮನಂ ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೨೦॥ ಮೇ-ನನ್ನ. ಬಾಹುಃ-ಭುಜವು, ದೃಢಂ-ಘಟ್ಟಿಯಾಗಿ, ಸ್ಪಂದತೇ-ಚಲಿಸುತ್ತದೆ, ಮೇ-ನನ್ನ, ಮನಃ-ಮನಸ್ಸು, ಉದ್ವಿಗ್ನಮಿವ-ಭಯಗೊಂಡಂತಿದೆ, ಪ್ರಾಯಶಃ-ಬಹುತರವಾಗಿ. ಅನಿಷ್ಟಾನಿ-ಅರಿಷ್ಟಪ್ರಾದಕವಾದ. ನಿಮಿತ್ತಾನಿ-ಶಕುನಗಳನ್ನು, ಉಪಲಕ್ಷಯೇ-ಕಾಣುತ್ತೇನೆ ॥೨೧॥ ತಸ್ಮಾತ್-ಆಕಾರಣದದೆಸೆಯಿಂದ, ಹೇಆರ್ಯ-ಎಲೈ ಅಣ್ಣನೇ, ತ್ವಂ-ನೀನು, ಸಜ್ಜೀಭವ-ಸನ್ನದ್ಧನಾಗಿರು, ಮಮ-ನನ್ನ, ಹಿತಂ-ಹಿತಕರವಾದ. ವಚನಂ-ಮಾತನ್ನು, ಕುರುಷ್ವ-ಮಾಡು, ನಿಮಿತ್ತಾನಿ-ದುರ್ನಿಮಿತ್ತಗಳು, ಸದ್ಯಃ-ಈಗಲೇ, ಸಂಭ್ರಮಂ-ಭಯವನ್ನು, ಶಂಸಂತಿ-ಹೇಳುತ್ತವೆಷ್ಟೆ ॥೨೨॥ ವಂಜುಳಕೋನಾಮ-ಕರ್ಣಾವಾಲವೆಂದು ಪ್ರಸಿದ್ಧವಾದ, ಪರಮದಾರುಣಃ-ಬಹಳ ಕ್ರೂರವಾದ, ಏಷಪಕ್ಷೀ-ಈ ಹಕ್ಕಿಯು. ಆವಯೋಃ-ನಮ್ಮಗಳಿಗೆ, ಯುದ್ಧೇ-ಕಾಳಗದಲ್ಲಿ, ವಿಜಯಂ-ಜಯವನ್ನು. ಶಂಸನ್ನಿವ-ಹೇಳುತ್ತದೋ ಎಂಬಂತಿರುವದಾಗಿ, ವಿನರ್ದತಿ-ಕೂಗುತ್ತದೆ ॥೨೩॥ ಏವಂ-ಈಪರಿಯಾಗಿ. ತಯೋಃ-ಆ ರಾಮಲಕ್ಷ್ಮಣರಿಬ್ಬರು, ಸರ್ವಂ-ಸಮಸ್ತವಾದ, ತದ್ವನಂ-ಆ ವನವನ್ನು, ಓಜ

ವವನಾಗೆಂದು ನುಡಿದಳು ॥೧೬॥ ಶತ್ರುಸಂಹಾರಕನಾದ ಲಕ್ಷ್ಮಣನು ಈ ರೀತಿಯಲ್ಲಿ ಹೇಳಲ್ಪಟ್ಟವನಾದಕಾರಣ ಮಹಾ ಕೋಪವನ್ನೈದಿದವನಾಗಿ, ಖಡ್ಗವನ್ನೆತ್ತಿ ಆ ಅಯೋಮುಖಿಯೆಂಬರಾಕ್ಷಸಿಯ ಕರ್ಣನಾಸಂಗಳಂ ಖಂಡ್ರಿಸಿದನು ॥೧೭॥ ಈ ರೀತಿಯಾಗಿ ಲಕ್ಷ್ಮಣನಿಂದ ಕರ್ಣನಾಸಂಗಳು ಛೇದಿಸಲ್ಪಟ್ಟವುಗಳಾಗಲೂ, ಆ ರಾಕ್ಷಸಿಯೂ ವಿಸ್ವರವಾಗಿಕೂಗುತ್ತಾ ಬಂದಂತೆಯೇ ಹೊರಟುಹೋದಳು ॥೧೮॥ ಈ ಪ್ರಕಾರವಾಗಿ ಆ ಅಯೋಮುಖಿಯು ಸಾರಲೂ, ಶತ್ರುಸಂಹಾರಕರಾದ ಆ ರಾಮಲಕ್ಷ್ಮಣರೀರ್ವರು ಪ್ರವೇಶಂಗೈಯ್ಯಲಸಾಧ್ಯವಾದ ಆ ವನವನ್ನು ತಮ್ಮ ಸಾಮರ್ಥ್ಯದಿಂದ ಪ್ರವೇಶಂ ಮಾಡಿದರು ॥೧೯॥ ಮಹಾ ತೇಜೋವಂತನಾಗಿಯೂ, ಬಹು ಸಾಮರ್ಥ್ಯವುಳ್ಳವನಾಗಿಯೂ, ಸದ್ವ್ಯಾಪಾರವುಳ್ಳವನಾಗಿಯೂ, ಪರಿಶುದ್ಧನಾಗಿಯೂ, ಇರುವ ಲಕ್ಷ್ಮಣನು ಅಗ್ರಜನಾದ ಶ್ರೀರಾಮನಂ ಕುರಿತಿಂತೆಂದನು ॥೨೦॥ ಎಲೈ ಅಣ್ಣನೇ! ಈಗ ನನ್ನ ಯೆಡಭುಜವು ವಿಶೇಷವಾಗಿ ಕಂಪಿಸುವದಾದಕಾರಣ, ಬಹುತರವಾಗಿ ಅಶುಭವು ಉಂಟಾಗುವದೆಂದು ತೋರುತಿದೆ; ಆದ್ದರಿಂದ ನೀನು ಸನ್ನದ್ಧನಾಗಿರು ಹಿತಕರವಾದ ಈ ಮಾತನ್ನು ಕೇಳುವವನಾಗು, ನನಿಗೆ ಬಹು ಸಂದೇಹವಾಗಿದೆ ॥೨೧॥ ವಂಜುಳಕವೆಂಬ ಮಹಾ ಭಯಂಕರವಾದ ಪಕ್ಷಿಯು ನಮ್ಮೀರ್ವರಿಗೆ ರಣರಂಗದಲ್ಲಿ ಜಯವನ್ನು ಹೇಳುವದೋ ಏನೋ ಎಂಬಂತೆ ಕೂಗುತಿದೆ ॥೨೨॥ ಎಂದು ಮಾತಾಡುತ್ತಾ ಆ ರಾಮಲಕ್ಷ್ಮಣರೀರ್ವರು ತಮ್ಮ ಸಾಮರ್ಥ್ಯದಿಂದ ಆ ವನವನ್ನು ಹು

ಸಂಜಜ್ಞೇವಿಪುಲಶ್ಶಬ್ದಃಪ್ರಭಂಜನ್ನಿವತದ್ವನಂ ॥೨೪॥ ಸಂವೇಷ್ಟಿತಮಿವಾತ್ಯರ್ಥಂಗಗನಂಮಾತರಿಶ್ವನಾ । ವನಸ್ಯ ತಸ್ಯಶಬ್ದೋಭೂದ್ದಿವಮಾಪೂರಯನ್ನಿವ ॥೨೫॥ ತಂಶಬ್ದಂಕಾಂಕ್ಷಮಾಣಸ್ತುರಾಮಃಕಕ್ಷೇಸಹಾನುಜಃ । ದದರ್ಶ ಸುಮಹಾಕಾಯಂರಾಕ್ಷಸಂವಿಪುಲೋರಸಂ ॥೨೬॥ಆಸೇದತುಸ್ತತಸ್ತತ್ರತಾವುಭೌಪ್ರಮುಖೇಸ್ಥಿತಂ। ವಿವೃದ್ಧಮಶಿರೋ ಗ್ರೀವಂಕಬಂಧಮುದರೇಮುಖಂ । ರೋಮಭಿರ್ನಿಚಿತೈಸ್ತೀಕ್ಷ್ಣೈರ್ಮಹಾಗಿರಿಮಿವೋಚ್ಛ್ರಿತಂ। ನೀಲಮೇಘನಿಭಂ ರೌದ್ರಂಮೇಘಸ್ತನಿತನಿಸ್ಸ್ವನಂ।ಅಗ್ನಿಜ್ವಾಲಾನಿಕಾಶೇನಲಲಾಟಸ್ಥೇನದೀಪ್ಯತಾ । ಮಹಾಪಕ್ಷ್ಮೇಣಪಿಂಗೇನವಿಪುಲೇನಾಯ ತೇನಚ।ಏಕೇನೋರಸಿಘೋರೇಣನಯನೇನಾಶುದರ್ಶಿನಾ। ಮಹಾದಂಷ್ಟ್ರೋಪಪನ್ನಂತಂಲೇಲಿಹಾನಂಮಹಾಮುಖಂ। ಭಕ್ಷ ಯಂತಂಮಹಾಘೋರಾನೃಕ್ಷಸಿಂಹಮೃಗದ್ವಿಪಾನ್।ಘೋರೌಭುಜೌವಿಕುರ್ವಾಣಮುಭೌಯೋಜನಮಾಯತೌ । ಕರಾ ಭ್ಯಾಂವಿವಿಧಾನ್ಗೃಹ್ಯಋಕ್ಷಾನ್ಪಕ್ಷಿಗಣಾನ್ಮೃಗಾನ್ । ಆಕರ್ಷಂತಂವಿಕರ್ಷಂತಮನೇಕಾನ್ಮೃಗಯೂಥಪಾನ್॥

---

ಸಾ-ತೇಜಸ್ಸಿನಿಂದ, ಅನ್ವೇಷತೋಸ್ತಯೋಃ-ಹುಡುಕಿದವರಾಗುತ್ತಿರಲೀಕಾಗಿ, ತದ್ವನಂ-ಆ ಅರಣ್ಯವನ್ನು, ಪ್ರಭಂಜನ್ನಿವ-ಮುರಿಯುತ್ತದೇಬಂತಿರುವ, ವಿಪುಲಃ-ವಿಸ್ತಾರವಾದ, ಶಬ್ದಃ-ಘೋಷವು. ಸಂಜಜ್ಞೇ-ಆಯಿತು ॥೨೪॥ ಗಗನಂ-ಅಂತರಿಕ್ಷವು, ಅತ್ಯರ್ಥಂ-ಬಹಳವಾಗಿ. ಮಾತರಿಶ್ವನಾ-ಘೋಷದಿಂದ, ಸಂವೇಷ್ಟಿತಮಿವ-ವ್ಯಾಪ್ತವಾದ್ದಂತೆ ಆಯಿತು, ತಸ್ಯವನಸ್ಯ-ಆ ವನದ, ಶಬ್ದಃ-ಘೋಷವು, ದಿವಂ-ಅಂತರಿಕ್ಷವನ್ನು, ಆಪೂರಯನ್ನಿವ-ತುಂಬಿಸಿದಂತೆ, ಅಭೂತ್-ಆಯಿತು ॥೨೫॥ ಕಕ್ಷೇ-ಗುಲ್ಮದಲ್ಲಿ, ತಂಶಬ್ದಂ-ಆ ಶಬ್ದವನ್ನು. ಕಾಂಕ್ಷಮಾಣಸ್ತು-ನೋಡುತ್ತಿರುವನಾಗಿ, ಸಹಾನುಜಃ-ತಮ್ಮನೊಡಗೂಡಿದ, ರಾಮಃ-ಶ್ರೀರಾಮನು, ಸುಮಹಾಕಾಯಂ-ಬಹಳ ದೊಡ್ಡಶರೀರವುಳ್ಳ, ವಿಪುಲೋರಸಂ-ವಿಸ್ತಾರವಾದ ಎದೆಯುಳ್ಳ, ರಾಕ್ಷಸಂ-ರಕ್ಕಸನನ್ನು. ದದರ್ಶ-ಕಂಡನು ॥೨೬॥ ತತಃ-ಬಳಿಕ, ತತ್ರ-ಆ ಅರಣ್ಯದಲ್ಲಿ, ತಾವುಭೌ-ಆ ರಾಮಲಕ್ಷ್ಮಣರಿಬ್ಬರು, ಪ್ರಮುಖೇ-ಎದುರಾಗಿ, ಸ್ಥಿತಂ-ನಿಂತಿರುವ, ವಿವೃದ್ಧಂ-ವೃದ್ಧನಾದ, ಅಶಿರೋಗ್ರೀವಂ-ಶಿರಕಂಠಗಳಿಲ್ಲದಿರುವ, ಉದರೇ-ಎದೆಯಲ್ಲಿ. ಮುಖಂ-ಮುಖವುಳ್ಳ, ತೀಕ್ಷ್ಣೈಃ-ತೀಕ್ಷ್ಣವಾದ, ನಿಚಿತೈಃ-ನಿಬಿಡವಾದ, ರೋಮಭಿಃ-ರೋಮಗಳಿಂದ, ಉಚ್ಛ್ರಿತಂ-ಅತ್ಯುನ್ನತವಾದ, ಮಹಾಗಿರಿಮಿವಸ್ಥಿತಂ-ದೊಡ್ಡಬೆಟ್ಟದಂತಿರುತ್ತಿರುವ, ನೀಲಮೇಘನಿಭಂ-ಕಪ್ಪಾದ ಮೇಘಕ್ಕೆ ಸಮವಾದ, ರೌದ್ರಂ-ಭಯಂಕರನಾದ, ಮೇಘಸ್ತನಿತನಿಸ್ವನಂ-ಮೇಘಗರ್ಜನೆಯಂತೆ ಧ್ವನಿಯುಳ್ಳ, ಅಗ್ನಿಜ್ವಾಲಾನಿಕಾಶೇನ-ಬೆಂಕಿಯ ಜ್ವಾಲೆಗೆ ಸಮವಾದ, ಲಲಾಟಸ್ಥೇನ-ಹಣೆಯಲ್ಲಿರುತ್ತಿರುವ, ದೀಪ್ಯತಾ-ಹೊಳೆಯುತ್ತಿರುವ. ಮಹಾಪಕ್ಷ್ಮೇಣ-ದೊಡ್ಡರೆಪ್ಪೆಗಳುಳ್ಳ, ಪಿಂಗೇನ-ಹಚ್ಚಗಿರುವ, ವಿಪುಲೇನ-ವಿಸ್ತಾರವಾದ, ಆಯತೇನ-ದೀರ್ಘವಾದ, ಏಕೇನ-ಒಂದಾದ, ಉರಸಿ-ಎದೆಯಲ್ಲಿ, ಘೋರೇಣ-ಭಯಂಕರವಾದ, ಆಶುದರ್ಶಿನಾ-ಶೀಘ್ರದರ್ಶನಸಲ್ಲ, ನಯನೇನ-ನೇತ್ರದಿಂದ, ಮಹಾದಂಷ್ಟ್ರೋಪಪನ್ನಂ-ದೊಡ್ಡಕೋರೆಹಲ್ಲುಗಳಿಂ ಕೂಡಿಕೊಂಡಿರುವ, ಮಹಾಮುಖಂ-ದೊಡ್ಡಮುಖವನ್ನು ಲೇಲಿಹಾನಂ-ನೆಕ್ಕುತ್ತಿರುವ. ಮಹಾಘೋರಾನ್-ಬಹಳ ಭಯಂಕರವಾದ, ಋಕ್ಷಸಿಂಹಮೃಗದ್ವಿಪಾನ್-ಕರಡಿಗಳನ್ನೂ ಸಿಂಹಗಳನ್ನೂ ಮೃಗಗಳನ್ನೂ ಆನೆಗಳನ್ನೂ, ಭಕ್ಷಯಂತಂ-ತಿನ್ನುತ್ತಿರುವ, ಯೋಜನಂ-ಒಂದು ಗಾವುದವು. ಆಯತೌ-ದೀರ್ಘವಾದ, ಘೋರೌ-ಭಯಂಕರವಾದ. ಉಭೌ-ಎರಡು ಭುಜೌ-ಭುಜಗಳನ್ನು, ವಿಕುರ್ವಾಣಂ-ಚಾಚುತ್ತಿರುವ, ಕರಾಭ್ಯಾಂ-ಹಸ್ತಗಳಿಂದ, ವಿವಿಧಾನ್-ನಾನಾ ಬಗೆಯಾದ, ಋಕ್ಷಾನ್-ಕರಡಿಗಳನ್ನು ಪಕ್ಷಿಗಣಾನ್-ಹಕ್ಕಿಗಳ ತಂಡಗಳನ್ನು, ಮೃಗಾನ್-ಜಿಂಕೆಗಳನ್ನು, ಗೃಹ್ಯ-ಹಿಡಿದುಕೊಂಡು, ಆಕರ್ಷಂತಂ-ಎಳೆಯುತ್ತಿರುವ, ಅನೇಕಾನ್-ಅನೇಕ ಸಂಖ್ಯೆಯುಳ್ಳ, ಮೃಗಯೂಥಪಾನ್-ದೊಡ್ಡಮೃಗಗಳನ್ನು, ವಿಕರ್ಷಂತಂ-ಸೆಳೆಯುತ್ತಿರುವ, ಪ್ರಸನ್ನಯೋಃ-ಸವಿಾಪದಲ್ಲಿ ಬರುತ್ತಿರುವ, ತಯೋರ್ಭ್ರಾತ್ರೋಃ-ಆ

---

ಡುಕುತಲಿರಲು,ಆ ಅರಣ್ಯವನ್ನೆಲ್ಲ ಮುರಿಯುವಂತೆ ಕಡುಭಯಂಕರವಾದ ಮಹಾ ಘೋಷವು ಹುಟ್ಟಿದಂಥಾದ್ದಾಯಿತು ॥೨೪॥ ಆಗ ಗಗನವು ವಿಶೇಷವಾಗಿ ಘಾಳಿಯಿಂದ ತುಂಬಿಸಲ್ಪಟ್ಟಂತೆ ಆ ಶಬ್ದದಿಂದ ತುಂಬಿಕೊಂಡಂಥಾದ್ದಾಯಿತು ॥೨೫॥ ಅನಂತರದಲ್ಲಿ ಶ್ರೀರಾಮನು, ಆ ಶಬ್ದವನ್ನು ತಿಳಿಯಲಿಚ್ಛೆಯುಳ್ಳವನಾಗಿ, ಅನುಜನಾದ ಲಕ್ಷ್ಮಣನಿಂ ಮೊಡಗೂಡಿ ಪೊದೆಗಳಲ್ಲಿ ಹುಡುಕುತಿರಲು, ಬಹು ದೊಡ್ಡದಾಗಿರುವ ಶರೀರವುಳ್ಳ ಓರ್ವರಾಕ್ಷಸನಂ ಕಂಡರು॥೨೬॥ಅನಂತರದಲ್ಲಿ ಆರಾಮಲಕ್ಷ್ಮಣರೀರ್ವರು ತಮಗೆದುರಾಗಿ ನಿಂತಿರುವವನಾಗಿಯೂ, ಅತಿವೃದ್ಧನಾಗಿಯೂ,ಶಿರವೂ ಕಂಠವೂಸಹಾ ಇಲ್ಲದಿರುವವನಾಗಿಯೂ ಎದೆಯಲ್ಲಿ ಮುಖವಂ ಧರಿಸುವವನಾಗಿಯೂ,ಘೋರವಾದ ರೋಮಗಳಿಂದ ಯುಕ್ತವಾದ ದೊಡ್ಡಶಿಖರವೋ ಏನೋ, ಎಂಬಂತೆ ಮಹದೌನ್ನತ್ಯವುಳ್ಳವನಾಗಿಯೂ,ಕಾಲಮೇಘದಂತೆ ಮಹಾ ಭಯಂಕರನಾಗಿಯೂ, ಮೇಘಗರ್ಜನೆಯಂತೆ ಭಯವನ್ನುಂಟುಮಾಡುವ ಘೋಷವುಳ್ಳವನಾಗಿಯೂ ಹಣೆಯಲ್ಲಿ ಹೊಳೆವ ದೊಡ್ಡ ದೊಡ್ಡ ರೆಪ್ಪೆಗಳುಳ್ಳ ವಿಸ್ತಾರವಾದ ಹಚ್ಚಗಿರುವ ಒಂದು ಕಣ್ಣಿನಿಂದಲೂ ಮತ್ತೂ ವಕ್ಷೋದೇಶವರ್ತಿಯಾಗಿರುವ ಮಹಾ ಭಯಂಕರವಾದ ಮತ್ತೊಂದು ನೇತ್ರದಿಂದಲೂ ಸಹಾಯುಕ್ತವಾದಕಾರಣ ಬಹು ಭೀತಿಯನ್ನುಂಟುಮಾಡುವ ತನ್ನ ಬಾಯಂ ನೆಕ್ಕುತಲಿರುವವನಾಗಿಯೂ, ಬಹಳ ಭಯಂಕರವಾದ ಕರಡಿಗಳನ್ನೂ ಸಿಂಹಗಳನ್ನೂ ಮೃಗಂಗಳನ್ನೂ ಆನೆಗಳನ್ನೂ ಸಹಾ ತಿನ್ನತಕ್ಕವನಾಗಿಯೂ

ಸ್ಥಿತಮಾವೃತ್ಯಪಂಥಾನಂತಯೋರ್ಭ್ರಾತ್ರೋಃಪ್ರಪನ್ನಯೋಃ ॥೩೦॥ ಅಥತೌಸಮಭಿಕ್ರಮ್ಯಕ್ರೋಶಮಾತ್ರೇದದರ್ಶತುಃ । ಮಹಾಂತಂದಾರುಣಂಭೀಮಂಕಬಂಧಂಭುಜಸಂವೃತಂ । ಕಬಂಧಮಿವಸಂಸ್ಥಾನಾದತಿಘೋರಪ್ರದರ್ಶನಂ ॥೩೧॥ ಸಮಹಾಬಾಹುರತ್ಯರ್ಥಂಪ್ರಸಾರ್ಯವಿಪುಲೌಭುಜೌ । ಜಗ್ರಾಹಸಹಿತಾವೇವರಾಘವೌಪೀಡಯನ್ಬಲಾತ್ । ಖಡ್ಗಿನೌದೃಢಧನ್ವಾನೌತಿಗ್ಮತೇಜೋವಪುರ್ಧರೌ । ಭ್ರಾತರೌವಿವಶಂಪ್ರಾಪ್ತೌಕೃಷ್ಯಮಾಣೌಮಹಾಬಲೌ ॥೩೨॥ ತತ್ರಧೈರ್ಯೇಣಶೂರಸ್ತುರಾಘವೋನೈವವಿವ್ಯಥೇ । ಬಾಲ್ಯಾದನಾಶ್ರಯತ್ವಾಚ್ಚಲಕ್ಷ್ಮಣಸ್ತ್ವತಿವಿವ್ಯಥೇ । ಉವಾಚಚವಿಷಣ್ಣಸ್ಸನ್ರಾಘವಂರಾಘವಾನುಜಃ ॥೩೩॥ ಪಶ್ಯಮಾಂವೀರವಿವಶಂರಾಕ್ಷಸಸ್ಯವಶಂಗತಂ । ಮಯೈಕೇನವಿನಿರುಕ್ತಂಪರಿಮುಂಚಸ್ವರಾಘವ । ಮಾಂಹಿಭೂತಬಲಿಂದತ್ವಾಪಲಾಯಸ್ವಯಥಾಸುಖಂ ॥೩೪॥ ಅಧಿಗಂತಾಸಿವೈದೇಹೀಮಚಿರೇಣೇತಿಮೇಮತಿಃ ॥೩೫॥ ಪ್ರತಿಲಭ್ಯಚಕಾಕುತ್ಸ್ಥಪಿತೃಪೈತಾಮಹೀಂಮಹೀಂ । ತತ್ರಮಾಂರಾಮರಾಜ್ಯ

ಅಣ್ಣ ತಮ್ಮಂದಿರ, ಪಂಥಾನಂ-ಮಾರ್ಗವನ್ನು, ಆವೃತ್ಯ-ತಡೆಮಾಡಿ, ಸ್ಥಿತಂ-ನಿಂತಿರುವ, ಕಬಂಧಂ-ಕಬಂಧನೆಂಬ ರಕ್ಕಸನನ್ನು, ಆಸೆದತುಃ-ಹೊಂದಿದರು ॥೩೦॥ ಅಥ-ಬಳಿಕ, ತೌ-ಆ ರಾಮಲಕ್ಷ್ಮಣರು, ಸಮಭಿಕ್ರಮ್ಯ-ಎದುರಾಗಿ ಬಂದು, ಕ್ರೋಶಮಾತ್ರೇ-ಹರಿದಾರಿಯನೆಲದಲ್ಲಿ, ಮಹಾಂತಂ-ದೊಡ್ಡವನಾದ, ದಾರುಣಂ-ಬಹಳ ಭಯಂಕರನಾದ, ಭುಜಸಂವೃತಂ-ಭುಜಗಳಿಂದ ಆವರಿಸಲ್ಪಟ್ಟಿರುವ, ಸಂಸ್ಥಾನಾತ್-ದೇಹಸ್ಥಿತಿಯ ವಿಶೇಷದಿಂದ, ಕಬಂಧಮಿವ-ಸರ್ವದಾ ಶಿರಸ್ಸಿಲ್ಲದಿರುವ ದೇಹವಂತೆ, ಅತಿಘೋರಪ್ರದರ್ಶನಂ-ಅತಿತೀಕ್ಷ್ಣವಾದ ನೋಟವುಳ್ಳ, ಕಬಂಧಂ-ಕಬಂಧನನ್ನು, ದದರ್ಶತುಃ-ಕಂಡರು ॥೩೧॥ ಮಹಾಬಾಹುಃ-ಮಹಾಭುಜಗಳುಳ್ಳ, ಸಃ-ಆ ಕಬಂಧನು, ಅತ್ಯರ್ಥಂ-ಬಹಳವಾಗಿ, ವಿಪುಲೌ-ವಿಸ್ತಾರವಾದ, ಭುಜೌ-ಭುಜಗಳನ್ನು, ಪ್ರಸಾರ್ಯ-ನೀಡಿ, ಸಹಿತಾವೇವ-ಸಂಗಡಲೇ ಕೂಡಿರುವ, ರಾಘವೌ-ರಾಮಲಕ್ಷ್ಮಣರನ್ನು, ಬಲಾತ್-ದೇಹಶಕ್ತಿ ವಿಶೇಷದಿಂದ, ಪೀಡಯನ್-ಬಾಧೆಗೊಳಿಸುತ್ತಿರುವವನಾಗಿ, ಜಗ್ರಾಹ-ಹಿಡಿದುಕೊಂಡನು ॥೩೨॥ ಖಡ್ಗಿನೌ-ಕತ್ತಿಗಳನ್ನು ಧರಿಸಿರುವ, ದೃಢಧನ್ವಾನೌ-ಘಟ್ಟಿಗಿರುವ ಬಿಲ್ಲುಗಳುಳ್ಳ, ತಿಗ್ಮತೇಜೋವಪುರ್ಧರೌ-ತೀಕ್ಷ್ಣವಾದ ತೇಜಸ್ಸುಳ್ಳ ಶರೀರವಂ ಧರಿಸಿರುವ, ಮಹಾಬಲೌ-ಬಹಳ ಸಾಮರ್ಥ್ಯವಂತರಾದ, ಭ್ರಾತರೌ-ಅಣ್ಣ ತಮ್ಮಂದಿರಿಬ್ಬರೂ, ಕೃಷ್ಯಮಾಣೌ-ಸೆಳೆಯಲ್ಪಟ್ಟವರಾಗಿ, ವಿವಶಂ-ಪರಾಧೀನತೆಯನ್ನು, ಪ್ರಾಪ್ತೌ-ಹೊಂದಿದರು ॥೩೩॥ ತತ್ರ-ಆ ಇಬ್ಬರಲ್ಲಿ, ಶೂರಃ-ಬಲವಂತನಾದ, ರಾಘವಸ್ತು-ಶ್ರೀರಾಮನಾದರೋ, ಧೈರ್ಯೇಣ-ಧೀರತೆಯಿಂದ, ನೈವವಿವ್ಯಥೇ-ವ್ಯಸನಪಡಲಿಲ್ಲ, ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ಬಾಲ್ಯಾತ್-ಅಪ್ರೌಢವಾದ ಬುದ್ಧಿಯುಳ್ಳವನಾದಕಾರಣ, ಅನಾಶ್ರಯತ್ವಾಚ್ಚ-ಧೈರ್ಯಾಲಂಬನವಿಲ್ಲದರದೆಸೆಯಿಂದಲೂ, ಅತಿವಿವ್ಯಥೇ-ಬಹಳ ವ್ಯಸನಗೊಂಡನು ॥೩೪॥ ರಾಘವಾನುಜಃ-ಶ್ರೀರಾಮನ ತಮ್ಮನಾದ ಲಕ್ಷ್ಮಣನು, ವಿಷಣ್ಣಸ್ಸನ್-ದುಃಖಿತನಾದವನಾಗಿ, ರಾಘವಂ-ಶ್ರೀರಾಮನಂ ಕುರಿತು, ಉವಾಚ-ಹೇಳಿದನು ॥೩೫॥ ಹೇವೀರ-ಎಲೈ ಶೂರನೇ. ಮಾಂ-ನನ್ನನ್ನು, ರಾಕ್ಷಸಸ್ಯ-ಕಬಂಧನಿಗೆ, ವಶಂ-ಸ್ವಾಧೀನವನ್ನು, ಗತಂ-ಹೊಂದಿದವನಾದಕಾರಣ, ವಿವಶಂ-ಪರಾಧೀನನನ್ನಾಗಿ, ಪಶ್ಯ-ತಿಳಿದುಕೋ, ಹೇರಾಘವ-ಎಲೈ ಶ್ರೀರಾಮನೇ, ಏಕೇನ-ಒಬ್ಬನಾದ, ಮಯಾ-ನನ್ನಿಂದ, ಮಾಂ-ನನ್ನನ್ನು, ಪರಿಮುಂಚಸ್ವ-ಬಿಡಿಸು, ಮಾಂ-ನನ್ನನ್ನು, ಭೂತಬಲಿಂ-ಭೂತಗಳಿಗೆ ಬಲಿಯನ್ನಾಗಿ, ದತ್ವಾ-ಕೊಟ್ಟು, ಯಥಾಸುಖಂ-ಸುಖವಾಗಿ, ರಾಜ್ಯಸ್ಥಃ-ರಾಜ್ಯದಲ್ಲಿದ್ದವನಾಗಿ, ಪಲಾಯಸ್ವ-ಓಡಿಹೋಗು ॥೩೬॥ ಅಚಿರೇಣ-ಜಾಗ್ರತೆಯಾಗಿ, ವೈದೇಹೀಂ-ಸೀತಾದೇವಿಯನ್ನು, ಅಧಿಗಂತಾಸಿ-ಹೊಂದಿದವನಾಗುವಿ, ಇತಿ-ಇಂತೆಂದು, ಮೇ-ನನ್ನ, ಮತಿಃ-ಬುದ್ಧಿಯು ॥೩೭॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೇ, ಪಿತೃಪೈತಾಮಹೀಂ-ಪಿತೃಪಿತಾಮಹಾರ್ಜಿತವಾದ, ಮಹೀಂ-ಭೂಮಿಯನ್ನು, ಪ್ರತಿಲಭ್ಯ-

ಯೋಜನ ಪರಿಮಿತವಾದ ತೋಳುಗಳನ್ನು ನಾಚಿ ಅನೇಕವಿಧವಾದ ಪಕ್ಷಿಗಳನ್ನೂ ಕರಡಿಮೊದಲಾದ ಮೃಗವಿಶೇಷಗಳನ್ನೂ ಸಹಾ ಹಿಡಿದುಕೊಂಡು ತಳೆಯುವವನಾಗಿಯೂ, ತಮ್ಮ ದಾರಿಗೆ ಅಡ್ಡವಾಗಿ ಬಿದ್ದಿರುವವನಾಗಿಯೂ ಸಹಾ ಇರುವ ಕಬಂಧನೆಂಬರಾಕ್ಷಸನನ್ನೈದಿದರು ॥೩೦॥ ಅನಂತರದಲ್ಲಿ ಆ ರಾಮಲಕ್ಷ್ಮಣರೀರ್ವರು ತಮ್ಮ ದಾರಿಯಲ್ಲಿ ಅಡ್ಡವಾಗಿರುವ ಮಹಾ ಭಯಂಕರವಾದ ಶರೀರದಿಂದ ಶಿರವಿಲ್ಲದ ಕಬಂಧವೋ ಏನೋ ಎಂಬಂತಿರುವ ಆ ರಾಕ್ಷಸನಂ ಕಂಡರು, ಆಗ ರಾಕ್ಷಸನು ತನ್ನ ಭುಜಗಳಂ ನಾಚಿ, ಸದಾಕಾಲದಲ್ಲಿಯೂ ಸಹಿತರಾದ ಆ ರಾಮ ಲಕ್ಷ್ಮಣರೀರ್ವರನ್ನು ಬಲಾತ್ಕಾರದಿಂ ಪಿಡಿದು ಬಾಧೆಗೊಳಿಸಿದನು ॥೩೨॥ ಆಗ ದೃಢವಾದ ಕೋದಂಡಗಳುಳ್ಳ ಮತ್ತೂ ಖಡ್ಗಧಾರಿಗಳಾದ ಮಹಾ ಬಲವಂತರಾದ ಆ ರಾಮಲಕ್ಷ್ಮಣರೀರ್ವರು ಸೆಳೆಯಲ್ಪಟ್ಟವರಾಗಿ ಪರಾಧೀನತೆಯನ್ನೈದಿದರು ॥೩೩॥ ಅವರೀರ್ವರಲ್ಲಿ ಶೂರನಾದ ಶ್ರೀರಾಮನು ಬಹು ಧೈರ್ಯವುಳ್ಳವನಾದಕಾರಣ ಆತನು ವ್ಯಥೆಯನ್ನೈದಲಿಲ್ಲ, ಆಗ ಲಕ್ಷ್ಮಣನಾದರೋ ಪ್ರೌಢತ್ವವಿಲ್ಲದ ಮತಿಯುಳ್ಳವನಾದಕಾರಣ ಆತನು ಮಹಾ ಅಧೈರ್ಯವನ್ನೈದಿದವನಾಗಿ ಅಣ್ಣನಾದ ಶ್ರೀರಾಮನಂ ಕುರಿತು ನುಡಿವನ ದೆಂತೆನೆ,—॥೩೫॥ ಎಲೈ ಶೂರನಾದ ಶ್ರೀರಾಮನೇ! ನಾನು ಈ ರಾಕ್ಷಸನಿಗೆ ಅಧೀನನಾದೆನು, ಆದ್ದರಿಂದ ನನ್ನನ್ನು ಈ ಭೂತಕ್ಕೆ ಬಲಿಯಂಗೈದು ನೀನು ಓಡಿಹೋಗುವವನಾಗು, ನೀನು ತ್ವರೆಯಿಂದ ಸೀತಾದೇವಿಯನ್ನು ಪಡೆಯುವವನಾಗುವಿ

ಸ್ಥಃ ಸ್ಮರ್ತುಮರ್ಹಸಿಸರ್ವದಾ ॥೪೦॥ ಲಕ್ಷ್ಮಣೇನೈವಮುಕ್ತಸ್ತು ರಾಮಃ ಸೌಮಿತ್ರಿಮಬ್ರವೀತ್ । ಮಾಸ್ಮತ್ರಾ
ಸಂ ಕೃಥಾವೀರ ನಹಿತ್ವಾದೃಗ್ವಿಷೀದತಿ ॥೪೧॥ ಏತಸ್ಮಿನ್ನಂತರೇ ಕ್ರೂರೋ ಭ್ರಾತರೌ ರಾಮಲಕ್ಷ್ಮಣೌ । ಪಪ್ರಚ್ಛ
ಘನನಿರ್ಘೋಷಃ ಕಬಂಧೋ ದಾನವೋತ್ತಮಃ ॥೪೨॥ ಕೌಯುವಾಂ ವೃಷಭಸ್ಕಂಧೌ ಮಹಾಖಡ್ಗಧನುರ್ಧರೌ ॥ ಘೋ
ರಂದೇಶಮಿಮಂಪ್ರಾಪ್ತೌ ಮಮಭಕ್ಷಾವುಪಸ್ಥಿತೌ ॥೪೩॥ ವದತಂಕಾರ್ಯಮಿಹವಾಂ ಕಿಮರ್ಥಂಚಾಗತೌಯುವಾಂ॥
ಇಮಂದೇಶಮನುಪ್ರಾಪ್ತೌ ಕ್ಷುಧಾರ್ತಸ್ಯೇಹ ತಿಷ್ಠತಃ ॥೪೪॥ ಸಬಾಣಚಾಪಖಡ್ಗೌ ಚ ತೀಕ್ಷ್ಣಶೃಂಗಾವಿವರ್ಷಭೌ॥
ಮಮಾಸ್ಯಮನುಸಂಪ್ರಾಪ್ತೌ ದುರ್ಲಭಂಜೀವಿತಂಪುನಃ ॥೪೫॥ ತಸ್ಯ ತದ್ವಚನಂಶ್ರುತ್ವಾ ಕಬಂಧಸ್ಯ ದುರಾತ್ಮ
ನಃ ॥ ಉವಾಚ ಲಕ್ಷ್ಮಣಂರಾಮೋ ಮುಖೇನ ಪರಿಶುಷ್ಯತಾ ॥೪೬॥ ಕೃಚ್ಛ್ರಾತ್ಕೃಚ್ಛ್ರತರಂಪ್ರಾಪ್ಯ ದಾರುಣಂಸ
ತ್ಯವಿಕ್ರಮ । ವ್ಯಸನಂಜೀವಿತಾಂತಾಯ ಪ್ರಾಪ್ತಮಪ್ರಾಪ್ಯತಾಂಪ್ರಿಯಾಂ ... ... ॥೪೭॥

---

ಹೊಂದಿ. ಹೇರಾಮ–ಎಲೈ ಶ್ರೀರಾಮನೇ, ತತ್ರ–ಅಲ್ಲಿ, ರಾಜ್ಯಸ್ಥಃ–ರಾಜ್ಯದಲ್ಲಿರುತ್ತಿರುವನಾಗಿ, ಸರ್ವದಾ–ಸರ್ವಕಾಲದಲ್ಲಿ, ಮಾಂ–ನನ್ನನ್ನು, ಸ್ಮರ್ತುಂ–ಸ್ಮರಣೆಮಾಡಿಕೊಂಬುವದಕ್ಕೆ. ಅರ್ಹಸಿ–ಯೋಗ್ಯನಾಗು ॥೪೦॥ ॥ ಲಕ್ಷ್ಮಣೇನ–ಲಕ್ಷ್ಮಣನಿಂದ, ಏವಂ–ಈಪರಿಯಾಗಿ, ಉಕ್ತಃ–ಹೇಳಲ್ಪಟ್ಟ, ರಾಮಸ್ತು–ಶ್ರೀರಾಮನಾದರೆ, ಸೌಮಿತ್ರಿಂ–ಲಕ್ಷ್ಮಣನಂಕುರಿತು, ಅಬ್ರವೀತ್–ನುಡಿದನು, ಹೇವೀರ–ಎಲೈ ಶೂರನೇ, ತ್ರಾಸಂ–ಭಯವನ್ನು ಮಾಕೃಥಾಸ್ಮ–ಮಾಡಬೇಡ, ತ್ವಾದೃಕ್–ನಿನ್ನಂಥವನು, ನವಿಷೀದತಿ–ವ್ಯಸನಗೊಂಡವನಾಗುವದಿಲ್ಲ ॥೪೧॥ ॥ ಏತಸ್ಮಿನ್ನಂತರೇ–ಈ ಮಧ್ಯದಲ್ಲಿ, ಕ್ರೂರಃ–ಕ್ರೂರನಾದ, ಘನನಿರ್ಘೋಷಃ–ಮೇಘದಧ್ವನಿಯಂತೆ ಧ್ವನಿಯುಳ್ಳ, ದಾನವೋತ್ತಮಃ–ರಾಕ್ಷಸಶ್ರೇಷ್ಠನಾದ, ಕಬಂಧಃ–ಕಬಂಧನು, ಭ್ರಾತರೌ–ಅಣ್ಣತಮ್ಮಂದರಾದ. ರಾಮಲಕ್ಷ್ಮಣೌ–ರಾಮಲಕ್ಷ್ಮಣರನ್ನು ಪಪ್ರಚ್ಛ–ಕೇಳಿದನು ॥೪೨॥ ॥ ವೃಷಭಸ್ಕಂಧೌ–ಎತ್ತಿನ ಭುಜಗೋಪುರದಂತೆ ಭುಜಗೋಪುರಗಳುಳ್ಳ. ಮಹಾಖಡ್ಗಧನುರ್ಧರೌ–ಪಟ್ಟಾಕತ್ತಿಗಳನ್ನೂ ಬಿಲ್ಲುಗಳನ್ನೂ ಧರಿಸಿರುವ, ಯುವಾಂ–ನೀವುಗಳು, ಕೌ–ಯಾರು, ಘೋರಂ–ಭಯಂಕರವಾದ ಇಮಂದೇಶಂ–ಈಪ್ರದೇಶವಂಕುರಿತು, ಪ್ರಾಪ್ತೌ–ಬಂದವರಾಗಿ, ಮಮ–ನನಗೆ, ಭಕ್ಷೌ–ತಿನ್ನುವದಕ್ಕೆ ಅರ್ಹರಾಗಿ, ಉಪಸ್ಥಿತೌ–ಬಂದಿರಿ॥೪೩॥ ॥ ಇಹ–ಈಗಲೇ. ವಾಂ–ನಿಮ್ಮ. ಕಾರ್ಯಂ–ಕಾರ್ಯವನ್ನು, ವದತಂ–ಹೇಳಿರಿ, ಯುವಾಂ–ನೀವುಗಳು, ಕಿಮರ್ಥಂಚ–ಏನುಪ್ರಯೋಜನಕ್ಕೆ. ಆಗತೌ–ಬಂದಿರಿ. ಕ್ಷುಧಾರ್ತಸ್ಯ–ಹಸಿವುಗೊಂಡವನಾದ, ಇಹ–ಇಲ್ಲಿ, ತಿಷ್ಠತಃ–ಇರುತ್ತಿರುವ ನನ್ನ, ಇಮಂದೇಶಂ–ಈ ದೇಶವಂಕುರಿತು, ಅನುಪ್ರಾಪ್ತೌ–ಬಂದಿರಿ॥೪೪॥ ॥ ಸಬಾಣಚಾಪಖಡ್ಗೌಚ–ಬಾಣಗಳಿಂದಲುಂ ಬಿಲ್ಲುಗಳಿಂದಲುಂ ಖಡ್ಗಗಳಿಂದಲುಂ ಕೂಡಿಕೊಂಡಿರುವ, ತೀಕ್ಷ್ಣಶೃಂಗೌ–ಹದವಾಗಿರುವ ಕೊಂಬುಗಳುಳ್ಳ. ವೃಷಭಾವಿವಸ್ಥಿತೌ–ಯೆತ್ತುಗಳಂತಿರುವ ನೀವುಗಳು, ಮಮ–ನನ್ನ, ಆಸ್ಯಂ–ಬಾಯಿಯನ್ನು, ಅನುಸಂಪ್ರಾಪ್ತೌ–ಅನುಸರಿಸಿಬಂದಿರಿ, ಪುನಃ–ಮತ್ತು, ಜೀವಿತಂ–ಪ್ರಾಣದಾಸೆ ಯಿರುವಿಕೆಯು, ದುರ್ಲಭಂ–ದುರ್ಲಭವಾದದ್ದು॥ ... ... ... ... ॥೪೫॥ ॥

ದುರಾತ್ಮನಃ–ದುಷ್ಟಬುದ್ಧಿಯುಳ್ಳ, ತಸ್ಯಕಬಂಧಸ್ಯ–ಆ ಕಬಂಧನ, ತದ್ವಚನಂ–ಆ ಮಾತನ್ನು, ಶ್ರುತ್ವಾ–ಕೇಳಿ, ರಾಮಃ–ಶ್ರೀರಾಮನು, ಪರಿಶುಷ್ಯತಾ–ಬಣಗುತ್ತಿರುವ, ಮುಖೇನ–ಮುಖದಿಂದ, ಲಕ್ಷ್ಮಣಂ–ಲಕ್ಷ್ಮಣನಂಕುರಿತು, ಉವಾಚ–ಹೇಳಿದನು ॥೪೬॥ ॥ ಹೇಸತ್ಯವಿಕ್ರಮ–ಎಲೈ ಸತ್ಯಫಲವಾದ ಪರಾಕ್ರಮವುಳ್ಳವನೇ, ದಾರುಣಂ–ಕ್ರೂರವಾದ, ಕೃಚ್ಛ್ರಾತ್–ಕಷ್ಟದದೆಸೆಯಿಂದ, ಕೃಚ್ಛ್ರತರಂ–ಬಹಳಕಷ್ಟವನ್ನು. ಪ್ರಾಪ್ಯ–ಹೊಂದಿ ತಾಂಪ್ರಿಯಾಂ–ಆ ಸೀತಾದೇವಿಯನ್ನು, ಅಪ್ರಾಪ್ಯ–ಹೊಂದದೇಲೆ, ಸ್ಥಿತಯೋಃ–ಯಿರುತ್ತಿರುವ, ಆವಯೋಃ–ನಮ್ಮಗಳ. ಜೀವಿತಾಂತಾಯ–ಪ್ರಾಣನಾಶಕ್ಕೋಸುಗ, ವ್ಯಸನಂ–ವ್ಯಥೆಯು, ಪ್ರಾಪ್ತಂ–ಸಂಭವಿಸಿತು ॥೪೭॥ ॥ ಹೇಲಕ್ಷ್ಮಣ–ಎಲೈ ಲಕ್ಷ್ಮಣನೇ, ಸರ್ವಭೂತೇಷು–ಸಮಸ್ತ ಭೂತಗಳಲ್ಲಿ

---

ಎಂದು ನನಿಗೆ ತೋರುವದು ॥೩೯॥ ಎಲೈ ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ! ನಮ್ಮ ಪಿತೃಪಿತಾಮಹಾದಿಗಳಿಂದ ಸಂಪಾದಿಸಲ್ಪಟ್ಟ ರಾಜ್ಯವಂ ಪಡೆದು, ಆ ರಾಜ್ಯದಲ್ಲಿರುವವನಾಗಿ ಯಾವಾಗಲೂ ನನ್ನನ್ನು ಸ್ಮರಿಸುವವನಾಗೆಂದು, ನುಡಿಯಲೂ ಆತನಂ ಕುರಿತು ಎಲೈ ಶೂರನಾದ ಲಕ್ಷ್ಮಣನೇ! ಚಿಂತಿಸಬೇಡ ನಿನ್ನಂಥಾವೀರರು ದುಃಖಿಸುವದಿಲ್ಲ ಎಂದು ನುಡಿದನು ॥೪೧॥ ಇಷ್ಟರಲ್ಲಿ ಆ ಕ್ರೂರನಾದ ಕಬಂಧನು ಮೇಘಗರ್ಜನೆಯಂತೆ ಘರ್ಜನೆಯುಳ್ಳವನಾಗಿ ಆ ರಾಮಲಕ್ಷ್ಮಣರನ್ನು ಕೇಳುವನು ಎಂತೆನೆ,—॥೪೨॥ ವೃಷಭದ ಭುಜಗೋಪುರಗಳಂತೆ ಅತಿವಿಸ್ತಾರವಾದ ಭುಜಶಿರಸ್ಸುಗಳುಳ್ಳ, ಮತ್ತೂ ಖಡ್ಗಗಳನ್ನೂ ಕೋದಂಡಗಳನ್ನೂ ಸಹಾ ಧರಿಸಿರುವ ನೀವೀರ್ವರು ಯಾರು? ಭಯಂಕರವಾದ ಈ ಪ್ರದೇಶಕ್ಕೆ ಯಾಕೆ ಬಂದವರಾದಿರಿ? ನಿಮ್ಮ ಕಾರ್ಯಗಳಂ ತ್ವರೆಯಿಂ ಹೇಳುವವರಾಗಿ, ಎನ್ನ ಕೈಗೆ ಎಂತಾದರೂ ಶಿಲುಕಿದಿರಿ, ಆದಕಾರಣ ನೀವುಗಳು ಜೀವಿಸುವದು ದುರ್ಲಭವು ಎಂದು ದುರಾತ್ಮನಾದ ಆ ಕಬಂಧನು ನುಡಿದವನಾಗಲೂ, ಆ ಮಾತಂಕೇಳಿ ಶ್ರೀರಾಮನು ಕಂಗೆಟ್ಟ ಮುಖವುಳ್ಳವನಾಗಿ ಲಕ್ಷ್ಮಣನಂ ಕುರಿತಿಂತೆಂದನು ॥೪೬॥ ಎಲೈ ಸಫಲವಾದ ಪರಾಕ್ರಮವುಳ್ಳವನೇ! ಒಂದು ಕಷ್ಟದಿಂದ ಮತ್ತೊಂದು ಕಷ್ಟವನ್ನೈದಿ, ಸೀತಾದೇವಿಯಂ ನೋಡದೆ ನಿಂತಿರುವ ನನಿಗೆ ಪ್ರಾಣನಾಶಕ್ಕಾಗಿ ಈಗ

ಕಾಲಸ್ಯಸುಮಹದ್ವೀರ್ಯಂಸರ್ವಭೂತೇಷುಲಕ್ಷ್ಮಣ। ತ್ವಾಂಚಮಾಂಚನರವ್ಯಾಘ್ರವ್ಯಸನೈಃಪಶ್ಯಮೋಹಿತೌ ॥೪೮॥ ನಾತಿಭಾರೋಸ್ತಿದೈವಸ್ಯಸರ್ವಭೂತೇಷುಲಕ್ಷ್ಮಣ। ಶೂರಾಶ್ಚಬಲವಂತಶ್ಚಕೃತಾಸ್ತ್ರಾಶ್ಚರಣಾಜಿರೇ। ಕಾಲಾಭಿಪನ್ನಾಸ್ಸೀದಂತಿಯಥಾವಾಲುಕಸೇತವಃ॥೫೦॥ಇತಿಬ್ರುವಾಣೋದೃಢಸತ್ಯವಿಕ್ರಮೋಮಹಾಯಶಾದಾಶರಥಿಃಪ್ರತಾಪವಾನ್। ಅವೇಕ್ಷ್ಯಸೌಮಿತ್ರಿಮುದಗ್ರಪೌರುಷಂಸ್ಥಿರಾಂತದಾಸ್ವಾಂಮತಿಮಾತ್ಮನಾಕರೋತ್। *ಏಕೋನಸಪ್ತತಿತಮಸ್ಸರ್ಗಃ*

ತೌತುತತ್ರಸ್ಥಿತೌದೃಷ್ಟ್ವಾಭ್ರಾತರೌರಾಮಲಕ್ಷ್ಮಣೌ। ಬಾಹುಪಾಶಪರಿಕ್ಷಿಪ್ತೌಕಬಂಧೋವಾಕ್ಯಮಬ್ರವೀತ್ ।೧। ತಿಷ್ಠತಃಕಿನ್ನುಮಾಂದೃಷ್ಟ್ವಾಕ್ಷುಧಾರ್ತಂಕ್ಷತ್ರಿಯರ್ಷಭೌ। ಆಹಾರಾರ್ಥಂತುಸಂದಿಷ್ಟೌದೈವೇನಗತಚೇತಸೌ ।೭। ತಚ್ಛ್ರುತ್ವಾಲಕ್ಷ್ಮಣೋವಾಕ್ಯಂಪ್ರಾಪ್ತಕಾಲಂಹಿತಂತದಾ । ಉವಾಚಾರ್ತಿಂಸಮಾಪನ್ನೋವಿಕ್ರ

ಕಾಲಸ್ಯೈವ-ಕಾಲಕ್ಕೇನೆ, ವೀರ್ಯಂ-ಸಾಮರ್ಥ್ಯವು, ಸುಮಹತ್-ದೊಡ್ಡದು, ಹೆನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ತ್ವಾಂಚ-ನಿನ್ನನ್ನು ಮಾಂಚ-ನನ್ನನ್ನೂ, ಉಭೌ-ಯಿಬ್ಬರನ್ನೂ. ವ್ಯಸನೈಃ-ದುಃಖಗಳಿಂದ, ಮೋಹಿತೌ-ವ್ಯಾಪ್ತರನ್ನಾಗಿ. ಪಶ್ಯ-ನೋಡು ॥೪೮॥ ॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಸರ್ವಭೂತೇಷು-ಸಮಸ್ತ ಪ್ರಾಣಿಗಳಲ್ಲಿಯೂ. ದೈವಸ್ಯ-ಅದೃಷ್ಟರೂಪವಾದ ಕಾಲಪುರುಷನಿಗೆ, ಅತಿಭಾರಃ-ಅತ್ಯಂತಪ್ರಯಾಸವು, ನಾಸ್ತಿ-ಇಲ್ಲ ॥೪೯॥ ॥ ರಣಾಜಿರೆ-ಯುದ್ಧರಂಗದಲ್ಲಿ, ಶೂರಾಶ್ಚ-ಪರಾಕ್ರಮಶಾಲಿಗಳಾದವರು, ಬಲವಂತಶ್ಚ-ಸಾಮರ್ಥ್ಯವಂತರೂ, ಕೃತಾಸ್ತ್ರಾಶ್ಚ-ಅಸ್ತ್ರವಿದ್ಯದಲ್ಲಿ ಸಮರ್ಥರೂ, ಕಾಲಾಭಿಪನ್ನಾಃ-ಕಾಲದಿಂ ತಿರಸ್ಕೃತರಾದವರಾಗಿ, ವಾಲುಕಸೇತವೋಯಥಾ-ಮರಳಿನಿಂ ಮಾಡಲ್ಪಟ್ಟ ಜಲಬಂಧನ ಕಟ್ಟುಗಳಂತೆ, ಸೀದಂತಿ-ಹೋಗಲಾಡಿಸಲ್ಪಡುತ್ತಾರೆ ॥೫೦॥ ಇತಿ-ಈ ಪರಿಯಾಗಿ, ಬ್ರುವಾಣಃ-ಪೇಳುತ್ತಿರುವ, ದೃಢಸತ್ಯವಿಕ್ರಮಃ-ದೃಢ-ಚಾಪಲ್ಯರಹಿತವಾದ. ಸತ್ಯ-ಸಫಲವಾದ, ವಿಕ್ರಮಃ-ಪರಾಕ್ರಮವುಳ್ಳ. ಮಹಾಯಶಾಃ-ಬಹಳ ಕೀರ್ತಿವಂತನಾದ, ಪ್ರತಾಪವಾನ್-ಶತ್ರುಗಳನ್ನು ಉರಿಸುವ ಶಕ್ತಿಯುಳ್ಳ. ದಾಶರಥಿಃ-ಶ್ರೀರಾಮನು, ಉದಗ್ರಪೌರುಷಂ-ಉದಗ್ರ-ಉತ್ಕೃಷ್ಟವಾದ. ಪೌರುಷಂ-ಪರಾಕ್ರಮವುಳ್ಳ, ಸೌಮಿತ್ರಿಂ-ಲಕ್ಷ್ಮಣಸ್ವಾಮಿಯನ್ನು. ಅವೇಕ್ಷ್ಯ-ಕಂಡು, ತದಾ-ಆ ಕಾಲದಲ್ಲಿ. ಸ್ವಾಂ-ಸ್ವಕೀಯವಾದ, ಮತಿಂ-ಬುದ್ಧಿಯನ್ನು. ಆತ್ಮನಾ-ಮನಸ್ಸಿನಿಂದ, ಸ್ಥಿರಾಂ-ಸ್ಥಿರವನ್ನಾಗಿ,ಅಕರೋತ್-ಮಾಡಿದನು ॥೫೧॥ —** ಇತಿಶ್ರೀಮದಾರಣ್ಯಕಾಂಡೆ-ಏಕೋನಸಪ್ತತಿತಮಸ್ಸರ್ಗಃ **—

ತತ್ರ-ಆ ಮಾರ್ಗದಲ್ಲಿ, ಸ್ಥಿತೌ-ಇರುತ್ತಿರುವ. ಭ್ರಾತರೌ-ಅಣ್ಣತಮ್ಮಂದರಾದ, ತೌರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರನ್ನು, ಬಾಹುಪಾಶಪರಿಕ್ಷಿಪ್ತೌ-ಬಾಹು-ಭುಜಗಳೇವೇ, ಪಾಶ-ಪಾಶಗಳಿಂದ, ಪರಿಕ್ಷಿಪ್ತೌ-ಸುತ್ತಿಕೊಳ್ಳಲ್ಪಟ್ಟವರನ್ನಾಗಿ. ದೃಷ್ಟ್ವಾ-ಕಂಡು, ಕಬಂಧಃ-ಕಬಂಧನು,ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧॥ ಹೆಕ್ಷತ್ರಿಯರ್ಷಭೌ-ಎಲೈ ಕ್ಷತ್ರಿಯಶ್ರೇಷ್ಠರೇ, ಕ್ಷುಧಾ-ಹಸಿವಿನಿಂದ, ಆರ್ತಂ-ಪರಿತಪ್ತನಾದ, ಮಾಂ-ನನ್ನನ್ನು, ದೃಷ್ಟ್ವಾ-ಕಂಡು, ಕಿಂನುತಿಷ್ಠತಃ-ಯಾತಕ್ಕೋಸ್ಕರ ನಿಂತಿದ್ದೀರಿ. ದೈವೇನ-ದೈವಾಧೀನದಿಂದ. ಯುವಾಂ-ನೀವುಗಳು,ಆಹಾರಾರ್ಥಂ-ಆಹಾರದ ನಿಮಿತ್ತವಾಗಿ, ಸಂದಿಷ್ಟೌ-ನಿಯಮಿಸಲ್ಪಟ್ಟದ್ದೀರಿ, ಗತಚೇತಸೌ-ಕಿಂ-ಹೋದಂಥಾ ಬುದ್ಧಿಯುಳ್ಳವರೋ ಯೇನು, ಗಚ್ಛತಂ-ಹೋಗಿರಿ, (ಈ ಶ್ಲೋಕಕ್ಕೆ ವಾಸ್ತವವಾದ ಅರ್ಥವೇನೆಂದರೆ, ಹೆಕ್ಷತ್ರಿಯರ್ಷಭೌ-ಎಲೈರಾಜಶ್ರೇಷ್ಠರೇ, ಯುವಾಂ-ನೀವುಗಳು, ದೈವೇನ-ಅದೃಷ್ಟಾಭಿಮಾನಿದೇವತೆಯಿಂದ, ಮಾಂ-ನನ್ನ. ಆಹಾರಾರ್ಥಂ-ಆಹಾರನಿಮಿತ್ತವಾಗಿ, ಸಂದಿಷ್ಟೌಕಿಂ-ಆಜ್ಞಾಪಿಸಲ್ಪಟ್ಟಿದ್ದೀಯೋ ಏನು ॥೨॥ ತದ್ವಾಕ್ಯಂ-ಆ ಮಾತನ್ನು. ಶ್ರುತ್ವಾ-ಕೇಳಿ, ಲಕ್ಷ್ಮಣಃ-ಲಕ್ಷ್ಮಣನು, ತದಾ-ಆ ಕಾಲದಲ್ಲಿ, ಹಿತಂ-ಹಿತವಾದ, ಪ್ರಾಪ್ತಕಾಲಂ-ಹೊಂದಲ್ಪಟ್ಟಕಾಲವುಳ್ಳ, ವಾಕ್ಯಂ-ಮಾತಿನ

ಈ ವ್ಯಸನವು ಸಂಭವಿಸಿತು ॥೪೭॥ ಎಲೋ ಎಲೋ,ಲಕ್ಷ್ಮಣನೇ! ಸರ್ವಭೂತಂಗಳಲ್ಲಿಯೂ ಕಾಲಶಕ್ತಿಯೇಪ್ರಬಲವಾಗಿ ನಡೆಯುವದು, ನಿನಿಗೂ ನನಿಗೂಸಹಾ ಸಂಭವಿಸಿರುವ ಈ ವ್ಯಸನವನ್ನು ನೋಡುವವನಾಗೆಂದು ಸಮಸ್ತ ಭೂತಗಳಲ್ಲಿಯೂ ಅದೃಷ್ಟರೂಪವಾದ ಕಾಲಪುರುಷನಿಗೆ ಪ್ರಯಾಸವೆಂಬದಿಲ್ಲವೇ ಇಲ್ಲ; ರಣರಂಗದಲ್ಲಿ ಕಡುವೀರರಾಗಿಯೂ, ಬಲವಂತರಾಗಿಯೂ, ಶಸ್ತ್ರಾಸ್ತ್ರಂಗಳಲ್ಲಿ ನಿಪುಣರಾಗಿಯೂ ಇರುವ ಪುರುಷರೂ ಕೂಡಾಕಾಲದಿಂದ ತಿರಸ್ಕಾರಂ ಗೈಯ್ಯಲ್ಪಟ್ಟವರಾಗಿ, ಸೈಕತದಿಂದ ಮಾಡಲ್ಪಟ್ಟ ಸೇತುವಿನಂತೆ ಹೋಗಲಾಡಿಸಲ್ಪಡುವರೆಂದು, ಮಹಾ ಪರಾಕ್ರಮ ಶಾಲಿಯಾದ ಶ್ರೀರಾಮನು ಅತಿಶಯವಾದ ಸಾಮರ್ಥವುಳ್ಳ ಲಕ್ಷ್ಮಣನಿಗೆ ಪೇಳಿ, ತಾನು ಮನದಲ್ಲಿ ಸ್ಥಿರಬುದ್ಧಿಯಂ ಗೈದನು ॥೫೧॥-*ಆರಣ್ಯಕಾಂಡದಲ್ಲಿನ ೬೯ನೆಯ ಸರ್ಗಂ ಮುಗಿದುದು*-

ಈ ರೀತಿಯಾಗಿ ಆ ಮಾರ್ಗದಲ್ಲಿ ಪೋಗುತಲಿರುವ ಆ ರಾಮಲಕ್ಷ್ಮಣರೀರ್ವರು ಕಬಂಧನತೋಳುಗಳೆಂಬ ಪಾಶಂಗಳಿಂದ ಬಂಧನವನ್ನೈದಿದವರಾಗಲೂ,ಆ ಕಬಂಧನು ಅವರೀರ್ವರಂ ಕುರಿತು ನುಡಿವನದೆಂತೆನೆ ॥೧॥ ಎಲೈ ಕ್ಷತ್ರಿಯೋತ್ತಮರೇ! ಕ್ಷುಧಾತುರನಾದ ನನ್ನಂ ನೋಡಿಯೂ ಸಹಾ ನೀವೀರ್ವರು ಯಾಕೆ ತೂಷ್ಣೀಂ ಭೂತರಾಗಿ ನಿಂತಿದ್ದೀರಿ?ದೈವಾಧೀನದಿಂದ ನೀವುಗಳು ನನ್ನ ಆಹಾರ್ಥವಾಗಿ ನಿಯಮಿಸಲ್ಪಟ್ಟವರಾದಿರಿ, ನಿಮಿಗೆ ಬುದ್ಧಿ ಇಲ್ಲವೇ ಏನು? ಎಲ್ಲಿಯಾದರೂ ಓಡಿಹೋಗುವವರಾಗೆಂದು ನುಡಿದವನಾಗಲೂ, ಆ ಮಾ

ಮೆಕೃತಲಕ್ಷಣಃ ॥೩॥ ತ್ವಾಂಚಮಾಂಚಪುರಾತೂರ್ಣಮಾದತ್ತೇ ರಾಕ್ಷಸಾಧಮಃ । ತಸ್ಮಾದಸಿಭ್ಯಾಮಸ್ಯಾಶುಬಾಹೂ ಛಿಂದಾವಹೈಗುರೂ ॥೪॥ ಭೀಷಣೋಯಂಮಹಾಕಾಯೋರಾಕ್ಷಸೋಭುಜವಿಕ್ರಮಃ । ಲೋಕಂಹ್ಯತಿಜಿತಂಕೃತ್ವಾಹ್ಯಾವಾಂಹಂತುಮಿಹೇಚ್ಛತಿ ॥೫॥ ನಿಶ್ಚೇಷ್ಟಾನಾಂವಧೋರಾಜನ್ಕುತ್ಸಿತೋಜಗತೀಪತೇಃ । ಕ್ರತುಮಧ್ಯೋಪನೀತಾನಾಂಪಶೂನಾಮಿವರಾಘವ । ಏತತ್ಸಂಜಲ್ಪಿತಂಶ್ರುತ್ವಾತಯೋಃಕ್ರುದ್ಧಸ್ತುರಾಕ್ಷಸಃ । ವಿದಾರ್ಯಾಸ್ಯಂತದಾರೌದ್ರಸ್ತೌಭಕ್ಷಯಿತುಮಾರಭತ್ ॥೭॥ ತತಸ್ತೌದೇಶಕಾಲಜ್ಞೌಖಡ್ಗಾಭ್ಯಾಮೇವರಾಘವೌ । ಅಚ್ಛಿಂದತಾಂಸುಸಂಹೃಷ್ಟೌಬಾಹೂತಸ್ಯಾಂಸದೇಶತಃ ॥೮॥ ದಕ್ಷಿಣೋದಕ್ಷಿಣಂಬಾಹುಮಸಕ್ತಮಸಿನಾತತಃ । ಚಿಚ್ಛೇದರಾಮೋವೇಗೇನಸವ್ಯಂವೀರಸ್ತುಲಕ್ಷ್ಮಣಃ ॥

ನ್ನು, ರಾಮಂಪ್ರತಿ-ಶ್ರೀರಾಮನಂಕುರಿತು, ಆರ್ತಿಂ-ದುಃಖವನ್ನು, ಸಮಾಪನ್ನಃ-ಹೊಂದಿದವನಾಗಿ, ವಿಕ್ರಮೇ-ಪರಾಕ್ರಮದಲ್ಲಿ, ಕೃತಲಕ್ಷಣಃ-ಮಾಡಲ್ಪಟ್ಟ ಪ್ರಯತ್ನವುಳ್ಳವನಾಗಿ, ಉವಾಚ-ಹೇಳಿದನು ॥೩॥ ರಾಕ್ಷಸಾಧಮಃ-ರಕ್ಕಸರೊಳಗೆ ನೀಚನಾದ ಈ ಕಬಂಧನು, ತ್ವಾಂಚ-ನಿನ್ನನ್ನೂ, ಮಾಂಚ-ನನ್ನನ್ನೂ, ತೂರ್ಣಂ-ಜಾಗ್ರತೆಯಾಗಿ, ಪುರಾಆದತ್ತೇ-ಗ್ರಹಿಸುವವನಾಗುವನು, ತಸ್ಮಾತ್-ಆದಕಾರಣ. ಅಸಿಭ್ಯಾಂ-ಕತ್ತಿಗಳಿಂದ, ಅಸ್ಯ-ಈ ರಕ್ಕಸನ, ಗುರೂ-ದೊಡ್ಡವವಾದ, ಬಾಹೂ-ಭುಜಗಳನ್ನು, ಆಶು-ಜಾಗ್ರತೆಯಾಗಿ, ಛಿಂದಾವಹೈ-ಛೇದಿಸಿಬಿಡೋಣ ॥೪॥ ಮಹಾಕಾಯಃ-ದೊಡ್ಡದಾದ ಶರೀರವುಳ್ಳ, ಭೀಷಣಃ-ಭಯಂಕರನಾದ, ಅಯಂರಾಕ್ಷಸಃ-ಈ ರಕ್ಕಸನು, ಭುಜವಿಕ್ರಮಃ-ಭುಜಗಳಲ್ಲೇ ಪರಾಕ್ರಮವುಳ್ಳವನಾದಕಾರಣ, ಲೋಕಂ-ಲೋಕವನ್ನು, ಅತಿಜಿತಂ-ಬಹಳ ಜೈಸಲ್ಪಟ್ಟದ್ದನ್ನಾಗಿ, ಕೃತ್ವಾ-ಮಾಡಿ. ಇಹ-ಈಗ, ಆವಾಂ-ನಮ್ಮಗಳನ್ನು, ಹಂತುಂ-ಕೊಲ್ಲುವದಕ್ಕಾಗಿ, ಇಚ್ಛತಿ-ಅಪೇಕ್ಷಿಸುತ್ತಾನಪ್ಪೇ ॥೫॥ ಹೇರಾಘವ-ಎಲೈ ಶ್ರೀರಾಮನೇ, ಹೇರಾಜನ್-ಎಲೈ ಅರಸೇ. ನಿಶ್ಚೇಷ್ಟಾನಾಂ-ಪ್ರತೀಕಾರಮಾಡುವದಕ್ಕೆ ಪ್ರಯತ್ನಮಾಡದಿರುವರ, ವಧಃ-ಸಂಹಾರವು, ಕ್ರತುಮಧ್ಯೋಪನೀತಾನಾಂ-ಯಜ್ಞದಮಧ್ಯಭಾಗದಲ್ಲಿ ಮತ್ತೊಂದು ಕಡೆಯಿಂದ ತೆಗೆದುಕೊಂಡು ಬರಲ್ಪಟ್ಟ, ಅಂದರೆ-ಕ್ರತುವಿಗೋಸ್ಕರ ಅಭಿಮಂತ್ರಣ ಮಾಡಲ್ಪಡದಿರುವ, ( ಯದ್ವಾ-ಕ್ರತುಮಧ್ಯೋಪನೀತಾನಾಂ-ಕ್ರತು-ಅಶ್ವಮೇಧ ಕ್ರತುವಿನ, ಮಧ್ಯ-ಮಧ್ಯದಲ್ಲಿ. ಉಪನೀತಾನಾಂ-ತೆಗೆದುಕೊಂಡು ಬರಲ್ಪಟ್ಟ, ಪಶೂನಾಮಿವ-ಪಶುಗಳಂತೆ, ಯದ್ವಾ-ಪಶೂನಾಮಿವ-ಆರಣ್ಯಕ ಪಶುಗಳಿಗಂತೆ, ವಧಃ-ಸಂಹಾರವು. ಜಗತೀಪತೇಃ-ಅರಸಿಗೆ, ಕುತ್ಸಿತಃ-ನಿಂದ್ಯವಾದದ್ದು. ॥೬॥ ಏತತ್-ಈ, ತಯೋಃ-ಆ ರಾಮಲಕ್ಷ್ಮಣರ, ಸಂಜಲ್ಪಿತಂ-ಮಾತಿನನ್ನು. ಶ್ರುತ್ವಾ-ಕೇಳಿ, ಕ್ರುದ್ಧಃ-ಕೋಪಗೊಂಡ, ರಾಕ್ಷಸಸ್ತು-ಕಬಂಧನಾದರೆ. ರೌದ್ರಃ-ಭಯಂಕರನಾಗಿ, ಆಸ್ಯಂ-ಬಾಯಿಯನ್ನು, ವಿದಾರ್ಯ-ದೊಡ್ಡದಾಗಿ ತೆರದು. ತದಾ-ಆ ಕಾಲದಲ್ಲಿ. ತೌ-ಆ ರಾಮಲಕ್ಷ್ಮಣರನ್ನು, ಭಕ್ಷಯಿತುಂ-ತಿನ್ನುವದಕ್ಕೆ. ಆರಭತ್-ಪ್ರಾರಂಭಿಸಿದನು ॥೭॥ ತತಃ-ಬಳಿಕ, ದೇಶಕಾಲಜ್ಞೌ-ಕಾಲದೇಶವರ್ತಮಾನಗಳನ್ನರಿತಿರುವ, ತೌರಾಘವೌ-ಆ ರಾಮಲಕ್ಷ್ಮಣರು, ಸುಸಂಹೃಷ್ಟೌ-ಸಂತೋಷಗೊಂಡವರಾಗಿ, ಖಡ್ಗಾಭ್ಯಾಮೇವ-ಕತ್ತಿಗಳಿಂದಲೇ, ತಸ್ಯ-ಆ ಕಬಂಧನ, ಬಾಹೂ-ಭುಜಗಳನ್ನು, ಅಂಸದೇಶತಃ-ಹೆಗಲುಗಳಲ್ಲಿ, ಅಚ್ಛಿಂದತಾಂ-ಕತ್ತರಿಸಿದರು ॥೮॥ ದಕ್ಷಿಣಃ-ದಕ್ಷಿಣ ದಿಕ್ಕಿನಲ್ಲಿರುವ, ( ಯದ್ವಾ-ದಕ್ಷಿಣಃ-ಸಮರ್ಥನಾದ ) ರಾಮಃ-ಶ್ರೀರಾಮನು, ತತಃ-ಬಳಿಕ. ಅಸಕ್ತಂ-ಸಂಬಂಧಿಸದಿರುವ, ದಕ್ಷಿಣಂ-ದಕ್ಷಿಣದಿಕ್ಕಿನಲ್ಲಿರುವ, . ) ಬಾಹುಂ-ಭುಜವನ್ನು, (ಅಂದರೆ-ಬಲಭುಜವನ್ನು) ಅಸಿನಾ-ಕತ್ತಿಯಿಂದ, ಚಿಚ್ಛೇದ-ಕತ್ತರಿಸಿದನು. ತತಃ-ಬಳಿಕ, ವೀರಃ-ಶೂರನಾದ, ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ಸವ್ಯಂ-ಎಡ

ತಂಕೇಳಿ ಲಕ್ಷ್ಮಣನು ಮಹಾ ದುಃಖವನ್ನೈದಿದವನಾದರೂ ಪರಾಕ್ರಮದಲ್ಲಿ ಪ್ರಯತ್ನಂ ಗೈಯ್ಯುವವನಾಗಿ, ಅಗ್ರಜನಾದ ಶ್ರೀರಾಮನಂ ಕುರಿತಿಂತೆಂದನು ॥೩॥ ಎಲೈ ಶೂರನಾದ ಶ್ರೀರಾಮನೇ! ಈ ರಾಕ್ಷಸನು ನಿನ್ನನ್ನೂ ನನ್ನನ್ನೂ ಸಹಾ ತ್ವರೆಯಿಂದ ಮುಂದು ಗ್ರಹಿಸುವವನಾಗುವನಾದಕಾರಣ, ನಾವೀರ್ವರು ಮಹಾ ದೀರ್ಘವಾದ ಇವನ ತೋಳುಗಳನ್ನು ನಮ್ಮ ಖಡ್ಗಂಗಳಿಂದ ವೇಗದಿಂ ಖಂಡ್ರಿಸುವಣ ॥೪॥ ಯಾಕಂದರೆ,—ಕಡುಭಯಂಕರನಾದ ಈ ದುಷ್ಟರಾಕ್ಷಸನು ಭುಜಗಳಲ್ಲಿಯೇ ಪರಾಕ್ರಮವುಳ್ಳವನು, ಲೋಕವನ್ನೆಲ್ಲ ಜಯಿಸಿದವನು, ಈಗ ನಮ್ಮಗಳನ್ನು ಕೊಲ್ಲಲಪೇಕ್ಷಿಸುತ್ತಾನೆ, ಆದರೆ,—ಪ್ರತಿಯಾಗಿ ಮಾಡುವದಕ್ಕೆ ಪ್ರಯತ್ನಂ ಗೈಯ್ಯದಿರುವ ಪುರುಷರವಧೆಯು ಅಶ್ವಮೇಧಾದಿ ಯಾಗಂಗಳ ಮಧ್ಯಕಾಲದಲ್ಲಿ ಮತ್ತೊಂದು ಕಡೆಯಿಂದ ತರಲ್ಪಟ್ಟದ್ದಾದ ಕಾರಣ ಅಭಿಮಂತ್ರಿಸಲ್ಪಡದಿರುವ ಪಶುವಿನ ವಧೆಯಂತೆ ಅರಸಿಗೆ ಬಹು ನಿಂದ್ಯವಾದದ್ದು (ಅಂದರೆ ನಾವುಗಳು ಇವನಿಂದ ಬಾಧಿಸಲ್ಪಟ್ಟವರಾಗಿ ಇವನಂ ಕೊಂದರೆ ನಮಗೇನು ಬಾಧಕವಿಲ್ಲದಿದ್ದರೆ ಬಾಧಕವೇಸರಿಯೆಂದುಭಾವವು) ॥೬॥ ಈ ರೀತಿಯಾಗಿ ಲಕ್ಷ್ಮಣನು ನಿರೂಪಿಸಿದ ವಾಕ್ಯವಂ ಕೇಳಿ ಆ ಕಬಂಧನು ಕಡುಕೋಪವುಳ್ಳವನಾಗಿ, ತನ್ನ ಬಾಯಂ ತೆರದು, ಆ ರಾಮಲಕ್ಷ್ಮಣರಂಭಕ್ಷಿಸಲಾರಂಭಿಸಿದನು ॥೭॥ ಅನಂತರದಲ್ಲಿ ದೇಶಕಾಲವರ್ತಮಾನಂಗಳಂತಿಳಿದಿರುವ ಆ ರಾಮಲಕ್ಷ್ಮಣರು ಮಹಾ ಸಂತೋಷವುಳ್ಳವರಾಗಿ, ತಮ್ಮತಮ್ಮ ಖಡ್ಗಗಳಿಂದ ಆ ವಿರಾಧನ ಭುಜಗಳನ್ನು ಭುಜಶಿರಸ್ಸುಗಳಲ್ಲಿ ಈ ಪ್ರಕಾರದಿಂ ಕತ್ತರಿಸಿದರು, ಹ್ಯಾಗಂದರೆ,—ದಕ್ಷಿಣಭಾಗದಲ್ಲಿ ನಿಂತಿರುವ ಮಹಾ ಸಮರ್ಥನಾದ ಶ್ರೀರಾಮನು, ಬಲಭಾಗದಲ್ಲಿರುವ ಭುಜವನ್ನು ಛೇದಿಸಿದಬಳಿಕ, ಶೂರನಾದ ಲಕ್ಷ್ಮಣ

ಸಪಪಾತಮಹಾಬಾಹುಶ್ಛಿನ್ನಬಾಹುರ್ಮಹಾಸ್ವನಃ । ಖಂಚಗಾಂಚದಿಶಶ್ಚೈವನಾದಯನ್ಜಲದೋಯಥಾ ॥೧೦॥
ಸನ್ನಿಕೃತ್ತೌಭುಜೌ ದೃಷ್ಟ್ವಾಶೋಣಿತೌಘಪರಿಪ್ಲುತಃ । ದೀನಃಪಪ್ರಚ್ಛತೌವೀರೌಕೌಯುವಾಮಿತಿದಾನವಃ ॥೧೧॥
ಇತಿತಸ್ಯಬ್ರುವಾಣಸ್ಯಲಕ್ಷ್ಮಣಶ್ಶುಭಲಕ್ಷಣಃ । ಶಶಂಸರಾಘವಂತಸ್ಯಕಬಂಧಸ್ಯಮಹಾತ್ಮನಃ ॥೧೨॥ ಅಯಮಿ
ಕ್ಷ್ವಾಕುದಾಯಾದೋರಾಮೋನಾಮಜನೈಶ್ಶ್ರುತಃ । ಅಸ್ಯೈವಾವರಜಂವಿದ್ಧಿಭ್ರಾತರಂಮಾಂಚಲಕ್ಷ್ಮಣಂ ।೧೩। ಅಸ್ಯ
ದೇವಪ್ರಭಾವಸ್ಯವಸತೋವಿಜನೇವನೇ । ರಕ್ಷಸಾಪಹೃತಾಪತ್ನೀಯಾಮಿಚ್ಛಂತಾವಿಹಾಗತೌ ॥೧೪॥ ತ್ವಂತುಕೋವಾಕಿ
ಮರ್ಥಂವಾಕಬಂಧಸದೃಶೋವನೇ । ಆಸ್ಯೇನೋರಸಿದೀಪ್ತೇನಭಗ್ನಜಂಘೋವಿವೇಷ್ಟಸೇ॥೧೫॥ ಏವಮುಕ್ತಃಕಬಂಧಸ್ತು
ಲಕ್ಷ್ಮಣೇನೋತ್ತರಂವಚಃ । ಉವಾಚಪರಮಪ್ರೀತಸ್ತದಿಂದ್ರವಚನಂಸ್ಮರನ್ ॥೧೬॥ ಸ್ವಾಗತಂವಾಂನರವ್ಯಾಘ್ರೌದಿ

ಭುಜವನ್ನು, ವೇಗೇನ-ವೇಗದಿಂದ, ಚಿಚ್ಛೇದ-ಕತ್ತರಿಸಿದನು ॥೯॥ ಮಹಾಬಾಹುಃ-ದೊಡ್ಡ ಭುಜಗಳುಳ್ಳ, ಸಃ-ಆ ಕಬಂಧನು. ಛಿನ್ನಬಾಹುಃ-ಕತ್ತರಿಸ ಲ್ಪಟ್ಟ ಭುಜಗಳುಳ್ಳವನಾಗಿ, ಮಹಾಸ್ವನಃ-ಬಹಳ ದೊಡ್ಡಧ್ವನಿಯುಳ್ಳವನಾಗಿ, ಜಲದೋಯಥಾ-ಮೇಘದಂತೆ, ಖಂಚ-ಅಂತರಿಕ್ಷವನ್ನು, ಗಾಂಚ-ಭೂ ಮಿಯನ್ನೂ, ದಿಶಶ್ಚೈವ-ದಿಕ್ಕುಗಳನ್ನೂ, ನಾದಯನ್-ಧ್ವನಿಗೊಳಿಸುತ್ತಿರುವನಾಗಿ, ಪಪಾತ-ಬಿದ್ದನು ॥೧೦॥ ದಾನವಃ-ಆ ರಾಕ್ಷಸನು. ನಿಕೃತ್ತೌ-ಕತ್ತರಿಸಲ್ಪಟ್ಟ, ಭುಜೌ-ಭುಜಗಳನ್ನು ದೃಷ್ಟ್ವಾ-ಕಂಡು, ಶೋಣಿತೌಘಪರಿಪ್ಲುತಃ-ರಕುತಪ್ರವಾಹಗಳಿಂ ತೋಯಿಸಲ್ಪಟ್ಟವನಾಗಿ. ವೀರೌ-ಶೂರ ರಾದ, ತೌ-ಆ ರಾಮಲಕ್ಷ್ಮಣರನ್ನು. ಯುವಾಂ-ನೀವುಗಳು, ಕಾವಿತಿ-ಯಾರೂ ಎಂದು. ಪಪ್ರಚ್ಛ-ಕೇಳಿದನು ॥೧೧॥ ಇತಿ-ಈ ಪರಿಯಾಗಿ, ಬ್ರುವಾ ಣಸ್ಯ-ಮಾತನಾಡುತ್ತಿರುವ, ಮಹಾತ್ಮನಃ-ಮಹಾ ಮನಸ್ವಿಯಾದ, ತಸ್ಯಕಬಂಧಸ್ಯ-ಆ ಕಬಂಧನಿಗೆ. ಶುಭಲಕ್ಷಣಃ-ಮಂಗಳಕರವಾದ ಲಕ್ಷಣಗಳು ಳ್ಳ, ಲಕ್ಷ್ಮಣಃ-ಲಕ್ಷ್ಮಣನು. ರಾಘವಂ-ಶ್ರೀರಾಮನನ್ನು. ಶಶಂಸ-ಹೇಳಿದನು ॥೧೨॥ ಅಯಂರಾಮಃ-ಈ ರಾಮನು, ಇಕ್ಷ್ವಾಕುದಾಯಾದಃ-ಇ ಕ್ಷ್ವಾಕುವಂಶದಲ್ಲಿ ಜನಿಸಿದವನು. ರಾಮೋನಾಮ-ರಾಮನೆಂದು ಪ್ರಸಿದ್ಧನಾಗಿ. ಜನೈಃ-ಜನಗಳಿಂದ. ಶ್ರುತಃ-ಕೇಳಲ್ಪಟ್ಟವನು ಅಸ್ಯೈವ-ಈತನಿಗೆನೆ, ಅವ ರಜಂ-ತಮ್ಮನನ್ನಾಗಿ, ಭ್ರಾತರಂ-ಕನಿಷ್ಠಭ್ರಾತೃವಾದ. ಮಾಂ-ನನ್ನನ್ನು. ಲಕ್ಷ್ಮಣಂಚ-ಲಕ್ಷ್ಮಣನನ್ನಾಗಿ, ವಿದ್ಧಿ-ತಿಳಿದುಕೋ ॥೧೩॥ ದೇವ-ದೇವ ತೆಗಳ. ಪ್ರಭಾವಸ್ಯ-ಮಹಾತ್ಮ್ಯದಂತೆ ಮಹಾತ್ಮ್ಯವುಳ್ಳ, ವಿಜನೇ-ಜನವರ್ಜಿತವಾದ. ವನೇ-ಅರಣ್ಯದಲ್ಲಿ, ವಸತಃ-ಇರುತ್ತಿರುವ, ಅಸ್ಯ-ಈ ಶ್ರೀರಾ ಮನ, ಪತ್ನೀ-ಹೆಂಡತಿಯು, ರಕ್ಷಸಾ-ರಕ್ಕಸನಿಂದ, ಅಪಹೃತಾ-ಅಪಹರಿಸಿಕೊಂಡು ಹೋಗಲ್ಪಟ್ಟಳು, ಯಾಂ-ಯಾವ ಸೀತಾದೇವಿಯನ್ನು, ಇ ಚ್ಛಂತೌ-ಅಪೇಕ್ಷಿಸುತ್ತಿರುವರಾಗಿ. ಇಹ-ಇಲ್ಲಿಗೆ, ಆಗತೌ-ಬಂದೆವೋ ॥೧೪॥ ತ್ವಂತು-ನೀನಾದರೋ, ಕೋವಾ-ಯಾರೋ, ವನೇ-ಅರಣ್ಯದಲ್ಲಿ, ಕಬಂಧ ಸದೃಶಃ-ಮೊಂಡಯಿಲ್ಲದ ಶರೀರಕ್ಕೆ ಸಮವಾದವನಂತೆ, ಕಿಮರ್ಥಂ-ಯಾತಕ್ಕೆ. ಉರಸಿ-ಎದೆಯಲ್ಲಿ, ದೀಪ್ತೇನ-ಹೊಳೆಯುತ್ತಿರುವ, ಆಸ್ಯೇನ-ಬಾಯಿ ಯಿಂದ, ಭಗ್ನಜಂಘಃ-ಮುರಿದ ಮೊಳಕಾಲುಗಳುಳ್ಳವನಾಗಿ, ವಿವೇಷ್ಟಸೇ-ಸಂಚರಿಸುತ್ತೀಯಿ ॥೧೫॥ ಏವಂ-ಈಪರಿಯಾಗಿ, ಲಕ್ಷ್ಮಣೇನ-ಲಕ್ಷ್ಮಣ ಸ್ವಾಮಿಯಿಂದ, ಉಕ್ತಃ-ಹೇಳಲ್ಪಟ್ಟ, ಕಬಂಧಸ್ತು-ಕಬಂಧನಾದರೆ, ಪರಮಪ್ರೀತಃ-ಬಹಳ ಸಂತೋಷಗೊಂಡವನಾಗಿ, ತದಿಂದ್ರವಚನಂ-ಆ ದೇವೇಂದ್ರ ನ ಮಾತಿನನ್ನು, ಸ್ಮರನ್-ಸ್ಮರಿಸಿಕೊಂಡವನಾಗಿ, ಉವಾಚ-ಹೇಳಿದನು ॥೧೬॥ ಹೇನರವ್ಯಾಘ್ರೌ-ಎಲೈ ಪುರುಷಶ್ರೇಷ್ಠರೇ, ಸ್ವಾಗತಂ-ಸುಖಾಗಮನ

ನು ಯೆಡಭಾಗದಲ್ಲಿರುವ ಭುಜವನ್ನು ಕತ್ತರಿಸಿದನು ।೯॥ ಅನಂತರದಲ್ಲಿ ಮಹಾ ಭುಜಗಳುಳ್ಳ ಆ ಕಬಂಧನು ಛೇತಿಸಲ್ಪಟ್ಟ ಭುಜಗಳುಳ್ಳವನಾಗಿ ಮೇಘದಂತೆ ಮಹಾ ಘೋಷೆಯಂ ಗೈಯ್ಯುತ್ತಾ, ಗಗನವನ್ನೂ ಭೂಮಿ ಯನ್ನೂ ದಿಕ್ಕುಗಳನ್ನೂ ಸಹಾ ಶಬ್ದಾಯಮಾನಂ ಗೈಯ್ಯುತ್ತಾ ನೆಲದಲ್ಲಿ ಬಿದ್ದು, ಛೇದಿಸಲ್ಪಟ್ಟ ತನ್ನ ತೋಳು ಗಳಂ ಕಂಡು, ಬಹು ಸಂತಾಪವನ್ನೈದಿದವನಾಗಿ, ರಕುತಪ್ರವಾಹದಿಂದ ತೋಯಿಸಲ್ಪಟ್ಟ ಶರೀರವುಳ್ಳವನಾಗಿ, ಆ ರಾಮಲಕ್ಷ್ಮಣರಂ ಕುರಿತು, ನೀವ್ಯಾರೆಂದು ಕೇಳಲೂ, ಮಹಾ ಲಕ್ಷಣವಂತನಾದ ಲಕ್ಷ್ಮಣನು, ಆ ವಿರಾಧನಿಗೆ ಹೇಳುವನದೆಂತೆನೆ,—।೧೨। ಎಲೈ ರಾಕ್ಷಸನೇ! ಈತನು ಇಕ್ಷ್ವಾಕುವಂಶದಲ್ಲಿ ಉತ್ಪನ್ನನಾದವನು, ಶ್ರೀರಾಮನೆಂ ದು ಪ್ರಖ್ಯಾತನು, ನಾನೀತನಿಗೆ ತಮ್ಮನಾದವನು, ಎನ್ನನ್ನು ಲಕ್ಷ್ಮಣನೆಂದು ಕರೆಯುವರು ।೧೩॥ ದೇವತೆಗಳಂ ತೆ ಮಹಾ ಪ್ರಭಾವವುಳ್ಳ ಮತ್ತೂ, ವನದಲ್ಲಿ ವಾಸಂಗೈಯ್ಯುತಲಿರುವ ಈತನ ಹೆಂಡತಿಯು ರಾಕ್ಷಸನಿಂದಪಹರಿ ಸಲ್ಪಟ್ಟಳು, ಆಕೆಯನ್ನು ಹುಡುವದಕ್ಕಾಗಿ ಇಲ್ಲಿಗೆ ಬಂದವರಾದೆವು ।೧೪। ನೀನ್ಯಾರು? ಮೊಂಡೆಯಿಲ್ಲದಿರುವ ಶ ರೀರಕ್ಕೆ ಸಮಾನವಾದ ದೇಹವುಳ್ಳವನಾಗಿ ಈ ಅರಣ್ಯದಲ್ಲಿ ಯಾಕೆ ಸಂಚಾರವಂ ಮಾಡುವವನಾಗಿದ್ದೀ, ವಕ್ಷಸ್ಥ ಲದಲ್ಲಿ ನಿನ್ನ ಬಾಯಿಇರುವದಾಗಿಧೆ ಮತ್ತೂ ನಿನ್ನ ಮೊಳಕಾಲುಗಳು ಮುರಿಯಲ್ಪಟ್ಟವೆ; ಎಂದು ಲಕ್ಷ್ಮಣನು ಪ್ರ ಶ್ನೆಯಂ ಗೈದವನಾಗಲೂ, ಆ ಕಬಂಧನು ಮಹಾ ಸಂತೋಷವನ್ನೈದಿದದನಾಗಿ, ಪೂರ್ವದಲ್ಲಿ ದೇವೇಂದ್ರನು ತನಗೆ ಪೇಳಿದವಾಕ್ಯವಂ ಜ್ಞಾಪಿಸಿಕೊಂಡವನಾಗಿ ।೧೬॥ ಎಲೈ ಪುರುಷೋತ್ತಮರಾದ ರಾಮಲಕ್ಷ್ಮಣರೇ! ದೈ

ಷ್ಟ್ಯಾಽಹಂ ಪಶ್ಯಾಮಿ ವಾಂ ಚಾಪಿ ದಿಷ್ಟ್ಯಾಽಹಂ ಪಶ್ಯಾಮಿ ವಾಂ ಚಾಪ್ಯಹಂ । ದಿಷ್ಟ್ಯಾ ಚೇಮೌ ನಿಕೃತ್ತೌ ಮೇ ಯುವಾಭ್ಯಾಂ ಬಾಹುಬಂಧನೌ ॥೧೭॥ ವಿರೂಪಂ ಯಚ್ಚ ಮೇ ರೂಪಂ ಪ್ರಾಪ್ತಂ ಹ್ಯವಿನಯಾದ್ಯಥಾ । ತನ್ಮೇ ಶೃಣು ನರವ್ಯಾಘ್ರ ತತ್ತ್ವತಶ್ಶಂಸತಸ್ತವ ॥ **ಸಪ್ತತಿತಮಸ್ಸರ್ಗಃ**

ಪುರಾ ರಾಮ ಮಹಾಬಾಹೋ ಮಹಾಬಲಪರಾಕ್ರಮ । ರೂಪಮಾಸೀನ್ಮಮಾಚಿಂತ್ಯಂ ತ್ರಿಷು ಲೋಕೇಷು ವಿಶ್ರುತಂ ॥ ಯಥಾ ಸೋಮಸ್ಯ ಶಕ್ರಸ್ಯ ಸೂರ್ಯಸ್ಯ ಚ ಯಥಾ ವಪುಃ ।೧॥ ಸೋಽಹಂ ರೂಪಮಿದಂ ಕೃತ್ವಾ ಲೋಕವಿತ್ರಾಸನಂ ಮಹತ್ ॥ ಋಷೀನ್ವನಗತಾನ್ರಾಮ ತ್ರಾಸಯಾಮಿ ತತಸ್ತತಃ ।೨॥ ತತಸ್ಸ್ಥೂಲಶಿರಾ ನಾಮ ಮಹರ್ಷಿಃ ಕೋಪಿತೋ ಮಯಾ । ಸಂಚಿನ್ವನ್ವಿವಿಧಂ ವನ್ಯಂ ರೂಪೇಣಾನೇನ ಧರ್ಷಿತಃ ॥೩॥ ತೇನಾಹಮುಕ್ತಃ ಪ್ರೇಕ್ಷ್ಯೈವಂ ಘೋರಶಾಪಾಭಿಧಾಯಿನಾ ॥ ಏತದೇವ ನೃಶಂಸಂ ತೇ ರೂಪಮಸ್ತು ವಿಗರ್ಹಿತಂ ।೪॥ ಸ ಮಯಾ ಯಾಚಿತಃ ಕ್ರುದ್ಧಶ್ಶಾಪಸ್ಯಾಂತೋ ಭವೇದಿತಿ ॥ ಅಭಿಶಾಪಕೃತಸ್ಯೇತಿ ತೇನೇದಂ ಭಾಷಿತಂ ವಚಃ ।೫॥ ಯದಾ ಛಿತ್ತ್ವಾ ಭುಜೌ ರಾಮಸ್ತ್ವಾಂ ದಹೇದ್ವಿಜನೇ ವನೇ ॥ ತದಾ ತ್ವಂ

---

ವೇ, ದಿಷ್ಟ್ಯಾ-ದೈವಾಧೀನದಿಂದ, ವಾಂಚಾಪಿ-ನಿಮ್ಮಗಳನ್ನು, ಅಹಂ-ನಾನು, ಪಶ್ಯಾಮಿ-ಕಂಡೆನು, ಮೇ-ನನ್ನ, ಇಮೌ ಬಾಹುಬಂಧನೌ-ಈ ಭುಜಗಳೆಂಬ ಪಾಶಗಳು, ಯುವಾಭ್ಯಾಂ-ನಿಮ್ಮಗಳಿಂದ, ದಿಷ್ಟ್ಯಾ ಚ-ದೈವಾಧೀನದಿಂದ, ನಿಕೃತ್ತೌ-ಕತ್ತರಿಸಲ್ಪಟ್ಟವು, ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ. ಮೇ-ನನ್ನ. ರೂಪಂ-ಆಕಾರವು, ವಿರೂಪಂ-ವಿಕಾರ ರೂಪವುಳ್ಳದ್ದು, ಯಚ್ಚ-ಯಾವದುಂಟೋ, ಮೇ-ನನಗೆ. ತತ್-ಆ ರೂಪವು, ಅವಿನಯಾತ್-ದೌರ್ಜನ್ಯದಿಂದ, ಯಥಾಪ್ರಾಪ್ತಂ-ಹ್ಯಾಗೆ ಪ್ರಾಪ್ತವಾಯಿತೋ ತತ್ತ್ವತಃ-ಯಥಾರ್ಥವಾಗಿ. ತವ-ನಿನಗೆ ಶಂಸತಃ-ಪೇಳುತ್ತಿರುವ ಮೇ-ನನ್ನಿಂದ, ತತ್-ಅದನ್ನು, ಶೃಣು-ಕೇಳು ॥೧೮॥ —*** ಇತಿಶ್ರೀಮದಾರಣ್ಯಕಾಂಡೇ-ಸಪ್ತತಿತಮಸ್ಸರ್ಗಃ ***—

ಹೇರಾಮ-ಎಲೈ ಶ್ರೀರಾಮನೇ, ಹೇಮಹಾಬಾಹೋ-ಎಲೈ ಮಹಾ ಭುಜಪರಾಕ್ರಮಶಾಲಿಯೇ, ಹೇಮಹಾಬಲಪರಾಕ್ರಮ-ಎಲೈ ಬಹಳವಾದ ಸಾಮರ್ಥ್ಯದಿಂ ಶತ್ರುಸಂಹಾರಕನೇ, ಮಮ-ನನಗೆ, ಪುರಾ-ಪೂರ್ವದಲ್ಲಿ. ತ್ರಿಷು ಲೋಕೇಷು-ಮೂರು ಲೋಕಗಳಲ್ಲಿ, ವಿಶ್ರುತಂ-ಪ್ರಸಿದ್ಧವಾದ, ಅಚಿಂತ್ಯಂ-ಚಿಂತಿಸಲಸಾಧ್ಯವಾದ, ರೂಪಂ-ರೂಪವು, ಸೋಮಸ್ಯ-ಚಂದ್ರನಿಗೂ, ಶಕ್ರಸ್ಯ-ದೇವೇಂದ್ರನಿಗೂ. ಸೂರ್ಯಸ್ಯಚ-ಸೂರ್ಯನಿಗೂ, ವಪುಃ-ಶರೀರವು, ಯಥಾಯಥಾ-ಹ್ಯಾಗೆಹ್ಯಾಗೋ, ತಥಾ-ಹಾಗೆಯೇ, ಆಸೀತ್-ಆಯಿತು ॥೧॥ ಸೋಽಹಂ-ನಾನು. ಲೋಕವಿತ್ರಾಸನಂ-ಜನರಿಗೆ ಭಯಂಕರವಾದ, ಮಹತ್-ದೊಡ್ಡದಾದ, ಇದಂರೂಪಂ-ಈ ರೂಪವನ್ನು, ಕೃತ್ವಾ-ಮಾಡಿ, ಹೇರಾಮ-ಎಲೈ ಶ್ರೀರಾಮನೇ. ತತಸ್ತತಃ-ಅಲ್ಲಲ್ಲಿ. ವನಗತಾನ್-ವನವಾಸಿಗಳಾದ, ಋಷೀನ್-ಋಷಿಗಳನ್ನು, ತ್ರಾಸಯಾಮಿ-ಭಯಗೊಳಿಸಿದೆನು ॥೨॥ ತತಃ-ಬಳಿಕ, ಸ್ಥೂಲಶಿರಾನಾಮ-ಸ್ಥೂಲಶಿರಸ್ಕನೆಂಬ. ಮಹರ್ಷಿಃ-ದೊಡ್ಡ ಋಷಿಯು. ವಿವಿಧಂ-ನಾನಾಬಗೆಯಾದ. ವನ್ಯಂ-ವನದಲ್ಲಿನ ಆಹಾರವನ್ನು, ಸಂಚಿನ್ವನ್-ಹುಡುಕುತ್ತಿರುವನಾಗಿ, ಅನೇನರೂಪೇಣ-ಈ ರೂಪದಿಂದ. ಮಯಾ-ನನ್ನಿಂದ, ಕೋಪಿತಃ-ಕೋಪಗೊಳಿಸಲ್ಪಟ್ಟನು, ಧರ್ಷಿತಶ್ಚ-ತಿರಸ್ಕೃತನೂ ಆದನು ॥೩॥ ತೇ-ನಿನಗೆ, ಏತದೇವರೂಪಂ-ಈ ರೂಪವು. ನೃಶಂಸಂ-ಘಾತುಕವಾದ್ದಾಗಿ, ವಿಗರ್ಹಿತಂ-ನಿಂದಿತವಾದದ್ದು. ಅಸ್ತು-ಆಗಲಿ, ಇತ್ಯೇವಂ-ಈಪರಿಯಾಗಿ, ಘೋರಶಾಪಾಭಿಧಾಯಿನಾ-ಕ್ರೂರವಾದ ಶಾಪವಂ ಪೇಳುತ್ತಿರುವ, ತೇನ-ಆ ಸ್ಥೂಲಶಿರಸ್ಕನಿಂದ. ಪ್ರೇಕ್ಷ್ಯ-ಕಂಡು, ಅಹಂ-ನಾನು, ಉಕ್ತಃ-ಪೇಳಲ್ಪಟ್ಟೆನು ॥೪॥ ಕ್ರುದ್ಧಃ-ಕೋಪಿಷ್ಠನಾದ, ಸಃ-ಆ ಸ್ಥೂಲಶಿರಸ್ಕನು. ಮಯಾ-ನನ್ನಿಂದ ಯಾಚಿತಃ-ಪ್ರಾರ್ಥಿಸಲ್ಪಟ್ಟವನಾಗಿ, ಅಭಿಶಾಪಕೃತಸ್ಯ-ತಿರಸ್ಕಾರದಿಂ ಮಾಡಲ್ಪಟ್ಟ. ಶಾಪಸ್ಯ-ಶಾಪಕ್ಕೆ, ಅಂತಃ-ತುದಿಯು. ಭವೇತ್-ಆಗುವದು, ಇತಿ-ಇಂತೆಂದು. ತೇನ-ಆ ಸ್ಥೂಲಶಿರಸ್ಕನೆಂಬ ಋಷಿಯಿಂದ, ಇದಂವಚಃ-ಈ ಮಾತು, ಭಾಷಿತಂ-ಪೇಳಲ್ಪಟ್ಟಿತು ॥೫॥ ಯದಾ-ಯಾವಕಾಲದಲ್ಲಿ, ರಾಮಃ-ಶ್ರೀರಾಮನು, ಭುಜೌ-ಭುಜಗಳನ್ನು. ಛಿತ್ವಾ-ಛೇದಿಸಿ, ವಿಜನೇ-ಜನರಹಿತವಾದ, ವನೇ-ಅರಣ್ಯದಲ್ಲಿ. ತ್ವಾಂ-

---

ವಾಧೀನದಿಂದ ನಾನು ನಿಮ್ಮಗಳನ್ನು ನೋಡಿದೆನು, ಈ ನನ್ನ ತೋಳುಗಳು ನಿಮ್ಮಿಂದ ದೈವಗತಿಯಿಂದ ಛೇದಿಸಲ್ಪಟ್ಟವು, ಈ ನನ್ನ ರೂಪವು ವಿಕಾರವನ್ನೈದುವದಕ್ಕೆ ನನ್ನ ದೌರ್ಜನ್ಯವೇ ಕಾರಣವಾಯಿತು ಅದನ್ನು ಪೇಳುವವನಾಗು ॥೧೮॥ —* ಆರಣ್ಯಕಾಂಡದಲ್ಲಿನ ೭೦ನೇ ಸರ್ಗಂ ಮುಗಿದುದು *—

ಎಲೈ ಮಹಾ ಭುಜಪರಾಕ್ರಮಶಾಲಿಯಾದ ಶ್ರೀರಾಮನೇ! ಲೋಕದಲ್ಲಿ ಮಹಾ ಪ್ರಸಿದ್ಧವಾದ ಸೂರ್ಯಚಂದ್ರರರೂಪವು ಎಂತು ಬೆಳಗುತಲಿರ್ಧೆಯೋ ಅಂತು ನನ್ನ ರೂಪವೂ ಸಹಾ ಪೂರ್ವದಲ್ಲಿ ಬಹು ಪ್ರಕಾಶಿಸುತಲಿತ್ತು ॥೧॥ ಅಂಥಾ ನಾನು ಜನಗಳಿಗೆ ಭೀತಿಯನ್ನುಂಟುಮಾಡುವ ಮಹಾ ಸೌಂದರ್ಯವಾದ ರೂಪವಂ ತಾಳಿ, ಅಲ್ಲಲ್ಲಿ ಸಂಚಾರಂಗೈಯ್ಯುತ್ತಾ ಮುನಿಗಳನ್ನು ಹೆದರಿಸಿದೆನು ॥೨॥ ಅನಂತರದಲ್ಲಿ ಸ್ಥೂಲಶಿರಸ್ಕನೆಂಬ ಮಹಾಮುನಿಯು ನಾನಾವಿಧವಾದ ಕಂದಮೂಲಾದಿಗಳನ್ನು ಹುಡುಕುತ್ತಿರುವಾಗ ನನ್ನ ರೂಪದಿಂದ ಕೋಪವಂತನಾಗಿ ಮಾಡಲ್ಪಟ್ಟವನಾಗಿ, ಅಗ ಆತನು ಈಪರಿಶಾಪವನ್ನಿತ್ತನು, ಏನಂದರೆ;—ಎಲೈ ದುಷ್ಟನೇ! ನಿನ್ನ ಈ ರೂಪವು ಘಾತುಕವಾಗಿಯೂ ನಿಂದಿಸಲ್ಪಟ್ಟದ್ದಾಗಿಯೂ ಇರುವದಾಗಲೆಂದು ನನಿಗೆ ಈ ಮಹಾಶಾಪವಂ ಕೊಟ್ಟನು, ಅನಂತರದಲ್ಲಿ ನಾನು ಪರಿಪರಿ ಪ್ರಾರ್ಥಿಸಿದವನಾಗಲು ಆ ಮಹಾಮುನಿಯು ಶಾಪಾಂತ್ಯವನ್ನು

ಪ್ರಾಪ್ಸ್ಯಸೇರೂಪಂಸ್ವಮೇವವಿಪುಲಂಶುಭಂ ॥೬॥ ಶ್ರಿಯಾವಿರಾಜಿತಂಪುತ್ರಂದನೋಸ್ತ್ವಂವಿದ್ಧಿಲಕ್ಷ್ಮಣ ॥ಇಂದ್ರಕೋಪಾದಿದಂರೂಪಂಪ್ರಾಪ್ತಮೇವಂರಣಾಜಿರೇ ॥೭॥ ಅಹಂಹಿತಪಸೋಗ್ರೇಣಪಿತಾಮಹಮತೋಷಯಂ। ದೀರ್ಘಮಾಯುಸ್ಸಮೇಪ್ರಾದಾತ್ತತೋಮಾಂವಿಭ್ರಮೋಸ್ಪೃಶತ್ ।೮॥ ದೀರ್ಘಮಾಯುರ್ಮಯಾಪ್ರಾಪ್ತಂಕಿಂಮೇಶಕ್ರಃಕರಿಷ್ಯತಿ। ಇತ್ಯೇವಂಬುದ್ಧಿಮಾಸ್ಥಾಯರಣೇಶಕ್ರಮಧರ್ಷಯಂ ॥೯॥ ತಸ್ಯಬಾಹುಪ್ರಮುಕ್ತೇನವಜ್ರೇಣಶತಪರ್ವಣಾ ॥ ಸಕ್ಥಿನೀಚೈವಮೂರ್ಧಾಚಶರೀರೇಸಂಪ್ರವೇಶಿತಂ ॥೧೦॥ ಸಮಯಾಯಾಚ್ಯಮಾನಸ್ಸನ್ನಾನಯದ್ಯಮಸಾದನಂ ॥ ಪಿತಾಮಹವಚಸ್ಸತ್ಯಂತದಸ್ತ್ವಿತಿಮಾಮಬ್ರವೀತ್ ॥೧೧॥ ಅನಾಹಾರಃಕಥಂಶಕ್ತೋಭಗ್ನಸಕ್ಥಿಶಿರೋಮುಖಃ ॥ ವಜ್ರೇಣಾಭಿಹತಃಕಾಲಂಸುದೀರ್ಘಮಪಿಜೀವಿತುಂ ॥೧೨॥ ಏವಮುಕ್ತಸ್ತುಮೇಶಕ್ರೋಬಾಹೂಯೋಜನಮಾಯತೌ॥ ಪ್ರಾದಾದಾಸ್ಯಂಚಮೇಕುಕ್ಷೌತೀಕ್ಷ್ಣದಂಷ್ಟ್ರಮಕಲ್ಪಯತ್ ॥೧೩॥ ಸೋಹಂಭುಜಾಭ್ಯಾಂದೀರ್ಘಾಭ್ಯಾಂಸಂ

---

ನಿನ್ನನ್ನು, ದಹೇತ್-ಸುಡುವನೋ, ತದಾ-ಆಕಾಲದಲ್ಲಿ, ತ್ವಂ-ನೀನು, ಸ್ವಮೇವ-ಸ್ವಕೀಯವಾದ, ವಿಪುಲಂ-ವಿಸ್ತಾರವಾದ, ಶುಭಂ-ಶುಭಕರವಾದ, ರೂಪಂ-ರೂಪವನ್ನು, ಪ್ರಾಪ್ಸ್ಯಸಿ-ಹೊಂದುತ್ತೀಯೆ ॥೬॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಶ್ರಿಯಾ-ಸಂಪತ್ತಿನಿಂದ, ವಿರಾಜಿತಂ-ಹೊಳೆಯುತ್ತಿರುವ, ದನೋಃ-ದನುವೆಂಬುವನ, ಪುತ್ರಂ-ಕುವರನನ್ನಾಗಿ, ಮಾಂ-ನನ್ನನ್ನು, ವಿದ್ಧಿ-ತಿಳಿದುಕೋ, ರಣಾಜಿರೇ-ಯುದ್ಧರಂಗದಲ್ಲಿ, ಇಂದ್ರಕೋಪಾತ್-ದೇವೇಂದ್ರನ ಕೋಪದವಶದಿಂದ, ಏವಂ-ಈಪರಿಯಾಗಿ, ಇದಂ-ಈ ವಿಕಾರವಾದ, ರೂಪಂ-ಆಕಾರವು, ಮೇ-ನನಿಗೆ, ಪ್ರಾಪ್ತಂ-ಸಂಭವಿಸಿತು ॥೭॥ ಅಹಂಹಿ-ನಾನಾದರೆ, ಉಗ್ರೇಣ-ಭಯಂಕರವಾದ ತಪಸಾ-ತಪಸ್ಸಿನಿಂದ, ಪಿತಾಮಹಂ-ಬ್ರಹ್ಮದೇವರನ್ನು, ಅತೋಷಯಂ-ಸಂತೋಷಗೊಳಿಸಿದೆನು, ಸಃ-ಆ ಚತುರ್ಮುಖಬ್ರಹ್ಮನು, ಮೇ-ನನಿಗೆ, ದೀರ್ಘಂ-ಬಹುಕಾಲವಾದ, ಆಯುಃ-ಆಯುಸ್ಸನ್ನು, ಪ್ರಾದಾತ್-ಕೊಟ್ಟನು. ತತಃ-ಬಳಿಕ, ವಿಭ್ರಮಃ-ಅಜ್ಞಾನವು, ಮಾಂ-ನನ್ನನ್ನು, ಅಸ್ಪೃಶತ್-ಸ್ಪರ್ಶಗೊಂಡಿತು ॥೮॥ ದೀರ್ಘಮಾಯುಃ-ಚಿರಕಾಲ ಆಯುಸ್ಸು, ಮಯಾ-ನನ್ನಿಂದ, ಪ್ರಾಪ್ತಂ-ಹೊಂದಲ್ಪಟ್ಟಿತು, ಮೇ-ನನಿಗೆ. ಶಕ್ರಃ-ದೇವೇಂದ್ರನು, ಕಿಂಕರಿಷ್ಯತಿ-ಏನುಮಾಡುವನು, ಇತ್ಯೇವಂ-ಈಪರಿಯಾಗಿ, ಬುದ್ಧಿಂ-ಮತಿಯನ್ನು, ಆಸ್ಥಾಯ-ಹೊಂದಿ, ರಣೇ-ಕಾಳಗದಲ್ಲಿ, ಶಕ್ರಂ-ದೇವೇಂದ್ರನನ್ನು, ಅಧರ್ಷಯಂ-ತಿರಸ್ಕರಿಸಿದೆನು ॥೯॥ ತಸ್ಯ-ಆ ದೇವೇಂದ್ರನ, ಬಾಹುಪ್ರಮುಕ್ತೇನ-ಭುಜಗಳಿಂದ ಬಿಡಲ್ಪಟ್ಟ, ಶತಪರ್ವಣಾ-ನೂರುಕೊನೆಗಳುಳ್ಳ, ವಜ್ರೇಣ-ವಜ್ರಾಯುಧದಿಂದ, ಸಕ್ಥಿನೀ-ಊರುಗಳು, ಮೂರ್ಧಾಚ-ಮಂಡೆಯೂ, ಶರೀರೇ-ಶರೀರದಲ್ಲಿ. ಸಂಪ್ರವೇಶಿತಂ-ಪ್ರವೇಶಗೊಳಿಸಲ್ಪಟ್ಟಿತು ॥೧೦॥ ಮಯಾ-ನನ್ನಿಂದ, ಸಃ-ಆ ದೇವೇಂದ್ರನು, ಯಾಚ್ಯಮಾನಸ್ಸನ್-ಪ್ರಾರ್ಥಿಸಲ್ಪಟ್ಟವನಾಗಿ, ಯಮಸಾದನಂ-ಯಮನಮನೆಯಂಕುರಿತು. ನಾನಯತ್-ಹೊಂದಿಸದೇ ಹೋದನು, ತತ್-ಆ, ಪಿತಾಮಹವಚಃ-ಬ್ರಹ್ಮದೇವರ ಮಾತು ಸತ್ಯಂ-ಸಫಲವು, ಅಸ್ತು-ಆಗಲಿ. ಇತಿ-ಇಂತೆಂದು, ಮಮ-ನನಿಗೆ, ಅಬ್ರವೀತ್-ನುಡಿದನು ॥೧೧॥ ಭಗ್ನಸಕ್ಥಿಶಿರೋಮುಖಃ-ಮುರಿಯಲ್ಪಟ್ಟ ತೊಡೆಗಳೂ ಮಂಡೆಯೂ ಮುಖವೂ ಉಳ್ಳವನಾಗಿ, ಅನಾಹಾರಃ-ಆಹಾರವರ್ಜಿತನಾಗಿ, ವಜ್ರೇಣ-ವಜ್ರಾಯುಧದಿಂದ. ಅಭಿಹತಃ-ಹೊಡೆಯಲ್ಪಟ್ಟವನಾಗಿ, ಸುದೀರ್ಘಂಕಾಲಮಪಿ-ಬಹುಕಾಲವು. ಜೀವಿತುಂ-ಬದುಕುವದಕ್ಕೆ, ಕಥಂಶಕ್ತಃ-ಹ್ಯಾಗೆ ಶಕ್ತನಾಗುವೆನು ॥೧೨॥ ಏವಂ-ಈಪರಿಯಾಗಿ, ಮೇ-ನನ್ನಿಂದ, ಉಕ್ತಃ-ಹೇಳಲ್ಪಟ್ಟವನಾಗಿ, ಶಕ್ರಃ-ದೇವೇಂದ್ರನು, ಯೋಜನಂ-ಗಾವುದಪರ್ಯಂತರವೂ. ಆಯತೌ-ಉದ್ದವಾದ, ಬಾಹೂ-ಭುಜಗಳನ್ನೂ, ಪ್ರಾದಾತ್-ಕೊಟ್ಟನು, ತೀಕ್ಷ್ಣದಂಷ್ಟ್ರಂ-ಕ್ರೂರವಾದ ಕೋರೆಹಲ್ಲುಗಳುಳ್ಳ, ಆಸ್ಯಂಚ-ಮುಖವನ್ನೂ, ಮೇ-ನನಿಗೆ. ಕುಕ್ಷೌ-

---

ಹೇಳಿದನದೆಂತೆನೆ,—॥೫॥ ಎಲೋ ನೀಚನೇ! ಯಾವಾಗ ಶ್ರೀರಾಮನು ನಿನ್ನ ಭುಜಗಳಂ ಛೇದಿಸಿ ಅರಣ್ಯದಲ್ಲಿ ದಹನಗೈಯ್ಯುವನೋ, ಆಗ ನೀನು ನಿನ್ನ ಸ್ವಕೀಯವಾದ ರೂಪವನ್ನೈದುವವನಾಗುವೆ ॥೬॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ! ಮಹದೈಶ್ವರ್ಯದಿಂದ ಬೆಳಗುವ ನನ್ನನ್ನು ದನುವಿನ ಪುತ್ರನನ್ನಾಗಿ ತಿಳಿದುಕೋ ರಣರಂಗದಲ್ಲಿ ಇಂದ್ರನಕೋಪದಿಂದ ಈ ವಿರೂಪವು ನನಿಗೆ ಪ್ರಾಪ್ತವಾದದ್ದಾಯಿತು ॥೭॥ [ಅದುಯಾಕೆಂದರೆ ಪೇಳುವನು] ಎಲೈ ಲಕ್ಷ್ಮಣನೇ! ಪೂರ್ವದಲ್ಲಿ ನಾನು ಮಹಾ ಭಯಂಕರವಾದ ತಪಸ್ಸಿನಿಂದ ಚತುರ್ಮುಖ ಬ್ರಹ್ಮನಂ ಸಂತೋಷಗೊಳಿಸಿದವನಾಗಲೂ, ಆ ಚತುರ್ಮುಖನು ನನಿಗೆ ದೀರ್ಘಾಯುಸ್ಸನ್ನು ಕೊಟ್ಟನು, ಬಳಿಕ ನನಿಗೆ ಅಜ್ಞಾನವುಂಟಾಗಿ, ಹಾಹಾ! ನನಿಗೆ ಚಿರಕಾಲಾಯುಷವು ಪ್ರಾಪ್ತವಾಗಿಧೆ, ಇಂದ್ರನು ನನ್ನನ್ನೇನು ಮಾಡುವನೆಂದು ಮತಿಯುಂಟಾಗಿ ರಣರಂಗದಲ್ಲಿ ಆ ಇಂದ್ರನನ್ನು ತಿರಸ್ಕಾರಂ ಗೈದೆನು ॥೯॥ ಅನಂತರದಲ್ಲಿ ದೇವೇಂದ್ರನ ಭುಜದಿಂದ ಪ್ರೇರಿಸಲ್ಪಟ್ಟ ನೂರುಕೊನೆಗಳುಳ್ಳ ವಜ್ರಾಯುಧದಿಂದ ತೊಡೆಗಳೂ ಮಂಡೆಯೂ ಸಹಾ ಭಗ್ನಂ ಗೈಯ್ಯಲ್ಪಟ್ಟವು ॥೧೦॥ ಸಮನಂತರಕಾಲದಲ್ಲಿ ಆ ದೇವೇಂದ್ರನು ನನ್ನಿಂದ ಪ್ರಾರ್ಥಿಸಲ್ಪಟ್ಟವನಾಗಿ, ನನ್ನನ್ನು ಯಮಮಂದಿರವಂ ಸೇರಿಸದೆ, ಬ್ರಹ್ಮನ ವಾಕ್ಯವೇ ಸತ್ಯವಾಗಲೆಂದು ನನಿಗೆ ಪೇಳಿದವನಾದನು ॥೧೧॥ ಅನಂತರದಲ್ಲಿ ಭಗ್ನವಾದ ತೊಡೆಗಳೂ ಮಂಡೆಯೂ ಮುಖವೂ ಸಹಾ ಉಳ್ಳವನಾಗಿ ಆಹಾರವಿಲ್ಲದೆ ನಾನೆಂತು ಜೀವಿಸಲೆಂದು ಆ ಇಂದ್ರನಂ ಬೇಡ

ಕೃಷ್ಯಾಸ್ಮಿನ್ವನೇಚರನ್ ॥ ಸಿಹ್ಮದ್ವೀಪಮೃಗವ್ಯಾಘ್ರಾನ್ ಭಕ್ಷಯಾಮಿಸಮಂತತಃ ॥೧೪॥ ಸತುಮಾಮಬ್ರವೀ
ದಿಂದ್ರೋಯದಾರಾಮಸ್ಸಲಕ್ಷ್ಮಣಃ ॥ ಛೇತ್ಸ್ಯತೇಸಮರೆಬಾಹೂತದಾಸ್ವರ್ಗಂಗಮಿಷ್ಯಸಿ ॥೧೫॥ ಅನೇನವಪುಷಾ
ರಾಮವನೇಸ್ಮಿನ್ರಾಜಸತ್ತಮ ॥ ಯದ್ಯತ್ಪಶ್ಯಾಮಿಸರ್ವಸ್ಯಗ್ರಹಣಂಸಾಧುರೋಚಯೆ ॥೧೬॥ ಅವಶ್ಯಂಗ್ರಹಣಂ
ರಾಮೋಮನ್ಯೇಹಂಸಮುಪೈಷ್ಯತಿ ॥ ಇಮಾಂಬುದ್ಧಿಂಪುರಸ್ಕೃತ್ಯದೇಹನ್ಯಾಸಕೃತಶ್ರಮಃ ॥೧೭॥ ಸತ್ವಂರಾ
ಮೋಸಿಭದ್ರಂತೆನಾಹಮನ್ಯೇನರಾಘವ ॥ ಶಕ್ಯೋಹಂತುಂಯಥಾತತ್ವಮೆವಮುಕ್ತಂಮಹರ್ಷಿಣಾ ॥೧೮॥ ಅಹಂ
ಹಿಮತಿಸಾಚಿವ್ಯಂಕರಿಷ್ಯಾಮಿನರರ್ಷಭ ॥ ಮಿತ್ರಂಚೈವೋಪದೇಕ್ಷ್ಯಾಮಿಯುವಾಭ್ಯಾಂಸಂಸ್ಕೃತೋಗ್ನಿನಾ ॥೧೯॥
ಏವಮುಕ್ತಸ್ತುಧರ್ಮಾತ್ಮಾದನುನಾತೇನರಾಘವಃ ॥ ಇದಂಜಗಾದವಚನಂಲಕ್ಷ್ಮಣಸ್ಯೋಪಶೃಣ್ವತಃ ॥೨೦॥ ರಾವಣೆ

ಹೊಟ್ಟೆಯಲ್ಲಿ, ಅಕಲ್ಪಯತ್-ನಿರ್ಮಿಸಿದನು ॥೧॥ ॥ ಸೋಹಂ-ಆ ಈ ನಾನು, ದೀರ್ಘಾಭ್ಯಾಂ-ಉದ್ದವಾದ, ಭುಜಾಭ್ಯಾಂ-ಬಾಹುಗಳಿಂದ, ಅಸ್ಮಿನ್-ಈ ವನದಲ್ಲಿ, ಸಮಂತತಃ-ಎಲ್ಲಾ ಕಡೆಯಲ್ಲಿಯೂ, ಚರನ್-ಸಂಚರಿಸುತ್ತಿರುವ, ಸಿಹ್ಮದ್ವೀಪಮೃಗವ್ಯಾಘ್ರಾನ್-ಸಿಹ್ಮಗಳನ್ನೂ ಆನೆಗಳನ್ನೂ ಚಿಗರಿಗಳನ್ನೂ ಹುಲಿಗಳನ್ನೂ, ಸಮಾಕೃಷ್ಯ-ಶೆಳೆದುಕೊಂಡು, ಭಕ್ಷಯಾಮಿ-ತಿನುತ್ತೇನೆ ॥೧೪॥ ॥ ಸಃಇಂದ್ರಸ್ತು-ಆ ದೇವೇಂದ್ರನಾದರೆ ಯದಾ-ಯಾವಕಾಲದಲ್ಲಿ, ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದ, ರಾಮಃ-ಶ್ರೀರಾಮನು, ಸಮರೆ-ಕಾಳಗದಲ್ಲಿ, ತೆ-ನಿನ್ನ, ಬಾಹೂ-ಭುಜಗಳನ್ನು, ಛೇತ್ಸ್ಯತಿ-ಕತ್ತರಿಸುವನೋ, ತದಾ-ಆಕಾಲದಲ್ಲಿ, ಸ್ವರ್ಗಂ-ಸ್ವರ್ಗಲೋಕವಂಕುರಿತು, ಗಮಿಷ್ಯಸಿ-ತೆರಳುವಿ, ಇತಿ-ಇಂತೆಂದು, ಮಾಂ-ನನ್ನನ್ನು ಕುರಿತು, ಅಬ್ರವೀತ್-ನುಡಿದನು ॥೧೫॥ ॥ ಹೇರಾಮ-ಎಲೈ ಶ್ರೀರಾಮನೇ, ಅನೇನವಪುಷಾ-ಈ ಶರೀರದಿಂದ, ಅಸ್ಮಿನ್ವನೆ-ಈ ವನದಲ್ಲಿ, ಯದ್ಯತ್-ಯಾವ ಯಾವ ವಸ್ತುವಿನನ್ನು, ಪಶ್ಯಾಮಿ-ಕಾಣುತ್ತೇನೋ, ಹೇರಾಜಸತ್ತಮ-ಎಲೈ ರಾಜಶ್ರೇಷ್ಠನೇ, ಸರ್ವಸ್ಯ-ಸಮಸ್ತವಾದ, ತಸ್ಯ-ಆ ಪದಾರ್ಥದ ಗ್ರಹಣಂ-ಭಕ್ಷಣವನ್ನ, ಸಾಧು-ಚನ್ನಾಗಿ, ರೋಚಯೆ-ಸಮ್ಮತಿಸಿದ್ಧೇನೆ ॥೧೬॥ ॥ ರಾಮಃ-ಶ್ರೀರಾಮನು, ಅವಶ್ಯಂ-ಅವಶ್ಯಕವಾಗಿ, ಗ್ರಹಣಂ-ಹಿಡಿಯುವಿಕೆಯನ್ನು, ಸಮುಪೈಷ್ಯತಿ-ಹೊಂದವನು, ಇತಿ-ಇಂತೆಂದು, ಮನ್ಯೇ-ಎಣಿಸಿದ್ಧೇನೆ, ಇಮಾಂಬುದ್ಧಿಂ-ಈ ಬುದ್ಧಿಯನ್ನು, ಪುರಸ್ಕೃತ್ಯ-ಮುಂದೆಮಾಡಿಕೊಂಡು, ದೇಹನ್ಯಾಸಕೃತಶ್ರಮಃ-ದೇಹ-ದೇಹದ, ನ್ಯಾಸ-ಪರಿತ್ಯಾಗದಲ್ಲಿ, ಕೃತ-ಮಾಡಲ್ಪಟ್ಟ, ಶ್ರಮಃ-ಉದ್ಯೋಗವುಳ್ಳವನಾಗಿಧೇನೆ ॥೧೭॥ ॥ ಹೇರಾಘವ-ಎಲೈ ಶ್ರೀರಾಮನೇ, ಸತ್ವಂ-ಆ ಈ ನೀನು, ರಾಮಃ-ಶ್ರೀರಾಮನು, ಅಸಿ-ಆಗಿದ್ಧೀಯಿ, ತೆ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಅಹಂ-ನಾನು, ಅನ್ಯೇನ-ಮತ್ತೋರ್ವನಿಂ, ಹಂತುಂ-ಸಂಹರಿಸಲಿಕ್ಕೆ, ಶಕ್ಯಃ-ಸಾಧ್ಯನು, ಯಥಾತತ್ವಂ-ಯಥಾರ್ಥವಾಗಿ, ಉಕ್ತಂ-ಹೇಳಲ್ಪಟ್ಟಿತು ॥೧೮॥ ॥ ಅಹಂಹಿ-ನಾನಾದರೆ, ಹೇನರರ್ಷಭ-ಎಲೈ ಮನುಷ್ಯಶ್ರೇಷ್ಠನೇ, ಮತಿಸಾಚಿವ್ಯಂ-ಬುದ್ಧಿಯಿಂದ ಸಹಾಯವನ್ನು, ಕರಿಷ್ಯಾಮಿ-ಮಾಡುವೆನು, ಯುವಾಭ್ಯಾಂ-ನಿಮ್ಮಗಳಿಂದ, ಅಗ್ನಿನಾ-ಅಗ್ನಿಯಿಂದ, ಸಂಸ್ಕೃತಃ-ದಹಿಸಲ್ಪಟ್ಟವನಾಗಿ, ಮಿತ್ರಂಚೈವ-ಮಿತ್ರನನ್ನು, ಉಪದೇಕ್ಷ್ಯಾಮಿ-ಉಪದೇಶವಂ ಮಾಡುವೆನು ॥೧೯॥ ॥ ಏವಂ-ಈಪರಿಯಾಗಿ, ತೆನದನುನಾ-ದನುವಂಶೋತ್ಪನ್ನನಿಂದ, ಉಕ್ತಃ-ಹೇಳಲ್ಪಟ್ಟ, ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳ, ರಾಘವಃ-ಶ್ರೀರಾಮನು, ಲಕ್ಷ್ಮಣಸ್ಯ-ಲಕ್ಷ್ಮಣನು ಉಪಶೃಣ್ವತಃ-ಕೇಳುತ್ತಿರುವನ ಸಲೀಕಾಗಿಯೇ ಇದಂವಚನಂ-ಈ ಮುಂದೆ ಹೇಳತಕ್ಕ ಮಾತನ್ನು, ಜಗಾದ-ಹೇಳಿದನು ॥೨೦॥ ॥ ಜನಸ್ಥಾನಾತ್-ಉಕ್ಕಪ್ರದೇಶದಿಂದ, ಭ್ರಾತ್ರಾಸಹ-ತಮ್ಮನೊಡಗೂಡ, ಯಥಾಸುಖಂ-ಸುಖವಾಗಿ, ನಿಷ್ಕ್ರಾಂತಸ್ಯ-

ಲೂ, ಆತನು ಯೋಜನಪರಿಮಿತವಾದ ತೋಳುಗಳನ್ನೂ, ಬಹಳ ಹದವಾದ ಕೋರೆದಾಡೆಗಳುಳ್ಳ ಮುಖವನ್ನೂ ಸಹಾ ಕೊಟ್ಟನು ॥೧೩॥ ಅಂಥಾ ರೂಪವಂತನಾಗಿದ್ದು ಬಹು ಕುರೂಪಿಯಾದ ನಾನು ಈ ವನದಲ್ಲಿ ಸುತ್ತುಮುತ್ತಲೂಸಂಚರಿಸುತಲಿರುವ ಸಿಹ್ಮವ್ಯಾಘ್ರಾದಿ ಮೃಗಗಳನ್ನು ಭುಜಗಳಿಂದ ಶೆಳೆದುಕೊಂಡು ಗ್ರಾಸಂಗೈಯುತಲಿದ್ದೆನು ॥೧೪॥ ಕೇಳೆಲೈ ಲಕ್ಷ್ಮಣನೇ! ಆ ದೇವೇಂದ್ರನು, ಯಾವಾಗ ಲಕ್ಷ್ಮಣಸಹಿತನಾದ ಶ್ರೀರಾಮನು ರಣರಂಗದಲ್ಲಿ ನಿನ್ನ ಬಾಹು ಭಂಜನವಂ ಗೈಯ್ಯುವನೋ, ಆಗ ನೀನು ಸ್ವರ್ಗಲೋಕಕ್ಕೆ ಬರುವವನಾಗುವೆಯೆಂದು ನನಿಗೆ ಪೇಳಿದನು ॥೧೫॥ ಎಲೈ ಶ್ರೀರಾಮನೇ! ಈ ವಿಕಾರವಾದ ಶರೀರದಿಂದೀವನದಲ್ಲಿ ಯಾವ ಯಾವ ವಸ್ತುವಿನಂ ಕಾಣುತ್ತೇನೆಯೋ ಅದನ್ನೆಲ್ಲ ತೆಗದುಕೊಂಡು ಗ್ರಾಸಂಗೈಯ್ಯುವದಕ್ಕೆ ಸಮ್ಮತಿಪಟ್ಟು, ಸತ್ಯವಾಗಿ ಶ್ರೀರಾಮನು ಗ್ರಹಣವನ್ನೈದುವನೆಂದು ನಿಶ್ಚಯಿಸಿ ಈದೇಹವಂ ಬಿಡುವರಲ್ಲಿ ಉದ್ಯೋಗವಂ ಗೈಯುತಲಿಧೇನೆ ॥೧೭॥ ಎಲೈ ಶ್ರೀರಾಮನೇ! ಆ ಈ ನೀನು ಶ್ರೀರಾಮನೇ ಸರಿ; ನಿನಿಗೆ ಶುಭವಾಗಲಿ, ನಾನು ಮತ್ತೋರ್ವನಿಂದ ವಧಿಸಲಸಾಧ್ಯನೆಂದು ಸ್ಥೂಲಶಿರಸ್ಕನೆಂಬ ಮುನಿಯು ತತ್ವಂ ಪೇಳಿದನು, ನಿಮ್ಮಗಳಿಂದ ನಾನು ಅಗ್ನಿಸಂಸ್ಕಾರಂ ಗೈಯ್ಯಲ್ಪಟ್ಟವನಾದರೆ, ಬಳಿಕ ನಿಮಿಗೆ ಬುದ್ಧಿಯಿಂದ ಸಹಾಯಂ ಮಾಡುವೆನೆಂದು ಕಬಂಧನುನುಡಿದ ವಾಕ್ಯವಂ ಕೇಳಿದ ಬಳಿಕ, ಧರ್ಮಾತ್ಮನಾದ ಶ್ರೀರಾಮನು ಲಕ್ಷ್ಮಣನು ಕೇಳುತಿರಲೂ ನುಡಿದನದೆಂತೆನೆ,—
॥೨೧॥ ಎಲೈ ಕಬಂಧನೇ! ಜನಸ್ಥಾನದಿಂದ ಅನುಜನೊಡಗೂಡಿ ಸುಖವಾಗಿ ಹೊರಟುಬಂದ ನನ್ನ ಸತಿಯಾದ

ನಹೃತಾಭಾರ್ಯಾಮಮಸೀತಾಯಶಸ್ವಿನೀ । ನಿಷ್ಕ್ರಾಂತಸ್ಯಜನಸ್ಥಾನಾತ್ಸಹಭ್ರಾತ್ರಾಯಥಾಸುಖಂ ॥೧೧॥ ನಾಮಮಾತ್ರಂತುಜಾನಾಮಿನರೂಪಂತಸ್ಯರಕ್ಷಸಃ । ನಿವಾಸಂವಾಪ್ರಭಾವಂವಾವಯಂತಸ್ಯನವಿದ್ಮಹೆ॥೧೨॥ ಶೋಕಾರ್ತಾನಾಮನಾಥಾನಾಮೆವಂವಿಪರಿಧಾವತಾಂ ।ಕಾರುಣ್ಯಂಸದೃಶಂಕರ್ತುಮುಪಕಾರೆಚವರ್ತತಾಂ॥ ॥೧೩॥ ಕಾಷ್ಠಾನ್ಯಾದಾಯಶುಷ್ಕಾಣಿಕಾಲೆಭಗ್ನಾನಿಕುಂಜರೈಃ । ಧಕ್ಷ್ಯಾಮಸ್ತ್ವಾಂವಯಂವೀರಶ್ವಭ್ರೆಮಹತಿಕಲ್ಪಿತೆ॥೧೪॥ ಸತ್ವಂಸೀತಾಂಸಮಾಚಕ್ಷ್ವಯೆನವಾಯತ್ರವಾಹೃತಾ । ಕುರುಕಲ್ಯಾಣಮತ್ಯರ್ಥಂಯದಿಜಾನಾಸಿತತ್ವತಃ॥೧೫॥ ಏವಮುಕ್ತಸ್ತುರಾಮೆಣವಾಕ್ಯಂದನುರನುತ್ತಮಂ । ಪ್ರೊವಾಚಕುಶಲೊವಕ್ತುಂವಕ್ತಾರಮಪಿರಾಘವಂ ॥೧೬॥ ದಿವ್ಯಮಸ್ತಿನಮೆಜ್ಞಾನಂನಾಭಿಜಾನಾಮಿಮೈಥಿಲೀಂ । ಯಸ್ತಾಂಜ್ಞಾಸ್ಯತಿತಂವಕ್ಷ್ಯೆದಗ್ಧಸ್ಸ್ವಂರೂಪಮಾಸ್ಥಿತಃ॥೧೭॥ ಅದಗ್ಧಸ್ಯತುವಿಜ್ಞಾತುಂಶಕ್ತಿರಸ್ತಿನಮೆಪ್ರಭೊ । ರಾಕ್ಷಸಂತಂಮಹಾವೀರ್ಯಂಸೀತಾಯೆನಹೃತಾತವ ॥೧೮॥ ವಿಜ್ಞಾ

---

ಹೊರಟುಬಂದ, ಮಮ-ನನ್ನ, ಭಾರ್ಯಾ-ಹೆಂಡತಿಯಾದ, ಯಶಸ್ವಿನೀ-ಕೀರ್ತಿವಂತಳಾದ, ಸೀತಾ-ಸೀತಾದೇವಿಯು. ರಾವಣೇನ-ರಾವಣನಿಂದ, ಹೃತಾ-ಅಪಹರಿಸಲ್ಪಟ್ಟಳು ॥೧೧॥ ॥ ತಸ್ಯರಕ್ಷಸಃ-ಆ ರಾಕ್ಷಸನ. ನಾಮಮಾತ್ರಂ-ಹೆಸರುಮಾತ್ರವನ್ನು. ಜಾನಾಮಿ-ತಿಳಿದಿದ್ದೇನೆ, ರೂಪಂ-ಆಕಾರವನ್ನು, ನಜಾನಾಮಿ-ತಿಳಿಯಲಾರೆ. ತಸ್ಯ-ಆ ರಾಕ್ಷಸನ, ನಿವಾಸಂವಾ-ಸ್ಥಳವನ್ನಾಗಲಿ, ಪ್ರಭಾವಂವಾ-ಮಾಹಾತ್ಮ್ಯವನ್ನಾಗಲಿ, ವಯಂ-ನಾವು, ನವಿದ್ಮಹೆ-ತಿಳಿದವರಲ್ಲ ॥೧೨॥ ॥ ಹೆವೀರ-ಎಲೈ ಶೂರನೇ. ಶೋಕಾರ್ತಾನಾಂ-ದುಃಖಾರ್ತರಾದ, ಅನಾಥಾನಾಂ-ರಕ್ಷಕನಿಲ್ಲದಿರುವ, ಏವಂ-ಈಪರಿಯಾಗಿ, ವಿಪರಿಧಾವತಾಂ-ವಿದೇಶದೊಳ್ಳೋಡಾದುತ್ತಿರುವವರಿಗೆ. ಸದೃಶಂ-ಸಮಾನವಾದಂತೆ, ಕಾರುಣ್ಯಂ-ದಯೆಯನ್ನು, ಕರ್ತುಂ-ಮಾಡುವದಕ್ಕೋಸುಗ, ಉಪಕಾರೆಚ-ಉಪಕಾರದಲ್ಲಿ, ವರ್ತತಾಂ-ನಿಂತಿರುವ, ಅಸ್ಮಾಕಂ-ನಮ್ಮಗಳಿಗೆ, ಸತ್ವಂ-ಆ ಈ ನೀನು, ಸೀತಾಂ-ಸೀತಾದೇವಿಯನ್ನು, ಸಮಾಚಕ್ಷ್ವ-ಹೇಳು * ಯತ್ರ-ಯಾವ ಪ್ರದೇಶದಲ್ಲಾಗಲೀ, ಯೆನವಾ-ಯಾವವನಿಂದಲಾಗಲಿ, ಹೃತಾ-ಅಪಹರಿಸಲ್ಪಟ್ಟಳೋ. ತತ್ವತಃ-ಯಥಾರ್ಥವಾಗಿ, ಜಾನಾಸಿಯದಿ-ತಿಳಿದವನೇಆದರೆ. ಅತ್ಯರ್ಥಂ-ಬಹಳವಾಗಿ. ಕಲ್ಯಾಣಂ-ಸೀತಾವಾರ್ತಾಶ್ರವಣದಿಂ ಪುಟ್ಟುವ ಆನಂದರೂಪ ಮಂಗಳವನ್ನು.ಕುರು-ಮಾಡು * ವಯಂ-ನಾವು, ಕಲ್ಪಿತೆ-ನಮ್ಮಿಂದ ಮಾಡಲ್ಪಟ್ಟ, ಮಹತಿ-ದೊಡ್ಡದಾದ, ಶ್ವಭ್ರೆ-ಗರ್ತದಲ್ಲಿ, ಕಾಲೆ-ಕಾಲದಲ್ಲಿ, ಶುಷ್ಕಾಣಿ-ಒಣಗಿರುವ, ಕುಂಜರೈಃ-ಆನೆಗಳಿಂದ, ಭಗ್ನಾನಿ-ಮುರಿಯಲ್ಪಟ್ಟ, ಕಾಷ್ಠಾನಿ-ಇಂಧನಗಳನ್ನು, ಆದಾಯ-ತೆಗದುಕೊಂಡು, ತ್ವಾಂ-ನಿನ್ನನ್ನು, ಧಕ್ಷ್ಯಾಮಃ-ದಹಿಸಿಬಿಡುತ್ತೇವೆ॥೧೪॥ ॥ ರಾಮೆಣ-ಶ್ರೀರಾಮನಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ವಕ್ತುಂ-ಮಾತನಾಡುವದರಲ್ಲಿ,ಕುಶಲಃ-ಸಮರ್ಥನಾದ, ದನುಃ-ದನುವಂಶೋತ್ಪನ್ನನಾದ ಕಬಂಧನು. ವಕ್ತಾರಂ-ಮಾತನಾಡುತ್ತಿರುವ, ರಾಘವಂ-ಶ್ರೀರಾಮನಂಕುರಿತು, ಅನುತ್ತಮಂ-ಸರ್ವೋತ್ತಮವಾದ. ವಾಕ್ಯಂ-ಮಾತಿನನ್ನು. ಪ್ರೊವಾಚ-ಹೇಳಿದನು ॥೧೬॥ ॥ ಮೆ-ನನಗೆ, ದಿವ್ಯಂ-ದೇವತಾಸಂಬಂಧವಾದ, ಜ್ಞಾನಂ-ದೃಷ್ಟಿಯು, ನಾಸ್ತಿ-ಇಲ್ಲ, ಮೈಥಿಲೀಂ-ಸೀತಾದೇವಿಯನ್ನು, ನಾಭಿಜಾನಾಮಿ-ಅರಿಯೆ, ದಗ್ಧಃ-ದಹಿಸಲ್ಪಟ್ಟವನಾಗಿ, ಸ್ವಂ-ಸ್ವಕೀಯವಾದ, ರೂಪಂ-ಆಕಾರವನ್ನು, ಆಸ್ಥಿತಃ-ಹೊಂದಿದವನಾಗಿ, ಯಃ-ಯಾವ ಪುರುಷನು, ತಾಂ-ಆ ಸೀತಾದೇವಿಯನ್ನು, ಜ್ಞಾಸ್ಯತಿ-ತಿಳಿದವನೋ. ತಂ-ಅಂಥಾ ಪುರುಷನನ್ನು, ವಕ್ಷ್ಯೆ-ಹೇಳುವೆನು॥೧೭॥ ॥ ಹೆಪ್ರಭೊ-ಎಲೈ ಸ್ವಾಮಿಯೇ. ತವ-ನಿನ್ನ ಸಂಬಂಧಳಾದ, ಸೀತಾ-ಸೀತಾದೇವಿಯು, ಯೆನ-ಯಾವ ರಾಕ್ಷಸನಿಂದ, ಹೃತಾ-ಅಪಹರಿಸಲ್ಪಟ್ಟಳೋ, ಮಹಾವೀರ್ಯಂ-ಮಹಾಸಾಮರ್ಥ್ಯವಂತನಾದ, ತಂರಾಕ್ಷಸಂ-ಅಂಥಾ ರಕ್ಕಸನನ್ನು. ವಿಜ್ಞಾತುಂ-ತಿಳಿಯುವದಕ್ಕೋಸುಗ, ಅದಗ್ಧಸ್ಯ-ದಹಿಸಲ್ಪಡದಿರುವ, ಮೆ-ಯೆನಗೆ, ಶಕ್ತಿಃ-ಸಾಮರ್ಥ್ಯವು, ನಾಸ್ತಿ-ಇಲ್ಲ ॥೧೮॥ ॥ ಹೆರಾಘವ-ಎಲೈ ಶ್ರೀರಾಮನೇ, ಮಯಾ-ನನ್ನಿಂದ, ಸ್ವಕೃತೆ-ನನ್ನಿಂದ ಮಾಡಲ್ಪಟ್ಟ.

---

ಸೀತಾದೇವಿಯು ರಾವಣನಿಂದ ಅಪಹರಿಸಲ್ಪಟ್ಟಳು, ಆ ರಾಕ್ಷಸನ ನಾಮಧೇಯವನ್ನು ಮಾತ್ರತಿಳಿದಿರುವೆನೇ ಹೊರತು ಆತನ ರೂಪವನ್ನಾಗಲೀ ಪ್ರಭಾವವನ್ನಾಗಲೀ ತಿಳಿಯಲಿಲ್ಲ ॥೧೨॥ ಎಲೈ ಶೂರನೇ! ವ್ಯಸನಾಕ್ರಾಂತರಾಗಿ ನಾಥನಿಲ್ಲದಿರುವ ಮತ್ತೂ ಈ ರೀತಿಯಲ್ಲಿ ವಿದೇಶದೊಳು ವಾಸಂಗೈಯುವ್ಯಂತೆ ಇಲ್ಲಿಯಲ್ಲಿ ಓಡ್ಯಾಡುವನಮಿಗೆ ನೀನು ದಯಪಾಲಿಸಿ ಆ ಸೀತಾದೇವಿಯು ಯೆಲ್ಲಿರುವಳೋ ಪೇಳುವವನಾಗು, ಮತ್ತೂ ಆ ದೇವಿಯು ಯಾವ ಪ್ರದೇಶದಲ್ಲಿರುವಳೋ, ಯಾರಿಂದಪಹರಿಸಲ್ಪಟ್ಟಳೋ, ನಿನಿಗೆ ತಿಳಿದಿದ್ದರೆ ಆ ಶುಭವಾರ್ತೆಯಂ ಪೇಳುವವನಾಗು, ನಾವುಗಳು ವಣಗಿದ ಕಾಷ್ಠಗಳಂ ಸಂಪಾದಿಸಿಕೊಂಡು ಗುಣಿಯಲ್ಲಿ ದಹನಂ ಗೈಯ್ಯುವೆವು, ಎಂಬದಾಗಿ ಶ್ರೀರಾಮನು ನುಡಿದವನಾಗಲೂ, ಆ ಕಬಂಧನಿಂತೆಂದನು ॥೧೬॥ ಎಲೈ ಶ್ರೀರಾಮನೇ! ನನಿಗೀಗ ದಿವ್ಯಜ್ಞಾನ ವಿಲ್ಲವಾದ್ದರಿಂದ ನಾನು ಸೀತಾದೇವಿಯಂ ಕಾಣೆನು, ನಿಮ್ಮಿಂದ ದಹಿಸಲ್ಪಟ್ಟ ಬಳಿಕ ನಾನು ನನ್ನ ಪೂರ್ವರೂಪವನ್ನೈದಿದವನಾಗಿ, ಯಾವ ಪುರುಷನು ಆ ದೇವಿಯಂ ತಿಳಿವನೋ ಅಂಥಾ ಪುರುಷನಂ ಪೇಳುವೆನು, ಸತ್ಯವಾಗಿ ಯಾವ ರಾಕ್ಷಸನು ಸೀತಾದೇವಿಯನ್ನಪಹರಿಸಿದನೋ ಅವನನ್ನು ಆತನ ಸಾಮರ್ಥ್ಯವನ್ನೂ ಸಹಾ ಪೇಳಲೂ ದಹಿಸಲ್ಪಡದಿರುವ ನನಿಗೆ ಸಾಮರ್ಥ್ಯವಿಲ್ಲ; ಯಾಕಂದರೆ,—ನನ್ನಿಂದಲೇ ಮಾಡಲ್ಪಟ್ಟ ಶಾಪದಿಂದ ಲೋಕನಿಂದಿತವಾದ ಈ ರೂಪವು

ನಂಮಮಹಿಭ್ರಷ್ಟಂಶಾಪದೋಷೇಣರಾಘವ ! ಸ್ವಕೃತೇನಮಯಾಪ್ರಾಪ್ತಂಗೂಪಂಲೋಕವಿಗರ್ಹಿತಂ ।೨೯॥ ಕಿಂ
ತುಯಾವನ್ನಯಾತ್ಯಸ್ತಂಸವಿತಾಶ್ರಾಂತವಾಹನಃ । ತಾವನ್ಮಾಮವಟೇಕ್ಷಿಪ್ತ್ವಾದಹರಾಮಯಥಾವಿಧಿ ॥೩೦॥ ದ
ಗ್ಧಸ್ತ್ವಯಾಹಮವಟೇನ್ಯಾಯೇನರಘುನಂದನ । ವಕ್ಷ್ಯಾಮಿತಮಹಂವೀರಯಸ್ತಂಜ್ಞಾಸ್ಯತಿರಾಕ್ಷಸಂ ।೩೧। ತೇನಸ
ಖ್ಯಂಚಕರ್ತವ್ಯಂನ್ಯಾಯ್ಯವೃತ್ತೇನರಾಘವ । ಕಲ್ಪಯಿಷ್ಯತಿತೇಪ್ರೀತಸ್ಸಾಹಾಯ್ಯಂಲಘುವಿಕ್ರಮಃ ।೩೨। ನಹಿತ
ಸ್ಯಾಸ್ತ್ಯವಿಜ್ಞಾತಂತ್ರಿಷುಲೋಕೇಷುರಾಘವ । ಸರ್ವಾನ್ಪರಿಸೃತೋಲೋಕಾನ್ಪುರಾಸೌಕಾರಣಾಂತರೇ ॥ ।೩೩।

—** ಇತಿಶ್ರೀಮದಾರಣ್ಯಕಾಂಡೇ-ಏಕಸಪ್ತತಿತಮಸ್ಸರ್ಗಃ **—

ಏವಮುಕ್ತೌತುತೌವೀರೌಕಬಂಧೇನನರೇಶ್ವರೌ । ಗಿರಿಪ್ರದರಮಾಸಾದ್ಯಪಾವಕಂವಿಸಸರ್ಜತುಃ ।೧। ಲ
ಕ್ಷ್ಮಣಸ್ತುಮಹೋಲ್ಕಾಭಿರ್ಜ್ವಲಿತಾಭಿಸ್ಸಮಂತತಃ । ಚಿತಾಮಾದೀಪಯಾಮಾಸಸಾಪ್ರಜಜ್ವಾಲಸರ್ವತಃ ।೨॥

---

ಪಾಪೇನ-ಪಾಪದಿಂದ, ಲೋಕವಿಗರ್ಹಿತಂ-ಲೋಕದಲ್ಲಿ ನಿಂದಿತವಾದ, ರೂಪಂ-ಆಕಾರವು, ಪ್ರಾಪ್ತಂ-ಹೊಂದಲ್ಪಟ್ಟಿತು, ಮಮ-ನನಿಗೆ. ಶಾಪದೋಷೇಣ-ಶಾಪದ ದೋಷದಿಂ, ವಿಜ್ಞಾನಂ-ದಿವ್ಯದೃಷ್ಟಿಯು. ಭ್ರಷ್ಟಂಹಿ-ಹೋಗಲಾಡಿಸಲ್ಪಟ್ಟಿತಷ್ಟೆ ॥೨೯॥ ॥ ಹೇರಾಮ-ಎಲೈ ಶ್ರೀರಾಮನೇ ಕಿಂತು-ಮತ್ತೇನ-ದರೆ, ಸವಿತಾ-ಸೂರ್ಯನು, ಶ್ರಾಂತವಾಹನಃ-ಬಳಲಿದ್ದಕುದುರೇ ವಾಹನಗಳುಳ್ಳವನಾಗಿ, ಯಾವತ್-ಎಷ್ಟರೊಳಗೆ, ಅಸ್ತಂ-ಅಸ್ತಮಯವನ್ನು, ನಯಾತಿ-ಹೊಂದುವದಿಲ್ಲವೋ, ತಾವತ್-ಅಷ್ಟರೊಳಗೆ, ಮಾಂ-ನನ್ನನ್ನು, ಅವಟೇ-ಗುಣಿಯಲ್ಲಿ. ಕ್ಷಿಪ್ತ್ವಾ-ಹಾಕಿ, ಯಥಾವಿಧಿ-ಶಾಸ್ತ್ರೋಕ್ತವಾಗಿ, ದಹ-ದಹಿಸು ॥೩೦॥ ॥ ಹೇರಘುನಂದನ-ಎಲೈ ರಘುಕುಲಾನಂದಕರನೇ, ತ್ವಯಾ-ನಿನ್ನಿಂದ, ಅವಟೇ-ಗರ್ತದಲ್ಲಿ, ನ್ಯಾಯೇನ-ಶಾಸ್ತ್ರಮಾರ್ಗದಿಂದ, ದಗ್ಧಃ-ದಹಿಸಲ್ಪಟ್ಟ. ಅಹಂ-ನಾನು, ಹೇವೀರ-ಎಲೈ ಶೂರನೇ. ಯಃ-ಯಾವ ಪುರುಷನು, ತಂರಾಕ್ಷಸಂ-ಆ ರಾವಣನೆಂಬ ರಕ್ಷಸನನ್ನು, ಜ್ಞಾಸ್ಯತಿ-ತಿಳಿದಿರುವನೋ, ತಂ-ಆ ತಿಳಿದ ಪುರುಷನನ್ನು, ಅಹಂ-ನಾನು, ವಕ್ಷ್ಯಾಮಿ-ಹೇಳುವೆನು ॥೩೧॥ ॥ ಹೇರಾಘವ-ಎಲೆ ಶ್ರೀರಾಮನೇ, ನ್ಯಾಯ್ಯವೃತ್ತೇನ-ನೀತಿಮಾರ್ಗಯುಕ್ತವಾದ ಚರಿತ್ರೆಯುಳ್ಳ, ತೇನಸಹ-ಆ ಪುರುಷನೊಡನೆ, ಸಖ್ಯಂ-ಮೈತ್ರಿಯೂ, ಕರ್ತವ್ಯಂ-ಮಾಡತಕ್ಕದ್ದು, ಪ್ರೀತಃ-ಸಂತುಷ್ಟನಾಗಿ, ಲಘುವಿಕ್ರಮಃ-ಲಾಘವದಿಂ ಕೂಡಿದ ಪರಾಕ್ರಮವುಳ್ಳ ಆ ಪುರುಷನು. ತೇ-ನಿನಗೆ, ಸಹಾಯ್ಯಂ-ಸಹಾಯಕರ್ಮವನ್ನು, ಕಲ್ಪಯಿಷ್ಯತಿ-ಮಾಡುವನು ॥೩೨॥ ॥ ಹೇರಾಘವ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ, ಅಸೌ-ಈ ಪುರುಷನು. ಕಾರಣಾಂತರೇ-ನಿಮಿತ್ತಾಂತರದಲ್ಲಿ. ಸರ್ವಾನ್-ಸಮಸ್ತಗಳಾದ, ಲೋಕಾನ್-ಲೋಕಗಳನ್ನುಕುರಿತು, ಪರಿಸೃತಃ-ಸಂಚಾರಮಾಡಿಧಾನೆ, ತಸ್ಯ-ಆ ಪುರುಷನಿಗೆ. ತ್ರಿಷುಲೋಕೇಷು-ಮೂರು ಲೋಕಗಳಲ್ಲಿಯೂ, ಅವಿಜ್ಞಾತಂ-ತಿಳಿಯಲ್ಪಡದಿರುವದು. ನಹಿ-ಇಲ್ಲವಷ್ಟೆ ॥೩೩॥ ॥ —**ಏಕಸಪ್ತತಿತಮಸ್ಸರ್ಗಃ**—

ಏವಂ-ಈಪರಿಯಾಗಿ, ಕಬಂಧೇನ-ಕಬಂಧನಿಂದ, ಉಕ್ತೌ-ಹೇಳಲ್ಪಟ್ಟ। ವೀರೌ-ಶೂರರಾದ। ತೌನರೇಶ್ವರೌ-ಆ ಮನುಷ್ಯರಾಜರಾದ ರಾಮಲಕ್ಷ್ಮಣರು। ಗಿರಿಪ್ರದರಂ-ಬೆಟ್ಟದ ಸಮೀಪದಲ್ಲಿರುವ ಗುಣಿಯನ್ನು। ಆಸಾದ್ಯ-ಹೊಂದಿಸಿ। ಪಾವಕಂ-ಅಗ್ನಿಯನ್ನು। ವಿಸಸರ್ಜತುಃ-ಬಿಟ್ಟರು। ಅಂದರೆ-ಅಗ್ನಿಪ್ರದಾನವಂ ಮಾಡಿದರು ॥೧॥ ಲಕ್ಷ್ಮಣಸ್ತು-ಲಕ್ಷ್ಮಣನಾದರೆ। ಸಮಂತತಃ-ಎಲ್ಲಾಕಡೆಯಲ್ಲಿಯೂ। ಜ್ವಲಿತಾಭಿಃ-ಉರಿಯುತ್ತಿರುವ್ವ ಮಹೋಲ್ಕಾಭಿಃ-ದೊಡ್ಡಕೊಳ್ಳಿಗಳಿಂದ। ಚಿತಾಂ-ಚಿತಿಯನ್ನು। ಆದೀಪಯಾಮಾಸ-ಚನ್ನಾಗಿ ಹತ್ತಿಸಿದನು। ಸಾ-ಆ ಚಿತಿಯು। ಸರ್ವತಃ-ಎಲ್ಲಾಕಡೆಯಲ್ಲಿಯೂ। ಪ್ರಜಜ್ವಾಲ-ಉರಿಯುತ್ತಿತ್ತು ॥ ... ... ... ... ... ... ... ॥೨॥

ಮೇದಸಾ-ಮೇದಸ್ಸಿನಿಂದ. ಪಚ್ಯಮಾನಸ್ಯ-ಪಾಕಮಾಡಲ್ಪಡುತ್ತಿರುವ, ಕಬಂಧಸ್ಯ-ಕಬಂಧನ. ಘೃತಪಿಂಡೋಪಂ-ತುಪ್ಪದ ಗಡ್ಡೆಗೆ ಸಮಾನವಾದ

---

ಹೊಂದಲ್ಪಟ್ಟಿತು, ಮತ್ತೂ ಶಾಪದೋಷದಿಂದ ನನ್ನ ದಿವ್ಯಜ್ಞಾನವು ನಷ್ಟವಾಯಿತು, ಆದ್ದರಿಂದ ನನ್ನನ್ನು ಗುಣಿಯಲ್ಲಿರಿಸಿ, ಯಥಾವಿಧಿಯಾಗಿ ಈ ಹಗಲಿನಲ್ಲಿಯೇ ದಹನಂ ಗೈಯ್ಯುವವನಾಗು, ಅನಂತರದಲ್ಲಿ ಯಾವ ಪುರುಷನು ಆ ರಾಕ್ಷಸನಂ ಬಲ್ಲವನೋ ಅಂಥಾ ಪುರುಷನಂ ಪೇಳುವೆನು ।೩೧। ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೇ! ನೀತಿಯುಕ್ತವಾದ ಚರಿತ್ರೆಯುಳ್ಳ ಆ ಪುರುಷನೊಡನೆ ಮೈತ್ರಿಯು ಮಾಡಲೇಬೇಕು, ಹಾಗಾದರೆ ಮಹಾ ಪರಾಕ್ರಮಿಯಾದ ಆ ಪುರುಷನು ನಿನಿಗೆ ಸಹಾಯವಂ ಮಾಡುವನು, ಪೂರ್ವದಲ್ಲಿ ನಿಮಿತ್ತಾಂತರದಿಂದ ಈ ಪುರುಷನು ಸಮಸ್ತವಾದ ಲೋಕಗಳನ್ನು ಸಂಚರಿಸಿದನು, ಆದಕಾರಣ ಮೂಜಗಗಳಲ್ಲಿಯೂ ಆತನಿಗೆ ತಿಳಿಯದಿರುವದು ಯಾವದೊಂದೂ ಇಲ್ಲ ।೩೩। —* ಅರಣ್ಯಕಾಂಡದಲ್ಲಿನ ೭೧ನೆಯ ಸರ್ಗಂಮುಗಿದುದು *—

ಈ ರೀತಿಯಾಗಿ ಕಬಂಧನಿಂದ ಪೇಳಲ್ಪಟ್ಟವರಾಗಿ ಆ ರಾಮಲಕ್ಷ್ಮಣರು ಆತನನ್ನು ಪರ್ವತ ಸಮೀಪದಲ್ಲಿರುವ ಗುಣಿಯನ್ನೈದಿಸಿ ಅಗ್ನಿಪ್ರದಾನಂ ಗೈದನು ।೧। ಆ ವೇಳೆಯಲ್ಲಿ ಲಕ್ಷ್ಮಣನಾದರೆ, ಸುತ್ತುಮುತ್ತಲೂ ಉರಿಯುತಲಿರುವ ದೊಡ್ಡದೊಡ್ಡ ಕೊಳ್ಳಿಗಳಿಂದ ಆ ಚಿತಿಯನ್ನು ಚೆನ್ನಾಗಿ ಹತ್ತಿಸಿದವನಾಗಲೂ, ಅದು ಯೆಲ್ಲಾಕಡೆಯಲ್ಲಿಯೂ ಉರಿಯುತ್ತಿತ್ತು ।೨॥ ಅನಂತರದಲ್ಲಿ ಅಗ್ನಿಯು ಮೇದಸ್ಸಿನಿಂದ ಪಚನಂ ಗೈಯ್ಯಲ್ಪಡುತಲಿರುವ

ತಚ್ಛರೀರಂಕಬಂಧಸ್ಯಘೃತಪಿಂಡೋಪಮಂಮಹತ್ । ಮೇದಸಾಪಚ್ಯಮಾನಸ್ಯಮಂದಂದಹತಿಪಾವಕಃ ।೩। ಸವಿಧೂಯಚಿತಾಮಾಶುವಿಧೂಮೋಗ್ನಿರಿವೋತ್ಥಿತಃ । ಅರಜೇವಾಸಸೀಬಿಭ್ರನ್ಮಾಲಾಂದಿವ್ಯಾಂಮಹಾಬಲಃ ।೪। ತತಶ್ಚಿತಾಯಾವೇಗೇನಭಾಸ್ವರೋವಿಮಲಾಂಬರಃ । ಉತ್ಪಪಾತಾಶುಸಂಹೃಷ್ಟಸ್ಸರ್ವಪ್ರತ್ಯಂಗಭೂಷಣಃ ।೫। ವಿಮಾನೇಭಾಸ್ವರೇತಿಷ್ಠನ್ ಹಂಸಯುಕ್ತೇಯಶಸ್ಕರೇ । ಪ್ರಭಯಾಚಮಹಾತೇಜಾದಿಶೋದಶವಿರಾಜಯನ್ ।೬। ಸೋಂತರಿಕ್ಷಗತೋರಾಮಂಕಬಂಧೋವಾಕ್ಯಮಬ್ರವೀತ್ । ಶೃಣುರಾಘವತತ್ವೇನಯಥಾಸೀತಾಮವಾಪ್ಸ್ಯಸಿ ।೭। ರಾಮಷಡ್ಯುಕ್ತಯೋಲೋಕೇಯಾಭಿಸ್ಸರ್ವಂವಿಮೃಶ್ಯತೇ । ಪರಿಮೃಷ್ಟೋದಶಾಂತೇನದಶಾಭಾಗೇನಸೇವ್ಯತೇ । ದಶಾಭಾಗಗತೋಹೀನಸ್ತ್ವಂಹಿರಾಮಸ್ಸಲಕ್ಷ್ಮಣಃ । ಯತ್ಕೃತೇವ್ಯಸನಂಪ್ರಾಪ್ತಂತ್ವಯಾದಾರಪ್ರಧರ್ಷಣಂ ।೮। ತದವಶ್ಯಂತ್ವಯಾಕಾರ್ಯಸ್ಸಸುಹೃ

ಮಹತ್-ದೊಡ್ಡದಾದ, ತಚ್ಛರೀರಂ-ಆ ಶರೀರವನ್ನು, ಪಾವಕಃ-ಅಗ್ನಿಯು, ಮಂದಂ-ಮೆಲ್ಲಗೆ, ದಹತಿ-ದಹಿಸುತ್ತಿತ್ತು ॥೩॥ ಮಹಾಬಲಃ-ಮಹಾ ಸಾಮರ್ಥ್ಯವಂತನಾದ, ಸಃ-ಆ ಕಬಂಧನು, ಆಶು-ಜಾಗ್ರತೆಯಾಗಿ, ಚಿತಾಂ-ಚಿತಿಯನ್ನು, ವಿಧೂಯ-ಕೊಡವಿ, ಅರಜೇ-ಕ್ಷಾಳಿತವಾದ, ವಾಸಸೀ-ವಸ್ತ್ರಗಳನ್ನು, ದಿವ್ಯಾಂ-ದೇವತಾಸಂಬಂಧವಾದ ಮಾಲಾಂ-ಪುಷ್ಪಮಾಲಿಕೆಯನ್ನು, ಬಿಭ್ರತ್-ಧರಿಸುತ್ತಿರುವನಾಗಿ. ವಿಧೂಮಃ-ಹೊಗೆಯಿಲ್ಲದಿರುವ, ಅಗ್ನಿರಿವ-ಅಗ್ನಿಯಂತೆ, ಉತ್ಥಿತಃ-ಮ್ಯಾಲಕ್ಕೆದ್ದನು ॥೪॥ ತತಃ-ಬಳಿಕ. ವೇಗೇನ-ಜವದಿಂದ, ಭಾಸ್ವರಃ-ಹೊಳೆಯುತ್ತಿರುವ, ವಿಮಲಾಂಬರಃ-ನಿರ್ಮಲವಾದ ವಸ್ತ್ರಗಳುಳ್ಳ, ಸರ್ವಪ್ರತ್ಯಂಗಭೂಷಣಃ-ಸಮಗ್ರವಾಗಿ ಪ್ರತ್ಯವಯವಗಳಲ್ಲಿಯೂ ಆಭರಣಗಳುಳ್ಳವನಾಗಿ, ಸಂಹೃಷ್ಟಃ-ನಗುತ್ತಿರುವವನಾಗಿ, ಆಶು-ಜಾಗ್ರತೆಯಾಗಿ. ಚಿತಾಯಾಃ-ಆ ಚಿತಿಯದೆಶೆಯಿಂದ, ಉತ್ಪಪಾತ-ಹಾರಿದನು ॥೫॥ ಹಂಸಯುಕ್ತೇ-ಹಂಸಪಕ್ಷಿಗಳಿಂ ಕೂಡಿಕೊಂಡಿರುವ, ಯಶಸ್ಕರೇ-ಕೀರ್ತಿಕರವಾದ, ಭಾಸ್ವರೇ-ಪ್ರಕಾಶಿಸುತ್ತಿರುವ. ವಿಮಾನೇ-ದೇವರಥದಲ್ಲಿ, ತಿಷ್ಠನ್-ಕುಳಿತುಕೊಂಡಿರುವನಾಗಿ, ಮಹಾತೇಜಾಃ-ಬಹಳವಾದ ತೇಜಸ್ಸುಳ್ಳವನಾಗಿ. ಪ್ರಭಯಾ-ಕಾಂತಿಯಿಂದ ದಶದಿಶಃ-ಹತ್ತುದಿಕ್ಕುಗಳನ್ನು, ವಿರಾಜಯನ್-ಹೊಳೆಯುವಂತೆ ಮಾಡುತ್ತಿರುವವನಾಗಿ, ಸಕಬಂಧಃ-ಆ ಕಬಂಧನು, ಅಂತರಿಕ್ಷಗತಃ-ಅಂತರಿಕ್ಷಮಾರ್ಗವಂ ಹೊಂದಿದವನಾಗಿ, ರಾಮಂ-ಶ್ರೀರಾಮನಂಕುರಿತು. ವಾಕ್ಯಂ-ಮಾತಿನನ್ನು. ಅಬ್ರವೀತ್-ನುಡಿದನು ॥ ಹೇರಾಘವ-ಎಲೈಶ್ರೀರಾಮನೇ, ಯಥಾ-ಹ್ಯಾಗೆ, ಸೀತಾಂ-ಸೀತಾದೇವಿಯನ್ನು. ಅವಾಪ್ಸ್ಯಸಿ-ಹೊಂದುವೆಯೋ, ತಥಾ-ಹಾಗೆಯೇ, ತತ್ವೇನ-ಯಥಾರ್ಥದಿಂದ, ಶೃಣು-ಕೇಳು ॥೭॥ ಹೇರಾಮ-ಎಲೈ ಶ್ರೀರಾಮನೇ. ಲೋಕೇ-ಲೋಕದಲ್ಲಿ, ಯಾಭಿಃ-ಯಾವ ಉಪಾಯಗಳಿಂದ, ಸರ್ವಂ-ಸಮಸ್ತ ರಾಜಕಾರ್ಯವು, ವಿಮೃಶ್ಯತೇ-ವಿಚಾರಿಸಲ್ಪಡುತ್ತದೋ. ತಾಃ-ಅಂಥಾ, ಯುಕ್ತಯಃ-ವುಪಾಯಗಳು, ಷಟ್-ಆರು, ಸಂತಿ-ಇರುತ್ತವೆ, ದಶಾಂತೇನ-ದುಃಖಾವಸ್ಥಾರೂಪವಾದ ದಶೆಯ, ಅಂತೇನ-ಪರಿಪಾಕದಿಂದ, ಪರಿಮೃಷ್ಟಃ-ಹೊಂದಲ್ಪಟ್ಟಪುರುಷನು, ದಶಾಭಾಗೇನ-ದುರವಸ್ಥೆಯ ಪರಿಪಾಕವುಳ್ಳ ಪುರುಷನಿಂದ, ಸೇವ್ಯತೇ-ಕೂಡಿಸಲ್ಪಡುತ್ತಾನೆ. ಹಿ-ಯಾವಕಾರಣದ ದೆಶೆಯಿಂದ, ಹೇರಾಮ-ಎಲೈ ಶ್ರೀರಾಮನೇ. ಸಲಕ್ಷ್ಮಣಃ-ಲಕ್ಷ್ಮಣನೊಡಗೂಡಿದ, ತ್ವಂ-ನೀನು, ದಶಾಭಾಗಗತಃ-ದುರವಸ್ಥೆಯ ಪರಿಪಾಕವನ್ನು ಹೊಂದಿದವನು, ಹೀನಶ್ಚ-ಹೀನಾವಸ್ಥೆಯಿಂ ಹೊಂದಿದವನು, ಯತ್ಕೃತೇ-ಯಾವನಿಮಿತ್ತವಾಗಿ, ತ್ವಯಾ-ನಿನ್ನಿಂದ, ದಾರಪ್ರಧರ್ಷಣಂ-ಹೆಂಡತಿಯ ಅಪಹಾರರೂಪವಾದ, ವ್ಯಸನಂ-ಶೋಕವು, ಪ್ರಾಪ್ತಂ-ಹೊಂದಲ್ಪಟ್ಟಿತೋ. (ಯದ್ವಾ-ಹೇರಾಮ-ಎಲೈ ಶ್ರೀರಾಮನೇ, ಲೋಕೇ-ಲೋಕದಲ್ಲಿ, ಷಡ್ಯುಕ್ತಯಃ-ಆರು ಪ್ರಮಾಣಗಳು, ಸಂತಿ-ಇರುತ್ತವೆ, ಅವು ಯಾವವೆಂದರೆ,— ಪ್ರತ್ಯಕ್ಷ ಅನುಮಾನ ಉಪಮಾನ ಶಬ್ದರೂಪಪ್ರಮಾಣ ಅರ್ಥಾಪತ್ತಿ ಅನುಪಲಭ್ಯ ಯಾಭಿಃ-ಯಾವ ಪ್ರತ್ಯಕ್ಷಾದಿ ಪ್ರಮಾಣಗಳಿಂದ. ಸರ್ವಂ-ಸಮಸ್ತವು, ವಿಮೃಶ್ಯತೇ-ತಿಳಿಯಲ್ಪಡುತ್ತದೋ, ಈ ಅರ್ಥದಲ್ಲಿ ಸರ್ವಪ್ರಮಾಣಗಳಿಂದಲೂ ಕ್ಷೀಣವೃತ್ತಿಯುಳ್ಳ ಪುರುಷನು, ಕ್ಷೀಣನಾದ ಪುರುಷನಿಂದಲೇ ಹೊಂದಲ್ಪಡುತ್ತಾನೆ ನೀನು ದುಃಖಪಟ್ಟಿದ್ದೀ ಯೆಂಬುದು ಪ್ರತ್ಯಕ್ಷಪ್ರಮಾಣದಿಂ ಸಿದ್ಧವಾಗಿದೆ,) ॥೮॥ ತತ್-ಆ ಕಾರಣದದೆಶೆಯಿಂದ, ಸುಹೃದಾಂ-

ಮತ್ತೂ, ಆಜ್ಯಪಿಂಡಕ್ಕೆ ಸಮಾನವಾದ ಆತನ ಶರೀರವನ್ನು ಮೆಲ್ಲಮೆಲ್ಲನೆ ದಹಿಸಿದಂಥಾದ್ದಾಯಿತು ।೩। ಅನಂತರದಲ್ಲಿ ಮಹಾ ಸಮರ್ಥನಾದ ಆ ಕಬಂಧನು, ತ್ವರೆಯಿಂದ ಆ ಚಿತಿಯಂ ಬಿಟ್ಟು, ಶುಭ್ರವಾದ ವಸ್ತ್ರಗಳನ್ನೂ ದೇವತಾ ಸಂಬಂಧವಾದ ಪುಷ್ಪಮಾಲಿಕೆಯನ್ನೂ ಸಹಾ ಧರಿಸಿದವನಾಗಿ, ಹೊಗೆಯಿಲ್ಲದಿರುವ ಅಗ್ನಿಯಂತೆ ಬೆಳಗುವವನಾಗಿಯೂ, ಸ್ವಚ್ಛವಾಗಿರುವ ವಸ್ತ್ರಗಳುಳ್ಳವನಾಗಿಯೂ, ಸಂಪೂರ್ಣವಾಗಿ ಪ್ರತಿಅವಯವಗಳಲ್ಲಿ ಆಭರಣಗಳಂ ಧರಿಸಿದವನಾಗಿಯೂ ಸಂತೋಷಚಿತ್ತನಾಗಿಯೂ ಸಹಾ ಆ ಚಿತಿಯಿಂದೆದ್ದು ಮೇಲಕ್ಕೆಹಾರಿದನು ।೫। ಸಮನಂತರಕಾಲದಲ್ಲಿ ಆ ಕಬಂಧನು, ಬಹು ಭೀತಿಯನ್ನುಂಟುಮಾಡುವ ಮತ್ತೂ ಬೆಳಗುವ ವಿಮಾನದಲ್ಲಿ ಕುಳಿತವನಾಗಿ, ತನ್ನ ಕಾಂತಿಯಿಂದ ದಶದಿಕ್ಕುಗಳಂ ಬೆಳಗುವಂತೆ ಗೈಯ್ಯುತ್ತಾ, ಗಗನಮಾರ್ಗದಲ್ಲಿರುವವನಾಗಿ ಶ್ರೀರಾಮನಂ ಕುರಿತಿಂತೆಂದನು ।೭। ಎಲೈ ಶ್ರೀರಾಮನೇ! ಲೋಕದಲ್ಲಿ ಯಾವ ಉಪಾಯಗಳಿಂದ ಸಮಸ್ತವಾದ ರಾಜಕಾರ್ಯಗಳು ವಿಚಾರಿಸಲ್ಪಡುವವೋ, ಅಂಥಾ ಉಪಾಯಂಗಳು “ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಭ್ಯ ” ಎಂದು ಆರುವಿಧವಾಗಿರುವವು, ದುಃಖಾವಸ್ಥೆಯನ್ನೈದಿದ ಪುರುಷನು ದುರವಸ್ಥೆಯಂ ಹೊಂದಿದ ಪುರುಷನಿಂದ ಸೇವಿಸಲ್ಪಡುತ್ತಾನೆ, ಆದ್ದರಿಂದ ಲಕ್ಷ್ಮಣನಿಂದ ಯುಕ್ತನಾದ ನೀನು ಸೀತಾಪ

ತ್ಸುಹೃದಾಂವರ । ಅಕೃತ್ವಾಹಿನತೆಸಿದ್ಧಿಮಹಂಪಶ್ಯಾಮಿಚಿಂತಯರ್ ॥೧೦॥ ಶ್ರೂಯತಾಂರಾಮವಕ್ಷ್ಯಾಮಿಸುಗ್ರೀವೋನಾಮವಾನರಃ । ಭ್ರಾತ್ರಾನಿರಸ್ತಃಕ್ರುದ್ಧೆನವಾಲಿನಾಶಕ್ರಸೂನುನಾ । ಋಶ್ಯಮೂಕೆಗಿರಿವರೆಪಂಪಾಪರ್ಯಂತಶೋಭಿತೆ । ನಿವಸತ್ಯಾತ್ಮವಾನ್ವೀರಶ್ಚತುರ್ಭಿಸ್ಸಹವಾನರೈಃ ॥೧೧॥ ವಾನರೇಂದ್ರೋಮಹಾವೀರ್ಯಸ್ತೇಜೋವಾನಮಿತಪ್ರಭಃ । ಸತ್ಯಸಂಧೋವಿನೀತಶ್ಚಧೃತಿಮಾನ್ಮತಿಮಾನ್ಮಹಾನ್ । ದಕ್ಷಃಪ್ರಗಲ್ಭೋದ್ಯುತಿಮಾನ್ಮಹಾಬಲಪರಾಕ್ರಮಃ ॥ ಭ್ರಾತ್ರಾವಿವಾಸಿತೋರಾಮರಾಜ್ಯಹೆತೋರ್ಮಹಾಬಲಃ । ಸತೆಸಹಾಯೋಮಿತ್ರಂಚಸೀತಾಯಾಃಪರಿಮಾರ್ಗಣೆ । ಭವಿಷ್ಯತಿಹಿತೆರಾಮಮಾಚಶೋಕೆಮನಃಕೃಥಾಃ ॥೧೨॥ ಭವಿತವ್ಯಂಹಿಯಚ್ಚಾಪಿನತಚ್ಛಕ್ಯಮಿಹಾನ್ಯಥಾ । ಕರ್ತುಮಿಕ್ಷ್ವಾಕುಶಾರ್ದೂಲಕಾಲೋಹಿದುರತಿಕ್ರಮಃ ॥೧೩॥ ಗಚ್ಛಶೀಘ್ರಮಿತೋರಾಮಸುಗ್ರೀವಂತಂಮಹಾಬಲಂ । ವ

ಸ್ನೇಹಿತರೊಳಗೆ, ವರ-ಶ್ರೇಷ್ಠನೇ, ತ್ವಯಾ-ನಿನ್ನಿಂದ, ಸಃ-ಆ ಪುರುಷನು, ಅವಶ್ಯಂ-ನಿಶ್ಚಯವಾಗಿ, ಸುಹೃತ್-ಸ್ನೇಹಿತನಾಗಿ, ಕಾರ್ಯಃ-ಮಾಡಿಕೊಳ್ಳತಕ್ಕವನು, ಅಕೃತ್ವಾ-ಮಾಡಿಕೊಳ್ಳದೇ ಹೋದರೆ, ಅಹಂ-ನಾನು. ಚಿಂತಯನ್-ಆಲೋಚಿಸುತ್ತಿರುವವನಾಗಿ, ತೆ-ನಿನಗೆ, ಸಿದ್ಧಿಂ-ಕಾರ್ಯಸಿದ್ಧಿಯನ್ನು, ನಪಶ್ಯಾಮಿ-ಕಾಣೆನೋ ॥೧೦॥ ಹೇರಾಮ-ಎಲೈ ಶ್ರೀರಾಮನೇ. ಶ್ರೂಯತಾಂ-ಕೇಳಲ್ಪಡಲೀ, ವಕ್ಷ್ಯಾಮಿ-ಹೇಳುವೆನು, ಸುಗ್ರೀವೋನಾಮ-ಸುಗ್ರೀವನೆಂದು ಪ್ರಸಿದ್ಧನಾದ, ವಾನರಃ-ಕಪಿಯು. ಕ್ರುದ್ಧೇನ-ಕೋಪಿಷ್ಠನಾದ, ಭ್ರಾತ್ರಾ-ಅಣ್ಣನಾದ, ಶಕ್ರಸೂನುನಾ-ಇಂದ್ರನ ಕುಮಾರನಾದ, ವಾಲಿನಾ-ವಾಲಿಯಿಂದ. ನಿರಸ್ತಃ-ಹೊಡೆಯಲ್ಪಟ್ಟವನಾಗಿ, ಪಂಪಾಪರ್ಯಂತಶೋಭಿತೆ-ಪಂಪಾನದಿಯ, ಪರ್ಯಂತ-ಸಮೀಪದಲ್ಲಿ, ಶೋಭಿತೆ-ಹೊಳೆಯುತ್ತಿರುವ. ಋಶ್ಯಮೂಕೆ-ಋಶ್ಯಮೂಕವೆಂಬ, ಗಿರಿವರೆ-ದೊಡ್ಡಬೆಟ್ಟದಲ್ಲಿ, ಚತುರ್ಭಿಃ-ನಾಲ್ವರಾದ, ವಾನರೈಸ್ಸಹ-ಕಪಿಗಳೊಡನೇ, ನಿವಸತಿ-ಇರುತ್ತಾನೆ, ಆತ್ಮವಾನ್-ಧೈರ್ಯವಂತನಾಗಿಧಾನೆ, ವೀರಃ-ಶೂರನಾಗಿಧಾನೆ ॥೧೧॥ ಹೇರಾಮ-ಎಲೈ ಶ್ರೀರಾಮನೇ. ವಾನರೇಂದ್ರಃ-ವಾನರಶ್ರೇಷ್ಠನಾದ, ಮಹಾವೀರ್ಯಃ-ಬಹಳ ಸಾಮರ್ಥ್ಯವಂತನಾದ, ತೇಜೋವಾನ್-ಅಂತಸ್ಸಾರವುಳ್ಳ, ಅಮಿತಪ್ರಭಃ-ಅಪಾರವಾದ ಪ್ರಕಾಶಮುಳ್ಳ, ಸತ್ಯಸಂಧಃ-ಸತ್ಯವಾದ ಪ್ರತಿಜ್ಞೆಯುಳ್ಳ. ವಿನೀತಃ-ವಿನಯಸಂಪನ್ನನಾದ, ಧೃತಿಮಾನ್-ಧೈರ್ಯಶಾಲಿಯಾದ, ಮತಿಮಾನ್-ಬುದ್ಧಿಶಾಲಿಯಾದ. ಮಹಾನ್-ದೊಡ್ಡವನಾದ. ದಕ್ಷಃ-ಕಾರ್ಯಸಮರ್ಥನಾದ, ಪ್ರಗಲ್ಭಃ-ವಿಚಕ್ಷಣನಾದ, ದ್ಯುತಿಮಾನ್-ಕಾಂತಿವಂತನಾದ, ಮಹಾಬಲಪರಾಕ್ರಮಃ-ಬಹಳವಾದ ದೇಹತ್ರಾಣವೂ, ಪರಾಕ್ರಮವೂ ವುಳ್ಳ, ಮಹಾಬಲಃ-ಬಹಳ ಶಕ್ತಿಯುಳ್ಳ, ಆ ಸುಗ್ರೀವನು, ರಾಜ್ಯಹೆತೋಃ-ರಾಜ್ಯದ ನಿಮಿತ್ತದ ದೆಸೆಯಿಂದ. ಭ್ರಾತ್ರಾ-ಅಣ್ಣನಾದ ವಾಲಿಯಿಂದ, ವಿವಾಸಿತಃ-ಹೊರಡಿಸಲ್ಪಟ್ಟನು, ಸಃ-ಆ ಸುಗ್ರೀವನು. ತೆ-ನಿನಗೆ, ಸೀತಾಯಾಃ-ಸೀತಾದೇವಿಯ. ಪರಿಮಾರ್ಗಣೆ-ಹುಡುಕುವಿಕೆಯವಿಷಯದಲ್ಲಿ, ಮಿತ್ರಂ-ಸ್ನೇಹಿತನಾಗಿ, ಸಹಾಯಃ-ಸಹಾಯಕರನು. ಭವಿಷ್ಯತಿಹಿ-ಆಗುವನಷ್ಟೆ, ॥ ಹೇರಾಮ-ಎಲೈ ಶ್ರೀರಾಮನೇ, ತೆ-ನಿನ್ನ, ಮನಃ-ಮನಸ್ಸು. ಶೋಕೆ-ವ್ಯಸನದಲ್ಲಿ, ಮಾಕೃಥಾಃ-ಮಾಡಬ್ಯಾಡ ॥೧೨॥ ಹೇಇಕ್ಷ್ವಾಕುಶಾರ್ದೂಲ-ಎಲೈ ಇಕ್ಷ್ವಾಕು ವಂಶದಲ್ಲಿ ಶ್ರೇಷ್ಠನಾದವನೇ, ಹಿ-ಯಾವಕಾರಣದದೆಶೆಯಿಂದ, ಕಾಲಃ-ಕಾಲವು. ದುರತಿಕ್ರಮಃ-ಅತಿಕ್ರಮಿಲಸಾಧ್ಯವೋ, ಯದ್ಭವಿತವ್ಯಂ-ಯಾವದಾಗತಕ್ಕದ್ದೋ. ತತ್-ಅದು. ಇಹ-ಈ ಲೋಕದಲ್ಲಿ. ಅನ್ಯಥಾ-ಮತ್ತೊಂದುಬಗೆಯಾಗಿ. ಕರ್ತುಂ-ಮಾಡುವದಕ್ಕೆ, ನಶಕ್ಯಂಹಿ-ಅಸಾಧ್ಯವಷ್ಟೆ ॥೧೩॥ ಹೇರಾಮ-ಎಲೈ ಶ್ರೀರಾಮನೇ, ಇತಃ-ಇಲ್ಲಿಂದ, ಶೀಘ್ರಂ-ಜಾಗ್ರತೆಯಾ

ಹಾರರೂಪವಾದ ದುಃಖಾವಸ್ಥೆಯಂ ಪೊಂದಿದವನಾಗಿದ್ದೀಯಾದಕಾರಣ ನಾನು ಹೇಳತಕ್ಕ ಪುರುಷನ ಸಂಗಡ ಅಗತ್ಯವಾಗಿ ಸ್ನೇಹವಂ ಬೆಳಯಿಸಲೇ ಬೇಕು, ಇಲ್ಲದಿದ್ದರೆ,—ನಿನ್ನ ಕಾರ್ಯ ಸಿದ್ಧಿ ಉಂಟಾಗಲಾರದೆಂದು ಯೋಚಿಸುತ್ತೇನೆ. ।೧೦। ಎಲೈ ಶ್ರೀರಾಮನೇ! ಕೇಳುವವನಾಗು, ಸುಗ್ರೀವನೆಂದು ಪ್ರಖ್ಯಾತನಾದ ಓರ್ವ ವಾನರನಿರುವನು, ಆತನು ಮಹಾ ಕೋಪವನ್ನೈದಿದ ತನ್ನಗ್ರಜನಾದ ವಾಲೀಎಂಬವನಿಂದ ಹೊರಡಿಸಲ್ಪಟ್ಟವನಾಗಿ, ಪಂಪಾನದಿಯ ಸಮೀಪದಲ್ಲಿರುವ ಋಶ್ಯಮೂಕಪರ್ವತದಲ್ಲಿ, ತನ್ನ ಸಖರಾದ ನಾಲ್ಕುಮಂದಿ ಕಪಿಗಳಿಂದೊಡಗೂಡಿ ಇರುವನು, ಆತನು ಮಹಾಧೈರ್ಯವಂತನಾಗಿಯೂ ಶೂರನಾಗಿಯೂ ಇರುವನು ।೧೧। ಕೇಳೆಲೈ ರಘುಕುಲಾನಂದಕರನೇ! ವಾನರೇಂದ್ರನಾದ ಆ ಸುಗ್ರೀವನು, ಮಹಾ ಪರಾಕ್ರಮಶಾಲಿಯಾಗಿಯೂ. ಬಹು ಅಂತಸ್ಸಾರವುಳ್ಳವನಾಗಿಯೂ, ಬಹಳ ಬೆಳಕುಳ್ಳವನಾಗಿಯೂ, ಸತ್ಯವಾದ ಪ್ರತಿಜ್ಞೆಯುಳ್ಳವನಾಗಿಯೂ, ವಿನಯಸಂಪನ್ನನಾಗಿಯೂ ಧೈರ್ಯಶಾಲಿಯಾಗಿಯೂ, ಬುದ್ಧಿವಂತನಾಗಿಯೂ, ದೊಡ್ಡವನಾಗಿಯೂ, ಕೃತ್ಯಗಳಂ ಗೈಯ್ಯುವದರಲ್ಲಿ ಸಮರ್ಥನಾಗಿಯೂ, ವಿಚಕ್ಷಣೆಯುಳ್ಳವನಾಗಿಯೂ, ಮಹಾ ಪ್ರಕಾಶೆಯುಳ್ಳವನಾಗಿಯೂ, ಬಹು ಶಕ್ತಿಯುಳ್ಳವನಾಗಿಯೂ ಸಹಾ ಇರುವನು, ಆತನು ರಾಜ್ಯನಿಮಿತ್ತವಾಗಿ ತನ್ನ ಅಗ್ರಜನಾದ ವಾಲಿಯೆಂಬವನಿಂದ ಹೊರಡಿಸಲ್ಪಟ್ಟಿರುವನು, ಆ ವಾನರನು ಸೀತಾದೇವಿಯನ್ನು ಹುಡುಕುವ ವಿಷಯದಲ್ಲಿ ನಿನಗೆ ಸಹಾಯಕರನಾಗಿರುವನು ನೀನು ಚಿಂತಿಸಬೇಡ; ಕಾಲಗತಿಯು ಮೀರಲಸಾಧ್ಯವಾದದ್ದು, ಈ ಲೋಕದಲ್ಲಿ ಯಾವದ್ಯಾವದು ನಡೆಯಬೇಕಾಗಿರುವದೋ ಅದು ಅಂತಂತೆ ಆಗುವದೇ ಹೊರತು ಮತ್ತೊಂದು ವಿಧವಾಗಿ ಆಗಲಾರದು, ಆದ್ದರಿಂದ ನೀನು ಇ

ಯಸ್ಯಂತಂಕುರುಕ್ಷಿಪ್ರಮಿತೋಗತ್ವಾದ್ಯರಾಘವ । ಅದ್ರೋಹಾಯಸಮಾಗಮ್ಯದೀಪ್ಯಮಾನೇವಿಭಾವಸೌ ।೧೮।
ಸಚತೇನಾವಮಂತವ್ಯಸ್ಸುಗ್ರೀವೋವಾನರಾಧಿಪಃ । ಕೃತಜ್ಞಃಕಾಮರೂಪೀಚಸಹಾಯಾರ್ಥೀಚವೀರ್ಯವಾನ್ ॥೧೯॥ಸ
ಕ್ತೌಹ್ಯದ್ಯಯುವಾಂಕರ್ತುಂಕಾರ್ಯಂತಸ್ಯಚಿಕೀರ್ಷಿತಂ। ಕೃತಾರ್ಥೋವಾಕೃತಾರ್ಥೋವಾಕೃತ್ಯಂತವಕರಿಷ್ಯತಿ ।
ಸಋಕ್ಷರಜಸಃಪುತ್ರಃಪಂಪಾಮಟತಿಶಂಕಿತಃ॥ ಭಾಸ್ಕರಸ್ಯೌರಸಃಪುತ್ರೋವಾಲಿನಾಕೃತಕಿಲ್ಬಿಷಃ ॥೨೦॥ ಸನ್ನಿಧಾಯಾ
ಯುಧಂಕ್ಷಿಪ್ರಮೃಶ್ಯಮೂಕಾಲಯಂಕಪಿಂ ॥ ಕುರುರಾಘವಸತ್ಯೇನವಯಸ್ಯಂವನಚಾರಿಣಂ ।೨೧।॥ ಸಹಿಸ್ಥಾನಾನಿಸ
ರ್ವಾಣಿಕಾರ್ತ್ಸ್ನ್ಯೇನಕಪಿಕುಂಜರಃ ॥ ನರಮಾಂಸಾಶಿನಾಂಲೋಕೇನೈಪುಣ್ಯಾದಧಿಗಚ್ಛತಿ ॥೨೨॥ನತಸ್ಯಾವಿದಿತಂಲೋಕೇ
ಕಿಂಚಿದಸ್ತಿಹಿರಾಘವ । ಯಾವತ್ಸೂರ್ಯಃಪ್ರತಪತಿಸಹಸ್ರಾಂಶುರರಿಂದಮ ॥೨೩॥ಸನದೀರ್ವಿಪುಲಾಂಛೈಲಾನ್ಗಿರಿದುರ್ಗಾ

---

೧. ಮಹಾಬಲಂ-ಬಲುಬಲವಂತನಾದ, ತಂಸುಗ್ರೀವಂ-ಆ ಸುಗ್ರೀವನಂಕುರಿತು. ಗಚ್ಛ-ಹೋಗು, ಹೇರಾಘವ-ಎಲೈ ಶ್ರೀರಾಮನೇ, ಅದ್ಯ-ಈಗ, ಇತಃ-ಇಲ್ಲಿಂದ. ಗತ್ವಾ-ಹೋಗಿ, ತಂ-ಆ ಸುಗ್ರೀವನನ್ನು, ಸಮಾಗಮ್ಯ-ಹೊಂದಿ, ಅದ್ರೋಹಾಯ-ದ್ರೋಹವಿಲ್ಲದಿರುವದಕ್ಕೋಸ್ಕರ. (ಯುವಾಂ-ಪರಸ್ಪರ ಕ್ಷೇಮಕ್ಕಾಗಿ, ವಿಭಾವಸುಃ-ಅಗ್ನಿಯು, ದೀಪ್ಯಮಾನೇಸತಿ-ಪ್ರಜ್ವಲಿಸುತ್ತಿರಲೀಕಾಗಿ. ವಯಸ್ಯಂ-ಮಿತ್ರನನ್ನಾಗಿ. ಕ್ಷಿಪ್ರಂ-ಜಾಗ್ರತೆಯಾಗಿ, ಕುರು-ಮಾಡಿಕೋ ॥೧೮॥ ॥ ಸಃಚ-ಆ, ವಾನರಾಧಿಪಃ-ಕಪಿಗಳಿಗಧಿಪತಿಯಾದ, ಸುಗ್ರೀವಃ-ಸುಗ್ರೀವನು. ತೇ-ನಿನಗೆ, ನಾವಮಂತವ್ಯಃ-ಅವಮಾನವಮಾಡತಕ್ಕವನಲ್ಲ. ಕೃತಜ್ಞಃ-ಮಾಡಿದ ವುಪಕಾರವಂ ಎಣಿಸುವನು. ಕಾಮರೂಪೀಚ-ಯಾವಯಾವ ರೂಪವನ್ನಪೇಕ್ಷಿಸಿದರೆ ಆಯಾಯ ರೂಪವಂಹೊಂದತಕ್ಕವನು ಸಹಾಯಾರ್ಥೀ-ಸಹಾಯವಂಕೋರುತ್ತಿರುವನು. ವೀರ್ಯವಾಂಶ್ಚ-ಸ್ವಸಾಮರ್ಥ್ಯವಂತನೂ ॥೧೯॥ ॥ ಯುವಾಂ-ನೀವಿಗಳು, ತಸ್ಯ-ಆ ಸುಗ್ರೀವನ, ಚಿಕೀರ್ಷಿತಂ-ಮಾಡಲಿಚ್ಛಾವಿಷಯವಾದ, ಕಾರ್ಯಂ-ಕಾರ್ಯವನ್ನು ಕರ್ತುಂ-ಮಾಡುವದಕ್ಕಾಗಿ. ಶಕ್ತೌಹಿ-ಸಮರ್ಥರಷ್ಟೇ, ಕೃತಾರ್ಥೋವಾ-ಮಾಡಲ್ಪಟ್ಟ ಕಾರ್ಯವುಳ್ಳವನೇ ಆಗಲಿ, ಅಕೃತಾರ್ಥೋವಾ-ಮಾಡಲ್ಪಡದಿರುವ ಪ್ರಯೋಜನವುಳ್ಳವನೇ ಆಗಲಿ, ತವ-ನಿನಗೆ, ಕೃತ್ಯಂ-ಕಾರ್ಯವನ್ನು ಕರಿಷ್ಯತಿ-ಮಾಡುವನು ॥೧೯॥ ॥ ಸಃ-ಆ ಸುಗ್ರೀವನು, ಋಕ್ಷರಜಃ-ಋಕ್ಷರಜಸ್ಸೆಂಬವನಿಗೆ, ಪುತ್ರಃ-ಕುಮಾರನು, ಶಂಕಿತಃ-ಭಯಗೊಂಡವನಾಗಿ, ಪಂಪಾಂ-ಪಂಪಾನದಿಯನ್ನುಕುರಿತು, ಅಟತಿ-ಸಂಚರಿಸುತ್ತಾನೆ, ಭಾಸ್ಕರಸ್ಯ-ಸೂರ್ಯನಿಗೆ, ಔರಸಃ-ಹೊಟ್ಟೆಯಲ್ಲಿ ಪುಟ್ಟಿದ, ಪುತ್ರಃ-ಮಗನು, ವಾಲಿನಾ-ವಾಲಿಯಿಂದ, ಕೃತಕಿಲ್ಬಿಷಃ-ಮಾಡಲ್ಪಟ್ಟ ಅಪರಾಧವುಳ್ಳವನು ॥೨೦॥ ॥ ಹೇರಾಘವ-ಎಲೈ ಶ್ರೀರಾಮನೇ, ಆಯುಧಂ-ಆಯುಧವನ್ನು, ಸನ್ನಿಧಾಯ-ಅಗ್ನಿಸನ್ನಿಧಾನದಲ್ಲಿರಿಸಿ, ಋಶ್ಯಮೂಕಾಲಯಂ-ಋಶ್ಯಮೂಕಪರ್ವತವೇ ಆಶ್ರಯವಾಗುಳ್ಳ, ವನಚಾರಿಣಂ-ಅರಣ್ಯದಲ್ಲಿ ಸಂಚಾರಮಾಡುತ್ತಿರುವ, ಕಪಿಂ-ವಾನರನಾದ ಸುಗ್ರೀವನನ್ನು, ಸತ್ಯೇನ-ಯಥಾರ್ಥದಿಂದ, ವಯಸ್ಯಂ-ಸ್ನೇಹಿತನನ್ನಾಗಿ, ಕುರು-ಮಾಡಿಕೋ ॥೨೧॥ ॥ ಕಪಿಕುಂಜರಃ-ವಾನರಶ್ರೇಷ್ಠನಾದ, ಸಃ-ಆ ಸುಗ್ರೀವನು, ನೈಪುಣ್ಯಾತ್-ಚಾತುರ್ಯದ ದೆಸೆಯಿಂದ, ಲೋಕೇ-ಲೋಕದಲ್ಲಿ, ನರಮಾಂಸಾಶಿನಾಂ-ಮನುಷ್ಯಮಾಂಸವಂ ತಿನ್ನುತ್ತಿರುವ ರಕ್ಕಸರ, ಸರ್ವಾಣಿ-ಸಮಸ್ತಗಳಾದ, ಸ್ಥಾನಾನಿ-ಸ್ಥಾನಗಳನ್ನು, ಕಾರ್ತ್ಸ್ನ್ಯೇನ-ಅಶೇಷವಾಗಿ, ಅಧಿಗಚ್ಛತಿಹಿ-ತಿಳಿದಿದ್ದಾನಷ್ಟೇ ॥೨೨॥ ॥ ಹೇರಾಘವ-ಎಲೈ ರಾಮನೇ, ಹೇಅರಿಂದಮ-ಎಲೈ ಶತ್ರುಸಂಹಾರಕನೇ, ಸಹಸ್ರಾಂಶುಃ-ಸಾವಿರ ಕಿರಣಗಳುಳ್ಳ, ಸೂರ್ಯಃ-ಸೂರ್ಯನು, ಯಾವತ್-ಯಾವಷ್ಟುಪರ್ಯಂತರ, ಪ್ರತಪತಿ-ತಪಿಸುತ್ತಾನೆಯೋ. ಲೋಕೇ-ಲೋಕದಲ್ಲಿ, ತಾವತ್-ಅಷ್ಟರ ಪರ್ಯಂತವೂ, ತಸ್ಯ-ಆ ಸುಗ್ರೀವನಿಗೆ, ಕಿಂಚಿತ್-ಯಾವಸ್ಥವೂ

---

ಲ್ಲಿಂದ ತೆರಳಿ, ಮಹಾ ಬಲವಂತನಾದ ಆ ಸುಗ್ರೀವನನ್ನೈದುವವನಾಗಿ, ಆತನೂ ನೀನೂ ಸಹಾ ಒಬ್ಬರಿಗೊಬ್ಬ
ರು ದ್ರೋಹವಂ ಗೈಯ್ಯದಿರುವದಕ್ಕಾಗಿ, ಅಗ್ನಿಪ್ರಜ್ವಲವಂ ಗೈದು, ಸಖ್ಯವಂ ಮಾಡಿಕೊಳ್ಳುವವನಾಗು ।೧೮।
ಆ ವಾನರೇಂದ್ರನಾದ ಸುಗ್ರೀವನು ನಿನಗೆ ಅವಮಾನಂ ಗೈಯ್ಯುವವನಲ್ಲ, ಆತನು ಉಪಕಾರವನ್ನು ಎಣಿಸತಕ್ಕ
ವನು, ಯಾವ ಯಾವ ರೂಪವನ್ನು ಧರಿಸಲಿಚ್ಛೆಯುಂಟಾದರೇ, ಆಯಾ ರೂಪಗಳನ್ನೆಲ್ಲ ಧರಿಸುತಲಿರುವನು,
ತಾನು ಮಹಾ ಬಲವಂತನಾದರೂ ಈಗ ವೊಬ್ಬರಸಹಾಯವನ್ನು ಅಪೇಕ್ಷಿಸುತಲಿರುವನು, ಆದ್ದರಿಂದ ನೀವುಗ
ಳು ಆತನ ಕಾರ್ಯವನ್ನು ಮಾಡಿಕೊಡುವವರಾಗಿ, ಒಂದುವೇಳೆ ನೀವು ಆತನ ಕೆಲಸವನ್ನು ಮಾಡಿಕೊಡದಿದ್ದರೂ
ನಿಮ್ಮ ಕಾರ್ಯವನ್ನು ಆತನು ಎಂತಾದರೂ ಸಾಧಿಸಿಕೊಡುವನು ।೧೯।॥ ಆ ಸುಗ್ರೀವನೆಂಬ ವಾನರನು ಋಕ್ಷರ
ಜಸ್ಸೆಂಬವನ ಪುತ್ರನು, ಈಗ ಭೀತನಾಗಿ ಪಂಪಾತೀರದಲ್ಲಿ ಸಂಚಾರಂ ಗೈಯ್ಯುತಲಿಧಾನೆ, ಆತನು ಸೂರ್ಯನಿಗೆ
ಔರಸಪುತ್ರನಾಗಬೇಕು, ವಾಲಿಯಿಂದ ಮಹಾ ಅಪಕಾರವನ್ನೈದಿಧಾನೆ ।೨೦।॥ ಎಲೈ ರಘುಕುಲೋತ್ಪನ್ನನಾದ
ಶ್ರೀರಾಮನೇ; ಕೇಳುವವನಾಗು, ನೀನು ನಿನ್ನ ಆಯುಧವನ್ನು ಅಗ್ನಿಸನ್ನಿಧಾನದಲ್ಲಿರಿಸಿ, ಋಶ್ಯಮೂಕವಾಸಿ
ಯಾದ ಮತ್ತೂ ವನದಲ್ಲಿಯೇ ಸಂಚಾರಂ ಗೈಯ್ಯುತಲಿರುವ ಆ ಸುಗ್ರೀವನನ್ನು ಸತ್ಯವಾಗಿ ಸ್ನೇಹಿತನನ್ನಾಗಿ ಮಾ
ಡಿಕೋ. ಆ ವಾನರೇಂದ್ರನಾದ ಸುಗ್ರೀವನು, ಲೋಕದಲ್ಲಿ ಮನುಷ್ಯಮಾಂಸದಿಂದ ಜೀವಿಸುವ ರಾಕ್ಷಸರ ಸ್ಥಾನಂ
ಗಳನ್ನೆಲ್ಲಾ ತನ್ನ ಚಮತ್ಕಾರದಿಂದ ತಿಳಿಯುವನು, ಈ ಸೂರ್ಯನ ಬೆಳಕು ಲೋಕದಲ್ಲಿ ಯೆದುವರಿವಿಗೂ ವ್ಯಾ

ಣಿಕಂದರಾ೯ । ಅನ್ವಿಷ್ಯವಾನರೈಸ್ಸಾರ್ಧಂಪತ್ನಿಂತೇಧಿಗಮಿಷ್ಯತಿ ।೨೪॥ ವಾನರಾಂಶ್ಚಮಹಾಕಾಯಾ೯ಪ್ರೇಷಯಿಷ್ಯತ್ರಿರಾಘವ । ದಿಶೋವಿಚೇತುಂತಾಂಸೀತಾಂತ್ವದ್ವಿಯೋಗೇನಶೋಚತೀಂ । ಸಜ್ಞಾಸ್ಯತಿವರಾರೋಹಾಂನಿರ್ಮಲಾಂರಾವಣಾಲಯೇ ॥೨೫॥ ಸಮೇರುಶೃಂಗಾಗ್ರಗತಾಮನಿಂದಿತಾಂಪ್ರವಿಶ್ಯಪಾತಾಳತಲೇಪಿವಾಶ್ರಿತಾಂ । ಪ್ಲವಂಗಮಾನಾಂಪ್ರವರಸ್ತವಪ್ರಿಯಾಂನಿಹತ್ಯರಕ್ಷಾಂಸಿಪುನಃಪ್ರದಾಸ್ಯತಿ। —**ಇತಿಶ್ರೀಮದಾರಣ್ಯಕಾಂಡೇ ದ್ವಿಸಪ್ತತಿತಮಸ್ಸರ್ಗಃ**—

ನಿದರ್ಶಯಿತ್ವಾರಾಮಾಯಸೀತಾಯಾಃಪ್ರತಿಪಾದನೇ । ವಾಕ್ಯಮನ್ವರ್ಥಮರ್ಥಜ್ಞಃಕಬಂಧಃಪುನರಬ್ರವೀತ್ ॥೧॥ ಏಷರಾಮಶಿವಃಪಂಥಾಯತ್ರೈತೇಪುಷ್ಪಿತಾದ್ರುಮಾಃ । ಪ್ರತೀಚೀಂದಿಶಮಾಶ್ರಿತ್ಯಪ್ರಕಾಶಂತೇಮನೋರಮಾಃ। ಜಂಬೂಪ್ರಿಯಾಳಪನಸಪ್ಲಕ್ಷನ್ಯಗ್ರೋಧತಿಂದುಕಾಃ । ಅಶ್ವತ್ಥಾಃಕರ್ಣಿಕಾರಾಶ್ಚಚೂತಾಶ್ಚಾನ್ಯೇಚಪಾದಪಾಃ । ಧನ್ವನಾನಾಗ

---

ಅವಿದಿತಂ–ತಿಳಿಯಲ್ಪಡದಿರುವದಾಗಿ, ನಾಸ್ತಿ–ಇಲ್ಲ ॥೨೩॥ ॥ ಸಃ–ಆ ಸುಗ್ರೀವನು. ವಾನರೈಸ್ಸಾರ್ಧಂ–ಕಪಿಗಳೊಡಗೂಡ, ನದೀಃ–ಹೊಳೆಗಳನ್ನೂ, ವಿಪುಲಾ೯–ವಿಸ್ತಾರವಾದ, ಶೈಲಾ೯–ಬೆಟ್ಟಗಳನ್ನೂ, ಗಿರಿದುರ್ಗಾಣಿ–ಬೆಟ್ಟದ ದುರ್ಗಸ್ಥಾನಗಳನ್ನೂ, ಕಂದರಾ೯–ಗುಹೆಗಳನ್ನೂ, ಅನ್ವೀಕ್ಷ್ಯ–ಹುಡುಕಿ, ತೇ–ನಿನ್ನ, ಪತ್ನೀಂ–ಹೆಂಡತಿಯನ್ನೂ, ಅಧಿಗಮಿಷ್ಯತಿ–ತಿಳಿದವನಾಗುವನು ॥೨೪॥ ॥ ಹೇರಾಘವ_ಎಲೈ ಶ್ರೀರಾಮನೇ, ತ್ವದ್ವಿಯೋಗೇನ–ನಿನ್ನ ವಿರಹದಿಂದ, ಶೋಚತೀಂ–ದುಃಖಿಸುತ್ತಿರುವ, ತಾಂಸೀತಾಂ–ಆ ಸೀತಾದೇವಿಯನ್ನು, ವಿಚೇತುಂ–ಹುಡುಕುವದಕ್ಕೆ, ಮಹಾಕಾಯಾ೯_ದೊಡ್ಡ ಶರೀರಗಳುಳ್ಳ, ವಾನರಾಂಶ್ಚ–ಕಪಿಗಳನ್ನೂ, ದಿಶಃ–ದಿಕ್ಕುಗಳಿಗೆ, ಪ್ರೇಷಯಿಷ್ಯತಿ–ಕಳುಹುವನು, ಸಃ–ಆ ಸುಗ್ರೀವನು ರಾವಣಾಲಯೇ_ರಾವಣನಮನೆಯಲ್ಲಿ, ನಿರ್ಮಲಾಂ–ನಿರ್ದೋಷಿಯಾದ. ವರಾರೋಹಾಂ–ಸೀತಾದೇವಿಯನ್ನೂ, ಜ್ಞಾಸ್ಯತಿ–ತಿಳಿಯುವನು, ॥೨೫॥ ಪ್ಲವಂಗಮಾನಾಂ–ಕಪಿಗಳೊಳಗೆ. ಪ್ರವರಃ–ಶ್ರೇಷ್ಠನಾದ, ಸಃ–ಆ ಸುಗ್ರೀವನು, ಮೇರುಶೃಂಗಾಗ್ರಗತಾಂ–ಮೇರುಪರ್ವತದ ಶೃಂಗದ ತುದಿಯಲ್ಲಿರುವ. ಅನಿಂದಿತಾಂ_ದೋಷ ರಹಿತಳಾದ. ಪಾತಾಳತಲೇಪಿ–ಪಾತಾಳ ಲೋಕದಲ್ಲಿಯೂ ಕೂಡ, ಪ್ರವಿಶ್ಯ–ಹೊಕ್ಕು. ಆಶ್ರಿತಾಂವಾ–ಆಶ್ರಯಿಸಿದವಳಾದರೂ, ತವ–ನಿನ್ನ. ಪ್ರಿಯಾಂ–ಹೆಂಡತಿಯಾದ ಸೀತಾದೇವಿಯನ್ನೂ, ರಕ್ಷಾಂಸಿ_ರಕ್ಕಸರನ್ನೂ. ನಿಹತ್ಯ–ಕೊಂದು, ತವ_ನಿನಗೆ, ಪುನಃ–ಮತ್ತು, ಪ್ರದಾಸ್ಯತಿ_ಕೊಡುವನು॥೨೬॥ **ದ್ವಿಸಪ್ತತಿತಮಸ್ಸರ್ಗಃ**—

ಅರ್ಥಜ್ಞಃ–ಶಾಸ್ತ್ರಾರ್ಥವಂ ನರಿತಿರುವ, ಕಬಂಧಃ–ಕಬಂಧನು, ಸೀತಾಯಾಃ–ಸೀತಾದೇವಿಯು, ಪ್ರತಿಪಾದನೆ_ಹೊಂದುವಣದರಲ್ಲಿ, ಉಪಾಯಂ ಸುಗ್ರೀವಸಖ್ಯರೂಪವಾದ ಪೂರ್ವದಲ್ಲಿ ಹೇಳಿದ ಉಪಾಯವನ್ನು,) ರಾಮಾಯ_ಶ್ರೀರಾಮನಿಗೆ, ನಿದರ್ಶಯಿತ್ವಾ–ತೋರಿಸಿ, ಪುನಃ–ಮತ್ತು, ಅನ್ವರ್ಥಂ ಅರ್ಥಯುಕ್ತವಾದ, ವಾಕ್ಯಂ–ಮಾತಿನನ್ನು. ಅಬ್ರವೀತ್–ಹೇಳಿದನು ॥೧॥ ಹೇರಾಮ_ಎಲೆ ಶ್ರೀರಾಮನೇ. ಯತ್ರ–ಯಾವ ಪ್ರದೇಶದಲ್ಲಿ, ಪ್ರತೀಚೀಂ ದಿಶಂ–ಪಡುವಲು ದಿಕ್ಕಿನಲ್ಲಿ. ಮನೋರಮಾಃ–ಮನೋಹರವಾಗಿರುವ, ಜಂಬೂಪ್ರಿಯಾಳಪನಸಪ್ಲಕ್ಷನ್ಯಗ್ರೋಧತಿಂದುಕಾಃ–ಜಂಬೂ–ಜಂಬೂ ಪ್ರಿಯಾಳ ಪನಸ ಪ್ಲಕ್ಷ ನ್ಯಗ್ರೋಧ ತಿಂದುಕಗಳೆಂಬ ವೃಕ್ಷಗಳೂ, ಅಶ್ವತ್ಥಾಃ–ಅರಳೀಮರಗಳೂ, ಕರ್ಣಿಕಾರಾಃ–ಕರ್ಣಿಕಾವೃಕ್ಷಗಳೂ, ಚೂತಾಃ–ಮಾವಿನ ಮರಂಗಳೂ, ಅನ್ಯೇ–ಇತರವಾದ, ಪಾದಪಾಶ್ಚ–ಗಿಡಗಳೂ. ಧನ್ವನಾಃ–ಧನ್ವನವೃಕ್ಷಗಳೂ, ನಾಗವೃಕ್ಷಾಶ್ಚ–ನಾಗಕೇಸರವೃಕ್ಷಗಳೂ, ತಿಲಕಾನಕ್ತಮಾಲಕಾಃ–ತಿಲಕಾ–ತಿಲಕವೃಕ್ಷಗಳೂ. ನಕ್ತಮಾಲಕಾಃ–ಚೆರಿಬಿಲ್ವವೃಕ್ಷಗಳೂ, ನೀಲಾಃ–ನೀಲೀವೃಕ್ಷಗಳೂ. ಅಶೋಕಾಃ–ಅಶೋಕವೃಕ್ಷಗಳೂ. ಕದಂಬಾಶ್ಚ–ಈಚೀಮರಗಳೂ, ಕರವೀರಾಶ್ಚ–ಪ್ರವೇಹಾಸೌಖ್ಯವೃಕ್ಷಗಳೂ, ಪುಷ್ಪಿತಾಃ–ಸಂಜಾತಪುಷ್ಪಂಗಳುಳ್ಳವುಗಳು, ಅಗ್ನಿಮುಖ್ಯಾಃ–ಗೇರುಗಿಡಗಳೂ, ಅಶೋಕಾಶ್ಚ–ಅಶೋಕವೃಕ್ಷಂಗಳೂ. ಸುರಕ್ತಾಃ–ರಕ್ತಚಂದನವೃಕ್ಷಗಳೂ, ಪಾರಿಭದ್ರಕಾಃ–ಮಂದಾರವೃಕ್ಷಂಗಳೂ ಎಂಬ, ಪುಷ್ಪಿತಾಃ–ಸಂಜಾತಪು

---

ಪಿಸಿರುವದೋ, ಅದರೊಳಗಾಗಿ ಆತನಿಗೆ ತಿಳಿಯದ ಪ್ರದೇಶವು ಯಾವದೂ ಇಲ್ಲ ।೨೩। ಆದ್ದರಿಂದ ಆ ಸುಗ್ರೀವನು ತನಿಗೆ ಅಧೀನರಾಗಿರುವ ವಾನರರಿಂದೊಡಗೂಡಿ,ನದಿಗಳನ್ನೂ, ಪರ್ವತಗಳನ್ನೂ, ದುರ್ಗಸ್ಥಾನಂಗಳನ್ನೂ ಸಹಾ ಹುಡುಕಿ ನಿನ್ನ ಪತ್ನಿಯನ್ನು ತಿಳಿದವನಾಗುವನು ॥೨೪॥ ಎಲೈ ಶ್ರೀರಾಮನೇ, ನಿನ್ನ ವಿಯೋಗದಿಂದ ಮಹಾ ದುಃಖವನ್ನೈದಿದ ಆ ಸೀತಾದೇವಿಯನ್ನು ಹುಡುಕುವದಕ್ಕೆ ಮಹಾ ಬಲಶಾಲಿಗಳಾದ ಕಪಿಗಳನ್ನು, ಆತನು ದಿಕ್ಕುಗಳಲ್ಲಿಯೂ ಕಳುಹಿಸುವವನಾಗಿ, ರಾವಣನ ಮಂದಿರದಲ್ಲಿರುವ ಆ ದೇವಿಯನ್ನು ತಿಳಿವನು, ಮತ್ತೂ ಆ ಸುಗ್ರೀವನು, ಸೀತಾದೇವಿಯು ಮೇರುಪರ್ವತದ ಶಿಖರದಲ್ಲಿದ್ದರೂ, ಪಾತಾಳಲೋಕದಲ್ಲಿದ್ದರೂ ಕೂಡಾ, ರಾಕ್ಷಸರೆಲ್ಲರಂ ಸಂಹಾರಂ ಗೈದು, ಆ ದೇವಿಯನ್ನು ನಿನಗೆ ಕರೆಯಿಸಿಕೊಡುವನು ॥೨೬॥

—* ಆರಣ್ಯಕಾಂಡದಲ್ಲಿನ ೭೨ ನೆಯ ಸರ್ಗಂ ಮುಗಿದುದು *—

ಈರೀತಿಯಲ್ಲಿ ಆ ಕಬಂಧನು, ಸೀತಾದೇವಿಯನ್ನು ಪೊಂದುವ ವಿಷಯದಲ್ಲಿ ಶ್ರೀರಾಮನಿಗೆ, ಉಪಾಯವಂ ಪೇಳಿ ಮತ್ತಿಂತೆಂದನು ।೧। ಎಲೈ ಶ್ರೀರಾಮನೇ! ಯಾವ ಪಶ್ಚಿಮದಿಕ್ಕಿನಲ್ಲಿ, ಮನೋಹರವಾದ “ ಜಂಬೂ, ಪ್ಲಕ್ಷ, ನ್ಯಗ್ರೋಧ, ತಿಂದುಕ, ಅಶ್ವತ್ಥ, ಕರ್ಣಿಕಾರ, ಚೂತ, ಧನ್ವನ, ನಾಗ, ತಿಲಕ, ನಕ್ತಮಾಲಕ, ನೀಲ, ಅಶೋಕ, ಕದಂಬ, ಅಗ್ನಿಮುಖ, ರಕ್ತಚಂದನ, ಪಾರಿಭದ್ರ, ” ಎಂಬ, ಈ ವೃಕ್ಷವಿಶೇಷಂಗಳಿರುವವೋ,

ವೃಕ್ಷಾಶ್ಚ ತಿಲಕಾನಕ್ತಮಾಲಕಾಃ। ನೀಲಾಶೋಕಾಃ ಕಂದಬಾಶ್ಚ ಕರವೀರಾಶ್ಚ ಪುಷ್ಪಿತಾಃ। ಅಗ್ನಿಮುಖ್ಯಾ ಅಶೋಕಾಶ್ಚ ಸುರಕ್ತಾಃ ಪಾರಿಭದ್ರಕಾಃ ॥೪॥ ತಾನಾರುಹ್ಯಾಥವಾ ಭೂಮೌ ಪಾತಯಿತ್ವಾ ಚ ತಾನ್ಬಲಾತ್। ಫಲಾನ್ಯಮೃತಕಲ್ಪಾನಿ ಭಕ್ಷಯಂತೌ ಗಮಿಷ್ಯಥಃ ॥೫॥ ತದತಿಕ್ರಮ್ಯ ಕಾಕುತ್ಸ್ಥ ವನಂ ಪುಷ್ಪಿತಪಾದಪಂ। ನಂದನಪ್ರತಿಮಂ ಚಾನ್ಯತ್ಕುರವೋ ಹ್ಯುತ್ತರಾ ಇವ ॥೬॥ ಸರ್ವಕಾಮಫಲಾ ವೃಕ್ಷಾಃ ಪಾದಪಾಸ್ತು ಮಧುಸ್ರವಾಃ। ಸರ್ವೇ ಚ ಋತವಸ್ತತ್ರ ವನೇ ಚೈತ್ರರಥೇ ಯಥಾ। ಫಲಭಾರಾನತಾಸ್ತತ್ರ ಮಹಾವಿಟಪಧಾರಿಣಃ। ಶೋಭಂತೇ ಸರ್ವತಸ್ತತ್ರ ಮೇಘಪರ್ವತಸನ್ನಿಭಾಃ। ತಾನಾರುಹ್ಯಾಥವಾ ಭೂಮೌ ಪಾತಯಿತ್ವಾ ಯಥಾಸುಖಂ। ಫಲಾನ್ಯಮೃತಕಲ್ಪಾನಿ ಲಕ್ಷ್ಮಣಸ್ತೇ ಪ್ರದಾಸ್ಯತಿ ॥೮॥ ಚಂಕ್ರಮಂತೌ ವರಾನ್ ದೇಶಾನ್ ಶೈಲಾಚ್ಛೈಲಂ ವನಾದ್ವನಂ। ತತಃ ಪುಷ್ಕರಿಣೀಂ ವೀರೌ ಪಂಪಾಂ ನಾಮ ಗಮಿಷ್ಯಥಃ। ಅಶರ್ಕ

---

ಪುಷ್ಪಂಗಳುಳ್ಳ. ಏತೇದ್ರುಮಾಃ-ಈ ವೃಕ್ಷಂಗಳೂ. ತಿಷ್ಠಂತಿ-ಇರುವವೋ, ಏಷಪಂಥಾಃ-ಈ ಮಾರ್ಗವು, ಶಿವಃ-ಮಂಗಳಕರವಾದದ್ದು ॥೪॥ ತಾನ್-ಆ ವೃಕ್ಷಗಳನ್ನು. ಆರುಹ್ಯ-ಏರಿ ಅಥವಾ-ಹಾಗಲ್ಲದಿದ್ದರೆ, ತಾನ್-ಆ ವೃಕ್ಷಗಳನ್ನು, ಬಲಾತ್-ಬಲಾತ್ಕಾರದದೆಶೆಯಿಂದ. ಭೂಮೌ-ನೆಲದಲ್ಲಿ ಪಾತಯಿತ್ವಾ-ಬೊಗ್ಗಿಸಿ. ಅಮೃತಕಲ್ಪಾನಿ-ಅಮೃತಸದೃಶವಾದ, ಫಲಾನಿ-ಫಲಗಳನ್ನು, ಭಕ್ಷಯಂತೌ-ಭಕ್ಷಿಸಿದವರಾಗಿ, ಗಮಿಷ್ಯಥಃ-ಪೋಗಿರಿ ॥೫॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೇ. ನಂದನಪ್ರತಿಮಂ-ಉದ್ಯಾನವನಕ್ಕೆ ಸದೃಶವಾದ, ಪುಷ್ಪಿತಪಾದಪಂ-ವಿಕಸಿತವಾದ ಪುಷ್ಪಗಳುಳ್ಳ, ಅನ್ಯತ್-ಮತ್ತೊಂದಾದ. ವನಂ-ವನವು. ಉತ್ತರಾಃ-ಉತ್ತರದಿಕ್ಕಿನಲ್ಲಿರುವ, ಕುರವಇವ-ಕುರುದೇಶದಂತೆ ಸರ್ವಸಮೃದ್ಧವಾಗಿರುವದು. ತತ್-ಅದನ್ನು, ಅತಿಕ್ರಮ್ಯ-ದಾಂಟಿ ॥೬॥ ॥ ಸರ್ವಕಾಮಫಲಾಃ-ಸಮಸ್ತ ಇಷ್ಟವಾಗಿರುವ ಪದಾರ್ಥಗಳನ್ನು ಫಲಿಸುವ, ಅಥವಾ-ಸಮಸ್ತರಿಂದಲೂ ಅಪೇಕ್ಷಿಸತಕ್ಕ ಫಲಗಳುಳ್ಳ, ವೃಕ್ಷಾಃ-ವೃಕ್ಷಗಳೂ, ಮಧುಸ್ರವಾಃ-ಮಕರಂದವಂ ಸ್ರವಿಸುತ್ತಿರುವ. ಪಾದಪಾಶ್ಚ-ವೃಕ್ಷಗಳೂ. ಸಂತಿ-ಇರುತ್ತವೆ. ತತ್ರ-ಅಲ್ಲಿ, ಸರ್ವೇ-ಸಮಸ್ತವಾದ, ಋತವಃ-ಷಡೃತುಗಳೂ, ಚೈತ್ರರಥೇ-ಉದ್ಯಾನವನವೆಂಬ, ವನೇ-ವನದಲ್ಲಿ, (ಅಂದರೆ-ಕುಬೇರನ ಉದ್ಯಾನವನದಲ್ಲಿ.) ಯಥಾ-ಹ್ಯಾಗೋ, ತಥಾ-ಹಾಗೆಯೇ ಇವೆ, ತತ್ರ-ಅಲ್ಲಿ, ಮಹಾವಿಟಪಧಾರಿಣಃ-ಮಹತ್ತರವಾದ ಕೊಂಬೆಗಳನ್ನು ಧರಿಸಿರುವ, ಫಲಭಾರಾನತಾಃ-ಹಣ್ಣುಗಳ ಹೊರೆಯಿಂದ ಬೊಗ್ಗಿರುವ ವೃಕ್ಷಂಗಳೂ, ಸಂತಿ-ಇವೆ. ತತ್ರ-ಆ ಪ್ರದೇಶದಲ್ಲಿ. ಮೇಘಪರ್ವತಸನ್ನಿಭಾಃ-ಮೇಘಗಳಿಗೂ ಬೆಟ್ಟಕ್ಕೂ ಸಮಾನವಾದ ವೃಕ್ಷಂಗಳೂ. ಸರ್ವತಃ-ಎಲ್ಲಾ ಕಡೆಯಲ್ಲಿಯೂ, ಶೋಭಂತೇ-ಬೆಳಗುತಲಿವೆ. ಲಕ್ಷ್ಮಣಃ-ಲಕ್ಷ್ಮಣನು, ತಾನ್-ಆ ಗಿಡಗಳನ್ನು, ಆರುಹ್ಯ-ಏರಿ, (ಅಥವಾ-ಹಾಗಲ್ಲದಿದ್ದರೆ.) ಯಥಾಸುಖಂ-ಸುಖವಾಗಿ, ಭೂಮೌ-ನೆಲದಲ್ಲಿ, ಪಾತಯಿತ್ವಾ-ಬೊಗ್ಗಿಸಿಕೊಂಡು, ಅಮೃತಕಲ್ಪಾನಿ-ಅಮೃತಸದೃಶವಾದ, ಫಲಾನಿ-ಹಣ್ಣುಗಳನ್ನು, ತೇ-ನಿನಗೆ. ಪ್ರದಾಸ್ಯತಿ-ಕೊಡುವನು ॥೮॥ ॥ ಹೇರಾಮ-ಎಲೈ ಶ್ರೀರಾಮನೇ. ವೀರೌ-ಶೂರರಾದ ನೀವೀರ್ವರೂ. ವರಾನ್-ಉತ್ತಮವಾದ, ದೇಶಾನ್-ದೇಶಗಳಂ ಕುರಿತು, ಚಂಕ್ರಮಂತೌ-ಬಾರಿಬಾರಿಗೂ ಪೋಗುತ್ತಾ, ಶೈಲಾತ್-ಪರ್ವತದದೆಶೆಯಿಂದ, ಶೈಲಂ-ಬೆಟ್ಟವನ್ನು, ವನಾತ್-ವನದದೆಶೆಯಿಂದ, ವನಂ-ಮತ್ತೊಂದು ವನವನ್ನು, ಚಂಕ್ರಮತೌ-ದಾಂಟುತಲಿರುವವರಾಗಿ, ತತಃ-ಬಳಿಕ. ಅಶರ್ಕರಾಂ-ಮರಳಿಲ್ಲದಿರುವ, ಅವಿಭ್ರಂಶಾಂ-ಶಿಥಿಲವಾಗದಿರುವ ತೀರವುಳ್ಳ, ಸಮತೀರ್ಥಾಂ-ಸ್ನಾನವಮಾಡುವಸ್ಥಳದಲ್ಲಿ ಅತಿನಿಮ್ನವೂ ಬಹಳ ಆಳವೂಸಹ ಇಲ್ಲದೆ ಸಮವಾಗಿರುವ ಜಲವುಳ್ಳ, ಅಶೈವಲಾಂ-ಹಾಮಜೀಬಳ್ಳಿಯಿಲ್ಲದಿರುವ. ಸಂಜಾತವಾಲುಕಾಂ-ಕೆಸರಿಲ್ಲದಿರುವದ್ದರಿಂ ರಾಶಿಯಾಗಿ ಶೇರಿದ ಮರಳುಳ್ಳ, ಕಮಲೋತ್ಪಲಶಾಲಿನೀಂ-ತಾವರೆಗಳಿಂದಲೂ, ನೈದಲೆಗಳಿಂದಲೂ ಒಪ್ಪುತ್ತಿರುವ, ಪಂಪಾಂನಾಮ-ಪಂಪಾಸರೋವರವೆಂದು ಪ್ರಸಿದ್ಧವಾದ, ಪುಷ್ಕರಿಣೀಂ-ನದಿಯನ್ನು, ಗಮಿಷ್ಯಥ-ಹೊಂದುವವರಾಗಿರಿ॥

---

ಈ ಮಾರ್ಗವು ಸುಪಥವಾಗಿರುವದು, ಈ ವೃಕ್ಷಗಳನ್ನೇರಿ, ಅಥವಾ ಈ ವೃಕ್ಷಗಳಂ ಬಲಾತ್ಕಾರದಿಂ ಬೊಗ್ಗಿಸಿಕೊಂಡು, ಅಮೃತಸದೃಶವಾದ ಫಲಗಳನ್ನು ಭಕ್ಷಣಂ ಗೈಯ್ಯುತ್ತಾ ತೆರಳುವವರಾಗಿ ॥೫॥ ಎಲೈ ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ! ನಂದನವನದಲ್ಲಿರುವ ವೃಕ್ಷಗಳಂತೆ ವಿಕಸಿತವಾದ ಪುಷ್ಪಂಗಳುಳ್ಳ ವೃಕ್ಷಂಗಳುಳ್ಳದ್ದಾಗಿಯೂ, ಉತ್ತರದಿಕ್ಕಿನಲ್ಲಿರುವ ಕುರುದೇಶದಂತೆ ಸಮೃದ್ಧವಾಗಿಯೂ ಸಹಾ ಇರುವ ಒಂದಾನೊಂದು ವನವಂ ದಾಂಟುವವರಾಗಿ ॥೬॥ ಆ ವನದಲ್ಲಿ ವೃಕ್ಷಂಗಳೆಲ್ಲ ಮಕರಂದವಂ ಸ್ರವಿಸುತಲಿವೆ, ಅಲ್ಲಿ ಷಡೃತುಗಳು ಕುಬೇರನ ಉದ್ಯಾನವನದಲ್ಲಿ ಎಂತು ವೃಕ್ಷರೂಪವಾಗಿ ಹಣ್ಣುಗಳಭಾರದಿಂದ ಬೊಗ್ಗಿರುವವೋ, ಅಂತು ಬೊಗ್ಗಿಕೊಂಡಿವೆ, ಮತ್ತೂ ಆ ವನದಲ್ಲಿ ಮೇಘಗಳಿಗೂ ಸಹಾ ಸಮಾನವಾದ ವೃಕ್ಷಂಗಳು ಸುತ್ತುಮುತ್ತಲೂ ಬೆಳಗುತಲಿವೆ, ಲಕ್ಷ್ಮಣನು ಆ ವೃಕ್ಷಗಳನ್ನೇರಿ ಅಥವಾ ಅವುಗಳಂ ಬೊಗ್ಗಿಸಿ ಸುಖವಾಗಿ ನೆಲದಲ್ಲಿ ಫಲಗಳಂ ಕೆಡವಿ ನಿನಿಗೆ ತಂದು ಕೊಡುವನು ॥೮॥ ಎಲೈ ಶ್ರೀರಾಮನೇ! ಶೂರರಾದ ನೀವೀರ್ವರು ಪ್ರಯಾಣವಂ ಗೈದವರಾಗಿ ಒಂದು ಪರ್ವತದಿಂದ ಮತ್ತೊಂದುಪರ್ವತವನ್ನು ದಾಂಟುವವರಾಗಿ, ಬಳಿಕ ಮರಳುಳ್ಳದ್ದಾಗಿಯೂ, ಶೈಥಿಲವನ್ನೈದದಿರುವ ತೀರಗಳುಳ್ಳದ್ದಾಗಿಯೂ, ಸ್ನಾನಂ ಗೈಯ್ಯುವದಕ್ಕೆ ಯೋಗ್ಯವಾದ ಸ್ಥಳದಲ್ಲಿ ಸಮವಾಗಿರುವ ಉದಕವುಳ್ಳದ್ದಾಗಿಯೂ, ಹಾಮಚೆಬಳ್ಳಿ ಯಿಲ್ಲದಿರುವದಾಗಿಯೂ, ಕೆಸರಿಲ್ಲದಿರುವಣದರಿಂದ ರಾಶಿಯಾಗಿ ಸೇರಿದ ಸೈಕತವುಳ್ಳದ್ದಾ

ರಾಮವಿಭ್ರಂಶಾಂಸಮತೀರ್ಥಾಮಕ್ಷ್ಯವಲಾಂ । ರಾಮಸಂಜಾತವಾಲೂಕಾಂಕಮಲೋತ್ಪಲಶಾಲಿನೀಂ ।೧೧। ತತ್ರ ಹಂಸಾಃಪ್ಲವಾಃಕ್ರೌಂಚಾಃಕುರರಾಶ್ಚೈವರಾಘವ । ವಲ್ಗುಸ್ವನಾನಿಕೂಜಂತಿಪಂಪಾಸಲಿಲಗೋಚರಾಃ ।೧೨।ನೋದ್ವಿಜಂತೇನರಾನ್ದೃಷ್ಟ್ವಾವಧಸ್ಯಾಕೋವಿದಾಃಶುಭಾಃ । ಘೃತಪಿಂಡೋಪಮಾನ್ಸ್ಥೂಲಾಂಸ್ತಾನ್ದ್ವಿಜಾನ್ಭಕ್ಷಯಿಷ್ಯಥಃ ।೧೩। ರೋಹಿತಾನ್ವಕ್ರತುಂಡಾಂಶ್ಚನಡಮೀನಾಂಶ್ಚರಾಘವ । ಪಂಪಾಯಾಮಿಷುಭಿರ್ಮತ್ಸ್ಯಾಂಸ್ತತ್ರರಾಮವರಾನ್ಹತಾನ್। ನಿಸ್ತ್ವಕ್ಪಕ್ಷಾನಯಸ್ತಪ್ತಾನಕೃಶಾನೇಕಕಂಟಕಾನ್॥ತವಭಕ್ತ್ಯಾಸಮಾಯುಕ್ತೋಲಕ್ಷ್ಮಣಸ್ಸಂಪ್ರದಾಸ್ಯತಿ ।೧೪। ಭೃಶಂತೇಖಾದತೋಮತ್ಸ್ಯಾನ್ಪಂಪಾಯಾಃಪುಷ್ಪಸಂಚಯೇ । ಪದ್ಮಗಂಧಿಶಿವಂವಾರಿಸುಖಶೀತಮನಾಮಯಂ। ಉದ್ಧೃತ್ಯಸತತಾಕ್ಲಿಷ್ಟಂರೌಪ್ಯಸ್ಫಟಿಕಸನ್ನಿಭಂ। ಅಸೌಪುಷ್ಕರಪರ್ಣೇನಲಕ್ಷ್ಮಣಃಪಾಯಯಿಷ್ಯತಿ ।೧೫। ಸ್ಥೂಲಾನ್ಗಿರಿಗುಹಾಶಯ್ಯಾನ್ವರಾಹಾನ್ವನಚಾರಿಣಃ । ಅಪಾಂಲೋಭಾದುಪಾವೃತ್ತಾನ್ವೃಷಭಾನಿವನರ್ದತಃ । ರೂ

---

೧೧|| ಹೇರಾಘವ-ಎಲೈ ಶ್ರೀರಾಮನೇ, ತತ್ರ-ಅಲ್ಲಿ, ಪಂಪಾಸಲಿಲಗೋಚರಾಃ-ಪಂಪಾನದಿಯ ಉದಕದಲ್ಲಿ ಸಂಚರಿಸುತ್ತಿರುವ, ಹಂಸಾಃ-ಹಂಸಪಕ್ಷಿಗಳೂ, ಪ್ಲವಾಃ-ನೀರುಕೋಳಿಗಳೂ, ಕ್ರೌಂಚಾಃ-ಕ್ರೌಂಚಪಕ್ಷಿಗಳೂ, ಕುರರಾಶ್ಚೈವ-ಕುರರವೆಂಬ ಕ್ರೌಂಚಪಕ್ಷಿಭೇದಗಳೂ, ವಲ್ಗುಸ್ವನಾಃ-ಮನೋಹರವಾದ ಧ್ವನಿಗಳುಳ್ಳವುಗಳಾಗಿ, ನಿಕೂಜಂತಿ-ಬಹಳವಾಗಿ ಕೂಗುತ್ತವೆ ||೧೨|| ವಧಸ್ಯ-ಸಂಹಾರವನ್ನು ಅಕೋವಿದಾಃ-ತಿಳಿಯದಿರುವ ಪಕ್ಷಿಗಳು, ಶುಭಾಃ-ಶುಭಕರವಾದ, ನರಾನ್-ಮನುಷ್ಯರನ್ನು, ದೃಷ್ಟ್ವಾ-ಕಂಡು, ನೋದ್ವಿಜಂತೇ-ಹೆದರುವದಿಲ್ಲ. ಘೃತಪಿಂಡೋಪಮಾನ್-ಆಜ್ಯಪಿಂಡಕ್ಕೆ ಸಮಾನವಾದ, ಸ್ಥೂಲಾನ್-ಬಲಿತಿರುವ, ತಾನ್ದ್ವಿಜಾನ್-ಆ ಪಕ್ಷಿಗಳನ್ನು, ಭಕ್ಷಯಿಷ್ಯಥಃ-ಭುಜಿಸುವವರಾಗಿರಿ ||೧೩|| ಹೇರಾಘವ-ಎಲೈ ಶ್ರೀರಾಮನೇ, ಪಂಪಾಯಾಂ-ಪಂಪಾನದಿಯಲ್ಲಿ, ರೋಹಿತಾನ್-ಗಂಡುಮೀನುಗಳನ್ನು, ವಕ್ರತುಂಡಾನ್-ಚೋರಮೀನುಗಳನ್ನು, ನಡಮೀನಾಂಶ್ಚ-ದೇವಶಾಲೀಖಡಿಯೆಂಬ ತೃಣವಿಶೇಷದಲ್ಲಿ ಸಂಚಾರವಂ ಮಾಡುವ ಮೀನುವಿಶೇಷಗಳನ್ನೂ, ಇಷುಭಿಃ-ಬಾಣಗಳಿಂದ, ತತ್ರ-ಅಲ್ಲಿ, ಹತಾನ್-ಹೊಡೆಯಲ್ಪಟ್ಟ, ವರಾನ್-ಉತ್ತಮವಾದ, ಮತ್ಸ್ಯಾನ್-ಮೀನುಗಳನ್ನು, ನಿಸ್ತ್ವಕ್ಪಕ್ಷಾನ್-ಗತವಾದ ತ್ವಕ್ಕುಳ್ಳ ರೆಕ್ಕೆಗಳುಳ್ಳವುಗಳನ್ನಾಗಿಯೂ, ಅಯಸ್ತಪ್ತಾನ್-ಶೂಲಾಗ್ರದಲ್ಲಿ ಶಿಲುಕಿಸಿ ದಹಿಸಲ್ಪಟ್ಟ. ಅಕೃಶಾನೇಕಕಂಟಕಾನ್-ಕುಶದಂತೆ ತೀಕ್ಷ್ಣವಾದ ಅನೇಕ ಮುಳ್ಳುಗಳಿಲ್ಲದಿರುವುಗಳನ್ನಾಗಿ, ಕೃತ್ವಾ-ಮಾಡಿ, ಲಕ್ಷ್ಮಣಃ-ಲಕ್ಷ್ಮಣನು, ಭಕ್ತ್ಯಾ-ಭಕ್ತಿಯಿಂದ, ಸಮಾಯುಕ್ತಃ-ಕೂಡಿದವನಾಗಿ, ತವ-ನಿನಗೆ ಸಂಪ್ರದಾಸ್ಯತಿ-ಕೊಡುವನು||೧೪|| ಮತ್ಸ್ಯಾನ್-ಮೀನುಗಳನ್ನು. ಭೃಶಂ-ಬಹಳವಾಗಿ, ಖಾದತಃ-ಗ್ರಾಸವಂಗೈಯುತಲಿರುವ, ತೇ-ನಿನಗೆ, ಪಂಪಾಯಾಃ-ಪಂಪಾನದಿಯ, ಪುಷ್ಪಸಂಚಯೇ-ಪುಷ್ಪಸಮೂಹದಲ್ಲಿರುವಧಾದಕಾರಣ, ಪದ್ಮಗಂಧಿ-ಕಮಲದವಾಸನೆಯುಳ್ಳ, ಶಿವಂ-ಶುಭಕರವಾದ, ಸುಖಶೀತಂ-ಅತಿಶೀತವಿಲ್ಲದಿರುವ, ಅನಾಮಯಂ-ವ್ಯಾಧಿಯನ್ನುಂಟುಮಾಡದಿರುವ, ರೌಪ್ಯಸ್ಫಟಿಕಸನ್ನಿಭಂ-ಬೆಳ್ಳಿಗೂ ಸ್ಫಟಿಕಮಣಿಗೂ ಸಮಾನವಾದ. ಸತತಾಕ್ಲಿಷ್ಟಂ-ಯಾವಾಗಲೂ ಕ್ಲೇಶವನ್ನುಂಟುಮಾಡುವ, ವಾರಿ-ಉದಕವನ್ನು ಅಸೌಲಕ್ಷ್ಮಣಃ-ಈ ಲಕ್ಷ್ಮಣನು, ಪುಷ್ಕರಪರ್ಣೇನ-ತಾವರೆಯ ಯೆಲೆಯಿಂದ. ಉದ್ಧೃತ್ಯ-ತೆಗೆದುಕೊಂಡುಬಂದು. ಪಾಯಯಿಷ್ಯತಿ-ಪಾನಮಾಡಿಸುವನು ||೧೫|| ಹೇನರೋತ್ತಮ-ಎಲೈ ಮನುಷ್ಯಶ್ರೇಷ್ಠನೇ, ಸ್ಥೂಲಾನ್-ಬಲಿತಿರುವ, ಗಿರಿಗುಹಾಶಯ್ಯಾನ್-ಪರ್ವತದ ಗುಹೆಗಳೇ ಹಾಸಿಗೆಗಳಾಗುಳ್ಳ, ವನಚಾರಿಣಃ-ವನದಲ್ಲಿ ಸಂಚರಿಸುವ, ಅಪಾಂಲೋಭಾತ್-ಉದಕದಪೇಕ್ಷೆಯಿಂದ, ಉಪಾವೃತ್ತಾನ್-ಹಿಂತಿರಿಗಿಬಂದ, ವೃಷಭಾನಿವ-ಎತ್ತುಗಳಂತೆ, ನರ್ದತಃ-ಕೂಗುತ್ತಿರುವ, ರೂಪಾನ್ವಿತಾಶ್ಚ-ರೂಪದಿಂ ಯುಕ್ತವಾದ, ವರಾಹಾನ್-ಹಂದಿಗಳನ್ನು, ಪಂಪಾಯಾಂ-ಪಂಪಾನದಿಯಲ್ಲಿ, ತ ೦-ನೀ

---

ಗಿಯೂ, ತಾವರೆಗಳಿಂದಲೂ ನೈದಿಲೆಗಳಿಂದಲೂ ಒಪ್ಪುವದಾಗಿಯೂ ಸಹಾ ಇರುವ ಪಂಪಾನದಿಯನ್ನೈದುವವರಾಗಿ ।೧೧। ಆ ಪಂಪಾನದಿಯಲ್ಲಿ ಉದಕಪಾನಂ ಗೈಯ್ಯುತಲಿರುವ ಹಂಸಪಕ್ಷಿಗಳೂ, ನೀರುಕೋಳಿಗಳೂ, ಕ್ರೌಂಚಪಕ್ಷಿಗಳೂ, ‹‹ ಕುರರ ಎಂಬಪಕ್ಷಿವಿಶೇಷಗಳೂ, ಇವುಗಳೆನ್ನೆಲ್ಲ ಮನೋಹರವಾಗಿಕೂಗುತಲಿರುವವು, ಅವುಗಳು ತಮ್ಮ ಸಂಹಾರವನ್ನರಿಯದ ವಾದಕಾರಣ ಮನುಷ್ಯರಂ ಕಂಡು ಹೆದರುವದಿಲ್ಲ, ಅಂಥಾ ಮತ್ತೂ ಆಜ್ಯಪಿಂಡದಂತಿರುವ ಪಕ್ಷಿಗಳಂ ಕೊಂದುಗ್ರಾಸಂಗೈಯ್ಯುವವರಾಗಿ ।೧೩। ಮತ್ತೂ ಆ ಜಲದಲ್ಲಿರುವ ‹‹ ರೋಹಿತ, ವಕ್ರತುಂಡ, ನಡಮೀನ, ’’ ಎಂಬಮತ್ಸ್ಯವಿಶೇಷಗಳನ್ನು ನಿಡುಸರಳುಗಳಿಂದ ಹೊಡೆದು, ಚೆನ್ನಾಗಿ ಪಕ್ವವಂಗೈದು, ಲಕ್ಷ್ಮಣನು ಮಹಾ ಭಕ್ತಿಯಿಂದ ನಿನಿಗೆ ಸಮರ್ಪಣಂ ಗೈಯ್ಯುವನು, ಮತ್ತೂ ಅವುಗಳಂ ಭಕ್ಷಿಸುತಲಿರುವ ನಿನಿಗೆ ಮಹಾ ಸುವಾಸನೆಯುಳ್ಳ ಮತ್ತೂ ಬೆಳ್ಳಿಗೂ ಸ್ಫಟಿಕಮಣಿಗೂ ಸಮಾನವಾದ, ತಣ್ಣಗಿರುವ ಶುಭಕರವಾದ ಉದಕವನ್ನು, ತಾವರೇ ಎಸಳೆಯಿಂದ ತೆಗೆದುಕೊಂಡು ಬಂದು ಪಾನಂ ಗೈಯ್ಯಿಸುವನು ।೧೫। ಎಲೈ ಪುರುಷೋತ್ತಮನಾದ ಶ್ರೀರಾಮನೇ! ಚೆನ್ನಾಗಿ ಬಲಿತಿರುವ, ಪರ್ವತದ ಗುಹೆಗಳಲ್ಲಿಯೇ ವಾಸಂಗೈಯ್ಯುತಲಿರುವ, ಮತ್ತೂ ಜಲಾಪೇಕ್ಷೆಯಿಂದ ಹಿಂತಿರಿಗಿಬಂದ, ಎತ್ತುಗಳಂತೆ ಕೂಗುವ ವರಾಹಗಳನ್ನು, ನೀನು ಆ ಪಂಪಾನದಿಯಲ್ಲಿ ನೋಡುವವನಾಗುವಿ; ಮತ್ತೂ ನೀನು ಸಾಯಂಕಾಲದಲ್ಲಿ ಸಂಚಾರಂ ಗೈದ ವನಾಗಿ ಪುಷ್ಪಸ

ಪೋಸ್ವಿತಾಂಶ್ಚಪಂಪಾಯಾಂದ್ರಕ್ಷ್ಯಸಿತ್ವಂನರೋತ್ತಮ ।೧೯। ಸಾಯಾಹ್ನೇವಿಚರನ್ರಾಮವಿಟಪೀನ್ಮಾಲ್ಯಧಾರಿಣಃ। ಶೀತೋದಕಂಚಪಂಪಾಯಾದೃಷ್ಟ್ವಾಶೋಕಂವಿಹಾಸ್ಯಸಿ।೨೦। ಸುಮನೋಭಿಶ್ಚಿತಾಂಸ್ತತ್ರತಿಲಕಾನ್ನಕ್ತಮಾಲಕಾನ್। ಉತ್ಪಲಾನಿಚಫುಲ್ಲಾನಿಪಂಕಜಾನಿಚರಾಘವ ।೨೧। ನತಾನಿಕಶ್ಚಿನ್ಮಾಲ್ಯಾನಿತತ್ರಾರೋಪಯಿತಾನರಃ । ನಚವೈಮ್ಲಾನತಾಂಯಾಂತಿನಚಶೀರ್ಯಂತಿರಾಘವ ।೨೨।ಮತಂಗಶಿಷ್ಯಾಸ್ತತ್ರಾಸನ್ನೃಷಯಸ್ಸುಸಮಾಹಿತಾಃ । ತೇಷಾಂಭಾರಾಭಿತಪ್ತಾನಾಂವನ್ಯಮಾಹರತಾಂಗುರೋಃ।ಯೇಪ್ರಪೇತುರ್ಮಹೀಂತೂರ್ಣಂಶರೀರಾತ್ಸ್ವೇದಬಿಂದವಃ । ತಾನಿಜಾತಾನಿಮಾಲ್ಯಾನಿಮುನೀನಾಂತಪಸಾತದಾ । ಸ್ವೇದಬಿಂದುಸಮುತ್ಥಾನಿನವಿನಶ್ಯಂತಿರಾಘವ ।೨೪। ತೇಷಾಂಗತಾನಾಮದ್ಯಾಪಿದೃಶ್ಯತೇಪರಿಚಾರಿಣೀ । ಶ್ರಮಣೀಶಬರೀನಾಮ ಕಾಕುತ್ಸ್ಥಚಿರಜೀವಿನೀ ।೨೫। ತ್ವಾಂತುಧರ್ಮೇಸ್ಥಿತಾನಿತ್ಯಂಸರ್ವಭೂತನಮಸ್ಕೃತಂ । ದೃಷ್ಟ್ವಾದೇವೋಪಮಂರಾಮಸ್ವರ್ಗಲೋಕಂಗಮಿಷ್ಯತಿ ।೨೬। ತತಸ್ತದಾರಾಮಪಂಪಾಯಾಸ್ತೀರಮಾಶ್ರಿತ್ಯಪ

---

ಷು, ದ್ರಕ್ಷ್ಯಸಿ-ನೋಡುವವನಾಗುವಿ ॥೧೯॥ ಹೇರಾಮ-ಎಲೈ ಶ್ರೀರಾಮನೇ, ಸಾಯಾಹ್ನೇ-ಸಾಯಂಕಾಲದಲ್ಲಿ, ವಿಚರನ್-ಸಂಚರಿಸುವವನಾಗಿ, ಮಾಲ್ಯಧಾರಿಣಃ-ಪುಷ್ಪಗಳಂ ಧರಿಸುತ್ತಿರುವ, ವಿಟಪೀನ್-ವೃಕ್ಷಗಳನ್ನು, ಪಂಪಾಯಾಂ-ಪಂಪಾನದಿಯಲ್ಲಿರುವ, ಶೀತೋದಕಂಚ-ತಣ್ಣಗಿರುವ ಉದಕವನ್ನೂಸಹ, ದೃಷ್ಟ್ವಾ-ಕಂಡು, ಶೋಕಂ-ದುಃಖವನ್ನು, ವಿಹಾಸ್ಯಸಿ-ಬಿಡುವವನಾಗುವೆ ॥೨೦॥ ತತ್ರ-ಅಲ್ಲಿ, ಹೇರಾಘವ-ಎಲೈ ಶ್ರೀರಾಮನೇ, ಸುಮನೋಭಿಃ-ಪುಷ್ಪಂಗಳಿಂದ, ಚಿತಾನ್-ವ್ಯಾಪ್ತವಾದ, ತಿಲಕಾನ್-ತಿಲವೃಕ್ಷಗಳನ್ನು, ನಕ್ತಮಾಲಕಾನ್-ಹೊಂಗೇಮರಗಳನ್ನೂ, ಉತ್ಪಲಾನಿಚ-ನೈದಿಲೆಗಳನ್ನೂ, ಫುಲ್ಲಾನಿ-ಅರಳಿದ, ಪಂಕಜಾನಿಚ-ನೈದಿಲೆಗಳನ್ನೂಸಹ, ದೃಷ್ಟ್ವಾ-ನೋಡಿ, ಶೋಕಂ-ದುಃಖವನ್ನು, ವಿಹಾಸ್ಯಸಿ-ಬಿಡುವಿ ॥೨೧॥ ಹೇರಾಘವ-ಎಲೈ ಶ್ರೀರಾಮನೇ, ತಾನಿಮಾಲ್ಯಾನಿ-ಆ ಪುಷ್ಪಗಳನ್ನು, ತತ್ರ-ಆ ಪ್ರದೇಶದಲ್ಲಿ, ಆರೋಪಯಿತಾ-ಮುಡಿದುಕೊಳ್ಳುವ, ನರಃ-ಮನುಷ್ಯನು, ಕಶ್ಚಿತ್-ಯಾವನು, ನಾಸ್ತಿ-ಇಲ್ಲ, ತಾನಿ-ಆ ಪುಷ್ಪಗಳು, ಮ್ಲಾನತಾಂ-ಬಾಡಿಹೋಗುವಕೆಯನ್ನು, ನಯಾಂತಿ-ಹೊಂದುವದಿಲ್ಲ, ನಶೀರ್ಯಂತಿಚ-ಉದುರಿಹೋಗುವದಿಲ್ಲ ॥೨೨॥ ಹೇರಾಘವ-ಎಲೈ ಶ್ರೀರಾಮನೇ, ತತ್ರ-ಆ ಪ್ರದೇಶದಲ್ಲಿ, ಸುಸಮಾಹಿತಾಃ-ಸಾವಧಾನಚಿತ್ತರಾದ, ಮತಂಗಶಿಷ್ಯಾಃ-ಮತಂಗಮಷಿಗೆ ಶಿಷ್ಯರಾದ, ಋಷಯಃ-ಮುನಿಗಳು, ಆಸನ್-ಇದ್ದರು, ಗುರೋಃ-ಗುರುವಿಗಾಗಿ, ವನ್ಯಂ-ವನದಲ್ಲಿ ಪುಟ್ಟಿದ ವಸ್ತುಗಳನ್ನು, ಆಹರತಾಂ-ತರುತ್ತಿರುವವರಾದಕಾರಣ, ಭಾರಾಭಿತಪ್ತಾನಾಂ-ಆ ಪದಾರ್ಥಗಳ ಹೊರೆಯಿಂದ ಶ್ರಾಂತರಾದ, ತೇಷಾಂ-ಅವರುಗಳ, ಶರೀರಾತ್-ದೇಹದಿಂದ, ಯೇಸ್ವೇದಬಿಂದವಃ-ಯಾವ ಸ್ವೇದೋದಕದ ಬಿಂದುಗಳು, ಮಹೀಂ-ಭೂಮಿಯಲ್ಲಿ, ತೂರ್ಣಂ-ಜಾಗ್ರತೆಯಾಗಿ, ನಿಪೇತುಃ-ಬಿದ್ದವೋ, ತದಾ-ಆಕಾಲದಲ್ಲಿ, ತಾನಿ-ಆ ಸ್ವೇದಬಿಂದುಗಳು, ಮುನೀನಾಂ-ಋಷಿಗಳ, ತಪಸಾ-ತಪಸ್ಸಿನಿಂದ, ಮಾಲ್ಯಾನಿ-ಹುವ್ವುಗಳಾಗಿ, ಜಾತಾನಿ-ಹುಟ್ಟಿದವು, ತಾನಿ-ಆ ಪುಷ್ಪಗಳು, ಸ್ವೇದಬಿಂದುಸಮುತ್ಥಾನಿ-ಸ್ವೇದೋದಕದ ಬಿಂದುಗಳಿಂದ ಪುಟ್ಟಿದವಾದಕಾರಣ, ನವಿನಶ್ಯಂತಿ-ನಾಶವಂ ಹೊಂದುವದಿಲ್ಲ ॥೨೪॥ ಹೇಕಾಕುತ್ಸ್ಥ-ಎಲೈ ಶ್ರೀರಾಮನೇ, ಗತಾನಾಂ-ಹೊರಟುಹೋದ, ತೇಷಾಂ-ಅವರುಗಳಿಗೆ, ಪರಿಚಾರಿಣೀ-ಪರಿಚಾರಿಕಳಾದ, ಶ್ರಮಣೀ-ಸನ್ಯಾಸಿಯಾದ, ಚಿರಜೀವಿನೀ-ಸ್ಥಿರಜೀವಿಯಾದ, ಶಬರೀನಾಮ-ಶಬರೀಎಂದು ಪ್ರಸಿದ್ಧಳಾದವಳು, ಆಸ್ತೇ-ಇಧಾಳೆ ॥೨೫॥ ಹೇರಾಮ-ಎಲೈ ಶ್ರೀರಾಮನೇ, ನಿತ್ಯಂ-ನಿರಂತರವೂ, ಧರ್ಮೇ-ಧರ್ಮದಲ್ಲೇ, ಸ್ಥಿತಾ-ಇರುತ್ತಿರುವ ಆ ಶಬರಿಯು, ಸರ್ವಭೂತನಮಸ್ಕೃತಂ-ಸರ್ವಪ್ರಾಣಿಗಳಿಂದಲುಂ ನಮಸ್ಕರಿಸಲ್ಪಡುತ್ತಿರುವ, ದೇವೋಪಮಂ-ದೇವರಸದೃಶನಾದ, ತ್ವಾಂತು-ನಿನ್ನನ್ನಾದರೆ, ದೃಷ್ಟ್ವಾ-ಕಂಡು, ಸ್ವರ್ಗಲೋಕಂ-ಸ್ವರ್ಗಲೋಕವನ್ನು, ಗಮಿಷ್ಯತಿ-ಹೊಂದುವಳು ॥೨೬॥ ಹೇರಾಮ-ಎಲೈ ಶ್ರೀರಾ

---

ವೃದ್ಧವಾದ ಮಹಾ ವೃಕ್ಷಗಳನ್ನೂ, ಥಂಡಿಯಾಗಿರುವ ಉದಕವನ್ನೂ ಸಹಾ ಕಂಡು, ದುಃಖವಂ ಬಿಡುವವನಾಗುವೆ ।೨೦। ಇದಲ್ಲದೆ ಆ ಪಂಪಾನದಿಯ ಜಲದಲ್ಲಿ ಪುಷ್ಪಗಳಿಂದ ವ್ಯಾಪ್ತವಾದ ಹೊಂಗೇ ಮರಗಳನ್ನೂ ನೈದಿಲೆಗಳನ್ನೂ, ವಿಕಸಿತವಾಗಿರುವ ತಾವರೇ ಹುವ್ವುಗಳನ್ನೂ ಸಹಾ ನೋಡಿ ನೀನು ಶೋಕವಂ ಬಿಡುವವನಾಗುವೆ ।೨೧। ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೇ! ಆ ಪುಷ್ಪಗಳನ್ನು ಮುಡಕೊಳ್ಳುವ ಪುರುಷನು ಯಾರೂ ಇಲ್ಲ; ಮತ್ತೂ ಅವುಗಳು ಉದುರುವದಿಲ್ಲ ।೨೨। ಯಾಕಂದರೆ,—ಪೂರ್ವದಲ್ಲಿ ಆ ಪ್ರದೇಶದೊಳು ಮತಂಗಋಷಿಯ ಶಿಷ್ಯರಾದವರು ಯಾರೋ ಅವರುಗಳು ಸಮಾಧಾನಚಿತ್ತರಾಗಿ, ತಮ್ಮ ಗುರುವಿಗಾಗಿ ವನವಸ್ತುಗಳಂ ಹೊತ್ತು ತರುತ್ತಾ, ಆ ಪದಾರ್ಥಗಳ ಹೊರೆಯಿಂದ ಬಳಲಿದವರಾದರು, ಆಗ ಅವರ ಶರೀರದಿಂದ ಸ್ವೇದೋದಕವು ನೆಲದಲ್ಲಿ ಬಿದ್ದಹಾಗಾಯಿತು, ಆ ಸ್ವೇದೋದಕದ ಬಿಂದುಗಳೇ ಈ ಪುಷ್ಪಂಗಳಾಗಿ ಪುಟ್ಟಿವೆ, ಆದ್ದರಿಂದ ಅವುಗಳಿಗೆ ನಾಶವಿಲ್ಲ; ॥೨೩-೨೪॥ ಆ ಶಿಷ್ಯರ ಸೇವಾವೃತ್ತಿಯಂ ಗೈಯುತ್ತಲಿದ್ದ ಶಬರಿಯೆಂದು ಪ್ರಖ್ಯಾತಳಾದ ಓರ್ವ ಸನ್ಯಾಸಿನಿಯು ಚಿರಜೀವಿಯಾಗಿ ಈಗಲೂ ಆ ಪ್ರದೇಶದಲ್ಲಿ ಇಧಾಳೆ ಆಕೆಯು ಸರ್ವಪ್ರಾಣಿಗಳಿಂದಲೂ ನಮಸ್ಕರಿಸಲ್ಪಡುತಲಿರುವ ನಿನ್ನಂ ವೀಕ್ಷಿಸಿ ಸ್ವರ್ಗವನ್ನೈದುವಳು ।೨೫-೨೬। ನೀವುಗಳು ಆ ಪಂಪಾನದಿಗೆ ಪಶ್ಚಿಮತೀರವನ್ನೈದುವವರಾಗಿ, ಅಲ್ಲಿ ಮಹಾ ಮನೋಹರವಾದ ಒಂದಾನೊಂದು ಆಶ್ರಮವಂ ನೋಡುವಿರಿ, ಆ ವನದಲ್ಲಿಯೂ ಪರ್ವ

ಷ್ಟಿಮಂ । ಆಶ್ರಮಸ್ಥಾನಮತುಲಂಗುಹ್ಯಂಕಾಕುತ್ಸ್ಥಪಶ್ಯಸಿ ।೨೮। ನತತ್ರಾಕ್ರಮಿತುಂನಾಗಾಶ್ಶಕ್ನುವಂತಿತ ಮಾಶ್ರಮಂ॥ ವಿವಿಧಾಸ್ತತ್ರವೈನಾಗಾವನೇತಸ್ಮಿಂಶ್ಚಪರ್ವತೆ।ಋಷೇಸ್ತತ್ರಮತಂಗಸ್ಯವಿಧಾನಾತ್ತಚ್ಚಕಾನನಂ ॥೨೯॥ ತಸ್ಮಿನ್ನಂದನಸಂಕಾಶೆದೇವಾರಣ್ಯೋಪಮೇವನೇ। ನಾನಾವಿಹಗಸಂಕೀರ್ಣೆರಂಸ್ಯಸೇರಾಮನಿರ್ವೃತಃ ।೩೦। ಋಶ್ಯಮೂಕಶ್ಚ ಪಂಪಾಯಾಃಪುರಸ್ತಾತ್ಪುಷ್ಪಿತದ್ರುಮಃ । ಸುದುಃಖಾರೋಹಣೋನಾಮಶಿಶುನಾಗಾಭಿರಕ್ಷಿತಃ । ಉದಾರೋಬ್ರಹ್ಮಣಾ ಚೈವಪೂರ್ವಕಾಲೆವಿನಿರ್ಮಿತಃ ।೩೧।ಶಯಾನಃಪುರುಷೋರಾಮತಸ್ಯಶೈಲಸ್ಯಮೂರ್ಧನಿ। ಯತ್ಸ್ವಪ್ನೆಲಭತೆದತ್ತಂತತ್ಪ್ರ ಬುದ್ಧೋಧಿಗಚ್ಛತಿ । ನತ್ವೇನಂವಿಷಮಾಚಾರಃಪಾಪಕರ್ಮಾಧಿರೋಹತಿ । ತತ್ರೈವಪ್ರಹರಂತ್ಯೇನಂಸುಪ್ತಮಾದಾಯರಾ ಕ್ಷಸಾಃ ।೩೨।ತತ್ರಾಪಿಶಿಶುನಾಗಾನಾಮಾಕ್ರಂದಶ್ಶ್ರೂಯತೆಮಹಾನ್ । ಕ್ರೀಡತಾಂರಾಮಪಂಪಾಯಾಂಮತಂಗಾರ ಣ್ಯವಾಸಿನಾಂ ।೩೩॥ ಸಿಕ್ತಾರುಧಿರಧಾರಾಭಿಸ್ಸಂಹೃತ್ಯಪರಮದ್ವಿಪಾಃ।ಪ್ರಚರಂತಿಪೃಥಕ್ಕೀರ್ಣಾಮೇಘವರ್ಣಾಸ್ತರಸ್ವಿನಃ॥

---

ಮನೇ, ತತತಿ-ಬಳಿ. ಪಂಪಾಯಾಃ-ಪಂಪಾನದಿಯ, ಪ್ರತಿಪುಂಶೀರಂ-ಪಡವಲಭಾಗವನ್ನು, ಆಶ್ರಿತ್ಯ-ಆಶ್ರಯಿಸಿ, ಹೇಕಾಕುತ್ಸ್ಥ-ಎಲೈ ಶ್ರೀರಾಮನೇ. ಗುಹ್ಯಂ-ರಹಸ್ಯವಾಗಿರುವ, ಅತುಲಂ-ಅಸದೃಶವಾದ, ಆಶ್ರಮಸ್ಥಾನಂ-ಆಶ್ರಮಪ್ರದೇಶವನ್ನು, ಪಶ್ಯಸಿ-ನೋಡುವವನಾಗುವೆ ‖೨೮‖ ತತ್ರವನೇ-ಆ ವನದಲ್ಲಿಯೂ. ತಸ್ಮಿನ್ಪರ್ವತೇಚ-ಆ ಋಶ್ಯಮೂಕಪರ್ವತದಲ್ಲಿಯೂಕೂಡ, ವಿವಿಧಾಃ-ನಾನಾವಿಧವಾದ, ನಾಗಾಃ-ಆನೆಗಳೂ, ಸಂತಿವೈ-ಇರಲೇಯಿವೆ, ತತ್ರ-ಅಲ್ಲಿ, ಮತಂಗಸ್ಯಋಷೇಃ-ಮತಂಗಋಷಿಯ, ವಿಧಾನಾತ್-ನಿರ್ಮಾಣದದೆಸೆಯಿಂದ, ತತ್ಕಾನನಂ-ಆ ವನವು, ಜಾತಂ-ಆಯಿತು ಆದಕಾರಣ. ತತ್ರ-ಆ ಪ್ರದೇಶದಲ್ಲಿ, ನಾಗಾಃ-ಆನೆಗಳು, ತಮಾಶ್ರಮಂ-ಆ ಆಶ್ರಮವನ್ನು, ಆಕ್ರಮಿತುಂ-ಆಕ್ರಮಿಸುವದಕ್ಕೆ, ನಶಕ್ನುವಂತಿ-ಸಮರ್ಥಸಮರ್ಥವಾಗ ಲಾರವು ‖೨೯‖ ಹೇರಾಮ-ಎಲೈ ಶ್ರೀರಾಮನೇ. ನಂದನಸಂಕಾಶೇ-ನಂದನವನಕ್ಕೆ ಸದೃಶವಾದ, ದೇವಾರಣ್ಯೋಪಮೇ-ಚೈತ್ರರಥಾದಿ ದೇವತೆಗಳ ಉದ್ಯಾನ ವನಕ್ಕೆ ಸದೃಶವಾದ. ನಾನಾವಿಹಗಸಂಕೀರ್ಣೇ-ಅನೇಕಪಕ್ಷಿಗಳಿಂ ತುಂಬಿರುವ, ತಸ್ಮಿನ್ವನೇ-ಆ ವನದಲ್ಲಿ, ನಿರ್ವೃತಃ-ಸುಖಿತನಾಗಿ, ರಂಸ್ಯಸೇ-ಸುಖಿತ ನಾಗಿರುವೆ ‖೩೦‖ ಪಂಪಾಯಾಃ-ಪಂಪಾನದಿಗೆ, ಪುರಸ್ತಾತ್-ಮುಂಗಡೆಯಲ್ಲಿ. ಪುಷ್ಪಿತದ್ರುಮಃ-ಪುಷ್ಪಿಸಿದ ಗಿಡಗಳುಳ್ಳ, ಋಶ್ಯಮೂಕಶ್ಚ-ಋಶ್ಯ ಮೃಗವಿಶೇಷಗಳೂ, ಮೂಕಶ್ಚ-ನಿಶ್ಶಬ್ದವಾಗಿರುವಕಾರಣ ಋಶ್ಯಮೂಕವೆಂದು ಪ್ರಸಿದ್ಧವಾದ, ಶಿಶುನಾಗಾಭಿರಕ್ಷಿತಃ-ಬಾಲಸರ್ಪಗಳಿಂ ಅಧಿಷ್ಠಿತ ವಾಗಿದ್ದುದಾದಕಾರಣ, (ಅಥವಾ-ಆನೆಮರಿಗಳಿಂದ ಅಧಿಷ್ಠಿತವಾದದ್ದಾದಕಾರಣ,) ಸುದುಃಖಾರೋಹಣಃ-ದುಃಖದಿಂದೇರತಕ್ಕದ್ದೆಂದು, ನಾಮ-ಪ್ರಸಿದ್ಧ ವಾದ, ಉದಾರಃ-ಗಂಭೀರವಾದ ಪರ್ವತವು, ಪೂರ್ವಕಾಲೇ-ಪೂರ್ವಕಾಲದಲ್ಲಿ, ಬ್ರಹ್ಮಣಾಚೈವ-ಬ್ರಹ್ಮದೇವರಿಂದಲೇ,ನಿರ್ಮಿತಃ-ನಿರ್ಮಾಣಮಾಡಲ್ಪಟ್ಟಿತು‖ ೩೧‖ ‖ ಹೇರಾಮ-ಎಲೈ ಶ್ರೀರಾಮನೇ. ತಸ್ಯಶೈಲಸ್ಯ-ಆ ಪರ್ವತದ, ಮೂರ್ಧನಿ-ಶಿರಸ್ಸಿನಲ್ಲಿ. ಶಯಾನಃ-ಮಲಗಿರುವ, ಪುರುಷಃ-ಮನುಷ್ಯನ, ಸ್ವ ಪ್ನೇ-ಕನಸ್ಸಿನಲ್ಲಿ, ಯದ್ವಿತ್ತಂ-ಯಾವ ದ್ರವ್ಯವನ್ನು. ಲಭತೇ-ಹೊಂದುವನೋ, ತತ್-ಆ ದ್ರವ್ಯವನ್ನು. ಪ್ರಬುದ್ಧಃ-ಎಚ್ಚರಗೊಂಡವನಾಗಿ, ಅಧಿಗಚ್ಛತಿ- ಪಡೆಯುವನು, ಪಾಪಸಮಾಚಾರಃ-ಪಾಪವಾರ್ತೆಗಳುಳ್ಳ, ಪಾಪಕರ್ಮಾ-ಪಾಪಕೃತ್ಯವುಳ್ಳ ಪುರುಷನು, ಏನಂ-ಈ ಪರ್ವತವನ್ನು, ನಾಧಿರೋಹತಿ-ಏರು ವದಿಲ್ಲ ‖೩೩‖ ವಿಷಮಾಚಾರಃ-ವಕ್ರವಾದ ಆಚಾರವುಳ್ಳ. ಪಾಪಕರ್ಮಾ-ಪಾಪಕಾರ್ಯವುಳ್ಳ, ಯಸ್ತು-ಯಾವ ಪುರುಷನಾದರೆ, ತಂ-ಆ ಪರ್ವತವನ್ನು ಅಧಿರೋಹತಿ-ಏರುವನೋ, ಏನಂ-ಈ ಪುರುಷನನ್ನು, ರಾಕ್ಷಸಾಃ-ಅಸುರರು,ಆದಾಯ-ಕೊಂಡೊಯ್ದು, ತತ್ರೈವ-ಅಲ್ಲಿಯೇ. ಪ್ರಹರಂತಿ-ಹೊಡೆವರು‖, ಹೇರಾಮ-ಎಲೈ ಶ್ರೀರಾಮನೇ, ಪಂಪಾಯಾಂ-ಪಂಪಾನದಿಯಲ್ಲಿ, ಕ್ರೀಡತಾಂ-ವಿಹರಿಸುತ್ತಲಿರುವ, ಮತಂಗಾರಣ್ಯವಾಸಿನಾಂ-ಮತಂಗಾರಣ್ಯದಲ್ಲಿರುವ ಜನಗಳಿಗೆ, ತತ್ರಾಪಿ-ಅಲ್ಲಿಯೂಕೂಡ, ಶಿಶುನಾಗಾನಾಂ-ಆನೇಮರಿಗಳ, ಆಕ್ರಂದಃ-ಧ್ವನಿಯು, ಶ್ರೂಯತೇ-ಕೇಳಲ್ಪಡುತ್ತಲಿಧೆ ‖೩೪‖ ತರಸ್ವಿನಃ-

---

ತದಲ್ಲಿಯೂ ನಾನಾವಿಧವಾದ ಆನೆಗಳೂ ಇರುವಂಥಾವುಗಳಾಗಿವೆ, ಆದರೂ ಆ ವನವು ಮತಂಗಮುನಿಯಿಂದ ನಿರ್ಮಿಸಲ್ಪಟ್ಟದ್ದಾದಕಾರಣ, ಆ ಪ್ರದೇಶಕ್ಕೆ ಆ ಆನೆಗಳು ಬರುವದಿಲ್ಲ ।೨೯। ನಂದನವನಕ್ಕೂ ಚೈತ್ರರಥವೆಂಬ ಕುಬೇರನ ವನಕ್ಕೂ ಸಹಾ ಸಮಾನವಾಗಿಯೂ, ಅನೇಕವಾದ ಪಕ್ಷಿಗಳಿಂದ ವ್ಯಾಪ್ತವಾಗಿಯೂ ಇರುವ ಆ ವನದಲ್ಲಿ ಸುಖವಾಗಿರುವವನಾಗುವೆ ।೩೦। ಪಂಪಾನದಿಯ ಮುಂದುಗಡೆಯಲ್ಲಿ ಪುಟ್ಟಿಸಿರುವ ವೃಕ್ಷಂಗಳುಳ್ಳದ್ದಾಗಿಯೂ, ನಿಶ್ಶಬ್ದವಾಗಿರುವ ಮೃಗವಿಶೇಷಗಳುಳ್ಳದ್ದಾಗಿಯೂ, ಇರುವದಾದಕಾರಣ, ಆ ಪರ್ವತವು ಋಷ್ಯಮೂಕವೆಂದು ಪ್ರಖ್ಯಾತಿಯನ್ನೈದಿಧೆ, ಮತ್ತೂ ಆ ಪರ್ವತವು ಹಾವುಮರಿಗಳಿಂದ ವ್ಯಾಪ್ತವಾದಕಾರಣ ಏರಲಸಾಧ್ಯವಾದದ್ದಾಗಿ ಪೂರ್ವಕಾಲದಲ್ಲಿ ಬ್ರಹ್ಮನಿಂದಲೇ ಸೃಜಿಸಲ್ಪಟ್ಟಿಧೆ ಮತ್ತೂ ಆ ಪರ್ವತದ ಶಿಖರದಲ್ಲಿ ಶಯನಂಗೈಯ್ಯುವ ಪುರುಷನ ಸ್ವಪ್ನದಲ್ಲಿ ಯಾವದಾದರೂ ಸ್ವತ್ತು ಪ್ರಾಪ್ತವಾದರೇ, ಆ ಸ್ವತ್ತನ್ನು ಎಚ್ಚೆದ್ದವನಾಗಿ ಪಡೆವನು, ಇದಲ್ಲದೆ ಪಾಪಿಷ್ಠನು ಆ ಗಿರಿಯನ್ನೇರಕೂಡದು, ಒಂದುವೇಳೆಯಲ್ಲಿ ಪಾಪಿಯು ಆ ಪರ್ವತವನ್ನೇರಿದರೆ, ಆ ಪುರುಷನನ್ನು ರಾಕ್ಷಸರು ತೆಗದುಕೊಂಡು ಪೋಗಿ ಅಲ್ಲಿಯೆ ಅವನಂ ಹೊಡೆವರು ।೩೨। ಮತ್ತೂ ಪಂಪಾನದಿಯಲ್ಲಿ ಕ್ರೀಡಿಸುತಲಿರುವ ಆನೇಮರಿಗಳ ಘೋಷೆಯುಅಲ್ಲಿ ಕೇಳಲ್ಪಡುತಲಿಧೆ,ಇದಲ್ಲದೆ ಮೇಘದಂತೆ ಕಪ್ಪುಬಣ್ಣವುಳ್ಳ

ತೇತತ್ರಪೀತ್ವಾಪಾನೀಯಂವಿಮಲಂಶೀತಮವ್ಯಯಂ। ನಿರ್ವೃತಾಸಂವಿಗಾಹಂತೇವನಾನಿವನಗೋಚರಾಃ॥೩೭ ಋಕ್ಷಾಂಶ್ಚದ್ವೀಪಿನಶ್ಚೈವನೀಲಕೋಮಳಕಪ್ರಭಾನ್। ರುರೂನಪೇತಾಪಜಯಾನ್ದೃಷ್ಟ್ವಾಶೋಕಂಜಹಿಷ್ಯಸಿ ।೩೮। ರಾಮ ತಸ್ಯತುಶೈಲಸ್ಯಮಹತೀ ಶೋಭತೇಗುಹಾ । ಶಿಲಾಪಿಧಾನಾಕಾಕುತ್ಸ್ಥದುಃಖಂಚಾಸ್ಯಾಃಪ್ರವೇಶನಂ।೩೯। ತಸ್ಯಾಗುಹಾಯಾಃಪ್ರಾಗ್ದ್ವಾರೇಮಹಾನ್ಶೀತೋದಕೋಹ್ರದಃ॥ಫಲಮೂಲಾನ್ವಿತೋರಮ್ಯೋನಾನಾಮೃಗಸಮಾವೃತಃ।೪೦। ತಸ್ಯಾಂವಸತಿಸುಗ್ರೀವಶ್ಚತುರ್ಭಿಸ್ಸಹವಾನರೈಃ॥ ಕದಾಚಿಚ್ಛಿಖರೇತಸ್ಯಪರ್ವತಸ್ಯಾವತಿಷ್ಠತೇ॥೪೧॥ ಕಬಂಧಸ್ತ್ವೇನುಶಾಸ್ಯೈವಂತಾವುಭೌರಾಮಲಕ್ಷ್ಮಣೌ ।ಸ್ರಗ್ವೀಭಾಸ್ವರವರ್ಣಾಭಃಖೇವ್ಯರೋಚತವೀರ್ಯವಾನ್ ।೪೨। ತಂತುಖಸ್ಥಂಮಹಾಭಾಗಂಕಬಂಧಂರಾಮಲಕ್ಷ್ಮಣೌ। ಪ್ರಸ್ಥಿತೌತ್ವಂವ್ರಜಸ್ವೇತಿವಾಕ್ಯಮೂಚತುರಂತಿಕೇ॥೪೩॥ಗಮ್ಯತಾಂಕಾರ್ಯಸಿದ್ಧ್ಯೈ

ಬಲಿಷ್ಠವಾದ, ಮೇಘವರ್ಣಾಃ–ಮೇಘವರ್ಣವಾದ. ಪರಮದ್ವಿಪಾಃ–ಉತ್ತಮವಾದ ಆನೆಗಳು, ಸಂಹತ್ಯ–ಬಂದಕ್ಕೊಂದು ಹೊಡದಾಡಿ, ರುಧಿರಾಭಿಃ–ರಕುತಗಳಿಂದ ಸಿಕ್ತಾಃ–ತೋಯಿಸಲ್ಪಟ್ಟವುಗಳಾಗಿ, ಪೃಥಕ್–ಪೃಥಕ್–ಬ್ಯಾರೆಬ್ಯಾರೆಯಾಗಿಸೇರಿ. ಪ್ರಚರಂತಿ–ಸಂಚರಿಸುತಲಿವೆ, ತೇವನಗೋಚರಾಃ–ಆ ವನದಲ್ಲಿರುವವರು, ತತ್ರ–ಅಲ್ಲಿ, ವಿಮಲಂ–ಸ್ವಚ್ಛವಾಗಿರುವ, ಶೀತಂ–ಥಂಡಿಯಾದ, ಅವ್ಯಯಂ–ರೋಗವನುಂಟುಮಾಡದಿರುವ, ಪಾನೀಯಂ–ಉದಕವನ್ನು, ಪೀತ್ವಾ–ಪಾನಮಾಡಿ, ನಿರ್ವೃತಾಃ–ಸುಖವಾಗಿ. ವನಾನಿ–ಅರಣ್ಯಗಳನ್ನು ವಿಗಾಹಂತೇ_ಹೊಕ್ಕುತವೆ ॥೩೭॥ ಋಕ್ಷಾಂಶ್ಚ–ಕರಡಿಗಳನೂ, ದ್ವೀಪಿನಃ–ಹುಲಿಗಳು, ನೀಲಕೋಮಲಕಪ್ರಭಾನ್–ನೀಲಮಣಿಯಂತೆ ಕೋಮಲವಾದ ಕಾಂತಿಯುಳ್ಳ, ಅಪೇತಾಪಜಯಾನ್–ಅಪಜಯವನ್ನು ಹೊಂದದಿರುವ,ರುರೂನ್ ರುರೂ ಎಂಬ ಮೃಗವಿಶೇಷಗಳನೂ, ದೃಷ್ಟ್ವಾ–ಕಂಡು. ಶೋಕಂ–ವ್ಯಸನವನ್ನು, ಜಹಿಷ್ಯಸಿ–ಜಯಿಸುವೆ ॥೩೮॥ ಹೇರಾಮ–ಎಲೈ ಶ್ರೀರಾಮನೇ, ಕಿಂತು–ಮತ್ತೇನಂದರೆ, ತಸ್ಯಶೈಲಸ್ಯ–ಆ ಪರ್ವತದ. ಮಹತೀ–ಮಹತ್ತರವಾದ ಗುಹಾ–ಗುಹೆಯು, ಶೋಭತೇ–ಹೊಳೆಯುತಿದೆ, ಹೇಕಾಕುತ್ಸ್ಥ–ಎಲೈ ಶ್ರೀರಾಮನೇ, ಶಿಲಾಪಿಧಾನಾ_ಶಿಲೆಯಿಂದ ಮುಚ್ಚಲ್ಪಟ್ಟದ್ದು. ಅಸ್ಯಾಃ–ಆಗುಹೆಯ, ಪ್ರವೇಶನಂ–ಹೊಕ್ಕೋಣವು, ದುಃಖಂ–ದುಃಖಕರವಾದದ್ದು॥೩೯॥ ತಸ್ಯಾಗುಹಾಯಾಃ_ಆ ಗುಹೆಯ, ಪೂರ್ವದ್ವಾರೇ–ಮೂಡಲ ಬಾಗಿಲಲ್ಲಿ, ಮಹಾನ್–ಮಹತ್ತರವಾದ, ಶೀತೋದಕಃ–ತಣ್ಣೀರುಳ್ಳ, ಫಲಮೂಲಾನ್ವಿತಃ–ಫಲಗಳಿಂದಲೂ ಕಂದಮೂಲಗಳಿಂದಲೂ ಕೂಡಿಕೊಂಡಿರುವ, ನಾನಾಮೃಗಸಮಾವೃತಃ–ಅನೇಕಮೃಗಗಳಿಂದ ಕೂಡಿಕೊಂಡಿರುವ, ರಮ್ಯಃ–ಮನೋಹರವಾದ, ಹ್ರದಃ–ಮಡುವು, ( ಅಸ್ತಿ–ಇದೆ ) ॥೪೦॥ ತಸ್ಯಾಂ–ಆ ಗುಹೆಯಲ್ಲಿ, ಸುಗ್ರೀವಶ್ಚ–ಸುಗ್ರೀವನೂ ಕೂಡ, ಚತುರ್ಭಿಃ–ನಾಲ್ಕಾದ, ವಾನರೈಸ್ಸಹ–ಕಪಿಗಳೊಡನೆ, ವಸತಿ–ಇದ್ದಾನೆ, ಕದಾಚಿತ್–ಬಂದಾನೊಂದುಕಾಲದಲ್ಲಿ, ತಸ್ಯಪರ್ವತಸ್ಯ–ಆ ಪರ್ವತದ, ಶಿಖರೇ–ಶೃಂಗದಲ್ಲಿ, ಅವತಿಷ್ಠತೇ_ಕುಳಿತುಕೊಳ್ಳುವನು ॥೪೧॥ ವೀರ್ಯವಾನ್–ಪರಾಕ್ರಮಶಾಲಿಯಾದ, ಸ್ರಗ್ವೀ–ಪೂದಂಡೆಗಳುಳ್ಳವನಾಗಿ, ಭಾಸ್ಕರವರ್ಣಾಭಃ–ಸೂರ್ಯನಕಾಂತಿಯಂತೆ ಕಾಂತಿಯುಳ್ಳ, ಕಬಂಧಸ್ತು_ಕಬಂಧನಾದರೆ, ಏವಂ–ಈಪ್ರಕಾರವಾಗಿ, ರಾಮಲಕ್ಷ್ಮಣೌ–ರಾಮಲಕ್ಷ್ಮಣರೆಂಬ, ತಾವುಭೌ–ಅವರೀರ್ವರನ್ನು ಕುರಿತು, ಅನುಶಾಸ್ಯ–ಹೇಳಿ, ಖೇ–ಅಂತರಿಕ್ಷದಲ್ಲಿ. ವ್ಯರೋಚತ–ಹೊಳೆಯುತಿದ್ದನು ॥೪೨॥ ರಾಮಲಕ್ಷ್ಮಣೌ–ರಾಮಲಕ್ಷ್ಮರು, ಪ್ರಸ್ಥಿತೌ–ಪ್ರಯಾಣಮಾಡಿದವರಾಗಿ, ಖಸ್ಥಂ–ಅಂತರಿಕ್ಷದಲ್ಲಿರುವ, ಮಹಾಭಾಗಂ–ಬಹಳ ಪುಣ್ಯವಂತನಾದ, ತಂಕಬಂಧಂ–ಆ ಕಬಂಧನನ್ನಾದರೆ, ತ್ವಂ_ನೀನು, ವ್ರಜಸ್ವೇತಿ–ಹೊರಟು ಹೊ

ಬಹು ಬಲಾಢ್ಯವಾದ ಆನೆಗಳು ಒಂದಕ್ಕೊಂದು ಹೊಡದಾಡಿ, ರಕುತದಿಂದ ತೋಯಿಸಲ್ಪಟ್ಟ ಶರೀರವುಳ್ಳವಾಗಿ ಬೇರೆ ಬೇರೆ ಸಂಚರಿಸುತವೆ, ಮತ್ತೂ ಆ ವನದಲ್ಲಿರುವ ಜಂತುಗಳು ಥಣ್ಣಗಿರುವ ನಿರ್ಮಲೋದಕವನ್ನು ಪಾನಂಗೈದು ಸುಖವಾಗಿ ಅರಣ್ಯದಲ್ಲಿ ಹೊಕ್ಕುತವೆ, ಇದಲ್ಲದೆ ಕರಡಿಗಳೂ ಹುಲಿಗಳೂ ಸಹಾ ನೀಲಮಣಿಯಂತೆ ಕೋಮಲವಾದ ಕಾಂತಿಯುಳ್ಳ “ ರುರು ” ಎಂಬ ಮೃಗವಿಶೇಷಗಳಂ ಕಂಡು ವ್ಯಸನವಂ ಬಿಡುವವು, ಮತ್ತೂ ಆ ಪರ್ವತದಲ್ಲಿ ಮಹತ್ತರವಾದ ಗುಹೆಯು ಇರುವಂಥಾದ್ದಾಗಿದೆ, ಅದರ ಬಾಯಿಯು ಪಾಷಾಣದಿಂದ ಮುಚ್ಚಲ್ಪಟ್ಟದೆ, ಆದಕಾರಣ ಅಲ್ಲಿ ಪ್ರವೇಶಿಸಲಸಾಧ್ಯವು ।೩೯। ಮತ್ತೂ ಆ ಗುಹೆಯ ಪೂರ್ವದ್ವಾರದಲ್ಲಿ ಶೀತೋದಕವುಳ್ಳದ್ದಾಗಿಯೂ, ಕಂದಮೂಲಗಳಿಂದಲೂ ಫಲಗಳಿಂದಲೂ ಸಹಾ ಯುಕ್ತವಾದದ್ದಾಗಿಯೂ, ಅನೇಕವಾದ ಮೃಗಗಳಿಂದ ವ್ಯಾಪ್ತವಾಗಿಯೂ ಇರುವ ಒಂದಾನೊಂದು ಸರೋವರವಿದೆ ।೪೦। ಆ ಗುಹೆಯಲ್ಲಿ ಸುಗ್ರೀವನು ನಾಲ್ಕು ಕಪಿಗಳಿಂದ ಯುಕ್ತನಾಗಿ ನೆಲಗೊಂಡಿದ್ದಾನೆ, ಒಂದಾನೊಂದು ಕಾಲದಲ್ಲಿ ಆ ಪರ್ವತದ ಶಿಖರದಲ್ಲಿ ಕುಳಿತುಕೊಳ್ಳುವನು ।೪೧। ಮಹಾ ಪರಾಕ್ರಮಶಾಲಿಯಾದ ಆ ಸುಗ್ರೀವನು ಪೂದಂಡೆಗಳಂ ಧರಿಸಿದವನಾಗಿಯೂ, ಸೂರ್ಯನ ಕಾಂತಿಯಂತೆ ಕಾಂತಿಯುಳ್ಳವನಾಗಿಯೂ ಇರುವನೆಂದು ಕಬಂಧನು ಈ ರೀತಿಯಲ್ಲಿ ಆ ರಾಮಲಕ್ಷ್ಮಣರಿಗೆ ಗುರ್ತುಗಳಂ ಪೇಳಿ ಗಗನದಲ್ಲಿ ಹೊಳೆಯುತ ಲಿದ್ದನು ।೪೨। ಅನಂತರದಲ್ಲಿ ಆ ರಾಮಲಕ್ಷ್ಮಣರೀರ್ವರು ಪ್ರಯಾಣವಂ ಮಾಡಿದವರಾಗಿ, ಆ ಕಬಂಧನಂ ಕುರಿತು, ಎಲೈ ಕಬಂಧನೇ! ನೀನು ತೆರಳುವವನಾಗು, ನಾವು ಸಾಗುವೆವೆಂದು ನುಡಿಯಲೂ, ಆ ಕಬಂಧನು ಎಲೈ ಕ್ಷತ್ರಿಯಶ್ರೇಷ್ಠರೇ! ನೀವು ನಿಮ್ಮ ಕಾರ್ಯಸಿದ್ಧಿಗಾಗಿ ತೆರಳುವವ

ಸುಪ್ರೀತೌ ತಾವನುಜ್ಞಾಪ್ಯ ಕಬಂಧಃ ಪ್ರಸ್ಥಿತಸ್ತದಾ ॥೪೪॥ ಸ ತತ್ಕಬಂಧಃ ಪ್ರತಿಪದ್ಯ ರೂ
ರ್ಥಮಿತಿ ತಾವಬ್ರವೀತ್ಸ ಚ ।
ಪಂ ವೃತಃ ಶ್ರಿಯಾ ಭಾಸ್ಕರತುಲ್ಯದೇಹಃ । ನಿದರ್ಶಯನ್ ರಾಮಮವೇಕ್ಷ್ಯ ಖಸ್ಥಸ್ಸಖ್ಯಂ ಕುರುಷ್ವೇತಿ ತದಾಭ್ಯುವಾಚ ॥೪೫॥

—** ಇತಿ ಶ್ರೀಮದಾರಣ್ಯಕಾಂಡೇ ತ್ರಿಸಪ್ತತಿತಮಸ್ಸರ್ಗಃ **—

ತೌ ಕಬಂಧೇನ ತಂ ಮಾರ್ಗಂ ಪಂಪಾಯಾ ದರ್ಶಿತಂ ವನೇ । ಪ್ರತಸ್ಥತುರ್ದಿಶಂ ಗೃಹ್ಯ ಪ್ರತೀಚೀಂ ನೃವರಾತ್ಮಜೌ ॥೧॥
ತೌ ಶೈಲೇಷ್ವಾಚಿತಾನೇಕಾನ್ ಕ್ಷೌದ್ರಕಲ್ಪಫಲಾನ್ ದ್ರುಮಾನ್ । ವೀಕ್ಷಂತೌ ಜಗ್ಮತುರ್ದ್ರಷ್ಟುಂ ಸುಗ್ರೀವಂ ರಾಮಲಕ್ಷ್ಮ
ಣೌ ॥೨॥ ಕೃತ್ವಾ ಚ ಶೈಲಪೃಷ್ಠೇ ತು ತೌ ವಾಸಂ ರಘುನಂದನೌ । ಪಂಪಾಯಾಃ ಪಶ್ಚಿಮಂ ತೀರಂ ರಾಘವಾವುಪತಸ್ಥತುಃ ॥೩॥
ತೌ ಪುಷ್ಕರಿಣ್ಯಾಃ ಪಂಪಾಯಾಸ್ತೀರಮಾಸಾದ್ಯ ಪಶ್ಚಿಮಂ । ಅಪಶ್ಯತಾಂ ತತಸ್ತತ್ರ ಶಬರ್ಯಾ ರಮ್ಯಮಾಶ್ರಮಂ ॥೪॥
ತೌ ತಮಾಶ್ರಮಮಾಸಾದ್ಯ ದ್ರುಮೈರ್ಬಹುಭಿರಾವೃತಂ । ಸುರಮ್ಯಮಭಿವೀಕ್ಷಂತೌ ಶಬರೀಮಭ್ಯುಪೇಯತುಃ ॥೫॥ ತೌ

ಗೆಯು. ಅಂತಿಕೇ-ಸಮೀಪದಲ್ಲಿ, ವಾಕ್ಯಂ-ಮಾತಿನನ್ನು, ಊಚತುಃ-ಹೇಳಿದರು ॥೪೩॥ ಸಚ-ಆ ಕಬಂಧನೂ ಕೂಡ, ಕಾರ್ಯಸಿದ್ಧ್ಯರ್ಥಂ-ಕಾರ್ಯಸಿದ್ಧಿ
ಗಾಗಿ, ಗಮ್ಯತಾಂ-ಹೋಗಲ್ಪಡಲೆಂದು, ತೌ-ಆ ರಾಮಲಕ್ಷ್ಮಣರಂ ಕುರಿತು, ಅಬ್ರವೀತ್-ಹೇಳಿದನು, ಸುಪ್ರೀತೌ-ಸಂತೋಷಗೊಂಡ, ತೌ-ಆ ರಾ
ಮಲಕ್ಷ್ಮಣರನ್ನು, ಅನುಜ್ಞಾಪ್ಯ-ಸಮ್ಮತಿಸಿ, ಅಂದರೆ-ಅಪ್ಪಣೆ ತೆಗೆದುಕೊಂಡು, ಕಬಂಧಃ-ಕಬಂಧನು. ತದಾ-ಆ ಕಾಲದಲ್ಲಿ, ಪ್ರಸ್ಥಿತಃ-ಹೊರಟುಹೋ
ದನು ॥೪೪॥ ತದಾ-ಆ ಕಾಲದಲ್ಲಿ, ಸಕಬಂಧಃ-ಆ ಕಬಂಧನು, ತದ್ರೂಪಂ-ಆ ರೂಪವನ್ನು, ಪ್ರತಿಪದ್ಯ-ಹೊಂದಿ, ಶ್ರಿಯಾ-ಕಾಂತಿಯಿಂದ, ವೃತಃ-ಬೆಳ
ಗುತ್ತಿರುವವನಾಗಿ, ಭಾಸ್ಕರತುಲ್ಯದೇಹಃ-ಸೂರ್ಯನಿಗೆ ಸಮವಾದ ಶರೀರವುಳ್ಳವನಾಗಿ, ಖಸ್ಥಃ-ಅಂತರಿಕ್ಷದಲ್ಲಿ ನಿಂತವನಾಗಿ, ರಾಮಂ-ಶ್ರೀರಾಮನನ್ನು. ಅ
ವೇಕ್ಷ್ಯ-ಕಂಡು. ನಿದರ್ಶಯನ್-ಮಾರ್ಗವನ್ನು ತೋರಿಸುತ್ತಿರುವವನಾಗಿ, ಸಖ್ಯಂ-ಸುಗ್ರೀವನ ಸಖ್ಯವನ್ನು, ಕುರುಷ್ವ ಇತಿ-ಮಾಡೆಂದು. ಅಭ್ಯುವಾಚ-ಹೇ
ಳಿದನು ॥೪೫॥

—*** ಇತಿ ಶ್ರೀಮದಾರಣ್ಯಕಾಂಡೇ-ತ್ರಿಸಪ್ತತಿತಮಸ್ಸರ್ಗಃ ***—

ನೃವರಾತ್ಮಜೌ-ರಾಜೋತ್ತಮನ ಪುತ್ರರಾದ. ತೌ-ಆ ರಾಮಲಕ್ಷ್ಮಣರು, ಪ್ರತೀಚೀಂದಿಶಂ-ಪಡುವಲುದಿಕ್ಕನ್ನು. ಗೃಹ್ಯ-ಹಿಡಿದು, ವನೇ-ಅರಣ್ಯ
ದಲ್ಲಿ, ಪಂಪಾಯಾಃ-ಪಂಪಾನದಿಗೆ. ಕಬಂಧೇನ-ಕಬಂಧನಿಂದ. ದರ್ಶಿತಂ-ತೋರಿಸಲ್ಪಟ್ಟ. ತಂಮಾರ್ಗಂ-ಆ ಮಾರ್ಗವನ್ನು ಕುರಿತು, ಪ್ರತಸ್ಥತುಃ-ತೆರ
ಳಿದರು ॥೧॥ ತೌ-ರಾಮಲಕ್ಷ್ಮಣೌ-ಆ ರಾಮಲಕ್ಷ್ಮಣರು, ಶೈಲೇಷು-ಪರ್ವತಗಳಲ್ಲಿ, ಆಚಿತಾನ್-ಮಲಗಿರುವ, ಕ್ಷೌದ್ರಕಲ್ಪಫಲಾನ್-ಮಾಧುರ್ಯದಿಂದ
ಮಧುವಿಗೆ ಸಮಾನವಾದ ಫಲವುಳ್ಳ, ಅನೇಕಾನ್-ಅನೇಕವಾದ, ದ್ರುಮಾನ್-ವೃಕ್ಷಗಳನ್ನು, ವೀಕ್ಷಂತೌ-ನೋಡುವವರಾಗಿ, ಸುಗ್ರೀವಂ-ಸುಗ್ರೀವನನ್ನು.
ದ್ರಷ್ಟುಂ-ನೋಡುವದಕ್ಕಾಗಿ, ಜಗ್ಮತುಃ-ತೆರಳಿದರು ॥೨॥ ರಘುನಂದನೌ-ರಘುಕುಲಾನಂದಕರರಾದ ತೌ ರಾಘವೌ-ಆ ರಾಮಲಕ್ಷ್ಮಣರು. ಶೈಲಪೃ
ಷ್ಠೇತು-ಬೆಟ್ಟದ ಶಿಖರದಲ್ಲಿಯೇ. ವಾಸಂ-ನಿವಾಸವನ್ನು. ಕೃತ್ವಾ-ಮಾಡಿ. ಪಂಪಾಯಾಃ-ಪಂಪಾನದಿಯ, ಪಶ್ಚಿಮಂತೀರಂ-ಪಡುವಲು ದಡವನ್ನು, ಉ
ಪತಸ್ಥತುಃ-ಸೇರಿದರು ॥೩॥ ತತಃ-ಬಳಿಕ, ತೌ-ಆ ರಾಮಲಕ್ಷ್ಮಣರು, ಪಂಪಾಯಾಃ-ಪಂಪಾ ಎಂಬ, ಪುಷ್ಕರಿಣ್ಯಾಃ-ನದಿಯ, ಪಶ್ಚಿಮಂತೀರಂ-ಪಡುವ
ಲಿನಲ್ಲಿರುವ ದಡವನ್ನು, ಆಸಾದ್ಯ-ಹೊಂದಿ, ತತ್ರ-ಅಲ್ಲಿ, ಶಬರ್ಯಾಃ-ಶಬರಿಯ. ರಮ್ಯಂ-ಮನೋಹರವಾದ, ಆಶ್ರಮಂ-ಆಶ್ರಮವನ್ನು, ಅಪಶ್ಯತಾಂ-ನೋ
ಡಿದರು ॥೪॥ ತೌ-ಆ ರಾಮಲಕ್ಷ್ಮಣರು. ಬಹುಭಿಃ-ಅನೇಕವಾದ, ದ್ರುಮಭಿಃ-ವೃಕ್ಷಗಳಿಂದ. ಆವೃತಂ-ಆಚ್ಛಾದಿಸಲ್ಪಟ್ಟ, ಸುರಮ್ಯಂ-ಅತಿಮನೋ
ಹರವಾದ. ತಮಾಶ್ರಮಂ-ಆ ಆಶ್ರಮವನ್ನು, ಆಸಾದ್ಯ-ಹೊಂದಿ, ವೀಕ್ಷಂತೌ-ನೋಡುವವರಾಗಿ, ಶಬರೀಂ-ಶಬರಿಯನ್ನು ಕುರಿತು, ಅಭ್ಯುಪೇಯತುಃ-
ಸಮೀಪಕ್ಕೆ ಬಂದರು ॥೫॥ ತದಾ-ಆ ಸಮಯದಲ್ಲಿ, ಸಿದ್ಧಾ-ಸಿದ್ಧಸ್ತ್ರೀಯಾದ ಆ ಶಬರಿಯು. ತೌ-ಆ ರಾಮಲಕ್ಷ್ಮಣರನ್ನು, ದೃಷ್ಟ್ವಾ-ಕಂ

ರಾಗಿ, ಅಪ್ಪಣೆಯಾದರೆ ನಾನು ಹೋಗಿಬರುವೆನೆಂದು ಹೇಳಿದವನಾಗಿ, ಪ್ರಯಾಣವಂ ಮಾಡಿದನದೆಂತೆನೆ;—ಆ ಕ
ಬಂಧನು ಸೂರ್ಯನಂತೆ ಹೊಳೆವ ಬೆಳಕುಳ್ಳವನಾಗಿ ಗಗನದಲ್ಲಿ ನಿಂತುಕೊಂಡು ಶ್ರೀರಾಮನಂ ಕಂಡು, ದಾರಿ
ಯಂ ತೋರಿಸುತ್ತಾ ಎಲೈ ರಾಮನೇ! ಸುಗ್ರೀವಸಖ್ಯವಂ ಮಾಡೆಂದು ನುಡಿದನು। -*ಎಪ್ಪತ್ತಮೂರನೆಯ ಸರ್ಗಂ ಮುಗಿದುದು*-

ರಾಜೋತ್ತಮನಾದ ದಶರಥ ಮಹಾ ರಾಜನಿಗೆ ಪುತ್ರರಿಂದ ಆ ರಾಮ ಲಕ್ಷ್ಮಣರೀರ್ವರು ಆ ವನದಲ್ಲಿ ಪಂ
ಪಾನದಿಗೆ ಕಬಂಧನಿಂದ ತೋರಿಸಲ್ಪಟ್ಟ ಮಾರ್ಗವನ್ನನುಸರಿಸಿ, ಪಡವಲು ಕಡೆಯಲ್ಲಿ ಪ್ರಯಾಣವಂ ಮಾಡಿದರು
ಎಂತೆನೆ,—ಆ ರಾಮಲಕ್ಷ್ಮಣರೀರ್ವರು ಪರ್ವತಗಳಲ್ಲಿ ಮಲಗುತ್ತಲೂ, ಜೇನುತುಪ್ಪದಂತೆ ಬಹು ಮಾಧುರ್ಯ
ವಾಗಿರುವ ಫಲಗಳನ್ನು ಭಕ್ಷಿಸುತ್ತಲೂ, ಅನೇಕವಿಧವಾದ ವೃಕ್ಷಗಳನ್ನು ನೋಡುತ್ತಲೂ, ಪರ್ವತಶಿಖರಗಳಲ್ಲಿ ವಾ
ಸಂ ಗೈಯುತ್ತಲೂ ಸಹಾ ಪ್ರಯಾಣವಂ ಮಾಡಿ; ಪಂಪಾನದಿಯ ಪಶ್ಚಿಮತೀರವನ್ನೈದಿದರು ॥೩॥ ಅನಂತರದಲ್ಲಿ ಆ
ರಾಮಲಕ್ಷ್ಮಣರು ಪಂಪಾನದಿಯ ಪಡವಲು ದಡವನ್ನೈದಿ, ಅಲ್ಲಿ ಶಬರಿಯ ಸಂಬಂಧವಾದ ಮಹಾ ಮನೋಹರ
ವಾದ ಆಶ್ರಮವಂ ಕಂಡರು ॥೪॥ ಅನಂತರದಲ್ಲಿ ಆ ರಾಮಲಕ್ಷ್ಮಣರು ಅನೇಕವಿಧವಾದ ವೃಕ್ಷಗಳಿಂದ ವ್ಯಾಪ್ತ
ವಾಗಿರುವ ಮಹಾ ಮನೋಹರವಾದ ಆ ಆಶ್ರಮವನ್ನೈದಿ ಅದಂ ನೋಡುತ್ತಾ ಶಬರಿಯ ಸಮೀಪವನ್ನೈದಿದ

ಚದೃಷ್ಟ್ವಾತದಾಸಿದ್ಧಾಸಮುತ್ಥಾಯಕೃತಾಂಜಲಿಃ । ರಾಮಸ್ಯಪಾದೌಜಗ್ರಾಹಲಕ್ಷ್ಮಣಸ್ಯಚಧೀಮತಃ । ಪಾದ್ಯಮಾಚಮನೀಯಂಚಸರ್ವಂಪ್ರಾದಾದ್ಯಥಾವಿಧಿ ।೬॥ ತಾಮುವಾಚತತೋರಾಮಶ್ಶ್ರಮಣೀಂಸಂಶಿತವ್ರತಾಂ । ಕಚ್ಚಿತ್ತೇನಿರ್ಜಿತಾವಿಘ್ನಾಃಕಚ್ಚಿತ್ತೇವರ್ಧತೇತಪಃ । ಕಚ್ಚಿತ್ತೇನಿಯತಃಕ್ರೋಧಆಹಾರಶ್ಚತಪೋಧನೇ। ಕಚ್ಚಿತ್ತೇನಿಯಮಾಃಪ್ರಾಪ್ತಾಃಕಚ್ಚಿತ್ತೇಮನಸಸ್ಸುಖಂ । ಕಚ್ಚಿತ್ತೇಗುರುಶುಶ್ರೂಷಾಸಫಲಾಚಾರುಭಾಷಿಣಿ ।೯। ರಾಮೇಣತಾಪಸೀಪೃಷ್ಟಾಸಾಸಿದ್ಧಾಸಿದ್ಧಸಮ್ಮತಾ । ಶಶಂಸಶಬರೀವೃದ್ಧಾರಾಮಾಯಪ್ರತ್ಯುಪಸ್ಥಿತಾ ।೧೦।ಅದ್ಯಪ್ರಾಪ್ತಾತಪಸ್ಸಿದ್ಧಿಸ್ತವಸಂದರ್ಶನಾನ್ಮಯಾ । ಅದ್ಯಮೇಸಫಲಂತಪ್ತಂಗುರವಶ್ಚಸುಪೂಜಿತಾಃ ।೧೧। ಅದ್ಯಮೇಸಫಲಂಜನ್ಮಸ್ವರ್ಗಶ್ಚೈವಭವಿಷ್ಯತಿ । ತ್ವಯಿದೇವವರೇರಾಮಪೂಜಿತೇಪುರುಷರ್ಷಭ ॥೧೨॥ ಚಕ್ಷುಷಾತವಸೌಮ್ಯೇನಪೂತಾಸ್ಮಿರಘುನಂದನ । ಗಮಿಷ್ಯಾಮ್ಯಕ್ಷಯಾಁಲ್ಲೋಕಾಂಸ್ತ್ವತ್ಪ್ರಸಾದಾದರಿಂದಮ ।೧೩। ಚಿತ್ರಕೂಟಂತ್ವಯಿಪ್ರಾಪ್ತೇವಿಮಾನೈರತುಲಪ್ರಭೈಃ । ಇತಸ್ತೇ

---

ಗಂ, ಸಮುತ್ಥಾಯ-ಎದ್ದು, ಕೃತಾಂಜಲಿಃ-ಅಂಜಲಿ ಬಂಧನವನ್ನೂ ಸಹಾಮಾಡಿ. ರಾಮಸ್ಯ-ಶ್ರೀರಾಮನ ಪಾದೌ-ಪಾದಗಳನ್ನು, ಧೀಮತಃ-ಬುದ್ಧಿವಂತನಾದ, ಲಕ್ಷ್ಮಣಸ್ಯ-ಲಕ್ಷ್ಮಣನ. ಪಾದೌಚ-ಪಾದಗಳನ್ನೂ ಸಹ. ಜಗ್ರಾಹ-ಹಿಡಿದುಕೊಂಡಳು. ಯಥಾವಿಧಿ-ವಿಧ್ಯುಕ್ತವಾಗಿ, ಪಾದ್ಯಂ-ಪಾದ್ಯವನ್ನು, ಆಚಮನಂಚ-ಆಚಮನವನ್ನೂ, ಸರ್ವಂ-ಸಮಸ್ತವನ್ನು ಪ್ರಾದಾತ್-ಕೊಟ್ಟನು ॥೬॥ ತತಃ-ಬಳಿಕ. ರಾಮಃ-ಶ್ರೀರಾಮನು, ಶ್ರಮಣೀಂ-ಸನ್ಯಾಸಿಯಾದ. ಸಂಶಿತವ್ರತಾಂ-ನಿಯಮನಿಷ್ಠಳಾದ, ತಾಂ-ಆ ಶಬರಿಯನ್ನು ಕುರಿತು, ಹೇಚಾರುಭಾಷಿಣಿ-ಎಲೈ ಮನೋಹರವಾಗಿ ಮಾತಾಡುವವಳೆ ತಪಸಃ-ತಪಸ್ಸಿಗೆ, ವಿಘ್ನಾಃ-ವಿಘ್ನಗಳು, ತೇ-ನಿನ್ನಿಂದ ನಿರ್ಜಿತಾಃಕಚ್ಚಿತ್-ಜಯಿಸಲ್ಪಟ್ಟವೆಯೋ ಏನು, ತೇ-ನಿನ್ನ. ತಪಃ-ತಪಸ್ಸು, ವರ್ಧತೇಕಚ್ಚಿತ್-ವೃದ್ಧಿಹೊಂದುತಲಿಹುದೆಯೋ ಏನು, ತೇ-ನಿನಗೆ, ಕ್ರೋಧಃ-ಕೋಪವು, ಆಹಾರಶ್ಚ-ಆಹಾರವೂಸಹಾ, ನಿಯತಃ-ನಿಗ್ರಹಿಸಲ್ಪಟ್ಟಿಹುದೆಯೋ ಏನು, ತೇ-ನಿನ್ನಿಂದ ನಿಯಮಾಃ-ನಿಯಮಗಳು, ಪ್ರಾಪ್ತಾಃಕಚ್ಚಿತ್-ಹೊಂದಲ್ಪಟ್ಟವೆಯೋ ಏನು, ತೇ-ನಿನ್ನ, ಮನಸಃ-ಮನಸ್ಸಿಗೆ, ಸುಖಂಕಚ್ಚಿತ್-ಸುಖವುಂಟಾಗಿಹುದೆಯೋ ಏನು. ತೇ-ನಿನ್ನ. ಗುರುಶುಶ್ರೂಷಾ-ಗುರುಸೇವೆಯು. ಸಫಲಂಕಚ್ಚಿತ್-ಸಫಲವಾಗಿಹುದೆಯೋ ಏನು ॥೯॥ ಸಿದ್ಧಾ-ಸಿದ್ಧಸ್ತ್ರೀಯಾದ. ಸಿದ್ಧಸಮ್ಮತಾ-ಸಿದ್ಧಪುರುಷರಿಗೆ ಸಮ್ಮತಳಾದ. ತಾಪಸೀ-ತಪಸ್ಸುಮಾಡುತ್ತಿರುವ, ವೃದ್ಧಾ-ಮುದುಕಿಯಾದ, ಶಬರೀ-ಶಬರಿಯು. ರಾಮೇಣ-ಶ್ರೀರಾಮನಿಂದ, ಪೃಷ್ಟಾ-ಕೇಳಲ್ಪಟ್ಟವಳಾಗಿ. ಪ್ರತ್ಯುಪಸ್ಥಿತಾ-ಎದುರಾಗಿ ನಿಂತವಳಾಗಿ, ರಾಮಾಯ-ಶ್ರೀರಾಮನಿಗೆ ಶಶಂಸ-ಹೇಳಿದಳು ॥೧೦॥ ತವ-ನಿನ್ನ, ದರ್ಶನಾತ್-ನಿನ್ನ ದರುಶನದ ದೆಸೆಯಿಂದ, ಮಯಾ-ನನ್ನಿಂದ. ಅದ್ಯ-ಈಗ. ತಪಸ್ಸಿದ್ಧಿಃ-ತಪಸ್ಸಿದ್ಧಿಯು ಪ್ರಾಪ್ತಾ-ಪಡೆಯಲ್ಪಟ್ಟಿತು, ಅದ್ಯ-ಈಗ. ಮೇ-ನನ್ನಿಂದ, ತಪ್ತಂ-ತಪಿಸಲ್ಪಟ್ಟದ್ದು, ಸಫಲಂ-ಸಫಲವಾಯಿತು, ಗುರವಶ್ಚ-ಗುರುಗಳೂಸಹ, ಸುಪೂಜಿತಾಃ-ಚೆನ್ನಾಗಿ ಪೂಜಿಸಲ್ಪಟ್ಟರು ॥೧೧ ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ. ದೇವವರೇ-ದೇವೋತ್ತಮನಾದ. ರಾಮೇ-ಶ್ರೀರಾಮನೆಂಬ, ತ್ವಯಿ-ನೀನು, ಪೂಜಿತೇ-ಪೂಜಿಸಲ್ಪಟ್ಟವನಾಗಲು, ಅದ್ಯ-ಈಗ. ಮೇ-ನನ್ನ, ಜನ್ಮ-ಉತ್ಪತ್ತಿಯು, ಸಫಲಂ-ಪ್ರಯೋಜನವುಳ್ಳದ್ದಾಯಿತು, ಸ್ವರ್ಗಶ್ಚೈವ-ಸ್ವರ್ಗವೂಕೂಡ, ಭವಿಷ್ಯತಿ-ವುಂಟಾಗುವದು ॥೧೨॥ ಹೇಅರಿಂದಮ-ಎಲೈ ಶತ್ರುಸಂಹಾರಕನೇ. ಹೇರಘುನಂದ-ಎಲೆ ರಘುಕುಲೋತ್ಪನ್ನನೇ, ಸೌಮ್ಯೇನ-ಸೌಮ್ಯವಾದ, ತವ-ನಿನ್ನ, ಚಕ್ಷುಷಾ-ನೇತ್ರದಿಂದ, ಪೂತಾ-ಪರಿಶುದ್ಧಳಾದವಳು, ಅಸ್ಮಿ-ಆದೆನು, ತ್ವತ್ಪ್ರಸಾದಾತ್-ನಿನ್ನನುಗ್ರಹದಿಂದ. ಅಕ್ಷಯಾನ್-ನಾಶರಹಿತನಾದ, ಲೋಕಾನ್-ಲೋಕಗಳನ್ನು ಕುರಿತು, ಗಮಿಷ್ಯಾಮಿ-ಪೋಗುವೆನು ॥೧೩॥ ಅಹಂ-ನಾನು, ಯಾನ್-ಯಾರನ್ನು, ಪರ್ಯಚಾರಿಷಂ-ಸೇವಿಸುತಲಿದ್ದೆನೋ ತೇ-ಅಂಥಾ ನನ್ನ

---

ರು ॥೫॥ ಆ ಸಮಯದಲ್ಲಿ ಆ ಸಿದ್ಧಸ್ತ್ರೀಯಾದ ಶಬರಿಯು ರಾಮಲಕ್ಷ್ಮಣರಂ ಕಂಡು ಎದ್ದವಳಾಗಿ, ಅಂಜಲಿಬಂಧವಂ ಗೈದು, ಆ ರಾಮಲಕ್ಷ್ಮಣರ ಪಾದಗಳಂ ಪಿಡಿದು, ಯಥಾವಿಧಿಯಾಗಿ ಪಾದ್ಯ ಆಚಮನವೊದಲಾದವುಗಳಂ ಕೊಟ್ಟಳು ॥೬॥ ಅನಂತರದಲ್ಲಿ ಶ್ರೀರಾಮನು ಆ ಶಬರಿಯಂ ಕುರಿತು, ಎಲೌ ಶಬರಿಯೇ! ನಿನ್ನ ತಪಸ್ಸು ನಿರ್ವಿಘ್ನವಾಗಿ ನಡೆಯುತಲಿಹುದೆಯೇ ಏನು? ಆಹಾರವು ನಿಗ್ರಹಿಸಲ್ಪಟ್ಟಿಹುದೆಯೇ ಏನು? ನಿನ್ನ ಮನವು ಸುಖವಾಗಿಹುದೆಯೇ ಏನು? ಗುರುಸೇವೆಯು ಸಫಲವಾಯಿತೆ? ಎಂದು ಕೇಳಿದವನಾಗಲೂ, ಸಿದ್ಧಪುರುಷರಿಗೆ ಸಮ್ಮತಳಾದ ಆ ಶಬರಿಯು ಈ ರೀತಿಯಲ್ಲಿ ಶ್ರೀರಾಮನಿಂದ ಕೇಳಲ್ಪಟ್ಟವಳಾಗಿ, ಶ್ರೀರಾಮನಂ ಕುರಿತು ಪೇಳುವಳಂತೆನೆ,— ॥೧೦॥ ಎಲೈ ಶ್ರೀರಾಮನೇ! ನಿನ್ನ ಸಂದರ್ಶನದಿಂದೀಗ ನನ್ನ ತಪಸ್ಸಿಗೆ ಸಿದ್ಧಿಯುಂಟಾಯಿತು, ಈಗ ನನ್ನಿಂದ ತಪಿಸಲ್ಪಟ್ಟ ತಪಸ್ಸು ಸಫಲವಾಯಿತು, ಗುರುಗಳೂ ಸಹಾ ಚೆನ್ನಾಗಿ ಪೂಜಿಸಲ್ಪಟ್ಟರು, ಎಲೈ ಪುರುಷಶ್ರೇಷ್ಠನೇ! ನೀನು ಪೂಜಿಸಲ್ಪಟ್ಟವನಾಗಲೂ, ನನ್ನ ಜನ್ಮವು ಸಫಲವಾಯಿತು, ನನಗೆ ಸ್ವರ್ಗವುಂಟಾಗುವದು, ನಿನ್ನ ಕಟಾಕ್ಷಪ್ರಸರಣದಿಂದ ನಾನು ಪರಿಶುದ್ಧಳಾದೆನು, ನಿನ್ನನುಗ್ರಹದಿಂದ ನನಗೆ ಉತ್ತಮವಾದ ಲೋಕಂಗಳು ಪ್ರಾಪ್ತವಾಗುವವು ॥೧೩॥ ನಾನು ಯಾವ ಮತಂಗಋಷ್ಯರಂ ಸೇವಿಸುತಲಿದ್ದೆನೋ, ಅಂಥಾ ನನ್ನ ಗುರುಗಳು, ನೀನು ಚಿತ್ರಕೂಟಪರ್ವತವನ್ನೈದಿದಾಗ, ಅಸದೃಶವಾದ ವಿಮಾನಗಳಿಂದ ಸ್ವರ್ಗವನ್ನೈದಿದರು, ಅವರುಗಳಿಂದ ಸಾ

ದಿವಮಾರೋಢುಮಾಯಾನಹಂಪರ್ಯಚಾರಿಷಂ ॥೧೫॥ ತೈಶ್ಚಾಹಮುಕ್ತಾಧರ್ಮಜ್ಞೈರ್ಮಹಾಭಾಗೈರ್ಮಹರ್ಷಿಭಿಃ । ಆಗಮಿ
ಷ್ಯತಿತೇರಾಮಃಸ್ಸುಪುಣ್ಯಮಿಮಮಾಶ್ರಮಂ ॥ ಸತೇಪ್ರತಿಗ್ರಹೀತವ್ಯಸ್ಸೌಮಿತ್ರಿಸಹಿತೋಽತಿಥಿಃ । ತಂಚದೃಷ್ಟ್ವಾವ
ರಾಁಲ್ಲೋಕಾನಕ್ಷಯಾಂಸ್ತ್ವಂಗಮಿಷ್ಯಸಿ ॥೧೬॥ ಮಯಾತುವಿವಿಧಂವನ್ಯಂಸಂಚಿತಂಪುರುಷರ್ಷಭ । ತವಾರ್ಥೇಪುರುಷ
ವ್ಯಾಘ್ರಪಂಪಾಯಾಸ್ತೀರಸಂಭವಂ ॥೧೭॥ ಏವಮುಕ್ತಸ್ಸಧರ್ಮಾತ್ಮಾಶಬರ್ಯಾಶಬರೀಮಿದಂ । ರಾಘವಃಪ್ರಾಹವಿ
ಜ್ಞಾನೇತಾಂನಿತ್ಯಮಬಹಿಷ್ಕೃತಾಂ ॥೧೮॥ ದನೋಸ್ಸಕಾಶಾತ್ತತ್ತ್ವೇನಪ್ರಭಾವಂತೇಮಹಾತ್ಮನಃ । ಶ್ರುತಂಪ್ರತ್ಯಕ್ಷಮಿ
ಚ್ಛಾಮಿಸಂದ್ರಷ್ಟುಂಯದಿಮನ್ಯಸೆ ॥೧೯॥ ಏತತ್ತುವಚನಂಶ್ರುತ್ವಾರಾಮವಕ್ತ್ರಾದ್ವಿನಿಸ್ಸೃತಂ । ಶಬರೀದರ್ಶ
ಯಾಮಾಸತಾವುಭೌತದ್ವನಂಮಹತ್ ॥೨೦॥ ಪಶ್ಯಮೇಘಘನಪ್ರಖ್ಯಂಮೃಗಪಕ್ಷಿಸಮಾಕುಲಂ । ಮತಂಗವನಮಿ
ತ್ಯೇವವಿಶ್ರುತಂರಘುನಂದನ ॥೨೧॥ ಇಹತೇಭಾವಿತಾತ್ಮಾನೋಗುರವೋಮೆಮಹಾವನೇ । ಜುಹವಾಂಚಕ್ರಿರೇತೀರ್ಥಂಮಂತ್ರವ

ಗುರುಗಳಾದ ಮತಂಗಶಿಷ್ಯರು ತ್ವಾಂ-ನೀನು. ಚಿತ್ರಕೂಟಂ-ಚಿತ್ರಕೂಟ ಪರ್ವತವನ್ನು, ಪ್ರಾಪ್ತೇಸತಿ-ಹೊಂದಿದವನಾಗಲು, ಅತುಲಪ್ರಭೈಃ-ಅಸದೃಶವಾದ ಕಾಂತಿಯುಳ್ಳ, ವಿಮಾನೈಃ-ವಿಮಾನಗಳಿಂದ, ಸ್ವರ್ಗಂ-ಸ್ವರ್ಗವನ್ನು, ಪ್ರಾಪ್ತಾಃ-ಹೊಂದಿದರು ॥೧೫॥ ಧರ್ಮಜ್ಞೈಃ-ಧರ್ಮವಂ ತಿಳಿದಿರುವ ಮಹಾಭಾಗೈಃ-ಬಹುಪುಣ್ಯವಂತರಾದ, ತೈರ್ಮಹರ್ಷಿಭಿಃ-ಆ ಮಹಾ ಮುನಿಗಳಿಂದ, ಅಹಂ-ನಾನು. ತೇ-ನಿನ್ನ, ಪುಣ್ಯಂ-ಪುಣ್ಯಕರವಾದ, ಇಮಮಾಶ್ರಮಂ-ಈ ಆಶ್ರಮವನ್ನು ಕುರಿತು. ರಾಮಃ-ಶ್ರೀರಾಮನು, ಆಗಮಿಷ್ಯತಿ-ಬರುವನು, ಸೌಮಿತ್ರಿಸಹಿತಃ-ಲಕ್ಷ್ಮಣಯುಕ್ತನಾದ, ಸಃ-ಆತನು. ತೇ-ನಿನ್ನಿಂದ, ಅತಿಥಿಃ-ಅತಿಥಿಯಾಗಿ, ಪ್ರತಿಗೃಹೀತವ್ಯಃ-ಪರಿಗ್ರಹಿಸತಕ್ಕವನು, ತ್ವಂ-ನೀನು, ತಂಚ-ಆ ಶ್ರೀರಾಮನನ್ನೂಸಹ, ದೃಷ್ಟ್ವಾ-ಕಂಡು, ಅಕ್ಷಯಾನ್-ನಾಶರಹಿತವಾದ, ವರಾನ್ಲೋಕಾನ್-ಉತ್ತಮ ಲೋಕಗಳನ್ನು, ಗಮಿಷ್ಯಸಿ-ಹೊಂದುವಿ, ಇತಿ-ಇಂತೆಂದು, ಉಕ್ತಾಸ್ಮಿ-ಹೇಳಲ್ಪಟ್ಟವಳಾದೆನು ॥೧೬॥ ಕಿಂತು-ಮತ್ತೇನೆಂದರೆ, ಹೇಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ, ಹೇಪುರುಷವ್ಯಾಘ್ರ-ಎಲೈ ಪುರುಷೋತ್ತಮನೇ. ತವಾರ್ಥೇ-ನಿನ್ನ ನಿಮಿತ್ತವಾಗಿ. ಪಂಪಾಯಾಃ-ಪಂಪಾನದಿಯ, ತೀರಸಂಭವಂ-ದಡದಲ್ಲಿ ಪುಟ್ಟಿದ, ವಿವಿಧಂ-ನಾನಾಬಗೆಯಾದ, ವನ್ಯಂ-ವನವಸ್ತುವು, ಸಂಚಿತಂ-ಸಂಪಾದಿಸಲ್ಪಟ್ಟಿಧೆ ॥೧೭॥ ಧರ್ಮಾತ್ಮಾ-ಧರ್ಮಿಷ್ಠನಾದ, ಸರಾಘವಃ-ಆ ಶ್ರೀರಾಮನು, ಶಬರ್ಯಾ-ಶಬರಿಯಿಂದ. ಏವಂ-ಈ ಪ್ರಕಾರವಾಗಿ, ಉಕ್ತಃ-ಹೇಳಲ್ಪಟ್ಟವನಾಗಿ, ನಿತ್ಯಂ-ನಿರಂತರವೂ, ಅಬಹಿಷ್ಕೃತಾಂ-ಬಹಿಷ್ಕಾರವನ್ನು ಹೊಂದದಿರುವ, ತಾಂಶಬರೀಂ-ಆ ಶಬರಿಯನ್ನು ಕುರಿತು. ಇದಂ-ಈ ಮಾತನ್ನು ಪ್ರಾಹ-ಹೇಳಿದನು ॥೧೮॥ ತೇ-ನಿನ್ನ ಗುರುವಾದ, ಮಹಾತ್ಮನಃ-ಮಹಾನುಭಾವನಾದ ಮತಂಗಮುನಿಯ, ಪ್ರಭಾವಂ-ಪ್ರಭಾವವು, ದನೋಸ್ಸಕಾಶಾತ್-ದನುವಿನ ದೆಸೆಯಿಂದ, ತತ್ತ್ವೇ-ಯಥಾರ್ಥದಿಂದ, ಶ್ರುತಂ-ಕೇಳಲ್ಪಟ್ಟಿತು, ಸಂದ್ರಷ್ಟುಂ-ತೋರಿಸುವದಕ್ಕೆ. ಮನಸೆಯದಿ-ತಿಳಿದವಳೇ ಆದರೆ. ಸಂದ್ರಷ್ಟುಂ-ನೋಡುವದಕ್ಕಾಗಿ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೧೯॥ ರಾಮವಕ್ತ್ರಾತ್-ಶ್ರೀರಾಮನ ಮುಖದಿಂದ, ವಿನಿಸ್ಸೃತಂ-ಹೊರಟಿದ, ಏತದ್ವಚನಂತು-ಈ ಮಾತನ್ನಾದರೆ, ಶ್ರುತ್ವಾ-ಕೇಳಿ, ಶಬರೀ-ಶಬರಿಯು, ತಾವುಭೌ-ಆ ರಾಮಲಕ್ಷ್ಮಣರೀರ್ವರನ್ನು ಕರೆದುಕೊಂಡುಪೋಗಿ, ಮಹತ್-ಮಹತ್ತರವಾದ, ತದ್ವನಂ-ಆ ವನವನ್ನು. ದರ್ಶಯಾಮಾಸ-ತೋರಿಸಿದ್ದಳು ॥೨೦॥ ಹೇರಘುನಂದನ-ಎಲೈ ರಘುನಂದನನೇ, ಮೇಘಘನಪ್ರಖ್ಯಂ-ಮೇಘಗಳಂತೆ ಅಧಿಕವಾದ ಕಾಂತಿಯುಳ್ಳ, ಮೃಗಪಕ್ಷಿಸಮಾಕುಲಂ-ಜಿಂಕೆಗಳಿಂದಲೂ ಪಕ್ಷಿಗಳಿಂದಲೂಸಹ ವ್ಯಾಪ್ತವಾದ, ಮತಂಗವನಮಿತ್ಯೇವ-ಮತಂಗವನವೇ ಎಂದು, ವಿಶ್ರುತಂ-ಪ್ರೇಳಲ್ಪಡುವ ವನವನ್ನು, ಪಶ್ಯ-ನೋಡು ॥೨೧॥ ಇಹಮಹಾವನೇ-ಈ ಮಹದರಣ್ಯದಲ್ಲಿ, ಭಾವಿತಾತ್ಮಾನಃ-ಚಿಂತಿಸಲ್ಪಟ್ಟ ಆತ್ಮನುಳ್ಳ, ತೇ-ಪ್ರಸಿದ್ಧರಾದ. ಮೆಗುರುಃ-ನನ್ನ ಗುರುಗಳು, ಮಂತ್ರಪೂಜಿತಂ-ಮಂತ್ರಗಳಿಂದ ಪೂಜಿಸಲ್ಪಟ್ಟ, ತೀರ್ಥಂ-ಗಂಗಾದಿ ಸರ್ವತೀರ್ಥಗಳನ್ನು, (ಅಥವಾ-

ನು ಅಜ್ಞಾಪಿಸಲ್ಪಟ್ಟೆನು, ಏನೆಂದರೆ, ಎಲೈ ಶಬರಿಯೇ! ಪುಣ್ಯಕರವಾದ ಈ ನಿನ್ನ ಆಶ್ರಮಕ್ಕೆ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನಿಂದೊಡಗೂಡಿ ಬರುವನು; ಆತನನ್ನು ನೀನು ಅತಿಥಿಯಾಗಿ ಸ್ವೀಕರಿಸಿ, ಆತನ ಸಂದರ್ಶನವಂ ಮಾಡಿಕೊಂಡು, ಬಳಿಕ ಉತ್ತಮಲೋಕಂಗಳಂ ಪಡೆಯುವವಳಾಗೆಂದು ಹೇಳಲ್ಪಟ್ಟೆನು, ಆದ್ದರಿಂದ ನಾನು ನಿನ್ನ ನಿಮಿತ್ತವಾಗಿ, ಪಂಪಾತೀರದಲ್ಲಿ ಪುಟ್ಟಿದ ನಾನಾವಿಧವಾದ ಫಲಗಳನ್ನು ಸಂಪಾದಿಸಿಧೆನೆಂದು ನುಡಿದಳು ॥೧೭॥ ಅನಂತರದಲ್ಲಿ ಧರ್ಮಾತ್ಮನಾದ ಶ್ರೀರಾಮನು ಶಬರಿಯಿಂದೀರೀತಿಯಲ್ಲಿ ಪೇಳಲ್ಪಟ್ಟವನಾಗಿ, ಸದಾಕಾಲದಲ್ಲಿಯೂ ಬಹಿಷ್ಕಾರವನ್ನೈದದಿರುವ ಆ ಶಬರಿಯಂ ಕುರಿತಿಂತೆಂದನು ॥೧೮॥ ಎಲೈ ಶಬರಿಯೇ! ನಿನ್ನ ಗುರುವಾದ ಮತಂಗಮುನಿಯ ಮಹಾತ್ಮ್ಯವನ್ನು ಕಬಂಧನಿಂದ ಕೇಳಿಧೇನೆ, ತೋರಿಸಬೇಕೆಂದು ನಿನ್ನ ಮನದಲ್ಲಿದ್ದರೆ ತೋರಿಸುವವಳಾಗು; ಎಂದು ಶ್ರೀರಾಮನ ಮುಖದಿಂದ ಹೊರಟದ್ದ ಈ ವಾಕ್ಯವಂ ಕೇಳಿ, ಆ ಶಬರಿಯು ಆ ರಾಮಲಕ್ಷ್ಮಣರನ್ನು ಕರೆದುಕೊಂಡು ಪೋಗಿ, ಮಹತ್ತರವಾದ ಆ ವನವಂ ತೋರಿಸುತ್ತಾ ಇಂತೆಂದಳು ॥೨೦॥ ಎಲೈ ಶ್ರೀರಾಮನೇ! ಮೇಘಗಳಂತೆ ಬಹು ರಮಣೀಯವಾದ ಕಾಂತಿಯುಳ್ಳದ್ದಾಗಿಯೂ, ಮೃಗಗಳಿಂದಲೂ ಪಕ್ಷಿಗಳಿಂದಲೂ, ವ್ಯಾಪ್ತವಾಗಿಯೂ ಇರುವ ಇದು ಮತಂಗವನವೆಂದು ಪ್ರಖ್ಯಾತವಾದದ್ದು ನೋಡುವವನಾಗು,

ನ್ಮಂತ್ರಪೂಜಿತಂ ।೨೨। ಅಯಂಪ್ರತ್ಯಕ್‌ಸ್ಥಲೀವೇದಿರ್ಯತ್ರತೇಮೆಸುಸತ್ಕೃತಾಃ । ಪುಷ್ಪೋಪಹಾರಂಕುರ್ವಂತಿಶ್ರಮಾ
ದುದ್ವೇಪಿಭಿಃಕರೈಃ ।೨೩। ತೇಷಾಂತಪಃಪ್ರಭಾವೇನಪಶ್ಯಾದ್ಯಾಪಿರಘೂದ್ವಹ । ದ್ಯೋತಯಂತಿದಿಶಸ್ಸರ್ವಾಃಶ್ರಿಯಾವೇ
ದ್ಯೋತುಲಪ್ರಭಾಃ ।೨೪। ಅಶಕ್ನುವದ್ಭಿಸ್ತೈರ್ಗಂತುಮುಪವಾಸಶ್ರಮಾಲಸೈಃ। ಚಿಂತಿತೇಭ್ಯಾಗತಾನ್ಪಶ್ಯಸಹಿತಾನ್ಸಪ್ತ
ಸಾಗರಾನ್।೨೫।ಕೃತಾಭಿಷೇಕೈಸ್ತೈರ್ನ್ಯಸ್ತಾವಲ್ಕಲಾಃಪಾದಪೇಷ್ವಿಹ।ಅದ್ಯಾಪಿನಾವಶುಷ್ಯಂತಿಪ್ರದೇಶೇರಘುನಂದನ ।
ದೇವಕಾರ್ಯಾಣಿಕುರ್ವದ್ಭಿರ್ಯಾನೀಮಾನಿಕೃತಾನಿವೈ।ಪುಷ್ಪೈಃಕುವಲಯೈಸ್ಸಾರ್ಧಂಮ್ಲಾನತ್ವಂನೋಪಯಾಂತಿವೈ ।೨೬।ಕೃ
ತ್ಸ್ನಂವನಮಿದಂದೃಷ್ಟಂಶ್ರೋತವ್ಯಂಚಶ್ರುತಂತ್ವಯಾ।ತದಿಚ್ಛಾಮ್ಯಭ್ಯನುಜ್ಞಾತಾತ್ಯಕ್ತುಮೇತತ್ಕಳೇಬರಂ ।೨೭।
ತೇಷಾಮಿಚ್ಛಾಮ್ಯಹಂಗಂತುಂಸಮೀಪಂಭಾವಿತಾತ್ಮನಾಂ । ಮುನೀನಾಮಾಶ್ರಮೋಯೇಷಾಮಹಂಚಪರಿಚಾರಿಣೀ ॥

ಯಜ್ಞವನಃ, ಜುಹವಾಂಚಕ್ರಿರೆ-ಮಾಡಿದರು.) ಮಂತ್ರವತ್-ಮಂತ್ರವತ್ತಾಗಿ, ಜುಹವಾಂಚಕ್ರಿರೆ-ಕರೆದರು॥೨೨॥ಯತ್ರ-ಯಾವ ವೇದಿಕೆಯಲ್ಲಿ, ಮೇ-ನ ನ್ನಿಂದ, ಸುಸತ್ಕೃತಾಃ-ಪೂಜಿಸಲ್ಪಟ್ಟ, ತೇ-ಆ ಗುರುಗಳು, ಶ್ರಮಾತ್-ಉಪವಾಸದ ಶ್ರಮದದೆಸೆಯಿಂದ, ಉದ್ವೇಪಿಭಿಃ-ಹುಟ್ಟಿದಂಥಾ ಕಂಪವುಳ್ಳ, ಕರೈಃ-ಹಸ್ತಗಳಿಂದ, ಪುಷ್ಪೋಪಹಾರಂ-ಪುಷ್ಪಗಳಿಂದ ಪೂಜೆಯನ್ನು, ಕುರ್ವಂತಿ-ಮಾಡುತ್ತಿದ್ದರೋ, ಸೆಯಂ-ಆ ಈ, ಪ್ರತ್ಯಕ್‌ಸ್ಥಲೀ-ಪ್ರಶ್ಚಿಮಾಭಿಮುಖವಾಗಿ ಕೊಂಚನಿಮ್ನವಾಗಿರುವ, ವೇದಿಃ-ವೇದಿಕೆಯು, ದೃಶ್ಯತಾಂ-ಕಾಣಲ್ಪಡಲಿ ॥೨೩॥ ಹೇರಘೂದ್ವಹ-ಎಲೈ ರಘುಕುಲೋತ್ತಮನೇ. ತೇಷಾಂ-ಆ ಗುರುಗಳ, ತಪಃಪ್ರಭಾವೇನ-ತಪೋಮಹಾತ್ಮ್ಯದಿಂದ, ಅದ್ಯಾಪಿ-ಈಗಲೂಕೂಡ, ಅತುಲಪ್ರಭಾಃ-ಸಮಾನವಿಲ್ಲದಿರುವ ಕಾಂತಿಯುಳ್ಳ, ವೇದ್ಯಃ-ವೇದಿಕೆಗಳು. ಶ್ರಿಯಾ-ಕಾಂತಿಯಿಂದ, ಸರ್ವಾಃ-ಸಮಸ್ತವಾದ, ದಿಶಃ-ದಿಕ್ಕುಗಳನ್ನು, ದ್ಯೋತಯಂತಿ-ಬೆಳಗಿಸುತ್ತಲಿವೆ, ಪಶ್ಯ-ನೋಡು ॥೨೪॥ ಉಪವಾಸಶ್ರಮಾಲಸೈಃ-ಉಪವಾಸವ್ರತದಿಂ ಪುಟ್ಟಿದ ಆಯಾಸದಿಂದ ಮಂದಗಮನವುಳ್ಳ, ಗಂತುಂ-ಹೋಗುವದಕ್ಕೆ, ಅಶಕ್ನುವದ್ಭಿಃ-ಅಸಮರ್ಥರಾದ, ಮೇ-ನನ್ನ ತೈಃ-ಆ ಗುರುಗಳಿಂದ. ಚಿಂತಿತೇ-ಧ್ಯಾನಮಾಡಲ್ಪಡುತ್ತಿರಲೀಕಾಗಿ, ಅಭ್ಯಾಗತಾನ್-ಬಂದಂಥಾ, ಸಹಿತಾನ್-ಸೇರಿರುವ, ಸಪ್ತಸಾಗರಾನ್-ಏಳು ಸಮುದ್ರಗಳನ್ನು, ಪಶ್ಯ-ನೋಡು ॥೨೫॥ ಹೇರಘುನಂದನ-ಎಲೈ ರಘುಕುಲಾನಂದಕರನೇ, ಕೃತಾಭಿಷೇಕೈಃ-ಮಾಡಲ್ಪಟ್ಟ ಸ್ನಾನವುಳ್ಳ, ತೈಃ-ಆ ಗುರುಗಳಿಂದ, ಇಹಪಾದಪೇಷು-ಈ ಗಿಡಗಳಲ್ಲಿ. ನ್ಯಸ್ತಾಃ-ಇರಿಸಲ್ಪಟ್ಟ, ವಲ್ಕಲಾಃ-ನಾರುಮಡಿಗಳು. ಪ್ರದೇಶೇ-ಸ್ಥಳದಲ್ಲಿ, ಅದ್ಯಾಪಿ-ಈಗ್ಯೂ, ನಾವಶುಷ್ಯಂತಿ-ಬಾಡಿರುವವಾಗಿವೆ ॥೨೬॥ಹೇರಘುನಂದನ-ಎಲೈ ರಘುಕುಲಾನಂದಕರನೇ.ದೇವಕಾರ್ಯಾಣಿ-ದೇವತಾಪೂಜಾದಿಕಾರ್ಯಗಳನ್ನು ಕುರ್ವದ್ಭಿಃ-ಮಾಡುತ್ತಲಿರುವ ಆ ಋಷಿಗಳಿಂದ, ಯಾನಿ-ಯಾವ, ಇಮಾನಿ-ಈ ಹುವ್ವುಗಳು, ಕೃತಾನಿವೈ-ನಿರ್ಮಿಸಲ್ಪಟ್ಟವೋ, ಕುವಲಯೈಃಪುಷ್ಪೈಸ್ಸಾರ್ಧಂ-ನೈದಿಲೆಹುವ್ವುಗಳೊಡಗೂಡ, ಮ್ಲಾನತ್ವಂ-ಬಾಡಿಹೋಗೋಣವು. ನೋಪಯಾಂತಿವೈ-ಹೊಂದೋದಿಲ್ಲವಷ್ಟೆ ॥೨೬॥ ಕೃತ್ಸ್ನಂ-ಸಮಸ್ತವಾದ.ಇದಂವನಂ-ಈ ವನವು, ದೃಷ್ಟಂ-ನೋಡಿಸಲ್ಪಟ್ಟಿತು, ಶ್ರೋತವ್ಯಂಚ-ಕೇಳತಕ್ಕಮಾತೂ, ತ್ವಯಾ-ನಿನ್ನಿಂದ, ಶ್ರುತಂ-ಕೇಳಲ್ಪಟ್ಟಿತು, ತತ್-ಆದಕಾರಣದದೆಸೆಯಿಂದ, ಅಭ್ಯನುಜ್ಞಾತಃ-ನಿನ್ನಿಂದ ಸಮ್ಮತಿಸಲ್ಪಟ್ಟವಳಾಗಿ, ಏತತ್ಕಳೇಬರಂ-ಈ ಶರೀರವನ್ನು, ತ್ಯಕ್ತುಂ-ಬಿಡುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೨೭॥ ಯೇಷಾಂಮುನೀನಾಂ-ಯಾವ ಋಷಿಗಳ, ಆಶ್ರಮಃ-ಆಶ್ರಮವೋ, ಯೇಷಾಂ-ಯಾರಿಗೆ. ಅಹಂಚ-ನಾನೂ, ಪರಿಚಾರಿಣೀ-ಸೇವಕಳೋ, ಭಾವಿತಾತ್ಮನಾಂ-ಬ್ರಹ್ಮನಿಷ್ಠರಾದ, ತೇಷಾಂ-ಆ ಋಷಿಗಳ. ಸಮೀಪಂ-ಸಮೀಪವಂಕುರಿತು, ಅಹಂ-ನಾನು, ಗಂತುಂ-ಹೋಗುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೨೮॥ ರಾಘವಃ-ಶ್ರೀರಾಮನು. ಸಹಲಕ್ಷ್ಮಣಃ-ಲಕ್ಷ್ಮಣನಿಂದೊಡಗೂಡಿದವನಾಗಿ, ಧರ್ಮಿಷ್ಠಂ-ಧರ್ಮಪ್ರಧಾನವಾದ, ವಚಃ-ಮಾತಿನನ್ನು, ಶ್ರುತ್ವಾ-ಕೇಳಿ, ತತ್ವತಃ-ಯಥಾರ್ಥವಾಗಿ, ಆಶ್ಚರ್ಯಮಿತಿ-ಆಶ್ಚರ್ಯಕರವಾದದ್ದೂ ಎಂದು, ಮತ್ವಾ-ತಿಳಿದು, ಅತುಲಂ-ಸಮಾನವಿಲ್ಲದಿರು

ಈ ಮಹದರಣ್ಯದಲ್ಲಿ ಆ ನನ್ನ ಗುರುಗಳು ಗಂಗಾದಿಸರ್ವತೀರ್ಥಗಳನ್ನು ಮಂತ್ರವತ್ತಾಗಿಕರೆದರು।೨೨। ಮತ್ತೂ ಆ ಗುರುಗಳ ಯಾವ ವೇದಿಕೆಯಲ್ಲಿ ಉಪವಾಸಾದಿಶ್ರಮೆಗಳಿಂದುಂಟಾದ ಕಂಪವುಳ್ಳ ನನ್ನ ಹಸ್ತಂಗಳಿಂದ, ಪೂಜೆಯಂ ಮಾಡುತಲಿದ್ದನೋ, ಅಂಥಾ ಈ ವೇದಿಕೆಯಂ ನೋಡುವವನಾಗು, ಆ ಮಹಾತ್ಮರತಪಃ ಪ್ರಭಾವದಿಂದ ಈಗಲೂ ಆ ವೇದಿಕೆಗಳು ದಶದಿಕ್ಕುಗಳಂ ಬೆಳಗುವಂತೆ ಮಾಡುತಲಿವೆ, ನೋಡುವವನಾಗು ।೨೪। ಮತ್ತೂ ಆ ಗುರುಗಳು ಉಪವಾಸಾದಿಗಳಿಂದ ತೆರಳಲಶಕ್ತರಾಗಿರುವರಾಗಿ ಧ್ಯಾನಿಸಲೂ, ಸಪ್ತಸಮುದ್ರಗಳು ಇಲ್ಲಿಗೆ ಬಂದು ಸೇರಿದವು, ನೋಡುವವನಾಗು ।೨೫। ಮತ್ತೂ ಈ ಪ್ರದೇಶದಲ್ಲಿ ಸ್ನಾನಂಗೈದು ವೃಕ್ಷಗಳಲ್ಲಿರಿಸಿದ ವಸ್ತ್ರಂಗಳು ಈಗಲೂ ಒಣಗಲೇ ಇಲ್ಲ, ಇದಲ್ಲದೆ ದೇವತಾ ಪೂಜಾರ್ಥವಾಗಿ ಯಾವ ಪುಷ್ಪಂಗಳಂ ನಿರ್ಮಿಸಿದರೋ, ಅವುಗಳು ಈಗಲೂ ಬಾಡಿಹೋಗಲಿಲ್ಲ ।೨೬। ಎಲೈ ಶ್ರೀರಾಮನೇ! ಈ ವನವೆಲ್ಲ ತೋರಿಸಲ್ಪಟ್ಟಿತು, ಕೇಳತಕ್ಕ ಮಾತೂ ಸಹಾ ನಿನ್ನಿಂದ ಕೇಳಲ್ಪಟ್ಟಿತು, ಆದ್ದರಿಂದ ಅಪ್ಪಣೆಯಾದರೆದೇಹವಂ ಬಿಡಲಿಚ್ಛಿಸುತ್ತೇನೆ ।೨೭। ಈ ಆಶ್ರಮವು ಯಾವ ಮುನಿಗಳದೋ, ನಾನು ಯಾವ ಮುನಿಗಳಂ ಸೇವಿಸುತಲಿದ್ದೆನೋ, ಆ ಮುನಿಗಳ ಸನ್ನಿಧಾನಂ ಕುರಿತು ಸಾರಲೂ ಬುದ್ಧಿಯುಂಟಾಗಿದೆ, ಎಂದು ನುಡಿಯಲೂ, ಆ ರಾಮಲಕ್ಷ್ಮಣರು ಧರ್ಮಯುಕ್ತವಾದ ಆ ವಾಕ್ಯವಂ

ಧರ್ಮಿಷ್ಠಂತುವಚಶ್ಶ್ರುತ್ವಾರಾಘವಸ್ಸಹಲಕ್ಷ್ಮಣಃ। ಪ್ರಹರ್ಷಮತುಲಂಲೆಭೆಆಶ್ಚರ್ಯಮಿತಿಚಾಬ್ರವೀತ್ ।೩೦। ತಾಮುವಾಚತತೋರಾಮಶ್ಶ್ರಮಣೀಂಸಂಶಿತವ್ರತಾಂ । ಅರ್ಚಿತೋಹಂತ್ವಯಾಭಕ್ತ್ಯಾಗಚ್ಛಕಾಮಂಯಥಾಸುಖಂ ॥ ।೩೧। ಇತ್ಯುಕ್ತಾಜಟಿಲಾವೃದ್ಧಾಚೀರಕೃಷ್ಣಾಜಿನಾಂಬರಾ । ತಸ್ಮಿನ್ಮುಹೂರ್ತೆಶಬರೀದೆಹಂಜೀರ್ಣಂಜಿಹಾಸತೀ । ಅನುಜ್ಞಾತಾತುರಾಮೇಣಹುತ್ವಾತ್ಮಾನಂಹುತಾಶನೆ। ಜ್ವಲತ್ಪಾವಕಸಂಕಾಶಾಸ್ವರ್ಗಮೇವಜಗಾಮಸಾ ।೩೩। ದಿವ್ಯಾಭರಣಸಂಯುಕ್ತಾದಿವ್ಯಮಾಲ್ಯಾನುಲೇಪನಾ । ದಿವ್ಯಾಂಬರಧರಾತತ್ರಬಭೂವಪ್ರಿಯದರ್ಶನಾ॥ ವಿರಾಜಯಂತೀತಂದೇಶಂ ವಿದ್ಯುತ್ಸೌದಾಮಿನೀಯಥಾ ।೩೪। ಯತ್ರತೆಸುಕೃತಾತ್ಮಾನೊವಿಹರಂತಿಮಹರ್ಷಯಃ। ತತ್ಪುಣ್ಯಂಶಬರೀಸ್ಥಾನಂ ಜಗಾಮಾತ್ಮಸಮಾಧಿನಾ ।೩೫।

—**ಇತಿಶ್ರೀಮದಾರಣ್ಯಕಾಂಡೆ-ಚತುಸ್ಸಪ್ತತಿತಮಸ್ಸರ್ಗಃ**—

ದಿವಂತುತಸ್ಯಾಂಯಾತಾಯಾಂಶಬರ್ಯಾಂಸ್ವೇನತೇಜಸಾ । ಲಕ್ಷ್ಮಣೇನಸಹಭ್ರಾತ್ರಾಚಿಂತಯಾಮಾಸರಾಘವಃ ।೧॥

---

ವ, ಪ್ರಹರ್ಷಂ-ಸಂತೋಷವನ್ನು. ಲೆಭೆ-ಹೊಂದಿದನು ||೩೦|| ತತಃ-ಬಳಿಕ, ರಾಮಃ-ಶ್ರೀರಾಮನು, ಸಂಶಿತವ್ರತಾಂ-ತೀಕ್ಷ್ಣವಾದ ನಿಯಮವುಳ್ಳ, ಶ್ರಮಣೀಂ-ಸನ್ಯಾಸಿಯಾದ, ತಾಂ-ಆ ಶಬರಿಯಂಕುರಿತು, ಅಹಂ-ನಾನು, ತ್ವಯಾ-ನಿನ್ನಿಂದ, ಭಕ್ತ್ಯಾ-ಭಕ್ತಿಯಿಂದ. ಅರ್ಚಿತಃ-ಪೂಜಿಸಲ್ಪಟ್ಟೆನು. ಯಥಾಸುಖಂ-ಸುಖವಾಗಿ. ಕಾಮಂ-ಇಷ್ಟಾನುಸಾರವಾಗಿ, ಗಚ್ಛ-ಹೋಗು, ಇತಿ-ಇಂತೆಂದು, ಉವಾಚ-ಹೇಳಿದನು ||೩೧|| ಇತಿ-ಈಪರಿಯಾಗಿ. ಉಕ್ತಾ-ಹೇಳಲ್ಪಟ್ಟ, ಜಟಿಲಾ-ಜಟಾಧಾರಿಯಾದ, ವೃದ್ಧಾ-ವೃದ್ಧಳಾದ, ಚೀರಕೃಷ್ಣಾಜಿನಾಂಬರಾ-ನಾರುಮಡಿಸೆಯೂ ಕೃಷ್ಣಾಜಿನವೇ ವಸ್ತ್ರವಾಗುಳ್ಳ. ಸಾಶಬರೀ-ಆ ಶಬರಸ್ತ್ರೀಯು, ತಸ್ಮಿನ್ಮುಹೂರ್ತೆ-ಆ ಕ್ಷಣದಲ್ಲಿ, ಜೀರ್ಣಂ-ಶಿಥಿಲವಾದ, ದೆಹಂ-ಶರೀರವನ್ನು, ಜಿಹಾಸತೀ-ಬಿಡಲಿಚ್ಛೆಯುಳ್ಳವಳಾಗಿ, ರಾಮೇಣ-ಶ್ರೀರಾಮನಿಂದ. ಅನುಜ್ಞಾತಾ-ಸಮ್ಮತಿಸಲ್ಪಟ್ಟವಳಾಗಿ. ಆತ್ಮಾನಂ-ತನ್ನ ಶರೀರವನ್ನು, ಹುತಾಶನೆ-ಅಗ್ನಿಯಲ್ಲಿ, ಹುತ್ವಾ-ಹೋಮಮಾಡಿ, ಜ್ವಲತ್ಪಾವಕಸಂಕಾಶಾ-ಬೆಳಗುತ್ತಿರುವ ಅಗ್ನಿಗೆ ಸಮಾನಳಾಗಿ, ಸ್ವರ್ಗಮೇವ-ಅಕ್ಷಯವಾದ ಸ್ವರ್ಗವಂಕುರಿತೇ, ಯದ್ವಾಸ್ವರ್ಗಮೇವ-ತನ್ನ ಗುರುಗಳ ಸ್ಥಾನವನ್ನೇ. ಜಗಾಮ-ಹೊಂದಿದಳು ||೩೩|| ದಿವ್ಯಾಭರಣಸಂಯುಕ್ತಾ-ದೇವತಾಸಂಬಂಧವಾದ ಆಭರಣಗಳಿಂದ ಕೂಡಿದವಳಾಗಿ, ದಿವ್ಯಮಾಲ್ಯಾನುಲೇಪನಾ-ಮನೋಹರವಾದ ಗಂಧಪುಷ್ಪಗಳುಳ್ಳವಳಾಗಿ, ದಿವ್ಯಾಂಬರಧರಾ-ದೇವತಾಸಂಬಂಧಿಯಾದ ವಸ್ತ್ರಗಳನ್ನು ಧರಿಸಿದವಳಾಗಿ, ತಂದೇಶಂ-ಆ ಪ್ರದೇಶವನ್ನು. ವಿದ್ಯುತ್-ವಿಶೇಷವಾಗಿ ಹೊಳೆಯುತ್ತಿರುವ, ಸೌದಾಮಿನೀಯಥಾ-ಮಿಂಚಿನಂತೆ ವಿರಾಜಯಂತೀ-ಪ್ರಕಾಶಗೊಳಿಸುತ್ತಿರುವವಳಾಗಿ. ಪ್ರಿಯದರ್ಶನಾ-ಮನೋಹರವಾದ ನೋಟವುಳ್ಳವಳು, ಬಭೂವ-ಆದಳು ||೩೪|| || ಯತ್ರ-ಯಾವ ಲೋಕದಲ್ಲಿ, "ಸುಕೃತಾತ್ಮನಃ-ಪುಣ್ಯಕರವಾದ ಶರೀರಗಳುಳ್ಳ. ತೆಮಹರ್ಷಯಃ-ಆ ಋಷಿಗಳು, ವಿಹರಂತಿ-ವಿಹಾರಮಾಡುತಿರುವರೋ, ತತ್-ಅಂಥಾ, ಪುಣ್ಯಂ-ಪುಣ್ಯಕರವಾದ, ಸ್ಥಾನಂ-ಗುರುಗಳ ಆ ವಾಸಸ್ಥಳವನ್ನು, (ಯದ್ವಾಸ್ಥಾನಂ-ಬ್ರಹ್ಮಲೋಕವನ್ನು. ಶಬರೀ-ಶಬರಿಯು, ಆತ್ಮಸಮಾಧಿನಾ-ಆತ್ಮಯೋಗಪ್ರಭಾವದಿಂದ, ಜಗಾಮ-ಹೊಂದಿದಳು ||೩೫|| ||

—**ಇತಿಶ್ರೀಮದಾರಣ್ಯಕಾಂಡೆ-ಚತುಸ್ಸಪ್ತತಿತಮಸ್ಸರ್ಗಃ**—

ತಸ್ಯಾಂಶಬರ್ಯಾಂ-ಆ ಶಬರಿಯು, ಸ್ವೇನತೆಜಸಾ-ತನ್ನ ತೇಜಸ್ಸಿನಿಂದ, ದಿವಂ-ಪ್ರಕಾಶಮಾನವಾದ ಬ್ರಹ್ಮಲೋಕವನ್ನು, ಯಾತಾಯಾಂಸತ್ಯಾಂ-ಹೊಂದಿದವಳಾಗುತ್ತಿರಲಾಗಿ, ರಾಘವಃ-ಶ್ರೀರಾಮನು, ಭ್ರಾತ್ರಾ-ತಮ್ಮನಾದ ಲಕ್ಷ್ಮಣನೊಡನೆ, ಚಿಂತಯಾಮಾಸ-ಆಲೋಚಿಸಿದನು ||೧||

---

ಕೇಳಿ, ಇದು ಅತ್ಯಾಶ್ಚರ್ಯವೆಂದರಿತು. ಮಹಾ ಸಂತೋಷವನ್ನೈದಿದವರಾದರು ।೩೦। ಅನಂತರದಲ್ಲಿ ಶ್ರೀರಾಮನು ಕ್ರೂರವಾದ ನಿಯಮವುಳ್ಳ ಆ ಶಬರಿಯಂ ಕುರಿತು, ಎಲೈ ಶಬರಿಯೇ! ನಾನು ನಿನ್ನಿಂದ ಪೂಜಿಸಲ್ಪಟ್ಟವನಾದೆನು, ನಿನ್ನ ಇಷ್ಟವಿದ್ದಂತೆ ತೆರಳುವವಳಾಗೆಂದು ನುಡಿದನು ।೩೧। ಈ ರೀತಿಯಲ್ಲಿ ಹೇಳಲ್ಪಟ್ಟವಳಾದ ಮತ್ತೂ ನಾರುಶೀರೆಯನ್ನುಟ್ಟಿರುವ ಆ ಶಬರಿಯು ತಕ್ಷಣದಲ್ಲಿಯೇ ಆ ಜೀರ್ಣವಾದ ಕಳೇಬರವಂ ಬಿಡಲಿಚ್ಛೆಯುಳ್ಳವಳಾಗಿ, ಶ್ರೀರಾಮನಿಂದ ಅಪ್ಪಣೆಯಂ ಪಡದು, ತನ್ನ ಶರೀರವನ್ನು ಅಗ್ನಿಯಲ್ಲಿ ಹೋಮಂಗೈದು, ಆ ಅಗ್ನಿಯಂತೆಯೇ ಬೆಳಗುವವಳಾಗಿ, ಸ್ವರ್ಗವನ್ನೈದಿದಳು ।೩೩। ದೇವತಾ ಸಂಬಂಧವಾದ ವಡಿವೆಗಳಿಂದ ಯುಕ್ತಳಾಗಿಯೂ ದಿವ್ಯವಾದ ಗಂಧವನ್ನು ಹಚ್ಚಿಕೊಂಡವಳಾಗಿಯೂ, ದಿವ್ಯದುಕೂಲವನ್ನುಟ್ಟವಳಾಗಿಯೂ, ಮಿಂಚಿನಂತೆ ಆ ಪ್ರದೇಶವನ್ನೆಲ್ಲ ಬೆಳಗುವಂತೆ ಮಾಡುವವಳಾಗಿಯೂ ಇಂಪಾದ ನೋಟವುಳ್ಳವಳಾಗಿಯೂ, ಇರುವವಳಾದಳು ।೩೪। ಅನಂತರದಲ್ಲಿ ಆ ಶಬರಿಯು, ಪುಣ್ಯವಂತರಾದ ಆ ಮಹರ್ಷಿಗಳು ಯಾವ ಪ್ರದೇಶದಲ್ಲಿ ವಿಹಾರಂಗೈಯುತ್ತಲಿದ್ದರೋ, ಅಂಥಾ ಪುಣ್ಯಲೋಕವನ್ನು, ತನ್ನ ಸಮಾಧಿಯೋಗ ಪ್ರಭಾವದಿಂದ ಹೊಂದಿದವಳಾದಳು ।೩೫।

—* ಆರಣ್ಯಕಾಂಡದಲ್ಲಿನ ೭೪ನೇ ಸರ್ಗಂ ಮುಗಿದುದು *—

ಈ ರೀತಿಯಾಗಿ ಆ ಶಬರಿಯು ತನ್ನ ತಪಃಪ್ರಭಾವದಿಂದ ಸ್ವರ್ಗವನ್ನೈದಿದವಳಾಗಲೂ, ರಘುನಂದನನಾದ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನಿಂದೊಡಗೂಡಿ, ಆ ಮುನಿಗಳ ಪ್ರಭಾವವಂ ಕುರಿತು ಆಲೋಚನೆ

ಸಚಿಂತಯಿತ್ವಾಧರ್ಮಾತ್ಮಾಪ್ರಭಾವಂತಂಮಹಾತ್ಮನಾಂ । ಹಿತಕಾರಿಣಮೇಕಾಗ್ರಂಲಕ್ಷ್ಮಣಂರಾಘವೋಬ್ರವೀತ್ ॥
ದೃಷ್ಟೋಯಮಾಶ್ರಮಸ್ಸೌಮ್ಯಬಹ್ವಾಶ್ಚರ್ಯಂಕೃತಾತ್ಮನಾಂ । ವಿಶ್ವಸ್ತಮೃಗಶಾರ್ದೂಲೋನಾನಾವಿಹಗಸೇವಿತಃ ॥
ಸಪ್ತಾನಾಂಚಸಮುದ್ರಾಣಾಮೇಷುತೀರ್ಥೇಷುಲಕ್ಷ್ಮಣ ।ಉಪಸ್ಪೃಷ್ಟಂಚವಿಧಿವತ್ಪಿತರಶ್ಚಾಪಿತರ್ಪಿತಾಃ ॥೪॥ ಪ್ರಣಷ್ಟ
ಮಶುಭಂತತ್ತತ್ಕಲ್ಯಾಣಂಸಮುಪಸ್ಥಿತಂ । ತೇನತತ್ವೇನಹೃಷ್ಟಂಮೇಮನೋಲಕ್ಷ್ಮಣಸಂಪ್ರತಿ ॥೫॥ ಹೃದಯೇಹಿನ
ರವ್ಯಾಘ್ರಶುಭಮಾವಿರ್ಭವಿಷ್ಯತಿ ॥೬॥ ತದಾಗಚ್ಛಗಮಿಷ್ಯಾವಃಪಂಪಾಂತಾಂಪ್ರಿಯದರ್ಶನಾಂ । ಋಶ್ಯಮೂ
ಕೋಗಿರಿರ್ಯತ್ರನಾತಿದೂರೇಪ್ರಕಾಶತೇ । ಯಸ್ಮಿನ್ವಸತಿಧರ್ಮಾತ್ಮಾಸುಗ್ರೀವೋಂಶುಮತಸ್ಸುತಃ । ನಿತ್ಯಂವಾಲಿಭಯಾ
ತ್ತ್ರಸ್ತಶ್ಚತುರ್ಭಿಸ್ಸಹವಾನರೈಃ ॥೭॥ ಅಭಿತ್ವರೇಚತಂದ್ರಷ್ಟುಂಸುಗ್ರೀವಂವಾನರರ್ಷಭಂ । ತದಧೀನಂಹಿಮೇಸೌಮ್ಯ
ಸೀತಾಯಾಃಪರಿಮಾರ್ಗಣಂ ॥೮॥ ಏವಂಬ್ರುವಾಣಂತಂಧೀರಂರಾಮಂಸೌಮಿತ್ರಿರಬ್ರವೀತ್ । ಗಚ್ಛಾವಸ್ತ್ವರಿತಂತತ್ರ

---

ಧರ್ಮಾತ್ಮಾ-ಧರ್ಮದಲ್ಲೇ ಮನವುಳ್ಳ, ಸಃರಾಘವಃ-ಆ ಶ್ರೀರಾಮನು, ಮಹಾತ್ಮನಾಂ-ಮಹಾತ್ಮರಾದ ಆ ಋಷಿಗಳ, ತಂಪ್ರಭಾವಂ-ಆ ಮಾಹಾತ್ಮ್ಯವನ್ನು, ಚಿಂತಯಿತ್ವಾ-ಆಲೋಚಿಸಿ, ಹಿತಕಾರಿಣಂ-ಹಿತಕರನಾದ, ಏಕಾಗ್ರಂ-ತದೇಕಾಯತ್ತಚಿತ್ತನಾದ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಅಬ್ರವೀತ್-ನುಡಿದನು ॥೧॥ ಹೇಸೌಮ್ಯ-ಎಲೈ ಸೌಮ್ಯನೇ, ಬಹ್ವಾಶ್ಚರ್ಯಃ-ಬಹಳ ಆಶ್ಚರ್ಯಕರವಾದ, ಕೃತಾತ್ಮನಾಂ-ಜ್ಞಾನಿಗಳಾದ ಋಷಿಗಳ, ಅಯಮಾಶ್ರಮಃ-ಈ ಆಶ್ರಮವು, ವಿಶ್ವಸ್ತಮೃಗಶಾರ್ದೂಲಃ-ವಿಶ್ವಾಸಯುಕ್ತವಾದ ಚಿಗರಿಗಳೂ ವ್ಯಾಘ್ರಗಳೂ ಉಳ್ಳ, ನಾನಾವಿಹಗಸೇವಿತಃ-ಅನೇಕಬಗೆಗಳಾದ ಪಕ್ಷಿಗಳಿಂದ ಸೇವಿಸಲ್ಪಟ್ಟ, ಅಯಮಾಶ್ರಮಃ-ಈ ಆಶ್ರಮವು, ದೃಷ್ಟಃ-ನೋಡಲ್ಪಟ್ಟಿತು ॥೩॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ಸಪ್ತಾನಾಂ ಸಮುದ್ರಾಣಾಂಚ-ಏಳಾದ ಸಮುದ್ರಗಳ, ಏಷುತೀರ್ಥೇಷು-ಈ ಪ್ರಸಿದ್ಧವಾದ ಉದಕಗಳಲ್ಲಿ. ವಿಧಿವತ್-ಯಥಾಶಾಸ್ತ್ರವಾಗಿ, ಉಪಸ್ಪೃಷ್ಟಂ-ಸ್ನಾನ ಮಾಡಲ್ಪಟ್ಟಿತು, ಪಿತರಶ್ಚಾಪಿ-ಪಿತೃಗಳೂ, ತರ್ಪಿತಾಃ-ತೃಪ್ತಿಗೊಳಿಸಲ್ಪಟ್ಟರು ॥೪॥ ತತ್ಅಶುಭಂ-ಆ ಅಶುಭವು, ಪ್ರಣಷ್ಟಂ-ನಾಶಗೊಂಡಿತು, ತತ್ಕಲ್ಯಾಣಂ-ಆ ಮಂಗಳವು, ಸಮುಪಸ್ಥಿತಂ-ಪ್ರಾಪ್ತವಾಯಿತು, ತೇನ-ಅದರಿಂದ. ತತ್ವೇನ-ಯಥಾರ್ಥದಿಂದ, ಹೇಲಕ್ಷ್ಮಣ-ಎಲೋ ಲಕ್ಷ್ಮಣನೇ, ಸಂಪ್ರತಿ-ಈಗ. ಮೇಮನಃ-ನನ್ನ ಮನಸ್ಸು, ಹೃಷ್ಟಂ-ಸಂತೋಷಗೊಂಡಿತು ॥೫॥ ಹೇನರವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಹೃದಯೇಹಿ-ಮನದಲ್ಲಿಯೂ. ಶುಭಂ-ಮಿತ್ರಪ್ರಾಪ್ತಿಕರವಾದ ಶುಭವು, ಆವಿರ್ಭವಿಷ್ಯತಿ-ಹುಟ್ಟುತ್ತಲಿದೆಯಷ್ಟೆ ॥೬॥ ತತ್-ಆಕಾರಣದದೆಸೆಯಿಂದ, ಆಗಚ್ಛ-ಬಾರಯ್ಯಾ, ಪ್ರಿಯದರ್ಶನಾಂ-ಇಷ್ಟವಾದ ನೋಟವುಳ್ಳ, ತಾಂಪಂಪಾಂ-ಆ ಪಂಪಾನದಿಯನ್ನು ಕುರಿತು, ಗಮಿಷ್ಯಾವಃ-ಹೋಗೋಣ, ಯತ್ರ-ಯಾವ ಪಂಪಾನದೀತೀರದಲ್ಲಿ, ಋಶ್ಯಮೂಕೋಗಿರಿಃ-ಋಶ್ಯಮೂಕಪರ್ವತವು, ನಾತಿದೂರೇ-ಸಮೀಪದಲ್ಲಿಯೇ, ಪ್ರಕಾಶತೇ-ಹೊಳೆಯುತ್ತಿದೆಯೋ, ಧರ್ಮಾತ್ಮಾ-ಧರ್ಮಿಷ್ಠನಾದ, ಅಂಶುಮತಃ-ಸೂರ್ಯನ, ಸುತಃ-ಕುವರನಾದ, ಸುಗ್ರೀವಃ-ಸುಗ್ರೀವನು, ನಿತ್ಯಂ-ನಿರಂತರವೂ, ವಾಲಿಭಯಾತ್-ವಾಲಿಯ ಭೀತಿಯ ದೆಸೆಯಿಂದ, ತ್ರಸ್ತಃ-ಹೆದರಿಕೊಂಡವನಾಗಿ, ಚತುರ್ಭಿಃ-ನಾಲ್ವರಾದ, ವಾನರೈಸ್ಸಹ-ವಾನರರೊಡಗೂಡಿ. ಯಸ್ಮಿನ್-ಯಾವ ಋಶ್ಯಮೂಕಪರ್ವತದಲ್ಲಿ, ವಸತಿ-ಇರುತ್ತಿದ್ದಾನೋ ॥೭॥ ಹೇಸೌಮ್ಯ-ಎಲೈ ಸೌಮ್ಯನೇ. ವಾನರರ್ಷಭಂ-ವಾನರಶ್ರೇಷ್ಠನಾದ, ತಂಸುಗ್ರೀವಂ-ಆ ಸುಗ್ರೀವನನ್ನು, ದ್ರಷ್ಟುಂ-ನೋಡುವದಕ್ಕೆ, ಅಭಿತ್ವರೇ-ತ್ವರಿತವುಳ್ಳವನಾಗಿದ್ದೇನೆ, ಮೇ-ನನ್ನ ಸಂಬಂಧವಾದ, ಸೀತಾಯಾಃ-ಸೀತಾದೇವಿಯ, ಪರಿಮಾರ್ಗಣಂ-ಹುಡುಕುವಿಕೆಯು, ತದಧೀನಂಹಿ-ಆ ಸುಗ್ರೀವನವಶವಾಗಿದೆಯಷ್ಟೆ ॥ ... ... ... ... ॥೮॥

ಏವಂ-ಈ ಪರಿಯಾಗಿ, ಬ್ರುವಾಣಂ-ಮಾತನಾಡುತ್ತಿರುವ, ಧೀರಂ-ಧೈರ್ಯಶಾಲಿಯಾದ. ತಂರಾಮಂ-ಆ ಶ್ರೀರಾಮನನ್ನು ಕುರಿತು, ಸೌಮಿತ್ರಿಃ-ಲಕ್ಷ್ಮ

---

ಥಂ ಗೈದು, ಆ ಅನುಜನಂ ಕುರಿತಿಂತೆಂದನು ।೧। ಎಲೈ ಸೌಮ್ಯನೇ! ಈ ಆಶ್ರಮವು ವಿಶ್ವಾಸಯುಕ್ತವಾದ ಮೃಗಂಗಳೂ ಹುಲಿಗಳೂ ಸಹಾ ಉಳ್ಳದ್ದಾಗಿಯೂ, ಅನೇಕಬಗೆಗಳಾದ ಪಕ್ಷಿಗಳುಳ್ಳದ್ದಾಗಿಯೂ ಇರುವದು, ಸಪ್ತಸಮುದ್ರಗಳ ಉದಕವು ಸೇರಿರುವ ಈ ತೀರ್ಥಗಳಲ್ಲಿ ಸ್ನಾನಂ ಗೈದವರಾದವು, ಪಿತೃತರ್ಪಣವೂ ಸಹಾ ಮಾಡಲ್ಪಟ್ಟಿತು, ಅಶುಭವೆಲ್ಲ ನಾಶಗೊಳಿಸಲ್ಪಟ್ಟಿತು. ಮುಂದು ಶುಭವದಗುವದು, ನನ್ನ ಮನವು ಮಹಾ ಸಂತೋಷವನ್ನೈದಿದೆ, ಮತ್ತೂ ಮನದಲ್ಲಿಯೂ ಕೂಡಾ ಮಿತ್ರಪ್ರಾಪ್ತಿಯನ್ನುಂಟು ಮಾಡುವ ಶುಭವು ಆವಿರ್ಭವಿಸುತಲಿದೆ, ಆದ್ದರಿಂದ ಬರುವವನಾಗು, ಪಂಪಾನದಿಗೆ ಪೋಗುವಣ, ಋಷ್ಯಮೂಕಪರ್ವತವು ಕಾಣುತಲಿದೆಯಾದಕಾರಣ ಇಲ್ಲಿಗೆ ಬಹುದೂರವಿಲ್ಲ, ಸೂರ್ಯಪುತ್ರನಾದ ಸುಗ್ರೀವನು ಇಂದ್ರನಪುತ್ರನಾದ ವಾಲಿಗೆದರಿದವನಾಗಿ ನಾಲ್ಕು ಮಂದಿ ವಾನರರಿಂದೊಡಗೂಡಿ, ಈ ಪರ್ವತದಲ್ಲಿ ವಾಸಂಗೈಯ್ಯುತಲಿದಾನೆ, ವಾನರೇಂದ್ರನಾದ ಆತನಂ ನೋಡುವದಕ್ಕೆ ತ್ವರೆಯುಳ್ಳವನಾಗಿದ್ದೇನೆ, ನಮ್ಮ ಸೀತಾದೇವಿಯಂ ಹುಡುಕುವಣವು ಆತನ ಅಧೀನವಾಗಿಯೇ ಇರುವದಲ್ಲವೆ; ಎಂಬದಾಗಿ ಶ್ರೀರಾಮನು ನುಡಿಯಲೂ, ಸುಮಿತ್ರಾಪುತ್ರನಾದ ಲಕ್ಷ್ಮಣನು, ಎಲೈ ಅಗ್ರಜನೇ! ನನ್ನ ಮನವೂ ಸಹಾ ತ್ವರೆಪಡುತ್ತಲಿದೆ, ಜಾಗ್ರತೆಯಾಗಿ ಸಾರುವಣವೆಂದು ನುಡಿದನು ।೯। ಅನಂತರದಲ್ಲಿ ಆ ಶ್ರೀ

ತ್ರಮುವಾಪಿತ್ವರತೇಮನಃ ॥೯॥ ಆಶ್ರಮಾತ್ತು ತತಸ್ತಸ್ಮಾನ್ನಿಷ್ಕ್ರಮ್ಯ ಸ ವಿಶಾಂಪತಿಃ । ಆಜಗಾಮ ತತಶ್ಶೀಘ್ರಂ ಪಂಪಾಂ ಲಕ್ಷ್ಮಣೇನ ಸಹಾಭಿಭೂಃ ॥೧೦॥ ಸ ದದರ್ಶ ತತಃ ಪುಣ್ಯಾಮುದಾರಜನಸೇವಿತಾಂ । ನಾನಾದ್ರುಮಲತಾಕೀರ್ಣಾಂ ಪಂಪಾಂ ಪಾನೀಯವಾಹಿನೀಂ । ಪದ್ಮೈಸ್ಸೌಗಂಧಿಕೈಸ್ತಾಮ್ರಾಂ ಶುಕ್ಲಾಂ ಕುಮುದಮಂಡಲೈಃ । ನೀಲಾಂ ಕುವಲಯೋದ್ಘಾಟೈರ್ಬಹುವರ್ಣಾಂ ಕುಥಾಮಿವ ॥೧೨॥ ಸ ತಾಮಾಸಾದ್ಯ ವೈ ರಾಮೋ ದೂರಾದುದಕವಾಹಿನೀಂ । ಮತಂಗಸರಸಂ ನಾಮ ಹ್ರದಂ ಸಮವಗಾಹತ ॥೧೩॥ ಅರವಿಂದೋತ್ಪಲವತೀಂ ಪದ್ಮಸೌಗಂಧಿಕಾಯುತಾಂ । ಪುಷ್ಪಿತಾಮ್ರವಣೋಪೇತಾಂ ಬರ್ಹಿಣೋದ್ಘುಷ್ಟನಾದಿತಾಂ । ತಿಲಕೈರ್ಬೀಜಪೂರೈಶ್ಚ ಧವೈಶ್ಶುಕ್ಲದ್ರುಮೈಸ್ತಥಾ । ಪುಷ್ಪಿತೈಃ ಕರವೀರೈಶ್ಚ ಪುನ್ನಾಗೈಶ್ಚ ಸುಪುಷ್ಪಿತೈಃ । ಮಾಲತೀಕುಂದಗುಲ್ಮೈಶ್ಚ ಭಾಂಡೀರೈರ್ನಿಚುಳೈಸ್ತಥಾ । ಅಶೋಕೈಸ್ಸಪ್ತಪರ್ಣೈಶ್ಚ ಕೇತಕೈರತಿಮುಕ್ತಕೈಃ । ಅನ್ಯೈಶ್ಚ ವಿವಿಧೈರ್ವೃಕ್ಷೈಃ ಪ್ರಮದಾಮಿವ ಭೂಷಿತಾಂ । ಸಮೀಕ್ಷಮಾಣೌ ಪುಷ್ಪಾಢ್ಯಂ ಸರ್ವತೋ ವಿಪುಲ

---

ಣನು. ಅಬ್ರವೀತ್-ನುಡಿದನು, ತ್ವರಿತಂ-ಜಾಗ್ರತೆಯಾಗಿ, ಗಚ್ಛಾವಃ-ಹೋಗೋಣ, ತತ್ರ-ಆ ವಿಷಯದಲ್ಲಿ, ಮಮ-ನನ್ನ. ಮನೋಪಿ-ಮನಸ್ಸೂ ಕೂಡ, ತ್ವರತೇ-ತ್ವರ್‍ಯಪಡುತ್ತಾ ಇದೆ ॥೯॥ ವಿಶಾಂಪತಿಃ-ಪ್ರಜೆಗಳಿಗೆ ಅಧಿಪತಿಯಾದ, ಸಃ-ಆ ಶ್ರೀರಾಮನು, ತತಃ-ಬಳಿಕ. ತಸ್ಮಾದಾಶ್ರಮಾತ್-ಆ ಆಶ್ರಮದ ದೆಶೆಯಿಂದ. ನಿಷ್ಕ್ರಮ್ಯ-ಹೊರಟುಬಂದು, ಲಕ್ಷ್ಮಣೇನಸಹ-ಲಕ್ಷ್ಮಣನೊಡಗೂಡ, ಅಭಿಭೂಃ-ಊಹಾಪೋಹ ಚತುರನಾದಂಥಾವನಾದ ಕಾರಣ, ತತಃ-ಬಳಿಕ, ಪಂಪಾಂ-ಪಂಪಾನದಿಯನ್ನು ಕುರಿತು, ಆಜಗಾಮ-ಹೊರಟುಬಂದನು ॥೧೦॥ ಸಃ-ಆ ಶ್ರೀರಾಮನು, ತತಃ-ಬಳಿಕ. ಉದಾರಜನಸೇವಿತಾಂ-ಮಹಾತ್ಮರಾದ ಜನರಿಂದ ಸೇವಿಸಲ್ಪಟ್ಟ. ನಾನಾದ್ರುಮಲತಾಕೀರ್ಣಾಂ-ಅನೇಕ ವೃಕ್ಷಗಳಿಂದಲೂ ಲತೆಗಳಿಂದಲೂ ತುಂಬಿರುವ. ಪದ್ಮೈಃ-ಕಮಲಗಳಿಂದಲೂ, ಸೌಗಂಧಿಕೈಃ-ಸೌಗಂಧಿಕಾಹುವ್ವುಗಳಿಂದಲೂ, ತಾಮ್ರಾಂ-ಕೆಂಪಾಗಿರುವ, ಕುಮುದಮಂಡಲೈಃ-ನೈದಲೆ ಹುವ್ವುಗಳ ತಂಡಗಳಿಂದ, ಶುಕ್ಲಾಂ-ಬೆಳ್ಳಗಿರುವ ಕುವಲಯೋದ್ಘಾಟೈಃ-ಕಪ್ಪಾಗಿರುವ ನೈದಲೆಹುವ್ವುಗಳ ಸಮುದಾಯದಿಂದ. ನೀಲಾಂ-ಕಪ್ಪಗಿರುವ, ಬಹುವರ್ಣಾಂ-ನಾನಾವರ್ಣಗಳುಳ್ಳ, ಕುಥಾಮಿವ-ಆಸ್ತರಣದಂತಿರುವ, ಪಾನೀಯವಾಹಿನೀಂ-ಉದಕದಿಂ ಪ್ರವಹಿಸುತ್ತಿರುವ, ಪಂಪಾಂ-ಪಂಪಾನದಿಯನ್ನು, ದದರ್ಶ-ಕಂಡನು ॥೧೨॥ ಸರಾಮಃ-ಆ ಶ್ರೀರಾಮನು, ಅದೂರಾತ್-ಸಮೀಪದಲ್ಲಿ, ಉದಕವಾಹಿನೀಂ-ನೀರಿನಿಂ ಪ್ರವಹಿಸುತ್ತಿರುವ. ತಾಂ-ಆ ಪಂಪಾನದಿಯನ್ನು. ಆಸಾದ್ಯ-ಹೊಂದಿ. ಮತಂಗಸರಸಂನಾಮ-ಮತಂಗಸರಸ್ಸೆಂದು ಪ್ರಸಿದ್ಧವಾದ. ಹ್ರದಂ-ಮಡುವಿನಲ್ಲಿ, ಸಮವಗಾಹತ-ಪ್ರವೇಶಿಸಿದನು ॥೧೩॥ ಅರವಿಂದೋತ್ಪಲವತೀಂ-ತಾವರೇಹುವ್ವುಗಳೂ ನೈದಲೆಹುವ್ವುಗಳೂ ಉಳ್ಳ. ಪದ್ಮಸೌಗಂಧಿಕಾಯುತಾಂ-ಕಮಲಗಳಿಂದಲೂ ಸೌಗಂಧಿಕಾ ಕುಸುಮಗಳಿಂದ ಕೂಡಿಕೊಂಡಿರುವ, ಪುಷ್ಪಿತಾಮ್ರವಣೋಪೇತಾಂ-ಪುಷ್ಪಿತ-ಹುವ್ವುಬಿಟ್ಟಿರುವ, ಆಮ್ರವಣ-ಮಾವಿನಗಿಡಗಳಿಂದ, ಉಪೇತಾಂ-ಕೂಡಿಕೊಂಡಿರುವ, ಬರ್ಹಿಣೋದ್ಘುಷ್ಟನಾದಿತಾಂ-ನವಿಲುಗಳ ಘೋಷದಿಂ ಧ್ವನಿಗೊಳಿಸುತ್ತಿರುವ, ತಿಲಕೈಃ-ತಿಲಕವೃಕ್ಷಗಳಿಂದಲೂ, ಬೀಜಪೂರೈಶ್ಚ-ದಾಳಿಂಬರೇ ಗಿಡಗಳಿಂದಲೂ, ತಥಾ-ಹಾಗೆಯೇ, ಶುಕ್ಲದ್ರುಮೈಃ-ಅರ್ಜುನವೃಕ್ಷಗಳಿಂದಲೂ, ಪುಷ್ಪಿತೈಃ-ಹುವ್ವುಗಳಂ ಬಿಟ್ಟಿರುವ, ಕರವೀರೈಶ್ಚ-ಗಣಿಗಲು ಗಿಡಗಳಿಂದಲೂ ಸುಪುಷ್ಪಿತೈಃ-ಹುವ್ವುಗಳುಳ್ಳ, ಪುನ್ನಾಗೈಶ್ಚ-ಸುರಪುನ್ನಾಗವೃಕ್ಷಗಳಿಂದಲೂ, ಮಾಲತೀಕುಂದಗುಲ್ಮೈಶ್ಚ-ಮಲ್ಲಿಕಾ ಬಳ್ಳಿಗಳ ಗುಂಡುಮಲ್ಲಿಗೇಗಿಡಗಳ ತಂಡಗಳಿಂದಲೂ. ಭಾಂಡೀರೈಃ-ಆಲದ ಗಿಡಗಳಿಂದಲೂ, ನಿಚುಳೈಃ-ನೀರವಂಜೀ ಗಿಡಗಳಿಂದಲೂ, ತಥಾ-ಹಾಗೆಯೇ, ಅಶೋಕೈಃ-ಅಶೋಕವೃಕ್ಷಗಳಿಂದಲೂ, ಸಪ್ತಪರ್ಣೈಶ್ಚ-ಯೇಳು ಎಲೆಗಳುಳ್ಳ ಬಾಳೇಗಿಡಗಳಿಂದಲೂ, ಕೇತಕೈಃ-ಗೇದಗೇ ಗಿಡಗಳಿಂದಲೂ. ಅತಿಮುಕ್ತಕೈಃ-ಪುಂಡ್ರೀಗಿಡಗಳಿಂದಲೂ, ಅನ್ಯೈಶ್ಚ-ಮತ್ತು ಕೆಲವಾದ. ವಿವಿಧೈಃ-ನಾನಾಬಗೆಗಳಾದ. ವೃಕ್ಷೈಃ-ಗಿಡಗಳಿಂದ. ಭೂಷಿತಾಂ-ಅಲಂಕೃತಳಾದ, ಪ್ರಮದಾಮಿವಸ್ಥಿತಾಂ-ಹೆಂಗಸಿನಂತಿರುವ

---

ರಾಮನು ಲಕ್ಷ್ಮಣನಿಂದೊಡಗೂಡಿ, ಆ ಆಶ್ರಮದಿಂದ ಹೊರಟು ಪಂಪಾನದಿಯಂ ಕುರಿತು ಪ್ರಯಾಣ ಮಾಡಿದವನಾಗಿ, ಮಹಾತ್ಮರಿಂದ ಸೇವಿಸಲ್ಪಡುವದಾಗಿಯೂ, ಅನೇಕವಾದ ವೃಕ್ಷಗಳಿಂದ ತುಂಬಿರುವದಾಗಿಯೂ, ಮತ್ತೂ ಕಮಲಗಳಿಂದಲೂ ಸೌಗಂಧಿಕಾ ಪುಷ್ಪಗಳಿಂದಲೂ ಸಹಾ ಯುಕ್ತವಾದಕಾರಣ ಕೆಂಪಾಗಿಕಾಣುವದಾಗಿಯೂ, ಬಿಳೀನೈದಿಲೆಗಳಿಂದ ಬಿಳುಪಾಗಿರುವದಾಗಿಯೂ, ಕನ್ನೈದಿಲೆಗಳಿಂದ ಕಪ್ಪಾಗಿರುವದಾಗಿಯೂ, ಈ ರೀತಿಯಾಗಿರುವದಾದಕಾರಣ ವಿಚಿತ್ರವಾಗಿ ಕಾಣ್ಬರುವದಾಗಿಯೂ, ಸಹಾ ಇರುವ ಪಂಪಾನದಿಯಂ ಕಂಡನು ॥೧೨॥ ಅನಂತರದಲ್ಲಿ ಶ್ರೀರಾಮನು ಸಮೀಪದಲ್ಲಿ ಪ್ರವಹಿಸುತಲಿರುವ ಆ ಪಂಪಾನದಿಯನ್ನೈದಿ, ಮತಂಗಸರಸ್ಸೆಂದು ಪ್ರಖ್ಯಾತವಾದ ಹ್ರದದಲ್ಲಿ ಇಳಿದನು ॥೧೩॥ ಬಳಿಕ ಆ ಶ್ರೀರಾಮನು, ತಾವರೆಗಳೂ ನೈದಿಲೆಗಳೂ ಸಹಾ ಉಳ್ಳದ್ದಾಗಿಯೂ, ಪುಷ್ಪಿಸಿರುವ ಮಾವಿನ ಗಿಡಗಳಿಂದ ಯುಕ್ತವಾದದ್ದಾಗಿಯೂ, ಮತ್ತೂ ನವಿಲುಗಳ ಘೋಷದಿಂದ ಶಬ್ದಾಯಮಾನ ವಾಗಿರುವ ತಿಲಕವೃಕ್ಷಗಳಿಂದಲೂ, ದಾಡಿಂಬೀ ವೃಕ್ಷಗಳಿಂದಲೂ, ಗಣಗಲು ಗಿಡಗಳಿಂದಲೂ, ಸುರಪುನ್ನಾಗ ವೃಕ್ಷಗಳಿಂದಲೂ, ಕೋಲುಮಲ್ಲಿಗೆ, ದುಂಡುಮಲ್ಲಿಗೆ ಮೊದಲಾದ ಗಿಡಗಳಿಂದಲೂ, ಕುಂಬಳದ ಬಳ್ಳಿಗಳಿಂದಲೂ, ನೀರುವಂಜೀ ಗಿಡಗಳಿಂದಲೂ, ಅಶೋಕ ವೃಕ್ಷಗಳಿಂದಲೂ ಏಳೆಲೇ ಬಾಳೆಗಿಡಗಳಿಂದಲೂ, ಗೇದಿ

ದ್ರುಮಂ । ಕೋಯಷ್ಟಿಕೈಶ್ಚಾರ್ಜುನಕೈಶ್ಶತಪತ್ರೈಶ್ಚಕೀರಕೈಃ ॥ ಏತೈಶ್ಚಾನ್ಯೈಶ್ಚವಿಹಗೈರ್ನಾದಿತಂತುವನಂಮಹತ್ । ತತೋಜಗ್ಮತುರವ್ಯಗ್ರೌರಾಘವೌಸುಸಮಾಹಿತೌ । ತದ್ವನಂಚೈವಸರಸಃಪಶ್ಯಂತೌಶಕುನೈರ್ಯುತಂ॥೧೯॥ ಸದದರ್ಶತತಃಪಂಪಾಂಶೀತವಾರಿನಿಧಿಂಶುಭಾಂ । ತಿಲಕಾಶೋಕಪುನ್ನಾಗವಕುಳೋದ್ದಾಲಕಾಶಿನೀಂ ।೨೦॥ ಸರಾಮೋವಿವಿಧಾನ್ವೃಕ್ಷಾನ್ಸರಾಂಸಿವಿವಿಧಾನಿಚ । ಪಶ್ಯನ್ಕಾಮಾಭಿಸಂತಪ್ತೋಜಗಾಮಪರಮಂಹ್ರದಂ ।೨೧। ಪುಷ್ಪಿತೋಪವನೋಪೇತಾಂಸಾಲಚಂಪಕಶೋಭಿತಾಂ । ಷಟ್ಪದೌಘಸಮಾವಿಷ್ಟಾಂಶ್ರೀಮತೀಮತುಲಪ್ರಭಾಂ । ಸ್ಫಟಿಕೋಪಮತೋಯಾಢ್ಯಾಂಶ್ಲಕ್ಷ್ಣವಾಲುಕಸಂತತಾಂ । ಸತಾಂದೃಷ್ಟ್ವಾಪುನಃಪಂಪಾಂಪದ್ಮಸೌಗಂಧಿಕೈರ್ಯುತಾಂ । ಇತ್ಯುವಾಚತದಾವಾಕ್ಯಂಲಕ್ಷ್ಮಣಂಸತ್ಯವಿಕ್ರಮಃ ॥೨೨॥ ಅಸ್ಯಾಸ್ತೀರೇತುಪೂರ್ವೋಕ್ತಃಪರ್ವತೋಧಾತುಮಂಡಿತಃ।ಋಶ್ಯಮೂಕಇತಿಖ್ಯಾತಃಪುಣ್ಯಃಪುಷ್ಪಿತಪಾದಪಃ ॥೨೩॥ ಹರೇರೃಕ್ಷರಜೋನಾಮ್ನಃಪುತ್ರಸ್ತಸ್ಯಮಹಾತ್ಮನಃ । ಅಧ್ಯಾಸ್ತೆ

---

ಪಂಪಾಂ-ಪಂಪಾನದಿಯನ್ನು. ಸಮೀಕ್ಷಮಾಣೌ-ನೋಡುತ್ತಿರುವವರಾಗಿ, ಸರ್ವತಃ-ಎಲ್ಲಾ ಕಡೆಯಲ್ಲಿಯೂ, ವಿಪುಲದ್ರುಮಂ-ವಿಸ್ತಾರವಾದ ವೃಕ್ಷಗಳುಳ್ಳ, ಪುಷ್ಪಾಢ್ಯಂ-ಪುಷ್ಪಗಳಿಂದ ತುಂಬಿರುವ, ಕೋಯಷ್ಟಿಕೈಃ-ಪಕ್ಷಿವಿಶೇಷಗಳಿಂದಲೂ, ಅರ್ಜುನಕೈಃ-ಹೆಳ್ಳಗಿರುವ, ಶತಪತ್ರೈಃ-ದೂರ್ವಾಘಾಟಿಗಳೆಂಬ ಪಕ್ಷಿ ವಿಶೇಷಗಳಿಂದಲೂ, ಕೀರಕೈಃ-ಗಿಣಿಗಳಿಂದಲೂ, ಏತೈಃ-ಈ ಪಕ್ಷಿಗಳಿಂದಲೂ, ಅನ್ಯೈಃ-ಮತ್ತು ಕೇವಲ, ವಿಹಗೈಃ-ಪಕ್ಷಿಗಳಿಂದಲೂ, ನಾದಿತಂ-ಧ್ವನಿಗೊಳಿಸುತ್ತಿರುವ, ಮಹತ್-ದೊಡ್ಡದಾದ, ವನಂ-ವನವನ್ನು. ಸಮೀಕ್ಷ್ಯಮಾಣೌ-ನೋಡುತ್ತಿರುವರಾಗಿ, ತತಃ-ಬಳಿಕ, ಅವ್ಯಗ್ರೌ-ಜಾಗ್ರತೆಯುಳ್ಳ. ರಾಘವೌ-ರಾಮಲಕ್ಷ್ಮಣರೀರ್ವರು, ಸುಸಮಾಹಿತೌ-ಸಮಾಧಾನಚಿತ್ತರಾಗಿ, ಸರಸಃ-ಮತಂಗಸರೋವರದ ಸಂಬಂಧವಾದ, ಶಕುನೈಃ-ಪಕ್ಷಿಗಳಿಂದ, ಯುತಂ-ಕೂಡಿಕೊಂಡಿರುವ, ತದ್ವನಂ-ಆ ವನವನ್ನು, ಪಶ್ಯಂತೌ-ನೋಡುತ್ತಿರುವರಾಗಿ, ಜಗ್ಮತುಃ-ತೆರಳಿದರು ॥೧೯॥ ಸಃ-ಆ ಶ್ರೀರಾಮನು, ತತಃ-ಬಳಿಕ, ಶೀತವಾರಿನಿಧಿಂ-ತಣ್ಣಗಿರುವ ನೀರಿಗೆ ನಿಕ್ಷೇಪರೂಪವಾದ, ಶುಭಾಂ-ಶುಭಕರವಾದ, ತಿಲಕಾಶೋಕಪುನ್ನಾಗವಕುಳೋದ್ದಾಲಕಾಶಿನೀಂ-ತಿಲಕ ವೃಕ್ಷಗಳಿಂದಲೂ ಅಶೋಕವೃಕ್ಷಗಳಿಂದಲೂ ಪುನ್ನಾಗ ಗಿಡಗಳಿಂದಲೂ, ಹವ್ವದ ಗಿಡಗಳಿಂದಲೂ, ಚಳ್ಳೆಗಿಡಗಳಿಂದಲೂ, ಪ್ರಕಾಶಿಸುತ್ತಿರುವ ಪಂಪಾಂ-ಪಂಪಾನದಿಯನ್ನು, ದದರ್ಶ-ಕಂಡನು ॥೨೦॥ ಸರಾಮಃ-ಆ ಶ್ರೀರಾಮನು, ವಿವಿಧಾನ್-ನಾನಾಬಗೆಗಳಾದ, ವೃಕ್ಷಾನ್-ಗಿಡಗಳನ್ನು, ವಿವಿಧಾನಿ-ನಾನಾಬಗೆಗಳಾದ, ಸರಾಂಸಿ-ಸರೋವರಗಳನ್ನು, ಪಶ್ಯನ್-ನೋಡುತ್ತಿರುವವನಾಗಿ, ಕಾಮಾಭಿಸಂತಪ್ತಃ-ಕಾಮೋದ್ರೇಕದಿಂ ಪರಿತಪ್ತನಾಗಿ, ಪರಮಂ-ಸರ್ವೋತ್ಕೃಷ್ಟವಾದ, ಹ್ರದಂ-ಸರೋವರವನ್ನು ಕುರಿತು, ಜಗಾಮ-ಐದಿದನು ॥೨೧॥ ಸತ್ಯವಿಕ್ರಮಃ-ಸತ್ಯದಿಂ ಪರಾಕ್ರಮವಾದತಕ್ಕ, (ಯದ್ವಾ-ಸತ್ಯವೂ ಪರಾಕ್ರಮವೂ ವುಳ್ಳ), ಸಃ-ಆ ಶ್ರೀರಾಮನು. ಪುಷ್ಪಿತೋಪವನೋಪೇತಾಂ-ಪುಷ್ಪಿತ-ಹುಷ್ಪಬಿಟ್ಟಿರುವ, ಉಪವನ-ತೋಟಗಳಿಂದ, ಉಪೇತಾಂ-ಕೂಡಿಕೊಂಡಿರುವ, ಸಾಲಚಂಪಕಶೋಭಿತಾಂ-ಸಾಲವೃಕ್ಷಗಳಿಂದಲುಂ ಸಂಪಿಗೆ ಗಿಡಗಳಿಂದಲುಂ ಪ್ರಕಾಶಿಸುತ್ತಿರುವ, ಷಟ್ಪದೌಘಸಮಾವಿಷ್ಟಾಂ-ಭ್ರಮರ ತಂಡಗಳಿಂದ ಕೂಡಿಕೊಂಡಿರುವ, ಶ್ರೀಮತೀಂ-ಸಂಪದ್ಯುಕ್ತವಾದ, ಅತುಲಪ್ರಭಾಂ-ಸಮಾನವಿಲ್ಲದ ಕಾಂತಿಯುಳ್ಳ, ಸ್ಫಟಿಕೋಪಮತೋಯಾಢ್ಯಾಂ-ಸ್ಫಟಿಕಮಣಿಗಳಿಗೆ ಸಮಾನವಾದ ಉದಕಗಳಿಂದ ಪ್ರಕಾಶಿಸುವ. ಶ್ಲಕ್ಷ್ಣವಾಲುಕಸಂತತಾಂ-ಮೃದುವಾದ ಮರಳಿನಿಂದ ವ್ಯಾಪ್ತವಾಗಿರುವ, ಪದ್ಮಸೌಗಂಧಿಕೈರ್ಯುತಾಂ-ಕಮಲಗಳಿಂದಲೂ ಪುಷ್ಪಗಳಿಂದಲೂ ಕೂಡಿಕೊಂಡಿರುವ. ತಾಂಪಂಪಾಂ-ಆ ಪಂಪಾನದಿಯನ್ನು ಪುನಃ-ಮತ್ತು, ದೃಷ್ಟ್ವಾ-ಕಂಡು, ತದಾ-ಆ ಕಾಲದಲ್ಲಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯಂ ಕುರಿತು, ವಾಕ್ಯಂ-ಮಾತನ್ನು. ತದಾ-ತತ್ಕ್ಷಣದಲ್ಲಿ. ಇತಿ-ಈಪರಿಯಾಗಿ, ಉವಾಚ-ಹೇಳಿದನು ॥೨೨॥ ಅಸ್ಯಾಂ-ಈ ಪಂಪಾನದಿಯ. ತೀರೆತು-ಧಡದಲ್ಲಿ, ಪೂರ್ವೋಕ್ತಃ-ಪೂರ್ವದಲ್ಲಿ ಕಬಂಧನಿಂ ಹೇಳಲ್ಪಟ್ಟ, ಧಾತುಮಂಡಿತಃ-ಗೈರಿಕಾದಿ ಧಾತುಗಳಿಂ ಅಲಂಕೃತವಾದ, ಪುಣ್ಯಃ-ಪುಣ್ಯಕರವಾದ. ಪುಷ್ಪಿತಪಾದಪಃ-ಹುವ್ವುಬಿಟ್ಟಿರುವ ಮರಗಳುಳ್ಳ, ಋಶ್ಯಮೂಕಇತಿ-ಋಶ್ಯಮೂಕವೆಂದು, ಖ್ಯಾತಃ-ಪ್ರಸಿದ್ಧವಾದ. ಪರ್ವತಃ-ಬೆಟ್ಟವು, ಅಸ್ತಿ-ಇಧೆ ॥೨೩॥ ಋಕ್ಷರಜೋನಾಮ್ನಃ-ಋಕ್ಷರಜಸ್ಸೆಂದು ಹೆಸ

---

ಗೆಗಿಡಗಳಿಂದಲೂ, ಮತ್ತೂ ಇತರವಾದ ವೃಕ್ಷಗಳಿಂದಲೂ ಸಹಾ ಸಯುಕ್ತವಾದ, ಹೆಂಗಸಿನಂತಿರುವ ಪಂಪಾನದಿಯಂ ನೋಡುವವರಾಗಿ, ಸುತ್ತುಮುತ್ತಲೂ ವಿಸ್ತಾರವಾದ ವೃಕ್ಷಂಗಳುಳ್ಳದ್ದಾಗಿಯೂ, ಮತ್ತೂ “ ಅರ್ಜುನಕ, ಶತಪತ್ರ, ಕೋಯಷ್ಟಿಕ, ಶುಕ ” ಎಂಬ ಈ ಪಕ್ಷಿಗಳಿಂದಲೂ ಇತರಪಕ್ಷಿಗಳಿಂದಲೂ, ಸಹಾ ಯುಕ್ತವಾಗಿಯೂ ಇರುವ ಒಂದಾನೊಂದು ವನವಂ ನೋಡುತ್ತಾ ತೆರಳಿದರು ।೧೯। ಅನಂತರದಲ್ಲಿ ಶ್ರೀರಾಮನು ತಣ್ಣೀರಿಗೆ ನಿಕ್ಷೇಪವಾದ ಮತ್ತೂ “ ತಿಲಕ, ಅಶೋಕ, ಪುನ್ನಾಗ, ವಕುಳ, ಉದ್ದಾಲಕ, ” ಎಂಬ ವೃಕ್ಷವಿಶೇಷಗಳಿಂದ ಪ್ರಕಾಶಿಸುತಲಿರುವ ಪಂಪಾನದಿಯನ್ನು ನೋಡಿದನು ।೨೦। ಬಳಿಕ ಆ ಶ್ರೀರಾಮನು ನಾನಾ ವಿಧವಾದ ವೃಕ್ಷಗಳನ್ನೂ, ಸರೋವರಗಳನ್ನೂ ಸಹಾ ನೋಡಿದವನಾಗಿ, ಕಾಮಬಾಧೆಯಿಂದ ನೊಂದು ಆ ಸರೋವರವನ್ನೈದಿದನು ।೨೧। ಸತ್ಯವಾದ ಪರಾಕ್ರಮವುಳ್ಳ ಆ ಶ್ರೀರಾಮನು ಸಂಜಾತಪುಷ್ಪಂಗಳುಳ್ಳ ವನಗಳಿಂದ ಯುಕ್ತವಾಗಿಯೂ, ಸಾಲವೃಕ್ಷಗಳಿಂದ ಸಂಪಿಗೆ ಮರಗಳಿಂದಲೂ ಸಹಾ ಎಸೆವುದಾಗಿಯೂ, ದುಂಬಿಗಳ ತಂಡಗಳಿಂದ ವ್ಯಾಪ್ತವಾಗಿಯೂ, ಬಹು ಬೆಳಗುವದಾಗಿಯೂ, ಸ್ಫಟಿಕಮಣಿಗಳಂತೆ ನಿರ್ಮಲವಾದ ಉದಕವುಳ್ಳದ್ದಾಗಿಯೂ, ಮ್ರು

ತಂಮಹಾವೀರ್ಯಸ್ಸುಗ್ರೀವಇತಿವಿಶ್ರುತಃ ।೨೬। ಸುಗ್ರೀವಮಭಿಗಚ್ಛತ್ವಂವಾನರೇಂದ್ರಂನರರ್ಷಭ । ಇತ್ಯುವಾಚ ಪುನರ್ವಾಕ್ಯಂಲಕ್ಷ್ಮಣಂಸತ್ಯವಿಕ್ರಮಂ ।೨೭। ರಾಜ್ಯಭ್ರಷ್ಟೇನದೀನೇನತಸ್ಯಾಮಾಸಕ್ತಚೇತಸಾ । ಕಥಂಮಯಾವಿನಾಶಕ್ಯಂಸೀತಾಂಲಕ್ಷ್ಮಣಜೀವಿತುಂ ।೨೮।ಇತ್ಯೇವಮುಕ್ತ್ವಾಮದನಾಭಿಪೀಡಿತಸ್ಸಲಕ್ಷ್ಮಣಂವಾಕ್ಯಮನನ್ಯಚೇತಸಂ। ವಿವೇಶಪಂಪಾಂತಟಿನೀಂಮನೋರಮಾಂರಘೂತ್ತಮಶ್ಶೋಕವಿಷಾದಯಂತ್ರಿತಃ ।೨೯। ತತೋಮಹದ್ವರ್ತ್ಮಸುದೂರಸಂಕ್ರಮಂಕ್ರಮೇಣಗತ್ವಾಪ್ರತಿಕೂಲಧನ್ವನಂ । ದದರ್ಶಪಂಪಾಂಶುಭದರ್ಶಕಾನನಾಮನೇಕನಾನಾವಿಧಪಕ್ಷಿಜಾಲಕಾಂ॥

ಇತ್ಯಾರ್ಷೇ-ಶ್ರೀಮದ್ರಾಮಾಯಣೇ-ಆದಿಕಾವ್ಯೇ-ಶ್ರೀಮದ್ವಾಲ್ಮೀಕೀಯೇ-ಚತುರ್ವಿಂಶತ್ಸಹಸ್ರಿಕಾಯಾಂಸಂಹಿತಾಯಾಂ

—**ಶ್ರೀಮದಾರಣ್ಯಕಾಂಡೇ-ಪಂಚಸಪ್ತತಿತಮಸ್ಸರ್ಗಃ**—

ತಸ್ಯ-ಆ ಪ್ರಸಿದ್ಧನಾದ, ಮಹಾತ್ಮನಃ-ಮಹಾ ಧೈರ್ಯವಂತನಾದ, ಹರೇಃ-ವಾನರನ, ಪುತ್ರಃ-ಕುಮಾರನಾದ. ಮಹಾವೀರ್ಯಃ-ಮಹಾ ಪರಾಕ್ರಮಶಾಲಿಯಾದ ಸುಗ್ರೀವಇತಿ-ಸುಗ್ರೀವನೆಂದು. ವಿಶ್ರುತಃ-ಪ್ರಖ್ಯಾತಪುರುಷನು, ತಂ-ಆ ಋಶ್ಯಮೂಕಪರ್ವತವನ್ನು. ಅಧ್ಯಾಸ್ತೇ-ಅಧಿಷ್ಠಿಸಿ ಇದ್ದಾನೆ, (ಅಂದರೆ-ಬೆಟ್ಟದಲ್ಲಿವಾಸಮಾಡುತಲಿದ್ಧಾನೆ ) ॥೨೬॥ ಹೇನರರ್ಷಭ-ಎಲೈ ಪುರುಷಶ್ರೇಷ್ಠನಾದ ಲಕ್ಷ್ಮಣನೇ, ತ್ವಂ-ನೀನು, ಸುಗ್ರೀವಂ-ಸುಗ್ರೀವನೆಂಬ ವಾನರೇಂದ್ರಂ-ವಾನರಾಧಿಪತಿಯನ್ನು. ಅಭಿಗಚ್ಛ-ಯೆದುರಾಗಿಹೋಗು. ಇತಿ-ಇಂತೆಂದು. ಸತ್ಯವಿಕ್ರಮಂ-ಸತ್ಯವಾದಪರಾಕ್ರಮವುಳ್ಳ, ಲಕ್ಷ್ಮಣಂ-ಲಕ್ಷ್ಮಣನಂಕುರಿತು, ಇತಿ-ಈ ಪರಿಯಾಗಿ, ಪುನಃ-ಮತ್ತು, ವಾಕ್ಯಂ-ಮಾತಿನನ್ನು, ಉವಾಚ-ಹೇಳಿದನು ॥೨೭॥ ಹೇಲಕ್ಷ್ಮಣ-ಎಲೈ ಲಕ್ಷ್ಮಣನೇ, ರಾಜ್ಯಭ್ರಷ್ಟೇನ-ರಾಜ್ಯದಿಂ ಹೊರಡಿಸಲ್ಪಟ್ಟ, ದೀನೇನ-ದರಿದ್ರನಾದ, ತಸ್ಯಾಂ-ಆ ಸೀತಾದೇವಿಯಲ್ಲಿ, ಆಸಕ್ತಚೇತಸಾ-ಆಸಕ್ತವಾದ ಮನವುಳ್ಳ, ಮಯಾ-ನನ್ನಿಂದ, ಸೀತಾಂವಿನಾ-ಸೀತಾದೇವಿಯಂಬಿಟ್ಟು, ಜೀವಿತುಂ-ಬದುಕುವದಕ್ಕೆ. ಕಥಂ-ಹ್ಯಾಗೆ. ಶಕ್ಯಂ-ಸಾಧ್ಯವಾದೀತು ॥೨೮॥ ಇತ್ಯೇವಂ-ಈಪರಿಯಾಗಿ, ಮದನಾಭಿಪೀಡಿತಃ-ಕಾಮಗುಣದಿಂ ಬಾಧಿತನಾಗಿ. ಅನನ್ಯಚೇತಸಂ-ಇತರ ಪದಾರ್ಥದಲ್ಲಿ ಮನವಿಲ್ಲದಿರುವ. ಲಕ್ಷ್ಮಣಂ-ಲಕ್ಷ್ಮಣನಂಕುರಿತು. ವಾಕ್ಯಂ-ಮಾತಿನನ್ನು, ಉಕ್ತ್ವಾ-ಹೇಳಿ. ಶೋಕವಿಷಾದಯಂತ್ರಿತಃ-ಬಾಹ್ಯವ್ಯಸನದಿಂದಲೂ ಮನೋವ್ಯಥೆಯಿಂದಲೂ ಕಟ್ಟಲ್ಪಟ್ಟ, ರಘೂತ್ತಮಃ-ಆ ಶ್ರೀರಾಮನು, ಮನೋರಮಾಂ-ಮನೋಹರವಾದ, ಪಂಪಾಂ-ಪಂಪಾನದಿಯೆಂಬ, ತಟಿನೀಂ-ಹೊಳೆಯನ್ನು, ವಿವೇಶ-ಹೊಕ್ಕನು ॥೨೯॥ ತತಃ-ಬಳಿಕ, ಸುದೂರಸಂಕ್ರಮಂ-ಬಹುದೂರವಾಗಿ ಹೋಗುತ್ತಿರುವ. (ಯದ್ವಾ-ಸುದೂರಸಂಕ್ರಮ ಇತಿಪಾಠಾಂತರಂ-ರಾಮವಿಶೇಷಣವು, ಬಹುದೂರದೇಶದಿಂದ ಬಂದವನಾಗಿ, ) ಪ್ರತಿಕೂಲಧನ್ವನಂ-ಪ್ರತಿಕೂಲವಾದ ನಿರ್ಜನ ಪ್ರದೇಶವನ್ನು, ಕ್ರಮೇಣ-ಕ್ರಮವಾಗಿ, ಗತ್ವಾ-ಹೋಗಿ. ಮಹತ್-ದೊಡ್ಡದಾದ. ವರ್ತ್ಮ-ಮಾರ್ಗದಲ್ಲಿ, ಶುಭದರ್ಶಕಾನನಾಂ-ಶುಭಕರವಾದ ದರುಶನವುಳ್ಳ ಅರಣ್ಯಗಳುಳ್ಳ, ಅನೇಕನಾನಾವಿಧಪಕ್ಷಿಜಾಲಕಾಂ-ಅನೇಕನಾನಾವಿಧ-ಬಹಳ ಬಗೆಯಾಗಿ ನಾನಾಬಗೆಯಾದ ಹಕ್ಕಿಗಳ ತಂಡಗಳುಳ್ಳ, ಪಂಪಾಂ-ಪಂಪಾನದಿಯನ್ನು ದದರ್ಶ-ಕಂಡನು. ॥ ... ... ... ... ॥೩೦॥

—*** ಇತ್ಯಾರ್ಷೇ-ಶ್ರೀಮದ್ರಾಮಾಯಣೇ ಆದಿಕಾವ್ಯೇ ವಾಲ್ಮೀಕೀಯೇ ಅರಣ್ಯಕಾಂಡೇ-ಪಂಚಸಪ್ತತಿತಮಸ್ಸರ್ಗಃ ***—

—*ಶ್ರೀರಾಮಚಂದ್ರಚರಣಾರವಿಂದಾರ್ಪಣಮಸ್ತು ಅರಣ್ಯಕಾಂಡಸ್ಸಮಾಪ್ತಃ*—

ದುವಾಗಿರುವ ಮರಗಳಿಂದಯುಕ್ತವಾದದ್ದಾಗಿಯೂ, ಮತ್ತೂ ತಾವರೆಗಳಿಂದಲೂ ಸೌಗಂಧಿಕಾ ಪುಷ್ಪಂಗಳಿಂದಲೂ ಕೂಡಿರುವದಾಗಿಯೂ ಸಹಾ ಇರುವ ಆ ಪಂಪಾನದಿಯಂ ಪುನಃ ಕಂಡು ಲಕ್ಷ್ಮಣನಂ ಕುರಿತಿಂತೆಂದನು । ಎಲೈ ಲಕ್ಷ್ಮಣನೇ! ಕಬಂಧನು ಹೇಳಿದಂತೆ, ಗೈರಿಕಾದಿ ಧಾತುಗಳಿಂದಲಂಕೃತವಾದ ಪುಣ್ಯಕರವಾಗಿರುವ ಋಶ್ಯಮೂಕಪರ್ವತವು ಪುಷ್ಪಿಸಿರುವ ವೃಕ್ಷಂಗಳುಳ್ಳದ್ದಾಗಿದೆ; ಋಕ್ಷರಜಸ್ಸೆಂಬ ವಾನರೇಂದ್ರನ ಪುತ್ರನಾದ ಮಹಾ ಪರಾಕ್ರಮಿಯಾದ ಸುಗ್ರೀವನು ಇದರಲ್ಲಿ ವಾಸಂಗೈಯ್ಯುತಲಿದ್ಧಾನೆ, ನೀನು ಎದುರಾಗಿ ಹೋಗುವವನಾಗೆಂದು ನುಡಿದು ಮತ್ತಿಂತೆಂದನು ।೨೭। ಎಲೋ ಎಲೋ, ಅಪ್ಪ ಲಕ್ಷ್ಮಣನೇ! ರಾಜ್ಯಭ್ರಂಶವನ್ನೈದಿದವನಾಗಿಯೂ ದೀನನಾಗಿಯೂ, ಆ ಸೀತಾದೇವಿಯಲ್ಲಿಯೆ ಆಸಕ್ತವಾದ ಚಿತ್ತವುಳ್ಳವನಾಗಿಯೂ ಸಹಾ ಇರುವ ನಾನು ಆ ದೇವಿಯನ್ನಗಲಿ ಹ್ಯಾಗೆ ಬದುಕಲಾದೀತು? ಎಂದು ಕಾಮಬಾಧೆಯಿಂದ ನೊಂದವನಾಗಿ ಲಕ್ಷ್ಮಣನಿಗೆ ನಿರೂಪಿಸಿ ದುಃಖಾತಿಶಯದಿಂದ ಮಹಾ ಮೋಹವನ್ನೈದಿದವನಾಗಿ, ಪಂಪಾನದಿಯನ್ನು ಪ್ರವೇಶಂಗೈದನು।೨೯। ಅನಂತರದಲ್ಲಿ ಶ್ರೀರಾಮನು ಬಹು ದೂರದಲ್ಲಿ ಅಡ್ಡವಾಗಿ ಹೋಗು ನಿರ್ಜನಪ್ರದೇಶವನ್ನು ಕ್ರಮವಾಗಿ ದಾಂಟಿ, ದೊಡ್ಡಮಾರ್ಗದಲ್ಲಿ ನೋಡಲಿಂಪಾಗಿರುವ ಅರಣ್ಯಗಳುಳ್ಳದ್ದಾಗಿಯೂ, ಅನೇಕವಿಧವಾದ ಪಕ್ಷಿಗಳ ಸಮೂಹಗಳಿಂದ ವ್ಯಾಪ್ತವಾಗಿಯೂ ಇರುವ ಪಂಪಾನದಿಯಂ ಕಂಡನು ... ... ... ... ... ।೩೦।

ಶ್ರೀಮದ್ವಾಲ್ಮೀಕಿ ಮಹರ್ಷಿ ಪ್ರೋಕ್ತಮಾದ ಶ್ರೀಮದ್ರಾಮಾಯಣ ದಲ್ಲಿನ

—** ಆರಣ್ಯಕಾಂಡದ ೭೫ನೆಯ ಸರ್ಗಂ ಮುಗಿದುದು **—

—* ಆರಣ್ಯಕಾಂಡವು ಸಮಾಪ್ತವಾದುದು *—